ಶ್ರೀ ವಿಶ್ವಪ್ರಿಯತೀರ್ಥರ ಪ್ರವಚನ ಮಾಲಿಕಾಶ್ರೇಣಿ

‘ವಿಶ್ವಪ್ರಿಯಾ’ (ಕನ್ನಡದ ಟಿಪ್ಪಣಿ) ದ ಬೆಳಕಿನಡಿ

# ಶ್ರೀ ವಿಷ್ಣುಸಹಸ್ರನಾಮ



ಸಹಸ್ರನಾಮಗಾಂಭೀರ್ಯದ್ಯೋತಕಂ ಮಧ್ವಪೂಜಿತಮ್ ।
ಅಡೂರುಭಕ್ತಸಂಸೇವ್ಯಂ ವಿಷ್ಣುಂ ವಂದೇ ಶಿವಾರ್ಚಿತಮ್ ॥

ಪರವಿದ್ಯಾ ಪ್ರಕಾಶನ
ಶಮ್ಯಾಪ್ರಾಸ, ಮೂಡುಸಗ್ರಿ, ಉಡುಪಿ



## ಸಹಸ್ರನಾಮದ ಏಕಮೂಲಿಕಾ ಪ್ರಯೋಗ

ಹಳ್ಳಿಯ ವೈದ್ಯರಲ್ಲಿ 'ಏಕಮೂಲಿಕಾ ಪ್ರಯೋಗ' - ಎಂದು ಚಾಲ್ತಿಯಲ್ಲಿರುವ ಒಂದು ಚಿಕಿತ್ಸಾ ಕ್ರಮ. ಇದಕ್ಕನುಗುಣವಾಗಿ ಯಾವುದೋ ಒಂದು ವಿಶಿಷ್ಟವಾದ ಬೇರನ್ನು ಎಲ್ಲ ರೋಗಗಳ ಉಪಶಮನಕ್ಕಾಗಿಯೂ ನೀಡಲಾಗುವುದು. ಕಷಾಯ, ಚೂರ್ಣ, ಗುಳಿಗೆ - ಹೀಗೆ ಬೇರೆ ಬೇರೆ ಸಂಸ್ಕಾರಗಳಿಗೊಳಪಡಿಸಿ ಆ ಬೇರನ್ನು ರೋಗಿಗಳಿಗೆ ಔಷಧವಾಗಿ ಕೊಡಲಾಗುವುದು. ಆದರಿಂದ ಎಲ್ಲ ರೋಗಗಳ ಉಪಶಮನವೂ ನಡೆಯುವುದು.

ಶ್ರೀ ವಿಷ್ಣುಸಹಸ್ರನಾಮದ ಪಠನವೂ ಒಂದು ಬಗೆಯಲ್ಲಿ ಏಕಮೂಲಿಕಾಪ್ರಯೋಗದಂತೆ. ಸಂಸಾರದಲ್ಲಿ ಅನುಭವಿಸುವ ಎಲ್ಲ ಬಗೆಯ ಸಮಸ್ಯೆಗಳಿಗೂ ಇದರಿಂದ ಪರಿಹಾರ ದೊರಕಬಲ್ಲದು. ಸಾಧಕರು ತಮ್ಮ ಜೀವನದ ಸಮಸ್ಯೆಗಳ ಪರಿಹಾರಕ್ಕಾಗಿ ಹಾಗೂ ಬದುಕಿನ ಸಮೃದ್ಧಿಗಾಗಿ ಯಾವ ಯಾವ ಗುಣಧರ್ಮಗಳನ್ನು ಭಗವಂತನಿಂದ ಅಪೇಕ್ಷಿಸುವರೋ ಅಂತಹ ಗುಣಧರ್ಮಗಳಿಗೆ ಸಂಬಂಧಿಸುವ ಅವನ ನಾಮಗಳನ್ನೇ ಶ್ರೀವಿಷ್ಣುಸಹಸ್ರನಾಮದಲ್ಲಿ ಹೆಚ್ಚಾಗಿ ಕ್ರೋಢೀಕರಿಸಲಾಗಿದೆ.

ಒಂದು ವಿಶಿಷ್ಟವಾದ ಪದಾರ್ಥವನ್ನು ಹೊಂದಿರುವ ವ್ಯಕ್ತಿಯನ್ನು ಆ ವಿಶಿಷ್ಟ ಪದಾರ್ಥವನ್ನು ಹೊಂದಿರುವುದಕ್ಕಾಗಿ ಮತ್ತೆ ಮತ್ತೆ ಹೊಗಳಿದರೆ, ಹೊಗಳಿದವನಿಗೆ ಆ ಪದಾರ್ಥವನ್ನು ಕೊಟ್ಟು ಬಿಡೋಣ - ಎಂದು ಎನಿಸುವುದು ಸಹಜವಾದ ಮಾನಸಿಕ ಧರ್ಮ. ಇದರ ಹಿನ್ನೆಲೆಯಲ್ಲೇ **'ತಂ ಯಥಾ ಯಥಾ ಉಪಾಸತೇ ತದೇವ ಭವತಿ'** - ಭಗವಂತನನ್ನು ಹೇಗೆ ಉಪಾಸನೆ ನಡೆಸುವೆವೋ ಅದರಿಂದ ಪ್ರಸನ್ನನಾಗುವ ಅವನಿಂದ ಅದಕ್ಕನುಗುಣವಾಗಿ ಫಲ ದೊರಕುವುದೆಂದು ಪ್ರಮಾಣ ಸಾರುತ್ತಿದೆ.

ಹೀಗೆ ಸಂಸಾರದಲ್ಲಿ ಕಾಡುತ್ತಿರುವ ಯಾವುದೇ ಸಮಸ್ಯೆಯ ಪರಿಹಾರಕ್ಕೆ ಏಕೈಕ ಉಪಾಯ - **'ಶ್ರೀ ವಿಷ್ಣುಸಹಸ್ರನಾಮದ ಪಠನ'**

ಶ್ರೀ ವಿಶ್ವಪ್ರಿಯರ ಪ್ರವಚನ ಮಾಲಿಕೆಯ ಆಧಾರದಲ್ಲಿ ಅರಳಿದ

"ವಿಶ್ವಪ್ರಿಯಾ" (ಕನ್ನಡದ ಟಿಪ್ಪಣಿ) ದ ಬೆಳಕಿನಡಿ

# ಶ್ರೀ ವಿಷ್ಣುಸಹಸ್ರನಾಮ


ಮೂಲ - ಶ್ರೀ ಶ್ರೀ ವಿಶ್ವಪ್ರಿಯತೀರ್ಥರು

ಅದಮಾರು ಮಠ

ಉಡುಪಿ

ಸಂಪಾದನೆ - ಸಂಗ್ರಹಣೆ

ಸಗ್ರಿ ರಾಘವೇಂದ್ರ ಉಪಾಧ್ಯಾಯ





ಪರವಿದ್ಯಾ ಪ್ರಕಾಶನ

"ಶಮ್ಯಾಪ್ರಾಸ"

ಮೂಡುಸಗ್ರಿ, ಉಡುಪಿ

ಶ್ರೀ ವಿಷ್ಣುಸಹಸ್ರನಾಮ - ವಿಶ್ವಪ್ರಿಯಾ - ಕನ್ನಡದ ಟಿಪ್ಪಣಿಯೊಂದಿಗೆ ಶ್ರೀ ಶ್ರೀ ವಿಶ್ವಪ್ರಿಯ ತೀರ್ಥರು, ಅದಮಾರು ಮಠ, ಉಡುಪಿ ಇವರ ಸಹಸ್ರನಾಮ ಪ್ರವಚನಗಳ ಮಾಲಿಕೆಯ ಆಧಾರದಲ್ಲಿ ಅರಳಿದ ಟಿಪ್ಪಣಿ.

ಸಂಗ್ರಹ - ಸಂಪಾದನ - ಸಗ್ರಿ ರಾಘವೇಂದ್ರ ಉಪಾಧ್ಯಾಯ

ಪ್ರಕಾಶನ - ಪರವಿದ್ಯಾ ಪ್ರಕಾಶನ,
"ಶಮ್ಯಾಪ್ರಸ", ಮೂಡುಸಗ್ರಿ

ಪುಟಗಳು : 64+837

ಪ್ರಕಾಶನ ವರ್ಷ : 2007

ಬೆಲೆ : ರೂ. 300/-

ಆರ್ಥಿಕ ನೆರವು : ಅದಮಾರು ಮಠ, ಉಡುಪಿ

ಅಕ್ಷರ ಜೋಡಣೆ, ಮುಖಪುಟ ವಿನ್ಯಾಸ : ಗೋಪ್ಯ ಕಂಪ್ಯೂಟರ್ಸ್, ಉಡುಪಿ

ಮುದ್ರಣ : ರಾಷ್ಟ್ರೋತ್ಥಾನ ಮುದ್ರಣಾಲಯ, ಬೆಂಗಳೂರು

"ವಿಶ್ವಪ್ರಿಯಾ" ದ ವಿಷಯಾನುಕ್ರಮಣಿಕಾ

# "ವಿಶ್ವಪ್ರಿಯಾऽರ್ಪಿತೇಯಂ ಕೃಷ್ಣಾಯ ಚತುರಾತ್ಮನೇ"


ಶ್ರೀ ಪ್ರವಕ್ತ್ರಾತ್ಮನೇ ನಮಃ


ಶ್ರೀ ಲೇಖಿತ್ರಾತ್ಮನೇ ನಮಃ


ಶ್ರೀಶ್ರೋತೃಮಂತ್ರಾತ್ಮನೇ ನಮಃ

ವಕ್ತೃ ಲೇಖಿತೃರೂಪೇಣ ಶ್ರೋತೃಮಂತ್ರಾತ್ಮನೈವ ಚ ।
ತಮಂತರ್ಯಾಮಿಣಂ ಕೃಷ್ಣಂ ವಂದೇ ಸಂಸಿದ್ಧಿದಾಯಕಮ್ ॥

* ಉಡುಪಿ ಶ್ರೀಕೃಷ್ಣ "ವಾಗೀಶಾನಾ" ಎನಿಸುವ ಸ್ತ್ರೀರೂಪದಿಂದ ಶ್ರೀ ವಿಶ್ವಪ್ರಿಯ ತೀರ್ಥರಲ್ಲಿದ್ದುಕೊಂಡು ವಿಷ್ಣುಸಹಸ್ರನಾಮದ ಪ್ರವಚನಗಳನ್ನು ಹೊರಡಿಸಿರುವನು.
ತನಗೆ ಪ್ರಣಯಪತ್ರ ಬರೆದ ರುಗ್ಮಿಣಿಯಲ್ಲಿ ಅಂತಹ ರೂಪದಿಂದಲೇ ಇದ್ದುಕೊಂಡು ಅವಳಿಂದ ಪತ್ರ ಬರೆಸಿರುವಂತೆ ನನ್ನಲ್ಲೂ ಆ ರೂಪದಿಂದ ಇದ್ದುಕೊಂಡು ವಿ.ಸ. ನಾಮದ ಪ್ರವಚನಗಳನ್ನು ಬರೆಸಿರುವನು.

* ತನ್ನ ಗೀತೋಪದೇಶಕ್ಕೆ ಅರ್ಜುನನನ್ನು ಶ್ರೋತೃ ಆಗುವಂತೆ, ಚಿಂತಕನಾಗುವಂತೆ ಪ್ರೇರಿಸಿದ ಶ್ರೀ ಕೃಷ್ಣ ವಿ.ಸ.ನಾಮದ ಪ್ರವಚನದ ಶ್ರೋತೃಗಳಲ್ಲಿದ್ದುಕೊಂಡು ಅವರು ಆ ಪ್ರವಚನಗಳ ಶ್ರೋತೃಗಳಾಗುವಂತೆ ಚಿಂತಕರಾಗುವಂತೆ ಹಾಗೂ ವಿ.ಸ. ನಾಮದ ಪ್ರವಚನಗಳನ್ನು ನಡೆಸಲು ಶ್ರೀಪಾದರನ್ನೂ, ಅವುಗಳನ್ನು ಲೇಖನರೂಪದಲ್ಲಿ ಸಂಗ್ರಹಿಸಲು ನನ್ನನ್ನೂ ಒತ್ತಾಯಿಸುವಂತೆ ಪ್ರೇರಿಸಿರುವನು.

* ಹೀಗೆ ಪ್ರವಕ್ತೃ ಲೇಖಿತೃ ಶ್ರೋತೃ ಮಂತೃ ಈ ನಾಲ್ಕು ಬಗೆಯ ಸಾಧಕರಲ್ಲಿ ನಾಲ್ಕು ರೂಪಗಳಿಂದ ಇದ್ದುಕೊಂಡು ಪ್ರೇರಿಸಿದ ಅವನ ಅನುಗ್ರಹ ರೂಪದಲ್ಲಿ ಅವರೆಲ್ಲರ ಸಾಧನಾರೂಪವಾಗಿ ಅರಳಿರುವ ಈ 'ವಿಶ್ವಪ್ರಿಯಾ' ಕೃತಿಕುಸುಮವನ್ನು ಚತೂರೂಪಿ ಮಧ್ವವಲ್ಲಭನಿಗೆ 'ನಾರಾಯಣಾಯೇತಿ ಸಮರ್ಪಯಾಮಿ'.



ದ್ರುಹ್ಯಂತೀಂ ಹೃದ್ರುಹಂ ಮಾಂ ದ್ರುತಮನಿಲ ಬಲಾದ್ರಾವಯಂತೀಮವಿದ್ಯಾ -
ನಿದ್ರಾಂ ವಿದ್ರಾವ್ಯ ಸದ್ಯೋ ರಚನಪಟುಮಥಾಪಾದ್ಯ ವಿದ್ಯಾಸಮುದ್ರ |
ವಾಗ್ದೇವೀ ಸಾ ಸುವಿದ್ಯಾದ್ರವಿಣದ ವಿದಿತಾ ದ್ರೌಪದೀ ರುದ್ರಪತ್ನ್ಯಾ -
ದ್ಯುದ್ರಿಕ್ತಾ ದ್ರಾಗಭದ್ರಾದ್ ರಹಯತು ದಯಿತಾ ಪೂರ್ವಭೀಮಾಜ್ಞಯಾ ತೇ ||

* ಹೇ ಅನಿಲ, ನೀನು ವಿದ್ಯಾಸಾಗರ. ಉತ್ತಮ ವಿದ್ಯಾಸಂಪತ್ತನ್ನು ಕರುಣಿಸುವವನು. ಹಿಂದೆ ಭೀಮಾವತಾರ ತಾಳಿದವನು.

* ನಿನ್ನ ಪ್ರೇಯಸಿಯಾದ ಭಾರತೀದೇವಿ, ಪಾರ್ವತಿ, ಸುಪರ್ಣೆ, ವಾರುಣಿ ಇತ್ಯಾದಿ ದೇವಿಯರಿಗಿಂತ ಉತ್ತಮಳಾಗಿರುವವಳು. ನೀನು ಭೀಮನಾದಾಗ ಆಕೆ ದ್ರೌಪದಿಯಾಗಿ ಪ್ರಸಿದ್ಧಳಾಗಿದ್ದಳು.

* ನನ್ನ ಹೃದಯದಲ್ಲಿ 'ಅವಿದ್ಯಾನಿದ್ರೆ' ಬೆಳೆದು, ಪ್ರಬಲವಾಗುತ್ತಿದೆ. ನನ್ನನ್ನು ಬಲಾತ್ಕಾರವಾಗಿ ಸಂಸಾರಬಂಧನದಲ್ಲಿ ತೊಡಗಿಸುವ ಮೂಲಕ ನನಗೆ ದ್ರೋಹವನ್ನೆಸಗುತ್ತಿದೆ.

* ನಿನ್ನ ಆಜ್ಞೆಯಿಂದ ದ್ರೌಪದಿ ಅಂತಹ ಅವಿದ್ಯೆಯನ್ನು ದೂರ ಓಡಿಸಿ, ನಾನು ಕೂಡಲೇ ಸಂಕಲ್ಪಿತ ಕೃತಿಯ ರಚನೆಯಲ್ಲಿ ಸಮರ್ಥನಾಗುವಂತೆ ನನ್ನನ್ನು ರೂಪಿಸಿಲಿ.

* ರಚನೆಗೆ ಅಡ್ಡಿಯನ್ನೊಡ್ಡುವ ಅಮಂಗಳರೂಪದ ಅಜ್ಞಾನ, ಪಾಪಾತ್ಮಕವಾದ ಪ್ರಾರಬ್ಧಕರ್ಮ, ಅದರ ಪರಿಣಾಮವಾದ ಆಧಿ, ವ್ಯಾಧಿಗಳು ಇವೆಲ್ಲವುಗಳಿಂದ ನನಗೆ ಬಿಡುಗಡೆ ನೀಡಲಿ.

* ಸಾಧಕರೇ, ನಾನು ಜಿಜ್ಞಾಸುಗಳ ಒತ್ತಾಯಕ್ಕನುಗುಣವಾಗಿ 'ವಿಶ್ವಪ್ರಿಯಾ' ಕೃತಿಯನ್ನು ಆದಷ್ಟು ಬೇಗ ರಚಿಸಲು ಎಷ್ಟೆಷ್ಟು ಯತ್ನಿಸಿದರೂ ಕೆಲಸ ಸಾಗದಾದಾಗ ಮೇಲಿನ ವಾಯುಸ್ತುತಿಯ ಪದ್ಯದ ಮಾಧ್ಯಮದಲ್ಲಿ 'ವಿಶೇಷ ಚಿಂತನೆ' ನಡೆಸಿದೆ. ಅದರ ಫಲವಾಗಿಯೇ ವಿಳಂಬವಾಗಿಯಾದರೂ 'ವಿಶ್ವಪ್ರಿಯಾ' ವಿರಾಜಿಸುವಂತಾಗಿದೆ. ಆದುದರಿಂದ ನೀವು ಕೂಡಾ ವಿಷ್ಣುಸಹಸ್ರನಾಮದ ಮಾಧ್ಯಮದಲ್ಲಿ ಚಿಂತನ ಮನನರೂಪವಾದ ರಚನೆಯಲ್ಲಿ ಪಟುಗಳಾಗಬೇಕೆಂದಿದ್ದರೆ ಅವಶ್ಯವಾಗಿ ಮೇಲಿನ ಪದ್ಯದ ಮೂಲಕ 'ವಿಶೇಷಸ್ತುತಿ' ನಡೆಸಿ.



# ಸಹಸ್ರನಾಮ ಲೇಖನಯಜ್ಞಕ್ಕೆ ಅಂತಃಸತ್ವವನ್ನು ತುಂಬಿಸುವ ಪ್ರಕ್ರಿಯೆ



ಮುಂಬಯಿಯ ಹರಿಗುರು ಭಕ್ತರಾಗಿರುವ ಶ್ರೀಯಾದವಾಚಾರ್ಯರು ಹರಿಗುರುಗಳ ಪ್ರೀತಿಗಾಗಿ ವಿಷ್ಣುಸಹಸ್ರನಾಮಲೇಖನ ಯಜ್ಞವನ್ನು ಹಮ್ಮಿಕೊಂಡಿರುವರು.

ಸಾವಿರ ಸಾಧಕರ ಮೂಲಕ ವಿಷ್ಣುಸಹಸ್ರನಾಮದ ಬರವಣಿಗೆಯೇ ಕೇಂದ್ರ ಸಾಧನೆಯಾಗಿ ಉಳ್ಳ ಈ ಲೇಖನ ಯಜ್ಞಕ್ಕೆ ಸಂಬಂಧಿಸಿದಂತೆ,

* ಮೊದಲು ವಿಷ್ಣು ಸಹಸ್ರನಾಮ ಸ್ತೋತ್ರ, ಬಳಿಕ ಸ್ತೋತ್ರದ ನಾಮಾವಲಿ ಹೀಗೆ ಐದು ಬಾರಿ ಬರೆಯಬೇಕು.

* ಒಬ್ಬರೇ ಲೇಖಕರು ಏನೂ ತಪ್ಪಿಲ್ಲದೇ, ಶುಭ್ರವಾಗಿ ಬರೆಯಬೇಕು.

* ಲೇಖನಯಜ್ಞಕ್ಕಾಗಿ ನೀಡಲಾಗುವ ಪುಸ್ತಕದಲ್ಲಿಯೇ ಬರೆಯಬೇಕು.

ಮುಂತಾದ ಬರವಣಿಗೆಗೆ ಸಂಬಂಧಿಸುವ ನಿಯಮಗಳಂತೆ,

* **ಬೆರಳಚ್ಚು ಯಂತ್ರದಂತೆ ಯಾಂತ್ರಿಕವಾಗಿ ಬರೆಯದೆ, ಆದಷ್ಟು ಜ್ಞಾನ-ಭಕ್ತಿಪೂರ್ವಕವಾಗಿ ಶ್ರೀ ವಿಷ್ಣುವಿನ ಸ್ಮರಣೆಯೊಂದಿಗೆ ಬರೆಯಬೇಕು** - ಎಂಬುದು ಅನುಸಂಧಾನಕ್ಕೆ ಸಂಬಂಧಿಸುವ ಪ್ರಮುಖವಾದ ನಿಯಮ.

ಲೇಖನಯಜ್ಞಕ್ಕೆ ಅಂತಃಸತ್ವವನ್ನು ತುಂಬ ಬಲ್ಲ ಈ ನಿಯಮಕ್ಕೆ ಪೂರಕವಾಗುವಂತೆ ಶ್ರೀಯಾದವಾಚಾರ್ಯರಿಂದ 'ವಿಶ್ವಪ್ರಿಯಾ' ಕೃತಿಯ ಪ್ರಕಟಣೆ ನಡೆದಿದೆ. ಈ ಕೃತಿಯಲ್ಲಿ ಶ್ರೀ ವಿಶ್ವಪ್ರಿಯತೀರ್ಥರು ವಿಷ್ಣುಸಹಸ್ರ ನಾಮದ ಸಾವಿರ ನಾಮಗಳ ಬಗ್ಗೆ ನೀಡಿರುವ ಸರಳ ವಿವರಣೆಯನ್ನು ಓದಿ, ಅರ್ಥಾನುಸಂಧಾನದೊಂದಿಗೆ ಸಹಸ್ರನಾಮದ ಲೇಖನ ಯಜ್ಞದಲ್ಲಿ ತೊಡಗಿದರೆಂದರೆ ವಿಶೇಷವಾದ ಫಲ ದೊರಕಬಲ್ಲದು.

ಸಾಧಕರೇ, ಯಾದವಾಚಾರ್ಯರ ಮುಂಬಯಿಯ ವಿಳಾಸದಿಂದ ಲೇಖನ ಯಜ್ಞದ ನಿಯಮಗಳನ್ನು ತಿಳಿದು, ಅವುಗಳ ಪಾಲನೆಯೊಂದಿಗೆ ಸಹಸ್ರನಾಮದ ಲೇಖನ ಯಜ್ಞದಲ್ಲಿ ಅವಶ್ಯಕವಾಗಿ ಪಾಲ್ಗೊಳ್ಳಿ.

ಶ್ರೀ ಹರಿಗುರುಗಳ ವಿಶೇಷಾನುಗ್ರಹದ ಜೊತೆಗೆ ಸೂಕ್ತ ಸಂಭಾವನೆಯನ್ನೂ ಪಡೆಯಿರಿ

*****

**ಮುಖ ಪುಟದ ಸಂದೇಶ**

## ವಿ. ಸ. ನಾಮದ ಗರಿಮೆಗೆ ಸಾಕ್ಷಿಯಾಗಿ ಮೆರೆಯುತ್ತಿರುವ
# ಅಡೂರಿನ ಮಹಾಲಿಂಗೇಶ್ವರ - ಉಪಾಸ್ಯ ಶ್ರೀ ವಿಷ್ಣು



ಅಡೂರು ಕಾಸರಗೋಡಿಗೆ ಸೇರಿದ ಗ್ರಾಮ. ಕಾಸರಗೋಡಿನಿಂದ ಸುಳ್ಯ ಮಡಿಕೇರಿ ಹೋಗುವ ದಾರಿಯಲ್ಲಿ ಸಿಗುವ ಕೋಟ್ಯಾಡಿಯಲ್ಲಿ ದಕ್ಷಿಣಕ್ಕೆ ಹೋಗುವ ರಸ್ತೆಯಲ್ಲಿ ನಾಲ್ಕು ಕಿ.ಮೀ. ದೂರದಲ್ಲಿ ಅಡೂರಿನ ಮಹಾಲಿಂಗೇಶ್ವರ ದೇವಾಲಯ ಕಾಣಸುವುದು. ಪಯಸ್ವಿನೀ ನದಿಯ ದಕ್ಷಿಣ ಬದಿಯ ಎರಡು ಕಿ.ಮೀ. ದೂರದಲ್ಲಿ ವಿರಾಜಿಸುತ್ತಿರುವ ಈ ಮಹಾಲಿಂಗೇಶ್ವರ ದೇವಾಲಯಕ್ಕೂ ವಿಷ್ಣು ಸಹಸ್ರನಾಮಕ್ಕೂ ಗಾಢವಾದ ನಂಟು ಇದೆ.

ರಾಮೇಶ್ವರದಲ್ಲಿ ಚಾತುರ್ಮಾಸ್ಯ ವ್ರತವನ್ನು ಪೂರೈಸಿದ ಶ್ರೀ ಮಧ್ವಗುರುಗಳು ಕ್ರಮೇಣ ಪಯಸ್ವಿನೀ ನದಿಯ ತೀರದಲ್ಲಿರುವ ಅಡೂರಿನ ಈ ಮಹಾಲಿಂಗೇಶ್ವರ ದೇವಾಲಯಕ್ಕೆ ಬಂದಿದ್ದರು. ಮಧ್ವವಿಜಯದಲ್ಲಿ (5-49) ಪಯಸ್ವಿನೀ ತಟದಲ್ಲಿರುವ ದೇವಾಲಯವೊಂದನ್ನು ಶ್ರೀಮಧ್ವರು ಪ್ರವೇಶಿಸಿದರೆಂದು ಉಲ್ಲೇಖಿಸಲ್ಪಟ್ಟಿದೆ.

ಷಡಂಗಸಹಿತವಾಗಿ ಅಧ್ಯಯನ ನಡೆಸಿದ್ದ ಅನೇಕ ಬ್ರಾಹ್ಮಣಶ್ರೇಷ್ಠರು ಶ್ರೀ ಮಧ್ವರನ್ನು ಕಾಣಲು ಬಂದಿದ್ದರು. ಆ ವಿದ್ವತ್‌ಸಭೆಯಲ್ಲಿ ಒಬ್ಬ ಹಿರಿಯ ಪಂಡಿತ ಆಚಾರ್ಯರಲ್ಲಿ ಒಂದು ಐತರೇಯಸೂಕ್ತದ ಅರ್ಥವನ್ನು ಕೇಳುವನು. ಆಚಾರ್ಯರು ವಿವರಿಸುವರು. ಅಲ್ಲಿಯ ವಿದ್ವಾಂಸರು ಆ ಸೂಕ್ತಕ್ಕೆ ಬೇರೆ ಅರ್ಥ ಹೇಳಿ, ಶ್ರೀಮಧ್ವರು ಹೇಳಿದ ಅರ್ಥ ಸರಿಯಲ್ಲ ಎನ್ನುವರು. ಅದಕ್ಕೆ ಶ್ರೀ ಮದಾಚಾರ್ಯರು ಆ ಸೂಕ್ತಕ್ಕೆ ಎರಡು ಅರ್ಥಗಳೂ ಆಗಬಹುದೆಂದು ತಿಳಿಸಿ, ತಮ್ಮ ಹೇಳಿಕೆಗೆ ಆಧಾರವಾಗಿ ಸ್ಕಂದ ಪುರಾಣದ ಸಂದೇಶವನ್ನು (ಮ.ವಿ. 6-4) ಹೀಗೆ ಪ್ರಸ್ತಾಪಿಸುವರು -

'...... ತ್ರ್ಯರ್ಥತಾಂ ಶ್ರುತಿಷು ವಿತ್ತ ದಶಾರ್ಥಮ್ |
ಭಾರತಂ ನನು ಶತಾರ್ಥಮಪಿ ಸ್ಯಾದ್ವೈಷ್ಣವಂ ಪದಸಹಸ್ರತಯಂ ಹಿ'

ಶ್ರುತಿಗಳಿಗೆ ಕನಿಷ್ಠ ಮೂರು ಅರ್ಥಗಳು, ಮಹಾಭಾರತಕ್ಕೆ ಕನಿಷ್ಠ ಹತ್ತು ಅರ್ಥಗಳು, ವಿಷ್ಣುಸಹಸ್ರನಾಮದ ಒಂದೊಂದು ನಾಮಕ್ಕೂ ಕನಿಷ್ಠ ನೂರು ಅರ್ಥಗಳು ಇವೆ.

ಮಧ್ವರ ಈ ಉದ್‌ಘೋಷಣೆ 'ಸ್ಕಂದ ಪುರಾಣ'ದ ಸಂದೇಶದ ಹಿನ್ನೆಲೆಯಲ್ಲಿ ಮೂಡಿಬಂದಿದ್ದು, ಅಂತಹ ಸ್ಕಂದಪುರಾಣ ದ ಸಂದೇಶವನ್ನು ಶ್ರೀಮಧ್ವರೇ ತಮ್ಮ ಋಗ್ಭಾಷ್ಯದಲ್ಲಿ (1-76) ಹೀಗೆ ಉಲ್ಲೇಖಿಸಿರುವರು -

'ತ್ರಯೋಽರ್ಥಾಃ ಸರ್ವವೇದೇಷು ದಶಾರ್ಥಾಃ ಸರ್ವಭಾರತೇ |
ವಿಷ್ಣೋಃ ಸಹಸ್ರನಾಮಾಪಿ ನಿರಂತರಶತಾರ್ಥಕಮ್'

ಹೀಗೆ ಮಧ್ವರು ಪ್ರಾಸಂಗಿಕವಾಗಿ ವಿಷ್ಣುಸಹಸ್ರನಾಮದ ಒಂದೊಂದು ನಾಮಕ್ಕೂ ನೂರು ನೂರು ಅರ್ಥಗಳಿವೆ ಎಂದು ತಿಳಿಸಿದಾಗ ಅಲ್ಲಿಯ ವಿದ್ವಾಂಸರು, ಆಗ ಪ್ರಸ್ತುತವಾಗಿದ್ದ ಐತರೇಯ ಸೂಕ್ತವನ್ನು ಬಿಟ್ಟು, ವಿಷ್ಣುಸಹಸ್ರನಾಮಕ್ಕೆ ನೂರು ಅರ್ಥಗಳನ್ನು ಹೇಳಿ ನೋಡೋಣ ಎಂದು ಸವಾಲು ಒಡ್ಡುವರು. ತಾವು ಹೇಳಿದಂತೆ ಅನುವಾದ ನಡೆಸಬೇಕೆಂಬ ಕರಾರಿನ ಮೇಲೆ ಶ್ರೀಮದಾಚಾರ್ಯರು ಪ್ರತ್ಯಯ, ಪ್ರಕೃತಿ ಮುಂತಾದವುಗಳ ವಿವೇಚನೆಯೊಂದಿಗೆ ವಿಶ್ವನಾಮದ ಅರ್ಥಗಳನ್ನು ಹೇಳ ಹೊರಡುವರು. ಇನ್ನೂ ಆ ನಾಮಕ್ಕೆ ನೂರು ಅರ್ಥಗಳನ್ನು ವಿವರಿಸುವ ಮುಂಚೆಯೇ ಅವರು ವಿವರಿಸಿದ್ದನ್ನು ಧಾರಣೆ ಮಾಡಲು ಅಸಮರ್ಥರಾಗಿದ್ದ ಆ ವಿದ್ವಾಂಸರು ಆಚಾರ್ಯರ ಪ್ರತಿಭೆಯನ್ನು ಕೊಂಡಾಡಿ ಕ್ಷಮಾಯಾಚನೆ ಮಾಡುವರು. (ಮ ವಿ. 6-1 .......10)

ಹೀಗೆ ಶ್ರೀ ಮಧ್ವಗುರುಗಳಿಂದ ಶ್ರುತಿಗಳ ಮತ್ತು ಮಹಾಭಾರತದ ಅರ್ಥ-ಗಾಂಭೀರ್ಯದೊಂದಿಗೆ, ವಿಷ್ಣುಸಹಸ್ರನಾಮದ ಅರ್ಥಗಾಂಭೀರ್ಯದ ಬಗ್ಗೆ ಮಹತ್ತ್ವಪೂರ್ಣ ಸಂದೇಶದ ಆವಿಷ್ಕಾರ ನಡೆದು, ಅದಕ್ಕೆ ಒಂದು ಪ್ರಾತ್ಯಕ್ಷಿಕೆ ಯಂತೆ ತೋರಿಸಲಾದ ಸಮರ್ಥನೆಗೆ ಮೂಕಸಾಕ್ಷಿಯಾಗಿ ಮೆರೆಯುತ್ತಿರುವವನು ಈ ದೇವಾಲಯದ ಮಹಾಲಿಂಗೇಶ್ವರ ಪ್ರತೀಕದಲ್ಲಿ ಸನ್ನಿಹಿತನಾಗಿರುವ ವೈಷ್ಣವಾಗ್ರೇಸರನಾದ ಮಹರುದ್ರದೇವ !!

ಶ್ರೀ ಮಧ್ವಗುರುಗಳ ಮೂಲಕ ನಡೆದ ಈ ಆಧ್ಯಾತ್ಮಿಕ ಸಾಧನೆಯನ್ನು

ಸಾರುತ್ತ ಅನುಗ್ರಹಿಸುತ್ತಿರುವವನು ಅಲ್ಲಿಯ ವಿಷ್ಣುಪ್ರತೀಕದಲ್ಲಿ ಸನ್ನಿಹಿತನಾಗಿರುವ ಶ್ರೀ ವಿಷ್ಣು.

ಅಡೂರಿನ ಭಕ್ತ ಜನತೆ ಈಗಲೂ ವರದಿಸುತ್ತಿರುವಂತೆ ಅಂದು ಶ್ರೀ ಮಧ್ವಗುರುಗಳ ಮೂಲಕ ನಡೆದ ವಿಷ್ಣುಸಹಸ್ರನಾಮದ ಕುರಿತಾದ ವಾಙ್ಮಯ ಸಾಧನೆಯನ್ನು ಕಂಡು ಸಂತುಷ್ಟರಾದ ಅಲ್ಲಿಯ ಭಾವುಕರು ಅಲ್ಲಿಯೇ ಭಿಕ್ಷೆ ಸ್ವೀಕರಿಸುವಂತೆ ಶ್ರೀಮಧ್ವರನ್ನು ಪ್ರಾರ್ಥಿಸಿಕೊಳ್ಳುವರು. ರುದ್ರದೇವಾಲಯದಲ್ಲಿ ತಾವು ಭಿಕ್ಷೆ ಸ್ವೀಕರಿಸುವುದಿಲ್ಲ ಎನ್ನಲು ಶ್ರೀಮಧ್ವರ ಮೂಲಕ ಮಹಾಲಿಂಗೇಶ್ವರನ ಬಲ ಪಾರ್ಶ್ವದಲ್ಲಿ ಶ್ರೀ ವಿಷ್ಣುವಿನ ಪ್ರತಿಮೆಯ ಪ್ರತಿಷ್ಠೆಯನ್ನೂ ನಡೆಸಲಾಯಿತು. ಶ್ರೀ ಮಧ್ವರು ತಮ್ಮ ಪರಿವಾರದ ಬಾರಿತ್ತಾಯ ವಂಶದ ಒಬ್ಬ ಬ್ರಾಹ್ಮಣನನ್ನು ಅಲ್ಲಿಯ ಪೂಜೆಗೆ ನಿಯೋಜಿಸಿದ್ದು, ಆ ವಂಶದವರು ಈಗಲೂ ಅಲ್ಲಿ ಸೇವೆ ಸಲ್ಲಿಸುತ್ತಿರುವರು. 1980 ಇಸವಿಯಲ್ಲಿ ದೇವಾಲಯದ ವತಿಯಿಂದ ಪ್ರಕಟಗೊಂಡ ಪಾಶುಪತ ಸ್ಮರಣಸಂಚಿಕೆಯಲ್ಲೂ ಈ ಘಟನೆ ಉಲ್ಲೇಖಗೊಂಡಿದೆ.

ಹೀಗೆ ಅಡೂರಿನ ಮಹಾಲಿಂಗೇಶ್ವರನ ಬಲಪಾರ್ಶ್ವದಲ್ಲಿ ಶ್ರೀಮಧ್ವಗುರುಗಳಿಂದ ಪೂಜಿತನಾಗಿರುವ ಶ್ರೀ ವಿಷ್ಣು ತನ್ನ ಎಡಬಲಪಾರ್ಶ್ವಗಳಲ್ಲಿ ಪ್ರತಿಷ್ಠಿತರಾಗಿರುವ ಗರುಡ, ಮುಖ್ಯಪ್ರಾಣರು ಮತ್ತು ಶ್ರೀಮಧ್ವರಿಂದಲೇ ಅನುಗೃಹೀತವಾದದ್ದೆಂದು ಹೇಳಲಾಗುವ ಒಂದು ಸಾಲಿಗ್ರಾಮ - ಇವಿಷ್ಟು ಶ್ರೀಮಧ್ವರ ಮೂಲಕ ಅಂದು ಸಾರಲ್ಪಟ್ಟ ಶ್ರೀ ವಿಷ್ಣು ಸಹಸ್ರನಾಮದ ಹಿರಿಮೆಗರಿಮೆಗಳಿಗೆ ಸಾಕ್ಷಿಗಳಂತೆ ಮೆರೆಯುತ್ತಿವೆ.

ಆದ್ದರಿಂದ ವಿಷ್ಣು ಸಹಸ್ರನಾಮದ ಮಾಧ್ಯಮದಲ್ಲಿ ಸಾಧನೆಗೆ ತೊಡಗುವ ಸಾಧಕರು ಪಯಸ್ವಿನೀ ತೀರದ ಅಡೂರಿನ ಪರಿಸರ, ಅಲ್ಲಿಯ ಮಹಾಲಿಂಗೇಶ್ವರ ದೇವಾಲಯದಲ್ಲಿ ಸನ್ನಿಹಿತನಾಗಿರುವ ಮನೋಭಿಮಾನಿ ಮಹರುದ್ರದೇವ, ಅವನಿಂದ ಧ್ಯಾನಿಸಲ್ಪಡುತ್ತಿರುವ ನರಸಿಂಹಾಭಿನ್ನನಾದ ಶ್ರೀ ವಿಷ್ಣುಸಹಸ್ರ ನಾಮಪ್ರತಿಪಾದ್ಯನಾದ ಶ್ರೀ ವಿಷ್ಣು, ಅವನಿಗೆ ಶ್ರೀಮಧ್ವಗರುಗಳು ಸಮರ್ಪಿಸಿದ ವಿಷ್ಣುಸಹಸ್ರನಾಮದ ಸೌರಭದ 'ಜ್ಞಾನಪುಷ್ಪ' - ಇವನ್ನೆಲ್ಲ ಅನುಸಂಧಾನಕ್ಕೆ ತಂದುಕೊಂಡಲ್ಲಿ ಸಾಧನೆಗೆ ಮೆರಗು ದೊರಕುವುದು.

*****

ಹಿಂದಿನ ಕವಚ ಪುಟದ ಸಂದೇಶ

## 'ರಥಾಂಗಪಾಣಿ'ಯ 'ಸತ್ಯಸಂಧತ್ವ'



'ಸತ್ಯಸಂಧೋಽಪರೋ ನಾಸ್ತಿ
ತಮೃತೇ ವಿಷ್ಣುಮವ್ಯಯಮ್' |
'ಸತ್ಯಸಂಧತ್ವಮನ್ಯೇಷಾಂ ತತ್ಸಂಧಾನುಗಮೇನ ಹಿ'

'ಸತ್ಯಸಂಕಲ್ಪ' 'ಸತ್ಯಕಾಮ' 'ಸತ್ಯವಾಕ್'- ಎನಿಸಿರುವ ಶ್ರೀ ವಿಷ್ಣು ಮಾತ್ರ ಸತ್ಯಸಂಧ. ತಾನು ಕೈಗೊಂಡ ಪ್ರತಿಜ್ಞೆಯನ್ನು ಚಾಚೂ ತಪ್ಪದೆ ಈಡೇರಿಸುವ ಸಾಮರ್ಥ್ಯವುಳ್ಳವನು. ಇತರರೂ ತಾವು ಕೈಗೊಂಡ ಪ್ರತಿಜ್ಞೆಗಳನ್ನು ಈಡೇರಿಸಿ, ಸತ್ಯಸಂಧರೆನಿಸಿದ್ದರೆ, ಅದು ಅವರ ಸಾಮರ್ಥ್ಯದಿಂದ ಅಲ್ಲ. 'ಸತ್ಯಸಂಧ'ನಾದ ಶ್ರೀವಿಷ್ಣುವೂ ಆ ರೀತಿಯೇ ಪ್ರತಿಜ್ಞೆಗಳನ್ನು ಕೈಗೊಂಡಿದ್ದು, ಅವುಗಳಿಗೆ ಅನುಗುಣವಾಗಿ ಇತರರ ಪ್ರತಿಜ್ಞೆಗಳು ಸ್ವೀಕೃತಗಳಾಗಿರುವುದರಿಂದಷ್ಟೇ ಅವು ಈಡೇರಿರುವವು.

ಶ್ರೀ ವಿಷ್ಣುವಿನ 'ಸತ್ಯಕಾಮತ್ವ'ದ ಬಗ್ಗೆ 'ಸತ್ಯಕಾಮೋಽಪರೋ ನಾಸ್ತಿ.....' ಇತ್ಯಾದಿಯಾಗಿ 'ಸ್ಕಾಂದ'ದ (ಬ್ರ.ಸೂ.ಭಾ. 1-3-14) ಮೂಲಕ ಶ್ರೀಮಧ್ವರು ಪ್ರಸ್ತುತಪಡಿಸಿರುವ ನಿರ್ಣಯದ ಪಡಿಯಚ್ಚಿನಲ್ಲಿ ಶ್ರೀವಿಷ್ಣುವಿನ ಸತ್ಯಸಂಧತ್ವದ ಕುರಿತೂ ಈ ಬಗೆಯ ನಿರ್ಣಯವನ್ನು ರೂಪಿಸಿಕೊಳ್ಳಬಹುದಾಗಿದೆ. ಆ ಮೂಲಕ ಶ್ರೀ ವಿಷ್ಣುವಿನ ಪ್ರತಿಜ್ಞೆಗಳ ಸತ್ಯತ್ವವನ್ನು ಅನುಸಂಧಾನಕ್ಕೆ ತಂದುಕೊಳ್ಳಬಹುದಾಗಿದೆ.

ಆಗ ನಮಗೆ ಸಂದೇಹ ಬರಬಹುದಾದ ಒಂದು ಪ್ರಸಂಗ - ಮಹಾಭಾರತ ಯುದ್ಧದಲ್ಲಿ ನಿರಾಯುಧನಾಗಿ ಪಾಲ್ಗೊಳ್ಳುವುದಾಗಿ ಪ್ರತಿಜ್ಞೆ ಗೈದಿದ್ದ ಶ್ರೀಕೃಷ್ಣ ಭೀಷ್ಮರ ವಿರುದ್ಧ 'ರಥಾಂಗಪಾಣಿ'ಯಾಗಿ ಧುಮುಕಿದ್ದ ತಾನೇ ? ಇದರಿಂದಾಗಿ ಅವನು 'ಭಗ್ನಪ್ರತಿಜ್ಞ'ನಾದಂತಾಯಿತಲ್ಲವೇ ?

ವಾಸ್ತವವಾಗಿ ಕೃಷ್ಣ ತಾನು ನಿರಾಯುಧನಾಗಿ ಯುದ್ಧದಲ್ಲಿ ಪಾಲ್ಗೊಳ್ಳುವುದೆಂದು ಯುದ್ಧಕ್ಕೆ ತನ್ನ ಸಹಕಾರವನ್ನು ಕೇಳಲು ಬಂದಿದ್ದ ಅರ್ಜುನ, ದುರ್ಯೋಧನರ ಎದುರು ಸಹಜವಾಗಿ ಹೇಳಿದ್ದನ್ನಷ್ಟೇ ಹೊರತು ಆ ರೀತಿಯ ಪ್ರತಿಜ್ಞೆ ಮಾಡಿದ್ದು ಮಹಾಭಾರತದಲ್ಲಿ ಕಾಣಿಸುವುದಿಲ್ಲ. ಆದ್ದರಿಂದಲೇ ಶ್ರೀಮದಾಚಾರ್ಯರು -

'ತತ್ರೋದ್ದಧಾರ ಕೃಷ್ಣೋऽಪಿ ಫಲ್ಗುನಂ ಮೃದುಯೋಧಿನಮ್ |
ದೃಷ್ಟ್ವಾ ಚಕ್ರಂ ತಥೋದ್ಯಮ್ಯ ಬಾಹುಂ ಭೀಷ್ಮಾಯ ಜಗ್ಮಿವಾನ್ '

(ಮ.ಭಾರ.ತಾ.ನಿ. 25-39) ಎಂಬುದಾಗಿ 'ಮೃದುಯೋಧಿ' ಯಾಗಿದ್ದ ಅರ್ಜುನನನ್ನು ತೀವ್ರವಾಗಿ ಯುದ್ಧದಲ್ಲಿ ತೊಡಗಿಸುವುದಕ್ಕಾಗಿಯಷ್ಟೇ ಕೃಷ್ಣ ರಥದಿಂದ ಧುಮುಕಿ ಭೀಷ್ಮರ ವಿರುದ್ಧ ಧಾವಿಸಿದನೆಂದು ನಿರ್ಣಯಿಸಿರುವರೇ ಹೊರತು ಭಾಗವತದ 'ಸ್ವನಿಯಮಮಪಹಾಯ....'- ಎಂಬ ಮಾತಿನ ವಿಚಾರವನ್ನು ಪ್ರಸ್ತುತ ಪಡಿಸುವುದೇ ಇಲ್ಲ. ಒಂದೊಮ್ಮೆ ಕೃಷ್ಣ ಆ ಸಂದರ್ಭದಲ್ಲಿ 'ಭಗ್ನಪ್ರತಿಜ್ಞ' ನಂತಾಗಿದ್ದರೆ ಆ ಬಗ್ಗೆ ಏನಾದರೂ ಸ್ಪಷ್ಟೀಕರಣವನ್ನು ನೀಡದೆ ಇರುತ್ತಿರಲಿಲ್ಲ. ಇದರಿಂದ ಸೂಚಿತವಾಗುವುದು ಕೃಷ್ಣ ಹಾಗೆ ಪ್ರತಿಜ್ಞೆಯನ್ನೇ ಮಾಡಿರಲಿಲ್ಲ. ಆದುದರಿಂದ ಅದು ಭಗ್ನವಾಗುವ ಪ್ರಸಂಗವೇ ಬಂದಿಲ್ಲ.

ಭೀಷ್ಮರಾದರೂ ತಮ್ಮ 'ಭೀಷ್ಮಸ್ತವರಾಜ'ದ 'ಸ್ವನಿಯಮಮಪಹಾಯ ಮತ್ಪ್ರತಿಜ್ಞಾಂ.....' ಎಂಬ ಸ್ತುತಿಯಲ್ಲಿ ಶ್ರೀಕೃಷ್ಣ ಅರ್ಜುನದುರ್ಯೋಧನರ ಎದುರು ಹೇಳಿರುವ ಮಾತನ್ನೇ ಅವನ ಪ್ರತಿಜ್ಞೆಯನ್ನಾಗಿ ಭಾವಿಸಿ, ಅದನ್ನು ಅತಿಕ್ರಮಿಸುವಂತೆ ಅವನಿಂದ ಮಾಡಿಸುವ ತನ್ನ ಪ್ರತಿಜ್ಞೆಯನ್ನು ಈಡೇರಿಸುವುದಕ್ಕಾಗಿ ಕೃಷ್ಣ 'ರಥಾಂಗಪಾಣಿ'ಯಾಗಿ ತನ್ನೆಡೆಗೆ ಧಾವಿಸಿ ಬಂದ ಎಂದು 'ದರ್ಶನಭಾಷೆ' ಗನುಗುಣವಾಗಿ ಅನುಸಂಧಾನ ಮಾಡುತ್ತಿರುವರು

ಭೀಷ್ಮರ ಅನುಸಂಧಾನದಂತೆಯೇ ಇಟ್ಟುಕೊಳ್ಳುವುದಾದರೂ ಭಕ್ತವತ್ಸಲನಾದ ಶ್ರೀಕೃಷ್ಣ ತಾನು ನಿರಾಯುಧನಾಗಿ ಯುದ್ಧದಲ್ಲಿ ಪಾಲ್ಗೊಳ್ಳುವೆನೆಂದು ಮಾತು ಕೊಡುವಾಗಲೂ ಇದಕ್ಕೆ ವಿರುದ್ಧವಾಗಿ ಭೀಷ್ಮರು ಮಾಡುವ ಪ್ರತಿಜ್ಞೆಗೆ ಭಂಗ ಬರದಂತೆ ಎಂಬ ಅಂಶವನ್ನೂ ಆ ಮಾತಿನಲ್ಲಿ ಸೇರಿಸಿಕೊಂಡೇ ಇದ್ದುದರಿಂದ, ತನ್ನ ಸತ್ಯಸಂಧತ್ವಕ್ಕೆ ಭಂಗ ಬಾರದಂತೆಯೇ ಭೀಷ್ಮರನ್ನು 'ಸತ್ಯಸಂಧ'ರನ್ನಾಗಿ ಮಾಡುವ ಮೂಲಕ ತನ್ನ ಭಕ್ತವಾತ್ಸಲ್ಯವನ್ನು ತೋರಿಸಿಕೊಟ್ಟಿರುವನೆಂದು ವಿವೇಚಿಸಿಕೊಳ್ಳಬೇಕು.

ಶ್ರೀಪಾದರ 'ದುರಾಧರ್ಷ' 'ಮಹಾವೀರ್ಯ' 'ಮೇಧಾವೀ' 'ಸಿದ್ಧಸಂಕಲ್ಪ' 'ಸಿದ್ಧಿದ' 'ಮಹೋತ್ಸಾಹ' 'ಸುವ್ರತ ' 'ಸ್ತವ್ಯ' 'ಸ್ವಾಸ್ಯ' 'ರಥಾಂಗಪಾಣಿ' - ಇತ್ಯಾದಿ ಅನೇಕ ನಾಮಗಳ ಪ್ರವಚನದಲ್ಲಿ ಈ ವಿಚಾರವು ಪ್ರಸ್ತುತವಾಗಿದ್ದು, ಶ್ರೀಕೃಷ್ಣನ ಸತ್ಯಸಂಧತ್ವ, ಭಕ್ತವಾತ್ಸಲ್ಯ ಮಹೋತ್ಸಾಹ, 'ಮಾಡಿ ಮಾಡಿಸುವ ಪ್ರಕ್ರಿಯೆ' ಇವುಗಳ ಮೇಲೆ ಬೆಳಕು ಚೆಲ್ಲುವಂತೆ ಅವುಗಳ ಅರ್ಥಾನುಸಂಧಾನ ನಡೆಯುವಂತಾಗಬೇಕು.

*****



**H.H. SRI VISHWAPRIYA THEERTHA SWAMIJI**
PARYAYA SRI ADMAR MATHA
Sri Krishna Matha,
Udupi - 576101. Karnataka.
Ph : 0820 - 2525600, 2520598





ಮಹಾಭಾರತದ ಹಾಗೂ ಭಾರತ ದೇಶದ ಎರಡು ಕಣ್ಣುಗಳು **ಗೀತೆ ಹಾಗೂ ಸಹಸ್ರನಾಮ.** ಮಾನವನಾಗಬೇಕಾದರೆ ಇವು ಎರಡು ಬಹಳ ಅಗತ್ಯ. ನಿತ್ಯ ಪಠಿಸಿದರೆ ಆಧ್ಯಾತ್ಮಿಕವಾಗಿ ಪುಣ್ಯ. ಲೌಕಿಕವಾಗಿ ಆರೋಗ್ಯ. ಆದ್ದರಿಂದಲೇ ಇದನ್ನು ಸದಾ ಪಠಿಸಬೇಕು ಹಾಗೂ ಅರ್ಥಾನುಸಂಧಾನ ಮಾಡಬೇಕು ಎಂದು ಹೇಳಿದ್ದಾರೆ. **'ಜ್ಞೇಯಂ ಪಾಠ್ಯಂ ಚತದ್ ದ್ವಯಮ್'**

ಇಂತಹ ಸಾವಿರ ನಾಮಗಳ ಅರ್ಥ ವಿವರಣೆಯ ನಮ್ಮ ಪರ್ಯಾಯ ಕಾಲದಲ್ಲಿ ನಾವು ಮಾಡಿದ್ದೆವು. ಅದನ್ನು ಸಗ್ರಿಯವರು ಪುಸ್ತಕ ರೂಪದಲ್ಲಿ ಹೊರ ತರುತ್ತಿದ್ದಾರೆ. ಬರವಣಿಗೆಯಲ್ಲಿ ಸಗ್ರಿಯವರಿಗೆ ಇಂದ್ರಾಂತರ್ಯಾಮಿಯ ಅನುಗ್ರಹ ಚೆನ್ನಾಗಿ ಇದೆ. ಇದೇ ರೀತಿ ಇದು ಮುಂದುವರಿಯಲಿ.

ಆಧ್ಯಾತ್ಮಿಕ ವಿಷಯದಲ್ಲಿ ವೆಚ್ಚ ಮಾಡುವ ಪ್ರಸಂಗ ಬಂದಾಗ ಅಲ್ಲಿ ಯಾದವಾಚಾರ್ಯ ದಂಪತಿಗಳು ಇದ್ದೇ ಇದ್ದಾರೆ. ತಮಗೆ ದೇವರು ಕೊಟ್ಟ ಸಂಪತ್ತನ್ನು ದೇವರ ವಿಷಯದಲ್ಲೇ ವೆಚ್ಚ ಮಾಡುತ್ತಿದ್ದಾರೆ. ದೇವರು ಇವರಿಗೆ ಈ ಸಂಪತ್ತಿನ ಜೊತೆಗೆ ಆರೋಗ್ಯ ಸಂಪತ್ತು ಹಾಗೂ ಜ್ಞಾನ ಸಂಪತ್ತನ್ನು ಅನುಗ್ರಹಿಸಲಿ ಎಂದು ಶ್ರೀಕೃಷ್ಣ ಮುಖ್ಯಪ್ರಾಣರಲ್ಲಿ ನಮ್ಮ ಪ್ರಾರ್ಥನೆ.

ಇತಿ ನಾರಾಯಣ ಸ್ಮರಣೆಗಳು

ಶ್ರೀ ವಿಶ್ವಪ್ರಿಯತೀರ್ಥರು

# ವಿಶ್ವಪ್ರಿಯ ಉವಾಚ

## ವಿಷ್ಣು ಸಹಸ್ರ ನಾಮದ ಪಾರಾಯಣಕ್ಕೆ ಸಂಬಂಧಿಸುವ ನಿಯಮಗಳು

* ಪರೀಕ್ಷೆಯಲ್ಲಿ ವಿಷಯಗಳ ನಿರೂಪಣೆಗೆ ಹೇಗೋ ಹಾಗೆ ಚಿತ್ತು ಇಲ್ಲದೆ ಸ್ಪಷ್ಟವಾದ, ಸ್ವಚ್ಛವಾದ ಬರವಣಿಗೆಗೂ ಅಂಕಗಳನ್ನು ನೀಡಲಾಗುವುದು. ಅಂತೆಯೇ ವಿ.ಸ.ನಾಮವನ್ನು ಪಠಿಸುವಾಗ ಅರ್ಥಾನುಸಂಧಾನಕ್ಕೆ ಹೇಗೋ ಹಾಗೆ ತಪ್ಪಿಲ್ಲದೆ, ಸ್ಪಷ್ಟವಾಗಿ ನಡೆಸುವ ಉಚ್ಚಾರಣೆಗೂ ಭಗವಂತನು ತನ್ನ ಮೆಚ್ಚುಗೆಯನ್ನು ತೋರಿಸುವನು.



* ಒಂದು ವೇಳೆ ವಿ.ಸ.ನಾಮವನ್ನು ಪೂರ್ಣವಾಗಿ ಪಠಿಸಲು ಅವಧಿ ಇಲ್ಲದಿದ್ದರೆ , ಆ ಅವಧಿಯಲ್ಲಿ ಎಷ್ಟು ಪಠಿಸಲಾಗುವುದೋ ಅಷ್ಟೇ ಸ್ತೋತ್ರವನ್ನು ಪಠಿಸಬೇಕೇ ವಿನಹ ಸಮಗ್ರ ಸ್ತೋತ್ರವನ್ನು ಪಠಿಸಿಯೇ ತೀರಬೇಕೆಂದು ಅವಸರ ತಾಳಬಾರದು.

* ವಿಷ್ಣು ಸಹಸ್ರನಾಮ ಸ್ತೋತ್ರದಲ್ಲಿ ಕೆಲವು ಸಮಾನ ನಾಮಗಳು ಮತ್ತೆ ಮತ್ತೆ ಪಠಿತವಾಗಿವೆ. ಸ್ತೋತ್ರವನ್ನು ಪಠಿಸುವಾಗ ಅಂತಹ ನಾಮಗಳು ಬಂದಲ್ಲಿ 'ಹಾವು – ಏಣಿ ಆಟ' ದ ನೆರಳಿಗೆ ಬೀಳದಂತೆ, ಅಂದರೆ ಮೊದಲಿನ ನಾಮವನ್ನು ಪಠಿಸುವಾಗ ಮುಂದೆ ಬರುವ ಆ ನಾಮದ ಶ್ಲೋಕಕ್ಕೆ ಹಾರುವ, ಮುಂದಿನ ನಾಮವನ್ನು ಪಠಿಸುವಾಗ ಹಿಂದೆ ಬಂದಿರುವ ಆ ನಾಮದ ಶ್ಲೋಕಕ್ಕೆ ಹಿಂಜರಿಯುವ ಪ್ರವೃತ್ತಿಗೆ ಒಳಗಾಗದಂತೆ ಎಚ್ಚರವಹಿಸಬೇಕು.

* ಸ್ತೋತ್ರದಲ್ಲಿ ಅಲ್ಪಪ್ರಾಣ, ಮಹಾಪ್ರಾಣಗಳಿಗೆ ಗಮನ ಕೊಡಬೇಕು. ಮುಖ್ಯಪ್ರಾಣನ ಅನುಗ್ರಹವಿದ್ದರಷ್ಟೇ ಈ ನಿಟ್ಟಿನಲ್ಲಿ ಯಶಸ್ವಿಗಳಾಗಬಹುದು.

* ಮುಂದಿನ ನಾಮದ ಮೊದಲ ಅಕ್ಷರ ಸಕಾರ/ ಶಕಾರ/ ಷಕಾರ/ ಕಕಾರ ಆಗಿದ್ದಲ್ಲಿ ಹಿಂದಿನ ನಾಮದ ವಿಸರ್ಗವನ್ನು ಒತ್ತಿ ಹೇಳಬೇಕೇ ಹೊರತು ಓಕಾರವನ್ನಾಗಿ

---

ಶ್ರೀ ವಿಶ್ವಪ್ರಿಯ ತೀರ್ಥರು ತಮ್ಮ ವಿಷ್ಣುನಾಮ ಪ್ರವಚನಗಳಲ್ಲಿ ಅಲ್ಲಲ್ಲಿ ಪ್ರಾಸಂಗಿಕವಾಗಿ ಪ್ರಸ್ತುತ ಪಡಿಸಿರುವ ವಿ.ಸ.ನಾಮದ ಪಾರಾಯಣಕ್ಕೆ ಸಂಬಂಧಿಸುವ ನಿಯಮಗಳು ಹಾಗೂ ಅರ್ಥ ಚಿಂತನೆಗೆ ಸಂಬಂಧಿಸುವ ವಿಚಾರಗಳು

ಬದಲಾಯಿಸಿಕೊಳ್ಳಬಾರದು. ಮುಂದೆ ಸಕಾರದಿ ವರ್ಣಗಳು ಇಲ್ಲದಿದ್ದಲ್ಲಿ ಹಿಂದಿನ ನಾಮದ ವಿಸರ್ಗವನ್ನು ಓಕಾರವಾಗಿ ಪರಿವರ್ತಿಸಿಕೊಂಡು ಪಠಿಸಬೇಕು.

* ಅಕಾರಾಂತವಲ್ಲದ 'ಭೂತಾತ್ಮಾ' 'ಧಾತಾ' 'ವಿಧಾತಾ' 'ವಿಶ್ವಕರ್ಮಾ' – ಇತ್ಯಾದಿ ನಾಮಗಳನ್ನು ಓಕಾರಾಂತವಾಗಿ ಪರಿವರ್ತಿಸಿ ಪಠಿಸಬಾರದು.

* ಅರ್ಥಾನುಸಂಧಾನಪೂರ್ವಕವಾಗಿ ಶ್ರೀವಿಷ್ಣು ಸಹಸ್ರನಾಮ ಸ್ತೋತ್ರವನ್ನು ಪಠಿಸಿದಾಗ ಎಷ್ಟು ಪುಣ್ಯ ಬರುವುದೋ ಅಷ್ಟು ಪುಣ್ಯ ಅರ್ಥಾನುಸಂಧಾನವಿಲ್ಲದೇ ಪಠಿಸಿದಾಗ ಬರುವುದಿಲ್ಲ ಎಂಬ ಅಭಿಪ್ರಾಯದಲ್ಲಿ ಶ್ರೀವಿಷ್ಣು ಸಹಸ್ರನಾಮವನ್ನು ಅರ್ಥಾನುಸಂಧಾನವಿಲ್ಲದೇ ಪಠಿಸಿದಲ್ಲಿ ಫಲವೇ ಇಲ್ಲ ಎಂಬ ಮಾತು ಹೊರಟಿರುವುದೇ ಹೊರತು ಸ್ವಲ್ಪವೂ ಫಲ ಇಲ್ಲ ಎಂಬ ಅಭಿಪ್ರಾಯದಲ್ಲಿ ಅಲ್ಲ. ಆದ್ದರಿಂದ ಅರ್ಥಾನುಸಂಧಾನ ನಡೆಸಲು ಅವಕಾಶವೇ ಇಲ್ಲದಿದ್ದಲ್ಲಿ ಸ್ತೋತ್ರ ಪಠನವನ್ನೇ ನಿಲ್ಲಿಸಬಾರದು. ಅವಕಾಶ ದೊರೆತಾಗ ಅರ್ಥಾನುಸಂಧಾನಕ್ಕಾಗಿ ಯತ್ನಿಸುತ್ತಿರಬೇಕು.

* 'ವಿಶ್ವಂ ವಿಷ್ಣುರ್ವಷಟ್ಕಾರೋ..... ಅಲ್ಲಿಂದ ಪ್ರಾರಂಭಿಸಿ '....... ಸರ್ವಪ್ರಹರಣಾಯುಧಃ' – ಎಂಬಲ್ಲಿಯವರೆಗೆ ಪಠಿಸಿದರೆ ಶ್ರೀ ವಿಷ್ಣು ಸಹಸ್ರನಾಮಗಳನ್ನು ಪಠಿಸಿದಂತಾಗುವುದು. 'ವೈಶಂಪಾಯನ ಉವಾಚ......' ಇತ್ಯಾದಿ ಭಾಗವನ್ನು ಶ್ರೀ ವಿಷ್ಣು ಸಹಸ್ರನಾಮ ಸ್ತೋತ್ರದ ಪಠನದ ಜೊತೆಗೆ ಸೇರಿಸಿಕೊಂಡರೆ ಪುಣ್ಯವಿಶೇಷ ಬರುವುದಾದರೂ ಆ ಭಾಗವನ್ನು ಬಿಟ್ಟಲ್ಲಿ ವಿ.ಸ.ನಾಮ ಸ್ತೋತ್ರ ಪಠನಕ್ಕೇನೂ ನ್ಯೂನತೆ ಬರುವುದಿಲ್ಲ.

* 'ಭೂರ್ಭುವಃಸ್ವಸ್ತರುಸ್ತಾರಃ.......' ಹೀಗೆ ಈ ನಾಮಗಳನ್ನು ನಿಧಾನವಾಗಿ ಹೇಳಬೇಕು. ಇವು ಅವಸರದಲ್ಲಿ ಹೇಳಲಿಕ್ಕೆ ಇರುವ ನಾಮಗಳೇ ಅಲ್ಲ. ಅಷ್ಟೂ ಅವಸರ ಇತ್ತೆಂದರೆ ಈ ನಾಮಗಳನ್ನು ಪಠಿಸದೆಯೇ ಬಿಡುವುದು ಒಳ್ಳೆಯದು. ತಪ್ಪು ಪಠಿಸುವುದಕ್ಕಿಂತ ಪಠಿಸದಿರುವುದೇ ವಾಸಿ ತಾನೇ ? ನಾಲ್ಕು ನಾಮಗಳು ವಿಷ್ಣುಸಹಸ್ರನಾಮದಲ್ಲಿ ಕಡಿಮೆ ಆಯಿತೆಂದರೆ 'ಅಚ್ಯುತ' 'ಅನಂತ' 'ಗೋವಿಂದ' 'ನಾರಾಯಣ' - ಎಂದು ಪಠಿಸಿ ಪೂರ್ಣಗೊಳಿಸೋಣ.

* ಉಪನಯನ ಸಂಸ್ಕಾರಕ್ಕೊಳಗಾದವರು ಪ್ರಾರಂಭದಲ್ಲಿ ಓಂಕಾರವನ್ನು ಹಚ್ಚಿಕೊಳ್ಳಬೇಕು. ಉಪನಯನ ಸಂಸ್ಕಾರಕ್ಕೆ ಒಳಗಾಗದವರು ಶ್ರೀಕಾರವನ್ನು ಹಚ್ಚಿಕೊಳ್ಳಬೇಕು.

* ಸ್ತೋತ್ರವನ್ನು ಪಠಿಸುವ ಮೊದಲು **'ಅಸ್ಯ ಶ್ರೀ ವಿಷ್ಣೋರ್ದಿವ್ಯಸಹಸ್ರನಾಮ ಸ್ತೋತ್ರಸ್ಯ'** – ಎಂಬುದಾಗಿ ಮುಂದೆ ಪಠಿಸಲಿರುವ ಶ್ರೀ ವಿಷ್ಣುವಿಗೆ ಸಂಬಂಧಿಸಿದ ದಿವ್ಯ ಸ್ತೋತ್ರದ ಎಂದು ಪ್ರಾರಂಭಿಸಿ, **ಭಗವಾನ್ ವೇದವ್ಯಾಸ ಋಷಿಃ** – ಸ್ತೋತ್ರದ ದೃಷ್ಟಾರರನ್ನಾಗಿ ಶ್ರೀ ವೇದವ್ಯಾಸರನ್ನು ತಲೆಯಲ್ಲಿ ಸನ್ನಿಹಿತರಾಗಿ ಅರ್ಥ ಚಿಂತನೆಗೆ ಬೇಕಾದ ಸ್ಫೂರ್ತಿಯನ್ನು ನೀಡಲೆಂದು ತಲೆಯನ್ನು ಮುಟ್ಟಿಕೊಂಡು ಸ್ಮರಿಸಿಕೊಳ್ಳಬೇಕು. **'ಅನುಷ್ಟುಪ್ ಛಂದಃ'** ಎಂಬುದಾಗಿ ಅನುಷ್ಟುಪ್

ಛಂದಸ್ಸಿನಲ್ಲಿ ಹೆಣೆಯಲ್ಪಟ್ಟಿರುವ ಈ ಸ್ತೋತ್ರದ ಛಂದೋಭಿಮಾನಿ ದೇವತೆಗಳು ಬಾಯಿಯಲ್ಲಿ ಸನ್ನಿಹಿತರಾಗಿ ಸ್ಪಷ್ಟವಾದ ಉಚ್ಚಾರಣೆ ಹೊರಹೊಮ್ಮುವಂತೆ ಅನುಗ್ರಹಿಸಲೆಂದು ಬಾಯಿಯನ್ನು ಮುಟ್ಟಿಕೊಂಡು ಸ್ಮರಿಸಿಕೊಳ್ಳಬೇಕು. **'ವಿಶ್ವರೂಪಿ ಶ್ರೀ ಮಹಾವಿಷ್ಣುರ್ದೇವತಾ'** – ಎಂಬುದಾಗಿ ಈ ಸ್ತೋತ್ರದ ಪ್ರತಿಪಾದ್ಯನಾದ ಶ್ರೀ ವಿಷ್ಣು ಹೃದಯದಲ್ಲಿ ಸನ್ನಿಹಿತನಾಗಿ ಒಳ್ಳೆಯ ಭಕ್ತಿಯನ್ನು ಉಂಟು ಮಾಡಲೆಂದು ಹೃದಯವನ್ನು ಮುಟ್ಟಿಕೊಂಡು ಸ್ಮರಿಸಿಕೊಳ್ಳಬೇಕು. **'ಶ್ರೀ ಮಹಾವಿಷ್ಣುಪ್ರಸಾದಸಿದ್ಧ್ಯರ್ಥಂ ಜಪೇ/ಪಾರಾಯಣೇ ವಿನಿಯೋಗಃ'**
–ಎಂಬುದಾಗಿ ಶ್ರೀವಿಷ್ಣುವಿನ ಅನುಗ್ರಹಕ್ಕಾಗಿ ಜಪದಲ್ಲಿ ಅಥವಾ ಪಾರಾಯಣದಲ್ಲಿ ಈ ಸ್ತೋತ್ರವನ್ನು ಬಳಸಿಕೊಳ್ಳಲಾಗುವುದೆಂದು ದೃಢಪಡಿಸಿಕೊಳ್ಳಬೇಕು.

## ಅರ್ಥ ಚಿಂತನಗೆ ಸಂಬಂಧಿಸುವ ವಿಚಾರಗಳು

**ಎಲ್ಲವೂ ನಿನ್ನಿಂದ :** ವಿಶ್ವಶಬ್ದಕ್ಕೆ ಅನೇಕಾನೇಕ ಅರ್ಥಗಳಿರುವುದಾದರೂ ಸರ್ವ ಎಂಬ ಅರ್ಥದ ವಿಶ್ವಶಬ್ದ 'ಎಲ್ಲವೂ ನಿನ್ನಿಂದ' - ಎಂಬ ಅಭಿಪ್ರಾಯದಲ್ಲಿ ಪ್ರಯೋಗಿಸಲ್ಪಟ್ಟಿದೆ ಎಂದು ಇಟ್ಟುಕೊಳ್ಳೋಣ. ಪುರುಷಸೂಕ್ತ 'ಪುರುಷ ಏವೇವದ ಸರ್ವಂ....' - ಎಂಬುದಾಗಿ ಈ ಎಲ್ಲವೂ ಪುರುಷನ ಅಧೀನ ಎಂದು ಸಾರುತ್ತಿರುವಂತೆ ಭೀಷ್ಮರು ಆರಂಭದಲ್ಲಿಯೇ 'ವಿಶ್ವಂ' - ಎಲ್ಲವೂ ನಿನ್ನ ಅಧೀನ ಎಂದು ಉದ್ಘೋಷಿಸುತ್ತಿರುವರು. ಯಾವುದು ಎಲ್ಲ ? ಮುಂದಿನ ೯೯೯ ನಾಮಗಳೂ ಕೂಡಾ ಆ ಎಲ್ಲವನ್ನೇ ವಿವರಿಸುತ್ತಿವೆ. ಆದುದರಿಂದ ಪದ್ಯಗಳಲ್ಲಿ ಪಲ್ಲವಿ ಹೇಗೆ ಪ್ರತಿಯೊಂದು ನುಡಿಗೂ ಸಂಬಂಧಿಸಿದಂತೆ ಹೇಗೆ ಮತ್ತೆ ಮತ್ತೆ ಹಾಡಲ್ಪಡುವುದೋ ಹಾಗೆ 'ವಿಷ್ಣುಃ ವಿಶ್ವಂ' 'ವಷಟ್ಕಾರ ವಿಶ್ವಂ'- ಎಂಬುದಾಗಿ ಮುಂದಿನ ಪ್ರತಿಯೊಂದು ನಾಮಕ್ಕೂ ಅನ್ವಯಿಸಿ ಅನುಸಂಧಾನ ನಡೆಸಬಹುದಾಗಿದೆ.

ವಿಷ್ಣುಸಹಸ್ರನಾಮ ವಿಷ್ಣುನಾಮದಿಂದ ಪ್ರಾರಂಭಗೊಳ್ಳದೆ ವಿಶ್ವನಾಮದಿಂದ ಪ್ರಾರಂಭಗೊಂಡಿರುವುದಕ್ಕೆ ಇದೂ ಒಂದು ಉದ್ದೇಶ.

- 'ವಿಶ್ವ' ನಾಮದ ಪ್ರವಚನದಲ್ಲಿ

**ಪೂರ್ವಾಪರಸಂಗತಿ :** ಸಹಸ್ರನಾಮ ಅಂದರೆ ಖುಷಿ ಬಂದ ಹಾಗೆ ಹೆಸರುಗಳನ್ನೆಲ್ಲ ಹೇಳುತ್ತ ಹೋದದ್ದಲ್ಲ. ನಾವು ಹೇಗೆ ಕೆಲವರ ಹೆಸರುಗಳನ್ನು ಕರೆಯಬೇಕೆಂದರೆ ರಾಮ, ದೂಮ, ಸೋಮ, ಭೀಮ - ಎಂದೆಲ್ಲ ಕರೆಯುವೆವೋ ಹಾಗಲ್ಲ. ಮತ್ತೆ, ಒಂದು ಪ್ರಶ್ನೆ ಅದಕ್ಕೆ ಉತ್ತರವಾಗಿ ಒಂದು ನಾಮ. ಆ ಉತ್ತರದಿಂದ ಹೊರಡುವ ಮತ್ತೊಂದು ಪ್ರಶ್ನೆ. ಅದಕ್ಕೆ ಉತ್ತರವಾಗಿ ಇನ್ನೊಂದು ನಾಮ..... ಈ ರೀತಿಯಾಗಿ

ಪ್ರಶ್ನೋತ್ತರ ರೂಪದಲ್ಲಿ ಕ್ರಮವಾಗಿ ಪಠಿತವಾದವುಗಳು.

ಹಾಗೆಯೇ ಬೃಹತೀಸಹಸ್ರದ ಋಜ್ಮಂತ್ರಕ್ಕೆ ಅನುಗುಣವಾಗಿ ಪಠಿತವಾದವುಗಳು. ಆದರೆ ಇದು ನಮಗೆ ನಿಮಗೆ ಅರ್ಥ ಆಗಲಿಕ್ಕಿಲ್ಲ.

ಅದರ ಬಗ್ಗೆ ತಲೆಕೆಡಿಸಿಕೊಳ್ಳಹೋದರೆ ಅದೇ ಆಗಿ ಸಹಸ್ರನಾಮ ತಪ್ಪಿ ಹೋದೀತು ! ನಾವು ಹಿಂದಿನದ್ದಕ್ಕೆ ಮುಂದಿನದ್ದಕ್ಕೆ ಅರ್ಥ ಉಂಟೋ ಇಲ್ಲವೋ ಎಂಬುದರ ಬಗ್ಗೆ ಯೋಚಿಸದೆ ನಾಮ ಅರ್ಥ, ನಾಮ ಅರ್ಥ ಇದನ್ನಷ್ಟೇ ಚಿಂತಿಸೋಣ. ಈ ನಾಮಕ್ಕೂ ಆ ನಾಮಕ್ಕೂ ಸಂಬಂಧ ಉಂಟೋ ಇಲ್ಲವೋ ಎಂದು ತಲೆಕೆಡೆಸಿಕೊಳ್ಳುವುದು ಬೇಡ. ಈ ನಾಮಕ್ಕೂ ಆ ನಾಮಕ್ಕೂ ದೇವರ ಸಂಬಂಧ ಉಂಟು ಎಂಬುದರ ಬಗ್ಗೆ ತಲೆ ಕೆಡಿಸಿಕೊಂಡರೆ ಸಾಕು. ಅಂದರೆ ಆ ನಾಮ, ಈ ನಾಮ ದೇವರನ್ನು ಹೇಗೆ ಹೇಳುವುದೆಂದು ತಿಳಿದುಕೊಂಡರೆ ಸಾಕು.

- 'ಸಮ್ಮಿತ' ನಾಮದ ಪ್ರವಚನದಲ್ಲಿ

* **ಹತ್ತು ಮುಖಗಳ ಅರ್ಥ ಬೇಡ :** ಭೀಷ್ಮರಲ್ಲಿ ಎಂಟು ವಸುಗಳ ಎಂಟು ಮುಖಗಳೂ, ಚತುರ್ಮುಖನ ಆವೇಶದ ಮತ್ತೊಂದು ಮುಖವೂ, ಹಾಗೂ ಶ್ರೀಕೃಷ್ಣನ ಆವೇಶದ ಇನ್ನೊಂದು ಮುಖವೂ - ಹೀಗೆ ಒಟ್ಟು ಹತ್ತು ಮುಖಗಳು ಸೇರಿಕೊಂಡಿವೆ. ಆದುದರಿಂದ ವಿಷ್ಣುಸಹಸ್ರನಾಮದ ಒಂದೊಂದು ನಾಮಕ್ಕೂ ಕನಿಷ್ಠ ಹತ್ತತ್ತು ಅರ್ಥಗಳನ್ನು ಹೇಳಬಹುದು. ಆದರೆ ಭೀಷ್ಮರ ದ್ಯುಹೆಸರಿನ ವಸುವಿನ ಒಂದು ಮುಖವನ್ನಷ್ಟೇ ಇಟ್ಟುಕೊಂಡು ಒಂದೊಂದು ಅರ್ಥವನ್ನಷ್ಟೇ ಚಿಂತಿಸೋಣ.

- 'ಜೀವನಃ' ನಾಮದ ಪ್ರವಚನದಲ್ಲಿ

* **ಅವಶ್ಯಕ ಗುಣಗಳ ಆಯ್ಕೆ :** ಭಗವಂತನಲ್ಲಿ ಅನಂತ ಗುಣಗಳಿವೆ. ಆದರೆ ಸಾವಿರ ಗುಣಗಳನ್ನು ಸಾರುವ ಸಾವಿರ ನಾಮಗಳಿಂದ ಅವನನ್ನು ಸ್ತುತಿಸುವ ಉದ್ದೇಶ ಅವನ ಅನುಗ್ರಹದಿಂದ ಆ ಸಾವಿರ ನಾಮಗಳಲ್ಲಿ ಕೆಲವನ್ನಾದರೂ ನಾವು ನಮ್ಮ ಯೋಗ್ಯತಾನುಸಾರವಾಗಿ ಹೊಂದುವಂತಾಗಬೇಕೆಂಬುದು.

ಉದ್ಧಾರ ಹೊಂದಲು ಯಾವ ಗುಣಗಳ ಅವಶ್ಯಕತೆ ಇದೆಯೋ ಅಂತಹ ಗುಣಗಳನ್ನೇ ಆಯ್ಕೆ ಮಾಡಿ ಅಂತಹ ಗುಣಗಳನ್ನು ಪ್ರತಿಪಾದಿಸುವ ನಾಮಗಳನ್ನೇ ವೇದವ್ಯಾಸರು ಭೀಷ್ಮರ ಬಾಯಿಯಿಂದ ಹೇಳಿಸಿರುವರು. ಪಠ್ಯ ಪುಸ್ತಕದ ಕೆಲವು ಭಾಗವನ್ನಷ್ಟೇ ನಿರ್ದೇಶಿಸಿ ಇಷ್ಟು ಭಾಗವನ್ನು ಓದಿದರೆ ಸಾಕು ಎಂದು ಹೀಗೆ ಹೇಳಲಾಗುವುದೋ ಹಾಗೆ.

ಒಬ್ಬ ವ್ಯಕ್ತಿಯಲ್ಲಿರುವ ಒಂದು ವಸ್ತುವನ್ನು ಮತ್ತೆ ಮತ್ತೆ ಹೊಗಳಿದಲ್ಲಿ ಆ ಹೊಗಳಿಕೆಯನ್ನು ಕೇಳಿ ಕೇಳಿ ಆ ವಸ್ತುವನ್ನು ಅವನಿಗೇ ನೀಡುವ ಕ್ರಮ ನಮ್ಮಲ್ಲೂ ಇದೆ. ಅದಕ್ಕನುಗುಣವಾಗಿ ಭಗವಂತನಲ್ಲಿರುವ ಗುಣಗಳನ್ನು ಮತ್ತೆ ಮತ್ತೆ ಹೊಗಳಿದೆವೆಂದರೆ ಭಗವಂತನು ಅಂತಹ ಗುಣಗಳನ್ನು ನಮಗೂ ನಮ್ಮ ಯೋಗ್ಯತಾನುಸಾರವಾಗಿ ನೀಡುವನು.

- 'ವೇದವಿತ್' ನಾಮದ ಪ್ರವಚನದಲ್ಲಿ

* **ಸಮಸ್ಯೆಗಳ ಪರಿಹಾರಕ್ಕೆ ಸಂಬಂಧಿಸಿದಂತೆ :** ಸಮಸ್ಯೆಗಳ ಪರಿಹಾರಕ್ಕೆ ಸಂಬಂಧಿಸಿದಂತೆ ವಿಷ್ಣುಸಹಸ್ರನಾಮದ ನಾಮಗಳಿಗೆ ಬೇರೆ ಬೇರೆ ಆಧ್ಯಾತ್ಮಿಕಾರ್ಥಗಳೂ ಇವೆ. ಆದರೆ ಆ ಅರ್ಥಗಳ ಚಿಂತನೆ ನಡೆಸಲು ತೊಡಗಬೇಕೆಂದರೆ ನಮ್ಮ ಸುತ್ತ ಮುತ್ತ ಹಬ್ಬಿರುವ ಸಮಸ್ಯೆಗಳ ಪರಿಹಾರ ಆಗಬೇಕು ತಾನೇ ? ಅದಕ್ಕಾಗಿ ಆ ಸಮಸ್ಯೆಗಳ ಪರಿಹಾರಕ್ಕೆ ಸಂಬಂಧಿಸಿದಂತೆಯೇ ವಿಷ್ಣುಸಹಸ್ರನಾಮಗಳ ಅರ್ಥಚಿಂತನೆಯನ್ನು ಮೊದಲು ನಡೆಸೋಣ.

- 'ವಂಶವರ್ಧನ' ನಾಮದ ಪ್ರವಚನದಲ್ಲಿ

* **ಭೀಷ್ಮರಿಂದ ಅರ್ಪಣೆ :** ಭೀಷ್ಮರು ಪ್ರಾಯಶಃ ಸಾವಿರನಾಮಗಳಿಂದ ತಾವು ಜೀವನದಲ್ಲಿ ಅನುಭವಿಸಿದ ಧರ್ಮಗಳನ್ನೇ ಕೃಷ್ಣನಲ್ಲಿ ಹೇಳುತ್ತಿದ್ದಾರೆ. ನಾವು ಜೀವನದಲ್ಲಿ ಅನುಭವಿಸಿದ್ದನ್ನು ದೇವರಿಗೆ ಅರ್ಪಣೆ ಮಾಡಬೇಕು ತಾನೇ ? ಇದನ್ನೇ ಭೀಷ್ಮರು ಮಾಡುತ್ತಿದ್ದಾರೆ. ತಾವು ಜೀವನದಲ್ಲಿ ಅನುಭವಿಸಿದ, ಶ್ರೀಕೃಷ್ಣನ ಒಂದೊಂದೇ ಧರ್ಮವನ್ನು ಬೇರೆ ಬೇರೆ ನಾಮದಿಂದ ಅರ್ಪಿಸುತ್ತಿದ್ದಾರೆ.

- 'ಮಹಾವೀರ್ಯ' ನಾಮದ ಪ್ರವಚನದಲ್ಲಿ

* **ಭಗವಂತನ ಜೊತೆಗೇ ಇರುವ ನಾಮಗಳು :** ಸಹಸ್ರನಾಮ ಎಂಬಲ್ಲೂ ಸಹಸ್ರಶಬ್ದಕ್ಕೆ ಸಾವಿರ ಎಂದು ಒಂದು ಅರ್ಥವಾದರೆ ಮತ್ತೊಂದು ಅರ್ಥ - ಸಹ - ಭಗವಂತನ ಜೊತೆಗೇ ಇರುವ ನಾಮಗಳು ಎಂದು **'ಯಾವದ್ ಬ್ರಹ್ಮ ವಿಷ್ಠಿತಂ ತಾವತೀ ವಾಕ್'** - ಬ್ರಹ್ಮ ಇರುವವರೆಗೂ ವೇದ ಇರುವಂತೆಯೇ ಈ ನಾಮಗಳೂ ಇರುವವು ; ಆದುದರಿಂದಲೂ ಇವು ಸಹಸ್ರನಾಮಗಳೆಂದು ಶ್ರೀಮಧ್ವಗುರುಗಳು ಐತರೇಯ ಭಾಷ್ಯದಲ್ಲಿ ತಿಳಿಸಿರುವರು. -

**'ಬ್ರಹ್ಮ ಯಾವತ್ ತಾವತೀ ವಾಗಿತಿ ವೇದಪ್ರಮಾಣತಃ |**
**ಸಹೈವಾನಂತರೂಪೈಸ್ತು ಸರಣೇನ ಸಹಸ್ರಕಮ್ '**

ಆದುದರಿಂದ ತನ್ನ ಜೊತೆಗೇ ಅನುಸರಿಸಿ ಬರುವ ನಾಮಗಳನ್ನು ಜಿತ್

ಗೆದ್ದವನು. ಅಂದರೆ ಅವುಗಳ ಅರ್ಥಗಳನ್ನು ತನ್ನಲ್ಲಿ ತುಂಬಿಸಿಕೊಂಡವನು.

- 'ಸಹಸ್ರಜಿತ್' ನಾಮದ ಪ್ರವಚನದಲ್ಲಿ

* **ದಾಸರಿಂದ ಕನ್ನಡೀಕರಣ: :** ಪ್ರಾಯಶಃ ಸಹಸ್ರನಾಮದ ಒಂದೊಂದು ನಾಮಕ್ಕೂ ಹರಿದಾಸರ ಹಾಡುಗಳು ಇರುವವು. ಪ್ರತಿನಿತ್ಯ ಸಹಸ್ರನಾಮವನ್ನು ಪಠಿಸುತ್ತಿದ್ದ ದಾಸರು, ಅದರ ಒಂದೊಂದು ನಾಮವೂ ಅರ್ಥವಾಗಬೇಕೆಂದು ಅದನ್ನು ಹಾಡುರಚನೆಯ ಮೂಲಕ ಕನ್ನಡೀಕರಿಸಿರಬೇಕು.

- 'ಸತ್ಕರ್ತಾ' ನಾಮದ ಪ್ರವಚನದಲ್ಲಿ

* **ವ್ಯಾಕರಣದ ಚೌಕಟ್ಟನ್ನು ಸಡಿಲಿಸಬಹುದು :** ವಿಷ್ಣುಸಹಸ್ರನಾಮಗಳು ವೈದಿಕನಾಮಗಳಾಗಿರುವುದರಿಂದ ಲೌಕಿಕ ವ್ಯಾಕರಣದ ಲಗಾವು ಪೂರ್ಣ ಆಗಬೇಕಿಲ್ಲ. ಆದ್ದರಿಂದ ಲೌಕಿಕ ವ್ಯಾಕರಣದ ಚೌಕಟ್ಟನ್ನು ಸ್ವಲ್ಪ ಸಡಿಲಿಸಬಹುದು.

- 'ಶ್ರೀಮಾನ್' ನಾಮದ ಪ್ರವಚನದಲ್ಲಿ

* **ಬಿಡಿಸಿ ಅರ್ಥೈಸಬೇಕು :** ಬಿಡಿಸಿ, ಬಿಡಿಸಿ, ಅರ್ಥ ಹೇಳಿದಷ್ಟು ಹೆಚ್ಚು ಹೆಚ್ಚು ಸ್ವಾರಸ್ಯ ಹೊರಡುವುದು. ಹೇಗೆ ಭಕ್ಷ್ಯವನ್ನು ಇಡೀ ನುಂಗುವುದಕ್ಕಿಂತ ತುಂಡು ಮಾಡಿ ತಿಂದರೆ ಹೆಚ್ಚು ಸುಖಾನುಭವ ಆಗುವುದೋ, ಉಪನ್ಯಾಸದಲ್ಲಿ ಬಿಡಿಸಿ ಬಿಡಿಸಿ ಹೇಳಿದರೆ ಹೆಚ್ಚು ಆನಂದ ಆಗುವುದೋ ಹಾಗೆ ಶಬ್ದವನ್ನು ಬಿಡಿಸಿ, ಬಿಡಿಸಿ ಅರ್ಥೈಸಿದರೆ ಹೆಚ್ಚು ಆನಂದಾನುಭವ ಉಂಟಾಗುವುದು.

- 'ವೀರ' ನಾಮದ ಪ್ರವಚನದಲ್ಲಿ

* **ಉತ್ತಮರ ಸ್ವಭಾವ :** ದೇವರಲ್ಲಿ ತಮಗೆ ಕೊಡು ಎಂದು ಕೇಳದೆ, ಇತರ ಭಕ್ತರಿಗೆ ಕೊಟ್ಟವನೆಂದು ಸ್ತುತಿಸುವುದು ಉತ್ತಮರ ಸ್ವಭಾವ. ಮಧ್ಯಗೇಹ ಭಟ್ಟರು ಅನಂತಾಸನನಲ್ಲಿ ತಮಗೆ ಪುತ್ರನನ್ನು ಕೊಡು ಎಂದು ಕೇಳದೆ ಕರ್ದಮಾದಿಗಳಿಗೆ ಉತ್ತಮ ಪುತ್ರರನ್ನು ಕೊಟ್ಟವನೆಂದು ಸ್ತುತಿಸಿರುವರು. ಹೀಗೆ ಸ್ತುತಿಸಿದಾಗ ಭಗವಂತನು ಹಾಗೆ ಕೇಳಿದವರಿಗೂ ಕೊಟ್ಟೇ ಕೊಡುವನು.

ಚತುರ್ಮುಖನ ದೋಷ ದೂರ ಮಾಡಿದವನೆಂದು ಉಪಾಸನೆ ನಡೆಸಿದ ಭೀಷ್ಮರ ದೋಷಗಳನ್ನೂ ಭಗವಂತನು ದೂರ ಮಾಡದೆ ಇರುವುದಿಲ್ಲ.

- 'ಕಾರಣಂ' ನಾಮದ ಪ್ರವಚನದಲ್ಲಿ

* **ಕೇಳುವ ಪದ್ಧತಿ :** ನಮಗೆ ಉತ್ತಮ ಸ್ಥಾನವನ್ನು ಕೊಡು ಎಂದು ದೇವರಲ್ಲಿ ಕೇಳುವ ಬದಲು ಚತುರ್ಮುಖನಿಗೆ ಉತ್ತಮ ಸ್ಥಾನವನ್ನು ಕೊಟ್ಟವನು ಎಂದು ಸ್ತುತಿಸಿದೆವೆಂದರೆ ನಮಗೂ ಉತ್ತಮ ಸ್ಥಾನವನ್ನು ಕೊಟ್ಟೇ ಕೊಡುವನು.

- 'ಪರರ್ದ್ಧಿ' ನಾಮದ ಪ್ರವಚನದಲ್ಲಿ

ಸಂಪಾದಕೀಯ

# 'ಸಹಸ್ರನಾಮ ಪರ್ಯಾಯ'ದ ಆಧ್ಯಾತ್ಮಿಕ ಕ್ರಾಂತಿ

18-1-2004 ರಿಂದ 17-1-2006ರ ವರೆಗಿನ ಎರಡು ವರ್ಷಗಳ ಅವಧಿಯಲ್ಲಿ ನಡೆದ ಅದಮಾರು ಶ್ರೀ ವಿಶ್ವಪ್ರಿಯತೀರ್ಥರ ಎರಡನೇ ಪರ್ಯಾಯ 'ಸಹಸ್ರನಾಮ ಪರ್ಯಾಯ' ಎಂದೇ ಕರೆಸಿಕೊಳ್ಳಲ್ಪಡಲು ಯೋಗ್ಯವಾದುದು. ಯಾಕೆಂದರೆ ಆ ಪರ್ಯಾಯದ ಅವಧಿಯಲ್ಲಿ ಶ್ರೀ ವಿಶ್ವಪ್ರಿಯತೀರ್ಥರ ಮೂಲಕ ವಿಷ್ಣುಸಹಸ್ರನಾಮದ ವಿಷಯದಲ್ಲಿ ಆಧ್ಯಾತ್ಮಿಕ ಕ್ರಾಂತಿಯೇ ನಡೆದಂತಾಗಿದೆ. 12- 7-2004ರಿಂದ 29- 9 -2005 ರವರೆಗೆ ಸುಮಾರು ಒಂದು ವರ್ಷದ ಅವಧಿಯಲ್ಲಿ ಸುಮಾರು ಎಪ್ಪತ್ತು ಗಂಟೆಗಳಲ್ಲಿ ವಿಷ್ಣು ಸಹಸ್ರನಾಮದ ಸಾವಿರ ನಾಮಗಳ ಕುರಿತು ಪ್ರವಚನ ಮಾಲಿಕೆ ಅರಳಿರುವುದೇನೂ ಸಣ್ಣ ಸಾಧನೆಯಲ್ಲ. ಶ್ರೀಪಾದರ ಪ್ರವಚನಗಳಲ್ಲಿ ನೇರವಾಗಿ ಪಾಲ್ಗೊಂಡ ನೂರಾರು ಸಾಧಕರು ವಿಷ್ಣು ಸಹಸ್ರನಾಮದ ಬಗ್ಗೆ ಜಾಗೃತಿ ಪಡೆದುದಲ್ಲದೆ, ಸಿ.ಡಿ.ಯ ಹಾಗೂ 'ವಿಶ್ವಪ್ರಿಯಾ' ಕೃತಿಯ ರೂಪ ತಾಳಿರುವ ಶ್ರೀಪಾದರ ಪ್ರವಚನಮಾಲಿಕೆಯಿಂದಾಗಿ ಬೇರೆ ಬೇರೆ ಊರುಗಳಲ್ಲಿರುವ ಸಾವಿರಾರು ಸಾಧಕರೂ ವಿಷ್ಣು ಸಹಸ್ರನಾಮವನ್ನು ತಮ್ಮ ಸಾಧನೆಯಲ್ಲಿ ಪರಿಷ್ಕೃತವಾಗಿ ವಿನಿಯೋಗಿಸಿಕೊಳ್ಳುವಂತಾಗಿದೆ.

## ಪ್ರವಚನ ಮಾಲಿಕೆಯ ವೈಶಿಷ್ಟ್ಯಗಳು :

ವಿಷ್ಣುಸಹಸ್ರನಾಮದಲ್ಲಿ ಏನೂ ಪ್ರವೇಶವಿಲ್ಲದವನಿಂದ ಪ್ರಾರಂಭಿಸಿ, ವಿಷ್ಣುಸಹಸ್ರನಾಮದ ಬಗ್ಗೆ ಸಾಕಷ್ಟು ಪರಿಣತಿ ಪಡೆದವರ ವರೆಗಿನ ಎಲ್ಲ ಸಾಧಕರಿಗೆ ಸಹಸ್ರನಾಮದ ಬಗ್ಗೆ ಸಾಕಷ್ಟು ಪ್ರಭಾವ ಬೀರುವಂತೆ ಅರಳಿರುವ ಶ್ರೀ ಪಾದರ ವಿಷ್ಣುಸಹಸ್ರನಾಮ ಪ್ರವಚನಮಾಲಿಕೆಯ ವೈಶಿಷ್ಟ್ಯ-ಸೌರಭವನ್ನು ಹೀಗೆ ಸಂಗ್ರಹಿಸಬಹುದು -

* ಮೊದಲು ಸಹಸ್ರನಾಮದ ಶ್ಲೋಕದ ಅರ್ಧ ಭಾಗವನ್ನು ಶ್ರೀಪಾದರು ಸ್ಪಷ್ಟವಾಗಿ ಪಠಿಸುವರು. ಮತ್ತೆ ಪದವಿಭಾಗವನ್ನು ತೋರಿಸಿಕೊಟ್ಟಿರುವರು. ಆಯಾ ನಾಮದ ಉಚ್ಚಾರಣೆಯಲ್ಲಿ ಅಲ್ಪ ಪ್ರಾಣ-ಮಹಾಪ್ರಾಣ, ಹ್ರಸ್ವ - ದೀರ್ಘ ಮುಂತಾದ ಅಂಶಗಳ ಬಗ್ಗೆ ಎಚ್ಚರಿಸಿರುವರು ಕೂಡಾ.

*         ನಾಮಾರ್ಥದ ವಿಶ್ಲೇಷಣೆ ನಡೆಸುವಾಗ, ಆಯಾ ನಾಮಘಟಕವಾದ ಬೇರೆ ಬೇರೆ ಪದದ, ಅಥವಾ ಅಕ್ಷರದ ಲೌಕಿಕಾರ್ಥದ ಮಾಹಿತಿಯಿಂದ ಪ್ರಾರಂಭಿಸಿ ಮುಂದೆ ಅದನ್ನು ಭಗವಂತನಲ್ಲಿ ಹೇಗೆ ಸಮನ್ವಯಿಸಬೇಕೆಂದು ತೋರಿಸಿ ಕೊಡುವರು. ನಾಮಾರ್ಥವನ್ನು ನೆನಪಿನಲ್ಲಿಟ್ಟು ಕೊಳ್ಳಲು ಈ ಕ್ರಮ ತುಂಬ ಉಪಯುಕ್ತ.

*         ಪ್ರತಿಯೊಬ್ಬರ ಅನುಭವಕ್ಕೆ ಎಟಕುವ ಅರ್ಥವನ್ನೇ ಆದಷ್ಟು ನಿರೂಪಿಸಿರುವುದರಿಂದ ನಾಮಗಳ ಮೂಲಕ ಭಗವತ್‌ಪ್ರಜ್ಞೆಯನ್ನು ಬದುಕಿನಲ್ಲಿ ಅಳವಡಿಸಿಕೊಳ್ಳಲು ಅನುಕೂಲವಾಗುವುದು.

*         ಕೃಷ್ಣನ ಎದುರೇ ಪ್ರಸ್ತುತ ಪಡಿಸಲಾಗುತ್ತಿರುವ ವಿಷ್ಣು ಸಹಸ್ರನಾಮಗಳಲ್ಲಿ ಕೃಷ್ಣಾವತಾರದ ಬೇರೆ ಬೇರೆ ಲೀಲೆಗಳು, ಮಹಿಮೆಗಳು ಹೇಗೆ ಪ್ರತಿಬಿಂಬಿತವಾಗಿವೆ ಎಂಬುದನ್ನು ಭೀಷ್ಮರ ಸಂಬೋಧನೆಯ ಶೈಲಿಯಿಂದಲೇ ಆವಿಷ್ಕರಿಸಲಾಗಿದೆ ಕೆಲವೊಮ್ಮೆ ಭೀಷ್ಮರು ತಮ್ಮ ಬದುಕಿಗೆ, ನಡತೆಗಳಿಗೆ ಸಂಬಂಧಿಸಿದಂತೆ ಕೃಷ್ಣನನ್ನು ಕೊಂಡಾಡುವ ಧ್ವನಿಯನ್ನೂ ನಾಮಗಳಿಂದ ಹೊರಡಿಸಲಾಗುವುದು. ಇದರಿಂದಾಗಿ ಕೃಷ್ಣಾವತಾರದ ಎಷ್ಟೋ ಲೀಲೆಗಳಿಗೆ, ಮಹಿಮೆಗಳಿಗೆ ವಿಷ್ಣುಸಹಸ್ರನಾಮಗಳ ಮೂಲಕ ಪ್ರಾತ್ಯಕ್ಷಿಕೆಯನ್ನು ಒದಗಿಸಿದಂತಾಗುವುದು.

*         ಯಾವ ನಾಮದ ಅರ್ಥ ಚಿಂತನೆಯಿಂದ ಯಾವ ಫಲವನ್ನು ಪಡೆಯ ಬಹುದೆಂಬುದನ್ನೂ ಅಲ್ಲಲ್ಲಿ ತಿಳಿಸುವ ಮೂಲಕ ಅರ್ಥಾರ್ಥಿ ಹಾಗೂ ಆರ್ತ ಭಕ್ತರೂ ತಮ್ಮ ಕಾಮನೆಯ ಪೂರಣೆಗಾಗಿ, ತಮ್ಮ ಸಮಸ್ಯೆಯ ಪರಿಹಾರಕ್ಕಾಗಿ ಸಹಸ್ರನಾಮವನ್ನು ವಿಶೇಷವಾಗಿ ವಿನಿಯೋಗಿಸುವುದಕ್ಕೆ ಬೇಕಾದ ಸ್ಫೂರ್ತಿಯನ್ನು, ಪ್ರೇರಣೆಯನ್ನು ಒದಗಿಸಿದಂತಾಗುವುದು.

*         ನಾಮಗಳಿಗೆ ಅರ್ಥೈಸುವಾಗ ಹಿಂದಿನ ನಾಮಕ್ಕೂ, ಮುಂದಿನ ನಾಮಕ್ಕೂ ಆರ್ಥಿಕವಾದ ನಂಟನ್ನು ಅಲ್ಲಲ್ಲಿ ತೋರಿಸಿಕೊಡುವುದರಿಂದಾಗಿ, ಆ ನಂಟಿನ ತಿಳುವಳಿಕೆಯೊಂದಿಗೆ ನಾಮಾರ್ಥಾನುಸಂಧಾನ ಅಧಿಕ ತನ್ಮಯತೆಗೆ ಪ್ರಯೋಜಕ ವಾಗುವುದು.

*         ದಾಸ ಸಾಹಿತ್ಯದ ಬೇರೆ ಬೇರೆ ಪದ್ಯಗಳ ಸಾಲುಗಳನ್ನು ಅಲ್ಲಲ್ಲಿ ಉಲ್ಲೇಖಿಸಿ ಅವುಗಳಿಗೆ ವಿಶಿಷ್ಟವಾದ ಅರ್ಥವನ್ನು ನಿರೂಪಿಸಿಕೊಡುವ ಮೂಲಕ ಪ್ರವಚನಗಳಿಗೆ ದಾಸಸಾಹಿತ್ಯದ ಮಾಧುರ್ಯವನ್ನೂ ಬೆರೆಸಿದಂತಾಗಿದೆ.

*         ಸರಳತೆಗೆ ಹಾಗೂ ಅನುಭವಾರೂಢತೆಗೆ ಪ್ರಾಶಸ್ತ್ಯ ನೀಡಲಾದ ಪ್ರವಚನಗಳಲ್ಲಿ ಅನೇಕ ನಾಮಗಳಿಂದ ಸರಳವಾದ, ಅನುಭವಾರೂಢವಾದ

ಅಪೂರ್ವಾರ್ಥವನ್ನೂ ಹೊರಡಿಸಲಾಗಿದೆ.

* ಪ್ರಶ್ನೋತ್ತರದ ಶೈಲಿ, ಸ್ವರದ ಏರು ಪೇರುಗಳು, ಸಾಮಾಜಿಕ ಅಂಕುಡೊಂಕುಗಳ ಮೇಲೆ ಬೆಳಕು, ಮುಂತಾದ ಪ್ರವಚನತಂತ್ರಗಳು ಶುಷ್ಕಗಳಂತಿರುವ ಸಂಸ್ಕೃತದ ಶಬ್ದರೂಪದಲ್ಲಿರುವ ನಾಮಗಳ ಪ್ರವಚನಗಳೂ ಜನಸಾಮಾನ್ಯರಿಗೂ, ಆಕರ್ಷಕಗಳಾಗುವಂತೆ ಮೂಡಿಬಂದಿವೆ.

## ಪೊಡವಿಗೊಡೆಯನ ಲೀಲಾವೈಭವ :

ಇವೇ ಮೊದಲಾದ ಗುಣಗಳು ಶ್ರೀಪಾದರ ಸಹಸ್ರನಾಮಪ್ರವಚನಗಳು ಜಿಜ್ಞಾಸುಗಳ ಮೆಚ್ಚುಗೆಗೆ ಪಾತ್ರಗಳಾಗುವಂತೆ ಮಾಡಿವೆ ಎಂಬುದರ ಜೊತೆಗೆ ಶ್ರೀಪಾದರಿಂದ ಯಶಸ್ವಿಯಾಗಿ ಪ್ರವಚನಗಳನ್ನು ಹೊರಡಿಸುವಲ್ಲೂ, ಶ್ರೋತೃಗಳಿಗೆ ಅವು ಪ್ರಭಾವಕಾರಿಗಳೆನಿಸುವಂತೆ ಮಾಡುವಲ್ಲೂ ಪೊಡವಿಗೊಡೆಯ ಮಧ್ವವಲ್ಲಭನ



ಪಾತ್ರವನ್ನು ವಿವೇಚಿಸದಿರಲಾಗದು. ಭೀಷ್ಮರು ಮಲಗಿ ವಿಷ್ಣುಸಹಸ್ರನಾಮದ ಮೂಲಕ ಪಾಡುತ್ತಿರಲು ಅವರ ಎದುರೇ ಕುಳಿತು ಕೇಳುತ್ತಿದ್ದ ಶ್ರೀಕೃಷ್ಣನ ನಡತೆ **'ಮಲಗಿ ಪರಮಾದರದಿ ಪಾಡಲು ಕುಳಿತು ಕೇಳುವ....'** ಎಂಬ ಜಗನ್ನಾಥದಾಸರ ಮಾತಿಗೆ ಹೇಗೆ ಪ್ರಾತ್ಯಕ್ಷಿಕೆಯಂತೆ ಇದೆಯೋ ಹಾಗೆಯೇ, ಭೀಷ್ಮರೊಳಗೆ ಒಂದು ರೂಪದಿಂದ ಹೊಕ್ಕು ಆ ರೂಪದಿಂದ ಭೀಷ್ಮರೊಳಗೆ ವಿಷ್ಣುಸಹಸ್ರನಾಮವನ್ನು ಪಠಿಸುತ್ತಿದ್ದು, ಮತ್ತೊಂದು ರೂಪದಿಂದ ಅವರೆದುರೇ ಕುಳಿತು ವಿಷ್ಣುಸಹಸ್ರನಾಮದ ಉಪದೇಶವನ್ನು ಕೇಳುವ ಮೂಲಕ 'ಒಬ್ಬನಲಿ ನಿಂತಾಡುವನು ಮತ್ತೊಬ್ಬನಲಿ ನೋಡುವನು.... ಮಾತಾಡುವನು ಬೆರಗಾಗಿ' - ಎಂಬ ಜಗನ್ನಾಥದಾಸರ ಮತ್ತೊಂದು ಮಾತಿಗೂ ಪ್ರಾತ್ಯಕ್ಷಿಕೆಯನ್ನು ಒದಗಿಸಿದಂತೆ ಇದೆ.

ಪ್ರಕೃತದಲ್ಲೂ ಅದೇ ಕೃಷ್ಣ ಉಡುಪಿ ಕೃಷ್ಣನ ಪ್ರತಿಮೆಯಲ್ಲಿ ಸನ್ನಿಹಿತನಾಗಿ ಸಹಸ್ರನಾಮದ ಪ್ರವಚನಗಳಲ್ಲೂ ಅದೇ ರೀತಿಯಾಗಿ ಪಾತ್ರ ವಹಿಸಿರುವನೆಂಬುದನ್ನು ವಿವೇಚಿಸಿಕೊಳ್ಳಬೇಕು.

ಇದರಿಂದ ಸ್ಪಷ್ಟವಾಗುವುದು - ಇದೊಂದು ಶ್ರೀ ವಿಶ್ವಪ್ರಿಯತೀರ್ಥರ ಮಾಧ್ಯಮದಲ್ಲಿ ನಡೆದ ಪೊಡವಿಗೊಡೆಯನ ಲೀಲಾವೈಬವವಷ್ಟೇ. ಅಂದು ಭೀಷ್ಮರ ಮಾಧ್ಯಮದಲ್ಲಿ ಪ್ರಕಟವಾಗಿದ್ದರೆ, ಪ್ರಕೃತದಲ್ಲಿ ಶ್ರೀ ವಿಶ್ವಪ್ರಿಯತೀರ್ಥರ ಮಾಧ್ಯಮದಲ್ಲಿ ಬೆಳಗಿಸಲ್ಪಟ್ಟಿದೆಯಷ್ಟೇ.

## 'ವಿಶ್ವಪ್ರಿಯಾ'ದ ಕೆಲವು ವೈಶಿಷ್ಟ್ಯಗಳು :

ಶ್ರೀಪಾದರ ವಿ.ಸ.ನಾಮದ ಕುರಿತಾದ ಪ್ರವಚನ ಮಾಲಿಕೆಯ ಆಧಾರದಿಂದ ಅರಳಿ ಬಂದಿರುವ ಈ 'ವಿಶ್ವಪ್ರಿಯಾ'ದ ಕೆಲವು ವೈಶಿಷ್ಟ್ಯಗಳನ್ನು ಹೀಗೆ ಗುರುತಿಸಿಕೊಳ್ಳಬಹುದಾಗಿದೆ

* ವಿಷ್ಣು ಸಹಸ್ರನಾಮದ ಅನುಸಂಧಾನಕ್ಕೆ ಪೂರಕವಾಗುವಂತೆ ಕವಚ ಪುಟಗಳನ್ನು ರೂಪಿಸಲಾಗಿದೆ.

* ಆಯಾ ವಿಷ್ಣು ಸಹಸ್ರನಾಮದ ಅನುಸಂಧಾನಕ್ಕೆ ಪೋಷಕವಾಗುವಂತೆ ಉಡುಪಿ ಶ್ರೀ ಕೃಷ್ಣನ ಬೇರೆ ಬೇರೆ ಅಲಂಕಾರದ ಫೋಟೋಗಳನ್ನೂ ಶ್ರೀಮಧ್ವಕರಾರ್ಜಿತ ಪ್ರತಿಮೆಗಳ ಫೋಟೋಗಳನ್ನೂ ಅಲ್ಲಲ್ಲಿ ಪ್ರಕಟಿಸಲಾಗಿದೆ.

* ಪರಿಶಿಷ್ಟದಲ್ಲಿ ಸ್ತ್ರೀಯರು ವಿಷ್ಣುಸಹಸ್ರನಾಮದ ಪಠನೆಯನ್ನು ನಡೆಸಬಹುದೇ ಎಂಬುದರ ಬಗ್ಗೆ ಶಾಸ್ತ್ರೀಯ ವಿಮರ್ಶೆಯನ್ನು ನಡೆಸಲಾಗಿದೆ.

* ಸರಳತೆಗಾಗಿ ಹಾಗೂ ಆಕರ್ಷಣೆಗಾಗಿ ಆದಷ್ಟು ಶ್ರೀಪಾದರ ಪ್ರವಚನದ ಶೈಲಿಯ ಪಡಿಯಚ್ಚನ್ನೇ ಮೂಡಿಸಲು ಯತ್ನಿಸಲಾಗಿದೆ.

* ನಾಮವನ್ನು ಅರ್ಥೈಸುವಲ್ಲಿ ನೇರವಾಗಿ ಸಂಬಂಧಿಸದ ಕೆಲವು ವಿಚಾರಗಳನ್ನೂ ಶ್ರೀಪಾದರ ವಿಚಾರಧಾರೆಯ ಪರಿಚಯಕ್ಕಾಗಿ ಪ್ರಸ್ತುತ ಪಡಿಸಲಾಗಿದೆ.

## ಕೃತಜ್ಞತೆ :

* ತಮ್ಮ ಪ್ರವಚನಗಳಿಗೆ 'ವಿಶ್ವಪ್ರಿಯಾ' ಟಿಪ್ಪಣಿಯ ರೂಪ ತೊಡಿಸಲು ಅನುಮತಿ ನೀಡಿ ಅನುಗ್ರಹಿಸಿದ ಹಾಗೂ ಆರ್ಥಿಕ ನೆರವು ನೀಡಿದ ಶ್ರೀವಿಶ್ವಪ್ರಿಯತೀರ್ಥರಿಗೆ **'ಭೂಯಿಷ್ಠಾಂ ತೇ ನಮ ಉಕ್ತಿಂ ವಿಧೇಮ'**

* ಈ ಕೃತಿಯ ನಿರ್ಮಾಣದಲ್ಲಿ ನನ್ನನ್ನು ಬಲಾತ್ಕಾರವಾಗಿ ತೊಡಗಿಸಿದವರು ಶ್ರೀ ಪಾದರ ಪ್ರವಚನದ ಶ್ರೋತೃಗಳು. ಸಿಕ್ಕಿದಾಗೆಲ್ಲ ಪ್ರವಚನದ ಸಂಗ್ರಹ ಎಲ್ಲಿಯವರೆಗೆ ಬಂತು ? ಇನ್ನೆಷ್ಟು ದಿನಗಳಲ್ಲಿ ನಮಗೆ ದೊರಕಬಹುದು? ಇತ್ಯಾದಿಯಾಗಿ ವಿಚಾರಿಸುತ್ತಿದ್ದ ಅವರ ಜಿಜ್ಞಾಸಾಪ್ರವೃತ್ತಿಯ ತೀವ್ರತೆ ನನ್ನನ್ನು ಈ ನಿಟ್ಟಿನಲ್ಲಿ ಕ್ರಿಯಾಶೀಲನನ್ನಾಗಿಸಿದೆ. ಆದ್ದರಿಂದ ಅವರೆಲ್ಲರ ಉಪಕಾರವನ್ನು ಮರೆಯುವಂತಿಲ್ಲ.

* ಶ್ರೀ ಯಾದವಾಚಾರ್ಯರ ಅಳಿಯ ಪಾದೂರು ರಘುಪತಿ ತಂತ್ರಿಗಳು ಪದೇ

ಪದೇ ನನ್ನನ್ನು ಈ ನಿಟ್ಟಿನಲ್ಲಿ ಪ್ರೇರಿಸುತ್ತಿದ್ದುದನ್ನೂ ನೆನೆಯದಿರುವಂತಿಲ್ಲ.

* ಶ್ರೀ ಪಟ್ಟಾಭಿರಾಮಾಚಾರ್ಯರು ತಾಳ್ಮೆಯಿಂದ ಶ್ರೀ ಪಾದರ ಪ್ರವಚನಗಳ ಧ್ವನಿ ಮುದ್ರಣವನ್ನು ಪರಿಷ್ಕೃತವಾಗಿ ಮಾಡಿದ್ದರಿಂದಷ್ಟೇ ಅದರ ಆಧಾರದಲ್ಲಿ 'ವಿಶ್ವಪ್ರಿಯಾ' ವನ್ನು ರೂಪಿಸುವಂತಾಯಿತು. ಪಟ್ಟಾಭಿಯವರ ಈ ಸೇವೆ ಹರಿಗುರುಗಳ ಚಿತ್ತಕ್ಕೆ ಬರುವಂತಾಗಲಿ !

* ಉಡುಪಿ ಶ್ರೀ ಕೃಷ್ಣನ ಹಾಗೂ ಶ್ರೀಪಾದರ ಫೋಟೋಗಳನ್ನು ಒದಗಿಸಿಕೊಟ್ಟ ಆನಂದ ಮಠದ ಹಾಗೂ ಪರಶುರಾಮ ಭಟ್ಟ್, ಇವರಿಗೆ ಕೃತಜ್ಞತೆ.

* ಪರವಿದ್ಯಾ ಪ್ರಕಾಶನದ ಕೃತಿಗಳನ್ನು ವಿತರಿಸುವಲ್ಲಿ ನಿಷ್ಕಾಮವಾಗಿ ಸೇವೆ ಸಲ್ಲಿಸುತ್ತಿರುವ ಶ್ರೀಧರ ಉಪಾಧ್ಯಾಯರಿಂದ ಹರಿಗುರುಗಳು ಇಂತಹ ಸೇವೆಯನ್ನು ಇನ್ನಷ್ಟು ನಡೆಸುವಂತಾಗಲಿ.

* ಮುಖಪುಟದ ಅಡೂರಿನ ಶ್ರೀ ವಿಷ್ಣುವಿನ ಫೋಟೋ ಬಹಳ ಉತ್ಸಾಹದಿಂದ ಒದಗಿಸಿಕೊಟ್ಟ ಆ ದೇವಾಲಯದ ಶರಣಂತಾಯ ಮನೆತನಕ್ಕೆ ಸೇರಿರುವ ಶ್ರೀ ಎ. ಹರಿಕೃಷ್ಣರಾವ್ ಇವರಿಗೆ,

* ತಾಳ್ಮೆಯಿಂದ ಇದರ ಅಕ್ಷರ ಜೋಡಣೆಯನ್ನೂ, ಕವಚಪುಟ ವಿನ್ಯಾಸವನ್ನೂ ಚೆನ್ನಾಗಿ ನಡೆಸಿದ 'ಗೋಪ್ಯಕಂಪ್ಯೂಟರ್ಸ್' ಬಂಧುಗಳಿಗೂ,

* ಮುದ್ರಣ ಕಾರ್ಯವನ್ನು ನೆರವೇರಿಸಿದ ರಾಷ್ಟ್ರೋತ್ಥಾನ ಮುದ್ರಣಾಲಯದ ಬಂಧುಗಳಿಗೂ ಕೃತಜ್ಞತೆ.

ಮಕರಸಂಕ್ರಮಣ, ವ್ಯಯಸಂವತ್ಸರ

- ಸಗ್ರಿ ರಾಘವೇಂದ್ರ ಉಪಾಧ್ಯಾಯ
ಪರವಿದ್ಯಾ ಪ್ರಕಾಶನ

# ವಿಷ್ಣುಸಹಸ್ರನಾಮಗಳ ಅಕ್ಷರಾನುಕ್ರಮಣಿಕಾ

ವಿಷ್ಣುಸಹಸ್ರನಾಮದ ಸಾವಿರ ನಾಮಗಳನ್ನು ಅಕಾರಾದಿ ವರ್ಣಾನುಕ್ರಮವಾಗಿ ಉಲ್ಲೇಖಿಸಿ, ಆಯಾ ನಾಮಕ್ಕೆ ಸಂಬಂಧಿಸಿದ ವಿವರಣೆ ಯಾವ ಪುಟದಲ್ಲಿ ಬಂದಿದೆ ಎಂದು ತಿಳಿಸಲಾಗಿದೆ. ಜೊತೆಗೆ ಆಯಾ ನಾಮಕ್ಕೆ ಸಂಬಂಧಿಸಿ ಉಪಾಸನೆಯ ಫಲವಿಶೇಷವನ್ನು ಹೇಳಿದ್ದರೆ ಅದನ್ನೂ ಉಲ್ಲೇಖಿಸಲಾಗಿದೆ.

| | | | | |
|---|---|---|---|---|
| 16 | ಅಜಃ | ೫೨೬ | 441 | -- |
| 17 | ಅಜಿತಃ | ೫೫೫ | 462 | ಜೀವನದಲ್ಲಿ ಸೋಲದಿರುವಿಕೆ |
| 18 | ಅಣುರ್ಬೃಹತ್ | ೮೪೨ | 701 | -- |
| 19 | ಅತೀಂದ್ರಃ | ೧೫೯ | 138 | ಸಮಸ್ಯೆಗಳಿಗೆ ಥಟ್ಟನೆ ಪರಿಹಾರವನ್ನು ಒದಗಿಸುವ ಸಾಮರ್ಥ್ಯ |
| 20 | ಅತೀಂದ್ರಿಯಃ | ೧೭೧ | 149 | ಅತೀಂದ್ರಿಯ ವಿಚಾರಗಳೂ, ಮುಂದೆ ನಡೆಯುವ ಸಂಗತಿಯೂ ಗೋಚರಿಸುವುದು |
| 21 | ಅತುಲಃ | ೩೫೮ | 308 | -- |
| 22 | ಅದೃಶ್ಯಃ | ೩೦೬ | 270 | -- |
| 23 | ಅಧಿಷ್ಠಾನಮ್ | ೩೨೭ | 284 | -- |
| 24 | ಅಧೃತಃ | ೮೪೬ | 703 | ದೈನ್ಯವಿಲ್ಲದ ಬದುಕು |
| 25 | ಅಧೋಕ್ಷಜಃ | ೪೧೮ | 355 | ಭವಿಷ್ಯದ ತಿಳುವಳಿಕೆ |
| 26 | ಅನಘಃ | ೧೪೮ | 129 | -- |
| 27 | ಅನಘಃ | ೮೩೯ | 699 | -- |
| 28 | ಅನಂತಜಿತ್ | ೩೦೯ | 272 | -- |
| 29 | ಅನಂತರೂಪಃ | ೯೩೧ | 778 | -- |
| 30 | ಅನಂತಶ್ರೀಃ | ೯೩೨ | 780 | -- |
| 31 | ಅನಂತಃ | ೬೬೮ | 546 | -- |
| 32 | ಅನಂತಃ | ೮೮೮ | 737 | ಪೂರ್ಣ ಆಯುಷ್ಯದ ಬಾಳ್ವೆ |
| 33 | ಅನಂತಾತ್ಮಾ | ೫೨೩ | 438 | ಕೀರ್ತಿಯಿಂದ ಹರಡಿಕೊಳ್ಳುವಿಕೆ |
| 34 | ಅನಯಃ | ೪೦೩ | 342 | -- |
| 35 | ಅನರ್ಥಃ | ೪೩೪ | 370 | ಪ್ರಯೋಜನಾಪೇಕ್ಷೆಯಿಲ್ಲದೆ ಕರ್ತವ್ಯದೃಷ್ಟಿಯಿಂದ ಉಪಕಾರ ಮಾಡುವ ಭಾವನೆ |
| 36 | ಅನಲಃ | ೨೯೬ | 94 | -- |
| 37 | ಅನಲಃ | ೭೧೯ | 589 | ಆಲಸ್ಯಕ್ಕೆ ಒಳಗಾಗದಿರುವಿಕೆ |
| 38 | ಅನಾದಿನಿಧನಃ | ೪೨ | 36 | -- |
| 39 | ಅನಾದಿಃ | ೯೪೦ | 784 | -- |

| | | | | |
|---|---|---|---|---|
| 40 | ಅನಾಮಯಃ | ೫೭೩ | 573 | -- |
| 41 | ಅನಿಮಿಷಃ | ೧೮೨ | 182 | -- |
| 42 | ಅನಿರುದ್ಧಃ | ೧೬೦ | 160 | -- |
| 43 | ಅನಿರುದ್ಧಃ | ೫೩೦ | 530 | -- |
| 44 | ಅನಿರ್ದೇಶ್ಯವಪುಃ | ೧೫೫ | 155 | -- |
| 45 | ಅನಿರ್ದೇಶ್ಯವಪುಃ | ೫೪೩ | 543 | -- |
| 46 | ಅನಿರ್ವಿಣ್ಣಃ | ೩೭೩ | 373 | -- |
| 47 | ಅನಿರ್ವಿಣ್ಣಃ | ೭೪೧ | 741 | ನಿಷ್ಕಾಮಕರ್ಮಾಚರಣೆಯ ಸ್ಫೂರ್ತಿ |
| 48 | ಅನಿಲಃ | ೨೦೪ | 204 | -- |
| 49 | ಅನಿಲಃ | ೬೮೩ | 683 | -- |
| 50 | ಅನಿವೃತ್ತಿಃ | ೪೯೭ | 497 | -- |
| 51 | ಅನೀಶಃ | ೫೨೨ | 522 | -- |
| 52 | ಅನುಕೂಲಃ | ೨೯೮ | 298 | -- |
| 53 | ಅನುತ್ತಮಃ | ೬೮ | 68 | -- |
| 54 | ಅನುತ್ತಮಮ್ | ೬೧೨ | 612 | -- |
| 55 | ಅನೇಕಮೂರ್ತಿಃ | ೬೦೦ | 600 | -- |
| 56 | ಅನ್ತಕಃ | ೪೪೦ | 440 | ಶಾಸ್ತ್ರೀಯ ಸಮಸ್ಯೆಗಳಿಗೆ ತೀರ್ಮಾನದ ಸ್ಫೂರ್ತಿ |
| 57 | ಅನ್ನಮ್ | ೮೧೩ | 813 | ಬದುಕಿನಲ್ಲಿ ಎಂದೆಂದೂ ನಿರ್ಗತಿಕರಾಗಿ ಅಲೆದಾಡುವ ದುಃಸ್ಥಿತಿ ಬರಲಾರದು. |
| 58 | ಅನ್ನಾದಃ | ೮೧೩ | 813 | ಭೋಕ್ತೃತ್ವಶಕ್ತಿಗೆ ಕುಂದು ಬರುವುದಿಲ್ಲ. |
| 59 | ಅಪರಾಜಿತಃ | ೫೯೪ | 594 | -- |
| 60 | ಅಪರಾಜಿತಃ | ೭೨೦ | 720 | -- |
| 61 | ಅಪಾಂನಿಧಿಃ | ೨೮೩ | 283 | -- |
| 62 | ಅಪ್ರತಿರಥಃ | ೫೩೧ | 531 | -- |
| 63 | ಅಪ್ರಮತ್ತಃ | ೨೮೪ | 284 | ತಿಳಿಗೇಡಿತನದ ಮಾತು ಹೊರಹೊಮ್ಮಲಾರದು. |
| 64 | ಅಪ್ರಮೇಯಃ | ೩೮ | 38 | -- |
| 65 | ಅಪ್ರಮೇಯಾತ್ಮಾ | ೨೧೫ | 215 | -- |

| | | | | |
|---|---|---|---|---|
| 66 | ಅಭಿಪ್ರಾಯಃ | ೭೨೫ | 725 | -- |
| 67 | ಅಮರಪ್ರಭುಃ | ೪೦ | 40 | -- |
| 68 | ಅಮಾನೀ | ೬೨೭ | 627 | -- |
| 69 | ಅಮಿತವಿಕ್ರಮಃ | ೪೩೫ | 435 | -- |
| 70 | ಅಮಿತವಿಕ್ರಮಃ | ೫೩೨ | 532 | -- |
| 71 | ಅಮಿತಾಶನಃ | ೩೧೯ | 319 | ಅಗ್ನಿನಾರಾಯಣನಿಗೆ ಶಾಸ್ತ್ರೀಯವಾಗಿ ನಮ್ಮ ಶರೀರದ ಆಹುತಿ ತಲುಪುವಂತಾಗುವುದು. |
| 72 | ಅಮೂರ್ತಿಮಾನ್ | ೫೯೮ | 598 | -- |
| 73 | ಅಮೂರ್ತಿಃ | ೬೯೮ | 698 | -- |
| 74 | ಅಮೃತಪಃ | ೪೨೬ | 426 | -- |
| 75 | ಅಮೃತವಪುಃ | ೬೮೬ | 686 | -- |
| 76 | ಅಮೃತಃ | ೧೦೫ | 105 | -- |
| 77 | ಅಮೃತಾಂಶಃ | ೬೮೪ | 684 | -- |
| 78 | ಅಮೃತಾಂಶೂದ್ಭವಃ | ೨೪೯ | 249 | ಕೀರ್ತಿ ಮಾಸದಂತೆ ರಕ್ಷಣೆ |
| 79 | ಅಮೃತ್ಯುಃ | ೧೬೯ | 169 | ಮರಣದಿಂದಲೂ, ಅಪಮಾನದಿಂದಲೂ ಪಾರಾಗುವಿಕೆ. |
| 80 | ಅಮೇಯಾತ್ಮಾ | ೮೮ | 88 | -- |
| 81 | ಅಮೇಯಾತ್ಮಾ | ೧೫೭ | 157 | -- |
| 82 | ಅಮೋಘಃ | ೯೬ | 96 | ನಮ್ಮ ಆಚಾರ-ಮಾತು-ಸಂಕಲ್ಪ-ಇಚ್ಛೆ ಇವೆಲ್ಲ ವ್ಯರ್ಥಗಳಾಗಲಾರವು. |
| 83 | ಅಮೋಘಃ | ೧೩೫ | 135 | ಧಾರ್ಮಿಕ, ಆಧ್ಯಾತ್ಮಿಕ ಸಾಧನೆಗಳು ವ್ಯರ್ಥಗಳೆನಿಸವು. |
| 84 | ಅಂಭೋನಿಧಿಃ | ೪೩೭ | 437 | ದೇವರು ನಮ್ಮ ಹೃದಯದಲ್ಲಿದ್ದುಕೊಂಡು ನಮಗೆ ಧಾರಕನಾಗಿರುವನೆಂಬ ಎಚ್ಚರಿಕೆ. |
| 85 | ಅಯೋನಿಜಃ | ೪೮೧ | 481 | -- |
| 86 | ಅರವಿಂದಾಕ್ಷಃ | ೩೦೩ | 303 | -- |
| 87 | ಅರೌದ್ರಃ | ೭೫೨ | 752 | -- |

| | | | | |
|---|---|---|---|---|
| 88 | ಅರ್ಕಃ | ೬೬೮ | 668 | -- |
| 89 | ಅರ್ಚಿತಃ | ೫೨೭ | 527 | -- |
| 90 | ಅರ್ಚಿಷ್ಮಾನ್ | ೫೨೭ | 527 | -- |
| 91 | ಅರ್ಹಃ | ೩೬೯ | 369 | ಜನರಿಗೆ ಬೇಕಾಗುವಂತೆ ಇರುವಿಕೆ |
| 92 | ಅರ್ಹಪ್ರಿಯಕೃತ್ | ೭೨೭ | 727 | -- |
| 93 | ಅವಿಜ್ಞಾತಾ | ೪೦೬ | 406 | -- |
| 94 | ಅವ್ಯಕ್ತಃ | ೬೦೧ | 601 | -- |
| 95 | ಅವ್ಯಂಗಃ | ೧೧೪ | 114 | ಅವಯವಗಳನ್ನು ಕಳೆದು ಕೊಳ್ಳಬೇಕಾದ ಅಪಾಯದಿಂದ ಪಾರಾಗುವಿಕೆ. |
| 96 | ಅವ್ಯಯಃ | ೧೩ | 13 | -- |
| 97 | ಅವ್ಯಯಃ | ೭೪೮ | 748 | -- |
| 98 | ಅಶೋಕಃ | ೨೯೩ | 293 | -- |
| 99 | ಅಶ್ವತ್ಥಃ | ೬೯೩ | 693 | -- |
| 100 | ಅಸಂಖ್ಯೇಯಃ | ೨೧೪ | 214 | -- |
| 101 | ಅಸತ್ | ೪೦೪ | 404 | -- |
| 102 | ಅಹಃಸಂವರ್ತಕಃ | ೨೦೨ | 202 | 'ಸನ್ಮಾರ್ಗ ಸಂಚಾರಕ್ಕೆ ಬೆಳಕು ; ದುರ್ಮಾರ್ಗದಿಂದ ಹಿಂಜರಿಯಲು ಕತ್ತಲು' |
| 103 | ಅಹಃ | ೭೭ | 77 | -- |
| | (ಆ) | | | |
| 104 | ಆತ್ಮಯೋನಿಃ | ೮೧೫ | 815 | ಮಾಧ್ವ ತತ್ತ್ವಜ್ಞಾನ ಹಾಗೂ ಮಧ್ವರ ಸನ್ನಿಧಾನಕ್ಕೆ ಪಾತ್ರರಾದ ಗುರುಗಳ ಲಾಭ. |
| 105 | ಆತ್ಮವಾನ್ | ೭೨ | 72 | ಮುಂದಿನ ಜನ್ಮದಲ್ಲೂ ಒಳ್ಳೆಯ ಶರೀರದ ಪ್ರಾಪ್ತಿ |
| 106 | ಆದಿತ್ಯಃ | ೩೩ | 33 | -- |
| 107 | ಆದಿತ್ಯಃ | ೪೭೨ | 472 | -- |
| 108 | ಆದಿದೇವಃ | ೨೯೧ | 291 | -- |
| 109 | ಆದಿದೇವಃ | ೪೧೩ | 413 | -- |
| 110 | ಆಧಾರನಿಲಯಃ | ೭೮೯ | 789 | -- |
| 111 | ಆನಂದಃ | ೪೪೪ | 444 | -- |

| | | | | |
|---|---|---|---|---|
| 112 | ಆವರ್ತನಃ | ೨೩೧ | 197 | ಶಾಸ್ತ್ರಾರ್ಥಗಳನ್ನು ಮತ್ತೆ ಮತ್ತೆ ಮೆಲುಕು ಹಾಕಿ ನೆನಪಿನಲ್ಲಿಟ್ಟು ಕೊಳ್ಳುವ ತಾಕತ್ತು |
| 113 | ಆಶ್ರಮಃ | ೮೫೬ | 712 | ಏಕಾದಶೀ ವ್ರತಾದಿಗಳು ನಿರ್ವಿಘ್ನವಾಗಿ ನೆರವೇರುವವು. |
| | (ಇ) | | | |
| 114 | ಇಜ್ಯಃ | ೪೪೯ | 381 | -- |
| 115 | ಇಂದ್ರಕರ್ಮಾ | ೭೯೪ | 660 | -- |
| 116 | ಇಷ್ಟಃ | ೩೧೦ | 273 | ಸದಿಚ್ಛೆಗಳೆಲ್ಲ ಪೂರೈಸಲ್ಪಡುವವು |
| | (ಈ) | | | |
| 117 | ಈಶಾನಃ | ೬೫ | 55 | -- |
| 118 | ಈಶ್ವರಃ | ೩೬ | 31 | -- |
| 119 | ಈಶ್ವರಃ | ೭೫ | 62 | -- |
| | (ಉ) | | | |
| 120 | ಉಗ್ರಃ | ೪೨೪ | 361 | ಸಾಧನಾನುಷ್ಠಾನಕ್ಕೆ ತೊಂದರೆ ಕೊಡುವವವರನ್ನು ದೇವರು ಉಗ್ರನಾಗಿ ಬೆದರಿಸುವನು. |
| 121 | ಉತ್ತರಃ | ೪೯೮ | 417 | -- |
| 122 | ಉತ್ತಾರಣಃ | ೯೨೨ | 769 | -- |
| 123 | ಉದೀರ್ಣಃ | ೬೩೨ | 520 | -- |
| 124 | ಉದುಂಬರಃ | ೮೩೧ | 693 | -- |
| 125 | ಉದ್ಭವಃ | ೩೭೬ | 320 | ಮುಕ್ತಿ ಪ್ರಾಪ್ತಿ ಹಾಗೂ ಸಂಸಾರದಲ್ಲೂ ದುಃಖವನ್ನು ಮೆಟ್ಟಿ ನಿಲ್ಲುವ ಸಾಮರ್ಥ್ಯ |
| 126 | ಉದ್ಭವಃ | ೭೯೮ | 662 | ಸಂಸಾರದಲ್ಲಿ ಅದರ ಲೇಪಕ್ಕೊಳಗಾಗದಂತೆ ಇರುವಿಕೆ. |
| 127 | ಉದಾರಧೀಃ | ೩೩೦ | 185 | -- |

| | | | | |
|---|---|---|---|---|
| 128 | ಉಪೇಂದ್ರಃ | ೧೫೩ | 133 | ದೇವರು ನಮ್ಮ ಸಮೀಪದಲ್ಲಿಯೇ ಇದ್ದುಕೊಂಡು ನಮ್ಮ ಸಮಸ್ಯೆಗಳನ್ನು ಪರಿಹರಿಸುವನು. |
| | (ಊ) | | | |
| 129 | ಊರ್ಜಿತಶಾಸನಃ | ೯೦೯ | 756 | -- |
| 130 | ಊರ್ಜಿತಃ | ೧೫೮ | 137 | ಸದಾ ಕ್ರಿಯಾಶೀಲನಾಗುವಂತೆ ಸ್ಫೂರ್ತಿ |
| 131 | ಊರ್ಧ್ವಗಃ | ೯೫೨ | 792 | ಇತರರನ್ನು ಅತಿಕ್ರಮಿಸಿ ಮೆರೆಯುವಿಕೆ |
| | (ಋ) | | | |
| 132 | ಋತುಃ | ೪೧೯ | 356 | ನಾಲ್ಕು ಜನರಿಂದ ತಿಳಿಯಲ್ಪಡುತ್ತ ಬದುಕುವಂತಾಗುವುದು. |
| 133 | ಋದ್ಧಃ | ೨೮೧ | 244 | ನಮ್ಮ ಯೋಗ್ಯತೆಗನುಗುಣವಾಗಿ ಪೂರ್ಣತೆ ಸಿದ್ಧಿಸುವುದು. |
| 134 | ಋದ್ಧಃ | ೩೫೪ | 305 | ವಿದ್ಯೆ ಫಲಿಸುವುದು. |
| | (ಏ) | | | |
| 135 | ಏಕಃ | ೭೩೩ | 605 | -- |
| | (ಓ) | | | |
| 136 | ಓಜಸ್ತೇಜೋದ್ಯುತಿಧರಃ | ೨೭೭ | 241 | -- |
| | (ಔ) | | | |
| 137 | ಔಷಧಮ್ | ೨೯೦ | 254 | ದೈಹಿಕ ರೋಗಗಳ, ಮಾನಸಿಕ ವ್ಯಥೆಗಳ ಪರಿಹಾರ |
| | (ಕ) | | | |
| 138 | ಕಥಿತಃ | ೮೫೨ | 708 | ಶುದ್ಧವಾದ ಆಹಾರದ ಲಾಭ |
| 139 | ಕನಕಾಂಗದೀ | ೫೪೭ | 457 | -- |
| 140 | ಕಪಿಲಃ | ೮೯೭ | 746 | -- |
| 141 | ಕಪಿಲಾಚಾರ್ಯಃ | ೫೩೭ | 449 | -- |

| | | | | |
|---|---|---|---|---|
| 142 | ಕಪಿಃ | ೮೬೮ | 747 | -- |
| 143 | ಕಪೀಂದ್ರಃ | ೯೦೫ | 424 | -- |
| 144 | ಕರಣಂ | ೩೮೧ | 325 | ಪ್ರತಿಯೊಂದು ಚಟುವಟಿಕೆಯನ್ನೂ ನಡೆಸಲು ಸ್ಫೂರ್ತಿ, ಉತ್ಸಾಹ |
| 145 | ಕರ್ತಾ | ೩೧೮ | 278 | -- |
| 146 | ಕರ್ತಾ | ೩೮೩ | 327 | -- |
| 147 | ಕವಿಃ | ೧೩೪ | 117 | -- |
| 148 | ಕಾಂತಃ | ೨೬೮ | 264 | -- |
| 149 | ಕಾಂತಃ | ೫೫೩ | 542 | -- |
| 150 | ಕಾಮಕೃತ್ | ೨೬೭ | 263 | ಭಗವಂತನಿಗೆ ಸಂಬಂಧಿಸುವ ಇಚ್ಛೆಗಳ ಪ್ರಾಪ್ತಿ |
| 151 | ಕಾಮದೇವಃ | ೫೫೦ | 539 | ಸದಿಚ್ಛೆಗಳು ಬೆಳಕಿಗೆ ಬರುವವು ಕೆಟ್ಟ ಇಚ್ಛೆಗಳು ತಣ್ಣಗಾಗುವವು. |
| 152 | ಕಾಮಪಾಲಃ | ೫೫೧ | 540 | -- |
| 153 | ಕಾಮಪ್ರದಃ | ೩೦೦ | 265 | -- |
| 154 | ಕಾಮಹಾ | ೨೬೫ | 262 | ವಿಷಯಪದಾರ್ಥಗಳ ಬಗ್ಗೆ ಕೆಟ್ಟ ಇಚ್ಛೆಗಳು ಉಂಟಾಗಲಾರವು. |
| 155 | ಕಾಮಃ | ೨೬೬ | 265 | -- |
| 156 | ಕಾಮೀ | ೫೫೨ | 542 | -- |
| 157 | ಕಾರಣಂ | ೩೮೨ | 326 | ದೋಷಗಳ ಪರಿಹಾರ. |
| 158 | ಕಾಲನೇಮಿನಿಹಾ | ೫೯೧ | 533 | -- |
| 159 | ಕಾಲಃ | ೪೨೧ | 358 | -- |
| 160 | ಕಿಮ್ | ೭೩೭ | 609 | -- |
| 161 | ಕುಂಡಲೀ | ೬೦೫ | 753 | -- |
| 162 | ಕುಂದರಃ | ೮೧೫ | 680 | -- |
| 163 | ಕುಂದಃ | ೮೧೭ | 681 | -- |
| 164 | ಕುಮುದಃ | ೯೬೭ | 491 | -- |
| 165 | ಕುಮುದಃ | ೮೧೯ | 678 | -- |
| 166 | ಕುಂಭಃ | ೫೪೪ | 528 | ಏಕಾದಶೀವ್ರತ ಇತ್ಯಾದಿ ವ್ರತಗಳ ಆಚರಣೆಯ ಪ್ರಸಂಗದಲ್ಲಿ ಹಿಂದಿನ ದಿನ ಕುಡಿದಿದ್ದ ನೀರಿನ ಅಂಶವನ್ನು ಉಳಿಸಿ ದೇಹದ ರಕ್ಷಣೆ |

| | | | | |
|---|---|---|---|---|
| 167 | ಕುವಲೇಶಯಃ | ೪೯೧ | 491 | -- |
| 168 | ಕೃತಕರ್ಮಾ | ೬೬೧ | 661 | ಕರ್ತವ್ಯ ಕರ್ಮಗಳನ್ನು ಆದಷ್ಟು ಬೇಗ ಮಾಡಿ ಮುಗಿಸಬಹುದು. |
| 169 | ಕೃತಜ್ಞಃ | ೭೦ | 70 | ಭಕ್ತರನ್ನು ತೆಗಳಿದ ಅಪರಾಧದ ಪರಿಹಾರ. |
| 170 | ಕೃತಜ್ಞಃ | ೪೪೯ | 449 | -- |
| 171 | ಕೃತಲಕ್ಷಣಃ | ೪೦೯ | 409 | -- |
| 172 | ಕೃತಾಕೃತಃ | ೧೨೦ | 120 | -- |
| 173 | ಕೃತಾಗಮಃ | ೫೪೩ | 543 | ಬರವಣಿಗೆಯ ಮೂಲಕ ಸಾಧನೆ |
| 174 | ಕೃತಾಗಮಃ | ೬೬೨ | 662 | -- |
| 175 | ಕೃತಾಂತಕೃತ್ | ೪೫೩ | 453 | -- |
| 176 | ಕೃತಿಃ | ೭೧ | 71 | -- |
| 177 | ಕೃಶಸ್ಥೂಲಃ | ೭೦೧ | 701 | -- |
| 178 | ಕೃಷ್ಣಃ | ೪೮ | 48 | -- |
| 179 | ಕೃಷ್ಣಃ | ೪೬೩ | 463 | -- |
| 180 | ಕೇಶವಃ | ೨೧ | 21 | -- |
| 181 | ಕೇಶವಃ | ೫೩೭ | 537 | -- |
| 182 | ಕೇಶಿಹಾ | ೫೩೮ | 538 | -- |
| 183 | ಕಃ | ೬೦೮ | 608 | ಒಳ್ಳೆಯ ಶಬ್ದಗಳನ್ನೇ ನುಡಿಸುವನು. ಇತರರಿಂದ ಒಳ್ಳೆಯ ಶಬ್ದಗಳನ್ನೇ ಕೇಳಿಸಿಕೊಳ್ಳುವಂತೆ ಮಾಡುವನು. |
| 184 | ಕ್ರತುಃ | ೩೮೨ | 382 | ಕರ್ಮಬಂಧನದಿಂದ ಬಿಡುಗಡೆ |
| 185 | ಕ್ರಮಃ | ೬೮ | 68 | -- |
| 186 | ಕ್ರೋಧಕೃತ್ | ೨೭೮ | 278 | ಕ್ರೋಧ ತಣ್ಣಗಾಗುವುದು. |
| 187 | ಕ್ರೋಧಹಾ | ೨೭೭ | 277 | -- |
| 188 | ಕ್ಷಮಿಣಾಂ ವರಃ | ೭೬೫ | 765 | -- |
| 189 | ಕ್ಷರಮ್ | ೪೦೫ | 405 | ಶರೀರದಲ್ಲಿ ಹಾಗೂ ಮನೆಯಲ್ಲಿ ನೆಮ್ಮದಿಯಿಂದ ಇರುವಿಕೆ. |
| 190 | ಕ್ಷಮಃ | ೩೭೮ | 378 | -- |
| 191 | ಕ್ಷಾಮಃ | ೩೭೯ | 379 | ಉಪದ್ರವ ಕೊಡುವವರ ಬಲಸಾಮರ್ಥ್ಯಗಳಿಗೆ ಬರಗಾಲ ಬರುವುದು. |

| | | | | |
|---|---|---|---|---|
| 192 | ಕ್ಷಾಮಃ | ೭೫೮ | 713 | -- |
| 193 | ಕ್ಷಿತೀಶಃ | ೯೮೮ | 821 | -- |
| 194 | ಕ್ಷೇತ್ರಜ್ಞಃ | ೧೬ | 15 | -- |
| 195 | ಕ್ಷೇಮಕೃತ್ | ೬೦೭ | 499 | -- |
| 196 | ಕ್ಷೋಭಣಃ | ೩೭೭ | 321 | -- |
| | (ಖ) | | | |
| 197 | ಖಂಡಪರಶುಃ | ೫೭೫ | 477 | -- |
| | (ಗ) | | | |
| 198 | ಗತಿಸತ್ತಮಃ | ೫೭೩ | 474 | -- |
| 199 | ಗದಾಗ್ರಜಃ | ೭೭೩ | 643 | -- |
| 200 | ಗದಾಧರಃ | ೯೯೪ | 824 | -- |
| 201 | ಗಭಸ್ತನೇಮಿಃ | ೪೮೯ | 410 | -- |
| 202 | ಗಭೀರಃ | ೫೪೯ | 459 | -- |
| 203 | ಗಭೀರಾತ್ಮಾ | ೯೩೬ | 782 | -- |
| 204 | ಗರುಡಧ್ವಜಃ | ೩೫೭ | 307 | ಹತ್ತು ದಿಕ್ಕುಗಳಿಂದಲೂ ಒಳ್ಳೆಯ ಶಬ್ದಗಳ ಶ್ರವಣ. |
| 205 | ಗಹನಃ | ೩೮೫ | 328 | -- |
| 206 | ಗಹನಃ | ೫೫೦ | 459 | -- |
| 207 | ಗುಣಭೃನ್ನಿರ್ಗುಣಃ | ೭೪೪ | 702 | -- |
| 208 | ಗುಪ್ತಃ | ೫೫೧ | 459 | -- |
| 209 | ಗುರುತಮಃ | ೨೧೨ | 178 | -- |
| 210 | ಗುರುಃ | ೨೧೧ | 177 | -- |
| 211 | ಗುರುಃ | ೪೯೭ | 416 | -- |
| 212 | ಗುಹಃ | ೩೮೬ | 329 | -- |
| 213 | ಗುಹ್ಯಃ | ೫೪೮ | 458 | -- |
| 214 | ಗೋಪತಿಃ | ೪೯೯ | 418 | -- |
| 215 | ಗೋಪತಿಃ | ೫೯೯ | 494 | -- |
| 216 | ಗೋಪ್ತಾ | ೫೦೦ | 419 | -- |
| 217 | ಗೋಪ್ತಾ | ೬೦೧ | 495 | -- |
| 218 | ಗೋವಿಂದಾಂಪತಿಃ | ೧೯೦ | 163 | -- |
| 219 | ಗೋವಿಂದಃ | ೧೮೯ | 162 | -- |

| | | | | |
|---|---|---|---|---|
| 220 | ಗೋವಿಂದಃ | ೫೪೫ | 456 | -- |
| 221 | ಗೋಹಿತಃ | ೫೯೯ | 492 | -- |
| 222 | ಗ್ರಾಮಣೀಃ | ೨೨೨ | 187 | ಜನರ ಸಮುದಾಯದ ಬೆಂಬಲದ ಪ್ರಾಪ್ತಿ |
| | (ಘ) | | | |
| 223 | ಘೃತಾಶೀಃ | ೭೫೩ | 624 | -- |
| | (ಚ) | | | |
| 224 | ಚಕ್ರಗದಾಧರಃ | ೫೫೨ | 460 | -- |
| 225 | ಚಕ್ರೀ | ೯೦೭ | 754 | -- |
| 226 | ಚಕ್ರೀ | ೯೯೨ | 823 | ತಮಸ್ಸಿನ ಕಾರ್ಯಗಳಾದ ಅಜ್ಞಾನ, ವಿಪರೀತ ಜ್ಞಾನಗಳ ಪರಿಹಾರ |
| 227 | ಚತುರಸ್ರಃ | ೯೩೫ | 782 | -- |
| 228 | ಚತುರಾತ್ಮಾ | ೧೩೯ | 121 | -- |
| 229 | ಚತುರಾತ್ಮಾ | ೭೭೮ | 647 | -- |
| 230 | ಚತುರ್ಗತಿಃ | ೭೭೭ | 647 | -- |
| 231 | ಚತುರ್ದಂಷ್ಟ್ರಃ | ೧೪೧ | 122 | -- |
| 232 | ಚತುರ್ಬಾಹುಃ | ೭೭೫ | 644 | -- |
| 233 | ಚತುರ್ಭಾವಃ | ೭೭೯ | 648 | -- |
| 234 | ಚತುರ್ಭುಜಃ | ೧೪೨ | 123 | ಹೊಟ್ಟೆಗೂ, ಬುದ್ಧಿಗೂ ನಾಲ್ಕು ಬಗೆಯ ಆಹಾರದ ಲಾಭ. |
| 235 | ಚತುರ್ಮೂರ್ತಿಃ | ೭೭೪ | 644 | -- |
| 236 | ಚತುರ್ವೇದವಿದೇಕಪಾತ್ | ೭೮೦ | 650 | -- |
| 237 | ಚತುರ್ವ್ಯೂಹಃ | ೧೪೦ | 121 | -- |
| 238 | ಚತುರ್ವ್ಯೂಹಃ | ೭೭೬ | 645 | -- |
| 239 | ಚಂದನಾಂಗದೀ | ೭೪೯ | 619 | -- |
| 240 | ಚಂದ್ರಾಂಶುಃ | ೨೮೩ | 247 | -- |
| 241 | ಚಲಃ | ೭೫೫ | 625 | -- |
| 242 | ಚಾಣೂರಾಂಧ್ರನಿಷೂದನಃ | ೮೩೩ | 694 | -- |
| | (ಛ) | | | |
| 243 | ಛಿನ್ನ ಸಂಶಯಃ | ೬೩೧ | 519 | -- |

| | | | | |
|---|---|---|---|---|
| | (ಜ) | | | |
| 244 | ಜಗತಃಸೇತುಃ | ೨೯೦ | 255 | -- |
| 245 | ಜಗದಾದಿಜಃ | ೧೪೭ | 129 | -- |
| 246 | ಜನಜನ್ಮಾದಿಃ | ೯೪೫ | 787 | -- |
| 247 | ಜನನಃ | ೯೪೪ | 786 | -- |
| 248 | ಜನಾರ್ದನಃ | ೧೨೮ | 111 | -- |
| 249 | ಜನೇಶ್ವರಃ | ೩೪೪ | 298 | -- |
| 250 | ಜನ್ಮಮೃತ್ಯುಜರಾತಿಗಃ | ೯೬೩ | 800 | ಹುಟ್ಟು, ಸಾವು,ವೃದ್ಧಾಪ್ಯಗಳ ಸುಳಿಯಿಂದ ಪಾರಾಗುವಿಕೆ. |
| 251 | ಜಯಂತಃ | ೮೦೭ | 670 | ಯಮನ, ವೃದ್ಧಾಪ್ಯದ ಹಾಗೂ ಹುಟ್ಟಿನ ಬಾಧೆಗಳ ಪರಿಹಾರ. |
| 252 | ಜಿಷ್ಣುಃ | ೨೪೭ | 212 | ದೋಷದೌರ್ಬಲ್ಯಗಳ ಪರಿಹಾರ |
| 253 | ಜಿತಕ್ರೋಧಃ | ೪೬೫ | 392 | ಕ್ರೋಧವನ್ನು ತನ್ನ ಹಿಡಿತದಲ್ಲಿಟ್ಟುಕೊಳ್ಳಬಹುದಾಗಿದೆ. |
| 254 | ಜಿತಮನ್ಯುಃ | ೯೩೩ | 780 | -- |
| 255 | ಜಿತಾಮಿತ್ರಃ | ೫೨೯ | 443 | -- |
| 256 | ಜೀವನಃ | ೯೨೯ | 776 | -- |
| 257 | ಜೀವಃ | ೫೧೭ | 432 | -- |
| 258 | ಜೇತಾ | ೧೫೦ | 130 | -- |
| 259 | ಜ್ಯೇಷ್ಠಃ | ೬೮ | 57 | -- |
| 260 | ಜ್ಯೋತಿರಾದಿತ್ಯಃ | ೫೭೧ | 473 | -- |
| 261 | ಜ್ಯೋತಿರ್ಗಣೇಶ್ವರಃ | ೬೨೭ | 515 | ಇಂದ್ರಿಯಗಳು ಕ್ರಿಯಾಶೀಲಗಳಾಗಿರುವಂತೆ ಅವುಗಳಲ್ಲಿ ದೇವರು ನೆಲೆಸುವರು. |
| 262 | ಜ್ಯೋತಿಃ | ೮೭೯ | 730 | -- |
| 263 | ಜ್ಞಾನಗಮ್ಯಃ | ೫೦೧ | 419 | -- |
| 264 | ಜ್ಞಾನಮುತ್ತಮಮ್ | ೪೫೭ | 386 | -- |
| | (ತ) | | | |
| 265 | ತತ್ | ೭೩೯ | 611 | -- |
| 266 | ತತ್ತ್ವವಿದೇಕಾತ್ಮಾ | ೯೬೨ | 800 | -- |
| 267 | ತತ್ತ್ವಂ | ೯೬೧ | 800 | -- |

| | | | | |
|---|---|---|---|---|
| 268 | ತಂತುವರ್ಧನಃ | ೭೯೩ | 659 | -- |
| 269 | ತಾರಣಃ | ೩೪೦ | 294 | ದುಃಖವನ್ನೂ, ಸಮಸ್ಯೆಗಳನ್ನೂ ಬೇಗ ಬೇಗ ಅನಾಯಾಸವಾಗಿ ಅನುಭವಿಸಿ ಅವುಗಳಿಂದ ಪಾರಾಗುವುದು. |
| 270 | ತಾರಃ | ೩೪೧ | 295 | -- |
| 271 | ತಾರಃ | ೯೬೫ | 802 | ಸಮಸ್ಯೆಗಳ ಪರಿಹಾರ |
| 272 | ತೀರ್ಥಕರಃ | ೬೯೯ | 575 | -- |
| 273 | ತುಷ್ಟಃ | ೩೯೪ | 335 | -- |
| 274 | ತೇಜೋವೃಷಃ | ೭೬೬ | 636 | -- |
| 275 | ತ್ರಿಕಕುಬ್ಧಾಮ | ೬೧ | 51 | -- |
| 276 | ತ್ರಿದಶಾಧ್ಯಕ್ಷಃ | ೫೪೧ | 452 | -- |
| 277 | ತ್ರಿಪದಃ | ೫೪೦ | 451 | -- |
| 278 | ತ್ರಿಲೋಕಧೃಕ್ | ೭೬೦ | 630 | -- |
| 279 | ತ್ರಿಲೋಕಾತ್ಮಾ | ೬೫೫ | 536 | -- |
| 280 | ತ್ರಿಲೋಕೇಶಃ | ೬೫೬ | 537 | ಶರೀರದಲ್ಲಿ ದಾರ್ಢ್ಯ ಸಿದ್ಧಿಸುವುದು. |
| 281 | ತ್ರಿವಿಕ್ರಮಃ | ೫೩೫ | 447 | -- |
| 282 | ತ್ರಿಸಾಮಾ | ೫೮೩ | 482 | ಎಲ್ಲರ ದೃಷ್ಟಿ, ಗಮನ ನಮ್ಮೆಡೆಗೆ |
| 283 | ತ್ವಷ್ಟಾ | ೫೨ | 43 | ಗರ್ಭದೊಳಗೆ ಶಿಶುವಿನ ರೂಪ ಚೆನ್ನಾಗಿ ಕೆತ್ತಲ್ಪಡುವುದು. |
| | **(ದ)** | | | |
| 284 | ದಕ್ಷಃ | ೪೨೬ | 363 | -- |
| 285 | ದಕ್ಷಃ | ೯೧೬ | 762 | ದೈಹಿಕ ಹಾಗೂ ಬೌದ್ಧಿಕವಾಗಿ ಶೀಘ್ರ ಬೆಳವಣಿಗೆ. |
| 286 | ದಕ್ಷಿಣಃ | ೯೧೭ | 763 | -- |
| 287 | ದಂಡಃ | ೮೬೩ | 717 | -- |
| 288 | ದಮನಃ | ೧೯೨ | 164 | -- |
| 289 | ದಮಯಿತಾ | ೮೬೪ | 718 | -- |
| 290 | ದಮಃ | ೮೬೫ | 718 | -- |
| 291 | ದರ್ಪದಃ | ೭೨೧ | 591 | -- |
| 292 | ದರ್ಪಹಾ | ೭೨೦ | 590 | -- |

| | | | | |
|---|---|---|---|---|
| 293 | ದಾಮೋದರಃ | ೩೭೦ | 315 | -- |
| 294 | ದಾರುಣಃ | ೫೭೬ | 478 | -- |
| 295 | ದಾಶಾರ್ಹಃ | ೫೧೫ | 430 | -- |
| 296 | ದಿವಃಸ್ಪೃಕ್ | ೫೭೮ | 479 | ಮಠ,ಮಂದಿರಗಳಲ್ಲಿ ಚೆನ್ನಾಗಿ ಹಾಗೂ ಬೇಗ ದೇವರ ದರ್ಶನ. |
| 297 | ದಿಶಃ | ೯೩೯ | 783 | -- |
| 298 | ದೀಪ್ತಮೂರ್ತಿಃ | ೭೨೭ | 596 | -- |
| 299 | ದುರತಿಕ್ರಮಃ | ೭೮೪ | 652 | -- |
| 300 | ದುರಾಧರ್ಷಃ | ೮೨ | 69 | -- |
| 301 | ದುರಾರಿಹಾ | ೭೮೯ | 656 | -- |
| 302 | ದುರಾವಾಸಃ | ೭೮೮ | 655 | -- |
| 303 | ದುರ್ಗಮಃ | ೭೮೬ | 654 | -- |
| 304 | ದುರ್ಗಃ | ೭೮೭ | 654 | -- |
| 305 | ದುರ್ಜಯಃ | ೭೮೩ | 652 | -- |
| 306 | ದುರ್ಧರಃ | ೨೬೯ | 65 | -- |
| 307 | ದುರ್ಧರಃ | ೭೨೩ | 593 | -- |
| 308 | ದುರ್ಮರ್ಷಣಃ | ೨೦೭ | 175 | -- |
| 309 | ದುರ್ಲಭಃ | ೭೮೫ | 653 | -- |
| 310 | ದುಷ್ಕೃತಿಹಾ | ೯೨೩ | 770 | -- |
| 311 | ದುಃಸ್ವಪ್ನನಾಶನಃ | ೯೨೫ | 772 | ದುಃಸ್ವಪ್ನವನ್ನು ಕಾಣಬೇಕಾದ ದುಃಸ್ಥಿತಿ ಕಡಿಮ್ಮೆಯಾಗುವುದು. |
| 312 | ದೃಢಃ | ೫೫೭ | 464 | -- |
| 313 | ದೃಪ್ತಃ | ೭೨೨ | 592 | -- |
| 314 | ದೇವಃ | ೩೭೮ | 322 | -- |
| 315 | ದೇವಕೀನಂದನಃ | ೯೮೬ | 819 | ಕೃಷ್ಣ ತನ್ನ ದಾರಿಯಲ್ಲಿ ಕರೆದೊಯ್ಯುವನು. |
| 316 | ದೇವಭೃದ್ | ೪೯೬ | 415 | -- |
| 317 | ದೇವೇಶಃ | ೪೯೫ | 415 | ಇಷ್ಟವಾದ ಸುಖದ ಪ್ರಾಪ್ತಿ. |
| 318 | ದ್ಯುತಿಧರಃ | ೭೬೭ | 638 | ಸುಂದರ ವಸ್ತುಗಳನ್ನು ಕಂಡು ಸಂತೋಷಪಡುವ ಸಹೃದಯತೆಯ ಸಿದ್ಧಿ. |
| 319 | ದ್ರವಿಣಪ್ರದಃ | ೫೭೭ | 478 | -- |

(ಧ)

| | | | | |
|---|---|---|---|---|
| 320 | ಧನಂಜಯಃ | ೬೬೯ | 547 | -- |
| 321 | ಧನುರ್ಧರಃ | ೮೬೧ | 715 | -- |
| 322 | ಧನುರ್ವೇದಃ | ೮೬೨ | 716 | -- |
| 323 | ಧನೇಶ್ವರಃ | ೪೭೭ | 401 | ದೈವ ಹಾಗೂ ಮಾನುಷ ಸಂಪತ್ತಿನ ಪ್ರಾಪ್ತಿ. |
| 324 | ಧನ್ಯಃ | ೭೬೨ | 634 | ನೂರಕ್ಕೆ ಎಪ್ಪತ್ತು ಪಾಲಾದರೂ ನಮ್ಮ ಸಂಕಲ್ಪದಂತೆ, ಅಪೇಕ್ಷೆಯಂತೆ ನಡೆಯುವುದು. |
| 325 | ಧನ್ವೀ | ೭೭ | 64 | -- |
| 326 | ಧರಣೀಧರಃ | ೨೩೮ | 205 | -- |
| 327 | ಧರಾಧರಃ | ೭೬೫ | 636 | -- |
| 328 | ಧರ್ಮಕೃತ್ | ೪೭೮ | 402 | -- |
| 329 | ಧರ್ಮಗುಪ್ | ೪೭೯ | 403 | -- |
| 330 | ಧರ್ಮಯೂಪಃ | ೪೪೧ | 375 | -- |
| 331 | ಧರ್ಮವಿದುತ್ತಮಃ | ೪೦೭ | 345 | -- |
| 332 | ಧರ್ಮಃ | ೪೦೬ | 345 | -- |
| 333 | ಧರ್ಮಾಧ್ಯಕ್ಷಃ | ೧೩೭ | 119 | -- |
| 334 | ಧರ್ಮೀ | ೪೮೦ | 404 | -- |
| 335 | ಧಾತಾ | ೪೩ | 37 | -- |
| 336 | ಧಾತಾ | ೯೪೯ | 790 | -- |
| 337 | ಧಾತುರುತ್ತಮಃ | ೪೫ | 37 | -- |
| 338 | ಧಾಮ | ೨೧೩ | 179 | -- |
| 339 | ಧುರ್ಯಃ | ೩೩೨ | 287 | -- |
| 340 | ಧೃತಾತ್ಮಾ | ೧೬೨ | 141 | -- |
| 341 | ಧ್ರುವಃ | ೩೯೧ | 333 | -- |

(ನ)

| | | | | |
|---|---|---|---|---|
| 342 | ನಕ್ಷತ್ರನೇಮಿಃ | ೪೪೩ | 376 | -- |
| 343 | ನಕ್ಷತ್ರೀ | ೪೪೪ | 377 | ನಾವೇ ಸೋಲನ್ನು ಎದುರಿಸುವಂತಾಗುವುದು. |
| 344 | ನಂದಕೀ | ೯೯೧ | 823 | -- |

| | | | | |
|---|---|---|---|---|
| 345 | ನಂದನಃ | ೫೩೨ | 445 | -- |
| 346 | ನನ್ದಃ | ೫೩೩ | 446 | -- |
| 347 | ನಂದಿಃ | ೬೨೬ | 515 | -- |
| 348 | ನಯಃ | ೪೦೨ | 341 | -- |
| 349 | ನರಃ | ೨೪೯ | 214 | -- |
| 350 | ನಹುಷಃ | ೩೧೪ | 276 | -- |
| 351 | ನಾರಸಿಂಹವಪುಃ | ೨೧ | 19 | -- |
| 352 | ನಾರಾಯಣಃ | ೨೪೮ | 213 | -- |
| 353 | ನಿಗ್ರಹಃ | ೭೭೦ | 640 | -- |
| 354 | ನಿಧಿರವ್ಯಯಃ | ೩೦ | 26 | -- |
| 355 | ನಿಮಿಷಃ | ೨೧೬ | 182 | -- |
| 356 | ನಿಯಮಃ | ೧೬೩ | 141 | -- |
| 357 | ನಿಯಮಃ | ೮೬೮ | 721 | -- |
| 358 | ನಿರ್ವಾಣಂ | ೫೮೬ | 484 | ಮುಕ್ತರಾಗಿ ಜ್ಞಾನಾನಂದಶರೀರದ ಪ್ರಾಪ್ತಿ |
| 359 | ನಿವೃತ್ತಾತ್ಮಾ | ೨೩೨ | 199 | ಸಂಸಾರದ ಜಂಜಾಟದಿಂದ ದೂರ ಆಗುವಿಕೆ. |
| 360 | ನಿವೃತ್ತಾತ್ಮಾ | ೬೦೫ | 498 | -- |
| 361 | ನಿವೃತ್ತಾತ್ಮಾ | ೭೮೨ | 652 | -- |
| 362 | ನಿಷ್ಠಾ | ೫೯೧ | 488 | -- |
| 363 | ನೇತಾ | ೨೨೫ | 192 | -- |
| 364 | ನೇಯಃ | ೪೦೧ | 341 | -- |
| 365 | ನೈಕಕರ್ಮಕೃತ್ | ೪೭೨ | 397 | -- |
| 366 | ನೈಕಜಃ | ೮೯೧ | 739 | -- |
| 367 | ನೈಕಮಾಯಃ | ೩೦೪ | 269 | -- |
| 368 | ನೈಕರೂಪಃ | ೨೭೩ | 237 | -- |
| 369 | ನೈಕಶೃಂಗಃ | ೭೭೨ | 642 | -- |
| 370 | ನೈಕಃ | ೭೩೪ | 606 | -- |
| 371 | ನೈಕಾತ್ಮಾ | ೪೭೧ | 396 | -- |
| 372 | ನ್ಯಗ್ರೋಧಃ | ೮೩೦ | 692 | -- |
| 373 | ನ್ಯಾಯಃ | ೨೨೪ | 189 | ಜೀವನದಲ್ಲಿ ನ್ಯಾಯದ ಪ್ರಾಪ್ತಿ. |

(ಪ)

| | | | | |
|---|---|---|---|---|
| 374 | ಪಣಃ | ೯೫೬ | 795 | ಸಮಾಜ ನಮ್ಮ ಅಪರಾಧವನ್ನು ಮರೆತು ಬಿಡುವುದು. |
| 375 | ಪದಮ್ | ೭೪೦ | 612 | -- |
| 376 | ಪದ್ಮಗರ್ಭಃ | ೩೫೧ | 304 | -- |
| 377 | ಪದ್ಮನಾಭಃ | ೪೮ | 40 | ನಾಭಿಯ ಗಾಂಭೀರ್ಯದ ಪ್ರಾಪ್ತಿ |
| 378 | ಪದ್ಮನಾಭಃ | ೧೯೮ | 167 | -- |
| 379 | ಪದ್ಮನಾಭಃ | ೩೪೯ | 302 | -- |
| 380 | ಪದ್ಮನಿಭೇಕ್ಷಣಃ | ೩೪೮ | 301 | -- |
| 381 | ಪದ್ಮೀ | ೩೪೭ | 300 | ದುಷ್ಟರ ಪ್ರಭಾವಕ್ಕೊಳಗಾಗಿ ಎಸಗಲ್ಪಡುವ ಅಪರಾಧಗಳಿಗೆ ಕ್ಷಮೆ. |
| 382 | ಪರಮ್ | ೬೪ | 54 | -- |
| 383 | ಪರಮಸ್ಪಷ್ಟಃ | ೩೯೩ | 334 | -- |
| 384 | ಪರಮಾತ್ಮಾ | ೧೧ | 11 | -- |
| 385 | ಪರಮೇಶ್ವರಃ | ೩೮೦ | 324 | -- |
| 386 | ಪರಮೇಷ್ಠೀ | ೪೨೨ | 359 | ದೇವರು ಹೃದಯ ಗುಹೆಯಲ್ಲಿ ವಿಶೇಷವಾಗಿ ನೆಲೆಸುವನು. |
| 387 | ಪರರ್ದ್ಧಿಃ | ೩೯೨ | 333 | ಉತ್ತಮ ಸ್ಥಾನದ ಲಾಭ |
| 388 | ಪರಾಯಣಃ | ೫೯೩ | 488 | ಮರಣಕಾಲದಲ್ಲಿ ವಿಶೇಷವಾಗಿ ದೇವರ ಸ್ಮರಣೆ |
| 389 | ಪರಿಗ್ರಹಃ | ೪೨೩ | 360 | ಕಷ್ಟಗಳು, ಸಮಸ್ಯೆಗಳು ಸಂಭವಿಸಿದಲ್ಲೆಲ್ಲ ದೇವರ ವಿಶೇಷ ದರ್ಶನ. |
| 390 | ಪರ್ಜನ್ಯಃ | ೮೧೮ | 682 | -- |
| 391 | ಪರ್ಯವಸ್ಥಿತಃ | ೯೩೦ | 777 | -- |
| 392 | ಪವನಃ | ೨೯೩ | 259 | ಇಂದ್ರಿಯಾಭಿಮಾನಿಗಳನ್ನು ಪ್ರೇರಿಸಿ ಕೊನೆಯವರೆಗೂ ಅವರ ಮೂಲಕ ರಕ್ಷಣೆಯನ್ನು ಕೊಡಿಸುವಿಕೆ. |
| 393 | ಪವಿತ್ರಂ | ೬೨ | 53 | -- |

| | | | | |
|---|---|---|---|---|
| 394 | ಪಾಪನಾಶನಃ | ೮೨೧ | 821 | ಪಾಪವನ್ನು ಪರಿಹರಿಸಿ, ಆದರಿಂದ ಅನುಭವಿಸಬೇಕಾದ ದುಃಸ್ಥಿತಿ ಯನ್ನು ದೂರ ಮಾಡುವಿಕೆ. |
| 395 | ಪಾವನಃ | ೨೬೦ | 260 | -- |
| 396 | ಪಾವನಃ | ೬೮೩ | 683 | -- |
| 397 | ಪುಂಡರೀಕಾಕ್ಷಃ | ೯೭ | 97 | ಯಾವುದೇ ವ್ಯಕ್ತಿಯ, ವಸ್ತುವಿನ ದರ್ಶನದಿಂದ ರಾಗದ್ವೇಷಗಳ ಕಾಲುಷ್ಯ ಅಂಟುವುದಿಲ್ಲ. |
| 398 | ಪುಣ್ಯಕೀರ್ತಿಃ | ೫೭೨ | 572 | -- |
| 399 | ಪುಣ್ಯಶ್ರವಣಕೀರ್ತನಃ | ೭೬೮ | 768 | -- |
| 400 | ಪುಣ್ಯಃ | ೫೭೧ | 571 | -- |
| 401 | ಪುಣ್ಯಃ | ೭೭೧ | 771 | -- |
| 402 | ಪುನರ್ವಸುಃ | ೧೩೨ | 132 | ಸ್ಫೂರ್ತಿ, ಉತ್ಸಾಹ ತುಂಬಲು ದೇವರು ಬೇರೆ ಬೇರೆ ರೂಪದಿಂದ ಪ್ರವೇಶಿಸುವನು. |
| 403 | ಪುರಂದರಃ | ೨೯೨ | 292 | ಬ್ರಹ್ಮರಂಧ್ರದ ಮೂಲಕ ಪ್ರಾಣೋತ್ಕ್ರಮಣದ ಲಾಭ |
| 404 | ಪುರಾತನಃ | ೪೨೧ | 421 | -- |
| 405 | ಪುರುಜಿತ್ | ೪೨೭ | 427 | -- |
| 406 | ಪುರುಷಃ | ೧೪ | 14 | -- |
| 407 | ಪುರುಷಃ | ೩೪೭ | 347 | -- |
| 408 | ಪುರುಷೋತ್ತಮಃ | ೨೧ | 21 | -- |
| 409 | ಪುರುಸತ್ತಮಃ | ೪೨೮ | 428 | -- |
| 410 | ಪುಷ್ಕರಾಕ್ಷಃ | ೩೩ | 33 | -- |
| 411 | ಪುಷ್ಕರಾಕ್ಷಃ | ೪೬೭ | 467 | ನೂತನ ಚೈತನ್ಯದ ಪ್ರಾಪ್ತಿ |
| 412 | ಪುಷ್ಟಃ | ೩೩೬ | 336 | -- |
| 413 | ಪುಷ್ಪಹಾಸಃ | ೭೯೦ | 790 | -- |
| 414 | ಪೂತಾತ್ಮಾ | ೧೦ | 10 | ಪಾವಿತ್ರ್ಯದ ಸಿದ್ಧಿ. |
| 415 | ಪೂರಯಿತಾ | ೫೭೧ | 571 | -- |
| 416 | ಪೂರ್ಣಃ | ೫೭೦ | 570 | -- |
| 417 | ಪೃಥುಃ | ೩೫೧ | 351 | -- |

| | | | | |
|---|---|---|---|---|
| 418 | ಪೇಶಲಃ | ೯೧೫ | 761 | -- |
| 419 | ಪ್ರಕಾಶನಃ | ೨೭೬ | 240 | ನಮ್ಮ ಮೂಲಕ ವಿಶಿಷ್ಟ ಸಾಧನೆ ನಡೆಯುವುದಕ್ಕೆ ಬೇಕಾದ ಪ್ರಕಾಶವನ್ನೂ ಶಕ್ತಿಯನ್ನೂ ನೀಡುವನು. |
| 420 | ಪ್ರಕಾಶಾತ್ಮಾ | ೨೭೮ | 242 | -- |
| 421 | ಪ್ರಗ್ರಹಃ | ೭೬೯ | 639 | -- |
| 422 | ಪ್ರಜಾಗರಃ | ೯೫೧ | 792 | ತಾತ್ವಿಕ ವಿಚಾರಗಳಲ್ಲಿ ಜಾಗೃತಿ ಹಾಗೂ ನಿದ್ರೆ, ಸ್ವಪ್ನ ಕೊಡುವ ದೇವರ ಬಗ್ಗೆ ಎಚ್ಚರಿಕೆ. |
| 423 | ಪ್ರಜಾಪತಿಃ | ೭೦ | 58 | -- |
| 424 | ಪ್ರಜಾಪತಿಃ | ೧೯೯ | 168 | ಗರ್ಭದಿಂದ ಸುರಕ್ಷಿತವಾಗಿ ಶಿಶು ಹೊರಹೊಮ್ಮುವುದು. |
| 425 | ಪ್ರಜಾಭವಃ | ೯೦ | 76 | -- |
| 426 | ಪ್ರಣವಃ | ೪೧೨ | 350 | -- |
| 427 | ಪ್ರಣವಃ | ೯೫೫ | 794 | -- |
| 428 | ಪ್ರತರ್ದನಃ | ೫೯ | 50 | -- |
| 429 | ಪ್ರತಾಪನಃ | ೨೮೦ | 243 | -- |
| 430 | ಪ್ರತಿಷ್ಠಿತಃ | ೩೨೯ | 285 | -- |
| 431 | ಪ್ರತ್ಯಯಃ | ೯೪ | 80 | -- |
| 432 | ಪ್ರಥಿತಃ | ೩೨೨ | 281 | -- |
| 433 | ಪ್ರದ್ಯುಮ್ನಃ | ೬೪೯ | 532 | ಶರೀರದಲ್ಲಿ ಕೊನೆಯವರೆಗೂ ಪ್ರತಿಯೊಂದು ಇಂದ್ರಿಯವೂ ಕ್ರಿಯಾಶೀಲವಾಗಿರುವಂತಹ ಪ್ರಕೃಷ್ಟತ್ವದ ಸಿದ್ಧಿ. |
| 434 | ಪ್ರಧಾನಪುರುಷೇಶ್ವರಃ | ೨೦ | 18 | -- |
| 435 | ಪ್ರಪಿತಾಮಹಃ | ೯೬೭ | 803 | ವಂಶ ಬೆಳೆಯುತ್ತ ಮುದುವರಿಯುವುದು. |
| 436 | ಪ್ರಭವಃ | ೩೪ | 30 | -- |
| 437 | ಪ್ರಭುಃ | ೩೫ | 30 | -- |
| 438 | ಪ್ರಭುಃ | ೩೦೧ | 266 | -- |
| 439 | ಪ್ರಭೂತಃ | ೬೦ | 50 | -- |

| | | | | |
|---|---|---|---|---|
| 440 | ಪ್ರಮಾಣಮ್ | ೪೩೧ | 367 | -- |
| 441 | ಪ್ರಮಾಣಮ್ | ೯೫೭ | 796 | -- |
| 442 | ಪ್ರಮೋದನಃ | ೫೩೦ | 444 | -- |
| 443 | ಪ್ರಸನ್ನಾತ್ಮಾ | ೨೪೦ | 206 | ಪ್ರಸನ್ನತೆಯ ಸಿದ್ಧಿ |
| 444 | ಪ್ರಾಗ್ವಂಶಃ | ೮೪೯ | 705 | -- |
| 445 | ಪ್ರಾಣಜೀವನಃ | ೯೬೦ | 799 | ದೇಹತ್ಯಾಗದವರೆಗೂ ಇಂದ್ರಿಯಗಳಲ್ಲಿ ಚೈತನ್ಯ |
| 446 | ಪ್ರಾಣದಃ | ೬೬ | 55 | -- |
| 447 | ಪ್ರಾಣದಃ | ೩೨೪ | 281 | -- |
| 448 | ಪ್ರಾಣದಃ | ೪೧೧ | 350 | -- |
| 449 | ಪ್ರಾಣದಃ | ೯೫೪ | 794 | -- |
| 450 | ಪ್ರಾಣನಿಲಯಃ | ೯೫೮ | 798 | -- |
| 451 | ಪ್ರಾಣಭೃತ್ | ೯೫೯ | 798 | -- |
| 452 | ಪ್ರಾಣಃ | ೬೭ | 57 | -- |
| 453 | ಪ್ರಾಣಃ | ೩೨೩ | 281 | -- |
| 454 | ಪ್ರಾಣಃ | ೪೧೦ | 349 | -- |
| 455 | ಪ್ರಾಂಶುಃ | ೧೫೫ | 134 | -- |
| 456 | ಪ್ರಿಯಾರ್ಹಃ | ೮೭೫ | 726 | ಮನೆಯಲ್ಲೂ, ಸಮಾಜದಲ್ಲೂ ಪರಸ್ಪರವಾಗಿ ಪ್ರಿಯರೆನಿಸುವಂತೆ ಮಾಡುವನು. |
| 457 | ಪ್ರೀತಿವರ್ಧನಃ | ೮೭೭ | 728 | -- |
| | (ಬ) | | | |
| 458 | ಬಭ್ರುಃ | ೧೧೭ | 103 | -- |
| 459 | ಬಹುಶಿರಾಃ | ೧೧೬ | 102 | -- |
| 460 | ಬೀಜಮವ್ಯಯಮ್ | ೪೩೨ | 368 | ಹಿಗ್ಗದೆ ಕುಗ್ಗದೆ ನಿರ್ವಿಕಾರವಾಗಿ ಬದುಕುವ ಸ್ಥಿತಿ |
| 461 | ಬೃಹದ್ಭಾನುಃ | ೩೩೬ | 290 | ನಮ್ಮ ಮೂಲಕ ಉಳಿದವರಿಗೆ ಬೆಳಕು ಚೆಲ್ಲಲ್ಪಡುವುದು. |
| 462 | ಬೃಹದ್ರೂಪಃ | ೨೭೪ | 238 | -- |
| 463 | ಬ್ರಹ್ಮ | ೬೭೨ | 550 | -- |
| 464 | ಬ್ರಹ್ಮಕೃದ್‌ಬ್ರಹ್ಮಾ | ೬೭೧ | 549 | -- |

| | | | | |
|---|---|---|---|---|
| 465 | ಬ್ರಹ್ಮಜ್ಞಃ | ೬೭೭ | 555 | -- |
| 466 | ಬ್ರಹ್ಮಣ್ಯಃ | ೬೭೦ | 548 | -- |
| 467 | ಬ್ರಹ್ಮವಿದ್ | ೬೭೪ | 551 | -- |
| 468 | ಬ್ರಹ್ಮವಿವರ್ಧನಃ | ೬೭೩ | 550 | ಶಾಸ್ತ್ರಜ್ಞಾನವನ್ನು ಚಿಂತನ ಮನನಗಳಿಂದ ಬೆಳೆಸಿಕೊಳ್ಳಲು ಬೇಕಾದ ಸ್ಫೂರ್ತಿ |
| 469 | ಬ್ರಹ್ಮಿ | ೬೭೬ | 554 | ನಮ್ಮ ಅವಯವಗಳೂ ಪೂರ್ಣವೆನಿಸಬಲ್ಲವು. |
| 470 | ಬ್ರಾಹ್ಮಣಪ್ರಿಯಃ | ೬೭೮ | 555 | -- |
| 471 | ಬ್ರಾಹ್ಮಣಃ | ೬೭೫ | 553 | -- |
| | (ಭ) | | | |
| 472 | ಭಕ್ತವತ್ಸಲಃ | ೭೪೫ | 615 | -- |
| 473 | ಭಗವಾನ್ | ೫೬೫ | 469 | -- |
| 474 | ಭಗಹಾ | ೫೬೬ | 469 | -- |
| 475 | ಭಯಕೃದ್ಭಯನಾಶನಃ | ೮೪೧ | 700 | -- |
| 476 | ಭಯಾಪಹಃ | ೯೩೪ | 781 | -- |
| 477 | ಭರ್ತಾ | ೩೩ | 29 | -- |
| 478 | ಭಾನುಃ | ೧೨೬ | 251 | -- |
| 479 | ಭಾನುಃ | ೨೮೬ | 84 | ಇಂದ್ರಿಯಸಂಪತ್ತಿನಿಂದ ಕೂಡಿದ ಶರೀರದ ಸ್ಥಿತಿ. |
| 480 | ಭಾರಭೃತ್ | ೮೫೧ | 707 | -- |
| 481 | ಭಾವನಃ | ೩೨ | 28 | ಶಬ್ದದಾರಿದ್ರ್ಯದ ದೂರೀಕರಣ |
| 482 | ಭಾವಃ | ೭ | 8 | -- |
| 483 | ಭಾಸ್ಕರದ್ಯುತಿಃ | ೨೮೪ | 248 | ವಿಸ್ಮರಣೆಯನ್ನು ಪರಿಹರಿಸಿ ನೆನಪಿಸಿಕೊಡುವವನು. |
| 484 | ಭಿಷಕ್ | ೫೮೮ | 485 | -- |
| 485 | ಭೀಮಪರಾಕ್ರಮಃ | ೯೪೭ | 788 | -- |
| 486 | ಭೀಮಃ | ೩೬೦ | 310 | -- |
| 487 | ಭೀಮಃ | ೯೪೬ | 788 | -- |
| 488 | ಭುಜಗೋತ್ತಮಃ | ೧೯೫ | 166 | -- |
| 489 | ಭೂಗರ್ಭಃ | ೭೨ | 59 | -- |

| | | | | |
|---|---|---|---|---|
| 490 | ಭೂತಕೃತ್ | ೫ | 8 | -- |
| 491 | ಭೂತಕೃತ್ | ೫೦೪ | 423 | -- |
| 492 | ಭೂತಭವ್ಯಭವತ್ಪ್ರಭುಃ | ೪ | 8 | -- |
| 493 | ಭೂತಭವ್ಯಭವನ್ನಾಥಃ | ೨೯೨ | 258 | -- |
| 494 | ಭೂತಭಾವನಃ | ೯ | 9 | -- |
| 495 | ಭೂತಭೃತ್ | ೬ | 8 | -- |
| 496 | ಭೂತಮಹೇಶ್ವರಃ | ೪೯೨ | 412 | -- |
| 497 | ಭೂತಾತ್ಮಾ | ೮ | 9 | -- |
| 498 | ಭೂತಾದಿಃ | ೨೯ | 25 | -- |
| 499 | ಭೂತಾವಾಸಃ | ೭೧೬ | 587 | ಸರಿಯಾದ ತಿಳುವಳಿಕೆಯ ಲಾಭ. |
| 500 | ಭೂತಿಃ | ೬೩೯ | 525 | -- |
| 501 | ಭೂರಿದಕ್ಷಿಣಃ | ೫೦೭ | 424 | -- |
| 502 | ಭೂರ್ಭುವಃಸ್ವಸ್ತರುಃ | ೯೬೪ | 801 | -- |
| 503 | ಭೂರ್ಭುವೋಲಕ್ಷ್ಮೀಃ | ೯೪೧ | 785 | -- |
| 504 | ಭೂಶಯಃ | ೬೩೭ | 523 | -- |
| 505 | ಭೂಷಣಃ | ೬೩೮ | 524 | ಸಾಧನಾನುಷ್ಠಾನಕ್ಕೆ ಉಪಯುಕ್ತವೆನಿಸುವ ಶರೀರದ ಲಾಭ. |
| 506 | ಭೂಃ | ೪೪೦ | 374 | ಹೊಣೆಗಾರಿಕೆ, ಕರ್ತವ್ಯಗಳ ನಿರ್ವಹಣೆಯೊಂದಿಗೆ ಚೆನ್ನಾಗಿ ಇರುವಿಕೆ. |
| 507 | ಭೇಷಜಮ್ | ೫೮೭ | 485 | -- |
| 508 | ಭೋಕ್ತಾ | ೧೪೫ | 127 | -- |
| 509 | ಭೋಕ್ತಾ | ೫೦೫ | 423 | -- |
| 510 | ಭೋಜನಮ್ | ೧೪೪ | 126 | -- |
| 511 | ಭ್ರಾಜಿಷ್ಣುಃ | ೧೪೩ | 125 | -- |
| | (ಮ) | | | |
| 512 | ಮಂಗಲಂ | ೬೩ | 54 | -- |
| 513 | ಮಧುಸೂದನಃ | ೭೪ | 61 | -- |
| 514 | ಮಧುಃ | ೧೭೦ | 149 | -- |
| 515 | ಮನುಃ | ೫೧ | 43 | -- |

| | | | | |
|---|---|---|---|---|
| 516 | ಮನೋಜವಃ | ೭೯೮ | 574 | -- |
| 517 | ಮನೋಹರಃ | ೪೬೪ | 390 | ಇನ್ನೊಬ್ಬರ ಮನಸ್ಸನ್ನು ಸೆಳೆಯುವಷ್ಟು ಆಕರ್ಷಕವಾಗಿ ಮಾತು, ಕೃತಿ ಮೂಡಿ ಬರುವುದು. |
| 518 | ಮಂತ್ರಃ | ೨೮೨ | 246 | -- |
| 519 | ಮರೀಚಿಃ | ೧೯೧ | 163 | ನಮ್ಮ ಸಮಸ್ಯೆಗಳಿಗೆ ದಾರಿ ತೋರುವ ಬೆಳಕು ಆಗಿ ಅನುಗ್ರಹಿಸುವನು. |
| 520 | ಮಹರ್ದ್ಧಿಃ | ૩೫೨ | 305 | -- |
| 521 | ಮಹರ್ಷಿಃ | ೫೩೬ | 448 | -- |
| 522 | ಮಹಾಕರ್ಮಾ | ೬೮೦ | 557 | -- |
| 523 | ಮಹಾಕರ್ಮಾ | ೭೯೫ | 660 | -- |
| 524 | ಮಹಾಕೋಶಃ | ೪೩೫ | 372 | ಶಬ್ದಗಳು ಬಾಯಿಯಿಂದ ನಿರರ್ಗಳವಾಗಿ ಹೊರಹೊಮ್ಮುವವು. |
| 525 | ಮಹಾಕ್ರತುಃ | ೬೮೩ | 560 | -- |
| 526 | ಮಹಾಕ್ರಮಃ | ೬೭೯ | 556 | ನಾವು ಪ್ರಸ್ತುತಪಡಿಸುವ ಕ್ರಮ ಮಹಾಕ್ರಮವಾಗಿ ಮೆರೆಯಬಲ್ಲದು. |
| 527 | ಮಹಾಕ್ಷಃ | ૩೫೬ | 306 | -- |
| 528 | ಮಹಾಗರ್ತಃ | ೮೧೨ | 676 | -- |
| 529 | ಮಹಾತಪಾಃ | ೧೨૩ | 108 | -- |
| 530 | ಮಹಾತೇಜಾಃ | ೬೮೧ | 558 | -- |
| 531 | ಮಹಾದೇವಃ | ೪೯೪ | 414 | -- |
| 532 | ಮಹಾದ್ಯುತಿಃ | ೧೭೮ | 155 | -- |
| 533 | ಮಹಾದ್ರಿಧೃಕ್ | ೧೮೨ | 157 | -- |
| 534 | ಮಹಾಧನಃ | ೪૩೭ | 373 | -- |
| 535 | ಮಹಾನ್ | ೮೪೫ | 702 | -- |
| 536 | ಮಹಾನಿಧಿಃ | ೮೧೪ | 677 | -- |
| 537 | ಮಹಾಬಲಃ | ೧೭೪ | 151 | -- |
| 538 | ಮಹಾಬುದ್ಧಿಃ | ೧೭೫ | 152 | ಸಮಸ್ಯೆಗಳನ್ನು ಪರಿಹರಿಸಬಲ್ಲ ಚುರುಕುತನ. |

| | | | | |
|---|---|---|---|---|
| 539 | ಮಹಾಭಾಗಃ | ३८३ | 317 | ಮಾನಸಿಕ ನೆಮ್ಮದಿಯಿಂದ ಬದುಕು. |
| 540 | ಮಹಾಭೂತಃ | ೬೧೩ | 676 | ಒಂದು ಹಂತದಲ್ಲಿ ಸ್ವಾತಂತ್ರ್ಯದ ಸಿದ್ಧಿ. |
| 541 | ಮಹಾಭೋಗಃ | ४३८ | 372 | ಅನಿಷಿದ್ಧ ಸುಖಸವಲತ್ತಿನ ಪ್ರಾಪ್ತಿಯೊಂದಿಗೆ ದೇವರ ಸ್ತುತಿ. |
| 542 | ಮಹಾಮಖಃ | ४४೨ | 375 | ಜೀವನಯಜ್ಞಕ್ಕೆ ಮಹತ್ತ್ವದ ಸಿದ್ಧಿ. |
| 543 | ಮಹಾಮನಾಃ | ೫೬४ | 468 | ಆತಿಥ್ಯದಲ್ಲಿ ಲೋಪ ದೋಷಗಳನ್ನು ಗಣನೆಗೆ ತಂದುಕೊಳ್ಳದೆ ನಮ್ಮ ಬಗ್ಗೆ ಮಹಾಮನಸ್ಕರಾಗುವುದು. |
| 544 | ಮಹಾಮಾಯಃ | ೧೭೨ | 150 | ಪ್ರಕೃತಿ ವಿಕೋಪದ ದುಷ್ಪರಿಣಾಮ ಆಗದಂತೆ ಮೆಟ್ಟಿ ನಿಲ್ಲುವಿಕೆ. |
| 545 | ಮಹಾಮೂರ್ತಿಃ | ೭೨೬ | 595 | -- |
| 546 | ಮಹಾಯಜ್ಞಃ | ೬೮೫ | 561 | -- |
| 547 | ಮಹಾಯಜ್ವಾ | ೬೮४ | 561 | ನಮ್ಮ ಯಜಮಾನಿಕೆಯಲ್ಲಿ ಧಾರ್ಮಿಕ ಕಾರ್ಯಕ್ರಮಗಳು, ಸಮಾರಂಭಗಳು ನಡೆಯುವವು. |
| 548 | ಮಹಾರ್ಹಃ | ೫೨೭ | 441 | -- |
| 549 | ಮಹಾವರಾಹಃ | ೫४४ | 454 | ಜೀವನದಲ್ಲಿ ಯಾರೂ ವಿಚಾರಿಸುವವರೇ ಇಲ್ಲ ಎಂದಾಗುವುದೇ ಇಲ್ಲ. |
| 550 | ಮಹಾವೀರ್ಯಃ | ೧೭೬ | 153 | -- |
| 551 | ಮಹಾಶಕ್ತಿಃ | ೧೭೭ | 154 | -- |
| 552 | ಮಹಾಶನಃ | ३೦೫ | 270 | -- |
| 553 | ಮಹಾಶೃಂಗಃ | ೫४२ | 453 | -- |
| 554 | ಮಹಾಸ್ವನಃ | ४೧ | 35 | -- |
| 555 | ಮಹಾಹವಿಃ | ೬೮೬ | 562 | ಸಮಾಜದಲ್ಲಿ ಧಾರ್ಮಿಕ, ಆಧ್ಯಾತ್ಮಿಕ ಕಾರ್ಯಕ್ರಮಗಳಿಗೆ ಎಲ್ಲರಿಂದ ಆಮಂತ್ರಿಸಲ್ಪಡುವ ವ್ಯಕ್ತಿತ್ವದ ಸಿದ್ಧಿ. |

| | | | | |
|---|---|---|---|---|
| 556 | ಮಹಾಹ್ರದಃ | ೮೧೧ | 675 | -- |
| 557 | ಮಹೀಧರಃ | ೩೨೦ | 279 | -- |
| 558 | ಮಹೀಧರಃ | ೩೭೨ | 316 | ನಿಂತ ನೆಲದಲ್ಲಿ ಆದರ ದೊರಕುವಂತೆ ನಮ್ಮ ಉದ್ಧಾರ ನಡೆಯುವಂತೆ ಆಗುವುದು. |
| 559 | ಮಹೀಭರ್ತಾ | ೧೮೪ | 159 | -- |
| 560 | ಮಹೇಜ್ಯಃ | ೪೫೦ | 381 | -- |
| 561 | ಮಹೇಂದ್ರಃ | ೨೭೦ | 234 | -- |
| 562 | ಮಹೇಷ್ವಾಸಃ | ೧೮೩ | 158 | -- |
| 563 | ಮಹೋತ್ಸಾಹಃ | ೧೭೩ | 151 | ಉತ್ತಮ ಸಾಧನೆಗಳಲ್ಲಿ ಉತ್ಸಾಹದ ವೃದ್ಧಿ |
| 564 | ಮಹೋದಧಿಶಯಃ | ೫೨೪ | 439 | ಎಲ್ಲೇ, ಹೇಗೆಯೇ ಇದ್ದರೂ ಶಾಸ್ತ್ರಚಿಂತನೆಗೆ ಸೌಕರ್ಯ. |
| 565 | ಮಹೋರಗಃ | ೬೮೨ | 559 | -- |
| 566 | ಮಾಧವಃ | ೭೩ | 60 | -- |
| 567 | ಮಾಧವಃ | ೧೬೯ | 148 | -- |
| 568 | ಮಾಧವಃ | ೭೪೪ | 615 | -- |
| 569 | ಮಾನದಃ | ೭೫೭ | 628 | -- |
| 570 | ಮಾನ್ಯಃ | ೭೫೮ | 629 | -- |
| 571 | ಮಾರ್ಗಃ | ೩೬೮ | 314 | -- |
| 572 | ಮಾರ್ಗಃ | ೪೦೦ | 340 | -- |
| 573 | ಮುಕುಂದಃ | ೫೨೦ | 434 | ನಿರ್ಲಿಪ್ತತೆಯ ಸಿದ್ಧಿ |
| 574 | ಮುಕ್ತಾನಾಂ ಪರಮಾಗತಿಃ | ೧೨ | 12 | -- |
| 575 | ಮೇದಿನೀಪತಿಃ | ೫೩೯ | 450 | -- |
| 576 | ಮೇಧಜಃ | ೭೬೨ | 633 | -- |
| 577 | ಮೇಧಾವೀ | ೭೮ | 65 | -- |
| | (ಯ) | | | |
| 578 | ಯಜ್ಞಕೃತ್ | ೯೭೪ | 809 | -- |
| 579 | ಯಜ್ಞಗುಹ್ಯಮ್ | ೯೭೯ | 812 | -- |
| 580 | ಯಜ್ಞಪತಿಃ | ೯೬೯ | 805 | ಸಂಧಾನ ಮುರಿದು ಬೀಳದೆ ಮುಂದುವರಿಯುವಂತಾಗುವುದು. |
| 581 | ಯಜ್ಞಭುಕ್ | ೯೭೬ | 810 | -- |

| | | | | |
|---|---|---|---|---|
| 582 | ಯಜ್ಞಭೃತ್ | ೯೭೩ | 808 | ಮನಸ್ಸಿನಲ್ಲಿ ಒಳ್ಳೆಯ ಕಾರ್ಯಗಳ ಚಿಂತನೆ ನಡೆಯುವುದು. |
| 583 | ಯಜ್ಞವಾಹನಃ | ೯೭೨ | 807 | -- |
| 584 | ಯಜ್ಞಸಾಧನಃ | ೯೭೭ | 810 | ಸತ್ಕಾರ್ಯಗಳಿಗೆ ಬೇಕಾದ ಸಲಕರಣೆಗಳಿಗೆ ಕೊರತೆಬಾರದು. |
| 585 | ಯಜ್ಞಃ | ೪೪೮ | 379 | ಮನದಲ್ಲಿ ಏನಿದೆ ಎಂಬ ತಿಳುವಳಿಕೆ. |
| 586 | ಯಜ್ಞಃ | ೯೬೮ | 804 | ವೈಮನಸ್ಯದ ಪರಿಹಾರದೊಂದಿಗೆ ಮಾನಸಿಕವಾಗಿ ಬೆರೆಯುವಿಕೆ. |
| 587 | ಯಜ್ಞಾಂಗಃ | ೯೭೧ | 806 | ಬೇರೆ ಬೇರೆ ಯಜ್ಞಗಳು ನಮ್ಮ ಮೂಲಕ ನಡೆಯುವಂತಾಗುವುದು |
| 588 | ಯಜ್ಞಾಂತಕೃತ್ | ೯೭೮ | 811 | -- |
| 589 | ಯಜ್ಞೀ | ೯೭೫ | 809 | -- |
| 590 | ಯಜ್ವಾ | ೯೭೦ | 805 | -- |
| 591 | ಯತ್ | ೭೩೮ | 611 | ಅದೇ ಇದು ಎಂದು ಸ್ಮರಿಸಿಕೊಳ್ಳಲಾಗದ ನ್ಯೂನತೆಯ ಪರಿಹಾರ. |
| 592 | ಯದುಶ್ರೇಷ್ಠಃ | ೭೧೩ | 584 | ಅಧ್ಯಾಪಕರಿಗೆ ತಮ್ಮ ಕರ್ತವ್ಯನಿರ್ವಹಣೆಯಲ್ಲಿ ಯಶಸ್ಸು. |
| 593 | ಯಮಃ | ೧೬೪ | 143 | ಭಗವಂತನಿಂದ ನಮ್ಮ ತಿದ್ದುವಿಕೆ |
| 594 | ಯಮಃ | ೮೬೯ | 722 | -- |
| 595 | ಯುಗಾದಿಕೃತ್ | ೩೦೨ | 267 | ಜೀವನದ ಕೆಟ್ಟ ತಿರುವು ಬದಲಾಗಿ ಒಳ್ಳೆಯ ತಿರುವು ಸಿದ್ಧಿಸುವುದು. |
| 596 | ಯುಗಾವರ್ತಃ | ೩೦೩ | 268 | -- |
| 597 | ಯೋಗವಿದಾಂನೇತಾ | ೧೯ | 18 | -- |
| 598 | ಯೋಗಃ | ೧೮ | 18 | ಯಾರ ಮೂಲಕವಾದರೂ ಉದ್ದೇಶದ ಈಡೇರುವಿಕೆ. |
| 599 | ಯೋಗೀ | ೮೫೩ | 709 | ಆದಷ್ಟು ತಿಳಿದು ಮಾಡುವ ಪ್ರವೃತ್ತಿಯ ಸಿದ್ಧಿ. |
| 600 | ಯೋಗೀಶಃ | ೮೫೪ | 710 | ತಿಳಿದು ನಡೆಸುವಂತೆ ನಮ್ಮನ್ನು ಪ್ರೇರಿಸುವನು. |

| | | | | |
|---|---|---|---|---|
| | (ರ) | | | |
| 601 | ರಕ್ಷಣಃ | ೯೨೭ | 775 | -- |
| 602 | ರಣಪ್ರಿಯಃ | ೬೯೨ | 569 | -- |
| 603 | ರತ್ನಗರ್ಭಃ | ೪೭೬ | 400 | ಮುಖದಲ್ಲಿ ಯಾವಾಗಲೂ ನಗುವಿನ ಕಳೆ |
| 604 | ರತ್ನನಾಭಃ | ೮೦೧ | 666 | ಶ್ರೀಮಂತಿಕೆಯ ಮೂಲಕ ಸುಖದ ಲಾಭ |
| 605 | ರಥಾಂಗಪಾಣಿಃ | ೯೯೫ | 825 | -- |
| 606 | ರವಿಲೋಚನಃ | ೮೮೭ | 735 | -- |
| 607 | ರವಿಃ | ೮೮೩ | 733 | -- |
| 608 | ರಾಮಃ | ೩೯೭ | 337 | ಮುಖದಲ್ಲಿ ಆನಂದದ ಲಕ್ಷಣ ಕಾಣಿಸಿಕೊಳ್ಳುವುದು. |
| 609 | ರುಚಿರಾಂಗದಃ | ೯೪೩ | 786 | ಗರ್ಭದೊಳಗೆ ಬೆಳೆಯುತ್ತಿರುವ ಶಿಶುವಿಗೆ ಒಳ್ಳೆಯ ಅಂಗಗಳ ನಿರ್ಮಾಣ. |
| 610 | ರುದ್ರಃ | ೧೧೫ | 100 | -- |
| 611 | ರೋಹಿತಃ | ೩೬೭ | 314 | -- |
| | (ಲ) | | | |
| 612 | ಲಕ್ಷ್ಮೀವಾನ್ | ೩೬೪ | 312 | -- |
| 613 | ಲೋಕತ್ರಯಾಶ್ರಯಃ | ೬೨೨ | 512 | -- |
| 614 | ಲೋಕನಾಥಃ | ೭೪೩ | 614 | -- |
| 615 | ಲೋಕಬಂಧುಃ | ೭೪೨ | 613 | -- |
| 616 | ಲೋಕಸಾರಂಗಃ | ೭೯೧ | 658 | -- |
| 617 | ಲೋಕಸ್ವಾಮೀ | ೭೫೯ | 630 | -- |
| 618 | ಲೋಕಾಧಿಷ್ಠಾನಮದ್ಭುತಮ್ | ೮೯೫ | 743 | -- |
| 619 | ಲೋಕಾಧ್ಯಕ್ಷಃ | ೧೩೫ | 117 | -- |
| 620 | ಲೋಹಿತಾಕ್ಷಃ | ೫೮ | 49 | -- |
| | (ವ) | | | |
| 621 | ವತ್ಸರಃ | ೪೭೩ | 398 | ಅಧ್ಯಾಪಕರಿಗೂ ವಿದ್ಯಾರ್ಥಿಗಳಿಗೂ ತೃಪ್ತಿ. |
| 622 | ವತ್ಸಲಃ | ೪೭೪ | 399 | -- |
| 623 | ವತ್ಸೀ | ೪೭೫ | 400 | -- |

| | | | | |
|---|---|---|---|---|
| 582 | ಯಜ್ಞಭೃತ್ | ೯೭೩ | 808 | ಮನಸ್ಸಿನಲ್ಲಿ ಒಳ್ಳೆಯ ಕಾರ್ಯಗಳ ಚಿಂತನೆ ನಡೆಯುವುದು. |
| 583 | ಯಜ್ಞವಾಹನಃ | ೯೭೨ | 807 | -- |
| 584 | ಯಜ್ಞಸಾಧನಃ | ೯೭೭ | 810 | ಸತ್ಕಾರ್ಯಗಳಿಗೆ ಬೇಕಾದ ಸಲಕರಣೆಗಳಿಗೆ ಕೊರತೆಬಾರದು. |
| 585 | ಯಜ್ಞಃ | ೪೪೮ | 379 | ಮನದಲ್ಲಿ ಏನಿದೆ ಎಂಬ ತಿಳುವಳಿಕೆ. |
| 586 | ಯಜ್ಞಃ | ೯೬೮ | 804 | ವೈಮನಸ್ಯದ ಪರಿಹಾರದೊಂದಿಗೆ ಮಾನಸಿಕವಾಗಿ ಬೆರೆಯುವಿಕೆ. |
| 587 | ಯಜ್ಞಾಂಗಃ | ೯೭೧ | 806 | ಬೇರೆ ಬೇರೆ ಯಜ್ಞಗಳು ನಮ್ಮ ಮೂಲಕ ನಡೆಯುವಂತಾಗುವುದು |
| 588 | ಯಜ್ಞಾಂತಕೃತ್ | ೯೭೮ | 811 | -- |
| 589 | ಯಜ್ಞೀ | ೯೭೫ | 809 | -- |
| 590 | ಯಜ್ವಾ | ೯೭೦ | 805 | -- |
| 591 | ಯತ್ | ೭೩೮ | 611 | ಅದೇ ಇದು ಎಂದು ಸ್ಮರಿಸಿಕೊಳ್ಳಲಾಗದ ನ್ಯೂನತೆಯ ಪರಿಹಾರ. |
| 592 | ಯದುಶ್ರೇಷ್ಠಃ | ೭೧೩ | 584 | ಅಧ್ಯಾಪಕರಿಗೆ ತಮ್ಮ ಕರ್ತವ್ಯನಿರ್ವಹಣೆಯಲ್ಲಿ ಯಶಸ್ಸು. |
| 593 | ಯಮಃ | ೧೬೪ | 143 | ಭಗವಂತನಿಂದ ನಮ್ಮ ತಿದ್ದುವಿಕೆ |
| 594 | ಯಮಃ | ೮೬೯ | 722 | -- |
| 595 | ಯುಗಾದಿಕೃತ್ | ೩೦೨ | 267 | ಜೀವನದ ಕೆಟ್ಟ ತಿರುವು ಬದಲಾಗಿ ಒಳ್ಳೆಯ ತಿರುವು ಸಿದ್ಧಿಸುವುದು. |
| 596 | ಯುಗಾವರ್ತಃ | ೩೦೩ | 268 | -- |
| 597 | ಯೋಗವಿದಾಂನೇತಾ | ೧೯ | 18 | -- |
| 598 | ಯೋಗಃ | ೧೮ | 18 | ಯಾರ ಮೂಲಕವಾದರೂ ಉದ್ದೇಶದ ಈಡೇರುವಿಕೆ. |
| 599 | ಯೋಗೀ | ೮೫೩ | 709 | ಆದಷ್ಟು ತಿಳಿದು ಮಾಡುವ ಪ್ರವೃತ್ತಿಯ ಸಿದ್ಧಿ. |
| 600 | ಯೋಗೀಶಃ | ೮೫೪ | 710 | ತಿಳಿದು ನಡೆಸುವಂತೆ ನಮ್ಮನ್ನು ಪ್ರೇರಿಸುವನು. |

| | | | | |
|---|---|---|---|---|
| | (ರ) | | | |
| 601 | ರಕ್ಷಣಃ | ೯೨೭ | 775 | -- |
| 602 | ರಣಪ್ರಿಯಃ | ೬೯೨ | 569 | -- |
| 603 | ರತ್ನಗರ್ಭಃ | ೪೭೬ | 400 | ಮುಖದಲ್ಲಿ ಯಾವಾಗಲೂ ನಗುವಿನ ಕಳೆ |
| 604 | ರತ್ನನಾಭಃ | ೮೦೧ | 666 | ಶ್ರೀಮಂತಿಕೆಯ ಮೂಲಕ ಸುಖದ ಲಾಭ |
| 605 | ರಥಾಂಗಪಾಣಿಃ | ೯೯೫ | 825 | -- |
| 606 | ರವಿಲೋಚನಃ | ೮೮೭ | 735 | -- |
| 607 | ರವಿಃ | ೮೮೩ | 733 | -- |
| 608 | ರಾಮಃ | ೩೯೭ | 337 | ಮುಖದಲ್ಲಿ ಆನಂದದ ಲಕ್ಷಣ ಕಾಣಿಸಿಕೊಳ್ಳುವುದು. |
| 609 | ರುಚಿರಾಂಗದಃ | ೯೪೩ | 786 | ಗರ್ಭದೊಳಗೆ ಬೆಳೆಯುತ್ತಿರುವ ಶಿಶುವಿಗೆ ಒಳ್ಳೆಯ ಅಂಗಗಳ ನಿರ್ಮಾಣ. |
| 610 | ರುದ್ರಃ | ೧೧೫ | 100 | -- |
| 611 | ರೋಹಿತಃ | ೩೬೭ | 314 | -- |
| | (ಲ) | | | |
| 612 | ಲಕ್ಷ್ಮೀವಾನ್ | ೩೬೪ | 312 | -- |
| 613 | ಲೋಕತ್ರಯಾಶ್ರಯಃ | ೬೨೨ | 512 | -- |
| 614 | ಲೋಕನಾಥಃ | ೭೪೩ | 614 | -- |
| 615 | ಲೋಕಬಂಧುಃ | ೭೪೨ | 613 | -- |
| 616 | ಲೋಕಸಾರಂಗಃ | ೭೯೧ | 658 | -- |
| 617 | ಲೋಕಸ್ವಾಮೀ | ೭೫೯ | 630 | -- |
| 618 | ಲೋಕಾಧಿಷ್ಠಾನಮದ್ಭುತಮ್ | ೮೯೫ | 743 | -- |
| 619 | ಲೋಕಾಧ್ಯಕ್ಷಃ | ೧೩೫ | 117 | -- |
| 620 | ಲೋಹಿತಾಕ್ಷಃ | ೫೮ | 49 | -- |
| | (ವ) | | | |
| 621 | ವತ್ಸರಃ | ೪೭೩ | 398 | ಅಧ್ಯಾಪಕರಿಗೂ ವಿದ್ಯಾರ್ಥಿಗಳಿಗೂ ತೃಪ್ತಿ. |
| 622 | ವತ್ಸಲಃ | ೪೭೪ | 399 | -- |
| 623 | ವತ್ಸೀ | ೪೭೫ | 400 | -- |

| | | | | |
|---|---|---|---|---|
| 624 | ವನಮಾಲೀ | ೫೬೮ | 470 | -- |
| 625 | ವರದಃ | ೩೩೩ | 288 | -- |
| 626 | ವರಾಂಗಃ | ೭೪೮ | 618 | -- |
| 627 | ವರಾರೋಹಃ | ೧೨೨ | 107 | -- |
| 628 | ವರುಣಃ | ೫೬೦ | 465 | -- |
| 629 | ವರ್ಧನಃ | ೨೬೩ | 227 | -- |
| 630 | ವರ್ಧಮಾನಃ | ೨೬೪ | 228 | -- |
| 631 | ವಷಟ್ಕಾರಃ | ೩ | 7 | -- |
| 632 | ವಸುದಃ | ೨೭೧ | 235 | -- |
| 633 | ವಸುಪ್ರದಃ | ೭೦೧ | 577 | -- |
| 634 | ವಸುಪ್ರದಃ | ೭೦೨ | 577 | -- |
| 635 | ವಸುಮನಾಃ | ೧೦೬ | 96 | -- |
| 636 | ವಸುಮನಾಃ | ೭೦೫ | 579 | -- |
| 637 | ವಸುರೇತಾಃ | ೭೦೦ | 576 | -- |
| 638 | ವಸುಃ | ೧೦೫ | 90 | -- |
| 639 | ವಸುಃ | ೨೭೨ | 236 | -- |
| 640 | ವಸುಃ | ೭೦೪ | 578 | -- |
| 641 | ವಹ್ನಿಃ | ೨೩೬ | 204 | -- |
| 642 | ವಾಗ್ಮೀ | ೨೬೯ | 233 | ತೂಕದ ಮಾತುಗಾರಿಕೆ. |
| 643 | ವಾಚಸ್ಪತಿಃ | ೫೮೧ | 481 | -- |
| 644 | ವಾಚಸ್ಪತಿಃ | ೨೧೯ | 184 | -- |
| 645 | ವಾಜಸನಃ | ೮೦೪ | 669 | -- |
| 646 | ವಾಮನಃ | ೧೫೪ | 134 | ವಿರೋಧಿಗಳನ್ನು ದೂರ ಮಾಡಿ ಸಾಧನಾನುಷ್ಠಾನಕ್ಕೆ ಅನುಕೂಲತೆಯನ್ನು ಒದಗಿಸಿಕೊಡುವವನು. |
| 647 | ವಾಯುವಾಹನಃ | ೩೩೪ | 288 | -- |
| 648 | ವಾಯುವಾಹನಃ | ೮೬೦ | 714 | -- |
| 649 | ವಾಯುಃ | ೪೧೭ | 354 | ದೇವರ ತಿಳುವಳಿಕೆಯಿಂದ ಆಯುಷ್ಯದ ಸಾರ್ಥಕತೆ. |
| 650 | ವಾರುಣಃ | ೫೬೧ | 466 | -- |

| | | | | |
|---|---|---|---|---|
| 651 | ವಾಸವಾನುಜಃ | ೩೨೫ | 282 | -- |
| 652 | ವಾಸುದೇವಃ | ೩೩೫ | 290 | ಅನಾಯಾಸವಾಗಿ ಬದುಕುವಂತಾಗುವುದು. |
| 653 | ವಾಸುದೇವಃ | ೭೦೩ | 578 | -- |
| 654 | ವಾಸುದೇವಃ | ೭೧೭ | 588 | -- |
| 655 | ವಿಕರ್ತಾ | ೩೮೪ | 327 | -- |
| 656 | ವಿಕ್ರಮಃ | ೭೯ | 67 | -- |
| 657 | ವಿಕ್ರಮೀ | ೭೬ | 63 | -- |
| 658 | ವಿಕ್ಷರಃ | ೩೬೬ | 313 | -- |
| 659 | ವಿಜಯಃ | ೧೪೯ | 130 | -- |
| 660 | ವಿಜಿತಾತ್ಮಾ | ೬೨೮ | 516 | -- |
| 661 | ವಿದಾರಣಃ | ೪೬೭ | 393 | ಆನಂದದಿಂದ ನಗುನಗುತ್ತ ಗೃಹಸ್ಥಾಶ್ರಮದ ಪಾಲನೆ. |
| 662 | ವಿದಿಶಃ | ೯೩೭ | 782 | -- |
| 663 | ವಿದ್ವತ್ತಮಃ | ೯೧೯ | 766 | -- |
| 664 | ವಿಧಾತಾ | ೪೪ | 37 | -- |
| 665 | ವಿಧಾತಾ | ೪೮೭ | 408 | -- |
| 666 | ವಿಧೇಯಾತ್ಮಾ | ೬೨೯ | 517 | ಮಕ್ಕಳೇ ಮುಂತಾದವರು ನಮ್ಮ ಬಗ್ಗೆ ವಿನೀತರಾಗಿ ನಡೆದುಕೊಳ್ಳುವಂತಾಗುವುದು. |
| 667 | ವಿನಿಯೋಜ್ಯಃ | ೫೧೩ | 429 | ಪ್ರತಿಯೊಂದು ಚಟುವಟಿಕೆಗೂ ದೇವರು ಕೈಗೂಡಿಸಿರುವನೆಂಬ ಚಿಂತನೆಯಿಂದಾಗಿ ನಮ್ಮೆಲ್ಲ ಚಟುವಟಿಕೆಗಳಿಗೂ ಪೂಜೆಯ ಮೆರುಗು. |
| 668 | ವಿನಯಿತಾ | ೫೧೮ | 433 | -- |
| 669 | ವಿಭುಃ | ೨೪೩ | 209 | -- |
| 670 | ವಿಭುಃ | ೮೮೨ | 732 | -- |
| 671 | ವಿಮುಕ್ತಾತ್ಮಾ | ೪೫೫ | 385 | -- |
| 672 | ವಿರಜಃ | ೩೯೯ | 339 | -- |
| 673 | ವಿರಾಮಃ | ೩೯೮ | 338 | -- |
| 674 | ವಿರೋಚನಃ | ೮೮೪ | 733 | -- |

| | | | | |
|---|---|---|---|---|
| 675 | ವಿವಿಕ್ತಃ | ೨೬೫ | 230 | -- |
| 676 | ವಿಶಿಷ್ಟಃ | ೨೫೨ | 217 | ವೈಶಿಷ್ಟ್ಯದ ಗಳಿಕೆ. |
| 677 | ವಿಶಿಷ್ಟಃ | ૩೧೧ | 275 | -- |
| 678 | ವಿಶುದ್ಧಾತ್ಮಾ | ೬೪೫ | 529 | ಶುದ್ಧಿಯ ಸಂಪಾದನೆ |
| 679 | ವಿಶೋಕಃ | ೬೪೦ | 526 | ಕೊರಗದೆ ಬಾಳುವಿಕೆ. |
| 680 | ವಿಶೋಧನಃ | ೬೪೬ | 530 | -- |
| 681 | ವಿಶ್ರಾಮಃ | ೪೨೭ | 364 | -- |
| 682 | ವಿಶ್ರುತಾತ್ಮಾ | ೨೧೯ | 176 | -- |
| 683 | ವಿಶ್ವಮ್ | ೧ | 6 | -- |
| 684 | ವಿಶ್ವಕರ್ಮಾ | ೫೦ | 41 | -- |
| 685 | ವಿಶ್ವದಕ್ಷಿಣಃ | ೪೨೮ | 366 | -- |
| 686 | ವಿಶ್ವಧೃಕ್ | ೨೪೧ | 207 | ಯಾರಿಗೂ ಭಯಪಡದೆ ನಡೆದುಕೊಳ್ಳುವಿಕೆ. |
| 687 | ವಿಶ್ವಬಾಹುಃ | ૩೧೯ | 279 | ಯೋಗ್ಯತೆಗನುಗುಣವಾಗಿ ಎಲ್ಲವನ್ನೂ ಒಳಗೊಳ್ಳುವಿಕೆ. |
| 688 | ವಿಶ್ವಭುಕ್ | ೨೪೨ | 208 | -- |
| 689 | ವಿಶ್ವಮೂರ್ತಿಃ | ೭೨೫ | 594 | -- |
| 690 | ವಿಶ್ವಯೋನಿಃ | ೧೧೮ | 103 | -- |
| 691 | ವಿಶ್ವಯೋನಿಃ | ೧೫೧ | 131 | -- |
| 692 | ವಿಶ್ವರೇತಾಃ | ೮೯ | 75 | -- |
| 693 | ವಿಶ್ವಾತ್ಮಾ | ೨೨೮ | 195 | -- |
| 694 | ವಿಷಮಃ | ೭೫೧ | 621 | -- |
| 695 | ವಿಷ್ಣುಃ | ೨ | 6 | -- |
| 696 | ವಿಷ್ಣುಃ | ೨೬೦ | 225 | -- |
| 697 | ವಿಷ್ಣುಃ | ೬೬೬ | 545 | -- |
| 698 | ವಿಷ್ವಕ್ಸೇನಃ | ೧೨೭ | 110 | -- |
| 699 | ವಿಸ್ತಾರಃ | ೪೨೯ | 366 | -- |
| 700 | ವಿಹಾಯಸಗತಿಃ | ೮೭೮ | 729 | ಬದುಕಿನಲ್ಲಿ ನೇರ ನಡತೆ |
| 701 | ವೀತಭಯಃ | ೯೨೦ | 767 | -- |
| 702 | ವೀರಬಾಹುಃ | ೪೬೬ | 393 | -- |
| 703 | ವೀರಹಾ | ೧೬೮ | 147 | ತ್ಯಾಗಬುದ್ಧಿ ಬೆಳೆಯುವುದು. |

| | | | | |
|---|---|---|---|---|
| 704 | ವೀರಹಾ | ೬೫೦ | 620 | -- |
| 705 | ವೀರಹಾ | ೯೨೬ | 773 | ಸಾಧನಾನುಷ್ಠಾನ ನಡೆಸಲು ಆಗದೆ ನರಳುತ್ತಿರಬೇಕಾದ ದುಃಸ್ಥಿತಿಯ ಪರಿಹಾರ. |
| 706 | ವೀರಃ | ೪೦೪ | 343 | -- |
| 707 | ವೀರಃ | ೬೫೨ | 534 | ಯೋಗ್ಯರಿಗಷ್ಟೇ ನಾವು ತಿಳಿಸುವ ಪ್ರಮೇಯ ತಿಳಿಯುವಂತಾಗುವುದು. |
| 708 | ವೀರಃ | ೬೬೭ | 545 | ದಂಪತಿಗಳಲ್ಲಿ ಏನಾದರೂ ವೈಮನಸ್ಯ ಇದ್ದರೆ ಅದರ ಪರಿಹಾರ. |
| 709 | ವೃಕ್ಷಃ | ೫೬೨ | 467 | -- |
| 710 | ವೃದ್ಧಾತ್ಮಾ | ೩೫೫ | 306 | -- |
| 711 | ವೃಷಕರ್ಮಾ | ೧೧೩ | 98 | -- |
| 712 | ವೃಷಪರ್ವಾ | ೨೬೧ | 226 | ಧರ್ಮಾಚರಣೆಯಲ್ಲಿ ನ್ಯೂನತೆಯ ಪರಿಹಾರ. |
| 713 | ವೃಷಪ್ರಿಯಃ | ೬೦೩ | 496 | -- |
| 714 | ವೃಷಭಃ | ೨೫೯ | 223 | ಅಭೀಷ್ಟಗಳ ವರ್ಷಣೆ. |
| 715 | ವೃಷಭಾಕ್ಷಃ | ೬೦೨ | 496 | -- |
| 716 | ವೃಷಃ | ೩೧೫ | 277 | -- |
| 717 | ವೃಷಾಕಪಿಃ | ೧೦೨ | 87 | -- |
| 718 | ವೃಷಾಕೃತಿಃ | ೧೧೪ | 100 | -- |
| 719 | ವೃಷಾಹೀ | ೨೫೮ | 223 | -- |
| 720 | ವೃಷೋದರಃ | ೨೬೨ | 226 | -- |
| 721 | ವೇಗವಾನ್ | ೩೭೪ | 318 | -- |
| 722 | ವೇದವಿತ್ | ೧೩೦ | 113 | ಕಿಂಚಿತ್ ವೇದಜ್ಞರೆನಿಸುವಿಕೆ |
| 723 | ವೇದವಿತ್ | ೧೩೩ | 116 | -- |
| 724 | ವೇದಃ | ೧೨೯ | 112 | -- |
| 725 | ವೇದಾಂಗಃ | ೧೩೨ | 115 | -- |
| 726 | ವೇದ್ಯಃ | ೧೬೫ | 144 | -- |
| 727 | ವೇಧಾಃ | ೫೫೩ | 461 | -- |
| 728 | ವೈಕುಂಠಃ | ೪೦೮ | 346 | -- |

| | | | | |
|---|---|---|---|---|
| 729 | ವೈಖಾನಃ | ೮೧೪ | 817 | -- |
| 730 | ವೈದ್ಯಃ | ೧೬೬ | 145 | -- |
| 731 | ವಂಶವರ್ಧನಃ | ೮೫೦ | 706 | -- |
| 732 | ವ್ಯಕ್ತರೂಪಃ | ೩೦೭ | 271 | -- |
| 733 | ವ್ಯಗ್ರಃ | ೭೭೧ | 641 | -- |
| 734 | ವ್ಯವಸಾಯಃ | ೩೮೭ | 329 | ಯಾವುದೇ ಸಮಸ್ಯೆಯ ಪರಿಹಾರಕ್ಕೆ ಬೇಕಾದ ಸ್ಫೂರ್ತಿ |
| 735 | ವ್ಯವಸ್ಥಾನಃ | ೩೮೮ | 330 | -- |
| 736 | ವ್ಯಾದಿಶಃ | ೯೩೮ | 783 | -- |
| 737 | ವ್ಯಾಪೀ | ೪೭೦ | 396 | -- |
| 738 | ವ್ಯಾಪ್ತಃ | ೪೧೬ | 353 | -- |
| 739 | ವ್ಯಾಲಃ | ೯೩ | 79 | -- |
| 740 | ವ್ಯಾಸಃ | ೫೮೦ | 480 | -- |
| | (ಶ) | | | |
| 741 | ಶಕ್ತಿಮತಾಂ ಶ್ರೇಷ್ಠಃ | ೪೦೫ | 344 | -- |
| 742 | ಶಂಖಭೃತ್ | ೯೯೦ | 822 | -- |
| 743 | ಶತಮೂರ್ತಿಃ | ೭೩೧ | 602 | -- |
| 744 | ಶತಾನನಃ | ೭೩೨ | 603 | -- |
| 745 | ಶತಾನಂದಃ | ೬೨೫ | 514 | -- |
| 746 | ಶತಾವರ್ತಃ | ೩೪೬ | 299 | -- |
| 747 | ಶತ್ರುಘ್ನಃ | ೪೧೫ | 353 | ಒಳ್ಳೆಯ ಕೆಲಸಕ್ಕೆ ಅಡ್ಡಿ ತರುವ ಶತ್ರುಗಳ ಸಂಹಾರ. |
| 748 | ಶತ್ರುಜಿತ್ | ೮೨೮ | 690 | -- |
| 749 | ಶತ್ರುತಾಪನಃ | ೮೨೯ | 691 | -- |
| 750 | ಶಬ್ದಸಹಃ | ೯೧೧ | 757 | ಎಷ್ಟೇ ಶಬ್ದಗಳು ಕೇಳಿಸುತ್ತಿದ್ದರೂ ಏಕಾಗ್ರತೆಗೆ ಭಂಗಬಾರದು. |
| 751 | ಶಬ್ದಾತಿಗಃ | ೯೧೦ | 757 | -- |
| 752 | ಶಂಭುಃ | ೩೮ | 32 | -- |
| 753 | ಶರಣಂ | ೮೭ | 74 | -- |
| 754 | ಶರಭಃ | ೩೫೯ | 309 | -- |
| | | | | -- |

| | | | | |
|---|---|---|---|---|
| 755 | ಶರೀರೀ | ೫೦೩ | 422 | ಆಂತರಿಕ ಸೌಂದರ್ಯಕ್ಕೆ ಪೋಷಕವಾದ ಬಾಹ್ಯ ಸೌಂದರ್ಯದ ಸಿದ್ಧಿ. |
| 756 | ಶರೀರಭೃತ್ | ३೫೨ | 304 | -- |
| 757 | ಶರ್ಮ | ೮೮ | 75 | -- |
| 758 | ಶರ್ವರೀಕರಃ | ೯೧೩ | 760 | -- |
| 759 | ಶರ್ವಃ | ೨೬ | 23 | -- |
| 760 | ಶಶಿಬಿಂದುಃ | ೨೮೭ | 252 | -- |
| 761 | ಶಾಂತಃ | ೫೯೦ | 487 | -- |
| 762 | ಶಾಂತಿದಃ | ೫೯೫ | 490 | ತೊಂದರೆ ಮಾಡುವವರಿಂದ ಮಾನಸಿಕ ನೆಮ್ಮದಿ ಕದಡದೆ ಮಾನಸಿಕ ಶಾಂತಿಯ ಸಿದ್ಧಿ. |
| 763 | ಶಾಂತಿಃ | ೫೯೨ | 488 | -- |
| 764 | ಶಾರ್ಙ್ಗಧನ್ವಾ | ೯೯೩ | 824 | -- |
| 765 | ಶಾಶ್ವತಸ್ಥಾಣುಃ | ೧೨೧ | 105 | -- |
| 766 | ಶಾಶ್ವತಃ | ೬೩೫ | 522 | ಸಮಚಿತ್ತತ್ವದ ಲಾಭ. |
| 767 | ಶಾಶ್ವತಃ | ೫೬ | 47 | -- |
| 768 | ಶಾಸ್ತಾ | ೨೦೮ | 175 | -- |
| 769 | ಶಿಖಂಡೀ | ३೧३ | 276 | -- |
| 770 | ಶಿಪಿವಿಷ್ಟಃ | ೨೭೫ | 239 | -- |
| 771 | ಶಿವಃ | ೨೭ | 24 | -- |
| 772 | ಶಿವಃ | ೬೦೮ | 499 | ಹೊರಗೂ ಒಳಗೂ ಶುದ್ಧಿ. |
| 773 | ಶಿಶಿರಃ | ೯೧೨ | 759 | -- |
| 774 | ಶಿಷ್ಟಕೃತ್ | ೨೫೨ | 217 | ಮಕ್ಕಳನ್ನು ದುಷ್ಟರ ಕೂಟದಿಂದ ತಪ್ಪಿಸಿ ಶಿಷ್ಟರನ್ನಾಗಿ ಮಾಡುವನು. |
| 775 | ಶಿಷ್ಟೇಷ್ಟಃ | ३೧೨ | 275 | -- |
| 776 | ಶುಚಿಶ್ರವಾಃ | ೧೧೯ | 104 | -- |
| 777 | ಶುಚಿಃ | ೧೫೭ | 137 | ಶುದ್ಧಿಯ ಲಾಭ. |
| 778 | ಶುಚಿಃ | ೨೫३ | 218 | ನಮ್ಮ ಸ್ವರೂಪದ ಹಾಗೂ ಭಗವಂತನ ಸ್ವರೂಪದ ಬೆಳಕಿನ ಸಂಪಾದನೆ. |
| 779 | ಶುಭಾಂಗಃ | ೫೯೪ | 489 | -- |

| | | | | |
|---|---|---|---|---|
| 780 | ಶುಭಾಂಗಃ | ೭೯೦ | 657 | -- |
| 781 | ಶುಭೇಕ್ಷಣಃ | ೩೯೬ | 336 | -- |
| 782 | ಶೂನ್ಯಃ | ೭೫೨ | 623 | ಸಾಧನೆಗೆ ಅಡ್ಡಿ ಮಾಡುವವರ ಬಲವನ್ನು ಕಸಿದುಕೊಳ್ಳುವನು. |
| 783 | ಶೂರಸೇನಃ | ೭೧೨ | 584 | -- |
| 784 | ಶೂರಃ | ೩೪೨ | 296 | -- |
| 785 | ಶೂರಃ | ೬೫೩ | 535 | -- |
| 786 | ಶೃಂಗೀ | ೮೦೫ | 669 | -- |
| 787 | ಶೋಕನಾಶನಃ | ೬೪೧ | 526 | ಶೋಕ ಬಂದ ಮೇಲೆ ಅದರ ಪರಿಹಾರ ಹಾಗೂ ಶೋಕ ಬರದಂತೆ ಮಾಡಿ ಅದರ ಪರಿಹಾರ. |
| 788 | ಶೌರಿಃ | ೩೪೩ | 297 | ಮುಖ್ಯಪ್ರಾಣನ ಮೂಲಕ ಸಾತ್ವಿಕವಾದ ದೇವರ ದರ್ಶನ. |
| 789 | ಶ್ರಮಣಃ | ೮೫೭ | 712 | ಶ್ರಮಸಾಧ್ಯಸಾಧನೆಗಳ ಅನುಷ್ಠಾನ ಪ್ರಯುಕ್ತ ಶ್ರಮದ ಪರಿಹಾರ. |
| 790 | ಶ್ರೀಕರಃ | ೬೧೯ | 508 | ಕೈ ತುದಿಯಲ್ಲೇ ಸಂಪತ್ತಿನ ಸಂಪಾದನೆ. |
| 791 | ಶ್ರೀಗರ್ಭಃ | ೩೭೯ | 324 | -- |
| 792 | ಶ್ರೀದಃ | ೬೧೩ | 503 | -- |
| 793 | ಶ್ರೀಧರಃ | ೬೧೮ | 506 | -- |
| 794 | ಶ್ರೀನಿಧಿಃ | ೬೧೬ | 505 | -- |
| 795 | ಶ್ರೀನಿವಾಸಃ | ೧೮೫ | 159 | -- |
| 796 | ಶ್ರೀನಿವಾಸಃ | ೬೧೫ | 504 | -- |
| 797 | ಶ್ರೀಪತಿಃ | ೬೧೧ | 501 | -- |
| 798 | ಶ್ರೀಮತಾಂವರಃ | ೬೧೨ | 502 | -- |
| 799 | ಶ್ರೀಮಾನ್ | ೨೨ | 20 | -- |
| 800 | ಶ್ರೀಮಾನ್ | ೧೮೦ | 156 | -- |
| 801 | ಶ್ರೀಮಾನ್ | ೨೨೩ | 189 | -- |
| 802 | ಶ್ರೀಮಾನ್ | ೬೨೧ | 510 | -- |
| 803 | ಶ್ರೀವತ್ಸವಕ್ಷಾಃ | ೬೦೯ | 500 | -- |

| | | | | |
|---|---|---|---|---|
| 804 | ಶ್ರೀವಾಸಃ | ೬೧೦ | 501 | ಪತಿಪತ್ನಿಯರ ಮಧ್ಯೇ ಸಾಮರಸ್ಯ |
| 805 | ಶ್ರೀವಿಭಾವನಃ | ೬೧೭ | 506 | -- |
| 806 | ಶ್ರೀಶಃ | ೬೧೪ | 503 | -- |
| 807 | ಶ್ರುತಿಸಾಗರಃ | ೨೬೭ | 230 | -- |
| 808 | ಶ್ರೇಯಃ | ೬೨೦ | 510 | -- |
| 809 | ಶ್ರೇಷ್ಠಃ | ೬೯ | 57 | -- |
| | (ಸ) | | | |
| 810 | ಸಂಕರ್ಷಣಃ | ೫೫೮ | 464 | -- |
| 811 | ಸಂಗ್ರಹಃ | ೧೬೦ | 139 | -- |
| 812 | ಸತ್ | ೪೮೧ | 404 | -- |
| 813 | ಸತಾಂಗತಿಃ | ೧೮೬ | 160 | -- |
| 814 | ಸತಾಂಗತಿಃ | ೪೫೩ | 383 | -- |
| 815 | ಸತ್ಕರ್ತಾ | ೨೪೪ | 209 | ಚಟುವಟಿಕೆಗಳು ಅನಾಯಾಸವಾಗಿ ನೆರವೇರುವವು. |
| 816 | ಸತ್ಕೀರ್ತಿಃ | ೬೩೦ | 518 | -- |
| 817 | ಸತ್ಕೃತಃ | ೨೪೫ | 210 | -- |
| 818 | ಸತ್ಕೃತಿಃ | ೭೦೮ | 581 | ಯತ್ನಗಳು ಸಫಲವಾಗುವವು. |
| 819 | ಸತ್ತಾ | ೭೦೯ | 581 | -- |
| 820 | ಸತ್ಪಥಾಚಾರಃ | ೯೫೩ | 792 | -- |
| 821 | ಸತ್ಪರಾಯಣಃ | ೭೧೧ | 583 | -- |
| 822 | ಸತ್ಯಧರ್ಮಪರಾಕ್ರಮಃ | ೨೯೧ | 256 | -- |
| 823 | ಸತ್ಯಧರ್ಮಪರಾಯಣಃ | ೮೭೩ | 724 | -- |
| 824 | ಸತ್ಯಧರ್ಮಾ | ೫೩೪ | 447 | -- |
| 825 | ಸತ್ಯಪರಾಕ್ರಮಃ | ೨೧೫ | 181 | -- |
| 826 | ಸತ್ಯಮೇಧಾಃ | ೭೬೪ | 635 | ಮೇಧಾಶಕ್ತಿಯ ಸಾರ್ಥಕತೆ |
| 827 | ಸತ್ಯಸಂಧಃ | ೫೧೪ | 429 | ಅಪ್ರಿಯ ಸತ್ಯವನ್ನು ಮುಚ್ಚಿಟ್ಟ ಪ್ರಯುಕ್ತ ಬರಬಹುದಾದ ಟೀಕೆಯಿಂದ ಅಪಮಾನ, ಹಾನಿ ಆಗದಂತೆ ರಕ್ಷಣೆ. |
| 828 | ಸತ್ಯಃ | ೧೦೭ | 91 | -- |
| 829 | ಸತ್ಯಃ | ೨೧೪ | 180 | -- |
| 830 | ಸತ್ಯಃ | ೮೭೨ | 724 | -- |

| | | | | |
|---|---|---|---|---|
| 831 | ಸತ್ತ್ರಮ್ | ೩೫೨ | 382 | -- |
| 832 | ಸತ್ತ್ವವಾನ್ | ೮೭೦ | 723 | -- |
| 833 | ಸತ್ತ್ವಸ್ಥಃ | ೪೯೦ | 411 | -- |
| 834 | ಸದಾನಂದಃ (ಸುರಾನಂದಃ) | ೧೮೮ | 161 | ಮುಖದಲ್ಲಿ ಸರ್ವದಾ ನಗು. |
| 835 | ಸದಾಮರ್ಷೀ | ೮೯೪ | 742 | -- |
| 836 | ಸದಾಯೋಗೀ | ೧೬೭ | 146 | ಸದಾಕಾಲ ದೇವರ ಸಂಬಂಧದ ಪ್ರಜ್ಞೆ |
| 837 | ಸದ್ಗತಿಃ | ೭೦೭ | 580 | -- |
| 838 | ಸದ್ಭೂತಿಃ | ೭೧೦ | 581 | ದೇವರು ಸಂಪತ್ತಾಗಿ ಕಾಣಿಸಿಕೊಳ್ಳುವನು. |
| 839 | ಸನಾತ್‌ಸನಾತನತಮಃ | ೮೯೬ | 745 | -- |
| 840 | ಸಂತಃ | ೯೨೮ | 776 | -- |
| 841 | ಸಂಧಾತಾ | ೨೦೩ | 171 | -- |
| 842 | ಸಂಧಿಮಾನ್ | ೨೦೪ | 172 | -- |
| 843 | ಸನ್ನಿವಾಸಃ | ೭೧೪ | 585 | -- |
| 844 | ಸನ್ಯಾಸಕೃಚ್ಛ್ರಮಃ | ೫೮೯ | 485 | ನಮ್ಮ ಮೂಲಕ ರೂಪುಗೊಂಡ ನಿಯಮಗಳ ಬಗ್ಗೆ ತೃಪ್ತಿಪಡುವಂತಾಗುವುದು. |
| 845 | ಸಪ್ತಜಿಹ್ವಃ | ೮೩೫ | 696 | -- |
| 846 | ಸಪ್ತವಾಹನಃ | ೮೩೭ | 697 | -- |
| 847 | ಸಪ್ತೈಧಾಃ | ೮೩೬ | 696 | -- |
| 848 | ಸಮಯಜ್ಞಃ | ೩೬೧ | 310 | ಸಮಯಪ್ರಜ್ಞೆಯ ಸಿದ್ಧಿ |
| 849 | ಸಮಃ | ೧೧೦ | 95 | -- |
| 850 | ಸಮಾತ್ಮಾ | ೧೦೮ | 92 | -- |
| 851 | ಸಮಾವರ್ತಃ | ೭೮೧ | 651 | -- |
| 852 | ಸಮಿತಿಂಜಯಃ | ೩೬೫ | 313 | -- |
| 853 | ಸಮ್ಮಿತಃ | ೧೦೯ | 94 | -- |
| 854 | ಸಮೀಹನಃ | ೪೪೭ | 379 | -- |
| 855 | ಸಮೀರಣಃ | ೨೨೬ | 192 | -- |
| 856 | ಸಂಪ್ರಮರ್ದನಃ | ೨೩೪ | 202 | -- |
| 857 | ಸಂಭವಃ | ೩೧ | 28 | -- |
| 858 | ಸರ್ಗಃ | ೧೬೧ | 140 | -- |

| | | | | |
|---|---|---|---|---|
| 859 | ಸರ್ವಕಾಮದಃ | ೮೫೫ | 710 | ಮದಕ್ಕೆ ಪ್ರಯೋಜಕವಾಗದಂತಹ ಸುಖದ ಪ್ರಾಪ್ತಿ |
| 860 | ಸರ್ವಗಃ | ೧೨೪ | 108 | -- |
| 861 | ಸರ್ವಜ್ಞಃ | ೪೫೬ | 386 | -- |
| 862 | ಸರ್ವಜ್ಞಃ | ೮೨೩ | 687 | -- |
| 863 | ಸರ್ವತಶ್ಚಕ್ಷುಃ | ೬೩೩ | 521 | -- |
| 864 | ಸರ್ವತೋಮುಖಃ | ೮೨೪ | 687 | -- |
| 865 | ಸರ್ವದರ್ಶನಃ | ೯೫ | 81 | -- |
| 866 | ಸರ್ವದರ್ಶೀ | ೪೫೪ | 384 | -- |
| 867 | ಸರ್ವದೃಕ್ | ೨೦೧ | 170 | -- |
| 868 | ಸರ್ವದೃಕ್ | ೫೭೯ | 480 | -- |
| 869 | ಸರ್ವಪ್ರಹರಣಾಯುಧಃ | ೯೯೭ | 826 | -- |
| 870 | ಸರ್ವಯೋಗವಿನಿಃಸೃತಃ | ೧೦೪ | 89 | -- |
| 871 | ಸರ್ವವಾಗೀಶ್ವರೇಶ್ವರಃ | ೮೧೦ | 674 | -- |
| 872 | ಸರ್ವಲಕ್ಷಣಲಕ್ಷಣ್ಯಃ | ೩೬೩ | 311 | -- |
| 873 | ಸರ್ವವಿತ್ | ೧೨೫ | 109 | -- |
| 874 | ಸರ್ವವಿಜ್ಞಯೀ | ೮೦೭ | 671 | -- |
| 875 | ಸರ್ವಶಸ್ತ್ರಭೃತಾಂವರಃ | ೭೬೮ | 638 | -- |
| 876 | ಸರ್ವಸಹೋನಿಯಂತಾ | ೮೬೭ | 720 | -- |
| 877 | ಸರ್ವಃ | ೨೫ | 23 | -- |
| 878 | ಸರ್ವಾದಿಃ | ೧೦೦ | 86 | -- |
| 879 | ಸರ್ವಾಸುನಿಲಯಃ | ೭೧೮ | 589 | -- |
| 880 | ಸರ್ವೇಶ್ವರಃ | ೯೭ | 84 | -- |
| 881 | ಸವಃ | ೭೩೫ | 607 | -- |
| 882 | ಸವಿತಾ | ೮೮೬ | 735 | *ಹೆಂಗಸರಿಗೆ ಸುಖಪ್ರಸವ.<br>*ಗಂಡಸರಿಗೆ ತಮ್ಮ ವಿಚಾರಗಳನ್ನು ಚೆನ್ನಾಗಿ ಆವಿಷ್ಕರಿಸಬಹುದು. |
| 883 | ಸವಿತಾ | ೯೬೬ | 803 | -- |
| 884 | ಸಹಸ್ರಜಿತ್ | ೩೦೮ | 272 | -- |
| 885 | ಸಹಸ್ರಪಾತ್ | ೨೩೦ | 197 | -- |
| 886 | ಸಹಸ್ರಮೂರ್ಧಾ | ೨೨೭ | 194 | -- |
| 887 | ಸಹಸ್ರಾಕ್ಷಃ | ೨೨೯ | 196 | -- |

| | | | | |
|---|---|---|---|---|
| 888 | ಸಹಸ್ರಾರ್ಚಿಃ | ೬೩೪ | 695 | -- |
| 889 | ಸಹಸ್ರಾಂಶುಃ | ೪೮೬ | 407 | ಸಂಸ್ಕಾರ ರೂಪದಿಂದ ಒಳ್ಳೆಯ ಸ್ಮರಣೆ |
| 890 | ಸಹಃ | ೩೭೧ | 316 | -- |
| 891 | ಸಹಿಷ್ಣುಃ | ೧೪೬ | 128 | -- |
| 892 | ಸಹಿಷ್ಣುಃ | ೫೭೨ | 474 | -- |
| 893 | ಸಾಕ್ಷೀ | ೧೫ | 15 | -- |
| 894 | ಸಾಕ್ಷೀ | ೫೧೯ | 433 | ನಿನ್ನೆಯ ಹಾಗೂ ನಾಳೆಯ ತಿಳುವಳಿಕೆ ಸಿದ್ಧಿಸುವುದು. |
| 895 | ಸಾತ್ವತಾಂಪತಿಃ | ೫೧೬ | 431 | ಗೌರವ ಲಭಿಸುವುದು. |
| 896 | ಸಾತ್ತ್ವಿಕಃ | ೮೭೧ | 723 | -- |
| 897 | ಸಾಧುಃ | ೨೪೬ | 212 | -- |
| 898 | ಸಾಮ | ೫೮೫ | 484 | ಎಲ್ಲರೂ ನಮಗೆ ಅನುಕೂಲವಾಗಿಯೇ ಇದ್ದು ನಮ್ಮನ್ನೇ ನೋಡುವಂತಾಗುವುದು. |
| 899 | ಸಾಮಗಃ | ೫೮೪ | 482 | -- |
| 900 | ಸಾಮಗಾಯನಃ | ೯೮೫ | 818 | -- |
| 901 | ಸಿದ್ಧಸಂಕಲ್ಪಃ | ೨೫೫ | 220 | ಒಳ್ಳೆಯ ಸಂಕಲ್ಪಗಳೆಲ್ಲ ಈಡೇರುವವು. |
| 902 | ಸಿದ್ಧಃ | ೯೮ | 84 | -- |
| 903 | ಸಿದ್ಧಃ | ೮೨೭ | 689 | -- |
| 904 | ಸಿದ್ಧಾರ್ಥಃ | ೨೫೫ | 219 | ಎಲ್ಲರಿಂದಲೂ ಅಪೇಕ್ಷಿತವಾಗುವ ವ್ಯಕ್ತಿತ್ವ ಸಿದ್ಧಿಸುವುದು. |
| 905 | ಸಿದ್ಧಿದಃ | ೨೫೭ | 221 | ಮಂತ್ರಗಳು ಸಿದ್ಧಿಸುವವು. |
| 906 | ಸಿದ್ಧಿಸಾಧನಃ | ೨೫೮ | 222 | -- |
| 907 | ಸಿದ್ಧಿಃ | ೯೯ | 85 | -- |
| 908 | ಸಿಂಹಃ | ೨೦೨ | 177 | -- |
| 909 | ಸಿಂಹಃ | ೪೯೧ | 412 | -- |
| 910 | ಸುಖದಃ | ೪೬೨ | 390 | -- |
| 911 | ಸುಖದಃ | ೮೯೦ | 739 | -- |

| | | | | |
|---|---|---|---|---|
| 912 | ಸುಘೋಷಃ | ೩೬೧ | 389 | ಒಳ್ಳೆಯ ಮಾತುಗಳೇ ಹೊರಹೊಮ್ಮುವವು. |
| 913 | ಸುತಂತುಃ | ೬೯೨ | 659 | -- |
| 914 | ಸುತಪಾಃ | ೧೯೭ | 167 | ಒಳ್ಳೆಯ ತಿಳುವಳಿಕೆ ಸಿದ್ಧಿಸುವುದು. |
| 915 | ಸುದರ್ಶನಃ | ೩೨೦ | 357 | -- |
| 916 | ಸುಧನ್ವಾ | ೫೬೪ | 476 | ಧನುಸ್ಸಿನ ಮೂಲಕ ರಕ್ಷಣೆ |
| 917 | ಸುಂದರಃ | ೬೯೯ | 664 | ಪ್ರಾಣೋತ್ಕ್ರಮಣ ಕಾಲದಲ್ಲಿ ದೇವರ ದರ್ಶನ |
| 918 | ಸುಂದಃ | ೮೦೦ | 665 | -- |
| 919 | ಸುಪರ್ಣಃ | ೧೯೪ | 165 | -- |
| 920 | ಸುಪರ್ಣಃ | ೮೫೯ | 714 | -- |
| 921 | ಸುಪ್ರಸಾದಃ | ೨೩೯ | 205 | -- |
| 922 | ಸುಭುಜಃ | ೨೬೭ | 232 | -- |
| 923 | ಸುಮುಖಃ | ೪೫೯ | 387 | -- |
| 924 | ಸುಮೇಧಾಃ | ೭೬೧ | 632 | ಧಾರಣಾಸಾಮರ್ಥ್ಯದ ಪ್ರಾಪ್ತಿ |
| 925 | ಸುಯಾಮುನಃ | ೭೧೫ | 586 | -- |
| 926 | ಸುರಾಧ್ಯಕ್ಷಃ | ೧೩೬ | 118 | -- |
| 927 | ಸುರಾರಿಹಾ | ೨೧೦ | 177 | ಸತ್‌ಸಾಧನೆಗಳಿಗೆ ವಿಘ್ನರೂಪದ ಶತ್ರುಗಳ ಪರಿಹಾರ. |
| 928 | ಸುರುಚಿಃ | ೮೮೦ | 731 | ಸದಭಿರುಚಿವುಳ್ಳವರೆಂದು ಪ್ರಸಿದ್ಧಿಯ ಸಿದ್ಧಿ |
| 929 | ಸುರೇಶಃ | ೮೬ | 73 | -- |
| 930 | ಸುರೇಶ್ವರಃ | ೨೮೯ | 253 | -- |
| 931 | ಸುಲಭಃ | ೮೨೫ | 688 | -- |
| 932 | ಸುಲೋಚನಃ | ೮೦೨ | 667 | ಒಳ್ಳೆಯ ಆಲೋಚನಾ ಸಾಮರ್ಥ್ಯ ಸಿದ್ಧಿಸುವುದು. |
| 933 | ಸುವರ್ಣಬಿಂದುಃ | ೮೦೮ | 673 | -- |
| 934 | ಸುವರ್ಣವರ್ಣಃ | ೭೪೬ | 618 | -- |
| 935 | ಸುವೀರಃ | ೯೪೨ | 785 | -- |
| 936 | ಸುವ್ರತಃ | ೪೫೮ | 387 | ಏಕಾದಶ್ಯಾದಿವ್ರತಗಳ ಆಚರಣೆ ಚೆನ್ನಾಗಿ ನಡೆಯುವುದು. |

| | | | | |
|---|---|---|---|---|
| 937 | ಸುವ್ರತಃ | ೮೨೬ | 689 | ನೀಡುವ ಆಶೀರ್ವಾದ ಸತ್ಯವಾಗುವುದು. |
| 938 | ಸುಷೇಣಃ | ೫೪೬ | 457 | ಇಂದ್ರಿಯಗಳು ಕ್ರಿಯಾಶೀಲಗಳಾಗಿರುವವು. |
| 939 | ಸುಹೃತ್ | ೪೬೩ | 390 | -- |
| 940 | ಸೂಕ್ಷ್ಮಃ | ೪೬೦ | 388 | -- |
| 941 | ಸೂರಿಜನೇಶ್ವರಃ | ೬೫೪ | 535 | -- |
| 942 | ಸೂರ್ಯಃ | ೮೮೫ | 734 | -- |
| 943 | ಸೋಮಪಃ | ೫೦೮ | 425 | -- |
| 944 | ಸೋಮಃ | ೫೧೦ | 426 | ಗೊಂದಲದ ಸ್ಥಿತಿಯಿಂದ ಪಾರಾಗಿ ಶಾಂತರಾಗಿ ಬದುಕಬಹುದು. |
| 945 | ಸಂಕ್ಷೇಪ್ತಾ | ೬೦೬ | 498 | -- |
| 946 | ಸಂವತ್ಸರಃ | ೯೨ | 78 | -- |
| 947 | ಸಂವತ್ಸರಃ | ೪೨೫ | 362 | -- |
| 948 | ಸಂವೃತಃ | ೨೩೩ | 200 | -- |
| 949 | ಸಂಸ್ಥಾನಃ | ೩೮೯ | 331 | ಸಂತಾನ ಪರಂಪರೆಯ ಹಾಗೆಯೇ ಶಿಷ್ಯ ಪರಂಪರೆಯ ಮುಂದುವರಿಕೆ. |
| 950 | ಸ್ಕಂದಃ | ೩೩೦ | 285 | ಸಮಾಜಕ್ಕೆ ಉಪಯುಕ್ತವಾಗುವಂತೆ ವಿಚಾರದ ಆವಿಷ್ಕಾರ |
| 951 | ಸ್ಕಂದಧರಃ | ೩೩೧ | 286 | -- |
| 952 | ಸ್ತವಪ್ರಿಯಃ | ೬೮೮ | 564 | -- |
| 953 | ಸ್ತವ್ಯಃ | ೬೮೭ | 563 | ಸ್ತುತಿಸಿಕೊಳ್ಳಲು ಬೇಕಾದ ಅರ್ಹತೆಯ ಸಿದ್ಧಿ. |
| 954 | ಸ್ತುತಿಃ | ೬೯೦ | 566 | ಮನೆಯ, ಸಂಸ್ಥೆಯ ಸಮಸ್ಯೆಗಳ ಚಿಂತನೆಯಲ್ಲಿ ನಮಗೂ ಪ್ರವೇಶ. |
| 955 | ಸ್ತೋತಾ | ೬೯೧ | 567 | -- |
| 956 | ಸ್ತೋತ್ರಂ | ೬೮೯ | 565 | -- |
| 957 | ಸ್ಥವಿರೋ ಧ್ರುವಃ | ೫೪ | 44 | -- |

| | | | | |
|---|---|---|---|---|
| 958 | ಸ್ಥವಿಷ್ಠಃ | ೪೪ | 44 | -- |
| 959 | ಸ್ಥವಿಷ್ಠಃ | ೩೭೪ | 374 | -- |
| 960 | ಸ್ಥಾಣುಃ | ೨೫ | 25 | -- |
| 961 | ಸ್ಥಾನದಃ | ೩೩೨ | 332 | ನಮ್ಮ ಸ್ಥಾನ ನಮಗೆ ದಕ್ಕುವುದು. |
| 962 | ಸ್ಥಾವರಸ್ಥಾಣುಃ | ೩೬೬ | 366 | -- |
| 963 | ಸ್ಥಿರಃ | ೫೨೩ | 523 | -- |
| 964 | ಸ್ಥಿರಃ | ೧೭೩ | 173 | ಮನಶ್ಚಾಂಚಲ್ಯಕ್ಕೆ ಒಳಗಾಗದಿರುವುದು. |
| 965 | ಸ್ಪಷ್ಟಾಕ್ಷರಃ | ೨೪೫ | 245 | -- |
| 966 | ಸ್ರಗ್ವೀ | ೧೮೩ | 183 | ಕರ್ಮಗಳನ್ನು ಸಮರ್ಪಿಸದ ನ್ಯೂನತೆಯ ಪರಿಹಾರ |
| 967 | ಸ್ರಷ್ಟಾ | ೪೯೧ | 491 | -- |
| 968 | ಸ್ರಷ್ಟಾ | ೮೨೦ | 820 | ವಂಶ ಪರಂಪರೆಯ ಮುಂದುವರಿಕೆ |
| 969 | ಸ್ವಕ್ಷಃ | ೫೧೩ | 513 | -- |
| 970 | ಸ್ವಂಗಃ | ೫೧೪ | 513 | -- |
| 971 | ಸ್ವಧೃತಃ | ೭೦೨ | 703 | -- |
| 972 | ಸ್ವಯಂಜಾತಃ | ೮೧೬ | 816 | -- |
| 973 | ಸ್ವಯಂಭೂಃ | ೩೨ | 32 | -- |
| 974 | ಸ್ವವಶಃ | ೩೯೫ | 395 | -- |
| 975 | ಸ್ವಸ್ತಿ | ೭೪೯ | 749 | -- |
| 976 | ಸ್ವಸ್ತಿಕೃತ್ | ೭೪೭ | 749 | -- |
| 977 | ಸ್ವಸ್ತಿದಕ್ಷಿಣಃ | ೭೫೧ | 751 | -- |
| 978 | ಸ್ವಸ್ತಿದಃ | ೭೪೮ | 748 | -- |
| 979 | ಸ್ವಸ್ತಿಭುಕ್ | ೭೫೦ | 750 | -- |
| 980 | ಸ್ವಾಂಗಃ | ೪೬೧ | 461 | ಅಂಗಾಂಗಗಳು ನಮ್ಮ ಹಿಡಿತದಲ್ಲಿ ಇರುವವು. |
| 981 | ಸ್ವಾಪನಃ | ೩೯೪ | 394 | ನಿದ್ರೆ ಹೆಚ್ಚಾಗಿದ್ದರೆ ಕಡಿಮ್ಮೆ ಆಗುವುದು ನಿದ್ರೆಯ ಆವಶ್ಯಕತೆ ಇದ್ದರೆ ಬೇಕಾದಷ್ಟು ನಿದ್ರೆ ಬರುವುದು. |

| | | | | |
|---|---|---|---|---|
| 982 | ಸ್ವಾಭಾವ್ಯಃ | ೫೨೮ | 442 | ಅಂತಸ್ತಿಗೆ ಅನುಗುಣವಾಗಿ ಸ್ವಾತಂತ್ರ್ಯದ ಪ್ರಾಪ್ತಿ. |
| 983 | ಸ್ವಾಸ್ಯಃ | ೮೪೮ | 704 | ಕೊಟ್ಟ ವಚನಕ್ಕೆ ಅನುಗುಣವಾಗಿ ನಡೆದುಕೊಳ್ಳುವಂತಾಗುವುದು. |
| | **(ಹ)** | | | |
| 984 | ಹರಿಃ | ೬೫೯ | 538 | -- |
| 985 | ಹಲಾಯುಧಃ | ೫೬೯ | 472 | ಮರೆತು ಹೋಗಿ ಅಡಿಗೆ ಬಿದ್ದ ವಿಚಾರ ಮೇಲಕ್ಕೆ ಬಂದು ಜ್ಞಾಪಕಕ್ಕೆ ಎಟಕುವುದು. |
| 986 | ಹವಿರ್ಹರಿಃ | ೩೬೨ | 311 | -- |
| 987 | ಹವಿಃ | ೭೦೬ | 579 | -- |
| 988 | ಹಿರಣ್ಯಗರ್ಭಃ | ೭೧ | 58 | -- |
| 989 | ಹಿರಣ್ಯಗರ್ಭಃ | ೪೧೪ | 352 | ಆಯಾಗುಣದ ಪ್ರಾಪ್ತಿ |
| 990 | ಹಿರಣ್ಯನಾಭಃ | ೧೯೭ | 166 | -- |
| 991 | ಹುತಭುಗ್‌ಭೋಕ್ತಾ | ೮೮೯ | 738 | -- |
| 992 | ಹುತಭುಕ್ | ೮೮೧. | 731 | ವಿಷಯ ಪದಾರ್ಥಗಳ ಭೋಗದ ಲೇಪ ತಟ್ಟುವುದಿಲ್ಲ. |
| 993 | ಹೃಷಿಕೇಶಃ | ೪೭ | 39 | -- |
| 994 | ಹೇತುಃ | ೩೬೯ | 315 | -- |
| 995 | ಹೇಮಾಂಗಃ | ೭೪೭ | 617 | -- |
| 996 | ಹಂಸಃ | ೧೯೩ | 164 | -- |

**ಸಮಾನ ನಾಮದ ರೂಪಗಳು**

**ಸಮಾನ ನಾಮದ ನಾಲ್ಕು ರೂಪಗಳು**

ಪ್ರಾಣದಃ - ೬೬, ೩೨೪, ೪೧೧ ಹಾಗೂ ೯೫೪

ಶ್ರೀಮಾನ್ - ೨೨,೧೮೦, ೨೨೩ ಹಾಗೂ ೬೨೧

-ಹೀಗೆ ಎರಡು ಸಮಾನನಾಮದ ನಾಲ್ಕು ನಾಲ್ಕು ರೂಪಗಳಿವೆ.

**ಸಮಾನ ನಾಮದ ಮೂರು ರೂಪಗಳು**

ಅಜಃ, ನಿವೃತ್ತಾತ್ಮಾ, ಪದ್ಮನಾಭಃ, ಪ್ರಾಣಃ, ಮಾಧವಃ, ವಸುಃ, ವಾಸುದೇವಃ, ವಿಷ್ಣುಃ, ವೀರಃ, ಹಾಗೂ ಸತ್ಯಃ, - ಹೀಗೆ ಹನ್ನೊಂದು ಸಮಾನನಾಮದ ಮೂರು ಮೂರು ರೂಪಗಳಿವೆ.

**ಸಮಾನ ನಾಮದ ಎರಡು ರೂಪಗಳು**

ಎಂಭತ್ತು ಸಮಾನನಾಮದ ಎರಡೆರಡು ರೂಪಗಳು ಇವೆ.

# ‘ವಿಶ್ವಪ್ರಿಯಾ’ದಲ್ಲಿ ಅರಳಿರುವ ಚಿತ್ರಕುಸುಮಗಳು

(ವಿಶ್ವಪ್ರಿಯಾದಲ್ಲಿ ವಿ.ಸ.ನಾಮಗಳ ಅರ್ಥಾನುಸಂಧಾನದ ಸೌಕರ್ಯಕ್ಕಾಗಿ ಪ್ರತಿ ನೂರು ನೂರು ನಾಮಗಳ ಬಳಿಕ ಆಯಾ ಶತಕದಲ್ಲಿ ಬಂದ ಕೆಲವು ನಾಮಗಳ ಅರ್ಥಗಳಿಗೆ ಪುಷ್ಟಿ ದೊರಕುವಂತೆ ಚಿತ್ರಗಳನ್ನು ಪ್ರಕಟಿಸಲಾಗಿದೆ. ಉಡುಪಿ ಕೃಷ್ಣನ ಅಲಂಕಾರಕ್ಕೆ ಸಂಬಂಧಿಸಿದ ಹೆಚ್ಚಿನ ಚಿತ್ರಗಳು ವಿಶ್ವಪ್ರಿಯ ತೀರ್ಥರ ಎರಡನೆಯ ಪರ್ಯಾಯಾವಧಿಯಲ್ಲಿ ಮೂಡಿ ಬಂದಿರುವವು. ಅಷ್ಟ ಮಠಗಳ ಆರಾಧ್ಯಮೂರ್ತಿಗಳ ಚಿತ್ರಗಳೂ ಅಲ್ಲಲ್ಲಿ ಪ್ರಕಟಗೊಂಡಿವೆ.)

| | |
|---|---|
| ೧.ಪ್ರಥಮ ಶತಕದ ಆದಿಯಲ್ಲಿ ಪುಟ - 86ರ ಮುಂದೆ | * ವಟಪತ್ರಶಾಯಿ ನಾರಾಯಣನಿಂದ ಪ್ರಾದುರ್ಭವಿಸಿದ ವಾಸುದೇವಾದಿ ಚತುರ್ಮೂರ್ತಿಗಳು.<br>* ಕಾಣಿಯೂರು ಮಠದ ಆರಾಧ್ಯ ಯೋಗ-ನರಸಿಂಹ. |
| ೨. ದ್ವಿತೀಯ ಶತಕದ ಆದಿಯಲ್ಲಿ ಪುಟ - 169ರ ಮುಂದೆ | * ಬಲಿಚಕ್ರವರ್ತಿಯಿಂದ ಭೂದಾನ ಪಡೆಯುತ್ತಿರುವ ವಾಮನ<br>* ಪೇಜಾವರ ಮಠದ, ಪುತ್ತಿಗೆ ಮಠದ ಹಾಗೂ ಶೀರೂರು ಮಠದ ಆರಾಧ್ಯ ವಿಟ್ಠಲ |
| ೩. ತೃತೀಯ ಶತಕದ ಆದಿಯಲ್ಲಿ ಪುಟ - 265ರ ಮುಂದೆ | * ಸಂಸಾರಸಾಗರವನ್ನು ದಾಟಿಸುವ ಅಂಬಿಗ ಶ್ರೀಕೃಷ್ಣ.<br>* ಪಲಿಮಾರು ಮಠದ ಆರಾಧ್ಯ ಶ್ರೀ ರಾಮಚಂದ್ರ. |
| ೪. ಚತುರ್ಥ ಶತಕದ ಆದಿಯಲ್ಲಿ ಪುಟ - 340ರ ಮುಂದೆ | * ‘ನವನಾರೀಕುಂಜರ’ ‘ಪಂಚನಾರೀ-ತುರಗ’ ದೃಷ್ಟಾಂತದಂತೆ ತನ್ನ ವಾಸುದೇವಾದಿ ರೂಪದಲ್ಲಿರುವ ತಲೆ ಮುಂತಾದ ಅಂಗಾಂಗಳನ್ನು ಹೊಂದಿರುವ ನಾರಾಯಣ.<br>* ತಾನು ಗೋಪ್ರಿಯನೆಂದು ಸಾರುತ್ತಿರುವ ಗೋಪಾಲಕೃಷ್ಣ. |
| ೫. ಪಂಚಮಶತಕದ ಆದಿಯಲ್ಲಿ ಪುಟ - 419ರ ಮುಂದೆ | * ತನ್ನ ಸೂರ್ಯಾಂತರ್ಯಾಮಿತ್ವವನ್ನು ಸಾರುತ್ತಿರುವ ಸೂರ್ಯನಾರಾಯಣ. |

* ಸೋದೆ ಮಠ, ಅದಮಾರು ಮಠ ಹಾಗೂ ಪಲಿಮಾರು ಮಠಗಳಲ್ಲಿ ಆರಾಧ್ಯನಾಗಿರುವ ಶ್ರೀ ವೇದವ್ಯಾಸ

೬. ಷಷ್ಠ ಶತಕದ ಆದಿಯಲ್ಲಿ
ಪುಟ - 494ರ ಮುಂದೆ

* ಉಡುಪಿ ಶ್ರೀಕೃಷ್ಣ ಶ್ರೀಕರನಾಗಿ ಮೆರೆಯುತ್ತಿರುವುದು.
* ಉಡುಪಿ ಶ್ರೀಕೃಷ್ಣ ತಿರುಪತಿ ತಿಮ್ಮಪ್ಪನಾಗಿ ಮೆರೆಯುತ್ತಿರುವುದು.

೭. ಸಪ್ತಮ ಶತಕದ ಆದಿಯಲ್ಲಿ
ಪುಟ - 576ರ ಮುಂದೆ

* ಉಡುಪಿ ಶ್ರೀಕೃಷ್ಣ ಅನಂತಪದ್ಮನಾಭನಾಗಿ ತನ್ನ ಪ್ರಭುತ್ವವನ್ನು ಸಾರುತ್ತಿರುವುದು.
* ಅದಮಾರು ಮಠದ ಚತುರ್ಭುಜ ಕಾಳಿಯಮರ್ದನ ಕೃಷ್ಣ ಹಾಗೂ ಕೃಷ್ಣಾಪುರ ಮಠದ ದ್ವಿಭುಜ ಕಾಳಿಯಮರ್ದನ ಕೃಷ್ಣ

೮. ಸಾರ್ಧ ಸಪ್ತಮಶತಕದ ಆದಿಯಲ್ಲಿ
ಪುಟ - 620ರ ಮುಂದೆ

* ದೇವಕೀಕಂದನಾಗಿ ಉಡುಪಿ ಶ್ರೀಕೃಷ್ಣ.
* ಜಲಕ್ರೀಡಾಸಮಾಸಕ್ತಗೋಪೀ-ವಸ್ತ್ರಾಪಹಾರಕನಾಗಿ ಉಡುಪಿ ಶ್ರೀಕೃಷ್ಣ ನೀಡುವ ಸಂದೇಶ.

೯. ಅಷ್ಟಮ ಶತಕದ ಆದಿಯಲ್ಲಿ
ಪುಟ - 665ರ ಮುಂದೆ

* ಸೋದೆ ಮಠದ ಆರಾಧ್ಯ ಭೂವರಾಹ.
* ಉಡುಪಿ ಶ್ರೀಕೃಷ್ಣ ಧನ್ವಂತರಿ ರೂಪದಲ್ಲಿ ಮೆರೆಯುತ್ತಿರುವುದು.

೧೦. ಸಾರ್ಧ ಅಷ್ಟಮಶತಕದ ಆದಿಯಲ್ಲಿ
ಪುಟ - 706ರ ಮುಂದೆ

* ನವದ್ವಾರಗಳನ್ನೊಳಗೊಂಡ ದೇಹದಲ್ಲಿ ಹೇಗೆ ದೇವರ ದರ್ಶನ ನಡೆಸಬೇಕೆಂಬುದಕ್ಕೆ ಪ್ರಾತ್ಯಕ್ಷಿಕೆಯಂತೆ ಇರುವ ಉಡುಪಿ ಕೃಷ್ಣಮಠದ ನವಗ್ರಹ ಕಿಂಡಿಯಲ್ಲಿ ಕೃಷ್ಣನ ದರ್ಶನ.
* ತನ್ನ ದರ್ಶನದಲ್ಲಿ ವೇಣುವಿನ ರೂಪದಲ್ಲಿರುವ ಲಕ್ಷ್ಮಿಯ ದರ್ಶನವನ್ನೂ, ಕಡೆಗೋಲಿನ ರೂಪದಲ್ಲಿರುವ ಮುಖ್ಯಪ್ರಾಣನ

ದರ್ಶನವನ್ನೂ ಸೇರಿಸಿಕೊಳ್ಳಬೇಕೆಂದು ಸಂದೇಶಿಸುತ್ತಿರುವ ಉಡುಪಿ ಶ್ರೀಕೃಷ್ಣ.

೧೧. ನವಮ ಶತಕದ ಆದಿಯಲ್ಲಿ
ಪುಟ - 748ರ ಮುಂದೆ

* ಉಡುಪಿ ಶ್ರೀಕೃಷ್ಣ ಎಲ್ಲರ ವಾಗಿಂದ್ರಿಯದಲ್ಲಿರುವ ವಾಗೀಶಾನಾ ಎಂಬ ಭಗವಂತನ ಸ್ತ್ರೀ ರೂಪದಲ್ಲಿ ಮೆರೆಯುತ್ತಿರುವುದು.
* ಉಡುಪಿ ಶ್ರೀಕೃಷ್ಣ ಲಕ್ಷ್ಮೀದೇವಿಯ ಅಂತರ್ಯಾಮಿಯಾಗಿ ಸ್ತ್ರೀ ರೂಪದಿಂದ ಮೆರೆಯುತ್ತಿರುವುದು.

೧೨. ಸಾರ್ಧ ನವಮಶತಕದ ಆದಿಯಲ್ಲಿ
ಪುಟ - 790ರ ಮುಂದೆ

* ತನ್ನ ಮಂದಹಾಸದಿಂದ ಭಕ್ತರಿಗೆ ಆನಂದದ ಸವಿಯನ್ನು ಉಣ್ಣಿಸಲು ಸಿದ್ಧನಾಗಿರುವ ಶ್ರೀಕೃಷ್ಣ.
* ಶ್ರೀ ವಿದ್ಯಾಮಾನ್ಯ ತೀರ್ಥರಿಗೆ ಉಡುಪಿ ಶ್ರೀಕೃಷ್ಣನ ಅನುಗ್ರಹದ ಮಹಾಪೂರ.

೧೩. ಉಪಸಂಹಾರದಲ್ಲಿ
ಪುಟ - 827ರ ಮುಂದೆ

* ಭಕ್ತಪರಾಧೀನನಾಗಿ ಮೆರೆಯುತ್ತಿರುವ ಉಡುಪಿ ಶ್ರೀಕೃಷ್ಣ.
* ಬ್ರಹ್ಮರಥ'ದಲ್ಲಿ ಊರ್ಧ್ವಗನಾಗಿ ಮೆರೆಯುತ್ತಿರುವ ಉಡುಪಿ ಶ್ರೀಕೃಷ್ಣ.
* ವಾದಿರಾಜ ಗುರುಗಳಿಂದ ಆರಾಧ್ಯನಾದ ಹಯಗ್ರೀವ.
* ಗೀತೋಪದೇಶ ವಿಷ್ಣುಸಹಸ್ರನಾಮದ ಉಪದೇಶ ನಡೆಸುತ್ತಿರುವ ಶ್ರೀಕೃಷ್ಣ.

## ‘ವಿಶ್ವಪ್ರಿಯಾ’ದ ಬೆಳಕಿನಡಿ

# ಶ್ರೀ ವಿಷ್ಣುಸಹಸ್ರನಾಮ ಸ್ತೋತ್ರ

ಹಿರಿಯರು ಅಂದ್ರು ವಿಷ್ಣು ಸಹಸ್ರನಾಮದ ಒಂದೊಂದು ನಾಮಕ್ಕೂ ನೂರು ನೂರು ಅರ್ಥಗಳಿವೆ ಎಂದು. ಆದರೆ ನೂರು ಅರ್ಥ ನಮ್ಮ ತಲೆಗೆ ‘ನೂರುವುದಿಲ್ಲ.’ ತುಳುವಿನಲ್ಲಿ ನುಸುಳುವುದಕ್ಕೆ ‘ನೂರುವುದು’ ಎನ್ನಲಾಗುವುದು. ಆ ನೂರು ಅರ್ಥಗಳು ನಮ್ಮ ತಲೆಯೊಳಗೆ ನುಸುಳಲಿಕ್ಕಿಲ್ಲ.

ಮತ್ತೊಂದು '- ತುಂಬ ಅರ್ಥಗಳಿವೆ ಎಂದಾಗ ಯಾರೂ ಅದನ್ನು ಮುಟ್ಟಲಿಕ್ಕೇ ಹೋಗುವುದಿಲ್ಲ. ಈ ಜನ್ಮದಲ್ಲಿ ಅಷ್ಟು ಅರ್ಥಗಳನ್ನು ತಿಳಿದುಕೊಳ್ಳುವುದು ಆಗಲಿಕ್ಕಿಲ್ಲ ಎಂದು.

**ಕೇಳಿದಾಕ್ಷಣ ಅರ್ಥಸ್ಫುರಣೆ :**

ಆದುದರಿಂದ ಒಂದು ಶಬ್ದಕ್ಕೆ ಒಂದರ್ಥ. ಆ ಶಬ್ದ ಕೇಳಿದಾಕ್ಷಣ ಆ ಅರ್ಥ ಶಬ್ದಶ್ರವಣದ ಜೊತೆಗೇ ತಿಳಿಯುವಂತಾಗಬೇಕು. ಯಾವ ಅರ್ಥ ನಮ್ಮ ಜೀವನದಲ್ಲಿ ತುಂಬ ಚಾಲ್ತಿಯಲ್ಲಿರುವುದೋ ಆ ಅರ್ಥ ಆ ಶಬ್ದವನ್ನು ಕೇಳಿದಾಕ್ಷಣ ಸ್ಫುರಣೆಗೆ ಬರುವುದು. ಶಬ್ದ ಕೇಳಿಸಿಕೊಂಡು ಈ ಶಬ್ದಕ್ಕೆ ಏನು ಅರ್ಥ ಎಂದು ಯೋಚಿಸಬೇಕಾದ ಪ್ರಸಂಗ ಬರುವುದಿಲ್ಲ.

ಉದಾಹರಣೆ ಕೊಡುವುದಾದರೆ – ವಿದ್ಯಾಮಾನ್ಯರು ಎಂದು ಕೇಳಿದ ಕೂಡಲೇ ಅವರ ಜೊತೆಗಿದ್ದವರಿಗೆ, ಅವರ ವ್ಯಕ್ತಿತ್ವವನ್ನು ಅನುಭವಿಸಿದವರಿಗೆ ಅವರ ವಿದ್ಯೆ, ತಪಸ್ಸು, ಸಾಧನೆ, ಶಿಷ್ಯರ ಪಾಠ ಪ್ರವಚನದ ಕ್ರಮ, ತಾಳ್ಮೆ, ವಾಕ್ಯಾರ್ಥ ಚರ್ಚೆ ಇವೆಲ್ಲ ಝುಟಿತಿ ಬುದ್ಧಿಸ್ಥವಾಗುವುದು.

ಹಾಗೆಯೇ ‘ವಿಶ್ವಂ ವಿಷ್ಣುಃ ವಷಟ್ಕಾರೋ....’ ಎಂದು ಶಬ್ದಗಳನ್ನು ಕೇಳಿದಾಕ್ಷಣ ಅವುಗಳ ಅರ್ಥಗಳ ಸ್ಫುರಣೆ ಆಗಬೇಕು. ಆ ರೀತಿಯಾಗಿ ಅವುಗಳ ಅರ್ಥಚಿಂತನೆ ನಡೆಸೋಣ.

**ಎಲ್ಲಿಂದ ಪ್ರಾರಂಭ ?**

ವಿಷ್ಣು ಸಹಸ್ರನಾಮವನ್ನು ಎಲ್ಲಿಂದ ಪ್ರಾರಂಭ ಮಾಡಬೇಕು ? ‘ವಿಶ್ವಂ ವಿಷ್ಣುರ್ವಷಟ್ಕಾರೋ....’ ಅಲ್ಲಿಂದ ಪ್ರಾರಂಭಿಸಿದರೆ ಸಾಕು. ಕೆಲವರು

'ವೈಶಂಪಾಯನ ಉವಾಚ' ಅಲ್ಲಿಂದ ಪ್ರಾರಂಭಿಸುತ್ತಾರೆ. ಹೆಚ್ಚು ಸೇರಿಸಿದರೆ ತಪ್ಪಿಲ್ಲ. ಆದರೆ ಸಾವಿರ ನಾಮಗಳು ಎಂದರೆ 'ವಿಶ್ವಂ ವಿಷ್ಣುಃ' ಎಂಬಲ್ಲಿಂದ ಪ್ರಾರಂಭಿಸಿ..... ಸರ್ವಪ್ರಹರಣಾಯುಧಃ' ಅಲ್ಲಿಯವರೆಗೆ ಅಷ್ಟೇ. ಯುಧಿಷ್ಠಿರ ಮತ್ತು ಭೀಷ್ಮರ ಪ್ರಶ್ನೋತ್ತರ ರೂಪದಲ್ಲಿರುವ ಮೊದಲ ಭಾಗವನ್ನು ಬಿಡುವಿಲ್ಲದಿದ್ದರೆ ಪಾರಾಯಣ ಮಾಡದಿದ್ದರೂ ಪರವಾಗಿಲ್ಲ. ಶ್ರೀ ವಿಷ್ಣುವಿನ ಸಾವಿರನಾಮಗಳನ್ನು ಹೇಳುವೆನು ಎಂದು ಭೀಷ್ಮರು ಪ್ರತಿಜ್ಞೆ ಮಾಡಿ ಪ್ರಾರಂಭಿಸಿದ್ದು 'ವಿಶ್ವಂ ವಿಷ್ಣುಃ......' ಎಂಬಲ್ಲಿಂದಷ್ಟೇ.

**'ಹಾವು ಏಣಿ ಆಟ' ಆಗದಿರಲಿ :**

ಎಲ್ಲ ಸ್ತೋತ್ರಗಳಲ್ಲೂ, ಸೂಕ್ತಗಳಲ್ಲೂ 'ಹಾವು ಏಣಿ ಆಟ' ಇದ್ದೇ ಇರುವುದು. ಹಾಗೆಯೇ ವಿಷ್ಣು ಸಹಸ್ರನಾಮವನ್ನು ಪಠಿಸುವಾಗಲೂ ಆ ಆಟ ನುಸುಳಿಕೊಳ್ಳುವುದುಂಟು. 'ವಿಶ್ವಂ ವಿಷ್ಣುರ್ವಷಟ್ಕಾರೋ....' ಹೇಳುತ್ತ ಹೋಗುವವನು. ಹೇಳಿ ಹೇಳಿ ಅಭ್ಯಾಸ ಆಗಿರುವುದರಿಂದ ಮನಸ್ಸು ಎಲ್ಲೋ ಇರುವುದು. ಬಾಯಿ ಮಾತ್ರ ಸೋತ್ರವನ್ನು ಹೇಳುತ್ತ ಇರುವುದು. ಹೇಳುತ್ತ ಹೇಳುತ್ತ '.... ಅಮೃತಾಂಶೂದ್ಭವೋ ಭಾನುಃ ಶಶಬಿಂದುಃ ಸುರೇಶ್ವರಃ'– ಈ ಮೂವತ್ತೊಂದನೆಯ ಶ್ಲೋಕದಲ್ಲಿ 'ಅಮೃತಾಂಶೂದ್ಭವಃ' ಎಂಬ ನಾಮ ಬರುವುದು. ಮುಂದೆ ಎಂಭತ್ತೇಳನೇ ಶ್ಲೋಕದಲ್ಲಿ 'ಅಮೃತಾಂಶೋಽಮೃತವಪು'– ಎಂದು ಬರುವುದು. 'ಅಮೃತಾಂಶೂದ್ಭವಃ' ಎನ್ನಬೇಕಾದ ಸ್ಥಾನದಲ್ಲಿ 'ಅಮೃತಾಂಶೋಽಮೃತವಪುಃ' ಎಂದು ಬಿಟ್ಟರೆ ಅದು ಏಣಿ. ಮೂವತ್ತೊಂದನೆಯ ಶ್ಲೋಕದಲ್ಲಿದ್ದವ ಎಂಭತ್ತೇಳನೆಯ ಶ್ಲೋಕಕ್ಕೆ ಏರಿದ್ದರಿಂದ ಇಲ್ಲಿ 'ಏಣಿ'. ಮತ್ತೊಬ್ಬ ಹೇಳುತ್ತ ಹೇಳುತ್ತ 'ಅಮೃತಾಂಶೋಽಮೃತವಪುಃ' ಅಂತ ಹೇಳಬೇಕಾದಲ್ಲಿ 'ಅಮೃತಾಂಶೂದ್ಭವಃ'– ಎಂದು ಹೇಳಿಬಿಡ್ತಾನೆ. ಎಂಭತ್ತೇಳನೆಯ ಶ್ಲೋಕದಿಂದ ಮೂವತ್ತೊಂದನೆಯ ಶ್ಲೋಕಕ್ಕೆ ಇಳಿದದ್ದರಿಂದ ಇಲ್ಲಿ ಹಾವು. 'ಏಣಿ' ಏರಿದವನ ಪಾರಾಯಣ ಬೇಗ ಮುಗಿದರೆ 'ಹಾವು' ಇಳಿದವನ ಪಾರಾಯಣ ಏನು ಮಾಡಿದರೂ ಮುಗಿಯುವುದಿಲ್ಲ.

ವೇಂಕಟೇಶ ಸ್ತೋತ್ರದಲ್ಲಿ 'ಭೂತಾವಾಸೋ ಗಿರಾವಾಸಃ.....' ಎಂದು ಹೇಳುವಾಗ 'ಭೂತಾವಾಸೋ ವಾಸುದೇವಃ....' ಎಂದು ಸಹಸ್ರಾನಾಮಕ್ಕೆ ಹಾರುವುದೂ ಇದೆ.

ಆದ್ದರಿಂದ ಮನಸ್ಸನ್ನು ಎಲ್ಲೆಲ್ಲೋ ಇಟ್ಟು ವಿಷ್ಣು ಸಹಸ್ರನಾಮಪಾರಾಯಣ ನಡೆಸಿದರೆ ಈ ರೀತಿಯಾಗಿ 'ಹಾವು –ಏಣಿ' ಆಟ ಆಡಿದಂತಾಗುವುದು. ಹಾಗಾಗಬಾರದು. ಅದಕ್ಕಾಗಿ ಮನಸ್ಸಿಟ್ಟು ಪಾರಾಯಣ ನಡೆಸಬೇಕು.

**ಅರ್ಥವಿಲ್ಲದ ಪಾರಾಯಣ ವ್ಯರ್ಥ :**

ಅರ್ಥವಿಲ್ಲದೆ ಮಾಡಿದ ಪಾರಾಯಣ ವ್ಯರ್ಥ ಎಂದು ಎಚ್ಚರಿಕೆ ಕೊಟ್ಟರು. ಅದು ಬರೇ ನಮ್ಮನ್ನು ಹೆದರಿಸಿದ್ದು. ಅರ್ಥಯಿಲ್ಲದೆಯೂ ಪಾರಾಯಣ ಮಾಡಿದರೆ ಫಲ ಇದ್ದೇ ಇದೆ ಎಂದರೆ ನಾವು ಯಾರೂ ಅರ್ಥ ಮಾಡಿಕೊಳ್ಳಲು ಯತ್ನಿಸುವುದೇ ಇಲ್ಲ. ಹಾಗಾದರೆ ಅರ್ಥವಿಲ್ಲದೆಯೂ ಪಾರಾಯಣ ಮಾಡಿದರೆ ಫಲ ಇದೆಯೋ? ಇದ್ದೇ ಇದೆ. ಹಾಗಾದರೆ ಅರ್ಥ ಯಾಕೆ ಮಾಡಿಕೊಳ್ಳಬೇಕು? ಅರ್ಥ ಮಾಡಿಕೊಂಡು ಪಾರಾಯಣ ಮಾಡಿದರೆ ಎಷ್ಟು ಫಲ ಇದೆಯೋ ಅಷ್ಟು ಫಲ ಅರ್ಥಜ್ಞಾನ ರಹಿತವಾಗಿ ಮಾಡಿದ ಪಾರಾಯಣಕ್ಕೆ ಇಲ್ಲ. ಆದ್ದರಿಂದ ಅಧಿಕ ಫಲಪ್ರಾಪ್ತಿಗಾಗಿ ಅರ್ಥಜ್ಞಾನವನ್ನು ಸಂಪಾದಿಸಿ ಕೊಳ್ಳಬೇಕು. ಅರ್ಥಜ್ಞಾನವಿಲ್ಲದೆ ಮಾಡಿದ ಪಾರಾಯಣಕ್ಕೆ ಫಲ ಇಲ್ಲ ಎಂದಿಲ್ಲ. ಎಂಟು ವರ್ಷದ ಮಗುವಿಗೆ ಉಪನಯನ ಮಾಡಿ ಅದರ ಬಾಯಿಯಿಂದ ಮಂತ್ರಗಳನ್ನು ಹೇಳಿಸಿದರೆ ಅದಕ್ಕೆ ಆ ಮಂತ್ರಗಳ ಜ್ಞಾನ ಬರಲು ಸಾಧ್ಯವೇ ? ಆದರೂ ಮಂತ್ರ ಹೇಳಬೇಕು. ಭಗವಂತ ಪ್ರೀತನಾಗಬೇಕು. ಅದೇ ರೀತಿಯಲ್ಲಿ ಅರ್ಥಾನುಸಂಧಾನ ಮಾಡಿಕೊಳ್ಳಲಾಗಲಿಲ್ಲ. ಆದರೂ ಹೇಳೋಣ. ಈಗ ಅರ್ಥಾನುಸಂಧಾನ ಮಾಡಿಕೊಳ್ಳುವ ಹಂತಕ್ಕೆ ಬಂದಿದ್ದೇವೆ. ಆದ್ದರಿಂದ ಅರ್ಥಾನುಸಂಧಾನ ಪೂರ್ವಕವಾಗಿಯೇ ನಾವು ಸಹಸ್ರನಾಮ ಪಠನ ಮಾಡಬೇಕು.

**ಋಷಿ – ಛಂದಸ್ಸು – ದೇವತೆ :**

ಮೊದಲು ಋಷಿ – ಛಂದಸ್ಸು – ದೇವತೆ ಇವುಗಳ ಅನುಸಂಧಾನ ಮಾಡಿಕೊಳ್ಳಬೇಕು.

'ವೈಶಂಪಾಯನ ಉವಾಚ' ಅಲ್ಲಿಂದ ಬೇಕಿಲ್ಲ. ಹಾಗಾದರೆ ವಿಷ್ಣು ಸಹಸ್ರನಾಮವನ್ನು ಪ್ರಾರಂಭಿಸುವ ಕ್ರಮ ಹೇಗೆ ?

**'ಅಸ್ಯ ಶ್ರೀ ವಿಷ್ಣೋರ್ದಿವ್ಯಸಹಸ್ರನಾಮ ಮಹಾಮಂತ್ರಸ್ಯ....'** ಎಂದು ಪ್ರಾರಂಭಿಸಬೇಕು. ವಿಷ್ಣು ಸಹಸ್ರನಾಮ ಮಹಾಮಂತ್ರ ಎನಿಸಿದೆ. 'ಅಸ್ಯ ಶ್ರೀ ವಿಷ್ಣೋಃ....' ಎಂಬುದಾಗಿ ಭೀಷ್ಮರು ನನ್ನ ಕಣ್ಮುಂದೆ ಕೂತಿರುವ ಈ ವಿಷ್ಣುವಿನ ಎಂದು ಪರಾಮರ್ಶಿಸುವರು. 'ಮಲಗಿ ಪರಮಾದರದಿ ಪಾಡಲು ಕುಳಿತು ಕೇಳುವ'–

ಎಂದು ಸ್ತುತಿಸಲ್ಪಟ್ಟಿರುವಂತೆ ತಾನು ಮಲಗಿ ವಿಷ್ಣುಸಹಸ್ರನಾಮದಿಂದ ಸ್ತುತಿಸುತ್ತಿದ್ದರೆ ತನ್ನ ಎದುರಿನಲ್ಲೇ ಕುಳಿತು ಕೇಳುತ್ತಿರುವವನು ಶ್ರೀ ವಿಷ್ಣು. ಭಕ್ತಿಯಿಂದ ಸ್ತುತಿಸಿದರೆ ಅವನು ಎದುರುಗಡೆಯಿಂದ ಹೋಗುವುದಿಲ್ಲ ಎಂಬ ನಂಬಿಕೆ, ಶ್ರದ್ಧೆ ಭೀಷ್ಮರದ್ದು. ವಿಷ್ಣುಸಹಸ್ರನಾಮಪಾರಾಯಣದಿಂದ ಶ್ರೀ ವಿಷ್ಣುವನ್ನು ನಮ್ಮ ಎದುರು ಕುಳಿತುಕೊಳ್ಳುವಂತೆ ಮಾಡಬಹುದು ಎಂಬುದು ಇದರಿಂದ ಸೂಚಿತ.

ಯಾರು ಕಂಡು ಹುಡುಕಿದ್ದು ? ಸಮಾಜಕ್ಕೆ ಈ ಸ್ತೋತ್ರವನ್ನು ಕೊಟ್ಟವರು ಯಾರು ? ಭೀಷ್ಮರು ಹೇಳುವರು – ನನ್ನ ಬಾಯಿಯಿಂದ ಹೊರಹೊಮ್ಮಿತಷ್ಟೇ. ನನ್ನ ಬಾಯಿಯಿಂದ ಹೊರಹೊಮ್ಮಬೇಕಾದರೆ ಮೊದಲು ಇತ್ತು. ಅದನ್ನು ರಚಿಸಿದವರು ಯಾರು ? **'ಭಗವಾನ್ ವೇದವ್ಯಾಸ ಋಷಿ:'**– ಶ್ರೀ ವೇದವ್ಯಾಸರು ರಚಿಸಿರುವಂತಹದ್ದು. ರಾಗ ಯಾವುದು ? **'ಅನುಷ್ಟುಪ್ ಛಂದ:'** ರಾಗವನ್ನು ಛಂದಸ್ಸು ಎಂದು ಕರೆಯುವೆವು. ಅನುಷ್ಟುಪ್ ಎಂಬ ರಾಗದಿಂದ ಈ ಸ್ತೋತ್ರ ಬದ್ಧವಾಗಿದೆ. ನನ್ನ ಬಾಯಿಯಿಂದ ಚೆಂದವಾಗಿ ಹೊರಹೊಮ್ಮಲಿ ಎಂದು ಛಂದಸ್ಸನ್ನು ಸ್ಮರಿಸುವಾಗ ತುಟಿಯನ್ನು ಮುಟ್ಟಿಕೊಳ್ಳೋಣ. ಒಂದು ವೇಳೆ ಗಂಧ ತೇದುವುದೋ, ಹೂ ಕಟ್ಟುವುದೋ – ದೇವರ ಚಾಕರಿ ಮಾಡುತ್ತಿದ್ದೇವೆ ಎಂದಾಗ ಮನಸ್ಸಿನಲ್ಲಿ ಅನುಸಂಧಾನ ಮಾಡಿಕೊಳ್ಳೋಣ. **'ಭಗವಾನ್ ವೇದವ್ಯಾಸ ಋಷಿ'** ಅಂದಾಗ ತಲೆಯನ್ನು ಮುಟ್ಟಿಕೊಳ್ಳೋಣ. ಈ ಶ್ಲೋಕ ಆದ ಮೇಲೆ ಈ ಶ್ಲೋಕ, ಈ ಶಬ್ದ ಆದ ಮೇಲೆ ಈ ಶಬ್ದ ಎಂಬುದನ್ನು ತಲೆಯಲ್ಲಿ ಹೊಳೆಯಿಸಬೇಕಾದವರು ಋಷಿಗಳಾದ ಭಗವಾನ್ ವೇದವ್ಯಾಸರು. ಅದಕ್ಕಾಗಿ ಅವರನ್ನು ಸ್ಮರಿಸಿಕೊಳ್ಳುವಾಗ ತಲೆಯನ್ನು ಮುಟ್ಟಿಕೊಳ್ಳೋಣ.

**'ಮಹಾವಿಷ್ಣುರ್ದೇವತಾ'** – ಈ ಸ್ತೋತ್ರ ಮಹಾವಿಷ್ಣುವನ್ನು ಹೇಳುವುದು. ಈ ಸ್ತೋತ್ರ ಯಾರನ್ನು ಹೇಳುತ್ತಿದೆ ಎಂಬುದನ್ನು ತಿಳಿದುಕೊಂಡು ಸ್ತೋತ್ರವನ್ನು ಪಠಿಸಿದಲ್ಲಿ ಆ ದೇವತೆಗೆ ತುಂಬ ಸಂತೋಷವಾಗುವುದು. ಆದುದರಿಂದ **'ಮಹಾವಿಷ್ಣುರ್ದೇವತಾ'**– ಎಂದು ಸ್ಮರಿಸಿಕೊಳ್ಳಬೇಕು.

ಯಾಕೆ ಪಾರಾಯಣ ಮಾಡುವುದು ? **'ಶ್ರೀಮಹಾವಿಷ್ಣುಪ್ರಸಾದಸಿದ್ಧ್ಯರ್ಥಂ'** ಮತ್ತೇನೂ ಬೇಡ, ನಿನ್ನ ಪ್ರಸಾದ, ಅನುಗ್ರಹ ನನ್ನ ಮೇಲೆ ಆಗಲಿ. ಅದಕ್ಕಾಗಿ ಈ ಸ್ತೋತ್ರವನ್ನು ಪಠಿಸುತ್ತಿದ್ದೇನೆ.

**'ಪಾರಾಯಣೇ ವಿನಿಯೋಗ:'** ಅಥವಾ **'ಜಪೇ ವಿನಿಯೋಗ:'**

ಪಾರಾಯಣದಲ್ಲಿ ಅಥವಾ ಜಪದಲ್ಲಿ ಈ ಸ್ತೋತ್ರವನ್ನು ಬಳಸಿಕೊಳ್ಳುತ್ತಿದ್ದೇನೆ.

**ವಾಸುದೇವನ ಸ್ಮರಣೆಯ ಔಚಿತ್ಯ :**

ಮೊದಲು ಹೀಗೆ ಸ್ಮರಿಸಿಕೊಂಡು ಬಳಿಕ ಪಾರಾಯಣದಲ್ಲಿ ತೊಡಗಬೇಕು.

ಉಪನಯನ ಆಗದಿದ್ದವರಿದ್ದರೆ ಶ್ರೀಕಾರ, ಉಪನಯನ ಆದವರಾದರೆ ಓಂಕಾರ.

**ಶ್ರೀ ನಮೋ ಭಗವತೇ ವಾಸುದೇವಾಯ ಶ್ರೀ**

ಉಪನಯನವಾದವರಾದರೆ **'ಓಂ ನಮೋ ಭಗವತೇ ವಾಸುದೇವಾಯ ಓಮ್|**

ಶ್ರೀ ವಿಷ್ಣುವಿನ ಪ್ರಸಾದಕ್ಕಾಗಿ ವಿಷ್ಣುಸಹಸ್ರನಾಮದ ಪಾರಾಯಣ. ಶ್ರೀ ವಿಷ್ಣುವಿನ ಪ್ರಸಾದವಾದರೂ ಈ ಸಂಸಾರದ ಜಂಜಾಟದಿಂದ ಬಿಡುಗಡೆ ಪಡೆಯುವುದಕ್ಕೆ. ಸಂಸಾರದ ಜಂಜಾಟದ ಬಿಡುಗಡೆ ನೀಡುವವನಾದರೂ ವಾಸುದೇವರೂಪಿ ಪರಮಾತ್ಮ. **'ವಾಸುದೇವಃ ಮೋಕ್ಷದಾತಾ'** ಈ ಸಂಸಾರ ಜಂಜಾಟದಿಂದ ಬಿಡುಗಡೆ ನೀಡುತ್ತಾನೆ ವಾಸುದೇವ. ಆದುದರಿಂದಲೇ **'ಓಂ ನಮೋ ಭಗವತೇ ವಾಸುದೇವಾಯ ಓಮ್'** ಎಂದು ವಾಸುದೇವನ ಸ್ಮರಣೆಯನ್ನು ಮೊತ್ತಮೊದಲು ನಡೆಸಲಾಗುವುದು.

ಹೀಗೆ **'ಅಸ್ಯ ಶ್ರೀ ವಿಷ್ಣೋರ್ದಿವ್ಯಸಹಸ್ರನಾಮಸ್ತೋತ್ರಸ್ಯ....'** ಇತ್ಯಾದಿಯಾಗಿ ವಿಷ್ಣುಸಹಸ್ರನಾಮದ ಋಷಿ, ಛಂದಸ್ಸು, ದೇವತೆಗಳನ್ನು ಸ್ಮರಿಸಿಕೊಂಡು, ಶ್ರೀ ವಿಷ್ಣುವಿನ ಪ್ರಸಾದ ಸಿದ್ಧಿಯಾಗಲೆಂದು ಪಾರಾಯಣ ನಡೆಸುತ್ತಿದ್ದೇನೆಂದು ಉದ್ದೇಶವನ್ನು ದೃಢಪಡಿಸಿಕೊಂಡು **'ಓಂ ನಮೋ ಭಗವತೇ ವಾಸುದೇವಾಯ'– ಓಂ ವಿಶ್ವಾಯ ನಮಃ ಓಮ್'** (ಓಂಕಾರದ ಸ್ಥಳದಲ್ಲಿ ಓಂಕಾರ–ಪಠನಾನಧಿಕಾರಿಗಳು ಶ್ರೀಕಾರವನ್ನು ಪಠಿಸಿ) ಎಂದು ಘೋಷಿಸಿ ಸ್ತೋತ್ರವನ್ನು ಪ್ರಾರಂಭಿಸಬೇಕು – **'ವಿಶ್ವಂ ವಿಷ್ಣುರ್ವಷಟ್ಕಾರೋ......'** ಇತ್ಯಾದಿಯಾಗಿ.

## ವಿಶ್ವಂ ವಿಷ್ಣುರ್ವಷಟ್ಕಾರೋ ಭೂತಭವ್ಯಭವತ್ಪ್ರಭುಃ |
## ಭೂತಕೃತ್ ಭೂತಭೃದ್ ಭಾವೋ ಭೂತಾತ್ಮಾ ಭೂತಭಾವನಃ || ೧ ||

### ೧. ವಿಶ್ವಮ್ – ಎಲ್ಲವೂ ಯಾರ ಅಧೀನವೋ ಅಂತಹವನು.

ವಿವರಣೆ: ಭೀಷ್ಮರು ಶರಪಂಜರದಲ್ಲಿ ಮಲಗಿದ್ದಾರೆ. ಹದಿನೆಂಟು ಅಕ್ಷೌಹಿಣೀಸೇನೆ ನಾಶವಾಗಿದೆ. ಭೀಷ್ಮರು 'ನೀನೇ ಇದಕ್ಕೆಲ್ಲ ಕಾರಣ' ಎಂದರು. ವಿಶ್ವಶಬ್ದಕ್ಕೆ ಸರ್ವ ಎಂಬ ಅರ್ಥ. ಎಲ್ಲವೂ ನಿನ್ನಿಂದಲೇ ಆಗಿದೆ ಎಂದು ಹೇಳುವ ತಾಳ್ಮೆ ಭೀಷ್ಮರಲ್ಲಿ ಇಲ್ಲದಿರುವಾಗ ಸೂಕ್ಷ್ಮವಾಗಿ 'ಎಲ್ಲ ನೀನೇ' – ಎಂದರು. ಅದೇ ವಿಶ್ವಶಬ್ದದ ಅರ್ಥ. ವಿಶ್ವ ಶಬ್ದಕ್ಕೆ ಅನೇಕಾನೇಕ ಅರ್ಥಗಳಿರುವುದಾದರೂ 'ಎಲ್ಲವೂ ನಿನ್ನಿಂದ' – ಎಂಬ ಒಂದು ಅರ್ಥವನ್ನು ಇಟ್ಟುಕೊಳ್ಳೋಣ. ಯಾವುದು ಎಲ್ಲ ? ಮುಂದೆ ಅದರದ್ದೇ ವಿವರಣೆ. ಮುಂದಿನ ೯೯೯ ನಾಮಗಳೂ ಕೂಡಾ ಮೊದಲಿನ ವಿಶ್ವನಾಮದ ವಿವರಣೆ. ಎಲ್ಲವೂ ನೀನೇ. ವಿಷ್ಣು ವಷಟ್ಕಾರ ಇತ್ಯಾದಿಗಳ ಅರ್ಥಗಳೆಲ್ಲವೂ ನಿನ್ನಿಂದ, ನಿನ್ನಾಧೀನ.

ಪುರುಷಸೂಕ್ತ 'ಪುರುಷ ಏವೇದಂ ಸರ್ವಂ....' – ಎಂಬುದಾಗಿ ಈ ಎಲ್ಲವೂ ಪುರುಷನ ಅಧೀನ ಎಂದು ಹೇಳುತ್ತಿರುವಂತೆ 'ವಿಶ್ವಂ' ಈ ಸರ್ವವೂ ನಿನ್ನ ಅಧೀನ ಎಂದು ಹೇಳಲಾಗುವುದು. ಆದುದರಿಂದ 'ವಿಷ್ಣುಃ ವಿಶ್ವಂ, ವಷಟ್ಕಾರಃ ವಿಶ್ವಂ ಭೂತಭವ್ಯಭವತ್ಪ್ರಭುಃ ವಿಶ್ವಂ...' ಈ ರೀತಿಯಾಗಿ ಪದ್ಯಗಳಲ್ಲಿ ಪಲ್ಲವಿ ಹೇಗೆ ಪ್ರತಿಯೊಂದು ನುಡಿಗೂ ಸಂಬಂಧಿಸಿ ಮತ್ತೆ ಮತ್ತೆ ಹಾಡಲ್ಪಡುವುದೋ ಹಾಗೆ ಎಲ್ಲವೂ ನೀನೇ ಎಂಬ ಅರ್ಥದ 'ವಿಶ್ವಂ' ಎಂಬುದನ್ನು ಪ್ರತಿಯೊಂದು ನಾಮಕ್ಕೂ ಸಂಬಂಧಿಸಿದಂತೆ ಪಠಿಸುವುದು ಉತ್ತಮ ಕ್ರಮ.

ಕೃಷ್ಣಾಷ್ಟೋತ್ತರ ಶತನಾಮಸ್ತೋತ್ರ ಕೃಷ್ಣ ಶಬ್ದದಿಂದ, ವೇಂಕಟೇಶಸ್ತೋತ್ರ ವೇಂಕಟೇಶನಾಮದಿಂದ ಪ್ರಾರಂಭಗೊಳ್ಳುವುದಾದರೂ ವಿಷ್ಣುಸಹಸ್ರನಾಮ ವಿಷ್ಣುನಾಮದಿಂದ ಪ್ರಾರಂಭಗೊಳ್ಳದೆ ವಿಶ್ವನಾಮದಿಂದ ಪ್ರಾರಂಭಗೊಳ್ಳುವ ಉದ್ದೇಶ ಇದೂ ಒಂದು.

### ೨. ವಿಷ್ಣುಃ – ಎಲ್ಲ ಕಡೆ ಇರುವವನು.

ವಿವರಣೆ : ಪಾಂಡವರ ಪಕ್ಷದಲ್ಲಿ ನೀನೇ ಇದ್ದವ, ಕೌರವರ ಪಕ್ಷದಲ್ಲಿ ನೀನೇ ಇದ್ದವ. ಅದಕ್ಕಿಂತ ಮೊದಲು ಎಲ್ಲೆಲ್ಲಿ ಯುದ್ಧಗಳು ನಡೆದಿದೆಯೋ ಅಲ್ಲೆಲ್ಲ

ನೀನು ಇದ್ದವ. ನೀನು ಇಲ್ಲ ಎಂದರೆ ಯುದ್ಧ ನಡೆಯುವುದಿಲ್ಲ ಎಂದರ್ಥ. ನೀನು ಇಲ್ಲ ಎಂದರೆ ಯಾವ ಕೆಲಸವೂ ನಡೆಯುವುದಿಲ್ಲ ಎಂದರ್ಥ.

ಹಾಗಾದರೆ 'ಸರ್ವತ್ರ ವ್ಯಾಪ್ತ'– ಎಂಬ ಅರ್ಥದ ಈ ಹೆಸರು ದೇವರಿಗಲ್ಲದೆ ಬೇರೆ ಯಾರಿಗೂ ಕೊಡುವುದಿಲ್ಲ. ಯಾಕೆಂದರೆ ಉಳಿದವರೆಲ್ಲರ ವ್ಯಾಪ್ತಿಗೆ ಇತಿಮಿತಿ ಉಂಟಂತೆ. ನೀನು ಇಷ್ಟರ ತನಕ, ನೀನು ಇಷ್ಟರ ತನಕ – ಎಂಬುದಾಗಿ. ದೇವರು ಎಷ್ಟರ ತನಕ ? ಗೊತ್ತಿಲ್ಲ. ವಿಷ್ಣು ಎಂದರೆ ವ್ಯಾಪ್ತ ಎಂದರ್ಥ. ಎಲ್ಲಿ ವ್ಯಾಪ್ತ ಎಂದು ಹೇಳಲಿಲ್ಲ. ಆದ್ದರಿಂದ ಸರ್ವತ್ರ ವ್ಯಾಪ್ತ ಎಂದು ಅರ್ಥ ಮಾಡಬೇಕು. 'ನೀನು ಬರಬೇಕು' ಎಂದು ಒಬ್ಬನಿಗೆ ಹೇಳಿ ಯಾವಾಗ ಬರಬೇಕೆಂದು ದಿವಸವನ್ನು ತಿಳಿಸದಿದ್ದರೆ ಅವನು ಪ್ರತಿದಿನ ಬರುವ ಸಾಧ್ಯತೆ ಹೇಗೋ ಹಾಗೆ.

**೩. ವಷಟ್ಕಾರಃ – ಜೀವರಿಗೆ ಜನನ, ಅಸ್ತಿತ್ವ, ಬೆಳವಣಿಗೆ, ಬದಲಾವಣೆ, ಕುಸಿಯುವಿಕೆ ಹಾಗೂ ಮರಣ – ಈ ಆರು ಅವಸ್ಥೆಗಳನ್ನು ಕೊಡುವವನಾಗಿ ಕರೆಯಲ್ಪಡುವವನು.**

**ವಿವರಣೆ :** ವ ಎಂದರೆ ಇದೆ, ಷಟ್ ಎಂದರೆ ಆರು, ಕಾರ ಎಂದರೆ ಕರೆಯಲ್ಪಡುವವನು. ನೀನು ಏನು ಎಂದು ಕರೆಯಲ್ಪಡುವಿ ? 'ವಷಟ್' ಎಂದು ಕರೆಯಲ್ಪಡುವಿ. ಸಂಸಾರದಲ್ಲಿ ಇರುವವರಿಗೆಲ್ಲ ಆರು ಅವಸ್ಥೆಗಳನ್ನು ಕೊಡುವವನು ನೀನು . ಆದುದರಿಂದ ನಿನ್ನನ್ನು 'ವಷಟ್' – ಎಂದು ಕರೆಯಲಾಗುವುದು. 'ಷಟ್' ಇರುವುದು ಸಂಸಾರದ ಜೀವರಲ್ಲಿ. ಹೀಗಿರುವಾಗ ನನ್ನನ್ನೇಕೆ 'ವಷಟ್' ಎಂದು ಕರೆಯುವರು ? ಎಂದ ಕೃಷ್ಣ. ನಮಗೆ 'ಷಟ್' ಕೊಟ್ಟವ ನೀನು. ಆದುದರಿಂದ 'ವಷಟ್'– ಎಂದು ನಿನ್ನನ್ನು ಕರೆಯುವರು ಎಂದರು ಭೀಷ್ಮರು.

ಸಂಸಾರದ ಜೀವರಲ್ಲಿ ಇರುವ ಷಟ್ – ಜಾಯತೇ – ಅಸ್ತಿ – ವರ್ಧತೇ– ಪರಿಣಮತೇ – ಅಪಕ್ಷೀಯತೆ – ಮ್ರಿಯತೇ ಎಂದಿರುವಂತೆ ಜನನ, ಇರವು, ಬೆಳವಣಿಗೆ, ಬದಲಾವಣೆ, ಕುಗ್ಗುವಿಕೆ ಹಾಗೂ ಮರಣ ಎಂಬ ಈ ಆರು ಅವಸ್ಥೆಗಳು ಭಗವಂತನಿಗೆ ಅಧೀನವಾದವು. ನಾವು ಅನುಭವಿಸುವವರಾದರೂ ನಮಗೆ ಅವುಗಳನ್ನು ಕೊಡುವವನು ಭಗವಂತ. ಆದುದರಿಂದ ಅವನು ವಷಟ್. ಹೇಗೆ ಧನ ಧನಾಗಾರದಲ್ಲಿ ಇರುವುದಾದರೂ ಧನಾಗಾರವನ್ನು ಧನಿಕ ಎನ್ನುವುದಿಲ್ಲ. ಆ ಹಣದ ಮೇಲೆ ಸ್ವಾಮ್ಯವುಳ್ಳ ವ್ಯಕ್ತಿಯಷ್ಟೇ ಧನಿಕ ಎನಿಸುವನೋ ಹಾಗೆ ವಷಟ್ ಪರಮಾತ್ಮ. ಪರಮಾತ್ಮನನ್ನು 'ವಷಟ್'– ಎಂದು ಕರೆಯದೆ 'ವಷಟ್ಕಾರ'– ಆರನ್ನು ಕೊಡುವವನೆಂದು ಕರೆಸಿಕೊಳ್ಳಲ್ಪಡುವವನು ಎಂಬುದಾಗಿ ಕರೆಸಿಕೊಳ್ಳಲ್ಪಡುವವನೆಂಬ

ಅರ್ಥದ ಕಾರವನ್ನು ಹಚ್ಚಿದ್ದರಿಂದ ನಿಜವಾಗಿ ಷಟ್‌ವುಳ್ಳವನಲ್ಲ, ಆದರೆ ಷಟ್ ಅನ್ನು ನೀಡುವವನಾದುದರಿಂದ 'ವಷಟ್' ಎಂದು ಕರೆಸಿಕೊಳ್ಳಲ್ಪಡುವವನಷ್ಟೇ ಎಂಬುದಾಗಿ ಸೂಚಿತವಾಗುವುದು.

**೪. ಭೂತಭವ್ಯಭವತ್‌ಪ್ರಭುಃ – ಹಿಂದಿನ ಕಾಲದ್ದು, ಮುಂದಿನ ಕಾಲದ್ದು, ಈಗಿನ ಕಾಲದ್ದು–ಇವುಗಳಿಗೆಲ್ಲ ಒಡೆಯನಾಗಿರುವವನು.**

**ವಿವರಣೆ :** ಹಿಂದಿನ ಕಾಲದ್ದಕ್ಕೆ, ಮುಂದಿನ ಕಾಲದ್ದಕ್ಕೆ ಒಡೆಯ ಎಂದರೆ ಸಾಕು. ಯಾಕೆಂದರೆ ಈಗಿನ ಜಗತ್ತಿಗೆ ದೇವರು ಒಡೆಯ ಎಂಬುದು ನಮಗೆ ಹೆಜ್ಜೆ ಹೆಜ್ಜೆಗೆ ಅನುಭವಕ್ಕೆ ಬರುತ್ತಿರುತ್ತದೆ. ಗೊತ್ತಿದ್ದನ್ನು ಶಾಸ್ತ್ರ ತಿಳಿಸಬೇಕಾಗಿಲ್ಲ. ಆದುದರಿಂದಲೇ ಪುರುಷಸೂಕ್ತದಲ್ಲಿ 'ಪುರುಷ ಏವೇದಂ ಸರ್ವಂ ಯದ್ ಭೂತಂ ಯಚ್ಚ ಭವ್ಯಂ....'– ಎಂಬುದಾಗಿ ಹಿಂದಿನ ಹಾಗೂ ಮುಂದಿನ ಜಗತ್ತಿಗೆ ಸ್ವಾಮಿಯಾಗಿರುವವನೆಂದಷ್ಟೇ ಹೇಳಲಾಗಿದೆ.

ಆದುದರಿಂದಲೇ ಈ ನಾಮದಲ್ಲೂ ಮೊದಲು 'ಭೂತ'– ಹಿಂದಿನದ್ದು, ಭವ್ಯ – ಮುಂದಿನದ್ದು ಎಂದು ಮೊದಲು ಉಲ್ಲೇಖಿಸಿ, ಹಾಗಾದರೆ ಈಗಿನದ್ದಕ್ಕೆ ಎಂಬ ಪ್ರಶ್ನೆ ಬಂದಾಗ 'ಭವತ್' ಈಗಿನದ್ದು ಎಂಬುದನ್ನೂ ಸೇರಿಸಿ ಈ ಮೂರು ಕಾಲದ ಪ್ರಪಂಚಕ್ಕೂ ಪ್ರಭು ಆಗಿರುವವನು ಎಂದು ಸ್ತುತಿಸಲಾಗಿದೆ.

**೫. ಭೂತಕೃತ್ – ಇರುವಂತಹದ್ದನ್ನು ಸೃಷ್ಟಿ ಮಾಡುವವನು.**

**ವಿವರಣೆ :** ಯಾವಾಗ ಉಂಟು ? ಎಲ್ಲಿ ಉಂಟು ? – ಎಂಬ ಎರಡು ಪ್ರಶ್ನೆಗಳನ್ನು ಯಾವ ಯಾವ ವಸ್ತುವಿನ ಬಗ್ಗೆ ಕೇಳಿ ಉತ್ತರ ಪಡೆಯಬಹುದೋ ಅದು ಭೂತ ಅಂದರೆ ಇರುವಂತಹ ವಸ್ತು. ಯಾವಾಗ ಉಂಟು ? ಎಂದಾಗಲೀ, ಎಲ್ಲಿ ಉಂಟು ? ಎಂದಾಗಲೀ ಪ್ರಶ್ನೆಗಳಿಗೆ ಮೊಲದ ಕೋಡಿಗೆ ಸಂಬಂಧಿಸಿದಂತೆ ಉತ್ತರ ಕೊಡಲಾಗುವುದಿಲ್ಲ. ಆದುದರಿಂದ ಮೊಲದ ಕೋಡು 'ಭೂತ' ಅಲ್ಲ, ವಸ್ತು ಅಲ್ಲ. ಮಾನವನಿಗಾದರೂ ಕೆಲವೊಮ್ಮೆ ಒಳಗೊಳಗೆಯೇ ಯಾರಿಗೂ ಕಾಣಿಸದಂತ ಕೋಡು ಬರುವುದುಂಟು. ಅದಕ್ಕಾಗಿ ಶಾಸ್ತ್ರಕಾರರು ಮನುಷ್ಯನ ಕೋಡು ಎನ್ನದೆ ಮೊಲದ ಕೋಡನ್ನೇ ವಸ್ತುವಲ್ಲದಿರುವಂತಹದ್ದೆಂದು ಉಲ್ಲೇಖಿಸುತ್ತಿರುವರು.

**೬. ಭೂತಭೃತ್ - ವಸ್ತುಗಳನ್ನು ಪಾಲಿಸುವವನು.**

**೭. ಭಾವಃ - ಪ್ರತಿಯೊಂದು ಚಟುವಟಿಕೆಯ ಅಭಿಪ್ರಾಯ ಆಗಿರುವವನು.**

**ವಿವರಣೆ :** ಏನನ್ನೇ ಮಾಡಲಿ, ಏನನ್ನೇ ಹೇಳಲಿ – ಅದು ಯಾಕಾಗಿ ? ಅಂದರೆ

ಅದರ ಅಭಿಪ್ರಾಯ ಏನು ? – ಎಂಬ ಪ್ರಶ್ನೆ ಬಂದೇ ಬರುವುದು. ಅದಕ್ಕೆಲ್ಲ ಉತ್ತರ ದೇವರಿಗಾಗಿ. ಅವನ ಪ್ರೀತಿಗಾಗಿ. ಅಂದರೆ ಅವೆಲ್ಲವುಗಳ ಭಾವ ದೇವರು.

**'ಪ್ರಾತಃಪ್ರಭೃತಿಸಾಯಾಂತಂ ಸಾಯಾದಿಪ್ರಾತರಂತತಃ**
**ಯತ್ಕರೋಮಿ ಜಗನ್ನಾಥ ತದಸ್ತು ತವ ಪೂಜನಮ್'**

ಎಂದು ದೇವರಲ್ಲಿ ಪ್ರಾರ್ಥಿಸುವಂತೆ ಬೆಳಗ್ಗಿನಿಂದ ಸಾಯಂಕಾಲದವರೆಗೆ, ಸಾಯಂಕಾಲದಿಂದ ಬೆಳಗಿನವರೆಗೆ ಏನೇನು ಮಾಡುತ್ತೇವೆಯೋ ಅವೆಲ್ಲ ದೇವರಿಗಾಗಿ ಅವನ ಪ್ರೀತಿಗಾಗಿ. ಈ ಅನುಸಂಧಾನವೇ ಭಾವನಾಮದ ಅರ್ಥ.

**೮. ಭೂತಾತ್ಮಾ – ಸಮಸ್ತ ಪ್ರಾಣಿಗಳ ಪ್ರಾಣಗಳನ್ನು ಹೀರುವವನು.**

ವಿವರಣೆ : 'ಭೂತಕೃತ್'– ಎಂಬುದಾಗಿ ನಮ್ಮನ್ನು ಸೃಷ್ಟಿ ಮಾಡುವವನು, ಭೂತ ಭೃತ್ – ನಮ್ಮನ್ನು ರಕ್ಷಿಸುವವನು, ಭಾವಃ – ಹುಟ್ಟಿಗೆ ಒಳಗಾದ ನಮ್ಮ ಭಾವನೆ ಭಗವತ್ಪರವಾಗಿ ಇರಬೇಕಾದದ್ದು – ಎಂದು ತಿಳಿಸಿದ ಮೇಲೆ –'ಭೂತಾತ್ಮಾ' ನಮ್ಮ ಆಯುಷ್ಯ ಮುಗಿಯಿತು ಎಂದಾಕ್ಷಣ ನಮಗೆ 'ಆತ್ಮ' ನಾಗಿ ಬರುವವನು. ಆತ್ಮಾ ಎಂದರೆ 'ಆದತ್ತೇ ಇತಿ ಆತ್ಮಾ' – ಸ್ವೀಕರಿಸುವವನು. ಸಮಸ್ತ ಪ್ರಾಣಿಗಳ ಪ್ರಾಣಗಳನ್ನು ಹೀರುವವನು – ಎಂದರ್ಥ.

**೯. ಭೂತಭಾವನಃ – ಚೇತನರಿಗೆ ಆಯಾ ಶರೀರದಲ್ಲಿ ಇರುವಿಕೆಯನ್ನು ಕಲ್ಪಿಸುವವನು.**

ವಿವರಣೆ : ದೇವರು ಯಾವ ಚೇತನರನ್ನು ಸೃಷ್ಟಿ ಮಾಡಿದ, ರಕ್ಷಣೆ ಮಾಡಿದನೋ ಒಂದು ದಿನ ಆ ಚೇತನರ ಪ್ರಾಣ ಹೀರಿ ಕೊಂಡೊಯ್ಯುವನು. ಎಲ್ಲಿಗೆ ? ಮುಂದಿನ ಜನ್ಮದಲ್ಲಿ ಯಾವ ಶರೀರದಲ್ಲಿ ಹಾಕಬೇಕೋ ಅಲ್ಲಿಗೆ. ಹಿಂದಿನ ಜನ್ಮದಲ್ಲಿ ಮಾಡಿದ್ದನ್ನೂ ಈ ಜನ್ಮದಲ್ಲಿ ಮಾಡಿದ್ದನ್ನೂ ಕೂಡಿಸಿದ, ಕಳೆದ, ಗುಣಿಸಿದ, ಭಾಗಿಸಿದ ಅಷ್ಟೆಲ್ಲ ನಡೆಸಿದಾಗ ಸಿಕ್ಕಿತು – ನರಿಜನ್ಮ ! ಯಾಕೆಂದರೆ ನರಿಯಂತೆ ಜೀವನ ಪೂರ್ಣ ಮೋಸ ಮಾಡಿದ್ದೇ ಅಧಿಕ !

ಹೀಗೆ ಚೇತನರಿಗೆ ಅವರವರ ಕರ್ಮಗಳಿಗನುಗುಣವಾಗಿ ಆಯಾ ಶರೀರದಲ್ಲಿ ಹಾಕಿ ಅಲ್ಲಿ ಇರುವಂತೆ ಮಾಡುವವನು.

ವಿಷ್ಣು ಸಹಸ್ರನಾಮಗಳಿಗೆ ನಮ್ಮ ತಲೆಯೊಳಗೆ ಹೊಕ್ಕದ ಅರ್ಥಗಳನ್ನು ಉಂಟು ಅಂತ ಅಷ್ಟೇ ತಿಳಿದುಕೊಂಡು ನಮ್ಮ ಜೀವನಕ್ಕೆ ಬೇಕಾದ ಅರ್ಥಗಳನ್ನೇ ಚಿಂತನೆ ಮಾಡಬೇಕು.

ವಿಷ್ಣು ಸಹಸ್ರನಾಮವನ್ನು ಪಠಿಸುವಾಗ ಎಲ್ಲಿ ಅಕಾರ ಹೇಳಬೇಕು ? ಎಲ್ಲಿ ಓಕಾರ ಹೇಳಬೇಕು ? ಎಲ್ಲಿ ಅಲ್ಪ ಪ್ರಾಣ ; ಎಲ್ಲಿ ಮಹಾಪ್ರಾಣ – ಇವೆಲ್ಲ ಪುಸ್ತಕದಲ್ಲಿ ಚೆನ್ನಾಗಿ ಅಚ್ಚಾಗಿರುವುದು. ಆದುದರಿಂದ ಅವನ್ನೆಲ್ಲ ಚೆನ್ನಾಗಿ ನೋಡಿಕೊಂಡು ಪಾರಾಯಣ ನಡೆಸಬೇಕು. ಪರೀಕ್ಷೆಯಲ್ಲಿ ಬರೆದ ಉತ್ತರವನ್ನು ಮಾತ್ರವಲ್ಲದೆ, ಸ್ವಚ್ಛತೆ, ಶಿಸ್ತುಬದ್ಧತೆ ಇವೆಲ್ಲವನ್ನೂ ಹೇಗೆ ಪರಿಗಣಿಸಲಾಗುವುದೋ ಹಾಗೆ ವಿಷ್ಣುಸಹಸ್ರನಾಮವನ್ನು ಅರ್ಥಾನುಸಂಧಾನ ಪೂರ್ವಕವಾಗಿ ನಡೆಸಬೇಕೆಂಬುದರ ಜೊತೆಗೆ ಸ್ಪಷ್ಟವಾಗಿ, ಹೆಚ್ಚಿನ ತಪ್ಪಿಲ್ಲದೆ ನಡೆಸುವ ಪಠನಕ್ಕೂ ದೇವರ ಮೆಚ್ಚುಗೆ ಇದ್ದೇ ಇದೆ.

**ಪೂತಾತ್ಮಾ ಪರಮಾತ್ಮಾ ಚ ಮುಕ್ತಾನಾಂಪರಮಾಗತಿಃ |**
**ಅವ್ಯಯಃ ಪುರುಷಃ ಸಾಕ್ಷೀ ಕ್ಷೇತ್ರಜ್ಞೋಽಕ್ಷರ ಏವ ಚ || ೨ ||**

**೧೦. ಪೂತಾತ್ಮಾ – ಪವಿತ್ರನಾದ ಚೇತನ.**

ವಿವರಣೆ : ಆತ್ಮಾ ಎಂಬುದಕ್ಕೆ ನಿನ್ನೆ ಸಂಹಾರಕ ಎಂಬ ಅರ್ಥವನ್ನು ನೋಡಿದ್ದಾಯಿತು. ಇಂದು ಮತ್ತೊಂದು ಅರ್ಥ – ಚೇತನ. ಪ್ರತಿಯೊಂದು ಶರೀರದಲ್ಲೂ ಚೇತನ ಇದ್ದೇ ಇರುವುದು. ಶರೀರದ ಮೂಲಕ ಚಟುವಟಿಕೆಗಳು ನಡೆಯುವವೆಂದರೆ ಅಲ್ಲಿ ಚೇತನ ಇರಲೇಬೇಕು. ಆ ಚೇತನನನ್ನೇ ಆತ್ಮಾ ಎಂದು ಕರೆದರು. ಆ ಎಂದರೆ ಚೆನ್ನಾಗಿ, ಚೆನ್ನಾಗಿ ಎಂದರೆ ಯಥಾಶಕ್ತಿ. ತ ಎಂದರೆ ವ್ಯಾಪಿಸಿದ್ದಾನೆ, ಮ ಎಂದರೆ ತಿಳಿದಿದ್ದಾನೆ, ಆದುದರಿಂದ ಯಥಾಶಕ್ತಿ ವ್ಯಾಪಿಸಿದವನನ್ನು, ಯಥಾಶಕ್ತಿ ತಿಳಿದವನನ್ನು ಆತ್ಮಾ ಎಂದು ಕರೆದರು. ಇಲ್ಲಿ ಕುಳಿತಿರುವ ಎಲ್ಲ ಶರೀರಗಳಲ್ಲೂ ಆತ್ಮರಿದ್ದಾರೆ. ಆ ಆತ್ಮರು ಆಯಾ ಶರೀರದಲ್ಲಿ ವ್ಯಾಪಿಸಿ ಕೊಂಡಿರುವವರು. ಆದುದರಿಂದಲೇ ಶರೀರದ ಯಾವ ಭಾಗವನ್ನು ಮುಟ್ಟಿದರೂ ತಿಳುವಳಿಕೆ ಉಂಟಾಗುವುದು. ಹೀಗೆ ಜೀವಾತ್ಮರು ಯಥಾಶಕ್ತಿ ತಮ್ಮ ತಮ್ಮ ಶರೀರಗಳಲ್ಲಿ ವ್ಯಾಪಿಸಿರುವವರು. ಆದರೆ ದೇವರು ಮಾತ್ರ 'ಆ' ಚೆನ್ನಾಗಿ ಎಲ್ಲ ಕಡೆ ವ್ಯಾಪಿಸಿರುವುದರಿಂದ ಹಾಗೂ 'ಆ' ಚೆನ್ನಾಗಿ ಎಲ್ಲವನ್ನೂ ಬಲ್ಲವನಾದುದರಿಂದ 'ಆತ್ಮಾ' ಎನಿಸುವನು.

ಈ ಆತ್ಮರಲ್ಲಿ ಯಾರಿಗೂ ತಾವು ನೂರಕ್ಕೆ ನೂರು ಪಾಲು ಶುದ್ಧರೆಂಬ ಆತ್ಮವಿಶ್ವಾಸ ಇಲ್ಲ. ಯಾರೂ ಕೂಡಾ ನಾನು ಪೂರ್ಣವಾಗಿ ಶುದ್ಧನಾಗಿದ್ದೇನೆ ಎಂದು ಎದೆ ಮುಟ್ಟಿಕೊಂಡು ಖಂಡಿತಾ ಹೇಳಲಾರ. ಆದ್ದರಿಂದ ನೂರಕ್ಕೆ ನೂರು ಪಾಲು ಶುದ್ಧನಾದ ಆತ್ಮಾ ಎಂದರೆ ನೀನೇ ಎಂದು ಭೀಷ್ಮರು ಕೃಷ್ಣನನ್ನು ಕುರಿತು

ಹೇಳುವರು. ಯಾರಿಗೋ ಅನ್ಯಾಯ ಮಾಡಿ ಶರಪಂಜರದಲ್ಲಿ ಮಲಗಿರುವ, ಎಂಟು ವ್ಯಕ್ತಿಗಳ ಮರಣ ದುಃಖವನ್ನು ಅನುಭವಿಸುತ್ತಿರುವ ನಾನು 'ಪೂತಾತ್ಮಾ' ಅಲ್ಲ – ಎಂದು ಭೀಷ್ಮರು ಅಭಿಪ್ರಾಯ ಪಡುವರು. ಕೃಷ್ಣ ಮಾತ್ರ ಪೂತಾತ್ಮಾ ಶುದ್ಧಾತ್ಮಾ. ಹೀಗೆ ಸ್ತುತಿಸಿದಾಗ ಕೃಷ್ಣನು ನಮ್ಮ ಆತ್ಮವೂ ಪೂತ ಆಗುವಂತೆ ಮಾಡುವನು.

ಕಂಸನ ಸಾಕುತಾಯಿ 'ಪೂತನಾ' – ಎನಿಸಿರುವುದು – ಅವಳು ಪವಿತ್ರಳಲ್ಲ– 'ಪೂತ ನ'– ಎಂಬ ಅರ್ಥದಲ್ಲೂ. ಭೀಷ್ಮರು ಎದುರಿಗಿರುವ ಕೃಷ್ಣನನ್ನು ನೀನು ಶುದ್ಧನಾದ ಚೈತನ್ಯ ಸ್ವರೂಪಿ, ಎಂತಹ ಕಶ್ಮಲದ ಮಧ್ಯದಲ್ಲಿ ಇದ್ದರೂ ಪರಮಾತ್ಮ ಪವಿತ್ರನೇ. ಕಶ್ಮಲಗಳಲ್ಲೆಲ್ಲ ಅತಿ ಹೇಯವಾದದ್ದು ಮಲ. ಅದನ್ನು ಅಮೇಧ್ಯ– ಮೇಧ್ಯ ಎಂದರೆ ಪವಿತ್ರ – ಅಂತಹ ಮೇಧ್ಯಕ್ಕೆ ವಿರುದ್ಧವಾದುದು ಎಂದೇ ಕರೆಯುವೆವು. ನಾಯಿ ಅಮೇಧ್ಯವನ್ನು ತಿನ್ನುತ್ತದೆ ಎಂದೇ ಅದನ್ನು ಮನೆಯ ಹೊರಗಿಡಲಾಗುವುದು. ಅದನ್ನು ಮುಟ್ಟಿದರೆ ಸ್ನಾನ ಮಾಡಬೇಕೆಂದಿರುವುದು. ಅಂತಹ ಅಮೇಧ್ಯದಲ್ಲೂ ಭಗವಂತನ ಸನ್ನಿಧಾನ ಇದ್ದೇ ಇದೆ. ಆದರೆ ಅವನು ಅಮೇಧ್ಯದಲ್ಲೂ ಮೇಧ್ಯನಾಗಿಯೇ ಇರುವನು.

ಒಂದೊಮ್ಮೆ ಜಾತಾಶೌಚ ಮೃತಾಶೌಚಗಳ ಮೈಲಿಗೆ ಇದ್ದರೂ ಅದನ್ನು ಮರೆತು ದೇವಾಲಯದೊಳಗೆ ಹೊಕ್ಕಿದಾಗ ಅದರ ನೆನಪು ಬಂತೆಂದರೆ ಪೂತಾತ್ಮನನ್ನು ಸ್ಮರಿಸಿಕೊಳ್ಳಬೇಕು. **'............. ಯಃ ಸ್ಮರೇತ್ ಪುಂಡರೀಕಾಕ್ಷಂ ಸ ಬಾಹ್ಯಾಭ್ಯಂತರಶುಚಿಃ'** – ಪುಂಡರೀಕಾಕ್ಷನ ಸ್ಮರಣೆಯಿಂದ ನಮಗೂ ಸ್ವಲ್ಪ ಪೂತತ್ವ ಬರುವುದೆಂದು ಶಾಸ್ತ್ರಕಾರರು ತಿಳಿಸಿರುವರು.

**೧೧. ಪರಮಾತ್ಮಾ : ಉತ್ತಮ ಚೇತನ.**

**ವಿವರಣೆ :** ದೇಹಗಳಲ್ಲಿಯೇ ತಾರತಮ್ಯ ಇದೆ ಎಂದ ಮೇಲೆ ದೇಹದೊಳಗಿರುವ ಆತ್ಮಗಳಲ್ಲೂ ತಾರತಮ್ಯ ಇರಲೇಬೇಕು ತಾನೇ ? ಧನಾಗಾರಕ್ಕೆ ಹೋದಾಗ ಒಬ್ಬ ಬಾಗಿಲಿನಲ್ಲಿ ನಿಂತಿರುತ್ತಾನೆ. ಅವನು ಅಲ್ಲಿ ನಿಲ್ಲಲಿಕ್ಕೇ ಯೋಗ್ಯ. ಒಳಗೆ ಹೋದಾಗ ಒಬ್ಬ ಕಾಣಿಸುತ್ತಾನೆ. ಕಾರಕೂನ ಎನಿಸುವ ಅವನು ಅಲ್ಲಿ ಇರಲೇ ಯೋಗ್ಯ. ಮತ್ತೊಬ್ಬ ಅಧಿಕಾರಿ ಚೇರ್ ಮೇಲೆ ಕೂತಿರ್ತಾನೆ. ದ್ವಾರಪಾಲಕನಿಂದ ಅಧಿಕಾರಿಯವರೆಗೆ ಇರುವವರಲ್ಲಿಯ ತಾರತಮ್ಯ ಯಾರಿಗೆ ತಾನೇ ಗೊತ್ತಾಗದು?

ಹೀಗೆ ದೇಹಗಳಲ್ಲಿಯೇ ತಾರತಮ್ಯ ಇದೆ ಎಂದ ಮೇಲೆ ಆತ್ಮರಲ್ಲೂ ತಾರತಮ್ಯ ಇದ್ದೇ ಇರುವುದು. ಗಣಪತಿ ಚೇತನಕ್ಕಿಂತ ಸ್ವಲ್ಪ ಎತ್ತರದ್ದು ಪಾರ್ವತಿ ಚೇತನ. ಪಾರ್ವತಿ ಚೇತನಕ್ಕಿಂತ ಸ್ವಲ್ಪ ಉತ್ಕೃಷ್ಟಚೇತನ ರುದ್ರದೇವರದ್ದು. ರುದ್ರ

ದೇವರ ಚೇತನಕ್ಕಿಂತ ಉತ್ಕೃಷ್ಟ ಚೇತನ ಭಾರತಿದ್ದು, ಭಾರತೀಚೇತನಕ್ಕಿಂತ ಉತ್ಕೃಷ್ಟ ಚೇತನ ವಾಯು ಮತ್ತು ಬ್ರಹ್ಮದೇವರದ್ದು. ಅವರಿಗಿಂತ ಉತ್ಕೃಷ್ಟಾತ್ಮಾ ಲಕ್ಷ್ಮೀ. ಲಕ್ಷ್ಮೀಗಿಂತ ಉತ್ಕೃಷ್ಟ ಆತ್ಮಾ ಭಗವಂತ. ಅವನಿಗಿಂತ ಉತ್ಕೃಷ್ಟವಾದ ಆತ್ಮಾ ಮತ್ತೊಂದಿಲ್ಲ. ಆದುದರಿಂದ ಅವನ ಹೆಸರು ಪರಮಾತ್ಮಾ. ಯಾವ ಚೇತನಕ್ಕಿಂತ ದೊಡ್ಡ ಚೇತನ ಮತ್ತೊಂದು ಇದೆಯೋ ಆ ಚೇತನವನ್ನು ಪರಮಾತ್ಮಾ ಎಂದು ಕರೆಯುವುದಿಲ್ಲ. ಲಕ್ಷ್ಮೀಚೇತನಕ್ಕಿಂತ ಉತ್ಕೃಷ್ಟ ಚೇತನ ಭಗವಂತನಾದುದರಿಂದ ಲಕ್ಷ್ಮೀ ಪರಮಾತ್ಮಾ ಅಲ್ಲ. ಭಗವಂತನಿಗಿಂತ ಉತ್ತಮ ಚೇತನ ಮತ್ತೊಂದಿಲ್ಲದಿರುವುದರಿಂದ ಭಗವಂತ ಮಾತ್ರ ಪರಮಾತ್ಮಾ.

ಭಗವದ್ಗೀತೆಯಲ್ಲಿ ಹದಿನೈದನೆಯ ಅಧ್ಯಾಯದಲ್ಲಿ ಶ್ರೀ ಕೃಷ್ಣ ತನ್ನನ್ನು **'ಉತ್ತಮಃ ಪುರುಷಸ್ತ್ವನ್ಯಃ....'** ಕ್ಷರಾಕ್ಷರ ಪುರುಷರಿಗಿಂತ ಉತ್ತಮನಾದ ಪುರುಷ ಮತ್ತೊಬ್ಬನಿದ್ದಾನೆಂದು ತಿಳಿಸಿ, **'ಪರಮಾತ್ಮೇತ್ಯುದಾಹೃತಃ'** ಅವನೇ ಶಾಸ್ತ್ರದಲ್ಲಿ ಪರಮಾತ್ಮಾ ಎಂದು ಕರೆಸಿಕೊಳ್ಳಲ್ಪಡುವವನು ಎಂದು ಸಂದೇಶ ನೀಡಿರುವನು. 'ಪರಮಾತ್ಮಾ'– ಎಂಬ ಹೆಸರನ್ನು ಕೇಳಿದಾಕ್ಷಣ ಆ ಆತ್ಮನಿಗಿಂತ ಉತ್ತಮನಾದವನು ಮತ್ತೊಬ್ಬನಿಲ್ಲ ಎಂದು ಸ್ಪಷ್ಟವಾದುದರಿಂದ ಅರ್ಜುನ ಪರಮಾತ್ಮನಿಗಿಂತ ಉತ್ತಮ ಪುರುಷ ಇದ್ದಾನೋ, ಅವನು ಯಾರು, ಎಂಬೆಲ್ಲ ಪ್ರಶ್ನೆಗಳನ್ನು ಕೇಳಲೇ ಇಲ್ಲ.

ಲಕ್ಷ್ಮೀದೇವಿ ಪರಮಾತ್ಮನಂತೆ ನಿತ್ಯಮುಕ್ತಳು. ಸಂಸಾರದ ಸಂಬಂಧ ಇಲ್ಲ. ಲಿಂಗ ದೇಹದ ಸಂಪರ್ಕ ಇಲ್ಲ. ಆದ್ದರಿಂದ ಅವಳೂ 'ಪೂತಾತ್ಮಾ' ಎನಿಸಬಹುದು. ಆದರೆ 'ಪರಮಾತ್ಮಾ' ಆಗುವುದಿಲ್ಲ. ಯಾಕೆಂದರೆ ಅವಳಿಗಿಂತಲೂ ಉತ್ತಮನಾದ ಆತ್ಮ ಭಗವಂತ ಇರುವುದರಿಂದ.

ಅದಕ್ಕಾಗಿ ಭೀಷ್ಮರು ಕೃಷ್ಣನನ್ನು ನೀನು ಬರೇ ಪೂತಾತ್ಮಾ ಅಲ್ಲ. 'ಪರಮಾತ್ಮಾ' ಕೂಡಾ – ಪೂತಾತ್ಮಾ ಪರಮಾತ್ಮಾ ಚ – ಎಂಬುದಾಗಿ ಚಕಾರದಿಂದ ಲಕ್ಷ್ಮೀದೇವಿಯಲ್ಲಿ ಇಲ್ಲದ ಮಹಿಮೆಯನ್ನು ಉಲ್ಲೇಖಿಸಿರುವರು.

**೧೨. ಮುಕ್ತಾನಾಂ ಪರಮಾ ಗತಿಃ – ಮೋಕ್ಷಕ್ಕೆ ಹೋದವರಿಗೆ ಮುಖ್ಯ ಆಶ್ರಯ.**

**ವಿವರಣೆ:** ಕೃಷ್ಣನಿಗೆ ಹಾಗೂ ಸಮಸ್ತ ಶಾಸ್ತ್ರಕಾರರಿಗೂ ಅತ್ಯಂತ ಅಭಿಪ್ರೇತ ಸಿದ್ಧಾಂತ– ಮುಕ್ತಾನಾಂ ಪರಮಾ ಗತಿಃ

ಪತ್ರಿಕೆಗಳಲ್ಲಿ ಕೆಲವರು ಸತ್ತಾಗ 'ವೈಕುಂಠ ವಾಸಿಗಳಾದರು' ಮತ್ತೆ ಕೆಲವರು ಸತ್ತಾಗ 'ಬ್ರಹ್ಮೈಕ್ಯ ಹೊಂದಿದರು, ಇನ್ನು ಕೆಲವರು ಸತ್ತಾಗ 'ಲಿಂಗೈಕ್ಯ ಹೊಂದಿದರು'– ಎಂದೆಲ್ಲ ಬರುತ್ತಿರುತ್ತದೆ. ಆಗ ಸಂದೇಹ ಸಹಜ – ಸತ್ತ ಮೇಲೆ

ದೇವರ ಪಾದಮೂಲವನ್ನು ತಲುಪುವುದೋ ? ದೇವರೇ ಆಗುವುದೋ ? ಹೇಗೆಲ್ಲ.....

ಅದಕ್ಕೆ ಭೀಷ್ಮರು ಸಮಾಧಾನ ನೀಡಿದರು–'ಮುಕ್ತಾನಾಂ ಪರಮಾ ಗತಿಃ' ಮೋಕ್ಷವನ್ನು ಹೊಂದಿದಾಗ ದೇವರನ್ನು ಆಶ್ರಯಿಸಿಕೊಂಡಿರುವುದೇ ಹೊರತು ದೇವರೇ ಆಗುವುದು ಅಲ್ಲ. ಗತಿ ಎಂದರೆ ಆಶ್ರಯ. ನಮಗೆ ಮನೆ ಆಶ್ರಯ. ಅದ್ದರಿಂದ ಮನೆಗೆ ಹೋಗುವುದೆಂದರೆ ಮನೆಯೇ ಆಗುವುದು ಅಲ್ಲ. ಅದರಂತೆ ಸತ್ತ ವ್ಯಕ್ತಿಗಳು ಮುಕ್ತರಾಗುವುದೆಂದರೆ ಭಗವಂತನನ್ನು ಪ್ರವೇಶಿಸುವುದೇ ಹೊರತು ಭಗವಂತನೇ ಆಗುವುದಲ್ಲ.

ಯಮನೇ ಮುಂತಾದ ಅನೇಕ ದೇವತೆಗಳ ಹಿಂದೆ ನಾವು ಮೋಕ್ಷಕ್ಕೆ ಹೋಗಿದ್ದೇವೆ ಎಂದ ಮೇಲೆ ಆ ದೇವತೆಗಳೆಲ್ಲ ನಮಗೆ ಆಶ್ರಯರೇ. ಎಲ್ಲ ದೇವತೆಗಳಿಗೆ ಚತುರ್ಮುಖಬ್ರಹ್ಮ ನೇತಾರನಾಗಿದ್ದು ಅವನು ಆಶ್ರಯನಾಗಿರುವನು. ಆದರೆ ಈ ಚತುರ್ಮುಖ ತನ್ನ ಹಿಂದೆ ಬಂದ ಈ ಕಲ್ಪದ ಮುಕ್ತರಿಗೆ ಆಶ್ರಯನೇ ಹೊರತು ಕಳೆದ ಕಲ್ಪದಲ್ಲಿ ಮತ್ತೊಬ್ಬ ಚತುರ್ಮುಖನ ಹಿಂದೆ ಸಾಗಿದ್ದ ಮುಕ್ತರಿಗೆ ಅವನು ಆಶ್ರಯನಾಗುವುದಿಲ್ಲ.

ಅಂತೂ ಮೋಕ್ಷದಲ್ಲಿ ನಮ್ಮ ಮೇಲೆ ಅನೇಕರು ಆಶ್ರಯರಿರುವರು. ಆದರೆ ಎಲ್ಲರಿಗಿಂತ ಮುಖ್ಯ ಆಶ್ರಯ ಭಗವಂತ. ಅವನು ಈ ಕಲ್ಪದ ಮುಕ್ತರಿಗೂ, ಹಿಂದಿನ ಕಲ್ಪದ ಮುಕ್ತರಿಗೂ, ಮುಂದಿನಕಲ್ಪದ ಮುಕ್ತರಿಗೂ ಮುಖ್ಯ ಆಶ್ರಯ ಎಂದು ಭೀಷ್ಮರು ಸ್ತುತಿಸಿರುವರು – 'ಮುಕ್ತಾನಾಂ ಪರಮಾ ಗತಿಃ'

ಪುರುಷ ಸೂಕ್ತದಲ್ಲಿ 'ಉತಾಮೃತತ್ವಸ್ಯೇಶಾನಃ'– ಎಂಬ ಮಾತಿನಲ್ಲಿ ಭಗವಂತನು ಸಂಸಾರವಸ್ಥೆಯಲ್ಲಿ ಇರುವವರಿಗೆ ಮಾತ್ರವಲ್ಲ, ಮುಕ್ತವರ್ಗಕ್ಕೂ ಸ್ವಾಮಿ ಆಗಿರುವನೆಂದು ಸಂದೇಶಿಸಿದ್ದನ್ನೇ 'ಮುಕ್ತಾನಾಂ ಪರಮಾ ಗತಿಃ'– ಎಂದು ಭೀಷ್ಮರು ಸ್ತುತಿಸಿರುವರು.

೧೩. ಅವ್ಯಯಃ – ನಾಶ ಇಲ್ಲದವನು .

ವಿವರಣೆ: ನಾಲ್ಕು ಬಗೆಯ ನಾಶಗಳಿವೆ 'ಅನಿತ್ಯತ್ವಂ'– ಎಂಬುದು ಮೊದಲನೆಯ ನಾಶ. ಮಡಕೆ, ಬಟ್ಟೆ ಮುಂತಾದವುಗಳು ಒಂದು ದಿನ ಇಲ್ಲ ಎಂದೇ ಆಗುವವು. ಅಂದರೆ ಸ್ವರೂಪಹಾನಿರೂಪವಾದ ನಾಶಕ್ಕೆ ಒಳಗಾಗುವವು. ಆದರೆ ದೇವರು ಎಂದೂ ಇಲ್ಲ ಎಂದಾಗಲಾರ. ಅಂದರೆ ಅವನಿಗೆ ಸ್ವರೂಪಹಾನಿ ರೂಪವಾದ ನಾಶ ಇಲ್ಲ. ಎರಡನೆಯ ನಾಶ ದುಃಖ ಪ್ರಾಪ್ತಿ. ತಡಕೊಳ್ಳಲಾರದ ದುಃಖ ಆದಾಗ – 'ಸತ್ತೆ'– ಎಂದೇ ವ್ಯವಹರಿಸಲಾಗುವುದು. ಇದರಿಂದಾಗಿ ದುಃಖ ಪ್ರಾಪ್ತಿಯೂ ಒಂದು ಬಗೆಯ

ನಾಶ ಎಂದು ಸಿದ್ಧವಾಗುವುದು. ಭಗವಂತನಿಗೆ ದುಃಖವೇ ಇಲ್ಲದುದರಿಂದ ದುಃಖಪ್ರಾಪ್ತಿ ರೂಪವಾದ ನಾಶ ಇಲ್ಲ. ಮತ್ತೊಂದು ಬಗೆಯ ನಾಶ ದೇಹಹಾನಿ. ಅವರು ಸತ್ತರು ಎನ್ನುವೆವು. ಅವರ ಚೇತನ ಬೇರೆ ಬೇರೆ ಲೋಕಕ್ಕೆ ಸಂಚರಿಸುತ್ತ ಇರುತ್ತದೆ. ಹಾಗಾದರೆ ಅವರ ಸಾವು ಎಂದರೆ ದೇಹದ ತ್ಯಾಗ ಎಂದೇ ಅರ್ಥ. ನಮಗೆ ಇರುವ ಸಾವು ಈ ಬಗೆಯದ್ದೇ. ಮಡಿಕೆ ಬಟ್ಟೆ ಇತ್ಯಾದಿಗಳ ಸ್ವರೂಪವೂ ನಾಶವಾಗುವುದಾದರೆ ನಮ್ಮ ಸ್ವರೂಪ ನಾಶವಾಗದೆ ದೇಹ ಮಾತ್ರ ನಾಶ ಹೊಂದುವುದು. 'ನೈನಂ ಛಿಂದಂತಿ ಶಸ್ತ್ರಾಣಿ' ಇತ್ಯಾದಿ ಮಾತು ತಿಳಿಸುವಂತೆ ನಮ್ಮ ಆತ್ಮರಿಗೆ ಶಸ್ತ್ರವೇಧಾದಿಗಳು ಆಗುವುದೇ ಇಲ್ಲ. ಆದುದರಿಂದ ದೇಹಹಾನಿಯೇ ಆತ್ಮರ ನಾಶ. ಭಗವಂತನಿಗೆ ದೇಹಹಾನಿ ಎಂಬ ನಾಶ ಇಲ್ಲ. ಕೃಷ್ಣ ಪರಂಧಾಮಕ್ಕೆ ತೆರಳುವಾಗ ತನ್ನ ಶರೀರದ ಜೊತೆಗೇ ಸಾಗಿದ್ದಾನೆ. ಜರಾವ್ಯಾಧನ ಪ್ರಹಾರಕ್ಕೆ ಬಲಿಯಾದದ್ದು, ಅರ್ಜುನ ಸುಟ್ಟದ್ದು ಅದು ಕೃಷ್ಣನ ಶರೀರದಂತೆಯೇ ಇದ್ದ ಬೇರ ಶರೀರವೇ ಹೊರತು ಕೃಷ್ಣನ ಜ್ಞಾನಾನಂದಾತ್ಮಕ ಶರೀರವಲ್ಲ. ಆದ್ದರಿಂದ ದೇವರ ಪಾಲಿಗೆ ದೇಹಹಾನಿರೂಪವಾದ ನಾಶವೂ ಇಲ್ಲ. ಲಕ್ಷ್ಮೀದೇವಿಗೂ ಮಡಿಕೆ ಇತ್ಯಾದಿಗಳಂತೆ ಸ್ವರೂಪಹಾನಿ ಇಲ್ಲ. ನಮ್ಮಂತೆ ದುಃಖಪ್ರಾಪ್ತಿಯಾಗಲೀ ದೇಹಹಾನಿಯಾಗಲೀ ಇಲ್ಲ. ಆದರೂ 'ಅಪೂರ್ಣತೆ'– ಎಂಬ ನಾಶ ಆಕೆಯ ಪಾಲಿಗೂ ಇದ್ದೇ ಇದೆ. ಅಪೂರ್ಣತೆಯನ್ನು ಅನುಭವಿಸಿದಾಗ ದುಃಖವುಂಟಾಗುವುದರಿಂದ ಅಪೂರ್ಣತೆಯನ್ನೂ ಒಂದು ಬಗೆಯ ಸಾವನ್ನಾಗಿ ಪರಿಗಣಿಸಲಾಗಿದೆ. ಈ ನಾಲ್ಕು ಬಗೆಯ ನಾಶವೂ ಇಲ್ಲದವನು ನೀನು ಮಾತ್ರ ಎಂದು ಭೀಷ್ಮರು ಎದುರಿಗಿರುವ ಕೃಷ್ಣನನ್ನು ಸ್ತುತಿಸುವರು – 'ಅವ್ಯಯಃ'– ಎಂದು.

**೧೪. ಪುರುಷಃ – ಶ್ರೇಷ್ಠವಾದ ಐಶ್ವರ್ಯ, ವೀರ್ಯ, ಯಶಸ್ಸು, ಶ್ರೀಮಂತಿಕೆ, ಜ್ಞಾನ ಹಾಗೂ ವೈರಾಗ್ಯ ಈ ಆರು ಗುಣಗಳನ್ನು ಹೊಂದಿರುವವನು.**

ವಿವರಣೆ : ಭಗವಂತನಲ್ಲಿ ಇನ್ನಾರಲ್ಲೂ ಇಲ್ಲದಷ್ಟು ಐಶ್ವರ್ಯ, ಆರಂಭಿಸಿದ್ದನ್ನು ಕೊನೆಗೊಳಿಸುವಂತಹ ಗುಣರೂಪವಾದ ವೀರ್ಯ, ಯಶಸ್ಸು, ಇಂದ್ರಿಯಸಂಪತ್ತು, ಜ್ಞಾನ, ಇಷ್ಟೆಲ್ಲ ಗುಣಗಳು ಇದ್ದರೂ ವೈರಾಗ್ಯ ಈ ಗುಣಗಳು ಇವೆ. ವ್ಯಾಸ, ಕಪಿಲ ಇತ್ಯಾದಿ ರೂಪಗಳಲ್ಲಿ ವೈರಾಗ್ಯಗುಣದ ಅಭಿವ್ಯಕ್ತಿ ವಿಶೇಷವಾಗಿ ನಡೆದಿದೆ. 'ಏನಿದು ವೇಷ ವೇದವ್ಯಾಸ' ಲಕ್ಷ್ಮೀದೇವಿ ಪಕ್ಕದಲ್ಲೇ ಇರುವಾಗ ಏನಿದು ವೈರಾಗ್ಯದ ವೇಷ ಎಂದು ದಾಸರೊಬ್ಬರು ಹಾಡಿದ್ದುಂಟು. ಸಮಾಜಕ್ಕೆ ವೈರಾಗ್ಯದ ಪಾಠವನ್ನು ಕಲಿಸಿಕೊಟ್ಟಿದ್ದು ಭಗವಂತನೇ.ಆದುದರಿಂದ ಪುರು–ಶ್ರೇಷ್ಠವಾದ ಷ – ಐಶ್ವರ್ಯಾದಿ ಆರುಗುಣಗಳು ಉಳ್ಳವನು ನೀನೇ – ಪುರುಷ ಎಂದು ಕೃಷ್ಣನನ್ನು ಹೊಗಳಿದರು

ಭೀಷ್ಮರು.

**೧೫. ಸಾಕ್ಷೀ – ಎಲ್ಲವನ್ನೂ ನೇರವಾಗಿ ನೋಡುವವನು.**

**ವಿವರಣೆ :** ಸಾಕ್ಷಿಶಬ್ದ ನಮ್ಮಲ್ಲೂ ಚಾಲ್ತಿಯಲ್ಲಿದೆ. ಕೋರ್ಟಿನಲ್ಲಿ ನಮ್ಮ ಪರವಾಗಿ ಸ್ವಲ್ಪ 'ಸಾಕ್ಷಿ' ಹೇಳಬೇಕು – ಎನ್ನಲಾಗುವುದು. ಯಾರು ಖುದ್ದಾಗಿ ನೋಡಿರ್‍ತಾನೋ ಅವನು 'ಸಾಕ್ಷೀ' - ಸಾಕ್ಷಾದ್ ದ್ರಷ್ಟಾ...

ಹೀಗೆ ಸಾಮಾನ್ಯವಾಗಿ ಸಾಕ್ಷಿಗಳು ಬೇರೆಯವರೂ ಇರಬಹುದು. ಆದರೆ ವಸ್ತು ಸ್ವಭಾವದ ತಡೆ, ಕಾಲದ ತಡೆ, ದೇಶದ ತಡೆ, ವಸ್ತುಗಳ ತಡೆ ಈ ಯಾವ ತಡೆಗಳಿದ್ದರೂ ನೇರವಾಗಿ ನೋಡುವವನು ದೇವರು ಮಾತ್ರ. ಅವನಿಗೆ ಪುಣ್ಯಪಾಪಗಳು ಕಾಣಿಸುವವು. ನಿನ್ನೆ ನಡೆದದ್ದು, ನಾಳೆ ಆಗುವಂತಹದ್ದು ಕಾಣಿಸುವುದು. ಎಷ್ಟೋ ದೂರದಲ್ಲಿ ನಡೆಯುವ ಘಟನೆಯೂ ಕಾಣಿಸುವುದು. ಗೋಡೆಯ ಅಡ್ಡದಲ್ಲಿ ನಡೆಯುವುದನ್ನೂ ಕಾಣಬಲ್ಲನು. ಹೀಗೆ ಯಾವ ತಡೆಯೂ ಇಲ್ಲದೆ ಸಾಕ್ಷಾದ್ ದ್ರಷ್ಟು ದೇವರು ಮಾತ್ರ. ಅದಕ್ಕಾಗಿಯೇ ಭೀಷ್ಮರು ನೀನೇ ನಿಜವಾದ ಸಾಕ್ಷೀ ಎಂದು ಶ್ರೀ ಕೃಷ್ಣನನ್ನು ಕರೆದರು.

ಆದುದರಿಂದ ನಾವು ಜೀವನದಲ್ಲಿ ಏನನ್ನಾದರೂ ಸಾಧಿಸಿದ್ದರೆ, ಅದಕ್ಕೆ ನೀನೇ ಸಾಕ್ಷೀ ಎಂದು ದೇವರಲ್ಲಿ ಕೇಳಿಕೊಳ್ಳಬೇಕು.

ನಮ್ಮ ಮೇಲೆ ವೃಥಾ ಅಪರಾಧಗಳ ಆರೋಪ ನಡೆದಲ್ಲಿ 'ಅಯ್ಯೋ ದೇವರೇ!...' ಎಂದು ಉದ್ಗಾರ ತೆಗೆಯುವ ಹಿನ್ನೆಲೆಯಲ್ಲಿ ದೇವರೇ ನೀನೇ ಈ ವಿಷಯದಲ್ಲಿ ಸಾಕ್ಷಿಯಾಗಿ ಅನುಗ್ರಹಿಸಬೇಕೆಂಬ ಅಭಿಪ್ರಾಯ ಇರುವುದು. ವಿದುರ ಸಭೆಯಲ್ಲಿ ದೇವರನ್ನೇ ಸಾಕ್ಷಿಯಾಗಲು ಉದ್ಘೋಷಿಸಿರುವನು.

**೧೬. ಕ್ಷೇತ್ರಜ್ಞಃ – ಶರೀರದ ಒಳ ಹೊರಗೆ ಚೆನ್ನಾಗಿ ತಿಳಿದವನು.**

**ವಿವರಣೆ :** ಕ್ಷೇತ್ರ ಎಂದರೆ ಶ್ರೀ ಕೃಷ್ಣನ ಮಾತಿನಲ್ಲಿಯೇ ತಿಳಿಸುವುದಾದರೆ 'ಇದಂ ಶರೀರಂ ಕೌಂತೇಯ ಕ್ಷೇತ್ರಮಿತ್ಯಭಿಧೀಯತೇ' – ಈ ನಮ್ಮ ನಿಮ್ಮ ಶರೀರವೇ ಕ್ಷೇತ್ರ. ಎಲ್ಲಿ ಬೀಜ ಬಿತ್ತಿ ಒಳ್ಳೆಯ ಫಲ ಪಡೆಯಲಾಗುವುದೋ ಅದು ಕ್ಷೇತ್ರ. ಗದ್ದೆಯಲ್ಲಿ ಬೀಜ ಬಿತ್ತಿ ಬೆಳೆ ತೆಗೆಯಲಾಗುವುದು. ಆದುದರಿಂದ ಅದು ಕ್ಷೇತ್ರ. ನಮ್ಮ ಶರೀರದಲ್ಲಿ ಉಪದೇಶದ ಬೀಜ ಬಿತ್ತಿ ಜ್ಞಾನ, ಭಕ್ತಿಗಳ ಬೆಳೆ ತೆಗೆಯಲಾಗುವುದು. ಆದುದರಿಂದ ಶರೀರ ಕ್ಷೇತ್ರ. ಪತ್ನಿಯಲ್ಲಿ ಪತಿ ಬೀಜ ಬಿತ್ತಿ ಸತ್‌ಸಂತತಿ ಎಂಬ ಬೆಳೆ ತೆಗೆಯುವನು. ಆದುದರಿಂದ ಪತ್ನಿ ಕ್ಷೇತ್ರ. ಹಾಗೆಯೇ ಬದರಿ, ಕಾಶಿ ಮುಂತಾದ ಕ್ಷೇತ್ರಗಳಲ್ಲಿ ನಮ್ಮನ್ನೇ ಬಿತ್ತಿ ಭಕ್ತಿ, ಜ್ಞಾನಗಳ ಬೆಳೆ

ತೆಗೆಯಲಾಗುವುದು. ಆದುದರಿಂದ ಅವು ಕ್ಷೇತ್ರಗಳೆನಿಸುವವು.

ನಮ್ಮ ಶರೀರ ರೂಪವಾದ ಕ್ಷೇತ್ರವನ್ನು ಚೆನ್ನಾಗಿ ಬಲ್ಲವ ದೇವರು ಮಾತ್ರ. ಅದರ ಒಳಗೆ ಸೂಕ್ಷ್ಮಾತಿಸೂಕ್ಷ್ಮ ಅವಯುವಗಳು ಏನೇನಿವೆ ? ಅವುಗಳ ಕಾರ್ಯಾಚರಣೆಯ ವೈಖರಿ ಏನು ? ಇವನ್ನೆಲ್ಲ ದೇವರು ಮಾತ್ರ ತಿಳಿದಿರುವವನು. ವೈದ್ಯರು ಶರೀರದ ಶಸ್ತ್ರಚಿಕಿತ್ಸೆ ಮಾಡುವರು. ಆದರೆ ಶರೀರದ ಎಲ್ಲ ಅವಯುವಗಳ ಪರಿಚಯ ಅವರಿಗಿರುವುದಿಲ್ಲ. ದೇವರ ಇಚ್ಛೆಗನುಗುಣವಾಗಿಯಷ್ಟೇ – ವೈದ್ಯರು ದೇಹದ ಕೆಲವು ಅಂಶಗಳನ್ನು ತಿಳಿದುಕೊಳ್ಳುವರು. ದೇವರಿಗೆ ಇಚ್ಛೆ ಇಲ್ಲದಿದ್ದಲ್ಲಿ ವೈದ್ಯರಿಗೆ ಏನೂ ತಿಳಿಯುವುದೇ ಇಲ್ಲ.

ಆದುದರಿಂದ ಭೀಷ್ಮರು ಸ್ತುತಿಸಿದರು – 'ಕ್ಷೇತ್ರಜ್ಞ' ನೀನೇ ಎಂಬುದಾಗಿ.

**೧೭. ಅಕ್ಷರಃ – ಇಂದ್ರಿಯಗಳಲ್ಲಿ ಇದ್ದುಕೊಂಡು ರಮಿಸುವವನು.**

**ವಿವರಣೆ :** ಇಂದ್ರಿಯಗಳಿಗೆ ನಾಶ ಇಲ್ಲ ಎಂಬ ಅಭಿಪ್ರಾಯದಲ್ಲಿ 'ಅಕ್ಷ' ಎಂದು ಇಂದ್ರಿಯಗಳನ್ನು ಶಾಸ್ತ್ರಕಾರರು ಕರೆದಿರುವರು. ಒಂದು ಇಂದ್ರಿಯ ನಾಶವಾದರೂ ಅದರ ಶಕ್ತಿ ಮತ್ತೊಂದು ಇಂದ್ರಿಯದಲ್ಲಿ ಸೇರಿಕೊಳ್ಳುವುದು. ಆದುದರಿಂದ ಮತ್ತೊಂದು ಇಂದ್ರಿಯ ಹೆಚ್ಚು ಚುರುಕಾಗಿರುತ್ತದೆ.

ಅಲ್ಲದೆ, ಜೀವ ಶರೀರವನ್ನು ಬಿಡುವಾಗ ಇಂದ್ರಿಯಗಳು ಜೀವನ ಜೊತೆಗೇ ಹೋಗುವವು. ಒಂದಂಶದಿಂದ ಜೀವನ ಜೊತೆಗೆ ಹೋದರೆ ಮತ್ತೊಂದು ಅಂಶದಿಂದ ಆಯಾ ಇಂದ್ರಿಯಾಭಿಮಾನಿ ದೇವತೆಗಳಲ್ಲಿ ಸೇರಿಕೊಳ್ಳುತ್ತದೆ. ಕಣ್ಣಿನ ಇಂದ್ರಿಯ ಸೂರ್ಯನಲ್ಲಿ, ಕಿವಿಯ ಇಂದ್ರಿಯ ಚಂದ್ರನಲ್ಲಿ, ವಾಗಿಂದ್ರಿಯ– ಅಗ್ನಿಯಲ್ಲಿ, ಪಾಣಿ ಇಂದ್ರಿಯ –ಇಂದ್ರನಲ್ಲಿ, ಪಾದ ಇಂದ್ರಿಯ – ಜಯಂತನಲ್ಲಿ, ಘ್ರಾಣೇಂದ್ರಿಯ – ವಾಯುವಿಲ್ಲಿ ಸೇರುವುದು. ಆದುದರಿಂದ ಇಂದ್ರಿಯಗಳಿಗೆ ನಾಶ ಇಲ್ಲ. ಅಕ್ಷ ಎಂದರೆ ನಾಶ ಇಲ್ಲದ ಇಂದ್ರಿಯಗಳು. ಆ ಇಂದ್ರಿಯಗಳನ್ನು ಬಳಸಿಕೊಂಡು ರಮಿಸುವವನು ನೀನೇ ಎಂದು ಕೃಷ್ಣನಲ್ಲಿ ನಿವೇದಿಸಿಕೊಳ್ಳಲಾಗಿದೆ.

ಪಾಂಡವರಿಗೆ ಉಪದೇಶಿಸಲಿಕ್ಕೆ ನನ್ನಿಂದಾಗುವುದಿಲ್ಲ ಎಂದು ಭೀಷ್ಮರು ಅಂದಾಗ ಶ್ರೀ ಕೃಷ್ಣ ಹೇಳಿದ್ದ ನಿನ್ನ ಬಾಯಿಯಲ್ಲಿದ್ದು ಕೊಂಡು ನಾನೇ ಉಪದೇಶಿಸುವೆನೆಂದು. ಅದರಂತೆ ಭೀಷ್ಮರ ವಾಗಿಂದ್ರಿಯದಲ್ಲಿದ್ದುಕೊಂಡು ರಮಿಸುತ್ತಿರುವವನು ಶ್ರೀ ಕೃಷ್ಣ.

ಯಾವಾಗಲೂ ನಮ್ಮ ಇಂದ್ರಿಯಗಳಲ್ಲಿದ್ದುಕೊಂಡು ರಮಿಸುತ್ತಿರಬೇಕು

ಎಂಬ ಉದ್ದೇಶದಿಂದಲೇ ನಾವು ಆಚಮನ ಮಾಡುವಾಗ ಆಯಾ ಇಂದ್ರಿಯಗಳನ್ನು ಮುಟ್ಟಿಕೊಳ್ಳುವುದು. ಆಚಮನದಲ್ಲಿ ಎರಡು ಕ್ರಮಗಳಿವೆ 'ಋಗ್ವೇದಾಯ ಸ್ವಾಹಾ ಯಜುರ್ವೇದಾಯ ಸ್ವಾಹಾ....' ಎಂದು ಕೆಲವರು ವೇದವನ್ನು ಕುಡಿಯುವವರು, 'ಕೇಶವಾಯ ಸ್ವಾಹಾ, ನಾರಾಯಣಾಯ ಸ್ವಾಹಾ...' ಎಂದು ಕೆಲವರು ದೇವರನ್ನೇ ಕುಡಿಯುವವರು.

'ಋಗ್ವೇದಾಯ ಸ್ವಾಹಾ....' ಈ ಆಚಮನದ ಕ್ರಮದಲ್ಲಿ 'ಅಗ್ನಯೇ ನಮಃ' ಎಂದು ಬಾಯಿಯನ್ನು 'ವಾಯುವೇ ನಮಃ' ಎಂದು ಮೂಗನ್ನು 'ಸೂರ್ಯಾಯ ನಮಃ', 'ಚಂದ್ರಾಯ ನಮಃ'– ಎಂದು ಕಣ್ಣನ್ನು, 'ದಿಗ್ಭ್ಯೋ ನಮಃ' ಎಂದು ಕಿವಿಗಳನ್ನು 'ಇಂದ್ರಾಯ ನಮಃ', ಎಂದು ಕೈಗಳನ್ನು... ಹೀಗೆ ಪ್ರತಿನಿತ್ಯ ಇಂದ್ರಿಯಾಭಿಮಾನಿಗಳನ್ನು ಮುಟ್ಟುತ್ತ ಇದ್ದರೆ ಅವರು ಯಾವಾಗಲೂ ಅಲ್ಲಿಯೇ ಇರುವರು. ಇಲ್ಲದಿದ್ದಲ್ಲಿ ಮೂವತ್ತು ವರ್ಷಕ್ಕೆ ಕಿವಿ ಕೇಳುವುದಿಲ್ಲ. ಕಣ್ಣು ತೋರುವುದಿಲ್ಲ.... ಹೀಗೆಲ್ಲ ಆಗುವುದು. ಸಾಯುವವರೆಗೆ ಇಂದ್ರಿಯಾಭಿಮಾನಿಗಳು ಆಯಾ ಇಂದ್ರಿಯದಲ್ಲಿಯೇ ಇರಬೇಕಾದರೆ ಪ್ರತಿನಿತ್ಯ ಆಚಮನದ ಮೂಲಕ ಅವರ ಸ್ಮರಣೆ ನಡೆಸಬೇಕು.

'ಕೇಶವಾಯ ಸ್ವಾಹಾ.....' ಇತ್ಯಾದಿಯಾಗಿ ಪ್ರಾರಂಭವಾಗುವ ಮತ್ತೊಂದು ಆಚಮನದ ಕ್ರಮದಲ್ಲಿ ದೇವರು ಕೇಶವಾದಿ ರೂಪಗಳಲ್ಲಿ ನಮ್ಮ ಕಣ್ಣು, ಕಿವಿ ಇತ್ಯಾದಿ ಇಂದ್ರಿಯಗಳಲ್ಲಿದ್ದುಕೊಂಡು ರಮಿಸುತ್ತಿರುವನು ಎಂಬ ಅನುಸಂಧಾನ ಮಾಡಬೇಕು.

'ಅಕ್ಷರ ಏವ ಚ'– ಎಂಬುದಾಗಿ ಅಕ್ಷರನಾಮದ ಬಳಿಕ ಏವ ಹಾಗೂ ಚ ಎಂಬ ಎರಡು ಶಬ್ದಗಳಿವೆ. 'ಅಕ್ಷರ ಏವ'– ನನ್ನ ಇಂದ್ರಿಯಗಳಲ್ಲಿದ್ದುಕೊಂಡು ರಮಿಸುವವನು 'ವಿಶ್ವಂ ಏವ' ಸರ್ವನಾದ ನೀನೇ ಎಂದರ್ಥ. ನಮ್ಮ ಇಂದ್ರಿಯಗಳಲ್ಲಿದ್ದುಕೊಂಡು ನೀನೇ ರಮಿಸುವುದಾದರೆ ಆ ಇಂದ್ರಿಯಗಳು ನಮ್ಮ ಇಂದ್ರಿಯಗಳೆನಿಸುವುದಾದರೂ ಹೇಗೆ ? ಎಂದರೆ 'ಏವ ಚ' – ಎಂಬುದಾಗಿ ಚಕಾರದಿಂದ ನಿನ್ನ ಜೊತೆಗೆ ನಾನೂ ಕೂಡಾ. ನೀನು ಸಾರಭಾಗವನ್ನು ಸ್ವೀಕರಿಸಿದರೆ, ನಾನು ಅಸಾರಭಾಗವನ್ನಷ್ಟೇ ಸ್ವೀಕರಿಸುವವನು.

ಈ ರೀತಿಯಾಗಿ ಏವಕಾರ ಮತ್ತು ಚಕಾರದ ಸಂಬಂಧವನ್ನು ಹೆಚ್ಚಿನ ನಾಮಗಳಿಗೆಲ್ಲ ಹಚ್ಚಿಕೊಂಡು ಆಯಾ ನಾಮಾರ್ಥದ ಮುಖ್ಯಭಾಗ ಪರಮಾತ್ಮನಿಗೇ ಸಂಬಂಧಿಸಿ, ಅಮುಖ್ಯಭಾಗವಷ್ಟೇ ಜೀವಾತ್ಮರಿಗೂ ಸಂಬಂಧಿಸುದೆಂದು

ಇಟ್ಟುಕೊಳ್ಳಬೇಕು.

**ಯೋಗೋ ಯೋಗವಿದಾಂನೇತಾ ಪ್ರಧಾನಪುರುಷೇಶ್ವರಃ |**
**ನಾರಸಿಂಹವಪುಃ ಶ್ರೀಮಾನ್ ಕೇಶವಃ ಪುರುಷೋತ್ತಮಃ || ೩ ||**

**೧೮. ಯೋಗಃ – ಎಲ್ಲದಕ್ಕೂ ಉಪಾಯ.**

**ವಿವರಣೆ :** ಉದ್ಯೋಗ ದೊರಕಬೇಕು, ಮದುವೆ ಆಗಬೇಕು, ಮಕ್ಕಳಾಗಬೇಕು, ಮೋಕ್ಷ ಹೊಂದಬೇಕು – ಇವೆಲ್ಲಕ್ಕೂ ಪರಮಾತ್ಮನೇ 'ಯೋಗ'– ಅವನೇ ಉಪಾಯ. ಬೇರೆ ಬೇರೆ ದೇವತೆಗಳನ್ನು ಹಿಡಿಯುವುದಕ್ಕಿಂತ ದೇವರನ್ನೇ ಉಪಾಯವನ್ನಾಗಿ ಸ್ವೀಕರಿಸಬೇಕು.

ಜಂಜಾಟದಿಂದ ಪಾರಾಗುವುದಕ್ಕೂ ಅವನೇ ಯೋಗ– ಉಪಾಯ. ಭೀಷ್ಮರು ಶರಪಂಜರದಲ್ಲಿ ಮಲಗಿದ್ದಾರೆ. ಬಾಣಗಳು ಮೈತುಂಬ ಚುಚ್ಚುತ್ತಿವೆ. ಎಂಟು ಗರ್ಭವಾಸಗಳ ದುಃಖವನ್ನು ಅನುಭವಿಸುತ್ತಿದ್ದಾರೆ. ಇದರಿಂದ ಪಾರಾಗುವುದಕ್ಕೆ ನೀನೇ 'ಯೋಗ'– ಉಪಾಯ – ಎನ್ನುವರು ಭೀಷ್ಮರು ಎದುರಿಗಿರುವ ಕೃಷ್ಣನನ್ನು ಸಂಬೋಧಿಸಿ.

**೧೯. ಯೋಗವಿದಾಂ ನೇತಾ – ಉಪಾಯ ರೂಪಿಯಾದ ಭಗವಂತನನ್ನು ಬಲ್ಲವರನ್ನು ಪ್ರೇರಿಸುವವನು.**

**ವಿವರಣೆ :** ಭಗವಂತನನ್ನು ಉಪಾಯ ಎಂದೆವು. ಆದರೆ ಭಗವಂತನೇನೂ ನೇರವಾಗಿ ಆಯಾ ಉದ್ದೇಶವನ್ನು ಈಡೇರಿಸುವುದಿಲ್ಲ. ಉದ್ಯೋಗ ಇಲ್ಲ. ಅವರಿಗೆ ದೇವರು ಉಪಾಯ, ಮನೆ ಇಲ್ಲ –ಅವರಿಗೆ ದೇವರು ಉಪಾಯ. ದೇವರನ್ನು ಹೀಗೆ 'ಉಪಾಯ'– ಎಂದು ಉಪಾಸನೆ ಮಾಡುತ್ತಿದ್ದಲ್ಲಿ ಯಾರನ್ನೋ ಪ್ರೇರಿಸಿ ಅವರ ಮೂಲಕ ಹಣ ಕೊಡಿಸುವನು. ಯಾರು 'ಯೋಗವಿತ್' ಗಳು ಅಂದರೆ ಯೋಗ ಎನಿಸುವ ಭಗವಂತನನ್ನು ಬಲ್ಲವರಿದ್ದಾರೋ ಅಂತಹವರನ್ನು 'ನೇತಾ' ಪ್ರೇರಿಸುವವನು.

ಭಗವಂತ ಎಲ್ಲರಿಗೂ ಪ್ರೇರಣೆ ಮಾಡುವನು. ಆದೆರ ತನ್ನನ್ನು ಬಲ್ಲವರನ್ನು ಚೆನ್ನಾಗಿ ಪ್ರೇರಣೆ ಮಾಡುವನು. ಸಮೀಚೀನ ಮಾರ್ಗದಲ್ಲಿ ಪ್ರೇರಣೆ ಮಾಡುವನು.

**೨೦. ಪ್ರಧಾನಪುರುಷೇಶ್ವರಃ – ಸರಸ್ವತಿ ಚತುರ್ಮುಖ ಇವರಿಗೆ ಒಡೆಯ.**

**ವಿವರಣೆ :** ಸಾಂಸಾರಿಕ ಪುರುಷರ ಗುಂಪಿನಲ್ಲಿ ಪುರಷ ಎಂದರೆ ಚತುರ್ಮುಖನೇ.

ಪರಮಾತ್ಮ ಅವನಿಗಿಂತಲೂ ಮುಖ್ಯ ಪುರುಷನೆನಿಸಿದರೂ ಅವನು ಸಂಸಾರಿಗಳ ಗುಂಪಿನಲ್ಲಿ ಸೇರದಿರುವುದರಿಂದ ಸಂಸಾರಿಗಳ ಗುಂಪಿನಲ್ಲಿ ಪುರುಷ ಎಂದರೆ ಚತುರ್ಮುಖನೇ. ಅಂತಹವನಿಗೂ ಭಗವಂತನು ಈಶ್ವರ ಎಂದಾಗ ಭಗವಂತನ ಮಹಿಮೆ ಇನ್ನಷ್ಟು ಸ್ಪಷ್ಟವಾಗುವುದು. ಹಿಂದೆ 'ಭೂತಭವ್ಯಭವತ್ಪ್ರಭುಃ'– ಎಂದು ಎಲ್ಲರಿಗೂ ಪರಮಾತ್ಮ ಒಡೆಯ ಎಂದು ಹೇಳಿಯಾಗಿದೆ. ಪುನ ಸರಸ್ವತಿಗೂ ಚತುರ್ಮುಖನಿಗೂ ಒಡೆಯ ಎಂದಾಗ ಅವನ ಮಹತ್ತ್ವವನ್ನು ಆ ಪ್ರಯುಕ್ತ ಎದ್ದು ತೋರಿಸಿದಂತಾಗುವುದು. ಲೌಕಿಕ ಉದಾಹರಣೆ ಕೊಡುವುದಾದರೆ ಶ್ರೀ ವಿದ್ಯಾಮಾನ್ಯತೀರ್ಥರ ಪಾಂಡಿತ್ಯ, ತಪಸ್ಸು– ಇತ್ಯಾದಿಗಳ ಪರಿಚಯ ಇಲ್ಲದವರಿಗೆ ಲೋಕದಲ್ಲಿ ಪ್ರಸಿದ್ಧರಾಗಿರುವ ಶ್ರೀ ವಿಶ್ವೇಶ ತೀರ್ಥರಿಗೂ ಗುರುಗಳಾಗಿದ್ದವರು ಶ್ರೀ ವಿದ್ಯಾಮಾನ್ಯತೀರ್ಥರು – ಎಂದು ಹೇಗೆ ಪರಿಚಯಿಸಿ ಕೊಡಲಾಗುವುದೋ ಹಾಗೆ.

**೨೧. ನಾರಸಿಂಹವಪುಃ – ಗುಣಗಳಿಗೆ ಆಶ್ರಯವಾದ ಸಿಂಹದ ಶರೀರ ಉಳ್ಳವನು.**

*** ನರರಿಗೆ ಸಂಬಂಧ ಪಡುವ ಭಯವನ್ನು ಹೋಗಲಾಡಿಸುವ ಶರೀರ ಉಳ್ಳವನು.**

**ವಿವರಣೆ :** ಭಗವಂತನ ದಶಾವತಾರಗಳಲ್ಲಿ ನರಸಿಂಹದ ರೂಪದವರೆಗಿನ ರೂಪಗಳು ಪಶು ರೂಪಗಳು – ಮತ್ಸ್ಯ, ಕೂರ್ಮ, ವರಾಹ ಹಾಗೂ ನರಸಿಂಹ ಎಂಬುದಾಗಿ. ಆ ಮೇಲೆಯಷ್ಟೇ ವಾಮನಾದಿ ಮಾನವ ರೂಪಗಳು – ಸಿಂಹ ಪಶುಗಳಲ್ಲೆಲ್ಲ ಶ್ರೇಷ್ಠವಾದುದರಿಂದ ಅದನ್ನೇ ಉಲ್ಲೇಖಿಸಿ ಅಂತಹ ಸಿಂಹದ ರೂಪ ತಾಳಿದಾಗಲೂ ಆ ರೂಪ 'ನಾರ' ಗುಣಗಳಿಗೆ ಆಶ್ರಯ ; ದೋಷದೂರ. ಶ್ರೇಷ್ಠವಾದ ಸಿಂಹದ ರೂಪವನ್ನೇ ಹೀಗೆಂದ ಮೇಲೆ ಸಿಂಹದ ಅಧೀನಗಳಾಗಿರುವ ವರಾಹಾದಿ ಪಶುಗಳ ರೂಪದಲ್ಲಿರುವ ಮತ್ಸ್ಯ, ಕೂರ್ಮ, ವರಾಹ ಈ ರೂಪದಲ್ಲಿರುವ ಭಗವದ್ರೂಪಗಳೂ 'ನಾರ'– ಗುಣಪೂರ್ಣ, ದೋಷದೂರ.

ಮತ್ತೊಂದು ಜೀವನದಲ್ಲಿ ಅವಶ್ಯವಾಗಿ ಅಳವಡಿಸಿಕೊಳ್ಳ ಬೇಕಾದ ಅರ್ಥ–

ಭಯ ಆಯಿತೆಂದರೆ ನರಸಿಂಹ ಜಪ ಮಾಡುವುದು ಕ್ರಮ. 'ನರಸಿಂಹ ಮಂತ್ರ ಒಂದಿರಲು ಸಾಕು' – ಎಂದು ದಾಸರು ಭಯಪರಿಹಾರಕ್ಕೆ ನರಸಿಂಹ ಮಂತ್ರ ಪ್ರಯೋಜಕ ಎಂದಿರುವರು.

ಭಯ ಬರುವುದಕ್ಕೆ ಅನೇಕ ಕಾರಣಗಳಲ್ಲಿ ಭೂತಗಳ ಕಾಟವೂ ಒಂದು ಕಾರಣ. ಭೂತಗಳು ಯಾರ ಕೈಯಲ್ಲಿವೆ ? ರುದ್ರದೇವರ ವಶದಲ್ಲಿ.

ರುದ್ರದೇವರಾದರೂ ನರಸಿಂಹನನ್ನೇ ಉಪಾಸನೆ ಮಾಡುವವರು. ಅಂತಹ ನರಸಿಂಹನನ್ನೇ ನಾವು ನಮ್ಮ ಕೈಯಲ್ಲಿಟ್ಟುಕೊಳ್ಳೋಣ. ಆಗ ಯಾವ ಭೂತ ಪ್ರೇತಗಳ ಕಾಟವೂ ಬರುವುದಿಲ್ಲ. ನಾರ ಎಂದರೆ ನರರಿಗೆ ಸಂಬಂಧ ಪಡುವಂತಹದ್ದು. ನರರಿಗೆ ಸಂಬಂಧ ಪಡುವಂತಹದ್ದು ಆಸ್ತಿ, ಮನೆ, ಮಠ – ಇವುಗಳ ಜೊತೆಗೆ ಭಯವೂ ಕೂಡಾ. ಆಸ್ತಿ, ಮನೆ, ಮಠಾಧಿಗಳು ನಮ್ಮಲ್ಲಿ ಭಯ ಉಂಟಾಗುವುದಕ್ಕೆ ಪ್ರೇರಕವಾದವು. ಆದುದರಿಂದ ನರರಿಗೆ ಸಂಬಂಧಪಡುವಂತಹದ್ದು ಭಯ, ಮರಣ ಭಯ. ಅದಕ್ಕೆ 'ಸಿಂಹ'– ಸಿಂಹ ಎಂದರೆ ಹಿಂಸೆ ಮಾಡುವಂತಹದ್ದು 'ಹಿನಸ್ತೀತಿ ಸಿಂಹಃ'ನರರಿಗೆ ಸಂಬಂಧ ಪಟ್ಟದ್ದಕ್ಕೆ ಹಿಂಸೆ ಮಾಡುವವನು. ವಪುಃ ಎಂದರೆ ಶರೀರ. ಕೃಷ್ಣ ನೀನು ಎಂತಹ ಶರೀರವನ್ನು ಹೊಂದಿದವ ಗೊತ್ತಾ ? ನರರಿಗೆ ಸಂಬಂಧ ಪಡುವ ಭಯವನ್ನು ಹಿಂಸಿಸುವ ಶರೀರ ಉಳ್ಳವನು. ಯಾರು ಕೃಷ್ಣನ ಈ ಬಗೆಯ ಚಿತ್ರಣವನ್ನು ಮನಸ್ಸಿನಲ್ಲಿ ತಂದುಕೊಳ್ಳುವರೋ ಅವರ ಭಯ ಓಡಿಹೋಗುವುದು.

**೨೨. ಶ್ರೀಮಾನ್ – ಒಳ್ಳೆಯ ಇಂದ್ರಿಯಗಳು ಉಳ್ಳವ.**

**ವಿವರಣೆ :** ದೇವರು ಎಲ್ಲೋ ಇದ್ದು ಮತ್ತೆಲ್ಲಿದ್ದೋ ರೂಪವನ್ನು ಕಾಣಬಲ್ಲ; ಶಬ್ದವನ್ನು ಕೇಳಬಲ್ಲ, ರಸವನ್ನು ಆಸ್ವಾದಿಸಬಲ್ಲ, ಗಂಧವನ್ನು ಆಘ್ರಾಣಿಸಬಲ್ಲ. ಆದುದರಿಂದಲೇ ತಾನೇ, ಎಲ್ಲೋ ದೇವರ ಮನೆ, ಮತ್ತೆಲ್ಲೋ ಅಡುಗೆ ಮನೆ. ಆದರೂ 'ಅದ್ಯ ತಿಷ್ಠತಿ ಯತ್ ಕಿಂಚಿತ್ ಕಲ್ಪಿತಂ ಚಾಪರಂ ಗೃಹೇ....' ಉಳಿದ ಭಾಗ ಅಡುಗೆ ಮನೆಯಲ್ಲೇ ಇದೆ ಎಂದು ಅವನಿಗೆ ಸಮರ್ಪಿಸುವುದು.

ಹೀಗೆ ಎಲ್ಲೋ ಕುಳಿತು ಮತ್ತೆಲ್ಲೋ ಇರುವ ರೂಪಾದಿಗಳನ್ನು ಸ್ವೀಕರಿಸುವ ಇಂದ್ರಿಯಪಾಟವ, ಇಂದ್ರಿಯಸೌಷ್ಠವ ಇರುವುದರಿಂದಲೇ ಅವನು ಶ್ರೀಮಾನ್.

ನಮ್ಮ ಇಂದ್ರಿಯಗಳು ಇವತ್ತಿದ್ದು ನಾಳೆ ಬಿದ್ದು ಹೋಗುವವು. ಆದ್ದರಿಂದ ನಮ್ಮನ್ನು 'ಶ್ರೀಮಾನ್' ಎಂದು ಕರೆಯುವುದಿಲ್ಲ. ನಿಜವಾದ 'ಶ್ರೀಮಾನ್' ಶ್ರೀವಿಷ್ಣುವೇ. ನಮ್ಮ ಇಂದ್ರಿಯಗಳು ಸಾಯುವವರೆಗೂ ಚೆನ್ನಾಗಿ ಕೆಲಸ ಮಾಡುತ್ತ ಇದ್ದರೂ ದೇಹವನ್ನು ತ್ಯಜಿಸುವಾಗ ಅವನ್ನೂ ಬಿಟ್ಟು ಬಿಡಲೇಬೇಕಾಗುವುದು. ಅವರು ಕೊನೆಯವರೆಗೂ ಕನ್ನಡಕ ಹಾಕಿಕೊಳ್ಳದೆಯೇ ನೋಡುತ್ತಿದ್ದರು ಎಂದು ಹೆಗ್ಗಳಿಕೆಗೆ ಪಾತ್ರರಾದವರೂ ಸಾಯುವಾಗ ಆ ಕಣ್ಣುಗಳನ್ನು ಬಿಟ್ಟು ಹೋಗಲೇಬೇಕು ತಾನೇ ! ಯಾಕೆಂದರೆ ಈ ಇಂದ್ರಿಯಗಳು ನಮ್ಮವುಗಳಲ್ಲ. ಬಾಡಿಗೆಯವುಗಳು. ಆದುದರಿಂದ 'ಯಾರಿಗೆ ಯಾರುಂಟು ಎರವಿನ ಸಂಸಾರ' ಎಂದಂತೆ ಎರವಲು ಪಡೆದ ಇಂದ್ರಿಯಗಳನ್ನು ಬಿಟ್ಟು ಕೊಡಲೇ ಬೇಕು ತಾನೇ ? ನಮ್ಮದೇ ಆದ ಸ್ವರೂಪಾತ್ಮಕ

ಇಂದ್ರಿಯಗಳು ಇವೆ ಆದರೂ ಅವುಗಳಿಂದ ಕಾಣುವುದನ್ನು ನಾವು ಈಗ ರೂಢಿಸಿಕೊಂಡಿಲ್ಲ. ಭಗವಂತನಾದರೂ ಹಾಗಲ್ಲ. ಅವನು ಸ್ವರೂಪಾತ್ಮಕ ಇಂದ್ರಿಯಗಳಿಂದಲೇ ನೋಡುವುದು, ಕೇಳುವುದು...... ಆದುದರಿಂದ ಅವನ ಪಾಲಿಗೆ ಅವುಗಳನ್ನು ಬಿಡಬೇಕಾದ ಪ್ರಸಂಗವೇ ಇಲ್ಲ. ಆದುದರಿಂದ ಅವನೇ ಮುಖ್ಯವಾಗಿ 'ಶ್ರೀಮಾನ್'

'ತಂ ಯಥಾ ಯಥಾ ಉಪಾಸತೇ ತದೇವ ಭವತಿ'– ನಮ್ಮ ಉಪಾಸನೆಗೆ ಅನುಗುಣವಾಗಿ ಫಲ ದೊರಕುವುದರಿಂದ ಇಂದ್ರಿಯಪಾಟವಫಲ ನಮಗೆ ಸಿದ್ಧಿಸಬೇಕೆಂದರೆ ಭಗವಂತನನ್ನು 'ಶ್ರೀಮಾನ್'– ಎಂದು ಸ್ತುತಿಸಬೇಕೆಂದು ಭೀಷ್ಮರು ತೋರಿಸಿಕೊಟ್ಟಿರುವರು.

**೨೩. ಕೇಶವಃ – ಒಳ್ಳೆಯ, ಮೃದುವಾದ, ಸ್ವಚ್ಛವಾದ, ಕಪ್ಪಾದ, ಸಮೃದ್ಧವಾದ ತಲೆಗೂದಲು ಉಳ್ಳವನು.**

**ವಿವರಣೆ :** ಋಗ್ವೇದದ 'ಕೇಶಿಸೂಕ್ತ'ದಲ್ಲಿ ವಾಯುದೇವನನ್ನು 'ಕೇಶೀ ವಿಷಸ್ಯ ಪಾತ್ರೇಣ....' ಇತ್ಯಾದಿಯಾಗಿ 'ಕೇಶೀ' ಒಳ್ಳೆಯ ತಲೆಗೂದಲನ್ನು ಹೊಂದಿದವನನ್ನಾಗಿ ಸ್ತುತಿಸಲಾಗಿದೆ. 'ಆಭಾಸಕೋಽಸ್ಯ ಪವನಃ......' ಎಂದಿರುವಂತೆ ಪರಮಾತ್ಮನ ಪ್ರತಿಬಿಂಬ ಆದ ವಾಯುದೇವನಿಗೆ ಒಳ್ಳೆಯ ಕೂದಲು ಇರಬೇಕೆಂದರೆ ಬಿಂಬನಾದ ಪರಮಾತ್ಮನಿಗೆ ಕೂದಲು ಇರಲೇಬೇಕು. ಅದೂ ಅಲ್ಲದೆ, ಭಗವಂತನ ಕಪ್ಪುಕೂದಲೇ ಕೃಷ್ಣನಾಗಿ ಅವತರಿಸಿದ್ದರಿಂದ ಅವನಲ್ಲಿ ಕೂದಲು ಇರಲೇಬೇಕು. ತಲೆತುಂಬ ಕೂದಲು ಇದ್ದರೆ ಏನೂ ಚಿಂತೆ ಇಲ್ಲದವನೆಂದು ಲೋಕದಲ್ಲಿ ವ್ಯವಹರಿಸಲಾಗುವುದು. ಇದಕ್ಕನುಗುಣವಾಗಿ ಭಗವಂತನನ್ನು ಪೂರ್ಣವಾಗಿ ನಂಬಿರುವ ವಾಯುದೇವರು ಯಾವ ಚಿಂತೆಗೂ ಒಳಗಾಗುವುದಿಲ್ಲ, ಭಗವಂತನಾದರೂ ಸ್ವತಂತ್ರನಾಗಿ, ಸತ್ಯಕಾಮನಾಗಿ, ಸತ್ಯಸಂಕಲ್ಪನಾಗಿ ಇರುವುದರಿಂದ ಅವನಲ್ಲಿ ಚಿಂತೆಗೆ ಅವಕಾಶವೇ ಇಲ್ಲ. ಆದುದರಿಂದ ವಾಯುದೇವನ ಹಾಗೂ ಭಗವಂತನ ತಲೆಗೂದಲವೈಭವದಿಂದ ಅವರ ಚಿಂತೆಯಿಲ್ಲದ ಸ್ವಭಾವವೂ ಸೂಚಿತ.

ಹಾಗೆಯೇ ಅವನ ತಲೆಗೂದಲಿನ ಮಾರ್ದವ ಅವನ ಸ್ವಭಾವದಲ್ಲೂ ಎದ್ದು ಕಾಣುವುದು. ಪಾಂಡಾವಾದಿಗಳ ಜೊತೆಗೆ ಶ್ರೀಕೃಷ್ಣ ನಡೆದುಕೊಂಡದ್ದನ್ನು ಪರಿಶೀಲಿಸಿದರೆ ಅವನ ಮೃದುಸ್ವಭಾವ ಸ್ಪಷ್ಟವಾಗುವುದು.

**೨೪. ಪುರುಷೋತ್ತಮಃ – ಕ್ಷರಾಕ್ಷರ ಪುರುಷರಿಗಿಂತ ಎತ್ತರದವನು.**

**ವಿವರಣೆ :** ಚತುರ್ಮುಖನಿಂದ ಪ್ರಾರಂಭಿಸಿ ಕಲಿಯವರೆಗೆ ಎಲ್ಲರೂ ಕ್ಷರ ಪುರುಷರು.

ಯಾಕೆಂದರೆ ಇವರೆಲ್ಲ ಒಂದಲ್ಲ ಒಂದು ದಿನ ತಮ್ಮ ಶರೀರವನ್ನು ಬಿಡಬೇಕು. ಜೀವೋತ್ತಮನಾದ ಚತುರ್ಮುಖನೂ ತನ್ನ ಈ ಶರೀರವನ್ನು ತ್ಯಜಿಸಬೇಕು.

ಲಕ್ಷ್ಮೀದೇವಿಯ ಶರೀರಮಾತ್ರ ಎಂದೂ ನಾಶವಾಗುವುದಿಲ್ಲ. ಆದುದರಿಂದ ಅವಳು ಅಕ್ಷರ ಪುರುಷಳು. ಕ್ಷರಾಕ್ಷರ ಪುರುಷರನ್ನು ಮೆಟ್ಟಿ ನಿಂತವನು ಪುರುಷೋತ್ತಮ. **'ಯಸ್ಮಾತ್ ಕ್ಷರಮತೀತೋಽಹಂ ಅಕ್ಷರಾದಪಿ ಚೋತ್ತಮಃ ಅತೋಽಸ್ಮಿ ಲೋಕೇ ವೇದೇ ಚ ಪ್ರಥಿತಃ ಪುರುಷೋತ್ತಮಃ'** ಕ್ಷರಾಕ್ಷರ ಪುರುಷರಿಗಿಂತ ಎತ್ತರದವ ನಾನಾಗಿರುವುದರಿಂದ ನನ್ನನ್ನು ಪುರುಷೋತ್ತಮ ಎಂದು ಕರೆಯುವರು. ಕ್ಷರಾಕ್ಷರ ಪುರುಷರಿಗೆ ಸಮಾನವಾಗಿ ಸಂಬಂಧ ಪಡುವ ದುರ್ಗುಣವೊಂದು ನನ್ನಲಿಲ್ಲ. ಅಸ್ವಾತಂತ್ರ್ಯವೇ ಆ ದುರ್ಗುಣ. ಅದು ಇಲ್ಲದಿರುವುದರಿಂದ ನಾನು 'ಪುರುಷೋತ್ತಮ' ಎನಿಸಿರುವೆನೆಂದು ಶ್ರೀ ಕೃಷ್ಣ ತಿಳಿಸಿರುವನು.

ಈವರೆಗೆ ಪುರುಷಶಬ್ದದ ಪ್ರಸ್ತಾವ ಮೂರು ಬಾರಿ ಬಂದಿದೆ. 'ಅವ್ಯಯಃ ಪುರುಷಃ ಸಾಕ್ಷೀ......' ಎಂಬಲ್ಲಿ ಪೂರ್ಣಷಡ್ಗುಣಸಂಪನ್ನ ಪರಮಾತ್ಮ ಎಂದೇ ಅರ್ಥ. 'ಪ್ರಧಾನಪುರುಷೇಶ್ವರಃ' ಎಂಬಲ್ಲಿ ಪುರುಷ ಶಬ್ದಕ್ಕೆ ಚತುರ್ಮುಖ ಎಂಬಾರ್ಥ. ಪುರುಷೋತ್ತಮ ಎಂಬಲ್ಲಿ ಪುರುಷ ಎಂದರೆ ನಾವೆಲ್ಲ ಎಂಬ ಅರ್ಥ. 'ಪುರಿ ಶೇತೇ' ದೇಹದಲ್ಲಿ ಇರುವುದರಿಂದ ಪುರುಷ. ಪಶುಪಕ್ಷಿಗಳೂ ತಮ್ಮ ತಮ್ಮ ದೇಹದಲ್ಲಿ ಇರುವವು. ಆದರೆ ಅವುಗಳನ್ನು ಪುರುಷ ಎಂದು ಕರೆಯುವುದಿಲ್ಲ. ತಮ್ಮ ಶರೀರದಲ್ಲಿರುವ ಪರಮಾತ್ಮನನ್ನು ಯಾರು ತಿಳಿಯುವರೋ (ಪುರು ಬ್ರಹ್ಮ ಸರತಿ ಅವಗಚ್ಛತಿ) ಅವರಷ್ಟೇ ಪುರುಷರು. ಪಶುಪಕ್ಷಿಗಳು ತಮ್ಮ ಶರೀರದಲ್ಲಿರುವ ಪರಮಾತ್ಮನನ್ನು ತಿಳಿಯುವುದಿಲ್ಲ. ಆದುದರಿಂದ 'ಪುರುಷ' ಎನಿಸುವುದಿಲ್ಲ.

'ಪುರುಷೋತ್ತಮ' ಶಬ್ದದ ಅರ್ಥ ಹೇಳುವಾಗ ಒಂದು ಎಚ್ಚರಿಕೆ – ಪುರುಷರಿಗಿಂತ ಉತ್ತಮ ಎನ್ನಬೇಕೇ ಹೊರತು ಪುರುಷರಲ್ಲಿ ಉತ್ತಮ ಎನ್ನಬಾರದು. 'ಪುರುಷರಲ್ಲಿ ಉತ್ತಮ' ಎಂದರೆ ಪುರುಷರ ಜಾತಿಗೇ ಸೇರಿದ್ದು, ಉತ್ತಮನಾಗಿರುವವನು ಎಂಬ ಅರ್ಥ ಹೊರಡುವುದು. ಪುರುಷರ ಹುಟ್ಟು, ಸಾವು, ಅಸ್ವಾತಂತ್ರ್ಯ – ಇತ್ಯಾದಿ ಗುಣಧರ್ಮಗಳನ್ನು ಹೊಂದಿದವನಷ್ಟೇ ಪುರುಷರ ಜಾತಿಗೆ ಸೇರಿದವನು. ಭಗವಂತನಾದರೂ ಹೀಗೆ ಪುರುಷರ ಹುಟ್ಟು, ಸಾವು, ಅಸ್ವಾಂತ್ರ್ಯ ಇತ್ಯಾದಿ ಗುಣಧರ್ಮಗಳನ್ನು ಹೊಂದದೆ ಇರುವುದರಿಂದ ಪುರುಷರ ಜಾತಿಗೆ ಸೇರಿದವನಲ್ಲ. ಆದುದರಿಂದ ಅವನು ಹುಟ್ಟು, ಸಾವು, ಅಸ್ವಾತಂತ್ರ್ಯ ಇತ್ಯಾದಿ ಗುಣಧರ್ಮಗಳನ್ನು ಒಳಗೊಂಡ ಪುರುಷರಿಗಿಂತ ಆ ಗುಣಧರ್ಮಗಳನ್ನು

ಒಳಗೊಳ್ಳದ ಪ್ರಯುಕ್ತ ಉತ್ತಮ. ಹೊರತು ಪುರುಷರ ಹುಟ್ಟು ಸಾವು, ಅಸ್ವಾತಂತ್ರ್ಯ ಇತ್ಯಾದಿ ಗುಣಧರ್ಮಗಳನ್ನು ಸಮಾನವಾಗಿ ಹೊಂದಿದ್ದು ಉತ್ತಮನಾಗಿರುವವನಲ್ಲ. ಆದುದರಿಂದ ಪುರುಷರಿಗಿಂತ ಉತ್ತಮನೇ ಹೊರತು ಪುರುಷರಲ್ಲಿ ಉತ್ತಮ ಅಲ್ಲ.

**ಸರ್ವಃ ಶರ್ವಃ ಶಿವಃ ಸ್ಥಾಣುರ್ಭೂತಾದಿರ್ನಿಧಿರವ್ಯಯಃ |**
**ಸಂಭವೋ ಭಾವನೋ ಭರ್ತಾ ಪ್ರಭವಃ ಪ್ರಭುರೀಶ್ವರಃ || ೪ ||**

**೨೫. ಸರ್ವಃ – ಲೋಕದಲ್ಲಿ ಏನನ್ನು ನೋಡುತ್ತೇವೋ, ಏನನ್ನು ಕೇಳುತ್ತೇವೋ, ಅವೆಲ್ಲವನ್ನೂ ಹೊಂದಿರುವವನು.**

**ವಿವರಣೆ : 'ಸರ್ವಂ ಸಮಾಪ್ನೋಷಿ ತತೋಽಸಿ ಸರ್ವಃ'**– ಲೋಕದಲ್ಲಿ ಏನನ್ನು ನೋಡುವೆಯೋ, ಏನನ್ನು ಕೇಳುವೆಯೋ ಅವೆಲ್ಲವನ್ನೂ ನೀನು ಹೊಂದಿರುವಿ. ಆದುದರಿಂದ ನೀನು ಸರ್ವ ಎಂದು ಅರ್ಜುನ ಕೃಷ್ಣನಲ್ಲಿ ನಿವೇದಿಸಿಕೊಂಡಿರುವನು.

**'ವ್ಯಾಸೋಚ್ಛಿಷ್ಟಂ ಜಗತ್ ಸರ್ವಂ'**– ಎಂದು ಒಂದು ಮಾತಿದೆ. ಜಗತ್ತಿನಲ್ಲಿ ಏನೇನಿದೆಯೋ ಅದೆಲ್ಲ ಶ್ರೀವೇದವ್ಯಾಸರ ವಾಙ್ಮಯದ ಉಚ್ಛಿಷ್ಟ, ಎಂಜಲು. ಅದರಂತೆ ಜಗತ್ತಿಲ್ಲಿ ಯಾವ ಯಾವ ವಸ್ತುವಿನಲ್ಲಿ ಏನೇನು ಗುಣಗಳಿವೆಯೋ ಅದೇ ಗುಣಗಳನ್ನಲ್ಲದಿದ್ದರೂ, ಅಂತಹ ಗುಣಗಳನ್ನು ಪರಮಾತ್ಮ ಹೊಂದಿರುವನು. ಒಂದು ವಸ್ತು ನಷ್ಟವಾದಾಗ ಅದರಲ್ಲಿಯ ಗುಣಗಳನ್ನು ಪರಮಾತ್ಮನು ಸ್ವೀಕರಿಸುವನು. ಹೀಗೆ ಎಲ್ಲವನ್ನೂ ಹೊಂದಿರುವುದರಿಂದ ಸರ್ವ ಎನಿಸುವನು.

**೨೬. ಶರ್ವಃ – ಸಮಸ್ತ ಪ್ರಾಣಿವರ್ಗವನ್ನು ಕಬಳಿಸುವವನು.**

**ವಿವರಣೆ :** ರುದ್ರದೇವರನ್ನು ಶರ್ವ ಎಂದು ಕರೆಯುವುದುಂಟು. ರುದ್ರದೇವನಿಗೆ ಭಗವಂತ ಆ ನಾಮವನ್ನು ಕೊಟ್ಟ. ಆದುದರಿಂದ ಅವರು 'ಶರ್ವ' ಆದನು. ಭಗವಂತ ರುದ್ರನಿಗೆ 'ಶರ್ವ' ಹೆಸರನ್ನು ಯಾಕೆ ಕೊಟ್ಟ ? ನಾಳೆ ಭಗವಂತ ಪ್ರಲಯ ಮಾಡುವುದು ರುದ್ರನಲ್ಲಿ ಇದ್ದುಕೊಂಡು. ರುದ್ರನನ್ನು ಮಾಧ್ಯಮವನ್ನಾಗಿ ಇಟ್ಟುಕೊಂಡು ಪ್ರಲಯ ಮಾಡ್ತಾನೆ. 'ಶೃ ಹಿಂಸಾಯಾಮ್' ಎಂಬ ಕ್ರಿಯಾ ಪದದಿಂದ ನಿಷ್ಪನ್ನವಾದ 'ಶರ್ವ' ಶಬ್ದ ಸಮಸ್ತ ಪ್ರಾಣಿವರ್ಗವನ್ನು ಕಬಳಿಸುವವನು ಎಂಬ ಅರ್ಥವನ್ನು ತಿಳಿಸುವುದು. ಪ್ರಲಯದಲ್ಲಿ ಸಮಸ್ತ ಪ್ರಾಣಿಗಳ ಹಿಂಸೆ ಮಾಡಿ ಕಬಳಿಸುವನೆಂಬ ಅಭಿಪ್ರಾಯದಲ್ಲಿ ರುದ್ರದೇವರು 'ಶರ್ವ' ಎನಿಸುವರು. ಅಂತಹ ರುದ್ರನನ್ನೂ ಕಬಳಿಸುವವನು ಭಗವಂತ ಆದ್ದರಿಂದ ಮುಖ್ಯವಾಗಿ ಭಗವಂತನಿಗೆ 'ಶರ್ವ'– ಎಂಬ ಹೆಸರು.

ಭೀಷ್ಮರು ಕೃಷ್ಣನನ್ನೂ ಎದುರಿಗೆ ಕುಳ್ಳಿರಿಸಿ – ನೀನು ಶರ್ವ ಎಂದು ಹೇಳುವರು. ಯಾಕೆ ? ಮಹಾಭಾರತ ಯುದ್ಧದಲ್ಲಿ ಹದಿನೆಂಟು ಅಕ್ಷೌಹಿಣೀ ಸೇನೆಯನ್ನೂ ಕಬಳಿಸಿದವನು ನೀನೇ. ಮಹಾಭಾರತ ಯುದ್ಧ ಆಗಲು ಕಾರಣನೇ ನೀನು. ಕಾಲಯವನನ ಮೂರು ಕೋಟಿ ಅಕ್ಷೌಹಿಣೀ ಸೇನೆಯನ್ನು ಕಬಳಿಸಿದವನು ನೀನೇ. ಜರಾಸಂಧನ ಇಪ್ಪತ್ತಮೂರು, ಇಪ್ಪತ್ತನಾಲ್ಕು ಅಕ್ಷೌಹಿಣೀ ಸೇನೆಯನ್ನು ಕಬಳಿಸಿದವನು ನೀನೇ. ಆದ್ದರಿಂದ ಕೃಷ್ಣ ಭೂಮಿಯಲ್ಲಿ 'ಭೂಭಾರ' ಎಂದು ಏನಿತ್ತು ಅದನ್ನು ಕಬಳಿಸಿ, ಅದನ್ನು ಒಂದು ಹಂತದಲ್ಲಿ ಇಟ್ಟವ ನೀನೇ. ಆದ್ರಿಂದ ನಿನ್ನ ಹೆಸರು ಶರ್ವ.

ಯರ್‍ಯಾರ ಮೂಲಕವೋ ಮದ್ದು ಮಾಟ ಮಾಡುವ ಬದಲು ದೇವರನ್ನು 'ಶರ್ವ' ಎಂದು ಉಪಾಸನೆ ಮಾಡಿದೆವೆಂದರೆ ಅದಕ್ಕೆ ಬೇಕಾದ ವ್ಯವಸ್ಥೆಯನ್ನು ದೇವರೇ ಮಾಡಿಬಿಡುವನು. ಆಧ್ಯಾತ್ಮಿಕ, ಧಾರ್ಮಿಕ ಸಾಧನೆಯಲ್ಲಿ ತೊಡಗಿದಾಗ ಯಾರಿಂದ ಉಪಟಳ ಬರುವುದೋ ಅವರಿಗೆ ನೀನು 'ಶರ್ವ'ನಾಗಿ ನಿಲ್ಲು – ಎಂದು ಪ್ರಾರ್ಥಿಸೋಣ. ಆಧ್ಯಾತ್ಮಿಕ , ಧಾರ್ಮಿಕ ಸಾಧನೆಗೆ ತೊಂದರೆ ಮಾಡುವ ವ್ಯಕ್ತಿಗಳ ಆ ಬಗೆಯ ಬುದ್ಧಿಯನ್ನು ಭಗವಂತ ಧ್ವಂಸ ಮಾಡ್ತಾನೆ. ವ್ಯಕ್ತಿಯನ್ನೇ ಧ್ವಂಸ ಮಾಡಬೇಕಾಗಿಲ್ಲ. ವ್ಯಕ್ತಿಯ ದುರ್ಬುದ್ಧಿಯನ್ನು ಧ್ವಂಸ ಮಾಡುವುದರಿಂದ ಭಗವಂತ 'ಶರ್ವ'.

೨೭. ಶಿವಃ – ಪರಮಮಂಗಳ.

ವಿವರಣೆ : ಭಗವಂತನು ಇಷ್ಟೆಲ್ಲ ಕಬಳಿಸುವನು ತಾನೇ ? ಇದರಿಂದಾಗಿ ಅವನಲ್ಲಿ ಏನಾದರೂ 'ಅಶಿವ' – 'ಅಮಂಗಳ' ಬಂತೋ ? ದುಷ್ಟ ಆಹಾರದಿಂದ ಮನಸ್ಸು ಕೆಡುವುದುಂಟು. ಆದರೆ ಭಗವಂತ ಇಷ್ಟು ದುಷ್ಟರನ್ನೆಲ್ಲ ಕಬಳಿಸಿದರೂ 'ಶಿವಃ'– ಮಂಗಳ ಸ್ವರೂಪಿಯೇ ಆಗಿರುವನು.

ರುದ್ರದೇವರು ಮೇಲ್ನೋಟಕ್ಕೆ ಅಮಂಗಲ ವೇಷ ಭೂಷಣವುಳ್ಳವರಾಗಿರುವರಾದರೂ ಭಗವಂತನ ಪಾದಪ್ರಕ್ಷಾಳನದ ಜಲವಾದ ಗಂಗೆಯನ್ನು ತಲೆಯನ್ನು ಧರಿಸಿದ್ದರಿಂದ 'ಶಿವ' ಎನಿಸಿರುವರು – '**ಯಚ್ಛೌಚನಿಃಸೃತಸರಿತ್ಪ್ರವರೋದಕೇನ ತೀರ್ಥೇನ ಮೂರ್ಧ್ನ್ಯಧಿಧೃತೇನ ಶಿವಃ ಶಿವೋऽಭೂತ್**'– ಎಂದಿರುವರು ಭಾಗವತಕಾರರು. ಗಂಗೆ ಭಗವಂತನ ಪಾದಪ್ರಕ್ಷಾಲನದ ಜಲ. ಯಾರ ಪಾದಪ್ರಕ್ಷಾಲನ ಜಲಕ್ಕೆ ಅಶಿವನನ್ನು ಶಿವನನ್ನಾಗಿ ಮಾಡುವ ಸಾಮರ್ಥ್ಯ ಇದೆಯೋ ಹಾಗಿರುವಾಗ ಆ ವ್ಯಕ್ತಿ ಎಷ್ಟು ಶಿವ ಆಗಿರಬೇಡ!

ಆದುದರಿಂದಲೇ ಅವನು ಪರಮಮಂಗಲ.

ಎಲ್ಲೋ ಪ್ರಯಾಣ ಹೊರಟಾಗ ಅಮಂಗಳ ಘಟನೆಯೋ ವ್ಯಕ್ತಿಯೋ ಎದುರಾಯಿತೆಂದರೆ ಪರಮಮಂಗಳನಾಗಿದ್ದು 'ಶಿವ' ಎನಿಸುವ ಭಗವಂತನ ಉಪಾಸನೆ ನಡೆಸೋಣ.

**೨೮. ಸ್ಥಾಣುಃ – ಗೂಟದಂತೆ ನಿರ್ವಿಕಾರನಾಗಿ ಇರುವವನು.**

*** ಯಾರ ಅನುಗ್ರಹ ಗೂಟದಂತೆ ಸ್ಥಿರವಾಗಿ ಇರುವುದೋ ಅಂತಹವನು.**

**ವಿವರಣೆ :** ಭೀಷ್ಮರು ಕೃಷ್ಣನನ್ನು ಇಷ್ಟೆಲ್ಲ ಹೊಗಳಿದರೂ ಅವನು ಹಿಗ್ಗಲಿಲ್ಲ, ಕುಗ್ಗಲಿಲ್ಲ – ಸ್ಥಾಣುವಿನಂತೆ, ಗೂಟದಂತೆ ತೆಪ್ಪಗೆ ಕುಳಿತಿರುವನು. ನೀವು ಎಷ್ಟು ಹೊಗಳಿದರೂ ಪ್ರಾಣತ್ಯಾಗ ನಡೆಸುವವರೆಗೆ ಮಾತ್ರ. ಪ್ರಾಣ ತ್ಯಾಗದ ಅವಧಿಯಲ್ಲಿ ನನ್ನನ್ನು ಮರೆತೇ ಬಿಡ್ತೀರಿ – ಎಂದು ಭೀಷ್ಮರ ಕುರಿತಾದ ಭಾವನೆ ಕೃಷ್ಣನದ್ದು. ಹಿರಿಯರು ಹೀಗೆ ನಿರ್ವಚನ ಕೊಡುವರು – **'ಸಂಶಮಯ್ಯಾಶಿವಂ ಸರ್ವಂ'**– ಅಮಂಗಳ ಎಂದು ಏನಿದೆಯೋ ಅವನ್ನೆಲ್ಲ ಧ್ವಂಸ ಮಾಡಿದ **'ವಿಶ್ರಾಣ್ಯಾಪಿ ಶಿವಂ ಬಹು'**– ಒಳ್ಳೆದ್ದನ್ನೂ ಕೂಡಾ ಬಹಳಷ್ಟು ನಾಶ ಮಾಡಿ, ಕೆಲವನ್ನಷ್ಟೇ ಉಳಿಸಿದ, ಅವ್ಯಾಕೃತಾಕಾಶ, ಲಕ್ಷ್ಮೀ ಮುಂತಾದ ಕೆಲವರನ್ನು ಉಳಿಸಿದ. **'ಸ್ವಯಂ ನ ವಿಶ್ರಾಮ್ಯತಿ ಸಃ ಸ್ಥಾಣುಃ'**– ತಾನು ಮಾತ್ರ ನಾಶ ಉಳ್ಳವನಾಗುವುದಿಲ್ಲವೋ ಅವನನ್ನು ಸ್ಥಾಣು ಎಂದು ಕರೆದರು. ಹೀಗೆ ಯಾವುದೇ ರೀತಿಯಾದ ನಾಶಕ್ಕೆ ಒಳಗಾಗದವನನ್ನು 'ಸ್ಥಾಣು' ಎಂದು ಕರೆದರು.

ಅಲ್ಲದೆ, ಇನ್ನೊಬ್ಬರ ಮೇಲೆ ಮಾಡಿದ ಯಾರ ಅನುಗ್ರಹವನ್ನು ಬೇರೆ ಯಾರಿಗೂ ಕೆದುಕುವ ತಾಕತ್ತು ಇಲ್ಲವೋ ಅಂತಹವನನ್ನು ಸ್ಥಾಣು ಎಂದು ಕರೆದರು. ಭಗವಂತನ ಅನುಗ್ರಹ ಆಯಿತೆಂದಾದರೆ ಆ ಅನುಗ್ರಹವನ್ನು ಅಲುಗಾಡಿಸುವ ತಾಕತ್ತು ಯಾರಿಗೂ ಇಲ್ಲ. ಭಗವಂತನ ಅನುಗ್ರಹ ಸ್ಥಾಣುವಿನಂತೆ – ಗೂಟದಂತೆ ಬಂದು ಕೂಡುತ್ತದೆ. ಯಾರ ಅನುಗ್ರಹವಾಯಿತೆಂದರೆ ಅದಕ್ಕಿಂತ ವ್ಯತ್ಯಸ್ತವಾಗಿ ಏನೂ ಆಗುವುದಿಲ್ಲವೋ ಅವನು ಸ್ಥಾಣು. ಇತರ ಯಾವ ದೇವತೆಗಳ ಅನುಗ್ರಹವಾದರೂ ಕೊನೆಯ ತನಕ ನಮ್ಮ ಜೊತೆಗೆ ಬರುವುದೆಂಬ ನಿಯಮವಿಲ್ಲ. ಆದರೆ ಭಗವಂತ ಅನುಗ್ರಹ ಮಾಡಿದ ಎಂದರೆ ಅದು ಗೂಟದಂತೆ ಗಟ್ಟಿಯಾಗಿ ಕೂಡುವುದು. ಆದುದರಿಂದ ಕೃಷ್ಣ ಸ್ಥಾಣು. ಪಾಂಡವರ ಮೇಲೆ ಮಾಡಿರತಕ್ಕ ಕೃಷ್ಣನ ಅನುಗ್ರಹವನ್ನು ಯಾರಿಗೂ ಕಳಚಲಾಗಲಿಲ್ಲ.

**೨೯. ಭೂತಾದಿಃ – ಭೂತಗಳಿಗೆ ಆದಿ ಆಗಿರುವವನು.**

**ವಿವರಣೆ :** ವಾದಿರಾಜರು ಹೇಳಿದಂತೆ 'ಬೊಮ್ಮನಾಲಯದಲ್ಲಿ ಇದ್ದವಗೆ ಲಯವುಂಟೆ'– ಈ ಮಾತು ಹೊಸ್ತಿಲ ಮೇಲೆ ದೀಪ ಇಟ್ಟಂತೆ ಇದು ಎಲ್ಲರ ಲಯ ಆದ ಮೇಲೂ ಇದ್ದಾನೆ,ಎಲ್ಲರ ಸೃಷ್ಟಿಗಿಂತ ಮೊದಲೂ ಇದ್ದಾನೆ. ನಾಶವೂ ಇಲ್ಲ, ಸೃಷ್ಟಿಯೂ ಇಲ್ಲ. ಕಕ್ಷ್ಯಾತಾರತಮ್ಯ ಹೇಳುತ್ತ ಬರುವಾಗ ಮೊತ್ತ ಮೊದಲು ನಿಲ್ಲುವವನೇ ದೇವರು. ಮಿಕ್ಕ ದೇವತೆಗಳೆಲ್ಲ ಮತ್ತೆ ಬರುವವರು. ಆದುದರಿಂದ ಕೃಷ್ಣ ! ನೀನು ಮೊದಲಿಗ. ಎಲ್ಲ ವಿಷಯದಲ್ಲೂ ನೀನು ಮೊದಲಿಗ.

ಸಮಸ್ತ ಪ್ರಾಣಿವರ್ಗಕ್ಕೂ ಮೊದಲು ಇರುವವನು – ಭೂತಾದಿ – ಎಂದು ಉಪಾಸನೆ ಮಾಡಿದರೆ ಬುದ್ಧಿಬಲವೋ, ಭುಜಬಲವೋ – ಯಾವುದಾದರೊಂದರಲ್ಲಾದರೂ ಸಮಾಜದಲ್ಲಿ ನಾವು ಮೊದಲಿಗರಾಗುವಂತೆ ಭಗವಂತನು ಅನುಗ್ರಹಿಸುತ್ತಾನೆ.

**೩೦. ನಿಧಿರವ್ಯಯಃ – ಎಲ್ಲ ಕರ್ಮಗಳನ್ನು ಯಾರಲ್ಲಿ ಇಡಲಾಗುವುದೋ ಅಂತಹವನು.**

**ವಿವರಣೆ :** 'ನಿಧಿರವ್ಯಯಃ'– ಎಂದು ಎರಡು ಶಬ್ದಗಳು ಸೇರಿ ಒಂದೇ ನಾಮ ಎಂದಿಟ್ಟುಕೊಂಡಲ್ಲಿ 'ನಾಶವಾಗದ ನಿಧಿವುಳ್ಳವನು'– ಎಂಬ ಅರ್ಥ ಹೊರಡಬಲ್ಲದು. ಭಗವಂತನ ನಿಧಿ ಅವನ ಇಂದ್ರಿಯಗಳು ಹಾಗೂ ಅವನ ಪಕ್ಕದಲ್ಲಿಯೇ ಇರುವ ಲಕ್ಷ್ಮೀದೇವಿ. ಅವನ ಇಂದ್ರಿಯಗಳು ಅವನ ಸ್ವರೂಪಾತ್ಮಕಗಳು ಎಂದ ಮೇಲೆ ಅವುಗಳಿಗೆ ನಾಶವಿಲ್ಲ. ಹಾಗೆಯೇ ಲಕ್ಷ್ಮೀದೇವಿಯ ಶರೀರವೂ ಜ್ಞಾನಾನಂದಾತ್ಮಕವಾದುದು. ಪ್ರಲಯದಲ್ಲೂ ಅದಕ್ಕೆ ನಾಶವಿಲ್ಲ. ಆದುದರಿಂದ ಭಗವಂತನಿಗೆ ಸೇರಿದ ಈ ಎರಡು ನಿಧಿಗಳೂ 'ಅವ್ಯಯ'– ನಾಶವಿಲ್ಲದವುಗಳು.

ಮತ್ತೊಂದು ಅರ್ಥ – 'ನಿಧೀಯತೇ ಅತ್ರ ನಿಧಿಃ'– ಏನು ಮಾಡಿದರೂ ಅದರ ಫಲವನ್ನು ಕೊಡುವುದು ದೇವರಲ್ಲಿ. ನಾವು ವಿಷ್ಣುಪಂಚಕ ಮಾಡಿದರೆ, ಏಕಾದಶೀ ವ್ರತ ಮಾಡಿದರೆ, ಸಂಕಷ್ಟ ಚತುರ್ಥೀವ್ರತ ಮಾಡಿದರೆ, ಉಪನ್ಯಾಸ ಮಾಡಿದರೆ, ಉಪನ್ಯಾಸ ಕೇಳಿದರೆ ಈ ಎಲ್ಲವನ್ನೂ ಕೊನೆಗೆ 'ಕೃಷ್ಣಾರ್ಪಣಮಸ್ತು' ಎಂದು ದೇವರಿಗೆ ಅರ್ಪಿಸುವುದು. ಸಂಕಷ್ಟ ಚತುರ್ಥೀವ್ರತ ಮಾಡಿದರೂ 'ಕೃಷ್ಣಾರ್ಪಣ' ಬಿಡುವುದೇ ಹೊರತು 'ಗಣಪತ್ಯರ್ಪಣ' ಅಲ್ಲ.

ಭೀಷ್ಮರು ಅಂದರು – ನಾನು ಹತ್ತು ದಿನ ಯುದ್ಧ ಮಾಡಿದೆ – 'ಕೃಷ್ಣಾರ್ಪಣಂ' ಎಂದೆ. ದುಶ್ಶಾಸನ ದ್ರೌಪದಿಯ ಸೀರೆ ಎಳೆದ 'ಕೃಷ್ಣಾರ್ಪಣಂ'

ಅಂದೆ. ವಿದುರನ ಮನೆಗೆ ಹೋಗಿ ಹಾಲು ಕುಡಿದೆ. ವಿದುರ ಕೃಷ್ಣಾರ್ಪಣಂ ಅಂದ. ಆದುದರಿಂದ ಏನೇ ಮಾಡೋಣ ಅದು ಶ್ರೀ ಕಷ್ಣನಲ್ಲಿ ಹೋಗಿ ಸೇರಬೇಕು. **'..... ತತ್ ಕುರುಷ್ವ ಮದರ್ಪಣಮ್'**– ಎಂಬುದಾಗಿ ಏನು ಮಾಡಿದರೂ ನನ್ನಲ್ಲಿ ಇಡು ಎಂದು ನೀನೇ ಹೇಳಿದ್ದಿ. **'ಪ್ರಾತಃಪ್ರಭೃತಿಸಾಯಾಂತಂ ಸಾಯಾದಿಪ್ರಾತರಂತತಃ| ಯತ್ಕರೋಮಿ ಜಗನ್ನಾಥ ತದಸ್ತು ತವ ಪೂಜನಮ್'**– ಎಂದಿರುವಂತೆ ದಿನವಿಡೀ ನಾವು ಮಾಡಿದ ಕರ್ಮಗಳನ್ನೆಲ್ಲ ಅವನ್ನಲ್ಲಿ ಇಡುವೆವು. ಅವನು ಅವೆಲ್ಲವನ್ನೂ ತನ್ನಲ್ಲಿ ಇಟ್ಟುಕೊಳ್ಳುವನು. ಆದುದರಿಂದ ಅವನು 'ನಿಧಿ.' ಆ ಮೇಲೆ ಅವ್ಯಯಃ ನಾಶವಿಲ್ಲದವನು ; ವಿಕಾರವಿಲ್ಲದವನು. ಹಿಂದೆ ನಾವು ಅವ್ಯಯ ಎನ್ನುವುದಕ್ಕೆ ನಾಶವಿಲ್ಲದವ ಎಂಬ ಅರ್ಥವನ್ನು ಕಂಡಿದ್ದೆವು. ಈಗ ವಿಕಾರವಿಲ್ಲದವನು ಎಂಬ ಮತ್ತೊಂದು ಅರ್ಥವನ್ನು ನೋಡೋಣ.

ಎಷ್ಟು ರೀತಿಯ ವಿಕಾರಗಳು ಬರಬಹುದು ? ಆಚಾರ್ಯ ಮಧ್ವರು ದ್ವಾದಶ ಸ್ತೋತ್ರದಲ್ಲಿ **'ಅವ್ಯಾಕೃತ ಗೃಹಸ್ಥಾಯ.....'** ಎಂದು ಹೊಗಳಿದ್ದಾರೆ – ನಿನ್ನದು ವಿಕಾರವಿಲ್ಲದ ಗೃಹಸ್ಥಜೀವನ ಎಂಬುದಾಗಿ.

ಗೃಹಸ್ಥ ಜೀವನಕ್ಕೆ ದೈಹಿಕ ವಿಕಾರವುಂಟು. ವ್ಯಕ್ತಿಶಃ ವಿಕಾರವುಂಟು. ಮಾನಸಿಕ ವಿಕಾರವುಂಟು. ಕಾಲಿಕ ವಿಕಾರವುಂಟು. ದೇಶತಃ ವಿಕಾರವುಂಟು.

ವ್ಯಕ್ತಿಶಃ ವಿಕಾರ ಎಂದರೆ ಈ ಜನ್ಮದಲ್ಲಿ ಯಾರೋ ಹೆಂಡತಿ, ಮುಂದಿನ ಜನ್ಮದಲ್ಲಿ ಮತ್ಯಾರೋ ಹೆಂಡತಿ. ಈ ಜನ್ಮದಲ್ಲಿ ಯಾರೋ ಗಂಡ, ಮುಂದಿನ ಜನ್ಮದಲ್ಲಿ ಯಾರೋ ಗಂಡ. ಆದರೆ ಭಗವಂತನು ಯಾವುದೇ ಅವತಾರ ತಾಳಲಿ ಅವನಿಗೆ ಲಕ್ಷ್ಮೀದೇವಿಯೇ ಪತ್ನಿಯಾಗಿ ಬರುವುದು. ಬೇರೆ ಯಾರೂ ಪತ್ನಿಯಾಗುವುದೆಂದಿಲ್ಲ. ಹೀಗೆ ಭಗವಂತನ ಗೃಹಸ್ಥ ಜೀವನಕ್ಕೆ 'ವ್ಯಕ್ತಿಶಃ ವಿಕಾರ' ಇಲ್ಲ. ಆದುದರಿಂದ ಅವನು ಅವ್ಯಯ.

'ದೇಶತಃ ವಿಕಾರ'– ಬದರಿ, ಉಡುಪಿ ಶ್ರೀ ಕೃಷ್ಣನ ಸನ್ನಿಧಿ, ಪಾಜಕ ಕ್ಷೇತ್ರ ಇತ್ಯಾದಿ ಕಡೆಗಳಿಗೆ ಹೋದಾಗ ಮಾನಸಿಕ ಶಾಂತಿ ದೊರಕುವುದು. ಆದರೆ ಮತ್ತೆ ಕೆಲವೆಡೆ ಹೋದಾಗ ಮಾನಸಿಕ ವ್ಯಗ್ರತೆ ಉಂಟಾಗುವುದು. ಇದು 'ದೇಶತಃ ವಿಕಾರ', ಈ ಬಗೆಯ ವಿಕಾರ ಭಗವಂತನಿಗೆ ಇಲ್ಲ. ಶ್ರೀಕೃಷ್ಣ ಸಂಧಾನಕ್ಕಾಗಿ ಹಸ್ತಿನಪುರಕ್ಕೆ ಹೋದಾಗಲೂ, ಅಲ್ಲಿ ತನ್ನನ್ನು ಬಂಧಿಸುವ ಸಂಚು ನಡೆಯುತ್ತಿದೆ–ಎಂದು ವಿದುರನ ಮೂಲಕ ಅವನಿಗೆ ತಿಳಿದರೂ – ಶ್ರೀಕೃಷ್ಣ ನಿರ್ವಿಕಾರನಾಗಿಯೇ ಇದ್ದ. ಮಾನಸಿಕ ವಿಕಾರ ಇಲ್ಲ.

ಕಾಲಿಕ ವಿಕಾರ ಇಲ್ಲ – ಬಾಲ್ಯದಲ್ಲಿ ನಮಗೆ ಏನೂ ವಿಕಾರವಿರುವುದಿಲ್ಲ, ದೊಡ್ಡವರಾದ ಮೇಲೆ ಏನೇನೋ ಹೊಣೆಗಾರಿಕೆಯನ್ನು ಹೊತ್ತು ಕೊಂಡು ವಿಕಾರಗಳು ಉಂಟಾಗುವವು. ಆದರೆ ಭಗವಂತ ತಾನು ಬಾಲಕನಾಗಿ ತನ್ನನ್ನು ತೋರಿಸಿಕೊಂಡಾಗ ಹೇಗೆ ಇದ್ದನೋ ಹಾಗೆಯೇ ತನ್ನ ನೂರ ಆರು ವರ್ಷ ವಯಸ್ಸಿನಲ್ಲೂ ನಿರ್ವಿಕಾರನಾಗಿಯೇ ಇದ್ದ.

ಹೀಗೆ ಯಾವುದೇ ಬಗೆಯ 'ವ್ಯಯ'– ವಿಕಾರ ಇಲ್ಲದಿರುವುದರಿಂದ ಭಗವಂತನು ಅವ್ಯಯ.

**೩೧. ಸಂಭವಃ – ಮೂಲರೂಪದಲ್ಲಿ ಇರುವಂತೆಯೇ ಅವತಾರ ರೂಪಗಳಲ್ಲೂ ಗುಣ ಪೂರ್ಣನಾಗಿಯೇ ಇರುವವನು.**

**ವಿವರಣೆ : 'ಪೂರ್ಣಮದಃ ಪೂರ್ಣಮಿದಂ ಪೂರ್ಣಾತ್ ಪೂರ್ಣಮುದಚ್ಯತೇ'**– ಎಂದು ಉಪನಿಷತ್ತು ಘೋಷಿಸುತ್ತಿರುವಂತೆ ಅದೂ ಪೂರ್ಣ, ಇದೂ ಪೂರ್ಣ ಮೂಲ ರೂಪವೂ ಪೂರ್ಣ, ಅವತಾರ ರೂಪವೂ ಪೂರ್ಣ. ಈ ಗುಣ ಯಾರಿಗೂ ಇಲ್ಲ.

'ಸಂ' ಚೆನ್ನಾಗಿ 'ಭವಃ' ಧರೆಗೆ ಇಳಿದು ಬರುವವನು.

**೩೨. ಭಾವನಃ – ಪ್ರತಿಯೊಬ್ಬರ ಅಭಿಪ್ರಾಯ ಪ್ರಕಟವಾಗುವಂತೆ ಮಾಡುವವನು.**

**ವಿವರಣೆ :** ಪ್ರತಿಯೊಬ್ಬರಿಗೂ ತಮ್ಮದೇ ಆದ ಅಭಿಪ್ರಾಯ ಇರುವುದು. ನಮ್ಮ ಹಿರಿಯರಲ್ಲಿ ಯಾರೂ ತಮ್ಮ ಅಭಿಪ್ರಾಯವನ್ನು ಮತ್ತೊಬ್ಬರ ಮೇಲೆ ಹೇರಿಸಿಲ್ಲ. ಹದಿನೆಂಟು ಅಧ್ಯಾಯಗಳ ಗೀತೋಪದೇಶ ನಡೆಸಿ ಕೃಷ್ಣನೂ ಅರ್ಜುನನಿಗೆ ಕೊನೆಗೆ ತಿಳಿಸಿರುವಂತಹದ್ದು – **'ಯಥೇಚ್ಛಸಿ ತಥಾ ಕುರು'**– ನಿನಗೆ ತೋಚಿದಂತೆ ಮಾಡು ಎಂದು. ಶ್ರೀ ಮಧ್ವರು ತ್ರಿವಿಕ್ರಮ ಪಂಡಿತರಿಗಾಗಲೀ, ಅಚ್ಯುತ ಪ್ರೇಕ್ಷಾಚಾರ್ಯರಿಗಾಗಲೀ ತಮ್ಮ ಅಭಿಪ್ರಾಯವನ್ನು ಹೇರಲಿಲ್ಲ. ಅವರೇ ಸ್ವೇಚ್ಛೆಯಿಂದ ಮಧ್ವರ ಅಭಿಪ್ರಾಯವನ್ನು ಒಪ್ಪಿಕೊಂಡಿದ್ದರಷ್ಟೇ.

ನಮ್ಮ ಅಭಿಪ್ರಾಯಗಳು ಒಳಗೆ ಸುಪ್ತವಾಗಿರುವವು. ಅವುಗಳನ್ನು ಶಬ್ದಗಳ ಮೂಲಕ ಪ್ರಕಟಗೊಳಿಸಲು ಭಗವನಂತನು ಪ್ರೇರಿಸುವನು. **'ಮತ್ತಃ ಸ್ಮೃತಿರ್ಜ್ಞಾನಮಪೋಹನಂ ಚ'**– ಎಂದು ಗೀತಾಚಾರ್ಯ ಪ್ರತಿಪಾದಿಸಿದ್ದಾನೆ ತಾನೇ?

'ಶಬ್ದದಾರಿದ್ರ್ಯ' ಉಪನ್ಯಾಸ ಮಾಡುವಾಗ, ಪಾಠ ಮಾಡುವಾಗ ಕಾಣಿಸಿಕೊಳ್ಳುವುದು. 'ಕೆಮ್ಮು' 'ಹ್ಞಾ ಹ್ಞೂಂ...' 'ಅದೂ ಇದೂ....' ಇತ್ಯಾದಿ

ಶಬ್ದಗಳನ್ನು ಮತ್ತೆ ಮತ್ತೆ ಬಳಸಿಕೊಳ್ಳುವ ಪ್ರಸಂಗ ಸಂಭವಿಸುವುದು. ಇದನ್ನು ದೂರ ಮಾಡಬೇಕೆಂದರೆ ಭಗವಂತನನ್ನು 'ಭಾವನ' ಎಂದು ಉಪಾಸನೆ ಮಾಡಬೇಕು. 'ಭಾವಯತೀತಿ ಭಾವನಃ'– ಭಗವಂತನು ಅವರವರ ಯೋಗ್ಯತೆಗೆ ಅನುಗುಣವಾಗಿ ಶಬ್ದಗಳನ್ನು ಪ್ರಕಟಗೊಳಿಸಿ ಭಾವನೆ ಹೊರ ಹೊಮ್ಮುವಂತೆ ಮಾಡುವನು.

ಭೀಷ್ಮರು ಪಾಂಡವರಿಗೆ ಉಪದೇಶಿಸಬೇಕೆಂದಾಗ, ಮೊದಲು ಆಗುವುದಿಲ್ಲ ಎಂದರು. ಶ್ರೀಕೃಷ್ಣ ತಾನು 'ಭಾವನ' ನಾಗಿ ತಮ್ಮ ಒಳಗಿದ್ದು ಭಾವನೆಗಳಿಗನುಗುಣವಾದ ಶಬ್ದಗಳನ್ನು ಪ್ರಕಟಿಸುವೆನೆಂದು ಹೇಳಿದಾಗ ಒಪ್ಪಿಕೊಂಡರು. ತಮಗಿಂತ ಯೋಗ್ಯತೆಯಲ್ಲಿ ಎತ್ತರದಲ್ಲಿರುವ ಯುಧಿಷ್ಠಿರನನ್ನೂ ಎದುರಿನಲ್ಲಿ ಕುಳ್ಳಿರಿಸಿಕೊಂಡು ಏನೂ ಶಬ್ದದಾರಿದ್ರ್ಯ ಇಲ್ಲದೆ ಉಪದೇಶಿಸುತ್ತಿರುವರು.

**೩೩. ಭರ್ತಾ – ಎಲ್ಲವನ್ನೂ ಧಾರಣೆ ಮಾಡುವವನು.**

**ವಿವರಣೆ : 'ಭರ್ತಾ ಸನ್ ಭ್ರಿಯಮಾಣೋ ಬಿಭರ್ತಿ'**– ಶಾಸ್ತ್ರದ ಮಾತಿನಲ್ಲಿ ಭಗವಂತನ ಧಾರಣೆಯ ವೈಖರಿಯನ್ನು ತಿಳಿಸಲಾಗಿದೆ. ತಾನು ಅದರಿಂದ ಧರಿಸಲ್ಪಟ್ಟವನಾಗಿ ಅದನ್ನು ಧರಿಸಿದ್ದಾನೆ. ಮಡಕೆಯ ಒಳಹೊಕ್ಕು ಭಗವಂತ ಮಡಕೆಯನ್ನು ಧರಿಸುವನು. ಭಗವಂತನು ಮಡಕೆಯ ಒಳಹೊಕ್ಕದಿದ್ದಲ್ಲಿ ಅದು ಹಾಗೆ ಇರುವುದಿಲ್ಲ. ಅದಕ್ಕೆ ಭಗವಂತನು ಅದನ್ನು ಧರಿಸಿರುವನೆಂದು ಒಪ್ಪಿಕೊಳ್ಳಬೇಕು. ಆ ಭಗವಂತನಾದರೂ ಮಡಕೆಯ ಒಳಗೇ ಅದರ ಆಶ್ರಯದಲ್ಲಿಯೇ ಇದ್ದಾನೆ. ನಮ್ಮ ಒಳಗಿದ್ದುಕೊಂಡೇ ನಮ್ಮನ್ನು ಧರಿಸುತ್ತಿರುತ್ತಾನೆ. ನಾವು ಬದುಕುವುದಕ್ಕೆ ಕಾರಣ ಭಗವಂತ. ಅಂತಹ ಭಗವಂತನಿಗೆ ಆಶ್ರಯ ನಾವು. ನಮಗೆ ಅಸ್ತಿತ್ವವನ್ನು ಕೊಟ್ಟು, ನಮ್ಮನ್ನೇ ಆಶ್ರಯಿಸಿಕೊಂಡು ಇರುವವನು 'ಭರ್ತಾ ಸನ್ ಭ್ರಿಯಮಾಣೋ ಬಿಭರ್ತಿ'. ಭಗವಂತ ಹೇಗಿರ್ತಾನೆ ? ಎಷ್ಟು ರೂಪಗಳಿಂದ ಇರ್ತಾನೆ ? ಒಂದು ಉದಾಹರಣೆ ಕೊಡುವುದಾದರೆ **'ಕಾದ ಕಾಂಚನದೊಳಗೆ ಶೋಭಿಪ ಆದಿತೇಯಾಸ್ಯನ ತೆರದಿ....'**

ಆದಿತೇಯಾಸ್ಯ ಎಂದರೆ ಅಗ್ನಿ. ಕಾದ ಕಬ್ಬಿಣದೊಳಗೆ ಅಗ್ನಿ ಹೇಗೆ ವ್ಯಾಪಿಸಿಕೊಂಡು ಇದೆಯೋ ಅದೇ ರೀತಿ ಭಗವಂತ ಎಲ್ಲರಲ್ಲೂ ವ್ಯಾಪಿಸಿಕೊಂಡಿದ್ದಾನೆ. ಎಷ್ಟು ರೂಪಗಳಿಂದ ವ್ಯಾಪಿಸಿಕೊಂಡಿದ್ದಾನೆ.?

ಶ್ರೇಷ್ಠ ಎಂದು ಪರಿಗಣಿಸಲ್ಪಟ್ಟಿರುವ ಶಾಲಗ್ರಾಮದಲ್ಲಿ ಎಷ್ಟು ಭಗವದ್ರೂಪಗಳಿವೆ ?

'ಶಾಲಗ್ರಾಮ'– ಶೋಭಿಸುವ ಕಲ್ಲು. ಐದು ಸಾವಿರ ಮೇಲೆ ಮೂವತ್ತೈದು ಅಧಿಕ ಐದುನೂರು. ಐದುಸಾವಿರದ ಐದುನೂರ ಮೂವತ್ತೈದು ಭಗವದ್ರೂಪಗಳು ಒಂದು ಸಾಲಿಗ್ರಾಮದಲ್ಲಿ ಇವೆಯಂತೆ. ನಾವು ರಾಮಸಾಲಿಗ್ರಾಮ, ಕೃಷ್ಣಸಾಲಿಗ್ರಾಮ– ಎಂದು ಒಂದೊಂದು ಭಗವದ್ರೂಪದ ಚಿಂತನೆ ನಡೆಸಿದರೆ, ಹಿರಿಯರು ಹೇಳಿದರು– ಪ್ರತಿಯೊಂದು ಸಾಲಿಗ್ರಾಮದಲ್ಲೂ ಐದು ಸಾವಿರಕ್ಕಿಂತ ಅಧಿಕ ಭಗವದ್ರೂಪಗಳಿವೆ ಎಂದು.

ಹೀಗೆಯೇ ಪೂಜೆಯ ಪ್ರತಿಯೊಂದು ಸಾಮಗ್ರಿಯಲ್ಲೂ ಹತ್ತಾರು ರೂಪಗಳಿಂದ ಭಗವಂತನಿದ್ದು ಧಾರಣೆ ಮಾಡುತ್ತಿರುತ್ತಾನೆ.

ನಮ್ಮ ಶರೀರದಲ್ಲೂ ನಖಶಿಖಾಂತದಲ್ಲಿ ಒಂದೇ ರೂಪದಿಂದ ಭಗವಂತ ಇರುವುದಿಲ್ಲ. ಯಾಕೆಂದರೆ ನಾವು ಬದುಕಿದ್ದಾಗಲೂ ಕೆಲವೊಮ್ಮೆ ಕೈ ಬಿದ್ದು ಹೋಗುತ್ತದೆ. ಕಾಲು ಬಿದ್ದು ಹೋಗುತ್ತದೆ. ಕಣ್ಣು ಬಿದ್ದು ಹೊಗುತ್ತದೆ. ಭಗವಂತ ಒಂದೇ ರೂಪದಿಂದ ಇದ್ದರೆ ಆ ರೂಪದಿಂದ ಅವನು ಇರುವವರೆಗೂ ದೇಹದ ಎಲ್ಲ ಅಂಗಾಂಗಾಗಳೂ ಸರಿಯಾಗಿಯೇ ಇರಬೇಕಿತ್ತು ತಾನೇ ? ಆದರೆ ಹಾಗೆ ಒಂದೇ ರೂಪದಿಂದ ಇರದೆ, ಕೈಯಲ್ಲಿ ಒಂದು ರೂಪ, ಕಾಲಿನಲ್ಲಿ ಒಂದು ರೂಪ..... ಹೀಗೆ ಬೇರೆ ಬೇರೆ ಅಂಗಗಳಲ್ಲಿ ಬೇರೆ ಬೇರ ರೂಪದಿಂದ ಇದ್ದು, ಆಯಾ ರೂಪ ಅಲ್ಲಿಂದ ಹೊರಟು ಹೋಯಿತೆಂದರೆ ಆಯಾ ಅಂಗ ಬಿದ್ದು ಹೋಗುವುದು.

ಈ ರೀತಿಯಾಗಿ ಅನೇಕ ರೂಪಗಳಿಂದ ಇದ್ದುಕೊಂಡು ಧರಿಸುತ್ತಿರುವವನು ಎಂಬುದಾಗಿ ಭಗವಂತನ ದೊಡ್ಡ ಮಹಿಮೆಯನ್ನು ತಿಳಿಸುವ ನಾಮ –'ಭರ್ತಾ'

**೩೪. ಪ್ರಭವಃ – ಎಲ್ಲರ ಉತ್ಪತ್ತಿಗೆ ಕಾರಣನಾಗಿರುವವನು.**

**ವಿವರಣೆ :** 'ಪ್ರಭವತಿ ಸರ್ವಂ ಯಸ್ಮಾತ್ ಸಃ'– ಪ್ರಭವಃ, ಎಲ್ಲರೂ ಯಾರಿಂದ ಹೊರಟು ಬರುವರೋ ಅಂತಹವನು.

ಎದುರು ಕುಳಿತ ಕೃಷ್ಣನನ್ನು ತೋರಿಸಿ, ಭೀಷ್ಮರು ಯುಧಿಷ್ಠಿರನಲ್ಲಿ ತಿಳಿಸ್ತಾರೆ– ಇವನಿಂದಾಗಿ ಸಮಾಜಕ್ಕೆ ಎಲ್ಲವೂ ಬರುವುದು, ಆದುದರಿಂದ ಇವನು 'ಪ್ರಭವ'. ಜನಕ್ಕೆ ಬೇಕಾದದ್ದು ಯಾರಿಂದ ಬರುವುದೋ ಅವನು ಪ್ರಭವ. ಭೀಷ್ಮರು ಹೇಳ್ತಾರೆ– ನನಗೆ ಶರಮಂಚ ಬಂದದ್ದು ನಿನ್ನಿಂದ. ಎನ್ನ ಬಾಯಿಯಿಂದ ಮಾತು ಬರುತ್ತಿರುವುದು ನಿನ್ನಿಂದ.

**೩೫. ಪ್ರಭುಃ – ಕಾರ್ಯಗಳು ಚೆನ್ನಾಗಿ ಯಾರಿಂದ ನಡೆಯುವವೋ ಅಂತಹವನು.**

**ವಿವರಣೆ :** 'ಪ್ರಭವ' 'ಸಂಭವ' ನಾಮವನ್ನು ನೋಡಲಾಗಿತ್ತು. ಸಂ ಸಮ್ಯಕ್ ಮೂಲರೂಪದಲ್ಲಿ ಹೇಗೆ ಇದೆಯೋ ಅದೇ ರೀತಿಯಾಗಿ 'ಭವತಿ' ಅವತಾರಗಳಲ್ಲಿ ಇರುವನು. ಹೀಗೆ ಚೆನ್ನಾಗಿ ಅವತರಿಸಿದ ಮೇಲೆ 'ಪ್ರಭುಃ'– 'ಪ್ರಾಭವತ್ ಇತಿ ಪ್ರಭುಃ' – ಯಾವುದಕ್ಕೋಸ್ಕರ ಬಂದಿದ್ದಾನೋ ಅದನ್ನು ಚೆನ್ನಾಗಿ ನಿರ್ವಹಿಸುತ್ತಾನೆ. ದುಷ್ಟನಿಗ್ರಹಕ್ಕಾಗಿ ಬಂದಿದ್ದರೆ ದುಷ್ಟನಿಗ್ರಹ ಆಗದೆ ಹೋಗುವುದೆಂದಿಲ್ಲ.

ದೇವರದ್ದು ಎರಡು ರೂಪಗಳು – ವಿಭು ಮತ್ತು ಪ್ರಭು. ವಿವಿಧತಯಾ ಭವತಿ ವಿಭುಃ – ನಾನಾ ಪ್ರಕಾರವಾಗಿ ಮಾಡುವವನು. ಪ್ರಕರ್ಷೇಣ ಭವತಿ ಪ್ರಭುಃ– ಚೆನ್ನಾಗಿ ಮಾಡುವವನು. ನಾನಾರೀತಿಯಿಂದ ಮಾಡಬೇಕು ಹಾಗೂ ಚೆನ್ನಾಗಿ ಮಾಡಬೇಕು. ಇದು ದೇವರ ವಿಭು ಮತ್ತು ಪ್ರಭು ರೂಪಗಳ ಕಾರ್ಯ.

ಭೀಷ್ಮರು ಕೃಷ್ಣನನ್ನು ಸಂಬೋಧಿಸಿ ನಿವೇದಿಸಿಕೊಳ್ಳುವರು – ಕೃಷ್ಣ, ನೀನು ದುರ್ಯೋಧನಾದಿಗಳ ಸಂಹಾರಕ್ಕಾಗಿ ಬಂದವ. ಆ ಕೆಲಸ ನಿನ್ನಿಂದ ಚೆನ್ನಾಗಿ ನಡೆದಿದೆ. ಚೆನ್ನಾಗಿ ಅಂದರೆ ಬರೇ ದುರ್ಯೋಧನಾದಿಗಳ ಸಂಹಾರವಷ್ಟೇ ನಿನ್ನ ಉದ್ದೇಶವಾಗಿರಲಿಲ್ಲ. ಜೊತೆಗೆ ಪಾಂಡವ ಸೇನೆಗೆ ಸೇರಿದವರ ಕೆಲವರ ಸಂಹಾರವನ್ನೂ ಉದ್ದೇಶಿಸಿದ್ದೆ. ಆ ಕಾರ್ಯ ನಿನ್ನಿಂದ ಚೆನ್ನಾಗಿ ನಡೆದು ಪ್ರಭುನಾಮ ನಿನ್ನಲ್ಲಿ ಚೆನ್ನಾಗಿ ಅನ್ವಯವಾಗುತ್ತಿದೆ.

ಪ್ರಭು ಎಂಬುದಕ್ಕೆ ಸಮರ್ಥ ಎನ್ನುತ್ತೇವೆ. ಆ ಅರ್ಥವೂ ಕಾರ್ಯವನ್ನು ಚೆನ್ನಾಗಿ ನಿಭಾಯಿಸಬಲ್ಲವನು ಎಂಬ ಅರ್ಥದ ಹಿನ್ನಲೆಯಲ್ಲೇ ಬಂದದ್ದು.

**೩೬. ಈಶ್ವರಃ – ಒಡೆಯರಾದ ಬ್ರಹ್ಮರುದ್ರಾದಿಗಳಿಗಿಂತಲೂ ಎತ್ತರದಲ್ಲಿರುವವನು.**

**ವಿವರಣೆ :** ಈಶರಿಗಿಂತಲೂ ವರನಾದವನು. ಈಶರು ಎಂದರೆ ನಮಗೆ ನಿಯಾಮಕರಾಗಿದ್ದು ಒಡೆಯರಾಗಿರುವವರು. ನಮ್ಮ ಪ್ರಾಣಕ್ಕೆ ಒಡೆಯ ಚತುರ್ಮುಖನಾದರೆ, ಮನಸ್ಸಿಗೆ ಒಡೆಯ ರುದ್ರದೇವ. ಇವರಿಬ್ಬರು ದೇಹದಲ್ಲಿ ಇದ್ದರೆ, ಉಳಿದ ಕೈ, ಕಾಲು, ಕಣ್ಣು ಮುಂತಾದ ಇಂದ್ರಿಯಗಳಿಗೆ ಅಭಿಮಾನಿಗಳಾದ ದೇವತೆಗಳು ನಮ್ಮನ್ನು ನಿಯಂತ್ರಿಸುವರು. ಆದುದರಿಂದ 'ಈಶ' ಎಂದರೆ ಚತುರ್ಮುಖ, ರುದ್ರ ಮುಂತಾದ ದೇವತೆಗಳು. ಅವರಿಗಿಂತಲೂ 'ವರ' ಶ್ರೇಷ್ಠನಾಗಿರುವವನು ಪರಮಾತ್ಮ.

ಬ್ರಹ್ಮ ರುದ್ರಾದಿಗಳಿಗಿಂತಲೂ ಎತ್ತರದಲ್ಲಿರುವವನು – ಈಶ್ವರ.

ಈಶ ಮತ್ತು ವರ ಶಬ್ದಗಳನ್ನು ಸೇರಿಸಿದಾಗ 'ಈಶವರ' ಎಂದಾಗ ಬೇಕಿತ್ತು. ಆದರೆ ಶಕಾರೋತ್ತರ ಅಕಾರವನ್ನು ಲೋಪ ಮಾಡಿ 'ಈಶ್ವರ'– ಎಂದು ಜೋಡಿಸಿ ಹೇಳಲಾಗಿದೆ. ಈಶಶಬ್ದವಾಚ್ಯರಾದ ದೇವತೆಗಳು ಎಂದೂ ಭಗವಂತನನ್ನು ಬಿಟ್ಟು ಇರುವುದಿಲ್ಲ. ವರಶಬ್ದವಾಚ್ಯನಾದ ಭಗವಂತ ಭಕ್ತವತ್ಸಲನಾಗಿದ್ದು ಭಕ್ತರಾದ ಚತುರ್ಮುಖಾದಿಗಳನ್ನು ಎಂದೂ ಬಿಟ್ಟು ಇರುವುದಿಲ್ಲ ಎಂಬ ಸೂಚನೆ ದೊರಕುವಂತೆ 'ಈಶ್ವರ' ಎಂದು ಜೋಡಿಸಿ ಹೇಳಲಾಗಿದೆ.

**ಸ್ವಯಂಭೂಃ ಶಂಭುರಾದಿತ್ಯಃ ಪುಷ್ಕರಾಕ್ಷೋ ಮಹಾಸ್ವನಃ ।**
**ಅನಾದಿನಿಧನೋ ಧಾತಾ ವಿಧಾತಾ ಧಾತುರುತ್ತಮಃ ॥೩॥**

೩೭. **ಸ್ವಯಂಭೂಃ – ಸ್ವತಂತ್ರವಾಗಿ ಇರುವವನು.**

**ವಿವರಣೆ** : ಭೂ ಅಂದರೆ ಭವತಿ – ಇದ್ದಾನೆ. ಹೇಗೆ ಇದ್ದಾನೆ ? 'ಸ್ವಯಂ' ಇದ್ದಾನೆ ತಾನಾಗಿ ಇದ್ದಾನೆ. ಇನ್ನೊಬ್ಬರ ಹಿಡಿತದಲ್ಲಿ ತಾನಿಲ್ಲ. ಇನ್ನೊಬ್ಬರ ಆಶ್ರಯದಲ್ಲಿ ತಾನಿಲ್ಲ. ಯಾರ ಪ್ರೇರಣೆಯೂ ಇಲ್ಲದೆ ತಾನಾಗಿಯೇ ಬಂದವನೆಂದರೆ 'ಸ್ವಯಂ ಪ್ರೇರಣೆ' ಯಿಂದ ಬಂದೆ ಎಂದು ವ್ಯವಹರಿಸಲಾಗುವುದು. ಯಾರ ಪ್ರೇರಣೆಯೂ ಇಲ್ಲದೆ ತಾನಾಗಿಯೇ ಅಪರಾಧ ಎಸಗಿದ್ದರೆ 'ಸ್ವಯಂಕೃತಾಪರಾಧ' ಎಂದು ವ್ಯವಹರಿಸಲಾಗುವುದು. ಆದ್ದರಿಂದ 'ಸ್ವಯಂ' ಶಬ್ದಕ್ಕೆ 'ನಾನೇ', ಇನ್ನೊಬ್ಬರಿಂದ ಅಲ್ಲ–ಎಂಬ ಅರ್ಥ. ಇನ್ನೊಬ್ಬರಿಂದಾಗಿ ಭಗವಂತನ ಅಸ್ತಿತ್ವ ಅಲ್ಲ., ಸ್ವತಂತ್ರವಾಗಿ ಇದ್ದಾನೆ–ಎಂದರ್ಥ.

ತನಗೆ ಇರಬೇಕು ಎಂದು ತೋರಿದರೆ ಇರುತ್ತಾನೆ. ತನಗೆ ಹೋಗಬೇಕು ಎಂದು ತೋರಿದರೆ ಹೋಗುತ್ತಾನೆ. ಬೇರೆ ಬೇರೆ ಅವತಾರ ತಾಳುವುದು ತನ್ನ ಇಚ್ಛೆಗೆ ಅನುಗುಣವಾಗಿಯೇ ಹೊರತು ಯಾರ ಒತ್ತಾಯಕ್ಕೆ ಒಳಗಾಗಿಯಲ್ಲ.

**'ನಾಯಮಾತ್ಮಾ ಪ್ರವಚನೇನ ಲಭ್ಯಃ**– ಪರಮಾತ್ಮನು ಪ್ರವಚನಮಾಡಿದ್ದರಿಂದ ಸಿಗುವವನಲ್ಲ., ನ **ಮೇಧಯಾ**–ಬಾರೀ ಬುದ್ಧಿವಂತಿಕೆಗೂ ಸಿಗುವವನಲ್ಲ., **ನ ಬಹುನಾ ಶ್ರುತೇನ**– ಬಾರೀ ಭಾಷಣ ಕೇಳಿದ್ದರಿಂದಲೂ ಸಿಗುವವನಲ್ಲ., ಮತ್ತೆ **'ಯಮೇವೈಷ ವೃಣುತೇ ತೇನ ಲಭ್ಯಃ......'** ಯಾರನ್ನು ಭಕ್ತರೆಂದು ಪರಿಗಣಿಸುವ ಎಂದು ಅವನಿಗೆ ತೋಚುವುದೋ ಅಂತಹವನಿಗಷ್ಟೇ ಅವನು ಲಭ್ಯನಾಗುವನು. ಇದು ಅವನ ಸ್ವತಂತ್ರತ್ವವನ್ನು ಸ್ಪಷ್ಟಪಡಿಸುವುದು. ಸಹಸ್ರನಾಮದ ಒಂದೊಂದು ನಾಮವೂ ಭಗವಂತನಲ್ಲಿ ಅಸಾಧಾರಣವಾಗಿ ಇರುವ ಗುಣಧರ್ಮಗಳನ್ನೇ ತಿಳಿಸುವುದು. ಸ್ವಾತಂತ್ರ್ಯ ಅವನಲ್ಲಷ್ಟೇ ಇರುವ ಗುಣವಾಗಿರುವುದರಿಂದ 'ಸ್ವಯಂಭೂ'ನಾಮ ಆ ಗುಣವನ್ನು ಸಾರುತ್ತಿದೆ.

೩೮. **ಶಂಭುಃ– ಲೋಕದ ಜನರಿಗೆ ಸುಖವನ್ನು ಉಂಟುಮಾಡುವ ಸ್ವಭಾವದವನು.**

**ವಿವರಣೆ :** 'ಶಂ' ಸುಖ. 'ಭು' ಭವತಿ ಯಸ್ಮಾತ್ ಎಂದರೆ ಯಾರಿಂದ ಉಂಟಾಗುವುದೋ ಅಂತಹವನು. ಭು ಎಂಬಲ್ಲಿಯ ಉಕಾರ ಸ್ವಭಾವ ಎಂಬ ಅರ್ಥವನ್ನು ತಿಳಿಸುವುದು. ಲೋಕದ ಜನರಿಗೆ ಸುಖವನ್ನು ಉಂಟುಮಾಡುವ ಸ್ವಭಾವದವನು.

ದೇವರು ಈ ಚಿತ್ರ-ವೈವಿಧ್ಯೋಪೇತ ಜಗತ್ತನ್ನು ಸೃಷ್ಟಿಮಾಡಿ ಜೀವರನ್ನೂ ಸೃಷ್ಟಿಸಿ ಅವುಗಳನ್ನು ಬಳಸಿಕೊಂಡು ಸುಖದಿಂದ ಇರಿ-ಎಂದು ವ್ಯವಸ್ಥೆಗೊಳಿಸುವನು. ಸುಖದಿಂದ ಇರಲು ಆಗದಿದ್ದರೆ ಆ ವ್ಯಕ್ತಿ ಹೊಣೆಗಾರ ಹೊರತು ದೇವರಲ್ಲ. ಹಾವಿಗೆ ಹಾಲು ಎರೆದಾಗ ಅದನ್ನು ವಿಷವನ್ನಾಗಿಸಿಕೊಂಡು ಕಚ್ಚಿದರೆ ಅದಕ್ಕೆ ಹಾವು ಕಾರಣವೇ ಹೊರತು ಹಾಲು ಎರೆದವನಲ್ಲ. ದುರ್ಯೋಧನನಿಗೂ ದೇವರು ಸಂಪತ್ತನ್ನು ಕಲ್ಪಿಸಿದ್ದರೂ ಮತ್ತೊಬ್ಬರ ಸಂಪತ್ತಿಗೆ ಆಸೆಪಟ್ಟು ತನ್ನ ಸಂಪತ್ತನ್ನೆಲ್ಲ ಕಳಕೊಂಡು ದುಃಖಕ್ಕೆ ಒಳಗಾದಲ್ಲಿ ಅದಕ್ಕೆ ದೇವರು ಹೊಣೆ ಅಲ್ಲ ತಾನೇ?

**೩೯. ಆದಿತ್ಯಃ - ಎಲ್ಲರ ಆಯುಷ್ಯವನ್ನು ಸ್ವೀಕಾರ ಮಾಡುವವನು.**

**ವಿವರಣೆ :** 'ಆದತ್ತೇ ಇತಿ ಆದಿತ್ಯಃ' - ಸ್ವೀಕಾರ ಮಾಡುವವನು. ಯಾವುದನ್ನು? ನಮ್ಮ ಆಯುಷ್ಯವನ್ನು. ಲೋಕದಲ್ಲಿ ಉದಯಿಸಿದ ಸೂರ್ಯ ಸಂಜೆ ತನ್ನ ಕಿರಣಗಳನ್ನಷ್ಟೇ ಉಪಸಂಹರಿಸುವುದಲ್ಲ., ನಮ್ಮ ನಿಮ್ಮ ಒಂದು ದಿನದ ಆಯುಷ್ಯವನ್ನೂ ಸ್ವೀಕರಿಸುವನು. ಒಂದು ಸೂರ್ಯಾಸ್ತ ಆಯಿತೆಂದರೆ ನಮ್ಮ ಜೀವನದ ಒಂದು ದಿನ ಮುಗಿಯಿತೆಂದು ಅರ್ಥ. ಸೂರ್ಯಸ್ತವನ್ನು ನೋಡುವಾಗ ಒಂದು ಎಚ್ಚರಿಕೆ ಇರಬೇಕು- ನನ್ನ ಜೀವನದ ಒಂದು ದಿನವನ್ನು ಅವನಿಗೆ ದಾನ ಮಾಡಿದೆ. ನಾವು ಕೊಡುವೆವೋ,ಬಿಡುವೆವೊ. ಅಂತೂ ನಮ್ಮ ಆಯುಷ್ಯವನ್ನು ತೆಗೆದುಕೊಂಡು ಹೋಗಿಯೇ ಬಿಡುವನು. ತೆರಿಗೆ ವಸೂಲಿ ಮಾಡುವವರಂತೆ. ಸೂರ್ಯನು ಉದಯ ಅಸ್ತಮಾನಗಳಿಗೊಳಗಾದಾಗ ತನ್ನ ಆಯುಷ್ಯದ ಒಂದು ದಿನವನ್ನೂ ಕಳೆದುಕೊಳ್ಳುವನು. ಅವನೂ ಪ್ರಳಯದಲ್ಲಿ ತನ್ನೆಲ್ಲ ಆಯುಷ್ಯವನ್ನೂ ಕಳೆದುಕೊಳ್ಳುವನು. ಹಾಗಾದರೆ ಸೂರ್ಯನ ಆಯುಷ್ಯವನ್ನೂ ಆದಾನ ಮಾಡುವವನು,ಸ್ವೀಕಾರ ಮಾಡುವವನು, ಉಳಿದವರ ಆಯುಷ್ಯವನ್ನೂ ಸೂರ್ಯನ ಮೂಲಕ ಸ್ವೀಕಾರ ಮಾಡುವವನು ನೀನೇ - ಎಂದು ಶ್ರೀಕೃಷ್ಣನಲ್ಲಿ ಭೀಷ್ಮರು ನಿವೇದಿಸಿಕೊಳ್ಳುವರು.

**೪೦. ಪುಷ್ಕರಾಕ್ಷಃ- ಕಮಲದಂತೆ ಕಣ್ಣು ಉಳ್ಳವನು.**
*** ಬೆಳವಣಿಗೆ ಮಾಡತಕ್ಕ ನೋಟ ಉಳ್ಳವನು.**

**ವಿವರಣೆ** - ಪುಷ್ಕರ ಎಂದರೆ ಕಮಲ. ಅಂತಹ ಕಮಲದಂತೆ ಕಣ್ಣು ಉಳ್ಳವನು ಪುಷ್ಕರಾಕ್ಷ, ಕಣ್ಣು ಕಮಲದಂತೆ ಅಂದರೆ ಏನು? ಏನನ್ನು ನೋಡಿದರೂ ಕಮಲದಂತೆ ಕಮಲದ ಎಲೆಯಂತೆ ಅಂಟಿಸಿಕೊಳ್ಳದವನು ಎಂದರ್ಥ. ಕಮಲ ಹಾಗೂ ಕಮಲದ

ಎಲೆ ಕೆಸರಲ್ಲೇ ಇದ್ದರೂ ಏನನ್ನೂ ಅಂಟಿಸಿಕೊಳ್ಳುವುದಿಲ್ಲ. ಅದರಂತೆ ಲೋಕದಲ್ಲಿ ಒಳ್ಳೆಯ ಹಾಗೂ ಕೆಟ್ಟ ಯಾವ ವಸ್ತುವನ್ನು ಕಂಡರೂ ಅದರ ಲೇಪಕ್ಕೆ ಒಳಗಾಗದವನು ಭಗವಂತನು. ನಾವು ನೀವು ಹಾಗಲ್ಲ. ಎಲ್ಲಾದರೂ ಅಪಘಾತ ಆಗಿ ರಕ್ತದ ಓಕುಳಿಯನ್ನು ಕಂಡೆವೆಂದರೆ ಅದರ ದುಷ್ಪ್ರಭಾವದಿಂದ ಸುಧಾರಿಸಿಕೊಳ್ಳಲು ಕೆಲವು ದಿನಗಳೇ ಬೇಕಾಗುವವು. ಯಾವುದಾದರೊಂದು ವಸ್ತುವಿನಲ್ಲಿ ಅನುರಾಗ ಉಂಟಾಯಿತೆಂದರೆ ಅದು ದೊರಕುವವರೆಗೂ ಹುಚ್ಚರಂತೆಯೇ ಇರುವೆವು. ಭಗವಂತ ಹಾಗಲ್ಲ. ಯಾವುದನ್ನು ನೋಡಿದರೂ ಅದರ ಗುಣ ದೋಷಗಳಿಂದ ಅಂಟಿಸಿಕೊಳ್ಳುವುದಿಲ್ಲ. ಆದುದರಿಂದಲೇ ಅವನು 'ಪುಷ್ಕರಾಕ್ಷ'.

ಭಗವಂತನ ಕೆಲವು ನಾಮಗಳು ತಿಳ್ಕೊಳ್ಳಲಿಕಷ್ಟೇ. ಅವುಗಳ ಉಪಾಸನೆ ಮಾಡಲು ಬರುವುದಿಲ್ಲ. ಉದಾಹರಣೆಗೆ- ಆದಿತ್ಯನಾಮದಿಂದ ಏನಾದರೂ ಎಚ್ಚರಿಕೆ ಪಡೆದುಕೊಳ್ಳಬಹುದೇ ಹೊರತು ಉಪಾಸನೆಗೆ ಅಳವಡಿಸಿಕೊಳ್ಳಲಾಗುವುದಿಲ್ಲ.

ಆದರೆ 'ಪುಷ್ಕರಾಕ್ಷ'- ಎಂಬುದನ್ನು ಉಪಾಸನೆಗೂ ಅಳವಡಿಸಿಕೊಳ್ಳಬಹುದು. ಎಲ್ಲ ಇಂದ್ರಿಯಗಳೂ ಅಕ್ಷ ಎನಿಸುವುವು. ಬರೇ ಕಣ್ಣು ಮಾತ್ರವಲ್ಲ. ನಯನ-ಕೊಂಡೊಯ್ಯುವಂತಹದ್ದು- ಎನಿಸಿರುವ ಕಣ್ಣು ಉಳಿದ ಇಂದ್ರಿಯಗಳಿಗಿಂತ ಮುಖ್ಯವಾಗಿರುವುದರಿಂದಷ್ಟೇ ಅವನ್ನು ಮುಖ್ಯವಾಗಿ ತೆಗೆದುಕೊಂಡದ್ದಷ್ಟೇ. ಆದ್ದರಿಂದ ಎಲ್ಲಾ ಇಂದ್ರಿಯಗಳೂ ಆಯಾ ವಿಷಯಪದಾರ್ಥದ ಲೇಪಕ್ಕೆ ಒಳಗಾಗದಂತೆ 'ಪುಷ್ಕರಾಕ್ಷ'ನ ಉಪಾಸನೆ ನಡೆಸಬೇಕು. ಕಣ್ಣು ಕೆಟ್ಟ ವಸ್ತುವನ್ನು ಕಾಣುವ ಚಾಪಲ್ಯಕ್ಕೆ ಒಳಗಾದಾಗ, ಹಾಗೆಯೇ ನಾಲಗೆ, ಕಿವಿ, ಮೂಗು, ತ್ವಗಿಂದ್ರಿಯ ಕೆಟ್ಟ ವಸ್ತುಗಳನ್ನು ಮತ್ತೆ ಮತ್ತೆ ಆಸ್ವಾದಿಸಬೇಕೆಂಬ ಚಾಪಲ್ಯಕ್ಕೆ ಒಳಗಾದಾಗ 'ಪುಷ್ಕರಾಕ್ಷ'ನ ಉಪಾಸನೆ ನಡೆಸಿದಲ್ಲಿ ಆ ಚಾಪಲ್ಯವನ್ನು ಕಡಿಮೆ ಮಾಡಿಕೊಳ್ಳಬಹುದು.

ಭೀಷ್ಮರು ದುರ್ಯೋಧನನ ಮನೆಯಲ್ಲೇ ಇದ್ದು ಅವನ ಅನ್ನವನ್ನೇ ಸ್ವೀಕರಿಸುತ್ತಿದ್ದರೂ ದುರ್ಯೋಧನನ ಪಕ್ಷದಲ್ಲಿ ಯುದ್ಧ ಮಾಡುವಾಗಲೂ ಶ್ರೀಕೃಷ್ಣನ ಪ್ರೀತಿಗಾಗಿಯೇ ಕಾದಾಡಿದ್ದಿರಬೇಕೆಂದರೆ ಅದು ಕೃಷ್ಣನನ್ನು 'ಪುಷ್ಕರಾಕ್ಷ' ಎಂದು ಉಪಾಸನೆ ಮಾಡಿದ ಫಲ. ಏನನ್ನೇ ನೋಡಿದರೂ ಅದರ ಲೇಪಕ್ಕೆ ಒಳಗಾಗದವನು 'ಪುಷ್ಕರಾಕ್ಷ'- ಎಂದು ಉಪಾಸನೆ ನಡೆಸಿದ ಫಲ.

ಈ ನಾಮದ ಮತ್ತೊಂದು ಅರ್ಥವನ್ನೂ ಅನುಸಂಧಾನ ನಡೆಸಬಹುದು. ಪುಷ್ ಎಂದರೆ ಪೋಷಣೆ. ಪುಷ್ಕರ ಪೋಷಣೆ ಮಾಡುವಂತಹ ನೋಟವುಳ್ಳವನು ಪುಷ್ಕರಾಕ್ಷ. ಭಗವಂತ ಒಮ್ಮೆ ನಮ್ಮ ಮೇಲೆ ಕೃಪಾದೃಷ್ಟಿ ಬೀರಿದರೆ ಸಾಕು, ನಾವು ಧನ್ಯರಾಗುವೆವು.

ಭೀಷ್ಮರು ಕೃಷ್ಣನಲ್ಲಿ ಹೇಳ್ತಾರೆ – ಇಲ್ಲಿಯವರೆಗೆ ಬಂದು ಒಮ್ಮೆ ನನ್ನನ್ನು ನಖಶಿಖಾಂತ ನೋಡಿದ್ದಿಯಲ್ಲ ! ಈ ಶರಪಂಜರದಲ್ಲಿ ಮಲಗಿ ಎಂಟು ಮೃತ್ಯುಗಳ ದುಃಖವನ್ನು ಅನುಭವಿಸುತ್ತಿದ್ದೆ. ನಿನ್ನ ನೋಟದಿಂದಲೇ ಅವೆಲ್ಲ ಪರಿಹಾರವಾಯಿತು. ಎನಗೆ ಬಂದಿರುವ ಎಂಟು ಗರ್ಭವಾಸಗಳ ದುಃಖವನ್ನು ಪರಿಹರಿಸಿ ಎನಗೆ ಧೈರ್ಯ ತುಂಬುವ ನೋಟ ಉಳ್ಳವನು 'ಪುಷ್ಕರಾಕ್ಷ'.

೪೧. **ಮಹಾಸ್ವನಃ – * ದೊಡ್ಡ ಧ್ವನಿ ಉಳ್ಳವನು.**

*** ಅರ್ಥಗರ್ಭಿತವಾದ ಮಾತನ್ನು ಹೊರಡಿಸುವವನು.**

*** ವೈದಿಕ ಶಬ್ದಗಳಿಂದ ಹೊಗಳಲ್ಪಡುವವನು.**

**ವಿವರಣೆ :** ನೀನು ಒಬ್ಬ ಸಭೆಯಲ್ಲಿ ಮಾತನಾಡಲು ಪ್ರಾರಂಭಿಸಿದರೆ ಸಾಕು. ಸಭೆ ಸ್ತಬ್ಧ. ಅಷ್ಟು ಗಂಭೀರವಾದ ಧ್ವನಿ ನಿನ್ನದು. ಧ್ವನಿವರ್ಧಕ ಬೇಡವೇ ಬೇಡ. ಧ್ವನಿವರ್ಧಕ ಬೇಡ ಎಂದರೆ ಕಿರಿಚಾಡುವುದು ಎಂದರ್ಥ ಅಲ್ಲ. ಧ್ವನಿ ಎತ್ತರದಲ್ಲಿ ಇರಬೇಕು. ಅದರ ಜೊತೆಗೆ ಗಾಂಭೀರ್ಯವೂ ಇರಬೇಕು.

ಮಹಾಭಾರತ ಯುದ್ಧದಲ್ಲಿ ಅರ್ಜುನನ ಎದುರು ದ್ರೋಣಾಚಾರ್ಯರು, ಅಶ್ವತ್ಥಾಮಾಚಾರ್ಯರು ಇವರೆಲ್ಲ ಒಟ್ಟಿಗೆ ಬಂದಿದ್ದಾರೆ. ಆಗ ಕೃಷ್ಣ **'ಶಂಖಂ ದಧ್ಮೌ....'** ಗಟ್ಟಿಯಾಗಿ ಶಂಖ ಊದಿದನಂತೆ. ಅದು ಸಾರಥಿಯ ಕರ್ತವ್ಯ. ರಥಿಕನಿಗೆ ಸ್ಫೂರ್ತಿ, ಉತ್ಸಾಹಗಳನ್ನು ತುಂಬುವುದು. ಅರ್ಜುನನ ಸಾರಥಿ ಕೃಷ್ಣ ಅರ್ಜುನನಿಗೆ ಸ್ಫೂರ್ತಿ ತುಂಬಲು ಶಂಖವನ್ನು ಊದಿದ್ದಾನೆ. ಎಷ್ಟು ಗಟ್ಟಿಯಾಗಿ ? **'ಜಗತ್ ವಿರಿಂಚ– ಈಶ ಇಂದ್ರಪೂರ್ವಕಂ ಪ್ರಕಂಪಯಾಮಾಸ....'** ಸತ್ಯ ಲೋಕದಲ್ಲಿ ಕೂತಿದ್ದ ಚತುರ್ಮುಖನೂ ನಡುಗಿದ್ದ. ಅಷ್ಟು ಗಟ್ಟಿಯಾಗಿ ಶಂಖನಾದ ನಡೆಸಿದ್ದ. **'ಶಂಖ– ಧ್ವನಿಸಂಬೋಧಿತಾತ್ಮಾ....'** ಎಂದಿರುವಂತೆ ಶ್ರೀ ಕೃಷ್ಣ ಶಂಖದ ಧ್ವನಿಯ ಮೂಲಕ ದ್ರೋಣಾದಿಗಳ ಶಕ್ತಿ ಉಡುಗಿ ಹೋಗುವಂತೆ ಮಾಡಿದ್ದ.

ಶಂಖದ ಮೂಲಕ ಹೊರ ಹೊಮ್ಮಿದ ಧ್ವನಿಯೇ ಇಷ್ಟು ಗಂಭೀರವಾಗಿದ್ದಿರ ಬೇಕೆಂದರೆ ಕೃಷ್ಣ ಸ್ವಯಂ ಮಾತನಾಡಲು ಪ್ರಾರಂಭಿಸಿದರೆ ಎಷ್ಟೊಂದು 'ಮಹಾಸ್ವನಃ' ಎನಿಸುವನು ! ಮಹಾಸ್ವನಃ ಎಂಬುದಕ್ಕೆ ದೊಡ್ಡ ಧ್ವನಿ ಎಂಬಂತೆಯೇ ತೂಕದ ಮಾತು ಎಂಬ ಅರ್ಥವೂ ಇದೆ. ತುಂಬ ಮಾತನಾಡ್ತಾರೆ ಆದರೆ ಏನೂ ಸಾರವೇ ಇರುವುದಿಲ್ಲ. ಹಾಗಾಗಬಾರದು. ಸ್ವಲ್ಪ ಮಾತನಾಡಬೇಕು. ತುಂಬ ಸಾರ ಇರಬೇಕು. ಅರ್ಥಗರ್ಭಿತ ಮಾತುಗಳು ನಮ್ಮ ಬಾಯಿಯಿಂದ ಹೊರಬರಬೇಕು.

ಭೀಷ್ಮರು ಕೃಷ್ಣನನ್ನು 'ಮಹಾಸ್ವನಃ' ಎಂದು ಉಪಾಸನೆ ಮಾಡಿದರ

ಫಲವಾಗಿಯೇ ಪಾಂಡವರ ರಾಜಸೂಯಯಾಗದ ಸಭೆಯಲ್ಲಿ 'ತಾವೂ ಮಹಾಸ್ವನ' ರಾಗಿ ಶ್ರೀಕೃಷ್ಣನ ಅಗ್ರ ಪೂಜ್ಯತ್ವವನ್ನು ಸಮರ್ಥಿಸುವಂತಾಯಿತು. ನಮಗೂ ಜನರು ಮತ್ತೆ ಮತ್ತೆ ಕೇಳಬಯಸುವ 'ಮಹಾಸ್ವನ' ಸಿದ್ಧಿಸಬೇಕೆಂದರೆ ಭಗವಂತನನ್ನು 'ಮಹಾಸ್ವನ' ಎಂದು ಉಪಾಸನೆ ನಡೆಸೋಣ.

ಮಹಾಸ್ವನ ಶಬ್ದಕ್ಕೆ ಮತ್ತೊಂದು ಅರ್ಥ – ದೊಡ್ಡ ದೊಡ್ಡ ಶಬ್ದಗಳಿಂದ ಹೊಗಳಲ್ಪಡುವವನು. ವೈದಿಕ ಶಬ್ದಗಳೇ ದೊಡ್ಡ ದೊಡ್ಡ ಶಬ್ದಗಳು. ಆದ್ದರಿಂದ ವೈದಿಕ ಶಬ್ದಗಳಿಂದ ಹೊಗಳಲ್ಪಡುವವನು ಎಂಬ ಅರ್ಥ ಸಿದ್ಧಿಸುವುದು.

ಕೃಷ್ಣನ ಎದುರು ಆ ಶಬ್ದಗಳು ಚಿಕ್ಕವುಗಳೇ. ಆದರೆ ನಮ್ಮ ಪಾಲಿಗೆ ಅವು ದೊಡ್ಡವು. ಯಾಕೆಂದರೆ ನಮಗೆ ಅವು ಎಟಕುವುದಿಲ್ಲ.

**೪೨. ಅನಾದಿನಿಧನಃ–ಅನಾದಿಯಾದ ಲಿಂಗದೇಹಕ್ಕೆ ನಾಶಕೊಡುವವನು.**

**ವಿವರಣೆ :** ಜೀವನಿಗೆ ಹೇಗೆ ಆದಿ ಇಲ್ಲವೋ ಹಾಗೆಯೇ ಜೀವನ ಜೊತೆ ಬಂದಿರುವ ಒಂದು ಅಂಗಿಗೂ ಆರಂಭ ಇಲ್ಲ. ಈ ಅಂಗಿಗೆ ಆರಂಭ ಉಂಟು. ಇದರ ಒಳಗೆ ಮತ್ತೊಂದು ಅಂಗಿ ಉಂಟು – ಅನಿರುದ್ಧ ಅಂಗಿ ಎಂದು. ಅದಕ್ಕೂ ಇಷ್ಟೇ ವರ್ಷ ಎಂದು ನಿಯಮ ಉಂಟು. ಆದರೆ ಅದರ ಒಳಗೆ ಮತ್ತೊಂದು ಲಿಂಗ ದೇಹ ಎಂಬ ಅಂಗಿ ಉಂಟಲ್ಲಾ ? ಈ ಅಂಗಿಯನ್ನು ಭಗವಂತ ಎಂದು ಜೀವನಿಗೆ ಹಾಕಿದ ? ಗೊತ್ತಿಲ್ಲ. ಎಂದಿನಿಂದ ಜೀವನಿದ್ದಾನೋ ಅಂದಿನಿಂದ ಜೀವನ ಒಟ್ಟಿಗೆ ಇರತಕ್ಕ ಅಂಗಿ. ಜೀವನಿಗೆ ಉತ್ಪತ್ತಿ ಇಲ್ಲ, ಹಾಗಾದರೆ ಜೀವನ ಜೊತಗೆ ಇರತಕ್ಕ ಲಿಂಗದೇಹ ಎಂಬ ಅಂಗಿಗೂ ಉತ್ಪತ್ತಿ ಇಲ್ಲ. ಆದರೆ ಭಗವಂತ ಒಂದು ದಿನ ಅನಾದಿಯಾದ ಲಿಂಗದೇಹಕ್ಕೂ ನಾಶ ಕೊಡ್ತಾನೆ. ಎಷ್ಟರ ವರೆಗೆ ನಮಗೆ ಲಿಂಗದೇಹ ಇದೆಯೋ ಅಷ್ಟರವರೆಗೆ ನಮಗೆ ದುಃಖ ತಪ್ಪಿದ್ದಲ್ಲ. ಅನಾದಿಕಾಲದಿಂದ ಜೀವನಿಗೆ ಲಿಂಗದೇಹ ಉಂಟು ಎಂದರೆ ಅನಾದಿಕಾಲದಿಂದ ಅವನಿಗೆ ದುಃಖ ಉಂಟು ಎಂದರ್ಥ.

ಆದುದರಿಂದ ಅನಾದಿಯಾಗಿ ಇರುವ ದುಃಖದಿಂದ, ಸಂಸಾರ ಬಂಧನದಿಂದ ಪಾರು ಮಾಡುವವನು – 'ಅನಾದಿನಿಧನ'. ನಿಧನ ಎನ್ನುವುದಕ್ಕೆ ನಾಶ ಮಾಡುವವನು ಎಂಬಾರ್ಥ.

ಭೀಷ್ಮರು ಕೃಷ್ಣನಲ್ಲಿ ಕೇಳಿಕೊಳ್ತಾರೆ – ಅನಾದಿಯಾದ ದುಃಖವನ್ನೇ ಪರಿಹರಿಸುವ ಸಾಮರ್ಥ್ಯವುಳ್ಳವ ನೀನು, ನನಗೆ ಎಂಟುನೂರು ವರ್ಷಗಳಿಂದ ಉಂಟಾದ ದುಃಖವನ್ನು ಯಾಕೆ ಪರಿಹರಿಸಲಾರಿ !

**೪೩. ಧಾತಾ – ಧಾರಣೆ ಹಾಗೂ ಪೋಷಣೆ ಮಾಡುವವನು.**

**ವಿವರಣೆ :** ನಾವು ಸಾಯದಂತೆ ನೋಡಿಕೊಳ್ಳುವನು. ಸಾಯಲಿಲ್ಲ. ಇದ್ದೇವೆ. ಆದರೆ ಇದ್ದರೆ ಮಾತ್ರ ಸಾಲದು, ನಮಗೆ ಕಾಲಕಾಲಕ್ಕೆ ಆಹಾರ ಬೇಕಲ್ಲ ? **'ಪುಟ್ಟಿಸಿದ ದೇವ ತಾ ಹೊಣೆಗಾರನಾಗಿರಲು ಗಟ್ಯಾಗಿ ಸಲಹುವನು ಇದಕೆ ಸಂಶಯವಿಲ್ಲ. ತಲ್ಲಣಿಸದಿರು ಕಂಡ್ಯ ತಾಳು ಮನವೇ'**– ಆನೆಗೈದುಮಣವ ಆಹಾರವ ಯಾರು ಕೊಡುವರು ? – ದಾಸರು ಒಂದು ಕಡೆ ಕೇಳಿದ್ದುಂಟು – ಆನೆ ಐದು ಮಣ ಆಹಾರ ತಿನ್ನುವುದು. ಯಾರು ತಂದು ಕೊಡುವರು ? ನಾವು ತಂದು ಹಾಕುವುದಿಲ್ಲ. ಆದರೂ ಅದಕ್ಕೆ ಆಹಾರ ಸಿಗುವುದು. ಕಲ್ಲಿನ ಮೂಲೆಯಲ್ಲಿ ಕಪ್ಪೆ ಹುಟ್ಟಿರುತ್ತದೆ. ಅಲ್ಲಿಗೇ ಆಹಾರ ಉದಕವ ಯಾರು ತಂದು ಕೊಡುವರು ? ಭೀಷ್ಮರು ಹೇಳ್ತಾರೆ – ನೀನೇ ಆಹಾರವನ್ನು ಒದಗಿಸುವವನು. ವ್ಯಕ್ತಿಗಳು ಇರುವಂತೆ ಮಾಡುವುದಷ್ಟೇ ಅಲ್ಲದೆ, ಅವರಿಗೆ ಕಾಲಕಾಲಕ್ಕೆ ಆಹಾರವನ್ನು ನೀನೇ ಒದಗಿಸುವಿ. ಆದುದರಿಂದ ನೀನು 'ಧಾತಾ'.

**೪೪. ವಿಧಾತಾ–ನಮಗಿಂತ ವಿಲಕ್ಷಣರಾದ ಮುಕ್ತರಿಗೂ ಧಾರಣೆ ಪೋಷಣೆ ಮಾಡುವವನು.**

**ವಿವರಣೆ :** ವಿ ಎಂದರೆ ವಿಲಕ್ಷಣರು. ಸಂಸಾರಿಗಳಾದ ನಮಗಿಂತ ವಿಲಕ್ಷಣರಾದವರು ಮುಕ್ತರು. ನಮ್ಮಂತೆ ಅವರಿಗೆ ದುಃಖ ಇಲ್ಲ. ಲಿಂಗದೇಹದ ಬಂಧನ ಇಲ್ಲ. ನಮ್ಮಂತೆ ಅವರು ದೇವರ ವಿರುದ್ಧ ಚಿಂತನೆ ನಡೆಸುವುದಿಲ್ಲ. ಅಂತಹ ಮುಕ್ತರಿಗೂ ಪರಮಾತ್ಮ ಧಾರಕ ಹಾಗೂ ಕಾಲಕಾಲಕ್ಕೆ ಏನೇನು ಬೇಕೋ ಅವನ್ನೆಲ್ಲ ಒದಗಿಸಿಕೊಟ್ಟು ಪೋಷಿಸುವವನು.

**೪೫. ಧಾತುರುತ್ತಮಃ–ನಮ್ಮ ದೇಹವನ್ನು ಧರಿಸುವ ತತ್ತ್ವಾಭಿಮಾನಿ ದೇವತೆಗಳಿಗಿಂತ ಉತ್ತಮನಾಗಿರುವವನು.**

**ವಿವರಣೆ :** ಬೃಹತೀಸಹಸ್ರದ ಮೂಲವಾಗಿ ನೋಡಿದಾಗ 'ಧಾತುರುತ್ತಮ' ಎಂದು ಒಂದು ಶಬ್ದ. ಉತ್ತಮ ಎಂದರೆ ದೊಡ್ಡವ. ಯಾರಿಗಿಂತ ದೊಡ್ಡವ ? ಧಾತೃಗಳಿಗಿಂತ ದೊಡ್ಡವ. ಯಾರು ಧಾತೃಗಳು ? ನಮ್ಮ ದೇಹದ ಒಂದೊಂದು ಭಾಗದಲ್ಲೂ ಕುಳಿತುಕೊಂಡು ನಮ್ಮನ್ನು ಧರಿಸುವವರು. ಕೈಯ ಬೆರಳು ಹತ್ತು, ಕಾಲ ಬೆರಳು ಹತ್ತು – ಒಟ್ಟು ಇಪ್ಪತ್ತು ಆಯಿತಾ ? ಎರಡು ತೋಳುಗಳು, ಎರಡು ಕಾಲುಗಳು, ದೇಹದ ಒಂದೊಂದು ಭಾಗಗಳು – ಹೀಗೆ ಪ್ರತಿಯೊಂದು ಭಾಗವನ್ನೂ ಧಾರಣೆ ಮಾಡಲು ಒಬ್ಬೊಬ್ಬ ದೇವತೆಯಿದ್ದಾನೆ. ಇವರನ್ನು ಏನು ಅಂತ ಕರೆದರು ? ಧಾತೃಗಳು

ಎಂದು. ಅಲ್ಲಿಯ ಧಾಟಿಯಲ್ಲಿಯೇ ಮಾತನಾಡುವುದಾದರೆ 'ಧಾತು'ಗಳು ಎಂದು ಕರೆದರು. ನಮ್ಮ ಪ್ರತಿಯೊಂದು ಭಾಗದಲ್ಲೂ ಇದ್ದುಕೊಂಡು ನಮ್ಮನ್ನು ಧರಿಸುವ ದೇವತೆಗಳು ಧಾತೃಗಳು. ಎಡಕಾಲಿನ ಕಿರುಬೆರಳಿನಲ್ಲಿ 'ಧರಾ' ದೇವತೆ ಧಾರಕಗಳಾಗಿದ್ದಾಳೆ ಎನ್ನುವರು. ಕಿರುಬೆರಳಿನ ಪಕ್ಕದ ಬೆರಳಲ್ಲಿ ವರುಣ ಕೂತಿದ್ದಾನೆ. ಹೀಗೆ ಶಾಸ್ತ್ರಕಾರರು ಇಷ್ಟೂ ಸೂಕ್ಷ್ಮವಾಗಿ ದೇವತೆಗಳನ್ನು ತಿಳಿಸಿರುವರು. ನಮ್ಮ ದೇಹದ ಒಂದೊಂದು ಭಾಗವೂ ಚೆನ್ನಾಗಿ ಇದೆ. ಯಾಕೆಂದರೆ ಆಯಾ ದೇವತೆಗಳು ಅಲ್ಲಿದ್ದುಕೊಂಡು ಧಾರಣೆ ಮಾಡುವುದರಿಂದ. ದೇವತೆಗಳು ಅಲ್ಲಿದ್ದು ಧಾರಣೆ ಮಾಡಲು ಕಾರಣ ಭಗವಂತ. ದೇವರು ಆ ದೇವತೆಗಳಲ್ಲಿ ಸೇರಿದ. ದೇವತೆಗಳು ನಮ್ಮ ಕೈ ಕಾಲುಗಳಲ್ಲೆಲ್ಲ ಸೇರಿಕೊಂಡರು. ದೇವತೆಗಳಿಂದಾಗಿ ನಾವು ಬದುಕಿದ್ದರೆ, ಭಗವಂತನಿಂದಾಗಿ ದೇವತೆಗಳು ಬದುಕಿದ್ದಾರೆ. ತಂದೆ ತಾಯಿಯ ಕೈಯಲ್ಲಿ ಕೊಟ್ಟಾಗ ತಾಯಿ ಮಕ್ಕಳಿಗೆ ಅಡುಗೆ ಮಾಡಿ ವಿತರಿಸುವಳು. ಮಕ್ಕಳಿಗೂ ತಂದೆಗೂ ಮಧ್ಯದಲ್ಲಿ ತಾಯಿ ಇರುವಂತೆ ನಮಗೂ ಭಗವಂತನಿಗೂ ಮಧ್ಯದಲ್ಲಿ ದೇವತೆಗಳು ಇದ್ದಾರೆ. ಆದ್ದರಿಂದ 'ಧಾತುರುತ್ತಮ'– ದೇಹವನ್ನು ಧರಿಸುವ ದೇವತೆಗಳಿಗಿಂತ ಉತ್ತಮ. ದೇವತೆಗಳನ್ನು ಧರಿಸಿಕೊಂಡು, ದೇಹದಲ್ಲಿ ಅವರು ಇರಲಿಕ್ಕೆ ಕಾರಣ ನಾಗಿರುವವನಾಗಿರುವುದರಿಂದ ಅವನು ದೇವತೆಗಳಿಗಿಂತ ಉತ್ತಮ.

**ಅಪ್ರಮೇಯೋ ಹೃಷೀಕೇಶಃ ಪದ್ಮನಾಭೋಽಮರಪ್ರಭುಃ |**
**ವಿಶ್ವಕರ್ಮಾ ಮನುಸ್ತ್ವಷ್ಟಾ ಸ್ಥವಿಷ್ಠಃ ಸ್ಥವಿರೋಧ್ರುವಃ || ೬ ||**

**೪೬. ಅಪ್ರಮೇಯಃ – ಪೂರ್ಣವಾಗಿ ತಿಳಿದುಕೊಳ್ಳಲು ಸಾಧ್ಯವಾಗದವನು.**

**ವಿವರಣೆ :** ಪರಮಾತ್ಮನನ್ನು ನಖಶಿಖಾಂತ ತಿಳಿದುಕೊಳ್ಳಲು ಸಾಧ್ಯವಿಲ್ಲ. ಯಾರೂ ನಾನು ದೇವರನ್ನು ಪೂರ್ಣವಾಗಿ ಬಲ್ಲವನಾಗಿದ್ದೇನೆ ಎಂದು ಹೇಳುವವರಿಲ್ಲ. 'ಮೇಯ' 'ಪ್ರಮೇಯ'– ಅಪ್ರಮೇಯ. ಮೇಯ ಎಂದರೆ ತಿಳಿದುಕೊಳ್ಳಲು ಯೋಗ್ಯ. ಪ್ರಮೇಯ ಚೆನ್ನಾಗಿ ತಿಳಿದುಕೊಳ್ಳಲು ಯೋಗ್ಯ. ಅಪ್ರಮೇಯ ಎಂದರೆ ಸಮಗ್ರವಾಗಿ ಯಾರನ್ನು ತಿಳಿದುಕೊಳ್ಳಲು ಸಾಧ್ಯವಿಲ್ಲವೋ ಅಂತಹವನು.

ಕುರುಡರು ಆನೆಯನ್ನು ಪರಿಚಯಿಸಿಕೊಂಡಂತೆಯೋ ಏನೋ ನಮಗೆ ನಿಮಗೆ ಭಗವಂತನ ಪರಿಚಯ. ನಾವು ಬಿಡಿ, ಲಕ್ಷ್ಮೀಯೇ ದೇವರನ್ನು ಸಮಗ್ರವಾಗಿ ತಿಳಿದುಕೊಂಡಿಲ್ಲ. ದಾಸರು ಅಂದರು **'ಬಗೆ ಬಗೆಯ ನೂತನವ ಕಾಣುತ ಮಿಗೆ ಹರುಷದಿಂ ಪೊಗಳಿ ಹಿಗ್ಗುವ ತ್ರಿಗುಣಮಾನಿ ಮಹಾಲಕುಮಿ ಸಂತೈಸಲನುದಿನವು'** ಹೀಗೆ ಲಕ್ಷ್ಮೀದೇವಿ ಪ್ರತಿನಿತ್ಯ ಬಗೆ ಬಗೆಯ ನೂತನವನ್ನು ತನ್ನ ಪತಿಯಲ್ಲಿ

ಕಾಣುತ್ತಿದ್ದಾಳೆ ಎಂದರೆ ಈಗಾಗಲೇ ಸಮಗ್ರವಾಗಿ ಅವನನ್ನು ತಿಳಿಯಲಿಲ್ಲ ಎಂಬುದು ಸ್ಪಷ್ಟ. ಲಕ್ಷ್ಮೀದೇವಿಗೇ ಪೂರ್ಣವಾಗಿ ತಿಳಿದುಕೊಳ್ಳಲಾಗಲಿಲ್ಲ ಎಂದರೆ ನಮಗೆ ಅವನನ್ನು ಹೇಗೆ ಪೂರ್ಣವಾಗಿ ತಿಳಿದುಕೊಳ್ಳಲು ಸಾಧ್ಯವಾದೀತು ?

ಆದ್ದರಿಂದ ಯಾರ ಮುಂದೆಯೂ ತನ್ನನ್ನು ಪೂರ್ಣವಾಗಿ ತೆರೆದು ಇಡದೆ ಇರುವುದೇ ದೇವರ ದೊಡ್ಡ ಗುಣ. ಯಾರಿಗೂ ಸಮಗ್ರವಾಗಿ ಅರ್ಥವಾಗದಂತೆ ಇರುವಿಕೆಯೇ ಭಗವಂತನ ಗುಣ. ಎಷ್ಟು ಕೆದಕಿದರೂ ತನ್ನ ಪೂರ್ಣ ಗುಟ್ಟನ್ನು ಬಿಟ್ಟು ಕೊಟ್ಟಿಲ್ಲ – ಎಂದು ನಾವು ಲೋಕದ ಸಾಮಾನ್ಯ ಜನರ ಬಗ್ಗೆ ಹೇಳುವುದಿದೆ. ಹೀಗಿರುವಾಗ ಅನಂತ ಕಲ್ಯಾಣ ಗುಣ ಪರಿಪೂರ್ಣನಾದ ಭಗವಂತನ ಪೂರ್ಣ ಗುಟ್ಟು ಬಿಟ್ಟು ಕೊಡಲ್ಪಟ್ಟೀತೇ? ಶ್ರೀ ಕೃಷ್ಣನಲ್ಲಿ ಭೀಷ್ಮರು ಅನ್ನುವರು – ಎಂಟು ನೂರು ವರ್ಷಗಳಾದರೂ ಒಂದನ್ನು ಚೆನ್ನಾಗಿ ತಿಳಿದುಕೊಳ್ಳಲಾಗಲೇ ಇಲ್ಲ. ಅದು ಮತ್ತಾವುದೂ ಅಲ್ಲ, 'ನೀನೇ'. ಕೃಷ್ಣ ಮುಗುಳ್ನಕ್ಕು ಅನುಗ್ರಹಿಸಿದ.

**೪೭. ಹೃಷೀಕೇಶಃ – ಇಂದ್ರಿಯಗಳಿಗೆ ಒಡೆಯ.**

**ವಿವರಣೆ :** ಕಣ್ಣು, ಕಿವಿ, ಮೂಗು, ಬಾಯಿ, ಸ್ಪರ್ಶ, ಕೈ, ಕಾಲು, ನಾಲಗೆ, ಮಲ ಮೂತ್ರ ವಿಸರ್ಜಿಸುವವು ಹಾಗೂ ಮನಸ್ಸು ಹೀಗೆ ಒಟ್ಟು ಹನ್ನೊಂದು ಇಂದ್ರಿಯಗಳನ್ನು ಹೃಷೀಕ ಎಂದು ಕರೆದರು. 'ಹರ್ಷಯಂತಿ ಇತಿ ಹೃಷೀಕಾಣಿ'– ನಮಗೆ ಸಂತೋಷ ಕೊಡುವವು. ಜೋರು ಮಳೆ ಸುರೀತಾ ಇದೆ. ಮನೆಯಲ್ಲಿ ಕುಳಿತು ಆ ಮಳೆ ಸುರಿಯುವುದನ್ನು ನೋಡುವುದೇ ನಮಗೆ ಆನಂದ. ವಿಷಯ ಕೇಳುವುದು ಆನಂದ. ಹೀಗೆ ಜೀವ ಈ ಇಂದ್ರಿಯಗಳ ಮೂಲಕ ಸ್ವಲ್ಪ ಸಂತೋಷ ಪಡಲಿ ಎಂದು ದೇವರು ನಮಗೆ ಇಂದ್ರಿಯಗಳನ್ನು ಕೊಟ್ಟ. ಆ ಇಂದ್ರಿಯಗಳಿಗೆ ಅವನೇ ಒಡೆಯ. ಇಂದ್ರಿಯಗಳು ನಮ್ಮ ಶರೀರದಲ್ಲಿವೆ. ನಮ್ಮ ಇಂದ್ರಿಯಗಳು ಎಂದು ಕರೆಯುವೆವು. ಆದರೆ ಅವು ನಮ್ಮ ಹಿಡಿತದಲ್ಲಿಲ್ಲ. ನಾವು ಎಲ್ಲಿಗೆ ಹೋಗಬೇಕೆಂದು ಬಯಸುವೆವೋ ಅಲ್ಲಿಗೆ ಹೋಗುವುದಿಲ್ಲ, ಎಲ್ಲಿಗೆ ಹೋಗಬಾರದೆಂದು ಬಯಸುವೆವೋ ಅಲ್ಲಿಗೆ ಬಲಾತ್ಕಾರವಾಗಿ ಧಾವಿಸುವೆವು. ಇದರಿಂದ ಸ್ಪಷ್ಟ ಇಂದ್ರಿಯಗಳು ನಮ್ಮ ಹತೋಟಿಯಲ್ಲಿ ಇಲ್ಲ. ಅವು ಜಡಗಳೆಂದ ಮೇಲೆ ಯಾರ ಒಡೆತನಕ್ಕಾದರೂ ಸೇರಿರಬೇಕು, ನಮ್ಮ ಒಡೆತನಕ್ಕೆ ಸೇರಿಲ್ಲ ಎಂದ ಮೇಲೆ ದೇವರೇ ಅವುಗಳಿಗೆ ಒಡೆಯ ಎಂದು ನಿರ್ಧರಿಸಿಕೊಳ್ಳಬಹುದು.

ಗಣಪತಿಯನ್ನು 'ವಿಘ್ನೇಶ'– ಎಂದು ಸ್ತುತಿಸುವುದು ನನ್ನ ಪಾಲಿನ ವಿಘ್ನಗಳನ್ನು ಪರಿಹರಿಸಲಿ ಎಂಬ ಉದ್ದೇಶದಿಂದ ಹೇಗೋ ಹಾಗೆ ದೇವರನ್ನು

'ಹೃಷೀಕೇಶ'– ಎಂದು ಸ್ತುತಿಸುವುದು ನನ್ನ ಇಂದ್ರಿಯಗಳು ನನ್ನ ಪಾಲಿಗೆ ಹೃಷೀಕಗಳೆನಿಸುವಂತೆ, ತೃಪ್ತಿಜನಕಗಳಾಗುವಂತೆ ಮಾಡು ಎಂಬುದಾಗಿ. ಶರಪಂಜರದಲ್ಲಿ ಮಲಗಿರುವ ಭೀಷ್ಮರ ತ್ವಗಿಂದ್ರಿಯವನ್ನು ಹರಿತಗಳಾದ ಬಾಣಗಳು ಚುಚ್ಚಿ ಚುಚ್ಚಿ ನೋಯಿಸುತ್ತಿವೆ. ಎಂಟು ಮರಣಗಳ ದುಃಖವನ್ನು ಅವರು ಅನುಭವಿಸುತ್ತಿದ್ದಾರೆ. ಪಕ್ಕದಲ್ಲಿರುವ ಕೃಷ್ಣನನ್ನು ಪ್ರಾರ್ಥಿಸುವರು – ನನ್ನ ಬಗ್ಗೆ 'ಹೃಷೀಕೇಶ' ನಾಗು. ನನ್ನ ದುಃಖಕ್ಕೆ ಕಾರಣವಾಗುತ್ತಿರುವ ತ್ವಗಿಂದ್ರಿಯ ನನ್ನ ಪಾಲಿಗೆ 'ಹೃಷೀಕ' ಆಗುವಂತೆ ಅನುಗ್ರಹಿಸು.'

**೪೮. ಪದ್ಮನಾಭಃ – ಯಾರ ನಾಭಿಯಲ್ಲಿ ಪದ್ಮ ಇದೆಯೋ ಅಂತಹವನು.**

**ವಿವರಣೆ :** ಹೊಕ್ಕುಳಲ್ಲಿ ಪದ್ಮದ ನಾಳ ಇದೆಯೇ ಹೊರತು ಪದ್ಮ ಇಲ್ಲ. ಆದರೆ ಪದ್ಮ ಮೊದಲು ಹೊರಟದ್ದು ನಾಭಿಯಿಂದಲೇ. ಪದ್ಮಶಬ್ದಕ್ಕೆ ಲೋಕಗಳು ಎಂಬ ಒಂದು ಅರ್ಥವಿದೆ. ಯಾವ ಪದ್ಮದಲ್ಲಿ ಹದಿನಾಲ್ಕು ಲೋಕಗಳು ಉಂಟೋ ಅಂತಹ ದ್ದನ್ನು ಲೋಕ ಎಂದು ಕರೆದರು. ಅಂತಹ ಲೋಕವನ್ನು ಪರಮಾತ್ಮ ತನ್ನ ನಾಭಿಯಲ್ಲಿ ಇಟ್ಟುಕೊಂಡಿದ್ದಾನೆ. ಭಗವಂತನ ನಾಭಿಯಲ್ಲಿ ತುಂಬ ಜಾಗ ಉಂಟು. ಭಗವಂತನ ಮೂವತ್ತೆರಡು ಶಾರೀರಿಕ ಲಕ್ಷಣಗಳಲ್ಲಿ ಒಂದು ಲಕ್ಷಣ ಹೊಕ್ಕಳು ಆಳವಾಗಿ ಇರುವಿಕೆ. ಭಗವಂತನ ಹೊಕ್ಕಳು ಹದಿನಾಲ್ಕು ಲೋಕಗಳುಳ್ಳ ಕಮಲವನ್ನು ಒಳಗೊಳ್ಳುವಷ್ಟು ಆಳವಾಗಿರುವಂತಹದ್ದು. ಮೂವತ್ತೆರಡು ಶಾರೀರಿಕ ಲಕ್ಷಣಗಳನ್ನು ಪರಮಾತ್ಮನಷ್ಟೇ ಪೂರ್ಣ ಪ್ರಮಾಣದಲ್ಲಿ ಹೊಂದಿರುವುದರಿಂದ, ಅಂತಹ ಶಾರೀರಿಕ ಲಕ್ಷಣಗಳಲ್ಲಿ ಒಂದಾದ 'ನಾಭಿಯ ಗಾಂಭೀರ್ಯ' ಪರಮಾತ್ಮನಲ್ಲಿ ಇರುವಷ್ಟು ಲಕ್ಷ್ಮೀದೇವಿಯಲ್ಲೂ ಇಲ್ಲ.

ಈ ಅನುಸಂಧಾನದಿಂದ ಭಗವಂತನನ್ನು 'ಪದ್ಮನಾಭ' ಎಂದು ಉಪಾಸನೆ ನಡೆಸಿದಲ್ಲಿ ಮುಂದಿನ ಜನ್ಮದಲ್ಲಾದರೂ ನಾಭಿಯ ಗಾಂಭೀರ್ಯ ರೂಪವಾದ ಲಕ್ಷಣ ದೇಹದಲ್ಲಿ ಸಿದ್ಧಿಸುವಂತೆ ಅನುಗ್ರಹಿಸುವನು.

**೪೯. ಅಮರ ಪ್ರಭುಃ – ಸಾವು ಇಲ್ಲದ ದೇವತೆಗಳಿಗೆ ಒಡೆಯನಾಗಿ ಇರುವವನು.**

**ವಿವರಣೆ :** ಮರ ಎಂದರೆ ಮರಣಕ್ಕೊಳಗಾಗುವವರು. ಅಮರ ಎಂದರೆ ಮರಣಕ್ಕೊಳಗಾಗದವರು ಎಂದರೆ ಎಂದೆಂದೂ ಸಾಯದವರು. ಮರಣಕ್ಕೊಳಗಾದವರು ಎಂದರೆ ಎಂದೆಂದೂ ಸಾಯದವರು ಎಂದೇನೂ ಅರ್ಥ ಅಲ್ಲ. ನಮ್ಮಕ್ಕಿಂತ ಸ್ವಲ್ಪ ಹೆಚ್ಚು ಕಾಲ ಬದುಕುವವರು ಎಂದು ಅರ್ಥ.

ವಾದಿರಾಜ ಸ್ವಾಮಿಗಳು ಲಕ್ಷ್ಮೀ ಶೋಭಾನೆ ಹಾಡಲ್ಲಿ ಹೇಳಿರುವರು –

'ಎಲ್ಲರಾಯುಷ್ಯವ ಶಿಂಶುಮಾರ ದೇವ ಸಲ್ಲೀಲೆಯಿಂದಲಿ ತೊಲಗಿಸುವ ಒಲ್ಲೆ ನಾನಿವರ ನಿತ್ಯ ಮತ್ತ್ಯುದೆ ಎಂದು ಬಲ್ಲವರೆನ್ನ ಭಜಿಸುವರು' ಅಮರರೆಂದು ಪ್ರಸಿದ್ಧರಾದ ದೇವತೆಗಳೂ ಶಿಂಶುಮಾರನ ಬಾಲದ ಕೊಂಡಿಯ ವಿಷಕ್ಕೆ ಒಳಗಾಗಿ ಒಂದು ದಿನ ಇಲ್ಲ ಎಂದಾಗುವರೆಂದು ಇದರಲ್ಲಿ ತಿಳಿಸಲಾಗಿದೆ. ಹೀಗೆ ಸಾಯುವವರಾದರೂ ದೇವತೆಗಳನ್ನು ಅಮರರೆಂದು ಕರೆಯುವುದು ನಮಗಿಂತ ಹೆಚ್ಚು ವರ್ಷ ಬದುಕುವರು ಎಂಬ ಅಭಿಪ್ರಾಯದಿಂದಷ್ಟೇ. ಯೋಗ್ಯ ಆಹಾರ ಕಾಲಕಾಲಕ್ಕೆ ಸ್ವೀಕರಿಸಿದರೆ ಆಯುಷ್ಯ ಹೆಚ್ಚುವುದು. ದೇವತೆಗಳೂ 'ಅಮೃತ'– ಎಂಬ ಆಹಾರವನ್ನು ಸ್ವೀಕರಿಸಿದ್ದರಿಂದ ಅಧಿಕ ಆಯುಷ್ಯ ಪಡೆದಿರುವರು.

ಆದರೆ ಭೀಷ್ಮರು ಹೇಳುವರು – ದೇವತೆಗಳು ಅಮರರು ಎನಿಸಿದ್ದು ಬರೇ ಅಮೃತಪಾನ ನಡೆಸಿದ್ದರಿಂದಲ್ಲ. ಯಾಕೆಂದರೆ ಅಮೃತಪಾನ ಮಾಡಿದವರೂ ಸತ್ತದ್ದಿದೆ. ವಿಷ ಕುಡಿದವರೂ ಬದುಕಿದ್ದಿದೆ. ಆದುದರಿಂದ ಮರಣ ಬಾರದಿರಲು ದೇವತೆಗಳು ಅಮರರಾಗಲಿ ಎಂಬ ಭಗವಂತನ ಅನುಗ್ರಹವೇ ಮುಖ್ಯಕಾರಣ. ನಾವು ಸಾಯದಂತೆ ದೇವತೆಗಳು ರಕ್ಷಿಸಿದರೆ ಅಂತಹ ದೇವತೆಗಳಿಗೂ ರಕ್ಷಕ ನೀನು. ಸಾವು ಬಾರದ ದೇವತೆಗಳಿಗೆ ಒಡೆಯನಾಗಿ ಇರುವವನು. ದೇವತೆಗಳು ಸಾವಿಗೆ ಒಳಗಾಗದಂತೆ ಒಡೆಯನಾಗಿ ಇರುವವನು – 'ಭಗವಂತ.'

೫೦. ವಿಶ್ವಕರ್ಮಾ – ಎಲ್ಲರ ಎಲ್ಲ ಚಟುವಟಿಕೆಗಳನ್ನು ಮಾಡುವವನು.

**ವಿವರಣೆ :** ವಿಶ್ವ ಎಂದರೆ ಎಲ್ಲ, ಕರ್ಮ ಎಂದರೆ ಚಟುವಟಿಕೆಗಳು. ನಮ್ಮಿಂದ ಏನಾದರೂ ಚಟುವಟಿಕೆ ನಡೆಯಿತೆಂದರೆ 'ನಾನು ಮಾಡಿದೆ' ಎನ್ನುವೆವು. 'ಅವರು ಮಾಡಿಸಿದರು'– ಎನ್ನುವೆವು. ಇವೆರಡೂ ಅಲ್ಲ. ಸ್ವತಂತ್ರನಾಗಿ ನಾನು ಮಾಡಿದ್ದೂ ಅಲ್ಲ, ಅವರು ಮಾಡಿಸಿದ್ದೂ ಅಲ್ಲ. ಯಾಕೆ? ಮಾಡಬೇಕು ಎಂದು ಅಪೇಕ್ಷೆಪಟ್ಟರೂ ಕೆಲವೊಮ್ಮೆ ಮಾಡಲಾಗುವುದಿಲ್ಲ. ಮಾಡಬಾರದೆಂದು ನಿರ್ಧರಿಸಿದರೂ ನಡೆದು ಹೋಗುತ್ತದೆ. ಇದರಿಂದ ಸ್ಪಷ್ಟ – ಚಟುವಟಿಕೆಯನ್ನು ಮಾಡುವಲ್ಲಾಗಲೀ, ಬಿಡುವಲ್ಲಾಗಲೀ ನಮ್ಮ ಹಿಡಿತ ನಮ್ಮಲ್ಲಿಲ್ಲ.

ಅವರು ಹೇಳಿದ್ರೂ ಮನಸ್ಸಿಲ್ಲದಿದ್ದರೆ ತಪ್ಪಿಸಿಕೊಳ್ತೇವೆ. ಅವರು ಹೇಳದಿದ್ರೂ ಕೆಲವೊಮ್ಮೆ ಮಾಡುತ್ತೇವೆ. ಇದರಿಂದಾಗಿ ಅವರು ಮಾಡಿಸಿದರು ಎಂಬುದೂ ಕೂಡುವುದಿಲ್ಲ. ಆದ್ದರಿಂದ ಅವರೂ ಕಾರಣ ಅಲ್ಲ, ನಾವೂ ಕಾರಣ ಅಲ್ಲ. ಕೆಲಸ ಆಗಿದೆ. ತನ್ನಿಂದ ತಾನಾಗಿಯೇ ಕೆಲಸ ಆಗಲು ಸಾಧ್ಯವಿಲ್ಲ. ತನ್ನಿಂದ ತಾನೇ ಕೆಲಸ ಆಗುವುದಾದರೆ ಯಾವಾಗಲೂ ಕೆಲಸ ಆಗುತ್ತಲೇ ಇರಬೇಕಾದೀತು ! ಆದರೆ ಹಾಗಿಲ್ಲ.

ಕೆಲವೊಮ್ಮೆ ಮಾತ್ರ ಕೆಲವು ಚಟುವಟಿಕೆಗಳು ಮಾತ್ರ ನಡೆಯುತ್ತಿವೆ. ಆದ್ದರಿಂದ ಇದಕ್ಕೆಲ್ಲ ಮುಖ್ಯಕಾರಣ ನೀನೇ ಕೃಷ್ಣ ಎಂದು ಭೀಷ್ಮರು ಸ್ತುತಿಸುವರು – 'ವಿಶ್ವಕರ್ಮಾ' ಎಲ್ಲ ವ್ಯಕ್ತಿಗಳ, ಬರೇ ಮನುಷ್ಯರದ್ದಲ್ಲ, ಪಶುಪಕ್ಷಿಗಳದ್ದೂ, ಬರೇ ಪಶುಪಕ್ಷಿಗಳದ್ದಲ್ಲ, ಮರಗಿಡಗಳದ್ದೂ, ಬರೇ ಮರಗಿಡಗಳದ್ದಲ್ಲ, ಜಡಪದಾರ್ಥಗಳದ್ದೂ ಎಲ್ಲ ಚಟುವಟಿಕೆಗಳು ನಿನ್ನಿಂದಲೇ. ಚೆಂಡನ್ನು ಎಸೆದಾಗ ಅದು ಪುಟಿಯುತ್ತ ಗುರಿ ತಲುಪುವಂತೆ ಮಾಡುವವನೂ ನೀನೇ.

ಕೃಷ್ಣ, ದುರ್ಯೋಧನ ರಾಜ್ಯ ಕೊಡದಿರಲಿಕ್ಕೂ ಕಾರಣ ನೀನೇ. ಪಾಂಡವರು ಕಾಡಿಗೆ ಹೋಗಲು ಕಾರಣನೂ ನೀನೇ. ನಾನು ಹೋರಾಡಲು ಕಾರಣನೂ ನೀನೇ. ಸಕಲಕ್ಕೂ ಕಾರಣ ನೀನೇ. ಕೃಷ್ಣನನ್ನು ಬೈಯುವುದಕ್ಕೆ ಹೀಗೆ ಹೇಳುವುದಲ್ಲ. ಕೆಟ್ಟದ್ದಕ್ಕೆಲ್ಲ ನೀನು, ಒಳ್ಳೆಯದಕ್ಕೆ ನಾನು ಎಂದಾಗ ಮಾತ್ರ ಅದು ಬೈಯುವುದಾಗುವುದು. ಆದರೆ ಕೆಟ್ಟದ್ದಕ್ಕೂ, ಒಳ್ಳೆಯದಕ್ಕೂ ಎಲ್ಲದಕ್ಕೂ ನೀನೇ ಕಾರಣ ಎಂದಾಗ 'ಅಬ್ಬಾ!'- ಎಂದು ಉದ್ಗಾರ ಹೊರಡಿಸುತ್ತೇವಷ್ಟೇ.

ಎಲ್ಲರಿಂದ ಎಲ್ಲ ಕರ್ಮಗಳನ್ನೂ ಮಾಡಿಸುವವನು ಅವನೇ ಅಂದ ಮೇಲೆ ಅದರ ಒಳಿತು ಕೆಡುಕುಗಳಿಗೆ ಅವನೇ ಹೊಣೆಗಾರನಾಗಲಿ ಎಂದೇನೂ ಆರೋಪಿಸುವಂತಿಲ್ಲ. ಆಯಾ ಜೀವರ ಯೋಗ್ಯತೆಗನುಗುಣವಾಗಿ ಇರುವ ಕರ್ಮಗಳನ್ನಷ್ಟೇ ಭಗವಂತನು ಆಯಾ ಜೀವರಿಂದ ನಡೆಸುವನು. ತಾಯಿಯಾದವಳು ಮಗುವಿನ ಎದುರು ಇರುವ ಮಗುವಿನ ಎಲೆಯಲ್ಲಿ ಇರುವುದನ್ನೇ ಉಣಿಸುವಳು. ಮಗುವಿಗೆ ತನ್ನ ಎಲೆಯದ್ದನ್ನೂ ಉಣ್ಣಲು ಆಗುವುದಿಲ್ಲ. ಆದುದರಿಂದ ಉಣ್ಣಿಸುವಿಕೆಯಲ್ಲಿ ತಾಯಿ ಪಾತ್ರ ವಹಿಸುವಳು. ಆ ಎಲೆಯಲ್ಲಿ ಸಿಹಿ ಇದ್ದ ಹಾಗೆ ಖಾರ ಹಾಗೂ ಕಹಿ ವಸ್ತುಗಳಿದ್ದರೂ ಅವನ್ನೂ ಉಣ್ಣಿಸುವಳು. ಖಾರ ತಿನ್ನಿಸಿದಳು, ಕಹಿ ತಿನ್ನಿಸಿದಳು ಎಂದೇನೂ ತಾಯಿಯನ್ನು ಆಕ್ಷೇಪಿಸುವಂತಿಲ್ಲ. ಯಾಕೆಂದರೆ ಅವಳು ಆ ಮಗುವಿನ ಎಲೆಯಲ್ಲಿ ಇದ್ದದ್ದನ್ನೇ ಉಣ್ಣಿಸಿದಳೆಂದು. ಅದರಂತೆಯೇ ಭಗವಂತನು ಆಯಾ ಜೀವನ ಯೋಗ್ಯತೆಯ ಎಲೆಯಲ್ಲಿ ಬಂದದ್ದನ್ನಷ್ಟೇ ಮಾಡಿಸುವನು. ಜೀವ ಹೇಗೆ ನಿತ್ಯನೋ ಹಾಗೆಯೇ ಅವನ ಯೋಗ್ಯತೆಯೂ ನಿತ್ಯ. ಆದರೆ ಜೀವ ಹೇಗೆ ಪರಮಾತ್ಮನ ಅಧೀನದಲ್ಲಿರುವನೋ ಹಾಗೆಯೇ ಜೀವರ ಯೋಗ್ಯತೆಯೂ ಪರಮಾತ್ಮನ ಅಧೀನದಲ್ಲಿಯೇ ಇರುವುದು. ಅದಕ್ಕನುಗುಣವಾಗಿ ಎಲ್ಲ ಕರ್ಮಗಳನ್ನೂ ಮಾಡಿಸುವನು.

ಭಗವಂತ 'ವಿಶ್ವಕರ್ಮ' ನಾಗಿರುವ ಈ ರಹಸ್ಯವನ್ನು ಸ್ಪಷ್ಟಪಡಿಸಿಕೊಂಡು ಕರ್ತವ್ಯಗಳಿಂದ ನುಣುಚಿಕೊಳ್ಳುವುದಕ್ಕೆ ದುರುಪಯೋಗ ಆಗದಂತೆ ಎಚ್ಚರ

ವಹಿಸಬೇಕು.

**೫೧. ಮನುಃ – ಉತ್ತಮವಾದ ತಿಳುವಳಿಕೆ ಉಳ್ಳವನು.**

**ವಿವರಣೆ :** ಮನ್ – ತಿಳುವಳಿಕೆ, ಉ –ಉತ್ತಮ. ಉತ್ತಮವಾದ ತಿಳುವಳಿಕೆ ಉಳ್ಳವನು. ಅಜ್ಞಾನದಿಂದ ಕೂಡಿಲ್ಲದ ತಿಳುವಳಿಕೆ ಉತ್ತಮ ತಿಳುವಳಿಕೆ ಎನಿಸುವುದು. ಹಾಗೆಯೇ ತಿಳುವಳಿಕೆಗೆ ನಾಶ ಇಲ್ಲ ಎಂದಾಗ ಅದು ಉತ್ತಮ ತಿಳುವಳಿಕೆ ಆಗುವುದು. ತಿಳುವಳಿಕೆಗೆ ಹುಟ್ಟು ಇಲ್ಲ. ಎಂದಿನಿಂದಲೂ ಉಂಟು. ಅಂತಹ ತಿಳುವಳಿಕೆ ಉತ್ತಮ ತಿಳುವಳಿಕೆ. ಹಾಗಾದರೆ ಹುಟ್ಟು ಇಲ್ಲ, ನಾಶ ಇಲ್ಲ, ಅಜ್ಞಾನದ ಮಿಶ್ರಣ ಇಲ್ಲ, ಅಂತಹ ಜ್ಞಾನ ಉಳ್ಳವ. ನಮ್ಮ ತಿಳುವಳಿಕೆ ಯಾರದ್ದೋ ಉಪದೇಶದಿಂದ ಹುಟ್ಟಿಕೊಳ್ಳುವುದು. ಅದನ್ನು ಉಳಿಸಿಕೊಳ್ಳಲಾಗದಿದ್ದರೆ ನಾಶವನ್ನೂ ಹೊಂದುವುದು. ಸಂಶಯ ಹಾಗೂ ವಿಪರೀತ ಜ್ಞಾನಕ್ಕೆ ಒಳಗಾಗುವುದೂ ಇದೆ. ದೇವರ ತಿಳುವಳಿಕೆ ಹೀಗೆ ಅಲ್ಲದೆ ಇರುವುದರಿಂದ ಅವನು 'ಮನು' ಎನಿಸುವನು.

**೫೨. ತ್ವಷ್ಟಾ – ತಾಯಿಗರ್ಭದಲ್ಲಿರುವ ಮುದ್ದೆಯನ್ನು ಕೆತ್ತಿ, ಅದಕ್ಕೆ ಆಕಾರ ನೀಡುವವನು.**

**ವಿವರಣೆ :** ತ್ವಕ್ಷತಿ –ತನೂಕರೋತಿ ಕೆತ್ತಿ ಕೆತ್ತಿ ಚಿಕ್ಕದನ್ನಾಗಿ ಮಾಡುವವನು. ಆಕಾರ ಕೊಡುವವನು.. ಯಾವುದನ್ನು ಕೆತ್ತುವುದು ? ಯಾವ ಆಕಾರವನ್ನು ಕೊಡುವುದು ? ತಂದೆ ತಾಯಿಯ ಗರ್ಭದಲ್ಲಿ ಧಾತುವನ್ನು ಇಟ್ಟಾಗ ಒಂದೆರಡು ತಿಂಗಳಲ್ಲಿ ಅದೊಂದು ಮಾಂಸದ ಮುದ್ದೆ ಆಗುವುದು. ಆ ಮುದ್ದೆಗೆ ಶಿಶುವಿನ ಆಕಾರ ಕೊಡಬೇಕು. ದೊಡ್ಡ ಮರದ ದಿಮ್ಮಿಗೆ ಏನೋ ಪ್ರತಿಮೆಯ ಆಕಾರ ಕೊಡಬೇಕಾದರೆ, ಅದನ್ನು ಕೆತ್ತಬೇಕಾಗುವುದು. ಅದರಂತೆ ತಾಯಿಯ ಗರ್ಭದಲ್ಲಿ ಒಂದೆರಡು ತಿಂಗಳಲ್ಲಿ ಮರದ ದಿಮ್ಮಿಯಂತೆ ಒಂದು ಮುದ್ದೆ ತಯಾರಾಗುವುದು. ಆಗ ಭಗವಂತನ ಸಂಕರ್ಷಣ ಹೆಸರಿನ ರೂಪ ಅಲ್ಲಿಗೆ ಪ್ರವೇಶ ಮಾಡುವುದು. ಮಾನವ ಆಕಾರ ಬರುವಂತೆ ಆ ಮುದ್ದೆಯನ್ನು ಕೆತ್ತಲು ಪ್ರಾರಂಭಿಸಿತು. ಹೀಗೆ ತಾಯಿಯ ಗರ್ಭದಲ್ಲಿದ್ದ ಮುದ್ದೆಯನ್ನು ಕೆತ್ತಿ ಆಕಾರ ಕೊಡುವವನೇ ಪರಮಾತ್ಮ. **'ತ್ವಷ್ಟಾ ತ್ವೇಷಾತ್ ದ್ವಿತೀಯಕಃ'**– ಎಂದು ಉಪನಿಷತ್ತಿನ ಭಾಷ್ಯದ ಒಂದು ಮಾತು. ವಾಸುದೇವ, ಸಂಕರ್ಷಣ, ಪ್ರದ್ಯುಮ್ನ ಹಾಗೂ ಅನಿರುದ್ಧ ಎಂದು ನಾಲ್ಕು ರೂಪಗಳ ಒಂದು ಗುಂಪು. ಅದರಲ್ಲಿ ಎರಡನೆಯದ್ದು ಸಂಕರ್ಷಣ. ಅವನ ಹೆಸರು – ತ್ವಷ್ಟಾ. ತ್ವೇಷ – ಎಂದರೆ ಪ್ರಕಾಶ. ಆಕರ್ಷಣೆಗೆ ಕಾರಣನು ಆದ್ದರಿಂದ ತ್ವಷ್ಟಾ, ಎಂದು ಅಲ್ಲಿ ಮತ್ತೊಂದು ಕಾರಣ ಹೇಳಲಾಗಿದೆ. ಮುದ್ದೆ ಆಗಿರುವಾಗ ಆಕರ್ಷಣೆ ಇರುವುದಿಲ್ಲ.

ಆಕಾರದಿಂದ ಆಕರ್ಷಣೆ. ಹೇಗೆ ಚಿನ್ನದ ಗಟ್ಟಿಯಲ್ಲಿ ಆಕರ್ಷಣೆ ಇಲ್ಲ. ಅದಕ್ಕೆ ಆಭರಣದ ರೂಪ ಕೊಟ್ಟಾಗಷ್ಟೇ ಆಕರ್ಷಣೆ. ಅಂತೆಯೇ ಸಂಕರ್ಷಣ ತಾಯಿಯ ಗರ್ಭದಲ್ಲಿರುವ ಮುದ್ದೆಗೆ ಹೆಣ್ಣಿನದ್ದೋ, ಗಂಡಿನದ್ದೋ ಆಕಾರ ನೀಡಿ ಅದರಲ್ಲಿ ಆಕರ್ಷಣ ಉಂಟಾಗುವಂತೆ ಮಾಡುವನು.

ಸಂಸ್ಕಾರಗಳಲ್ಲಿ ಗರ್ಭಾಧಾನ ಸಂಸ್ಕಾರವೂ ಒಂದು. ಅದರ ಮಂತ್ರವೊಂದರಲ್ಲಿ ತಂದೆ ತಾಯಿಯ ಗರ್ಭದಲ್ಲಿ ಬೀಜಾಧಾನ ಮಾಡುವಲ್ಲಿಂದ ತಾಯಿಯ ಗರ್ಭದಿಂದ ಮಗುವಾಗಿ ಹೊರಬರುವವರೆಗೆ ಭಗವಂತನು ವಾಸುದೇವಾದಿ ನಾಲ್ಕು ರೂಪಗಳಿಂದ ಹೇಗೆ ಅನುಗ್ರಹಿಸುತ್ತಿರುತ್ತಾನೆ ಎಂದು ತಿಳಿಸಲಾಗಿದೆ. ಅದರಲ್ಲಿ ಸಂಕರ್ಷಣನು ತ್ವಷ್ಟೃನಾಮಕನಾಗಿ ರೂಪವನ್ನು ಕಡೆಯುವ ಕೆಲಸವನ್ನು ನಡೆಸುವನು. ಈ ನಾಮದಿಂದ ಭಗವಂತನನ್ನು ಉಪಾಸನೆ ಮಾಡಿದಲ್ಲಿ ಮಗುವಿನ ಯಾವುದಾದರೊಂದು ಅಂಗ ಊನವಾಗಿಯೋ, ಚಿಕ್ಕದಾಗಿಯೇ ದೊಡ್ಡದಾಗಿಯೋ ಹೀಗೆಲ್ಲ ಕೆತ್ತದೆ, ಚೆನ್ನಾಗಿ ಕೆತ್ತುವನು, ಒಳ್ಳೆಯ ರೂಪ ನೀಡುವನು.

**೫೩. ಸ್ಥವಿಷ್ಠಃ – ಅತ್ಯಂತ ದೊಡ್ಡದಾದ ಶರೀರವುಳ್ಳವನು.**

ವಿವರಣೆ : ಅತಿಶಯೇನ ಸ್ಥೂಲಃ ಸ್ಥವಿಷ್ಠಃ –ಮುಷ್ಠಿಯೊಳಗೆ ಏನನ್ನಾದರೂ ಇಟ್ಟುಕೊಳ್ಳ ಬೇಕೆಂದರೆ ಮುಷ್ಠಿ ಆ ವಸ್ತುವಿಗಿಂತಲೂ ದೊಡ್ಡದಾಗಿರಬೇಕು ತಾನೇ? ಆದುದರಿಂದ ಯಾವುದನ್ನು ಒಳಗೆ ಇಟ್ಟುಕೊಳ್ಳುವವೋ ಅದು ಚಿಕ್ಕದಿರಬೇಕು, ಯಾವುದರ ಒಳಗೆ ಇಟ್ಟುಕೊಳ್ಳಲಾಗುವುದೋ ಅದು ದೊಡ್ಡದಿರಬೇಕು. ಎಲ್ಲವನ್ನೂ ಭಗವಂತ ತನ್ನೊಳಗೆ ಇಟ್ಟು ಕೊಂಡಿದ್ದಾನೆ. ಎಲ್ಲವನ್ನೂ ಅಂದರೆ ಆಕಾಶವನ್ನೂ ಕೂಡಾ. ನಮಗೆ ಅತ್ಯಂತ ದೊಡ್ಡದಾಗಿ ಕಾಣಿಸುವ ವಸ್ತು ಆಕಾಶ ತಾನೇ ? ಅಂತಹ ಆಕಾಶವನ್ನೂ ಭಗವಂತ ತನ್ನೊಳಗೆ ಇಟ್ಟುಕೊಂಡಿದ್ದಾನೆ. ಆದ್ದರಿಂದ ಆಕಾಶಕ್ಕಿಂತಲೂ ದೊಡ್ಡವನು, ಅವನಿಗಿಂತ ದೊಡ್ಡ ವಸ್ತು ಮತ್ತೊಂದಿಲ್ಲ –ಎಂದು ಸಿದ್ಧಿಸುವುದು.

**೫೪. ಸ್ಥವಿರೋಧ್ರುವಃ – ಶಾಶ್ವತನಾದ ಮುದುಕ, ತನಗಾಗಿ ಒಂದು ಹೆಜ್ಜೆಯನ್ನೂ ಮುಂದಿಡುವವನಲ್ಲ.**

ವಿವರಣೆ : ಸಂಸ್ಕೃತದಲ್ಲಿ ಮುದುಕರನ್ನು ಸ್ಥವಿರ ಎಂದು ಕರೆಯಲಾಗುವುದು. ಯಾಕೆಂದರೆ ಮತ್ತೊಬ್ಬರ ಸಹಾಯವಿಲ್ಲದೆ ಹೆಜ್ಜೆ ಇಡಲಾಗುವುದಿಲ್ಲವೋ ಅಂತಹವನನ್ನು 'ಸ್ಥವಿರ' ಎನ್ನಲಾಗುವುದು. 'ತಿಷ್ಠತೀತಿ ಸ್ಥವಿರಃ' ಭೀಷ್ಮರು ಕೃಷ್ಣನಲ್ಲಿ ಹೇಳುವರು– ನೀನು ಸ್ಥವಿರ – ಮುದುಕ, ಎಂತಹ ಮುದುಕ? 'ಧ್ರುವ'

ಶಾಶ್ವತನಾದ ಮುದುಕ. ಅಂದರೆ ಎಂದೆಂದೂ ನೀನು ಇನ್ನೊಬ್ಬರು ಹೇಳದೆ ಒಂದು ಹೆಜ್ಜೆಯನ್ನೂ ಮುಂದಿಡುವವನಲ್ಲ. ಯಾರಿಗೆ ಸ್ವಂತ ಕೆಲಸ ಆಗಬೇಕೋ ಅವರು ಮಾತ್ರ ಇನ್ನೊಬ್ಬರು ಹೇಳದೆಯೇ ಹೆಜ್ಜೆಯನ್ನು ಮುಂದಿಡುವರು. ಯಾರ ಪ್ರವೃತ್ತಿ ಇನ್ನೊಬ್ಬರಿಗಾಗಿಯೇ ಇರುವುದೋ, ತನ್ನ ಸ್ವಂತಕ್ಕಾಗಿ ಏನೂ ಮಾಡುವುದಿಲ್ಲವೋ ಅಂತಹ ಭಗವಂತನು ಭಕ್ತರು ಪ್ರಾರ್ಥಿಸದೆ ಯಾವುದೇ ಪ್ರವೃತ್ತಿಯನ್ನು ನಡೆಸುವುದಿಲ್ಲ. ನಮ್ಮ ಪ್ರತಿಯೊಂದು ಪ್ರವೃತ್ತಿಯಲ್ಲೂ ಒಂದಲ್ಲ ಒಂದು ಸ್ವಾರ್ಥದ ಉದ್ದೇಶ ಇದ್ದೇ ಇರುವುದು. ಮುದುಕನೊಬ್ಬನನ್ನು ಕೈ ಹಿಡಿದು ರಸ್ತೆಯ ಆ ಬದಿಗೆ ಸಾಗಿಸಿದ ನಿಃಸ್ವಾರ್ಥವಾಗಿ ನಡೆದುಕೊಂಡಂತೆ ಇರುವ ವ್ಯಕ್ತಿಯಲ್ಲಿ ಯಾಕೆ ಅವನನ್ನು ದಾಟಿಸಿದಿ? ಎಂದು ವಿಚಾರಿಸಿದರೆ 'ನಾಳೆ ನಾನು ಮುದುಕನಾದಾಗ ನನಗೆ ಹೀಗೆ ಯಾರಾದರೂ ನೆರವು ನೀಡಿಯಾರು'– ಎಂದು ಉತ್ತರಿಸುವ ಮೂಲಕ ತನ್ನ ಸ್ವಾರ್ಥವನ್ನು ವ್ಯಕ್ತ ಮಾಡುವನು. ಹೀಗೆ ದೊಡ್ಡ ದೊಡ್ಡ ಆದರ್ಶಗಳು ಎಂದು ಪರಿಗಣಿತಗಳಾಗುವ ಚಟುವಟಿಕೆಗಳಲ್ಲೂ ಒಂದಲ್ಲ ಒಂದು ಸ್ವಾರ್ಥ ಇದ್ದೇ ಇರುವುದು. ಆದರೆ ಭಗವಂತನ ಪ್ರವೃತ್ತಿ ಇದಕ್ಕೆ ತೀರಾ ವಿಪರೀತವಾದುದು. ಆದುದರಿಂದ ಭಗವಂತ 'ಸ್ಥವಿರೋಧ್ರುವಃ' ಶಾಶ್ವತವಾಗಿ ಮುದುಕ, ತನಗಾಗಿ ಒಂದು ಹೆಜ್ಜೆಯನ್ನೂ ಮುಂದಿಡುವವನಲ್ಲ. ಇನ್ನೊಬ್ಬರಿಗಾಗಿಯೇ ಚಟುವಟಿಕೆಯನ್ನು ಮಾಡುವವನು. ಭಗವಂತನ ಯಾವುದೇ ಅವತಾರವನ್ನು ತೆಗೆದುಕೊಳ್ಳಿ, ಭಕ್ತರ ಪ್ರಾರ್ಥನೆಗೆ ಸ್ಪಂದಿಸಿಯೇ ಆಯಾ ಅವತಾರ ತಾಳಿರುವವನು ಅವನು.

'ಸ್ಥವಿರೋಧ್ರುವಃ'–ಎಂಬ ಹೆಸರು ಸೂಚಿಸುವ ಭಗವಂತನ ವ್ಯಕ್ತಿತ್ವದ ಸ್ಫೂರ್ತಿ ಪಡೆದುಕೊಂಡು ಸ್ವಲ್ಪ ಮಟ್ಟಿಗಾದರೂ 'ಇನ್ನೊಬ್ಬರಿಗಾಗಿ ಹೆಜ್ಜೆಯನ್ನಿಡುವ' ಪ್ರವೃತ್ತಿಯನ್ನು ಅಳವಡಿಸಿಕೊಳ್ಳೋಣ.

**ಅಗ್ರಾಹ್ಯಃ ಶಾಶ್ವತಃ ಕೃಷ್ಣೋ ಲೋಹಿತಾಕ್ಷಃ ಪ್ರತರ್ದನಃ |**
**ಪ್ರಭೂತಸ್ತ್ರಿಕಕುಬ್ಧಾಮ ಪವಿತ್ರಂ ಮಂಗಲಂ ಪರಮ್ || ೭ ||**

**೫೫. ಅಗ್ರಾಹ್ಯಃ – ಯಾವ ಇಂದ್ರಿಯದಿಂದಲೂ ಹಿಡಿಯಲಿಕ್ಕೆ ಸಿಗದವನು.**

ವಿವರಣೆ : ಸರಿಯಾದ ಉಚ್ಚಾರಣೆ ಹೊರಡಬೇಕೆಂದರೆ ಮುಂದಿನ ನಾಮವನ್ನೂ ನೋಡಿಕೊಳ್ಳಬೇಕು. ಶ,ಕ,ಪ,ಸ – ವರ್ಣಗಳು ಆದಿ ಆಗಿ ಉಳ್ಳ ನಾಮ ಮುಂದೆ ಇದ್ದರೆ ಹಿಂದಿನ ನಾಮದ ವಿಸರ್ಗಕ್ಕೆ ಒತ್ತು ಕೊಡಬೇಕೇ ಹೊರತು ಒಕಾರವನ್ನಾಗಿ ಪರಿವರ್ತಿಸಬಾರದು. ಬೇಸರಿಕೆ, ತೂಕಡಿಕೆ, ಹಾಗೂ ಆಕಳಿಕೆ – ಈ ಮೂರು ಕೆಗಳು ಮುಂದೆ ಇರುವುದಾದರೆ ಉಪನ್ಯಾಸಕನಿಗೆ 'ವಾಕರಿಕೆ' ಎಂಬ ಮತ್ತೊಂದು

'ಕೆ' ಉಂಟಾಗುವುದು ಹೇಗೆ ಸಹಜವೋ ಹಾಗೆ ಮುಂದಿನ ನಾಮದ ವರ್ಣಕ್ಕನುಗುಣವಾಗಿ ಹಿಂದಿನ ನಾಮದ ವಿಸರ್ಗದ ಪರಿವರ್ತನೆ ಸಹಜವಾದುದು.

ಒಂದೊಮ್ಮೆ ಅರ್ಥಾನುಸಂಧಾನ ನಡೆಸಲಾಗದಿದ್ದರೂ ಸ್ವಚ್ಛವಾಗಿ, ಇಂಪಾಗಿ ಪಠಿಸುವ ನಮ್ಮ ಸಹಸ್ರನಾಮದ ಪಾರಾಯಣವನ್ನು ಕೇಳಿ ಸಂತೋಷಪಡುವುದಕ್ಕಾದರೂ ದೇವರು ಬರಬೇಕು. ಹಾಗೆ ಆದಷ್ಟು ಶುದ್ಧವಾಗಿ ಸುಶ್ರಾವ್ಯವಾಗಿ ಪಾರಾಯಣ ಮಾಡುವಂತಾಗಬೇಕು.

ಗ್ರಹಣ ಎಂದರೆ ಹಿಡಿಯುವುದು. ಗ್ರಾಹ್ಯ ಹಿಡಿಯುವುದಕ್ಕೆ ಯೋಗ್ಯ. ಅಗ್ರಾಹ್ಯ ಹಿಡಿಯುವುದಕ್ಕೆ ಆಗದವನು. ಕೈಯಿಂದ ಹಿಡಿಯಲು ಸಿಗುವುದಿಲ್ಲ. ಕಣ್ಣಿನಿಂದ ಹಿಡಿಯಲು ಸಿಗುವುದಿಲ್ಲ. ಮನಸ್ಸಿನಿಂದ ಹಿಡಿಯಲೂ ಸಿಗುವುದಿಲ್ಲ ಹೀಗೆ ಯಾವುದೇ ಇಂದ್ರಿಯಕ್ಕೂ ಹಿಡಿಯಲು ಸಿಗದವನೇ 'ಅಗ್ರಾಹ್ಯ'.

ಭಗವಂತನ ಈ ಗುಣವನ್ನು ಅನುಭವಕ್ಕೆ ತಂದುಕೊಂಡವಳು ಯಶೋದೆ. ಭಾಗವತದಲ್ಲಿ ಬಂದಿರುವ ಕಥೆ ಎಲ್ಲರಿಗೂ ಗೊತ್ತು. ಮೊಸರಿನ ಭಾಂಡೆಯನ್ನು ಒಡೆದು ಹಾಕಿದ ಕೃಷ್ಣನನ್ನು ಹಿಡಿದು ಬಿಡಬೇಕೆಂದು ಯಶೋದೆ ಕೃಷ್ಣನ ಹಿಂದೆ ಓಡಿದರೆ, ಕೃಷ್ಣ ಯಶೋದೆಯ ಮನೆ ತುಂಬ ಓಡಿದ. ಕೃಷ್ಣನ ಓಡಾಟದಿಂದ ಮನೆ ಪೂರ್ಣ ಪವಿತ್ರವಾಯಿತು. ಹೀಗೆ ಮನೆಯನ್ನು ಪವಿತ್ರಗೊಳಿಸಿದ ಮೇಲೆ ಮನೆಯ ಪರಿಸರವನ್ನು ಪವಿತ್ರಗೊಳಿಸಬೇಕೆಂದು ಹೊರಗೆ ಓಡಿದ. ಯಶೋದೆಯ ಮನೆ ತುಂಬ ಓಡಾಟ ನಡೆಸಿದ ಕೃಷ್ಣ ಮತ್ತೆ ಅವಳ ಮನ ತುಂಬ ಓಡಲು ಪ್ರಾರಂಭಿಸಿದ. ದೇವರನ್ನು ಬೆಳೆಸಬೇಕೆಂದು ಟೊಂಕಕಟ್ಟಿ ಬಂದವಳು ಯಶೋದೆ. ಅವಳ ಅವಸ್ಥೆಯೇ ಹೀಗಾಯಿತೆಂದರೆ ಉಳಿದವರ ಪಾಡೇನು. ?

ದೇವರನ್ನು ಬೆಳೆಸಬೇಕು ಎಂದು ಅಪೇಕ್ಷೆ ಪಡುವವರ ಕೈಗೇ ಅವನು ಸಿಗುವುದಿಲ್ಲ. ದೇವರನ್ನು ಬೆಳೆಸುವುದೆಂದರೆ ತಿಂಡಿಕೊಟ್ಟು ಬೆಳೆಸುವುದೆಂದಲ್ಲ. ಅಧ್ಯಯನದ ಮೂಲಕ ಭಗವಂತನ ಪ್ರಜ್ಞೆಯನ್ನು ಬೆಳೆಸಿಕೊಳ್ಳುವುದೆಂದರ್ಥ. ಓದಿಯೊ ಕೇಳಿಯೋ ಭಗವಂತನ ಪ್ರಜ್ಞೆಯನ್ನು ಚೆನ್ನಾಗಿ ಬೆಳೆಸಿಕೊಂಡಿದ್ದಾನೆಂದರೆ ತನ್ನ ಹೃದಯದಲ್ಲಿ ದೇವರನ್ನು ಚೆನ್ನಾಗಿ ಸಾಕಿದ್ದಾನೆ ಎಂದರ್ಥ. ಅವರು ತಮ್ಮಲ್ಲಿ ದೇವರನ್ನು ಚೆನ್ನಾಗಿ ಬೆಳೆಸಿಕೊಂಡಿದ್ದಾರೆ – ಎಂದೆಲ್ಲ ವ್ಯವಹಾರ ಇದೆ. ಈ ರೀತಿಯಾಗಿ ದೇವರನ್ನು ತಮ್ಮಲ್ಲಿ ಚೆನ್ನಾಗಿ ಬೆಳೆಸಿಕೊಂಡವರಿಗೂ ಕೂಡಾ ಅವನು 'ಅಗ್ರಾಹ್ಯ' 'ಮನ ವಚನಕೆ ಅತಿದೂರ ನೆನೆವರನುಸರಿಸಿ ತಿರುಗುವನು ಜಾಹ್ನವೀಜನಕ'– ಜಗನ್ನಾಥದಾಸರು ತೆಗೆದ ಉದ್ಗಾರ. 'ಮನವಚನಕೆ ಅತಿದೂರ'

ಕಣ್ಣಿನಿಂದ ನೋಡುವುದು ಬಿಡಿ, ಕೈಯಲ್ಲಿ ಮುಟ್ಟುವುದು ಬಿಡಿ, ಬಾಯಿಯಿಂದ ಪೂರ್ಣವಾಗಿ ಇವನನ್ನೊಮ್ಮೆ ಜಾಲಾಡ್ತೇನೆ ಎಂದರೆ ಇಲ್ಲ ಸರಿ, ಬಾಯಲ್ಲೂ ಹೇಳಲು ಬೇಕಾದಷ್ಟು ಶಬ್ದ ಸಿಗದಿರಬಹುದು. ಮನಸ್ಸಿನಲ್ಲಿ ಸಮಗ್ರವಾಗಿ ಚಿಂತಿಸ್ತೇನೆ ಎಂದರೆ ಅದೂ ಆಗುವುದಿಲ್ಲ. ಮನಸ್ಸಿನಿಂದಲೂ, ಬಾಯಿಯಿಂದಲೂ, ಕೈಯಿಂದಲೂ ಪೂರ್ಣವಾಗಿ ಗ್ರಹಣ ಮಾಡಲಾಗುವುದಿಲ್ಲ. ಮನಸ್ಸಿನಿಂದ ಆಗುವಷ್ಟು, ಬಾಯಿಯಿಂದ ಆಗಲಾರದು. ಬಾಯಿಯಿಂದ ಆಗುವಷ್ಟು ಕೈಯಿಂದ ಆಗಲಾರದು, ಕೆಳಕೆಳಗೆ ಬಂದಂತೆ ಕಡಿಮ್ಮೆಯಾಗುತ್ತ ಬರುವುದು. ಹೀಗೆ ಯಾವುದೇ ಇಂದ್ರಿಯಕ್ಕೆ ಪೂರ್ಣವಾಗಿ ಎಟಕದವನು.

ಸ್ವಲ್ಪವೂ ಎಟಕುವುದೇ ಇಲ್ಲ ಎಂದೂ ಹೇಳಲಾಗದು. ಸ್ವಲ್ಪ ಎಟಕುವನು. ಆದರೂ ತಿಳಿದಿರುವುದಕ್ಕಿಂತ ತಿಳಿಯದಿರುವ ಅಂಶವೇ ಅಧಿಕವಾಗಿರುವುದರಿಂದ ಸ್ವಲ್ಪ ತಿಳಿದರೂ ತಿಳಿಯದಂತೆಯೇ ಎಂದು ಪರಿಗಣಿಸಲಾಗುವುದು. ಭಗವಂತನ ಎಲ್ಲ ಗುಣಗಳನ್ನು ಬಿಡಿ, ಆ ಗುಣಗಳಲ್ಲಿ ಒಂದೊಂದನ್ನಾದರೂ ನಾವು ಪೂರ್ಣವಾಗಿ ತಿಳಿದಿದ್ದೇವೋ ? ಅವನಲ್ಲಿ ಜ್ಞಾನ ಎಷ್ಟಿದೆ ? ತುಂಬ ಜ್ಞಾನ ಇದೆ –ಎಂದಷ್ಟೇ ಹೇಳಬಹುದು ಹೊರತು ಆ ಜ್ಞಾನದ ಬಗ್ಗೆ ಇನ್ನೇನನ್ನೂ ತಿಳಿಯಲಾರೆವು. ಹೀಗೆ ಉಳಿದ ಗುಣಗಳ ಬಗ್ಗೆಯೂ.

ಹೀಗೆ ಭಗವಂತನನ್ನು ಪೂರ್ಣವಾಗಿ ತಿಳಿಯಲಿಕ್ಕೆ, ಹಿಡಿಯಲಿಕ್ಕೆ ಆಗುವುದಿಲ್ಲ ಎನ್ನುವುದೇ ಅವನ ಮಹತ್ತ್ವ. ನಿನ್ನನ್ನು ಪೂರ್ಣವಾಗಿ ತಿಳಿದುಕೊಳ್ಳಲಾಗುವುದಿಲ್ಲ ಎಂದಾಗಲೇ ದೇವರಿಗೆ ಸಂತೋಷ.

**೫೬. ಶಾಶ್ವತಃ – ಯಾವಾಗಲೂ ಒಂದೇ ರೀತಿಯಾಗಿ ಇರುವವನು.**

**ವಿವರಣೆ :** ಶಶ್ವತ್ ಏಕಪ್ರಕಾರ ಶಾಶ್ವತ. ಅನಾದಿಕಾಲದಿಂದ ಅನಂತಕಾಲದವರೆಗೆ ಏನೂ ಏರುಪೇರು ಇಲ್ಲದೆ ಒಂದೇ ರೀತಿಯಾಗಿ ಇರುವವನು. ಶಾರೀರಿಕವಾಗಿಯಾಗಲೀ, ಮಾನಸಿಕವಾಗಿಯಾಗಲೀ, ಭೌದ್ಧಿಕವಾಗಿಯಾಗಲೀ, ವಾಚಿಕವಾಗಿಯಾಗಲೀ ಯಾವುದೇ ರೀತಿಯ ಏರು ಪೇರು ಭಗವಂತನಿಗೆ ಇಲ್ಲ. ನಮ್ಮಲ್ಲಿ ದೈಹಿಕವಾಗಿ, ವಾಚಿಕವಾಗಿ ಹಾಗೂ ಮಾನಸಿಕವಾಗಿ ಪ್ರತಿಯೊಂದರಲ್ಲೂ ಏರುಪೇರು ಉಂಟು. ಆದರೆ ಭಗವಂತನಲ್ಲಿ ಯಾವುದೇ ವಿಷಯದಲ್ಲಿ ಏರುಪೇರು ಇಲ್ಲ. ಯಾವಾಗಲೂ ಎಲ್ಲ ಗುಣಗಳನ್ನು ಹೊಂದಿದ್ದು ಗುಣತಃ ಒಂದೇ ರೀತಿಯಾಗಿ ಇರುವವನು. ಸಮುದ್ರದಲ್ಲಿ ಬೇಕಾದರೆ ನೀರಿನ ಏರುಪೇರು ಆದೀತು. ಆದರೆ ಭಗವಂತನಲ್ಲಿ ಗುಣಗಳಲ್ಲಿ ಏರುಪೇರುಗಳಿಲ್ಲ.

ಸುಮಾರು ಹದಿನಾರು, ಹದಿನೇಳು, ವಯಸ್ಸಿನವರು ಹೇಗಿರ್‍ತಾರೋ ಹಾಗೆಯೇ ಭಗವಂತನು ಯಾವಾಗಲೂ ಇರ್‍ತಾನೆ. ದೇವರನ್ನು ನೋಡುವ ನಾವು ಬದಲಾಗುತ್ತ ಇರುತ್ತೇವೆ. ಆದರೆ ನೋಡಲ್ಪಡುವ ಭಗವಂತ ಎಂದೆಂದೂ ಒಂದೇ ರೀತಿಯಾಗಿ ಇರುವನು.

ಸಂಸಾರಾವಸ್ಥೆಯಲ್ಲಿ ನಮಗೆ ಬಾಲ್ಯ, ಯೌವನ, ವೃದ್ಧಾಪ್ಯ, ಮರಣ ಅಂತ ಬೇರೆ ಬೇರೆ ಅವಸ್ಥೆ ತಾ ಮುಂದೆ ತಾ ಮುಂದೆ ಎಂದು ಬರುತ್ತಿರುತ್ತದೆ. ಆದರೆ ಭಗವಂತನಂತೆ ನಾವೂ ಒಂದೇ ರೀತಿಯಾಗಿ ಇರಬೇಕಾದರೆ ಮೋಕ್ಷಾವಸ್ಥೆಯನ್ನು ಹೊಂದಬೇಕು. ಅಲ್ಲಿ ಶಶ್ವತ್ ಏಕಪ್ರಕಾರದ ಸ್ಥಿತಿ.

ಭಗವಂತನ ಈ ಶಾಶ್ವತತ್ವಗುಣದ ಉಪಾಸನೆಯ ಫಲವಾಗಿ ನಾವೂ ಮೋಕ್ಷಾವಸ್ಥೆಯನ್ನು ಹೊಂದಿ ಅಲ್ಲಿ ಶಾಶ್ವತರಾಗಿ ಮೆರೆಯಬಹುದು.

**೫೭. ಕೃಷ್ಣಃ – ಎಲ್ಲ ರೀತಿಯ ಆಕರ್ಷಣೆ ಉಳ್ಳವನು.**

ವಿವರಣೆ : ಪ್ರಸಿದ್ಧವಾದ ಹೆಸರು.. 'ಕರ್ಷತೀತೀ ಕೃಷ್ಣಃ' ಆಕರ್ಷಣೆಗೆ ಒಳ ಪಡಿಸುವವನು. ಕೃಷ್ಣ ಸಂಧಾನಕ್ಕಾಗಿ ಹಸ್ತಿನಪುರಕ್ಕೆ ಹೋದ ಸಂದರ್ಭ. ಕೃಷ್ಣ ಆಗ ಲೌಕಿಕದೃಷ್ಟಿಯಿಂದ ಸುಮಾರು ಎಪ್ಪತ್ನಾಲ್ಕು ವರ್ಷದ ಮುದುಕ. ಯಾಕೆಂದರೆ ಭೂಮಿಯಲ್ಲಿ ಒಟ್ಟು ೧೨೬ ವರ್ಷಕಾಲ ಕಾಣಿಸಿಕೊಂಡಿದ್ದ ಕೃಷ್ಣ ಮುಂದೆ ಪಾಂಡವರ ಮೂವತ್ತೆರಡು ವರ್ಷ ರಾಜ್ಯಭಾರದ ಅವಧಿಯಲ್ಲಷ್ಟೇ ಕಾಣಿಸಿಕೊಂಡಿದ್ದ. ಆದ್ದರಿಂದ ೭೪ ವರ್ಷದ ಮುದುಕ ಬರ್‍ತಾನೆ ಎಂದರೂ ಹಸ್ತಿನಪುರದ ಯುವತಿಯರು, ಹುಡುಗಿಯರು ಎಲ್ಲ ಅಟ್ಟ ಹತ್ತಿ, ಮಾಳಿಗೆ ಹತ್ತಿ ಕೃಷ್ಣನನ್ನು ಕಾಣುವ ತವಕ ತೋರಿಸುತ್ತಿದ್ದರಂತೆ. ಕೃಷ್ಣನ ನಿಜರೂಪ ಬಿಡಿ, ಅವನ ಜಡಪ್ರತಿಮೆಯನ್ನೇ ನಮಗೆ ನೋಡಿದಷ್ಟು ತೃಪ್ತಿ ಆಗುವುದಿಲ್ಲ. ಹೀಗೆ ಜಡಪ್ರತಿಮೆಗೇ ಅಷ್ಟು ಆಕರ್ಷಣೆ ಇದೆ ಎಂದ ಮೇಲೆ ಅದರ ಒಳಗಿರುವ ಶ್ರೀ ಕೃಷ್ಣನ ಚಿದಾನಂದಾತ್ಮಕ ಶರೀರದ ಆಕರ್ಷಣೆ ಎಷ್ಟು ಇದ್ದೀತು ! ಯಾವುದೇ ವಸ್ತುವಿನಲ್ಲಿ ಆಕರ್ಷಣೆ ಬಂತೋ ಅಲ್ಲಿ ಆಕರ್ಷಕನಾಗಿ ಭಗವಂತ ಇದ್ದಾನೆ ಎಂದೇ ಅರ್ಥ. ಯಾವುದೋ ವಸ್ತುವನ್ನು ನೋಡಿದೆವು. ಅದನ್ನು ಮತ್ತೊಮ್ಮೆ ನೋಡಬೇಕೆಂಬ ಆಕರ್ಷಣೆ ಬಂತೆಂದರೆ ಅಲ್ಲಿ ಕೃಷ್ಣ ಇದ್ದಾನೆ ಎಂದೇ ಅರ್ಥ. ಯಾವುದೇ ಶಬ್ದವನ್ನು ಕೇಳಿದಾಗ ಅದನ್ನು ಮತ್ತೊಮ್ಮೆ ಕೇಳಬೇಕೆಂಬ ಸೆಳೆತ, ಯಾವುದೋ ಹೂವನ್ನು ಮೂಸಿದೆವು, ಅದನ್ನು ಪುನಃ ಮೂಸಬೇಕೆಂಬ ಸೆಳೆತ – ಹೀಗೆ ಯಾವುದೇ ಬಗೆಯ ಸೆಳೆತ ಎಲ್ಲಿ ಕಾಣಿಸಿಕೊಂಡರೂ ಅದು ಕೃಷ್ಣನಿಂದಲೇ ಉಂಟಾಗುವಂತಹದ್ದು.

ಆದುದರಿಂದ ನಾವು ಯಾವುದೇ ವಸ್ತುವಿನ ಆಕರ್ಷಣೆಗೆ ಒಳಗಾದಾಗ ಅಲ್ಲಿ ಕೃಷ್ಣನಾಮಕ ಭಗವದ್ರೂಪದ ಪಾತ್ರದ ಚಿಂತನೆ ನಡೆಸಬೇಕು.

**೫೮. ಲೋಹಿತಾಕ್ಷಃ – * ಯಾರ ಕಡೆಗಣ್ಣು ಕೆಂಪಾಗಾಗಿದೆಯೋ ಅಂತಹವನು.**

*** ಶರೀರವೆಂಬ ಲೋಕಕ್ಕೆ ಹಿತವನ್ನು ಉಂಟುಮಾಡುವ ದೃಷ್ಟಿ ಉಳ್ಳವನು.**

**ವಿವರಣೆ :** ಲೋಹಿತ ಅಂದರೆ ಕೆಂಪು, ಅಕ್ಷ ಅಂದರೆ ಕಣ್ಣು. ಕೆಂಪು ಕಣ್ಣು ಉಳ್ಳವ. ಇಡೀ ಕಣ್ಣು ಕೆಂಪು ಅಲ್ಲ. ಮೂವತ್ತೆರಡು ಶಾರೀರಿಕ ಲಕ್ಷಣಗಳಲ್ಲಿ ಕಣ್ಣು ಕೆಂಪಾಗಾಗಿರುವುದೂ ಒಂದು ಲಕ್ಷಣ. ಹಸ್ತದ ತಲ. ಪಾದದ ಅಡಿ, ತುಟಿಗಳು, ಕಣ್ಣಿನ ಕೊನೆಯ ಭಾಗ ಇವಿಷ್ಟು ಕೆಂಪಗಾಗಿರಬೇಕು. ಆಗ ಅದು ಸಲಕ್ಷಣ ಶರೀರ ಎಂದರ್ಥ. ದೊಡ್ಡ ದೊಡ್ಡ ವ್ಯಕ್ತಿಗಳಲ್ಲಿ ಈ ಲಕ್ಷಣಗಳು ಅಧಿಕ ಅಧಿಕವಾಗಿ ಇರುವವು. ಅಂದರೆ ಕಣ್ಣಿನ ಹೆಚ್ಚೆಚ್ಚು ಭಾಗ ಕೆಂಪು ಎಂದರ್ಥವಲ್ಲ. ಎಲ್ಲರದ್ದೂ ಕಣ್ಣಿನ ತುದಿ ಭಾಗವೇ ಕೆಂಪು. ಭಗವಂತನ ಕಣ್ಣಿನ ತುದಿಭಾಗ ಉಳಿದ ಯಾರ ಕಣ್ಣಿನ ತುದಿಭಾಗವೂ ಕೆಂಪಗಾಗಿರದಷ್ಟು ಕೆಂಪಾಗಿದೆ. ಭಗವಂತನನ್ನು ಹೀಗೆ 'ಲೋಹಿತಾಕ್ಷ'– ಎಂದು ಉಪಾಸನೆ ನಡೆಸಿದರೆ ನಮ್ಮಲ್ಲೂ ಆ ಲಕ್ಷಣ ಸಿದ್ಧಿಸೀತು.

ಮತ್ತೊಂದು ಅರ್ಥವನ್ನು ಹೀಗೆ ಅನುಸಂಧಾನ ಮಾಡಬಹುದು. 'ಲೋ'– ಎಂಬುದು ಲೋಕಶಬ್ದದ ಏಕದೇಶ. ಲೋಕಕ್ಕೆ ಹಿತವನ್ನುಂಟುಮಾಡುವ ದೃಷ್ಟಿ ಉಳ್ಳವನೇ – ಲೋ ಹಿತಾಕ್ಷ.

ಭಗವಂತ ಎಲ್ಲರಿಗೂ ಹಿತಾಗಬೇಕೆಂದು ನೋಡುವನು. 'ಎಷ್ಟು ದಿನ ಕಷ್ಟ ಪಡುವುದೋ ಯಶೋದೆಕಂದ ದೃಷ್ಟಿಯಿಂದ ನೋಡಬಾರದೇ'– ಎಂದು ಶ್ರೀಕೃಷ್ಣನಲ್ಲಿ ದಾಸರು ಇದನ್ನೇ ಪ್ರಾರ್ಥಿಸಿರುವರು. ದೃಷ್ಟಿಯಿಲ್ಲದೆ ನೋಡುವ ಪ್ರಸಂಗವೇ ಇಲ್ಲದುದರಿಂದ ದೃಷ್ಟಿಯಿಂದ ನೋಡಬಾರದೇ ಎಂಬುದಕ್ಕೆ ಹಿತದೃಷ್ಟಿಯಿಂದ ನೋಡಬಾರದೇ ಎಂದೇ ಅರ್ಥ. ಯಾವುದನ್ನು ನೋಡುವುದು? ಲೋಕವನ್ನು, ಯಾವ ಲೋಕವನ್ನು ? ಈ ಶರೀರವೆಂಬ ಲೋಕವನ್ನು. ನಾವು ನಾವೇ ತತ್ತದ್ವ್ಯಕ್ತಿತ್ವೇನ ಪ್ರಾರ್ಥನೆ ಮಾಡುವುದು. ಅವರವರು ತಮ್ಮ ತಮ್ಮ ಬಗ್ಗೆ ಪ್ರಾರ್ಥನೆ ಮಾಡಬೇಕೇ ವಿನಹ ಇನ್ನೊಬ್ಬರು ಮತ್ತೊಬ್ಬರ ಬಗ್ಗೆ ಪ್ರಾರ್ಥನೆ ನಡೆಸುವ ಪ್ರಸಂಗ ಇಲ್ಲ. ಅವರವರ ತಲೆಗೆ ಅವರವರ ಕೈ. ಆದ್ದರಿಂದ ಈ ಶರೀರವೆಂಬ ಲೋಕಕ್ಕೆ ಹಿತವಾಗುವ ದೃಷ್ಟಿ ಉಳ್ಳವ. ಅಂತೂ ಎನಗೆ ಅನುಕೂಲಕರವಾದ ದೃಷ್ಟಿ ಬೀರುವವ

ಎಂಬುದು ಲೋಹಿತಾಕ್ಷನಾಮದ ಸ್ವಾರಸ್ಯ.

**೫೯. ಪ್ರತರ್ದನಃ – ಚೆನ್ನಾಗಿ ದಮನ ಮಾಡುವವನು.**

**ವಿವರಣೆ :** ತರ್ದನ ಎಂದರೆ ಮರ್ದನ. ಪ್ರತರ್ದನ ಎಂದರೆ ಚೆನ್ನಾಗಿ ಮರ್ದನ. ಕಾಲಿಯಮರ್ದನ, ವಾಲಿಮರ್ದನ – ಹೀಗೆ ಬೇರೆ ಬೇರೆ ಸಂದರ್ಭದಲ್ಲಿ ಚೆನ್ನಾಗಿ ಮರ್ದನ ನಡೆಸಿರುವವನನ್ನು 'ಪ್ರತರ್ದನ' ಎಂದು ಕರೆದರು. ವಾಲಿಯ ಮರ್ದನ ಮಾಡಿದ ಅದೊಂದು ಕ್ರಮ. ದುರ್ಯೋಧನನ್ನು ಮರ್ದನ ಮಾಡಿದ ಅದೊಂದು ಕ್ರಮ. ವಾಲಿಯ ಮರ್ದನದಿಂದ ವಾಲಿಗೆ ಏನೂ ಅವಮಾನ ಆಗುವ ಪ್ರಸಂಗ ಬಂದಿರಲಿಲ್ಲ. ದುರ್ಯೋಧನನ ಮರ್ದನದಿಂದ ಅವನಿಗೆ ಅವಮಾನ ಆಗುವ ಪ್ರಸಂಗವೇ ಬಂತು. ಹೆಜ್ಜೆ ಹೆಜ್ಜೆಗೂ ಭಗವಂತ ದುರ್ಯೋಧನನ ಮರ್ದನ ಮಾಡಿಕೊಂಡೇ ಬಂದ. ಕೆಲವು ಪ್ರತ್ಯಕ್ಷವಾಗಿ ಮಾಡಿದ, ಕೆಲವು ಪರೋಕ್ಷವಾಗಿ ಮಾಡಿದ ಅಷ್ಟೇ. ಅರಗಿನ ಮನೆಯನ್ನು ಸುಡತಕ್ಕ ಪ್ರಸಂಗದಿಂದ ಮರ್ದನ ಮಾಡುತ್ತ ಬಂದ. ಪಾಂಡವರು ನಮ್ಮಿಂದ ಅಪ್ಪಣೆ ಪಡೆಯದೆ ಹುಟ್ಟಿದಂತ ಹುಡುಗರು ಎಂದು ಹೇಳುವಲ್ಲಿಂದ ದುರ್ಯೋದನ ಕೃಷ್ಣನ ತುಳಿತಕ್ಕೆ ಒಳಗಾಗುತ್ತ ಬಂದ.

ದೇವರು ತುಳಿಯುವುದು ಯಾರನ್ನು ? ದುರ್ಯೋಧನ ಸಮಾಜಕ್ಕೆ ಕಂಟಕನಾಗಿ ಬೆಳೆಯುತ್ತಿದ್ದ. ಅದಕ್ಕಾಗಿ ಕೃಷ್ಣ ಅವನನ್ನು ತುಳಿಯುತ್ತಿದ್ದ. ಪಾಂಡವರನ್ನು ಒಳಗೆ ತೆಗೆದುಕೊಳ್ಳಬೇಕು – ಎಂಬಲ್ಲಿಂದಲೇ ದುರ್ಯೋಧನ ಅಪಸ್ವರ ಎತ್ತಲು ಪ್ರಾರಂಭಿಸಿದ್ದ. ಆಗ ಕೃಷ್ಣ ವಾಯುದೇವರ ಮೂಲಕ ಅಶರೀರವಾಣಿಯನ್ನು ಹೊರಡಿಸಿ ದುರ್ಯೋಧನನನ್ನು ತಣ್ಣಗಾಗಿಸಿದ. ಅರಗಿನ ಮನೆಯ ಸುಡುವ ತಂತ್ರದಲ್ಲೂ ದುರ್ಯೋದನ ಸೋತ. ದ್ರೌಪದಿಯ ಸೀರೆಗೆ ಕೈ ಹಾಕುವಲ್ಲೂ ದುರ್ಯೋಧನ ಸೋತ. ಸಂಧಾನಕ್ಕಾಗಿ ಕೃಷ್ಣ ಬರುವಾಗ ಏಳಬಾರದೆಂಬ ತಂತ್ರದ ವಿಷಯದಲ್ಲೂ ದುರ್ಯೋಧನ ಸೋತ. ಒಳ್ಳೆಯ ರೀತಿಯಲ್ಲಿ ಸತ್ತು ಸ್ವರ್ಗ ಪಡೆಯಬೇಕೆಂಬಲ್ಲೂ ದುರ್ಯೋಧನ ಸೋತ. ನರಿನಾಯಿಗಳ ಮೂಲಕ ತೊಡೆಯ ಚರ್ಮ ಕಿತ್ತುಕೊಳ್ಳುವ ರೀತಿಯಲ್ಲಿ ದುರ್ಯೋಧನ ಸತ್ತ. ಆದ್ದರಿಂದಲೇ ಭಗವಂತ ದುರ್ಯೋಧನಾದಿಗಳ ಪಾಲಿಗೆ 'ಪ್ರತರ್ದನ' ಆಗಿದ್ದ. ವಾಲಿಗೆ ಭಗವಂತ 'ತರ್ದನ' ಆಗಿದ್ದನಷ್ಟೇ.

**೬೦. ಪ್ರಭೂತಃ – ಪ್ರತಿಯೊಂದನ್ನೂ 'ತುಂಬ' ಪ್ರಮಾಣದಲ್ಲಿ ಹೊಂದಿರುವವನು.**

**ವಿವರಣೆ:** ಸಹಜವಾಗಿ ಪ್ರಭೂತ ಶಬ್ದ ತುಂಬ ಎಂಬ ಅರ್ಥದಲ್ಲಿ ತೆರೆದುಕೊಳ್ಳುತ್ತದೆ.

ಸಂದರ್ಭ ನೋಡಿಕೊಂಡು ತುಂಬ ಶಬ್ದಕ್ಕೆ ಅರ್ಥ ಮಾಡಬೇಕು. ಪ್ರತಿಯೊಂದಕ್ಕೂ 'ತುಂಬ' ವನ್ನು ಹಚ್ಚಿ ಪರಮಾತ್ಮನ ವಿಷಯದಲ್ಲಿ ಅನುಸಂಧಾನ ಮಾಡಬಹುದು. ಭಗವಂತ ದುರ್ಯೋಧನನನ್ನು ಮರ್ದನ ಮಾಡುವುದೂ ತುಂಬ. ಪಾಂಡವರನ್ನು ಪ್ರೀತಿಸುವುದೂ ತುಂಬ. ತಿನ್ನುವುದೂ ತುಂಬ. ಪಲ್ಲ ಪೂಜೆ ದೇವರಿಗೆ ಮಾತ್ರ ತಾನೇ ? ಆದುದರಿಂದ ತುಂಬ ಸೃಷ್ಟಿ ಮಾಡುವವನು, ತುಂಬ ಪಾಲನೆ ಮಾಡುವವನು ಹೀಗೆ ಪ್ರತಿಯೊಂದಕ್ಕೂ ತುಂಬ ಹಚ್ಚಿ ಹೇಳುವ ಬದಲು 'ತುಂಬ' ಎಂದೇ ಅವನನನ್ನು ಕರೆಯಲಾಗಿದೆ. ಪ್ರತಿಯೊಂದನ್ನೂ ತುಂಬ ಪ್ರಮಾಣದಲ್ಲಿಯೇ ಹೊಂದಿರುವವನು ಎಂಬ ಆಶಯ.

**೬೧. ತ್ರಿಕಕುಬ್ಧಾಮ – * ಮೂರು ದಿಕ್ಕುಗಳನ್ನು ಮನೆಯನ್ನಾಗಿ ಮಾಡಿಕೊಂಡವನು.**

*** ಮೂರು ದಶೆಗಳ ಜೀವರಾಶಿಯವರಿಗೂ ಆಶ್ರಯ.**

*** ಮೂರು ವೇದಗಳ ಮೂಲಕ ಸುಖವನ್ನು ವಿಸ್ತಾರಗೊಳಿಸಿ ಆಶ್ರಯನಾದವನು.**

**ವಿವರಣೆ :** ತ್ರಿ ಅಂದರೆ ಮೂರು, ಕಕುಪ್ ಅಂದರೆ ದಿಕ್ಕು. ಧಾಮ ಅಂದರೆ ಮನೆ, ಆಶ್ರಯ. ಮೂರು ದಿಕ್ಕುಗಳನ್ನು ಮನೆಯನ್ನಾಗಿ ಮಾಡಿಕೊಂಡವ. ದಿಕ್ಕುಗಳು ಎಂಟು ಎಂದು ಪ್ರಸಿದ್ಧಗಳಾದರೂ ಅವನ್ನು ನಾಲ್ಕು ಎಂದೂ, ಹತ್ತು ಎಂದೂ, ಎರಡು ಎಂದೂ ವಿಂಗಡಿಸಬಹುದಾಗಿದೆ. ಒಂದು ವರ್ತುಲ ಎಳೆದಾಗ ಅದನ್ನು ನಾಲ್ಕು ಭಾಗಗಳಾಗಿಯೂ ವಿಂಗಡಿಸಬಹುದು, ಮೂರು ಭಾಗಗಳಾಗಿಯೂ ವಿಭಾಗಿಸಬಹುದು.ಒಂದು ಭಾಗ ಈ ದಿಕ್ಕಿಗೆ ಮತ್ತೊಂದು ಭಾಗ ಆ ದಿಕ್ಕಿಗೆ, ಇನ್ನೊಂದು ಭಾಗ ಮತ್ತೊಂದು ದಿಕ್ಕಿಗೆ ಸೇರಿದ್ದು ಎಂಬುದಾಗಿ. ಆದ್ದರಿಂದ ದಿಕ್ಕುಗಳ ವಿಭಜನೆ ನಮ್ಮ ನಿಮ್ಮ ಅಪೇಕ್ಷೆಯನ್ನು ಅನುಸರಿಸಿಕೊಂಡು ಇರುವಂತಹದ್ದು.

ಆದ್ದರಿಂದ ಎಲ್ಲ ದಿಕ್ಕುಗಳಲ್ಲೂ ಇರುವವನು ಎಂಬ ಅಭಿಪ್ರಾಯದಲ್ಲಿಯೇ ಮೂರು ದಿಕ್ಕುಗಳನ್ನು ಮನೆಯನ್ನಾಗಿಸಿಕೊಂಡಿರುವವನು ಅಂದರೆ ಮೂರು ದಿಕ್ಕುಗಳಲ್ಲೂ ಇರುವವನು.

ಅಥವಾ ದಿಕ್ಕುದಶೆ ನೀನೇ ಎಂದು ದಿಕ್ಕು ಶಬ್ದವನ್ನು ದಶೆ ಎಂಬ ಅರ್ಥದಲ್ಲೂ ಪ್ರಯೋಗಿಸಲಾಗುವುದು. ಮೂರು ದಶೆ ಉಳ್ಳವರಿಗೂ ಆಶ್ರಯ. ಮೂರು ದಶೆ ಉಳ್ಳದವರೆಂದರೆ ತ್ರಿವಿಧ ಜೀವರು. ಸಾತ್ವಿಕ, ರಾಜಸ, ತಾಮಸ ಎಂಬ ಮೂರು ದಶೆಯ ಚೇತನರಿಗೂ ಧಾಮ ಆಶ್ರಯ ಭಗವಂತ.

ಮಹಾಭಾರತಯುದ್ಧದಲ್ಲಿ ಕೃಷ್ಣನಿಗೆ ಬೇಕಾಗುವ ಪಾಂಡವಾದಿಗಳೂ ಇದ್ದರು. ಕೃಷ್ಣನಿಗೆ ಬೇಡವಾದ ದುರ್ಯೋಧನಾದಿಗಳೂ ಇದ್ದರು. ಆ ಎರಡು ಗುಂಪುಗಳಲ್ಲೂ ಸೇರದೆ ತಟಸ್ಥರೂ ಇದ್ದರು. ಈ ಮೂರು ಬಗೆಯ ದಶೆಯವರೂ ತಮ್ಮ ತಮ್ಮ ಪ್ರವೃತ್ತಿ ನಡೆಸಲು ಪ್ರೇರಕನಾಗಿ ಆಶ್ರಯನಾದವನು ಶ್ರೀಕೃಷ್ಣನೇ.

ಮತ್ತೊಂದು ಅರ್ಥ ಹೀಗಿದೆ – ಸಾತ್ವಿಕ ಜೀವರ ಒಳಗೆ ಸುಖ ಹುದುಗಿದೆ. ಅದು ಹೊರ ಹೊಮ್ಮಬೇಕಾದರೆ ಪರಿಶ್ರಮ ಪಡಬೇಕು. ಆ ಪರಿಶ್ರಮ – ಮೂರುವೇದಗಳ ಅಧ್ಯಯನ ರೂಪದಲ್ಲಿ. ಮೂರು ವೇದಗಳ ಅಧ್ಯಯನ ನಡೆಸಿದಲ್ಲಿ ಸಾತ್ವಿಕ ಜೀವರ ಒಳಗೆ ಸುಪ್ತವಾಗಿರುವ ಸುಖವನ್ನು ಭಗವಂತನು ವಿಸ್ತಾರಗೊಳಿಸುವನು. 'ತ್ರಿ' – ಮೂರು ವೇದಗಳ ಮೂಲಕ 'ಕ' – ಸಾತ್ವಿಕ ಜೀವರ ಒಳಗೆ ಸುಪ್ತವಾಗಿರುವ ಸುಖವನ್ನು 'ಕುಪ್' – ವಿಸ್ತಾರಗೊಳಿಸುವವನು ಎಂಬ ಅರ್ಥ ಹೊರಡುವುದು.

ಜೀವನ ಸುಖಕ್ಕೆ ಪ್ರಕೃತಿಯ ಆವರಣವಿತ್ತು. ಚತುರ್ಮುಖನ ಜೊತೆಗೆ ವಿರಜಾನದಿಯಲ್ಲಿ ಸ್ನಾನ ಮಾಡಿದಾಗ ಆ ಆವರಣ ಕಳಚಿ ಹೋಯಿತು. ಆದರೂ ಜೀವನಿಗೆ ತನ್ನ ಸುಖ ಅನುಭವಕ್ಕೆ ಬಂದಿಲ್ಲ. ದೀಪದ ಆವರಣ ಹೋಯಿತೆಂದರೆ ತಾನಾಗಿಯೇ ಬೆಳಕು ಹೊರಹೊಮ್ಮುವುದು. ಆದರೆ ಜೀವನ ಸ್ವರೂಪಸುಖದ ವಿಷಯದಲ್ಲಿ ಹೀಗೆ ಆಗಿಲ್ಲ. ಅಡುಗೆ ಆಗಿದೆ. ಆದರೆ ಪಾತ್ರದಲ್ಲಿ ಮುಚ್ಚಲ್ಪಟ್ಟಿದೆ. ಪಾತ್ರ ತೆರೆಯಲ್ಪಟ್ಟಿದೆ. ಎಲೆಗೆ ಬಡಿಸಲಾಗಿದೆ. ಆದರೂ ಊಟ ಮಾಡುವಂತಿಲ್ಲ. ಚತುರ್ಮುಖನ ಜೊತೆಗೆ ವಿರಜಾನದಿಯಲ್ಲಿ ಸ್ನಾನ ಮಾಡಿ ಲಿಂಗದೇಹವನ್ನು ಕಳಕೊಂಡ ಮೇಲೂ ಸ್ವರೂಪ ಸುಖವನ್ನು ಅನುಭವಿಸುವಂತಿಲ್ಲ. ತಾಯಿ ಊಟವನ್ನು ಬಾಯಿಯಲ್ಲಿ ಇಟ್ಟರಷ್ಟೇ ತಿನ್ನಬಹುದು. ಹಾಗೆಯೇ ಆವರಣ ಕಳಚಿಕೊಂಡ ಮೇಲೂ ಅಂದರೆ ಊಟವನ್ನು ಪಾತ್ರೆಯಿಂದ ತೆಗೆದು ಎಲೆಯ ಮೇಲೆ ಬಡಿಸಿದ ಮೇಲೂ ಊಟವನ್ನು ಅನುಭವಿಸಬೇಕಾದರೆ ತಾಯಿ ಹೇಗೆ ಬಾಯಿಗೆ ಇಡಬೇಕೋ ಹಾಗೆ ಸ್ವರೂಪ ಸುಖವನ್ನು ಅನುಭವಿಸ ಬೇಕಾದರೆ ಭಗವಂತನ ವಿಶೇಷ ಪ್ರಸಾದ ಆಗಬೇಕು. ತ್ರಿ ಮೂರು ವೇದಗಳಿಂದ 'ಕ' ಸ್ವರೂಪ ಸುಖವನ್ನು 'ಕುಪ್' ವಿಸ್ತಾರಗೊಳಿಸಿ 'ಧಾಮ' ಅವರಿಗೆ ಆಶ್ರಯನಾಗಿ ಇರುವವನು. ಮುಕ್ತರು ಸ್ವರೂಪಸುಖವನ್ನು ಅನುಭವಿಸುವಂತೆ ಮಾಡಿ ಅವರಿಗೆ ಆಶ್ರಯನಾಗಿರವವನು – ಎಂಬುದು ಈ ನಾಮದ ಒಟ್ಟು ಅರ್ಥ.

೬೨. ಪವಿತ್ರಂ – * ಸ್ವತಃ ಪವಿತ್ರ ಸ್ವರೂಪಿ.

* ಪವಿತ್ರ ಪದಾರ್ಥಗಳಿಗೆ ಪಾವಿತ್ರ್ಯವನ್ನು ನೀಡುವವನು.

ವಿವರಣೆ : ಭೀಷ್ಮರು ಮೊದಲೇ ಹೇಳಿದ್ದಾರೆ – 'ಪವಿತ್ರಾಣಾಂ ಪವಿತ್ರಂ ಯೋ ಮಂಗಲಾನಾಂ ಚ ಮಂಗಲಮ್'. ವಿಷ್ಣುಸಹಸ್ರನಾಮದ ಪ್ರಸ್ತಾವನೆಯಲ್ಲೇ 'ಭೀಷ್ಮ ಉವಾಚ....' ಎಂದು ಈ ಮಾತು ಬರುವುದು. ಪವಿತ್ರ ಎಂಬುದಕ್ಕೆ ಶುದ್ಧ ಎಂಬ ಅರ್ಥ.

ನಮ್ಮಲ್ಲಿ ಲೋಕದಲ್ಲಿ ಕೆಲವು ಪವಿತ್ರ ವಸ್ತುಗಳು ಎಂದಿವೆ. ವೃಂದಾವನದ ಮೃತ್ತಿಕೆ ಪವಿತ್ರ. ಗಂಗಾಜಲ ಪವಿತ್ರ. ವೃಂದಾವನಕ್ಕೆ ತೊಡಿಸಿದ ವಸ್ತ್ರ ಪವಿತ್ರ. ಕ್ಷೇತ್ರದ ಮಣ್ಣು ಪವಿತ್ರ. ಜ್ಞಾನ ಪವಿತ್ರ. ಹೀಗೆಲ್ಲ ಪವಿತ್ರ ಎಂದು ಪರಿಗಣಿಸಲಾಗಿದೆ. ಯಾಕೆ ಇವೆಲ್ಲ ಪವಿತ್ರಗಳಾದವು ? ಭೀಷ್ಮರು ಅನ್ನುವರು – ಪವಿತ್ರನಾದ ನೀನು ಅಲ್ಲಿ ಇದ್ದದ್ದರಿಂದ ಅವುಗಳಿಗೆಲ್ಲ ಪಾವಿತ್ರ್ಯ ಬಂತು 'ಪವಿತ್ರಾಣಾಂ ಪವಿತ್ರಂ....'

ಯಾವುದರಿಂದ ನಮಗೆ ಶುದ್ಧಿ ಬರುವುದೋ ಅದನ್ನು ಪವಿತ್ರ ಶಬ್ದದಿಂದ ಕರೆದರು. ಜ್ಞಾನದಿಂದ, ಅಧ್ಯಯನದಿಂದ ಶುದ್ಧಿ ಬರುವುದು. ಕ್ಷೇತ್ರದ ಮೃತ್ತಿಕೆ ಹಚ್ಚಿಕೊಳ್ಳುವುದರಿಂದ ಶುದ್ಧಿ ಬರುವುದು. ಭಗವಂತನಿಗೆ ಉಡುಸಿದ ಬಟ್ಟೆಯನ್ನು ಹೊದ್ದು ಕೊಳ್ಳುವುದರಿಂದ ಪಾವಿತ್ರ್ಯ ಬರುವುದು, ಪಂಚಗವ್ಯ ಪ್ರಾಶನದಿಂದ ಪಾವಿತ್ರ್ಯ ಬರುವುದು. ಇವುಗಳಿಗೆಲ್ಲ ಶುದ್ಧಿ ಮಾಡುವ ಸಾಮರ್ಥ್ಯ ಬಂದಿರುವುದಾದರೂ ಪರಮಾತ್ಮನ ಸನ್ನಿಧಾನದಿಂದಲೇ.

ಮಹಾಭಾರತ ಯುದ್ಧ ನಡೀತಾ ಇದ್ದಾಗ ರಣಾಂಗಣದಲ್ಲೇ ಆ ಹೆಣಗಳ ನಡುವೆಯೇ ದ್ರೋಣಾಚಾರ್ಯರು ಧೂಳಿಯಿಂದ ಸೂರ್ಯಾರ್ಘ್ಯ ಬಿಡುತ್ತಿದ್ದರಂತೆ. ಅಂತಹ ಅಪವಿತ್ರ ಸ್ಥಳದಲ್ಲಿ ಸೂರ್ಯಾರ್ಘ್ಯಪ್ರದಾನವೇ ? ಅಂದರೆ ರಣಾಂಗಣದಲ್ಲಿ ಹೆಣಗಳ ರಾಶಿಯಿದ್ದರೂ ಅದು ಪರಮಪವಿತ್ರವೇ ಆಗಿತ್ತು. ಯಾಕೆಂದರೆ ಅಲ್ಲಿ 'ಪವಿತ್ರಾಣಾಂ ಪವಿತ್ರಂ' ಆಗಿರುವ ಶ್ರೀಕೃಷ್ಣ ಇದ್ದ. 'ಸೇನಯೋರುಭಯೋರ್ಮಧ್ಯೇ ರಥಂ ಸ್ಥಾಪಯ ಮೇಽಚ್ಯುತ ' – ಎಂದು ಅರ್ಜುನ ಎರಡು ಸೇನೆಗಳ ಮಧ್ಯೇ ಶ್ರೀಕೃಷ್ಣನನ್ನು ಪ್ರತಿಷ್ಠೆಗೊಳಿಸಿರುವ ಒಂದು ಉದ್ದೇಶ ಇದೂ ಕೂಡಾ. ಮುಂದೆ ಎಷ್ಟೇ ಸಾವುಗಳು ಆ ರಣಾಂಗಣದಲ್ಲಿ ನಡೆದರೂ ಅದು ಪವಿತ್ರವಾಗಿಯೇ ಇರಬೇಕು ಎಂಬುದು. ಜ್ಞಾನಿಗಳ ಸ್ಪರ್ಶ ಆದರೂ ಪಾವಿತ್ರ್ಯ ಸಿದ್ಧಿಸಿದಂತೆ ಎಂದು ಪರಿಗಣಿಸಲಾಗುವುದು. ಯಾಕೆಂದರೆ ಜ್ಞಾನಿಗಳಲ್ಲಿ ಭಗವಂತನ ವಿಶೇಷ ಸನ್ನಿಧಾನ ಇರುತ್ತದೆ. ಹೀಗೆ ಪರಮಾತ್ಮ 'ಪವಿತ್ರಾಣಾಂ ಪವಿತ್ರಂ....' ಪವಿತ್ರಪದಾರ್ಥಗಳೆಲ್ಲ

ಪವಿತ್ರವಾಗುವಂತೆ ಮಾಡುವನು.

**೬೩. ಮಂಗಲಮ್ – * ಸ್ವತಃ ಮಂಗಲ ಸ್ವರೂಪಿ.**

*** ಮಂಗಲಪದಾರ್ಥಗಳಿಗೆ ಮಾಂಗಲ್ಯವನ್ನು ನೀಡುವವನು.**

ವಿವರಣೆ : ಭೀಷ್ಮರು ವಿಷ್ಣು ಸಹಸ್ರನಾಮದ ಉಪೋದ್ಘಾತದಲ್ಲಿ ದೇವರನ್ನು 'ಪವಿತ್ರಾಣಾಂ ಪವಿತ್ರಂ' ಎಂದು ಕರೆದಿರುವಂತೆ 'ಮಂಗಲಾನಾಂ ಚ ಮಂಗಲಮ್' ಮಂಗಲ ಪದಾರ್ಥಗಳಿಗೆಲ್ಲ ಮಾಂಗಲ್ಯ ನೀಡುವವನು ಎಂದೂ ಕರೆದಿರುವರು. ಯಾವುದನ್ನು ಮಂಗಲ ಎಂದು ಪರಿಗಣಿಸಲಾಗುವುದು ? ಪ್ರಯಾಣ ಹೊರಟಾಗ ಯಾವ ವ್ಯಕ್ತಿಗಳು, ವಸ್ತುಗಳು ಎದುರಾದರೆ ಒಳ್ಳೆಯದಾಗುವುದು ಎಂದು ನಂಬಲಾಗುವುದೋ ಅಂತಹ ಶುಭ ಶಕುನಗಳೇ ಮಂಗಲಗಳು. ಮಂಗಲ ಸ್ವರೂಪಿಯಾದ ಭಗವಂತನು ಅಲ್ಲಿ ಇರುವುದರಿಂದ ಅವು ಮಂಗಲ ವಸ್ತುಗಳೆನಿಸಿವೆ. ಯಾವುದೇ ವಸ್ತು ಸ್ವಯಂ ಪವಿತ್ರ ಆಗುವುದಿಲ್ಲ ಹೇಗೋ ಹಾಗೂ ಸ್ವಯಂ ಮಂಗಲ ಆಗುವುದಿಲ್ಲ. ಪವಿತ್ರಪದಾರ್ಥಗಳೆನಿಸುವಂತೆ ಮಾಡಿರುವ ಭಗವಂತನೇ ಮಂಗಲಪದಾರ್ಥಗಳು ಮಂಗಲಗಳೆನಿಸುವಂತೆ ಮಾಡಿರುವನು. ಪವಿತ್ರ, ಮಂಗಲ ವಸ್ತುಗಳನ್ನಷ್ಟೇ ಅಲ್ಲ, ಅಪವಿತ್ರ ವಸ್ತು ಅಪವಿತ್ರವಾಗುವಂತೆ, ಅಮಂಗಲವಸ್ತು ಅಮಂಗಲ ಆಗುವಂತೆ ಮಾಡಿರುವವನೂ ಅವನೇ. ಶುಭಾಶುಭ, ಒಳ್ಳೆಯದು ಕೆಟ್ಟದ್ದು – ಇವುಗಳ ತೀರ್ಮಾನ ಭಗವಂತನ ಕೈಯಲ್ಲಿದೆಯೇ ಹೊರತು ನಮ್ಮ ಕೈಯಲ್ಲಿಲ್ಲ. ಎಷ್ಟೋ ಬಾರಿ ಬೆಕ್ಕು ಅಡ್ಡ ಹೋದರೂ ಆ ಕೆಲಸ ಯಶಸ್ವಿಯಾದದ್ದೂ ಉಂಟು. ಹೊರಟೆವು. ಬೆಕ್ಕು ಎದುರು ಬಂತು. ಪುನಃ ಮನೆಯೊಳಗೆ ಹೊಕ್ಕು ದೇವರೆದುರು ಗಟ್ಟಿಯಾಗಿ ಪ್ರಾರ್ಥನೆ ಮಾಡಿ ಹೊರಟೆವು. ನಮ್ಮ ಕೆಲಸ ಚೆನ್ನಾಗಿಯೇ ನಡೆಯಿತು. ಬೆಕ್ಕು ಅಮಂಗಲ ಆದರೂ ಪ್ರಾರ್ಥನೆಗೆ ಒಲಿದ ಭಗವಂತ ಬೆಕ್ಕಿನಲ್ಲಿ ಮಂಗಲನಾಗಿ ಕುಳಿತ. ಆದ್ದರಿಂದ ಅಮಂಗಲ ಬೆಕ್ಕೂ ನಮ್ಮ ಪಾಲಿಗೆ ಮಂಗಲ ಆಯಿತು. ಆದ್ದರಿಂದ ಒಂದು ವಸ್ತುವನ್ನು ಮಂಗಲವನ್ನಾಗಿಯೂ, ಅಮಂಗಲವನ್ನಾಗಿಯೂ ಮಾಡಬಲ್ಲವ ಭಗವಂತ. ಹೋಳಿಗೆ ಮುಂತಾದ ಭಕ್ಷ್ಯಗಳಲ್ಲಿ ಸಿಹಿ ಇದೆ ಎನ್ನಬೇಕು. ಆದರೆ ಬೆಲ್ಲದಲ್ಲಿ ಸಿಹಿ ಇದೆ ಎನ್ನುವುದಿಲ್ಲ. ಬೆಲ್ಲವೇ ಸಿಹಿ. ಅದರಂತೆ ಉಳಿದ ಮಂಗಲಪದಾರ್ಥಗಳಲ್ಲಿ ಮಾಂಗಲ್ಯ ಇದೆ ಎನ್ನುವುದಾದರೆ ಭಗವಂತ ಮಾಂಗಲ್ಯ ಸ್ವರೂಪಿಯೇ ಆಗಿರುವನು.

**೬೪. ಪರಮ್ – ದೋಷರಹಿತನಾದವನು ; ಅಶುದ್ಧಿರಹಿತನಾದವನು.**

ವಿವರಣೆ : ಬ್ರಾಹ್ಮಣತುಳುವಿನಲ್ಲಿ 'ನಿಂಕ್ ಜಾನೆ ಪರ ಇದ್ಯಾ....?' ಎಂದು

ಅಶುದ್ಧಿರಾಹಿತ್ಯ ಇಲ್ಲವೇ? ಎಂಬ ಅರ್ಥದಲ್ಲಿ 'ಪರ' ಶಬ್ದವನ್ನು ಬಳಸುವುದುಂಟು.

ನಿರ್ದುಷ್ಟನಾಗಿ ಪರಿಶುದ್ದನಾಗಿ 'ಪರ ' ಎನಿಸಿರುವ ಶ್ರೀ ಕೃಷ್ಣ ಹದಿನೆಂಟು ದಿನಗಳ ಕಾಲ ಅಖಂಡವಾಗಿ ಅಡ್ಡಾಡುತ್ತಿದ್ದುದರಿಂದಲೇ ಕುರುಕ್ಷೇತ್ರ ನಿರ್ದುಷ್ಟವೆನಿಸಿ, ಪರಿಶುದ್ಧವೆನಿಸಿದೆ. ಉಳಿದ ಕ್ಷೇತ್ರಗಳನ್ನು ಬದರಿ, ಕಾಶಿ, ಉಡುಪಿ– ಇತ್ಯಾದಿಯಾಗಿ ಕ್ಷೇತ್ರ ಉಪಪದವಿಲ್ಲದೆಯೇ ಕರೆಯಲಾಗುವುದಾದರೆ, ಕುರುಕ್ಷೇತ್ರವನ್ನು ಮಾತ್ರ ಕ್ಷೇತ್ರ ಎಂಬ ಉಪಪದಸಹಿತವಾಗಿಯೇ ಕರೆಯಲಾಗುವುದೆಂದರೆ ಅದರಲ್ಲಿ ವಿಶೇಷವಾಗಿ ಶುದ್ಧಿ ಇದೆ ಎಂದರ್ಥ. ಅಂತಹ ಶುದ್ಧಿ ಶ್ರೀಕೃಷ್ಣನ ಸನ್ನಿಧಾನದಿಂದ ಉಂಟಾದದ್ದು.

**ಈಶಾನಃ ಪ್ರಾಣದಃ ಪ್ರಾಣೋ ಜ್ಯೇಷ್ಠಃ ಶ್ರೇಷ್ಠಃ ಪ್ರಜಾಪತಿಃ |**
**ಹಿರಣ್ಯಗರ್ಭೋ ಭೂಗರ್ಭೋ ಮಾಧವೋ ಮಧುಸೂದನಃ || ೮ ||**

**೬೫. ಈಶಾನಃ – ಒಡೆಯರಲ್ಲಿ ಚಟುವಟಿಕೆ ಉಂಟು ಮಾಡುವವನು.**

**ವಿವರಣೆ :** ಈಶಾನ ಅಂದಾಕ್ಷಣ ನಮಗೆ ರುದ್ರ ದೇವರು ತಲೆಗೆ ಬರುವರು. ಇರಬಹುದು ರುದ್ರದೇವರೂ ಈಶಾನ. ಆದರೆ ಕೃಷ್ಣದೇವರ ಎದುರು ಭೀಷ್ಮರು ಸ್ತುತಿಸುವಾಗ 'ಈಶಾನ' ಎಂದರೆ ಶ್ರೀಕೃಷ್ಣನೇ. ಈಶ ಮತ್ತು ಅನ ಎಂಬ ಎರಡು ಶಬ್ದಗಳು ಸೇರಿ ಆದ ನಾಮ ಈಶಾನ. ಈಶ ಎಂದರೆ ಒಡೆಯರು. ಯಾರು ಒಡೆಯರು? ನನ್ನ ಗುರಗಳಿಂದ ಪ್ರಾರಂಭಿಸಿ ಲಕ್ಷ್ಮೀದೇವಿಯ ವರೆಗೆ ಎಲ್ಲರೂ ನನಗೆ ಒಡೆಯರೇ. ಆದರೆ ಅವರಲ್ಲಿ ಯಾರೂ ಕೂಡಾ ಸ್ವತಂತ್ರವಾಗಿ ಚಟುವಟಿಕೆವುಳ್ಳವರಲ್ಲ. ಅವರಲ್ಲಿ ಚಟುವಟಿಕೆ ಉಂಟಾಗಬೇಕಾದರೆ ಕೃಷ್ಣ ಅವರ ಪಾಲಿಗೆ 'ಅನ'– ಅಂದರೆ ಚೇಷ್ಟಕ ಆಗಬೇಕು. ಕೃಷ್ಣ ಅವರಲ್ಲಿದ್ದುಕೊಂಡು 'ನೀನು ಹೋಗು' 'ಉಪದೇಶಿಸು' 'ಯುದ್ಧ ಮಾಡು'– ಎಂದೆಲ್ಲ ಪ್ರೇರಣೆ ಮಾಡಬೇಕು. ಎನ್ನ ಗುರುಗಳು ಎನಗೆ ಈಶರು. ಅವರು ಎನಗೆ ಉಪದೇಶ ಮಾಡಬೇಕಾದರೆ, ಶ್ರೀಕೃಷ್ಣ ಅವರಲ್ಲಿದ್ದುಕೊಂಡು 'ಎನಗೆ ಉಪದೇಶ ನೀಡು' ಎಂದು ಪ್ರೇರಿಸಿ ಚಟುವಟಿಕೆಯನ್ನು ಉಂಟುಮಾಡಬೇಕು.

**೬೬. ಪ್ರಾಣದಃ – ಇಂದ್ರಿಯಗಳನ್ನು ಕೊಡುವವನು.**

**ವಿವರಣೆ :** ಪ್ರಾಣ ಅಂದರೆ ಇಂದ್ರಿಯಗಳು. ದ ಅಂದರೆ ಕೊಡುವವನು. ಒಬ್ಬ ವ್ಯಕ್ತಿ ಹುಟ್ಟಿದ್ದಾನೆ ಎಂದರೆ ಹತ್ತು ಇಂದ್ರಿಯಗಳನ್ನೂ ಪಡಕೊಂಡು ಬಂದಿದ್ದಾನೆ ಎಂಬ ನಿಯಮವೇನೂ ಇಲ್ಲ. ತಾಯಿಯಾದವಳು ಮಗು ಬೇಕು ಎಂದಷ್ಟೇ

ದೇವರಲ್ಲಿ ಬೇಡಿದ್ದು. ಮಗುವಿನಲ್ಲಿ ಇಂದ್ರಿಯಗಳು ಇರಬೇಕು ಎಂದೇನೂ ಬೇಡಿಲ್ಲ. ದೇವರು ಏನು ಮಾಡಿದ ? ಮಗುವನ್ನು ಕೊಟ್ಟ. ಮಗುವಿಗೆ ಇಂದ್ರಿಯಗಳನ್ನು ಕೊಟ್ಟಿಲ್ಲ. ಆದ್ದರಿಂದ ದೇವರನ್ನು 'ಪ್ರಾಣದ'– ಇಂದ್ರಿಯಗಳನ್ನು ನೀಡುವವನು ಎಂದೂ ಪ್ರಾರ್ಥಿಸಬೇಕು. ಯಾರಿಗೆ ಇಂದ್ರಿಯಗಳನ್ನು ಕೊಟ್ಟ ? ಯಾವಾಗ ಕೊಟ್ಟ ? ಮರಗಿಡಗಳಿಂದ ಪ್ರಾರಂಭಿಸಿ ಚತುರ್ಮುಖನವರೆಗೂ ಇಂದ್ರಿಯಗಳನ್ನು ಕೊಡುವನು. ಇನ್ನೂ ತಾಯಿಯ ಗರ್ಭದಲ್ಲಿರುವಾಗಲೇ ಇಂದ್ರಿಯಗಳನ್ನು ಕೊಡುವನು. **'ತಾಯಿ ಉಂಬ ಅನ್ನವನ್ನು ಗರ್ಭಗತ ಶಿಶು ಉಂಬಂತೆ'**– ಎಂದು ಜಗನ್ನಾಥ ದಾಸರು ಒಂದು ಮಾತನ್ನು ಹೇಳಿರುವರು. ಹಾಗಾದರೆ ಮಗುವಿಗೆ ಉಣ್ಣುವ ಶಕ್ತಿ ತಾಯಿಯ ಗರ್ಭದಲ್ಲಿರುವಾಗಲೇ ಬಂದಿರುವುದು. ತಾಯಿಯ ಗರ್ಭದಲ್ಲಿರುವಾಗಲೇ ಮಗುವಿಗೆ ಇಂದ್ರಿಯ ಉಂಟು ಎಂದರ್ಥ. 'ಏಕಮೂಲಿಕಾ ಪ್ರಯೋಗ'–ಮಾಡುವ ಒಬ್ಬ ವೈದ್ಯರು ಇದ್ದರಂತೆ. ಯಾವ ರೋಗಿ ಬಂದರೂ ಯಾವ ಕಾಯಿಲೆಗೂ ಅವರದ್ದು ಒಂದೇ ಗಿಡಮೂಲಿಕೆಯದ್ದೇ ಪ್ರಯೋಗ. ಆ ಗಿಡಮೂಲಿಕೆಯನ್ನೇ ಕಷಾಯ ಮಾಡಿಯೋ, ಪುಡಿ ಮಾಡಿಯೋ, ಲೇಹ ಮಾಡಿಯೋ – ಹೀಗೆ ಬೇರೆ ಬೇರೆ ಬಗೆಯಲ್ಲಿ ಎಲ್ಲ ರೋಗಗಳಿಗೂ ಔಷಧವನ್ನಾಗಿ ನೀಡಲಾಗಿತ್ತು. ಅದರಂತೆಯೇ 'ವಿಷ್ಣುಸಹಸ್ರನಾಮದ ಪಾರಾಯಣ' ನಮ್ಮ ಎಲ್ಲ ಕಾಯಿಲೆಗಳಿಗೆ ಔಷಧ. ವಿಷ್ಣುಸಹಸ್ರನಾಮದಲ್ಲಿ ಭಗವಂತನು ಎಲ್ಲವನ್ನೂ ತುಂಬಿಸಿರುವನು. ಬೇರೆ ಹತ್ತಾರು ಸ್ತೋತ್ರಗಳ ಪಾರಾಯಣ ಮಾಡುವ ಬದಲು ಒಂದೇ ವಿಷ್ಣುಸಹಸ್ರನಾಮದ ಪಾರಯಣ ನಡೆಸಿದರೆ ಉಳಿದೆಲ್ಲ ಪಾರಾಯಣಗಳ ಪ್ರಯೋಜನ ಸಿದ್ಧಿಸುವಂತೆ ವಿಷ್ಣುಸಹಸ್ರನಾಮವನ್ನು ರಚಿಸಲಾಗಿದೆ. ಹೇಗೆ ಉಳಿದೆಲ್ಲ ವ್ರತಗಳನ್ನು ಮಾಡುವ ಬದಲು ಆ ಎಲ್ಲ ವ್ರತಗಳ ಫಲಗಳು ಸಿದ್ಧಿಸುವಂತೆ ಏಕಾದಶೀ ವ್ರತವನ್ನು ರೂಪಿಸಲಾಗಿದೆಯೋ ಹಾಗೆ. ಎಲ್ಲ ಪತ್ರ, ಪುಷ್ಪಗಳನ್ನು ಬಿಟ್ಟು ತುಳಸಿಯನ್ನು ಮಾತ್ರ ಸಮರ್ಪಿಸಲಾಗುವಂತೆ ಎಲ್ಲ ಮಂತ್ರಗಳನ್ನು ಬಿಟ್ಟು ಗಾಯತ್ರಿಯೊಂದನ್ನೇ ಜಪಿಸುವಂತೆ ಎಲ್ಲ ಋಷಿಗಳನ್ನು ಬಿಟ್ಟು ವ್ಯಾಸರನ್ನು ಚಿಂತಿಸುವಂತೆ, ಎಲ್ಲ ಮರಗಳನ್ನು ಬಿಟ್ಟು ಅಶ್ವತ್ಥವನ್ನು ಸೇವಿಸುವಂತೆ, ವಿಷ್ಣುಸಹಸ್ರನಾಮ ಒಂದರ ಪಾರಾಯಣದಿಂದಲೇ ಜೀವನಕ್ಕೆ ಬೇಕಾಗುವ ಎಲ್ಲ ಪ್ರಯೋಜನಗಳೂ ಸಿದ್ಧಿಸುವಂತೆ ವಿಷ್ಣುಸಹಸ್ರನಾಮದಲ್ಲಿ ನಾಮಗಳನ್ನು ಸೇರಿಸಲಾಗಿದೆ.

ಭೀಷ್ಮರ ದೇಹ ಎಂಟು ನೂರು ವರ್ಷ ವಯಸ್ಸಿನದು. ದೇಹ ಜರ್ಝರಿತವಾಗಿದೆ. ಆದರೂ ಕಣ್ಣು, ಕೈ, ಕಾಲು ಇತ್ಯಾದಿ ಇಂದ್ರಿಯಗಳು ಹಾಗೆಯೇ

ಇವೆ. 'ಪ್ರಾಣದ' ನಾಮಕ ಭಗವಂತನ ವಿಶೇಷಾನುಗ್ರಹದ ಫಲ ಅದು.

ನಮ್ಮಲ್ಲಿ ಕೆಲವರಿಗೆ ನಲ್ವತ್ತು ವರ್ಷ ಆಯಿತೆಂದರೆ ಉಪನಯನ ಪ್ರಾರಂಭವಾಗುವುದು. ನಯನ ಎಂದರೆ ಕಣ್ಣು. ಅಂತಹ ಕಣ್ಣಿಗೆ ಸಹಾಯಕ ಕಣ್ಣು ಕನ್ನಡಕ ಉಪನಯನ ಎನಿಸುವುದು. ಹೀಗೆ ಇಂದ್ರಿಯಶೈಥಿಲ್ಯ 'ಪ್ರಾಣದ' ನಾಮಕ ಭಗವಂತನ ಉಪಾಸನೆಯ ಕೊರತೆಯ ಫಲ.

**೬೭. ಪ್ರಾಣಃ – ಅತ್ಯಂತ ಪ್ರಿಯ.**

**ವಿವರಣೆ :** ನನಗೆ ಅವರು ಅಂದರೆ 'ಪ್ರಾಣ'– ಅವರಿಗೆ ಅವನು 'ಪ್ರಾಣ....' ಹೀಗೆ ಪ್ರಾಣಶಬ್ದ ಇಷ್ಟ, ಅತ್ಯಂತ ಪ್ರಿಯ ಎಂಬ ಅರ್ಥದಲ್ಲಿ ವ್ಯವಹರಿಸಲ್ಪಡುವುದು. ಹಣ 'ಬಹಿಶ್ಚರಃ ಪ್ರಾಣ' – ಎಂದು ಕರೆಯಲ್ಪಡುವುದೂ ಅಂತಹವರ ಪಾಲಿಗೆ ಅದು ತುಂಬ ಇಷ್ಟ ಎಂಬ ಅಭಿಪ್ರಾಯದಲ್ಲಿಯೇ.

ಭೀಷ್ಮರು ಕೃಷ್ಣನನ್ನು ಸ್ತುತಿಸುವರು – ಕೃಷ್ಣ ನೀನು ಎನಗೆ ಪ್ರಾಣ, ಅತ್ಯಂತ ಪ್ರಿಯ.

**೬೮. ಜ್ಯೇಷ್ಠಃ– ವಯಸ್ಸಿನಿಂದ ದೊಡ್ಡವನಾದವನು.**

**೬೯. ಶ್ರೇಷ್ಠಃ – ಗುಣಗಳಿಂದ ದೊಡ್ಡವನಾದವನು.**

**ವಿವರಣೆ :** ಜ್ಯೇಷ್ಠ ಶ್ರೇಷ್ಠ ಶಬ್ದಗಳ ಅರ್ಥ ವ್ಯತ್ಯಾಸ ಹೀಗಿದೆ – ವಯಸ್ಸಿನಲ್ಲಿ ಹಿರಿಯನಾದರೆ ಜ್ಯೇಷ್ಠ, ಗುಣಗಳಲ್ಲಿ ಹಿರಿಯನಾದರೆ ಶ್ರೇಷ್ಠ. ಗಂಡ ಜ್ಯೇಷ್ಠ, ಹೆಂಡತಿ ಶ್ರೇಷ್ಠಳು. ಅನೇಕ ಕಡೆ ಹೀಗಾಗವುದುಂಟು. ಮಂತ್ರಿಣಿ ಇದ್ದರೆ, ಆಕೆಯ ಗಂಡ ಜ್ಯೇಷ್ಠ, ಅವಳು ಮಂತ್ರಿಣಿಯಾದುದರಿಂದ ಶ್ರೇಷ್ಠಳು. ಲೋಕದಲ್ಲಿ ಈ ಶಬ್ದಗಳ ವ್ಯತ್ಯಾಸ ಪಕ್ಕನೆ ಗಮನಕ್ಕೆ ಬರುವುದಿಲ್ಲ. ಅದಕ್ಕಾಗಿ ವಿಷ್ಣು ಸಹಸ್ರನಾಮದಲ್ಲಿ ಆ ಎರಡು ಶಬ್ದಗಳನ್ನೂ ಜೊತೆಗೇ ಬಳಸಿ ಝಳ ಝಳ ಅಂತ ಅವುಗಳ ಅರ್ಥ ವ್ಯತ್ಯಾಸದ ಬಗ್ಗೆ ಬೆಳಕು ಚೆಲ್ಲಲಾಗಿದೆ. ಬೇರ ಬೇರೆ ಕಡೆಗಳಲ್ಲಿ ಜ್ಯೇಷ್ಠ, ಶ್ರೇಷ್ಠ ಶಬ್ದಗಳನ್ನು ಪ್ರಯೋಗಿಸಿದ್ದರೆ ಒಮ್ಮೆ ಹೇಳಿದ ಅರ್ಥವನ್ನೇ ಮತ್ತೊಂದು ಶಬ್ದಕ್ಕೂ ಹೇಳುವ ಸಾಧ್ಯತೆ ಇದೆ. ಹಾಗಾಗಬಾರದೆಂದು ಜೊತೆಗೆಯೇ ಪ್ರಯೋಗಿಸಲಾಗಿದೆ. ವಯಸ್ಸಿನಿಂದ ದೊಡ್ಡವ ಜ್ಯೇಷ್ಠ, ಗುಣದಿಂದ ದೊಡ್ಡವ ಶ್ರೇಷ್ಠ, ಜ್ಯೇಷ್ಠನೂ ಪರಮಾತ್ಮ ಶ್ರೇಷ್ಠನೂ ಪರಮಾತ್ಮ. ವಯಸ್ಸಿನಿಂದ ದೊಡ್ಡವನೂ ಪರಮಾತ್ಮನೇ. 'ಬೊಮ್ಮನ ಲಯದಲ್ಲಿ ಇದ್ದವಗೆ ಲಯವುಂಟೆ' ಎಂದು ಶ್ರೀ ವಾದಿರಾಜ ಸ್ವಾಮಿಗಳು ಚಿಂತನೆ ನಡೆಸಿರುವಂತೆ ಚತುರ್ಮುಖನ ಪ್ರಲಯದಲ್ಲೂ ಇದ್ದವನು ಪರಮಾತ್ಮ. ಬಾಕಿಯವರೆಲ್ಲ ಮತ್ತೆ ಹುಟ್ಟಿದ್ದು. ಅಂದ ಮೇಲೆ ಅವನೇ ದೊಡ್ಡವನು. ಎಲ್ಲರನ್ನೂ

ಕಬಳಿಸುವ, ದಂಡಿಸುವ, ಹಿಂಸಿಸುವ ಶಕ್ತಿವುಳ್ಳವನು ಪರಮಾತ್ಮ. ಆದ್ದರಿಂದ ಅವನು ಶ್ರೇಷ್ಠನೂ ಹೌದು. ಎಲ್ಲರೂ ಸತ್ತ ಮೇಲೂ ಇರುವವನು, ಎಲ್ಲರೂ ಹುಟ್ಟುವುದಕ್ಕಿಂತ ಮುಂಚೆಯೂ ಇರುವವನು. ಆದ್ದರಿಂದ ಅವನು ಜ್ಯೇಷ್ಠ.

**೭೦. ಪ್ರಜಾಪತಿಃ – ಪ್ರಜೆಗಳಿಗೆ ಒಡೆಯ.**

ವಿವರಣೆ : ಪರಮಾತ್ಮ ವಯಸ್ಸಿನಿಂದ ಹಿರಿಯನಾಗಿದ್ದು 'ಜ್ಯೇಷ್ಠ' ಎಂದೂ ಗುಣಗಳಿಂದ ಹಿರಿಯನಾಗಿದ್ದು ಶ್ರೇಷ್ಠ ಎಂದೂ ಪರಿಗಣಿತನಾಗಿರುವುದರಿಂದಲೇ 'ಪ್ರಜಾಪತಿ' ಎನಿಸಿರುವನು.

ಕೆಲವು ಶಬ್ದಗಳ ಅರ್ಥ ಸಹಜವಾಗಿ ಗೊತ್ತಾಗುವುದರಿಂದ ವಿಶೇಷವಾದ ವಿವರಣೆ ಬೇಕಾಗುವುದಿಲ್ಲ.

ಪ್ರಜಾಪತಿಃ – ಪ್ರಜೆಗಳ ಒಡೆಯ, ಪ್ರಜೆಗಳ ಮೇಲೆ ನಿಲ್ಲುವವನು. ಪರಮಾತ್ಮ ವಯಸ್ಸಿನಿಂದ ಹಿರಿಯನಾಗಿ ಜ್ಯೇಷ್ಠ ಎನಿಸುವವನು. ಗುಣಗಳಿಂದ ಹಿರಿಯನಾಗಿ ಶ್ರೇಷ್ಠ ಎನಿಸುವವನು. ಹೀಗೆ ಎಲ್ಲ ಅಂಶಗಳಿಂದಲೂ ಹಿರಿಯನಾಗಿರುವುದರಿಂದ 'ಪ್ರಜಾಪತಿ' ಆಗಿರುವನು.

**೭೧. ಹಿರಣ್ಯಗರ್ಭಃ– ಹಿತಗಳಾದ ರಮಣೀಯಗಳಾದ ವೇದದ ಮಾತುಗಳಲ್ಲಿ ಅಡಗಿರುವವನು.**

ವಿವರಣೆ : ಹಿ ಅಂದರೆ ಹಿತ. ರಣ್ಯ ಅಂದರೆ ರಮಣೀಯ. ಪ್ರಾಯಶಃ ಹಿತವಾದದ್ದು ರಮಣೀಯವಾಗಿರುವುದಿಲ್ಲ. ರಮಣೀಯವಾದದ್ದು ಹಿತವಾಗಿರುವುದಿಲ್ಲ. ಔಷಧ ಹಿತ. ಆದರೆ ರಮಣೀಯ ಅಲ್ಲ. ಕರದದ್ದು ಹುರಿದದ್ದು ತಿನ್ನುವುದು ರಮಣೀಯ, ಆದರೆ ಹಿತ ಅಲ್ಲ. ಹೀಗೆ ಲೋಕದಲ್ಲಿ ಹಿತವಾದದ್ದು ರಮಣೀಯವಾಗಿರುವುದಿಲ್ಲ. ರಮಣೀಯವಾದದ್ದು ಹಿತವಾಗಿರುವುದಿಲ್ಲ. ಹಿತವೂ ಆಗಿದ್ದು ರಮಣೀಯವೂ ಆಗಿರುವಂತಹದ್ದು ವೇದದ ಮಾತು. ವೇದದ ಮಾತುಗಳು ಹಿತವನ್ನೂ ಉಂಟು ಮಾಡುವವು. ವೇದ ಪಾರಾಯಣ ಮಾಡುವಾಗ ಕೇಳಲು ರಮಣೀಯವೂ ಆಗುವುದು. ಆದುದರಿಂದ ವೇದದ ಮಾತುಗಳು 'ಹಿರಣ್ಯ' ವೇದದ ಮಾತುಗಳೆಂಬ 'ಹಿರಣ್ಯ' ದಲ್ಲಿ ಗರ್ಭ – ಒಳಗೆ ಸೇರಿಕೊಂಡವನು, ಅಡಗಿಕೊಂಡವ. ದೇವರು ಅಡಗಿಕೊಂಡಿರುವ ಜಾಗ ಎಂಬ ಅಭಿಪ್ರಾಯದಲ್ಲಿ ಗರ್ಭಗುಡಿ ಎಂದು ಕರೆಯುವೆವು. ತಾಯಿ ಮಗುವನ್ನು ಅಡಗಿಸಿಕೊಂಡ ಅಂಗವನ್ನು ಗರ್ಭ ಎಂದು ಕರೆಯುವೆವು. ಅದರಂತೆ 'ಹಿರಣ್ಯ'ದಲ್ಲಿ ಭಗವಂತ ಒಳಗೆ ಸೇರಿಕೊಂಡಿದ್ದಾನೆ.

ಭೀಷ್ಮರು ಕೃಷ್ಣನಲ್ಲಿ ತಿಳಿಸುವರು – ನಿನ್ನನ್ನು 'ಹಿರಣ್ಯ'ದಲ್ಲಿ ಹುಡುಕಿದರೆ

ಸಿಗುವಿ. ವೇದದ ಮಾತುಗಳನ್ನು ಪರಿಶೀಲಿಸಿದರೆ ಅಲ್ಲಿ ಒಳಗೆ ನೀನು ಅಡಗಿಕೊಂಡಿರುವಿ. ವೇದದ ಮಾತುಗಳ ಗರ್ಭದಲ್ಲಿ ಭಗವಂತ ಅಡಗಿರುವುದರಿಂದಲೇ ದೇವರನ್ನು ಕಾಣಬೇಕೆಂದರೆ ವೇದದ ಶಬ್ದಗಳನ್ನು ಒಡೆಯಬೇಕು ಎನ್ನುವರು. ಶಬ್ದಗಳನ್ನು ಒಡೆಯುವುದೆಂದರೆ ಶಬ್ದಗಳನ್ನು ಬಿಡಿಸುವುದೆಂದರ್ಥ. ಶಬ್ದದ ಒಳಗೆ ಭಗವಂತ ಸೇರಿಕೊಂಡಿದ್ದಾನೆ. ಭಗವಂತನ ಶಕ್ತಿ ಶಬ್ದದ ಒಳಗೆ ಸೇರಿಕೊಂಡಿದೆ. ಕಾಯಿಯನ್ನು ಒಡೆಯುವ ಸಾಮರ್ಥ್ಯ ನಮ್ಮಲ್ಲಿಲ್ಲದಿದ್ದರೆ ಸಮರ್ಥರ ಮೂಲಕ ಕಾಯಿಯನ್ನು ಒಡೆಸಿ ಅದರೊಳಗಿನ ತಿರುಳನ್ನು ಕಾಣಬೇಕಾದಂತೆ ಶಬ್ದವನ್ನು ಒಡೆಯುವ ಸಾಮರ್ಥ್ಯ ನಮ್ಮಲ್ಲಿಲ್ಲವಿದ್ದರೆ ಸಮರ್ಥರ ಮೂಲಕ ಶಬ್ದವನ್ನು ಒಡೆಸಿ ಅದರೊಳಗೆ ಅಡಗಿರುವ ಪರಮಾತ್ಮನನ್ನು ಕಾಣುವಂತಾಗಬೇಕು.

ಹೀಗೆ ಶಬ್ದಗಳಲ್ಲಿ ಭಗವಂತನ ದರ್ಶನ ಪಡೆದ ಮೇಲೆ ಶಬ್ದವನ್ನು ಬದಿಗಿಡೋಣ, ದೇವರ ದರ್ಶನ ಪಡೆಯಲು ತೊಡಗೋಣ. ಈಗ ಶಬ್ದದಿಂದಷ್ಟೇ ದೇವರನ್ನು ನೋಡುತ್ತಿದ್ದೇವೆ. ಅಂತಹ ಶಬ್ದಗಳನ್ನು ಬದಿಗಿಟ್ಟು, ಕಣ್ಣಿನಿಂದ, ಒಳಗಣ್ಣಿನಿಂದ ಭಗವಂತನನ್ನು ನೋಡಲು ತೊಡಗೋಣ. ಉಪನಿಷತ್ತಿನಲ್ಲಿ **'ಹಿರಣ್ಮಯೇನ ಪಾತ್ರೇಣ ಸತ್ಯಸ್ಯಾಪಿಹಿತಂ ಮುಖಮ್ | ತತ್ತ್ವಂ ಪೂಷನ್ ಅಪಾವೃಣು ಸತ್ಯಧರ್ಮಾಯ ದೃಷ್ಟಯೇ'**- ಎಂಬುದಾಗಿ ಚಿನ್ನದ ಪಾತ್ರದಿಂದ ಆವರಿಸಲ್ಪಟ್ಟ ಸತ್ಯದ ಮುಖವನ್ನು ಸರಿಸಿ ಕಾಣಬೇಕೆಂಬ ಸಂದೇಶ ಈ ಆಶಯದಲ್ಲಿಯೇ ಪ್ರಸ್ತಾಪಿಸಲ್ಪಟ್ಟಿದೆ.

**೭೨. ಭೂಗರ್ಭಃ - ಜೀವರ ಶರೀರವನ್ನು ತನ್ನ ಮನೆಯನ್ನಾಗಿ ಮಾಡಿಕೊಂಡವನು.**

**ವಿವರಣೆ :** 'ಭೂಗರ್ಭ' ಎಂದರೆ ಭೂಮಿಯನ್ನು ತನ್ನ ಹೊಟ್ಟೆಯಲ್ಲಿ ಇಟ್ಟುಕೊಂಡವನು ಎಂದಾಗಲೀ, ಭೂಮಿಯ ಹೊಟ್ಟೆಯಲ್ಲಿ ಇರುವವನು ಎಂದಾಗಲಿ ಆಗಬಹುದು. ಈ ಭೂಮಿಯ ಗರ್ಭದಲ್ಲೂ ದೇವರು ಇದ್ದಾನೆ. ಆದರೆ ಈ ಭೂಮಿಯನ್ನು ಅಗೆದು ಅವನನ್ನು ಕಂಡು ಹಿಡಿಯಲಾರದು. ಆದುದರಿಂದ ಭೂಮಿ ಎಂದರೆ ನಮ್ಮ ನಿಮ್ಮ ಶರೀರ. ಎಲ್ಲಿ ಅಡಗಿದ್ದಾನೆ ಭಗವಂತ ? ಈ ಶರೀರದಲ್ಲಿ ಅಡಗಿ ಕುಳಿತಿದ್ದಾನೆ. ಸಾಕ್ಷಾತ್ಕಾರ ಅಂದರೆ ಹೊರಗೆ ಇರುವ ಭಗವದ್ರೂಪದ ದರ್ಶನ ಅಲ್ಲ. ದುರ್ಯೋಧನನೂ ಕೃಷ್ಣರೂಪವನ್ನು ಕಂಡಿದ್ದಾನೆ. ರಾವಣನೂ ರಾಮರೂಪವನ್ನು ಕಂಡಿದ್ದಾನೆ. ಜರಾಸಂಧನಿಗೂ ಕೃಷ್ಣನ ದರ್ಶನ ಆಗಿದೆ.

ಆದರೆ ಇವರೆಲ್ಲರಿಗೆ ದೇವರ ಸಾಕ್ಷಾತ್ಕಾರ ಆಗಿದೆ ಎನ್ನುವಂತಿಲ್ಲ. ಶರೀರದ ಒಳಗೆ ಜೀವ ಇರುವನು. ಆ ಜೀವಸ್ವರೂಪದಲ್ಲಿ ಭಗವಂತನ ರೂಪ ಇರುವುದು. ಆ ರೂಪದ ದರ್ಶನವೇ ಸಾಕ್ಷಾತ್ಕಾರ. ಅದನ್ನು 'ಬಿಂಬ ಸಾಕ್ಷಾತ್ಕಾರ'– ಎಂದು ಕರೆಯುವರು. ಪ್ರತಿಯೊಬ್ಬ ಜೀವನ ಜೊತೆಗೇ ಇರುವ ಭಗವದ್ರೂಪದ ಸಾಕ್ಷಾತ್ಕಾರವನ್ನು ಬಿಂಬ ಸಾಕ್ಷಾತ್ಕಾರ ಎಂದು ಕರೆಯಲಾಗುವುದು.

ಆದ್ದರಿಂದ ನಮ್ಮ ನಿಮ್ಮ ಶರೀರ ಭೂಮಿ. ಈ ಭೂಮಿಯ ಗರ್ಭದಲ್ಲಿ ಭಗವಂತ ಇರುವನು. ಉಡುಪಿ ಕೃಷ್ಣನನ್ನು ನವಗ್ರಹ ಕಿಂಡಿಯ ಒಳಗೆ ಚಿಂತನೆ ಮಾಡುವಂತೆ ಈ ಶರೀರದ ಒಳಗೂ ದೇವರನ್ನು ಚಿಂತನೆ ಮಾಡಬೇಕು. ಒಂಭತ್ತು ಕಿಂಡಿಗಳನ್ನು ನಿರ್ಮಿಸಿ, ಅವುಗಳ ಮೂಲಕ ಕೃಷ್ಣನ ದರ್ಶನದಂತೆ ಒಂಭತ್ತು ರಂಧ್ರಗಳೆಂಬ ಕಿಂಡಿಗಳನ್ನೊಳಗೊಂಡ ಈ ಶರೀರದ ಮೂಲಕವೂ ಒಳಗಿನ ಭಗವಂತನನ್ನು ಕಾಣಬೇಕೆಂಬುದೇ ನವಗ್ರಹ ಕಿಂಡಿಗಳ ಮೂಲಕ ಕೃಷ್ಣನ ದರ್ಶನದ ಸಾಂಕೇತಿಕ ಸಂದೇಶ. ಹೀಗೆ ಜೀವರ ಶರೀರವನ್ನೂ ಮನೆಯನ್ನಾಗಿ ಮಾಡಿಕೊಂಡವನು 'ಭೂಗರ್ಭ'.

ಮೊದಲು ಶಬ್ದಗಳ ಗರ್ಭದಲ್ಲಿ ಅವನನ್ನು ಕಂಡು ಬಳಿಕ ಈ ಶರೀರದಲ್ಲಿ ಅವನನ್ನು ಕಾಣಬೇಕು. ಮೊದಲು 'ಹಿರಣ್ಯಗರ್ಭ' ಎಂದು ಉಪಾಸನೆ ನಡೆಸಿ ಬಳಿಕ 'ಭೂಗರ್ಭ' ಎಂದು ಉಪಾಸನೆ ಮಾಡಬೇಕು.

೭೩. **ಮಾಧವಃ – * ಲಕ್ಷ್ಮೀಪತಿ.**

*** ಲಕ್ಷ್ಮೀದೇವಿಯನ್ನು ಧರಿಸಿಕೊಂಡೇ ಅವತರಿಸುವವನು.**

**ವಿವರಣೆ :** ಮಾ ಅಂದರೆ ಲಕ್ಷ್ಮೀ, ಧ ಅಂದರೆ ಧರಿಸಿಕೊಂಡು, ವ ಅಂದರೆ ಹೋಗುವವನು. ಭಗವಂತನ ಯಾವುದೇ ಅವತಾರ ತೆಗೆದುಕೊಳ್ಳಿ, ಮೀನಾಗಿರಲಿ, ಆಮೆಯಾಗಲಿ, ಹಂದಿಯಾಗಲಿ, ವ್ಯಾಸರೇ ಆಗಿರಲಿ, ಪರಶುರಾಮನೇ ಆಗಿರಲಿ, ಯಾವುದೇ ಅವತಾರವನ್ನು ತಾಳುವಾಗ ಭಗವಂತ ಒಬ್ಬನೇ ಬರುವ ಪ್ರಸಂಗವೇ ಇಲ್ಲ. ಮತ್ತೆ ಸಂಸಾರ ಸಮೇತನಾಗಿಯೇ ಬರುವನು. ಅವನ ಸಂಸಾರ ಚಿಕ್ಕದು. ಅದರಲ್ಲಿ ಪತ್ನಿ ಮಾತ್ರ ಸೇರಿಕೊಂಡಿರುವಳು. ಬ್ರಹ್ಮಾದಿ ಮಕ್ಕಳಾದರೂ ಕಲ್ಪಕಲ್ಪಕ್ಕೆ ಬೇರೆ ಬೇರೆ ಆಗುತ್ತಿರುವರು. ಯಾವಾಗಲೂ ತನ್ನ ಜೊತೆಗೇ ಇರುವವಳು ಪತ್ನಿ ಮಾತ್ರ. ಆದ್ದರಿಂದ ಮಾ – ಲಕ್ಷ್ಮೀದೇವಿಯನ್ನು ಧ – ಧರಿಸಿಕೊಂಡೇ ವ– ವಾತಿ, ಹೋಗುವನು, ಅವತರಿಸುವನು. ಆದ್ದರಿಂದ ಎಲ್ಲ ಕಡೆಯಲ್ಲೂ 'ಲಕ್ಷ್ಮೀನಾರಾಯಣ' ಎಂದೇ ಸಂಕಲ್ಪದಲ್ಲಿ ಉಲ್ಲೇಖ, ಶ್ರೀ ಗೋಪಾಲಕೃಷ್ಣ, ಶ್ರೀ

ವೇದವ್ಯಾಸ..... ಹೀಗೆ ಶ್ರೀ ದೇವಿಯಿಂದ ಕೂಡಿಯೇ ಉಲ್ಲೇಖ. ಆದ್ದರಿಂದ ಬರೇ ಭಗವದ್ರೂಪದ ಚಿಂತನೆ ಮಾಡಬಾರದು. ಲಕ್ಷ್ಮೀಸಹಿತ ನಾರಾಯಣನ ಚಿಂತನೆಯನ್ನೇ ಮಾಡಬೇಕು ಎನ್ನುವರು ಶಾಸ್ತ್ರಕಾರರು. ಹೇಗೆ ಬರೇ ಲಕ್ಷ್ಮೀದೇವಿಯ ಚಿಂತನೆ ಅವಳಿಗೆ ತೃಪ್ತಿದಾಯಕವಾಗಲಾರದೋ ಹಾಗೆಯೇ ಬರೇ ನಾರಾಯಣನ ಚಿಂತನೆ ಅವನಿಗೆ ತೃಪ್ತಿದಾಯಕವೆನಿಸುವುದಿಲ್ಲ.

**'ಸಾಟಿ ಕಾಣದ ಲಕ್ಷ್ಮೀ ಉರಸ್ಥಳವಾಗಿರೆ....'** ಲಕ್ಷ್ಮೀ ನಿನ್ನ ಎದೆಯಲ್ಲಿಯೇ ಬಂದು ಕುಳಿತಿರುವಳು. ನೀನು ಎಲ್ಲಿಗೆ ಹೋದರೂ, ಯಾವ ರೂಪದಿಂದ ಹೋದರೂ ನಿನ್ನ ಜೊತೆಗೇ ಲಕ್ಷ್ಮೀ ಇದ್ದಾಳೆ ಎಂದು ಭೀಷ್ಮರು ಸ್ತುತಿಸುವರು. 'ಮಾಧವ' ಹೋಗುವಲ್ಲೆಲ್ಲ ಲಕ್ಷ್ಮೀದೇವಿಯನ್ನು ಕಟ್ಟಿಕೊಂಡೇ ಹೋಗುವುದು ನಿನ್ನ ಸ್ವಭಾವ.

**೭೪. ಮಧುಸೂದನಃ – * ಮಧು ಹೆಸರಿನ ದೈತ್ಯನನ್ನು ಕೊಂದವನು.**

*** ಹಾಲಿನ ಮಡಕೆಯನ್ನು ಒಡೆದು ಹಾಲು ಚೆಲ್ಲುವಂತೆ ಮಾಡಿ ನಾಶ ಪಡಿಸಿದವನು.**

*** ಪ್ರತಿಯೊಬ್ಬರ ಒಳಗಿನ ಸುಖವನ್ನು ಪಾಕ ಮಾಡಿ ಅವರು ಅನುಭವಿಸುವಂತೆ ಮಾಡುವವನು.**

ವಿವರಣೆ: ಮಧುಸೂದನ ಎಂಬನಾಮದ ಕೊನೆಯಲ್ಲಿ ಆಕಳು ಅರ್ಥದಲ್ಲಿ ಬಳಸುವ ದನ ಹೊರತು ಧನ ಅಲ್ಲ. ಅಲ್ಪ ಪ್ರಾಣದ ದಕಾರ ಸಾಕು. 'ಜನಾರ್ಧನ ' ಎಂಬಲ್ಲಿ ಮಾಡುವಂತೆ ಮಹಾಪ್ರಾಣದ 'ಅಬದ್ಧ' ಸಲ್ಲ.

ಮಹಾಪ್ರಾಣ ಪ್ರಯೋಗಿಸಬೇಕಾದಲ್ಲಿ ಅಲ್ಪ ಪ್ರಾಣವನ್ನು ಪ್ರಯೋಗಿಸಿದರೆ ಮಹಾ ಅನರ್ಥ ಏನು ಆಗುವುದು ? ಎಂದು ನೀವು ಭಾವಿಸಬಹುದು. ಒಂದು ದೃಷ್ಟಾಂತ ಕೊಡ್ತೇನೆ. ಇಂದು ಗುರುವಾರ ನಾನು 'ಫಲಾಹಾರ'– ಎನ್ನುವ ಬದಲು 'ಪಲಾಹಾರ' ಎಂದರೆ ಮಾಂಸವನ್ನು ತಿನ್ನುತ್ತೇನೆ ಎಂದಂತಾಗುವುದು ! ಯಾಕೆಂದರೆ ಸಂಸ್ಕೃತದಲ್ಲಿ ಪಲ ಎಂದರೆ ಮಾಂಸ. ಹೀಗೆ ಸಂಸ್ಕೃತದಲ್ಲಿ ವರ್ಣಗಳಲ್ಲಿಯ ಅಲ್ಪಪ್ರಾಣ ಮಹಾಪ್ರಾಣಗಳಿಗೆ ವಿರುದ್ಧಾರ್ಥವಾಚಕತ್ವ ಇರುವುದರಿಂದ ಎಲ್ಲಿ ಅಲ್ಪಪ್ರಾಣ ಎಲ್ಲಿ ಮಹಾಪ್ರಾಣ ಎಂಬುದನ್ನು ಚೆನ್ನಾಗಿ ಪರಿಶೀಲಿಸಿ, ಹಾಗೆಯೇ ಉಚ್ಚರಿಸಬೇಕು. ಮುಖ್ಯಪ್ರಾಣನ ಅನುಗ್ರಹ ಪಡಕೊಂಡರಷ್ಟೇ ಅಲ್ಪಪ್ರಾಣ ಮಹಾಪ್ರಾಣಗಳನ್ನು ಎಲ್ಲಿ ಬೇಕೋ ಅಲ್ಲಿಯಷ್ಟೇ ಬಳಸಿಕೊಳ್ಳಬಹುದು.

'ಮಧು' ಎಂದರೆ ಒಬ್ಬ ಅಸುರ. ಅವನನ್ನು 'ಸೂದಯತಿ' ನಾಶ ಮಾಡಿದವನು 'ಮಧುಸೂದನ'. ಮಧುನಾಮಕ ದೈತ್ಯನನ್ನು ಕೊಂದವನು ಎಂಬ ಈ

ಅರ್ಥ ಎಲ್ಲರಿಗೂ ಗೊತ್ತಿರುವಂತಹದ್ದು.

ಭೀಷ್ಮರು ಕೃಷ್ಣನನ್ನು ಎದುರಿಗೆ ಕುಳ್ಳಿರಿಸಿಕೊಂಡು ಸ್ತುತಿಸುತ್ತಿರುವುದರಿಂದ ಕೃಷ್ಣರೂಪಕ್ಕೆ ವಿಶೇಷವಾಗಿ ಸಂಬಂಧಿಸುವ ಮತ್ತೊಂದು ಅರ್ಥ – ಮಧು ಶಬ್ದಕ್ಕೆ ಹಾಲು ಎಂಬ ಅರ್ಥವೂ ಇದೆ. 'ಗವ್ಯಂ ಶ್ರೇಷ್ಠಂ ಮಧು ಕ್ಷೀರಂ.....' ಎಂದು ಒಬ್ಬರು ಕೋಶಕಾರರು ಬರೆಯುವರು. 'ಗವ್ಯಂ' ಗೋವಿನಿಂದ ಬರತಕ್ಕ ವಸ್ತುಗಳಲ್ಲಿ ಶ್ರೇಷ್ಠವಾದ, ಅಂದರೆ ಮೊದಲಿನ ವಸ್ತುವಾದ ಕ್ಷೀರವನ್ನು 'ಮಧು' ಎಂದು ಕರೆಯುವರು. ಹಾಲು, ಮೊಸರು, ತುಪ್ಪ ಇವೆಲ್ಲ ಗೋವಿನಿಂದ ಬರತಕ್ಕ ವಸ್ತುಗಳು. ಇವುಗಳಲ್ಲಿ ಮೊದಲು ಬರತಕ್ಕಂತಹದ್ದು ಹಾಲು. ಅದು ಮಧು ಎನಿಸುವುದೆಂದು ಕೋಶಕಾರರು ತಿಳಿಸಿರುವರು.

ಯಶೋದೆಯ ಮನೆಯಲ್ಲಿ ಅನೇಕ ಹಾಲಿನ ಕೊಡಗಳು ಇದ್ದವು. ಯಶೋದೆ ಕೃಷ್ಣನನ್ನು ತನ್ನ ತೊಡೆಯಿಂದ ಕೆಳಗಿಳಿಸಿದ್ದೇ ತಡ – ಆ ಎಲ್ಲ ಹಾಲಿನ ಕೊಡಗಳನ್ನು ಒಡೆದು ಹಾಕುವ ಮೂಲಕ ಅವುಗಳಲ್ಲಿದ್ದ ಹಾಲನ್ನೆಲ್ಲ ಚೆಲ್ಲಿ ಹೋಗುವಂತೆ ಮಾಡಿ ನಾಶ ಪಡಿಸಿರುವನು. 'ಮಧು ಕ್ಷೀರಂ ಸೂದಯತಿ ನಾಶಯತಿ' 'ಮಧುಸೂದನ' ನಾಮದಲ್ಲಿ ಅನುಸಂಧಾನ ಮಾಡಬಹುದಾಗಿದೆ.

ಮತ್ತೊಂದು ಅರ್ಥ – ಅಡುಗೆಯವರನ್ನು ಪಾಕ ಮಾಡುವವರು ಎಂಬ ಅರ್ಥದಲ್ಲಿ ಸೂದರು ಎಂದು ಕರೆಯುವರು. (ಅಥವಾ ಏನು ವಸ್ತು ಕೊಟ್ಟರೂ ಅದನ್ನು ಯಾವುದಾದರೊಂದು ವಿಕಾರಕ್ಕೊಳಪಡಿಸಿ ಅದರ ಮೂಲ ರೂಪವನ್ನು ನಾಶಪಡಿಸುವರು ಎಂಬ ಅರ್ಥದಲ್ಲೂ ಅಡುಗೆಯವರನ್ನು ಸೂದರು ಎನ್ನಬಹುದು.)

ಕೃಷ್ಣನೂ ಸೂದನ ಅಂದರೆ ಪಾಕ ಮಾಡ್ತಾನೆ. ಯಾವುದರ ಪಾಕ ಮಾಡ್ತಾನೆ? ನಮ್ಮ ಸ್ವರೂಪದ ಒಳಗೆ ಸುಪ್ತವಾದ ಸುಖ ಇದೆ ತಾನೇ ? ಅದನ್ನು ಪಾಕ ಮಾಡಿ ನಾವು ಅದನ್ನು ಉಣ್ಣುವಂತೆ ಮಾಡ್ತಾನೆ. ಪ್ರತಿಯೊಂದಕ್ಕೂ ಒಂದೊಂದು ಬಗೆಯ ಪಾಕ ಇದೆ. ಮಾತಿಗೆ, ಕೃತಿಗೆ, ಅಕ್ಕಿಗೆ.... ಹೀಗೆಯೇ ಅದರಂತೆ ನಮ್ಮ ನಿಮ್ಮ ಒಳಗೆ ಇರುವ 'ಮಧು' ಎನ್ನುವ ಸುಖಕ್ಕೂ ಒಂದು ಪಾಕ ಇದೆ. 'ಮಧು' ವನ್ನು ಪಾಕಕ್ಕೊಳಪಡಿಸಿ, ಸಿದ್ಧಪಡಿಸಿ ನಮಗೆ ಉಣ್ಣಲು ನೀಡುವನು – ಮಧುಸೂದನ.

**ಈಶ್ವರೋ ವಿಕ್ರಮೀ ಧನ್ವೀ ಮೇಧಾವೀ ವಿಕ್ರಮಃ ಕ್ರಮಃ ।**
**ಅನುತ್ತಮೋ ದುರಾಧರ್ಷಃ ಕೃತಜ್ಞಃ ಕೃತಿರಾತ್ಮವಾನ್ ॥ ೯॥**

೭೫. **ಈಶ್ವರಃ – ಈಶರಾದ ಬ್ರಹ್ಮಾದಿಗಳಿಗೆ ವರಕೊಡುವ ಸಾಮರ್ಥ್ಯರೂಪದ**

**ವರ ನೀಡಿರುವವನು.**

**ವಿವರಣೆ :** ಈಶ್ವರ ಅಂದಾಕ್ಷಣ ರುದ್ರ ದೇವರ ನೆನಪು ಬರುವುದು. ಆದರೆ ಕೃಷ್ಣನ ಮುಂದೆ ಸ್ತುತಿಸುತ್ತಿರುವ 'ಈಶ್ವರ' ನಾಮಕ್ಕೆ ರುದ್ರ ಎಂಬ ಅರ್ಥವಲ್ಲ. ಮತ್ತೆ, ಈಶ ಎನಿಸುವ ರುದ್ರ ದೇವರಿಗೆ ವರ ಕೊಡುವವನು ಎಂದರ್ಥ. ಈಶ ಎಂದರೂ ರುದ್ರದೇವ ಎಂಬ ಅರ್ಥ ಇದೆ ತಾನೆ?

ಈಶ್ವರ ಎಂಬ ಶಬ್ದವೇ ಹಿಂದೊಮ್ಮೆ ಬಂದಿತ್ತು. ಇಲ್ಲಿ ಈಶ್ವರ ಶಬ್ದಕ್ಕೆ ಏನರ್ಥ? ಈಶ ಅಂದರೆ ಒಡೆಯರು. ಯಾವ ರೀತಿಯ ಒಡೆಯರು? ನಮಗೆ ಬೇಕಾದ್ದನ್ನು ಕೊಡುವ ಮೂಲಕ ಒಡೆಯರು. ಯಾರನ್ನು ನಮ್ಮ ಒಡೆಯರೆಂದು ಕರೆಯುವೆವು? ಕಾಲಕಾಲಕ್ಕೆ ನಮ್ಮ ಬೇಕು ಬೇಡಗಳನ್ನು ತಿಳಿದು ಅವುಗಳಿಗೆ ಅನುಗುಣವಾಗಿ ನಡೆದುಕೊಳ್ಳುವರು, ಅವರು ಒಡೆಯರು. ಈ ಅರ್ಥದಲ್ಲಿ ನಮಗೆಲ್ಲ ಚತುರ್ಮುಖಾದಿ ದೇವತೆಗಳು ಒಡೆಯರು. ಅವರಿಗೂ 'ವರ' ಕೊಡುವವನು ಭಗವಂತ. ಮೊನ್ನೆ ಚತುರ್ಮುಖಾದಿಗಳಿಗಿಂತಲೂ ಶ್ರೇಷ್ಠ ಎಂಬ ಅರ್ಥ ಹೇಳಲಾಗಿತ್ತು. ಈಗ ಈಶರಿಗೆ ಬ್ರಹ್ಮರುದ್ರಾದಿಗಳಿಗೆ ವರವನ್ನು ನೀಡುವವನು– ಎಂದು ಅರ್ಥೈಸಲಾಗುವುದು. ಏನು ವರ ಕೊಡ್ತಾನೆ? ಯಾರು ಏನು ಕೇಳ್ತಾರೋ ಅವನ್ನೆಲ್ಲ ಅವರಿಗೆ ಕೊಡುವ ಶಕ್ತಿ ನಿಮಗೆ ಬರಲಿ– ಎಂಬ ವರ ಕೊಡ್ತಾನೆ. ಬ್ರಹ್ಮಾದಿಗಳಲ್ಲಿ ದೈತ್ಯರೂ ಕೇಳ್ತಾರೆ., ದೇವತೆಗಳೂ ಕೇಳ್ತಾರೆ., ಮಾನವರೂ ಕೇಳ್ತಾರೆ. ಯಾರ್‍ಯಾರು ಏನೇನು ಕೇಳ್ತಾರೋ ಅವನ್ನೆಲ್ಲ ಕೊಡುವ ಶಕ್ತಿ ನಿಮಗೆ ಬರಲಿ ಎಂಬ ವರವನ್ನು ಭಗವಂತನು ಬ್ರಹ್ಮಾದಿಗಳಿಗೆ ಕೊಟ್ಟಿರುವನು. ದೇವತೆಗಳು ತಮ್ಮನ್ನು ಉಪಾಸನೆ ಮಾಡುವ ವ್ಯಕ್ತಿಗಳು ಅಧ್ಯಾತ್ಮದೆಡೆಗೆ ವಾಲುವಂತೆ ಅವರಿಗೆ ವರ'ಕೊಡುವಂತೆ ಭಗವಂತನು ದೇವತೆಗಳಿಗೆ ವರ ನೀಡಿರುವನು.

**೭೬. ವಿಕ್ರಮೀ – * ವಿಶೇಷವಾದ ಹೆಜ್ಜೆ ಉಳ್ಳವನು.**
*** ದೊಡ್ಡ, ಭಾರದ, ಅರ್ಥಗರ್ಭಿತ ಹೆಜ್ಜೆ ಉಳ್ಳವನು.**

**ವಿವರಣೆ :** ಭಗವಂತನದು ವಿಶಿಷ್ಟವಾದ ಜೀವನಕ್ರಮ ಎಂಬುದು ಇದ್ದೇ ಇದೆ. ಇದರ ಜೊತೆಗೆ, ಕ್ರಮ ಅಂದರೆ ಹೆಜ್ಜೆ. ವಿಶೇಷವಾದ ಹೆಜ್ಜೆ. ದೊಡ್ಡದಾದ ಹೆಜ್ಜೆ. ಭಗವಂತನ ಹೆಜ್ಜೆಯ ಮೇಲೆಯೇ ದಾಸರೊಂದು ಪದ್ಯ ಮಾಡಿದ್ದಿದೆ– **'ಗೋಪಾಲಕೃಷ್ಣನ ಹೆಜ್ಜೆ ಅರ್ಜುನನ ಸಾರಥಿಯ ಹೆಜ್ಜೆ.....'**,ವಿಶೇಷವಾದ ಹೆಜ್ಜೆ, ಅಡಿ ಉಳ್ಳವನು. ಅಂದರೆ ಏನರ್ಥ? ಒಂದು ಕೆಲಸದ ಬಗ್ಗೆ ಒಂದು ಹೆಜ್ಜೆ ಮುಂದೆ ಇಟ್ಟಿರೆ ಕೆಲಸ ಆಗುವ ತನಕ ಆ ಹೆಜ್ಜೆಯನ್ನು ಹಿಂದೆ ಸರಿಸುವವ ಅಲ್ಲ. ಇದು ವಿಶೇಷವಾದ ಹೆಜ್ಜೆ. ಹೆಜ್ಜೆ ಮುಂದಿಟ್ಟಾಯಿತಲ್ಲ., ಇನ್ನು ಹಿಂದೆ ಇಡುವ ಪ್ರಸಂಗವೇ ಇಲ್ಲ.ಯಾವಾಗ ಹಿಂದಿಡುವುದು? ಕೆಲಸ ಆದ ಮೇಲೆಯೇ. ಭಗವಂತನ ಹೆಜ್ಜೆ ಇಡುವ ಈ ಪ್ರಕ್ರಿಯೆಯ ಸ್ಫೂರ್ತಿ ನಮಗೂ ಬರಬೇಕು. ಅಧ್ಯಾತ್ಮಕ್ಷೇತ್ರಕ್ಕೆ ಹೆಜ್ಜೆ ಇಟ್ಟಾಯಿತು. ಇನ್ನು ಹಿಂದೆ ಬರಬೇಡ. ಉಪನ್ಯಾಸಕ್ಕೆ

ನಿತ್ಯ ಬರ್ತ್ತೇನೆ. ಎಂದು ಹೆಜ್ಜೆ ಇಟ್ಟಾಯಿತೆಂದರೆ ಪ್ರತಿನಿತ್ಯ ಬರಬೇಕು. Xಉಪನ್ಯಾಸಕ್ಕೆ ಮಾತ್ರ ಬರ್ತ್ತೇನೆ, Yಉಪನ್ಯಾಸಕ್ಕೆ ಮಾತ್ರ ಬರ್ತ್ತೇನೆ – ಎಂದೆಲ್ಲ ಮಾಡಿದರೆ Zಷ್ಟು ಹಿಡಿದೀತು! ಈ ಜಾಗದಲ್ಲಿ ಉಪನ್ಯಾಸ ನಡೆಯುತ್ತೆ ಎಂದರೆ ಅದು ಭಗವದ್ವಿಷಯಕ ಎಂದೇ ಅರ್ಥ. ಆದುದರಿಂದ ಉಪನ್ಯಾಸಗಳಲ್ಲಿ ಆಯ್ಕೆ ಮಾಡಿ ಉಪನ್ಯಾಸ ಕೇಳುವುದಕ್ಕಾಗಿ ಮುಂದಿಟ್ಟ ಹೆಜ್ಜೆಯನ್ನು ಕೆಲವು ಉಪನ್ಯಾಸಗಳ ಬಗ್ಗೆ ಹಿಂದಿಡಬಾರದು.

ಮುಂದಿಟ್ಟ ಹೆಜ್ಜೆ ಹಿಂದೆ ಇಡುವ ಪ್ರಸಂಗ ನಮ್ಮ ಜೀವನದಲ್ಲಿ ಬಾರದಿರಲಿ. ಇದಕ್ಕೆ, ಬೇಕಾದ ಸ್ಫೂರ್ತಿ 'ವಿಕ್ರಮೀ' ಎನಿಸುವ ಭಗವಂತನಿಂದಲೇ ಬರಬೇಕು.

ಬಲಗಾಲು ಮೊದಲು ಇಟ್ಟಿದ್ದಾನೋ ಎಡಗಾಲು ಮೊದಲು ಇಟ್ಟಿದ್ದಾನೋ ಎಂಬುದು ಹೆಜ್ಜೆ ಅಳೆಯುವ ಕ್ರಮ. ಬಲಗಾಲು ಮೊದಲಿಟ್ಟ ಶ್ರೇಯಸ್ಸಾಯಿತು. ಎಡಗಾಲು ಮೊದಲಿಟ್ಟ ಇನ್ನೂ ಅಸ್ವಾತಂತ್ರ್ಯವೆ. ನಮ್ಮ ಕ್ರಮ ಬಲ ಮೊದಲು, ಆನಂತರ ಎಡ. ಬಲ ಮುಂದೆ ಹೋಗುವುದಕ್ಕೋಸ್ಕರ ಎಡ ಬೇಕೇ ವಿನಹ ಎಡ ಹೋಗುವುದಕ್ಕಾಗಿ ಅಲ್ಲ.

ದೇವರ ಗುಡಿಗೆ ಪ್ರವೇಶಿಸುವಾಗ ಬಲಗಾಲನ್ನೇ ಒಳಗಿಡಬೇಕು. ಅಷ್ಟರವರೆಗೆ ಹರಟೆ ಹೊಡೀತಾ ಬಂದಿದ್ದರೂ ಆ ಸಂದರ್ಭದಲ್ಲಾದರೂ ಹರಟೆಯನ್ನು ನಿಲ್ಲಿಸಿ ಬಲಗಾಲನ್ನೇ ಒಳಗಿಡಲು ಯತ್ನಿಸಬೇಕು. ಆದರೆ ನಮಗೆ ಆಂಗ್ಲರ 'ಲೆಫ್ಟ್ ರೈಟ್'– ಗಾಳಿಯಿಂದಾಗಿ ಎಡವೇ ಮೊದಲು ಬರುವುದು. 'ರೈಟ್ ಲೆಫ್ಟ್' ಇಲ್ಲವೇ ಇಲ್ಲ. ಅವರ ಗಂಧಗಾಳಿಯಲ್ಲೇ ಇರುವುದರಿಂದ ಇದನ್ನು ತಿದ್ದುವ ಕೆಲಸ ನಮ್ಮಲ್ಲಿ ಆಗಲೇ ಇಲ್ಲ. ಇಂತಹ ಕೆಲವು ಸಂಗತಿಗಳ ವಿಷಯಗಳಲ್ಲಿ ನಾವು ಇನ್ನೂ ವೈಚಾರಿಕವಾಗಿ ಅಸ್ವತಂತ್ರರೇ ಆಗಿರುವೆವು. ಬಲ ಹೆಜ್ಜೆ ಮೊದಲು ಇಟ್ಟೆಯೋ ನಿನ್ನ ಕಾರ್ಯಕ್ಕೆ ಬಲ ಬಂತು ಎಂದೇ ಅರ್ಥ.

ಭೀಷ್ಮರು ಕೃಷ್ಣನನ್ನು ಸ್ತುತಿಸುತ್ತಾರೆ – 'ದುರ್ಯೋಧನ ನಿನ್ನ ಭಾವನೇ ಆಗಿರಬಹುದು. ಆದರೂ ಅವನನ್ನು ಸಂಹಾರ ಮಾಡುವುದೆಂದು ಹೆಜ್ಜೆ ಇಟ್ಟ ಮೇಲೆ ಅದನ್ನು ಹಿಂದೆ ಇಟ್ಟವನಲ್ಲ. ಸಂಹಾರ ಮಾಡಿದ ಮೇಲಷ್ಟೇ ಹಿಂದೆ ತಿರುಗಿ ಬಂದವ.'

**೭೭. ಧನ್ವೀ – * ಧನುರ್ಧಾರಿ.**

*** ಪ್ರಣವವೆಂಬ ಧನುಸ್ಸಿನಿಂದ ಯಾವಾಗಲೂ ಹೇಳಲ್ಪಡುವವನು.**

**ವಿವರಣೆ :** ಯಾರ ಕೈಯಲ್ಲಿ ದನುಸ್ಸು– ಬಿಲ್ಲು ಇದೆಯೋ ಅವನನ್ನು ಧನ್ವೀ ಎಂದು ಕರೆದರು. ಗುಣವುಳ್ಳವನನ್ನು 'ಗುಣೀ' ಎನ್ನುವಂತೆ, ಧನವುಳ್ಳವನನ್ನು 'ಧನೀ' ಎನ್ನುವಂತೆ ಧನುಸ್ ಉಳ್ಳವನನ್ನು 'ಧನ್ವೀ'– ಎಂದು ಶಾಸ್ತ್ರಕಾರರು ಕರೆದಿರುವರು. ಭಗವಂತನ ನಾಲ್ಕು ಬಾಹುಗಳಲ್ಲಿ ಚಕ್ರ, ಶಂಖ, ಗದಾ, ಪದ್ಮ – ಈ ನಾಲ್ಕು ಇವೆ ಎಂದು ಪ್ರಸಿದ್ಧ. ಭಗವಂತನಿಗೆ ಇಷ್ಟು ಮಾತ್ರವಲ್ಲ, ಇನ್ನೂ ಕೆಲವು ಆಯುಧಗಳಿವೆ. ಖಡ್ಗ ಅವನ ಆಯುಧ. ಧನುಸ್ ಅವನ ಆಯುಧ. ಐದು ಬಾಣಗಳು ಅವನ ಆಯುಧ. ಕೈಯಲ್ಲೊಂದು ಢಾಲು,

ಅದೂ ಭಗವಂತನ ಆಯುಧ. ಶಾಸ್ತ್ರಕಾರರು ಇಷ್ಟು ಚಿತ್ರಣ ನೀಡುವರಾದರೂ ನಾವು ಸದ್ಯಕ್ಕೆ ಅವನ ನಾಲ್ಕು ಕೈಗಳಲ್ಲಿ ನಾಲ್ಕು ಆಯುಧಗಳನ್ನು ಚಿಂತಿಸೋಣ. ಭಗವಂತ ಸದಾ ಕಾಲ ಕೈಯಲ್ಲಿ ಧನುಸ್ಸನ್ನು ಧರಿಸಿಕೊಂಡು ಇರುವವನೆಂದು ಅವನನ್ನು 'ಧನ್ವೀ' ಎಂದು ಕರೆಯಲಾಗಿದೆ. ಕೊನೆಗೆ 'ಶಾರ್ಙ್ಗಧನ್ವಾ' ಎಂದು ಶಾರ್ಙ್ಗ ಎಂಬ ಧನುಸ್ಸನ್ನು ಧರಿಸಿದವನೆಂದು ವಿಶಿಷ್ಟವಾಗಿ ಕರೀತಾರೆ. ಈಗ 'ಧನ್ವಿ'– ಎಂದು ಸಾಮಾನ್ಯವಾಗಿ ಧನುಸ್ಸು ಉಳ್ಳವನೆಂದು ಕರೆಯಲಾಗಿದೆ.

ಇದರ ಮತ್ತೊಂದು ಅರ್ಥವನ್ನು ಹೀಗೆ ಹೊರಡಿಸಲಾಗುವದು– ಯಾವಾಗಲೂ ಓಂಕಾರದ ಜೊತೆಗೆ ಇರುವವನು. ಸಾಮಾನ್ಯವಾದ ಅರ್ಥ ಧನುಸ್ಸನ್ನು ಕೈಯಲ್ಲಿ ಧರಿಸಿರುವವನು ಎಂದಾದರೆ, ಉಪನಿಷತ್ತು ಪ್ರತಿಪಾದಿಸುವ ವಿಶಿಷ್ಟ ಅರ್ಥ– ಓಂಕಾರರೂಪವಾದ ಧನುಸ್ಸನ್ನು ಯಾವಾಗಲೂ ಹೊಂದಿರುವವನು. ಉಪನಿಷತ್ತಿನಲ್ಲಿ **'ಪ್ರಣವೋ ಧನುಃ ಶರೋ ಹ್ಯಾತ್ಮಾ ಬ್ರಹ್ಮ ತಲ್ಲಕ್ಷ್ಯಮುಚ್ಯತೇ। ಅಪ್ರಮತ್ತೇನ ವೇದ್ಧವ್ಯಂ ಶರವತ್ತನ್ಮಯೋ ಭವೇತ್'** ಪ್ರಣವವನ್ನು ಧನುಸ್ಸನ್ನಾಗಿ ಮಾಡಿಕೋ. ಆತ್ಮವನ್ನು ಅಂದರೆ ಮನಸ್ಸನ್ನು ಬಾಣವನ್ನಾಗಿ ಮಾಡಿಕೋ. ಪ್ರಣವವೆಂಬ ಧನುಸ್ಸಿಗೆ ಮನಸ್ಸೆಂಬ ಬಾಣವನ್ನು ಇಡು. ಅಂದರೆ ಮನಃಪೂರ್ವಕವಾಗಿ ಪ್ರಣವವನ್ನು ಜಪಿಸುವಾಗ ಭಗವಂತನು ಉದ್ದಿಷ್ಟನಾಗಿರಲಿ. ಪ್ರಣವ ಜಪ ಮಾಡುವವರ ಉದ್ದೇಶ ಭಗವಂತನ ಪ್ರೀತಿ ಆಗಿರಲಿ. ಹೀಗೆ ಭಗವಂತನ ಪ್ರೀತಿಯನ್ನು ಗುರಿಯಾಗಿ ಇಟ್ಟುಕೊಂಡು ಪ್ರಣವವನ್ನು ಜಪಿಸುವಾಗ ಭಗವಂತನಲ್ಲಿ ತಲ್ಲೀನತೆ ಬರಬೇಕು. ಬಾಣ ಹೋಗಿ ಗುರಿಯಲ್ಲಿ ನೆಡುವಂತೆ ಮನಃಪೂರ್ವಕವಾದ ಪ್ರಣವಜಪದಿಂದ ನಮ್ಮ ಮನಸ್ಸು ಪರಮಾತ್ಮನಲ್ಲಿ ತಲ್ಲೀನವಾಗಬೇಕು.

ಹೀಗೆ ಈ ಉಪನಿಷತ್‌ಸಂದೇಶದಲ್ಲಿ ಪ್ರಣವವನ್ನು ಧನುಸ್ ಎಂದು ಕರೆಯಲಾಗಿದೆ. ಭಗವಂತನು ಯಾವಾಗಲೂ ಪ್ರಣವದ ಜೊತೆಗೇ ಇರುವವನು. ವೇದಾಕ್ಷರಗಳ ಜೊತೆಗೇ ಇರುವವನು. ಪ್ರಲಯಕಾಲದಲ್ಲೂ ಭಗವಂತನು ವೇದಾಕ್ಷರಗಳ ಜೊತೆಗೇ ಇರುವನು. 'ಆಲದ ಎಲೆಯ ಮೇಲೆ ಮಲಗಿದ್ದ ಶಿಶುವೇ'– ಎಂದು ಜೋಗುಳ ಹಾಡ್ತೇವೆ. ಆಲದ ಎಲೆ ಯಾವುದು? ಕೃಷ್ಣ ಗೀತೆಯಲ್ಲಿ ತಿಳಿಸಿದ– 'ಛಂದಾಂಸಿ ಯಸ್ಯ ಪರ್ಣಾನಿ...' ವೇದಗಳೇ ಎಲೆಗಳು ಎಂದು. ಹಾಗಾದರೆ ಪ್ರಲಯಕಾಲದಲ್ಲಿ ಆಲದ ಎಲೆಯ ಮೇಲೆ ಭಗವಂತ ಪವಡಿಸಿದ್ದಾನೆ ಎಂದರೆ ವೇದದ ಮೇಲೆ ಪವಡಿಸಿದ್ದಾನೆ ಎಂದರ್ಥ. ವೇದಗಳು ಅಂದರೆ ಓಂಕಾರ. ಹಾಗಾದರೆ ಪ್ರಲಯಕಾಲವಾಗಲಿ, ಸೃಷ್ಟಿಕಾಲವಾಗಲಿ ಭಗವಂತ ಸದಾ ಓಂಕಾರದ ಜೊತೆಗೇ ಇರುವವನು. ಯಾವಾಗಲೂ ಓಂಕಾರದಿಂದ ಹೇಳಲ್ಪಡುವವನು. ಅದೇ 'ಧ್ವನ್ವೀ'. ಪ್ರಣವವೆಂಬ ಧನಿಸ್ಸಿನಿಂದ ಹೇಳಲ್ಪಡುವವನು.

**೭೮. ಮೇಧಾವೀ – ★ ಧಾರಣಾ ಶಕ್ತಿಯನ್ನು ಅತ್ಯಧಿಕವಾಗಿ ಹೊಂದಿರುವವನು.,**
**★ ನನಗಾಗಿ (ಭೀಷ್ಮರಿಗಾಗಿ– ಭೀಷ್ಮರಂತಹ ಭಕ್ತರಿಗಾಗಿ)ಧಾವಿಸಿ ಬರುವವನು.**

**ವಿವರಣೆ :** ಕೇಳಿದ ವಿಷಯವನ್ನು ಮನಸ್ಸಿನಲ್ಲಿ ಇಟ್ಟುಕೊಳ್ಳುವ ಶಕ್ತಿಯನ್ನು ಮೇಧಾ ಎಂದು ಕರೆದಿರುವರು. ಅಂದರೆ ಧಾರಣಾ ಶಕ್ತಿಯನ್ನು ಮೇಧಾ ಎಂದು ಕರೆದರು.

ನಮ್ಮಲ್ಲಿ ಗ್ರಹಣ, ಧಾರಣ, ಸ್ಮರಣ ಹಾಗೂ ಸ್ಫೂರ್ತಿ ಈ ನಾಲ್ಕು ಬೇಕಂತೆ. ಈ ನಾಲ್ಕು ಉಂಟೋ ಎಲ್ಲಿ ಹೋಗಿಯೂ ಬದುಕಬಹುದು. ಹೇಳಿದ್ದನ್ನು ಹೇಳಿದಂತೆಯೇ ಚೆನ್ನಾಗಿ ಸ್ವೀಕರಿಸುವ ಶಕ್ತಿ ಗ್ರಹಣ ಶಕ್ತಿ. ಕೇಳುವುದು ದೊಡ್ಡದಲ್ಲ, ಕೇಳಿದ್ದು ಉಳಿಯಬೇಕು. ಕೇಳಿದ್ದನ್ನು ಉಳಿಸಿಕೊಳ್ಳುವ ಶಕ್ತಿಯನ್ನು ಧಾರಣಾ ಶಕ್ತಿ ಎಂದು ಕರೆದರು. ಧಾರಣೆ ಮಾಡಿಕೊಂಡ ವಿಷಯದ ಸ್ಮರಣೆಯ ಶಕ್ತಿಯೂ ಬೇಕು. 'ಹೊಟ್ಟೆಯಲ್ಲಿ ಉಂಟು ಬಾಯಿಗೆ ಬರ್‍ತಾ ಇಲ್ಲ'– ಎಂದು ಪೇಚಾಡುವ ದುಃಸ್ಥಿತಿ ಬರಬಾರದು. ಗುರುಗಳಲ್ಲಿ ನಾವೇನೂ ಕೇಳಲಿಲ್ಲ. ಗುರುಗಳು ಪಾಠ ಮಾಡುವಾಗ ಅದನ್ನು ಹೇಳಲಿಲ್ಲ. ಯಾರದ್ದೋ ಜೊತೆಗೆ ಚರ್ಚೆ ಮಾಡುವಾಗ ಅವನು ಒಂದು ದೊಡ್ಡ ಪ್ರಶ್ನೆ ಹಾಕಿದ. ಅದಕ್ಕೆ ಉತ್ತರ ಗುರುಗಳಲ್ಲಿ ಕೇಳಿರಲಿಲ್ಲ ; ಗುರುಗಳು ಹೇಳಿರಲಿಲ್ಲ; ಆದರೆ ಆ ಕ್ಷಣದಲ್ಲಿ ಹೊಳೆಯಿತು. ಇದನ್ನು ಸ್ಫೂರ್ತಿ ಎಂದು ಕರೆಯುವರು. ಈ ನಾಲ್ಕು ಶಕ್ತಿಗಳೂ ಭೀಮಸೇನನಲ್ಲಿ ವಿಶೇಷವಾಗಿ ಇತ್ತು ಎಂದು ಹೇಳಲಾಗಿದೆ.

ಸದ್ಯ ಮೇಧಾ ಎನಿಸುವ ಧಾರಣಾ ಶಕ್ತಿ., ಕೇಳಿದ್ದನ್ನು ಮನಸ್ಸಿನಲ್ಲಿ ದೃಢವಾಗಿ ಇಟ್ಟುಕೊಳ್ಳುವ ಸಾಮರ್ಥ್ಯ.

ಭೀಷ್ಮರು ತಮ್ಮ ವಿಷಯದಲ್ಲಿಯೇ ಕೃಷ್ಣನ ಮೇಧಾಶಕ್ತಿ ಕೆಲಸ ಮಾಡಿದ್ದನ್ನು ಸ್ಮರಿಸಿಕೊಳ್ಳುವರು– ಪಾಂಡವರ ರಾಜಸೂಯಯಾಗದ ಪ್ರಸಂಗದಲ್ಲಿ ಕೃಷ್ಣನನ್ನು ತೆಗಳುತ್ತಿದ್ದ ಶಿಶುಪಾಲನನ್ನು ಚಚ್ಚಿಬಿಡ್ತೇನೆ ಎಂದು ಎದ್ದು ನಿಂತ ಭೀಮಸೇನನನ್ನು ಭೀಷ್ಮರು ತಡೆದು ಕುಳ್ಳಿರಿಸಿದರು. ಅದು ಕೃಷ್ಣನ ಕಣ್ಣಿಗೆ ಹೇಗೆ ಬಿತ್ತೋ? ಎಂದೋ ನಡೆದ ಭೀಷ್ಮರ ಆ ಅಪರಾಧವನ್ನು ಧಾರಣೆ ಮಾಡಿಕೊಂಡು ಆ ಅಪರಾಧಕ್ಕೆ ದಂಡನೆಯ ರೂಪದಲ್ಲಿ ಶ್ರೀಕೃಷ್ಣ ಭೀಷ್ಮರನ್ನು ಹತ್ತು ದಿನಗಳ ಯುದ್ಧದಲ್ಲಿ ಅರ್ಜುನಾದಿಗಳ ಮೂಲಕ ಚಚ್ಚಿ, ಶರಪಂಜರದಲ್ಲಿ ಬಿದ್ದುಕೊಳ್ಳುವಂತೆ ಮಾಡಿರುವನು. ಭೀಷ್ಮರ ಅಂತಹ ದುಃಸ್ಥಿತಿಗೆ ಬೇರೆ ಕಾರಣಗಳೂ ಇದ್ದಿರಬಹುದು. ಜೊತೆಗೆ ಇದೂ ಒಂದು ಕಾರಣ ಆಗಿಯೇ ತೀರುವುದು.ಭೀಷ್ಮರು ಕೃಷ್ಣನನ್ನು 'ಮೇಧಾವಿ' ಎಂದು ಸ್ತುತಿಸಿದಾಗ ಅವನ ಮೇಧಾಸಾಮರ್ಥ್ಯದ ವೈಭವಕ್ಕೆ ದೃಷ್ಟಾಂತವಾಗಿ ತನ್ನ ವಿಷಯದಲ್ಲೇ ನಡೆದಿರುವ ಈ ಸಂಗತಿಯನ್ನು ಅನುಸಂಧಾನಕ್ಕೆ ತಂದುಕೊಳ್ಳದೇ ಇರಲಾರರು.

ಕೃಷ್ಣ ರೂಪಕ್ಕೆ ಸಂಬಂಧಪಡುವ ಮತ್ತೊಂದು ಅರ್ಥ–' ಮೇ' ನನಗೆ, ನನ್ನನ್ನು ಕುರಿತು. 'ಧಾವೀ'–ಧಾವನ– ಓಡುವಿಕೆ ಉಳ್ಳವನು. ಅರ್ಜುನ ಮೆಲ್ಲನೆ ಯುದ್ಧ ಮಾಡುತ್ತಿದ್ದ. ಪಾಂಡವರ ಪಕ್ಷದಲ್ಲಿ ಭೀಷ್ಮರನ್ನು ಎದುರಿಸುವವರು ಯಾರೂ ಇಲ್ಲ. ಭೀಷ್ಮರ ಹೋರಾಟ ಭಾರಿ ಪ್ರಮಾಣದಲ್ಲಿ ನಡೆಯುತ್ತಿದೆ. ಕೃಷ್ಣ ತಕ್ಷಣ ರಥದಿಂದ

ಧುಮುಕಿದ: ಅಲ್ಲೇ ಬಿದ್ದಿದ್ದ ರಥದ ಚಕ್ರವನ್ನು ಹಿಡಿದುಕೊಂಡು ಭೀಷ್ಮರ ಎದುರು ಓಡುತ್ತಾ ಹೋದ. ಅದನ್ನು ನೆನಪಿನಲ್ಲಿಟ್ಟುಕೊಂಡಿರುವ ಭೀಷ್ಮರು ಎಲ್ಲವನ್ನೂ ಬಿಟ್ಟು ಅಂದರೆ ಕೈಯಲ್ಲಿ ಆಯುಧ ಹಿಡಿಯುವುದಿಲ್ಲ ಎಂಬ ತನ್ನ ಮಾತನ್ನೂ ಬಿಟ್ಟು 'ಮೇ' ನನಗಾಗಿ– ನನ್ನ ಮಾತನ್ನು ಉಳಿಸುವುದಕ್ಕಾಗಿ 'ಧಾವೀ'– ಧಾವಿಸಿಕೊಂಡು ಬಂದವ 'ಮೇಧಾವೀ'. ಎನ್ನನ್ನು ಕುರಿತು ಓಡೋಡಿ ಬಂದವನೇ ಎಂದು ಭೀಷ್ಮರು 'ಮೇಧಾವಿ' ನಾಮದ ಮೂಲಕ ಶ್ರೀಕೃಷ್ಣನ ಅನುಗ್ರಹವನ್ನು ಅನುಸಂಧಾನಕ್ಕೆ ತಂದುಕೊಂಡ ಕ್ರಮ.

ನಮ್ಮ ಪಾಲಿಗೂ ಆಪತ್ತು ಬಂದಾಗ 'ಮೇ' ಭಕ್ತನಾದ ನನಗಾಗಿ 'ಧಾವೀ' ಧಾವಿಸಿಬರುವವನು– ಎಂದು ಈ ಅರ್ಥದಲ್ಲಿ ನಾವೂ ಭಗವಂತನ ಅನುಗ್ರಹವನ್ನು ಅನುಸಂಧಾನ ಮಾಡಬಹುದು.

ಈ ಎರಡನೆಯ ಅರ್ಥ ಪಾಣಿನೀಯ ವ್ಯಾಕರಣದ ಚೌಕಟ್ಟಿನೊಳಗೆ ಸೇರುವುದೋ ಇಲ್ಲವೋ– ಅಂತೂ ಭಗವದನುಗ್ರಹದ ಅನುಸಂಧಾನಕ್ಕೆ ತುಂಬ ಉಪಯುಕ್ತವಾಗಬಲ್ಲದು.

**೭೯. ವಿಕ್ರಮಃ – ಲೋಕದ ಕ್ರಮಕ್ಕಿಂತ ವಿಪರೀತವಾದ ಕ್ರಮವುಳ್ಳವನು.**

**ವಿವರಣೆ :** ಹಿಂದೆ 'ವಿಕ್ರಮೀ' ಎನ್ನುವಲ್ಲಿ ಬೇರೆ ಅರ್ಥ ಕಂಡಿದ್ದೆವು. ಈಗ 'ವಿ' ಅಂದರೆ ವಿರುದ್ಧ; ಕ್ರಮವುಳ್ಳವನು. ಲೋಕದ ಕ್ರಮಕ್ಕಿಂತ ವಿರುದ್ಧವಾದ ಕ್ರಮವುಳ್ಳವನು. ಲೋಕದ ಕ್ರಮಕ್ಕಿಂತ ವಿರುದ್ಧವಾದ ಕ್ರಮವನ್ನು ತನ್ನಲ್ಲಿ ಅಳವಡಿಸಿಕೊಂಡಿರುವವನು. ಲೋಕದಲ್ಲಿಯ ಕ್ರಮ– ಚಿಕ್ಕವನು ದೊಡ್ಡವನಲ್ಲ, ದೊಡ್ಡವನು ಚಿಕ್ಕವನಲ್ಲ. ದೊಡ್ಡತನ ಹಾಗೂ ಚಿಕ್ಕತನ ಲೋಕದಲ್ಲಿ ಒಂದೇ ಕಡೆ ಕಾಣುತ್ತಿಲ್ಲ. ದೇವರಲ್ಲಿ ಉಂಟು. ದೇವರು ಅಣುವೂ ಹೌದು; ಮಹತ್ತೂ ಹೌದು. ಎಣ್ಣೆ ಇದ್ದಲ್ಲಿ ಸೀಗೆ ಇಲ್ಲ; ಸೀಗೆ ಇದ್ದಲ್ಲಿ ಎಣ್ಣೆ ಇಲ್ಲ. ರಾತ್ರಿ ಇದ್ದಲ್ಲಿ ಹಗಲು ಇಲ್ಲ; ಹಗಲು ಇದ್ದಲ್ಲಿ ರಾತ್ರಿ ಇಲ್ಲ. ಇದು ಲೋಕದ ಕ್ರಮ. ಆದರೆ ದೇವರು ಅಳವಡಿಸಿಕೊಂಡಿರುವ ಕ್ರಮ ಈ ಕ್ರಮಕ್ಕೆ ವಿರುದ್ಧವಾದದು. ಆಕಳು ಹುಲಿಗಳು ಪರಸ್ಪರ ವಿರುದ್ಧವಾದವು. ಆದರೆ ಅವೆರಡೂ ಒಂದೆಡೆ ಸೌಹಾರ್ದದಿಂದ ಸೇರಿದ್ದಾವೆ ಎಂದರೆ ಆ ಜಾಗ ಯಾರೋ ಋಷಿಯ ತಪೋಭೂಮಿ. ಅವನ ತಪಸ್ಸಿನ ಪ್ರಭಾವದಿಂದಾಗಿ ಅಂತಹ ಚಮತ್ಕಾರ ಅಲ್ಲಿ ನಡೆದಿದೆ ಎಂದು ಭಾವಿಸುವೆವು. ಆದರೆ ಅಲ್ಲಿಯೂ ಆ ಋಷಿಯಲ್ಲಿರುವ 'ವಿಕ್ರಮ' ಎನಿಸಿರುವ ಭಗವಂತನ ಪ್ರಭಾವದಿಂದಾಗಿಯೇ ಆ ವಿರುದ್ಧ ಪಶುಗಳು ಸ್ನೇಹದಿಂದ ಇರುವಂತಹದ್ದು.

ಹೀಗೆ ಲೋಕದ ಕ್ರಮ ಯಾವುದೂ ಭಗವಂತನಲ್ಲಿ ಲಗಾವು ಆಗುವುದಿಲ್ಲ. ಲೋಕದ ಕ್ರಮಕ್ಕೆ ವಿರುದ್ಧ ಕ್ರಮ ಅವನಲ್ಲಿ ಇರುವಂತಹದ್ದು. ಲೋಕದಲ್ಲಿ ಹೀಗೆ ಕ್ರಮ ಇದೆ. ಆದರೆ ನಿನ್ನ ಕ್ರಮ ಹೀಗೇಕೆ?– ಎಂದು ಯಾರಾದರೂ ಕೃಷ್ಣನಲ್ಲಿ ವಿಚಾರಿಸಿದರೆ 'ನಾನು ಲೋಕವಿಲಕ್ಷಣನಾದುದರಿಂದಲೇ ನನ್ನಲ್ಲಿ ಈ ಕ್ರಮ'– ಎಂಬ ಉತ್ತರ ಅವನಿಂದ ದೊರಕೀತು.

**೮೦. ಕ್ರಮಃ – ಲೋಕವಿಲಕ್ಷಣವಾದ ಕ್ರಮವನ್ನೇ ತನ್ನ ಜೀವನದ ಕ್ರಮವನ್ನಾಗಿ ಹೊಂದಿರುವವನು.**

**ವಿವರಣೆ :** ಭಗವಂತನದ್ದು ಲೋಕವಿಲಕ್ಷಣ ಕ್ರಮವಾದುದರಿಂದ 'ವಿಕ್ರಮ' ಎಂದಾದರೂ ಅದು 'ಅಕ್ರಮ' ಎಂದು ಮಾತ್ರ ಭಾವಿಸಬಾರದು. ಯಾಕೆಂದರೆ ಅದುವೇ ನಿಜವಾದ ಕ್ರಮ. 'ಅಣೋರಣೀಯಾನ್ ಮಹತೋ ಮಹೀಯಾನ್' ಎಂದಿರುವಂತೆ ಅವನು ಅಣುಗಿಂತಲೂ ಅಣು. ಯಾಕೆಂದರೆ ಅತ್ಯಂತ ಚಿಕ್ಕ ಅಣು– ಪರಮಾಣು ಎಂದಾದರೆ ಅದರ ಒಳಗೂ ಇರುವ ಪರಮಾತ್ಮ ಆ ಪರಮಾಣುವಿಗಿಂತಲೂ ಅಣು. ಅತ್ಯಂತ ಮಹತ್ತಾದ ವಸ್ತು ಆಕಾಶ. ಅದನ್ನೂ ಆವರಿಸಿ ಇರುವ ಭಗವಂತ ಅದಕ್ಕಿಂತಲೂ ಮಹತ್. ಆದ್ದರಿಂದ ಅವನನ್ನು ಚಿಕ್ಕವನು ಎನ್ನೋಣವೇ ಅವನು ದೊಡ್ಡವನು. ಅವನನ್ನು ದೊಡ್ಡವನು ಎನ್ನೋಣವೇ ಅವನು ಚಿಕ್ಕವನು. ಇದು ಲೋಕದಲ್ಲಿ ಇಲ್ಲದ ಕ್ರಮವೇನೋ ಹೌದು. ಆದರೆ ದೇವರಲ್ಲಿ ಇರುವ ಕ್ರಮ– ಇದುವೇ ನಿಜವಾದ ಕ್ರಮ. ಹೀಗೆ ಲೋಕದಲ್ಲಿ ವಿಪರೀತವಾಗಿ ಕಾಣಿಸುವ ಕ್ರಮವೇ ಭಗವಂತನ ಜೀವನದ ಕ್ರಮ. 'ವಿಕ್ರಮ: ಕ್ರಮ:' ಎಂಬ ಎರಡು ನಾಮಗಳು ಜೊತೆ ಜೊತೆಯಾಗಿದ್ದು ಭಗವಂತನ ಈ ಬಗೆಯ ಜೀವನ ಕ್ರಮದ ಬಗ್ಗೆ ಬೆಳಕು ಚೆಲ್ಲುವವು.

**೮೧. ಅನುತ್ತಮಃ – ಯಾರಿಗಿಂತ ಉತ್ತಮ ಇನ್ನೊಬ್ಬನಿಲ್ಲವೋ ಅಂತಹವನು.**
**ವಿವರಣೆ :** ಶ್ರೀ ಮಧ್ವರು ನರಸಿಂಹನನ್ನು ನೋಡಿ ಒಂದು ಮಾತು ಅಂದರು. ನಿನಗೆ ಸಾಟಿಯಾಗುವ ವ್ಯಕ್ತಿ ಇಲ್ಲ, ಸಾಟಿಯಾಗುವ ವ್ಯಕ್ತಿಯೇ ಇಲ್ಲಾಂದ ಮೇಲೆ ನಿನಗಿಂತ ಉತ್ತಮ ವ್ಯಕ್ತಿ ಇಲ್ಲ ಎಂದು ಪ್ರತ್ಯೇಕವಾಗಿ ಹೇಳಬೇಕಾ ? ಆ ಸಂದರ್ಭದಲ್ಲಿ ಅವರೊಂದು ಉದಾಹರಣೆ ಕೊಡ್ತಾರೆ – ರಸಗಳು ಆರು. ಏಳನೇ ರಸವೇ ಇಲ್ಲ ಎಂದ ಮೇಲೆ ಎಂಟನೆ ರಸ ಇಲ್ಲ. ಎಂದು ಸುತರಾಂ ಸಿದ್ಧವಾಗುವುದು. **'ಅಪಾಸ್ತಂ ರಸೋ ಯೋಽಷ್ಟಮಃ'** ಅವರದ್ದೇ ಮಾತು. ಎಂಟನೇ ರಸ ಹೇಳ ಹೆಸರಿಲ್ಲದೆ ಹೋಗಿಬಿಟ್ಟಿದೆಯಂತೆ. ಏಳನೆಯದ್ದೇ ಇಲ್ಲಾಂತೆ, ನನಗೆ ಹೇಗೆ ಜಾಗ ಸಿಕ್ಕೀತೆಂದು ಅದು ಇಲ್ಲವೇ ಇಲ್ಲ – ಎಂದು ಹೇಳಿರುವರು.

ಭಗವಂತ ಎಂದರೆ ಅವನು ದೊಡ್ಡವ ಎಂದಷ್ಟೇ ತಿಳಿದುಕೊಳ್ಳುವುದು ಅಲ್ಲ. ನಿನ್ನಕ್ಕಿಂತ ದೊಡ್ಡವರು ಇಲ್ಲ ಎಂದು ತಿಳ್ಕೊಂಡಾಗಲೇ ದೇವರನ್ನು ಸರಿಯಾಗಿ ತಿಳ್ಕೊಂಡಂತೆ ಆಗುವುದು. ನಿನ್ನಗಿಂತ ಉತ್ತಮರು ಇಲ್ಲ ಎಂದಷ್ಟೇ ಹೇಳಿದಲ್ಲಿ ನಿನಗೆ ಸಾಟಿಯಾಗುವವರಾದರೂ ಇದ್ದಾರೆಯೇ ಎಂಬ ಪ್ರಶ್ನೆ ಬಂದೇ ಬರುವುದು. ಅದಕ್ಕಾಗಿ ನಿನಗೆ ಸಾಟಿಯಾದವರೂ ಇಲ್ಲ, ನಿನಗಿಂತ ಉತ್ತಮರೂ ಇಲ್ಲ, ಎಂದು ಹೇಳಬೇಕಾಗುವುದು.

ಯಾರಿಗಿಂತ ಉತ್ತಮವಾದ ಜಡವಾಗಲೀ, ಚೇತನವಾಗಲೀ ಇನ್ನೊಂದು ಇಲ್ಲವೋ ಅಂತಹವನು 'ಅನುತ್ತಮ'. ಉತ್ತಮವಾದ ಚೇತನವೇ ಇಲ್ಲಾಂದ ಮೇಲೆ ಜಡವೂ ಇಲ್ಲ ಎಂದು ಸಿದ್ಧಿಸುವುದು.

ಕೃಷ್ಣನನ್ನು ಎದುರಿಗೆ ಕುಳ್ಳಿರಿಸಿಕೊಂಡು ಭೀಷ್ಮರು ಹೇಳ್ತಾರೆ – ನಿನಗಿಂತ ಉತ್ತಮ ಇನ್ನೊಬ್ಬನಿರುತ್ತಿದ್ದರೆ ಅವನನ್ನೇ ಇಲ್ಲಿ ಕುಳ್ಳಿರಿಸಿಕೊಂಡು ಧರ್ಮೋಪದೇಶ ನೀಡುತ್ತಿದ್ದೆ. ಆದರೆ ನೀನು 'ಅನುತ್ತಮ'– ನಿನಗಿಂತ ಉತ್ತಮ ಮತ್ತೊಬ್ಬನಿಲ್ಲ. ಆದ್ದರಿಂದ ನಿನ್ನನ್ನೇ ಎದುರಿಗೆ ಕುಳ್ಳಿರಿಸಿಕೊಂಡಿರುವೆನು. ದೇವರನ್ನು ಉತ್ತಮನಾದವನು ಎಂದು ತಿಳಿದರೆ ಸಾಲದು, ಅನುತ್ತಮನಾಗಿರುವವನು ಅಂದರೆ ಯಾರಿಗಿಂತ ಉತ್ತಮ ಮತ್ತೊಬ್ಬನಿಲ್ಲವೋ ಅಂತಹವನು ಎಂದೇ ಉಪಾಸನೆ ಮಾಡಬೇಕು – ಎಂದು 'ಅನುತ್ತಮ' ನಾಮದಿಂದ ಸೂಚನೆ ದೊರಕುವುದು.

**೮೨. ದುರಾಧರ್ಷಃ – ಯಾರ ಬಲಾತ್ಕಾರಕ್ಕೂ ಒಳಗಾಗುವವನಲ್ಲ.**

ವಿವರಣೆ : ಧರ್ಷ ಅಂದರೆ ಧರ್ಷಣ, ಬಲಾತ್ಕಾರ. ದೇವರು ಎಲ್ಲೂ ಬಲಾತ್ಕಾರಕ್ಕೆ ಒಳಗಾಗುವವನಲ್ಲ. ನಾನು ದೇವರನ್ನು ಕರೆಸಿಯೇ ಸಿದ್ಧ ಎಂದೇನೂ ಯಾರೂ ಶಪಥಗಿಪಥ ಮಾಡುವಂತಿಲ್ಲ. ಅವನಿಗೆ ಖುಷಿಯಾದರೆ ಬರುವನಷ್ಟೇ. ಎಂತಹ ದೊಡ್ಡ ದೊಡ್ಡ ಭಕ್ತನೂ ಕೂಡಾ 'ನಾನು ದೇವರನ್ನು ಕಂಡೇ ಸಿದ್ಧ'– ಎಂದು ಛಲ ತೊಟ್ಟರೆ ದೇವರು ಅವನಿಗೆ ಕಾಣಿಸಿಕೊಳ್ಳುವುದೇ ಇಲ್ಲ. ದೇವರು ಅಂತಾನಂತೆ – ನಾನು ನಿನಗೆ ದರ್ಶನ ಕೊಡಬೇಕು ಎಂದು ನನಗೆ ತೋರಬೇಕು. ಬರೇ ನಿನಗೆ ತೋರಿದರೆ ಸಾಲದು. ನಮಗೂ ದೇವರು ಕಾಣಬೇಕು ಎಂದು ತೋರುತ್ತದೆ. ಆದರೆ ದೇವರಿಗೆ ಇವರೆದುರು ನಾನು ಕಾಣಿಸಿಕೊಳ್ಳಬೇಕೆಂದು ತೋರದಿರುವುದರಿಂದ ನಮಗೆ ದೇವರ ದರ್ಶನ ಆಗುವುದಿಲ್ಲ.

ಭೀಷ್ಮರು ಕೃಷ್ಣನಲ್ಲಿ ನಿವೇದಿಸಿ ಕೊಳ್ತಾರೆ – ದುರ್ಯೋಧನ ತನ್ನ ತೊಂಭತ್ತೊಂಭತ್ತು ತಮ್ಮಂದಿರಿಂದ ಕೂಡಿಕೊಂಡು ನಿನ್ನನ್ನು ಕಟ್ಟಿಹಾಕಬೇಕೆಂದು ಬಲಾತ್ಕರಿಸಿದರೆ, ಅದಕ್ಕೆ ಒಳಗಾಗದವನು ನೀನು. ದುರ್ಯೋಧನ ಸಭೆಯಲ್ಲಿ ಕಟ್ಟಿಹಾಕುವ ಸಂಚು ಹೂಡಿರುವನು. ಆದುದರಿಂದ ಸಭೆಗೆ ಹೋಗುವುದೇ ಬೇಡ ಎಂದು ಭಕ್ತ ವಿದುರ ಒತ್ತಾಯಿಸಿದರೂ ಕೃಷ್ಣ ಆ ಒತ್ತಾಯಕ್ಕೆ ಮಣಿಯದೆ ಸಭೆಗೆ ಹೊರಟು ಹೋಗಿದ್ದನು. ಅಂದರೆ ದುಷ್ಟರ ಬಲಾತ್ಕಾರಕ್ಕೂ ಒಳಗಾಗುವವನಲ್ಲ, ಭಕ್ತರ ಬಲಾತ್ಕಾರಕ್ಕೂ ಒಳಗಾಗವವನಲ್ಲ.

ಹಾಗಂತ 'ಅಧರ್ಷ' ಬಲಾತ್ಕಾರಕ್ಕೆ ಒಳಗಾಗುವವನೇ ಅಲ್ಲ ಎಂದೇನೂ

ಹೇಳುವಂತಿಲ್ಲ. ಮತ್ತೆ 'ದುರಾಧರ್ಷಃ' ತುಂಬ ಪರಿಶ್ರಮ ಪಟ್ಟರಷ್ಟೇ ನಮ್ಮ ಬಲಾತ್ಕಾರಕ್ಕೆ ಜಗ್ಗುವವನು.

ಭೀಷ್ಮರು ಕೃಷ್ಣನ ದುರಾಧರ್ಷತ್ವ ಗುಣದ ಆ ಅಂಶವನ್ನು ಅನುಭವಿಸಿರುವರು. ಕೃಷ್ಣ ಮಹಾಭಾರತಯುದ್ಧದಲ್ಲಿ ಆಯುಧ ಹಿಡಿಯುವುದಿಲ್ಲ ಎಂದಿದ್ದ. ಭೀಷ್ಮರು ಅದ್ಹೇಗೆ ಹಿಡಿಯುವುದಿಲ್ಲ ನೋಡ್ತೇನೆ. ನಾನು ನಿನ್ನಿಂದ ಆಯುಧ ಹಿಡಿಸಿಯೇ ತೀರುವೆನು ಎಂದರು. ಕೃಷ್ಣ ದ್ವಾರಕೆಯಲ್ಲಿ ಅಂದದ್ದು. ಭೀಷ್ಮರು ಶಪಥ ಮಾಡಿದ್ದು ಹಸ್ತಿನಾಪುರದಲ್ಲಿ, ದುರ್ಯೋಧನನ ಮನೆಯಲ್ಲಿ. ಕೃಷ್ಣ ಆಯುಧವನ್ನು ಹಿಡಿದೇ ಬಿಟ್ಟ. ಹಾಗಾದರೆ ದೇವರು ಬಲತ್ಕಾರಕ್ಕೆ ಬಗ್ಗುವುದಿಲ್ಲವೋ ಬಗ್ಗುವನು. ಬಗ್ಗುತ್ತಾನೋ, ಇಲ್ಲ. ಅದಕ್ಕೆ ಅವನು 'ದುರಾಧರ್ಷ'. ಬಲಾತ್ಕಾರಕ್ಕೆ ಬಗ್ಗುತ್ತಾನೋ, ಇಲ್ಲ. ಬಗ್ಗುವುದಿಲ್ಲವೋ, ಬಗ್ಗುತ್ತಾನೆ. ಹಾಗಾದರೆ ದೇವರು ಬಲಾತ್ಕಾರಕ್ಕೆ ಬಗ್ಗುವನೋ, ಬಗ್ಗದವನೋ ಗೊತ್ತಿಲ್ಲ ಎನ್ನುವುದೇ 'ದುರಾಧರ್ಷ' ನಾಮದ ಅರ್ಥ. ತನಗೆ ಮನಸ್ಸು ಬಂದರೆ ಬಲಾತ್ಕಾರಕ್ಕೆ ಬಗ್ಗುವನು, ತನಗೆ ಮನಸ್ಸು ಬಂದಿಲ್ಲಾಂದರೆ ಯಾರ ಬಲಾತ್ಕಾರಕ್ಕೂ ಬಗ್ಗುವವನಲ್ಲ ಎಂಬುದು 'ದುರಾಧರ್ಷ' ನಾಮದ ಆಂತರ್ಯ.

**೮೩. ಕೃತಜ್ಞಃ – ಪ್ರತಿಯೊಬ್ಬರು ಮಾಡುವ ಒಳ್ಳೆಯ ಅಥವಾ ಕೆಟ್ಟ ಕರ್ಮವನ್ನು ತಿಳಿದಿರುವವನು.**

**ವಿವರಣೆ :** ಮಾಡಿದ ಉಪಕಾರವನ್ನು ಮರೆಯುವಿಕೆ ಕೃತಘ್ನತೆ ಎನಿಸಿದರೆ, ಮಾಡಿದ ಉಪಕಾರವನ್ನು ನೆನೆಸುವಿಕೆ ಕೃತಜ್ಞತೆ ಎನಿಸುವುದು.

ದೇವರು ಮಾತ್ರ ಪ್ರತಿಯೊಬ್ಬರಿಂದಲೂ 'ಕೃತ' ಮಾಡಲ್ಪಡುವ ಒಳ್ಳೆಯ ಹಾಗೂ ಕೆಟ್ಟ ಕರ್ಮಗಳನ್ನಲ್ಲ 'ಜ್ಞ' ತಿಳಿದಿರುವುದರಿಂದ – 'ಕೃತಜ್ಞ'

ಭೀಷ್ಮರು ಕೃಷ್ಣನಲ್ಲಿ ನಿವೇದಿಸಿ ಕೊಳ್ತಾರೆ – ಕೃಷ್ಣ ದ್ವಾರಕೆಯಲ್ಲಿದ್ದ ನಿನಗೆ ಹಸ್ತಿನಾಪುರದ ದುರ್ಯೋಧನನ ಮನೆಯಲ್ಲಿ ನಾನು ಹೇಗೆ ಇದ್ದೆ ಎನ್ನುವುದು ನಿನಗೆ ಗೊತ್ತು. ದುರ್ಯೋಧನನ ಅನ್ನವುಂಡು, ಪಾಂಡವರ ವಿರುದ್ಧವಾಗಿ ಹೋರಾಡಿದ ಬಗ್ಗೆ, ನಿನ್ನ ವಿರುದ್ಧ ನಡೆದುಕೊಂಡ ಬಗ್ಗೆ ನನಗೆ ತುಂಬ 'ಕಸಿವಿಸಿ' ಇದೆ. ದುರ್ಯೋಧನನ ಪಕ್ಷದಲ್ಲಿ ನಾನೇನೂ ಮನಃಪೂರ್ವಕವಾಗಿ ಕಾದಾಡಿದ್ದಲ್ಲ ಎಂದು ನನ್ನ ಬಗ್ಗೆ 'ಕೃತಜ್ಞ'ನಾಗಿ ಸಾಯುವ ಕಾಲದಲ್ಲಿ ನನ್ನನ್ನು ಅನುಗ್ರಹಿಸಲು ಬಂದಿ ತಾನೇ ?

ಭೀಷ್ಮರು ಹೀಗೆ 'ಕೃತಜ್ಞ' ನಾಮಾರೂಢವಾಗಿ ತಮ್ಮ ಅನುಭವವನ್ನು

ತೆರೆದಿಡುವಂತೆ ಪ್ರತಿಯೊಬ್ಬರೂ ತಮ್ಮ ತಮ್ಮ ಅನುಭವವನ್ನು ಸಹಸ್ರನಾಮದ ಮೂಲಕ ದೇವರೆದುರು ಹೀಗೆಯೇ ತೆರೆದಿಡಬೇಕು. ಅವರು ತಮ್ಮ ಅನುಭವ ಕೊಟ್ಟರೆ ನಾವು ನಮ್ಮ ಅನುಭವವನ್ನು ಸೇರಿಸಬೇಕು.

ಯಾರಿಗೋ ಭಗವದ್‌ಭಕ್ತನಿಗೆ ಬೈದೆವು. ತನ್ನ ಭಕ್ತನನ್ನು ಬೈದರೆ ಭಗವಂತನಿಗೆ ಮಹಾ ಅಸಮಾಧಾನ. ಈ ಅಪರಾಧದ ಪರಿಹಾರಕ್ಕಾಗಿ ವಿಷ್ಣು ಸಹಸ್ರ ನಾಮದ ಪಾರಾಯಣ ಮಾಡು ಎಂದರು ಹಿರಿಯರು. ವಿಷ್ಣು ಸಹಸ್ರನಾಮ ಪಾರಾಯಣ ಮಾಡುತ್ತ 'ನಾನು ಆ ವ್ಯಕ್ತಿಗೆ ಬೈದದ್ದೇನೂ ನಿಜ. ಆದರೆ ಅವನು ನಿನ್ನ ಭಕ್ತನೆಂದು ತಿಳಿಯದೆ ಬೈದೆ. ಮನಃ ಪೂರ್ವಕವಾಗಿ ಬೈದಿಲ್ಲ' ಇದನ್ನು ನೀನು ಖಂಡಿತಾ ತಿಳಿದಿರುವಿ ಎಂಬುದನ್ನು 'ಕೃತಜ್ಞ' ನಾಮಾರೂಢವಾಗಿ ಅನುಸಂಧಾನಕ್ಕೆ ತಂದುಕೊಳ್ಳಬೇಕು.

ಪ್ರತಿಯೊಬ್ಬರೂ ಏನು ಒಳ್ಳೆಯದನ್ನು ಮಾಡಿದ್ದಾರೆ, ಏನು ಕೆಟ್ಟದ್ದನ್ನು ಮಾಡಿದ್ದಾರೆ, ಹೇಗೆ ಒಳ್ಳೆಯದನ್ನು ಮಾಡಿದ್ದಾರೆ, ಹೇಗೆ ಕೆಟ್ಟದ್ದನ್ನು ಮಾಡಿದ್ದಾರೆ? ಅವರೇ ಮಾಡಿದ್ದೆ ? ಅವರ ಮೂಲಕ ಆದದ್ದೊ ? ಅವರ ಮೂಲಕ ಆದದ್ದಾಗಿದ್ದರೆ ಅದರಲ್ಲಿ ಅವರ ಪಾಲುಗಾರಿಕೆ ಎಷ್ಟು ಪ್ರಮಾಣದಲ್ಲಿ ? ಇವನ್ನೆಲ್ಲ 'ಕೃತಜ್ಞ' ನಾಮಕ ಭಗವಂತನು ತಿಳಿದಿರುವನು.

೮೪. ಕೃತಿಃ – ಪ್ರಯತ್ನ ಸ್ವರೂಪಿ.

ವಿವರಣೆ : ಕೃತಿ ಅಂದರೆ ಗ್ರಂಥ ಎಂದು ತಿಳಿದಿರುವೆವು. ಆದರೆ ನಿಜವಾಗಿ ಕೃತಿ ಎಂದರೆ ಗ್ರಂಥರಚನೆಗಾಗಿ ಮಾಡುವ ಪ್ರಯತ್ನ. ದೇವರು ಕೃತಿ ಅಂದರೆ ಪ್ರಯತ್ನ. ಪ್ರಯತ್ನವುಳ್ಳವನು ಎಂದಲ್ಲ, ಪ್ರಯತ್ನ ಮಾಡುವವನು ಎಂದಲ್ಲ, ದೇವರೇ ಯತ್ನ. ಆದುದರಿಂದಲೇ ಏನನ್ನಾದರೂ ಮಾಡಬೇಕು ಎಂದಾಗ 'ನೋಡೋಣ, ಪ್ರಯತ್ನ ಮಾಡ್ತೇನೆ'– ಎಂದು ಉತ್ತರಿಸುವ ಪದ್ಧತಿ ನಮ್ಮಲ್ಲಿ ಬಂದಿದೆ. ಅದಕ್ಕೆ 'ನಾನು ಯತ್ನಿಸುವೆನು'– ಎಂಬ ಆಶಯಕ್ಕಿಂತಲೂ ಯತ್ನಸ್ವರೂಪಿಯಾದ ಭಗವಂತ ಹೇಗೆ ಪ್ರೇರಿಸುವನೋ ಹಾಗೆ ನಡೆದುಕೊಳ್ಳುವೆನು ಎಂಬ ಅಭಿಪ್ರಾಯವೇ ಮುಖ್ಯ.

ಭೀಷ್ಮರು ಕೃಷ್ಣನಲ್ಲಿ ಹೇಳುವರು – ಕೃಷ್ಣ, ಪ್ರತಿಯೊಂದು ವಿಷಯದಲ್ಲೂ ನೀನು ಪ್ರಯತ್ನ ಮಾಡಿಕೊಂಡು ಬಂದವನು. ಪಾಂಡವರ ಉತ್ಪತ್ತಿಯನ್ನು ಆರಂಭಿಸಿಕೊಂಡು ನಾನು ಬೀಳುವ ತನಕ. ಇದಕ್ಕಿಂತ ಹಿಂದೆಯೂ, ಮುಂದೆಯೂ ಭೀಷ್ಮರ ಬದುಕು ಇದೆಯಾದರೂ ಭೀಷ್ಮರು ಬದುಕಿನ ಆ ಭಾಗವನ್ನು

ಪರಾಮರ್ಶಿಸುವುದಿಲ್ಲ. ಪಾಂಡವರ ಸಂಬಂಧಕ್ಕೊಳಗಾಗುವ ತಮ್ಮ ಬದುಕಷ್ಟೇ ಶ್ರೀ ಕೃಷ್ಣನಿಗೆ ಪ್ರಿಯವಾದುದೆಂದು ಅವರ ಸಂಬಂಧಕ್ಕೊಳಗಾದ ತಮ್ಮ ಬದುಕಿನ ಭಾಗವನ್ನಷ್ಟೇ ಉಲ್ಲೇಖಿಸುವರು. ಅರಣ್ಯದಲ್ಲಿ ಪಾಂಡವರು ಬದುಕಿದ್ದು ಕೃಷ್ಣನ ಪ್ರಯತ್ನದಿಂದ, ಶರಪಂಜರದಲ್ಲಿ ಮಲಗಿರುವ ನಾನು ಬದುಕಿರುವುದು ನಿನ್ನ ಯತ್ನದಿಂದ. ನೀನು ಯತ್ನದ ರೂಪದಿಂದ ಬಂದು ಆಯಾ ಘಟನೆಯನ್ನು ಸಂಘಟಿಸುವಿ.

ಯಾವುದೇ ಕೆಲಸ ಮಾಡಬೇಕೆಂದರೆ ನಮ್ಮಲ್ಲಿ ಔದಾಸೀನ್ಯ ಇರಬಾರದು. ನಾವು ಆ ಬಗ್ಗೆ ಯತ್ನಶೀಲರಾಗಬೇಕು. ಕೃತಿನಾಮಕ ಭಗವಂತನು ನಮ್ಮಲ್ಲಿ ಅನುಗ್ರಹೋನ್ಮುಖನಾಗಿ ಇದ್ದನೆಂದರೆ ನಮ್ಮ ಮೂಲಕ ಚೆನ್ನಾಗಿ ಯತ್ನ ನಡೆಯುವುದು.

**೭೫. ಆತ್ಮವಾನ್ – * ಶರೀರವುಳ್ಳವನು.**

*** ಹೃದಯ ವೈಶಾಲ್ಯವುಳ್ಳವನು.**

**ವಿವರಣೆ :** ಆತ್ಮ ಶಬ್ದಕ್ಕೆ ಅನೇಕ ಅರ್ಥಗಳುಂಟು. ಆತ್ಮ ಎಂದರೆ ಶರೀರ. ಆತ್ಮ ಎಂದರೆ ಜೀವ. ಆತ್ಮ ಎಂದರೆ ಪರಮಾತ್ಮ. ಹೀಗೆ ಆತ್ಮಶಬ್ದಕ್ಕೆ ಅನೇಕಾರ್ಥಗಳಿವೆ. ಶರೀರವನ್ನು ಆತ್ಮ ಎಂದು ಯಾಕೆ ಕರೆದರು ? 'ಆದತ್ತೇ ಇತಿ ಆತ್ಮಾ' ಸ್ವೀಕರಿಸುವುದು. ಏನನ್ನು ಸ್ವೀಕರಿಸುವುದು ? ಊಟ, ತಿಂಡಿ, ತೀರ್ಥ, ಬೈಗಳು, ನಿದ್ದೆ...... ಹೀಗೆ ಏನು ಕೊಟ್ಟರೂ ಶರೀರ ಸ್ವೀಕರಿಸುವುದರಿಂದ ಆತ್ಮಾ ಎನಿಸಿದೆ.

ಹಾಗೆಯೇ ಜೀವನೂ ಆತ್ಮಾ. ಯಾಕೆ ? ಎಷ್ಟು ವಿಷಯ ಪದಾರ್ಥಗಳನ್ನು ಕೊಟ್ಟರೂ ಇನ್ನೂ ಬೇಕು, ಮತ್ತೂ ಬೇಕೂ ಎಂದು ಸ್ವೀಕರಿಸುತ್ತಿರುತ್ತಾನೆ. ಹಾಗೆಯೇ ಆಯಾ ಜೀವರಿಗೆ ಪಸಂದ ಆಗುವ ವಿಷಯವನ್ನು ಹೇಳಿದರೆ ಅದನ್ನು ಮತ್ತೂ ಮತ್ತೂ ಸ್ವೀಕರಿಸುತ್ತಿರುತ್ತಾರೆ. ಆದುದರಿಂದ ಶರೀರದೊಳಗಿರುವ ಚೇತನನೂ ಆತ್ಮಾ.

ಆತ್ಮಾ ಎಂದರೆ ಶರೀರ ಎಂದಿಟ್ಟುಕೊಂಡು ಪರಮಾತ್ಮನನ್ನು 'ಆತ್ಮವಾನ್' ಶರೀರವುಳ್ಳವನು ಎಂದು ಕರೆಯಲಾಗಿದೆ. ಕೆಲವು ವಾದಿಗಳು ದೇವರನ್ನು 'ನಿರಾಕಾರ' ಶರೀರವೇ ಇಲ್ಲದವನು ಎಂದು ಕರೆದರು. ಅದನ್ನು ನಿರಾಕರಿಸುವುದಕ್ಕಾಗಿ ಭೀಷ್ಮರು 'ಆತ್ಮವಾನ್'– ಎಂದು ದೇವರನ್ನು ಸ್ತುತಿಸಿರುವರು.

ಒಂದು ವಸ್ತುವನ್ನು ಚೆಂದ ಎಂದು ಕರೆಯಬೇಕಾದರೆ ಅದಕ್ಕೆ ರೂಪ ಇದೆ. ಆಕಾರ ಇದೆ ಎಂದು ಒಪ್ಪಿಕೊಳ್ಳಲೇಬೇಕು. 'ಗಾಳಿ ತುಂಬ ಸುಂದರವಾಗಿದೆ' 'ಆಕಾಶ

ತುಂಬ ಸಂದರವಾಗಿದೆ ' ಎಂದು ಯಾರೂ ಹೇಳುವುದಿಲ್ಲ. ಯಾಕೆಂದರೆ ಅವು ನಿರಾಕಾರ ವಸ್ತುಗಳು. ಹಾಗಾದರೆ ಕೆಲವು ಆಚಾರ್ಯರು ಹೇಳುವಂತೆ ದೇವರಿಗೆ ಆಕಾರ ಇಲ್ಲ ಎಂದಲ್ಲಿ ದೇವರಿಗೆ ಸೌಂದರ್ಯ ಇಲ್ಲ ಎಂದೇ ಹೇಳಿದಂತಾಗುವುದು. ಅದಕ್ಕಾಗಿ ದೇವರನ್ನು 'ಆತ್ಮವಾನ್' ಶರೀರವುಳ್ಳವನೆಂದು ಸ್ತುತಿಸಲಾಗಿದೆ.

ಯಾವ ಶರೀರವನ್ನು ಹೊಂದಿದರೆ ಸಾಧನೆಯನ್ನು ನಡೆಸಲಾಗುವುದೋ ಅಂತಹ ಶರೀರವನ್ನು ಹೊಂದಿದವನನ್ನಷ್ಟೇ ಶರೀರವುಳ್ಳವನನ್ನಾಗಿ ಪರಿಗಣಿಸಲಾಗುವುದು. ಹೀಗೆ ದೇವರನ್ನು 'ಆತ್ಮವಾನ್' ಎಂದು ಉಪಾಸನೆ ನಡೆಸಿದರೆ ಮುಂದಿನ ಜನ್ಮದಲ್ಲೂ ಇಂತಹ ಶರೀರವನ್ನು ಅನುಗ್ರಹಿಸುವನು.

ಆತ್ಮಶಬ್ದಕ್ಕೆ ಮನಸ್ಸು, ಹೃದಯ ಎಂಬ ಅರ್ಥವೂ ಇದೆ. ಈ ಅರ್ಥವನ್ನಿಟ್ಟುಕೊಂಡು ಭೀಷ್ಮರು ಎದುರಿಗಿರುವ ಕೃಷ್ಣನನ್ನು ಹೀಗೆ ಸ್ತುತಿಸುವರು– ನೀನು 'ಆತ್ಮವಾನ್'– ಭಾರೀ ಹೃದಯವಂತಿಕೆವುಳ್ಳವನು. ಮಕ್ಕಳು ಹೇಳುವ ವಿಷಯಗಳನ್ನು ಹಿರಿಯರು ಆಗಾಗಲೇ ತಿಳಿದುಕೊಂಡಿದ್ದರೂ, ತಾಳ್ಮೆಯಿಂದ ಮಕ್ಕಳು ಹೇಳುವುದನ್ನು ಕೇಳುತ್ತಿರುವರೆಂದರೆ 'ಅವರ ಹೃದಯ ವೈಶ್ಯಾಲ್ಯ'– ಎಂದು ಸ್ತುತಿಸಲಾಗುವುದು. ಅಂತೆ ಭೀಷ್ಮರು ಯುಧಿಷ್ಠಿರಾದಿಗಳಿಗೆ ಉಪದೇಶಿಸುತ್ತಿರುವುದನ್ನು ಆಗಾಗಲೇ ತಿಳಿದುಕೊಂಡಿರುವ ಕೃಷ್ಣನಿಗೆ ಪುನಃ ಭೀಷ್ಮೋಪದೇಶವನ್ನು ಕೇಳುವ ಅವಶ್ಯಕತೆ ಇಲ್ಲ. 'ನೀವೇ ಕೇಳಿ ಬನ್ನಿ' ಎಂದು ಪಾಂಡವರನ್ನು ಕಳುಹಿಸಿಕೊಡಬಹುದಿತ್ತು. ಆದರೆ ಶ್ರೀ ಕೃಷ್ಣ ಹಾಗೆ ಮಾಡದೆ ತಾನೂ **'ಮಲಗಿ ಪರಮಾದರದಿ ಪಾಡಲು ಕುಳಿತು ಕೇಳುವ.....'** ಎಂದಿರುವಂತೆ ತಾಳ್ಮೆಯಿಂದ ಭೀಷ್ಮರ ಉಪದೇಶವನ್ನು ಕೇಳುತ್ತಿರುವನು. ಆ ನಿಟ್ಟಿನಲ್ಲಿ ಶ್ರೀಕೃಷ್ಣನ ಹೃದಯ ವೈಶಾಲ್ಯವನ್ನು ಅನುಭವಿಸುತ್ತಿರುವ ಭೀಷ್ಮರು ಅದರ ಹಿನ್ನೆಲೆಯಲ್ಲೇ ಸ್ತುತಿಸಿರುವರು– 'ಆತ್ಮವಾನ್'.

**ಸುರೇಶಃ ಶರಣಂ ಶರ್ಮ ವಿಶ್ವರೇತಾಃ ಪ್ರಜಾಭವಃ ।**
**ಅಹಃ ಸಂವತ್ಸರೋ ವ್ಯಾಲಃ ಪ್ರತ್ಯಯಃ ಸರ್ವದರ್ಶನಃ ॥೧೦ ॥**

**೮೬. ಸುರೇಶಃ – ಚೆನ್ನಾಗಿ ಸುಖಪಡುವ ದೇವತೆಗಳಿಗೆ ಒಡೆಯ.**

**ವಿವರಣೆ :** ಸುರ+ಈಶ ಸುರೇಶ. ಸುರ ಎಂದರೆ ದೇವತೆಗಳು. ಈಶ ಎಂದರೆ ಒಡೆಯ. ದೇವತೆಗಳಿಗೆ ಒಡೆಯ.

ದೇವತೆಗಳಿಗೆ ಸುರ ಎಂಬ ಹೆಸರು ಯಾಕೆ? ಸು–ಎಂದರೆ ಚೆನ್ನಾಗಿ 'ರ' ಎಂದರೆ ರತಿ, ಸುಖಪಡುವವರು. ಅವರಿಗೆ ದೇವರ ವಿಷಯವನ್ನು ಕೊಟ್ಟರೆ ಅದನ್ನು ಪೂರ್ಣವಾಗಿ

ಆಸ್ವಾದಿಸುವರು. 'ಸುಷ್ಠು ರಮಂತೇ ಇತಿ ಸುರಾಃ' ದೇವರನ್ನು ನೋಡಿ ಅಥವಾ ದೇವರ ವಿಷಯ ಕೇಳಿ ಚೆನ್ನಾಗಿ ಆನಂದಪಡುವವರು.

ದೇವತೆಗಳಿಗೆ 'ಅನಿಮಿಷ'ಎಂಬ ಮತ್ತೊಂದು ಹೆಸರು ಇದೆ. ರೆಪ್ಪೆ ಮುಚ್ಚದವರು ಎಂದು ಅರ್ಥ. ಯಾಕೆ ರೆಪ್ಪೆ ಮುಚ್ಚುವುದಿಲ್ಲ? ರೆಪ್ಪೆ ಮುಚ್ಚಿದ್ದಲ್ಲಿ ಮುಂದೆ ಇರುವ ದೇವರು ಎಲ್ಲಾದರೂ ಅದೃಶ್ಯನಾಗಿ ಬಿಟ್ಟಾನು! ಹಾಗಾಗಬಾರದೆಂದು ಯಾವಾಗಲೂ ಕಣ್ಣು ತೆರೆದೇ ದೇವರನ್ನು ನೋಡುತ್ತಿರುವರು. ನಮಗಾದರೂ ಸುಸ್ತಾಗುವುದರಿಂದ ಕಣ್ಣು ರೆಪ್ಪೆಯನ್ನು ಆಗಾಗ್ಗೆ ಮುಚ್ಚುತ್ತಿರುತ್ತೇವೆ. ದೇವತೆಗಳಿಗೆ ಪರಮಾತ್ಮನನ್ನು ಕಂಡು ಸುಸ್ತಾಗುವುದೆಂದೇ ಇಲ್ಲ. ಆದುದರಿಂದ ಅವರು ಅನಿಮಿಷರು.

ಹೀಗೆ 'ಅನಿಮಿಷ'ರಾಗಿದ್ದುಕೊಂಡು ಅವರು 'ಸುರ'ರು. ಅವರಿಗೂ 'ಈಶ'– ಒಡೆಯ ದೇವರು ಸುರೇಶ. ದೇವತೆಗಳು ತನ್ನ ದರ್ಶನ, ಶ್ರವಣಾದಿಗಳಿಂದ ಚೆನ್ನಾಗಿ ಸುಖಪಡುತ್ತ 'ಸುರ' ರೆನಿಸಿಕೊಂಡು ಇರುವಂತೆ ನಿಯಮಿಸುತ್ತ ಅವರಿಗೆ ಒಡೆಯನಾಗಿರುವ ಭಗವಂತ ಸುರೇಶ. ಚೆನ್ನಾಗಿ ಸುಖಪಡುವ ದೇವತೆಗಳಿಗೇ ಒಡೆಯನೆಂದರೆ ಅವನು ಮತ್ತಷ್ಟು ಚೆನ್ನಾಗಿ ಸುಖಪಡುವನು, ನಿತ್ಯತೃಪ್ತ – ಎಂದು ತಾತ್ಪರ್ಯ.

**೮೭. ಶರಣಂ – ಪ್ರತಿಯೊಬ್ಬರಿಗೂ ಆಸರೆ ಆಗಿರುವವನು.**

**ವಿವರಣೆ :** ಶರಣ ಎಂದರೇನು? ದೇವರಿಗೆ ಶರಣು ಬಾ ಎನ್ನುವೆವು. ದೇವರಿಗೆ ಶರಣು ಬಾ ಎಂದರೆ ದೇವರಿಗೆ ನಮಸ್ಕಾರ ಮಾಡು ಎಂಬ ಅರ್ಥ–ಎಂದು ಸಾಮಾನ್ಯವಾಗಿ ತಿಳಿಯಲಾಗಿದೆ. ಆದರೆ ಶರಣ ಶಬ್ದಕ್ಕೆ ನಿಜವಾದ ಅರ್ಥ ಅದಲ್ಲ. ಶ್ರೀಮಧ್ವರು ದ್ವಾದಶ ಸ್ತೋತ್ರದ ಒಂಬತ್ತನೇ ಅಧ್ಯಾಯದಲ್ಲಿ **'ಸುಲಲಿತತನುವರ ವರದ ಮಹಾಬಲ ಯದುವರ ಪಾರ್ಥಪ ಭವ ಮಮ ಶರಣಮ್'**–ಎಂಬುದಾಗಿ ಭಗವಂತನ ಮತ್ಸ್ಯಾದಿ ಅವತಾರಗಳನ್ನು ಉಲ್ಲೇಖಿಸಿ ಆಯಾ ಅವತಾರದಲ್ಲಿ **'ಭವ ಮಮ ಶರಣಮ್'**– ನನಗೆ ಶರಣ ಆಗು ಎಂದು ಪ್ರಾರ್ಥಿಸಿರುವರು. ಆದುದರಿಂದ ಇಲ್ಲಿ ನನಗೆ ನಮಸ್ಕಾರ ಮಾಡು ಎಂಬ ಅರ್ಥವನ್ನು ಇಟ್ಟುಕೊಳ್ಳಲಾಗುವುದಿಲ್ಲ. ಮತ್ತೆ 'ಶರಣಂ' ಎಂಬುದಕ್ಕೆ ಮನೆ, ಆಸರೆ ಎಂದರ್ಥ. ಈ ಅರ್ಥವನ್ನಿಟ್ಟುಕೊಂಡೇ ಕೃಷ್ಣ ನೀನು ನನಗೆ 'ಶರಣ'– ಮನೆ **'ಭವ ಮಮ ಶರಣಮ್'**– ಎಂದು ದ್ವಾದಶ ಸ್ತೋತ್ರದಲ್ಲಿ ಸ್ತುತಿಸಲಾಗಿದೆ. ಮನೆ ಆಶ್ರಯ ಕೊಡುವುದು, ಹಾಗೆಯೇ ಹೊರಗಿನಿಂದ ಬರುವ ಭಯವನ್ನು ಪರಿಹರಿಸುವುದು. ಅಂತೆಯೇ ಭಗವಂತನೂ ಭಕ್ತರ ಪಾಲಿಗೆ ಆಶ್ರಯ , ಭಯಾಪಹಾರಕ.

**'ಲಕ್ಷ್ಮೀನಾರಾಯಣರ ಚರಣಕ್ಕೆ ಶರಣೆಂಬೆ.....'** ಎಂದು ವಾದಿರಾಜಸ್ವಾಮಿಗಳು ಲಕ್ಷ್ಮೀನಾರಾಯಣರ ಚರಣವೇ ತಮ್ಮ ಪಾಲಿಗೆ ಶರಣ– ಆಶ್ರಯ, ಮನೆ– ಎಂದು ಉದ್ಘೋಷಿಸಿರುವರು.

ಭೀಷ್ಮರು ಕೃಷ್ಣನಲ್ಲಿ ತಿಳಿಸುವರು– ನೀನು ಎಲ್ಲರಿಗೂ ಶರಣ– ಆಸರೆ. ಬದುಕಿ ಇರುವ ಪ್ರತಿಯೊಬ್ಬರೂ ನಿನ್ನನ್ನು ಆಶ್ರಯಿಸಿಕೊಂಡೇ ಇರುವರು. ಆದ್ದರಿಂದ ನೀನು ಪಾಂಡವರಿಗೆ ಹೇಗೋ ಹಾಗೆ ಕೌರವರಿಗೂ ಶರಣ. ಭೀಮಸೇನನಿಗೆ ಹೇಗೋ ಹಾಗೆಯೇ ದುರ್ಯೋಧನನಿಗೂ ಶರಣ. ಪಾಂಡವರಿಗೆ ಆಶ್ರಯನಾದುದರಿಂದ ಅವರು ಏಳು ಅಕ್ಷೌಹಿಣೀಸೇನೆಯನ್ನು ಕಟ್ಟಿಕೊಂಡು ಕುರುಕ್ಷೇತ್ರಕ್ಕೆ ಬಂದರೆಂಬುದು ಎಷ್ಟು ಸತ್ಯವೋ ಅಷ್ಟೇ ಸತ್ಯ ನೀನು ಕೌರವರಿಗೆ ಶರಣಾಗಿರುವುದರಿಂದ ಅವರು ಹನ್ನೊಂದು ಅಕ್ಷೌಹಿಣೀಸೇನೆಯನ್ನು ಕಟ್ಟಿಕೊಂಡು ಬಂದರು.

ಹೀಗೆ ಪಾಂಡವರಿಗೂ ಕೌರವರಿಗೂ ಶರಣನಾಗಿರುವಿಯಾದರೂ ಇಷ್ಟು ವ್ಯತ್ಯಾಸ– ಪಾಂಡವರಿಗೆ ಒಳಗಿನಿಂದಲೂ ಹೊರಗಿನಿಂದಲೂ ನೀನು ಶರಣ ಆಗಿರುವಿ. ಒಳಗಿನಿಂದ ಪ್ರೇರಣೆ ನೀಡುವ ಮೂಲಕ, ಹೊರಗಿನಿಂದ ಉಪದೇಶ ನೀಡುವ ಮೂಲಕ. ಆದರೆ ಕೌರವರಿಗೆ ಒಳಗಿನಿಂದ ಪ್ರೇರಣೆ ನೀಡುವ ಮೂಲಕ ಆಸರೆಯಾಗಿರುವಿಯೇ ಹೊರತು ಹೊರಗಿನಿಂದ ಉಪದೇಶ ನೀಡುವ ಮೂಲಕ ಆಸರೆ ಆಗಿಲ್ಲ.

**೮೮. ಶರ್ಮ – ಸುಖ ಸ್ವರೂಪಿ.**

**ವಿವರಣೆ :** 'ಶರ್ಮಾ'– ಎಂದು ದೀರ್ಘ ಇಲ್ಲ. 'ಶರ್ಮ' ಎಂದಷ್ಟೇ. ನಮಸ್ಕಾರ ಮಾಡುವಾಗ ಹೆಸರಿನ ಜೊತೆಗೆ 'ಶರ್ಮಾ' ಆದರೆ ಇದು 'ಶರ್ಮ'. ಇದಕ್ಕೆ ಸುಖ ಎಂದರ್ಥ. 'ಶರಣಂ' ನಾಮದಿಂದ ದೇವರು ಎಲ್ಲರಿಗೆ ಆಶ್ರಯ., ಭಯಪರಿಹಾರಕ– ಎನ್ನಲಾಗಿದೆ. ಹೀಗಾಗಬೇಕಾದರೆ ದೇವರು ಸುಖಸ್ವರೂಪಿಯಾಗಿದ್ದಿರಬೇಕು. ದೇವರಲ್ಲಿ ಸುಖ ಇದೆ ಎನ್ನುವುದಕ್ಕಿಂತಲೂ ದೇವರು ಸುಖಸ್ವರೂಪಿಯೇ ಆಗಿರುವನೆಂಬುದೇ ಪ್ರಶಸ್ತ. ಬೆಲ್ಲದಲ್ಲಿ ಸಿಹಿ ಎನ್ನುವುದಕ್ಕಿಂತ ಬೆಲ್ಲವೇ ಸಿಹಿ ಎನ್ನುವುದು ಹೇಗೆ ಪ್ರಶಸ್ತವೋ ಹಾಗೆ. ಅವರಿಗೆ ಕೋಪ ಬರುವುದು ಅನ್ನುವುದಕ್ಕಿಂತ 'ಅವರು ಮಹಾಕೋಪಿಷ್ಠ'–ಎಂಬ ಮಾತಿಗೆ ಹೇಗೆ ಹೆಚ್ಚು ತೂಕ ಬರುವುದೋ ಹಾಗೆಯೇ ದೇವರಲ್ಲಿ ಸುಖ ಎನ್ನುವುದಕ್ಕಿಂತ ದೇವರು ಸುಖ ಎಂದಾಗ ಅದಕ್ಕೆ ಹೆಚ್ಚು ತೂಕ. ಆದ್ದರಿಂದ ಬೀಷ್ಮರು ಕೃಷ್ಣನನ್ನು 'ಶರ್ಮ'– ಸುಖಸ್ವರೂಪ– ಎಂದೇ ಕರೆದಿರುವರು.

**೮೯. ವಿಶ್ವರೇತಾಃ– ಜಗತ್ತಿನ ಸೃಷ್ಟಿಗೆ ಬೇಕಾದ ಜ್ಞಾನ– ಇಚ್ಛಾ–ಶಕ್ತಿಗಳೆಂಬ ರೇತಸ್ ಉಳ್ಳವನು.**

**ವಿವರಣೆ :** ಶರೀರದ ಒಳಗೆ ರಕ್ತ, ಮಾಂಸ, ಮಜ್ಜಾ– ಇತ್ಯಾದಿಯಾಗಿ ಅನೇಕ ವಸ್ತುಗಳಿವೆ. ಅವುಗಳಲ್ಲಿ ಒಂದು ವಸ್ತು– ರೇತಸ್ಸು. ನಮ್ಮ ವಂಶ ಬೆಳೆಯಲಿಕ್ಕೆ ಕಾರಣವಾದುದು.

ನಮ್ಮ ದೇಹದಲ್ಲಿರತಕ್ಕ ರೇತಸ್ಸು ಒಂದು ಚಿಕ್ಕ ಕುಟುಂಬ ಬೆಳೆಯುವುದಕ್ಕೆ ಕಾರಣವಾದೀತು. ಆದರೆ ದೇವರ ದೇಹದೊಳಗಿನ ರೇತಸ್ಸು– ಇಡೀ ಬ್ರಹ್ಮಾಂಡದ ಸಷ್ಟಿಗೇ

ಕಾರಣವಾದದ್ದು. ಅದನ್ನು ಶಾಸ್ತ್ರಕಾರರು ಹೀಗೆ ಉಲ್ಲೇಖಿಸಿರುವರು– 'ಶುಷ್ಮಂ ಹಿರಣ್ಯಾತ್ಮಕಂ ಅಂಬುಮಧ್ಯೇ'. ಜಗತ್ತಿನ ಸೃಷ್ಟಿಗೆ ಕಾರಣವಾದ ಭಗವಂತನ ಶುಷ್ಮ ಅಂದರೆ ರೇತಸ್ಸು. ಅದು ಹಿರಣ್ಮಯ, ಸುವರ್ಣಮಯ– ಅಷ್ಟು ಶ್ರೇಷ್ಠವಾದದ್ದು.

ಲೋಕದಲ್ಲಿ ತಂದೆಯ ದೇಹದ ಒಂದು ಭಾಗವಾದ ಧಾತು ತಾಯಿಯ ದೇಹದ ರಕ್ತಕ್ಕೆ ಸೇರಿ ಮಾಂಸದ ಮುದ್ದೆಯಾಗಿ ಕ್ರಮೇಣ ಮಗುವಿನ ಶರೀರದ ಸೃಷ್ಟಿಯಾಗುವುದರಿಂದ ಮಗು ಹೊರಗೆ ಬರುವಾಗ ತಂದೆಯ, ತಾಯಿಯ ಶರೀರದ ಒಂದು ಭಾಗವನ್ನು ಕಿತ್ತುಕೊಂಡೇ ಹೊರಬರುವುದು. ತಂದೆಯ ದೇಹದ ಒಂದು ಭಾಗವೇ ಇವನ ದೇಹವಾಗಿ ಪರಿಣಾಮ ಹೊಂದಿದ್ದು.

ಆದರೆ ಭಗವಂತ ಎಂದೂ ಕೂಡಾ ತನ್ನ ದೇಹದ ಭಾಗವನ್ನು ಜಗತ್ತನ್ನಾಗಿ ಮಾಡುವುದಿಲ್ಲ. ಯಾಕೆ? ಈ ಜಗತ್ತು ಪಾಂಚಭೌತಿಕ. ಭಗವಂತನ ದೇಹವಾದರೂ ಜ್ಞಾನಮಯ., ಸುಖಮಯ. ಈ ಜಗತ್ತು ಜಡ. ಇಂತಹ ಜಡ ಜಗತ್ತು ಹೇಗೆ ತಾನೇ ಅವನ ಜ್ಞಾನಾನಂದಮಯ ಶರೀರದ ಭಾಗದ ಪರಿಣಾಮ ಎನಿಸೀತು? ತಂದೆಯ ದೇಹ ಜಡವಾದುದರಿಂದ ಅದರ ಒಂದು ಭಾಗದಿಂದ ನಮ್ಮ ಜಡ ದೇಹ ನಿರ್ಮಾಣವಾಯಿತೆಂಬುದು ಕೂಡುವುದು. ಆದರೆ ಭಗವಂತನ ದೇಹದ ಯಾವುದೇ ಭಾಗ ಜಡವಲ್ಲ. ಪ್ರತಿಯೊಂದು ಭಾಗವೂ ಜ್ಞಾನಾನಂದಮಯ. ಅದರ ಭಾಗ ಈ ಜಡವಾದ ಬ್ರಹ್ಮಾಂಡ ಆಗಲು ಸಾದ್ಯವಿಲ್ಲ. ಈ ಬ್ರಹ್ಮಾಂಡ ಭಗವಂತನ ಶರೀರದಿಂದ ಬಂತು ಅಷ್ಟೇ. ಭಗವಂತ ಸೃಷ್ಟಿ ಮಾಡಿದ. ತನ್ನ ಇಚ್ಛೆಯಿಂದ, ತನ್ನ ಶಕ್ತಿಯಿಂದ ಸೃಷ್ಟಿ ಮಾಡಿದ ಅಷ್ಟೇ. ಮಣ್ಣಿನ ಮುದ್ದೆಯ ಒಂದು ಭಾಗದಿಂದ ಮಡಿಕೆಯನ್ನು ಹೇಗೆ ಸೃಷ್ಟಿ ಮಾಡಲಾಗುವುದೋ ಹಾಗೆ ಭಗವಂತನ ಶರೀರದ ಒಂದು ಭಾಗದಿಂದ ಈ ಬ್ರಹ್ಮಾಂಡ ಸೃಷ್ಟಿ ಆದದ್ದಲ್ಲ.

ಭಗವಂತನ ಇಚ್ಛೆಯಿಂದ ಈ ಬ್ರಹ್ಮಾಂಡದ ಸೃಷ್ಟಿ ಆಯಿತು. ಆದ್ದರಿಂದ ಅವನ ಇಚ್ಛೆಯನ್ನೇ ಬೇಕಾದರೆ ಅವನ ರೇತಸ್ಸು ಎಂದು ಕರೆಯೋಣ. ವಿಶ್ವದ ಸೃಷ್ಟಿಗೆ ಬೇಕಾದ 'ರೇತಃ' – ಜ್ಞಾನ, ಇಚ್ಛಾ ಶಕ್ತಿಗಳು ಉಳ್ಳವನು – ಎಂದು ಅರ್ಥೈಸಬಹುದು. ಅಪ್ಪನ ದೇಹದಲ್ಲಿ ಶಕ್ತಿ ಇರುವುದು. ಅಪ್ಪನ ದೇಹದ ಶಕ್ತಿಯನ್ನು ನಾವು ಧಾತು ಎಂದು ಕರೆಯುವೆವು. ಅಪ್ಪನ ದೇಹದ ಶಕ್ತಿಯಿಂದ ಮಗ ಬಂದ. ಅದರಂತೆ ಭಗವಂತ ತನ್ನ ಈ ಶಕ್ತಿಯಿಂದ ಈ ಜಗತ್ತನ್ನು ಸೃಷ್ಟಿ ಮಾಡುವನು. ಆದ್ದರಿಂದ ಅವನ ಶಕ್ತಿಯನ್ನು 'ರೇತಸ್' ಎಂದು ಕರೆಯೋಣ.

**೯೦. ಪ್ರಜಾಭವಃ– ಎಲ್ಲಾ ಸ್ಥಾವರ ಹಾಗೂ ಜಂಗಮ ಚೇತನರನ್ನು ಸೃಷ್ಟಿ ಮಾಡುವವನು.**

**ವಿವರಣೆ** : ಹಿಂದಿನ 'ವಿಶ್ವರೇತಾಃ' ಎಂಬ ನಾಮ ತಿಳಿಸಿದಂತೆ ಭಗವಂತನು ಜಗತ್ತಿನ

ಸೃಷ್ಟಿಗೆ ಬೇಕಾದ ಇಚ್ಛಾದಿಗಳುಳ್ಳವನಾದುದರಿಂದಲೇ 'ಪ್ರಜಾಭವ', ಎಲ್ಲ ಪ್ರಜೆಗಳ ಸೃಷ್ಟಿ ಅವನಿಂದಲೇ ನಡೆಯಿತು. ಪ್ರಜಾ ಅಂದರೆ ನಾವು ಕೇವಲ ಮನುಷ್ಯರನ್ನು ಮಾತ್ರ ಇಟ್ಟುಕೊಂಡಿದ್ದೇವೆ. ಆದರೆ ಶಾಸ್ತ್ರಕಾರರ ದೃಷ್ಟಿಯಲ್ಲಿ ಯಾರು ಚೆನ್ನಾಗಿ ಹುಟ್ಟುವರೋ, ಯಾರು ಚೆನ್ನಾಗಿ ಬೆಳೆಯುವರೋ ಅವರೆಲ್ಲ ಪ್ರಜೆಗಳು. ಪ್ರಾಣಿಗಳು, ಮರಗಿಡಗಳೂ ಕೂಡಾ ಚೆನ್ನಾಗಿ ಹುಟ್ಟುವವು., ಚೆನ್ನಾಗಿ ಬೆಳೆಯುವವು. ಆದ್ದರಿಂದ ಅವೆಲ್ಲವನ್ನು ಪ್ರಜೆಗಳೆಂದು ಪರಿಗಣಿಸಲಾಗಿದೆ. ಅಂತಹ ಪ್ರಜೆಗಳು ಸ್ಥಾವರ ಆಗಲಿ, ಜಂಗಮ ಆಗಲಿ– ಒಂದೇ ಕಡೆ ಇರುವವು ಸ್ಥಾವರ ಎನಿಸಿದರೆ, ಚಲಿಸುವವು ಜಂಗಮಗಳೆನಿಸಿವೆ. –ಈ ಎರಡು ಬಗೆಯ ಚೇತನಗಳೂ ಭೂಮಿಗೆ ಬಂದದ್ದು ಭಗವಂತನಿಂದಾಗಿ.

'ವಿಶ್ವರೇತಾಃ ಪ್ರಜಾಭವಃ'–ಎಂಬ ಎರಡು ನಾಮಗಳನ್ನೂ ಒಟ್ಟಿಗೆ ಸೇರಿಸಿ ಅರ್ಥ ಹೇಳುವುದಾದರೆ, ಜಗತ್ತಿನ ಸೃಷ್ಟಿಗೆ ಬೇಕಾದ ಶಕ್ತಿಯಿಂದ ಪ್ರಜೆಗಳನ್ನು ಸೃಷ್ಟಿ ಮಾಡಿದವನು.

**೯೧. ಅಹಃ – ಹಗಲಿನಂತೆ ತನ್ನನ್ನೂ ಜೀವನನ್ನೂ ಪರಿಚಯಿಸಿಕೊಡುವವನು.**

**ವಿವರಣೆ** : ನಮ್ಮಲ್ಲಿ 'ಅಹೋರಾತ್ರಿ' ಭಜನೆ ಎಂದಿರುವುದು. ಅಲ್ಲಿ 'ಅಹಃ' ಎಂದರೆ ಹಗಲು ಎಂಬ ಅರ್ಥ ಸ್ಪಷ್ಟ. ಹಗಲು ತನ್ನನ್ನು ತೋರಿಸಿಕೊಡುವುದು, ಜೊತೆಗೆ ಇತರ ವಸ್ತುಗಳನ್ನೂ ತೋರಿಸಿಕೊಡುವುದು. ಹಗಲಾಯಿತೆಂದರೆ ಅದನ್ನು ತಿಳಿಯುವುದಕ್ಕಾಗಲಿ, ಹಗಲಿನಲ್ಲಿರುವ ವಸ್ತುವನ್ನು ತಿಳಿಯುವುದಕ್ಕಾಗಲಿ ಮತ್ತೊಂದು ವಸ್ತು ಬೇಕಿಲ್ಲ. ದೀಪವನ್ನು ಕಾಣಲಿಕ್ಕೂ, ದೀಪದ ಮೂಲಕ ಇತರ ವಸ್ತುಗಳನ್ನು ಕಾಣಲಿಕ್ಕೂ ಮತ್ತೊಂದು ದೀಪದ ಅವಶ್ಯಕತೆ ಹೇಗೆ ಇಲ್ಲವೋ ಹಾಗೆ. ಇದನ್ನು 'ಸ್ವಪ್ರಕಾಶ' ಎಂದು ಕರೆಯಲಾಗುವುದು.

ಭಗವಂತನು ಹಗಲಿನಂತೆ ತನ್ನನ್ನೂ, ಇತರರನ್ನೂ ತೋರಿಸಿಕೊಡುವುದರಿಂದ 'ಸ್ವಪ್ರಕಾಶ' ಎನಿಸಿರುವನು.

ಭಗವಂತನು ತನ್ನನ್ನೂ, ಇತರರನ್ನೂ ಹೇಗೆ ತೋರಿಸಿಕೊಡುವನೆಂಬುದನ್ನು ಉಪನಿಷತ್ತು ಹೀಗೆ ತಿಳಿಸಿದೆ **'.......ತಸ್ಯೈಷ ಆತ್ಮಾ ವಿವೃಣುತೇ ತನೂಂ ಸ್ವಾಮ್'.** ಒಬ್ಬ ಸಾಧಕ ಅಧ್ಯಯನ, ತಪಸ್ಸು ಮುಂತಾದ ಸಾಧನೆಗಳನ್ನು ನಡೆಸಿ ನಡೆಸಿ, ಭಗವಂತನ ಒಲುಮೆಗೆ ಪಾತ್ರನಾಗಿ ಅವನಿಂದ ತನ್ನ ಭಕ್ತ ಎಂದು ಪರಿಗಣಿಸಲ್ಪಟ್ಟ. ಅಂತಹವನಿಗೆ ಭಗವಂತನು ತನ್ನ ಅವ್ಯಕ್ತವಾದ ಸ್ವರೂಪವನ್ನು ತನ್ನ ಅಚಿಂತ್ಯ ಮಹಿಮೆಯಿಂದ ತೋರಿಸಿಕೊಡುವನು. ಹೀಗೆ **'ಸ್ವಾಂ ತನೂಂ ವಿವೃಣುತೇ'**– ತನ್ನ ಶರೀರವನ್ನು ಆ ಭಕ್ತನೆದುರು ಪ್ರಕಟಗೊಳಿಸುವನು. ಹಾಗೆಯೇ **'ಸ್ವಾಂ ತನೂಂ ವಿವೃಣುತೇ'**– ಆ ಭಕ್ತನ ಸ್ವರೂಪಾತ್ಮಕ ಶರೀರವನ್ನೂ ಪ್ರಕಟಗೊಳಿಸುವನು. ಅದುವರೆಗೆ ಆ ಭಕ್ತ ಭಗವಂತನ ಶರೀರವನ್ನು ಹೇಗೆ ಕಂಡಿರಲಿಲ್ಲವೋ ಹಾಗೆಯೇ ತನ್ನ ಸ್ವರೂಪಾತ್ಮಕ ಶರೀರವನ್ನೂ ಕಂಡಿರಲಿಲ್ಲ. ಆದ್ದರಿಂದ ದೇವರು ಅದನ್ನೂ ತೋರಿಸಿಕೊಡುವನು.

ಹಗಲು ಹೇಗೆ ತನ್ನನ್ನು ತೋರಿಸಿಕೊಡುವ ಜೊತೆಗೆ ಇತರ ವಸ್ತುಗಳನ್ನು ತೋರಿಸಿಕೊಡುವುದೋ ಹಾಗೆಯೇ ದೇವರು ತನ್ನ ಪರಿಚಯ ಮಾಡಿಸಿಕೊಡುವ ಜೊತೆಗೆ ಜೀವನ ಸ್ವರೂಪದ ಪರಿಚಯವನ್ನೂ ಮಾಡಿಸಿಕೊಡುವನು. ಈ ಆಶಯದಲ್ಲಿ ಅವನು 'ಅಹಃ' ಎನಿಸುವನು.

ಪ್ರತಿಯೊಬ್ಬ ಸಾಧಕನೂ ದೇವರಲ್ಲಿ ಎನಗೆ ನಿನ್ನ ಸ್ವರೂಪದ ಪರಿಚಯ ಮಾಡಿಕೊಡು, ಹಾಗೆಯೇ ನನ್ನ ಸ್ವರೂಪದ ಪರಿಚಯವನ್ನೂ ಮಾಡಿಕೊಡು. ನಾನು ಮಾನವ ದೇಹವನ್ನು ಧರಿಸಿಕೊಂಡಿದ್ದರೂ ನನ್ನ ಸ್ವರೂಪಾತ್ಮಕ ದೇಹ ನಾಯಿಯದ್ದೋ, ಕತ್ತೆದ್ದೋ ಆಗಿರಲೂಬಹುದು. ಅದು ಯಾವುದೆಂದು ತೋರಿಸಿಕೊಡು– ಎಂಬುದಾಗಿ 'ಅಹಃ'–ಎಂಬ ನಾಮದಿಂದ ಉಪಾಸನೆ ನಡೆಸಬೇಕು.

**೯೨. ಸಂವತ್ಸರಃ – * 'ಸಂವತ್ಸರ' ಎನಿಸುವ ಕಾಲದ ಅವಧಿಯನ್ನು ನಿಯಂತ್ರಿಸುವವನು.**

*** ಕರುಗಳನ್ನು ಚೆನ್ನಾಗಿ ಸಂತೋಷಪಡಿಸಿರುವವನು.**

**ವಿವರಣೆ** : ನಮ್ಮಲ್ಲಿ ಅಯನ, ಮಾಸ, ತಿಥಿ ಇತ್ಯಾದಿಗಳು ಕಾಲದ ಬೇರೆ ಬೇರೆ ಅವಧಿವಾಚಕಗಳಾಗಿ ಇರುವಂತೆ 'ಸಂವತ್ಸರ' ಎಂದು ಕಾಲದ ವರ್ಷ ಅವಧಿಯನ್ನು ತಿಳಿಸುವ ಶಬ್ದ.

ದೇವರಿಗೆ ಇದಕ್ಕೆ ಸಂಬಂಧಪಟ್ಟು ಅನೇಕ ಹೆಸರುಗಳು ಇವೆ– ಇಡಾವತ್ಸರ, ಪರಿವತ್ಸರ, ಅನುವತ್ಸರ, ವತ್ಸರ ಹಾಗೂ ಸಂವತ್ಸರ– ಎಂಬುದಾಗಿ ಒಂದೊಂದು ಬಗೆಯ ವರ್ಷ ಗಣನೆಗೆ ಸಂಬಂಧಪಟ್ಟಂತೆ ದೇವರಿಗೆ ಒಂದೊಂದು ಹೆಸರು ಬರುವುದು. ಮಠಕ್ಕೆ ಬಂದಾಗ ಆಚಾರ್ಯರು, ನ್ಯಾಯಾಲಯಕ್ಕೆ ಹೋದಾಗ ವಕೀಲರು, ಶಾಲೆಯಲ್ಲಿ ಅಧ್ಯಾಪಕರು. ಮನೆಗೆ ಬಂದಾಗ ಅಪ್ಪ, ಜಾಗ ನೋಡಿಕೊಂಡು ಪರಿಚಯ ಮಾಡಿಸುವ ಕ್ರಮದಂತೆ ಭಗವಂತನಿಗೆ ಒಂದು ಸಂದರ್ಭಕ್ಕೆ ಸಂಬಂಧಪಟ್ಟು 'ಸಂವತ್ಸರ' ಎಂಬ ಹೆಸರು. ಸಂಕ್ರಮಣದಿಂದ ಸಂಕ್ರಮಣಕ್ಕೆ ತಿಂಗಳುಗಳನ್ನು ಲೆಕ್ಕ ಮಾಡುತ್ತ ಹನ್ನೆರಡು ಸಂಕ್ರಮಣಗಳು ಆದಾಗ ಒಂದು ವರ್ಷ ಎಂದಾಗುವುದು. ಉದಾಹರಣೆಗೆ– ಮೇಷ ಸಂಕ್ರಮಣದಿಂದ ಪ್ರಾರಂಭಿಸಿ ಮತ್ತೊಂದು ಮೇಷ ಸಂಕ್ರಮಣದ ತನಕ. ಕ್ರಿಶ್ಚಾನಿಟಿಯನ್ನು ಆವಾಹನೆ ಮಾಡಿಕೊಂಡು ಹೇಳುವುದಾದರೆ– ಎಪ್ರಿಲ್ ಹದಿಮೂರರಿಂದ ಮುಂದಿನ ಎಪ್ರಿಲ್ ಹದಿಮೂರರವರೆಗೆ ಇರುವ ವರ್ಷ ಕಾಲವನ್ನು ನಿಯಮಿಸುವ ಭಗವಂತನಿಗೆ ಸಂವತ್ಸರ ಎಂದು ಹೆಸರು. ಹನ್ನೆರಡು ನಾಕ್ಷತ್ರ ಮಾಸಗಳ ಆವೃತ್ತಿಯ ಕಾಲದ 'ಇಡಾವತ್ಸರ' ಎಂಬ ಅವಧಿಯುಲ್ಲಿ ಅದೇ ಹೆಸರಿನಿಂದ ಇದ್ದು ಹೇಗೆ ಅದನ್ನು ನಿಯಮಿಸುತ್ತಿರುವನೋ,ಚಾಂದ್ರಮಾನದ ಹನ್ನೆರಡು ಮಾಸಗಳ ಕಾಲದ 'ಅನುವತ್ಸರ' ಎಂಬ ಅವಧಿಯಲ್ಲಿ ಅದೇ ಹೆಸರಿನಿಂದ ಇದ್ದು ಹೇಗೆ ಅದನ್ನು ನಿಯಮಿಸುತ್ತಿರುವನೋ

ಮುನ್ನೂರರ್ವತ್ತು ದಿನಗಳ ಕಾಲದ 'ವತ್ಸರ' ಎನಿಸುವ ಅವಧಿಯಲ್ಲಿ ಅದೇ ನಾಮದಿಂದ ಇದ್ದು ಹೇಗೆ ಅದನ್ನು ನಿಯಮಿಸುತ್ತಿರುವನೋ, ಗುರು ಒಂದು ರಾಶಿಯಲ್ಲಿರುವ ಕಾಲಾವಧಿಯ ಹನ್ನೆರಡನೆಯ ಒಂದಂಶ 'ಪರಿವತ್ಸರ' ಎನಿಸಿದ್ದು ಅದರಲ್ಲಿ ಅದೇ ನಾಮದಿಂದ ಇದ್ದು ಹೇಗೆ ಅದನ್ನು ನಿಯಮಿಸುತ್ತಿರುವನೋ ಹಾಗೆಯೇ ಸೌರಮಾಸಗಳ ಹನ್ನೆರಡರ ಸಮುದಾಯ 'ಸಂವತ್ಸರ' ಎನಿಸಿದ್ದು, ಅದರಲ್ಲಿ ಅದೇ ನಾಮದಿಂದ ಇದ್ದು ಅದನ್ನು ನಿಯಮಿಸುತ್ತಿರುವನು.

ಭೀಷ್ಮರು ಎದುರಿಗೇ ಕುಳಿತಿರುವ ಕೃಷ್ಣರೂಪಕ್ಕೆ ಸಂಬಂಧಿಸಿದಂತೆ ಈ ನಾಮದಿಂದ ಮತ್ತೊಂದು ಅರ್ಥದ ಅನುಸಂಧಾನ ನಡೆಸುವರು–'ಸಂ' ಚೆನ್ನಾಗಿ 'ವತ್ಸ' ಕರುಗಳನ್ನು 'ರ'– ರಮಯಿತೀತಿ– ಸಂತೋಷಪಡಿಸಿರುವವನು. ಕೃಷ್ಣ ಕರುಗಳನ್ನು ಚೆನ್ನಾಗಿ ಮೇಯಿಸುತ್ತಿದ್ದ. ಪ್ರಾಯಶಃ ಹೀಗೆ ಕೃಷ್ಣ ಕರುಗಳನ್ನು ಚೆನ್ನಾಗಿ ಮೇಯಿಸುವುದನ್ನು ಕಂಡೇ ವಿಜಯದಾಸರು ತೆಗೆದ ಉದ್ಗಾರ– 'ಕಾದನಾ ವತ್ಸವ ಹರಿ ಕಾದನಾ......' 'ಅಜಗಳಂತಿದ್ದ ಕರುಗಳು ಗಜಗಳಂತೆ ಆದವು', ತ್ರಿಜಗದೊಡೆಯ ವಿಜಯ ವಿಠಲ ವ್ರಜಕದೊರೆಯ ಆಳುವ'– ಎಂದು ವಿಜಯದಾಸರ ಹಾಡು.'ಕನಕರಜತಸರಪಳಿ ಆ ದನಕರುಗಳ ಕೊರಳಲಿ'– ಭಾರೀ ಕಣ್ಣಿಗೆ ಕಟ್ಟುವಂತೆ ಹಾಡಿದ್ದಾರೆ. ಯಾಕೆ? ಪ್ರಾಯಶಃ ವಿಜಯದಾಸರು ಒಬ್ಬ ಗೊಲ್ಲನಾಗಿದ್ದುಕೊಂಡು ಕೃಷ್ಣನ ಹಿಂದೆ ಮುಂದೆ ಓಡಿದ್ದಿರಬಹುದು.

ಶ್ರೀಮಧ್ವರು ಹೇಳಿದ್ದನ್ನೇ ವಿಜಯದಾಸರು ಅಂದದ್ದು. ಕೃಷ್ಣ ಆರು ವರ್ಷಗಳ ಕಾಲ ಕರುಗಳನ್ನು ಮೇಯಿಸುತ್ತಿದ್ದ; ಆರು ವರ್ಷ ತುಂಬಿದ ಮೇಲೆ ಆಕಳುಗಳನ್ನು ಮೇಯಿಸಲು ತೊಡಗಿದ ಎಂದು ಶ್ರೀಮಧ್ವಾಚಾರ್ಯರು ತಿಳಿಸಿರುವರು– **'ಸ ಚಂದ್ರತೋ ಹಸತ್ಕಾಂತವದನೇಂದುವರ್ಚಸಾ। ಸಂಯುತೋ ರೌ ಹಿಣೇಯೇನ ವತ್ಸಪಾಲೋ ಬಭೂವ ಹ'(ಮ.ಭಾ.ತಾ.ನಿ.೧೩–೨೯)** ಕೃಷ್ಣ ಅಣ್ಣಯ್ಯನಿಂದ ಕೂಡಿಕೊಂಡು ಪುಟ್ಟ ಪುಟ್ಟ ಕರುಗಳನ್ನು ಮೇಯಿಸುತ್ತಿದ್ದ. ಮುಂದೆ **'ಏವಂ ಸ ದೇವವರವಂದಿತಪಾದಪದ್ಮೋ ಗೋಪಾಲಕೇಷು ವಿಹರನ್ ಭುವಿ ಷಷ್ಠಮಬ್ದಮ್। ಪ್ರಾಪ್ತೋ ಗವಾಮಖಿಲಪೋಽಪಿಸ ಪಾಲಕೋಽಭೂತ್.......'** (ಮ.ಭಾ.ತಾ.ನಿ.೧೩–೩೩) ಆರುವರ್ಷದ ಬಳಿಕ ಆಕಳುಗಳನ್ನು ಮೇಯಿಸಲು ಪ್ರಾರಂಬಿಸಿದ ಎಂದು.

ವತ್ಸ– ಪುಟ್ಟ ಪುಟ್ಟ ಕರುಗಳನ್ನು ಸಂ– ಚೆನ್ನಾಗಿ ರಃ– ಸಂತೋಷಪಡಿಸಿದವನು. ಕೃಷ್ಣ, ನೀನು ಚಿಕ್ಕ ಚಿಕ್ಕ ಕರುಗಳನ್ನೇ ಚೆನ್ನಾಗಿ ಸಂತೋಷಪಡಿಸಿದವನು. ಹೀಗಿರುವಾಗ ದೊಡ್ಡ ಕರುಗಳಾದ ನಮ್ಮನ್ನೆಲ್ಲ ಖಂಡಿತಾ ಕೈ ಬಿಡುವುದಿಲ್ಲ ಎಂಬ ಅನುಸಂಧಾನದಿಂದ ಸಂವತ್ಸರ ಅಂದರು.

ಕೃಷ್ಣನು ಕರುಗಳನ್ನು ಚೆನ್ನಾಗಿ ಸಾಕಿದ್ದರಿಂದಲೇ ಅವನಿಗೆ ಚೆನ್ನಾಗಿ ಹಾಲು ಸಿಕ್ಕಿತು.

**೯೩. ವ್ಯಾಲಃ – ವಿಶಿಷ್ಟ ಭಕ್ತರನ್ನು ಚೆನ್ನಾಗಿ ಸ್ವೀಕಾರ ಮಾಡುವವನು.**

**ವಿವರಣೆ :** ವಿ+ಆ=ವ್ಯಾ+ಲ=ವ್ಯಾಲ. ಲ ಎಂದರೆ ಸ್ವೀಕಾರ. ವಿ ಎಂದರೆ ವಿಶಿಷ್ಟರನ್ನು, ಆ ಎಂದರೆ ಚೆನ್ನಾಗಿ. ವಿಶಿಷ್ಟಜನರನ್ನು, ವಿಲಕ್ಷಣಜನರನ್ನು ಚೆನ್ನಾಗಿ ಸ್ವೀಕಾರ ಮಾಡುವವನು ವ್ಯಾಲ. ಯಾರು ವಿಶಿಷ್ಟಜನರು? ಇನ್ನೊಬ್ಬರ ಮನೆಯಲ್ಲಿ ಇದ್ದರೂ ನಿನ್ನ ಚಿಂತನೆಯಲ್ಲೇ ಇರುವವರು ವಿಶಿಷ್ಟ ಜನರು. ಭೀಷ್ಮ, ದ್ರೋಣ, ಅಶ್ವತ್ಥಾಮ, ವಿದುರು– ದುರ್ಯೋಧನನ ಮನೆಯಲ್ಲಿ ಇದ್ದವರು. ಆದರೂ ಕೃಷ್ಣ ಹಾಗೂ ಪಾಂಡವರ ಚಿಂತನೆಯಲ್ಲಿ ತೊಡಗಿದ್ದವರು. ಆದ್ದರಿಂದಲೇ ದುರ್ಯೋಧನ ಯಾವಾಗಲೂ ಭೀಷ್ಮಾದಿಗಳಿಗೆ ಮನ್ನಣೆ ನೀಡುತ್ತಿರಲಿಲ್ಲ. ಅವರು ನೀಡಿದ ಉಪದೇಶ ಅವನಿಗೆ ಪಸಂದ ಆಗಲಿಲ್ಲ ಎಂದರೆ ಅವರನ್ನು ಪ್ರತ್ಯೇಕಿಸಿ, ಕಡೆಗಣಿಸುತ್ತಿದ್ದ. ಅವರು ಆಗ ಅವರ ಗುಂಪಿಗೆ ಸೇರದೆ ವಿಲಕ್ಷಣರಾಗಿ, ವಿಶಿಷ್ಟರಾಗಿ ಇರಬೇಕಾಗಿತ್ತು. ಅಂತಹ ಭೀಷ್ಮಾದಿಗಳನ್ನು ಶ್ರೀಕೃಷ್ಣನು ಕೈಕೊಟ್ಟು ಉದ್ಧಾರ ಮಾಡಿರುವನು. ಸಾಮಾನ್ಯವಾಗಿ ಒಬ್ಬ ವ್ಯಕ್ತಿ ತನಗೆ ಆಗದವನ ಮನೆಯಲ್ಲಿದ್ದವನ ಮಾತಿಗೆ ಕಿವಿ ಕೊಡುವುದೇ ಇಲ್ಲ. ದುರ್ಯೋಧನ '.......ನ ಮೇ ದ್ವೇಷ್ಯೋಽಸ್ತಿ ನ ಪ್ರಿಯಃ' ಎಂದಿರುವ ಕೃಷ್ಣನಿಗೇನೂ ಆಗದವನಲ್ಲದಿದ್ದರೂ ದುರ್ಯೋಧನನಿಗೆ ಕೃಷ್ಣ ಆಗದವನು. ಅಂತಹವನ ಮನೆಯಲ್ಲಿ ಇದ್ದರೂ ಭೀಷ್ಮನ ಮಾತಿಗೆ ಕೃಷ್ಣ ಬೆಲೆ ಕೊಟ್ಟಿರುವನು.ಕೃಷ್ಣನ ಕೈಯಿಂದ ಚಕ್ರ ಹಿಡಿಸಿಯೇ ತೀರುವೆನೆಂಬ ಭೀಷ್ಮರ ಮಾತಿಗೆ ಬೆಲೆ ಕೊಟ್ಟು ರಣಾಂಗಣದಲ್ಲಿ ಚಕ್ರ ಹಿಡಿದ. ಹಾಗೆಯೇ ದ್ರೋಣಾಚಾರ್ಯರು ಯುದ್ಧ ಮಾಡುತ್ತಿದ್ದಾಗ ಕೊನೆಗೊಂದು ದಿನ ಭೀಮಸೇನನನ್ನು ಕಳುಹಿಸಿ ಅವರಿಂದ ಶಸ್ತ್ರ ಸಂನ್ಯಾಸ ಮಾಡಲು ತಿಳಿಸಿದ. ಶಸ್ತ್ರತ್ಯಾಗ ಮಾಡಿದ ಅವರ ಸಂಹಾರ ಮಾಡಿದಾಗ ಅವರು ಪರಲೋಕಕ್ಕೆ ಯಾತ್ರೆ ಮಾಡುವುದನ್ನು ಭೀಮಾದಿಗಳಿಗೆ ಕೃಷ್ಣ ತೋರಿಸಿಕೊಡುವನು. ಇದರಿಂದಾಗಿ ದ್ರೋಣಾಚಾರ್ಯರ ಮರಣಕಾಲದಲ್ಲಿ ಹರಿಗುರುಗಳ ದೃಷ್ಟಿ ಅವರ ಮೇಲೆ ಬಿದ್ದಂತಾಯಿತು.

ಹೀಗೆ ಭೀಷ್ಮರನ್ನು ಒಂದು ಬಗೆಯಿಂದ ಅನುಗ್ರಹಿಸಿದ, ದ್ರೋಣಾಚಾರ್ಯರನ್ನು ಮತ್ತೊಂದು ಬಗೆಯಿಂದ ಅನುಗ್ರಹಿಸಿದ ಕೃಷ್ಣ ವಿಶಿಷ್ಟರಾಗಿದ್ದ ಅವರನ್ನು ಚೆನ್ನಾಗಿ ಸ್ವೀಕರಿಸಿದಂತಾಗಿದೆ. ಆದುದರಿಂದ ಕೃಷ್ಣ 'ವ್ಯಾಲ'– ವಿಶಿಷ್ಟರಾದ ಭಕ್ತರನ್ನು ಅವರ ಭಯವನ್ನು ದೂರಮಾಡಿ ಚೆನ್ನಾಗಿ ಸ್ವೀಕಾರ ಮಾಡುವನು.'ಲಾ ಆದಾನೇ'– ಎಂಬ ಕ್ರಿಯಾಪದದಿಂದ ರೂಪುಗೊಂಡ 'ಲ'– ಎನ್ನುವ ಭಾಗದ ರೂಪಾಂತರವೇ ಹಿಂದಿಯ 'ಲೋ'. ನಮಗೂ ಗುಡಿಗೆ ಬರುವಾಗ ಒಳಗೊಳಗೆಯೇ 'ಪುಕು ಪುಕು' ಇರುವುದು. ಎಲ್ಲೋ ಇದ್ದುಕೊಂಡು, ಏನನ್ನೋ ಮಾಡಿದ್ದೇವೆ– ಎಂದೆಲ್ಲ. ಆದರೆ ನಾವೂ ಭೀಷ್ಮಾದಿಗಳಂತೆ ಭಕ್ತಿಯ ದಾರ್ಢ್ಯ ಗಳಿಸಿ ವಿಶಿಷ್ಟರಾಗಿದ್ದರೆ, ನಮ್ಮ ಭಯವನ್ನೂ ಪರಿಹರಿಸಿ ನಮ್ಮನ್ನು ಚೆನ್ನಾಗಿ ಸ್ವೀಕಾರ ಮಾಡುವನು 'ವ್ಯಾಲ' ನಾಮಕ ಭಗವಂತ.

**೯೪. ಪ್ರತ್ಯಯಃ– ಭಕ್ತರ ಕಡೆಗೆ ತಾನಾಗಿಯೇ ಹೋಗುವವನು.**

**ವಿವರಣೆ :** 'ವ್ಯಾಲ ನಾಮದಿಂದ ವಿಶಿಷ್ಟ ಭಕ್ತರನ್ನು ಸ್ವೀಕಾರಮಾಡುವವನೆಂದು ಸ್ತುತಿಸಿದಾಗ,

ಹೀಗೆ ಭಕ್ತರನ್ನು ಸ್ವೀಕಾರಮಾಡುವುದರಿಂದ ದೇವರಿಗೆ ಏನೂ ಲಾಭ? ಎಂಬ ಸಂದೇಹ ಬಂದಲ್ಲಿ ಅವನಿಗೆ ಭಕ್ತರನ್ನು ಉದ್ಧಾರ ಮಾಡಿದ್ದರಿಂದಾಗಲೀ, ಭಕ್ತರನ್ನು ಉದ್ಧಾರ ಮಾಡದ ಪ್ರಯುಕ್ತವಾಗಲೀ ಏನೂ ಲಾಭವೂ ಇಲ್ಲ, ಏನೂ ನಷ್ಟವೂ ಇಲ್ಲ ಎಂಬುದನ್ನು 'ಪ್ರತ್ಯಯ' ನಾಮದಿಂದ ತಿಳಿಸಲಾಗುವುದು. ಪ್ರತಿ ಎಂದರೆ ಕುರಿತು. ಪ್ರತಿಯೊಬ್ಬ ಭಕ್ತರನ್ನು ಕುರಿತು 'ಅಯಃ'–'ಅಯತೇ ಇತಿ' ತಾನೇ ಹೋಗುತ್ತ ಇರುತ್ತಾನೆ. ಭಕ್ತರ ಉದ್ಧಾರಕ್ಕಾಗಿ ತಾನೇ ಭಕ್ತರಲ್ಲಿಗೆ ಹೋಗುವ ಭಗವಂತ ಭಕ್ತವಾತ್ಸಲ್ಯಕ್ಕೊಳಗಾಗಿ ಭಕ್ತರ ಬಗ್ಗೆ ಸ್ಪಂದಿಸುವವನೇ ಹೊರತು ತನ್ನ ಲಾಭ ಅಥವಾ ನಷ್ಟ ಪರಿಹಾರಕ್ಕಾಗಿ ಅಲ್ಲ.

ಭೀಷ್ಮರು ಕೃಷ್ಣನನ್ನು ಸ್ತುತಿಸುತ್ತಾರೆ– ಕೃಷ್ಣ ನೀನು ನನ್ನ ಪಾಲಿಗೆ ವಿಶೇಷವಾಗಿ 'ಪ್ರತ್ಯಯ' ಎನಿಸಿರುವಿ. ಕುರುಕ್ಷೇತ್ರದಲ್ಲಿ ಹೆಣಗಳ ಮಧ್ಯೇ ಮಲಗಿರುವ ನನ್ನನ್ನು ಕುರಿತು ಬಂದಿರುವಿ. ಭೀಷ್ಮರನ್ನೇ ನಾನು ಇರುವಲ್ಲಿಗೆ ಬರ ಹೇಳಿ ಎಂದು ಹೇಳದೆ ನಾನಿರುವಲ್ಲಿಗೇ ಬಂದಿರುವಿ. ಸಂಸಾರದಲ್ಲಿರುವ ಜೀವರನ್ನು ಬಿಡುಗಡೆಗೊಳಿಸಲು ಅವರನ್ನೇ ನೀನಿರುವಲ್ಲಿಗೆ ಕರೆಸಿಕೊಳ್ಳದೆ ನೀನೇ ಅವರಿರುವಲ್ಲಿಗೆ ಇಳಿದು ಬರುವಿ. ಸಣ್ಣವರ ಉದ್ಧಾರಕ್ಕೆ ದೊಡ್ಡವರು ಸಣ್ಣವರಿರುವಲ್ಲಿಗೆ ಬರುವರೇ ಹೊರತು ಸಣ್ಣವರನ್ನು ತಾವಿರುವಲ್ಲಿಗೆ ಕರೆಸಿಕೊಳ್ಳುವುದಿಲ್ಲ. ದೇಹದಲ್ಲಿ ತಲೆಯೋ, ಕಾಲೋ ತುರುಸಿಕೊಳ್ಳುವಿಕೆಗೆ ಒಳಗಾದಾಗ 'ಕೈ' ಆಯಾ ಅಂಗದಲ್ಲಿಗೇ ಹೋಗಿ ತುರಿಸುವುದೇ ಹೊರತು, ಆಯಾ ಅಂಗಗಳು ಕೈಯಲ್ಲಿಗೆ ಬಂದು ತಮ್ಮ ತುರಿಸುವಿಕೆ ನಡೆಯುವಂತೆ ಮಾಡುವುದಿಲ್ಲ. ಯಾಕೆಂದರೆ ಕೈಯ ಅಭಿಮಾನಿ ದೇವೇಂದ್ರ. ಉಳಿದೆಲ್ಲ ಅಂಗಗಳ ಅಭಿಮಾನಿಗಳಿಗಿಂತ ಅವನು ಹಿರಿಯನಾದುದರಿಂದ ಹಿರಿಯರು ಕಿರಿಯರಿರುವಲ್ಲಿಗೆ ಹೋಗುವ ಪದ್ಧತಿಗನುಗುಣವಾಗಿ ದೇವೇಂದ್ರ ತನ್ನ ಅಭಿಮಾನಕ್ಕೆ ಒಳಗಾದ ಕೈಯನ್ನು ಉಳಿದ ಅಂಗಗಳ ಕಡೆಗೆ ಒಯ್ಯುವನು.

ಹೀಗೆ ಚಿಕ್ಕವರ ಹತ್ತಿರ ದೊಡ್ಡವರು ಹೋಗುವ ಪದ್ಧತಿಯನ್ನು ಹಾಕಿ ಕೊಟ್ಟವನು– 'ಪ್ರತ್ಯಯ' ನಾಮಕ ಭಗವಂತನೇ.

**೯೫. ಸರ್ವದರ್ಶನಃ – ವ್ಯಕ್ತಿಗಳ ಯೋಗ್ಯತೆಯನ್ನು ನೋಡಿಕೊಂಡು ಯಾರ್‍ಯಾರಿಗೆ ಏನೇನು ಎಷ್ಟೆಷ್ಟು ಯಾವ್ಯಾವಾಗ ತೋರಿಸಬೇಕೋ ಅದನ್ನೆಲ್ಲ ತೋರಿಸಿಕೊಡುವವನು.**

**ವಿವರಣೆ** : 'ಸರ್ವಂ ದರ್ಶಯತಿ'– ಎಲ್ಲವನ್ನೂ ತೋರಿಸುವವನು. ಯಾರಿಗೆ? ಕರ್ತವ್ಯವನ್ನು ಮಾಡಲು ಹಿಂಜರಿದ ಒಬ್ಬನಿಗೆ,ಮತ್ತೊಬ್ಬ ಕುರುಡನಿಗೆ, ತನ್ನಲ್ಲಿದ್ದ ಹೆಣ್ಣನ್ನು ಕೊಡಲು ಹಿಂಜರಿಯುತ್ತಿದ್ದ ಇನ್ನೊಬ್ಬನಿಗೆ, ಅವನನ್ನು ಬೈಯಲಿಕ್ಕೆ ತೊಡಗಿದ ಮತ್ತೊಬ್ಬನಿಗೆ– ನಾಲ್ಕು ಬಗೆಯ ಜನರಿಗೂ ಕೃಷ್ಣ ಎಲ್ಲವನ್ನೂ ತೋರಿಸಿ, ನೋಡಿ 'ನಾನು ಇರುವುದು ಹೀಗೆ' ಎಂದು 'ಸರ್ವದರ್ಶನ' ಎನಿಸಿದನು. ಕರ್ತವ್ಯವನ್ನು ಮಾಡಲು ಹಿಂಜರಿದವ ಅರ್ಜುನ., ಒಳಗೆ ಕೃಷ್ಣನ ಬಗ್ಗೆ ಒಳ್ಳೆಯ ಭಾವನೆಗಳಿದ್ದರೂ ಹೊರಗೆ ಕುರುಡನಾಗಿದ್ದವ ಧೃತರಾಷ್ಟ್ರ, ರುಗ್ಮಿಣಿಯನ್ನು ಕೃಷ್ಣನಿಗೆ ಕೊಡಲು ಹಿಂಜರಿದ ಭೀಷ್ಮಕ,

ಮತ್ತೊಬ್ಬ ಉದಂಕ. ಈ ನಾಲ್ವರೂ ಕೃಷ್ಣನಿಂದ 'ವಿಶ್ವದರ್ಶನ' ವನ್ನು ಪಡೆದಿರುವರು. ಮೊದಲು ಭೀಷ್ಮಕನಿಗೆ ಕೃಷ್ಣ 'ವಿಶ್ವದರ್ಶನ' ಮಾಡಿಸಿದ. ವಿಶ್ವದರ್ಶನ ಎಂದರೂ ಸರ್ವದರ್ಶನ ಎಂದರೂ ಒಂದೇ. 'ನೋಡು ನಾನು ಹೀಗಿದ್ದೇನೆ' ಎಂದು ಭೀಷ್ಮಕನಿಗೆ ತೋರಿಸಿ ಅವನ ಉದ್ಧಾರ ಮಾಡಿದ. ಭಕ್ತನಲ್ಲಿದ್ದ ಸಂಪತ್ತು ಭಗವಂತನಿಗೇ ಸಲ್ಲಬೇಕು. ಭೀಷ್ಮಕನಲ್ಲಿದ್ದ 'ರುಗ್ಮಿಣಿ' ಕೃಷ್ಣನಿಗೇ ಸೇರಬೇಕು. ಭೀಷ್ಮಕನಿಗೆ 'ಸರ್ವದರ್ಶನ' ಮಾಡಿಸಿ ಅವನ ಮೂಲಕ ತನಗೆ ಸೇರಬೇಕಾದ ಸಂಪತ್ತು ತನಗೇ ಸೇರುವಂತೆ ಮಾಡಿ ಅವನನ್ನು ಉದ್ಧರಿಸಿದ. ಉದಂಕನ ಶಿಷ್ಯ ದುರ್ಯೋಧನ. ದುರ್ಯೋಧನನನ್ನು ಕೊಲ್ಲಿಸಿದಕ್ಕಾಗಿ ಸಿಟ್ಟುಗೊಂಡ ಉದಂಕ ಕೃಷ್ಣನನ್ನೇ ಶಪಿಸಲು ತೊಡಗಿದಾಗ ಅವನಿಗೆ 'ವಿಶ್ವದರ್ಶನ' ಮಾಡಿಸಿ ಶಾಪ ಕೊಡುವ ಮೂಲಕ ಅವನು ತನ್ನ ತಪಸ್ಸನ್ನು ಕಳೆದುಕೊಳ್ಳದಂತೆ ಮಾಡಿ ಅನುಗ್ರಹಿಸಿರುವನು. ಧೃತರಾಷ್ಟ್ರ ತನ್ನ ಮಗ ಹೇಳಿದಂತೆಯೇ ಕುಣಿದು ಪೂರ್ಣ ನಾಶವಾಗುವವನಿದ್ದ. ಅವನಿಗೆ 'ಸರ್ವದರ್ಶನ' ನೀಡಿ ಧೃತರಾಷ್ಟ್ರ ಪೂರ್ಣ ಹಾಳಾಗದಂತೆ ಅನುಗ್ರಹಿಸಿದ. ಅರ್ಜುನನಿಗೆ 'ಸರ್ವದರ್ಶನ' ನೀಡಿ ಕರ್ತವ್ಯ ಭ್ರಷ್ಟನಾಗದಂತೆ ಮಾಡಿ ಅನುಗ್ರಹಿಸಿದ.

ಭಗವಂತನು ವ್ಯಕ್ತಿಗಳನ್ನು ನೋಡಿಕೊಂಡು ಸಂದರ್ಭ ಬಂದಾಗ ಆ ವ್ಯಕ್ತಿಗಳಿಗೆ ತನ್ನನ್ನು ತೆರೆದಿಡುವವನು. ವ್ಯಕ್ತಿಗಳು ಕರ್ತವ್ಯ ಭ್ರಷ್ಟರಾಗುವಾಗಲೋ, ವ್ಯಕ್ತಿಗಳು ಸಿಟ್ಟಿಗೇಳುವಾಗಲೋ, ವ್ಯಕ್ತಿಗಳು ಮಾಡಬೇಕಾದ ಕೆಲಸವನ್ನು ಮಾಡದಿರುವಾಗಲೋ, ವ್ಯಕ್ತಿಗಳು ದೇವರಿಗೆ ಕೊಡಬೇಕಾದ ವಸ್ತುವನ್ನು ಮತ್ತೊಬ್ಬರಿಗೆ ಕೊಡವುದೆಂದು ಹೊರಟಾಗಲೋ– ಅಂತಹ ಸಂದರ್ಭದಲ್ಲಿ ಅವರನ್ನು ತಿದ್ದಲಿಕ್ಕೆ ಬೇಕಾದ 'ಸರ್ವದರ್ಶನ' ನೀಡುವನು.

ಆ ಸರ್ವದರ್ಶನನಾಮ ವಿಶ್ವರೂಪವಾಗಿ ತೆರೆದುಕೊಳ್ಳಬಲ್ಲದು. ಆದರೆ ಆ ಎಲ್ಲ ಅರ್ಥಗಳನ್ನು ಹೇಳಲಿಕ್ಕೂ, ಕೇಳಲಿಕ್ಕೂ ಆಗಲಿಕ್ಕಿಲ್ಲ. ಆದ್ದರಿಂದ ಸದ್ಯಕ್ಕೆ 'ಸರ್ವದರ್ಶನ':– ಎಲ್ಲವನ್ನೂ ತೋರಿಸಿಕೊಡಲು ಸಮರ್ಥನಾಗಿರುವವನು– ಎಂಬ ಒಂದು' ಅರ್ಥವನ್ನು ಪರಿಶೀಲಿಸೋಣ.

ಇನ್ನೂ ಬೇಕೆಂದರೆ– ಗೋಪಾಲಕರಿಗೆ ಇದೇ ಶರೀರದಲ್ಲಿ ಇದೇ ಕಣ್ಣಿಗೆ ವೈಕುಂಠವನ್ನು ಶ್ರೀಕೃಷ್ಣ ತೋರಿಸಿರುವನು. ಈ ಮಹಿಮೆಯನ್ನೂ 'ಸರ್ವದರ್ಶನ' ನಾಮಾರೂಢವನ್ನಾಗಿಸಿ ಚಿಂತಿಸಬಹುದು.

ವ್ಯಕ್ತಿಗಳ ಯೋಗ್ಯತೆಯನ್ನು ನೋಡಿಕೊಂಡು ಯಾರ್ಯಾರಿಗೆ ಏನೇನು ಎಷ್ಟೆಷ್ಟು ಯಾವ್ಯಾವಾಗ ತೋರಿಸಬೇಕೋ ಅದನ್ನೆಲ್ಲ ತೋರಿಸುವವನು ಅವನು ಎಂಬ ಅಭಿಪ್ರಾಯದಲ್ಲಿ ದೇವರನ್ನು ಶಾಸ್ತ್ರದಲ್ಲಿ 'ಸರ್ವದರ್ಶನ' ಎಂದು ಕರೆಯಲಾಗಿದೆ.

**ಅಜಃ ಸರ್ವೇಶ್ವರಃ ಸಿದ್ಧಃ ಸಿದ್ಧಿಃ ಸರ್ವಾದಿರಚ್ಯುತಃ ।**
**ವೃಷಾಕಪಿರಮೇಯಾತ್ಮಾ ಸರ್ವಯೋಗವಿನಿಃಸೃತಃ ॥ ೧೧ ॥**

**೯೬. ಅಜಃ – ಪಾಂಚಭೌತಿಕ ಶರೀರವನ್ನು ಹಿಡಿದುಕೊಂಡು ತಾಯಿಯ ಗರ್ಭದಲ್ಲಿ ಒದ್ದಾಡಿ ಹೊರಹೊಮ್ಮುವವನಲ್ಲ.**

**ವಿವರಣೆ** : ನ ಜಾಯತೇ – ಹುಟ್ಟುವುದು ಇಲ್ಲ. ತಾಯಿಯ ಗರ್ಭದಲ್ಲಿ ಒಂಭತ್ತು ತಿಂಗಳು ಇದ್ದು ಬೇಕಾದ ದಿವಸವೋ ಬೇಡವಾದ ದಿವಸವೋ ರಾವಣನಾಗಿಯೋ ಕುಂಭಕರ್ಣನಾಗಿಯೋ, ವಿಭೀಷಣನಾಗಿಯೋ ಹೊರಬರುವುದೇ ಹುಟ್ಟು.ತಾಯಿಯ ಗರ್ಭದಿಂದ ಬರುವುದೆಂದರೆ ಅದುವರೆಗೆ ಅಲ್ಲೇ ಇರುವುದೆಂದೇನೂ ಅರ್ಥವಲ್ಲ. ಅಲ್ಲಿಗೆ ತಂದೆಯ ಮೂಲಕ, ತಂದೆಯ ಶರೀರಕ್ಕೆ ಧಾನ್ಯದ ಮೂಲಕ, ಧಾನ್ಯಕ್ಕೆ ಮಳೆಯ ಮೂಲಕ, ಮಳೆಗೆ ಮೋಡದ ಮೂಲಕ, ಮೋಡಕ್ಕೆ ಆಕಾಶದ ಮೂಲಕ, ಆಕಾಶಕ್ಕೆ ಸ್ವರ್ಗದಿಂದ, ಸ್ವರ್ಗಕ್ಕೆ ಭೂಮಿಯಿಂದ........ ಹೀಗೆ ಚಕ್ರದಂತೆ ಆವರ್ತನೆ. ಹೇಗೆ ರಾಜಾಂಗಣಕ್ಕೆ ಬಡಗುಮಾಳಿಗೆಯಿಂದ, ಬಡಗುಮಾಳಿಗೆಗೆ ಕೃಷ್ಣಮಠದಿಂದ, ಕೃಷ್ಣಮಠಕ್ಕೆ ಮನೆಯಿಂದ........ ಹೀಗೆಯೇ ಸುತ್ತುತ್ತ ಇರುವುದೋ ಹಾಗೆ. ಆದರೂ ಸಾಮಾನ್ಯವಾಗಿ ತಾಯಿಯ ಗರ್ಭದಿಂದ ಹೊರಹೊಮ್ಮುವುದು ಎಂದಷ್ಟೇ ಹೇಳಲಾಗುವುದು. ಇಂತಹ ಜನ್ಮ ದೇವರ ಪಾಲಿಗೆ ಇಲ್ಲ. ತಾಯಿಯ ಗರ್ಭದಲ್ಲಿ ಇಲ್ಲ ಎಂದಲ್ಲ. ಆದರೆ ಅಲ್ಲಿಯ ರಕ್ತ ಮಾಂಸಾದಿಗಳ ಸಂಬಂಧವೇ ಇಲ್ಲದಂತೆ ನಿರ್ಲಿಪ್ತನಾಗಿ ಇರುವನಷ್ಟೇ. ಯಾವ ದಿನ, ಯಾವ ಹೊತ್ತು, ಯಾವ ಗಳಿಗೆಗೆ ದೇವಕಿಯ ಗರ್ಭದಿಂದ ಹೊರಬರಬೇಕೆಂದು ಸಂಕಲ್ಪಿಸಿದ್ದನೋ ಅದೇ ದಿನ, ಅದೇ ಹೊತ್ತು, ಅದೇ ಗಳಿಗೆಗೆ ಹೊರಬಂದ.

ಆದ್ದರಿಂದ ನಮ್ಮ ನಿಮ್ಮಂತೆ ನಾಳೆ ನಾಶವಾಗುವಂತಹ ಪಾಂಚಭೌತಿಕ ದೇಹವನ್ನು ಹೊತ್ತು ಬರುವ ಜನ್ಮ ದೇವರ ಪಾಲಿಗೆ ಇಲ್ಲ.

ಭೀಷ್ಮರು ಕೃಷ್ಣನಲ್ಲಿ ಅಂತಾರೆ – ಕೃಷ್ಣ ನಿನ್ನಕ್ಕಿಂತ ಎಷ್ಟೋ ವರ್ಷ ಮೊದಲೇ ನಾನು ಭೂಮಿಗೆ ಬಂದವನು. ಸುಮಾರು ಏಳ್ನೂರು ವರ್ಷಗಳ ಮುಂಚೆ ಬಂದವನು. ನನ್ನ ಕಣ್ಣೆದುರೇ ನೀನು ಭೂಮಿಗೆ ಬಂದವನು. ನಾನು ದಿನದಿಂದ ದಿನಕ್ಕೆ ಬದಲಾಗುತ್ತ ಇದ್ದೇನೆ. ಆದರೆ ನಿನ್ನನ್ನು ಏಳ್ನೂರು ವರ್ಷಗಳ ಹಿಂದೆ ಹೇಗೆ ನೋಡಿದ್ದೆನೋ ಹಾಗೆಯೇ ಈಗಲೂ ಇದ್ದಿ. ಏನೂ ವಿಕಾರ ಇಲ್ಲ. 'ನ ಜಾಯತೇ' – ನಿನ್ನಲ್ಲಿ ದೈಹಿಕವಾಗಿ ವಿಕಾರವಾದ ಹುಟ್ಟಿಲ್ಲ. ಆದ್ದರಿಂದ ನೀನು ಅಜ. ಹುಟ್ಟು ಇಲ್ಲದವನು. ಪಾಂಚಭೌತಿಕ ಶರೀರವನ್ನು ಹಿಡಿದುಕೊಂಡು ತಾಯಿಯ ಗರ್ಭದಲ್ಲಿ ಒದ್ದಾಡಿ, ಬೇಡ ಎಂದಿದ್ದರೂ ತಾಯಿಯ ಗರ್ಭದಿಂದ ಒಂದು ದಿನ ಹೊರಹೊಮ್ಮಿದವನು ನೀನು ಅಲ್ಲ.

**೯೭. ಸರ್ವೇಶ್ವರಃ – ಎಲ್ಲರ ಎಲ್ಲ ಬಗೆಯ ಉತ್ಪತ್ತಿಗೂ ಒಡೆಯನಾಗಿರುವವನು.**

**ವಿವರಣೆ :** ಯಾಕೆ ಅಜ? ಎಂದರೆ ಹುಟ್ಟುವವರೆಲ್ಲ ನಿನ್ನ ಕೈಯೊಳಗೇ ಇರುವವರೆನ್ನುವರು ಭೀಷ್ಮರು – 'ಸರ್ವೇಶ್ವರ' ಸರ್ವರಿಗೂ ಒಡೆಯ. ಯಾವ ವಿಷಯದಲ್ಲಿ? ಸದ್ಯ ಹುಟ್ಟಿನ ಪ್ರಸಂಗ ಬಂದಿರುವುದರಿಂದ ಎಲ್ಲರ ಹುಟ್ಟು ನಿನ್ನ ಕೈಯಲ್ಲಿದೆ. ಎಲ್ಲರ ಉತ್ಪತ್ತಿ ನಿನ್ನ ಕೈಯಲ್ಲಿದೆ. ಯಾರು ಯಾರು ಹೇಗೆ ಹೇಗೆ ಎಲ್ಲಿ ಎಲ್ಲಿ ಹುಟ್ಟಬೇಕೋ ಆ ಎಲ್ಲರ ಜಾತಕ ಇರುವುದು ನಿನ್ನ ಕೈಯಲ್ಲಿ. ಎಲ್ಲ ಬಿಡು ! ಆ ವಾಯುದೇವರ ಜಾತಕವೇ ನಿನ್ನ ಕೈಯಲ್ಲಿ ಉಂಟಂತೆ. ವಾಯುದೇವರು ಯಾರ ಮೂಲಕ, ಯಾವ ಜಾಗದಲ್ಲಿ, ಯಾವ ದಿನ ಹುಟ್ಟಬೇಕೆಂಬುದನ್ನು ಅವರಿಗೆ ತಾಕಿತ್ತು ಮಾಡಿದ್ದಿಯೋ, ಅದಕ್ಕನುಗುಣವಾಗಿ ಹುಟ್ಟಿ ಬಂದರು. ಹಾಗಾದರೆ ವಾಯುದೇವರ ಹುಟ್ಟೂ ನಿನ್ನ ಕೈಯಲ್ಲಿ; ಉಳಿದೆಲ್ಲರ ಹುಟ್ಟೂ ನಿನ್ನ ಕೈಯಲ್ಲಿ ಎಂದ ಮೇಲೆ ನಿನ್ನ ಹುಟ್ಟೂ ನಿನ್ನ ಕೈಯಲ್ಲಿಯೇ ಇದ್ದಿರಲೇಬೇಕು.ಆದ್ದರಿಂದ ನೀನು ನಿನಗೆ ಬೇಕಾದಂತೆ ಹುಟ್ಟುವವನು. ನಾವಾದರೂ ನಮಗೆ ಬೇಕಾದಂತೆ ಹುಟ್ಟುವವರಲ್ಲ. ಆದ್ದರಿಂದ ನೀನು 'ಸರ್ವೇಶ್ವರ' ಎಲ್ಲರಿಗೂ ಒಡೆಯ; ನಮ್ಮ ಸರ್ವಕ್ಕೂ ಒಡೆಯ. ನಮ್ಮ ಎಲ್ಲಾ ಬಗೆಯ ಉತ್ಪತ್ತಿಗಳಿಗೂ ನೀನೇ ಒಡೆಯ.

**೯೮. ಸಿದ್ಧಃ – ಯಾವಾಗಲೂ ಪ್ರತಿಯೊಂದು ವಿಷಯದಲ್ಲೂ ತಯಾರು ಆಗಿರುವವನು.**

ವಿವರಣೆ : ದೇವರು ಯಾಕೆ ಭೂಮಿಗೆ ಬಂದ? ಭೀಷ್ಮರಾದರೂ ಹಿರಿಯ ಕೊಟ್ಟ ಶಾಪ ಕಳೆದುಕೊಳ್ಳುವುದಕ್ಕಾಗಿ ಬಂದವರು. ಹೀಗೆ ಎಲ್ಲರೂ ಏನೋ ಸಾಧನೆ ಮಾಡುವುದಕ್ಕಾಗಿ ಭೂಮಿಗೆ ಬರುವವರು. ಯಾಕೆಂದರೆ ನಾವ್ಯಾರೂ ಇನ್ನೂ ' ಸಿದ್ಧ' ರಲ್ಲ. ತಯಾರು ಮಾಡುತ್ತಿದ್ದೇವೆಯೇ ಹೊರತು ಈಗಾಗಲೇ ತಯಾರು ಮಾಡಿದ್ದಿಲ್ಲ. ಆದ್ದರಿಂದ ನಾವು ಸಿದ್ಧರಲ್ಲ; ಸಾಧ್ಯರು; ಸಾಧನೆ ಮಾಡುವವರು. ದೇವರು ಯಾವಾಗಲೂ ಸಿದ್ಧ. ಯಾವಾಗಲೂ ದೇವರಲ್ಲಿ ಒಂದು ಸಾಧನೆ ಎಂದು ಇಲ್ಲವೇ ಇಲ್ಲ. ಬರುವಿಯೋ ನಾನು ಸಿದ್ಧ; ಹೋಗುವಿಯೋ ನಾನು ಸಿದ್ಧ, ಇರುವಿಯೋ ನಾನು ಸಿದ್ಧ. ಹೀಗೆ ಏನು ಕೇಳಿದರೂ ಸದಾ ದೇವರ ಉತ್ತರ 'ಸಿದ್ಧ'. ಯಾವಾಗಲೂ ನಾನು ತಯಾರು ! ನಮ್ಮಲ್ಲಿ ಮಾತ್ರ ಏನನ್ನು ಕೇಳಿದರೂ 'ಸಾಧ್ಯ' ಎನ್ನುವ ಮಾತೇ ಬರುವುದು. ಆದರೆ ದೇವರಲ್ಲಿ ಹಾಗಲ್ಲ, ತನಗಾಗಿ ಪಡೆಯಲು ಏನೂ ಇಲ್ಲ. ತನಗಾಗಿ ಸಂಪಾದನೆ ಮಾಡಿ ತುಂಬಿಸಿಕೊಳ್ಳತಕ್ಕಂತಹ ಪ್ರಸಂಗ ಯಾರಲ್ಲಿ ಇಲ್ಲವೋ ಅಂತಹವನು 'ಸಿದ್ಧ'.

ಅಧ್ಯಯನಾದಿಗಳನ್ನು ನಡೆಸಿ, ಕರ್ತವ್ಯಗಳನ್ನೆಲ್ಲ ಪಾಲಿಸಿ ಇರುವ ಕೆಲವು ವೃದ್ಧರು ಹೇಳುವುದುಂಟು– ಇನ್ನು ದೇವರು ಕರೆದುಕೊಂಡು ಹೋಗುವುದಾದರೆ ನಾನು 'ಸಿದ್ಧ'. ಈ ಜನ್ಮದಲ್ಲಿ ಏನೇನನ್ನು ಮಾಡಬೇಕೋ ಅವನ್ನೆಲ್ಲ ಮಾಡಿದ್ದಾಯಿತು.

ಇಂತಹ 'ಸಿದ್ಧತೆ' ದೇವರಲ್ಲಿ ಸ್ವಾಭಾವಿಕವಾಗಿರುವುದು. ಪ್ರತಿಯೊಂದು ವಿಷಯದಲ್ಲೂ ಯಾವಾಗಲೂ ಅವನು 'ಸಿದ್ಧ'. ಎಲ್ಲ ವಿಷಯದಲ್ಲೂ ಯಾವಾಗಲೂ

'ತಯಾರು' – ಎಂಬ ಶಬ್ದ ಯಾರ ಬಾಯಿಯಿಂದ ಬರುವುದೋ ಅವನು ದೇವರು.

ನಮ್ಮಲ್ಲೂ ಇಂತಹ ಸಿದ್ಧತೆ ಇರಬೇಕು. ಯಮ ಯಾವಾಗ ಕರೆದರೂ ಹೋಗಲು ಸಿದ್ಧರಾಗಿರಬೇಕು. ದಾಸರು ಒಂದು ಹಾಡಲ್ಲಿ ತಿಳಿಸಿರುವರು ಯಮನ–ಕಿಂಕರರು ಕರೆದರೆ 'ಮನೆ ಒಕ್ಕಲು' ಆಗಲಿಲ್ಲ ಎಂಬ ನೆಪ ಒಡ್ಡಲಾಗುವುದು. ಮನೆ ಶಾಂತವಾಗಿದ್ದರೆ 'ಆ ಮನೆಯ ಒಕ್ಕಲೇ ಆಗಿಲ್ಲವೋ?' – ಎಂದು ವಿಚಾರಿಸುವ ನಮ್ಮ ಪ್ರಕಾರ ಮನೆಯಲ್ಲಿ ಗಲಾಟೆ ಮಾಡುವುದೇ ಅದರ ಒಕ್ಕಲು ಎಂಬಂತೆ ಇದೆ. ಆದರೆ ನಿಜವಾಗಿ 'ಮನೆ' ಎಂದರೆ ಈ ದೇಹ. ಅದರ ಒಕ್ಕಲು ಎಂದರೆ ಭಗವಂತನ ಜ್ಞಾನಾದಿಗಳಿಂದ ಅದನ್ನು ತುಂಬಿಸುವುದು. ಇದೇ ಆಧ್ಯಾತ್ಮಿಕವಾದ ಮನೆ ಒಕ್ಕಲು. ಈ ಮನೆ ಒಕ್ಕಲು ಎಳೆ ವಯಸ್ಸಿನಲ್ಲೇ ನಡೆಸಬೇಕು. ವೃದ್ಧಾಪ್ಯದಲ್ಲಿ ನಡೆಸುವೆನೆಂದರೆ ಯಮ ಮುಂದಿನ ಜನ್ಮದಲ್ಲಿ ಮನೆ ಒಕ್ಕಲು ಮಾಡುವಿಯಂತೆ ಈಗ ಬಾ ಎಂದು ತಾಕೀತು ಮಾಡುವನು. ಆದ್ದರಿಂದ ಯಮ ಯಾವ ಕ್ಷಣದಲ್ಲಿ ಕರೆದರೂ ಜ್ಞಾನಾರ್ಜನೆ ಮಾಡಿ, ಲೋಕೋಪಕಾರ ನಡೆಸಿ, ವೈಯುಕ್ತಿಕ ಧಾರ್ಮಿಕ,ಆಧ್ಯಾತ್ಮಿಕ ಸಾಧನೆಗಳನ್ನು ಪೂರೈಸಿ – 'ನಾನು ಸಿದ್ಧ' ಎನ್ನುವಂತಿರಬೇಕು.

**೯೯. ಸಿದ್ಧಿಃ – ಜಪಾದಿಗಳ ಸಿದ್ಧಿ ಯಾರ ಕೈಯಲ್ಲಿ ಇರುವುದೋ ಅಂತಹವನು.**

**ವಿವರಣೆ** : ಏನು ಸಿದ್ದಿ ಅಂದರೆ? ಇಷ್ಟು ಜಪ ಮಾಡಿದ್ದೇನೆ, ಏನೂ ಸಿದ್ದಿ ಆಗಿಲ್ಲ.ಹೀಗೆ 'ಸಿದ್ಧಿ' ಎಂದು ವ್ಯವಹರಿಸಲಾಗುವುದು ತಾನೇ? ಕೃಷ್ಣಷಡಕ್ಷರಮಂತ್ರ ಆರು ಲಕ್ಷ ಸಂಖ್ಯೆಯಲ್ಲಿ, ನಾರಾಯಣಾಷ್ಟಾಕ್ಷರಮಂತ್ರ ಎಂಟು ಲಕ್ಷ ಸಂಖ್ಯೆಯಲ್ಲಿ ಜಪಿಸಿದೆವು. ಏನು ಉದ್ದೇಶ? 'ಮಂತ್ರ ಸಿದ್ಧಿ' ಆಗಬೇಕು. 'ಮಂತ್ರ ಸಿದ್ಧಿ' ಅಂದರೆ ಅಷ್ಟು ಸಂಖ್ಯೆಯ ಜಪ ಮುಗಿದು, ಅದಕ್ಕೆ ಸಂಬಂಧಿಸಿದ ಹೋಮಾದಿಗಳು ಮುಗಿದ ಮೇಲೆ ಯಾರಿಗಾದರೂ ಯಾವುದಾದರೂ ಉದ್ದೇಶದಿಂದ ಫಲ ಕೊಟ್ಟರೆ ಆ ಉದ್ದೇಶ ಈಡೇರಬೇಕು. ಆಗ ಮಂತ್ರ ಸಿದ್ದಿ ಆಗಿದೆ ಎನ್ನಲಾಗುವುದು.

ಆದರೆ ಜಪ ಮಾಡಿದವರಿಗೆಲ್ಲ ಮಂತ್ರ ಸಿದ್ಧಿ ಆಗುವುದೆಂದೇನೂ ಹೇಳುವಂತಿಲ್ಲ. ದುರ್ಯೋಧನ ಪ್ರತಿನಿತ್ಯ ಮೂರುಸಾವಿರ ಮಂತ್ರ ಜಪ ಮಾಡುತ್ತಿದ್ದ. ಅವನಿಗೆ ಏನು ಸಿದ್ಧಿ ಆಯಿತು? ಸಾವು ಸಿದ್ಧಿಯಾಯಿತಷ್ಟೇ.

ಕೆಲವರು ಮಂತ್ರ ಜಪ ಮಾಡಿದರೂ ಸಿದ್ಧಿಸುವುದಿಲ್ಲ. ಕೆಲವರು ಮಂತ್ರ ಜಪ ಮಾಡದೆ ಕೆಲವರಿಗೆ ಮಾತು ಹೇಳಿದರೂ ಸಿದ್ದಿಸುವುದು. ಯಾಕೆ? 'ಸಿದ್ದಿ' ಮಂತ್ರ ಜಪಿಸುವವನ ಕೈಯಲ್ಲಿ ಇಲ್ಲ. ಬದಲಾಗಿ ದೇವರ ಕೈಯಲ್ಲಿ ಇದೆ. ದೇವರು ಜಪ ಮಾಡುವವನಿಗೆ ಸಿದ್ಧಿ ನೀಡಬೇಕೆಂದರೆ ಸಿದ್ಧಿ ಉಂಟಾಗುವುದು; ಸಿದ್ಧಿ ದೊರಕಬಾರದೆಂದರೆ ಸಿದ್ಧಿ ಉಂಟಾಗುವುದಿಲ್ಲ.

ಹೀಗೆ ಎಲ್ಲರ ಸಿದ್ಧಿ ಯಾರ ಕೈಯಲ್ಲಿ ಇದೆಯೋ ಅಂತಹ ದೇವರನ್ನೇ 'ಸಿದ್ಧಿ'

ಎಂದು ಕರೆಯಲಾಗಿದೆ.

ಮಾತು ಸಿದ್ಧಿಸಿತು, ಮಾತು ಫಲಿಸಿತು – ಎಂದರೂ ದೈವಾನುಗ್ರಹ ಬಂತು ಎಂದರೂ ಒಂದೇ ಅರ್ಥ.

**೧೦೦. ಸರ್ವಾದಿ: – * ಎಲ್ಲರಿಗೂ ಮೊದಲಿಗನಾಗಿ ಇರುವವನು.**
*** ಎಲ್ಲರಿಗೂ ಕಾರಣನಾಗಿ ಇರುವವನು.**

**ವಿವರಣೆ** : ಸರ್ವರಿಗೂ ಆದಿ – ಸರ್ವಾದಿ. ಸರ್ವಶಬ್ದದಿಂದ ಜಡ ಹಾಗೂ ಚೇತನ ಎರಡರದ್ದೂ ಸಂಗ್ರಹ ಆಗುವುದು. ಜಡಕ್ಕೂ ಆದಿಯಾಗಿ, ಚೇತನರಿಗೂ ಆದಿಯಾಗಿ ಭಗವಂತ ಇದ್ದಾನೆ. ಎಲ್ಲರಿಗೂ ಮೊದಲಿಗೆ ಇರುವವನು. ಎಲ್ಲರಿಗೂ ಕಾರಣನಾಗಿ ಇರುವವನು. ಆದಿ ಶಬ್ದಕ್ಕೆ ಕಾರಣ ಎಂದೂ ಹೇಳಬಹುದು; ಮೊದಲಿಗೆ ಇರುವವನು ಎಂದೂ ಹೇಳಬಹುದು.

**೧೦೧. ಅಚ್ಯುತಃ– ದೇಶತಃ, ಕಾಲತಃ ಹಾಗೂ ಗುಣತಃ ಚ್ಯುತಿ ಇಲ್ಲದವನು.**

**ವಿವರಣೆ** : ಶ್ರೀಮಧ್ವಾಚಾರ್ಯರು ದ್ವಾದಶ ಸ್ತೋತ್ರದಲ್ಲಿ **'......... ಅಚ್ಯುತೋ ಯೋ ಗುಣೈಃ.......'** ಭಗವಂತನನ್ನು ಸ್ತುತಿಸುವವರು. **'ಯೋ ಅಚ್ಯುತೋ'** ಯಾರು ಯಾವುದೇ ಚ್ಯುತಿಗೆ, ನ್ಯೂನತೆಗೆ ಒಳಗಾಗಿರುವುದಿಲ್ಲವೋ ಅಂತಹವನು. ಯಾವುಗಳ ಚ್ಯುತಿ ಇಲ್ಲ? **'ಗುಣೈಃ ಅಚ್ಯುತ:'** ಯಾವ ಗುಣದಿಂದಲೂ ಚ್ಯುತಿ ಇಲ್ಲ. ಅಂದರೆ ದೇವರಲ್ಲಿ ಈವೊಂದು ಗುಣ ಇದ್ದರೆ ಚೆನ್ನಾಗಿ ಇರುತ್ತಿತ್ತಲ್ಲ? – ಎನ್ನುವಂತಿಲ್ಲ. ಒಬ್ಬ ಭಾರೀ ದಾನ ಮಾಡುತ್ತಿದ್ದ. ಆದರೆ ದರ್ಪದಿಂದಲೇ ವ್ಯವಹರಿಸುತ್ತಿದ್ದ. ಆಗ ಅವನ ಬಗ್ಗೆ ಒಬ್ಬ ಟೀಕಿಸುವನು – ಆ ವ್ಯಕ್ತಿಗೆ ಶ್ರೀಮಂತಿಕೆಯ ಜೊತೆಗೆ ಸ್ವಲ್ಪ ಸೌಜನ್ಯವೂ ಇದ್ದಿದ್ದರೆ ಚೆನ್ನಾಗಿರುತ್ತಿತ್ತಲ್ಲವೇ? – ಈ ರೀತಿಯಾಗಿ ಜನರ ಬಗ್ಗೆ ಹೇಗೆ ಆಡಿಕೊಳ್ಳುವೆವೋ ಹಾಗೆ ದೇವರ ವಿಷಯದಲ್ಲಿ ಯಾವ ಗುಣದ ಬಗ್ಗೆಯೂ ಆಡಿಕೊಳ್ಳುವಂತಿಲ್ಲ. ದೇವರಲ್ಲಿ ಇದೊಂದು ಗುಣ ಇದ್ದಿದ್ದರೆ ಎಷ್ಟು ಚೆನ್ನಾಗಿತ್ತು? ಎಂದು ಹೇಳತಕ್ಕ ಪ್ರಸಂಗ ಇಲ್ಲ. ನಮ್ಮ ತಲೆಗೆ ಯಾವ ಗುಣ ಅಂತ ಬರುವುದೋ ಅದು ಮೊದಲು ಇರುವುದೇ ದೇವರಲ್ಲಿ. ಅಲ್ಲಿಂದ ಪ್ರತಿಬಿಂಬಿತವಾಗಿಯಷ್ಟೇ ಬೇರೆಯವರಲ್ಲಿ ಬರುವುದು.

ಹೀಗೆ ಗುಣಗಳಿಂದ ಚ್ಯುತಿ ಇಲ್ಲದವನು.

ಅವನು ಅಲ್ಲಿ ಇದ್ದಾನೆ; ಇಲ್ಲಿ ಇರಬಾರದಿತ್ತಾ?– ಎಂದು ಭಗವಂತನ ಬಗ್ಗೆ ಹೇಳುವಂತಿಲ್ಲ. ಯಾಕೆಂದರೆ ಅವನಲ್ಲಿ ದೇಶತಃ ಚ್ಯುತಿ ಇಲ್ಲ. ಅವನು ಆಗ ಇದ್ದ. ಈಗ ಇದ್ದಿದ್ದರೆ ಚೆನ್ನಾಗಿರುತಿತ್ತು.ಎಂದೇನೂ ಭಗವಂತನ ಬಗ್ಗೆ ಹೇಳುವಂತಿಲ್ಲ. ಯಾಕೆಂದರೆ ಅವನಲ್ಲಿ ಕಾಲತಃ ಚ್ಯುತಿ ಇಲ್ಲ.

ಚ್ಯುತಿ, ನ್ಯೂನತೆ ಬರುವುದಾದರೆ ಕಾಲತಃ, ದೇಶತಃ ಹಾಗೂ ಗುಣತಃ–

## ‘ಶ್ರೀ ಚತುರಾತ್ಮನೇ ನಮಃ’ ‘ಶ್ರೀ ಚತುರ್ವ್ಯೂಹಾಯ ನಮಃ’



ವಟಪತ್ರ ಶಾಯಿ ಶ್ರೀಕೃಷ್ಣಾಭಿನ್ನ ನಾರಾಯಣನಿಂದ ಪ್ರಾದುರ್ಭವಿಸಿದ ಮೋಕ್ಷಪ್ರದ ವಾಸುದೇವ, ಸಂಹಾರಕ ಸಂಕರ್ಷಣ, ಸೃಷ್ಟಿಕರ್ತ ಪ್ರದ್ಯುಮ್ನ ಹಾಗೂ ಪಾಲಕ ಅನಿರುದ್ಧ ಈ ನಾಲ್ಕು ಭಗವದ್ರೂಪಗಳನ್ನು ವಿ.ಸ.ನಾಮದ ಭಗವಂತನ ಚತುಮೂರ್ತಿಗಳ ಪ್ರಸ್ತಾವವುಳ್ಳ ‘ಚತುರಾತ್ಮಾ’ ‘ಚತುರ್ವ್ಯೂಹಃ’ - ಮುಂತಾದ ನಾಮಗಳಿಂದ ಅರ್ಥಾನುಸಂಧಾನ ನಡೆಸಬಹುದು.

**'ಶ್ರೀ ನಾರಸಿಂಹವಪುಷೇ ನಮಃ' 'ಶ್ರೀ ವಿದಾರಣಾಯ ನಮಃ'**
**'ಶ್ರೀ ಸಿಂಹಾಯ ನಮಃ'**



ಉಡುಪಿ ಕಾಣಿಯೂರು ಮಠದ ಶ್ರೀರಾಮತೀರ್ಥರಿಗೆ ಶ್ರೀಮಧ್ವರು ಪೂಜಿಸಿ, ಅನುಗ್ರಹಿಸಿದ ಯೋಗನರಸಿಂಹನ ಪ್ರತೀಕದಲ್ಲಿ ವಿ.ಸ.ನಾಮದ ದುರಿತ ಪರಿಹಾರ, ಭಯ, ಸಂಹಾರ ಇವುಗಳ ಪ್ರಸ್ತಾವುಳ್ಳ 'ನಾರಸಿಂಹ ವಪುಃ' 'ವಿದಾರಣಃ' 'ಯೋಗೀಶಃ' 'ಸಿಂಹಃ' ಮುಂತಾದ ನಾಮಗಳಿಂದ ಅರ್ಥಾನುಸಂಧಾನ ನಡೆಸಬಹುದಾಗಿದೆ.

ಎಂಬುದಾಗಿ ಮೂರು ಬಗೆಗಳಿಂದ ಬರಬೇಕು. ನಮ್ಮಲ್ಲಿ ಕಾಲತಃ ಚ್ಯುತಿ ಇರುವುದುಂಟು. ಅವರು ಇನ್ನೊಂದು ವರ್ಷ ಬದುಕಿದ್ದರೆ ಮರಿಮಗನ ಮುಖ ನೋಡುತ್ತಿದ್ದರು ತಾನೆ? ಎಂದೆಲ್ಲ ವ್ಯಕ್ತಿಗಳ ಬಗ್ಗೆ ಹೇಳ್ತೇವೆಯೇ ಹೊರತು ಭಗವಂತನ ಬಗ್ಗೆ ಹಾಗೆಲ್ಲ ವ್ಯವಹರಿಸುವುದಿಲ್ಲ. ಕೃಷ್ಣನ ದಾಂಪತ್ಯ ಜೀವನದ ಪರೀಕ್ಷೆಯಲ್ಲಿ ತೊಡಗಿದ್ದ ನಾರದರು ಹದಿನಾರು ಸಾವಿರದ ನೂರು ಪತ್ನಿಯರ ಮನೆಗಳಲ್ಲೂ ಶ್ರೀಕೃಷ್ಣನ ಇರವನ್ನು ಕಂಡಿದ್ದಾರೆ. ಇದರಿಂದ ಅವನಿಗೆ ದೇಶತಃ ಚ್ಯುತಿ ಇಲ್ಲ ಎಂಬುದು ಸ್ಪಷ್ಟ. ಮಹಾಭಾರತ ಯುದ್ಧ ಮುಗಿದ ಮೇಲೆ ಕೃಷ್ಣ ಅರ್ಜುನನನ್ನು ಕರೆದುಕೊಂಡು ಕೌರವರ ಶಿಬಿರಕ್ಕೆ ಹೋಗಿದ್ದ. ಆಗ ಪಾಂಡವರ ಶಿಬಿರಕ್ಕೆ ಅಶ್ವತ್ಥಾಮಾಚಾರ್ಯರು ನುಗ್ಗಿ ಹತ್ಯೆ ನಡೆಸಿದ್ದರು. ಆಗ ಅಲ್ಲಿ ಶ್ರೀಕೃಷ್ಣ ಇರಬಾರದಿತ್ತಾ? ಅನಿಸುವುದು. ಆದರೆ ಕೃಷ್ಣ ಅಲ್ಲೂ ಇದ್ದ. ಅಶ್ವತ್ಥಾಮಾಚಾರ್ಯರು ಕಂಡಿದ್ದಾರೆ –**'ಪರೀತಂ ವಾಸುದೇವೇನ ಬಹುಕೋಟಿಸ್ವರೂಪಿಣಾ....'**.

ಹಾಗೆಯೇ ಆ ವ್ಯಕ್ತಿಗೆ ಇದೊಂದು ಗುಣ ಬರುತ್ತಿದ್ದರೆ ಬಂಗಾರದ ಪುಷ್ಪಕ್ಕೆ ಪರಿಮಳ ಬಂದಂತೆ ಆಗುತ್ತಿತ್ತಲ್ಲ – ಎಂದೆಲ್ಲ ಹೇಳುವೆವು. ದೇವರಲ್ಲಿ ಎಲ್ಲಾ ಗುಣಗಳೂ ಇರುವುದರಿಂದ ಆ ಗುಣ ಇಲ್ಲ ಈ ಗುಣ ಇಲ್ಲ – ಎಂದು ಹೇಳುವಂತಿಲ್ಲ.

ಹೀಗೆ ಕಾಲತಃ ಚ್ಯುತಿ ಇಲ್ಲ, ದೇಶತಃ ಚ್ಯುತಿ ಇಲ್ಲ ಹಾಗೂ ಗುಣತಃ ಚ್ಯುತಿ ಇಲ್ಲ – ಹೀಗೆ ಯಾರು ಮೂರು ವಿಧವಾದ ಚ್ಯುತಿಯೂ ಇಲ್ಲದವನೋ ಅವನು ಅಚ್ಯುತ.

**೧೦೨. ವೃಷಾಕಪಿಃ – ಧರ್ಮದಿಂದ ಎಂದೂ ಚಲನೆ ಹೊಂದದವನು.**

**ವಿವರಣೆ :** ವೃಷ + ಅಕಪಿ ಇವೆರಡು ಸೇರಿ ವೃಷಾಕಪಿ ಎಂದಾದದ್ದು. ಧರ್ಮಕ್ಕೆ, ಒಳ್ಳೆಯ ಕೆಲಸಕ್ಕೆ **'ವೃಷ'** ಎಂದು ಹೆಸರು. ವೃಷ ಎಂದರೆ ಅಭೀಷ್ಟಗಳ ವರ್ಷಣೆ ಮಾಡುವಂತಹದ್ದು. ಅಭೀಷ್ಟಗಳ ವರ್ಷಣೆ ಧರ್ಮಾಚರಣೆಯಿಂದ ತಾನೆ? ಜೀವನದಲ್ಲಿ ಒಳ್ಳೆಯ ಕೆಲಸಗಳನ್ನು ಮಾಡಿದರೆ ನಮ್ಮ ಅಭೀಷ್ಟಗಳ ವರ್ಷಣೆ – ಸುರಿಸುವಿಕೆ ಆಗುವುದು. ಯಾವುದರಿಂದ ನಮಗೆ ಜೀವನದಲ್ಲಿ ಅಭೀಷ್ಟಗಳ ವರ್ಷಣೆ ಆಗುವುದೋ ಅಂತಹ ಧರ್ಮಕ್ಕೆ ವೃಷ ಎಂದು ಹೆಸರು. ಅಧರ್ಮಕ್ಕೆ ಅವೃಷ ಎಂಬ ಹೆಸರು.

ಕಪಿ ಎಂದರೆ ಚಲನೆ. ಕಂಪತೇ ಇತಿ ಕಪಿಃ. ಕೋತಿಗೆ ಕಪಿ ಎಂದು ಹೆಸರು ಅದು ದೈಹಿಕವಾಗಿ ಚಲಿಸುತ್ತ ಇರುವುದೆಂದು, ದೈಹಿಕವಾಗಿ ಕೋತಿಗಳು ಕಪಿಗಳೆನಿಸಿದರೆ, ಮಾನಸಿಕವಾಗಿ ನಾವು ಕಪಿಗಳು. ನಾವು ಒಂದೇ ಕಡೆ ಕೂತಿದ್ದರೂ ಮಾನಸಿಕವಾಗಿ ಎಲ್ಲೆಲ್ಲೋ ಅಲೆದಾಡುತ್ತಿರುತ್ತೇವೆ.

ಭಗವಂತ ಅಕಪಿ, ಚಲನೆವುಳ್ಳವನಲ್ಲ. ಎಂದೂ ವೃಷ ಎನಿಸುವ ಧರ್ಮಮಾರ್ಗದಿಂದ ಚಲನೆವುಳ್ಳವನಲ್ಲ. ವಿರೋದಪಕ್ಷದಲ್ಲಿದ್ದ ಭೀಷ್ಮರೇ ಕೃಷ್ಣನೆದುರು ಈ ಸ್ತುತಿಯನ್ನು ನಡೆಸುತ್ತಿದ್ದಾರೆಂದರೆ ಕೃಷ್ಣರೂಪದಲ್ಲಿ ಪರಮಾತ್ಮ ಧರ್ಮಮಾರ್ಗದಿಂದ ಚಲನೆ ಹೊಂದಲೇ ಇಲ್ಲ– ಎಂಬುದನ್ನು ಒಪ್ಪಿಕೊಳ್ಳಲೇಬೇಕಾಗುವುದು.

ವಿರೋಧಪಕ್ಷದಲ್ಲಿದ್ದ ಭೀಷ್ಮಾಚಾರ್ಯರು ಕೃಷ್ಣನನ್ನು ವೃಷಾಕಪಿ – ಎಂದೂ ಧರ್ಮಮಾರ್ಗದಿಂದ ಚಲಿತನಾದವನು, ಭ್ರಷ್ಟನಾದವನು ಅಲ್ಲ ಎಂದು ಉದ್ಘೋಷಿಸಿರುವರು.

ಮೇಲ್ನೋಟಕ್ಕೆ ಕೆಲವು ಸಂಧರ್ಭದಲ್ಲಿ ಕೃಷ್ಣ ಧರ್ಮಮಾರ್ಗವನ್ನು ಉಲ್ಲಂಘನೆ ಮಾಡಿದಂತೆ ಕಾಣಿಸುವುದು. ಆದ್ದರಿಂದ ಭೀಷ್ಮರು ಕೃಷ್ಣನನ್ನು 'ವೃಷಾಕಪಿ' ಎಂದು ಒತ್ತಿ ಕರೆಯುವ ಮೂಲಕ ಕೃಷ್ಣನ ಪ್ರವೃತ್ತಿಗಳನ್ನೆಲ್ಲ ಧಾರ್ಮಿಕವಾಗಿ ಸಮರ್ಥಿಸುವರು.

ಸಂಧಾನಕ್ಕೆ ಹೋದ ಕೃಷ್ಣ ಶೂದ್ರನಾದ ವಿದುರನ ಆತಿಥ್ಯವನ್ನು ಸ್ವೀಕರಿಸಿದನು. ಇದರಿಂದಾಗಿ ಕೃಷ್ಣನಿಗೆ ಧರ್ಮಭ್ರಷ್ಟತೆ ಬಂತೋ ಎಂಬ ಸಂದೇಹ ಬಂದರೆ ಇಲ್ಲ ಎನ್ನುವರು ಭೀಷ್ಮರು –' ವೃಷಾಕಪಿ'– ಧರ್ಮಭ್ರಷ್ಟನಲ್ಲ ಎನ್ನುವರು.

ಸಂಧಾನಸಭೆಯಿಂದ ತಿರುಗಿ ಬಂದವನು ಅಶ್ವತ್ಥಾಮಾಚಾರ್ಯರನ್ನು, ಕರ್ಣನನ್ನು – ಪಾಂಡವರ ಬಗೆಗೆ ಪಕ್ಷಪಾತಿಗಳಾಗುವಂತೆ ತಂತ್ರ ಹೂಡಿದ. ಆದರೂ ಭೀಷ್ಮರು ಕೃಷ್ಣನನ್ನು 'ವೃಷಾಕಪಿ' ಧರ್ಮಭ್ರಷ್ಟನಲ್ಲ– ಎಂದು ಕರೆದಿರುವರು. ದ್ರೋಣಾಚಾರ್ಯರು **'ಅಶ್ವತ್ಥಾಮಾ ಹತಃ'** ಎಂಬ ಮಾತು ಕೇಳಿ ಶಸ್ತ್ರಸಂನ್ಯಾಸ ಮಾಡಿ ಮೃತರಾದರು. 'ಅಶ್ವತ್ಥಾಮಾ ಹತಃ'– ಎಂದು ಹೇಳಿಸಿದವನು ಕೃಷ್ಣ. ಆದರೂ ಅವನು 'ವೃಷಾಕಪಿ'.

ಕರ್ಣ ಸಾಯುವ ಪ್ರಸಂಗ. ರಥದಿಂದ ಕೆಳಗಿದ್ದ ಕರ್ಣ ರಥ ಏರಲು ಅವಕಾಶವನ್ನು ಕೇಳುತ್ತಿದ್ದರೂ, ಅದಕ್ಕೆ ಅವಕಾಶ ನೀಡದೆ ಅರ್ಜುನನ ಮೂಲಕ ಕರ್ಣನ ಹತ್ಯೆ ಮಾಡಿಸಿದರೂ ಕೃಷ್ಣ ವೃಷಾಕಪಿ – ಧರ್ಮಭ್ರಷ್ಟನಲ್ಲ.

ಮಹಾಭಾರತ ಯುದ್ಧದ ಹದಿನೆಂಟು ದಿನಗಳಲ್ಲೂ ಯಾವುದೇ ಸಂದರ್ಭದಲ್ಲೂ ಕೃಷ್ಣ ನಿನ್ನಲ್ಲಿ ಧರ್ಮಭ್ರಷ್ಟತೆ ಇಲ್ಲ –ನೀನು 'ವೃಷಾಕಪಿ' ಯೇ– ಎಂದಿರುವರು ಭೀಷ್ಮರು, ಯಾವಾಗ ನೀನು ಅಧರ್ಮಕ್ಕೆ ಬೆಂಕಿಯೋ ಹಾಗಿರುವಾಗ ನೀನು ಅಧರ್ಮಾಚರಣೆ ಮಾಡಲು ಹೇಗೆ ಸಾಧ್ಯ? ನಿನ್ನಲ್ಲಿ ಧರ್ಮಭ್ರಷ್ಟತೆ ಎಂದೂ ಹಿಂದೆ ಬರಲಿಲ್ಲ; ಈಗ ಇಲ್ಲ; ಮುಂದೆ ಬರುವುದಿಲ್ಲ.

**೧೦೩. ಅಮೇಯಾತ್ಮಾ – ಪೂರ್ಣವಾಗಿ ತಿಳಿದುಕೊಳ್ಳಲು ಆಗದ ಸ್ವರೂಪ ಉಳ್ಳವನು.**

**ವಿವರಣೆ :** 'ಮಾತುಂ ಯೋಗ್ಯ:' ಮೇಯಃ ತಿಳಿಯಲಿಕ್ಕೆ ಯೋಗ್ಯ. ನೀರಿನ ಆಳ ಮೇಲಿನಿಂದ ತೀರ್ಮಾನ ಮಾಡಬೇಡ; ವ್ಯಕ್ತಿಯ ಆಳ ದೂರದಲ್ಲಿದ್ದುಕೊಂಡು ತೀರ್ಮಾನ ಮಾಡಬೇಡ. ನೀರಿಗೆ ಇಳಿದು ನೋಡು; ವ್ಯಕ್ತಿಯ ಜೊತೆಗೆ ಇದ್ದು ನೋಡು – ಎಂದು ಹಿರಿಯರು ಒಂದು ಎಚ್ಚರಿಕೆ ನೀಡಿರುವರು. ಒಬ್ಬ ವ್ಯಕ್ತಿಯ ನಡತೆಗಳೇನು, ಅವರ ವಿಚಾರಗಳೇನು– ಎಂದು ಅಳೆಯುವೆವು. ಹೀಗೆ ಅಳೆಯಲಿಕ್ಕೆ ಬಂದರೆ ಅವನು ಮೇಯ. ಅಳೆಯಲಿಕ್ಕೆ ಸಾಧ್ಯ ಇಲ್ಲ ಎಂದರೆ ಅಮೇಯ.

ಭೀಷ್ಮರು ಕೃಷ್ಣನಲ್ಲಿ ತಿಳಿಸ್ತಾರೆ – ಕೃಷ್ಣ ನಿನ್ನ ಒಡನಾಟ ಹೊಂದಿ ಇಷ್ಟು ಸಮಯ ಆಯಿತು. ಆದರೂ ನಿನ್ನನ್ನು ಅರ್ಥ ಮಾಡಿಕೊಳ್ಳಲೇ ಆಗಲಿಲ್ಲ. ನೀನು ಎಂತಹವನೆಂದು ನನಗೆ ಪೂರ್ಣವಾಗಿ ಅರ್ಥವಾಗಿಲ್ಲ.

ಜಗನ್ನಾಥದಾಸರು ಒಂದು ಮಾತು ತಿಳಿಸಿದ್ದಾರೆ– **' ಬಗೆಬಗೆಯ ನೂತನವ ಕಾಣುತ ಮಿಗೆ ಹರುಷದಿಂ ಪೊಗಳಿ ಹಿಗ್ಗುವ ತ್ರಿಗುಣಮಾನಿ ಮಹಾಲಕುಮಿ'** – ಲಕ್ಷ್ಮೀದೇವಿಗೇ ಅವನನ್ನು ಅಳೆಯಲಿಕ್ಕೆ ಸಾಧ್ಯವಾಗಲಿಲ್ಲ ಎಂದು ಈ ಮಾತಿನಿಂದ ತಿಳಿದುಬರುವುದು.

ಮಹಾಲಕ್ಷ್ಮಿ ನಮ್ಮ ಕಣ್ಣಿಗೆ ಕಾಣಿಸುವುದಿಲ್ಲ. ಆ ಕಾಲದ ಜನರ ಕಣ್ಣಿಗೆ ಕಾಣಿಸುವವರಲ್ಲೆಲ್ಲ ಹಿರಿಯರು ಭೀಷ್ಮರಾಗಿದ್ದರು. ಅವರೇ ಕೃಷ್ಣನಲ್ಲಿ ನಿನ್ನನ್ನು ಅಳೆಯುವುದಕ್ಕೆ ನನ್ನಿಂದ ಆಗಲಿಲ್ಲ – ಎಂದು ನಿವೇದಿಸಿಕೊಂಡಿರುವರು.ಯಾಕೆ ಪಾಂಡವರಿಗೆ ಸೋಲು ಬಂತು ಪಗಡೆಯಾಟದಲ್ಲಿ? ನಿನಗೆ ಗೊತ್ತಿದ್ದರೂ ಸೋಲು ಬರುವಂತೆ ಮಾಡಿದಿ. ಪಗಡೆಯಾಟಕ್ಕೆ ಬರಬೇಕೆಂದು ವಿದುರ ಕರೆಯಲು ಬರುವವರೆಗೆ ನೀನು ಅಲ್ಲಿದ್ದು, ವಿದುರ ಬರುವನೆಂದಾಗ ಜಾಗ ಖಾಲಿ ಮಾಡಿದ್ದಿ ಯಾಕೆ? ನನಗೆ ನಿನ್ನ ಚರ್ಯೆಯೇ ಅರ್ಥವಾಗುವುದಿಲ್ಲ. ಇನ್ನೂ ನನಗೆ ಅರ್ಥವಾಗದ ವಿಷಯಗಳು ನಿನ್ನಲ್ಲಿ ತುಂಬ ಇವೆ. ಅರ್ಜುನ ಪ್ರಯೋಗಿಸುವ ಬಾಣಗಳು ನಿನ್ನ ತಲೆ ಹಾದು ಬರುವಾಗ ನಿನ್ನ ಕಿರಣಗಳು ಶಕ್ತಿ ಆ ಬಾಣಗಳಲ್ಲಿ ಸೇರಿಕೊಂಡು ಆ ಬಾಣಗಳು ನನ್ನನ್ನು ತೆಗೆಯಲು ಸಾಕಾಗುತಿತ್ತು. ಅದಕ್ಕಾಗಿಯೇ ತಾನೇ ನೀನು ಅರ್ಜುನನ ರಥದಲ್ಲಿ ಮುಂದೆ ಕುಳಿತಿದ್ದು? ಹೀಗಿದ್ದರೂ ನೀನು ನನ್ನನ್ನು ಕೊಲ್ಲಲು ಶಿಖಂಡಿಯನ್ನೇ ತಂದು ಮುಂದಿಟ್ಟಿ. ನಿನ್ನ ಚರ್ಯೆ ಏನೆಂದೇ ತಿಳಿಯುವುದಿಲ್ಲ. ಆದುದರಿಂದಲೇ ನೀನು **'ಅಮೇಯಾತ್ಮಾ'**

**೧೦೪. ಸರ್ವಯೋಗವಿನಿಃಸೃತಃ –ಎಲ್ಲ ವಸ್ತುಗಳ ಸಂಬಂಧಗಳಿಂದ ರಹಿತನಾಗಿರುವವನು.**

**ವಿವರಣೆ :** ಭೀಷ್ಮರು ಇಷ್ಟು ಹೇಳಿದರೂ ಕೃಷ್ಣ ಅದನ್ನು ಕಿವಿಗೇ ಹಾಕಿಕೊಳ್ಳದೆ ಎನಗೆ ಸಂಬಂಧವೇ ಇಲ್ಲ ಎಂಬಂತೆ ಕುಳಿತಿದ್ದಾನೆ. 'ಸರ್ವಯೋಗವಿನಿಃ ಸೃತ: ' ಯೋಗ ಅಂದರೆ ಸಂಬಂಧ , ಸರ್ವ ಅಂದರೆ ಎಲ್ಲ ವಸ್ತುಗಳು. ವಿನಿಸೃತಃ ಅಂದರೆ ರಹಿತ. ಯಾವುದೇ ವಸ್ತುವಿನ ಸಂಬಂಧ ಇಲ್ಲದವನು. ಎಲ್ಲ ಕಡೆ ಇದ್ದಾನೆ ಕೃಷ್ಣ. ಎಲ್ಲಿ ಅವನ ವಿಚಾರ ನಡೆಯುವುದೋ ಅಲ್ಲಿ ಕೃಷ್ಣ ಇದ್ದಾನೆ. ಆದರೆ ಮಾತ್ರ ತನಗೆ ಲೇಪ ಇಲ್ಲದಂತೆ ಮಾಡಿಕೊಂಡಿರುವನು. ದುರ್ಯೋಧನನ ಸಭೆಗೆ ಹೋದ. ಅಲ್ಲಿ ದುರ್ಯೋಧನ ಅವಮಾನ ಮಾಡಿದ. ಆದರೆ ಕೃಷ್ಣ ಅದು ತನಗೆ ಮಾಡಿದ್ದೇ ಅಲ್ಲ ಎನ್ನುವಂತೆ ಸಭೆಯಲ್ಲಿ ಕುಳಿತುಕೊಂಡ.

ಹೀಗೆ ಎಲ್ಲಿ ಏನು ಆದರೂ ಅದರ ಲೇಪ ಇಲ್ಲದಂತೆ ಮಾಡಿಕೊಳ್ಳುವವನು.

'ಪದ್ಮಪತ್ರಮಿವಾಂಭಸಾ' – ಎಂದು ಒಂದು ಮಾತು ಅಂದ್ರು. ಕೆಸರಿನಲ್ಲೇ ಕಮಲದ ಎಲೆ ಇರುವುದು. ಆದರೆ ಅದು ಕೆಸರಿನ ಕೊಳೆಯನ್ನು ತನಗೆ ಅಂಟಿಸಿಕೊಳ್ಳುವುದಿಲ್ಲ ಹೇಗೋ ಹಾಗೆಯೇ ದೇವರು ಕಶ್ಮಲದಲ್ಲಿದ್ದಾನೆ; ಸುಶ್ಮಲದಲ್ಲಿದ್ದಾನೆ. ಎಲ್ಲ ಕಡೆ ಇದ್ದಾನೆ. ಆದರೆ ಯಾವುದನ್ನೂ ತನಗೆ ಅಂಟಿಸಿಕೊಳ್ಳುವುದಿಲ್ಲ. ವಸುದೇವ ದೇವಕಿಯರಿಗೆ ಮಗನಾಗಿ ಕಾಣಿಸಿಕೊಂಡ. ಆದರೆ ತಂದೆ ತಾಯಿ ಎಂದು ಏನೂ ಹಚ್ಚಿಕೊಳ್ಳದೆ ಅಲ್ಲಿಂದ ನಂದವ್ರಜಕ್ಕೆ ಬಂದುಬಿಟ್ಟ. ಅಲ್ಲಿ ಗೋಪಿಕಾ ಸ್ತ್ರೀಯರಿಗೆ ಪ್ರಿಯಕರನಾಗಿ ಕಾಣಿಸಿಕೊಂಡ. ಆದರೆ ಅಲ್ಲಿಂದ ಮಥುರೆಗೆ ನಿರ್ಲಿಪ್ತನಾಗಿ ತೆರಳಿದ. ತನಗೆ ಅತ್ಯಂತ ಪ್ರಿಯರಾಗಿದ್ದ ಪಾಂಡವರನ್ನೂ ಒಂದು ದಿನ ಬಿಟ್ಟು ಹೊರಟೇ ಬಿಟ್ಟ. ಪಾಂಡವರು ಹೋಗುವ ಮುಂಚೆಯೇ ತಾನು ಹೊರಟೇ ಹೋದ. ಆ ಮೂಲಕ ಯಾರ ಸಂಬಂಧವೂ ತನಗೆ ಇಲ್ಲ; ಯಾರನ್ನೂ ತಾನು ಹಚ್ಚಿಕೊಳ್ಳಲಿಲ್ಲ – ಎಂದು ಸ್ಪಷ್ಟಪಡಿಸಿದ. ಎಲ್ಲದರಲ್ಲೂ ಇದ್ದರೂ ಅವನಿಗೆ ಯಾವುದರದ್ದೇ ಸಂಬಂಧ ಇಲ್ಲ.

ಎರಡು ವ್ಯಕ್ತಿಗಳು ಅಪ್ಪ– ಮಗ ಆಗಿದ್ದರೂ ಏನೋ ಜಗಳವಾಡಿ ಅಪ್ಪ–ಮಗ ಸಂಬಂಧವನ್ನೇ ಕಳಕೊಂಡಿರುವಂತೆ ಭಗವಂತನು ಎಲ್ಲದರಲ್ಲಿ ಇದ್ದೂ ಯಾವುದರದ್ದೇ ಸಂಬಂಧವನ್ನು ಹಚ್ಚಿಕೊಳ್ಳುವುದಿಲ್ಲ. ಅಂದರೆ ಆ ವಸ್ತುಗಳ ಗುಣದೋಷಗಳಿಗೆ ಭಗವಂತ ತಾನು ತಲೆ ಕೊಡುವುದಿಲ್ಲ. ಆ ಗುಣದೋಷಗಳನ್ನು ತನಗೆ ಅಂಟಿಸಿಕೊಳ್ಳುವುದಿಲ್ಲ. ಸಾಮಾನ್ಯವಾಗಿ ಕುಂಕುಮಕೇಸರಿಯ ಒಟ್ಟಿಗೆ ನಮ್ಮ ವಸ್ತ್ರ ಇಟ್ಟರೆ ನಮ್ಮ ವಸ್ತ್ರ ಕುಂಕುಮಕೇಸರಿಯ ಪರಿಮಳವುಳ್ಳದಾಗುತ್ತದೆ. ಗಟಾರದ ಬದಿಯಲ್ಲಿ ನಮ್ಮ ವಸ್ತ್ರ ಇಟ್ಟರೆ ಗಟಾರದ ವಾಸನೆ ನಮ್ಮ ವಸ್ತ್ರಕ್ಕೆ ತಗಲುವುದು. ಆದರೆ ಕೃಷ್ಣ ಕುಂಕುಮಕೇಸರಿಯಲ್ಲಿದ್ದರೂ, ಗಟಾರದಲ್ಲಿದ್ದರೂ ಪರಿಮಳವನ್ನಾಗಲೀ, ದುರ್ಗಂಧವನ್ನಾಗಲೀ ತನಗೆ ಅಂಟಿಸಿಕೊಳ್ಳುವುದಿಲ್ಲ.

ಹೀಗೆ ಲೋಕದಲ್ಲಿರುವ ಯಾವುದೇ ವಸ್ತುವಿನ ಒಳ್ಳೆದನ್ನೂ, ಕೆಟ್ಟದನ್ನೂ ತನಗೆ ಅಂಟಿಸಿಕೊಳ್ಳದವನು.– **'ಸರ್ವಯೋಗವಿನಿಃಸೃತ'**

**ವಸುರ್ವಸುಮನಾಃ ಸತ್ಯಃ ಸಮಾತ್ಮಾ ಸಮ್ಮಿತಃ ಸಮಃ |**
**ಅಮೋಘಃ ಪುಂಡರೀಕಾಕ್ಷೋ ವೃಷಕರ್ಮಾ ವೃಷಾಕೃತಿಃ || ೧೨ ||**

**೧೦೫. ವಸುಃ – ಸಂಪದ್ರೂಪ.**

ವಿವರಣೆ : ವಸುಃ – ಸಂಪತ್ತು. ಭಗವಂತ ಸಂಪದ್ರೂಪ. ಯಾವ ಸಂಪತ್ತು ಬೇಕು? ಜ್ಞಾನ ಸಂಪತ್ತೋ ? ಪಶು ಸಂಪತ್ತೋ ? ಭೂಮಿ ಸಂಪತ್ತೋ ? ಧನಧಾನ್ಯ ಸಂಪತ್ತೋ? ಪುತ್ರ ಸಂಪತ್ತೋ? ಯಾವುದು ಬೇಕಾದರೂ ಕೃಷ್ಣ ಒಬ್ಬ ಮನೆಯಲ್ಲಿ ಇದ್ದರೆ ಸಾಕು ಎಲ್ಲ ಸಂಪತ್ತು ತನ್ನಿಂದ ತಾನಾಗಿಯೇ ಓಡಿಕೊಂಡು ಬರುವುದು.

ಆದ್ದರಿಂದ ದೇವರನ್ನು ವಸು – ಸಂಪತ್ತು – ಎಂದು ಕರೆಯಲಾಗುವದು.

**೧೦೬. ವಸುಮನಾಃ – ಸಂಪದ್ಭರಿತವಾದ ಮನಸ್ಸು ಉಳ್ಳವನು.**

ವಿವರಣೆ: ವಸುಃ ಎಂದರೆ ಸಂಪತ್ತು ಎಂದು ನೋಡಿದ್ದೇವೆ. ಮನಾ ಎಂದರೆ ಮನಸ್ಸು ಎಂದು ಗೊತ್ತು. ವಸುಮನಾ ಅಂದರೆ ಸಂಪದ್ಭರಿತವಾದ ಮನಸ್ಸು. ಸಂಪದ್ಭರಿತವಾದ ಮನಸ್ಸು ಅಂದರೂ ಧಾರಾಳವಾದ ಪುಷ್ಕಳವಾದ ಮನಸ್ಸು ಅಂದರೂ ಭಾರೀ ದೊಡ್ಡ ಮನಸ್ಸು ಅಂದರೂ ಒಂದೇ ಅರ್ಥ. ಹೃದಯ ವೈಶಾಲ್ಯವುಳ್ಳವ, ಭಾರೀ ದೊಡ್ಡ ಮನಸ್ಸು ಉಳ್ಳವ. ಭಾರೀ ಔದಾರ್ಯವುಳ್ಳವ ಎಂದರ್ಥ.

ಜ್ಞಾನಸಂಪತ್ತಾಗಲೀ, ಧನಾತ್ಮಕ ಸಂಪತ್ತಾಗಲೀ ಇರುವುದು ಮುಖ್ಯವಲ್ಲ. ಅದನ್ನು ಸಾಕಷ್ಟು ವಿತರಣೆ ಮಾಡಬೇಕು. ಸಂಪತ್ತು ಇದ್ದರೂ ಅದನ್ನು ವಿತರಿಸಿಲ್ಲ ಎಂದರೆ ಅಂತಹವನು ದರಿದ್ರ ಎಂದೇ ಅರ್ಥ. ಭಗವಂತನಲ್ಲಿ ಇರುವ ಸಂಪತ್ತನ್ನು ವಿನಿಯೋಗಿಸಿಕೊಳ್ಳಲು ಬೇಕಾದ ಉದಾರವಾದ ಮನಸ್ಸು ಇರುವುದರಿಂದ ಅವನು ಸಂಪನ್ನ. ತಾನು ತಿಳಿಸಿಕೊಡಬೇಕೆಂದೇ ಅನೇಕ ಅವತಾರಗಳನ್ನು ತಾಳುವನು. ಮೊದಲು ‘ವಸು’ ಎಂದು ಕರೆದರು. ಮತ್ತೆ ‘ವಸುಮನಾಃ’ ಎಂಬುದಾಗಿ ಮನಸ್ಸಿನ ಔದಾರ್ಯವೇ ಸಂಪತ್ತು ಎಂದು ಸ್ತುತಿಸಿರುವರು. ಧಾರಾಳವಾದ ಮನಸ್ಸೆಂಬ ಸಂಪತ್ತು ಉಳ್ಳವನೇ, ಒಟ್ಟಿನಲ್ಲಿ ಒಳ್ಳೆಯ ಮನಸ್ಸು ಉಳ್ಳವನೇ **‘ವಸುಮನಾಃ’**

**೧೦೭. ಸತ್ಯಃ – ಒಳ್ಳೆಯ ತಿಳುವಳಿಕೆ ಉಳ್ಳವನು.**

ವಿವರಣೆ : ಸತ್ + ಯ ಸತ್ಯ. ಸತ್ ಎಂದರೆ ಒಳ್ಳೆಯ. ಯ ಎಂದರೆ ಯಾನ, ಪ್ರಯಾಣ. ಶಾಸ್ತ್ರಕಾರರು ಬಹಳ ಮಾತನಾಡುವವರಲ್ಲ. ಪುಟ್ಟ ಪುಟ್ಟ ಮಾತಿನಿಂದ ಬಹಳಷ್ಟು ಅರ್ಥವನ್ನು ತೋರಿಸಿ ಕೊಡುವವರು ಅವರು. ಏಕಾಕ್ಷರ ಕೋಶ ಎಂದು ಸಂಸ್ಕೃತದಲ್ಲಿ ಉಂಟು. ಲೋಕದಲ್ಲೂ ‘ಸು’ ಎಂದರೆ ‘ಸುಕುನುಂಡೆ’– ಎಂದು ಮಾಡಿಬಿಟ್ಟ ಎಂಬುದಾಗಿ ಬೈಯುವ ಪ್ರಸಂಗದಲ್ಲಿ ಒಂದು ಅಕ್ಷರಕ್ಕೆ ದೊಡ್ಡ ದೊಡ್ಡ ಶಬ್ದದ ಅರ್ಥವನ್ನು ಹೇಳುವ ಕ್ರಮ ಇದೆ.

ಅದಕ್ಕನುಗುಣವಾಗಿ ಯ ಎಂದರೆ ಯಾನ. ಗಮನ ಎಂದರ್ಥವಲ್ಲ. ತಿಳುವಳಿಕೆ ಎಂದರ್ಥ. ತಿಳುವಳಿಕೆ ಮತ್ತು ಪ್ರಯಾಣ ಜೊತೆ ಜೊತೆಗೇ ಇರುವವು. ತಿಳುವಳಿಕೆಯಿಲ್ಲದೆ ಪ್ರಯಾಣ ಇಲ್ಲ. ಆದ್ದರಿಂದ ಆ ಎರಡನ್ನೂ ‘ಯ’ ಎಂಬ ಒಂದೇ ಅಕ್ಷರದಿಂದ ತಿಳಿಸಲಾಗುವುದು. ಸತ್ ಎಂದರೆ ಒಳ್ಳೆಯ ‘ಯ’ ತಿಳುವಳಿಕೆ ಉಳ್ಳವನು. ನಮಗೆ ಅತ್ಯಂತ ಬೇಕಾದದ್ದು ಒಳ್ಳೇ ತಿಳುವಳಿಕೆಯೇ, ತಿಳುವಳಿಕೆಯಲ್ಲಿ

ಮತ್ಸರ, ದ್ವೇಷಾದಿಗಳ ಕಲಬೆರಕೆ ಆಗದೆ, ಒಳ್ಳೆಯ ತಿಳುವಳಿಕೆ ಬಂತೋ ಆದರಿಂದ ಅವನಿಗೂ ಶಾಂತಿ, ಸಮಾಜಕ್ಕೂ ಶಾಂತಿ. ಒಂದು ವಸ್ತುವನ್ನು ಪೂರ್ಣವಾಗಿ ತಿಳಿಯಬೇಕು. ನಾನು ತಿಳಿದುಕೊಂಡಷ್ಟು ಬೇರೆ ಯಾರೂ ತಿಳಿದಿರಬಾರದು. ತಿಳಿದದ್ದನ್ನು ಎಂದೂ ಮರೆಯಬಾರದು. ಹೀಗಾದಾಗ ಆ ತಿಳುವಳಿಕೆ ಒಳ್ಳೆಯ ತಿಳುವಳಿಕೆ ಎನಿಸುವುದು.

ಮೂರು ಪ್ರಭೇದದ ಬುದ್ಧಿಗಳು ಪ್ರಸಿದ್ಧ. ಕಂಬಲ ಬುದ್ಧಿ ಎಂದರೆ ಎಷ್ಟೇ ದಪ್ಪದ 'ದಬ್ಬಣ'ದಿಂದ –ದೊಡ್ಡ ಸೂಜಿಯಿಂದ ಕಂಬಳವನ್ನು ಹೊಲಿದರೂ ಆ ದಬ್ಬಣ ತೆಗೆದಾಕ್ಷಣ ಕಂಬಳದ ತೂತು ಮುಚ್ಚಿಹೋಗಿ ಬಿಡುವುದು. ಹಾಗೆಯೇ ಉಪನ್ಯಾಸ ಕೇಳಿದಾಗ ಅರ್ಥವಾಗುವುದು. ಮತ್ತೆ ಪೂರ್ತಿ ಮರೆತು ಹೋಗುವುದು. ಇಂತಹ ಬುದ್ಧಿ ಕಂಬಲ ಬುದ್ಧಿ. ಮತ್ತೊಂದು ತೈಲ ಬುದ್ಧಿ. ಪಾತ್ರೆಯ ನೀರಿಗೆ ಸ್ವಲ್ಪ ಎಣ್ಣೆ ಹಾಕಿದರೂ ಅದು ಆ ನೀರು ತುಂಬ ಹರಡುವುದು. ಅದೇ ರೀತಿ ದೇವರ ಬಗ್ಗೆ ಸ್ವಲ್ಪ ಹೇಳಿದ್ದರೂ ಬೇರೆ ಬೇರೆ ಪುಸ್ತಕಗಳನ್ನೆಲ್ಲ ಪರಾಮರ್ಶ ಮಾಡಿ ಆ ಬುದ್ಧಿಯನ್ನು ಬೆಳೆಸಿಕೊಂಡಲ್ಲಿ ಅದು ತೈಲ ಬುದ್ಧಿ ಎನ್ನುತ್ತಾರೆ. ಒಂದಿಷ್ಟು ತುಪ್ಪ ತಣ್ಣೀರಿಗೆ ಹಾಕಿದರೆ ಅದು ಮುದ್ದೆ ಮುದ್ದೆ ಆಗಿ ಕೊನೆಗೆ ಇಷ್ಟೇ ಆಗುವುದು. ಅದರಂತೆ ಒಂದು ಗಂಟೆ ಕೊರೆದರೂ ಬುದ್ಧಿಯಲ್ಲಿ ಸ್ವಲ್ಪಮಾತ್ರ ಉಳಿದುಕೊಂಡರೆ ಅದನ್ನು 'ಘೃತಬುದ್ಧಿ' ಎಂದು ಕರೆದರು. ನಮ್ಮಲ್ಲಿ ಘೃತ, ತೈಲ, ಕಂಬಲ ಎಂದು ಈ ಮೂರೂ ಬುದ್ಧಿ ಉಂಟು.

ತಿಳಿದದ್ದನ್ನು ಮರೆಯಬಾರದು, ನಾವು ತಿಳಿದಷ್ಟನ್ನು ಬೇರೆ ಯಾರೂ ತಿಳಿದಿಲ್ಲ ಎನ್ನುವಷ್ಟು ತಿಳಿಯಬೇಕು, ಪೂರ್ಣವಾಗಿ, ಚೆನ್ನಾಗಿ ತಿಳಿಯಬೇಕು. ಈ ಬಗೆಯ ತಿಳಿವಳಿಕೆ ಭಗವಂತನಿಗೊಬ್ಬನಿಗೇ ಇರುವುದು. ಒಂದು ವಸ್ತುವನ್ನು ತಿಳಿದರೆ ಮರೆಯುವುದಿಲ್ಲ. ಯಾವುದೇ ವಸ್ತುವನ್ನು ಅವನಷ್ಟು ತಿಳಿದವರು ಯಾರೂ ಇಲ್ಲ. ಪ್ರತಿಯೊಂದು ವಸ್ತುವನ್ನೂ ಪೂರ್ಣವಾಗಿ, ಸಮಗ್ರವಾಗಿ ತಿಳಿಯುವನು. ಆದ್ದರಿಂದ ಅವನು 'ಸತ್ಯ'.

**೧೦೮. ಸಮಾತ್ಮಾ– ಒಂದೇ ರೀತಿಯಾದ ಶರೀರವುಳ್ಳವನು.**

**ವಿವರಣೆ :** ನಾನು ಹಿಂದೆ ಸೂಚಿಸಿದಂತೆ ವಿಷ್ಣುಸಹಸ್ರನಾಮದ ಈ ಭಾಗವನ್ನು ಪಠಿಸುವಾಗ 'ಹಾವು ಏಣಿ' ಆಟ ಪ್ರಾರಂಭವಾಗಬಹುದು. 'ಸತ್ಯಃ ಸಮಾತ್ಮಾ ಸಮ್ಮಿತಃ....' ಎಂದು ಪಠಿಸುವ ಬದಲು 'ಸತ್ಯಃ ಸತ್ಯಪರಾಕ್ರಮಃ.....' ಎಂದು ೨೩ನೆಯ ಶ್ಲೋಕಕ್ಕೆ ಹಾರಿ ಪಠಿಸಲು ಮುಂದುವರಿಸಿದರೆ ಅದು ಹಾವುಏಣಿ ಆಟ.

ಆದ್ದರಿಂದ ಮನಸ್ಸಿಟ್ಟು ಪಾರಾಯಣ ಮಾಡಿದರಷ್ಟೇ ಇದು ಎಲ್ಲಿಯ 'ಸತ್ಯ' ಎಂದು ಸ್ಪಷ್ಟವಾಗುವುದು.

ಸಮ ಎಂದರೆ ಒಂದೇ ರೀತಿಯಾದದ್ದು. ಆತ್ಮಾ ಎಂದರೆ ಶರೀರ. ಒಂದೇ ರೀತಿಯಾದ ಶರೀರ ಉಳ್ಳವನೇ 'ಸಮಾತ್ಮಾ'. ಭೀಷ್ಮರು ಕೃಷ್ಣನನ್ನು ಸ್ತುತಿಸುವರು– ನೀನು ಅವತರಿಸಿದಾಕ್ಷಣ ವಿರಾಟ್ ರೂಪವನ್ನು ಧರಿಸಿದ್ದಿ. ಮತ್ತೆ ಪ್ರಾಕೃತ ಶಿಶುವಿನಂತೆ ಪುಟ್ಟ ದೇಹ ಧರಿಸಿದ್ದಿ. ಆದರೂ ನೀನು 'ಸಮಾತ್ಮಾ'. ನಮ್ಮ ನಿಮ್ಮ ದೃಷ್ಟಿಗೆ ಕಾಣಬಹುದು ದೊಡ್ಡ ಜಾಗದಲ್ಲಿ ಅದು ಇತ್ತು, ಪುಟ್ಟ ಜಾಗದಲ್ಲಿ ಇದು ಇತ್ತು, ಎಂದು. ಆದರೆ ವಿರಾಟ್ ರೂಪವೂ ಪುಟ್ಟ ಜಾಗದಲ್ಲಿ ಉಂಟು. ಈ ಪುಟ್ಟ ರೂಪವೂ ದೊಡ್ಡ ಜಾಗದಲ್ಲಿ ಉಂಟು.

ದೇಶತಃ, ಕಾಲತಃ ಹಾಗೂ ಗುಣತಃ ಸಮಾನವಾದ ದೇಹ ಭಗವಂತನದ್ದು. ಅವನು ಮತ್ಸ್ಯನಾಗಿ ಬರಲಿ. ಕೂರ್ಮನಾಗಿ ಬರಲಿ, ಅರ್ಜುನನಿಗೆ ತೋರಿಸಿದಂತಹ ವಿಶ್ವರೂಪವೇ ಆಗಿರಲಿ, ವಿರಾಟ್ ರೂಪವೇ ಆಗಿರಲಿ. ಭಗವಂತನ ಯಾವುದೇ ರೂಪ ತೆಗೆದುಕೊಳ್ಳೋಣ ಅದು ಸಮಾನವಾಗಿಯೇ ಇರುವುದು.

ರಾಮನ ಬಗ್ಗೆ ಶ್ರೀ ಮಧ್ವರು ಒಂದು ಮಾತು ಅಂತಾರೆ– **'ಅಥಾಭ್ಯವರ್ಧನ್....'** ಇದರಲ್ಲಿ ರಾಮಚಂದ್ರ ಲಕ್ಷ್ಮಣಾದಿಗಳು ಬೆಳೆದರು ಎಂಬ ಅರ್ಥದ 'ಅವರ್ಧನ್' – ಎಂಬ ನಾಲ್ಕು ಅಕ್ಷರಗಳ ಒಂದು ಶಬ್ದದಲ್ಲಿ ಅನೇಕಾರ್ಥಗಳನ್ನು ತುಂಬಿಸಿಟ್ಟಿರುವರು. ರಾಮ, ಲಕ್ಷ್ಮಣ, ಭರತ, ಶತ್ರುಘ್ನರು ಬೆಳೆದರು ಎಂದು ಆ ಶಬ್ದದಿಂದ ಅರ್ಥ ಹೊರಡುವುದು. ಅವರು ದೇವತೆಗಳು, ಯಾವಾಗಲೂ ಬೆಳೆದಿರುವರು. ಅಂತಹವರಿಗೂ ಬೆಳವಣಿಗೆ ಉಂಟೇ ?– ಎಂಬ ಪ್ರಶ್ನೆ ಬಂದರೆ ಅಲ್ಲೇ ಉತ್ತರ ಇದೆ. ಉತ್ತರವನ್ನು ಹೀಗೆ ಸೂಚಿಸಲಾಗಿದೆ– 'ಅವರ್ಧನ್' – ಎಂಬುದಾಗಿ 'ನ್' ಅಕ್ಷರವನ್ನು ಕೊನೆಯಲ್ಲಿ ಪ್ರಯೋಗಿಸಿದರೆ ಒಂದರ್ಥ 'ಅವರ್ಧನ್ತ' – ಎಂಬುದಾಗಿ 'ನ್ತ' ಅಕ್ಷರಗಳನ್ನು ಕೊನೆಯಲ್ಲಿ ಪ್ರಯೋಗಿಸಿದರೆ ಮತ್ತೊಂದು ಅರ್ಥ. 'ನ್' ಅಕ್ಷರವನ್ನು ಕೊನೆಯಲ್ಲಿ ಪ್ರಯೋಗಿಸಿದರೆ ನಮ್ಮ ನಿಮ್ಮ ಕಣ್ಣಿಗೆ ಕಾಣುವಂತೆ ಬೆಳೆದರು ಎಂದು ಅರ್ಥ ಹೊರಡುವುದು. 'ನ್ತ' ಅಕ್ಷರ ಕೊನೆಯಲ್ಲಿ ಇದ್ದು ಬಿಟ್ಟರೆ ಸಹಜವಾಗಿ ಬೆಳೆದರು ಎಂಬ ಅರ್ಥ ಹೊರಡುವುದು. ಯಾರಿಗೆ ಸಹಜವಾಗಿ ಬೆಳವಣಿಗೆ ಇರುವುದೋ ಅಂತಹ ನಮ್ಮ ನಿಮ್ಮ ಬಗ್ಗೆ ಹೇಳುವಾಗ 'ಅವರ್ಧನ್ತ'– ಎಂದೇ ಹೇಳಬೇಕು. ಶ್ರೀ ರಾಮನಲ್ಲಿ ಸಹಜವಾಗಿ ಬೆಳವಣಿಗೆ ಇಲ್ಲ. ನಮ್ಮ ಕಣ್ಣಿಗೆ ಬೆಳೆದಂತೆ ಕಾಣುವುದಷ್ಟೇ ಎಂಬ ಅರ್ಥ 'ಅವರ್ಧನ್'– ಎಂಬ ಪ್ರಯೋಗದಿಂದ

ಸೂಚಿತವಾಗುವುದು. ಸಂಸ್ಕೃತದ ದಾಟಿಯಲ್ಲೇ ಹೇಳುವುದಾದರೆ 'ಆತ್ಮನೇಪದಿ' 'ಪರಸ್ಮೈಪದಿ'. ಸಹಜವಾಗಿ ತನ್ನ ಉದ್ದೇಶಕ್ಕಾಗಿಯೇ ಆದರೆ 'ಆತ್ಮನೇಪದಿ' ಪರರ ತೋರಿಕೆಗಾಗಿಯೇ ಆದರೆ 'ಪರಸ್ಮೈಪದಿ'. ಇದು ಪಾರಿಭಾಷಿಕ ಶಬ್ದ.

ಹಾಗಾದರೆ ರಾಮಚಂದ್ರ ಬೆಳೆದಂತೆ ನಟಿಸಿದವನು. ಕೃಷ್ಣ ತಾನು ಬೆಳೆದಂತೆ ನಟಿಸಿದವನು.

ಭಗವಂತ ಮತ್ಸ್ಯ, ಕೂರ್ಮ ಮುಂತಾದ ಅವತಾರಗಳಲ್ಲೂ ಸಮಾತ್ಮಾ. ಇದನ್ನೇ ಉಪನಿಷತ್ತು 'ನೇಹ ನಾನಾಸ್ತಿ ಕಿಂಚನ'– ಎಂದು ಸಂದೇಶಿಸಿದೆ. ಭಗವಂತನ ರೂಪಗಳಲ್ಲಿ, ಶರೀರಶರೀರಿಗಳಲ್ಲಿ, ಅವಯವಗಳಲ್ಲಿ, ಗುಣಗಳಲ್ಲಿ, ಕ್ರಿಯೆಗಳಲ್ಲಿ ವ್ಯತ್ಯಾಸವನ್ನು ಚಿಂತನೆ ಮಾಡಬೇಡ. ಭಗವಂತನ ಒಂದು ರೂಪದಲ್ಲಿ ಬಲ ಹೆಚ್ಚು, ಮತ್ತೊಂದು ರೂಪದಲ್ಲಿ ಜ್ಞಾನ ಹೆಚ್ಚು – ಈ ಬಗೆಯ ವ್ಯತ್ಯಾಸ ಇಲ್ಲ.

**೧೮೯. ಸಮ್ಮಿತಃ – ವೇದಗಳಿಂದ ಚೆನ್ನಾಗಿ ತಿಳಿಯಲ್ಪಡುವವನು.**

**ವಿವರಣೆ:** ಭೀಷ್ಮರು ಕಂಡಿರುವುದು ಕೃಷ್ಣ ರೂಪವನ್ನಷ್ಟೇ. ಪರಶುರಾಮ ರೂಪವನ್ನು ಸ್ವಲ್ಪ ಕಂಡಿರಬಹುದಷ್ಟೇ. ಹೀಗಿದ್ದರೂ ಭಗವಂತನು ಎಲ್ಲ ರೂಪಗಳಲ್ಲಿ, ಗುಣಗಳಲ್ಲಿ, ಕ್ರಿಯಗಳಲ್ಲಿ ಸಮಾನ, ಏನೂ ವ್ಯತ್ಯಾಸವಿಲ್ಲ ಎಂದು ಹೇಗೆ ಹೇಳಿರುವರು? ಎಂದರೆ 'ಸಮ್ಮಿತಃ' ಮಿತ ಎಂದರೆ ತಿಳಿಯಲ್ಪಟ್ಟವ. 'ಸಂ'– ಎಂದರೆ ಚೆನ್ನಾಗಿ. ಸಮ್ಮಿತ – ಚೆನ್ನಾಗಿ ತಿಳಿಯಲ್ಪಟ್ಟವ. ಯಾವುದರಿಂದ – ವೇದಗಳಿಂದ. ಏನೂಂತ ? 'ಸಮಾತ್ಮಾ'– ಎಂದು.

ಸಹಸ್ರನಾಮ ಅಂದರೆ ಖುಶಿ ಬಂದ ಹೆಸರುಗಳನ್ನೆಲ್ಲ ಹೇಳುತ್ತ ಹೋದದ್ದಲ್ಲ. ಹೇಗೆ ನಾವು ಕೆಲವರ ಹೆಸರುಗಳನ್ನು ಕರೆಯಬೇಕೆಂದರೆ ರಾಮ, ದೂಮ, ಸೋಮ, ಭೀಮ – ಎಂದೆಲ್ಲ ಕರೆಯುವೆವೋ ಹಾಗಲ್ಲ. ಮತ್ತೆ ಒಂದು ಪ್ರಶ್ನೆ ಅದಕ್ಕೆ ಉತ್ತರವಾಗಿ ಒಂದು ನಾಮ, ಮತ್ತೊಂದು ಪ್ರಶ್ನೆ ಅದಕ್ಕೆ ಉತ್ತರವಾಗಿ ಇನ್ನೊಂದು ನಾಮ – ಈ ರೀತಿಯೂ ಬಂದದ್ದುಂಟು. ಇನ್ನು ಬೃಹತೀಸಹಸ್ರಕ್ಕೆ ಅನುಗುಣವಾಗಿ ಬಂದದ್ದು ಎಂದೂ ಇದೆ. ನಮಗೆ ನಿಮಗೆ ಅದು ಅರ್ಥ ಆಗಲಿಕ್ಕಿಲ್ಲ. ಅದರ ಬಗ್ಗೆ ತಲೆ ಕೆಡಿಸಿಕೊಳ್ಳ ಹೋದರೆ ಅದೇ ಆಗಿ, ಸಹಸ್ರನಾಮ ತಪ್ಪಿ ಹೋದೀತು ! ನಾವು ಹಿಂದಿನದ್ದಕ್ಕೆ, ಮುಂದಿನದಕ್ಕೆ ಅರ್ಥ ಉಂಟೋ ಇಲ್ಲವೋ ಎಂಬುದರ ಬಗ್ಗೆ ಯೋಚಿಸದೆ, – ನಾಮ ಅರ್ಥ, ನಾಮ – ಅರ್ಥ ಇದನ್ನಷ್ಟೇ ಚಿಂತಿಸೋಣ. ಈ ನಾಮಕ್ಕೂ ಆ ನಾಮಕ್ಕೂ ಸಂಬಂಧ ಉಂಟೋ ಇಲ್ಲವೋ ಎಂದು ತಲೆಕೆಡಿಸಿಕೊಳ್ಳುವುದು ಬೇಡ, ಆ ನಾಮಕ್ಕೂ ಈ ನಾಮಕ್ಕೂ ದೇವರಿಂದ ಸಂಬಂಧ

ಉಂಟು ಎಂಬುದರ ಬಗ್ಗೆ ತಲೆಕೆಡಿಸಿಕೊಂಡರೆ ಸಾಕು. ಅಂದರೆ ಈ ನಾಮ ದೇವರನ್ನು ಹೇಳುತ್ತೋ? ಆ ನಾಮ ದೇವರನ್ನು ಹೇಳುತ್ತೋ? ಅಷ್ಟು ತಿಳಿದುಕೊಂಡರೆ ಸಾಕು. ನಿನ್ನನ್ನು 'ಸಮಾತ್ಮಾ'– ಎಂದು ತಿಳಿದುಕೊಂಡರೆ ನೀನು 'ಸಮ್ಮಿತಃ' ಚೆನ್ನಾಗಿ ತಿಳಿಯಲ್ಪಟ್ಟವನೆನಿಸುವಿ. ಯಾವುದರಿಂದ ? ಇನ್ನೊಬ್ಬ ವ್ಯಕ್ತಿಗಳಿಂದ ಅಲ್ಲ, ವೇದಗಳಿಂದ. ವೇದಗಳು ನಿನ್ನನ್ನು ಸ್ವಲ್ಪವೂ ಸಂಶಯ ಪಡದೆ ಚೆನ್ನಾಗಿ 'ಸಮಾತ್ಮ' ನನ್ನಾಗಿ ತಿಳಿಸುತ್ತವೆ. ದೇವರನ್ನು ಹೀಗೆ ತಿಳಿಸಿದರೆ ತಪ್ಪಾದೀತೇ?– ಎಂದೆಲ್ಲ ಸಂಶಯ ಪಡದೆ ದೇವರು ಹೀಗೆಯೇ ಎಂದು ಘಂಟಾಘೋಷವಾಗಿ ವೇದಗಳು ತಿಳಿಸುವವು.

**೧೧೦. ಸಮಃ – ಸದಾ ಕಾಲ ಲಕ್ಷ್ಮೀದೇವಿಯಿಂದ ಕೂಡಿಕೊಂಡೇ ಇರುವವನು.**

**ವಿವರಣೆ :** ಮಾ ಅಂದರೆ ಲಕ್ಷ್ಮೀ. ಸ ಎಂದರೆ ಕೂಡಿರುವವನು. ಮಯಾ ಸಹ ವರ್ತತೇ ಇತಿ ಸಮಃ. ದೇವರು ಎಲ್ಲ ಅವತಾರಗಳಲ್ಲಿ, ಎಲ್ಲ ರೂಪಗಳಲ್ಲಿ, ಎಲ್ಲ ಕಾಲದಲ್ಲಿ ಎಲ್ಲ ದೇಶದಲ್ಲಿ ಸಮಾನ ಎಂದು ತಿಳಿಯಲ್ಪಡುವನು. ಆದರೆ ಅವನನ್ನು ಇಷ್ಟು ಮಾತ್ರ ತಿಳಿದರೆ ಸಾಲದು. ಯಾವ ಯಾವ ಕಾಲದಲ್ಲಿ ಬರುವನೋ, ಯಾವ ಯಾವ ದೇಶದಲ್ಲಿ ಬರುವನೋ, ಯಾವ ಯಾವ ರೂಪದಿಂದ ಬರುವನೋ ಆವಾಗ ಎಲ್ಲ ಲಕ್ಷ್ಮೀದೇವಿಯೂ ಅವನ ಜೊತೆಗೇ ಇರುವಳು ಎಂಬ ಅನುಸಂಧಾನವೂ ಬೇಕು. ಬರೇ ದೇವರ ಅನುಸಂಧಾನ ಸಾಲದು. ಜೊತೆಗೆ ಲಕ್ಷ್ಮಿಯ ಅನುಸಂಧಾನವೂ ಬೇಕು. ಲಕ್ಷ್ಮಿಯನ್ನು ಬಿಟ್ಟು ಬರೇ ದೇವರ ಅನುಸಂಧಾನ ಸಲ್ಲದು.

ಲಕ್ಷ್ಮೀ ದೇವಿಗೆ ಶಾಸ್ತ್ರಕಾರರು ಉಲ್ಲೇಖಿಸಿರುವ ಒಂದು ಹೆಸರು – 'ಸಮನಾ'. ಇದರ ಅರ್ಥ ತಿಳಿಯದುದರಿಂದ ಈ ಹೆಸರನ್ನು ಹೆಣ್ಮಕ್ಕಳಿಗೆ ಇಡುವುದು ವಿರಳ. ಬೇಕಾದರೆ 'ಸುಮನಾ' ಎಂಬ ಹೆಸರನ್ನು ಇಡುವೆವು. ಇರಲಿ. ಒಳ್ಳೆಯ ಮನಸ್ಸು ಉಳ್ಳವಳು ಎಂಬ ಅರ್ಥದ 'ಸುಮನಾ' ಹೆಸರು ಉತ್ತಮವಾದದ್ದೇ. ಆದರೆ ಅದಕ್ಕಿಂತಲೂ ಉತ್ತಮ ಹೆಸರು ಲಕ್ಷ್ಮೀದೇವಿಗೆ ಪರಮಾತ್ಮನ ಸಂಬಂಧವನ್ನು ಸ್ಪಷ್ಟಪಡಿಸುವ ನಾಮ 'ಸಮನಾ'. ಎಂತಹ ಪ್ರಸಂಗ ಬಂದರೂ ನಾ ನಾರಾಯಣನು 'ಸಮ' ವಾಗಿಯೇ ಅಂದರೆ ಜೊತೆಯಲ್ಲೇ ಇರುವವನು. ಯಾವ ಹೆಣ್ಮಗಳ ಜೊತೆಯಲ್ಲಿ ನಾರಾಯಣನು ಯಾವಾಗಲೂ ಇರುವನೋ ಆ ಹೆಣ್ಮಗಳಿಗೆ 'ಸಮನಾ'– ಎಂಬ ಹೆಸರು.

ಹೀಗೆ ಲಕ್ಷ್ಮೀದೇವಿಯ ನಂಟನ್ನು ವಿವೇಚಿಸಿಕೊಂಡು ಪರಮಾತ್ಮನನ್ನು 'ಸಮಃ'– ಎಲ್ಲಿಗೆ ಹೋದರೂ ಲಕ್ಷ್ಮೀದೇವಿಯನ್ನು ಕಟ್ಟಿಕೊಂಡೇ ಹೋಗುವವನು ಎಂದು ಚಿಂತನೆ ಮಾಡಬೇಕು.

ಭೀಷ್ಮರು ಕೃಷ್ಣನಲ್ಲಿ ತಿಳಿಸುವರು – ಕೃಷ್ಣ! ನನ್ನೆದುರು ನೀನೊಬ್ಬನೇ ಕುಳಿತಿರುವುದಲ್ಲ. ಲಕ್ಷ್ಮೀದೇವಿಯೂ ಇರುವಳು. ಹೇಗೆ ತಿಳಿಯಿತು. ? ಅಂದರೆ ನನ್ನ ಬಾಯಿಯಿಂದ ಈ ನುಡಿಗಳು ಹೊರಹೊಮ್ಮುತ್ತಿರುವುದರಿದಲೇ ತಿಳಿಯಿತು. ಯಾಕೆಂದರೆ ಮಾತಿಗೆ ಮುಖ್ಯಾಭಿಮಾನಿನಿ ಲಕ್ಷ್ಮೀದೇವಿಯೇ.

ನಾರಾಯಣ ಇರುವನೆಂದರೆ ಲಕ್ಷ್ಮೀ ಇದ್ದಾಳೆಂದೇ ಅರ್ಥ. ಲಕ್ಷ್ಮೀ ಇರುವಳೆಂದರೆ ನಾರಾಯಣ ಇರುವನೆಂದೇ ಅರ್ಥ. ಅದಕ್ಕಾಗಿಯೇ ನಾವು ಲೌಕಿಕ ವ್ಯಕ್ತಿಗಳ ಹೆಸರನ್ನು ಉಲ್ಲೇಖಿಸುವಾಗಲೂ ಆ ಹೆಸರಿನ ಪ್ರಾರಂಭದಲ್ಲಿ 'ಶ್ರೀ'– ಎಂದು ಸೇರಿಸುವುದು. ಶ್ರೀದೇವದತ್ತಾಚಾರ್ಯ ಇತ್ಯಾದಿಯಾಗಿ. ದೇವದತ್ತ ಎಂಬುದು ಮುಖ್ಯವಾಗಿ ದೇವರ ಹೆಸರು. ಆ ಹೆಸರಿನ ದೇವರು ಶ್ರೀ ದೇವಿಯಿಂದ ಕೂಡಿಯೇ ಇರುವರೆಂಬುದು 'ಶ್ರೀದೇವದತ್ತಾಚಾರ್ಯ'– ಎಂಬ ಮಾತಿನಿಂದ ಮುಖ್ಯವಾಗಿ ಹೊರಡುವ ಆಶಯ. ಇದರ ಜೊತೆಗೆ 'ದೇವದತ್ತ'– ಎಂಬ ಹೆಸರನ್ನು ಬಾಡಿಗೆಯಾಗಿ ಹೊತ್ತ ಆ ವ್ಯಕ್ತಿಯನ್ನೂ ಶ್ರೀಕಾರರೊಂದಿಗೆ ಗೌರವಿಸುವುದು ಅಮುಖ್ಯ ಅಭಿಪ್ರಾಯವಷ್ಟೇ.

**೧೧೧. ಅಮೋಘಃ – ಯಾರ ಇರುವಿಕೆ, ಬರುವಿಕೆ, ನಡೆ, ನುಡಿ, ಕೃತಿ ಹೀಗೆ ಯಾವುದೂ ವ್ಯರ್ಥವಲ್ಲವೋ ಅಂತಹವನು.**

ವಿವರಣೆ : ಮೋಘ ಅಂದರೆ ವ್ಯರ್ಥ. ಅಮೋಘ ಎಂದರೆ ಅವ್ಯರ್ಥ. ಎಷ್ಟೋ ಸಂದರ್ಭಗಳಲ್ಲಿ ಯಾಕೆ ಬಂದಿರಿ ? ಎಂದರೆ 'ಸುಮ್ಮನೆ ಬಂದೆ ' ಎನ್ನುವುದುಂಟು. ಅಂದರೆ ನಮ್ಮ ಆಗಮನ ವ್ಯರ್ಥ ಎಂದರ್ಥ. ಭಗವಂತನಲ್ಲಿ 'ಯಾಕೆ ಬಂದಿ'?– ಎಂದು ಯಾರು ಕೇಳಿದರೂ ಸುಮ್ಮನೆ ಬಂದೆ ಎಂದು ಅವನು ಹೇಳುವುದೇ ಇಲ್ಲ. 'ನೀನು ಕರೆದಿ ನಾನು ಬಂದೆ '– ಎಂದೇ ಹೇಳುವನು.

**'ನೀ ತಂದೆ ನಾ ಬಂದೆ'** ಯಾರು ಹೇಳಿದ ಮಾತು ? ದಾಸರು ಹೇಳಿದ ಮಾತಲ್ಲ, ದೇವರು ಹೇಳಿದ ಮಾತು. ಭಕ್ತ ದೇವರಲ್ಲಿ ಕೇಳಿದ – ಏನು ಬಂದಿ ? ದೇವರು ಅಂದ – **'ನೀ ತಂದೆ ನಾ ಬಂದೆ'** ಯಾರೂ ಈ ಮಾತನ್ನು ತಿರುಗಿಸಿ ಹೇಳಬಹುದು. ಭಕ್ತನೂ ದೇವರಲ್ಲಿ ಹೇಳಬಹುದು **'ನೀ ತಂದೆ ನಾ ಬಂದೆ'** ತಾಯಿಯ ಗರ್ಭದಲ್ಲಿದ್ದ ನೀನು ತಾಯಿಯ ಗರ್ಭದಿಂದ ಹೊರತಂದೆ. ಭಗವಂತ ನೀನು ನನ್ನನ್ನು ಸಮಾಜಕ್ಕೆ ತಂದೆ. ನಾನು ಬಂದೆ. ಆದುದರಿಂದ ನನಗೆ ತಂದೆ ಯಾರು? 'X' ಅಲ್ಲ, ಮತ್ತೆ ನೀನೇ. ಯಾಕೆಂದರೆ ಹೊರಗೆ ತಂದವ ನೀನು.

ಹೀಗೆ ದೇವರಿಗೆ ಅಂದರೆ ದೇವರು ಭಕ್ತನಿಗೆ ಅಂದ **'ನೀ ತಂದೆ ನಾ ಬಂದೆ.'** ಬಿಂಬ ಪ್ರತಿಬಿಂಬದ ಕ್ರಮವೇ ಹೀಗೆ. ಕನ್ನಡಿ ಎದುರು ನಾವು ಹೀಗೆ ಕೈ ತೋರಿಸಿದರೆ,

ಅದು ನಮಗೆ ಹೀಗೆ ಕೈ ತೋರಿಸುವುದು. ಅದೇ ರೀತಿಯಾಗಿ ಪ್ರತಿಬಿಂಬನಾದ ಭಕ್ತ ದೇವರಿಗೆ ನೀ ತಂದೆ ನಾ ಬಂದೆ ಎಂದರೆ ಬಿಂಬನಾದ ಭಗವಂತ ಭಕ್ತನಿಗೆ ಅಂದ **'ನೀ ತಂದೆ ನಾ ಬಂದೆ.'** ಯಾರೋ ಕೇಳಿದ್ರು ಭಗವಂತನಲ್ಲಿ ಯಾಕೆ ಅವತಾರ ತಾಳಿದ್ದಿ? ಎಂದು. ಅದಕ್ಕೂ ಭಗವಂತ ಹೇಳಿದ **'ನೀ ತಂದೆ ನಾ ಬಂದೆ.'** ನನ್ನ ಪಾಲಿಗೆ ತಂದೆ ನೀನು. ನಾಳೆಯ ದಿನ ಸಮಾಜಕ್ಕೆ ನನ್ನನ್ನು ತೋರಿಸಿಕೊಡಬೇಕಾದವನು ನೀನು. **'ರಾಮಕೃಷ್ಣರು ಮನೆಗೆ ಬಂದರು ಬಾಗಿಲ ತೆರೆಯಿರೋ...'** ಎಂದು ನೀನು ಹೇಳಬೇಕು.

ಹೀಗೆ ದೇವರು ಬಂದದ್ದು ಎಂದೂ ವ್ಯರ್ಥ ಅಲ್ಲ. ದೇವರು ಬಂದಿದ್ದಾನೆ ಎಂದರೆ ಭಕ್ತರ ಏನೋ ಕೆಲಸಕ್ಕೆ ಬಂದಿದ್ದಾನೆ ಎಂದೇ ಅರ್ಥ. ನ ಮೋಘಃ ಅಮೋಘಃ – ಭಗವಂತ ನೀನು ಅಮೋಘ – ವ್ಯರ್ಥ ಅಲ್ಲ. ನಿನ್ನ ಇರುವಿಕೆ ವ್ಯರ್ಥ ಅಲ್ಲ, ನಿನ್ನ ಬರುವಿಕೆ ವ್ಯರ್ಥ ಅಲ್ಲ, ನಿನ್ನ ಮಾತು ವ್ಯರ್ಥ ಅಲ್ಲ, ನಿನ್ನ ಕೃತಿ ವ್ಯರ್ಥ ಅಲ್ಲ. ನಿನ್ನಲ್ಲಿ ಯಾವುದೂ ವ್ಯರ್ಥ ಇಲ್ಲ. ಯಾವುದೂ ನಿನ್ನಲ್ಲಿ ವ್ಯರ್ಥ ಎಂದು ತೆಗೆದು ಹಾಕಲಿಕ್ಕೆ ಇಲ್ಲ.

ಭಗವಂತನನ್ನು ಈ ರೀತಿಯಾಗಿ 'ಅಮೋಘ' – ಎಂದು ಉಪಾಸನೆ ಮಾಡಿದಲ್ಲಿ ನಮ್ಮ ಆಚಾರ, ವಿಚಾರ, ಕೃತಿ, ಮಾತು ಇವ್ಯಾವುದೂ ವ್ಯರ್ಥ ಆಗಲಾರದು. ಯಾವಾಗ ವ್ಯರ್ಥ ಎನಿಸುವುದು ? ಭಗವಂತನ ಪ್ರಜ್ಞೆ ಬಿಟ್ಟು ಮಾಡಿದಾಗ ವ್ಯರ್ಥ ಎನಿಸುವುದು. ಹಾಗಾಗದಿರಲಿ ಎಂದು ಭಗವಂತನನ್ನು ಅಮೋಘ ಎಂದು ಉಪಾಸನೆ ಮಾಡಬೇಕು.

**೧೧೨. ಪುಂಡರೀಕಾಕ್ಷಃ – ತಾವರೆದಳ ನಯನ.**

**ವಿವರಣೆ:** ನಿನ್ನೆ ನೋಡಿದ ನಾಮ 'ಅಮೋಘ'. ನಿನ್ನೆಯ ನಾಮ ಮಾತ್ರ ಅಮೋಘ ಅಲ್ಲ. ಇಷ್ಟರವರೆಗೆ ಹಾಗೂ ಇನ್ನು ಮೇಲೆ ಯಾವ ಯಾವ ಭಗವಂತನ ನಾಮವನ್ನು ನೋಡುವೆವೋ ಅವೆಲ್ಲವೂ 'ಅಮೋಘ'ಗಳೇ. ಮುಂದಿನ ನಾಮ ಪ್ರಸಿದ್ಧವಾದದ್ದು ಪುಂಡರೀಕಾಕ್ಷ. ಅಕ್ಷ ಅಂದರೆ ಕಣ್ಣು. ಪುಂಡರೀಕ ಎಂದರೆ ತಾವರೆ. ತಾವರೆಯಂತೆ ಕಣ್ಣು ಉಳ್ಳವ. ತಾವರೆ ಶಬ್ದದ ಅರ್ಥ ತಾವರೆಯ ಎಸಳು, ತಾವರೆಯ ದಳ. ತಾವರೆಯ ದಳದ ಆಕಾರ ಹೇಗಿದೆಯೋ ಅದೇ ಆಕಾರವುಳ್ಳ, ದೀರ್ಘವಾದ ಕಣ್ಣು ಉಳ್ಳವನು – ಎಂದರ್ಥ. ಈ ಕಡೆ, ಆ ಕೆಡೆಗಳಲ್ಲಿ ಚೂಪಾಗಿದ್ದು, ಮಧ್ಯದಲ್ಲಿ ವಿಶಾಲವಾಗಿರುವುದು ತಾವರೆಯ ದಳದ ಆಕಾರ. ಈ ಆಕಾರವೇ ಕಣ್ಣಿನ ಆಕಾರವಾಗಿ ಇರಬೇಕು. ಅದಕ್ಕಾಗಿಯೇ ಹರಿದಾಸರು 'ತಾವರೆದಳ ನಯನ' – ಎಂದೇ

ಭಗವಂತನನ್ನು ವರ್ಣನೆ ಮಾಡಿರುವರು. ಅವಸರಕ್ಕಾಗುವಾಗಷ್ಟೇ 'ತಾವರೆಯಂತೆ ಕಣ್ಣು' – ಎಂದು ಹೇಳಿರಬಹುದಷ್ಟೇ. ಅದರ ಅರ್ಥ ತಾವರೆಯ ದಳದಂತೆ ಕಣ್ಣು ಎಂದೇ.

ಇದರ ಹಿನ್ನೆಲೆ ತುಂಬ ಇದೆ. ತಾವರೆಯ ದಳದಂತೆ ಕಣ್ಣು ಎಂದು ಹೇಳಿದ್ದು ಯಾಕೆ ? ಸಾಮಾನ್ಯವಾಗಿ ನಮಗೆ ಒಂದು ವಸ್ತುವನ್ನು ಕಂಡಾಗ ಅದರಲ್ಲಿ ರಾಗ ಉಂಟಾಗುವುದು. ಅದು ಬೇಕು ಎಂದೆನಿಸುವುದು. ಆಗದ ವಸ್ತು ಆದರೆ ಅದರಲ್ಲಿ ದ್ವೇಷ ಉಂಟಾಗುವುದು. ಆದರೆ ಭಗವಂತನಿಗೆ ಯಾವ ವಸ್ತುವನ್ನು ಕಂಡಾಗಲೂ ರಾಗವಾಗಲೀ, ದ್ವೇಷವಾಗಲೀ ಉಂಟಾಗುವುದಿಲ್ಲ. ತಾವರೆಯ ಎಲೆ ಹೇಗೆ ನೀರಲ್ಲೇ ಇದ್ದರೂ ಅದನ್ನು ತನ್ನಲ್ಲಿ ಅಂಟಿಸಿಕೊಳ್ಳುವುದಿಲ್ಲವೋ ಹಾಗೆಯೇ ಭಗವಂತನ ಕಣ್ಣು ಕೂಡಾ ವಸ್ತುವನ್ನು ಕಂಡರೂ ಆ ಪ್ರಯುಕ್ತ ರಾಗವನ್ನಾಗಲೀ, ದ್ವೇಷವನ್ನಾಗಲೀ ತನ್ನಲ್ಲಿ ಅಂಟಿಸಿಕೊಳ್ಳುವುದಿಲ್ಲ. ಆದ್ದರಿಂದ ಭಗವಂತ ಪುಂಡರೀಕಾಕ್ಷ. ವಸ್ತುವನ್ನು ನೋಡಲೇ ಬಾರದೆಂದಿಲ್ಲ. ನೋಡಬಾರದೆಂದಿದ್ದರೆ ಆ ವಸ್ತುವನ್ನು ಸೃಷ್ಟಿಸಿದ್ದಾದರೂ ಯಾತಕ್ಕಾಗಿ? ವಸ್ತುವನ್ನು ಕಾಣುವ ಕಣ್ಣುಗಳ ಸೃಷ್ಟಿಯಾದರೂ ಯಾಕೆ? ಆದ್ದರಿಂದ ಯಾವುದೇ ವಸ್ತುವನ್ನು ಧಾರಾಳವಾಗಿ ನೋಡಬಹುದು. ಆದರೆ ಆ ಪ್ರಯುಕ್ತ ರಾಗವನ್ನಾಗಲೀ, ದ್ವೇಷವನ್ನಾಗಲೀ, ಅಂಟಿಸಿಕೊಳ್ಳಬಾರದಷ್ಟೇ. ಈ ನಿಟ್ಟಿನಲ್ಲಿ ಪುಂಡರೀಕಾಕ್ಷನ ಆದರ್ಶವನ್ನು ಪಾಲಿಸಬೇಕು. ಉಪನಿಷತ್ತು ಒಂದು ಮಾತನ್ನು ಹೇಳುವುದು **'..... ಏತಸ್ಮಿನ್ ನ ಕಿಂಚನ ಶ್ಲಿಷ್ಯತಿ ತದ್ ಯದ್ಯಪ್ಯಸ್ಮಿನ್ ಸರ್ಪಿರ್ವೋದಕಂ ವಾ ಸಿಂಚತಿ ವರ್ತ್ಮನೀ ಏವ ಗಚ್ಛತಿ....'** ಕಣ್ಣಿನಲ್ಲಿ ಭಗವಂತ ಇದ್ದಾನೆ ಎಂಬುದಕ್ಕೆ ಜ್ಞಾಪಕವನ್ನು ತೋರಿಸಲಾಗುವುದು. ನೀರು ಮುಂತಾದ ಯಾವುದೇ ದ್ರವವಸ್ತುವನ್ನು ಕಿವಿಗಾಗಲೀ, ಮೂಗಿಗಾಗಲೀ, ಬಾಯಿಗಾಗಲೀ ಹಾಕಿದಲ್ಲಿ ಒಳಗೆ ಸೇರಿ ಬಿಡುವುದು. ಆದರೆ ಕಣ್ಣಿಗೆ ಹಾಕಿದಾಗ **'ವರ್ತ್ಮನೀ ಏವ ಗಚ್ಛತಿ'** ಕಣ್ಣಿನ ಕೋಡಿಗಳಲ್ಲಿ ಹರಿದು ಬಿಡುವುದು. ತನ್ನಲ್ಲಿ ಅಂಟಿಸಿಕೊಳ್ಳದ ಭಗವಂತನು ಅಲ್ಲಿ ಇರುವುದರಿಂದ ಕಣ್ಣಿನ ಬದಿಗಳಲ್ಲಿ ಹಾಗೆ ಹರಿದು ಹೋಗುವುದು.

ಹೀಗೆ ದೇವರನ್ನು 'ಪುಂಡರೀಕಾಕ್ಷ'– ಎಂದು ಉಪಾಸನೆ ನಡೆಸಿದರೆ ನಮ್ಮ ಕಣ್ಣಿನಲ್ಲೂ ರಾಗದ್ವೇಷಗಳ ಕಾಲುಷ್ಯ ಬಾರದೆ ಮನಸ್ಸು ನಿರ್ವಿಕಾರವಾಗಿ ಇರಬಲ್ಲದು.

**೧೧೩. ವೃಷಕರ್ಮಾ – ಯಾರ ಪ್ರತಿಯೊಂದು ಚಟುವಟಿಕೆಯೂ ಧಾರ್ಮಿಕ ವಾಗಿದೆಯೋ ಅಂತಹವನು.**

**ವಿವರಣೆ :** ‘ವೃಷಾಕಪಿರಮೇಯಾತ್ಮಾ’ – ಎಂಬಲ್ಲಿ ವೃಷ ಶಬ್ದಕ್ಕೆ ಧರ್ಮ ಎಂಬ ಅರ್ಥವನ್ನು ಕಡಿದ್ದೇವೆ. ಇನ್ನು ವೃಷಕರ್ಮಾ ಎಂಬಲ್ಲಿ ಕರ್ಮಾ ಶಬ್ದಾರ್ಥವನ್ನೂ, ‘ವೃಷಾಕೃತಿಃ’ ಎಂಬಲ್ಲಿ ಕೃತಿಶಬ್ದಾರ್ಥವನ್ನೂ ನೋಡಬೇಕಾಗಿದೆ. ನಮ್ಮ ಅಭೀಷ್ಟಗಳನ್ನು ಸುರಿಸುವುದರಿಂದ ಧರ್ಮ ವೃಷ ಎನಿಸಿದೆ. ಕರ್ಮ ಎಂದರೆ ಕೆಲಸ. ಧಾರ್ಮಿಕವಾದ ಕರ್ಮವುಳ್ಳವನು ವೃಷಕರ್ಮಾ. ಕೃಷ್ಣನ ಪ್ರತಿಯೊಂದು ಚಟುವಟಿಕೆಗೂ ಧರ್ಮದ ಹಿನ್ನೆಲೆ ಇದೆ. ಕೃಷ್ಣನ ಹಾಲು ಕದಿಯುವುದು, ಮೊಸರು ಕದಿಯುವುದು , ಬೆಣ್ಣೆ ಕದಿಯುವುದು, ಯಶೋದೆಗೆ ಉಪಟಳ ಮಾಡುವುದು, ಗೋಪಿಕಾಸ್ತ್ರೀಯರ ಜೊತೆಗೆ ಸೇರುವುದು, ಇನ್ನೂ ಏಳೂ ತುಂಬದೆ ಇರುವಾಗ ಸೋದರ ಮಾವನನ್ನೇ ಕೊಲ್ಲುವುದೋ, ಮಾವನ ಜೊತೆಗೆ ಕಾದಾಟಕ್ಕೆ ಇಳಿದದ್ದೋ, ಇಬ್ಬರು ಅಣ್ಣನನ್ನು ಕೊಂದದ್ದೋ – ಹೀಗೆ ಕೃಷ್ಣನ ಯಾವುದೇ ಚಟುವಟಿಕೆಯನ್ನು ತೆಗೆದುಕೊಂಡರೂ ಅದು ಧರ್ಮದ ಹಿನ್ನಲೆವುಳ್ಳದ್ದು, ಧರ್ಮದ ಉದ್ದೇಶವುಳ್ಳದ್ದು.

ಕೃಷ್ಣ ಸಮಾಜಕ್ಕೆ ಕೊಟ್ಟ ಪಾಠ ಮೊದಲು ತಮ್ಮ ತಮ್ಮ ಮನೆ ಸ್ವಚ್ಛ ಮಾಡಿ ಆಮೇಲೆ ಸಮಾಜ, ಮಠ ಸ್ವಚ್ಛ ಮಾಡಲು ತೊಡಗಿ. ಕೃಷ್ಣ ಹೆಚ್ಚಾಗಿ ತನ್ನ ಪರಿವಾರದವರನ್ನೇ, ತನ್ನ ಮನೆಗೆ ಸೇರದವರನ್ನೇ ಸಂಹಾರ ಮಾಡುವ ಮೂಲಕ ಸಮಾಜಕ್ಕೆ ಈ ಪಾಠ ನೀಡಿರುವನು.

**‘ಯಾದವ ನೀ ಬಾ ಯದುಕುಲನಂದನ...’** ಎಂಬ ಹಾಡಿನಲ್ಲಿ ದಾಸರಾಯರು **‘ಅಕಳಂಕಚರಿತನೆ ಆದಿನಾರಾಯಣ......’** ಎಂದು ಶ್ರೀ ಕೃಷ್ಣನನ್ನು ಅಕಳಂಕಚರಿತನನ್ನಾಗಿ ಉಲ್ಲೇಖಿಸುವ ಮೂಲಕ ಅವನ ಯಾವುದೇ ಚರ್ಯೆಯ ಹಿಂದೆ ಅಧರ್ಮದ ಕಳಂಕ ಇಲ್ಲ ಎಂದು ಉದ್ಘೋಷಿಸಿರುವರು.

ದೇವರ ಯಾವುದೇ ಚರ್ಯೆಯಲ್ಲಿ ದೋಷವನ್ನು ಹುಡುಕುವ ಪ್ರವೃತ್ತಿಗೆ ಇಳಿಯಬೇಡಿ. **‘ಈಶಾವಾಸ್ಯಮಿದಂ ಸರ್ವಂ.....’**– ಎಂದು ಉಪನಿಷತ್ತು ಈ ಎಲ್ಲವೂ ಈಶನಾದ ಅವನಿಗೆ ಸೇರಿದ್ದೆಂದು ಘೋಷಿಸುತ್ತಿದೆ. ಆದ್ದರಿಂದ ದೇವರಿಗೆ ಸೇರಿರುವ ವಸ್ತುಗಳನ್ನು ನಾವು ಕದಿಯುವುದೇ ಹೊರತು ಕೃಷ್ಣ ಕದ್ದದ್ದಲ್ಲ.

ಭೀಷ್ಮರು ಕೃಷ್ಣನನ್ನು ಸ್ತುತಿಸುವರು – ಕೃಷ್ಣ, ನೀನು ಅವತಾರ ಮಾಡಿದಂದಿನಿಂದ ದುರ್ಯೋಧನನನ್ನು ಬೀಳಿಸುವವರೆಗೂ ಏನೇನು ಮಾಡಿರುವಿಯೋ ಅವೆಲ್ಲ ಧಾರ್ಮಿಕಗಳಾಗಿರುವುದರಿಂದ ನೀನು ‘ವೃಷಕರ್ಮಾ’.

ಶಿಖಂಡಿಯನ್ನು ಎದುರಿಗಿರಿಸಿ ನನ್ನನ್ನು ಬೀಳಿಸಿದ್ದಾಗಲೀ, **‘ಅಶ್ವತ್ಥಾಮಾ ಹತಃ’**– ಎಂದು ಹೇಳಿಸಿ ದ್ರೋಣರನ್ನು ಕೊಲ್ಲಿಸಿದ್ದಾಗಲೀ, ದುರ್ಯೋಧನ

ದುರ್ಬುದ್ಧಿಗೊಳಗಾಗಿ ತಲೆಕೆಳಗೆ ಕಾಲು ಮೇಲೆ ಮಾಡಿ ನಿಂತಾಗ ಹೊಕ್ಕುಳ ಮೇಲೆ ಬರುವ ಅವನ ತೊಡೆಗಳನ್ನು ಭೀಮನಿಂದ ಹೊಡೆಯಿಸಿ ಅವನನ್ನು ಕೊಲ್ಲಿಸಿದ್ದರಲ್ಲಾಗಲೀ ಏನೂ ಅಧರ್ಮದ ಸೋಂಕು ಇಲ್ಲದುದರಿಂದ ಹೇಗೆ 'ವೃಷಾಕಪಿ' ಎನಿಸಿರುವಿಯೋ ಹಾಗೆಯೇ 'ವೃಷಕರ್ಮಾ' ಆಗಿರುವಿ ಎಂದು ಭೀಷ್ಮರು ಸ್ತುತಿಸಿರುವರು.

**೧೧೪. ವೃಷಾಕೃತಿಃ – ಧಾರ್ಮಿಕವಾದ ಅವತಾರ ಉಳ್ಳವನು.**

ವಿವರಣೆ : ವೃಷ ಎಂದರೆ ಧರ್ಮ. ಆಕೃತಿ ಎಂದರೆ ಅವತಾರ. ಭಗವಂತ ಯಾಕೆ, ಅವತಾರ ತಾಳುವನು ? ಭಗವದ್ಗೀತೆಯಲ್ಲಿ 'ಯದಾಯದಾ ಹಿ ಧರ್ಮಸ್ಯ....' ಈ ಮಾತಿನಲ್ಲಿ ತಿಳಿಸಿರುವಂತೆ 'ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ'– ನಶಿಸಿ ಹೋಗುವ ಧರ್ಮವನ್ನು ಪುನರುಜ್ಜೀವನ ಗೊಳಿಸುವುದು ಭಗವಂತನ ಅವತಾರಗಳ ಉದ್ದೇಶಗಳಲ್ಲಿ ಒಂದು. ಆಯಾ ಕಾಲದಲ್ಲಿ ಧರ್ಮ ಇಷ್ಟಿಷ್ಟು ಪ್ರಮಾಣದಲ್ಲಿ ಇರಬೇಕೆಂದು ನಿಶ್ಚಿತವಾಗಿದ್ದು, ಅಷ್ಟು ಪ್ರಮಾಣದ ಧರ್ಮ ಬೂದಿ ಮುಚ್ಚಿದ ಕೆಂಡದಂತೆ ಮಸುಕಾಯಿತೆಂದರೆ ಅದನ್ನು ಉಜ್ವಲಗೊಳಿಸುವುದಕ್ಕಾಗಿ ಭಗವಂತನು ಅವತರಿಸುವನು. ಧರ್ಮಕ್ಕಾಗಿ ಧಾರ್ಮಿಕ ಉದ್ಧಾರಕ್ಕಾಗಿ ಭಗವಂತನು ಅವತರಿಸುವನು.

ಕೃಷ್ಣಾವತಾರ ಕ್ಷತ್ರಿಯರಲ್ಲಿ ತಾಳಿದ ಅವತಾರ. ಗೊಲ್ಲರ ಮನೆಯಲ್ಲಿ ಬೆಳೆದವನು ಕೃಷ್ಣ. ಆದರೂ ಕೃಷ್ಣ ವೃಷಾಕೃತಿ ಧಾರ್ಮಿಕವಾದ ಅವತಾರ. ಕೃಷ್ಣಾವತಾರ ಮಾತ್ರವಲ್ಲ. ಭಗವಂತನು ಮತ್ಸ್ಯನಾಗಿ, ಕೂರ್ಮನಾಗಿ, ವರಾಹನಾಗಿ..... ಏನೇ ಅವತಾರ ತಾಳಲಿ. ಅವೆಲ್ಲ ಪವಿತ್ರ. ಆ ಅವತಾರಗಳಿಗೆಲ್ಲ ಧರ್ಮದ ಹಿನ್ನೆಲೆ ಇದೆ, ಧರ್ಮದ ಉದ್ದೇಶ ಇವೆ. ಆದ್ದರಿಂದ ಭಗವಂತನು 'ವೃಷಕರ್ಮಾ' ಆಗಿರುವಂತೆ 'ವೃಷಾಕೃತಿ.' ಧರ್ಮಸ್ಥಾಪನೆಗಾಗಿ ಧಾರ್ಮಿಕವಾದ ಅವತಾರ ತಾಳುವವನು.

**ರುದ್ರೋ ಬಹುಶಿರಾಃ ಬಭ್ರುಃ ವಿಶ್ವಯೋನಿಃ ಶ್ರುತಿಶ್ರವಾಃ ।**
**ಅಮೃತಃ ಶಾಶ್ವತಸ್ಥಾಣುರ್ವರಾರೋಹೋ ಮಹಾತಪಾಃ ॥೧೩॥**

**೧೧೫. ರುದ್ರಃ – ಸಂಸಾರ ಬಂಧನವೆಂಬ ಮಹಾರೋಗವನ್ನೂ, ಅದರೊಳಗಿನ ತ್ರಿಕರಣಗಳಿಗೆ ಸಂಬಂಧಿಸುವ ರೋಗಗಳನ್ನೂ ಪರಿಹರಿಸುವವನು.**

**ವಿವರಣೆ :** ರುದ್ರ ಎಂಬ ಹೆಸರು ಭಗವಂತನದ್ದು. ಪಾರ್ವತಿಪತಿಗೆ ಭಗವಂತ ಆ ಹೆಸರನ್ನು ಕೊಟ್ಟ. ಪಾರ್ವತಿಪತಿ ತನ್ನ ಹೆಸರನ್ನಾಗಿ ಇಟ್ಟುಕೊಂಡಿರುವನಷ್ಟೇ.

ರುದ್ರ ಶಬ್ದಕ್ಕೆ ಏನರ್ಥ? 'ರು' ರೋಗ ಶಬ್ದದ ಏಕ ದೇಶ. 'ದ್ರ' ದ್ರವಣ ಶಬ್ದದ ಏಕ ದೇಶ. ನೆಲಕ್ಕೆ ಹಾಕಿದಾಕ್ಷಣ ಓಡಲು ಪ್ರಾರಂಭಿಸುವ ನೀರು, ಹಾಲು ಮುಂತಾದವುಗಳನ್ನು ದ್ರವ ವಸ್ತುಗಳನ್ನಾಗಿ ಕರೆಯಲಾಗುವುದು. ಆದ್ದರಿಂದ ದ್ರವಣ ಅಂದರೆ ಓಡುವಿಕೆ. ಯಾರಿಂದಾಗಿ ರೋಗಗಳು ದೂರ ಓಡಿ ಹೋಗುವವೋ ಅಂತಹವನು – ರುದ್ರ. ನಮ್ಮೆಲ್ಲರ ರೋಗಗಳನ್ನು ಪರಿಹಾರಮಾಡುವವನು ಎಂಬುದು ರುದ್ರ ಶಬ್ದದ ಅರ್ಥ. ಯಾರು ರೋಗಗಳನ್ನು ಪರಿಹರಿಸುವವನು ? ಭಗವಂತ. ನಮ್ಮೆಲ್ಲರನ್ನು ಕಾಡುತ್ತಿರುವ ರೋಗ ಯಾವುದು? ಸಂಸಾರ ಬಂಧನ ಎಂಬ ರೋಗ. ಆ ರೋಗದೊಳಗೆ ಮತ್ತೆ ಚಿಕ್ಕಪುಟ್ಟ ರೋಗಗಳು. ಆ ಎರಡು ಬಗೆಯ ರೋಗಗಳಿಗೂ ಔಷಧ ನೀಡುವವನು ಭಗವಂತನಾದುದರಿಂದ ಅವನೇ ರುದ್ರ. ಪಾರ್ವತೀಪತಿಯೂ ಕೂಡಾ ನಮ್ಮ ನಿಮ್ಮ ರೋಗಗಳನ್ನು ಪರಿಹಾರ ಮಾಡುವನೆಂದೇ ರುದ್ರ ಎನಿಸುವನು. ಪ್ರತಿನಿತ್ಯ ಯಾರು ಶಿವಪಂಚಾಕ್ಷರಿ ಮಂತ್ರವನ್ನು ಜಪಿಸುವರೋ ಅವರಿಗೆ ಮಾನಸಿಕ ಜಂಜಾಟ ಇರುವುದಿಲ್ಲ. ಓಂಕಾರ ಅಥವಾ ಶ್ರೀಕಾರ ಪೂರ್ವಕವಾಗಿ 'ನಮಃ ಶಿವಾಯ' – ಎಂದು ಐದು ಅಕ್ಷರಗಳ ಮಂತ್ರವನ್ನು ಜಪಿಸುವವನಿಗೆ ಮಾನಸಿಕ ಗೊಂದಲ ಇರುವುದಿಲ್ಲ. ಮನೋನಿಯಾಮಕ ರುದ್ರದೇವ ಮಾನಸಿಕ ಗೊಂದಲವನ್ನು ಪರಿಹರಿಸುವನು. ಹೀಗೆ 'ರುದ್ರ' ಎನಿಸುವ ಪಾರ್ವತೀಪತಿಗಿಂತಲೂ ಮುಖ್ಯವಾದ ರುದ್ರ ಕೃಷ್ಣನೇ.

ಸಂಸಾರಬಂಧನ ಎಂಬುದೊಂದು ಮಹಾರೋಗವಾದರೆ ಅದರೊಳಗೆ ಬರುವ ರೋಗಗಳು ಬರೇ ದೇಹಕ್ಕೆ ಸಂಬಂಧಿಸುವ ದೈಹಿಕ ರೋಗಗಳಷ್ಟೇ ಅಲ್ಲ, ಮನಸ್ಸಿಗೆ ಸಂಬಂಧಿಸುವ ಮಾನಸಿಕರೋಗಗಳೂ, ಮಾತಿಗೆ ಸಂಬಂಧಿಸುವ ವಾಚನಿಕ ರೋಗಗಳೂ ಇವೆ. ಇವನ್ನೆಲ್ಲ ಪರಿಹರಿಸುವವನು ಭಗವಂತನು. ವಿದ್ಯುತ್ ಬೋರ್ಡಿನಿಂದ ಟಿ.ವಿ ಗೋ, ಇಸ್ತ್ರಿ ಪೆಟ್ಟಿಗೆಗೋ, ಫ್ಯಾನಿಗೋ ವಿದ್ಯುತ್ ಸಮತೋಲನದಿಂದ ಹರಿಯುವಂತೆ ಮಧ್ಯೇ ಹೇಗೆ 'ಸ್ಟಬ್ಯುಲೈಸರ್' ಅನ್ನು ಸಂಯೋಜಿಸಲಾಗುವುದೋ ಹಾಗೆ ನಾವು ನಿರ್ದುಷ್ಟರಾದ ವಾಯುದೇವರನ್ನು ಮಾಧ್ಯಮರನ್ನಾಗಿ ಇಟ್ಟುಕೊಂಡು ದೇವರಿಗೆ ನಮ್ಮ ವಾಕ್‌ಕುಸುಮವನ್ನು ಅರ್ಪಿಸಬೇಕು. ಆ ವಾಕ್‌ಕುಸುಮದಲ್ಲಿ ಏನಾದರೂ ಏರುಪೇರುಗಳಿದ್ದರೆ ವಾಯುದೇವರು ಸರಿಪಡಿಸುವರು. ಇದರಿಂದಾಗಿ ವಾಚನಿಕ ರೋಗಗಳನ್ನು ಹಿಡಿತದಲ್ಲಿಟ್ಟುಕೊಳ್ಳಬಹುದಾಗಿದೆ.

ದೈಹಿಕ ರೋಗಗಳಿಗೆ ಮದ್ದು ಅರೆಯುವವ ದೇವರು. ಮಾನಸಿಕ ರೋಗಗಳಿಗೆ ಅವನ ಚಿಂತನೆ ನಡೆಸಿದಲ್ಲಿ ಉಪಶಮನ ದೊರಕುವುದು. ಬಾಯಿತಪ್ಪಿ ಹೊರಟ ಮಾತಿನಿಂದ ಸಮಾಜದಲ್ಲಿ ಭಾರೀ ಗೊಂದಲ ಆಗುವ ವಾಚನಿಕರೋಗದ ಪರಿಹಾರವೂ ಅವನಿಂದಲೇ. ಹೀಗೆ ತ್ರಿಕರಣಗಳಿಗೆ ಸಂಬಂಧಿಸಿ ಬರುವ ಎಲ್ಲ ಬಗೆಯ ರೋಗಗಳನ್ನೂ ಪರಿಹರಿಸುವವನೇ 'ಕೃಷ್ಣ' – ಎಂದು ಭೀಷ್ಮರು ಸ್ತುತಿಸಿದ್ದಾರೆ.

**೧೧೬. ಬಹುಶಿರಾಃ – ತುಂಬ ಸಂಖ್ಯೆಯ ಹಾಗೂ ವಿಚಾರವಂತಿಕೆಯ ತಲೆಗಳನ್ನು ಹೊಂದಿರುವವನು.**

**ವಿವರಣೆ :** ಶಿರಸ್ಸು ಎಂದರೆ ತಲೆ. ಬಹು ಅಂದರೆ ಬಹಳ. ಬಹಳ ತಲೆವುಳ್ಳವನು. ಬಹಳ ತಲೆ ಇರುವಿಕೆ ಎರಡು ಮುಖಗಳಿಂದಲೂ ತೆರೆದುಕೊಳ್ಳುವುದು. ರಾವಣನಿಗೆ ಹತ್ತು ತಲೆಗಳಿದ್ದವು. ಅದರಂತೆ ಕೃಷ್ಣ ನೀನು ಬಹಳ ತಲೆಗಳುಳ್ಳವನು. ಪ್ರಾಯಶಃ ಭೀಷ್ಮರು ಈ ನಾಮದ ಚಿಂತನೆ ನಡೆಸುವಾಗ ಅವರ ಕಣ್ಣೆದುರು ಕೃಷ್ಣನ 'ವಿಶ್ವರೂಪ' ಚಿತ್ರಣ ಸುಳಿದಿರಬಹುದು. ಅವರವರ ಸಾಮರ್ಥ್ಯಕ್ಕನುಗುಣವಾಗಿ ವಿಶ್ವರೂಪದಲ್ಲಿ ಅಧಿಕಾಧಿಕ ತಲೆಗಳ ದರ್ಶನ. ಹೇಗೆ ಮೋಕ್ಷದಲ್ಲಿ **'ದ್ವಿಪದಾದ್ಯನಂತಚರಣತಯಾ.......'** ಎಂದಿರುವಂತೆ ಭಗವಂತನನ್ನು ಎರಡು ಕಾಲುಗಳಿಂದ ಪ್ರಾರಂಭಿಸಿ ತಮ್ಮ ತಮ್ಮ ಸಾಮರ್ಥ್ಯಕ್ಕನುಗುಣವಾಗಿ ಅನಂತ ಕಾಲುಗಳುಳ್ಳವನನ್ನಾಗಿ ಕಾಣಲಾಗುವುದೋ ಹಾಗೆ. ಹೀಗೆ ಭಾರೀ ತಲೆ ಎಂಬುದಕ್ಕೆ ಬಹಳ ಸಂಖ್ಯೆಯ ತಲೆಗಳೆಂಬಂತೆ ಭಾರೀ ವಿಚಾರವಂತಿಕೆಯ ತಲೆ ಎಂಬುದೂ ಅರ್ಥ. ದೊಡ್ಡ ಸಮಸ್ಯೆಯನ್ನು ಹೊತ್ತು ತಂದವನೊಬ್ಬನು ಆ ಸಮಸ್ಯೆಯನ್ನು ಅನಾಯಾಸವಾಗಿ ಪರಿಹರಿಸಿದ ವ್ಯಕ್ತಿಯ ಬಗ್ಗೆ ಇವನು 'ಭಾರೀ ತಲೆ' ಯ ವ್ಯಕ್ತಿ ಎಂದು ಹೊಗಳುವುದು ಈ ಅಭಿಪ್ರಾಯದಲ್ಲಿಯೇ. ತುಂಬ ನಾಜೂಕುತನ ಉಳ್ಳವನು, ತುಂಬ ಬುದ್ಧಿಶಕ್ತಿ ಉಳ್ಳವನು – ಎಂದರ್ಥ.

ಭೀಷ್ಮರು ಕೃಷ್ಣನ ಬುದ್ಧಿಶಕ್ತಿಯನ್ನು ಚೆನ್ನಾಗಿ ಅನುಭವಿಸಿದವರು. ಧೃತರಾಷ್ಟ್ರ ಯುಧಿಷ್ಠಿರನನ್ನು ಪಗಡೆಯಾಟಕ್ಕೆ ಬರಲು ವಿದುರನ ಮೂಲಕ ಹೇಳಿ ಕಳುಹಿಸಿದಾಗ, ಅದುವರೆಗೆ ಅಲ್ಲಿಯೇ ಇದ್ದ ಕೃಷ್ಣ ಆ ಕ್ಷಣದಲ್ಲಿ ಜಾಗ ಖಾಲಿ ಮಾಡಿದ್ದನು.ಯಾಕೆ? ಆಗ ಭೀಷ್ಮರಿಗೆ ಅದರ ಉದ್ದೇಶ ಸ್ಪಷ್ಟವಾಗಿರಲಿಲ್ಲ. ಈಗ ಸ್ಪಷ್ಟವಾಗಿದೆ. ಒಂದು ವೇಳೆ ಕೃಷ್ಣ ಅಲ್ಲಿದ್ದಿದ್ದರೆ ಯುಧಿಷ್ಠಿರನನ್ನು ಹೋಗಲು ಬಿಡುವುದಿಲ್ಲ. ಯುಧಿಷ್ಠಿರ ಹಸ್ತಿನಪುರಕ್ಕೆ ಹೋಗದೆ ಪಗಡೆಯಾಡದಿದ್ದರೆ ಪಾಂಡವರು ಸೋತು ಕಾಡಿಗೆ ಹೋಗುವ ಪ್ರಸಂಗ ಬರುತ್ತಿರಲಿಲ್ಲ. ಯುದ್ಧವೂ ಆಗುತ್ತಿರಲಿಲ್ಲ. ದುರ್ಯೋಧನಾದಿಗಳನ್ನು ಕೊಲ್ಲಲೂ ಆಗುತ್ತಿರಲಿಲ್ಲ. ಹಾಗಾದರೆ ಕೃಷ್ಣ, ಪಾಂಡವಾದಿಗಳು ಅವತಾರ ತಾಳಿದ್ದಾದರೂ ಯಾಕೆ!

ಹೀಗೆ ಕೃಷ್ಣ ಬಹಳ ಬುದ್ಧಿವಂತಿಕೆಯನ್ನು ಬಳಸಿ ಆಯಾ ಸಮಯದಲ್ಲಿ ಹೇಗೆ ನಡೆದುಕೊಳ್ಳಬೇಕೋ ಹಾಗೆ ನಡೆದುಕೊಂಡಿರುವನು.

ಆದುದರಿಂದ ಕೃಷ್ಣ ಸಂಖ್ಯಾದೃಷ್ಟಿಯಿಂದ ಮಾತ್ರ 'ಬಹುಶಿರಾಃ' ಬಹಳ ತಲೆ ಉಳ್ಳವನು ಆಗಿರದೆ, ಶಕ್ತಿಯಿಂದಲೂ 'ಬಹುಶಿರಾಃ' ಅಂದರೆ ಒಳ್ಳೆಯ ಬುದ್ಧಿಶಕ್ತಿವುಳ್ಳವನೂ ಆಗಿರುವನು.

## ೧೧೭. ಬಭ್ರುಃ – ಎಲ್ಲವನ್ನೂ ಸಹಿಸಿಕೊಳ್ಳುವವನು.

**ವಿವರಣೆ :** 'ಬಭ್ರು' ಎಂದು ಬೆಂಕಿಗೂ ಹೆಸರಿದೆ. ಸದ್ಯ ಬಭ್ರು ಎಂದರೆ ಬಿಭರ್ತೀತಿ ಬಭ್ರುಃ – ಎಲ್ಲವನ್ನೂ ಧಾರಣೆ ಮಾಡುವವನು. ಭರಣೆ ಎಂದರೂ ಧಾರಣೆ ಎಂದರೂ ಒಂದೇ. ಕೃಷ್ಣ ಎಲ್ಲವನ್ನೂ ಸಹಿಸಿಕೊಂಡ. ದುರ್ಯೋಧನನ ಅವಮಾನವನ್ನೂ ಸಹಿಸಿಕೊಂಡ. ಪಾಂಡವರ ಹೊಗಳಿಕೆಯನ್ನೂ ಸಹಿಸಿಕೊಂಡ. ಎಲ್ಲವನ್ನೂ ತನ್ನಲ್ಲಿ ತುಂಬಿಕೊಂಡ. ಆದರೆ ಯಾವಾಗ ಕಾರ್ತಾನೆ, ಗೊತ್ತಿಲ್ಲ. ಆವಾಗಲೇ ಪ್ರತಿಕ್ರಯಿಸುವುದಿಲ್ಲ. ಒಳಗೆ ಇಟ್ಟುಕೊಳ್ತಾನೆ. ತನ್ನ ಈ ನಡತೆಯಿಂದ ಶ್ರೀಕೃಷ್ಣನ ಸಮಾಜಕ್ಕೆ ಒಂದು ಪಾಠವನ್ನು ನೀಡಿದ್ದಾನೆ – ಯಾರು ಏನು ಅವಮಾನ ಮಾಡಿದರೂ ತಟಸ್ಥರಾಗಿರಬೇಕು. ದ್ರೌಪದ್ಯಾದಿಗಳ ಅವಮಾನ ಮಾಡಿದ ದುರ್ಯೋಧನಾದಿಗಳನ್ನು ಆಗಲೇ ಚಚ್ಚಿ ಬಿಡ್ತೇನೆ ಎಂದು ಭೀಮಸೇನ ಎದ್ದಾಗ ಕೃಷ್ಣ ಸೂಚಿಸಿದ ಈಗ ಬೇಡ; ಈಗ ಆ ಅವಮಾನವನ್ನು ಸಹಿಸಿಕೊಳ್ಳು. ಇದರಿಂದಾಗಿ ಮುಂದೆ ದುಷ್ಟಸಂಹಾರರೂಪವಾದ ಕಾರ್ಯವನ್ನು ಚೆನ್ನಾಗಿ ನಡೆಸಬಹುದಾಗುವುದೆಂದು. ಮನೆಯಲ್ಲೂ ಗಂಡ ಹೆಂಡಿರ ಮಧ್ಯೇ ಮಾತಿನ ಚಕಮಕಿ ನಡೆದಾಗ ಅವರಲ್ಲಿ ಯಾರಾದರೊಬ್ಬರು ತೆಪ್ಪಗಾಗಿ ಬಿಟ್ಟರೆಂದರೆ ಆ ಗಲಾಟೆ ಅಲ್ಲಿಗೇ ಶಮನವಾಗುವುದು. ಇದು 'ಬಭ್ರುಃ' ನಾಮಕ ಭಗವಂತ ಪ್ರಸ್ತುತಪಡಿಸಿದ ಆದರ್ಶ. ಸಹನಾಶಕ್ತಿ ಭಾರೀ ಪ್ರಮಾಣದಲ್ಲಿ ಉಳ್ಳವನೇ 'ಬಭ್ರು'. ಈ ದಿನಗಳಲ್ಲಿ ಸಮಾಜ ಹಾಳಾಗುತ್ತಿರುವುದೇ ಸಹನಾಶಕ್ತಿಯ ಕೊರತೆಯಿಂದಾಗಿ. ಸಮಾಜದಲ್ಲಿ ಅಶಾಂತಿ ಉಂಟಾಗುತ್ತಿರುವಿದೇ ತಾಳ್ಮೆ ಇಲ್ಲದಿರುವುದರಿಂದ.

ಕೃಷ್ಣ ಮಹಾಭಾರತ ಯುದ್ಧದ ಹದಿನೆಂಟು ದಿನಗಳಲ್ಲಿ ಅರ್ಜುನನ ಸಾರಥಿಯಾಗಿ ಕುಳಿತ, ಯುದ್ಧದಲ್ಲಿ ಪಾಂಡವರಿಗೆ ಜಯ ಗಳಿಸಿ, ಯುಧಿಷ್ಠಿರನಿಗೆ ಅಧಿಕಾರ ಕೊಟ್ಟ. ಯುಧಿಷ್ಠಿರ ಒಲ್ಲೆ ಎಂದಾಗ ಅವನನ್ನು ಭೀಷ್ಮ ಇರುವಲ್ಲಿಗೆ ಕರೆತಂದು ಅವನಿಗೆ ಭೀಷ್ಮರ ಮೂಲಕ ಧರ್ಮೋಪದೇಶದ ವ್ಯವಸ್ಥೆ ಮಾಡಿದ. ಧರ್ಮಾಧ್ಯಕ್ಷನಾದ ಅವನ ಎದುರು ಭೀಷ್ಮರ ಧರ್ಮೋಪದೇಶ ಏನೂ ಅಲ್ಲ. ಆದರೂ ಭೀಷ್ಮರ ಧರ್ಮೋಪದೇಶದಲ್ಲಿ ತಾನೂ ಶ್ರೋತೃ ಆಗಿ ಪಾಲ್ಗೊಂಡ. ಹೀಗೆ ಕೃಷ್ಣನ ಹೆಜ್ಜೆ ಹೆಜ್ಜೆಗೆ ಪ್ರಕಟಗೊಳ್ಳುತ್ತ ಬಂದ ತಾಳ್ಮೆಯನ್ನು, ಸಹನಾಶಕ್ತಿಯನ್ನು ಅನುಸಂಧಾನ ಮಾಡುತ್ತ ಭೀಷ್ಮರು ಉದ್ಗಾರ ಎತ್ತಿರುವರು – 'ಬಭ್ರುಃ'– ಎಂದು. ತಾಳ್ಮೆ ಉಳ್ಳವನು. ಏನೂ ಬಂದರೂ ತಾಳ್ಮೆಯಿಂದ ಸ್ವೀಕಾರ ಮಾಡುವವನು.

## ೧೧೮ ವಿಶ್ವಯೋನಿಃ – ಸಮಸ್ತ ಜಗತ್ತಿಗೆ ನೇರ ಕಾರಣ.

**ವಿವರಣೆ :** ಯೋನಿ ಶಬ್ದಕ್ಕೆ ಕಾರಣ ಎಂದರ್ಥ. ಭಗವಂತ ಇಡೀ ಜಗತ್ತಿಗೆ ಕಾರಣನಾದುದರಿಂದ 'ವಿಶ್ವಯೋನಿ'. ಆದರೆ ಯಾವ ರೀತಿಯ ಕಾರಣ? ಸ್ಥೂಲವಾಗಿ ಯೋನಿ ಮತ್ತು ಕಾರಣ ಶಬ್ದಗಳು ಒಂದೇ ಅರ್ಥವನ್ನು ತಿಳಿಸುವವಾದರೂ ಅವುಗಳ ಅರ್ಥದಲ್ಲಿ ಸ್ವಲ್ಪ ವ್ಯತ್ಯಾಸ ಉಂಟು. ಮಡಕೆ ಆಗಲಿಕ್ಕೆ ಕುಂಬಾರ ಕಾರಣ. ಕುಂಬಾರ

ಕಾರಣ ಎಂದ ಮೇಲೆ ಕುಂಬಾರನ ಅಪ್ಪನೂ ಕಾರಣ ಆಗಲೇ ಬೇಕು. ಯಾಕೆಂದರೆ ಕುಂಬಾರನ ಅಪ್ಪನೇ ಇಲ್ಲದಿದ್ದಲ್ಲಿ ಕುಂಬಾರನೇ ಇರಲು ಸಾಧ್ಯವಿಲ್ಲ ತಾನೇ? ಆದುದರಿಂದ ಮಡಕೆಗೆ ಕುಂಬಾರನಂತೆ ಅವನ ಅಪ್ಪನೂ ಕಾರಣ. ಆದರೆ ಅವನನ್ನು ಮಡಕೆಗೆ ಕಾರಣ ಎನ್ನಬಹುದೇ ಹೊರತು 'ಯೋನಿ' ಎನ್ನುವಂತಿಲ್ಲ. ಕಾರ್ಯವನ್ನು ಕುರಿತು ನೇರವಾದ ಕಾರಣ 'ಯೋನಿ' ಎನಿಸುವುದು. ಸಾಮಾನ್ಯವಾಗಿ ನಾವು ತಿಳ್ಕೊಂಡಂತೆ ಭಗವಂತ ಎಲ್ಲೋ ಇರುವನು. ಅಂತಹ ಭಗವಂತನಿಂದ ಚತುರ್ಮುಖ, ಚತುರ್ಮುಖನಿಂದ ರುದ್ರದೇವರು, ರುದ್ರದೇವರಿಂದ ಇಂದ್ರ ........ ಹೀಗೆಯೇ ಬಂದು ಬಂದು ನನ್ನ ಅಜ್ಜ, ನನ್ನ ಅಪ್ಪ, ನಾನು, ಮಗ, ಮೊಮ್ಮಗ, ಮರಿಮಗ...... ಹೀಗೆ ದೇವರು ಪರಂಪರಯಾ ಕಾರಣ ಎಂದು ಭಾವಿಸಲಾಗುವುದು. ಆದರೆ ಪ್ರತಿಯೊಂದು ಕಡೆಯಲ್ಲೂ ಭಗವಂತ ನೇರವಾಗಿ ಕಾರಣ ಆಗಿಯೇ ತೀರುವನು. ನಮಗೆ ಕಾಣಿಸದಿರಬಹುದಷ್ಟೇ. ತಾಯಿಯ ಗರ್ಭದಲ್ಲಿ ನಮ್ಮ ಶರೀರದ ನಿರ್ಮಾಣ ಆಗಬೇಕಾದರೆ ತಂದೆಯ ಪಾತ್ರ ತಾಯಿಯ ಗರ್ಭದಲ್ಲಿ ಧಾತುವನ್ನು ತುಂಬಿಸುವುದು ಮಾತ್ರ. ತಾಯಿಯ ಗರ್ಭದಲ್ಲಿ ಆ ಪಿಂಡಕ್ಕೆ ಆಕಾರ ಕೊಡುವ ಪಾತ್ರ ಭಗವಂತನದ್ದೇ. ಆದ್ದರಿಂದ ನಾವು ಇಂತಹ ದೇಹ ಪಡೆಯುವುದಕ್ಕೆ ತಂದೆ ತಾಯಿಯರಿಗಿಂತಲೂ ನೇರವಾದ ಕಾರಣ ಭಗವಂತ. ಆದ್ದರಿಂದ ಭೀಷ್ಮರು ಕೃಷ್ಣನಲ್ಲಿ ಅಂತಾರೆ – ವಿಶ್ವಕ್ಕೆ ನಿನ್ನನ್ನು ಕಾರಣ ಎಂದರೆ ಸಾಲದು, ನೇರಕಾರಣ ಎಂಬ ಅರ್ಥದ ಯೋನಿ ಶಬ್ದದಿಂದಲೇ ನಿನ್ನನ್ನು ಕರೆಯಬೇಕು. ವಿಶ್ವದ ಸೃಷ್ಟಿಗೆ ನೇರಕಾರಣ. ಸೃಷ್ಟಿಗೆ ಕಾರಣರೆಂದು ಪರಿಗಣಿತರಾಗಿರುವ ತಂದೆ ತಾಯಿಯಂದಿರು ಎರಡನೇ ಕಾರಣ; ಮೊದಲನೆಯ ಕಾರಣ ಶ್ರೀಕೃಷ್ಣನೇ.

ಲೌಕಿಕ ಭಾಷೆಯಲ್ಲಿ ಹೇಳುವುದಾದರೆ ಮಡಕೆಗೆ ಕುಂಬಾರ ಹೇಗೋ ಹಾಗೆ ವಿಶ್ವಕ್ಕೆ ಭಗವಂತನು ನೇರ ಕಾರಣನೇ ಹೊರತು ಮಡಕೆಗೆ ಕುಂಬಾರನ ತಂದೆ ಕಾರಣನಾಗಿರುವಂತೆ ಪರಂಪರಯಾ ಕಾರಣನಲ್ಲ. ಭಗವಂತನನ್ನು ಪರಂಪರಾಕಾರಣ ಎಂದು ಉಪಾಸನೆ ನಡೆಸಿದಲ್ಲಿ ಅವನಲ್ಲಿ ನ್ಯೂನತೆಯನ್ನು ಆರೋಪಿಸಿದಂತಾಗುವುದು! ಆದುದರಿಂದ ಭಗವಂತನನ್ನು 'ವಿಶ್ವಯೋನಿ'ಎಂದೇ ಉಪಾಸನೆ ನಡೆಸೋಣ.

**೧೧೯. ಶುಚಿಶ್ರವಾಃ – ಶುಭ್ರವಾದ ಯಶಸ್ಸು ಉಳ್ಳವನು.**

**ವಿವರಣೆ** : ಶುಚಿ ಎಂದರೆ ಶುಭ್ರವಾದ, ಶ್ರವಸ್ ಎಂದರೆ ಕೀರ್ತಿ. ' **ಆಕಳಂಕ ಚರಿತನೆ ಆದಿನಾರಾಯಣ......**' ಎಂದಿರುವಂತೆ ಕಳಂಕರಹಿತವಾದ ಚರಿತ್ರೆಯವನು ಭಗವಂತನು. ' ಎಲ್ಲ ಸರಿ..... ಆದರೆ.....!' – ಎಂದು ರಾಗ ಎಳೆಯುವ ಪ್ರಸಂಗ ದೇವರ ವಿಷಯದಲ್ಲಿ ಇಲ್ಲವೇ ಇಲ್ಲ. ಲೋಕದಲ್ಲಿ 'ನೀವೆಲ್ಲ ಅವನ ಬಗ್ಗೆ ಹೇಳುವುದು ಸರಿ. ಆದರೆ.......' ಎಂದು ರಾಗ ಎಳೆಯುವುದುಂಟು ತಾನೇ? ಹಾಗೆಯೇ ಕೃಷ್ಣ ಗೀತೋಪದೇಶ ನೀಡಿದ್ದು ಸರಿ; ಜರಾಸಂಧಾದಿಗಳನ್ನು ಕೊಂದದ್ದು ಸರಿ; ಆದರೆ....... ಬಾಲ್ಯದಲ್ಲಿ ಹಾಲು

ಮೊಸರುಗಳನ್ನು ಕದ್ದಿದ್ದನಲ್ಲ! – ಎಂದು ಆದರೆಯ ರಾಗವನ್ನು ಸೇರಿಸಿ ಕೃಷ್ಣನ ಮೇಲೆ ಹಾಲು ಮೊಸರು ಕಳ್ಳತನದ ಆರೋಪವನ್ನು ಹೊರಿಸಲು ತೊಡಗಿದರೆ – ಹೊರಿಸ ಹೊರಟ ವ್ಯಕ್ತಿಯೇ ಕಳ್ಳನೆಂದಾದಾನು ! ದೇವರಲ್ಲಿ ದೋಷ ಹೊರಿಸಲಿಕ್ಕೆ ಹೋದರೆ ಆ ದೋಷ ಹೊರಿಸಿದವನ ಮೇಲೆಯೇ ಬರುವುದು ! ಆದ್ದರಿಂದ ದೊಡ್ಡವರಲ್ಲಿ ದೋಷ ಹೇಳಲು ಹೋಗಬಾರದು. ಶುಚಿ–ನಿರ್ಮಲವಾದ, ಸ್ವಚ್ಛವಾದ, ಕಶ್ಮಲರಹಿತವಾದ ಕೀರ್ತಿವುಳ್ಳವನೇ 'ಶುಚಿಶ್ರವಾಃ'.

**೧೨೦. ಅಮೃತಃ – ಮಾನತ್ಯಾಗದಿಂದಾಗಲೀ, ಧನತ್ಯಾಗದಿಂದಾಗಲೀ, ದೇಹತ್ಯಾಗದಿಂದಾಗಲೀ ಮರಣಕ್ಕೆ ಒಳಗಾಗದವನು.**

**ವಿವರಣೆ** : ಮೃತ ಎಂದರೆ ಮರಣ; ಅಮೃತ ಎಂದರೆ ಮರಣ ಇಲ್ಲದವನು. ಇದು ಎಲ್ಲರಿಗೂ ಗೊತ್ತಿರುವ ಅರ್ಥ. ನಾವು ದೈಹಿಕವಾಗಿ ಹೋದರೆ ಕೀರ್ತಿಯ ಮೂಲಕವೋ, ಅಪಕೀರ್ತಿಯ ಮೂಲಕವೋ ಇರಬಹುದಷ್ಟೇ. ಆದರೆ ಭಗವಂತ ಹಾಗಲ್ಲ. ಅವನು ಆಯಾ ರೂಪದಿಂದ ಅದೃಶ್ಯನಾದರೂ ದೈಹಿಕವಾಗಿ ಮೃತನಾದ ಎನ್ನುವಂತಿಲ್ಲ. ಅವನಿಗೆ ಯಾವುದೇ ರೀತಿಯಿಂದ ಮರಣ ಇಲ್ಲ. ಚರ್ಯೆಯಿಂದ ಮರಣ ಇಲ್ಲ, ದೈಹಿಕವಾಗಿ ಮರಣ ಇಲ್ಲ. ದೊಡ್ಡವರ ಪಾಲಿಗೆ ಮರಣ ಎಂದರೆ ಸಭೆ ಸಮಾರಂಭಗಳಲ್ಲಿ ಅವಮಾನಕ್ಕೊಳಗಾಗುವುದು. ಮಧ್ಯಮ ವ್ಯಕ್ತಿಗಳ ಮರಣ ಅವರ ಸಂಪತ್ತನ್ನೆಲ್ಲ ಕಿತ್ತುಕೊಳ್ಳುವುದು. ನಮ್ಮ ನಿಮ್ಮಂತಹ ಈ ಕನಿಷ್ಠರ ಮರಣ ಎಂದರೆ ಈ ದೇಹವನ್ನು ಕಳೆದುಕೊಳ್ಳುವುದು. ಯಾಕೆಂದರೆ ನಮಗೆ ಮಾನ ಇಲ್ಲದುದರಿಂದ ಮಾನತ್ಯಾಗದಿಂದಾಗಿ ಮರಣ ಸಂಭವಿಸುವಂತಿಲ್ಲ. ಸಂಪತ್ತೂ ಇಲ್ಲದ ಪ್ರಯುಕ್ತ ಅದನ್ನು ಕಿತ್ತುಕೊಳ್ಳುವುದರಿಂದಲೂ ಮರಣ ಬರಲಾರದು. ಆದ್ದರಿಂದ ನಮಗೆ ಬರುವ ಮರಣ ಎಂದರೆ ದೇಹದಿಂದ ಪ್ರಾಣವನ್ನು ತ್ಯಜಿಸುವಂತಹದ್ದು. ಆದರೆ ಭಗವಂತನಿಗೆ ಸಭೆಸಮಾರಂಭಗಳಲ್ಲಿ ಮಾನ ಹೋಗತಕ್ಕ ಪ್ರಸಂಗ ಇಲ್ಲ, ಸಂಪತ್ತಿನ ಅಪಹಾರವಾಗುವ ಪ್ರಸಂಗವೂ ಇಲ್ಲ. ದೇಹ ಬಿಡಬೇಕಾದ ಪ್ರಸಂಗವೂ ಇಲ್ಲ. ಹೀಗೆ ಮೂರು ಬಗೆಯ ಮರಣಕ್ಕೊಳಗಾಗದವನು 'ಅಮೃತ' ನಾಮಕ ಭಗವಂತನೊಬ್ಬನೇ.

**೧೨೧. ಶಾಶ್ವತಸ್ಥಾಣುಃ – ಹುಟ್ಟು ಸಾವುಗಳಿಗೆ ಒಳಗಾಗದೆ ಯಾವಾಗಲೂ ಒಂದೇ ರೀತಿಯಾಗಿ ಇರುವ ಜೀವರಲ್ಲಿ ನಿರ್ಲಿಪ್ತನಾಗಿ ಇರುವವನು.**

**ವಿವರಣೆ** : ಹಿಂದೊಮ್ಮೆ ತಿಳಿಸಿದಂತೆ ಬೃಹತೀಸಹಸ್ರದ ಋಕ್ಕಗಳಿಗೆ ಸಂಬಂಧಿಸಿದಂತೆ ಪರಿಶೀಲಿಸುವಾಗ 'ಶಾಶ್ವತಸ್ಥಾಣುಃ ಎಂಬ ಎರಡು ಶಬ್ದಗಳು ಸೇರಿ ಒಂದು ನಾಮ. ಆದರೆ ಈ ನಾಮಗಳನ್ನು 'ಶಾಶ್ವತಃ' ಹಾಗೂ 'ಸ್ಥಾಣುಃ' – ಎಂದು ಪ್ರತ್ಯೇಕವಾಗಿಯೂ ನೋಡಬಹುದು. ಆದರೆ ನಾವು ಎರಡು ಶಬ್ದಗಳೂ ಸೇರಿ ಒಂದೇ ನಾಮ ಎಂದಿಟ್ಟುಕೊಂಡೇ ಅರ್ಥಚಿಂತನೆ ನಡೆಸೋಣ.

ಕಂಭವನ್ನು ಸ್ಥಾಣು ಎಂದು ಕರೆಯುವರು. ತಿಷ್ಠತಿ, ಸ್ಥಾಪಯತಿ ಚ ಸ್ಥಾಣುಃ – ತಾನು ಗಟ್ಟಿಯಾಗಿ ನಿಲ್ಲುವನು ಹಾಗೂ ತನ್ನನ್ನು ಆಶ್ರಯಿಸಿಕೊಂಡವರನ್ನು ಗಟ್ಟಿಯಾಗಿ ನಿಲ್ಲಿಸುವವನೂ ಅವನೇ. ಕಂಭ ತಾನು ನಿಲ್ಲುವುದಲ್ಲದೆ, ಕಂಭವೇ ಆಧಾರವಾಗಿ ಉಳ್ಳ ಕಟ್ಟಡವೂ ಗಟ್ಟಿಯಾಗಿ ನಿಲ್ಲುವಂತೆ ಮಾಡುವುದು. ಎಲ್ಲಿಯವರೆಗೆ? ಕಂಭ ನಿಲ್ಲುವ ತನಕ.

ಜೀವರನ್ನು ಶಾಶ್ವತ ಹೆಸರಿನಿಂದ ಕರೆದರು. ಯಾಕೆ ಜೀವರು ಶಾಶ್ವತರು? 'ಶಶ್ವತ್ ಏಕಪ್ರಕಾರ ಶಾಶ್ವತ' ಜೀವರುಗಳು ಯಾವಾಗಲೂ ಒಂದೇ ರೀತಿಯಾಗಿ ಇರುವರು. ಕೃಷ್ಣನೇ ಗೀತೆಯಲ್ಲಿ ಒಂದು ಮಾತು ಹೇಳಿದ್ದ –**'ನೈನಂ ಛಿಂದಂತಿ ಶಸ್ತ್ರಾಣಿ ನೈನಂ ದಹತಿ ಪಾವಕಃ । ನ ಚೈನಂ ಕ್ಲೇದಯಂತ್ಯಾಪೋ ನ ಶೋಷಯತಿ ಮಾರುತಃ'** ನೀರಿಗೆ ಹಾಕಿದರೆ ಒದ್ದೆ ಆಗುವುದಿಲ್ಲ. ಬೆಂಕಿಗೆ ಹಾಕಿದರೆ ಸುಡಲಿಕ್ಕಾಗುವುದಿಲ್ಲ. ಯಾವ ಆಯುಧಗಳಿಗೂ ಬಗ್ಗದ್ದು. ಅದೇ ಜೀವಚೇತನ. ಅವನಿಗೆ ಹುಟ್ಟೂ ಇಲ್ಲ; ಸಾವೂ ಇಲ್ಲ. ಚೇತನ ಈ ಶರೀರದೊಳಗೆ ಪವೇಶಿಸಿದ, ಅಷ್ಟು ಮಾತ್ರಕ್ಕೆ ಅವನು ಹುಟ್ಟಿದವನೆನಿಸಿದ. ದೇಪದಿಂದ ಚೇತನ ಹೊರಟು ಹೋಯಿತು, ಸಾವಿಗೆ ಒಳಗಾದ ಎನಿಸಿದ. ಹೊರತು ಮೊದಲು ಇಲ್ಲದ ಮಡಿಕೆ ಮಣ್ಣಿನಿಂದ ಹುಟ್ಟಿದಂತೆ, ಮೊದಲು ಇಲ್ಲದ ಚೇತನ ಹುಟ್ಟಿದ ಎಂದು ಭಾವಿಸಬೇಡಿ. ಮೊದಲೂ ಜೀವ ಇದ್ದೇ ಇದ್ದ. ಈ ಶರೀರದೊಳಗೆ ಬರುವ ಮುಂಚೆ ತಾಯಿಯ ಹೊಟ್ಟೆಯಲ್ಲಿದ್ದ; ತಾಯಿಯ ಹೊಟ್ಟೆಗೆ ತಂದೆಯ ಹೊಟ್ಟೆಯಿಂದ ಬಂದ. ತಂದೆಯ ಹೊಟ್ಟೆಗೆ ಆಹಾರದಿಂದ ಬಂದ. ಆಹಾರಕ್ಕೆ ಮಳೆಯಿಂದ, ಮಳೆಗೆ ಮೋಡದಿಂದ. ಮೋಡಕ್ಕೆ ಆಕಾಶದಿಂದ; ಆಕಾಶಕ್ಕೆ ಸ್ವರ್ಗದಿಂದ , ಸ್ವರ್ಗಕ್ಕೆ ಪುನಃ ಭೂಮಿಯಿಂದ. ಹೀಗೆಯೇ ಚಕ್ರ ಸುತ್ತುತ್ತಿರುವುದಲ್ಲ? ಹಾಗಾದರೆ ಜೀವನಿಗೆ ಹುಟ್ಟು ಎನ್ನುವಂತಹದ್ದಿಲ್ಲ. ಆದ್ದರಿಂದ ಜೀವ ಶಾಶ್ವತ. ಯಾವಾಗಲೂ ಒಂದೇ ರೀತಿಯಾಗಿ ಇರತಕ್ಕ ಚೇತನವನ್ನು ಜೀವ ಎಂದು ಕರೆದರು. ಹುಟ್ಟು ಸಾವು ಇಲ್ಲದ ಚೇತನವನ್ನು ಜೀವ ಎಂದು ಕರೆದರು. ಹೀಗೆ 'ಶಾಶ್ವತ' ಎನಿಸುವ ಜೀವನಲ್ಲೂ ಭಗವಂತ ಇದ್ದಾನೆ.ಹೇಗಿದ್ದಾನೆ ಗೊತ್ತಾ? ಸ್ಥಾಣುವಿನಂತೆ, ಕಂಭದಂತೆ ಇದ್ದಾನೆ. ಜೀವನೊಳಗೆ ಭಗವಂತ ಕಂಭದಂತೆ ಇದ್ದಾನೆ ಎಂಬುದಕ್ಕೆ ಏನರ್ಥ? ಜೀವನಿಗೆ ಹುಟ್ಟು ಸಾವುಗಳಿಲ್ಲ ಹೌದು; ಆದರೆ ಅವನಿಗೆ ಸುಖ ದುಃಖಗಳ ಅನುಭವ ಉಂಟು. ಬೆಂಕಿಗೆ ಕೈ ಹಾಕಿದಾಗ ಆಗುವ ದುಃಖವನ್ನು ಅನುಭವಿಸುವವನು ಒಳಗಿರುವ ಚೇತನ.ಹೀಗೆ ಜೀವ ಸುಖ ದುಃಖಗಳನ್ನು ಅನುಭವಿಸಿದರೂ, ಜೀವನ ಒಳಗಿರುವ ದೇವರು ಮಾತ್ರ ನಿರ್ಲಿಪ್ತನಾಗಿ ಇರುವನು. ಯಾವುದಕ್ಕೂ ಸ್ಪಂದಿಸದೆ ಕಂಭದಂತೆ ಇದ್ದಾನೆ. ಜೋರು ಮಳೆಗಾಳಿ ಬರುತ್ತಿದೆ ಎಂದು ಭಾವಿಸಿ. ಈ ಕಟ್ಟಡದ ಒಳಗಿರುವ ನಾವು ಆ ಮಳೆಗಾಳಿಗಳಿಗಾಗಿ ಆಚೀಚೆ ಓಡಾಡುತ್ತಿರುತ್ತೇವೆ. ಆದರೆ ಕಟ್ಟಡದ ಕಂಭಗಳು ಮಾತ್ರ ನಿರ್ಲಿಪ್ತವಾಗಿ ಇರುವವು. ಅದರಂತೆ ಶರೀರವೆಂಬ ಕಟ್ಟಡದೊಳಕ್ಕೆ ಸುಖದುಃಖಗಳ ಘಟನೆಗಳಿಗೆ ಸ್ಪಂದಿಸುವ ಜೀವನ ಒಳಗೆ

ಇರುವ ಭಗವಂತ ಮಾತ್ರ ಕಂಭದಂತೆ ನಿರ್ಲಿಪ್ತನಾಗಿ ಇರುವನು. ಜೀವನಿಗೆ ಸುಖದುಃಖಗಳೆಂಬ ಕೆಸರು ಅಂಟಿಕೊಂಡರೂ ತಾವರೆಯ ಎಲೆ ಹೇಗೆ ಕೆಸರಿನ ಲೇಪಕ್ಕೆ ಒಳಗಾಗುವುದಿಲ್ಲವೋ ಹಾಗೆ ಭಗವಂತ ಸುಖದುಃಖಗಳ ಲೇಪಕ್ಕೆ ಒಳಗಾಗುವುದಿಲ್ಲ. ಹುಟ್ಟು ಸಾವುಗಳಿಗೆ ಒಳಗಾಗದೆ ಒಂದೇ ರೀತಿಯಾಗಿ ಇರುವ ಪ್ರಯುಕ್ತ 'ಶಾಶ್ವತ' ಎನಿಸುವ ಜೀವನು ತಾನು ಸುಖದುಃಖದ ಲೇಪಕ್ಕೊಳಗಾದರೂ ಅವನೊಳಗಿರುವ ದೇವರು ಮಾತ್ರ ಸ್ಥಾಣುವಿನಂತೆ, ಕಂಭದಂತೆ ತನಗೆ ಏನನ್ನೂ ಅಂಟಿಸಿಕೊಳ್ಳದೆ ಇರುವವನು – 'ಶಾಶ್ವತಸ್ಥಾಣು'

ಕುರುಕ್ಷೇತ್ರದಲ್ಲಿ ಯುದ್ಧದ ಸಂದರ್ಭದಲ್ಲಿ ಉಳಿದ ಯೋಧರೆಲ್ಲ ಆ ಕಡೆ ಈ ಕಡೆ ಚಲಿಸುತ್ತ ಗೊಂದಲಕ್ಕೆ ಒಳಗಾಗುತ್ತಿದ್ದಾಗ ಕೃಷ್ಣ ಅರ್ಜುನನ ರಥದಲ್ಲಿ ಏನೇನು ಆಗಬೇಕಾದದ್ದೋ ಅದೇ ಆಗುವುದೆಂಬ ನಿರ್ಧಾರದಿಂದ ಸ್ಥಾಣುವಿನಂತೆ ಸಾರಥಿಯಾಗಿ ಕುಳಿತಿದ್ದನು.

'ಶಾಶ್ವತಸ್ಥಾಣು' ನಾಮದಿಂದ ಭಗವಂತನ ನಿರ್ಲಿಪ್ತತೆಯ ಗುಣವನ್ನು ಉಪಾಸನೆ ಮಾಡಿದಲ್ಲಿ ಮನೆಯಲ್ಲಿ ಎಷ್ಟೇ ಸಮಸ್ಯೆಗಳಿದ್ದರೂ ಅವುಗಳನ್ನು ಹೆಚ್ಚಾಗಿ ತಲೆಗೆ ಹಚ್ಚಿಕೊಳ್ಳದಂತೆ ಸ್ಥಿತಪ್ರಜ್ಞತ್ವವನ್ನು ಪಡೆದುಕೊಳ್ಳಬಹುದಾಗಿದೆ. ಭೀಷ್ಮರು, ದ್ರೋಣಾಚಾರ್ಯರು – ಇತ್ಯಾದಿಗಳು ಭಗವಂತನನ್ನು 'ಶಾಶ್ವತಸ್ಥಾಣು' ಎಂದು ಉಪಾಸನೆ ನಡೆಸಿದ ಫಲವಾಗಿಯೇ ದುರ್ಯೋಧನಾದಿಗಳ ಅವಮಾನಾದಿಗಳ ಬಗ್ಗೆ ನಿರ್ಲಿಪ್ತರಾಗಿ ಇರುವಂತಾಗಿದ್ದಿರಬಹುದು.

**೧೨೨. ವರಾರೋಹಃ – ಭಗವದ್‌ಭಕ್ತರಾಗಿದ್ದು ಶ್ರೇಷ್ಠರೆನಿಸುವವರನ್ನು ಎತ್ತರಕ್ಕೆ ಏರಿಸುವವನು.**

**ವಿವರಣೆ** : 'ನಂಬಿ ಕೆಟ್ಟವರಿಲ್ಲವೋ ರಂಗಯ್ಯನ, ನಂಬದೆ ಕೆಟ್ಟರೆ ಕೆಡಲಿ.......' ಇದು ಈ ನಾಮದ ತಾತ್ಪರ್ಯ. ಈ ನಾಮವನ್ನು ಬಿಡಿಸುವುದಾದರೆ –ವರ+ಆರೋಹ – ವರಾರೋಹ – ಸವರ್ಣದೀರ್ಘಸಂಧಿ. ಆರೋಹ, ಆರೋಹಣ, ಧ್ವಜಾರೋಹಣ – ಎಂದರೆ ಆರೋಹಣ ಶಬ್ದದ ಅರ್ಥ ಸ್ಪಷ್ಟವಾಗುವುದು. ಏರಿಸುವುದು ಎಂದರ್ಥ. ವರ ಎಂದರೆ ಶ್ರೇಷ್ಠರು. ಪ್ರಕೃತ ಯಾಕೆ ವರರು? ಭಗವಂತನ ಚಿಂತನೆಯ ಪ್ರಯುಕ್ತ ಯಾರು ವರರು, ಶ್ರೇಷ್ಠರು ಇರುವರೋ ಅಂತಹವರನ್ನು ಕೈ ಹಿಡಿದು ಮೇಲಕ್ಕೆ ಒಯ್ಯುವವನೇ 'ವರಾರೋಹ'. ತನ್ನ ಚಿಂತನೆ ನಡೆಸಿ, ತನ್ನಲ್ಲಿ ಭಕ್ತಿ ಮಾಡುವ ಪ್ರಯುಕ್ತ 'ವರ' ಎನಿಸುವವರನ್ನು ಮೇಲಕ್ಕೆ ಏರಿಸುವವನು; ಅವರು ಅಭಿವೃದ್ಧಿಗೆ ಬರುವಂತೆ ಮಾಡುವನು. ಯದ್ಯಪಿ ಅಂತಹ ವರರು ಜೀವನದಲ್ಲಿ ಏನಾದರೂ ಅನ್ಯಾಯ ಮಾಡಿದ್ದಿರಬಹುದು. ಆದರೂ ಭಗವಂತ ಅವರ ಕೈ ಬಿಡುವುದಿಲ್ಲ.

ಭೀಷ್ಮರು ತಮ್ಮ ಎದುರಿಗಿರುವ ಕೃಷ್ಣನ ಅನುಗ್ರಹವನ್ನು 'ವರಾರೋಹ'

ನಾಮರೂಪವಾಗಿ ಅನುಸಂಧಾನಕ್ಕೆ ತಂದುಕೊಳ್ಳುತ್ತಿದ್ದಾರೆ. ನಾವು ನಿಮಗೆ ತುಂಬ ಅಪಚಾರ ಮಾಡಿದವರು. ಆದರೂ ಈಗ ನಮ್ಮ ಕೊನೆಯ ಕಾಲದಲ್ಲಿ ನಮ್ಮ ಮೇಲೆ ಅನುಗ್ರಹದೃಷ್ಟಿ ಬೀರಿ ಉದ್ಧಾರ ಮಾಡಲು ಇಲ್ಲಿಗೆ ಬಂದಿರುವಿ. ದ್ರೋಣರ ಉದ್ಧಾರಕ್ಕಾಗಿ ಅವರು ಹೋಗುತ್ತಿದ್ದಾಗ ನಿನ್ನ ದೃಷ್ಟಿ ಹಾಯಿಸಿದ್ದಿ. ಅಶ್ವತ್ಥಾಮಾಚಾರ್ಯರಿಗೆ ವ್ಯಾಸ ರೂಪದಿಂದ ಅನುಗ್ರಹ ಮಾಡುವವನಿದ್ದಿ........ ಹೀಗೆ ದುರ್ಯೋಧನನ ಪಕ್ಷದಲ್ಲಿದ್ದರೂ, ನಮ್ಮಲ್ಲಿದ್ದ ನಿನ್ನ ಬಗೆಗಿನ ಚಿಂತನೆ, ಭಕ್ತಿಗಳನ್ನು ಗಮನದಲ್ಲಿಟ್ಟುಕೊಂಡು 'ವರ' ರನ್ನಾಗಿ ಪರಿಗಣಿಸಿ ನಮ್ಮನ್ನು ಆರೋಹಣ ಮಾಡುತ್ತಿದ್ದಿ. 'ವರಾನ್ ಆರೋಪತಿ' – ವರರಾದ ಭಕ್ತರನ್ನು ಎಂದೂ ಕೆಳಗೆ ಬೀಳದಂತೆ ನೋಡಿಕೊಂಡು ಎತ್ತರಕ್ಕೆ ಏರಿಸುವವನು.

**೧೨೩. ಮಹಾತಪಾಃ – ಭಕ್ತರನ್ನು ಉದ್ಧಾರಮಾಡುವಂತಹ ದೊಡ್ಡ ತಪಸ್ಸನ್ನು ಹೊಂದಿರುವವನು.**

**ವಿವರಣೆ :** ಹೀಗೆ ಭಕ್ತನು ಉದ್ಧಾರ ಮಾಡುವುದೇ ನಿನ್ನ ಮಹಾತಪಸ್ಸು. ತಪಸ್ಸು ಎಂದರೆ ವ್ರತ. ದೇವರ ವ್ರತ ಏನು? ದೇವರ ನಿಯಮ ಏನು? ಭೀಷ್ಮರು ಹೇಳ್ತಾರೆ – ನಂಬಿದವರನ್ನು ಕೈ ಬಿಡುವುದಿಲ್ಲ – ಎಂಬುದೇ ನಿನ್ನ ಮಹಾತಪಸ್ಸು. ನಮ್ಮದು ತಪಸ್ಸು, ವ್ರತ ಎಂದರೆ 'ಜಪ ಮಾಡುವಾಗ ಮಾತನಾಡುವುದಿಲ್ಲ', 'ಜಪ ಮಾಡದೆ ಆಹಾರವನ್ನು ತೆಗೆದುಕೊಳ್ಳುವುದಿಲ್ಲ....'– ಹೀಗೆ ನಮ್ಮ ತಪಸ್ಸಾದರೆ, ವ್ರತವಾದರೆ, ನಂಬಿದವರನ್ನು ಕೈ ಬಿಡುವುದಿಲ್ಲ ಎಂಬುದು ದೇವರ ದೊಡ್ಡ ತಪಸ್ಸು. ಆದ್ದರಿಂದ ದೇವರು ಮಹಾತಪಸ್ಸು ಉಳ್ಳವ, ಮಹಾವ್ರತ ಉಳ್ಳವ – ಎಂದೆನಿಸಿರುವನು.ದೇವರನ್ನು ನಂಬಿ 'ವರ' ಎನಿಸಿರುವವರನ್ನು 'ಆರೋಹಣ' ಮಾಡಿಸುವಂತಹ, ಮೇಲಕ್ಕೆ ಏರಿಸುವಂತಹ ದೊಡ್ಡ ತಪಸ್ಸು ಉಳ್ಳವನೇ 'ಮಹಾತಪಾಃ'.

**ಸರ್ವಗಃ ಸರ್ವವಿದ್ ಭಾನುಃ ವಿಷ್ವಕ್ಸೇನೋ ಜನಾರ್ದನಃ ।**
**ವೇದೋ ವೇದವಿದವ್ಯಂಗೋ ವೇದಾಂಗೋ ವೇದವಿತ್ಕವಿಃ ॥ ೧೪ ॥**

**೧೨೪. ಸರ್ವಗಃ – ಎಲ್ಲೆಡೆ ಇರುವವನು.**

**ವಿವರಣೆ :** ಸರ್ವ – ಎಲ್ಲ ವಸ್ತುಗಳಲ್ಲೂ, ಗ– ಇದ್ದಾನೆ. ಭಗವಂತ ಎಲ್ಲ ವಸ್ತುಗಳಲ್ಲೂ ಇದ್ದಾನೆ. ವಸತೀತಿ ವಸ್ತು – ಭಗವಂತನ ರೂಪ ಅದರಲ್ಲಿ ವಾಸ ಮಾಡಿದೆ, ಆದುದರಿಂದ ಅದು ವಸ್ತು ಎನಿಸಿತು. ಮೈಕ್ ಒಂದು ವಸ್ತು , ಗಡಿಯಾರ ಒಂದು ವಸ್ತು, ನಾವು ಒಂದು ವಸ್ತು – ಯಾಕೆ? ಭಗವಾನ್ ಅತ್ರ ವಸತಿ– ಭಗವಂತ ಒಂದೊಂದು ರೂಪದಿಂದ ಇವುಗಳಲೆಲ್ಲ ನೆಲೆಸಿರುವನು.ಆದ್ದರಿಂದ ಇವೆಲ್ಲ ವಸ್ತುಗಳು – ಉಪನಿಷತ್ತು ಒಂದು ಮಾತಂದಿದೆ – **'ತತ್ ಸೃಷ್ಟ್ವಾ ತದೇವಾನುಪ್ರಾವಿಶತ್' 'ವಿಶ್ವಯೋನಿಃ'** – ಎಂದೆನಿಸಿರುವ ಭಗವಂತ ಮಡಕೆ ಮಾಡಿದ, ಅವನು ಮಡಕೆಯನ್ನು ನೇರವಾಗಿ ಮಾಡುವುದರಿಂದಲೇ

ಯಜುರ್ವೇದ ಅವನನ್ನು 'ನಮಃ ಕುಲಾಲೇಭ್ಯಃ ಕರ್ಮಾರೇಭ್ಯಶ್ಚ......' ಎಂಬುದಾಗಿ ಕುಂಬಾರ, ಕಮ್ಮಾರ ಎಂದೆಲ್ಲ ಕರೆದಿದೆ. ಹೀಗೆ ಮಡಕೆ ಮಾಡಿ ತತ್‌ಕ್ಷಣವಲ್ಲಿ ಅದರೊಳಗೆ ಪ್ರವೇಶಿಸುವನು. ಹೇಗೆ ಪ್ರವೇಶ ಮಾಡಿದ? 'ಅನುಪ್ರಾವಿಶತ್' – ಅನು ಎಂದರೆ ಏನರ್ಥ? ಮಡಕೆಯ ಆಕಾರ ಏನಿದೆಯೋ ಆ ಆಕಾರಕ್ಕೆ ಅನುಗುಣವಾಗಿ ಅದರೊಳಗೆ ಪ್ರವೇಶಿಸುವನು. ಬೇರೆ ಬೇರೆ ಆಕಾರದ ಮಡಕೆಗಳಲ್ಲಿ ಆಯಾ ಆಕಾರದಿಂದಲೇ ಪ್ರವೇಶಿಸುವನು. ಆದ್ದರಿಂದಲೇ ದೇವರು 'ಸರ್ವಗ' – ಎಲ್ಲ ಕಡೆ ಇರುವವನು. ಎಲ್ಲ ಕಡೆ ಇರುವವರಿಗೆ ನಿಶ್ಚಿತ ವಿಳಾಸ ಇರುವುದಿಲ್ಲ. ಅಂತಹವರಲ್ಲಿ ನಿಮ್ಮ ವಿಳಾಸ ಏನು ಎಂದು ಕೇಳಿದಾಗ ಅವರು 'ರಾಷ್ಟ್ರೀಯ ಹೆದ್ದಾರಿ–17 ಎಂದು ಉತ್ತರಿಸಿದರೂ ಆಶ್ಚರ್ಯವಿಲ್ಲ. ಅಂತಹವರು ಆ ಕಛೇರಿ ಈ ಕಛೇರಿ ಎಂದು ರಸ್ತೆಯಲ್ಲಿ ಅಡ್ಡಾಡುವುದೇ ಜಾಸ್ತಿ, ಆದುದರಿಂದ ಆ ರಸ್ತೆಯ ವಿಳಾಸವನ್ನೇ ತನ್ನ ವಿಳಾಸವನ್ನಾಗಿ ನೀಡುವರು. ಅದೇ ರೀತಿಯಾಗಿ ಭಗವಂತನ ವಿಳಾಸ ಏನು? ನಿರ್ದಿಷ್ಟವಾದ ವಿಳಾಸ ಇಲ್ಲ. ಆದರೆ ಪತ್ರ ಎಲ್ಲಿಗೆ ಬೇಕಾದರೆ ಹಾಕಿ ಅವನಿಗೆ ದೊರಕಿಯೇ ತೀರುವುದು.

ಭೀಷ್ಮರು ಶ್ರೀ ಕೃಷ್ಣ ಅರ್ಜುನನ ರಥದಲ್ಲಿ ಕುಳಿತು ಆ ಕಡೆ ಈ ಕಡೆ ಆ ಹೆಣಗಳ ಮಧ್ಯದಲ್ಲಿ ರಥವನ್ನು ಓಡಿಸಿದ ಕ್ರಮವನ್ನು ಕಂಡು ಆಶ್ಚರ್ಯಪಟ್ಟು, ಶರಪಂಜರದಲ್ಲಿ ಮಲಗಿ 'ಸರ್ವಗ' ನಾಮಾರೂಢವಾಗಿ ಮೆಲುಕು ಹಾಕುತ್ತಿರುವರು.

**೧೨೫. ಸರ್ವವಿತ್ – * ಎಲ್ಲವನ್ನೂ ಚೆನ್ನಾಗಿ ತಿಳಿದುಕೊಂಡವನು.**
*** ಸರ್ವ ಎನಿಸುವ ತನ್ನನ್ನೂ ಚೆನ್ನಾಗಿ ತಿಳಿದುಕೊಂಡವನು.**

**ವಿವರಣೆ :** ವಿತ್–ಎಂದರೆ ತಿಳಿದವನು. ಸರ್ವ ಎಂದರೆ ಎಲ್ಲ. ಆದ್ದರಿಂದ ಎಲ್ಲವನ್ನೂ ತಿಳಿದವನೇ 'ಸರ್ವವಿತ್'. ಇನ್ನೊಂದು ಅರ್ಥ ಕೊಡುವರು – 'ಸರ್ವ' ಎಂದರೆ ಕೃಷ್ಣನೇ. **'ಸರ್ವಂ ಸಮಾಪ್ನೋಷಿ ತತೋಽಸಿ ಸರ್ವಃ'**– ಎಲ್ಲವೂ ಅವನಲ್ಲಿ ಹೋಗಿ ಸೇರುವುದು; ಆದುದರಿಂದ ಅವನು ಸರ್ವ. 'ಸರ್ವಃ ಶರ್ವಃ ಶಿವಃ ಸ್ಥಾಣುಃ ......' ಎಂದು ಅವನ ಸರ್ವನಾಮದ ಬಗ್ಗೆ ಕಂಡಿದ್ದೆವು. ಹೀಗೆ ಸರ್ವ ಎನಿಸುವ ತನ್ನನ್ನು ಚೆನ್ನಾಗಿ ಬಲ್ಲವನೇ 'ಸರ್ವವಿತ್.' ಅಸ್ವತಂತ್ರ ಚೇತನರಲ್ಲಿ ಲಕ್ಷ್ಮೀದೇವಿ ಮೊದಲನೆಯವಳು; ಕಲಿ ಕೊನೆಯವನು. ಉಳಿದವರೆಲ್ಲ ಇವರ ನಡುವೆ ಸೇರಿಕೊಳ್ಳುವರು.ಇಂತಹ ಅಸ್ವತಂತ್ರ ಚೇತನರಲ್ಲಿ ಯಾರೂ ಭಗವಂತನನ್ನು ಸಮಗ್ರವಾಗಿ ಬಲ್ಲವರಿಲ್ಲ. ಒಂದು ವಸ್ತುವನ್ನು ಯಾರೂ ತಿಳಿದಿಲ್ಲ ಎಂದರೆ ಅದು ಇಲ್ಲವೇ ಇಲ್ಲ– ಎನಿಸುವುದು. 'ಮೊಲದ ಕೊಂಬು' ಯಾರ ದೃಷ್ಟಿಗೂ ಬಿದ್ದಿಲ್ಲ. ಆದ್ದರಿಂದಲೇ ಇಲ್ಲ.ಹೀಗೆ ಭಗವಂತನೂ ಯಾರಿಗೂ ತಿಳಿದಿಲ್ಲ ಎಂದರೆ ಹಾಗಾದರೆ ಅವನು ಇಲ್ಲ ಎಂದೇ ಆಗುವುದಿಲ್ಲವೇ? ಎಂದರೆ ಭೀಷ್ಮಾಚಾರ್ಯರು ಅನ್ನುವರು – 'ಸರ್ವವಿತ್'..... ನಿನ್ನನ್ನು ಬಲ್ಲವನು ನೀನೇ ಆಗಿರುವಿ ಎಂದು. ಸ್ವಭಾವ, ಚರ್ಯೆ ಮುಂತಾದವನ್ನೊಳಗೊಂಡ ನಿನ್ನ ಗುಟ್ಟನ್ನು ಪೂರ್ಣವಾಗಿ ಯಾರಿಗೂ ಬಿಟ್ಟುಕೊಟ್ಟಿಲ್ಲ.

ಆದ್ದರಿಂದ ನಿನ್ನ ಗುಟ್ಟನ್ನು ಸಮಗ್ರವಾಗಿ ಬಲ್ಲವನು ನೀನೊಬ್ಬನೇ. ಲೋಕದಲ್ಲಿ ಸಾಮಾನ್ಯವಾಗಿ ತಮ್ಮನ್ನು ಚೆನ್ನಾಗಿ ತಿಳಿದುಕೊಳ್ಳದೆಯೇ ಇನ್ನೊಬ್ಬರನ್ನು ತಿಳಿದುಕೊಳ್ಳಲು ತೊಡಗುವುದುಂಟು. ಆದರೆ ನೀನು ಹಾಗಲ್ಲ; ನಿನ್ನನ್ನೂ ಚೆನ್ನಾಗಿ ತಿಳಿದುಕೊಂಡು; ಉಳಿದವರನ್ನೂ ಚೆನ್ನಾಗಿ ತಿಳಿದುಕೊಂಡವ. ಆದುದರಿಂದ **'ಸರ್ವವಿತ್'.**

**೧೨೬. ಭಾನುಃ – ತನ್ನ ಸ್ವರೂಪವನ್ನೂ, ಇತರ ವಸ್ತುಗಳನ್ನೂ ಬೆಳಗಿಸುವವನು.**

**ವಿವರಣೆ :** ಭಾನು ಎಂದು ಸೂರ್ಯನಿಗೆ ಹೆಸರಿದೆ. ಸೂರ್ಯ ಯಾಕೆ ಭಾನು ಎನಿಸುವನು? 'ಭಾಸತೇ ಭಾಸಯತಿ ಚ....' ಸೂರ್ಯನು ತಾನು ಬೆಳಗುತ್ತಾನೆ; ವಸ್ತುಗಳೂ ತನ್ನ ಬೆಳಕಿನಲ್ಲಿ ಬೆಳಗುವಂತೆ ಮಾಡುತ್ತಾನೆ – ಆದುದರಿಂದ ಭಾನು.

ಸೂರ್ಯ ತಾನು ಕಂಡ ಹಾಗೂ ವಸ್ತು ಕಾಣುವಂತೆ ಮಾಡಿದ. ಸೂರ್ಯನಿಗೆ ಈ ಶಕ್ತಿ ಎಲ್ಲಿಂದ ಬಂತು? ಭಗವದ್ಗೀತೆಯ ಹದಿನೈದನೆಯ ಅಧ್ಯಾಯದಲ್ಲಿ ಶ್ರೀಕೃಷ್ಣ ಸಂದೇಶ ನೀಡಿದ್ದಾನೆ – 'ಸೂರ್ಯನಲ್ಲಿ ತಾನು ಇದ್ದುಕೊಂಡು ಅವನಿಗೆ ಬೆಳಕು ನೀಡಿ, ಅವನ ಮೂಲಕ ಎಲ್ಲೆಡೆ ಬೆಳಕು ಹರಡುವಂತೆ ಮಾಡುವವನು. ಚಂದ್ರನಲ್ಲಿ ತಾನು ಇದ್ದುಕೊಂಡು ತಂಪಾದ ಕಿರಣಗಳನ್ನು ಹೊರಡಿಸುವವನು. ಪ್ರತಿಯೊಂದು ಪ್ರಕಾಶ ಪದಾರ್ಥದ ಒಳಗೂ ನಾನೇ ಇದ್ದುಕೊಂಡು ಅಲ್ಲಲ್ಲಿಂದ ಪ್ರಕಾಶವನ್ನು ಹೊರಡಿಸುವವನು.'

ಆದ್ದರಿಂದ ನಿಜವಾದ ಭಾನು – ದೇವರು. **'........ತಸ್ಯೈಷ ಆತ್ಮಾ ವಿವೃಣುತೇ ತನೂಂ ಸ್ವಾಮ್'** – ಎಂದಿರುವಂತೆ ಭಕ್ತನಿಗೆ ಭಕ್ತನ ಸ್ವರೂಪವನ್ನೂ, ತನ್ನ ಸ್ವರೂಪವನ್ನೂ ತೋರಿಸಿಕೊಡುವುದರಿಂದ ದೇವರು ಭಾನು.

**೧೨೭. ವಿಷ್ವಕ್ಸೇನಃ – ಯಾರ ಸೇನೆ ಎಲ್ಲ ದೇಶ ಕಾಲಗಳಲ್ಲಿ ಇದೆಯೋ ಅಂತಹವನು.**

**ವಿವರಣೆ :** ವಿಷ್ವಕ್ ಸೇನಾ ಯಸ್ಯ ಸಃ ವಿಷ್ವಕ್ಸೇನಃ – ವಿಷ್ವಕ್ ಅಂದರೆ ಸುತ್ತಮುತ್ತ, ಸೇನಾ ಸೈನ್ಯ ಉಳ್ಳವನು. ಎಲ್ಲ ದೇಶಗಳಲ್ಲಿ, ಎಲ್ಲ ಕಾಲಗಳಲ್ಲಿ ಸೈನ್ಯವನ್ನು ಕಟ್ಟಿಕೊಂಡೇ ಇರುವವನು 'ವಿಷ್ವಕ್ಸೇನ'. ಬ್ರಹ್ಮಾದಿ ದೇವತೆಗಳೆಲ್ಲ ಅವನ ಸೈನಿಕರು. ಜೀವರ ಮೂಲಕ ಆಯಾ ಸಾಧನೆ ಮಾಡಿಸಿ, ಫಲ ಕೊಡಿಸುವುದಕ್ಕಾಗಿ ಆ ಸೈನ್ಯವನ್ನು ಕಟ್ಟಿಕೊಂಡಿರುವನು. ತತ್ತ್ವಾಭಿಮಾನಿ ದೇವತೆಗಳು ನಮ್ಮ ದೇಹದ ಬೇರೆ ಬೇರೆ ಭಾಗದಲ್ಲಿ ನೆಲೆಸಿರುವರು.ನಮ್ಮ ಯೋಗ್ಯತೆಯನ್ನು ಅನುಸರಿಸಿ, ಹಿಂದಿನ ಜನ್ಮಗಳ ಕರ್ಮಗಳನ್ನು ಅನುಸರಿಸಿ ಒಳ್ಳೆಯ ಅಥವಾ ಕೆಟ್ಟ ಕರ್ಮಗಳನ್ನು ಮಾಡಿಸಿ ಅದಕ್ಕೆ ಅನುಗುಣವಾದ ಫಲವನ್ನು ಕೊಡುವುದಕ್ಕಾಗಿ ತತ್ತ್ವಾಭಿಮಾನಿಗಳು ನಮ್ಮಲ್ಲಿ ಇರುವರು. ಹೀಗೆ ಜೀವರ ಯೋಗ್ಯತೆ, ಪೂರ್ವ ಕರ್ಮಾದಿಗಳ ಆಧಾರದಲ್ಲಿ ಅವರಿಂದ ಕರ್ಮಗಳನ್ನು ಮಾಡಿಸಿ, ಫಲ ಕೊಡುವುದಕ್ಕೆ ಭಗವಂತನು ತನ್ನ ಸೇನಾರೂಪದಲ್ಲಿರುವ ಬ್ರಹ್ಮಾದಿ ದೇವತೆಗಳಿಗೆ ಆದೇಶ ನೀಡಿರುವನು.

ಬ್ರಹ್ಮಾದಿದೇವತೆಗಳಿಂದ ಪ್ರಾರಂಭಿಸಿ ಕಲಿಪರ್ಯಂತ ದೈತ್ಯರವರೆಗೂ ಭಗವಂತನ ಸೈನ್ಯ.

ಎಲ್ಲ ದೇಶದಲ್ಲಿ, ಎಲ್ಲ ಕಾಲದಲ್ಲಿ, ಎಲ್ಲ ಚೇತನರಲ್ಲಿ ತನ್ನ ಈ ಬಗೆಯ ಸೇನೆಯನ್ನು ಕಳುಹಿಸಿಕೊಟ್ಟು ನಮ್ಮ ಯೋಗಕ್ಷೇಮವನ್ನು ಅವರ ಮೂಲಕ ಭಗವಂತ ನೋಡಿಕೊಳ್ಳುತ್ತಿರುವನು.

ಸರಕಾರ ಗಡಿ ಪ್ರದೇಶದಲ್ಲಿ ಸೇನೆಯನ್ನು ಕಳುಹಿಸಿಕೊಡುವಂತೆ ಪ್ರತಿಯೊಬ್ಬರ ಶರೀರವೂ ಗಡಿಪ್ರದೇಶದಂತಿದ್ದು ಅಲ್ಲಿಗೆಲ್ಲ ತನ್ನ ಸೇನೆಯನ್ನು ಕಳುಹಿಸಿಕೊಡುವ ಕೃಷ್ಣ ವಿಷ್ವಕ್ಸೇನ. ಎಲ್ಲ ದೇಶದಲ್ಲಿ, ಎಲ್ಲ ಕಾಲದಲ್ಲಿ ತನ್ನ ಸೇನೆಯನ್ನಿಟ್ಟು ಜಗತ್ತಿನ ಸಂರಕ್ಷಣೆಯನ್ನು ಮಾಡುವವನು ಎಂಬ ಆಶಯ.

ನಾವು ತತ್ತ್ವಾಭಿಮಾನಿಗಳ ಚಿಂತನೆ ಮಾಡುವಾಗ 'ಪೃಥಿವ್ಯಾತ್ಮನೇ ಧರಾಯೈ ನಮಃ', 'ಅಬಾತ್ಮನೇ ವರುಣಾಯ ನಮಃ' 'ತೇಜಆತ್ಮನೇ ಅಗ್ನಯೇ ನಮಃ.....' ಇತ್ಯಾದಿಯಾಗಿ ಎಲ್ಲ ಬೆರಳುಗಳಲ್ಲಿ ಪಂಚ ಭೂತಗಳನ್ನೂ,ಪಂಚಭೂತಗಳಿಗೆ ಸಂಬಂಧ ಪಡುವ ದೇವತೆಗಳನ್ನೂ ಸ್ಮರಿಸುತ್ತ ಭಗವಂತ ಕಳುಹಿಸಿಕೊಟ್ಟ ಸೈನ್ಯ ನನ್ನ ಶರೀರದಲ್ಲಿ ಬಂದು ಸೇರಿಕೊಂಡಿದೆ, ಆದ್ದರಿಂದ ಆ ಸೈನ್ಯವನ್ನು ಕಾಲಕಾಲಕ್ಕೆ ಸ್ಮರಿಸಿಕೊಂಡು ಗೌರವವನ್ನು ಅರ್ಪಿಸಿದರೆ ಆ ಸೈನ್ಯದ ಒಡೆಯನಾದ 'ವಿಷ್ವಕ್ಸೇನ'ನಿಗೆ ಗೌರವವನ್ನು ಅರ್ಪಿಸಿದಂತಾಗುವುದು.ಎಂಬ ಅನುಸಂಧಾನವನ್ನು ತಂದುಕೊಳ್ಳಬೇಕು.

**೧೨೮. ಜನಾರ್ದನಃ – ಎಂದೆಂದೂ ಹುಟ್ಟದವನು. ಹಾಗೂ ಸಾತ್ವಿಕರು ಹುಟ್ಟಿಗೆ ಒಳಗಾಗಿ ಒದ್ದಾಡದಂತೆ ಮಾಡುವವನು.**

**ವಿವರಣೆ** : ಜನ + ಅರ್ದನ. ಜನ ಎಂಬ ಒಂದೇ ಶಬ್ದ ನಮ್ಮಲ್ಲಿ ಒಂದು ರೀತಿಯಾಗಿ ತೆರೆದುಕೊಂಡರೆ, ದೇವರಲ್ಲಿ ಮತ್ತೊಂದು ರೀತಿಯಿಂದ ತೆರೆದುಕೊಳ್ಳುವುದು. 'ಜಾಯತೇ ಇತಿ ಜನಃ' – ಹುಟ್ಟುವವರು ಎಂಬ ಅರ್ಥದಲ್ಲಿ ನಮ್ಮಲ್ಲಿ ತೆರೆದುಕೊಂಡರೆ, 'ನ ಜಾಯತೇ ಇತಿ ಜನಃ' ಎಂದೂ ಹುಟ್ಟದವನು ಎಂಬ ಅರ್ಥದಲ್ಲಿ ಪರಮಾತ್ಮನಲ್ಲಿ ತೆರೆದುಕೊಳ್ಳುವುದು. 'ವಿಸ್ಮರಣೆ' – ಎಂಬ ಶಬ್ದದಲ್ಲಿ 'ವಿ' ಉಪಸರ್ಗ ಅಭಾವಾರ್ಥದಲ್ಲಿ ಇದ್ದರೆ, 'ವಿಜ್ಞಾನಿ' – ಎಂಬ ಶಬ್ದದಲ್ಲಿ ಅದೇ ಉಪಸರ್ಗ ವಿಶೇಷ ಎಂಬ ಅರ್ಥದಲ್ಲಿ ಹೇಗೆ ಇದೆಯೋ ಹಾಗೆ.

ಇನ್ನೊಬ್ಬರ ಕೈಗೆ ಸಿಲುಕಿ ತಾಯಿಯ ಗರ್ಭವನ್ನು ಪ್ರವೇಶಿಸುವುದು; ಅಲ್ಲಿ ತುಂಬ ಕ್ಲೇಶವನ್ನು ಅನುಭವಿಸುವುದು; ಅಲ್ಲಿಂದ ಇನ್ನೊಬ್ಬರ ಕೈಗೆ ಸಿಲುಕಿ ಹೊರಹೊಮ್ಮುವುದು – ಇವೆಲ್ಲವುಗಳ ಪ್ರಕ್ರಿಯೆ ನಮ್ಮ ನಿಮ್ಮ ಪಾಲಿಗೆ ಜನ್ಮ ಎನಿಸಿದೆ. ಈ ಬಗೆಯ ಜನ್ಮಕ್ಕೆ ಎಂದೂ ಒಳಗಾಗದ ಭಗವಂತ 'ಜನ'. ಅಂತಹ ಭಗವಂತನೇ ಇನ್ನೊಬ್ಬರ ಹುಟ್ಟನ್ನು ಅಡಗಿಸುವುದರಿಂದ 'ಅರ್ದನ' ಎನಿಸುವನು. 'ನಿನ್ನ ಹುಟ್ಟನ್ನು ಅಡಗಿಸಿ ಬಿಡ್ತೇನೆ! – ಎಂದು ಕೆಲವೊಮ್ಮೆ ಗದರಿಸುವುದುಂಟು. ಹುಟ್ಟನ್ನು ಕೊಟ್ಟವನಷ್ಟೇ ಅದನ್ನು ಅಡಗಿಸಬಲ್ಲನೇ

ಹೊರತು ಬೇರೆ ಯಾರಲ್ಲೂ ಹುಟ್ಟು ಅಡಗಿಸುವ ಸಾಮರ್ಥ್ಯ ಇರದು. ಆದ್ದರಿಂದ ನಮ್ಮ ನಿಮ್ಮ ಹುಟ್ಟು ಅಡಗಿಸಬಲ್ಲವ, ಹುಟ್ಟು ಕೊಟ್ಟಿರುವ ದೇವರೊಬ್ಬನೇ. ಅರ್ದನ ಅಂದರೂ ಮರ್ದನ ಅಂದರೂ ಒಂದೇ ಅರ್ಥ. ದೇವರು ಸಾತ್ವಿಕರ ಪಾಲಿಗೂ, ತಾಮಸರ ಪಾಲಿಗೂ ಅರ್ದನ ಎನಿಸುವನು. ಸಾತ್ವಿಕರು ಮುಂದೆ ಹುಟ್ಟದಂತೆ, ಹುಟ್ಟಿ ಒದ್ದಾಡದಂತೆ ಮಾಡುವ ಮೂಲಕ ಅವರಿಗೆ ಅರ್ದನ ಎನಿಸಿದರೆ , ತಾಮಸರು ಹುಟ್ಟದಂತೆ, ಹುಟ್ಟದಿದ್ದರೂ ನಿತ್ಯ ನರಕದಲ್ಲಿ ಬಿದ್ದು ಒದ್ದಾಡುವಂತೆ ಮಾಡುವ ಮೂಲಕ ಅವರಿಗೆ 'ಅರ್ದನ' ಎನಿಸಿರುವನು.

ಭೀಷ್ಮರು ಕೃಷ್ಣನನ್ನು ನಿವೇದಿಸಿಕೊಳ್ಳುವರು – ಜನ್ಮಕ್ಕೆ ಒಳಗಾಗದೆ 'ಜನ' ಎನಿಸಿರುವ ಕೃಷ್ಣ , ನಾನು ಜನ್ಮ ಪಡೆದು ಪಡೆದು ತುಂಬ ದಣಿದಿದ್ದೇನೆ. ಮುಂದೆ ನಾನು ಎಂದೂ ಜನ್ಮಕ್ಕೆ ಒಳಗಾಗದಂತೆ ನನ್ನ ಜನ್ಮವನ್ನು 'ಅರ್ದನ' ಮಾಡಿ ನನ್ನ ಪಾಲಿಗೂ 'ಜನಾರ್ದನ' ಎನಿಸು.

**೧೨೯. ವೇದಃ – ಜ್ಞಾನಸ್ವರೂಪಿ.**

**ವಿವರಣೆ :** ವೇದ ಶಬ್ದಕ್ಕೆ ತಿಳಿದಿದ್ದಿ ಎಂದರ್ಥ. ವೇದಶಬ್ದ ಕ್ರಿಯಾಪದ. ಕೃಷ್ಣ ಭೀಷ್ಮರಲ್ಲಿಗೆ ಬಂದು, ಭೀಷ್ಮರೇ ಹೇಗಿದ್ದೀರಿ? ಎಂದು ವಿಚಾರಿಸಿದಾಗ ಭೀಷ್ಮರು ಹೇಳ್ತಾರೆ – 'ವೇದ'– ನೀನು ತಿಳಿದಿದ್ದಿ. ನಾನು ಹೇಗಿರುವೆನೆಂದು ನೀನು ತಿಳಿದಿದ್ದಿ. ನಾನು ಹೇಗಿರುವೆನೆಂದು ನಿನಗೆ ತಿಳಿಸಿ ಹಾಸ್ಯಾಸ್ಪದನಾಗುವ ಬದಲು 'ನೀನು ತಿಳಿದಿದ್ದಿ' – ಎಂದು ಉತ್ತರಿಸುವುದೇ ವಾಸಿ ತಾನೆ?

ಕೃಷ್ಣ ನಂದವ್ರಜಕ್ಕೆ ಬಂದಿದ್ದ ಅಕ್ರೂರನಲ್ಲೂ ನೀನು ಹೇಗಿದ್ದಿ ಎಂದು ವಿಚಾರಿಸಿದಾಗ, ಅಕ್ರೂರನೂ ಇದೇ ರೀತಿಯಾಗಿ ಉತ್ತರಿಸಿದ್ದ – ನೀನು 'ವೇದ' – ತಿಳಿದಿದ್ದಿ. ನಾನು ಯಾರು? ಯಾಕೆ? ಎತ್ತ? ಹೇಗೆ? – ಎಂದೆಲ್ಲ ತಿಳಿದಿದ್ದಿ.ಆದ್ದರಿಂದಲೇ ನಿನಗೆ ಹೆಸರೇ ವೇದ – ತಿಳಿದವ. ಬೇರೆ ಹೆಸರೇ ಬೇಡ ದೇವರಿಗೆ. ನೀನು ತಿಳಿದಿದ್ದಿ ಏನನ್ನು? ನನಗೆ ಏನು ಬೇಕು? ಏನು ಬೇಡ? ನನಗೆ ಆಯುಷ್ಯ ಎಷ್ಟು? ಆರೋಗ್ಯ ಎಷ್ಟು? ಎಲ್ಲ ನಿನ್ನ ಕೈಯಲ್ಲಿ ಉಂಟು. ಆದ್ದರಿಂದ ನಾನು ಕೇಳುವ ಅವಶ್ಯಕತೆ ಇಲ್ಲ; ನೀನೇ ಕೊಡಬೇಕು.

ಭಕ್ತ ಭಗವಂತನಲ್ಲಿ ಜಗಳ ಮಾಡುವನು – ನನ್ನ ಬೇಕು ಬೇಡಗಳನ್ನು ನನಗಿಂತಲೂ ಚೆನ್ನಾಗಿ ತಿಳಿದವನು ನೀನು ಎಂದ ಮೇಲೆ ನಾನು ಕೇಳಿ ನೀನು ಕೊಡುವ ಅವಶ್ಯಕತೆ ಏನು? ನಾನು ಕೇಳದೆಯೇ ನೀನು ಕೊಡಬೇಕು. ಆದರೂ ನಿನ್ನ ಸ್ವಭಾವ – ಭಕ್ತರಿಂದ ಕೇಳಲ್ಪಟ್ಟು ಬಳಿಕ ನೀಡುವಂತಹದ್ದು. ಮಗುವಿನ ಬೇಕು ಬೇಡಗಳನ್ನೆಲ್ಲ ತಿಳಿದ ತಾಯಿ ಕಾಲಕಾಲಕ್ಕೆ ಮಗುವಿನ ಅವಶ್ಯಕತೆಯನ್ನೆಲ್ಲ ಪೂರೈಸುತ್ತಿದ್ದಳೂ ಒಮ್ಮೊಮ್ಮೆ ಮಗು ಕೇಳಲಿ; ಆಮೇಲೆ ನೀಡೋಣ– ಎಂದು ಹೇಗೆ ನಡೆದುಕೊಳ್ಳುವಳೋ ಹಾಗೆ. ನಮ್ಮ ಆಗುಹೋಗುಗಳನ್ನೆಲ್ಲ ಅರಿತ ಭಗವಂತನ ಮೇಲೆ ಭಾರ ಹೊರಿಸಲಾಗುವುದು – ನೀನು

'ವೇದ'. ನೀನು ತಿಳಿದವ. ಭೀಷ್ಮರು ಕೃಷ್ಣನ ಬಗ್ಗೆ ಕೊಟ್ಟ ದೊಡ್ಡ ಬಿರುದು – 'ವೇದ'ಎಂಬುದು.

ಎಲ್ಲರಿಗೆ ಎಟಕುವ ಅರ್ಥ ಹೇಳಬೇಕೆಂದು ವೇದ ಎಂಬುದನ್ನು ಕ್ರಿಯಾಪದವನ್ನಾಗಿಟ್ಟುಕೊಂಡು ಅರ್ಥ ಹೇಳಿದೆ. ಆದರೆ ವಿಷ್ಣುಸಹಸ್ರನಾಮಗಳಲ್ಲಿ ಒಂದಾಗಿ ಪರಿಗಣಿತವಾಗಿರುವ 'ವೇದ' ಶ್ರೀವಿಷ್ಣುವಿನ ನಾಮವಾಗಿದ್ದು ನಾಮಪದ. ಆದುದರಿಂದಲೇ ಅದರ ಮುಂದೆ 'ವೇದಃ' ಎಂದು ಎರಡು ಚುಕ್ಕೆಗಳಿವೆ. ಹೀಗೆ ನಾಮಪದವಾದಾಗ ಅದಕ್ಕೆ ಅರ್ಥ – ನೀನು ತಿಳುವಳಿಕೆಯ ಸ್ವರೂಪ. ನೀನು ಬೇರೆಯಲ್ಲ; ತಿಳುವಳಿಕೆ ಬೇರೆ ಅಲ್ಲ. ನಾವೂ ತಿಳಿಯುತ್ತೇವೆ. ಆದರೆ ನಾಳೆ ನಾವು ಇರ್ತೇವೆ. ಆದರೆ ನಮ್ಮ ತಿಳುವಳಿಕೆ ಇರುವುದಿಲ್ಲ. ಇದರಿಂದ ಸ್ಪಷ್ಟ – ನಾವು ಬೇರೆ, ನಮ್ಮ ತಿಳುವಳಿಕೆ ಬೇರೆ. ದೇವರು ಹಾಗಲ್ಲ. ಅವನೂ ಅವನ ತಿಳುವಳಿಕೆಯೂ ಒಂದೇ. ಹೇಗೆ ಬೆಲ್ಲಕ್ಕೂ ಅದರ ಸಿಹಿಗೂ ಭೇದಚಿಂತನೆ ಮಾಡಬಾರದೋ ಹಾಗೆಯೇ ಭಗವಂತನಿಗೂ ಅವನ ತಿಳುವಳಿಕೆಗೂ ಭೇದಚಿಂತನೆ ಮಾಡಬಾರದು. ಸಿಹಿಸ್ವರೂಪವಾದ ಬೆಲ್ಲದಲ್ಲಿ ಸ್ವಲ್ಪವೂ ಕಹಿಗೆ ಹೇಗೆ ಅವಕಾಶ ಇಲ್ಲವೋ ಹಾಗೆ ಜ್ಞಾನಸ್ವರೂಪನಾದ ದೇವರಲ್ಲಿ ಅಜ್ಞಾನ ಸ್ವಲ್ಪ ಪ್ರಮಾಣದಲ್ಲೂ ಇಲ್ಲ.

ಈ ಅಭಿಪ್ರಾಯದಲ್ಲೇ ಭೀಷ್ಮರು ಕೃಷ್ಣನನ್ನು 'ವೇದಃ' – ಎಂದು ಸ್ತುತಿಸಿರುವರು.

**೧೩೦. ವೇದವಿತ್ – ವೇದವನ್ನು ಚೆನ್ನಾಗಿ ಬಲ್ಲವನು.**

**ವಿವರಣೆ** : ವೇದವನ್ನು ತಿಳಿದವನು ವೇದವಿತ್. ದೇವರಿಗೆ ಅದೂ ಒಂದು ಬಿರುದು. ಭೀಷ್ಮರು ಕೃಷ್ಣನಲ್ಲಿ ತಿಳಿಸುವರು – ನೀನೇ ವೇದವನ್ನು ಬಲ್ಲವನು. ಹೊರತು ನೀನೂ ವೇದವನ್ನು ಬಲ್ಲವನು – ಎಂದಲ್ಲ. ಯಾಕೆಂದರೆ 'ನೀನೂ; ಎಂದರೆ ಇನ್ನೊಬ್ಬರೂ ವೇದವನ್ನು ಬಲ್ಲವರಿದ್ದಾರೆಂದು ಅರ್ಥ ಬರುವುದು. ಆದರೆ ಕೃಷ್ಣನನ್ನು ಬಿಟ್ಟರೆ ವೇದವನ್ನು ಚೆನ್ನಾಗಿ ಬಲ್ಲವರು ಬೇರೆ ಯಾರೂ ಇಲ್ಲ. ಈ ವಿಚಾರ ವೇದವಿತ್ ನಾಮಕ್ಕೆ ಮಾತ್ರ ಸಂಬಂಧಿಸುವಂತಹದ್ದಲ್ಲ. ಸಹಸ್ರನಾಮದಲ್ಲಿ ಏನೇನು ನಾಮಗಳಿವೆಯೋ ಆ ಎಲ್ಲ ನಾಮಗಳ ಮುಖ್ಯಾರ್ಥ ದೇವರಲ್ಲಿಯೇ ಕೂಡುವವು. ಅಂತಹ ನಾಮಗಳಿಂದಲೇ ಸ್ತುತಿ ನಡೆದಿದೆ.ಒಬ್ಬ ವ್ಯಕ್ತಿಯನ್ನು ಅಭಿನಂದಿಸುವಾಗ ಅವನಲ್ಲಿಯ ಅಸಾಧಾರಣ ಧರ್ಮಗಳನ್ನೇ ಹೇಗೆ ಉಲ್ಲೇಖಿಸಬೇಕೋ ಹಾಗೆ ಭೀಷ್ಮರು ಕೃಷ್ಣನನ್ನು ಎದುರು ಕುಳ್ಳಿರಿಸಿ ಅವನನ್ನು ಸ್ತುತಿಸುವಾಗ ಅವನಲ್ಲಿಯಷ್ಟೇ ಇರುವ ಧರ್ಮಗಳನ್ನು ತಿಳಿಸುವ ನಾಮಗಳಿಂದಲೇ ಅವನನ್ನು ಕರೆಯಬೇಕು ತಾನೆ? ಅಂತೆಯೇ ವೇದವನ್ನು ಚೆನ್ನಾಗಿ ಬಲ್ಲವನು ಕೃಷ್ಣನೊಬ್ಬನೇ ಎಂಬ ಅಭಿಪ್ರಾಯದಲ್ಲಿಯೇ ಭೀಷ್ಮರು ಕೃಷ್ಣನನ್ನು 'ವೇದವಿತ್' – ಎಂದು ಕರೆದಿರುವರು.

ಭಗವಂತನಲ್ಲಿ ಅನಂತಗುಣಗಳಿವೆ. ಆದರೆ ಸಾವಿರಗುಣಗಳನ್ನು ಸಾರುವ ಸಾವಿರ ನಾಮಗಳಿಂದ ಅವನನ್ನು ಸ್ತುತಿಸುವ ಉದ್ದೇಶ – ಅವನ ಅನುಗ್ರಹದಿಂದ ಆ ಸಾವಿರ

ಗುಣಗಳನ್ನು ನಾವು ನಮ್ಮ ಯೋಗ್ಯತಾನುಗುಣವಾಗಿ ಹೊಂದುವಂತಾಗಬೇಕೆಂಬುದು. ಉದ್ಧಾರ ಹೊಂದಲು ಯಾವ ಗುಣಗಳ ಅವಶ್ಯಕತೆ ಇದೆಯೋ ಅಂತಹ ಗುಣಗಳನ್ನೇ ಆಯ್ಕೆ ಮಾಡಿ ಅಂತಹ ಗುಣಗಳನ್ನು ಪ್ರತಿಪಾದಿಸುವ ನಾಮಗಳನ್ನೇ ವೇದವ್ಯಾಸರು ಭಿಷ್ಮರ ಬಾಯಿಯಲ್ಲಿ ಹೇಳಿಸಿರುವರು. ಪಠ್ಯಪುಸ್ತಕದ ಕೆಲವು ಭಾಗವನ್ನಷ್ಟೇ ನಿರ್ದೇಶಿಸಿ, ಇಷ್ಟು ಭಾಗವನ್ನು ಓದಿದರೆ ಸಾಕು – ಎಂದು ಹೇಗೆ ಹೇಳಲಾಗುವುದೋ ಹಾಗೆ.

ಒಬ್ಬ ವ್ಯಕ್ತಿಯಲ್ಲಿರುವ ಒಂದು ವಸ್ತುವನ್ನು ಮತ್ತೆ ಮತ್ತೆ ಹೊಗಳಿದಲ್ಲಿ ಆ ಹೊಗಳಿಕೆಯನ್ನು ಕೇಳಿ ಕೇಳಿ ಆ ವಸ್ತುವನ್ನು ಅವನಿಗೇ ನೀಡುವ ಕ್ರಮ ನಮ್ಮಲ್ಲೂ ಇದೆ. ಅದಕ್ಕನುಗುಣವಾಗಿ ಭಗವಂತನಲ್ಲಿರುವ ಗುಣಗಳನ್ನು ಮತ್ತೆ ಮತ್ತೆ ಹೊಗಳಿದೆವೆಂದರೆ ಭಗವಂತನು ಅಂತಹ ಗುಣಗಳನ್ನು ನಮಗೂ ನಮ್ಮ ಯೋಗ್ಯತಾನುಸಾರವಾಗಿ ನೀಡುವನು.

'ವೇದವಿತ್' – ನೀನು ವೇದವನ್ನು ಬಲ್ಲವನು ಎಂದು ಸ್ತುತಿಸಿದರೆ ನಾವೂ ಕಿಂಚಿತ್ 'ವೇದಜ್ಞ' ರೆನಿಸುವಂತೆ ಅನುಗ್ರಹಿಸುವನು.

**೧೩೧. ಅವ್ಯಂಗಃ – ಯಾವುದೇ ಅಂಗವನ್ನು ಎಂದೂ ಕಳೆದುಕೊಳ್ಳದವನು.**

**ವಿವರಣೆ :** ಅಂಗ,ವ್ಯಂಗ, ಅವ್ಯಂಗ. ಅಂಗ ಎಂದರೆ ಅವಯವಗಳು. ವಿ+ಅಂಗ ವ್ಯಂಗ. ವಿ ಅಂದರೆ ಹೋದ, ಅಂಗ – ಅವಯವಗಳುಳ್ಳವನು. ಅವ್ಯಂಗ ಅಂದರೆ ಹೋಗದ ಅವಯವಗಳುಳ್ಳವನು. ನಾವೆಲ್ಲ ವ್ಯಂಗರು. ಅವನು ಅವ್ಯಂಗ. ನಮಗೆ ಪ್ರಾಣ ಇರುವಾಗಲೂ ಕೈಕಾಲುಗಳು ಹೋಗುವುದುಂಟು. ವೈದ್ಯರು ಹೇಳ್ತಾರೆ – ಬೆರಳನ್ನು ಕತ್ತರಿಸಬೇಕಾಗುವುದು. ಕತ್ತರಿಸಬಾರದೆಂದರೆ ಇನ್ನೊಂದು ತಿಂಗಳಲ್ಲಿ ಇಡೀ ಕಾಲನ್ನೇ ಕತ್ತರಿಸಿ ತೆಗೆಯಬೇಕಾಗುವುದೆಂದು ಎಚ್ಚರಿಸುವರು. ಹಾಗಾದರೆ ಕೂಡಲೇ ಬೆರಳನ್ನು ಕತ್ತರಿಸಿ ಎನ್ನುವೆವು. ಹೀಗೆ ಒಳಗೆ ಪ್ರಾಣ ಇದ್ದರೂ ಒಂದೊಂದೇ ಅಂಗವನ್ನು ಬಿಡಬೇಕಾಗಿ ಬರುವುದರಿಂದ ನಾವು 'ವ್ಯಂಗ' ರು.

ಇಂತಹ 'ವ್ಯಂಗತ್ವ' ದ ದುಸ್ಥಿತಿ ಎಲ್ಲರ ಪಾಲಿಗೆ ಬಾರದಿದ್ದರೂ ಹದಿನೈದು ದಿನಗಳಿಗೊಮ್ಮೆಯೋ, ತಿಂಗಳಿಗೊಮ್ಮೆಯೋ ಎಲ್ಲರೂ ತಮ್ಮ ತಮ್ಮ ಉಗುರುಗಳನ್ನು, ತಲೆಗೂದಲನ್ನು ಕತ್ತರಿಸಿ ಬಿಸಾಡುವುದರಿಂದ 'ವ್ಯಂಗರು' ಆಗಿಯೇ ತೀರುವರು. ಹೀಗೆ ನಾವೆಲ್ಲ ವ್ಯಂಗರು – ವಿಗತ ಅಂಗವುಳ್ಳವರು. ಒಂದಲ್ಲ ಒಂದು ದಿನ ಹೋಗುವ ಅವಯವ ಉಳ್ಳವರು ವ್ಯಂಗರು.

ಭೀಷ್ಮರು ಸ್ತುತಿಸುವರು – ಕೃಷ್ಣ, ನೀನು ಒಬ್ಬನೇ ಅವ್ಯಂಗ. ಜೀವೋತ್ತಮನಾದ, ನಮ್ಮೆಲ್ಲರ 'ಪಿತಾಮಹ' ಎನಿಸಿರುವ ಚತುರ್ಮುಖನೂ ವ್ಯಂಗ. ನೂರು ಮನ್ವಂತರ ಕಾಲ ತನ್ನ ದೀರ್ಘ ಜೀವನ ಮುಗಿದ ಮೇಲೆ ಅವನೂ ತನ್ನ ಪಾಂಚಭೌತಿಕ ಶರೀರವನ್ನು ಬಿಡಬೇಕಾದುದರಿಂದ 'ವ್ಯಂಗ' ನಾಗುವನು. ಆದುದರಿಂದ ಇಡೀ ಜಗತ್ತಿನಲ್ಲಿ ಅವ್ಯಂಗ

ಎಂದರೆ ಕೃಷ್ಣನೊಬ್ಬನೇ.

ಭೀಷ್ಮರಿಗೆ ತಮ್ಮೆದುರಿಗಿರುವ ಕೃಷ್ಣನ 'ಅವ್ಯಂಗತ್ವ' ಗುಣ ಅನುಭವರೂಡವಾಗಿದೆ. ಭೀಷ್ಮರು ಸೇನಾಧಿಪತಿಗಳಾಗಿದ್ದಾಗ ಕೃಷ್ಣನ ಮೇಲೂ ಎಷ್ಟೋ ಬಾಣಗಳನ್ನು ಪ್ರಯೋಗಿಸಿದ್ದರು. ಆ ಕ್ಷಣದಲ್ಲಿ ರಕ್ತ, ಚರ್ಮ ಕಿತ್ತು ಬಂದಂತೆ ಕಾಣಿಸಿಕೊಂಡಿದ್ದರೂ ನಿಜವಾಗಿ ಕೃಷ್ಣನ ಜ್ಞಾನಾನಂದಮಯ ಶರೀರದಿಂದ ಒಂದು ತೊಟ್ಟು ರಕ್ತವೂ ಸುರಿಯಲು ಸಾಧ್ಯವಿಲ್ಲ. ಚರ್ಮ ಹರಿದುಹೋಗಲು ಸಾಧ್ಯವಿಲ್ಲ. ಯಾಕೆಂದರೆ ನೀನು 'ಅವ್ಯಂಗ' – ಎಂದು ಭೀಷ್ಮರು ಸ್ತುತಿಸುವರು.

ಕೃಷ್ಣ ಕಂಸವಧೆಗೆ ಹೊರಟಾಗ ನಾಪಿತನ ಮೂಲಕ ಕ್ಷೌರ ಮಾಡಿಸಿಕೊಂಡ; ಉಗುರುಗಳನ್ನು ತೆಗೆಸಿಕೊಂಡ – ಎಂದು ಉಲ್ಲೇಖ ಬರುವುದು. ಆದರೆ 'ಅವ್ಯಂಗ' ಕೃಷ್ಣನಲ್ಲಿ ನಮ್ಮ ಪಾಂಚಭೌತಿಕ ಶರೀರದಲ್ಲಿರುವಂತೆ ಹೇಯವಾದ ತಲೆಗೂದಲೂ, ಉಗುರು – ಇಲ್ಲ. ಆದರೂ ಕೃಷ್ಣ ಕಂಸಧ್ವಂಸನೆಂಬ ಯಜ್ಞಕ್ಕೆ ಹೊರಟ ತಾನು ತಲೆಗೂದಲು, ಉಗುರುಗಳನ್ನು ತೆಗಿಸುವ ನಾಟಕ ಹೂಡಿ ಯಜ್ಞಾದಿಗಳ ಸಂದರ್ಭದಲ್ಲಿ ತಲೆಗೂದಲು,ನಖಗಳನ್ನು ತೆಗಿಸಿ ಸುಸಂಸ್ಕೃತರಾಗಿರಬೇಕು – ಎಂಬ ಪಾಠವನ್ನು ತೋರಿಸಿಕೊಟ್ಟ.

ಪೂಜಾಕಾಲದಲ್ಲಿ ನಖಗಳ ಸ್ಪರ್ಶ ಪೂಜಾಸಾಮಗ್ರಿಗಳಿಗೆ ಆಗಬಾರದು. ಆದರೆ ಕೈ ಬೆರಳುಗಳ ಮೂಲಕ ಅಭಿಷೇಕಾದಿಗಳನ್ನು ನಡೆಸುವಾಗ ನಖಸ್ಪರ್ಶ ಅನಿವಾರ್ಯ. ಅದಕ್ಕೆ ಮುತ್ತಿನ ಚಿಪ್ಪಲ್ಲಿ ಗಂಧವನ್ನು ಹಾಕಿ. ಅಂತಹ ಗಂಧವನ್ನೇ ದೇವರಿಗೆ ಅರ್ಪಿಸಬೇಕೆಂದು ಪ್ರಾಯಶ್ಚಿತ್ತವಾಗಿ ಶಾಸ್ತ್ರದಲ್ಲಿ ತಿಳಿಸಲಾಗಿದೆ.

ಹೀಗೆ ನಖಸ್ಪರ್ಶ ತ್ಯಾಜ್ಯವಾಗಿರುವುದರಿಂದ ನಖಗಳನ್ನು ಕಿತ್ತು ಹಾಕಬೇಕು. ಇದನ್ನೆಲ್ಲ ಸೂಚಿಸಿಕೊಡುವುದೇ ಕೃಷ್ಣನ ನಟನೆಯ ಉದ್ದೇಶ.

ದೇವರನ್ನು 'ಅವ್ಯಂಗ' ಎಂದು ಉಪಾಸನೆ ನಡೆಸುವ ಮೂಲಕ ನಾವು ನಮ್ಮ ಪ್ರಾರಬ್ಧಕರ್ಮಕ್ಕನುಗುಣವಾಗಿ ರೋಗಪ್ರಯುಕ್ತವಾಗಿಯೋ, ಅಪಘಾತಾದಿಪ್ರಯುಕ್ತವಾಗಿಯೋ ಯಾವುದಾದರೂ ಅವಯವವನ್ನು ಕಳಕೊಳ್ಳುವ ಪ್ರಸಂಗ ಇದ್ದರೆ ಅದನ್ನು ಕಳೆದುಕೊಳ್ಳಬಹುದು; ಕಡಿಮೆ ಮಾಡಿಕೊಳ್ಳಬಹುದು.

**೧೩೨. ವೇದಾಂಗಃ – ಯಜುರ್ವೇದಾದಿಗಳು ಯಾರ ತಲೆ ಇತ್ಯಾದಿ ಅಂಗಗಳ ಸ್ಥಾನದಲ್ಲಿರುವವೋ ಅಂತಹವನು.**

**ವಿವರಣೆ :** ದೇವರ ತಲೆ ಎಂದರೇನು? ದೇವರ ಬಲಗೈ ಎಂದರೇನು? ದೇವರ ಎಡಗೈ ಎಂದರೇನು? ದೇವರ ಎದೆ ಎಂದರೇನು? ದೇವರ ಕಾಲುಗಳು ಯಾವುವು? ತೈತ್ತಿರೀಯೋಪನಿಷತ್ತು ವರ್ಣಿಸುವುದು – **'ತಸ್ಯ ಯಜುರೇವ ಶಿರಃ । ಋಗ್ ದಕ್ಷಿಣಃ**

**ಪಕ್ಷಃ । ಸಾಮೋತ್ತರಃ ಪಕ್ಷಃ । ಆದೇಶ ಆತ್ಮಾ । ಅಥರ್ವಾಂಗಿರಸಃ ಪುಚ್ಛಂ ಪ್ರತಿಷ್ಠಾ'** ವೇದಗಳನ್ನು ತಿಳಿಯದೆ ಭಗವಂತನನ್ನು ತಿಳಿಯಲು ಸಾಧ್ಯವೇ ಇಲ್ಲದುದರಿಂದ ಭಗವಂತನು ಬೇರೆ ಬೇರೆ ವೇದಗಳಿಗೆ ತನ್ನ ಬೇರೆ ಬೇರೆ ಅಂಗದ ಸ್ಥಾನವನ್ನೇ ಕಲ್ಪಿಸಿಕೊಟ್ಟಿರುವನು. ಯಜುರ್ವೇದವೇ ಅವನ ಶಿರಸ್ಸು.ಭಗವಂತನ ಶಿರಸ್ಸನ್ನು ಚಿಂತಿಸುವಾಗ, ಅವನ ಪ್ರತಿಮೆಯಲ್ಲಿ ಶಿರಸ್ಸನ್ನು ಕಾಣುವಾಗ ಭಗವಂತನು ಯಜುರ್ವೇದಕ್ಕೆ ತನ್ನ ಶಿರಸ್ಸಿನ ಸ್ಥಾನವನ್ನು ಕೊಟ್ಟಿರುವನು. ಯಜುರ್ವೇದ ಅವನ ಶಿರಸ್ಸನ್ನು ವಿಶೇಷವಾಗಿ ಅವಲಂಬಿಸಿದೆ. ಯಜುರ್ವೇದದಲ್ಲಿ ಅವನ ಶಿರಸ್ಸಿನ ಸನ್ನಿಧಾನವಿಶೇಷ ಸಿದ್ಧಿಸುವಂತೆ ಮಾಡಿರುವನು. ಮೇಲ್ನೋಟಕ್ಕೆ ಯಜ್ಞಾದಿಗಳ ವರ್ಣನೆಗೆ ಮೀಸಲಾದ ಯಜುರ್ವೇದಕ್ಕೆ ತನ್ನ ತಲೆಯ ಸ್ಥಾನವನ್ನು ಕಲ್ಪಿಸುವ ಮೂಲಕ ಭಗವಂತನು ಯಜುರ್ವೇದ ಪ್ರತಿಪಾದ್ಯ ಯಜ್ಞಾದಿಕರ್ಮಗಳಿಗೆ ಪ್ರಾಶಸ್ತ್ಯವನ್ನು ಸೂಚಿಸಿರುವನು.ಮೊದಲು 'ಕರ್ಮಿ' ಆಗಿ ಆನಂತರ 'ಬ್ರಹ್ಮಿ' ಆಗಬೇಕು. ಯಜ್ಞಾದಿಕರ್ಮಗಳನ್ನು ನಡೆಸಿ ಶುದ್ಧಾಂತಃಕರಣನಾದ ಮೇಲೆಯೇ ಭಗವದ್‌ಜ್ಞಾನವನ್ನು ಪಡೆದು ಮುಂದೆ ಅವನ ಸಾಕ್ಷಾತ್ಕಾರ ಪಡೆಯಬಹುದು. – ಎಂಬುದನ್ನು ಸೂಚಿಸಿರುವನು. ವಿಶೇಷವಾಗಿ ಸ್ತುತಿಗಳನ್ನೊಳಗೊಂಡಿರುವ ಋಗ್ವೇದಕ್ಕೆ ಭಗವಂತನು ತನ್ನ ಬಲಗೈಯ ಸ್ಥಾನವನ್ನು ಕಲ್ಪಿಸಿಕೊಡುವ ಮೂಲಕ ಸ್ತುತಿಗಳಿಂದ ಪೂಜೆ ಬಲಗೈಯಿಂದ ನಡೆಸಬೇಕಾದದ್ದೆಂದು ಸೂಚಿಸಿರುವನು.ದೋಷ ಪರಿಹಾರಕವಾದ ಸಾಮವೇದಕ್ಕೆ ತನ್ನ ಎಡಗೈಯ ಸ್ಥಾನವನ್ನು ಕಲ್ಪಿಸುವ ಮೂಲಕ ಆ ಕೈಯಿಂದ ನಡೆಸಬೇಕಾದ ದೋಷವನ್ನು ದೂರಮಾಡಿ, ಅಭಯಪ್ರದಾನವನ್ನು ಸೂಚಿಸಿರುವನು. **'ಪಂಚಾಶತ್‌ಕೋಟಿವಿಸ್ತಾರಃ.....'** ಎಂದು ಐವತ್ತು ಕೋಟಿ ಗ್ರಂಥಗಳಷ್ಟು ವಿಸ್ತಾರವಾದ ಪಂಚರಾತ್ರಾಗಮಕ್ಕೆ ತನ್ನ ಎದೆಯ ಸ್ಥಾನವನ್ನು ಕಲ್ಪಿಸಿ, ಹೃದಯವೈಶಾಲ್ಯವನ್ನು ಸೂಚಿಸಿರುವನು. ಕಾಲು ಇಡೀ ದೇಹಕ್ಕೆ ಆಧಾರ. ಅಥರ್ವವೇದಕ್ಕೆ ಅಂತಹ ಕಾಲಿನ ಸ್ಥಾನವನ್ನು ಕಲ್ಪಿಸಿ, ಅಥರ್ವವೇದಕ್ಕೆ ಸರ್ವಾಧಾರತ್ವವನ್ನು ಸೂಚಿಸಿರುವನು. ಗ್ರಂಥಗಳಲ್ಲಿಯ ವರ್ಣನೆಯ ಮೂಲಕವಾಗಲೀ, ಪ್ರತಿಮೆಯ ಮೂಲಕವಾಗಲೀ ಪತಿಪಾದ್ಯ – ಹೇಳಲ್ಪಡುವ ಭಗವಂತನನ್ನು ಕಾಣುವಾಗ ಪ್ರತಿಪಾದಕವಾದ – ಹೇಳುವ ಆಯಾ ಗ್ರಂಥವನ್ನು ಸ್ಮರಿಸಿಕೊಳ್ಳುವಂತಾಗಬೇಕು. ಹೀಗೆ ಪ್ರತಿಪಾದ್ಯ ಹಾಗೂ ಪ್ರತಿಪಾದಕಗಳನ್ನು ಜೊತೆ – ಜೊತೆಯಾಗಿಯೇ ಚಿಂತಿಸುವಂತಾಗಬೇಕೆಂದು ಭಗವಂತನು ಯಜುರ್ವೇದಾದಿಗಳಿಗೆ ತನ್ನ ಶಿರಸ್ಸೇ ಮುಂತಾದ ಅಂಗಗಳನ್ನು ಕಲ್ಪಿಸಿಕೊಟ್ಟು 'ವೇದಾಂಗ' ಎನಿಸಿಕೊಂಡ.

**೧೩೩. ವೇದವಿತ್ – ವೇದಗಳಿಂದ ತಿಳಿಯಲ್ಪಡುವವನು.**

**ವಿವರಣೆ :** ಯದ್ಯಪಿ ಇದೇ ಸಾಲಿನಲ್ಲಿ 'ವೇದೋ ವೇದವಿತ್......' ಎಂದು ಒಮ್ಮೆ 'ವೇದವಿತ್' ನಾಮದಿಂದ ಭಗವಂತನನ್ನು ಸ್ತುತಿಸಿಯಾಗಿದೆ. ಈಗ ಅದೇ ಸಾಲಿನಲ್ಲಿ ಮತ್ತೊಮ್ಮೆ 'ವೇದವಿತ್' ಎಂದು ಪಠಿತವಾಗಿದೆ. ಹಿಂದಿನ ವೇದವಿತ್ ನಾಮಕ್ಕೆ ವೇದವನ್ನು

ಬಲ್ಲವನು ಎಂಬ ಅರ್ಥವನ್ನು ನೋಡಿದ್ದೆವು. ಈಗ ವೇದ ಯಾರನ್ನು ತಿಳಿಸಿಕೊಡುವುದೋ ಅಂತಹವನು ಎಂಬ ಮತ್ತೊಂದು ಅರ್ಥ – ವೇದವಿತ್ ನಾಮಕ್ಕೆ.

ಭಗವಂತ ವೇದದಿಂದ ವೇದ್ಯನಾಗುವವನು. ಅವನನ್ನು ಕಣ್ಣಿನಿಂದ ನೋಡಲು ಸಾಧ್ಯವಿಲ್ಲ. ಕೈಯಿಂದ ಮುಟ್ಟಲು ಸಾಧ್ಯವಿಲ್ಲ. ಸುಮ್ಮನೆ ಕುಳಿತುಕೊಂಡು ದೇವರನ್ನು ಯೋಚಿಸುವೆವು. ಎಂದರೆ ಅದೂ ಸಾಧ್ಯವಿಲ್ಲ. ಆದುದರಿಂದ ದೇವರನ್ನು ತಿಳಿಯುವ ಬಗೆ – ವೇದವೊಂದೇ ದಾರಿ. ಶಬ್ದಗಳು ಮಾತ್ರ ದೇವರನ್ನು ತಿಳಿಸಬಲ್ಲವು. ಅದೂ ಪೂರ್ಣವಾಗಿ ಅಲ್ಲ. ಅಂತೂ ದೇವರನ್ನು ನೋಡಿಯೇ ತೀರ್ತೇನೆ ಎಂದರೆ ಆಗದು. ದೇವರನ್ನು ಕಿವಿಗಳಿಂದ ಕೇಳುತ್ತೇನೆ ಎಂದಷ್ಟೇ ಹೇಳಬಹುದು. ಈ ಶರೀರವನ್ನು ಹೊತ್ತಿರುವಾಗ ದೇವರನ್ನು ಶಬ್ದಗಳಿಂದಷ್ಟೇ ತಿಳಿದುಕೊಳ್ಳಲು ಸಾಧ್ಯ. ಆ ಶಬ್ದಗಳಾದರೂ ವೇದಕ್ಕೆ ಸೇರಿರುವವುಗಳಾಗಬೇಕು.

ಹಿಂದೆ ವೇದವಿತ್ ಎಂಬುದಕ್ಕೆ ವೇದಗಳನ್ನು ಬಲ್ಲವನು ಎಂದು ಅರ್ಥೈಸಿದ್ದಲ್ಲಿ ಈಗ ವೇದಗಳಿಂದ ತಿಳಿಯಲ್ಪಡುವವನು ಎಂದು ಅರ್ಥೈಸಿದ್ದಾಯಿತು.

೧೩೪. **ಕವಿಃ – ಸಮಗ್ರ ವೇದಗಳನ್ನು ಬಲ್ಲ ಜ್ಞಾನಿ.**

**ವಿವರಣೆ :** ಅದಕ್ಕೆ ಶಾಸ್ತ್ರಕಾರರು ನಿನ್ನನ್ನು ಕವಿ ಎಂದು ಕರೆಯುವರು. ಲೋಕದಲ್ಲಿ ನಾಲ್ಕು ಪ್ರಾಸಬದ್ಧ ಪದ್ಯಗಳನ್ನು ಮಾಡಿದಾಕ್ಷಣ ಅವನನ್ನು ಕವಿ ಎಂದು ಕರೆದರೂ ಶಾಸ್ತ್ರಕಾರರ ಪ್ರಕಾರ ಕವಿ ಎಂದಾಗಬೇಕಾದರೆ ಅವನು ವೇದಗಳನ್ನು ಬಲ್ಲ ಜ್ಞಾನಿ ಆಗಿದ್ದಿರಬೇಕು. ಭಗವಂತನನ್ನು ತಿಳಿದವನನ್ನೇ ಜ್ಞಾನಿ ಎಂದು ಪರಿಗಣಿಸಲಾಗುವುದು. ವೇದಗಳ ಮೂಲಕವೇ ಭಗವಂತನನ್ನು ತಿಳಿಯಬೇಕು. ಆದ್ದರಿಂದ ಸಮಗ್ರವೇದಗಳನ್ನು ಬಲ್ಲವನಾಗಿ 'ವೇದವಿತ್' ಎನಿಸಿ, ಅಂತಹ ವೇದಗಳ ಮೂಲಕವೂ ತನ್ನನ್ನು ಚೆನ್ನಾಗಿ ಬಲ್ಲವನಾಗಿದ್ದು ಜ್ಞಾನಿ ಎನಿಸಿರುವ ಭಗವಂತನೇ ಮುಖ್ಯವಾಗಿ ಕವಿ.

**ಲೋಕಾಧ್ಯಕ್ಷಃ ಸುರಾಧ್ಯಕ್ಷೋ ಧರ್ಮಾಧ್ಯಕ್ಷಃ ಕೃತಾಕೃತಃ ।**
**ಚತುರಾತ್ಮಾ ಚತುರ್ವ್ಯೂಹಃ ಚತುರ್ದಂಷ್ಟ್ರಶ್ಚತುರ್ಭುಜಃ ॥ ೧೫॥**

೧೩೫. **ಲೋಕಾಧ್ಯಕ್ಷಃ – ಸಮಗ್ರಲೋಕವನ್ನು ಕಾಣುತ್ತ ಒಡೆಯನಾಗಿರುವವನು.**

**ವಿವರಣೆ** – ಅಧ್ಯಕ್ಷ ಅಂದರೆ ನಮಗೆ ಗೊತ್ತು. ಲೋಕದಲ್ಲಿ ಸಾಮಾನ್ಯವಾಗಿ ಕಾರ್ಯಕ್ರಮಗಳನ್ನೆಲ್ಲ ಯಾರು ನೋಡುತ್ತ ಇರುವನೋ ಅವನನ್ನು ಅಧ್ಯಕ್ಷ ಎಂದು ಕರೆಯಲಾಗುವುದು. ಆದರೆ ನಿಜವಾಗಿ ಇಡೀ ಸಭೆಯನ್ನು ನಿಯಂತ್ರಿಸುವ ಗೌರವಪದವಿ ಅಧ್ಯಕ್ಷ ಎನ್ನುವುದು.

ಭಗವಂತ ನಿಜವಾಗಿ ಅಧ್ಯಕ್ಷ. ಯಾಕೆ ಗೊತ್ತೋ? ಎಲ್ಲವನ್ನೂ ನೋಡುತ್ತಿದ್ದಾನೆ. ಹೊರತು ಎಲ್ಲೂ ತಾನು ಕೊರೆಯುವುದಿಲ್ಲ. ಯಾರು, ಎಲ್ಲಿ, ಏಕೆ, ಹೇಗೆ ಮಾಡುತ್ತಿದ್ದಾರೆ – ಎನ್ನುವುದನ್ನು ಭಗವಂತ ನೋಡುತ್ತಿದ್ದಾನೆ. ನೋಡಿ, ಆಯಾ ವ್ಯಕ್ತಿಗಳೆದುರು ಅವರ ತಪ್ಪು ಒಪ್ಪುಗಳನ್ನು ತಿಳಿಸ್ತಾನೆ. ಪ್ರೇತಕಾಂಡದಲ್ಲಿ ತಿಳಿಸಿದಂತೆ ಸತ್ತ ಮೇಲೆ ಆಯಾ ವ್ಯಕ್ತಿಯನ್ನು ಕರೆದೊಯ್ದು ಅವನ ತಪ್ಪುಗಳನ್ನೆಲ್ಲ ವಿವರಿಸುವನು. ಸರಿಯಾದ ಚಟುವಟಿಕೆ ಇದ್ದಿದ್ದರೆ ಅದನ್ನು ತೋರಿಸಿ ಅದಕ್ಕಾಗಿ ಈ ಸುಖ ಎಂದು ತೋರಿಸಿಕೊಡುವನು. ಇದು ಭಗವಂತ ತನ್ನ ಅಧ್ಯಕ್ಷಪದವಿಯನ್ನು ನಿರ್ವಹಿಸುವ ವೈಖರಿ. ಅದಕ್ಕೆ ಸ್ತುತಿಸಲಾಗಿದೆ – ಇಡೀ ಲೋಕಕ್ಕೆ ಮುಖ್ಯವಾದ ಅಧ್ಯಕ್ಷ ನೀನೇ – 'ಲೋಕಾಧ್ಯಕ್ಷ' ಎಂದು. ಕೃಷ್ಣ , ಸಮಗ್ರ ಲೋಕ ನಿನ್ನ ಕೈಯಲ್ಲಿದೆ. ಅಧ್ಯಕ್ಷನಾಗಿ ತಿದ್ದುವ ಪ್ರವೃತ್ತಿಯನ್ನು ನನ್ನ ವಿಷಯದಲ್ಲೂ ಬಿಟ್ಟಿಲ್ಲ ಎನ್ನುವರು ಭೀಷ್ಮರು. ಯದ್ಯಪಿ ನಾನು ನಿನ್ನ ಅಜ್ಜನ ಅಜ್ಜನ ಸ್ಥಾನದಲ್ಲಿ ಇರುವವನು. ನಿನಗಿಂತ ಏಳ್ನೂರು ವರ್ಷಗಳಿಗಿಂತಲೇ ಮೊದಲು ಭೂಮಿಗೆ ಬಂದವನು ನಾನು. ಆದರೂ ತಿದ್ದುವ ವಿಷಯದಲ್ಲಿ ನನ್ನನ್ನೂ ಬಿಟ್ಟಿಲ್ಲ. ಹೀಗೆ ಇಡೀ ಲೋಕವನ್ನು ನಿನ್ನ ಹಿಡಿತದಲ್ಲಿಟ್ಟುಕೊಂಡು, ಲೋಕದ ತಪ್ಪು ಒಪ್ಪುಗಳನ್ನು ತಿದ್ದುವ ಲೋಕಾಧ್ಯಕ್ಷ ನೀನು. ಇಡೀ ಲೋಕವನ್ನು ಕಾಣುವವನು; ಇಡೀ ಲೋಕಕ್ಕೆ ಒಡೆಯನಾಗಿರುವವನು.

ಒಬ್ಬ ವ್ಯಕ್ತಿಯನ್ನು ಸಭೆಗೆ ಅಧ್ಯಕ್ಷನನ್ನಾಗಿ ಮಾಡಿದಲ್ಲಿ ಆ ಸಭೆಯ ಮೂಲೆ ಮೂಲೆಯಲ್ಲಿ ಏನಾಗುವುದೆಂದು ಆ ಅಧ್ಯಕ್ಷನಿಗೆ ಕಾಣಬೇಕಿಲ್ಲ. ಆದರೆ ಭಗವಂತ ಮಾತ್ರ ಲೋಕದ ಮೂಲೆ ಮೂಲೆಯಲ್ಲೂ ಏನಾಗುವುದೆಂಬುದನ್ನು ಕಾಣುತ್ತ ನಿಜವಾಗಿ ಲೋಕಾಧ್ಯಕ್ಷ ಎನಿಸುವನು.

ಭಗವಂತನನ್ನು ಹೀಗೆ ಲೋಕಾಧ್ಯಕ್ಷ ಎಂದು ಉಪಾಸನೆ ಮಾಡಿದರೆ ಭಗವಂತ ನಮ್ಮಲ್ಲಿ ಅಧ್ಯಕ್ಷರೆನಿಸಲು ಬೇಕಾಗುವ ಶಕ್ತಿಯನ್ನು ತುಂಬಿಸುವನು.

**೧೩೬. ಸುರಾಧ್ಯಕ್ಷಃ – ಚೆನ್ನಾಗಿ ರಮಿಸುವ ಮುಕ್ತರಿಗೆ ಒಡೆಯನಾಗಿರುವವನು.**

**ವಿವರಣೆ :** ಹದಿನಾಲ್ಕು ಲೋಕಗಳಿಗೂ ಅಧ್ಯಕ್ಷ ಎಂದ ಮೇಲೆ ಹದಿನಾಲ್ಕು ಲೋಕಗಳಲ್ಲಿ ಸೇರಿದ ಸುರರಿಗೂ ಅಧ್ಯಕ್ಷ ಎಂಬುದು ಸಿದ್ಧವಾಗುವುದು. ಹೇಗೆ ಸಮಗ್ರ ಮನೆಗೆ ಒಡೆಯ ಎಂದರೆ ಆ ಕೋಣೆಗೆ, ಈ ಕೋಣೆಗೆ ಎಂದು ಪ್ರತ್ಯೇಕವಾಗಿ ಪ್ರತ್ಯೇಕವಾಗಿ ಹೇಳುವ ಅವಶ್ಯಕತೆ ಇಲ್ಲವೋ ಹಾಗೆ.

ಆದುದರಿಂದ 'ಸುರಾಧ್ಯಕ್ಷ' – ಎಂಬಲ್ಲಿ ಸುರರು ಎಂದರೆ ಈ ಹದಿನಾಲ್ಕು ಲೋಕಗಳಲ್ಲಿ ಸೇರಿರುವ ಸ್ವರ್ಗದಲ್ಲೋ, ಮತ್ತೊಂದು ಲೋಕದಲ್ಲೋ ಇರುವವರೆಂದು ಅರ್ಥವಲ್ಲ. ಬದಲಾಗಿ ಈ ಹದಿನಾಲ್ಕು ಲೋಕಗಳಿಗೆ ಸೇರದ ಮುಕ್ತರೇ ಸುರರು. 'ಸು' ಎಂದರೆ ಚೆನ್ನಾಗಿ 'ರ' ಎಂದರೆ ರಮಣ ಮಾಡುವವರು, ಸುಖ ಪಡೆಯುವವರು ಎಂಬ ಅರ್ಥದಲ್ಲಿ ಮುಕ್ತರು 'ಸುರ' ಎನಿಸುವರು. ಹೀಗೆ ಮುಕ್ತರು ಹದಿನಾಲ್ಕು ಲೋಕಗಳ

ಸಾಧಕ ಬಾಧಕಗಳಿಗೆ ಸಂಬಂಧಿಸದವರಾಗಿ, ದುಃಖ ದುಮ್ಮಾನಗಳ ಲೇಪ ಇಲ್ಲದವರಾಗಿ 'ಸುರ' ಎನಿಸುವರು. ಇಂದ್ರಲೋಕದಲ್ಲಿರುವ ದೇವತೆಗಳು ಚೆನ್ನಾಗಿ ಸುಖಪಡುವುದರಿಂದ 'ಸುರ' ಎನಿಸುವರಾದರೂ ದೈತ್ಯರ ಭಯಕ್ಕೆ ಒಳಪಟ್ಟೇ ಇರುವರು. ಲಕ್ಷೀಶೋಭಾನ ಪದ್ಯದಲ್ಲಿ ಉಲ್ಲೇಖಗೊಂಡಂತೆ ಲಕ್ಷೀದೇವಿ ದೇವೇಂದ್ರನನ್ನು **'ನಶ್ವರೈಶ್ವರ್ಯವ ಬಯಸುವವನೊಬ್ಬ'** – ಎಂದು ಅಪಹಾಸ ಮಾಡಿರುವಳು. ಎಷ್ಟೋ ಬಾರಿ ದೇವೇಂದ್ರನ ಸ್ಥಾನ ಖಾಲಿಯಾದದ್ದಿದೆ. ದೇವೇಂದ್ರ ದೈತ್ಯರಿಗೆ ಭಯಪಟ್ಟು ತಲೆಮರೆಸಿಕೊಂಡು ಇದ್ದದ್ದಿದೆ. ಹೀಗೆ ಭಯಗ್ರಸ್ತರಾದ ದೇವತೆಗಳ ಸುಖ ದುಃಖಮಿಶ್ರಿತವಾದದ್ದು. ಆದುದರಿಂದ ಚೆನ್ನಾಗಿ ಸುಖಪಡುವ ಸುರರೆಂದರೆ ಮುಖ್ಯವಾಗಿ ಮುಕ್ತರು. ಆದುದರಿಂದ ಪುರುಷಸೂಕ್ತ ಘೋಷಿಸುತ್ತಿರುವಂತೆ **'.......ಉತಾಮೃತತ್ವಸ್ಯ ಈಶಾನಃ'** ಕೃಷ್ಣ ಸಂಸಾರಬಂಧನಕ್ಕೊಳಗಾದ ಹದಿನಾಲ್ಕು ಲೋಕಗಳಿಗಷ್ಟೇ ಅಲ್ಲದೆ ಸಂಸಾರ ಬಂಧನದಿಂದ ಮುಕ್ತರಾದ ಸುರರಿಗೂ ಅಧ್ಯಕ್ಷ. ಜೀವರು ಮೋಕ್ಷಕ್ಕೆ ಹೋದ ಮೇಲೂ ಪರಮಾತ್ಮನ ಅಧೀನದಲ್ಲೇ ಇರುವರು.

**೧೩೭ ಧರ್ಮಾಧ್ಯಕ್ಷಃ – ಧರ್ಮಾಧರ್ಮಗಳ ಬಗ್ಗೆ ತೀರ್ಮಾನ ನೀಡುವವನು.**

**ವಿವರಣೆ :** ಹೀಗೆಯೇ ಆಗಬೇಕು, ಎಂದೆಲ್ಲ ವ್ಯವಸ್ಥೆ ಮಾಡುವವನು ಅಧ್ಯಕ್ಷ. ಭಗವಂತ ಲೋಕಾಧ್ಯಕ್ಷ, ಸುರಾಧ್ಯಕ್ಷ ಆಗಿರುವಂತೆ ಧರ್ಮಾಧ್ಯಕ್ಷನೂ ಆಗಿರುವನು. ಧರ್ಮದ ಅಧ್ಯಕ್ಷ ಎಂದರೆ ಪುಕ್ಕಟೆ ಅಧ್ಯಕ್ಷ ಎಂದು ತಿಳಿಯಬಾರದು !

ನ್ಯಾಯಾಲಯದಲ್ಲಿ ನ್ಯಾಯಾಧೀಶ ಕೊಟ್ಟದ್ದೇ ತೀರ್ಪು. ಅದರಂತೆ ಧರ್ಮಾಧರ್ಮಗಳ ವಿಷಯದಲ್ಲಿ ಭಗವಂತನದ್ದೇ ತೀರ್ಪು. **'ಶ್ರುತಿಸ್ಮೃತೀ ಹರೇರಾಜ್ಞೇ......'** ಎಂದಿರುವಂತೆ ಧರ್ಮಾಧರ್ಮಗಳ ನಿರ್ಣಾಯಕಗಳೆಂದು ಪ್ರಸಿದ್ಧಗಳಾಗಿರುವ ಶ್ರುತಿಗಳೂ, ಸ್ಮೃತಿಗಳೂ ಭಗವಂತನ ಆದೇಶ ರೂಪದಲ್ಲಿ ಇರುವವು. ದ್ರೋಣಾಚಾರ್ಯರು ಯುದ್ಧ ಮಾಡುತ್ತಿದ್ದಾಗ 'ಅಶ್ವತ್ಥಾಮಾ ಹತಃ' – ಎಂದು ಹೇಳಲು ಯುಧಿಷ್ಠಿರನಿಗೆ ಕೃಷ್ಣ ಆದೇಶಿಸುವನು. ಇದುವರೆಗೆ ಒಂದು ಸುಳ್ಳನ್ನೂ ಹೇಳದ ತಾನು ಈ ಸುಳ್ಳನ್ನು ಹೇಗೆ ಹೇಳಲಿ? – ಎಂದು ಯುಧಿಷ್ಠಿರ ಬಿನ್ನವಿಸಿಕೊಂಡಾಗ ಕೃಷ್ಣ ಹೇಳ್ತಾನೆ – ನನ್ನ ಬಾಯಿಯಿಂದ ಬಂದಿದೆ ಎಂದರೆ ಇದೇ ನಿಜವಾದ ಸತ್ಯ. ನಾನು ಯಾವುದನ್ನು ಸತ್ಯ ಎನ್ನುವೆನೋ ಅದೇ ಸತ್ಯ. ಯಾವುದು ನನ್ನ ಪ್ರಕಾರ ಸುಳ್ಳೋ ಅದೇ ನಿಜವಾದ ಸುಳ್ಳು.

ನ್ಯಾಯಾಧೀಶನ ತೀರ್ಪನ್ನು ಉಲ್ಲಂಘಿಸಿದರೆ ನ್ಯಾಯಲಯದ ನಿಂದನೆ ಎಂದಾಗುವಂತೆ ಧರ್ಮಾಧರ್ಮ ವಿಷಯದಲ್ಲಿ ದೇವನ ತೀರ್ಪನ್ನು ಉಲ್ಲಂಘಿಸಿದರೆ ದೇವಾಲಯದ ನಿಂದನೆ ಎಂದಾಗುವುದು. ದೇವರು ಏನನ್ನು ಮಾಡಬೇಕು ಅಂತಾನೋ ಅದು ಧರ್ಮ. ದೇವರು ಯಾವುದನ್ನು ಮಾಡಬಾರದು ಅಂತಾನೋ ಅದನ್ನು ಮಾಡಿದರೆ ಅಧರ್ಮ ಎಸಗಿದಂತಾಗುವುದು. ಹೀಗೆ ದೇವರು ಪುಣ್ಯಪಾಪಗಳನ್ನು,

ಧರ್ಮಾಧರ್ಮಗಳನ್ನು ತನ್ನ ಹಿಡಿತದಲ್ಲಿ ಇಟ್ಟು ಕೊಂಡವನು. ಯಾವುದು ಧರ್ಮ ಯಾವುದು ಅಧರ್ಮ – ಎಂಬ ತೀರ್ಮಾನವನ್ನು ಕೊಡುವವನು.

ನಮಗೆ ಪುಣ್ಯಪಾಪಗಳು ಕಣ್ಣಿಗೆ ಕಾಣಲು ಸಿಗುವುದಿಲ್ಲ. ದಾನ ಮಾಡಿದರೆ ಪುಣ್ಯ ಬರುವುದು; ಹಿಂಸೆ ಮಾಡಿದರೆ ಪಾಪ ಬರುವುದು – ಎಂದು ಶಾಸ್ತ್ರ ಹೇಳುವುದು. ಅದರ ಆಧಾರದಲ್ಲಷ್ಟೇ ಪುಣ್ಯಪಾಪಗಳನ್ನು ತಿಳಿದುಕೊಳ್ಳುವವರು ನಾವು. ಆದರೆ ಭಗವಂತ ಪುಣ್ಯವನ್ನೂ ಕಾಣುವನು; ಪಾಪವನ್ನೂ ಕಾಣುವನು. ಕಾಣುವವನೇ ನಿಜವಾಗಿ ಅಧ್ಯಕ್ಷ ಎನಿಸಲು ಯೋಗ್ಯ. ಆದ್ದರಿಂದ ಪುಣ್ಯಪಾಪಾತ್ಮಕಧರ್ಮವನ್ನು ಕಾಣಲು ಯೋಗ್ಯನಾದ ಭಗವಂತ ಧರ್ಮಾಧ್ಯಕ್ಷ ಎನಿಸುವನು.

**೧೩೮. ಕೃತಾಕೃತಃ – ಕೃತ ಎನಿಸುವ ಕರ್ಮ, ಅಕೃತ ಎನಿಸುವ ಮೋಕ್ಷ ಯಾರಿಂದಲೋ ಅಂತಹವನು.**

**ವಿವರಣೆ :** ಕೃತ ಶಬ್ದಕ್ಕೆ ಕರ್ಮಗಳು ಎಂದರ್ಥ. ಅಕೃತ ಶಬ್ದಕ್ಕೆ ಮೋಕ್ಷ ಎಂದರ್ಥ. ಆದ್ದರಿಂದ ಕೃತಾಕೃತ ಎಂದರೆ ಕರ್ಮ ಮತ್ತು ಮೋಕ್ಷ. ಸಾಧಕರಿಂದ ಕರ್ಮಗಳನ್ನು ಮಾಡಿಸುವವನೂ ಭಗವಂತ. ಹೀಗೆ ಕರ್ಮ ಮಾಡಿಸಿ, ಅದರ ಫಲವಾಗಿ ಜ್ಞಾನ ನೀಡಿ ಮೋಕ್ಷವನ್ನು ನೀಡುವವನೂ ಭಗವಂತನೇ.

ಮೋಕ್ಷವನ್ನು ಅಕೃತ ಎಂದು ಕರೆದರು. ಯಾಕೆ? ಮಡಿಕೆಯನ್ನು ಮಾಡಲಿಕ್ಕೆ ಆಗುವುದು, ಬಟ್ಟೆಯನ್ನು ಮಾಡಲಿಕ್ಕೆ ಆಗುವುದು, ಹೋಮವನ್ನು ಮಾಡಲಿಕ್ಕೆ ಆಗುವುದು. ಆ ರೀತಿಯಾಗಿ ಮೋಕ್ಷವನ್ನು ಮಾಡಲಿಕ್ಕೆ ಆಗುವುದಿಲ್ಲ. ಮೋಕ್ಷ ಎಂದರೆ ಕಟ್ಟಿದ್ದನ್ನು ಬಿಡಿಸುವುದಷ್ಟೇ. ಮೋಕ್ಷ ಎಂದರೆ ಬಿಡುಗಡೆ. ಅಲ್ಲಿ ಮಾಡತಕ್ಕ ಪ್ರಸಂಗ ಇಲ್ಲ. ಆದ್ದರಿಂದಲೇ ಅವರಿಗೆ ಮೋಕ್ಷ ಆಯಿತು ಎಂದು ಹೇಳಲಾಗುವುದೇ ವಿನಹ ಭಗವಂತ ಅವರಿಗೆ ಮೋಕ್ಷ ಮಾಡಿದ ಎಂದೇನೂ ವ್ಯವಹರಿಸಲಾಗುವುದಿಲ್ಲ.

ಒಂದು ದೀಪ ಮೊದಲೇ ಇತ್ತು.ಅದಕ್ಕೆ ಯಾರೋ ಒಂದು ಪಾತ್ರೆಯನ್ನು ಮುಚ್ಚಿದ್ದಾರೆ. ಒಬ್ಬ ಆ ಪಾತ್ರೆಯನ್ನು ತೆಗೆದನೆಂದರೆ ದೀಪದ ಬೆಳಕು ಎಲ್ಲೆಡೆ ಹರಡುತ್ತದೆ. ಅಷ್ಟು ಮಾತ್ರಕ್ಕೆ ಆ ಬೆಳಕನ್ನು ಉಂಟುಮಾಡಿದವನೆಂದು ಅವನನ್ನು ಕರೆಯಲಾಗುವುದಿಲ್ಲ. ಅಂತೆಯೇ ಮುಕ್ತಿಯೋಗ್ಯಜೀವರ ಒಳಗೆ ಅವರದ್ದೇ ಆದ ಆನಂದ ಇದೆ. ಭಗವಂತ ಆ ಸ್ವರೂಪಸುಖದ ಆವರಣವನ್ನು ತೆಗೆಯುವುದಷ್ಟೇ. ಆದುದರಿಂದ ಅವನು ಮೋಕ್ಷವನ್ನು ಉಂಟುಮಾಡುವವನೇನೂ ಅಲ್ಲ. ಆದರಿಂದ ಮೋಕ್ಷಕ್ಕೆ 'ಅಕೃತ' ಎಂಬ ಹೆಸರನ್ನು ನೀಡಲಾಗಿದೆ.

ಕೃತ ಎಂದರೆ ಮಾಡಲ್ಪಡುವ ಕರ್ಮಗಳು, ಅಕೃತ ಎಂದರೆ ಮೋಕ್ಷ – ಇವೆರಡೂ ಭಗವಂತನ ಅಧೀನ. ಭಗವಂತ ಮನಸ್ಸು ಮಾಡಿದರೆ ನಾವು ಕರ್ಮ ಮಾಡುತ್ತೇವೆ. ಭಗವಂತ ಮನಸ್ಸು ಮಾಡಿದರೆ ನಮಗೆ ಮೋಕ್ಷ ಆಗುವುದು. ನಾನೇ ಕರ್ಮ ಮಾಡ್ತೇನೆ

ಎಂದರೆ ಆಗುವುದಿಲ್ಲ. ನಾನೇ ಮೋಕ್ಷ ಪಡೀತೇನೆ ಎಂದರೂ ಆಗುವುದಿಲ್ಲ. ಹೀಗೆ ಕೃತ ಮತ್ತು ಅಕೃತ ಈ ಎರಡೂ ಯಾರಿಂದಲೋ ಅವನು ಕೃತಾಕೃತ.

**೧೩೯. ಚತುರಾತ್ಮಾ – ವಾಸುದೇವ ಸಂಕರ್ಷಣ ಪ್ರದ್ಯುಮ್ನ ಅನಿರುದ್ಧ ಎಂಬ ನಾಲ್ಕು ಅವತಾರಗಳನ್ನು ತಾಳಿರುವವನು.**

**ವಿವರಣೆ :** ಚತುರ್ ಎಂದರೆ ನಾಲ್ಕು; ಆತ್ಮಾ – ಅವತಾರಗಳು. ನಾಲ್ಕು ಅವತಾರಗಳನ್ನು ತಾಳಿದವನು. **'ಆಲದೆಲೆಯ ಮೇಲೆ ಮಲಗಿದ್ದ ಶಿಶುವೇ'** – ಎಂದಿರುವಂತೆ ಪ್ರಲಯಕಾಲದಲ್ಲಿ ದೇವರು ಒಬ್ಬನೇ ಮಲಗಿದ್ದ. ನಿದ್ದೆ ಮುಗಿಯಿತು. ಸೃಷ್ಟಿ ಮಾಡಬೇಕು ಎಂದು ಅವನಿಗೆ ತೋರಿತು. ಆಗ ನಾಲ್ಕು ರೂಪಗಳನ್ನು ತಾಳಿರುವನು. ವಾಸುದೇವ, ಸಂಕರ್ಷಣ, ಪ್ರದ್ಯುಮ್ನ ಹಾಗೂ ಅನಿರುದ್ಧ ಎಂಬ ನಾಲ್ಕು ರೂಪಗಳನ್ನು ತಾಳಿರುವನು. ಆಲದ ಎಲೆಯ ಮೇಲೆ ಮಲಗಿದ್ದ ರೂಪ ನಾರಾಯಣ. ನೀರಿನ ಮೇಲೆ ಮಲಗಿದ್ದರಿಂದ ಅದಕ್ಕೆ ನಾರಾಯಣ ಎಂಬ ಹೆಸರು. ಇದರಿಂದ ಕಾಣಿಸಿಕೊಂಡ ವಾಸುದೇವಾದಿ ನಾಲ್ಕು ರೂಪಗಳೂ ನಮ್ಮ ಉದ್ಧಾರಕ್ಕಾಗಿ ಬಂದವು. ಪ್ರದ್ಯುಮ್ನ ರೂಪ ಬಂತು ನಮ್ಮನ್ನು ಸೃಷ್ಟಿ ಮಾಡಿತು. ಅನಿರುದ್ಧ ರೂಪ ಬಂತು ನಮ್ಮನ್ನು ಬೆಳೆಸಿತು. ಸಂಕರ್ಷಣ ರೂಪ ಬಂತು ನಮ್ಮ ಆಯುಷ್ಯ ಮುಗಿದಾಗ ನಮ್ಮನ್ನು ಧ್ವಂಸ ಮಾಡಿತು. ವಾಸುದೇವ ರೂಪ ಬಂತು. ಸತ್ತಂತಹ ನಮಗೆ ಸದ್ಗತಿಯನ್ನು ಕೊಟ್ಟಿತು. ಸತ್ತ ಮೇಲೆ ಸದ್ಗತಿಯತ್ತ ಕರಕೊಂಡು ಹೋಗಲು ಇದ್ದ ರೂಪ ವಾಸುದೇವ ರೂಪ. ಸಾಯಲಿಕ್ಕೆ ಇದ್ದ ರೂಪ ಸಂಕರ್ಷಣ ರೂಪ. ಸೃಷ್ಟಿ ಮಾಡತಕ್ಕದ್ದು ಪ್ರದ್ಯುಮ್ನ ರೂಪ. ಬೆಳೆಸತಕ್ಕದ್ದು ಅನಿರುದ್ಧ ರೂಪ.

ಫಲದ ಆಮಿಷವನ್ನು ತೋರಿಸಿ ಕರ್ತವ್ಯವನ್ನು ವಿಧಿಸುವ ಕ್ರಮಕ್ಕನುಗುಣವಾಗಿ ಮೋಕ್ಷಫಲವನ್ನು ಅನುಗ್ರಹಿಸುವ ವಾಸುದೇವ ರೂಪ ಮೊದಲು ಪ್ರಾದುರ್ಭಾವ ಹೊಂದಿತು.

ಹೀಗೆ ನಮ್ಮ ಉದ್ಧಾರಕ್ಕೆ ಸಂಬಂಧಪಡುವಂತೆ ಸೃಷ್ಟಿ, ರಕ್ಷಣೆ, ನಾಶ ಹಾಗೂ ಮೋಕ್ಷದಾನ ನಮ್ಮ ಈ ನಾಲ್ಕು ಚಟುವಟಿಕೆಗಳನ್ನು ನಿರ್ವಹಿಸುವುದಕ್ಕಾಗಿ ಭಗವಂತನು ಪ್ರದ್ಯುಮ್ನ, ಅನಿರುದ್ಧ, ಸಂಕರ್ಷಣ ಹಾಗೂ ವಾಸುದೇವ ಎಂಬ ನಾಲ್ಕು ಅವತಾರಗಳನ್ನು ತಾಳಿರುವನು.

ಮೊದಲಿನ ನಾರಾಯಣ ರೂಪವನ್ನೂ ಸೇರಿಸಿ, ಒಟ್ಟು ಐದು ರೂಪಗಳು ಭಗವಂತನದ್ದು. ಶ್ರೀಮಠದಲ್ಲಿ ಒಂದು ಆರತಿ; ಪಂಚ ಆರತಿಗಳನ್ನು ಬೆಳಗುವ ಪದ್ಧತಿ ಭಗವಂತ ಅವತಾರ ತಾಳಿದ ಕ್ರಮಕ್ಕನುಗುಣವಾಗಿಯೂ ಇದ್ದಿದ್ದಿರಬಹುದು.

**೧೪೦. ಚತುರ್ವ್ಯೂಹಃ – ವಾಸುದೇವಾದಿ ನಾಲ್ಕುರೂಪಗಳ ಗುಂಪು ಉಳ್ಳವನು.**

**ವಿವರಣೆ :** 'ಚತುರಾತ್ಮಾ' ಎಂಬ ನಾಮಾರ್ಥದ ಚಿಂತನೆಗಿಂತ ಸ್ವಲ್ಪ ಹೆಚ್ಚಿನದ್ದನ್ನು

ಕೊಡುವುದಾದರೆ ಇಷ್ಟೇ – ಚತುರ್ ನಾಲ್ಕು, ವ್ಯೂಹ – ಗುಂಪು. ನಾಲ್ಕರ ಗುಂಪು ಉಳ್ಳವನು. ವಾಸುದೇವ, ಸಂಕರ್ಷಣ, ಪ್ರದ್ಯುಮ್ನ ಹಾಗೂ ಅನಿರುದ್ಧ ಈ ನಾಲ್ಕು ರೂಪಗಳ ವ್ಯೂಹ – ಗುಂಪು ಉಳ್ಳವನು. ಪದ್ಮವ್ಯೂಹ – ಇತ್ಯಾದಿಗಳಲ್ಲೂ ಸೇನೆಯನ್ನು ನಿಲ್ಲಿಸುವ ಒಂದು ಗುಂಪು – ಎಂಬ ಅರ್ಥದಲ್ಲೇ ವ್ಯೂಹ ಶಬ್ದದ ಪ್ರಯೋಗ ನಡೆದಿದೆ. ಚತುರಾತ್ಮಾ ಎಂಬ ನಾಮ ಸೃಷ್ಟಿ, ಸ್ಥಿತಿ, ಲಯ, ಮೋಕ್ಷ – ಎಂಬ ನಾಲ್ಕು ಚಟುವಟಿಕೆಗಳ ನಿರ್ವಹಣೆಗಾಗಿ ಇರುವ ರೂಪಗಳೆಂಬುದನ್ನು ತಿಳಿಸಿದರೆ, 'ಚತುರ್ವ್ಯೂಹ' ಎಂಬ ನಾಮವು ಆ ನಾಲ್ಕು ರೂಪಗಳು ಹೇಗೆ ಬಂದವು ಎಂಬುದನ್ನು ತಿಳಿಸುವುದು. ಭಗವಂತನ ಹತ್ತು ರೂಪಗಳ ಒಂದು ವ್ಯೂಹ ಇದೆ, ಶತರೂಪಗಳ ವ್ಯೂಹ ಇದೆ; ಸಹಸ್ರರೂಪಗಳ ವ್ಯೂಹ ಇದೆ. ಆದರೆ ಆ ಎಲ್ಲ ವ್ಯೂಹಗಳಿಗಿಂತ ನಾಲ್ಕು ರೂಪಗಳ ಈ ವ್ಯೂಹದಲ್ಲಿ ಒಂದು ವೈಶಿಷ್ಟ್ಯ ಇದೆ.ನಾರಾಯಣ ರೂಪದಿಂದ ವಾಸುದೇವ ರೂಪ ಪ್ರಕಟಗೊಂಡರೆ, ವಾಸುದೇವನಿಂದ ಸಂಕರ್ಷಣ. ಸಂಕರ್ಷಣದಿಂದ ಪ್ರದ್ಯುಮ್ನ. ಪ್ರದ್ಯುಮ್ನನಿಂದ ಅನಿರುದ್ಧರೂಪದ ಪ್ರಕಟ ಆಗಿದೆ. ಉಳಿದ ವ್ಯೂಹಗಳಲ್ಲಿ ಹೀಗೆ ಹಿಂದಿನ ಹಿಂದಿನ ರೂಪದಿಂದ ಮುಂದಿನ ಮುಂದಿನ ರೂಪದ ಪ್ರಕಟಣೆ ಅಲ್ಲ. ಭಗವಂತ ಬೇರೆ ಬೇರೆ ಸಂದರ್ಭಗಳಲ್ಲಿ ತಾಳಿದ ರೂಪಗಳಷ್ಟೇ ಅವು.

ಈ ರೀತಿಯಾಗಿ ಭಗವಂತನ ಈ ಚತುರ್ವ್ಯೂಹದಲ್ಲಿಯ ವೈಶಿಷ್ಟ್ಯವನ್ನು ಸ್ಪಷ್ಟಪಡಿಸುವುದಕ್ಕಾಗಿಯೇ 'ಚತುರಾತ್ಮಾ'– ಎಂದು ನಾಲ್ಕು ರೂಪಗಳ ಪ್ರಸ್ತಾಪ ಇರುವ ನಾಮವನ್ನು ಒಮ್ಮೆ ಪಠಿಸಿ, ಪುನಃ 'ಚತುರ್ವ್ಯೂಹಃ' ಎಂದು ಚತುರ್ರೂಪಗಳ ವ್ಯೂಹವನ್ನು ಉಲ್ಲೇಖಿಸಲಾಗಿದೆ.

**೧೪೧. ಚತುರ್ದಂಷ್ಟ್ರಃ – ನರಸಿಂಹ ರೂಪದಲ್ಲೂ ವರಾಹ ರೂಪದಲ್ಲೂ ನಾಲ್ಕು ಕೋರೆ ದಾಡೆಗಳನ್ನು ಹೊಂದಿರುವವನು.**

**ವಿವರಣೆ** : ದಂಷ್ಟ್ರಶಬ್ದಕ್ಕೆ ದವಡೆಹಲ್ಲು ಎಂದರ್ಥ. ಎಷ್ಟು ದವಡೆ ಹಲ್ಲುಗಳು? ಪ್ರತಿಯೊಬ್ಬನಿಗೂ ನಾಲ್ಕು ನಾಲ್ಕು ದವಡೆ ಹಲ್ಲುಗಳು ಇದ್ದೇ ಇರುವವು. ಪ್ರಾಣಿಗಳಲ್ಲಿ ದವಡೆ ಹಲ್ಲು ಹೊರಗೆ ಬರುವುದಷ್ಟೇ. ಭಗವಂತ ನರಸಿಂಹನಾಗಿ ಅವತರಿಸಿದಾಗ, ವರಾಹನಾಗಿ ಅವತರಿಸಿದಾಗ ತನ್ನ ದವಡೆ ಹಲ್ಲುಗಳನ್ನು ಹೊರಗೆ ತೋರಿಸಿರುವನು. ವಿಶ್ವರೂಪವನ್ನು ಅರ್ಜುನನಿಗೆ ತೋರಿಸಿದಾಗ ಅದರಲ್ಲಿ ದವಡೆ ಹಲ್ಲುಗಳೂ ಕಂಡಿದ್ದವಂತೆ. ನಾಲ್ಕು ದವಡೆ ಹಲ್ಲುಗಳು. ಸಾಮಾನ್ಯವಾಗಿ ನಾವು ಕಾಡುಪ್ರಾಣಿಗಳಲ್ಲಿ ಎರಡು ದವಡೆ ಹಲ್ಲುಗಳನ್ನು ಕಾಣುವೆವು. ಭಗವಂತನೆಂಬ ಪ್ರಾಣಿಗೆ ನಾಲ್ಕು ದವಡೆ ಹಲ್ಲುಗಳು. ಇದು ವಿಲಕ್ಷಣ ಪ್ರಾಣಿ. ಎಲ್ಲಿಯವರೆಗೆ ಅಂದರೆ, ನರಕಾಸುರನನ್ನು ಕೊಂದು ಅಲ್ಲಿಯ ಆರು ಸಾವಿರ ಆನೆಗಳನ್ನು ಕೃಷ್ಣ ತನ್ನಲ್ಲಿಗೆ ಸಾಗಿಸಿದ. ಆ ಆನೆಗಳಿಗೂ ನಾಲ್ಕು ದವಡೆ ಹಲ್ಲುಗಳು ಇದ್ದವೆಂದ ಮೇಲೆ ಆ ಆನೆಗಳಿಗೆ ನಾಲ್ಕು ಹಲ್ಲುಗಳನ್ನು ಕೊಟ್ಟ ಭಗವಂತನಿಗೆ ನಾಲ್ಕು

ದವಡೆ ಹಲ್ಲುಗಳು ಇರಬೇಡವೆ? ಎಂತಾರೆ.

ಹೀಗೆ ದೇವರು ನರಸಿಂಹನಾಗಿ ಬಂದ; ವರಹನಾಗಿ ಬಂದ. ಆದರೆ ತಾನು ಲೋಕದ ಸಿಂಹ, ಹಂದಿಗಳಿಗಿಂತ ವಿಲಕ್ಷಣನಾಗಿರುವವನೆಂದು ತೋರಿಸಿಕೊಡುವುದಕ್ಕಾಗಿ ನಾಲ್ಕು ದವಡೆ ಹಲ್ಲುಗಳನ್ನು ಹೊತ್ತು ಬಂದ.

ಸಾಮಾನ್ಯವಾಗಿ ಲೋಕದಲ್ಲಿ ಹಲ್ಲು ಸ್ವಲ್ಪ ಹೊರಗೆ ಬಂದರೂ ಅದನ್ನು ಅವಲಕ್ಷಣ ಎಂದು ಪರಿಗಣಿಸುವರು. ಅಂತಹವರು ಸತ್ತರೂ ಪಕ್ಕನೆ ತಿಳಿಯುವುದಿಲ್ಲ. ಯಾಕೆಂದರೆ ಯಾವಾಗಲೂ ನಗುತ್ತಿರುವಂತೆ ಕಾಣಿಸ್ತಾರೆ – ಎಂದು ಅಪಹಾಸ ಮಾಡಲಾಗುವುದು. ಆದರೆ ಭಗವಂತನ ಪಾಲಿಗೆ ನಾಲ್ಕು ಕೋರೆದಾಡೆಗಳೂ ಲಕ್ಷಣಗಳೇ. ಲೋಕದಲ್ಲಿ ದೋಷವಾಗಿ, ಅವಗುಣವಾಗಿ ಕಂಡದ್ದೂ ಅವನಲ್ಲಿ ಗುಣವೆನಿಸುವುದು;

ಈ ಹಿನ್ನೆಲೆಯಲ್ಲಿಯೇ ಭೀಷ್ಮರು ಕೃಷ್ಣನನ್ನು, ನೀನು ವರಾಹನಾಗಿದ್ದಾಗ, ನರಸಿಂಹನಾಗಿದ್ದಾಗ ಹಾಗೂ ಅರ್ಜುನನಿಗೆ ತೋರಿಸಿದ ವಿಶ್ವರೂಪದಲ್ಲಿ ನಾಲ್ಕು ಕೋರೆದಾಡೆ ಉಳ್ಳವನೇ, – ಎಂದು ಸ್ತುತಿಸಿರುವರು.

ಪ್ರಾಯಶಃ ಭೀಷ್ಮರ ಪ್ರತಿಜ್ಞೆಯನ್ನು ಉಳಿಸುವುದಕ್ಕಾಗಿ ಚಕ್ರವನ್ನು ಧರಿಸಿ ಭೀಷ್ಮರಲ್ಲಿಗೆ ಧಾವಿಸಿ ಹೋದಾಗಲೂ ಕೃಷ್ಣ ನಗುತ್ತ ಇದ್ದಿರಬಹುದು. ನಗುವಿನಿಂದಾಗಿ ಕಾಣುತ್ತಿದ್ದ ಅವನ ದೊಡ್ಡ ದೊಡ್ಡ ಹಲ್ಲುಗಳನ್ನು ನೆನಪಿನಲ್ಲಿಟ್ಟುಕೊಂಡು 'ಚತುರ್ದಂಷ್ಟ್ರ' – ಎಂದು ಶ್ರೀಕೃಷ್ಣನನ್ನು ಸ್ತುತಿಸಿದ್ದಿರಬಹುದು.

ನಾಲ್ಕು ವಿಧಗಳಾದ ಪುರುಷಾರ್ಥಗಳನ್ನು ಪಡೆಯುವ ನಾಲ್ಕು ವಿಧದ ಜನರು. ಅವರನ್ನು ಪರಮಾತ್ಮ ಪ್ರಾಯಶಃ ತನ್ನ ಹಲ್ಲುಗಳಲ್ಲಿ ಹಿಡಿದುಕೊಳ್ಳುವನು. ಆದುದರಿಂದ ಅವನ ಹಲ್ಲುಗಳು ಚಾಚಿಕೊಂಡಿವೆ.ಹೊರ ಚಾಚಲ್ಪಟ್ಟ ಹಲ್ಲುಗಳನ್ನು ಕಂಡು ಜನರು ತನ್ನೆಡೆಗೆ ಪುರುಷಾರ್ಥಕ್ಕಾಗಿ ಬರುವರು – ಎಂದು ತನ್ನ ಹಲ್ಲುಗಳನ್ನು ಹೊರಹಾಕಿಕೊಂಡು ಭಕ್ತರಿಗಾಗಿ ನಿರೀಕ್ಷಿಸುತ್ತಿರುವನು.

**೧೪೨. ಚತುರ್ಭುಜಃ – * ನಾಲ್ಕು ಭುಜಗಳುಳ್ಳವನು.**

*** ರಥ, ಕುದುರೆ, ಆನೆ ಹಾಗೂ ಕಾಲಾಳು ಎಂಬ ನಾಲ್ಕು ಬಗೆಯ ಅನ್ನವನ್ನು ಉಂಡವನು.**

*** ತನ್ನ ಉಪಾಸಕರಿಗೆ ಹೊಟ್ಟೆಗೆ ಹಾಗೂ ಬುದ್ಧಿಗೆ ನಾಲ್ಕು ಬಗೆಯ ಅನ್ನವನ್ನು ಒದಗಿಸಿ ಕೊಡುವವನು.**

**ವಿವರಣೆ :** ನಾಲ್ಕು ಭುಜಗಳುಳ್ಳವನು ಎಂಬುದು ಒಂದು ಅರ್ಥ. ದೇವಕಿ ವಸುದೇವರಿಗೆ ದರ್ಶನ ಕೊಡುವಾಗಲೂ ಚತುರ್ಭುಜನಾಗಿಯೇ ಇದ್ದ. ಭಗವಂತ ಅಂತ ಹೇಳಿದ ಕೂಡಲೇ ನಮಗೆ ಶಂಖ, ಚಕ್ರ, ಗದಾ, ಪದ್ಮಗಳನ್ನು ಧರಿಸಿರುವ ನಾಲ್ಕು ಭುಜಗಳದ್ದೇ ನೆನಪು

ಬರುವುದು. ಪ್ರಾಯಶಃ ಭೀಷ್ಮರಿಂದ ಧರ್ಮೋಪದೇಶ ನಡೆಯುವಾಗ ಕೃಷ್ಣ ಎರಡು ಭುಜಗಳುಳ್ಳವನಾಗಿಯೇ ಕೈಕಟ್ಟಿಕೊಂಡು ತೆಪ್ಪಗೆ ಕುಳಿತಿದ್ದಾನೆ. ಆದರೂ ಭೀಷ್ಮರು ಅಂತಾರೆ – ಚತುರ್ಭುಜ ನೀನು. ಅರ್ಜುನನಿಗೆ ವಿಶ್ವರೂಪದ ದರ್ಶನ ಮಾಡಿಸಿ, ಸಾರಥಿಯ ಸ್ಥಾನದಲ್ಲಿ ಕುಳಿತ ಕೃಷ್ಣ ನಾಲ್ಕು ಭುಜದವನಾಗಿದ್ದನೆಂದು ತಿಳಿದು ಬರುವುದು. ಹಾಗಾದರೆ ಶ್ರೀಕೃಷ್ಣ ರಣಾಂಗಣಕ್ಕೆ ಬರುವಾಗ ಚತುರ್ಭುಜನಾಗಿಯೇ ಬಂದಿದ್ದ. ಅವನಿಗೆ ಅಷ್ಟೂ ಉತ್ಸಾಹ ! ಅರ್ಜುನನ ರಥಕ್ಕೆ ಸಾರಥ್ಯ ನಡೆಸುವಲ್ಲಿ, ದುರ್ಯೋಧನನನ್ನು ಕೊಲ್ಲಿಸುವುದರಲ್ಲಿ......ಉತ್ಸಾಹ ! ಅದಕ್ಕಾಗಿ ನಾಲ್ಕು ಕೈಗಳನ್ನು ಹೊತ್ತು ಬಂದ. ಕೃಷ್ಣ ರೂಪವನ್ನು 'ಅರಿ – ಶಂಖ – ವರಾಭಯಾನಿ ದೋರ್ಭಿರ್ದಧಾನಂ.......' – ಎಂದು ಕೃಷ್ಣ ತನ್ನ ನಾಲ್ಕು ಭುಜಗಳಲ್ಲಿ ಚಕ್ರ – ಶಂಖಗಳನ್ನೂ, ವರ ಮುದ್ರೆ ಹಾಗೂ ಅಭಯ ಮುದ್ರೆಗಳನ್ನೂ ಧರಿಸಿರುವನೆಂದು ಧ್ಯಾನಿಸಬೇಕೆಂದು ಹಿರಿಯರು ತಿಳಿಸಿರುವರು. ಮತ್ತೊಂದು ಅರ್ಥ ಹೀಗೆ ಹೇಳಬಹುದು. – ನಾಲ್ಕು ಬಗೆಯ ಭೋಜನವುಳ್ಳವನು. ಕೃಷ್ಣ ಆಗ ತಾನೇ ನಾಲ್ಕು ಬಗೆಯ ಭೋಜನ ಉಂಡು ಭೀಷ್ಮರಲ್ಲಿಗೆ ಬಂದಿದ್ದನು. ಭೀಷ್ಮರು ಕೃಷ್ಣನಲ್ಲಿ ಅಂತಾರೆ – ಉಂಡು ಬಂದಿಯಲ್ಲವೋ? ಕೃಷ್ಣ ತೆಪ್ಪಗೆ ಕುಳಿತಿದ್ದಾನೆ. ಆ ಮೂಲಕ ತನ್ನ ಸಮ್ಮತಿಯನ್ನು ಸೂಚಿಸಿದ. ಆ ಭೋಜನದಲ್ಲಿ ನಾಲ್ಕು ಬಗೆಯ ಅನ್ನ ಇತ್ತಲ್ಲವೋ? – ಎಂದು ಭೀಷ್ಮರು ಮತ್ತೆ ಕೇಳಿದಾಗ ಕೃಷ್ಣ ತೆಪ್ಪಗೆ ಕುಳಿತುಕೊಂಡು ತನ್ನ ಸಮ್ಮತಿ ತೋರಿಸಿದ. ಕೃಷ್ಣ ಉಂಡು ಬಂದಿದ್ದ ಊಟ ಹದಿನೆಂಟು ಅಕ್ಷೌಹಿಣೀ ಸೇನೆ. ಅದನ್ನು ಕಬಳಿಸುದುದೇ ಅವನ ಪಾಲಿಗೆ ಭೋಜನ. ಆ ಸೇನೆಯಲ್ಲಿಯ ರಥ, ಕುದುರೆ, ಆನೆ, ಕಾಲಾಳು – ಈ ನಾಲ್ಕು ಪ್ರಭೇದಗಳೇ ಕೃಷ್ಣನಿಗೆ ನಾಲ್ಕು ಬಗೆಯ ಅನ್ನ. ಕೃಷ್ಣ ಅರ್ಜುನನಿಗೆ ವಿಶ್ವರೂಪದ ದರ್ಶನ ನೀಡಿದಾಗ, ಕೃಷ್ಣನ ಬಾಯಿಯೊಳಗೆ ಭೀಷ್ಮಾದಿಗಳು ಹೋಗುವುದನ್ನು ಅರ್ಜುನ ನೋಡುತ್ತ ಇದ್ದ.

ನಾವೂ ಮನೆಯಲ್ಲಿ ನಾಲ್ಕು ವಿಧದ ಅನ್ನವನ್ನು ಉಣ್ಣುತ್ತೇವೆ. ಭಕ್ಷ್ಯ, ಭೋಜ್ಯ, ಲೇಹ್ಯ, ಪೇಯ – ಎಂಬುದಾಗಿ. ಭಕ್ಷ್ಯ ಎಂದರೆ ಸ್ವೀಟ್, ಅನ್ನ, ಸಾರು, ಸಾಂಬಾರು – ಇವೆಲ್ಲ ಭೋಜ್ಯದಲ್ಲಿ ಸೇರಿದ್ದು. ಪೇಯ ಅಂದರೆ ಕುಡಿಯಲಿಕ್ಕೆ ಇರುವಂತಹದ್ದು. ಲೇಹ್ಯ ನೆಕ್ಕಲಿಕ್ಕೆ ಇರುವ ಚಟ್ನಿ, ಗಿಟ್ನಿ – ಇತ್ಯಾದಿ. ಈ ನಾಲ್ಕು ಬಗೆಯ ಅನ್ನ ಇದ್ದರಷ್ಟೇ ಆ ಭೋಜನ ಪೂರ್ಣ ಎನಿಸುವುದು. ಆದುದರಿಂದಲೇ ಊಟ ಎಂದು ಬಂದಲ್ಲೆಲ್ಲ ನಾಲ್ಕು ವಿಧಗಳು – ಎಂದೇ ಪ್ರಸ್ತಾಪಿಸಲ್ಪಡುವುದು.

ಭೀಷ್ಮರು ಹೇಳ್ತಾರೆ ಕೃಷ್ಣನಲ್ಲಿ – ನೀನು ದುರ್ಯೋಧನನೇ ಕೊನೆಯ ಆಹುತಿಯಾಗಿ ನಾಲ್ಕು ಬಗೆಯ ಅನ್ನವನ್ನು ಉಂಡು ಬಂದವನು.

ಹೀಗೆ ಕೃಷ್ಣನನ್ನು 'ಚತುರ್ಭುಜ' – ಎಂದು ಸ್ತುತಿಸಿದರ ಫಲವಾಗಿ ನಾವು ನಾಲ್ಕು ಬಗೆಯ ಅನ್ನವನ್ನು ಪಡೆಯಬಲ್ಲೆವು. ಹಾಗೆಯೇ ನಾಲ್ಕು ಬಗೆಯ ಅನ್ನವನ್ನು ಉಂಡಿದ್ದಾನೆ

ಎಂದರೆ ಉಂಡು ಜೀರ್ಣಿಸಿಕೊಂಡಿದ್ದಾನೆ ಎಂದೇ ಅರ್ಥ. ಆದುದರಿಂದ ಉಪಾಸನೆಯ ಫಲವಾಗಿ ನಾವೂ ಉಂಡಿದ್ದನ್ನು ಜೀರ್ಣಿಸಿಕೊಳ್ಳಬಲ್ಲೆವು. ಕಾಮಿಕ, ಆರ್ಥಿಕ, ಧಾರ್ಮಿಕ ಹಾಗೂ ಮೋಕ್ಷವಿಷಯಕಗಳಾದ ನಾಲ್ಕು ವಿಧಗಳಾದ ಭಗವಂತನಿಗೆ ಸಂಬಂಧಿಸುವ ಮಾತುಗಳಿಂದ ನಾಲ್ಕು ವಿಧಗಳಾದ ಆಹಾರ ಬುದ್ಧಿಗೆ, ಹಾಗೂ ನಾಲ್ಕು ವಿಧಗಳಾದ ಆಹಾರ ಹೊಟ್ಟೆಗೆ ದೊರಕುವಂತೆ ಮಾಡುವವನು ಚತುರ್ಭುಜನಾಮಕ ಭಗವಂತ.

**ಭ್ರಾಜಿಷ್ಣುರ್ಭೋಜನಂ ಭೋಕ್ತಾ ಸಹಿಷ್ಣುರ್ಜಗದಾದಿಜಃ ।**
**ಅನಘೋ ವಿಜಯೋ ಜೇತಾ ವಿಶ್ವಯೋನಿಃ ಪುನರ್ವಸುಃ॥೧೬॥**

**೧೪೩. ಭ್ರಾಜಿಷ್ಣುಃ – ತನ್ನನ್ನು ತಾನೇ ಬೆಳಗಿಸಿಕೊಳ್ಳುವ 'ಸ್ವಪ್ರಕಾಶ'.**

**ವಿವರಣೆ :** ಭ್ರಾಜಿಷ್ಣು ಶಬ್ದಕ್ಕೆ ಅರ್ಥ ಸ್ವಪ್ರಕಾಶ. ಪ್ರಕಾಶ ಅಂತ ಇಷ್ಟೇ ಅರ್ಥ ಅಲ್ಲ. ಸ್ವಪ್ರಕಾಶ ಎಂದರೆ ಸ್ವಯಂ ಬೆಳಗಿಕೊಂಡೇ ಇರುವವನು. ತಾನು ಬೆಳಗುವುದಕ್ಕೆ ಮತ್ತೊಂದು ಬೆಳಕು ಬೇಕಾಗಿಲ್ಲ. ನಾವು ದೀಪವನ್ನು ಸ್ವಪ್ರಕಾಶ ಎಂದು ಕರೆಯುವೆವು. ಯಾಕೆಂದರೆ ದೀಪ ತನ್ನನ್ನೂ ಬೆಳಗುವುದರಿಂದ ದೀಪದ ಬೆಳಕಿಗೆ ಮತ್ತೊಂದು ದೀಪ ಬೇಕಾಗಿಲ್ಲ. ಮಂತ್ರಾಕ್ಷತೆ ತಟ್ಟೆ ಸ್ವಪ್ರಕಾಶ ಅಲ್ಲ. ಯಾಕೆಂದರೆ ಮಂತ್ರಾಕ್ಷತೆ ತಟ್ಟೆ ಕಾಣಬೇಕಾದರೆ ದೀಪ ಬೇಕು.

ಪತ್ನಿಯ ಸ್ಥಾನಮಾನಗಳಿಂದಾಗಿ ಪತಿ ಬೆಳಗುವಂತಾಗಬಾರದು. ಕೆಲವೊಮ್ಮೆ ಪತ್ನಿ ದೊಡ್ಡ ಅಧಿಕಾರದಲ್ಲಿ ಇರುವಳು. ಪತಿಗೇನೂ ಅಂತಹ ಸ್ಥಾನ ಇರುವುದಿಲ್ಲ. ಆಗ ಪತ್ನಿಯ ಸ್ಥಾನಮಾನಗಳಿಂದಾಗಿ ಪತಿ ಬೆಳಗುವಂತಾಗುತ್ತದೆ ! ಪತಿಗೆ ಸ್ವಯಂಪ್ರಕಾಶ ಇಲ್ಲ ಎಂದಾಗುವುದು. ಅದು ಉಪಯೋಗವಿಲ್ಲ.

ತನ್ನ ಸ್ವಂತಿಕೆಯಿಂದ ತಾನು ಬೆಳಕಿಗೆ ಬರಬೇಕು. ಇದನ್ನು ಸ್ವಪ್ರಕಾಶ ಎಂದು ಕರೆದರು. ಕೃಷ್ಣ ಒಂದೆಡೆ ಬಂದನೆಂದರೆ 'ಅದು ಯಾರು?' ಎಂದು ಯಾರಿಗೂ ಪ್ರತ್ಯೇಕವಾಗಿ ಪರಿಚಯಿಸಿಕೊಡಬೇಕಾಗಿಲ್ಲ. ಅಲ್ಲಿ ಬರುತ್ತಿದ್ದಾನೆ – ಅವನು ಕೃಷ್ಣನೇ – ಎಂದು ಪ್ರತಿಯೊಬ್ಬರೂ ತೀರ್ಮಾನ ಮಾಡಿಯಾಯಿತು. ಪ್ರಾಯಶಃ ದ್ವಾಪರಯುಗದಲ್ಲಿ ಕೃಷ್ಣ ನನ್ನು ಮತ್ತೊಬ್ಬರು ಇನ್ನೊಬ್ಬರಿಗೆ ಪರಿಚಯಿಸಿಕೊಟ್ಟದ್ದೇ ಇಲ್ಲ. ಅವನ ವ್ಯಕ್ತಿತ್ವದಿಂದಲೇ ಪ್ರತಿಯೊಬ್ಬರಿಗೂ ಪರಿಚಿತನಾಗಿದ್ದ. ಕೃಷ್ಣನದ್ದು ಅಂತಹ ವ್ಯಕ್ತಿತ್ವ ಆಗಿರುವುದರಿಂದ ಭೀಷ್ಮರು ಅವನನ್ನು 'ಭ್ರಾಜಿಷ್ಣು' – ಎಂದು ಸ್ತುತಿಸಿರುವರು. ಸ್ವಂತ ವ್ಯಕ್ತಿತ್ವದಿಂದ ಸಮಾಜಕ್ಕೆ ನಿನ್ನ ಪರಿಚಯವನ್ನು ಮಾಡಿಕೊಟ್ಟವನು. ಇನ್ನೊಬ್ಬರಿಂದಾಗಿ ನೀನು ಸಮಾಜದಲ್ಲಿ ಬೆಳಗಿದವನಲ್ಲ. ನಾವೂ ನಮ್ಮ ನಮ್ಮ ವ್ಯಕ್ತಿತ್ವದಿಂದ ಸಮಾಜದಲ್ಲಿ ಬೆಳಗುವಂತಾಗಬೇಕೆಂದಿದ್ದರೆ ಕೃಷ್ಣನನ್ನು 'ಭ್ರಾಜಿಷ್ಣು' ಎಂದು ಉಪಾಸನೆ ನಡೆಸಬೇಕು.

ಸೂರ್ಯನ, ಚಂದ್ರನ, ನಕ್ಷತ್ರಗಳ – ಹೀಗೆ ಯಾವುದೇ ಪ್ರಕಾಶಕ ವಸ್ತುವಿನ ಬೆಳಕು ನನ್ನದ್ದೇ, ನನ್ನ ಎಂಜಲೇ – ಎಂದ ಕೃಷ್ಣ. ಹಾಗಾದರೆ ಇನ್ನೊಂದರಿಂದ ಬೆಳಗದವನು ಹಾಗೂ ಮತ್ತೊಂದನ್ನು ಬೆಳಗಿಸುವವನು ಕೃಷ್ಣ. ತಾನು ಇನ್ನೊಂದರಿಂದ ಬೆಳಗುವುದಿಲ್ಲ; ಮತ್ತೊಂದನ್ನು ಬೆಳಗಿಸದೆ ಇರುವುದಿಲ್ಲ ಅಂತಹವನನ್ನು ಭೀಷ್ಮರು 'ಭ್ರಾಜಿಷ್ಣು' – ಎಂದು ಸ್ತುತಿಸಿರುವರು.

ಪುಟ್ಟ ಶಬ್ದದಲ್ಲಿ ಭ್ರಾಜಿಷ್ಣುನಾಮದ ಅರ್ಥ ಹೇಳಬೇಕೆಂದರೆ 'ಸ್ವಪ್ರಕಾಶ', ತನ್ನನ್ನು ತಾನೇ ಬೆಳಗಿಸಿಕೊಳ್ಳುವವನು.

**೧೪೪. ಭೋಜನಮ್ – ಬದುಕುವುದಕ್ಕೆ ಮುಖ್ಯ ಆಶ್ರಯವಾದ ಭೋಜನ ಕ್ರಿಯೆ ಯಾರಿಗೆ ಸೇರಿದ್ದೋ ಅಂತಹವನು.**

**ವಿವರಣೆ :** ಪ್ರತಿಯೊಂದು ಕ್ರಿಯೆಯಲ್ಲೂ ಮೂರು ಮೂರು ಅಂಶಗಳಿರುವುವು. ಭೋಜನ, ಭೋಕ್ತೃ, ಹಾಗೂ ಭೋಜ್ಯ. ನಾವು ಭೋಕ್ತೃಗಳು; ಅನ್ನ ಭೋಜ್ಯ. ಎಲೆಯಲ್ಲಿ ಇರುವಂತಹದ್ದನ್ನು ಬಾಯಿಯಲ್ಲಿ ಇಡುವ ಕ್ರಿಯೆ ಭೋಜನ. ದ್ರಷ್ಟೃ, ದರ್ಶನ, ದೃಶ್ಯ, ಗಂತೃ, ಗಮ್ಯ, ಗಮನ – ಹೀಗೆ ಪ್ರತಿಯೊಂದು ಕ್ರಿಯೆಗೆ ಸಂಬಂಧಿಸಿಯೂ ಮೂರು ಅಂಶಗಳು ಇರುವವು.

ಭೀಷ್ಮರು ಅಂತಾರೆ –ಕೃಷ್ಣ ನೀನು ಭೋಜನ. ಊಟ ಎಂಬ ಕ್ರಿಯೆ. ಆದರೆ ಭೋಜನ ಶಬ್ದಕ್ಕೆ ಆಶ್ರಯ ಎಂದರ್ಥ. ಯಾಕೆ ಗೊತ್ತೋ? ನಾವು ಬದುಕುವುದು ಅನ್ನ ಇರುವುದರಿಂದಾಗಲೀ ಭೋಕ್ತೃ ಇರುವುದರಿಂದಾಗಲೀ ಅಲ್ಲ; ಮತ್ತೆ ಭೋಜನ ರೂಪ ಕ್ರಿಯೆ ಇರುವುದರಿಂದ. ಅನ್ನ ತುಂಬ ಉಂಟು; ಊಟ ಮಾಡುವವರೂ ಇದ್ದಾರೆ. ಆದರೂ ಅವನು ಸತ್ತ. ಯಾಕೆಂದರೆ ಭೋಜನಕ್ರಿಯೆ ಇಲ್ಲ. ಆದುದರಿಂದ ನಾವು ಬದುಕುವುದು ಭೋಜನ ಕ್ರಿಯೆಯಿಂದ; ಭೋಜನಕ್ರಿಯೆ ನಮಗೆ ಆಶ್ರಯ. ಭೋಜನಕ್ರಿಯೆಯಿಂದಾಗಿ ಬದುಕಿದ್ದೇವೆ.

ಬದುಕಲಿಕ್ಕೆ ಮುಖ್ಯವಾದದ್ದು, ಅನ್ನವೂ ಅಲ್ಲ; ಉಣ್ಣುವವನೂ ಅಲ್ಲ; ಭೋಜನಕ್ರಿಯೆ. ಆದುದರಿಂದ ಭೋಜನಕ್ರಿಯೆ ಭಗವಂತ. ಪ್ರತಿಯೊಂದು ಕ್ರಿಯೆಯಲ್ಲೂ ಮುಖ್ಯ ಅಂತ ಏನಿದೆಯೋ ಅದು ಭಗವಂತನಿಗೆ ಸೇರಿದುದು. ನಮ್ಮ ಲೋಕದಲ್ಲೂ ಒಂದು ವಾಡಿಕೆ ಇದೆ – ಯಾವುದು ಉತ್ತಮ ವಸ್ತುವೋ ಅದಕ್ಕೆ **'ರಾಜಾ ಭಾಜನಮ್'** ಒಬ್ಬನಿಗೆ ಅಪೂರ್ವ ವಸ್ತು ಸಿಕ್ಕಿತೆಂದರೆ ಅದನ್ನು ರಾಜನಿಗೆ ತಲುಪಿಸಬೇಕು. ಪುರಾಣದಲ್ಲಿ ಕೇಳಿದ್ದೇವೆ – ಮತ್ಸ್ಯರಾಜ, ಮತ್ಸ್ಯಗಂಧೀ ಹೇಗೆ ಬಂದರು? ಒಬ್ಬ ಬೆಸ್ತ ಬಲೆ ಹಾಕಿದ. ಒಂದು ದೊಡ್ಡ ಮೀನು ಸಿಕ್ಕಿತು. ಅದನ್ನು ಕೊಯ್ದ. ಕೊಯ್ದಾಗ ಅದರ ಹೊಟ್ಟೆಯಲ್ಲಿ ಇಬ್ಬರು ಮಕ್ಕಳು ಇದ್ದರು. ಮೀನಿನ ಹೊಟ್ಟೆಯಿಂದ ಬಂದ ಮಕ್ಕಳು ಅಪೂರ್ವ ವಸ್ತು. ಆದುದರಿಂದ ರಾಜನಿಗೆ ಸೇರಬೇಕಾದದ್ದೆಂದು ವಸುರಾಜನಿಗೆ ಕೊಂಡು ಹೋಗಿ ಕೊಟ್ಟ.

ಯಾವ ವಸುರಾಜನ ದೇಹದ್ದೇ ಭಾಗವೋ ಆ ವಸುರಾಜನಿಗೇ ಆ ಮಕ್ಕಳು ತಲುಪಿದಂತಾಯಿತು.

ಇದರಿಂದ ಸ್ಪಷ್ಟ – ಪ್ರಧಾನವಸ್ತು ಏನಿದ್ದರೂ ಅದು ದೊಡ್ಡವರಿಗೆ ಸೇರಬೇಕಾದದ್ದು. ಪ್ರಕೃತ – ಮನುಷ್ಯ ಬದುಕಲು ಊಟಕ್ಕಿಂತಲೂ ಮುಖ್ಯ ಭೋಜನ, ಅಂದರೆ ಊಟಮಾಡುವ ಕ್ರಿಯೆ. ಆದ್ದರಿಂದ ಅದೇ ತನಗೆ ಆಶ್ರಯ ಎಂಬ ಆಶಯದಲ್ಲಿ ಭೀಷ್ಮರು ಕೃಷ್ಣನನ್ನು 'ಭೋಜನಮ್'ಎಂದು ಸ್ತುತಿಸಿರುವರು.

**೧೪೫. ಭೋಕ್ತಾ – ಅನ್ನದ ಸಾರಭಾಗವನ್ನು ಉಣ್ಣುವವನು.**

**ವಿವರಣೆ** – ಊಟ ಕ್ರಿಯೆ ನಡೆಯುವುದು. ಅದರಲ್ಲಿ ಉಣ್ಣುವವನು ಯಾರು? ಎಂದು. ಕೆಲವರಿಗೆ ಹಸಿವಿರುವುದು. ಆದರೆ ಭೋಜನ ಮಾಡಲಾಗುವುದಿಲ್ಲ. ಮತ್ತೆ ಕೆಲವರು ಭೋಜನ ಮಾಡಬಹುದು, ಆದರೆ ಅದಕ್ಕೆ ಬೇಕಾದ ಹಸಿವೆಯೇ ಇರುವುದಿಲ್ಲ. ಹೀಗೆ ಏನೇನೋ ಸಮಸ್ಯೆಗಳು. ಅದಕ್ಕೆ ಭೀಷ್ಮರು ಅಂತಾರೆ – ಹೇಗೆ ನೀನು ಭೋಜನ ಕ್ರಿಯೆಯೋ ಹಾಗೆಯೇ ಉಣ್ಣುವವನು ನೀನೇ. ಎನ್ನಲ್ಲಿ ಇದ್ದುಕೊಂಡು ಭೋಜನಕ್ರಿಯೆಯನ್ನು ಮಾಡಿಸುವವನು.

ಎಲೆಯಲ್ಲಿದ್ದ ಅನ್ನವನ್ನು ಕೈಯಿಂದ ತೆಗೆದು ಬಾಯಿಗೆ ಹಾಕಬೇಕು. ಬಾಯಿಯಲ್ಲಿ ಹಲ್ಲುಗಳಿಂದ ಅನ್ನವನ್ನು ಜಗಿಯಬೇಕು. ಅನ್ನವನ್ನು ಜಗಿಯುವ ಗಲಾಟೆಯಲ್ಲಿ ನಾಲಗೆಯನ್ನು ಜಗಿಯಬಾರದು. ಜಗಿದು ಕಂಠಲೊಳಗೆ ಸೇರಿದ ಅನ್ನದ ರಸ ಶ್ವಾಸಕೋಶಕ್ಕೆ ಹೋಗದಂತೆ ನೋಡಿಕೊಳ್ಳಬೇಕು.ಜಠರಕ್ಕೆ ಸೇರಿಕೊಳ್ಳುವಂತೆ ಮಾಡಬೇಕು. ಭೋಜನಪ್ರಕ್ರಿಯೆಯಲ್ಲಿ ಸೇರಿರುವ ಇಷ್ಟೆಲ್ಲ ಸೂಕ್ಷ್ಮ ಕ್ರಿಯೆಗಳನ್ನು ನಡೆಸುವವನು ಭೋಕ್ತಾ ಎನಿಸುವ ಭಗವಂತನೇ ಹೊರತು ಜೀವ ಅಲ್ಲ. ಜೀವನೇ ಈ ಎಲ್ಲ ಕ್ರಿಯೆಗಳಲ್ಲಿ ಸ್ವತಂತ್ರನೆಂದಾದರೆ ಕೆಲವೊಮ್ಮೆ ಅನ್ನವನ್ನು ಜಗಿಯುವಾಗ ತನ್ನ ನಾಲಗೆಯನ್ನೂ ಯಾಕೆ ಕಚ್ಚಿಕೊಳ್ಳುವನು? ಇದರಿಂದ ಸ್ಪಷ್ಟವಾಗುವುದು ಭೋಜನದ ಜಗಿಯುವುದೇ ಮುಂತಾದ ಯಾವ ಕ್ರಿಯೆಯಲ್ಲೂ ಜೀವ ಸ್ವತಂತ್ರನಲ್ಲ. ಕೃಷ್ಣನೇ ಭೋಕ್ತಾ – ಸ್ವತಂತ್ರವಾಗಿ ಉಣ್ಣುವವನು. **'ಯಃ ಸಾರಭಾಗಮನುಭೂಯ ಶಿಷ್ಟಂ ಪ್ರಯಚ್ಛತಿ ಜೀವೇಭ್ಯಃ'** – ಮನೆಯಲ್ಲಿ ಮಾಡಿದ ಅನ್ನ, ಭಕ್ಷ್ಯ, ಭೋಜ್ಯಗಳನ್ನೆಲ್ಲ ದೇವರ ಮುಂದೆ ಇಡುವೆವು. ಅದಕ್ಕೆ ತುಳಸಿ ಹಾಕಿ ಒಂದು ಮಂತ್ರ ಹೇಳ್ತೇವೆ – ಪೂರ್ಣ ಹೇಳುವುದು ಬೇಡ. ಇಷ್ಟು ಚಿಂತನೆಗೆ ಬೇಕಾಗುವಷ್ಟು ಮಂತ್ರಭಾಗವನ್ನಾದರೂ ಹೇಳೋಣ. ಇದರ ಸಾರಭಾಗವನ್ನು ಉಣ್ಣು.ಅಸಾರ ಭಾಗವನ್ನು ನನಗೆ ಕೊಡು. ಇಷ್ಟು ಕೇಳಿಕೊಳ್ಳುವುದೇ ದೇವರನ್ನು ಊಟ ಮಾಡಿಸುವುದು 'ಯಃ ಸಾರಭಾಗಂ.......' ಇತ್ಯಾದಿಯಾಗಿ ದೇವರೆದುರು ನಿವೇದಿಸಿಕೊಳ್ಳಬೇಕು. ಹಟ್ಟಿಯಿಂದ ತಂದ ಹಸುವಿನ ಹಾಲನ್ನು ಹಾಗೆಯೇ ಕಾಸಿ ಮಕ್ಕಳಿಗೆ ಕೊಡುವುದಿಲ್ಲ. ಯಾಕೆಂದರೆ ಅಷ್ಟು ದಪ್ಪದ ಹಾಲನ್ನು ಮಕ್ಕಳಿಗೆ

ಜೀರ್ಣಿಸಿಕೊಳ್ಳಲಾಗುವುದಿಲ್ಲ. ಅದಕ್ಕಾಗಿ ಅಂತಹ ದಪ್ಪದ ಹಾಲು ನಮಗೆ ಜೀರ್ಣಿಸಿಕೊಳ್ಳಲು ಆಗುವುದೆಂದು ನಾವು ಸ್ವಲ್ಪ ಭಾಗ ತೆಗೆದಿಟ್ಟುಕೊಂಡು, ಉಳಿದ ಭಾಗಕ್ಕೆ ನೀರು ಬೆರೆಸಿ ಮಕ್ಕಳಿಗೆ ಜೀರ್ಣಿಸಿಕೊಳ್ಳಲು ಯೋಗ್ಯವಾಗುವ ಅಸಾರ ಹಾಲನ್ನಷ್ಟೇ ಅವುಗಳಿಗೆ ನೀಡುವೆವು. ಅದರಂತೆ ದೇವರ ಎದುರು ಇಟ್ಟ ನೈವೇದ್ಯದಲ್ಲಿ ನಮಗೆ ಜೀರ್ಣಿಸಿಕೊಳ್ಳಲಾಗದ ಸಾರಭಾಗವನ್ನು ದೇವರು ಸ್ವೀಕರಿಸಿ, ನಮಗೆ ಜೀರ್ಣಿಸಿಕೊಳಲು ಯೋಗ್ಯವೆನಿಸುವ ಅಸಾರ ಭಾಗವನ್ನಷ್ಟೇ ನಮಗೆ ನೀಡುವನೆಂಬ ಅನುಸಂಧಾನವೇ ದೇವರಿಗೆ ನೈವೇದ್ಯ ಸಮರ್ಪಣೆಯ ಮುಖ್ಯಾಂಗ.

ಸಾಕಷ್ಟು ಭಕ್ಷ್ಯಭೋಜಾದಿಗಳನ್ನು ಮಾಡಿ 'ಏನೂ ಮಾಡಿಲ್ಲ' ಅಂತ ಹೇಳುತ್ತ ಮನುಷ್ಯರನ್ನು ಭೋಜನದಲ್ಲಿ ಸಂತೋಷಪಡಿಸಬೇಕಾದರೆ, ಭಗವಂತನಿಗೆ ಒಂದು ತುಂಡು ಬೆಲ್ಲ, ಸ್ವಲ್ಪ ನೀರು ಇಟ್ಟು 'ಅನ್ನಾನಿ ಪಾಯಸಮುಖಾನಿ ವಿಶುದ್ಧಿಮಂತಿ........' ಇತ್ಯಾದಿಯಾಗಿ ಅನ್ನಾದಿ ಭಕ್ಷ್ಯಭೋಜ್ಯಾದಿಗಳನ್ನಾಗಿ ಸ್ವೀಕರಿಸು – ಎಂದು ನಿವೇದಿಸಿಕೊಂಡು ಅವನನ್ನು ಸಂತೋಷಪಡಿಸಬೇಕಾದದ್ದು. ಆದ್ದರಿಂದ ಮನುಷ್ಯನಿಗಿಂತ ದೇವರನ್ನು ಸಂತೋಷಪಡಿಸುವುದೇ ಸುಲಭ. ದೇವರ ಮುಂದೆ ಬೆಲ್ಲ ನೀರು ಇಟ್ಟು ಇದರ ಸಾರಭಾಗ ನೀನು ತಿಂದು ಎನಗೆ ಜೀರ್ಣಿಸಿಕೊಳ್ಳಲಾಗುವ ಭಾಗವನ್ನು ನೀಡು ಪ್ರಾರ್ಥಿಸಿಕೊಳ್ಳಬೇಕಷ್ಟೇ.

ಆದುದರಿಂದ ಆಹಾರದಲ್ಲಿ ಸಾರಭಾಗವನ್ನು ಯಾರು ಸ್ವೀಕರಿಸುವರೋ ಅವರೇ ನಿಜವಾಗಿ ಉಣ್ಣುವವರಾದುದರಿಂದ ಕೃಷ್ಣನೇ ನಿಜವಾಗಿ 'ಭೋಕ್ತಾ'. ಅಸಾರಭಾಗವನ್ನು ಉಣ್ಣುವವರನ್ನು ಭೋಕ್ತ್ರಗಳೆಂದು ಕರೆಯುವ ವಾಡಿಕೆಯೇ ಇಲ್ಲ. ಊಟ ಆದ ಮೇಲೆ ಎಸೆದ ಎಂಜಲೆಲೆಗಳನ್ನು ನಾಯಿ, ಹಂದಿಗಳು ತಿಂದರೆ ಅವುಗಳನ್ನು ಭೋಕ್ತ್ರಗಳೆಂದು ಯಾರೂ ಪರಿಗಣಿಸುವುದಿಲ್ಲ ತಾನೇ? ಆದ್ದರಿಂದ ಅಸಾರ ಭಾಗದ ಭೋಕ್ತ್ರಗಳಾದ ನಾವು ನಿಜವಾಗಿ ಭೋಕ್ತ್ರಗಳೇ ಅಲ್ಲ. ಸಾರಭಾಗವನ್ನು ಉಣ್ಣುವ, ಉಂಡು ಜೀರ್ಣಿಸಿಕೊಳ್ಳುವ ಭಗವಂತನೇ ಭೋಕ್ತಾ.

ಹೀಗೆ 'ಭೋಜನ'ವೂ ದೇವರು; 'ಭೋಕ್ತ್ರ'ವೂ ದೇವರು.ಉಣ್ಣಲ್ಪಡುವ ಅನ್ನವೂ ದೇವರೇ ಎಂದು ಮುಂದೆ 'ಅನ್ನಮನ್ನಾದ ಏವ ಚ' ಎಂಬಲ್ಲಿ ಹೇಳಲಾಗುವುದು.

**೧೪೬. ಸಹಿಷ್ಣುಃ – * ಅತ್ಯಂತ ಸಹನೆಯನ್ನು ಹೊಂದಿರುವವನು.**
*** ತಾಳ್ಮೆಯ ಸ್ವರೂಪಿ.**

**ವಿವರಣೆ** : ಸಹಿಷ್ಣು ಶಬ್ದಕ್ಕೆ ಸಹನೆವುಳ್ಳವ ಎಂಬ ಅರ್ಥ ನಮಗೆ ಗೊತ್ತು. ಪ್ರಾಯಶಃ ದೇವರಿಗೆ ಇರುವಷ್ಟು ತಾಳ್ಮೆ, ಬೇರೆ ಯಾರಿಗೂ ಇಲ್ಲ ಎಂದು ಹೇಳಬಹುದು. ತಾಳ್ಮೆಯೂ ಒಂದು ಗುಣ. ಅದರ ಪರಾಕಾಷ್ಠೆ ದೇವರಲ್ಲೇ ಇರುವುದು. ದೇವರಿಗಿರುವ ತಾಳ್ಮೆ ಮತ್ತೊಬ್ಬರಲಿಲ್ಲ. ಭಕ್ತರು ಏನೇ ತಪ್ಪು ಮಾಡಲಿ ಭಗವಂತ ಅದನ್ನು ಕ್ಷಮಿಸ್ತಾನೆ. ಶಿಶುಪಾಲನ

ನೂರು ಅಪರಾಧಗಳನ್ನು ಸಹಿಸಿದ್ದಾನೆ. ತೆಪ್ಪಗಿರಬೇಕೆಂದು ಸಮಾಜಕ್ಕೆ ಪಾಠ ಕಲಿಸಿದವನೇ ಕೃಷ್ಣ. ಎಲ್ಲಿ ತಾಳಬೇಕೋ ಅಲ್ಲಿ ತಾಳುವುದೇ ನಿನ್ನ ಗುಣ. **'ತಾಳುವಿಕೆಗಿಂತ ಅನ್ಯ ತಪವು ಇಲ್ಲ' 'ತಾಳಿದವನು ಬಾಳಿಯಾನು'** – ಮುಂತಾದ ಗಾದೆಗಳು ಹೊಗಳುತ್ತಿರುವ ತಾಳ್ಮೆಯ ಮಹತ್ವವನ್ನು ಸಾರಿದವನೇ ಕೃಷ್ಣ. ಅದಕ್ಕೆ ಅವನಿಗೆ 'ತಾಳ್ಮೆ' ಎಂದೇ ಹೆಸರು. ಸಹಿಷ್ಣು ಎಂಬುದಕ್ಕೆ ತಾಳ್ಮೆ ಎಂದೇ ಅರ್ಥ. ತುಂಬ ಸಿಟ್ಟು ಉಳ್ಳವರನ್ನು 'ಕೋಪ' ಎಂದೇ ಕರೆಯುವಂತೆ ಭಗವಂತ ತುಂಬ ತಾಳ್ಮೆಯನ್ನು ಹೊಂದಿದವನಾದುದರಿಂದ 'ತಾಳ್ಮೆ'ಎಂದೇ ಅವನನ್ನು ಕರೆಯಲಾಗಿದೆ.

**೧೪೭. ಜಗದಾದಿಜಃ – ಜಗತ್ತಿನಲ್ಲಿ ಮೊತ್ತಮೊದಲು ಬಂದವನು.**

**ವಿವರಣೆ** : ಜಗತ್+ಆದಿ+ಜ – ಹೀಗೆ ಮೂರು ಶಬ್ದಗಳು ಸೇರಿ ಒಂದು ನಾಮ ಆದದ್ದು. ಈ ಲೋಕಕ್ಕೆ ಮೊದಲು ಬಂದವನು ಎಂದರ್ಥ.ಶೇಷನ ಮೇಲೆಯೋ, ವಟಪತ್ರದ ಮೇಲೆಯೋ ರಾತ್ರಿಯಲ್ಲಿ ಅಂದರೆ ಪ್ರಲಯಕಾಲದಲ್ಲಿ ಮಲಗಿದವನು ನೀನು. ಬೆಳಗಾಗುತ್ತ ಬಂತು. ಸೃಷ್ಟಿ ಮಾಡಬೇಕೆಂದು ತೋರಿತು. ಎಲ್ಲರನ್ನು ಎಬ್ಬಿಸೋಣ ಅಂತ ತೋರಿತು. ಮಲಗಿದವರನ್ನು ಎಬ್ಬಿಸುವ ಕೆಲಸ ದೇವರದ್ದೇ. ಅದಕ್ಕಾಗಿಯೇ ಬೆಳಿಗ್ಗೆ ೫ ಗಂಟೆಗೆ ಸುಪ್ರಭಾತ ಹಾಕುವುದು. ಮಲಗಿದವರೆಲ್ಲ ಏಳಲಿ ಎಂದು. ಮೊದಲು ಕೃಷ್ಣ ದೇವರು ಏಳುವುದು. ಅದರಿಂದಾಗಿ ಅಕ್ಕಪಕ್ಕದವರೆಲ್ಲ ಏಳಲಿಕ್ಕೆ ಪ್ರಾರಂಭಿಸುವರು.

ಹೀಗೆ ಸೃಷ್ಟಿಯ ಸುಪ್ರಭಾತದಲ್ಲಿ ಎಲ್ಲರನ್ನೂ ಎಬ್ಬಿಸುವುದಕ್ಕಾಗಿ ದೇವರು ಮೊದಲು ತಾನು ಎದ್ದು ಬಂದ. ಹಾಗೆ ಎದ್ದು ಬಂದ ರೂಪವೇ 'ಪುರುಷ'. ನಾರಾಯಣರೂಪದಿಂದ ಮಲಗಿದ ಪರಮಾತ್ಮ ಪುರುಷರೂಪದಿಂದ ಎದ್ದು ಬರುವನು. ಜಗತ್ತಿನ ಸೃಷ್ಟಿಗೆ ಅಡಿ ಇಡುವಾಗ ಮೊದಲು ಬರುವವನು ಭಗವಂತ. ಎಲ್ಲರಿಗಿಂತ ಹಿರಿಯ, ಮೊದಲಿಗ ಎಂಬುದು ಒಟ್ಟು ಅಭಿಪ್ರಾಯ. ಚತುರ್ಮುಖನಿಗಿಂತಲೂ ಮೊದಲು ಬಂದವನು. ಆದುದರಿಂದ ದೇವರು ಯಾರಿಂದ ಬಂದ? ಎಂಬ ಪ್ರಶ್ನೆಗೆ ಅವಕಾಶ ಇಲ್ಲ. ಯಾರೂ ಇಲ್ಲದಿದ್ದಾಗ ತನ್ನಿಂದಲೇ ಹೊರಬಂದವನು ಅವನು.

**೧೪೮. ಅನಘಃ – ಎಂದೆಂದೂ ಪಾಪದ ಸಂಪರ್ಕಕ್ಕೆ ಒಳಗಾಗದವನು.**

**ವಿವರಣೆ** : ಅಘ ಎಂದರೆ ಪಾಪ. ಅನಘ ಎಂದರೆ ಪಾಪ ರಹಿತ. ನಿನ್ನೆಯವರೆಗೆ ಪಾಪಗಳಿದ್ದು, ಇನ್ನು ಮುಂದೆ ಪಾಪಗಳಿಲ್ಲ ಎಂದರೂ ಅವನನ್ನು ಪಾಪರಹಿತ ಎನ್ನಬಹುದು. ಇನ್ನು ಮುಂದೆ ಪಾಪಗಳು ಸಂಭವಿಸುವವಾದರೂ ಇದುವರೆಗೆ ಪಾಪಗಳಿಲ್ಲ ಎಂದರೂ ಅವನನ್ನು ಪಾಪರಹಿತ ಎನ್ನಬಹುದು. ಇದುವರೆಗೂ ಪಾಪಗಳಿಲ್ಲ. ಇನ್ನೂ ಮುಂದೆಯೂ ಪಾಪಗಳಿಲ್ಲ. ಈಗಲೂ ಪಾಪಗಳಿಲ್ಲ – ಅಂತಹವನು ಪಾಪರಹಿತ. ಭಗವಂತ ಈ ತೆರನಗಿ ಪಾಪರಹಿತ. ಅಂದರೆ ಅವನಲ್ಲಿ ಇದುವರೆಗೂ ಪಾಪಗಳಿಲ್ಲ. ಇನ್ನು ಮುಂದೆಯೂ ಪಾಪ ಬರುವಂತಿಲ್ಲ. ಈಗಲೂ ಪಾಪಗಲಿಲ್ಲ. ಅಂದರೆ ಇದನ್ನು

ಪಾರಿಭಾಷಿಕವಾಗಿ ' ಪಾಪಾತ್ಯಂತಾಭಾವವುಳ್ಳವನು' ಎಂದು ಗುರುತಿಸಲಾಗುವುದು. ಭೂತ, ಭವಿಷ್ಯದ್, ವರ್ತಮಾನ – ಹೀಗೆ ತ್ರಿಕಾಲಗಳಲ್ಲೂ ಪಾಪದ ಸಂಬಂಧಕ್ಕೆ ಒಳಗಾಗದವನು. ಪಾಪ ಮತ್ತು ದೇವರಿಗೆ ಹಗಲು ರಾತ್ರಿಗಳಿಗಿರುವಷ್ಟು, ಎಣ್ಣೆ–ಸೀಗೆಗಳಿಗಿರುವಷ್ಟು ಅಂತರ!

ಹೀಗೆ ಭಗವಂತನಿಗೆ ಪಾಪದ ಸಂಪರ್ಕವೇ ಆಗಲು ಸಾಧ್ಯವಿಲ್ಲ ಎಂಬ ಅಭಿಪ್ರಾಯದಲ್ಲಿ 'ಅನಘ' ಎಂದು ಅವನನ್ನು ಕರೆಯಲಾಗಿದೆ.

**೧೪೯. ವಿಜಯಃ – ವ್ಯಕ್ತಿಗಳಿಗೆ ಉತ್ಕರ್ಷವನ್ನು ಕೊಡುವವನು.**

**ವಿವರಣೆ** : ವಿಜಯ ಅಂದರೆ ಉತ್ಕರ್ಷ. ದೈತ್ಯರ ಗುಂಪಲ್ಲಿ ಪ್ರಹ್ಲಾದ ವಿಜಯ. ಮರಗಳ ಗುಂಪಲ್ಲಿ ಅಶ್ವತ್ಥ ವಿಜಯ. ಗಿಡಗಳ ಗುಂಪಲ್ಲಿ ತುಳಸಿ ವಿಜಯ. ಜಲಾಶಯಗಳ ಗುಂಪಲ್ಲಿ ಗಂಗೆ ವಿಜಯ. ಋಷಿಗಳ ಗುಂಪಲ್ಲಿ ವ್ಯಾಸರು ವಿಜಯ. ಹೀಗೆ ವಸ್ತುಗಳನ್ನು ಆಯಾ ಅಸಾಮಾನ್ಯ ಧರ್ಮದಿಂದ ಬೇರ್ಪಡಿಸಿ ಬೇರೆ ಬೇರೆ ಗುಂಪನ್ನಾಗಿ ಪರಿಗಣಿಸಿದರೆ, ಆಯಾ ಗುಂಪಿನಲ್ಲಿ ಮಹತ್ವ ಪಡೆದ ವ್ಯಕ್ತಿ 'ವಿಜಯ'. – ಎಂದು ಗುರುತಿಸಲು ಯೋಗ್ಯವಾದುದು. ಭಗವದ್ಗೀತೆಯಲ್ಲಿ 'ಪ್ರಹ್ಲಾದಶ್ಚಾಸ್ಮಿ ದೈತ್ಯಾನಾಮ್' ಎಂಬುದಾಗಿ ದೈತ್ಯರಲೆಲ್ಲ ಪ್ರಹ್ಲಾದ ಶ್ರೇಷ್ಠನೆನಿಸಲು, ಅವನಲ್ಲಿ 'ವಿಜಯ' ನಾಗಿ ತಾನು ಇರುವೆನೆಂದು ಗೀತಾಚಾರ್ಯ ತಿಳಿಸಿರುವನು. ಶನಿವಾರ ಬಂತು ಎಂದರೆ ಕನಸಿನಲ್ಲೂ ಅಶ್ವತ್ಥಮರ ಬರಲು ಪ್ರಾರಂಭಿಸುವುದು. ಅಶ್ವತ್ಥಕ್ಕೆ ಪ್ರದಕ್ಷಿಣೆ ಬಂದದ್ದೇ ಬಂದದ್ದು. ಬೇರೆ ಯಾವ ಮರಕ್ಕೂ ಅಷ್ಟು ಗೌರವ ಸಲ್ಲಿಸದೆ, ಅಶ್ವತ್ಥಕ್ಕೆ ಮಾತ್ರ ಅಷ್ಟು ಮಾನ್ಯತೆ ನೀಡಲು ಕಾರಣ ಕೃಷ್ಣ ಅಂದ – ನಾನು ಅಶ್ವತ್ಥದಲ್ಲಿ ಉತ್ಕರ್ಷರೂಪದಲ್ಲಿ ನೆಲೆಸಿರುವೆನು.

ಹೀಗೆಯೇ ತುಳಸಿ, ಗೋವು – ಮುಂತಾದವುಗಳಲ್ಲೂ ಭಗವಂತನು ಉತ್ಕರ್ಷರೂಪದಿಂದ ಸೇರಿಕೊಂಡದ್ದರಿಂದ ಅವುಗಳಿಗೆ ಮಹತ್ವ ಬಂದಿದೆ. ಹೀಗೆ ಪ್ರಹ್ಲಾದ, ಅಶ್ವತ್ಥ, ತುಳಸಿ – ಇತ್ಯಾದಿಗಳ ಉತ್ಕರ್ಷಕ್ಕೆ ಕಾರಣನಾದವನು ಭಗವಂತ.

**೧೫೦. ಜೇತಾ – ಎಂದೂ ಸೋಲದೆ ಗೆಲ್ಲುವವನು.**

**ವಿವರಣೆ** : ಜೇತಾಶಬ್ದಕ್ಕೆ ಗೆಲ್ಲುವವನು ಎಂದರ್ಥ. ಗೆಲ್ಲುವವರು ತುಂಬ ಜನರಿರುವರು. ಆದರೆ ಸೋಲಿಲ್ಲದೆ ಗೆಲ್ಲುವವನೆಂದರೆ ಇವನೊಬ್ಬನೇ. ಉಳಿದವರೆಲ್ಲ ಒಮ್ಮೆ ಗೆದ್ದರೆ ಮತ್ತೊಮ್ಮೆ ಸೋಲುವುದೂ ಇದೆ. ನಿಜವಾಗಿ ಎಂದೂ ಸೋಲದೆ ಗೆದ್ದವನನ್ನೇ ಗೆದ್ದ ಎಂದು ಕರೆಯಬೇಕು. ಸಮಾಜದಲ್ಲಿ ಹಾಗಿಲ್ಲ. ಆದರೆ ಶಾಸ್ತ್ರದಲ್ಲಿ ಎಂದೆಂದೂ ಸೋಲದೆ ಗೆಲ್ಲುವ ಭಗವಂತನನ್ನೇ 'ಜೇತಾ' – ಎಂದು ಕರೆಯಲಾಗುವುದು.

ಕೃಷ್ಣ ಎಂದೂ ಸೋತದ್ದಿಲ್ಲ. ವಾಚಿಕ ಯುದ್ಧದಲ್ಲಾಗಲೀ, ದೈಹಿಕ ಯುದ್ಧದಲ್ಲಾಗಲೀ ಎಂದೂ ಸೋಲದೆ ಗೆದ್ದಿರುವವನು ಶ್ರೀಕೃಷ್ಣ.

ಪ್ರತಿಯೊಂದು ಹಂತದಲ್ಲೂ ನಮಗೆ ಗೆಲುವು ಬರಬೇಕೋ, ಯಾವ ಕಾರ್ಯಕ್ರಮದಲ್ಲಿ ತೊಡಗಿದರೂ ನಮಗೆ ಗೆಲುವು ಬರಬೇಕೋ ಹಾಗಾದರೆ ಭಗವಂತನನ್ನು 'ಜೇತಾ' ಎಂದು ಉಪಾಸನೆ ಮಾಡಬೇಕು.

**೧೫೧. ವಿಶ್ವಯೋನಿಃ – ಲಕ್ಷ್ಮೀದೇವಿಗೂ ಕಾರಣನಾಗಿರುವವನು.**

**ವಿವರಣೆ :** ವಿಶ್ವ ಎಂದು ಲಕ್ಷ್ಮಿಗೆ ಹೆಸರು. 'ವಿಶ್ವಂ ವಿಷ್ಣುರ್ವಷಟ್ಕಾರ.........' ಎಂದು ಆರಂಭದಲ್ಲಿ ನಾವು ವಿಶ್ವ ಎಂದರೆ ದೇವರು ಎಂದು ನೋಡಿದ್ದೆವು. ದೇವರನ್ನು ಬಿಟ್ಟರೆ ವಿಶ್ವ ಎನಿಸುವವಳು ಲಕ್ಷ್ಮೀದೇವಿ. ಅನೇಕ ವ್ಯಕ್ತಿಗಳಿಗಿರುವ ಮನೆಯಲ್ಲಿ ಯಜಮಾನ ಯಾರು? ಎಂದು ವಿಚಾರಿಸಿದಾಗ ಒಬ್ಬ ವ್ಯಕ್ತಿಯನ್ನು ತೋರಿಸಲಾಗುವುದು. ಅವನನ್ನು ಬಿಡಿ, ಆ ಮೇಲೆ ಯಾರು ಯಜಮಾನರು? – ಎಂದಾಗ ಮತ್ತೊಬ್ಬಳನ್ನು ತೋರಿಸಲಾಗುವುದು. ಹಾಗಾದರೆ ಅವಳನ್ನು 'ಯಜಮಾನ್ತಿ' – ಎಂದು ಕರೆಯುವುದುಂಟು ತಾನೇ? ಅವನನ್ನು ಬದಿಗಿಟ್ಟರೆ ಮನೆಯ ಒಡೆತನ ಅವಳದ್ದೇ ಆದುದರಿಂದ ಅವಳೂ 'ಯಜಮಾನಿನಿ' ಎನಿಸುವಳು. ಅದರಂತೆ ದೇವರನ್ನೂ ಸೇರಿಸಿ ಎಲ್ಲರಲ್ಲಿ ವಿಶ್ವ ಯಾರು ಎಂದಾಗ ದೇವರೇ ವಿಶ್ವ ಎನಿಸಬಹುದಾದರೂ, ದೇವರನ್ನು ಬದಿಗಿಟ್ಟು ಉಳಿದವರಲ್ಲಿ ವಿಶ್ವ ಯಾರು ಎಂದಾಗ ಲಕ್ಷ್ಮೀದೇವಿಯೇ ವಿಶ್ವ ಎನಿಸುವಳು. ಅಸ್ವತಂತ್ರರ ಗುಂಪಿನಲ್ಲಿ ವಿಶ್ವ ಯಾರ ಕೈಯಲ್ಲಿ ಉಂಟೆಂದು ವಿಚಾರ ಮಾಡಿದಾಗ ಲಕ್ಷ್ಮಿಯೇ ಮೊದಲು ಬರುವವಳು.

ನಾವೇನೋ ಇವತ್ತು ನಾರಾಯಣನನ್ನೂ ಬಿಟ್ಟು ಲಕ್ಷ್ಮಿಯೇ ದೊಡ್ಡವಳೆಂದು ಉಪಾಸನೆ ಮಾಡ್ತೇವೆ ಬಿಡಿ ! ಅದನ್ನು ಲಕ್ಷ್ಮೀದೇವಿ ಒಪ್ಪುವಳೋ ಬಿಡುವಳೋ ಬೇರೆ ವಿಚಾರ. ಶ್ರೀಸೂಕ್ತದಲ್ಲಿ **'ವಿಶ್ವಪ್ರಿಯೇ ವಿಷ್ಣುಮನೋಽನುಕೂಲೇ......'**ಎಂದು ಲಕ್ಷ್ಮೀದೇವಿಯುನ್ನು ನಾವು ಸ್ತುತಿಸುವೆವು. ನೀನು ಭಗವಂತನ ಮನಸ್ಸಿಗೆ ಅನುಕೂಲಳಾಗಿರುವವಳು. ಆದುದರಿಂದ ವಿಶ್ವಕ್ಕೆ ಪ್ರಿಯಳಾಗಿರುವಿ ಎಂದು. ಲಕ್ಷ್ಮೀನಾರಾಯಣರ ದೇವಸ್ಥಾನಕ್ಕೆ ಹೋಗಿ ಮೊದಲು ಲಕ್ಷ್ಮಿಯನ್ನು ಕಾಣುವೆವು. ಲಕ್ಷ್ಮಿ ನಮ್ಮನ್ನು ನೋಡುವಳೋ ಎಂದು. ಆದರೆ ಅವಳು ಬಂದವನಿಗೆ ಫಲ ಕೊಡಬೇಕೋ ಬೇಡವೋ ಎಂದು ಕೇಳಲು ಭಗವಂತನ ಮುಖ ನೋಡುವಳು ! ಸ್ವಾದಿಯ ಬಳಿ ಒಂದು ಊರಿದೆ. ಅಲ್ಲಿ ಶ್ರೀವಾಸರಾಜರ ವೃಂದಾವನವಿದೆ. ಅಲ್ಲಿ ಇರುವ ಲಕ್ಷೀನಾರಾಯಣರ ಪ್ರತಿಮೆಯನ್ನು ಕಂಡರೆ ಸ್ಪಷ್ಟವಾಗುವುದು – ಲಕ್ಷ್ಮೀದೇವಿ ಶ್ರೀಮನ್ನಾರಾಯಣನನ್ನೇ ಕಾಣುತ್ತ 'ವಿಷ್ಣು ಮನೋನುಕೂಲ' ಳಾಗಿರುವಳೆಂದು. ತನಗೆ ಸಲ್ಲಿಸಿದ ಆರಾಧನೆಯನ್ನು ತೆಗೆದುಕೊಳ್ಳಬೇಕೋ ಬೇಡವೋ ಎಂದು ಲಕ್ಷ್ಮೀದೇವಿ ನಾರಾಯಣನಲ್ಲಿ ಕೇಳುವಳು. ಹೀಗೆ ನಾರಾಯಣನನ್ನು ಸೇರಿಕೊಂಡ ವಿಶ್ವದಲ್ಲಿ ನಾರಾಯಣನೇ ವಿಶ್ವ, ಅವನನ್ನು ಹೊರತು ಪಡಿಸಿದ ವಿಶ್ವದಲ್ಲಿ ಲಕ್ಷ್ಮೀದೇವಿ ವಿಶ್ವ

ಎನಿಸುವಳು.

ಆದರೆ ಲಕ್ಷ್ಮೀದೇವಿ ವಿಶ್ವ ಎನಿಸುವಷ್ಟು ದೊಡ್ಡದಾಗಿರಲು 'ಯೋನಿ' ಅಂದರೆ ಕಾರಣ ನೀನು. ಸಮಸ್ತ ವಿಶ್ವವನ್ನು ತನ್ನ ವಶದಲ್ಲಿಟ್ಟುಕೊಂಡಿರುವುದರಿಂದ ತಾನೇ ಆಕೆ ವಿಶ್ವ ಎನಿಸುವುದು? ಹಾಗೆ ಲಕ್ಷ್ಮೀದೇವಿ ಸಮಸ್ತ ವಿಶ್ವವನ್ನು ತನ್ನ ವಶದಲ್ಲಿಟ್ಟುಕೊಳ್ಳಲು ಕಾರಣ ನೀನು. ಆದುದರಿಂದ ನೀನು 'ವಿಶ್ವಯೋನಿ' ಎಂದು ಭೀಷ್ಮರು ಕೃಷ್ಣನನ್ನು ಸ್ತುತಿಸಿರುವರು.

ಪ್ರಾಯಶಃ ಕೃಷ್ಣನನ್ನು ಲಕ್ಷ್ಮೀಪತಿ ಎಂಬ ಅರ್ಥದಲ್ಲಿ ವಿಶ್ವಯೋನಿ ಎಂದು ಕರೆದಿರುವ ಹಿನ್ನೆಲೆ ಹೀಗೆ ಇರಲೂಬಹುದು. **'ಚೋರನೆನಿಸಿಕೊಳಲೇಕೋ ಲಕ್ಷೀನಾರಾಯಣನೆಂಬ ಬಿರುದು ನಿನಗ್ಯಾಕೋ......'** ಎಂದು ದಾಸರು ಹಾಡಲ್ಲಿ ಸ್ತುತಿಸಿರುವಂತೆ, ಲಕ್ಷೀಪತಿ ಎಂಬ ಬಿರುದು ಇರುವಾಗ ಶ್ರೀಕೃಷ್ಣ ಬಾಲ್ಯದಲ್ಲಿ ಚೋರ, ಕಳ್ಳ ಎಂದೆನಿಕೊಂಡಿರುವುದಾದರೂ ಹೇಗೆ? ಯಾರು ಅಲಕ್ಷ್ಮೀಪತಿಯೋ ಅವನು ಕಳ್ಳತನ ಮಾಡಬೇಕು. ಇವನು ಲಕ್ಷ್ಮೀಪತಿ ಎಂದ ಮೇಲೆ ಕಳ್ಳತನ ಕೂಡುವುದೋ?

ಎಂಬುದಾಗಿ ಲಕ್ಷ್ಮೀಪತಿಯಾದ ನಿನಗೆ ಬಾಲ್ಯದ ಚೌರ್ಯಾದಿಗಳು ಲಗಾವು ಆಗುವುದಿಲ್ಲ – ಎಂದು ಸೂಚಿಸುವುದಕ್ಕಾಗಿ 'ವಿಶ್ವಯೋನಿ' ಎಂದು ಕೃಷ್ಣನನ್ನು ಕರೆದಿರಬಹುದು.

**೧೫೨. ಪುನರ್ವಸುಃ – ದೇವತೆಗಳಲ್ಲಿ ಬೇರೆ ಬೇರೆ ರೂಪದಿಂದ ಪುನಃ ಪುನಃ ನೆಲೆಸುತ್ತಿರುವವನು.**

**ವಿವರಣೆ** : ಇಲ್ಲಿ ಪುನರ್ವಸು ಎಂದರೆ ನಕ್ಷತ್ರ ಅಲ್ಲ. ಮತ್ತೆ ಪುನಃ ಪುನಃ ವಸುಃ ವಸತಿ ಇದ್ದಾನೆ; ಪುನಃ ಪುನಃ ಇದ್ದಾನೆ. ಯಾರಲ್ಲಿ? ದೇವತೆಗಳಲ್ಲಿ, ದೇವತೆಗಳು ಯಾವುದೋ ಒಂದು ಕೆಲಸ ಮಾಡಲು ತೊಡಗಿದಾಗ ದೇವರು ತನ್ನ ಒಂದು ರೂಪದಿಂದ ಅವರಲ್ಲಿ ನೆಲೆಸುವನು.ಆ ಕೆಲಸ ಮುಗಿಯಿತೆಂದಾಗ ಆ ರೂಪವನ್ನು ಉಪಸಂಹಾರ ಮಾಡುವನು. ಮತ್ತೊಂದು ಕೆಲಸದಲ್ಲಿ ತೊಡಗಿದರೆಂದರೆ ಇನ್ನೊಂದು ರೂಪದಿಂದ ಅಲ್ಲಿ ನೆಲೆಸುವನು...... ಹೀಗೆ ದೇವತೆಗಳಲ್ಲಿ ಮತ್ತೆ ಮತ್ತೆ ಬೇರೆ ಬೇರೆ ರೂಪದಿಂದ ಪ್ರವೇಶಿಸುವುದಕ್ಕೆ ಭಗವಂತನಿಗೆ ಬೇಸರವೇ ಇಲ್ಲ. ದೇವತೆಗಳು ಏನೇನು ಒಳ್ಳೊಳ್ಳೆ ಕೆಲಸ ಮಾಡುವರು ಆವಾಗ ಎಲ್ಲ ದೇವರು ಬೇರೆ ಬೇರೆ ರೂಪದಿಂದ ಅವರಲ್ಲಿ ಪ್ರವೇಶಿಸುತ್ತಿರುವನು.

ನಮ್ಮಲ್ಲೂ ಭಗವಂತನು ಪುನಃ ಪುನಃ ವಸತಿ – ಆದರೆ ನಿದ್ರಾರೂಪೇಣ. ನಿದ್ದೆಗೆ ಪ್ರೇರಕನಾಗಿ ನೆಲೆಸುವನು. ಆದುದರಿಂದಲೇ ನಾವು ಮತ್ತೆ ಮತ್ತೆ ನಿದ್ದೆ ಮಾಡುತ್ತಿರುವೆವು. ಆದರೆ ದೇವತೆಗಳಲ್ಲಿ 'ಪ್ರಜ್ಞಾರೂಪೇಣ ವಸತಿ' ವಿದ್ಯಾರೂಪದಿಂದ

ನೆಲೆಸುವನು.

ದೇವತೆಗಳು ಒಂದೊಂದೇ ಒಳ್ಳೊಳ್ಳೆಯ ಕೆಲಸವನ್ನು ಮಾಡುತ್ತ ಇರುವಾಗ ಒಂದೊಂದು ರೂಪದಿಂದ ಭಗವಂತನು ಅಲ್ಲಿ ನೆಲೆಗೊಳ್ಳುತ್ತಿರುವುದರಿಂದ ಭಗವಂತ ಪುನರ್ವಸು.

ಇದಕ್ಕೆ ಉದಾಹರಣೆಗಳು ಭೀಷ್ಮಾದಿಗಳೇ. ಭೀಷ್ಮ, ದ್ರೋಣ, ಕೃಪ, ಅಶ್ವತ್ಥಾಮಾಚಾರ್ಯ – ಇವರೆಲ್ಲ ತುಂಬ ಒಳ್ಳೊಳ್ಳೆಯ ಕೆಲಸ ಮಾಡಿದವರು. ಒಮ್ಮೊಮ್ಮೆ ಒಂದೊಂದು ಒಳ್ಳೊಳ್ಳೆಯ ಕೆಲಸ ಮಾಡಿದಾಗ ಅದಕ್ಕೆ ಬೇಕಾದ ಉತ್ಸಾಹ ಬರುತ್ತಿತ್ತಂತೆ. ಭಗವಂತ ಅವರಲ್ಲಿ ವಿಲಕ್ಷಣರೂಪದಿಂದ ವಾಸಿಸುತ್ತಿದ್ದುದರಿಂದಲೇ ಆ ಬಗೆಯ ಉತ್ಸಾಹ ಉಂಟಾಗುತ್ತಿತ್ತು.

ನಾವೂ ಜೀವನದಲ್ಲಿ ಒಳ್ಳೆಯ ಕೆಲಸಗಳನ್ನು ಮೇಲಿಂದ ಮೇಲೆ ಮಾಡುತ್ತಿರಬೇಕಾದರೆ ಅದಕ್ಕೆ ಬೇಕಾದ ಉತ್ಸಾಹ, ಸ್ಫೂರ್ತಿ ಉಂಟಾಗುವಂತೆ ಭಗವಂತನು ಬೇರೆ ಬೇರೆ ರೂಪದಿಂದ ನಮ್ಮಲ್ಲಿ ನೆಲೆಸುತ್ತಿರಬೇಕೆಂದು ಪ್ರಾರ್ಥಿಸುತ್ತ 'ಪುನರ್ವಸು' ಎಂದು ಅವನನ್ನು ಸ್ತುತಿಸೋಣ.

**ಉಪೇಂದ್ರೋ ವಾಮನಃ ಪ್ರಾಂಶುರಮೋಘಃ ಶುಚಿರೂರ್ಜಿತಃ |**
**ಅತೀಂದ್ರಃ ಸಂಗ್ರಹಃ ಸರ್ಗೋ ಧೃತಾತ್ಮಾ ನಿಯಮೋ ಯಮಃ || ೧೭ ||**

**೧೫೩. ಉಪೇಂದ್ರಃ – ಇಂದ್ರನ ಸಮೀಪದಲ್ಲಿ ಇರುವವನು.**

ವಿವರಣೆ: ಉಪಶಬ್ದಕ್ಕೆ ಸಮೀಪ ಎಂಬ ಅರ್ಥ. ಇಂದ್ರನ ಸಮೀಪದಲ್ಲಿ ಇರುವವನೇ ಉಪೇಂದ್ರ. ವಾಮನರೂಪಿ ಪರಮಾತ್ಮ ಎಂದೂ ಕೂಡಾ ಇಂದ್ರನನ್ನು ಬಿಟ್ಟು ಇರುವುದಿಲ್ಲ ಎಂಬ ಅಭಿಪ್ರಾಯದಲ್ಲಿ ಅವನನ್ನು ಉಪೇಂದ್ರ ಎಂದು ಕರೆಯಲಾಗಿದೆ. ಪ್ರತಿಯೊಬ್ಬ ಜೀವರಲ್ಲಿ ಪರಮಾತ್ಮ ಬೇರೆ ಬೇರೆ ಬಿಂಬರೂಪದಿಂದ ಇರುವಂತೆ, ಇಂದ್ರನಿಗೆ ಅಸುರರಿಂದ ಬರುವ ತೊಂದರೆಗಳನ್ನು ದೂರ ಮಾಡುವುದಕ್ಕಾಗಿಯೇ ಅವನ ಸಮೀಪದಲ್ಲಿಯೇ ಒಂದು ರೂಪದಿಂದ ಇರುವನು. ಇಂದ್ರನ ಸಮೀಪದಲ್ಲಿಯೇ ಇರುವುದರಿಂದ ಅದು ಉಪೇಂದ್ರ ಎಂದೇ ಎನಿಸಿದೆ. ಖಾಂಡವ ವನದ ದಾಹದ ಸಂದರ್ಭದಲ್ಲಿ ಇಂದ್ರ ಬಂದರೆ, ಅವನಿಗೆ ರಕ್ಷಣೆ ನೀಡುವುದಕ್ಕಾಗಿ ಅವನ ಜೊತೆಗೆಯೇ 'ಉಪೇಂದ್ರ'ನೂ ಬಂದಿರುವನು ಎನ್ನುವರು.

ದೇವೇಂದ್ರನಿಗೆ ಬರುವ ತೊಂದರೆಗಳನ್ನು ಪರಿಹರಿಸಿ ರಕ್ಷಣೆ ನೀಡುವುದಕ್ಕಾಗಿ ಅವನ ಸಮೀಪದಲ್ಲಿಯೇ ಇದ್ದು 'ಉಪೇಂದ್ರ' ಎನಿಸಿರುವ ಭಗವಂತ, ನಮ್ಮ ಸಮೀಪದಲ್ಲೂ ಇದ್ದುಕೊಂಡು ನಮಗೆ ಬರುವ ಸಮಸ್ಯೆಗಳನ್ನು ಪರಿಹರಿಸು –

ಎಂದು ಅವನನ್ನು ಸ್ತುತಿಸೋಣ.

**೧೫೪. ವಾಮನಃ – ದೇವೇಂದ್ರನ ವಿರೋಧಿ ಬಲಿಯನ್ನು ಪಾತಾಳಕ್ಕೆ ಅಟ್ಟಿದವನು.**

**ವಿವರಣೆ :** ಪುಟ್ಟರೂಪಕ್ಕೆ ವಾಮನ ಎಂಬ ಹೆಸರು. ವಾಮನ ಶಬ್ದ ಚಿಕ್ಕವನು ಎಂಬ ಅರ್ಥದಲ್ಲಿಯೇ ತೆರೆದುಕೊಳ್ಳುವುದು.

ಇಲ್ಲಿ 'ವಾಮಂ ನಯತಿ' ವಾಮನಃ, ದೇವೇಂದ್ರನ ವಿರೋಧಿಯಾದ ಬಲಿ–ಚಕ್ರವರ್ತಿಯನ್ನು ಪಾತಾಳಕ್ಕೆ ಅಟ್ಟಿದವನು.

ಬಲಿಚಕ್ರವರ್ತಿ ಮುಂದಿನ ಮನ್ವಂತರದಲ್ಲಿ ಇಂದ್ರನ ಪದವಿಗೆ ಬರುವವನು. ಆದರೆ ಇದೇ ಮನ್ವಂತರದಲ್ಲಿ ತಾನು ಇಂದ್ರನ ಪದವಿಯನ್ನು ಪಡೆಯಬೇಕೆಂದು ತೊಂಭತ್ತೊಂಭತ್ತು ಅಶ್ವಮೇಧಯಾಗಗಳನ್ನು ಮಾಡಿದನು. ನೂರನೆಯ ಅಶ್ವಮೇಧಯಾಗ ಮಾಡುತ್ತಿದ್ದಾಗ ಭಗವಂತನು 'ವಾಮನ' ರೂಪ ತಾಳಿ, ದೇವೇಂದ್ರನ ಪದವಿಯನ್ನು ಕಸಿದುಕೊಳ್ಳುವ ಮೂಲಕ ಅವನಿಗೆ ಶತ್ರು ಎನಿಸಿದ ಬಲಿಚಕ್ರವರ್ತಿಯನ್ನು ಭಗವಂತನು ಪಾತಾಳಕ್ಕೆ ಅಟ್ಟಿದನು. **'ಪಾತಾಳಕ್ಕೆ ಅಟ್ಟಿದ ಗಡ ಶೋಭಾನೆ '**– ಎನ್ನುವರು ಶ್ರೀ ವಾದಿರಾಜ ಸ್ವಾಮಿಗಳು.

**'ಶ್ರೇಯಾಂಸಿ ಬಹುವಿಘ್ನಾನಿ...'** ಎಂದಿರುವಂತೆ ಒಳ್ಳೆಯ ಸಾಧನೆಗಳನ್ನು ನಡೆಸುವಾಗ ದೈಹಿಕವಾಗಿ, ಮಾನಸಿಕವಾಗಿ ಹಾಗೂ ಹೊರಗಿನಿಂದ ಎಷ್ಟೆಷ್ಟೋ ವಿರೋಧಗಳು ಸಂಭವಿಸುವವು. ಆ ವಿರೋಧಿಗಳನ್ನೆಲ್ಲ ಪರಿಹರಿಸುವವನು ವಾಮನರೂಪಿ ಪರಮಾತ್ಮ. ಅವನು ದೇವೇಂದ್ರನ ವಿರೋಧಿಯನ್ನು ಹೇಗೆ ಪಾತಾಳಕ್ಕೆ ಅಟ್ಟಿದನೋ ಹಾಗೆ ನಮ್ಮ ವಿರೋಧಿಗಳನ್ನು ನರಕಕ್ಕೆ ಅಟ್ಟಿ ನಮ್ಮ ಸಾಧನಾನುಷ್ಠಾನಕ್ಕೆ ಅನುಕೂಲತೆಯನ್ನು ಮಾಡಿಕೊಡುವನೆಂದು ವಾಮನನಾಮದಿಂದ ಚಿಂತನೆ ನಡೆಸಬೇಕು.

**೧೫೫. ಪ್ರಾಂಶುಃ – * ಶ್ರೇಷ್ಠಗಳಾದ ಜ್ಞಾನದ ಕಿರಣಗಳ ಮೂಲಕ ಎಲ್ಲೆಡೆ ಹರಡಿರುವವನು.**

*** ಜ್ಞಾನದ ಮೂಲಕ ದೊಡ್ಡವನಾಗಿರುವವನು.**

**ವಿವರಣೆ :** ವಾಮನ ಎಂದರೆ ಕುಳ್ಳ, ಪ್ರಾಂಶು ಎಂದರೆ ಎತ್ತರದವನು. ಲೋಕದಲ್ಲಿ ಪರಸ್ಪರ ವಿರುದ್ಧಗಳೆನಿಸುವ ಧರ್ಮಗಳು ಪರಮಾತ್ಮನಲ್ಲಿ ಸೇರಿಕೊಳ್ಳುವವು. ಲೋಕದಲ್ಲಿ ಕುಳ್ಳನಾದವನು ಎತ್ತರದವನಾಗಿರುವುದಿಲ್ಲ, ದಪ್ಪನಾದವನು ತೆಳ್ಳಗಾಗಿರುವುದಿಲ್ಲ. ಚಿಕ್ಕವನು ದೊಡ್ಡವನಾಗಿರುವುದಿಲ್ಲ. ಆದರೆ ಲೋಕದ ಈ

ನಿಯಮ ಪರಮಾತ್ಮನಲ್ಲಿ ಲಗಾವು ಆಗುವುದಿಲ್ಲ. ಅವನು ಕುಳ್ಳನೂ ಆಗಿರುವನು, ಎತ್ತರದವನೂ ಆಗಿರುವನು. ದಪ್ಪನೂ ಆಗಿರುವನು ತೆಳ್ಳಗಿನವನೂ ಆಗಿರುವನು. ಹೀಗೆ ಎಲ್ಲ ವಿರುದ್ಧಧರ್ಮಗಳೂ ಅವನಲ್ಲಿ ನೆಲೆಸಿವೆ. ಆದುದರಿಂದಲೇ ಅವನು ಲೋಕವಿಲಕ್ಷಣ. ಅಂತಹ ಲೋಕವಿಲಕ್ಷಣನಾದ ದೇವರೇ ಜೀವ ಎನ್ನುವುದಾದರೂ ಹೇಗೆ !

ಆದುದರಿಂದ ಲೋಕದ ಅರ್ಥದ ದೃಷ್ಟಿಯಲ್ಲಿ ಅವನು 'ವಾಮನ' ಕುಳ್ಳನೂ ಹೌದು, ಪ್ರಾಂಶು – ಎತ್ತರದವನೂ ಹೌದು.

ವಾಮನ ಶಬ್ದಕ್ಕೆ ಬೇರೊಂದು ಅರ್ಥ ಹೇಳಿರುವಂತೆ ಪ್ರಾಂಶು ಶಬ್ದದಿಂದಲೂ ಬೇರೊಂದು ಅರ್ಥವನ್ನು ಹೊರಡಿಸಬಹುದು – ಅಂಶು ಶಬ್ದಕ್ಕೆ ಕಿರಣಗಳು ಎಂದರ್ಥ. 'ಪ್ರ' ಎಂದರೆ ಪ್ರಕೃಷ್ಟಗಳಾದ, ಶ್ರೇಷ್ಠಗಳಾದ ಎಂದರ್ಥ. ಆದುದರಿಂದ ಶ್ರೇಷ್ಠಗಳಾದ ಕಿರಣಗಳುಳ್ಳವನೇ ಪ್ರಾಂಶು. ಸೂರ್ಯ, ಚಂದ್ರರೆಲ್ಲ ಕಿರಣಗಳ ಮೂಲಕ ಎಲ್ಲೆಡೆ ಹರಡಿರುವರು. ಆದರೆ ಭಗವಂತ ಹರಡಿರುವುದು ಬರೇ ಬೆಳಕಿನ ಕಿರಣಗಳ ಮೂಲಕ ಅಲ್ಲ, ಮತ್ತೆ ಜ್ಞಾನದ ಕಿರಣಗಳ ಮೂಲಕ. ಹೇಗೆ ಒಳ್ಳೆಯ ಉಪನ್ಯಾಸಕಾರರು ತಮ್ಮ ಉಪನ್ಯಾಸಗಳ ಮೂಲಕವೇ ಎಲ್ಲೆಡೆ ಹಬ್ಬಿರುವರೋ ಹಾಗೆಯೇ ಶ್ರೀಕೃಷ್ಣ ಭಗವದ್ಗೀತೆಯ ಮೂಲಕ ಎಲ್ಲೆಡೆ ವ್ಯಾಪಿಸಿರುವನು. ನಾವು ಕೃಷ್ಣನ ನಾಡಿನಲ್ಲೇ ಇರುವವರು. ಈ ನಾಡನ್ನು ಬಿಟ್ಟು ಹೊರ ದೇಶದಲ್ಲಿರುವವರೂ ಕೃಷ್ಣನನ್ನು ಬಲ್ಲವರಿರುವರು. ಕೃಷ್ಣನ ಕಾಲದಲ್ಲಿ ಇಲ್ಲದ ನಮಗೂ ಕೃಷ್ಣನ ಪರಿಚಯ ಇದೆ. ಹೇಗೆ ? ಕೃಷ್ಣ ಕೊಟ್ಟ ಭಗವದ್ಗೀತೆಯ ಮೂಲಕ. ಅಂದರೆ ಜ್ಞಾನದ ಕಿರಣಗಳ ಮೂಲಕ ಕೃಷ್ಣ ಎಲ್ಲೆಡೆ ಹರಡಿದ್ದಾನೆ. ಪ್ರಾಂಶುಶಬ್ದಕ್ಕೆ ಉದ್ದದವನೆಂಬುದು ಲೌಕಿಕಾರ್ಥವಾದರೆ, ದೊಡ್ಡವನೆಂಬುದು ಶಾಸ್ತ್ರೀಯಾರ್ಥ. ಯಾರು ಜ್ಞಾನದ ಮೂಲಕ ತುಂಬ ಕಡೆ ಹರಡಿರುವರೋ ಅವರೇ ದೊಡ್ಡವರೆನಿಸಿದ್ದು 'ಪ್ರಾಂಶು' ಎನಿಸಿಕೊಳ್ಳುವರು.

ಭೀಷ್ಮರು ಕೃಷ್ಣನಲ್ಲಿ ತಿಳಿಸುವರು ವಯಸ್ಸಿನಿಂದ ನಾನು ನಿನಗಿಂತಲೂ ದೊಡ್ಡವನಾಗಿದ್ದರೂ ಜ್ಞಾನದಿಂದ ಎಲ್ಲರಿಗಿಂತ ದೊಡ್ಡವನಾಗಿ 'ಪ್ರಾಂಶು' ಎನಿಸಿರುವವನು ನೀನು.

**೧೫೬. ಅಮೋಘಃ – ಯಾರ ವಿಷಯಕಗಳಾದ ಧರ್ಮಾದಿಗಳ ಕುರಿತು ಬರೇ ಆರಂಭಾದಿಗಳೂ ವ್ಯರ್ಥಗಳೆನಿಸಲಾರವೋ ಅಂತಹವನು.**

**ವಿವರಣೆ :** ಮೋಘ ಅಂದರೆ ವ್ಯರ್ಥ. ಅಮೋಘ ಅಂದರೆ ಸಾರ್ಥಕ. ದೇವರು

ಎಲ್ಲರಿಗೂ ಬೇಕಾದವನಾಗಿರುವುದರಿಂದ ಪ್ರತಿಯೊಬ್ಬರ ಪಾಲಿಗೂ ವ್ಯರ್ಥ ಅಲ್ಲ, ಸಾರ್ಥಕ. ದೇವತೆಗಳಿಗಷ್ಟೇ ಅಲ್ಲ ದೈತ್ಯರಿಗೂ ದೇವರು ಬೇಕೇ ಬೇಕು. ದೇವತೆಗಳಿಗೆ ಭಕ್ತಿ ಮಾಡಿ ಮೋಕ್ಷ ಹೊಂದಲು ದೇವರು ಬೇಕಾದರೆ, ದೈತ್ಯರಿಗೆ ದ್ವೇಷ ಮಾಡಿ ನರಕ ಹೊಂದಲು ದೇವರು ಬೇಕೇ ಬೇಕು. ಆದುದರಿಂದ ದೇವರು ಎಲ್ಲರ ಪಾಲಿಗೂ ಅಮೋಘ.

ಸಾಮಾನ್ಯವಾಗಿ ಗಣಪತಿ, ನಾಗ, ದುರ್ಗೆ – ಇತ್ಯಾದಿ ಇತರ ದೇವತೆಗಳ ವಿಷಯದಲ್ಲಿ ಏನನ್ನಾದರೂ ಪೂಜೆ ಪುರಸ್ಕಾರಾದಿಗಳನ್ನು ನಡೆಸಬೇಕೆಂದು ಬಯಸಿ, ಸಂಕಲ್ಪಿಸಿ ಅಷ್ಟಕ್ಕೆ ಬಿಟ್ಟರೆ ಆ ಬಯಕೆ ಸಂಕಲ್ಪಗಳೆಲ್ಲ ವ್ಯರ್ಥಗಳು. ಆದರೆ ಭಗವಂತನ ವಿಷಯದಲ್ಲಿ ಹಾಗಾಗುವುದಿಲ್ಲ. ಈ ಬಾರಿ ಏಕಾದಶೀವ್ರತ ಮಾಡಬೇಕೆಂದು ನವಮಿಯಂದು ಬಯಸಿ, ದಶಮಿಯಂದು ಸಾಧ್ಯವಾಗದೆಂದು ವ್ರತಾನುಷ್ಠಾನವನ್ನು ಅಲ್ಲಿಗೇ ಕೊನೆಗೊಳಿಸಿದರೂ, ದಶಮಿಯಂದು ರಾತ್ರಿ ಏಕಾದಶೀವ್ರತಕ್ಕಾಗಿ ಸಂಕಲ್ಪ ಮಾಡಿ ಏಕಾದಶೀ ಬೆಳಿಗ್ಗೆ ಉಪವಾಸವ್ರತ ನಡೆಸಲು ಆಗದೆ ಅಲ್ಲಿಗೇ ಕೊನೆಗೊಳಿಸಿದರೂ ಆ ಬಯಕೆ ಸಂಕಲ್ಪಗಳಿಗೆ ಫಲ ಇದ್ದೇ ಇದೆ.

'ಪ್ರಾರಂಭಮಾತ್ರಮಿಚ್ಛಾ ವಾ ವಿಷ್ಣುಧರ್ಮೇ ನ ನಿಷ್ಫಲಾ' ಹೀಗೆ ಯಾರ ಕುರಿತಾದ ಧರ್ಮಗಳ ಬರೇ ಆರಂಭ, ಬರೇ ಇಚ್ಛೆ, ಬರೇ ಸಂಕಲ್ಪ – ಇವುಗಳೂ 'ಮೋಘ'– ನಿಷ್ಫಲಗಳಾಗಲಾರವೋ ಅಂತಹ ವಿಷ್ಣು 'ಅಮೋಘ'.

**'ಯತತೋಽಪಿ ಹರೇಃ ಪದಸಂಸ್ಮರಣೇ ಸಕಲಂ ಹ್ಯಘಮಾಶು ಲಯಂ ವ್ರಜತಿ'**– ಎಂದು ಶ್ರೀಮದಾಚಾರ್ಯರು ಆಶ್ವಾಸನೆ ನೀಡಿರುವಂತೆ ಶ್ರೀ ಹರಿಯ ಸ್ಮರಣೆ ಮಾಡಬೇಕು ಎಂದು ಯತ್ನಿಸಿದರೂ ಸಾಕು, ಅಷ್ಟಕ್ಕೂ ಫಲ ಇದ್ದೇ ಇದೆ. ಆದುದರಿಂದ ಯಾರ ಸ್ಮರಣೆಗಾಗಿ ಯತ್ನ ಮಾತ್ರವೂ ನಿಷ್ಫಲವೆನಿಸುವುದಿಲ್ಲವೋ ಅಂತಹ ಶ್ರೀಹರಿ 'ಅಮೋಘ'.

ಭೀಷ್ಮರು ತಮ್ಮ ಅನುಭವದ ಹಿನ್ನೆಲೆಯಲ್ಲಿ ಶ್ರೀಕೃಷ್ಣನ ಅಮೋಘ–ವ್ಯಕ್ತಿತ್ವವನ್ನು ಹೀಗೆ ಚಿಂತಿಸುತ್ತಿರುವರು. ಕೃಷ್ಣ, ನಾನು ದುರ್ಯೋಧನನ ಪಕ್ಷದಲ್ಲಿದ್ದವನು. ಈ ಪಕ್ಷದಲ್ಲಿದ್ದುಕೊಂಡು ಕೃಷ್ಣನ ಭಕ್ತರಾದ ಪಾಂಡವರ ವಿರುದ್ಧ ಹೋರಾಡುವುದು ಸರಿಯಲ್ಲ – ಎಂದು ಕೊನೆಗೆ ನನಗೆ 'ಪಶ್ಚಾತ್ತಾಪ' ಮೂಡಿತ್ತು. ಆ ಪಶ್ಚಾತ್ತಾಪವನ್ನೇ ಪರಿಗಣಿಸಿ ಕೊನೆಯ ಕಾಲದಲ್ಲಿ ನನಗೆ ದರ್ಶನ ನೀಡಿ ಅನುಗ್ರಹಿಸಿರುವಿ. ನಿನ್ನ ಭಕ್ತರ ಬಗ್ಗೆ ತಾಳಿರುವ ಪಶ್ಚಾತ್ತಾಪವೂ ಮೋಘ ಎನಿಸದು ಎಂದು ತೋರಿಸಿಕೊಟ್ಟಿರುವಿ.

ಇದರಿಂದ ಬಿಸಿರಕ್ತದ ವಯಸ್ಸಿನಲ್ಲಿ ಎಸಗಿದ ತಪ್ಪುಗಳ ಬಗ್ಗೆ ಕೊನೆಯಲ್ಲಿ ಪಶ್ಚಾತ್ತಾಪ ತಾಳಿದರೂ ಅಮೋಘನಾಮಕ ಭಗವಂತ ಆ ಪಶ್ಚಾತ್ತಾಪ ಮೋಘ ಎನಿಸದಂತೆ ಫಲ ನೀಡಿ ಅನುಗ್ರಹಿಸುವನೆಂದು ಸಿದ್ಧವಾಗಬಲ್ಲದು.

ನವಗ್ರಹ ಕಿಂಡಿಯ ಎದುರು ಶ್ರೀಕೃಷ್ಣನನ್ನು 'ನಿನ್ನ ವಿಷಯಕಗಳಾದ ಯಾವುದೇ ಸಾಧನೆಗಳೂ ಮೋಘ ಎನಿಸದಂತೆ ಅನುಗ್ರಹಿಸುವುದರಿಂದಲೂ 'ಅಮೋಘ' ಎನಿಸುವವನು ನೀನು' ಎಂದು ಸ್ತುತಿಸಿದರೆ ನಮ್ಮ ಧಾರ್ಮಿಕ ಹಾಗೂ ಆಧ್ಯಾತ್ಮಿಕ ಸಾಧನೆಗಳು ಮೋಘಗಳಾಗದಂತೆ ಭಗವಂತನು ಅನುಗ್ರಹಿಸುವನು.

**೧೫೭. ಶುಚಿಃ – ನಿರ್ಮಲನಾಗಿರುವವನು.**

**ವಿವರಣೆ :** ಶುಚಿ ಶಬ್ದಕ್ಕೆ ನಿರ್ಮಲ ಎಂದರ್ಥ. ಭಗವಂತನು ಅಮೋಘನಾಗಿರುವುದರಿಂದಲೇ ಶುಚಿ. ಒಬ್ಬ ವ್ಯಕ್ತಿಯ ಬಗ್ಗೆ ಅಪಚಾರ ಮಾಡಿ, ಆ ಮೇಲೆ ಅವನು ಒಳ್ಳೆಯವನೆಂದು ತಿಳಿದಾಗ ಅವನಲ್ಲಿ ಕ್ಷಮಾಯಾಚನೆ ಮಾಡಿದಲ್ಲಿ ಅವನು ಕ್ಷಮಿಸುವನೆಂದರೆ ಅವನು ಸಾತ್ವಿಕನಾಗಿದ್ದು ಶುಚಿ ಎಂದೇ ಅರ್ಥ. ಆದ್ದರಿಂದ ಯಾರ ಬಗೆಗೆ ತಾಳಿದ ಪಶ್ಚಾತ್ತಾಪವೂ ಮೋಘ ಎನಿಸದೆ 'ಅಮೋಘ' ಆಗಬಲ್ಲದೋ ಅವನಷ್ಟೇ ಆಂತರಿಕವಾಗಿ ಶುಚಿ ಎನಿಸಬಲ್ಲ. ಭಗವಂತನು ಶುಚಿಯಾಗಿರುವುದರಿಂದಲೇ ತನ್ನ ಭಕ್ತರು ಮೊದಲು ಎಸಗುವ ಅಪರಾಧಗಳನ್ನೆಲ್ಲ ತಲೆಯಲ್ಲಿಟ್ಟುಕೊಳ್ಳದೆ ಕೊನೆಯಲ್ಲಿ ಅವರು ತಾಳಿರುವ ಪಶ್ಚಾತ್ತಾಪವನ್ನಷ್ಟೇ ಪರಿಗಣಿಸಿ ಅನುಗ್ರಹಿಸುವನು.

ಇನ್ನೊಬ್ಬರು ನಮ್ಮ ಬಗ್ಗೆ ಎಸಗಿದ ಅಪರಾಧಗಳನ್ನು ಕ್ಷಮಿಸುವ ಹೃದಯವಂತಿಕೆ ನಮ್ಮಲ್ಲಿ ಬರಬೇಕೆಂದರೆ ನಮ್ಮಲ್ಲಿ ಶುದ್ಧಿ ಇರಬೇಕು. ಅವನನ್ನು ಶುದ್ಧನಾದವನು ಎಂದು ಶುಚಿನಾಮದಿಂದ ಸ್ತುತಿಸಿದೆವೆಂದರೆ ನಮ್ಮಲ್ಲಿ ಶುದ್ಧಿ ಬರಲು ಸಾಧ್ಯ.

**೧೫೮. ಊರ್ಜಿತಃ – ಪ್ರತಿಯೊಂದು ಜೀವಿಯನ್ನೂ ಯಾವುದಾದರೊಂದು ಚಟುವಟಿಕೆಯಿಂದ ಕೂಡಿದವನನ್ನಾಗಿ ಮಾಡುವವನು.**

**ವಿವರಣೆ :** ಭೂತಾನಿ ಊರ್ಜಯತಿ ಚೇಷ್ಟಯತಿ ಇತಿ ಊರ್ಜಿತಃ – ಎಂಬುದಾಗಿ ಪ್ರತಿಯೊಂದು ಜೀವಿಯನ್ನೂ ಯಾವುದಾದರೊಂದು ಚಟುವಟಿಯಿಂದ ಕೂಡಿದವನನ್ನಾಗಿ ಮಾಡುವವನು.

ಬಿಸಿ ಬಿಸಿ ಉದಾಹರಣೆ ಕೊಡುವುದಾದರೆ ಯಾವುದಾದರೊಂದು ವಿವಾದ

ತಣ್ಣಗಾಯಿತು ಎಂದಾಗ ಅದನ್ನು ಯಾರಾದರೂ ಊರ್ಜಿತಗೊಳಿಸುವರು. 'ಅವರನ್ನು ಜೈಲಿಗೆ ದಬ್ಬಬೇಕು'– ಎಂದು ಪತ್ರಿಕೆಯ ಹೇಳಿಕೆ ಕೊಡುವ ಮೂಲಕ ಊರ್ಜಿತಗೊಳಿಸುವುದು ಎಂದರ್ಥ. ಅದು ಆರಲಿಲ್ಲ ಎಂದು ತಿಳಿಸುವುದು ಎಂದರ್ಥ. ಹೀಗೆ ತಣ್ಣಗಾಗುತ್ತೆ ಎನ್ನುವುದನ್ನು ಪುನಃ ಮೇಲಕ್ಕೆ ತರುವುದಕ್ಕೆ ಊರ್ಜಿತಗೊಳಿಸುವುದು ಎಂದರ್ಥ.

ಭೀಷ್ಮರು ಕೃಷ್ಣನಲ್ಲಿ ತಿಳಿಸ್ತಾರೆ – ಯಾರನ್ನೂ ತೆಪ್ಪಗಿರಲು ನೀನು ಬಿಡುವುದಿಲ್ಲ. ಅವರು ತೆಪ್ಪಗೆ ಇರ್ತೇನೆ ಎಂದಾಗ ಏನಾದರೊಂದನ್ನು ತಂದು ಹಾಕಿ ಮತ್ತೆ ಎಬ್ಬಿಸುತ್ತಿ. ಯಾರಾದರೂ ಜೀವನದಲ್ಲಿ ತೆಪ್ಪಗೆ ಕೂತದ್ದು ಎಂದಿದೆಯೋ ? ಎಲ್ಲ ದೃಷ್ಟಿಯಿಂದಲೂ ಆರಾಮ ಇದ್ದೇನೆ ಎನ್ನುವ ವ್ಯಕ್ತಿಗೂ ಯಾವುದಾದರೊಂದು ಸಮಸ್ಯೆಯನ್ನು ಊರ್ಜಿತಗೊಳಿಸಿ, ತೆಪ್ಪಗೆ ಇರುವುದಕ್ಕೆ ಬಿಡುವುದಿಲ್ಲ.. ಏನಾದರೊಂದು ಚಟುವಟಿಕೆಯಿಂದ ಕೂಡಿದವನನ್ನಾಗಿ ಮಾಡ್ತಾನೆ.

ನಾನು ಹುಟ್ಟಿದಾರಭ್ಯ ಇಂದಿನ ತನಕ ತೆಪ್ಪಗೆ ಇರಲು ಬಿಟ್ಟೇ ಇಲ್ಲ – ಆದುದರಿಂದ ನೀನು 'ಊರ್ಜಿತ' ಎನ್ನುವರು ಭೀಷ್ಮರು ಕೃಷ್ಣನಲ್ಲಿ.

ತೆಪ್ಪಗೆ ಕೂತೆವೆಂದರೆ ಬುದ್ಧಿಗೆ ತುಕ್ಕು ಹಿಡಿಯಲು ಪ್ರಾರಂಭವಾಗುವುದು. ಹಾಗಾಗಬಾರದೆಂದು ಭಗವಂತ ಏನಾದರೊಂದು ಸಮಸ್ಯೆಯನ್ನೋ, ಪರಿಹಾರವನ್ನೋ ತಂದು ಹಾಕಿ ತೆಪ್ಪಗೆ ಇರಲು ಬಿಡುವುದಿಲ್ಲ.

ಈ ಬಗೆಯ ಅನುಸಂಧಾನವನ್ನಿಟ್ಟುಕೊಂಡು ಭಗವಂತನನ್ನು 'ಊರ್ಜಿತ' ಎಂಬ ನಾಮದಿಂದ ಸ್ತುತಿಸಿದರೆ ನಾವು ಜೀವನದಲ್ಲಿ ಜಡರಾಗದಂತೆ ನಮಗೆ ಅನುಗ್ರಹಿಸುವನು.

**೧೫೫. ಅತೀಂದ್ರಃ – ಬುದ್ಧಿಶಕ್ತಿಯೇ ಮುಂತಾದ ಪ್ರತಿಯೊಂದು ಗುಣದ ವಿಷಯದಲ್ಲೂ ಇಂದ್ರನನ್ನು ಮೀರಿ ಇರುವವನು.**

**ವಿವರಣೆ :** ಇಂದ್ರನನ್ನು ಅತಿಕ್ರಮಿಸಿದವನು ಅತೀಂದ್ರ. ಈ ಶ್ಲೋಕದ ಪೂರ್ವಾರ್ಧದಲ್ಲಿ ಉಪೇಂದ್ರ ಎಂದು ಬಂದಿದೆ. ಅದಕ್ಕೆ ಇಂದ್ರನ ಪಕ್ಕದಲ್ಲಿ ಇರುವವನು ಎಂದರ್ಥ. ಇಂದ್ರನ ಪಕ್ಕದಲ್ಲಿ ಇರುವವನೆಂದರೆ ಇಂದ್ರನಿಗಿಂತ ಚಿಕ್ಕವನೇನೋ ಎಂದು ಪ್ರಶ್ನೆ ಬಂದರೆ – 'ಅತೀಂದ್ರಃ' – ಇಂದ್ರನನ್ನು ಮೀರಿದವನು ಎಂದರು. ಇಂದ್ರ ಏನು ಮಾಡಬೇಕಾದರೂ ಕೂಡಾ ಅವನಿಗೆ ಸಲಹೆ ಸೂಚನೆಗಳನ್ನು ನೀಡಲು ಈ ಉಪೇಂದ್ರ ಇರುವನು.

ಇಂದ್ರ ರಾಜ್ಯಭಾರ ನಡೆಸುವ ಕ್ಷತ್ರಿಯ. ಉಪೇಂದ್ರನಾದರೂ ಮಂತ್ರಿಸ್ಥಾನದಲ್ಲಿದ್ದ ಬ್ರಾಹ್ಮಣ. ದೇವರಿಗೆ ಜಾತಿ ಇಲ್ಲದಿದ್ದರೂ ಅದಿತಿಕಶ್ಯಪರಲ್ಲಿ ಕಾಣಿಸಿಕೊಂಡದ್ದರಿಂದ ಉಪೇಂದ್ರ ಬ್ರಾಹ್ಮಣ. ಬ್ರಾಹ್ಮಣನ ಸಲಹೆ ಸೂಚನೆಗಳನ್ನು ಪಾಲಿಸಿದರೆ ಕ್ಷತ್ರಿಯ ಚೆನ್ನಾಗಿ ರಾಜ್ಯಭಾರ ನಡೆಸಬಹುದು.

ಈ ರೀತಿಯಾಗಿ ಉಪೇಂದ್ರ ದೇವೇಂದ್ರನಿಗೆ ಸಲಹೆ ಸೂಚನೆಗಳನ್ನು ಕೊಟ್ಟು ಅವನಿಂದ ರಾಜ್ಯಭಾರ ಮಾಡಿಸುತ್ತಿದ್ದ. ಬಲಿಯಿಂದ ದೇವೇಂದ್ರನ ಕುರ್ಚಿ ಕಂಪಿಸಲು ಪ್ರಾರಂಭಿಸಿತೆಂದಾಗ ವಾಮನನಾಗಿ ಬಂದು ಬಲಿಯನ್ನು ಪಾತಾಳಕ್ಕೆ ಅಟ್ಟಿದ. ಹೀಗೆ ಇಂದ್ರನಿಗೆ ಸಲಹೆಸೂಚನೆ ನೀಡಲು ಮಂತ್ರಿಯ ಸ್ಥಾನದಲ್ಲಿ ಇದ್ದವ ಬರೇ 'ಉಪೇಂದ್ರ' ಅಲ್ಲ, 'ಅತೀಂದ್ರ' ಕೂಡಾ. ಅಂದರೆ ಇಂದ್ರನನ್ನು ಮೀರಿ ನಿಂತವ. ಇಂದ್ರನಿಗಿಂತಲೂ ಹೆಚ್ಚು ಪಳಗಿದವನು.

ಭೀಷ್ಮರು ಅಂತಾರೆ ಕೃಷ್ಣ, ಆ ಉಪೇಂದ್ರ ನೀನೇ. ಇಂದ್ರ ಅರ್ಜುನನಾಗಿ ಬಂದಾಗ ಅವನ ರಥದಲ್ಲಿಯೇ ಅವನ ಪಕ್ಕದಲ್ಲಿಯೇ ಕುಳಿತು 'ಉಪೇಂದ್ರ'ನಾಗಿ ಅವನಿಗೆ ಕಾಲಕಾಲಕ್ಕೆ 'ಹಾಗೆ ಹೊಡಿ ಹೀಗೆ ಹೊಡಿ......' ಎಂದೆಲ್ಲ ಸಲಹೆ ಸೂಚನೆಗಳನ್ನು ನೀಡುತ್ತ 'ಅತೀಂದ್ರ' ನಾಗಿ ಮೆರೆದವನು ನೀನೇ. ನೀನು ಉಪೇಂದ್ರನಾಗಿ ಅವನನ್ನು ಅನುಗ್ರಹಿಸುತ್ತ ಇದ್ದುದರಿಂದಲೇ ಅರ್ಜುನ 'ಮೂರು ಲೋಕಗಳ ಗಂಡ' 'ಕೌಂತೇಯ' 'ಪಾರ್ಥ'– ಇತ್ಯಾದಿ ಬಿರುದುಗಳನ್ನೆಲ್ಲ ಪಡೆಯುವಂತಾದ.

ಭಗವಂತನು ಬುದ್ಧಿಬಲ, ದೈಹಿಕಬಲ ಇತ್ಯಾದಿ ಪ್ರತಿಯೊಂದು ಗುಣದ ವಿಷಯದಲ್ಲೂ ಇಂದ್ರನನ್ನು ಮೀರಿದವನಾಗಿ, ಅವನಿಗೆ ಕಾಲಕಾಲಕ್ಕೆ ಸಲಹೆ ಸೂಚನೆಗಳನ್ನು ನೀಡುತ್ತ ಇದ್ದ 'ಅತೀಂದ್ರ' ಎಂದು ಉಪಾಸನೆ ನಡೆಸಿದಲ್ಲಿ ಅದರ ಫಲವಾಗಿ ಮನೆಯಲ್ಲಿ ಏನಾದರೂ ಸಮಸ್ಯೆ ಉಂಟಾಯಿತೆಂದರೆ ಅದಕ್ಕೆ ಥಟ್ಟನೆ ಪರಿಹಾರವನ್ನು ಒದಗಿಸುವ ಸಾಮರ್ಥ್ಯ ಸಿದ್ಧಿಸುವುದು.

**೧೬೦. ಸಂಗ್ರಹಃ – * ಎಲ್ಲವನ್ನೂ ತನ್ನೊಳಗೆ ಸೇರಿಸಿಕೊಳ್ಳುವವನು.**

*** ಚೆನ್ನಾಗಿ ತಿಳುವಳಿಕೆ ಉಳ್ಳವನು.**

**ವಿವರಣೆ :** ನಮಗೆ ಸಂಗ್ರಹ ಅಂದರೆ ಒಂದೇ ಗೊತ್ತು – 'ಬಾಚುವುದು'– ಎಂದು. ಮೂರನೆಯ ದರ್ಜೆಯ ವ್ಯಕ್ತಿ ಸಂಗ್ರಹಿಸುವುದನ್ನು 'ಬಾಚುವುದು' ಎನ್ನಲಾಗುವುದು. ಅದೇ ಪ್ರಥಮ ದರ್ಜೆಯ ವ್ಯಕ್ತಿ ಬಾಚುವುದನ್ನು ಸಂಗ್ರಹಿಸಲಾಗುವುದು

ಎನ್ನಲಾಗುವುದು. ಒಂದೇ ಚಟುವಟಿಕೆಗೆ ಅದನ್ನು ನಿರ್ವಹಿಸುವ ವ್ಯಕ್ತಿಯ ಮಟ್ಟದ ಮೇಲೆ ಬೇರೆ ಬೇರೆ ಶಬ್ದವನ್ನು ಬಳಸಲಾಗುವುದು. ಕೃಷ್ಣ ಪ್ರಲಯದಲ್ಲಿ ಎಲ್ಲವನ್ನೂ ಬಾಚಿದರೂ ಕೃಷ್ಣ ಸಂಗ್ರಹಿಸುವನು ಎನ್ನಬೇಕೇ ಹೊರತು ಬಾಚುವನು ಎನ್ನಬಾರದು. ಪ್ರಲಯಕಾಲದಲ್ಲಿ ಎಲ್ಲವನ್ನೂ ಕಬಳಿಸುವನು. ಪ್ರಲಯಕಾಲದವರೆಗೆ ಹೋಗಬೇಕಿಲ್ಲ. ಅರ್ಜುನನ ರಥದಲ್ಲಿ ಕುಳಿತು ಒಮ್ಮೆ ಕಬಳಿಸುವುದನ್ನು ಕಂಡೆ. ಹದಿನೆಂಟು ಅಕ್ಷೌಹಿಣೀಸೇನೆಯೂ ನಿನ್ನ ಬಾಯಿಯೊಳಗೆ ಪ್ರವೇಶಿಸುವುದು ಕಂಡಿದೆ. ಪ್ರಲಯದಲ್ಲಿ ಹೇಗೋ ಹಾಗೆ. ಇದು ನೀನು ಸಂಗ್ರಹ ಮಾಡಿದ್ದು. 'ಸಮ್ಯಕ್ ಗೃಹ್ಣಾತಿ'– ಚೆನ್ನಾಗಿ ಅವರನ್ನು ಸ್ವೀಕಾರ ಮಾಡಿದ್ದಿ. ಹದಿನೆಂಟು ಅಕ್ಷೌಹಿಣೀ ಸೇನೆಗೂ ಮರಣ ಎಲ್ಲೆಲ್ಲಿಯೋ ಬರುವ ಬದಲು ಅವರೆಲ್ಲರನ್ನೂ ನಿನ್ನಲ್ಲಿ ತುಂಬಿಸಿ ಕೊಳ್ಳುವ ಮೂಲಕ ಅವರಿಗೊಂದು ಸ್ಥಾನವನ್ನು ಕಲ್ಪಿಸಿ ಕೊಟ್ಟಿದ್ದಿ. ನ್ಯಾಯಾನ್ಯಾಯದ ತೀರ್ಮಾನಕ್ಕಾಗಿ ಸೇರಿದವರೆಂಬ ದೃಷ್ಟಿಯಿಂದ ಅವರಿಗೆ ಒಂದು ಸ್ಥಾನ ಕಲ್ಪಿಸಿ ಕೊಡಬೇಕೆಂದು ಅವರನ್ನೆಲ್ಲ ಸಂಗ್ರಹ ಮಾಡ್ತಾನೆ.

ಪ್ರಜೆಗಳನ್ನು ಚೆನ್ನಾಗಿ ಸ್ವೀಕಾರ ಮಾಡುವುದರಿಂದ ಶ್ರೀಕೃಷ್ಣ ಸಂಗ್ರಹ ಎನಿಸುವಂತೆ, ಅವನ ಎದುರು ನಿರೂಪಿಸಲಾಗುವ ವಿಷಯವನ್ನು ಚೆನ್ನಾಗಿ ಅಂದರೆ ವಿಪರೀತವಾಗಿ ಅಲ್ಲದೆ ಅದರ ನಿಜವಾದ ಅರ್ಥ ಯಾವುದೋ ಆ ಅರ್ಥ ಪರವಾಗಿಯೇ ತಿಳಿದುಕೊಳ್ಳುವವನೆಂಬ ಅರ್ಥದಲ್ಲೂ ಅವನು ಸಂಗ್ರಹ ಎನಿಸುವನು. ಸಮ್ಯಕ್ ಗೃಹ್ಣಾತಿ ಎಂಬುದಕ್ಕೆ ಚೆನ್ನಾಗಿ ಸ್ವೀಕರಿಸುತ್ತಾನೆ ಎಂಬ ಅರ್ಥವಿರುವಂತೆ ಚೆನ್ನಾಗಿ ತಿಳಿದು ಕೊಳ್ಳುತ್ತಾನೆ ಎಂಬ ಅರ್ಥವೂ ಇದೆ.

**೧೬೧. ಸರ್ಗಃ – ಸೃಷ್ಟಿಸಿ ಹೊರಗೆ ಕೊಡುವವನು.**

**ವಿವರಣೆ :** ಎಷ್ಟು ಬೇಕಾದರೂ ಬಾಚು. ಆದರೆ ಪುನಃ ಅವರನ್ನು ಸಷ್ಟಿ ಮಾಡಿ ಸಮಾಜಕ್ಕೆ ಕೊಡುವ ತಾಕತ್ತು ಇದ್ದರಷ್ಟೇ ಬಾಚು. ಸಮಾಜಕ್ಕೆ ವಿನಿಯೋಗ ಮಾಡುವ ಸಾಮರ್ಥ್ಯ ಇದ್ದರಷ್ಟೇ ಎಷ್ಟು ಬೇಕಾದರೂ ಸಂಗ್ರಹಮಾಡು.

ಭೀಷ್ಮರು ಕೃಷ್ಣನಲ್ಲಿ ಹೇಳ್ತಾರೆ – ನೀನು ಹೇಗೆ ಸಂಗ್ರಹ ಮಾಡ್ತಿಯೋ ಹಾಗೆಯೇ ಸರ್ಜನವನ್ನೂ ಮಾಡುತ್ತಿ. 'ಸಂಗ್ರಹ' 'ಸರ್ಗ'. ಸಂಗ್ರಹ ಅಂದರೆ ಸ್ವೀಕಾರ. ಸರ್ಗ ಅಂದರೆ ಸೃಷ್ಟಿ. ಒಳಗೆ ತೆಗೆದುಕೊಳ್ಳುತ್ತಿ. ಹಾಗೆಯೇ ಹೊರಗೆ ಕೊಡುತ್ತಿ.

ಭಗವಂತನನ್ನು 'ಸರ್ಗ' ಎಂದು ಉಪಾಸನೆ ಮಾಡಿದರ ಫಲವಾಗಿ ತ್ಯಾಗದ ಬುದ್ಧಿ ಉಂಟಾಗುವುದು. ಉಪನಿಷತ್ತಿನಲ್ಲಿ **'ಶ್ರೀಯಾ ದೇಯಮ್ | ಹ್ರಿಯಾ**

**ದೇಯಮ್ | ಭಿಯಾ ದೇಯಮ್ | ಸಂವಿದಾ ದೇಯಮ್'**– ಎಂದು ಕೊಡಬೇಕು ಕೊಡಬೇಕು ಎಂದು ಮತ್ತೆ ಮತ್ತೆ ಸಂದೇಶಿಸಲಾಗಿದೆ. ಹೀಗೆ ಕೊಡಬೇಕೆಂದರೆ ದೇವರು ಕೊಡುವ ಬುದ್ಧಿ ಕೊಡಬೇಕು. ಅವನು ಅಂತಹ ಬುದ್ಧಿಯನ್ನು ಕೊಡಬೇಕೆಂದರೆ ಅವನನ್ನು 'ಸರ್ಗಃ' ಎಂದು ಉಪಾಸನೆ ಮಾಡಬೇಕು.

**೧೬೨. ಧೃತಾತ್ಮಾ – ಯಾರ ಸ್ವರೂಪವು ತನ್ನಿಂದಲೇ ಧರಿಸಲ್ಪಟ್ಟಿದೆಯೋ ಅಂತಹವನು.**

ವಿವರಣೆ : ಕಬಳಿಸುವವನೂ ನೀನೇ. ಮತ್ತೊಂದು ದಿನ ಅದನ್ನೆಲ್ಲ ವಾಂತಿ ಮಾಡುವವನೂ ನೀನೇ. ಎಲ್ಲರನ್ನೂ ಮೆಟ್ಟಿ ನಿಂತವನೂ ನೀನೇ. ಹೀಗೆ ಯಾಕೆ ಎಲ್ಲವನ್ನೂ ನೀನೇ, ನೀನೇ, ನೀನೇ, ಎಂದು ಹೇಳುವುದು ಎಂದರೆ 'ಧೃತಾತ್ಮಾ'. ತನ್ನಲ್ಲೇ ಧರಿಸಲ್ಪಟ್ಟ ಸ್ವರೂಪ ಉಳ್ಳವನು ಎಂದರ್ಥ.

ನಾವು ಎಲ್ಲಿರುವೆವು? ಎಂದಾಗ ಯಾವುದೇ ಊರಲ್ಲಿರುವ ಮನೆಯೊಂದನ್ನು ನಮಗೆ ತಾಣವಾಗಿ ಉಲ್ಲೇಖಿಸುವೆವು. ಆ ಜಡಮನೆಯ ಮೂಲಕ ನಮ್ಮ ಪರಿಚಯವೇ ಹೊರತು ಬೇರೆ ಸ್ವಂತ ಪರಿಚಯ ಇಲ್ಲ.

ಉನಿಷತ್ತಿನಲ್ಲಿ ದೇವರ ಪರಿಚಯದ ಬಗ್ಗೆ ಹೀಗೊಂದು ಪ್ರಶ್ನೆಯನ್ನು ಕೇಳಾಗಿದೆ – **'ಸಃ ಭಗವಃ ಕಸ್ಮಿನ್ ಪ್ರತಿಷ್ಠಿತ ಇತಿ'**

ಆ ಪರಮಾತ್ಮನು ಯಾವ ಆಶ್ರಯದಲ್ಲಿ ನೆಲೆಗೊಂಡಿರುವವನು ? ಎಂದು.

ತನ್ನಲ್ಲೇ ತಾನು ನೆಲೆಗೊಂಡಿರುವನೇ ಹೊರತು ನಮ್ಮಂತೆ ಮತ್ತೊಂದನ್ನು ಆಶ್ರಯಿಸಿಕೊಂಡಿಲ್ಲ ಎಂದು ಸಮಾಧಾನಿಸಲಾಗಿದೆ –

**'ಸ್ವೇ ಮಹಿಮ್ನಿ ಪ್ರತಿಷ್ಠಿತ ಇತಿ'**

ತನ್ನ ಸಾಮರ್ಥ್ಯವನ್ನು ಅವಲಂಬಿಸಿಕೊಂಡು ತಾನಿರುವನು. ತನ್ನ ಮಹತ್ತ್ವಕ್ಕೆ ತಾನೇ ಕಾರಣನಾದವನು, ತನ್ನಿಂದಲೇ ತನ್ನ ಮಹತ್ವ ಪಡೆದವನು. ಪ್ರತಿಯೊಬ್ಬನೂ ಅಪೇಕ್ಷಿಸುವುದು ತಾನು ಸ್ವಂತ ಕಾಲಲ್ಲಿ ನಿಲ್ಲುವಂತಾಗಬೇಕು. ಸ್ವಂತಿಕೆಯಿಂದ ಬದುಕಬೇಕು. ಸ್ವಂತಿಕೆ ಬೇಕು. ಹಾಗಾದರೆ ಭಗವಂತನನ್ನು ಧೃತಾತ್ಮಾ ಎಂದು ಉಪಾಸನೆ ಮಾಡೋಣ. ನಿನ್ನ ಮಹಿಮೆಯಿಂದಾಗಿಯೇ ನೀನು ಬೆಳಕಿಗೆ ಬಂದವನು. ಹೊರತು ಮತ್ತೊಬ್ಬರ ಮಹಿಮೆಯನ್ನು ಅವಲಂಬಿಸಿರುವವನಲ್ಲ.

**೧೬೩. ನಿಯಮಃ – ಯಾರು ಲೋಕಕ್ಕೆ ನಿಯಮಗಳನ್ನು ಕೊಟ್ಟಿರುವನೋ ಅಂತಹವನು.**

**ವಿವರಣೆ:** ಪ್ರತಿಯೊಬ್ಬರೂ ತಮ್ಮ ಜೀವನದಲ್ಲಿ ಒಂದು ನಿಯಮವನ್ನು ಅಳವಡಿಸಿ ಕೊಂಡಿರುವರು. ಯಾವುದೇ ನಿಯಮವಿಲ್ಲದ ಜೀವನ ಪಶು ಜೀವನವೆನಿಸುವುದಷ್ಟೇ. ಸಮಾಜದಲ್ಲಿ ಬ್ರಾಹ್ಮಣ ವರ್ಣದವರು ಹೀಗಿರಬೇಕು. ಕ್ಷತ್ರಿಯವರ್ಣದವರು ಹೀಗಿರಬೇಕು, ಎಂದು ಬೇರೆ ಬೇರೆ ವರ್ಣದವರಿಗೆ, ಗಾರ್ಹಸ್ಥ್ಯ ಮುಂತಾದ ಆಶ್ರಮದವರಿಗೆ ಬೇರೆ ಬೇರೆ ನಿಯಮಗಳನ್ನು ಹಾಕಿದವರು ಯಾರು ? ಶಾಸ್ತ್ರ ವಿಧಿಸಿದ್ದು. ಆ ಶಾಸ್ತ್ರವಾದರೂ ಯಾರ ಮಾತು ? ಭಗವಂತನ ಮಾತು. ಹಾಗಾದರೆ ನಿಯಮವನ್ನು ಹಾಕಿದವನು ಭಗವಂತ. ಯಾರಿಂದ ನಿಯಮ ಬಂತೋ ಅವನನ್ನೇ 'ನಿಯಮ' ಎಂದು ಕರೆದರು. ಯಾರಿಂದಾಗಿ ನಮ್ಮ ಜೀವನ ನಡೆಯುವುದೋ, ಯಾರಿಂದಾಗಿ ನಮಗೆ ಅನ್ನ ದೊರಕುವುದೋ, ಅಂತಹವರನ್ನು ತೋರಿಸಿ 'ಇವರು ನನ್ನ ಜೀವನ' 'ಇವರು ನನ್ನ ಅನ್ನ' ಎಂದು ಪರಿಚಯಿಸಿಕೊಡುವೆವು. ಅದರಂತೆ ಸಮಾಜಕ್ಕೆ ಭಗವಂತನಿಂದಲೇ ನಿಯಮಗಳು ಬಂದಿವೆ ಎಂದು ಭಗವಂತನನ್ನೇ 'ನಿಯಮ' ಎಂದು ಕರೆಯಲಾಗಿದೆ. ಭಗವಂತನೇ ನನ್ನ ಜೀವನದ ನಿಯಮ ಎಂಬುದು ಒಳ್ಳೆಯ ಮಾತು. ಮಾನವ ಎಂದಾದ ಮೇಲೆ ಅವನ ಜೀವನದಲ್ಲಿ ಬಿಡಲೇಬಾರದೆಂಬ ನಿಯಮ ಎಂದರೆ ಭಗವಂತ ಎಂದಾಗಬೇಕು. ವ್ಯಕ್ತಿ ತನ್ನ ಜೀವನದಲ್ಲಿ ಭಗವಂತನನ್ನು ಬಿಟ್ಟನೋ ನಿಯಮವನ್ನು ಬಿಟ್ಟ ಎಂದೇ ಅರ್ಥ. ನಿಯಮವನ್ನು ಬಿಟ್ಟನೋ 'ಪಶು' ಎಂದರ್ಥ. ಆದ್ದರಿಂದ ಮಾನವರೆನಿಸಬೇಕಾದರೆ ನಿಯಮಗಳು ಬೇಕು. ಭಗವಂತನೆಂಬ ನಿಯಮವನ್ನು ನಮ್ಮ ಜೀವನದಲ್ಲಿ ಇಟ್ಟುಕೊಳ್ಳಬೇಕು. ಅದಕ್ಕಾಗಿಯೇ ಭಗವಂತನನ್ನು 'ನಿಯಮ' ಎಂದೇ ಕರೆಯಲಾಗಿದೆ.

ಶಾಸ್ತ್ರಕಾರರು ಪ್ರತಿಯೊಬ್ಬ ಮಾನವನೂ ಅಳವಡಿಸಿಕೊಳ್ಳಬೇಕಾದ ನಿಯಮಗಳನ್ನು ಹೀಗೆ ತಿಳಿಸಿರುವರು – ಶೌಚ – ಮಾನಸಿಕವಾಗಿಯೂ, ದೈಹಿಕವಾಗಿಯೂ ಸ್ವಚ್ಛನಾಗಿರುವುದು. ತಪಸ್ಸು ಒಳ್ಳೆಯದಕ್ಕಾಗಿ ದೈಹಿಕವಾಗಿಯೂ, ಮಾನಸಿಕವಾಗಿಯೂ ಸ್ವಲ್ಪ ಶ್ರಮ ಪಡುವುದು. ಮನಸ್ಸನ್ನು ಏಕಾಗ್ರತೆಗೆ ತರಲು ಪ್ರಯತ್ನ ಮಾಡುವುದು, ಅದು ಮನಸ್ಸಿಗೆ ಶ್ರಮವಾದುದರಿಂದ ಅದು ಮಾನಸಿಕ ತಪಸ್ಸು. ಉಪವಾಸವಿರುವುದು ದೈಹಿಕ ಶ್ರಮ. ತುಷ್ಟಿ – ಸಾಕು ಎಂಬ ಬುದ್ಧಿ ಯಾವಾಗ ಮನುಷ್ಯನಿಗೆ ಬರುವುದೋ ಆಗ ಅವನಲ್ಲಿ ಪ್ರಸನ್ನತೆ ಸಿದ್ಧಿಸುವುದು. 'ಸಿಕ್ಕಿದ್ದು ಸಾಕು' ಅಲಂಬುದ್ಧಿ ಯಾರಿಗೆ ಬಂತೋ ಅವರು ಶ್ರೀಮಂತರು. ಅಧ್ಯಯನ– ಸ್ವಲ್ಪವಾದರೂ ಓದುವಿಕೆ ಬೇಕು. ನಮ್ಮಲ್ಲಿ ಬೈಯಲಿಕ್ಕೂ ಆ ಶಬ್ದವನ್ನು ಬಳಸುವುದುಂಟು ಎದೆ ಸೀಳಿದರೂ ನಾಲ್ಕು ಅಕ್ಷರಗಳಿಲ್ಲ ಎಂದು. ಯಾವುದು ನಾಲ್ಕು ಅಕ್ಷರಗಳು? 'ಭಾ' 'ಗ' 'ವ' 'ತ'–ಎಂಬುವುದೇ ನಾಲ್ಕು ಅಕ್ಷರಗಳು.

ಪ್ರತಿಯೊಬ್ಬನ ಹೃದಯದಲ್ಲೂ ನಾಲ್ಕು ಅಕ್ಷರಗಳು ಇರಬೇಕು. ಎಂದರೆ ಭಾಗವತ ಇರಬೇಕು ಎಂದರ್ಥ. 'ಭಾರೀ ಮಾತನಾಡುವನು, ಆದರೆ ಎದೆಯಲ್ಲಿ ನಾಲ್ಕು ಅಕ್ಷರಗಳಿಲ್ಲ'– ಎಂಬ ಬೈಯುವ ಧಾಟಿಯ ಆಂತರ್ಯ ಎದೆಯಲ್ಲಿ ಭಾಗವತ ಇಲ್ಲ, ಭಗವತ್ ಪ್ರಜ್ಞೆ ಇಲ್ಲ – ಎಂಬುದು.

ಆದ್ದರಿಂದ ಮಾನವನ ಜೀವನದಲ್ಲಿ ಕಿಂಚಿತ್ತಾದರೂ ಅಧ್ಯಯನ ಬೇಕು. ಕೊನೆಯದಾಗಿ, ಭಗವಂತನ ಆರಾಧನೆ ಬೇಕು.

ಹೀಗೆ ಮಾನವ ಎನಿಸಬೇಕಾದರೆ ಪ್ರತಿಯೊಬ್ಬರಲ್ಲೂ ಸ್ವಚ್ಛತೆಯೇ ಮುಂತಾದ ಐದು ನಿಯಮಗಳು ಬೇಕೆ ಬೇಕು. ಈ ನಿಯಮಗಳು ಭಗವಂತನಿಂದ ಬಂದವು. ಲೋಕಕ್ಕೆ ನಿಯಮಗಳನ್ನು ಕೊಟ್ಟದ್ದರಿಂದ ಭಗವಂತನೇ 'ನಿಯಮ' ಎನಿಸುವನು.

ಹೀಗೆ ಭಗವಂತನನ್ನು 'ನಿಯಮ' ಎಂದು ಉಪಾಸನೆ ಮಾಡಿದರೆ ನಮ್ಮ ಜೀವನದಲ್ಲೂ ನಿಯಮ ಸಿದ್ಧಿಸುವುದು. ಇಲ್ಲದಿದ್ದಲ್ಲಿ ನಮ್ಮ ಜೀವನ ನಿಯಮ ರಹಿತವಾದ ಪಶುಜೀವನ ಎನಿಸೀತು !

**೧೬೪. ಯಮಃ – ಎಲ್ಲರನ್ನೂ ತಿದ್ದುವವನು.**

**ವಿವರಣೆ :** ಭೀಷ್ಮರು ಕೃಷ್ಣನನ್ನು ಎದುರಿಗೆ ಕುಳ್ಳಿರಿಸಿಕೊಂಡು ನೀನು ಯಮ – ಎಂದು ಹೊಗಳುತ್ತಿರುವರು. ನಮ್ಮನ್ನು ಯಾರಾದರೂ ಹೀಗೆ 'ಯಮ' – ಎಂದು ಕರೆದು ಬಿಟ್ಟರೆ ನಾವು ಅವರ ಪಾಲಿಗೆ 'ಯಮ'ರಾಗಿಯೇ ಬಿಡುವೆವು ! ಹೀಗೆ ಯಮ ಶಬ್ದ ನಮಗೆ ಬೈಯುವ ಶಬ್ದವಾದರೆ ದೇವರಿಗೆ ಹೊಗಳುವ ಶಬ್ದ ಎನಿಸುವುದು. ದೇವರಿಗೆ ಯಾವುದು ಬೈಯುವ ಶಬ್ದವೋ ಅದು ನಮಗೆ ಹೊಗಳುವ ಶಬ್ದ. ಜೀವರಿಗೂ ಈಶನಿಗೂ ಇಷ್ಟೇ ವ್ಯತ್ಯಾಸ.

ಭಗವಂತ ಯಾವ ಅಭಿಪ್ರಾಯದಲ್ಲಿ 'ಯಮ' ಎನಿಸುವನು ? 'ಯಮಯತೀತಿ ಯಮಃ' ಹೇಗಿರಬೇಕು, ಹೇಗಿರಬಾರದು – ಎಂದು ಎಲ್ಲರನ್ನೂ ತಿದ್ದುವವನು ಭಗವಂತ. ಬುದ್ಧರೂಪದಿಂದ ಬಂದು ದೈತ್ಯರನ್ನೂ ತಿದ್ದಿದ್ದ. ದೈತ್ಯರು ತಮಗೆ ಅಯೋಗ್ಯವಾದ ಹರಿಸರ್ವೋತ್ತಮತ್ವದ ಉಪಾಸನೆ ಮಾಡುತ್ತಿದ್ದರು. ದೇವರು ಬುದ್ಧನಾಗಿ ಬಂದು ಅವರನ್ನು ತಿದ್ದಿ ಅವರ ಪಾಲಿಗೆ 'ಯಮ' ಎನಿಸಿದ. ದೈವಸ್ವಭಾವದವರು ತಾವೇ ದೇವರೆಂದು ಕೆಟ್ಟ ಉಪಾಸನೆ ನಡೆಸುವ ಹಂತಕ್ಕೆ ಬಂದಾಗ ಹಯಗ್ರೀವನಾಗಿ, ವ್ಯಾಸನಾಗಿ ಬಂದು ಅವರನ್ನು ತಿದ್ದಿ ಅವರ ಪಾಲಿಗೆ 'ಯಮ' ಎನಿಸಿದ. ಹಾಗಾದರೆ ಪ್ರತಿಯೊಬ್ಬ ವ್ಯಕ್ತಿಯನ್ನು ಅವರವರ ಯೋಗ್ಯತೆಗೆ

ಅನುಗುಣವಾಗಿ ತಿದ್ದುವುದರಿಂದ ಅವನಿಗೆ ಯಮ ಎಂಬ ಹೆಸರು. 'ಯಮಯತೀತಿ ಯಮಃ' ತಿದ್ದುವವನನ್ನು ಯಮ ಎಂದು ಕರೆಯುವರು. ತಿದ್ದುವುದು ದಂಡನೆಯ ಮೂಲಕವೂ ಆಗಬಹುದು, ಉಪದೇಶಿಸಿ ಮನಸ್ಸನ್ನು ಪ್ರೇರಿಸುವ ಮೂಲಕವೂ ಆಗಬಹುದು. ಇನ್ನೊಬ್ಬನ ಮೂಲಕ ತಿದ್ದುವುದೂ ಇದೆ. ನಾವು ಏನೋ ತಪ್ಪು ಮಾಡುತ್ತಿದ್ದೇವೆ. ಅದಕ್ಕಾಗಿ ಆರಕ್ಷಕರು ನಮ್ಮನ್ನು ದಂಡಿಸಿದರು. ಹೀಗೆ ಆರಕ್ಷಕರ ಮೂಲಕ ದಂಡನೆ ನೀಡಿ ನಮ್ಮನ್ನು ತಿದ್ದುವನು. ಇದು ದೇವರು ಹೊರಗಿನಿಂದ ತಿದ್ದುವ ಕ್ರಮ. ಏನೋ ಕಳ್ಳತನ ಮಾಡಿದೆವು. ಆದರೆ ಮತ್ತೆ ಹಾಗೆ ಮಾಡಬಾರದಿತ್ತು. ಎಂದು ಮನಸ್ಸಿನಲ್ಲಿ ಪಶ್ಚಾತ್ತಾಪ ಪಟ್ಟೆವು. ಇದು ಭಗವಂತ ನಮ್ಮನ್ನು ಮಾನಸಿಕವಾಗಿ ತಿದ್ದುವ ಕ್ರಮ.

ನಾವು ಭಗವಂತನನ್ನು 'ಯಮ' ಎಂದು ಉಪಾಸನೆ ನಡೆಸಿದಲ್ಲಿ ನಮ್ಮನ್ನು ಭಗವಂತ ತಿದ್ದುತ್ತಾನೆ. ಒಳ್ಳೆಯವರಾದ ನಮ್ಮಿಂದ ಕೆಟ್ಟ ಕೆಲಸ ನಡೆದಿದ್ದರೂ ಆ ಬಗ್ಗೆ ಪಶ್ಚಾತ್ತಾಪ ಮೂಡುವಂತೆ ಭಗವಂತ ನಮ್ಮನ್ನು ತಿದ್ದುವನು.

**ವೇದ್ಯೋ ವೈದ್ಯಃ ಸದಾಯೋಗೀ ವೀರಹಾ ಮಾಧವೋ ಮಧುಃ ।**
**ಅತೀಂದ್ರಿಯೋ ಮಹಾಮಾಯೋ ಮಹೋತ್ಸಾಹೋ ಮಹಾಬಲಃ ॥೧೮॥**

**೧೬೫. ವೇದ್ಯಃ – ತಿಳಿದುಕೊಳ್ಳಲು ಯೋಗ್ಯನಾಗಿರುವವನು.**

**ವಿವರಣೆ** : ಎಷ್ಟೋ ಜನ ಹೇಳುವುದುಂಟು.'ದೇವರು' ತಿಳಿಯುವ ಸಂಗತಿಯೇ ಅಲ್ಲ.ದೇವರು ಅವಾಚ್ಯ; ಶಬ್ದಗಳಿಂದ ತಿಳಿಸಲಿಕ್ಕೆ ಆಗದವನು. ನಮ್ಮ ತಿಳುವಳಿಕೆಗೆ ಗೋಚರಿಸದವನು. ಎಂದೆಲ್ಲ ಹೇಳುವವರಿದ್ದಾರೆ. ಭೀಷ್ಮರು ಅಂತಾರೆ ಕೃಷ್ಣನಲ್ಲಿ – ನಮ್ಮ ಎದುರಿಗೆ ಕುಳಿತಿದ್ದಿ ನೀನು. ನಿನ್ನನ್ನು ಕಣ್ಣುಗಳಿಂದ ನೋಡುತ್ತಿದ್ದೇನೆ. ಆದರೂ ನೀನು ತಿಳುವಳಿಕೆಗೆ ಗೋಚರಿಸದವ ಎಂದರೆ ಏನರ್ಥ ! ನೀನು ವೇದ್ಯ. ನೀನು ತಿಳುವಳಿಕೆಗೆ ಯೋಗ್ಯ. ತಿಳಿದುಕೊಳ್ಳಬೇಕು – ಜುಜುಬಿ ಲೋಕವನ್ನಲ್ಲ. ಮತ್ತೆ ಯಾರನ್ನು ತಿಳಿದುಕೊಂಡಾಗ ಉಳಿದೆಲ್ಲವನ್ನೂ ತಿಳಿದುಕೊಂಡಂತೆ ಆಗುವುದೋ ಅಂತಹ ದೇವರನ್ನು ತಿಳಿದುಕೊಳ್ಳಬೇಕು. ಉಡುಪಿಗೆ ಬಂದು ಕೃಷ್ಣಮಠದ ಶ್ರೀಕೃಷ್ಣನನ್ನು ಕಂಡಮಾತ್ರಕ್ಕೆ ಉಡುಪಿಯನ್ನು ಕಂಡಿದ್ದೇವೆ ಎನ್ನಲಾಗುವುದು.ಪ್ರಧಾನ ವಸ್ತುವನ್ನು ತಿಳ್ಕೊಂಡಾಗ ಅಪ್ರಧಾನ ವಸ್ತುಗಳನ್ನೂ ತಿಳ್ಕೊಂಡಂತೆಯೇ ಆಗುವುದು. ಒಬ್ಬ ಭಗವಂತನನ್ನು ತಿಳ್ಕೊಂಡರೆ ಲೋಕವನ್ನೆಲ್ಲ ತಿಳ್ಕೊಂಡಂತೆಯೇ.

ಲೋಕ ಮತ್ತು ಭಗವಂತ ಈ ಎರಡು ವಸ್ತು ನಮ್ಮ ಕಣ್ಮುಂದೆ ಇರುವಾಗ

ಇವುಗಳಲ್ಲಿ ಯಾವುದು ತಿಳ್ಕೊಳ್ಳಲು ಯೋಗ್ಯವಾದುದು? ಎಂದರೆ ಭೀಷ್ಮರು ಅಂದರು – ಕೃಷ್ಣ, ನೀನೇ ವೇದ್ಯ. ತಿಳ್ಕೊಳ್ಳಲು ಯೋಗ್ಯನಾದವನು. ಲೋಕ ವೇದ್ಯ ಅಲ್ಲ.

ಕೃಷ್ಣನೇ ಭಗವದ್ಗೀತೆಯಲ್ಲಿ ಹೇಳಿದ – 'ವೇದೈಶ್ಚ ಸರ್ವೈರಹಮೇವ ವೇದ್ಯಃ' – ಸಮಗ್ರ ವೇದಗಳಿಂದ ನಾನೇ ತಿಳಿದುಕೊಳ್ಳಲು ಯೋಗ್ಯನಾದವನು. ಹೊರತು ಆ ಹೋಮ ಮಾಡುವುದು? ಹೇಗೆ! ಈ ಹೋಮ ಮಾಡುವುದು ಹೇಗೆ? – ಎಂದೆಲ್ಲ ತಿಳಿಸುವುದಕ್ಕಾಗಿ ವೇದಗಳು ಹೊರಟವುಗಳಲ್ಲ.

ಅದುದರಿಂದ ದೇವರೇ ತಿಳಿದುಕೊಳ್ಳಲು ಯೋಗ್ಯನೆನಿಸಿದ್ದು 'ವೇದ್ಯ' ಎನಿಸಿರುವನು.

**೧೬೬. ವೈದ್ಯಃ – ತಿಳುವಳಿಕೆ ಉಳ್ಳವನು.**

**ವಿವರಣೆ :** ಲೋಕದಲ್ಲಿ ಔಷಧಿಕೊಡುವವನನ್ನು ವೈದ್ಯ ಎಂದು ಕರೆಯುವೆವು. ಆದರೆ ನಿಜವಾಗಿ ವೈದ್ಯ ಎಂದರೆ ತಿಳುವಳಿಕೆ ಉಳ್ಳವನು. ಔಷಧಿ ಕೊಡುವ ವ್ಯಕ್ತಿಗಳಿಗಾದರೂ ನಮ್ಮ ರೋಗಗಳ ತಿಳುವಳಿಕೆ ಇರುವುದೆಂಬ ದೃಷ್ಟಿಯಿಂದಲೇ ಅವರನ್ನು ವೈದ್ಯರೆಂದು ಕರೆಯಲಾಗುವುದು.

**'ಆವ ರೋಗವು ಎನಗೆ ದೇವ ಧನ್ವಂತ್ರಿ'** ಎಂದು ರೋಗಿ ವೈದ್ಯನಲ್ಲಿ ಕೇಳಬೇಕು. ಹೊರತು ಈಗಿನ ವೈದ್ಯರಂತೆ ರೋಗಿಯಲ್ಲಿ ನಿನಗೆ ಏನು ರೋಗ ಎಂದು ಕೇಳುವುದಿಲ್ಲ.

'ವಿದ ಜ್ಞಾನೇ' – ಎಂಬ ಕ್ರಿಯಾಪದದಿಂದ ರೂಪುಗೊಂಡ 'ವೈದ್ಯ' ಶಬ್ದದಿಂದ ಕರೆಸಿಕೊಳ್ಳಲ್ಪಡುವವನು ರೋಗಿಯ ಶರೀರದ ಪ್ರತಿಯೊಂದು ಅವಯವದ ತಿಳುವಳಿಕೆಯನ್ನೂ, ಆಯಾ ಅವಯವಕ್ಕೆ ಏನು ರೋಗ ಹಿಡಿದಿದೆ ಎಂಬುದರ ತಿಳುವಳಿಕೆಯನ್ನೂ ಹೊಂದಿರಬೇಕು. **'ಹೊಸ ವೈದ್ಯನಿಗಿಂತಲೂ ಹಳೇ ರೋಗಿಯೇ ವಾಸಿ'** – ಎಂಬ ಗಾದೆ ಹೊರಟದ್ದೇ ಹಳೆಯ ರೋಗಿಗೆ ಹೆಚ್ಚು ತಿಳುವಳಿಕೆ ಇರುವುದೆಂಬ ಅಭಿಪ್ರಾಯದಲ್ಲಿಯೇ.

ಭೀಷ್ಮರು ಕೃಷ್ಣನಲ್ಲಿ ನಿವೇದಿಸಿಕೊಳ್ಳುವರು – ನೀನೇ ನಿಜವಾದ ವೈದ್ಯ. ದುರ್ಯೋಧನ ಪಕ್ಷದಲ್ಲಿದ್ದ ನನಗೆ, ದ್ರೋಣಾಚಾರ್ಯರಿಗೆ, ಅಶ್ವತ್ಥಾಮಾಚಾರ್ಯರಿಗೆ, ಕೃಪಾಚಾರ್ಯರಿಗೆ ....... ಹೀಗೆ ಪ್ರತಿಯೊಬ್ಬರಿಗೆ ಯಾವ ಯಾವ ರೋಗ ಎಂದು ತಪಾಸಣೆ ನಡೆಸಿ, ಅದಕ್ಕೆ ಸೂಕ್ತವಾದ ಚಿಕಿತ್ಸೆ ನಡೆಸಿದವನು ನೀನು.

ಭವರೋಗದ ತಿಳುವಳಿಕೆ ಉಳ್ಳ ನೀನೆ ಭವವೈದ್ಯ. ಲೋಕದಲ್ಲಿರುವ ವೈದ್ಯರು ತಮ್ಮಲ್ಲಿರುವ ವೈದ್ಯನಾಮಕ ಭಗವಂತನ ಅನುಸಂಧಾನ ಮಾಡಿಕೊಂಡು ಔಷಧ ನೀಡಬೇಕು.

**೧೬೭. ಸದಾಯೋಗೀ – ಯಾವಾಗಲೂ ಜೀವರ ಸಂಬಂಧವನ್ನು ಹೊಂದಿರುವವನು.**

**ವಿವರಣೆ :** ಯೋಗ ಅಂದರೆ ಸಂಬಂಧ. ಯೋಗಿ ಅಂದರೆ ಸಂಬಂಧವುಳ್ಳವನು. ಯಾವಾಗ ಸಂಬಂಧವುಳ್ಳವನು? 'ಸದಾ' ಯಾವಾಗಲೂ. ಭಗವಂತನು ಸದಾ ಕಾಲದಲ್ಲಿ ನಮ್ಮ ಜೊತೆಗೆ ಇರುವನು. ನಾವು ಅವನನ್ನು ಹಚ್ಚಿಕೊಳ್ಳದಿದ್ದರೂ ಅವನು ನಮ್ಮನ್ನು ಬಿಟ್ಟಿಲ್ಲ. ಅದಕ್ಕೇ ಅಂದದ್ದು **'ಏನು ಕರುಣಾನಿಧಿಯೋ .........'** – ಎಂದು. ನಾವು ಕಾಳಜಿಯನ್ನೇ ತಾಳುವುದಿಲ್ಲ. ಆದರೂ ಭಗವಂತ ಬಿಟ್ಟಿಲ್ಲ. ಸದಾಕಾಲ ನಮ್ಮ ಯೋಗವನ್ನು– ಸಂಬಂಧವನ್ನು ಹೊಂದಿರುವನು. ಎಲ್ಲಿಯವರೆಗೆ ಅಂದರೆ ಈ ಶರೀರದಿಂದ ಪ್ರಾಣ ಹೋದರೂ ಇದರಲ್ಲಿ ಭಗವಂತನ ಸನ್ನಿಧಾನ ಇದ್ದೇ ಇರುವುದು. ಭಗವಂತನ ರೂಪ ಈ ಶರೀರದಲ್ಲಿ ಇದ್ದೇ ಇರುವುದು. ಆದರೂ ಭಗವಂತನ ಸಂಬಂಧವನ್ನು ನಾವು ವಿವೇಚಿಸಿಕೊಳ್ಳುವುದಿಲ್ಲ. 'ಮುಹ್ಯಂತಿ ಯಂ ಸೂರಯಃ' – ಎಂದಿರುವಂತೆ ವಿದ್ವಾಂಸರೂ ಪರಮಾತ್ಮನ ಪಾತ್ರವನ್ನು ಗುರುತಿಸಿಕೊಳ್ಳುವಲ್ಲಿ ಮೋಹಕ್ಕೆ ಒಳಗಾಗುವುದಿದೆ. ಗಂಟೆಗಟ್ಟಲೆ ಭಗವಂತನ ಸ್ವಾತಂತ್ರ್ಯದ ಕುರಿತು ಪ್ರವಚನ ಮಾಡಿ, 'ನಾನು ಪ್ರವಚನ ಮಾಡಿದೆ' – ಎಂದು ಬಿಡುವರು ! **'ಪುತ್ರಭ್ರಾತೃಸಖಿತ್ವೇನ ಸ್ವಾಮಿತ್ವೇನ ಯತೋ ಹರಿಃ । ಬಹುಧಾ ಗೀಯತೇ'** – ಭಗವಂತನನ್ನು ನಾನಾ ಶಬ್ದಗಳಿಂದ ಕರೆಯುವರು. ಒಬ್ಬ ಅಂದ ದೇವರು ಎನ್ನ ಮಗ. ಇನ್ನೊಬ್ಬ ಅಂದ ದೇವರು ಎನ್ನ ಅಣ್ಣ. ಮತ್ತೊಬ್ಬ ಅಂದ ದೇವರು ಎನ್ನ ಗೆಳೆಯ. ಮಗದೊಬ್ಬ ಅಂದ ದೇವರು ಎನ್ನ ಒಡೆಯ. ಹೀಗೆ ಸಾಮಾನ್ಯವಾಗಿ ಎಲ್ಲರೂ ದೇವರ ಬಗ್ಗೆ ಬೇರೆ ಬೇರೆ ಸಂಬಂಧಿ ಶಬ್ದವನ್ನು ಪ್ರಯೋಗಿಸದೆ ಇರುವುದಿಲ್ಲ. ಅರ್ಜುನ ಕೃಷ್ಣ ಎನ್ನ ಮಿತ್ರ ಅಂದ. ಧರ್ಮರಾಜ ಕೃಷ್ಣ ಎನ್ನ ಭಾವ ಅಂದ. ಬಲರಾಮ ಕೃಷ್ಣ ಎನ್ನ ತಮ್ಮ ಅಂದ. ಲಕ್ಷ್ಮಣ ರಾಮ ಎನ್ನ ಅಣ್ಣ ಅಂದ. ವಸುದೇವದೇವಕಿಯರು ಕೃಷ್ಣ ಎನ್ನ ಮಗ ಅಂದರು. ರುಗ್ಮಿಣಿ ಕೃಷ್ಣ ಎನ್ನ ಗಂಡ ಅಂದಳು. – ಹೀಗೆ ಆಗಿನ ಕಾಲದ ಯಾರಲ್ಲೂ ವಿಚಾರಿಸಿದರೂ ಕೃಷ್ಣನ ಜೊತೆಗೆ ತಮಗೆ ಯಾವುದಾದರೊಂದು ಸಂಬಂಧವನ್ನು ಉಲ್ಲೇಖಿಸುತ್ತಲೇ ಇದ್ದರು. ಕೃಷ್ಣ – ಒಬ್ಬ ಭಗವಂತ ಎಲ್ಲರಿಗೂ ಸಂಬಂಧಿಯಾಗಿಯೇ ಇದ್ದಾನೆ. ಯಾವಾಗಲೂ ಯಾರ ಸಂಬಂಧವನ್ನೂ ಕಡೆದುಕೊಂಡವನಲ್ಲ. ಒಂದೊಮ್ಮೆ ನಾವು ಅವನ ಸಂಬಂಧವನ್ನು ಕಡೆದುಕೊಂಡರೂ ಅವನು ನಮ್ಮ ಸಂಬಂಧವನ್ನು ಕಡೆದುಕೊಳ್ಳುವುದಿಲ್ಲ.

ಭಗವಂತನನ್ನು 'ಸದಾಯೋಗೀ' – ಎಂದು ಉಪಾಸನೆ ಮಾಡಿದರೆ ಭಗವಂತ ನಮ್ಮ ಜೊತೆಗೆ ಸದಾಕಾಲ ಸಂಬಂಧವನ್ನಿಟ್ಟುಕೊಂಡಂತೆ, ನಾವೂ ಭಗವಂತನ ಜೊತೆಗೆ ಸದಾಕಾಲ ಸಂಬಂಧವನ್ನಿಟ್ಟುಕೊಳ್ಳುವಂತೆ, – ಸದಾಕಾಲ ಅವನ ಸಂಬಂಧದ ಪ್ರಜ್ಞೆಯನ್ನು ಹೊಂದುವಂತೆ ಭಗವಂತನು ಅನುಗ್ರಹಿಸುವನು.

ಭೀಷ್ಮರು ದುರ್ಯೋಧನನ ಪಕ್ಷದಲ್ಲಿದ್ದುದರಿಂದ ಈ ನಿಟ್ಟಿನಲ್ಲಿ ಸ್ವಲ್ಪ ಕಾಲು ಜಾರಿದ್ದರು. ಕೊನೆಯ ಕಾಲಕ್ಕೆ ಅದನ್ನು ಸರಿಪಡಿಸಿಕೊಳ್ಳಲು ಯತ್ನಿಸಿದರು. ಆದರೂ ದೇಹತ್ಯಾಗದ ಕೊನೆಯ ಕ್ಷಣದಲ್ಲಿ ದೇವರ ಸಂಬಂಧವನ್ನು ಮರೆತುಬಿಟ್ಟರು. ದೇವರು ಅವರ ಪಾಲಿಗೆ 'ಸದಾಯೋಗೀ' ಆಗಿದ್ದರೂ ಭೀಷ್ಮರು ಅದನ್ನು ವಿವೇಚಿಸಿಕೊಳ್ಳಲಿಲ್ಲ.

ಜೀವನವಿಡೀ ದೇವರ ಸ್ಮರಣೆ ಮಾಡುತ್ತಿದ್ದರೂ ಸಾಯುವ ಕ್ಷಣದಲ್ಲಿ ಅವನ ವಿಸ್ಮರಣೆ ಬರುವುದುಂಟು. ಹೇಗೆ ಜೀವನವಿಡೀ ಉಸಿರಾಡುತ್ತಿದ್ದರೂ ಕೊನೆಗೊಮ್ಮೆ ಉಸಿರಾಟ ನಿಂತೇ ಹೋಗುವುದೋ ಹಾಗೆ. ಹಾಗಾಗದೆ 'ಸದಾಯೋಗೀ' ಎನಿಸುವ ಭಗವಂತನು ತಾನು ನಮ್ಮ ಸಂಬಂಧವನ್ನು ಯಾವಾಗಲೂ ಇಟ್ಟುಕೊಂಡಿರುವಂತೆ, ನಾವೂ ಅವನ ಸಂಬಂಧದ ಪ್ರಜ್ಞೆಯನ್ನು ಯಾವಾಗಲೂ ಹೊಂದಿರುವಂತೆ ಅನುಗ್ರಹಿಸಬೇಕು.

**೧೬೮. ವೀರಹಾ – * ವಿಶೇಷವಾಗಿ ಎಲ್ಲವನ್ನೂ ತ್ಯಾಗ ಮಾಡಿರುವವನು.**
*** ಜರಾಸಂಧಾದಿ ವೀರರನ್ನು ಕೊನೆಗಾಣಿಸಿರುವವನು.**

**ವಿವರಣೆ** : ಸಾಮಾನ್ಯವಾಗಿ ಒಂದು ಅರ್ಥ – ವೀರರನ್ನು ಹನನ ಮಾಡುವವನು. ವೀರರು ಅಂದರೆ ಜರಾಸಂಧ, ಪೌಂಡ್ರಕವಾಸುದೇವ, ಕಂಸ – ಇತ್ಯಾದಿ ಪರಾಕ್ರಮಿಗಳು. ಅವರನ್ನೆಲ್ಲ 'ಹಂತಿ' – ಕೊನೆಗಾಣಿಸಿರುವವನು; ಅವರ ವೀರ್ಯವನ್ನು ನಾಶ ಪಡಿಸಿರುವವನು. ಈ ಅರ್ಥ ಸಾಮಾನ್ಯವಾದದು.

ಇದಕ್ಕೆ ವಿಶಿಷ್ಟವಾದ ಅರ್ಥ ಹೀಗಿದೆ – ವೀರ + ಹಾ ಅಲ್ಲ; ಮತ್ತೆ ವೀ + ರಹಾ. ರಹಾ ಎಂದರೆ ತ್ಯಾಗ. ವೀ ಅಂದರೆ ವಿಶೇಷವಾಗಿ. ವೀರಹಾ– ವಿಶೇಷವಾಗಿ ಎಲ್ಲವನ್ನೂ ತ್ಯಾಗ ಮಾಡಿದವನು. ಎಲ್ಲವನ್ನೂ ತ್ಯಾಗ ಮಾಡಿದ ಋಷಿಮುನಿಗಳು ಇರಬಹುದು. ಆದರೆ ಅವರೂ ಪ್ರಾಣವನ್ನು ತ್ಯಾಗ ಮಾಡಲಾರರು. ಉಸಿರಾಡಲು ಗಾಳಿಯನ್ನು ತ್ಯಾಗ ಮಾಡಲಾರರು. ದೇವರಾದರೂ ಯಾವುದನ್ನು ಬೇಕಾದರೂ ತ್ಯಾಗ ಮಾಡಲು ಸಿದ್ಧ. ಲಕ್ಷ್ಮೀಯನ್ನೂ ಬಿಟ್ಟು ಇರಬಲ್ಲ. ಆದುದರಿಂದಲೇ 'ವೀ' – ಎಂದು ದೀರ್ಘವನ್ನು ಪ್ರಯೋಗಿಸಲಾಗಿದೆ. 'ವಿ' ಶಬ್ದದ ಅರ್ಥವಾದ ' ವಿಶೇಷದಲ್ಲಿ ಅಧಿಕ್ಯವನ್ನು ತೋರಿಸಿಕೊಡುವುದೇ ಆ ದೀರ್ಘದ ಉದ್ದೇಶ.

ಭಗವಂತ ಯಾವುದರ ಹಂಗೂ ಇಲ್ಲದವನು. ತನಗಾಗಿ ಯಾವುದನ್ನೂ ಆಪೇಕ್ಷಿಸದವನು. ಯಾವುದನ್ನಾದರೂ ಅಪೇಕ್ಷಿಸುವನೆಂದರೆ ಆ ವಸ್ತುವಿಗಿಂತ ಇವನು ನೀಚನೆಂದಾದಾನು ! ' ಲಕ್ಷ್ಮೀರಮಣ' ಎನಿಸುವ ಅವನಿಗೆ ಸುಖ ಪಡೆಯಲು ಲಕ್ಷ್ಮೀದೇವಿಯ ಅಪೇಕ್ಷೆ ಇದೆ ಎಂದು ಭಾವಿಸಬಾರದು. ಲಕ್ಷ್ಮೀದೇವಿಯನ್ನು ಸಂತೋಷಪಡಿಸುವುದರಿಂದ ಲಕ್ಷ್ಮೀರಮಣ ಎನಿಸುವನೇ ಹೊರತು ತಾನು ಲಕ್ಷ್ಮೀಯಿಂದ ಸುಖಪಡುವನೆಂಬ ಅರ್ಥದಲ್ಲಿ ಅಲ್ಲ. ಸುಖಪಡುವುದಕ್ಕೂ ಅವನಿಗೆ ಲಕ್ಷ್ಮೀದೇವಿಯ

ಅಪೇಕ್ಷೆ ಇಲ್ಲ. ರಾಮಾಯಣ ಕಾಲದಲ್ಲಿ ಸೀತೆಯನ್ನು ಬಿಟ್ಟ. ಕೃಷ್ಣಾಯನ ಕಾಲದಲ್ಲಿ ರುಗ್ಮಿಣಿಯನ್ನು ಬಿಟ್ಟ. ಪರಶುರಾಮ ಕಾಲದಲ್ಲಿ ಕಟ್ಟಿಕೊಳ್ಳಲೇ ಇಲ್ಲ. ಹಾಗಾದರೆ ಇವನಿಗೆ ಲಕ್ಷ್ಮಿಯ ಅವಶ್ಯಕತೆ ಇಲ್ಲ. ರುಗ್ಮಿಣಿ ಸುಂದರಿಯಾದ ಸ್ತ್ರೀ. ಕೃಷ್ಣ ಸ್ವತಃ ಕುಂಡಿನಪುರಕ್ಕೆ ಹೋಗಿ ಅಲ್ಲಿಂದ ಅವಳನ್ನು ಕರೆತಂದಿದ್ದ. ಅಂತಹವಳನ್ನೂ ಒಂದು ಸಂದರ್ಭದಲ್ಲಿ ' ನಿನ್ನ ಅವಶ್ಯಕತೆ ನನಗೆ ಇಲ್ಲ' – ಎನ್ನುವನು. ಮೇಲ್ನೋಟಕ್ಕೆ ಇದು ಪ್ರಣಯ ಕಲಹದಂತೆ ಕಂಡರೂ, ಇದರ ಅಂತರ್ಯ ತನಗೆ ರುಗ್ಮಿಣಿಯ ಅವಶ್ಯಕತೆಯೂ ಇಲ್ಲ ಎಂದು ತೋರಿಸಿಕೊಡುವುದೇ. 'ಸ್ತ್ರಿಯಾ ಭೇತ್ತವ್ಯಂ ಭರ್ತುಃ ......' ಹೆಂಡತಿಯಾದವಳು ಯಾವುದೇ ಸಂದರ್ಭದಲ್ಲಿ ಗಂಡನ ಜೊತೆಗೆ ಜಗಳಕ್ಕೆ ತೊಡಗದೆ 'ನನ್ನಿಂದ ಏನಾದರೂ ತಪ್ಪಾದರೆ ಕ್ಷಮಿಸಿ' – ಎಂದು ಗಂಡನಲ್ಲಿ ಬಿನ್ನವಿಸಿಕೊಳ್ಳಬೇಕು – ಎಂಬ ಪಾಠವನ್ನು ಪತಿವ್ರತಾಸ್ತ್ರೀಯರಿಗೆ ತೋರಿಸಿಕೊಡುವುದಕ್ಕಾಗಿ ರುಗ್ಮಿಣಿ ಕೃಷ್ಣನ ಆ ನಡತೆಯ ಬಗ್ಗೆ ಬೆದರಿದವಳಂತೆ ವಿಡಂಬಿಸಿದಳು.

ಅಂತೂ ಕೃಷ್ಣ ರುಗ್ಮಿಣಿಯ ಅವಶ್ಯಕತೆ ತನಗೆ ಇಲ್ಲ ಎಂದು ತೋರಿಸಿದ್ದಾನೆ. ರಾಮಾವತಾರದಲ್ಲೂ ಸೀತೆಯನ್ನು ಬಿಟ್ಟಿದ್ದಾನೆ. ಹೀಗೆ ಯಾರ ಅವಶ್ಯಕತೆಯೂ, ಯಾವುದರ ಅವಶ್ಯಕತೆಯೂ ಇಲ್ಲದವನಾಗಿ 'ವೀರಹಾ' ಎಂದೆನಿಸಿರುವವನು.

ಭಗವಂತನ ಸರ್ವತ್ಯಾಗ ಗುಣವನ್ನು ಸಾರುವ 'ವೀರಹಾ' ಎಂಬ ನಾಮದ ಉಪಾಸನೆಯಿಂದ ನಮ್ಮಲ್ಲೂ ತ್ಯಾಗ ಬುದ್ಧಿ ಬೆಳೆಯುವುದು. ತ್ಯಾಗಬುದ್ಧಿ ಬೆಳೆದಷ್ಟು ಸಮಾಜದಲ್ಲಿ ಮಹತ್ತ್ವ ಸಿದ್ಧಿಸುವುದು. ಬೇಕು, ಬೇಕು, ಬೇಕು – ಎಂಬುದಾಗಿ 'ಬೇಕು' ಗಳ ಸಂಖ್ಯೆ ಬೇಡವಾದಾಗ ಸಮಾಜದಲ್ಲಿ ನಮಗೆ ಮಹತ್ತ್ವ ದೊರಕುವುದು.

**೧೬೯. ಮಾಧವ: – * ಲಕ್ಷ್ಮೀಪತಿ**
**    * ಶುದ್ಧವಾದ ತಿಳುವಳಿಕೆವುಳ್ಳವನು.**

**ವಿವರಣೆ** : ಮಾ+ಧವ – ಮಾ ಅಂದರೆ ಲಕ್ಷ್ಮೀ. ಧವ ಅಂದರೆ ಪತಿ. ಲಕ್ಷ್ಮೀಪತಿ ಎಂಬುದು ಮಾಧವನಾಮದ ಅರ್ಥ.

ಮತ್ತೊಂದು ಅರ್ಥ ಮಾ ಎಂದರೆ ತಿಳುವಳಿಕೆ. ಧವ ಅಂದರೆ ಶುದ್ಧಿ. ಶುದ್ಧವಾದ ತಿಳುವಳಿಕೆ ಉಳ್ಳವನೆಂಬುದು ಮಾಧವನಾಮದ ಅರ್ಥ.

ದಂತಧಾವನ ಎಂದರೆ ಹಲ್ಲುಗಳನ್ನು ಶುದ್ಧಗೊಳಿಸುವುದು ಎಂಬ ಅರ್ಥ ತಾನೆ? ಅದರಂತೆಯೇ 'ಧವ' ಶಬ್ದವೂ ಶುದ್ಧಿವಾಚಕ. 'ಮಾ' ಎನಿಸುವ ತಿಳುವಳಿಕೆಯ ಶುದ್ಧಿ. ಶುದ್ಧವಾದ ತಿಳುವಳಿಕೆವುಳ್ಳವ ಮಾಧವ. ದೇವರ ತಿಳುವಳಿಕೆಯಲ್ಲಿ ಅಶುದ್ಧಿ ಇಲ್ಲ. ಅಲ್ಪವಾದ ತಿಳುವಳಿಕೆ, ವಿಪರೀತವಾದ ತಿಳುವಳಿಕೆ ಹಾಗೂ ಸಂಶಯಗ್ರಸ್ತ ತಿಳುವಳಿಕೆ – ಇವು ಅಶುದ್ಧ ತಿಳುವಳಿಕೆಗಳೆನಿಸುವವು. ತಿಳುವಳಿಕೆಯಲ್ಲಿ ಈ ಬಗೆಯ ಯಾವುದೇ ಅಶುದ್ಧಿ

ಇಲ್ಲದವನು ಮಾಧವ ಎನಿಸುವ ದೇವರು.

ಹೀಗೆ ದೇವರನ್ನು ಮಾಧವ ಎಂದು ಉಪಾಸನೆ ನಡೆಸುವುದರ ಫಲಿತಾಂಶ – ನಮ್ಮ ತಿಳುವಳಿಕೆಯಲ್ಲೂ ಶುದ್ಧಿ. ಅಶುದ್ಧ ತಿಳುವಳಿಕೆಯಿಂದ ಮನಸ್ಸು ಕದಡುವುದು. ಇದರಿಂದಾಗಿ ನಮಗೂ, ಸಮಾಜಕ್ಕೂ ನೆಮ್ಮದಿ ಇಲ್ಲ. ಹಾಗಾಗಬಾರದಾದರೆ ಭಗವಂತನನ್ನು 'ಮಾಧವ' – ಎಂದು ಸ್ತುತಿಸೋಣ.

**೧೭೦. ಮಧುಃ – ಜೇನುತುಪ್ಪದಂತೆ ಮಧುರ ಹಾಗೂ ತೂಕದ ವ್ಯಕ್ತಿ.**

**ವಿವರಣೆ :** ಜೇನುತುಪ್ಪ ಮಧು ಎನಿಸಿದೆ. ಜೇನುತುಪ್ಪ ಸಿಹಿಯಾದದ್ದು. ಜೊತೆಗೆ ತುಂಬ ತೂಕದ ದ್ರವ. ಹಾಲು, ಮೊಸರು – ಮುಂತಾದ ಪಂಚಾಮೃತ ವಸ್ತುಗಳಲ್ಲಿ ಭಾರವಾದ ದ್ರವ ಜೇನುತುಪ್ಪವೇ. ಜೇನುತುಪ್ಪದ ಈ ಎರಡು ಧರ್ಮಗಳನ್ನಿಟ್ಟುಕೊಂಡು ಭಗವಂತನು ಜೇನಿನಂತೆ ಮಧುರ ವ್ಯಕ್ತಿತ್ವವುಳ್ಳವನು, ಜೇನಿನಂತೆ ತೂಕದ ವ್ಯಕ್ತಿತ್ವವುಳ್ಳವನು ಎಂಬ ಅಭಿಪ್ರಾಯದಲ್ಲಿ ಅವನನ್ನು 'ಮಧುಃ' ಎಂದು ಕರೆಯಲಾಗಿದೆ. 'ಅಭಾರಮನ್ನಣೆ' ಇತ್ಯಾದಿ ಪ್ರಯೋಗಗಳಲ್ಲಿ ವ್ಯಕ್ತಿಗಳ ಭಾರವನ್ನು ಗೌರವಾರ್ಪಣೆಗೆ ಮಾಪಕವಾಗಿ ಸ್ವೀಕರಿಸಲಾಗುವುದು. ಉಡುಗುರೆ ನೀಡಿದವರಿಗೆ 'ಭಾರ' ಹೇಳುವುದು ಎಂದೂ ವ್ಯವಹರಿಸಲಾಗುವುದು

ಭೀಷ್ಮರು ಕೃಷ್ಣನಲ್ಲಿ ನಿವೇದಿಸಿಕೊಳ್ತಾರೆ – ಜೇನುತುಪ್ಪದಂತೆ ತುಂಬ ಭಾರದ, ತೂಕದ ವ್ಯಕ್ತಿಯಾದ ನೀನು ನನ್ನಂತಹ ಅಲ್ಪನಲ್ಲಿಗೆ ಬಂದು ಅನುಗ್ರಹಿಸುತ್ತಿರುವಿಯಲ್ಲ!

ಒಬ್ಬ ಉದಾತ್ತ ವ್ಯಕ್ತಿ, ಉನ್ನತ ಪುರುಷ ನಮ್ಮಲ್ಲಿಗೆ ಅಥಿತಿಯಾಗಿ ಬರಬೇಕೆಂದರೆ ನಾವು ಭಗವಂತನನ್ನು 'ಮಧುಃ' ಎಂದು ಉಪಾಸನೆ ಮಾಡಬೇಕು. 'ಅವರೂ ನಿಮ್ಮ ಮನೆಗೆ ಬಂದ್ರಾ ! ನೀವು ಎಷ್ಟು ದೊಡ್ಡವರಪ್ಪ !' – ಎಂದು ಜನ ನಮ್ಮನ್ನೂ ತೂಕದ ವ್ಯಕ್ತಿಗಳನ್ನಾಗಿ ಪರಿಗಣಿಸುವರು.

**೧೭೧. ಅತೀಂದ್ರಿಯಃ – ಯಾವುದೇ ಭೌತಿಕ ಇಂದ್ರಿಯಕ್ಕೆ ಎಟಕದವನು.**

**ವಿವರಣೆ :** ನಮ್ಮ ಯಾವ ಇಂದ್ರಿಯಕ್ಕೂ ಎಟಕದವನು ಅತೀಂದ್ರಿಯ. ಇಂದ್ರಿಯಗಳನ್ನು ಮೀರಿ ನಿಂತವ. ದೇವರ ಪ್ರತಿಮೆಯನ್ನು ಕಣ್ಣಿನಿಂದ ನೋಡಬಹುದೇ ಹೊರತು ದೇವರನ್ನು ಕಣ್ಣಿನಿಂದ ನೋಡಲಾಗದು. ಭೌತಿಕ ಕಣ್ಣು ಭೌತಿಕರೂಪವನ್ನಷ್ಟೇ ಕಾಣಬಲ್ಲದು. ಪಂಚಭೂತಗಳ ಮಿಶ್ರಣದಿಂದ ರಚಿತವಾದ ಕಣ್ಣು ಪಂಚಭೂತಗಳ ಮಿಶ್ರಣದಿಂದ ರಚಿತಗಳಾದ ವಸ್ತುಗಳನ್ನು ಗ್ರಹಣ ಮಾಡಿತೇ ವಿನಹ ಪಂಚಭೂತಗಳನ್ನು ಮೀರಿದ ವಸ್ತುಗಳನ್ನು ಗ್ರಹಣ ಮಾಡಲು ಈ ಕಣ್ಣುಗಳಿಗೆ ಸಾಧ್ಯವಿಲ್ಲ. ಆಯಾ ಜಾತಿಯವರಿಗೆ ಆಯಾ ಜಾತಿಯವರ ಪರಿಚಯ ತಾನೇ? ವೇದವ್ಯಾಸರು ಹೇಳ್ತಾರೆ – ಆಯಾ ಜಾತಿಯವರಿಗೆ ಆಯಾ ಜಾತಿಯವರ ಪರಿಚಯ ಮಾತ್ರವಲ್ಲ; ಆಯಾ ಜಾತಿಯವರಿಗೆ ಭಯವೂ ಆಯಾ ಜಾತಿಯವರಿಂದಲೇ – **'ಸಂಭಾವ್ಯಂ ಜಾತಿತೋ ಭಯಮ್'**

ಅಂತೂ ಭೂತಕ್ಕೆ ಸಂಬಂಧಪಡುವ ಕಣ್ಣು ಭೂತಕ್ಕೆ ಸಂಬಂಧಿಸುವ ಪದಾರ್ಥಗಳನ್ನಷ್ಟೇ ಗ್ರಹಣ ಮಾಡುವುದೇ ಹೊರತು ಭೂತವನ್ನು ಮೀರಿ ಇರುವ ವಸ್ತುವನ್ನು ಗ್ರಹಣ ಮಾಡಲಾರದು. ಅದಕ್ಕಾಗಿಯೇ ದಾಸರು ಹಾಡಿರುವರು – **'ಹೊಸಕಣ್ಣು ಎನಗೆ ಹಚ್ಚಲಿ ಬೇಕು ಜಗದಂಬೆ ವಸುದೇವಸುತನ ಕಾಂಬುದಕ್ಕೆ'** ನಾನು ಈ ಕಣ್ಣುಗಳಿಂದ ಪ್ರತಿಮೆಯನ್ನು ಕಾಣುತ್ತಿದ್ದೇನಷ್ಟೇ. ವಸುದೇವಸುತ ನನಗೆ ಕಾಣುತ್ತಿಲ್ಲ. ಯಾಕೆಂದರೆ ಅವನು ಇಂದ್ರಿಯಗಳನ್ನು ಮೀರಿದವನು. ಅವನು ಜ್ಞಾನಾನಂದಮಯ ಶರೀರವುಳ್ಳವನು. ಪಾಂಚಭೌತಿಕ ಶರೀರ ಅವನಿಗೆ ಇಲ್ಲ. ಅಂತಹವನನ್ನು ಕಾಣಲು ಹೊಸಕಣ್ಣು ಬೇಕು – ಎಂದು ಲಕ್ಷ್ಮಿಯಲ್ಲಿ ಬೇಡಿಕೊಂಡಿರುವರು.

ಬರೇ ಕಣ್ಣು ಅಲ್ಲ – ಕಣ್ಣು, ಕಿವಿ, ಮೂಗು, ನಾಲಗೆ ಹಾಗೂ ಚರ್ಮ – ಎಂಬ ಐದು ಜ್ಞಾನೇಂದ್ರಿಯಗಳಿಗೂ ಎಟಕದವನು. ಎಂಬುದು ಅವನ ಮಹತ್ವ. ಅತೀಂದ್ರಿಯ ಶಬ್ದದ ಉಪಾಸನೆಯ ಫಲ ಅತೀಂದ್ರಿಯ ವಸ್ತುಗಳೂ, ಅವುಗಳಲ್ಲೂ ಮುಂದೆ ನಡೆಯುವ ಸಂಗತಿಯೂ ಗೋಚರಿಸುವವು.

**೧೭೨. ಮಹಾಮಾಯಃ – ಪ್ರಕೃತಿಯನ್ನು ಮೀರಿ ನಿಂತವನು.**

**ವಿವರಣೆ :** ಮಾಯಾ ಶಬ್ದಕ್ಕೆ ತಿಳುವಳಿಕೆ ಎಂದೂ, ಪ್ರಕೃತಿ ಎಂದೂ ಅರ್ಥ ಮಾಡಬಹುದು. ಹೊರತು ಲೋಕದಲ್ಲಿ ಏನು ಮಾಯಾಶಬ್ದಕ್ಕೆ ಕಣ್‌ಕಟ್‌ವಿದ್ಯೆ ಎಂಬ ಅರ್ಥವಿದೆ; ಆ ಅರ್ಥ ಇಲ್ಲಿ ಅಲ್ಲ. **'ಮಾಯಾಂ ತು ಪ್ರಕೃತಿಂ ವಿದ್ಧಿ.......'** ಎಂದು ಹಿರಿಯರೊಂದು ಮಾತನ್ನು ಹೇಳಿರುವರು. ಮಾಯೆ ಎಂದರೆ ಪ್ರಕೃತಿ ಎಂದು ತಿಳಿ. ಹಾಗಾದರೆ ಅಂತಹ ಮಾಯೆವುಳ್ಳ ಮಾಯಿ ಯಾರು? **'........ಮಾಯಿನಂ ತು ಮಹೇಶ್ವರಮ್'** – ಮಾಯಾಳನ್ನು ತನ್ನ ಹಿಡಿತದಲ್ಲಿ ಇಟ್ಟುಕೊಂಡ ದೇವರನ್ನು 'ಮಾಯಿ' – ಎಂದು ಕರೆಯುವರು. ನಾವು ಮಾಯಾ ಎನಿಸುವ ಪ್ರಕೃತಿಯ ಹಿಡಿತದಲ್ಲಿ ಇರುವವರಾದರೆ, ಅವನು ಅಂತಹ ಪ್ರಕೃತಿಯನ್ನೂ ತನ್ನ ಹಿಡಿತದಲ್ಲಿ ಇಟ್ಟುಕೊಂಡಿರುವನು. ಆದುದರಿಂದಲೇ ಅವನ ಜೀವನದಲ್ಲಿ ಏರು–ಪೇರು ಇಲ್ಲವೇ ಇಲ್ಲ. ನಾವು ಪ್ರಕೃತಿಯಿಂದ ಬದ್ಧರಾಗಿರುವುದರಿಂದ ದೈಹಿಕವಾಗಿ, ಕಾಲಿಕವಾಗಿ, ಮಾನಸಿಕವಾಗಿ ಏರುಪೇರುಗಳಿಗೆ ಒಳಗಾಗುತ್ತಿರುತ್ತೇವೆ. ಆದರೆ ಪ್ರಕೃತಿಯನ್ನು ಮೀರಿ ಇರುವ ದೇವರು ಶಶ್ವದೇಕಪ್ರಕಾರ; ಸದಾತನ; ಸನಾತನ. ಯಾವುದೇ ರೀತಿಯ ಬದಲಾವಣೆಗೆ ಒಳಗಾಗದವನು. ಬದಲಾವಣೆಯನ್ನು ಕೊಡತಕ್ಕ ಪ್ರಕೃತಿಯನ್ನು ಹಿಡಿತದಲ್ಲಿ ಇಟ್ಟುಕೊಂಡವನು. ಪ್ರಕೃತಿಯನ್ನು ಮೀರಿ ನಿಂತವನು ಎಂಬುದೇ ಮಹಾಮಾಯಾ ಶಬ್ದದ ಅರ್ಥ.

ಭಗವಂತನನ್ನು 'ಮಹಾಮಾಯಃ' ಎಂದು ಉಪಾಸನೆ ಮಾಡಿದರೆ ಪ್ರಕೃತಿಯ ವಿಕೋಪ ಆದರೂ ಅದರ ಪರಿಣಾಮ ನಮ್ಮ ಮೇಲೆ ಆಗದಂತೆ ಮೆಟ್ಟಿ ನಿಲ್ಲುವಿಕೆ ನಮ್ಮಲ್ಲಿ ಸಿದ್ಧಿಸುವುದು. ಮನೆಯಲ್ಲಿ ಏನಾದರೂ ಅವಘಡ ಸಂಭವಿಸಿದರೆ ಜಪಪೂಜೆ ಮುಂತಾದ

ನಿತ್ಯ ನೈಮಿತ್ತಿಕ ಕರ್ಮಗಳನ್ನೆಲ್ಲ ಬಿಟ್ಟುಬಿಡುವ ಮಾನಸಿಕ ತುಮುಲಕ್ಕೆ ಒಳಗಾಗುವುದುಂಟು. ಹಾಗಾಗಬಾರದು. ಅದಕ್ಕೆ ಬೇಕಾದ ಕರ್ತವ್ಯಗಳನ್ನೆಲ್ಲ ನಡೆಸಿ, ಮಾಮೂಲಾಗಿ ಜಪ, ಪೂಜೆ, ಭಜನೆಗಳನ್ನೆಲ್ಲ ನಡೆಸುವ ಮಾನಸಿಕ ಸ್ತಿಮಿತತೆಯನ್ನು ಕಾಪಾಡಿಕೊಳ್ಳಬೇಕು. ಭಗವಂತನನ್ನು 'ಮಹಾಮಾಯಃ' ಎಂದು ಸ್ತುತಿಸಿದರೆ ಈ ಧರ್ಮ ನಮ್ಮಲ್ಲಿ ಸಿದ್ಧಿಸಬಲ್ಲದು.

**೧೭೩. ಮಹೋತ್ಸಾಹಃ – ಭಾರೀ ಉತ್ಸಾಹ ಉಳ್ಳವನು.**

**ವಿವರಣೆ :** ಮನೆಯಲ್ಲಿ ಸಂಭವಿಸುವ ಪ್ರಾಕೃತ ಅವಘಡಗಳನ್ನು ಮೆಟ್ಟಿ ನಿಂತರೆ ನಮ್ಮಲ್ಲಿ ದೇವರ ಬಗ್ಗೆ ಉತ್ಸಾಹ ಸ್ವಲ್ಪವೂ ಕುಗ್ಗುವುದಿಲ್ಲ. ಮೊದಲು ಉತ್ಸಾಹ ಹೇಗಿತ್ತೋ ಅದೇ ಪ್ರಮಾಣದಲ್ಲಿ ಉತ್ಸಾಹವನ್ನು ಕಾಪಾಡಿಕೊಂಡಿರುವೆವು. ಸಾಮಾಜಿಕ ವಿಷಯದಲ್ಲಾಗಲೀ, ಆಧ್ಯಾತ್ಮಿಕ ವಿಷಯದಲ್ಲಾಗಲೀ ನಮ್ಮನ್ನು ನೋಡುವಾಗ ಇವರ ಮನೆಯಲ್ಲಿ ಅವಘಡ ಸಂಭವಿಸಿದೆ ಎಂದು ಯಾರಿಗೂ ಗೊತ್ತಾಗುವುದಿಲ್ಲ. ಇದು ಯಾವಾಗ ಸಂಭವಿಸುವುದು? ಭಗವಂತನನ್ನು 'ಮಹೋತ್ಸಾಹಃ' – ಭಾರೀ ಉತ್ಸಾಹವುಳ್ಳವನು – ಎಂದು ಉಪಾಸನೆ ಮಾಡಿದಾಗ.

ಯದ್ಯಪಿ ಕೃಷ್ಣನ ಸುತ್ತ ಅವನ ಸಂಬಂಧಿಕರೇ ಹೊಡೆದಾಡಿಕೊಂಡು ಸಾಯುತ್ತಿದ್ದಾರೆ. ಆದರೂ ಕೃಷ್ಣ – ಇವರು ಇವತ್ತಲ್ಲದಿದ್ದರೆ ನಾಳೆಯಾದರೂ ಸಾಯುವವರೇ – ಎಂದು ಅವರ ಸಾವನ್ನು ತಲೆಗೇ ತೆಗೆದುಕೊಂಡಿಲ್ಲ. ಆದ್ದರಿಂದ ಕೃಷ್ಣನ ಕರ್ತವ್ಯದಲ್ಲಿ ಭ್ರಷ್ಟತೆ ಬಂದಿಲ್ಲ. ಉತ್ಸಾಹದಿಂದಲೇ ತನ್ನ ಕರ್ತವ್ಯವನ್ನು ನಡೆಸುತ್ತಿದ್ದ. ಹಾಗೆಯೇ ತನ್ನ ಆಧ್ಯಾತ್ಮಿಕತೆಯಲ್ಲೂ ಕೃಷ್ಣ ಉತ್ಸಾಹವನ್ನು ಕಳೆದುಕೊಂಡಿದ್ದಿಲ್ಲ. ಆದ್ದರಿಂದಲೇ ಅರ್ಜುನನಿಗೆ ಆಧ್ಯಾತ್ಮಿಕತೆಯ ಹಿನ್ನೆಲೆಯಲ್ಲಿ ಕರ್ತವ್ಯವನ್ನು ನಿರ್ವಹಿಸಲು ಉಪದೇಶ ನೀಡಿದ.

ಹೀಗೆ ತಾನು ಉತ್ಸಾಹ ಕಳೆದುಕೊಳ್ಳುವುದಿಲ್ಲ; ಇಷ್ಟೇ ಅಲ್ಲದೆ ತನ್ನ ಭಕ್ತರ ಮಾತುಗಳನ್ನು ನಡೆಸುವುದರಲ್ಲೂ ಅಷ್ಟೇ ಉತ್ಸಾಹ ತೋರುವನು.

ಕೃಷ್ಣನ ಕೈಯಿಂದ ಆಯುಧವನ್ನು ಹಿಡಿಸಿಯೇ ತೀರುವನು ' – ಎಂಬ ನನ್ನ ಮಾತನ್ನು ಪೂರೈಸುವುದರಲ್ಲಿ ನಿನ್ನ ಉತ್ತರೀಯ ಜಾರಿ ಬಿದ್ದರೂ ಗಮನಿಸದಷ್ಟು ಉತ್ಸಾಹದಿಂದ ತೊಡಗಿದವನು. – ನೀನು ಎಂದು ಭೀಷ್ಮರು 'ಮಹೋತ್ಸಾಹ' ನಾಮದಿಂದ ಎದುರಿಗಿರುವ ಕೃಷ್ಣನ ಈ ಗುಣವನ್ನು ಅನುಸಂಧಾನ ಮಾಡುತ್ತಿದ್ದಾರೆ.

ಪ್ರಕೃತಿಯನ್ನು ಮೆಟ್ಟಿ ನಿಂತ ಫಲವಾಗಿ ಹೀಗೆ ಭಾರೀ ಉತ್ಸಾಹ ಉಂಟಾಗುವುದು.

ಭಗವಂತನನ್ನು ಹೀಗೆ 'ಮಹೋತ್ಸಾಹಃ' ಎಂದು ಉಪಾಸನೆ ಮಾಡಿದಲ್ಲಿ – ಕೆಟ್ಟ ಸಂಗತಿಗಳಲ್ಲಲ್ಲ – ಉತ್ತಮ ಸಾಧನೆಗಳಲ್ಲಿ ಉತ್ಸಾಹ ಹೆಚ್ಚುವುದು.

**೧೭೪. ಮಹಾಬಲಃ – ಎಲ್ಲ ಬಗೆಯ ಬಲಗಳನ್ನು ಒಳಗೊಂಡವನು.**

**ವಿವರಣೆ :** ಏನು ಬಂದರೂ ಜೀರ್ಣಿಸಿಕೊಳ್ಳಲು ಬೇಕಾದ ಬಲ ಕೃಷ್ಣನಲ್ಲಿದೆ. ಚಕ್ರ ಹಿಡಿಯಬೇಕಿಲ್ಲ. ಯಾವ ಆಯುಧವನ್ನೂ ಹಿಡಿಯಬೇಕಿಲ್ಲ. ಅಸುರಾವೇಶಪ್ರಯುಕ್ತ ಭೀಷ್ಮರ ಪ್ರತಿಜ್ಞೆ ನಡೆದಿದೆ – ಎಂದು ಅದನ್ನು ಜಾರಿಸಿಕೊಳ್ಳಲೂ ಆಗುವುದು. ಎಲ್ಲವನ್ನೂ ನಿಭಾಯಿಸಲು ಬೇಕಾದ ಬಲ ಕೃಷ್ಣನಲ್ಲಿದೆ. ಬಾಲ್ಯದಲ್ಲಿ ಬೆಣ್ಣೆ ಮೊಸರನ್ನು ಕದ್ದದ್ದನ್ನೂ, ಏಳು ವರ್ಷ ವಯಸ್ಸಿನಲ್ಲಿ ಮಾವನನ್ನು ಚಚ್ಚಿದ್ದನ್ನೂ, ಗೋಪಿಕೆಯರ ಜೊತೆಗೆ ಸೇರಿದ್ದನ್ನೂ, ಪೌಂಡ್ರಕವಾಸುದೇವಾದಿ ಅಣ್ಣಂದಿರನ್ನು ಕೊಂದದ್ದನ್ನೂ, ದುರ್ಯೋಧನಾದಿ ಭಾವಂದಿರನ್ನು ಕೊಲ್ಲಿಸಿದ್ದನ್ನು – ಹೀಗೆ ತನ್ನ ಎಲ್ಲ ಚಟುವಟಿಕೆಗಳನ್ನೂ ಸಮರ್ಥಿಸಲು ಬೇಕಾದ ನೈತಿಕ ಬಲ ಕೃಷ್ಣನಲ್ಲಿದೆ. ಆದ್ದರಿಂದ ಭುಜಬಲ, ದೇಹಬಲ, ಜನಬಲ – ಹೀಗೆ ಎಲ್ಲ ಬಲಗಳನ್ನೊಳಗೊಂಡು ನೈತಿಕ ಬಲವನ್ನೂ ಗರಿಷ್ಠ ಪ್ರಮಾಣದಲ್ಲಿ ಹೊಂದಿರುವ ಕೃಷ್ಣ –'ಮಹಾಬಲ.'

**ಮಹಾಬುದ್ಧಿರ್ಮಹಾವೀರ್ಯೋ ಮಹಾಶಕ್ತಿರ್ಮಹಾದ್ಯುತಿಃ ।**
**ಅನಿರ್ದೇಶ್ಯವಪುಃ ಶ್ರೀಮಾನಮೇಯಾತ್ಮಾ ಮಹಾದ್ರಿಧೃಕ್॥೧೯॥**

**೧೭೫. ಮಹಾಬುದ್ಧಿಃ – * ತುಂಬ ತಿಳುವಳಿಕೆಯುಳ್ಳವನು.**
*** ತುಂಬ ಬೋಧಿಸುವ ಶಕ್ತಿಯುಳ್ಳವನು.**
*** ತುಂಬ ಕಾರ್ಯಾಕಾರ್ಯವಿಮರ್ಶನಶಕ್ತಿವುಳ್ಳವನು.**

**ವಿವರಣೆ :** ಅದ್ಭುತವಾದ ಬುದ್ಧಿಶಕ್ತಿ ಭಗವಂತನದ್ದು. ಯಾರಲ್ಲೂ ಇಲ್ಲದ ವಿಲಕ್ಷಣವಾದ ಬುದ್ಧಿಶಕ್ತಿ ಅವನದ್ದು. ಯಾರ್ಯಾರನ್ನು, ಎಲ್ಲೆಲ್ಲಿ, ಹೇಗ್ಹೇಗೆ ಜೋಡಿಸಬೇಕೆನ್ನುವುದು ಅವನಿಗೆ ಮಾತ್ರ ಗೊತ್ತು. ನಮಗೆ ಕೆಲಸ ಆದ ಮೇಲಷ್ಟೇ ಗೊತ್ತಗುವುದು. ಭಗವಂತ ಮೊದಲೇ ಹೀಗೆ ಹೀಗೆ ಆಗಬೇಕೆಂದು ಯೋಜನೆ ಹಾಕಿರುವನು.

ಯಾರ್ಯಾರ ಹಣೆಯಲ್ಲಿ ಏನೇನು ಬರೆದಿತ್ತೋ ಅಂತಹದ್ದು ಸಂಭವಿಸಬೇಕಾದರೆ ಯಾರ್ಯಾರನ್ನು ಗಂಡಹೆಂಡಿರನ್ನಾಗಿಯೋ, ಅಣ್ಣತಮ್ಮಂದಿರನ್ನಾಗಿಯೋ, ತಂದೆ ಮಕ್ಕಳನ್ನಾಗಿಯೋ ಜೋಡಿಸಬೇಕೋ ಅವರವರನ್ನೇ ಜೋಡಿಸುವನು. ಹುಡುಗ ಒಂದು ಊರಿನವ. ಹುಡುಗಿ ಮತ್ತೊಂದು ಊರಿನವಳು. ಅವರಿಬ್ಬರ ಹಣೆಯಲ್ಲೂ ಸಂತತಿ ಇಲ್ಲ ಎಂದು ಬರೆದಿರುತ್ತದೆ. ಅಂತಹವರನ್ನೇ ದೇವರು ಜೋಡಿಸ್ತಾನೆ. ದೇವರ ಇಂತಹ ಚಮತ್ಕಾರಗಳನ್ನು ಅನುಭವಿಸಿ 'ಮಹಾಬುದ್ಧಿಃ' ಎಂದು ಸ್ತುತಿಸಿದರು ಭೀಷ್ಮರು.

ಭೀಷ್ಮರು ಯುದ್ಧದಲ್ಲಿ ಹತ್ತು ದಿನಗಳ ಕಾಲ, ಹಾಗೂ ತಮ್ಮ ಜೀವನ ಪೂರ್ತಿ ಕೃಷ್ಣನ ಆಟವನ್ನೆಲ್ಲ ಅನುಭವಿಸಿದರು. ಆದರೂ ಕೃಷ್ಣ ಅಂದರೆ ಹೀಗೆಯೇ ಎಂದು ತೀರ್ಮಾನ ತೆಗೆದುಕೊಳ್ಳಲು ಭೀಷ್ಮರಿಗೆ ಸಾಧ್ಯವಾಗಲಿಲ್ಲ ಅದಕ್ಕಾಗಿಯೇ ಕೊನೆಗೆ ತೆಗೆದ

ಉದ್ಗಾರ – 'ಮಹಾಬುದ್ಧಿಃ' ಅಬ್ಬ ! ನಿನ್ನ ಬುದ್ಧಿಯೇ ! ನಿನ್ನ ಬುದ್ಧಿಯ ಮುಂದೆ ನಮ್ಮ ಯಾವ ಆಟವೂ ನಡೆಯುವುದಿಲ್ಲ !.

ಬೋಧಕಶಕ್ತಿವುಳ್ಳವನಾದುದರಿಂದಲೂ ದೇವರು ಬುದ್ಧಿ ಎನಿಸುವನು. ಬುದ್ಧಿಸ್ವರೂಪನಾದುದರಿಂದ 'ಬುದ್ಧಿ' ಎಂದು ಕರೆದರೇ ಹೊರತು ಬುದ್ಧಿಮಾನ್ ಎಂದಿಲ್ಲ. ತುಂಬ ತಿಳುವಳಿಕೆ ಉಳ್ಳವರೆಂಬ ಅಭಿಪ್ರಾಯದಲ್ಲಿ ಸ್ವಾಮಿಗಳನ್ನೂ 'ಬುದ್ಧಿ'ಎಂದು ಕರೆಯುವ ರೂಢಿ ಬಂದಿದೆ. ಸ್ವಾಮಿಗಳನ್ನು ಬರೇ 'ಬುದ್ಧಿ' ಎಂದು ಕರೆದರೆ ದೇವರನ್ನು 'ಮಹಾಬುದ್ಧಿ' ಎಂದೇ ಕರೆದರು ಭೀಷ್ಮರು. ಬುದ್ಧಿ ಎಂದರೆ ಗ್ರಹಣ ಶಕ್ತಿಯೂ ಆಗಬಹುದು; ಗ್ರಾಹಕಶಕ್ತಿಯೂ ಅಂದರೆ ಬೋಧಿಸುವ ಶಕ್ತಿಯೂ ಆಗಬಹುದು. ಕಾರ್ಯಾಕಾರ್ಯ ವಿಮರ್ಶನ ಶಕ್ತಿಯನ್ನೂ ಬುದ್ಧಿಶಕ್ತಿ ಎನ್ನಲಾಗುವುದು. ಏನಾದರೂ ಸಮಸ್ಯೆ ಬಂದಲ್ಲಿ ಅದನ್ನು ಪರಿಹರಿಸಿದವನನ್ನು 'ಏನಪ್ಪ ನಿನ್ನ ಬುದ್ಧಿಶಕ್ತಿ' ಎಂದು ಈ ಅರ್ಥದಲ್ಲಿಯೇ ಹೊಗಳುವೆವು.

ಈ ಎಲ್ಲ ಬುದ್ಧಿಶಕ್ತಿಗಳೂ ದೇವರಲ್ಲಿ ಇವೆ ಎಂದು 'ಮಹಾಬುದ್ಧಿಃ' ಎಂದು ಸ್ತುತಿಸಲಾಗಿದೆ.

ಸಮಸ್ಯೆಗಳು ಬಂದಾಗ ಅವುಗಳನ್ನು ಸಮಾಧಾನದಿಂದ ಪರಿಹರಿಸುವ ಬುದ್ಧಿಶಕ್ತಿ ನಮಗೆ ಕೃಷ್ಣನಿಂದ ಬರಬೇಕು. ಪಾಂಡವರ ಶಿಬಿರದಲ್ಲಿ ಕೋಲಾಹಲ ನಡೆದಿತ್ತು. ಅರ್ಜುನ ಕತ್ತಿ ತೆಗೆದಾಗಿದೆ – ಅಣ್ಣನ ತಲೆಯನ್ನು ಕಡೀತೇನೆ – ಎಂದು. ಶ್ರೀಕೃಷ್ಣ ತನ್ನ ಬುದ್ಧಿಶಕ್ತಿಯನ್ನು ಉಪಯೋಗಿಸಿ ಎರಡೂ ಕೊಳಗಳನ್ನು ತಿಳಿಮಾಡಿದ. ಇಬ್ಬರೂ ಕೃಷ್ಣನ ಕಾಲಿಗೆ ಬಿದ್ದರು – ನಿನ್ನ ಬುದ್ಧಿಶಕ್ತಿಯಿಂದಾಗಿ ನಾವಿಬ್ಬರೂ ಇಂದು ಉಳಿದುಕೊಂಡೆವು – ಎಂದು. ಸಮಸ್ಯೆಗಳು ಬಂದಾಗ ಇಬ್ಬರಿಗೂ ತೊಂದರೆ ಆಗದಂತೆ ಪರಿಹರಿಸುವ ಚಾಕಚಕ್ಯವೇ ಬುದ್ಧಿ. ಜೀವನದಲ್ಲಿ ಬೇಕಾದುದು ಇದು. ಯಾರ ಮನೆಯಲ್ಲಿ ಇಲ್ಲ ಸಮಸ್ಯೆಗಳು ! ಆದರೆ ಹೇಗೆ ಸಮಸ್ಯೆಗಳು ಎದುರಾಗುವುದೋ ಹಾಗೆಯೇ ತಿಳಿಯಾಗಬೇಕು. ದೇವರನ್ನು ಬುದ್ಧಿ ಎಂದು ಉಪಾಸನೆ ಮಾಡದ ಪ್ರಯುಕ್ತ ಸಮಸ್ಯೆಗಳ ಪರಿಹಾರ ಆಗುತ್ತಿಲ್ಲ.

ಭೀಷ್ಮರು ಅಂದರು – ದೇವರನ್ನು 'ಮಹಾಬುದ್ಧಿಃ' ಎಂದು ಉಪಾಸನೆ ಮಾಡು. ನಿನಗೆ ಸಮಸ್ಯೆಗಳನ್ನು ಪರಿಹರಿಸುವ ಚಾಕಚಕ್ಯವನ್ನು ದೇವರು ಅನುಗ್ರಹಿಸುವನು.

**೧೭೬. ಮಹಾವೀರ್ಯಃ – ಆರಂಭ ಮಾಡಿದ ಕೆಲಸವನ್ನು ಚೆನ್ನಾಗಿ ಏನೂ ಪರಿಶ್ರಮವಿಲ್ಲದೆ ಕೊನೆಗೊಳಿಸುವವನು.**

**ವಿವರಣೆ :** ವೀರ್ಯ ಅಂದರೆ ಆರಬ್ಧಾಂತಗಾಮಿತ್ವ. ತಾನು ಆರಂಭ ಮಾಡಿದ ಕೆಲಸವನ್ನು ಕೊನೆಗೊಳಿಸುವವನನ್ನು ವೀರ ಎಂದು ಕರೆಯುವರು. ಆರಂಭ ಮಾಡಿದ್ದನ್ನು 'ಅಯ್ಯೋ ಯಾಕಪ್ಪ ಪ್ರಾರಂಭಿಸಿದೆ !' ಎನ್ನುತ್ತ ಕಷ್ಟದಿಂದ ಕೊನೆಗೊಳಿಸುವುದಲ್ಲ. ಚೆನ್ನಾಗಿ

ಪ್ರಾರಂಭಿಸುವನು; ಚೆನ್ನಾಗಿಯೇ ಕೊನೆಗೊಳಿಸುವನು. ಯಾವುದೇ ರೀತಿಯಾದ ದೈಹಿಕ ಶ್ರಮ ಇಲ್ಲ. ಹೀಗೆ ಕೊನೆಗೊಳಿಸುವವನನ್ನು 'ಮಹಾವೀರ' – ಎಂದು ಕರೆಯುವರು. ಇಲ್ಲದಿದ್ದರೆ ಬರೇ 'ವೀರ' ಎಂದು. ಆರಂಭ ಮಾಡಿದ್ದಾನೆ; ಕಷ್ಟಪಟ್ಟು ಕೊನೆಗೊಳಿಸಿದರೆ ಅಂತಹವನು ವೀರ ಅಷ್ಟೇ. ಯಾರಿಗೂ ತೊಂದರೆ ಆಗದೆ, ತನಗೂ ಏನೂ ಸಮಸ್ಯೆ ಉಂಟಾಗದೆ ಕೊನೆಗೊಳಿಸುವವನು 'ಮಹಾವೀರ್ಯ'.

ಭೀಷ್ಮರು ಕೃಷ್ಣನಲ್ಲಿ ನಿವೇದಿಸಿಕೊಳ್ಳುವರು – ನನ್ನ ಮಾತನ್ನು ಮುರಿದಾದರೂ ಭಕ್ತರ ಮಾತನ್ನು ಉಳಿಸುತ್ತೇನೆ– ಎಂಬುದು ನಿನ್ನ ಮಾತು. ಯುದ್ಧದಲ್ಲಿ ಆಯುಧ ಹಿಡಿಯುವುದಿಲ್ಲ – ಎಂಬ ನಿನ್ನ ಮಾತನ್ನು ಮುರಿದು ಭಕ್ತನಾದ ನನ್ನ 'ಕೃಷ್ಣನಿಂದ ಆಯುಧವನ್ನು ಹಿಡಿಸಿಯೇ ತೀರುವೆನು' – ಎಂಬ ಮಾತನ್ನು ಪೂರ್ಣಗೊಳಿಸಿದ್ದಿ.

ಭೀಷ್ಮರು ಪ್ರಾಯಶಃ ಸಾವಿರನಾಮಗಳಿಂದ ತಾನು ಜೀವನದಲ್ಲಿ ಅನುಭವಿಸಿದ ಧರ್ಮಗಳನ್ನೇ ಕೃಷ್ಣನಲ್ಲಿ ಹೇಳುತ್ತಿದ್ದಾರೆ. ನಾವು ಜೀವನದಲ್ಲಿ ಅನುಭವಿಸಿದ್ದನ್ನು ದೇವರಿಗೆ ಅರ್ಪಣೆ ಮಾಡಬೇಕು. ಭೀಷ್ಮರು ತಾವು ಜೀವನದಲ್ಲಿ ಅನುಭವಿಸಿದ ಕೃಷ್ಣನ ಒಂದೊಂದೇ ಧರ್ಮವನ್ನೂ ಬೇರೆ ಬೇರೆ ನಾಮದಿಂದ ಅರ್ಪಿಸುತ್ತಿದ್ದಾರೆ.

**೧೭೭. ಮಹಾಶಕ್ತಿಃ – * ಮಾಡಲಿಕ್ಕೆ ಯೋಗ್ಯವಾದುದನ್ನು ಮಾಡುವವನು.**
*** ಕಾರ್ಯವನ್ನು ಚೆನ್ನಾಗಿ ನಡೆಸಲು ಬೇಕಾದ ಸಲಹೆ ಸೂಚನೆಗಳನ್ನು ನೀಡುವ ಸಾಮರ್ಥ್ಯ ಸಂಪನ್ನ.**

**ವಿವರಣೆ** : ಹಿಂದೆ 'ಮಹಾಬಲಃ' ಎಂಬ ನಾಮ ಬಂದಿದೆ. ಈಗ 'ಮಹಾಶಕ್ತಿಃ' ಎಂಬ ನಾಮ. ಬಲ ಮತ್ತು ಶಕ್ತಿ ಒಂದೇ ಎಂದು ನಮಗನಿಸುವುದು. ಆದರೆ ಸ್ವಲ್ಪ ವ್ಯತ್ಯಾಸ ಇರುವುದು. 'ಶ್ಲಶಕ್ಲೌ' – ಎಂಬ ಧಾತುವಿನಿಂದ ನಿಷ್ಪನ್ನವಾದುದು ಶಕ್ತಿಶಬ್ದ. ಅದರಿಂದ ರೂಪುಗೊಂಡ ಶಕ್ಯ ಶಬ್ದ ಮಾಡಲಿಕ್ಕೆ ಯೋಗ್ಯವಾದುದನ್ನೂ, ಅಶಕ್ಯ ಶಬ್ದ ಮಾಡಲಿಕ್ಕೆ ಅಯೋಗ್ಯವಾದುದನ್ನೂ ತಿಳಿಸುವುದು. ಆದುದರಿಂದ 'ಮಹಾಶಕ್ತಿ' ಎಂದರೆ ಮಾಡಲಿಕ್ಕೆ ಯೋಗ್ಯವಾದುದನ್ನು ಮಾಡತಕ್ಕಂತಹವನು ಎಂದರ್ಥ. ಮಹಾಬಲ ಎಂದರೆ ಮಾಡಲಿಕ್ಕೆ ಯೋಗ್ಯನೋ, ಅಯೋಗ್ಯನೋ ಏನು ಬೇಕಾದರೂ ಮಾಡಬಲ್ಲವನು ಎಂದರ್ಥ.

ಅಥವಾ ಇನ್ನೊಂದು ರೀತಿಯಲ್ಲೂ ಅವುಗಳ ವ್ಯತ್ಯಾಸವನ್ನು ಹೀಗೆ ವಿಶ್ಲೇಷಿಸಬಹುದು. ಕಾರ್ಯವನ್ನು ಹೇಗೆ ಮಾಡಿದರೆ ನಾಜೂಕಾಗಿ, ಅಚ್ಚುಕಟ್ಟಾಗಿ ನಡೆಸಿದಂತಾಗುವುದೋ ಅದಕ್ಕೆ ಬೇಕಾದ ಸಲಹೆ ಸೂಚನೆಗಳನ್ನು ನೀಡುವ ಸಾಮರ್ಥ್ಯ ಶಕ್ತಿ ಎನಿಸುವುದು. ತಾನೇ ಕಾರ್ಯವನ್ನು ನಡೆಸುವ ಸಾಮರ್ಥ್ಯ ಬಲ ಎನಿಸುವುದು. ಇಂತಹ ಬಲವುಳ್ಳವನು ಶಕ್ತಿವುಳ್ಳವನಾಗಬೇಕಿಲ್ಲ; ಶಕ್ತಿವುಳ್ಳವನು ಬಲವುಳ್ಳವನಾಗಬೇಕಿಲ್ಲ. ಆದರೆ ದೇವರು ಬಲವನ್ನೂ, ಶಕ್ತಿಯನ್ನೂ ಹೊಂದಿರುವುದರಿಂದ

ಮಹಾಬಲನಾಗಿರುವಂತೆ ಮಹಾಶಕ್ತಿಯೂ ಆಗಿರುವನು.

**೧೭೮. ಮಹಾದ್ಯುತಿಃ – ಅದ್ಭುತವಾದ ಬೆಳಕನ್ನು ಹೊಂದಿರುವವನು**

**ವಿವರಣೆ :** ದ್ಯುತಿಶಬ್ದಕ್ಕೆ ಬೆಳಕು, ಪ್ರಕಾಶ, ಕಾಂತಿ – ಎಂದೆಲ್ಲ ಅರ್ಥಗಳಿವೆ. ಅದ್ಭುತವಾದ ಬೆಳಕು ಉಳ್ಳವನೇ 'ಮಹಾದ್ಯುತಿ'. ಯಾವ ಬೆಳಕು ಅದ್ಭುತವೆನಿಸುವುದು? ಈ ಬೆಳಕು ಅದ್ಭುತ ಅಲ್ಲ. ಯಾಕೆಂದರೆ ಈ ಬೆಳಕಿನಲ್ಲಿ ಕತ್ತಲೆ ಇಲ್ಲ. ಬೆಳಕಿದ್ದರೆ ಬೆಳಕೆ. ಕತ್ತಲೆ ಬರುವುದೇ ಇಲ್ಲ. ದೇವರ ಬೆಳಕು ಹಾಗಲ್ಲ. ದೇವರು ಬೆಳಕು ಸಹಿತನಾಗಿಯೇ ಇರುವಲ್ಲಿಯೂ ಕತ್ತಲೂ ಇರುವುದು. ದೀಪ ಆರಿಸಿ ಕತ್ತಲೆ ಉಂಟಾಗುವುದು. ಆದರೆ ಅಲ್ಲೂ ಬೆಳಕುವುಳ್ಳ ದೇವರೂ ಇರುವನು. ಕತ್ತಲೆ ಇರುವಲ್ಲೂ ಇರುವ ಬೆಳಕು ದೇವರ ಬೆಳಕಾಗಿದ್ದು ಆದುದರಿಂದಲೇ ಅದು ಅದ್ಭುತ ಎನಿಸಿದೆ. ಪರಸ್ಪರ ವಿರುದ್ಧಗಳಾದ ಆಕಳನ್ನೂ, ಹುಲಿಯನ್ನೂ ಒಂದೆಡೆ ಕಟ್ಟಿ ಹಾಕಿತ್ತೆಂದರೆ ಅಲ್ಲಿ ಯಾವುದೋ ಋಷಿಗಳ ಪ್ರಭಾವ ಇರಬೇಕೆಂದು ಭಾವಿಸುವೆವು. ಅಂತಹ ಋಷಿಗಳಿಗೂ ಪ್ರಭಾವವನ್ನು ನೀಡಿದ ಭಗವಂತನಲ್ಲಿ ವಿರುದ್ಧವಾದ ಕತ್ತಲೆಯನ್ನು ಸಹಿಸಿಕೊಳ್ಳಬಲ್ಲ ಬೆಳಕನ್ನು ಹೊಂದಿರುವ ಸಾಮರ್ಥ್ಯ ಇರಲಾರದೇ? ದ್ಯುತಿಗೆ ವಿರುದ್ಧವಾದ ಕತ್ತಲೆಯನ್ನೂ ಇಟ್ಟುಕೊಳ್ಳುವ ದ್ಯುತಿವುಳ್ಳವನಾದುದರಿಂದಲೇ ದೇವರು 'ಮಹಾದ್ಯುತಿ'. ಆದುದರಿಂದಲೇ ಕೃಷ್ಣ ಧರ್ಮರಾಜನಿಗೆ ಕಾಣಿಸ್ತಾನೆ. ದುರ್ಯೋಧನನಿಗೆ ಕಾಣಿಸುವುದಿಲ್ಲ. ಕೃಷ್ಣನಲ್ಲಿ ಬೆಳಕು ಇರುವುದರಿಂದ ಧರ್ಮರಾಜನಿಗೆ ಕಾಣಿಸಿದ. ಅವನಲ್ಲಿ ಬೆಳಕಿನ ಜೊತೆಗೆ ಕತ್ತಲೂ ಇರುವುದರಿಂದ ದುರ್ಯೋಧನನಿಗೆ ಕಾಣಿಸಲೇ ಇಲ್ಲ.

**೧೭೯. ಅನಿರ್ದೇಶ್ಯವಪುಃ – ಹೀಗೆಯೇ ಎಂದು ತೀರ್ಪುಕೊಡಲಾಗದ ರೂಪವುಳ್ಳವನು.**

**ವಿವರಣೆ :** ಕರಾರುವಕ್ಕಾಗಿ ಹೀಗೆಯೇ ಎಂದು ನಿಶ್ಚಿತವಾಗಿ ಹೇಳುವ ಮಾತು ನಿರ್ದೇಶ. ಅನಿರ್ದೇಶ್ಯವಪುಃ – ದೇವರ ಶರೀರ ಹೀಗೆಯೇ ಎಂದು ಯಾರು ಇದುವರೆಗೆ ತೀರ್ಪು ಕೊಟ್ಟಿಲ್ಲ. ದೇವರಿಗೆ ಇಂತಹದ್ದೇ ಆಕಾರ ಎಂದು ತೀರ್ಪುಕೊಟ್ಟವರು ಯಾರೂ ಇಲ್ಲ.

ಭೀಷ್ಮರು ಎದುರಿಗೆ ಕೂತ ಕೃಷ್ಣನಲ್ಲಿ ನಿವೇದಿಸಿಕೊಳ್ಳುವರು –ನಿನ್ನ ಜೊತೆಗೆ ಇಷ್ಟು ವರ್ಷ ಇದ್ದೆ. ನಿನ್ನ ಆಕಾರ ಇದೇ ಎಂದು ಇನ್ನೂ ನನಗೆ ನಿರ್ಧರಿಸಿಕೊಳ್ಳಲಾಗಲಿಲ್ಲ. ನೀನು ದೊಡ್ಡವ ಎಂದಾಗ ಚಿಕ್ಕರೂಪ ತಾಳುವಿ. ಚಿಕ್ಕವ ಅನ್ನೋಣವೇ? ದೊಡ್ಡ ರೂಪ ತಾಳುವಿ.

ಒಬ್ಬನು ಕೃಷ್ಣನಿಗೆ 'ಇದು ನಿನ್ನ ಚಿತ್ರ' ಎಂದು ಅವನ ಚಿತ್ರವನ್ನು ಅವನೆದುರು ತೋರಿಸಿದನಂತೆ. ಕೃಷ್ಣ ಕೂಡಲೇ ತನ್ನ ಮುಖವನ್ನು ಬದಲಾಯಿಸಿಕೊಂಡ. ಆ ಮುಖದ ಮತ್ತೊಂದು ಚಿತ್ರವನ್ನು ತೋರಿಸಲು ಆ ಮುಖವನ್ನೂ ಬದಲಾಯಿಸಿಕೊಂಡ. ಹೀಗೆ

ಹತ್ತಾರು ಬಾರಿ ಮುಖ ಬದಲಾಯಿಸಿಕೊಂಡ. ಒಬ್ಬ ಜ್ಞಾನಿ ತಿಳಿಸ್ತಾನೆ. ಕೃಷ್ಣನ ಎದುರು ಇದನ್ನು ತೋರಿಸು ಎಂದು. ಅದು ನಿಲುಗನ್ನಡಿಯಾಗಿತ್ತು. ಅದನ್ನು ಕೃಷ್ಣನೆದುರು ತೋರಿಸಿದಾಗ ಅದುವರೆಗೆ ತಾನು ತಾಳಿದ ಮುಖಗಳನ್ನೆಲ್ಲ ಅದರಲ್ಲಿ ತೋರಿಸುವನು.

ಈ ಕತೆ ಕೃಷ್ಣನಿಗೆ ಕರಾರುವಕ್ಕಾಗಿ ಹೇಳಲಾಗುವ ರೂಪ ಇಲ್ಲ ಎಂದು ಸಮರ್ಥಿಸುವುದು.

ಹೀಗೆಯೇ ದೇವರ ರೂಪ ಎಂದು ತೀರ್ಪು ಕೊಡಲಾಗುವುದಿಲ್ಲ. ಎಲ್ಲರಿಗಿಂತ ವಿಲಕ್ಷಣ ರೂಪವುಳ್ಳವನು..

**೧೮೦. ಶ್ರೀಮಾನ್ – * ಎಲ್ಲ ಬಗೆಯ ಸಂಪತ್ತುಗಳನ್ನೂ ಹೊಂದಿರುವವನು.**
*** ಲಕ್ಷ್ಮೀದೇವಿಗೆ ಮನ್ನಣೆ ನೀಡಿರುವವನು.**

**ವಿವರಣೆ :** ಶ್ರೀ ಎಂದರೆ ಸಂಪತ್ತು, ಇಂದ್ರಿಯ, ಲಕ್ಷ್ಮೀ – ಇವೆಲ್ಲ ಉಳ್ಳವನೇ ಶ್ರೀಮಾನ್. ಸಂಪತ್ತು ಎಂದರೆ ಇಂದ್ರಿಯಪಾಟವ ರೂಪವಾದ ಸಂಪತ್ತೂ ಆಗಬಹುದು; ಭಕ್ತಸಂಪತ್ತೂ ಆಗಬಹುದು, ಬುದ್ಧಿಸಂಪತ್ತೂ ಆಗಬಹುದು, ಲಕ್ಷ್ಮೀರೂಪವಾದ ಸಂಪತ್ತೂ ಆಗಬಹುದು – ಎಲ್ಲ ಬಗೆಯ ಸಂಪತ್ತನ್ನೂ ತನ್ನ ಹಿಡಿತದಲ್ಲಿ ಇಟ್ಟುಕೊಂಡವನೇ ಶ್ರೀಮಾನ್.

ವಿಷ್ಣು ಸಹಸ್ರನಾಮಗಳು ವೈದಿಕ ಶಬ್ದಗಳಾಗಿರುವುದರಿಂದ ಲೌಕಿಕ ವ್ಯಾಕರಣದ ಲಗಾವು ಪೂರ್ಣ ಆಗಬೇಕಿಲ್ಲ. ಆದ್ದರಿಂದ ಲೌಕಿಕ ವ್ಯಾಕರಣದ ಚೌಕಟ್ಟನ್ನು ಸ್ವಲ್ಪ ಸಡಿಲಿಸಿ ನೋಡುವುದಾದರೆ – ಶ್ರೀ – ಲಕ್ಷ್ಮಿಗೆ ಅಥವಾ ಇಂದ್ರಿಯಗಳಿಗೆ ಮಾನ್ – ಮನ್ನಣೆ ಕೊಟ್ಟವನು; ಗೌರವ ಕೊಟ್ಟವನು.

ಇಂದು ಸಮಾಜದಲ್ಲಿ ಲಕ್ಷ್ಮಿಗೆ ಏನಾದರೂ ಮನ್ನಣೆ ದೊರಕುವುದಿದ್ದರೆ ಅದು ಭಗವಂತನಿಂದ. ನಮ್ಮ ಇಂದ್ರಿಯಗಳಿಗೆ ಏನಾದರೂ ಮಹತ್ವ ಇರುವುದಾದರೆ ಅದು ಭಗವಂತನಿಂದ. ಸಮ್ಮಾನ ಇತ್ಯಾದಿ ಶಬ್ದಗಳಲ್ಲಿ ಮಾನಪದವನ್ನು ಗೌರವಾರ್ಥಕವಾಗಿ ಬಳಸಲಾಗಿದೆ. ಆದ್ದರಿಂದ 'ಶ್ರೀ' – ಲಕ್ಷ್ಮಿಗೆ, ಸಂಪತ್ತಿಗೆ 'ಮಾನ' ಗೌರವ ಯಾರಿಂದಲೋ ಅವನು 'ಶ್ರೀಮಾನ್'.

ದೇವರು ಲಕ್ಷ್ಮಿಗೂ ಮನ್ನಣೆ ಕೊಡುವನು. ಯಾಕೆ, ಧ್ರುವನಿಗೂ, ಪ್ರಹ್ಲಾದನಿಗೂ ಮನ್ನಣೆ ನೀಡಿದವನು. ಪ್ರಹ್ಲಾದ ಶಾಂತನಾಗು ಅಂದಾಕ್ಷಣ ಅವನ ಮಾತಿಗೆ ಮನ್ನಣೆ ನೀಡಿ ಭಗವಂತ ಶಾಂತನಾದ. ಹೀಗೆ ಪ್ರತಿಯೊಬ್ಬ ಭಕ್ತರಿಗೂ ಮನ್ನಣೆ ನೀಡುವವನು.

ಭೀಷ್ಮರು ಕೃಷ್ಣನಲ್ಲಿ ನಿವೇದಿಸಿಕೊಳ್ಳುವರು – ನಾನು ನಿನ್ನ ದ್ವೇಷಿಯಾದ ದುರ್ಯೋಧನನ ಮನೆಯಲ್ಲಿದ್ದುಕೊಂಡು ಬಂದವನು. ಹಾಗಿದ್ದರೂ ನೀನು ನನ್ನ ಮಾತೆಂಬ ಸಂಪತ್ತಿಗೆ ಮನ್ನಣೆ ನೀಡಿ ಚಕ್ರಧಾರಿಯಾಗಿ ನನ್ನೆಡೆಗೆ ಬಂದವನು. ಕೃಷ್ಣನಿಂದ ಚಕ್ರ ಹಿಡಿಸುವೆನು ಎಂಬ ನನ್ನ ಮಾತು ಶ್ರೀ. ಅದಕ್ಕೆ ಮಾನ್ ಮನ್ನಣೆ ನೀಡಿದವನು.

ಒಳ್ಳೆಯತನ ಇದ್ದಲ್ಲೆಲ್ಲ ನಿನ್ನ ಮನ್ನಣೆ ಇದ್ದೇ ಇದೆ.

**೧೮೧. ಅಮೇಯಾತ್ಮಾ – ಮನಸ್ಸಿಗೂ ಎಟಕದ ಸ್ವರೂಪವುಳ್ಳವನು.**

**ವಿವರಣೆ** : ದೇವರಿಗೆ ಇದೇ ಆಕಾರ ಎಂದು ಹೇಳಲು ಬರುವುದಿಲ್ಲ. ನಾವು ನಮ್ಮಷ್ಟಕ್ಕೆ ಕುಳಿತುಕೊಂಡು ದೇವರಿಗೆ ಇದು ಆಕಾರ, ಇದು ಆಕಾರ – ಹೀಗೆಲ್ಲ ಮನಸ್ಸಿನಲ್ಲಿ ಯೋಚಿಸಬಹುದಾ? ಇಲ್ಲ. ಮನಸ್ಸಿನಲ್ಲಿ ಯೋಚಿಸಲಿಕ್ಕೂ ಆಗದ ಆಕಾರ ಅವನದು. ಮೇಯ ಅಂದರೆ ಅಳಿಯಲಿಕ್ಕೆ ಯೋಗ್ಯವಾಗುವುದಿಲ್ಲ. ಮಾತಿನಿಂದಲೂ ಅಳಿಯಲಿಕ್ಕಾಗುವುದಿಲ್ಲ. ಮನಸ್ಸಿನಿಂದಲೂ ಅಳಿಯಲಿಕ್ಕಾಗುವುದಿಲ್ಲ. ಕಣ್ಣಿನಿಂದ ನೋಡಿಯೂ ಅಳಿಯಲಿಕ್ಕಾಗುವುದಿಲ್ಲ. ಯದ್ಯಪಿ ಪುಟ್ಟರೂಪದಿಂದ ಅರ್ಜುನನ ರಥದಲ್ಲಿ ಸಾರಥಿಯಾಗಿ ಕುಳಿತಿದ್ದ. ಯುದ್ಧ ಮಾಡುವುದಿಲ್ಲ ಎಂದ ಅರ್ಜುನನಿಗೆ ತಲೆ ಬುಡ ಇಲ್ಲದ ವಿಶ್ವರೂಪ ತೋರಿಸಿದ. ತಲೆ ಬುಡ ಇಲ್ಲದ ಮಾತು ಆಡಿದ ಅರ್ಜುನನಿಗೆ ಭಗವಂತ ತನ್ನ ತಲೆ ಬುಡ ಇಲ್ಲದ ವಿಶ್ವರೂಪ ತೋರಿಸಿದ. ಅರ್ಜುನನಿಗೆ ತೋರಿಸಿದ ಆ ರೂಪವನ್ನು ನಾನೂ ಕಂಡಿದ್ದೇನೆ ಎನ್ನುವರು ಭೀಷ್ಮರು. ಆ ರೂಪವನ್ನು ಮೆಲುಕು ಹಾಕುತ್ತಿರಲು ಈಗಲೂ ಅದರ ತಲೆಬುಡ ಕಾಣುತ್ತಿಲ್ಲ ಎನ್ನುವರು ಭೀಷ್ಮರು. – ಅಮೇಯಾತ್ಮಾ – ಮನಸ್ಸಿಗೂ ಎಟಕದ ಸ್ವರೂಪವುಳ್ಳವನು. ಮನಸ್ಸಿನಿಂದ ಆಲೋಚಿಸಿದರೂ ನಿನ್ನ ರೂಪದ ಇತಿಮಿತಿಗಳನ್ನು ತಿಳಿದುಕೊಳ್ಳಲು ಸಾಧ್ಯವಿಲ್ಲ.

**೧೮೨. ಮಹಾದ್ರಿಧೃಕ್ – ಕೂರ್ಮ ರೂಪದಿಂದಲೂ, ಕೃಷ್ಣ ರೂಪದಿಂದಲೂ ದೊಡ್ಡ ಬೆಟ್ಟವನ್ನು ಹೊತ್ತವನು.**

**ವಿವರಣೆ** : ದೊಡ್ಡದಾದ ಅದ್ರಿ–ಬೆಟ್ಟವನ್ನು ಧೃಕ್ – ಧಾರಣೆ ಮಾಡಿದವನು. ಕೂರ್ಮ ರೂಪವೂ ಆಗಬಹುದು; ಕೃಷ್ಣ ರೂಪವೂ ಆಗಬಹುದು.

ಕೂರ್ಮ ರೂಪದಿಂದ ದೊಡ್ಡ ಬೆಟ್ಟವನ್ನು ಎತ್ತಿದ. ಆ ಕೂರ್ಮ ರೂಪದ ಬೆನ್ನು ಲಕ್ಷಯೋಜನ ವಿಸ್ತಾರ ಇತ್ತು ಎನ್ನುವರು – ಅದರ ಮೇಲೆ ಮಂದರ ಪರ್ವತ. ಹಾಗಾದರೆ ಅಷ್ಟು ದೊಡ್ಡ ಆಮೆರೂಪವನ್ನು ಧಾರಣೆ ಮಾಡಿ ಭಗವಂತ 'ಮಹಾದ್ರಿಧೃಕ್' ಎನಿಸಿರುವನು.

ಭೀಷ್ಮರು ಅಂತಾರೆ – ಕಣ್ಣೆದುರು ಇರುವ ಕೃಷ್ಣರೂಪದಲ್ಲೂ ಈ ಮಹಿಮೆಯನ್ನು ತೋರಿಸಿರುವಿ. ದೊಡ್ಡದಾದ ಗೋವರ್ಧನ ಪರ್ವತವನ್ನು ಎತ್ತಿದವನು ನೀನೇ ತಾನೇ? ಪುಟ್ಟ ಬಾಲಕನಾಗಿದ್ದಾಗ, ಪುಟ್ಟ ಕೈಯಿಂದ ದೊಡ್ಡ ಬೆಟ್ಟವನ್ನು ನೀನು ಎತ್ತಿದ್ದಿ ಎಂದರೆ ನಿನ್ನ ಚರ್ಯೆಯನ್ನು ಮನಸ್ಸಿನಿಂದ ಚಿಂತಿಸಲೂ ಸಾಧ್ಯವಿಲ್ಲ ಆದುದರಿಂದಲೇ ನೀನು **ಅಮೇಯಾತ್ಮಾ**. ಹೀಗೆ ಏಳು ವರ್ಷ ವಯಸ್ಸಿನ ಕೃಷ್ಣ ತನ್ನ ಕೋಮಲ ಕೈಯಿಂದ ಏಳು ದಿನಗಳ ಕಾಲ ಗೋವರ್ಧನ ಪರ್ವತವನ್ನು ಎತ್ತಿ ಹಿಡಿದು 'ಮಹಾದ್ರಿಧೃಕ್' ಎನಿಸಿರುವನು.

ನಮ್ಮಲ್ಲಿ ದೊಡ್ಡ ಬೆಟ್ಟ ಏನು ಗೊತ್ತಾ? ಬೆಟ್ಟದಂತ ಕಷ್ಟವನ್ನು, ಬೆಟ್ಟದಂತ ಪಾಪವನ್ನು, ಬೆಟ್ಟದಂತ ಸಮಸ್ಯೆಯನ್ನು – ನಾನು ಹೊತ್ತಿದ್ದೇನೆ. ನನಗೆ ಹೊರಲು ಆಗುತ್ತಿಲ್ಲ – ನೀನು ಅದನ್ನು ಹೊರಬೇಕು – ಎಂಬುದು 'ಮಹಾದ್ರಿಧೃಕ್' ನಾಮದಿಂದ ಅನುಸಂಧಾನ ಮಾಡಬೇಕಾದದ್ದು.

**ಮಹೇಷ್ವಾಸೋ ಮಹೀಭರ್ತಾ ಶ್ರೀನಿವಾಸಃ ಸತಾಂಗತಿಃ ।**
**ಅನಿರುದ್ಧಃ ಸುರಾನಂದೋ ಗೋವಿಂದೋ ಗೋವಿದಾಂಪತಿ ॥೨೦॥**

**೧೮೩. ಮಹೇಷ್ವಾಸಃ – ಬಾಣದಿಂದ ಕೂಡಿದ ದೊಡ್ಡದಾದ ಬಿಲ್ಲನ್ನು ಹಿಡಿದುಕೊಂಡವನು.**

**ವಿವರಣೆ :** ಮಹಾ + ಇಷು + ಆಸ – ಹೀಗೆ ಮೂರು ಶಬ್ದಗಳು ಸೇರಿ ಆದ ನಾಮ ಮಹೇಷ್ವಾಸ. ಮಹಾ ಅಂದರೆ ದೊಡ್ಡ. ಇಷು ಅಂದರೆ ಬಾಣಗಳು. ಆಸ ಎಂದರೆ ಆಸನ. ಬಾಣಗಳಿಗೆ ಆಸನ ಬಹಳ ದೊಡ್ಡದು. ಬಾಣಗಳ ದೊಡ್ಡದಾದ ಆಸನವನ್ನು ಕೈಯಲ್ಲಿ ಹಿಡಿದುಕೊಂಡಿರುವವನು. ನಮಗೆ ನಿಮಗೆ ಆಸನಗಳು ಕುರ್ಚಿ ನೆಲ – ಇತ್ಯಾದಿಗಳು. ಬಾಣಗಳಿಗೆ ಆಸನ – ಬಿಲ್ಲು. ಬಾಣಗಳು ಬಿಲ್ಲಿನಲ್ಲಿ ಇರಬೇಕೇ ಹೊರತು ಬತ್ತಳಿಕೆಯಲ್ಲಿ ಅಲ್ಲ. ರಾಜನಾದವನಿಗೆ ಕತ್ತಿ ಕೈಯಲ್ಲಿ ಇರಬೇಕೇ ಹೊರತು ಒರೆಯಲ್ಲಿ ಅಲ್ಲ. ಬ್ರಾಹ್ಮಣನಾದವನಿಗೆ ಮಂತ್ರ ಬಾಯಿಯಲ್ಲಿ ಇರಬೇಕೇ ಹೊರತು ಪುಸ್ತಕದಲ್ಲಿ ಅಲ್ಲ.

ರಾಜನಾದವನ ಕೈಯಲ್ಲಿ ಕತ್ತಿ ಇರಬೇಕೆಂದರೆ ದುಷ್ಟರ ವಿರುದ್ಧ ಕಾದಾಡಲು ನಿತ್ಯ ಸನ್ನದ್ಧನಾಗಿರಬೇಕೆಂದರ್ಥ. ಅದರಂತೆ ಭಗವಂತನ ಬಿಲ್ಲಿನಲ್ಲಿ ಬಾಣಗಳು ಇದ್ದವು ಎಂದರೆ ಭಗವಂತ ನಿತ್ಯ ಕ್ಷತ್ರಿಯ ತೇಜಸ್ಸಿನಿಂದ ಕೂಡಿದ್ದ ಎಂದರ್ಥ. ಭಕ್ತರಾದ ದೇವತೆಗಳಿಗಾಗಿ ದೈತ್ಯರ ವಿರುದ್ಧ ಪ್ರತಿನಿತ್ಯ ಕಾದಾಡುತ್ತಿರುವ ಭಗವಂತ ನಿತ್ಯ ಕ್ಷತ್ರಿಯ ತೇಜಸ್ಸಿನಿಂದ ಕೂಡಿದ್ದ ಎಂದರ್ಥ. ಭಕ್ತರಾದ ದೇವತೆಗಳಿಗಾಗಿ ದೈತ್ಯರ ವಿರುದ್ಧ ಪ್ರತಿನಿತ್ಯ ಕಾದಾಡುತ್ತಿರುವ ಭಗವಂತ ನಿತ್ಯ ಕ್ಷತ್ರಿಯ. ಭಗವಂತ ಸದಾಕಾಲ ಬಿಲ್ಲಿಗೆ ಬಾಣಗಳನ್ನು ಜೋಡಿಸಿಕೊಂಡೇ ಇರುವುದು.

ಭೀಷ್ಮರು ಕೃಷ್ಣನಲ್ಲಿ ನಿವೇದಿಸುವರು – ನಿನ್ನಲ್ಲಿ ನಾನು ಯಾವಾಗಲೂ ಬಾಣದಿಂದ ಕೂಡಿದ ಬಿಲ್ಲನ್ನೇ ಕಂಡವನು. ನಿನ್ನ ಬಿಲ್ಲು ದೊಡ್ಡದಾದದ್ದು; ಅದ್ಭುತವಾದದ್ದು. ಶಾರ್ಙ್ಗ ಹೆಸರಿನ ಬಿಲ್ಲು. ಸದಾಕಾಲ ಬಾಣದ ಜೊತೆಗೆ ಇದ್ದಾಗ ಬಿಲ್ಲಿಗೆ ದೊಡ್ಡತನ ಬರುವುದು. ಬಾಣದಿಂದ ಕೂಡಿದ ದೊಡ್ಡದಾದ ಬಿಲ್ಲನ್ನು ಹೊಂದಿರುವವನು. ಸದಾಕಾಲ ಯುದ್ಧಕ್ಕೆ ಸನ್ನದ್ಧನಾದವನು. ಸದಾಕಾಲ ಶತ್ರುಗಳನ್ನು ಓಡಿಸಲಿಕ್ಕೆ ಸಿದ್ಧನಾದವನು.

ಭೀಷ್ಮರು ದುರ್ಯೋಧನನ ಮನೆಯಲ್ಲಿ ಅವನ ಅನ್ನವನ್ನು ಉಣ್ಣುತ್ತಿದ್ದರೂ

ಪಾಂಡವರ ಮೇಲೆಯೇ ಅವರ ಮನಸ್ಸು ಇತ್ತು. ಯಾಕೆಂದರೆ ಭಗವಂತನನ್ನು 'ಮಹೇಷ್ವಾಸಃ' – ಎಂದು ಉಪಾಸನೆ ಮಾಡಿದ ಫಲವಾಗಿ ಭಗವಂತನು ಬಾಣದಿಂದ ಕೂಡಿದ ದೊಡ್ಡ ಬಿಲ್ಲನ್ನು ಹೊತ್ತವನಾಗಿ ಭೀಷ್ಮರೊಳಗೆ ಹೊಕ್ಕಲು ಹವಣಿಸುತ್ತಿದ್ದ. ಆಸುರೀ ಶಕ್ತಿಗಳ ವಿರುದ್ಧ ಕಾದಾಡಲು ಸದಾ ಸಿದ್ಧನಾಗಿದ್ದ.

**೧೮೪. ಮಹೀಭರ್ತಾ – ಭೂಮಿಯ ಒಡೆಯ.**

**ವಿವರಣೆ** : ಮಹೀ ಅಂದರೆ ಭೂಮಿ. ಅದಕ್ಕೆ ಅಸ್ತಿತ್ವವನ್ನು ಕೊಟ್ಟು, ಕುಸಿಯದಂತೆ ಮಾಡಿ, ಅದರಲ್ಲಿ ಜನರು ವಾಸಿಸುವಂತೆ ಮಾಡಿ, ಅದರ ಭರಣೆ ಮಾಡಿದ ಭಗವಂತ ಮಹೀಭರ್ತಾ.

ಕೃಷ್ಣಾವತಾರಕ್ಕೆ ಸಂಬಂಧಿಸಿ ಹೇಳುವುದಾದರೆ – ಹಸ್ತಿನಾಪುರ ಎಂಬ ಭೂಭಾಗವನ್ನು ಧಾರಣೆ ಮಾಡಿದವನೇ ನೀನು. ದುರ್ಯೋಧನನ ಕೈಗೆ ಸಿಕ್ಕಿ ಅದು ಎಂದೋ ನಾಶವಾಗಿ ಹೋಗಬೇಕಿತ್ತು ! ಆದರೆ ಹಸ್ತಿನಾಪುರಕ್ಕೆ ಪದೇ ಪದೇ ಬಂದು ಹೋಗುವ ಮೂಲಕ ಅದರ ಧಾರಣೆಯನ್ನು ಕೃಷ್ಣ ಮಾಡಿರುವನು. ಆದುದರಿಂದ ಮಹೀಭರ್ತಾ – ಭೂಮಿಯ ಒಡೆಯ.

**೧೮೫. ಶ್ರೀನಿವಾಸಃ – * ಸಂಪತ್ತಿಗೆ ವಾಸಸ್ಥಾನ.**
*** ಲಕ್ಷ್ಮೀದೇವಿಗೆ ವಾಸಸ್ಥಾನ.**
*** ಲಕ್ಷ್ಮಿಯನ್ನು ಆಲಂಗಿಸಿ, ಆಕೆ ಪರಿಮಳ ಬರುವಂತೆ ಮಾಡುವವನು.**

**ವಿವರಣೆ** : ತಿರುಪತಿ ತಿಮ್ಮಪ್ಪನಿಗೆ ಶ್ರೀನಿವಾಸ ಎಂಬ ಹೆಸರು ಬಹಳ ಚಾಲ್ತಿಯಲ್ಲಿದೆ. ಯಾಕೆ ಬಂತು ಆ ಹೆಸರು? ಶ್ರೀ – ಸಂಪತ್ತು, ನಿವಾಸ – ವಾಸ ಸ್ಥಳ.

ತಿರುಪತಿಯಲ್ಲಿ ಬರುವಷ್ಟು ಸಂಪತ್ತು ಎಲ್ಲಿಯೂ ಬರುವುದಿಲ್ಲ. ಎಲ್ಲ ಜನ ಸಂಪತ್ತನ್ನೂ ಕೊಂಡು ಹೋಗಿ ಸುರಿಯುವುದು ತಿಮ್ಮಪ್ಪನ ಪಾದಮೂಲಕ್ಕೆ. ತಾವು ಸಂಪಾದನೆ ಮಾಡಿದ ಸಂಪತ್ತಿನ ಒಂದು ಭಾಗವನ್ನು ದೇವರಿಗೆ ಎಂದು ಅರ್ಪಣೆ ಮಾಡುವರಲ್ಲವೇ? – ಇದರಿಂದಲೇ ಸ್ಪಷ್ಟವಾಗುವುದು ಕಲಿಯುಗ ಇನ್ನೂ ಪೂರ್ಣವಾಗಿ ಆರಂಭವಾಗಿಲ್ಲ ಎಂದು.

ಸಂಪತ್ತಿಗೆ ವಾಸಸ್ಥಳ; ಲಕ್ಷ್ಮಿಗೆ ವಾಸಸ್ಥಳ – ಎಂದು ದೇವರನ್ನು ಶ್ರೀನಿವಾಸ ಎಂದು ಸ್ತುತಿಸಲಾಗುವುದು.

ಶ್ರೀನಿವಾಸ ನಾಮದಿಂದ ಮತ್ತೊಂದು ಅರ್ಥವನ್ನು ಹೀಗೆ ಅನುಸಂಧಾನ ಮಾಡಬಹುದು – ಶ್ರೀ + ನಿ + ವಾಸ – ಎಂದು ಪದ ವಿಭಾಗ ಮಾಡಿಕೊಂಡು ಲಕ್ಷ್ಮಿಯನ್ನು ಚೆನ್ನಾಗಿ(ವಾಸಯತಿ ಆಲಿಂಗಯತಿ) ಆಲಿಂಗಿಸುವನು. ಲಕ್ಷ್ಮಿಗೆ ಭಗವಂತನ ಅಪ್ಪುಗೆ ಬೇಕಿತ್ತಂತೆ. ಭಗವಂತನ ತೋಳುಗಳ ಮಧ್ಯದಲ್ಲಿ ಇರುವುದು ಅವಳಿಗೆ ಬೇಕಿತ್ತಂತೆ.

ಸಮುದ್ರ ಮಥನದ ಸಂದರ್ಭದಲ್ಲಿ ಉದಿಸಿ ಬಂದ ಲಕ್ಷ್ಮಿಯ ಮೇಲೆ ದೈತ್ಯರೆಲ್ಲ 'ತಮಗೆ ಬೇಕು' 'ತಮಗೆ ಬೇಕು' – ಎಂದು ದೃಷ್ಟಿ ಹಾಯಿಸಿದಾಗ ಲಕ್ಷ್ಮೀದೇವಿ ಪರಮಾತ್ಮನನ್ನು ಅಪೇಕ್ಷಿಸುವಳು. ಇದನ್ನು ಅರಿತ ಪರಮಾತ್ಮ ಲಕ್ಷ್ಮೀದೇವಿಯನ್ನು ತನ್ನ ತೋಳುಗಳಿಂದ ಬಂಧಿಸುವನು. ಈ ಹಿನ್ನೆಲೆಯಲ್ಲಿ ಶ್ರೀ – ಲಕ್ಷ್ಮೀದೇವಿಯನ್ನು ನಿ – ಚೆನ್ನಾಗಿ ವಾಸಃ – ವಾಸಯತಿ – ಆಲಿಂಗಯತಿ, ಬಧ್ನಾತಿ, ಗಂಧಯತಿ – ತಾನು ಆಕೆಯನ್ನು ಆಲಂಗಿಸಿ, ಆಕೆಯ ಮೈ ತನ್ನ ಮೈಯ ಸಂಪರ್ಕದಿಂದ ಚಂದನದ ಪರಿಮಳ ಬರುವಂತೆ ಮಾಡಿದವನು ಎಂದು ಅರ್ಥೈಸಬಹುದು.

ಆದುದರಿಂದ ಶ್ರೀನಿವಾಸ ಎಂದಾಕ್ಷಣ ತಿರುಪತಿ ತಿಮ್ಮಪ್ಪನನ್ನು ಚಿಂತನೆ ಮಾಡೋಣ. ಅದರ ಜೊತೆಗೆ ಲಕ್ಷ್ಮೀದೇವೀಯನ್ನು ತನ್ನ ತೋಳಬಂದಿಯಲ್ಲಿ ಇಟ್ಟುಕೊಂಡವನು ಎಂಬ ಅರ್ಥಾನುಸಂಧಾನ ನಡೆಸಿದೆವೆಂದರೆ ಲಕ್ಷ್ಮೀನಾರಾಯಣರ ಚಿಂತನೆ ನಡೆಸಿದಂತಾಗುವುದು.

**೧೮೬. ಸತಾಂ ಗತಿಃ – * ಸಜ್ಜನರಿಗೆ ಹೊಂದಲಿಕ್ಕೆ ಯೋಗ್ಯನಾದವನು.**
*** ಸಜ್ಜನರಿಗೆ ಆಶ್ರಯ.**

**ವಿವರಣೆ :** ಸತಾಂ ಸಜ್ಜನರಿಗೆ, ಗತಿಃ ಅಂದರೆ ಹೊಂದಲಿಕ್ಕೆ ಯೋಗ್ಯನಾದವನು. ನಮ್ಮಲ್ಲಿ ಒಂದು ಮಾತು ಚಾಲ್ತಿಯಲ್ಲಿ ಬಂದಿದೆ – ಯಾರು ಎನಗೆ ಗತಿ? ಎಂದು ಯಾರಾದರೂ ಕೇಳಿದರೆ 'ನೀನು ಒಳ್ಳೆಯವನೋ ಹಾಗಾದರೆ ನಿನಗೆ ದೇವರೇ ಗತಿ' ಯಾರಿಗೆ 'ದೇವರು' – ಎಂಬ ಸಂಸ್ಕಾರ ಇರುವುದೋ ಅಂತಹವರು ಏನಾದರೂ ಕಷ್ಟಕ್ಕೆ ಸಿಲುಕಿದರೆಂದರೆ ಅವರು ತಮಗೆ 'ದೇವರೇ ಗತಿ' – ಎಂದು ಹೇಳಿಕೊಳ್ಳುವರು. ದೇವರ ಸಂಸ್ಕಾರ ಇದೆ ಎಂದರೆ ಅವರು ಸಜ್ಜನರು. ಅವರಿಗೆ ದೇವರೇ ಗತಿ, ಆದುದರಿಂದ 'ಸತಾಂಗತಿಃ' ಎನಿಸಿರುವನು.'ಗತಿಃ' – ಎಂದರೆ ಹೊಂದಲಿಕ್ಕೆ ಯೋಗ್ಯನಾದವನು ಎಂದಿರುವಂತೆ 'ಆಶ್ರಯ' ಎಂಬ ಅರ್ಥವೂ ಇದೆ. ಆದ್ದರಿಂದ ದೇವರು ಸಜ್ಜನರಿಗೆ ಹೊಂದಲು ಯೋಗ್ಯನಾಗಿರುವಂತೆ, ಆಶ್ರಯನೂ ಆಗಿರುವನು.

**೧೮೭. ಅನಿರುದ್ಧಃ – * ಎಲ್ಲಿಯೂ ತಡೆ ಇಲ್ಲದವನು.**
*** ಯತ್ನವುಳ್ಳವರಿಂದ ತಮ್ಮ ಹೃದಯದಲ್ಲಿ ತಡೆಯಲ್ಪಟ್ಟಿರುವವನು.**

**ವಿವರಣೆ :** ಭಗವಂತನ ರೂಪ ಅನಿರುದ್ಧ ಎನಿಸಲು ಅನೇಕ ಕಾರಣಗಳನ್ನು ಕೊಡುತ್ತಾರೆ. ಎಲ್ಲಿ ಹೋದರೂ ಅವನಿಗೆ ತಡೆ ಇಲ್ಲ. ಆದುದರಿಂದ ಅನಿರುದ್ಧ ಎನಿಸುವನು.ನಿರೋಧ ಎಂದರೆ ತಡೆಯುವಿಕೆ. ಯಾವುದೇ ಕೆಲಸಕ್ಕೆ ತೊಡಗಿದಾಗ ತಡೆ ಬಾರದಂತೆ ಅನಿರುದ್ಧ–ರೂಪಿ ಭಗವಂತನು ಅನುಗ್ರಹಿಸುವನು. ಆದ್ದರಿಂದಲೇ ಅವನ ಪತ್ನಿಯ ಹೆಸರು ಶಾಂತಿ. ಅನಿರುದ್ಧನಿಂದಾಗಿ ಕೆಲಸದ ತಡೆ ಪರಿಹಾರವಾಗಿ ನಿರ್ವಿಘ್ನವಾಗಿ ಕೆಲಸ

ನಡೆಯುವಂತಾಗುವುದು. ಅವನ ಪತ್ನಿ ಶಾಂತಿಯಿಂದಾಗಿ ಶಾಂತಿ ದೊರಕುವಂತಾಗುವುದು.

ಇನ್ನೊಂದು ಮುಖದಿಂದ ನೋಡುವುದಾದರೆ, ಅನಿ + ರುದ್ಧ. ಅನವುಳ್ಳವರು ಅನಿ. ಗುಣವುಳ್ಳವರು ಹೇಗೆ ಗುಣಿಗಳೋ ಹಾಗೆ. ಅನ ಎಂದರೆ ಚೇಷ್ಟೆ, ಚಟುವಟಿಕೆ. ಅನಿ ಎಂದರೆ ಚೇಷ್ಟೆವುಳ್ಳವರು. ರುದ್ಧ ಅಂದರೆ ತಡೆಯಲ್ಪಟ್ಟವನು. ಚೇಷ್ಟೆವುಳ್ಳವರಿಂದ,ಪ್ರಯತ್ನವುಳ್ಳವರಿಂದ ಹೃದಯದಲ್ಲಿ ತಡೆಯಲ್ಪಟ್ಟವನೇ ಅನಿರುದ್ಧ. 'ಸದಾ ಎನ್ನ ಹೃದಯದಲ್ಲಿ ವಾಸಮಾಡೋ ಶ್ರೀಹರಿ.....' ಎಂಬ ಹಾಡನ್ನು ನಾವು ನಿತ್ಯ ಹೇಳುವುದುಂಟು. ದೇವರನ್ನು ನಿತ್ಯ ಹೃದಯದಲ್ಲಿ ಬಂಧಿಸಲು ಯತ್ನ ಮಾಡು – ಎಂದು ದಾಸರು ಹೇಳಿಕೊಟ್ಟರು. ದೇವರು ನಿನ್ನ ಹೃದಯದಲ್ಲಿ ಬದ್ಧನಾಗಿ ಇರಲಿ. ಹಾಗಾಗಬೇಕಾದರೆ ನಾವು ಅನ ಅಂದರೆ ಚೇಷ್ಟೇ ಪ್ರಯತ್ನ ಉಳ್ಳವರಾಗಬೇಕು. ಹಾಗಾದರಷ್ಟೇ ದೇವರು ನಮ್ಮ ಹೃದಯದಲ್ಲಿ ಬಂದು ಕುಳಿತುಕೊಳ್ಳುವನು. ಎಲ್ಲೆಲ್ಲೋ ಓಡುವ ಮನಸ್ಸನ್ನು ಹಿಂದಕ್ಕೆ ತರಲು ಯತ್ನಿಸುವುದೇ 'ಅನ'. ಅಂತಹ ಯತ್ನವುಳ್ಳವರು 'ಅನಿ'ಗಳು. ಅವರು ತಮ್ಮ ಹೃದಯದಲ್ಲಿ ದೇವರನ್ನು ಬಂಧಿಸುವರು. ಹೊರಗಡೆ ಓಡುತ್ತಿರುವ ಮನಸ್ಸನ್ನು ಹೃದಯದಲ್ಲಿರುವ ಭಗವದ್ರೂಪದಲ್ಲಿ ತೊಡಗಿಸಿದೆವೆಂದರೆ ಭಗವಂತ ಅಲ್ಲಿ ಬದ್ಧನಾಗುವನು.

ಭೀಷ್ಮರು ಕೃಷ್ಣನಲ್ಲಿ ನಿವೇದಿಸಿಕೊಳ್ಳುವರು – ಕೃಷ್ಣ ! ನಾನು ಶರಪಂಜರದಲ್ಲಿ ಮಲಗಿ ಏಳೆಂಟು ದಿನಗಳು ಸಂದವು. ಏನಾದರೂ ಮಾಡಿ ಮನಸ್ಸಿನಲ್ಲಿ ನಿನ್ನನ್ನು ತಂದು ನಿಲ್ಲಿಸಬೇಕೆಂದು ಯತ್ನಿಸುತ್ತಿದ್ದೆ. ನನ್ನ ಯತ್ನಕ್ಕೆ ಒಲಿದು ನನ್ನ ಎದುರು ಬಂದು ಬದ್ಧನಂತೆ ಬಂದು ಕುಳಿತುಕೊಳ್ಳುವ ಮೂಲಕ ನನ್ನ ಪಾಲಿಗೂ 'ಅನಿರುದ್ಧ' ಎನಿಸಿರುವಿ.

**೧೮೮. ಸದಾನಂದಃ – * ಯಾವಾಗಲೂ ಆನಂದದಿಂದ ಕೂಡಿಯೇ ಇರುವವನು.**
**(ಸುರಾನಂದಃ) – * ದೇವತೆಗಳಿಗೆ ಆನಂದವನ್ನು ನೀಡುವವನು.**

**ವಿವರಣೆ :** ಸದಾನಂದಃ ಅಥವಾ ಸುರಾನಂದಃ – ಈ ಎರಡು ಪಾಠಗಳೂ ಇರುವುದರಿಂದ ಯಾವುದೂ ಆಗಬಹುದು. ಹಿಂದೆ 'ಅನಿರುದ್ಧಃ' – ಎಂಬ ನಾಮಾರ್ಥದ ಚಿಂತನೆಯಲ್ಲಿ ಭೀಷ್ಮರಿಂದ ಬದ್ಧನಾಗಿ ಕೃಷ್ಣ ಕುಳಿತಿರುವನೆಂದು ಪರಿಶೀಲಿಸಲಾಯಿತು. ಬದ್ಧನಾಗಿ ಕುಳಿತಿದ್ದರೂ ಸಂತೋಷದಿಂದಲೇ ಕೂಡಿರುವನು – ಸದಾನಂದಃ – ಯಾವಾಗಲೂ ಆನಂದದಿಂದ ಕೂಡಿಯೇ ಇರುವವನು ಅವನು. ನಮಗೂ ಅವನಿಗೂ ಇಷ್ಟೇ ವ್ಯತ್ಯಾಸ – ನಾವೂ ಬದ್ಧರು; ಅವನೂ ಬದ್ಧ. ನಾವು ಬದ್ಧರಾಗಿದ್ದು ಸದಾ ದುಃಖಿಗಳು; ಅವನು ಬದ್ಧನಾಗಿದ್ದೂ ಸದಾನಂದ.

ಅನಿರುದ್ಧನಾಮದಿಂದ ಕೃಷ್ಣನನ್ನು ಬದ್ಧ ಎಂದ ಭೀಷ್ಮರು ಕೃಷ್ಣನ ಬಂಧನವೂ ಆನಂದಮಯವಾದದ್ದೇ ವಿನಹ ದುಃಖಮಯವಲ್ಲ ಎಂದು ಸ್ಪಷ್ಟಪಡಿಸುವುದಕ್ಕಾಗಿ

'ಸದಾನಂದಃ' ಎಂದರು.

ಭಗವಂತನನ್ನು 'ಅನಿರುದ್ಧಃ' 'ಸದಾನಂದಃ' – ಎಂಬ ನಾಮಗಳಿಂದ ಉಪಾಸನೆ ನಡೆಸಿದಲ್ಲಿ ಅದರಿಂದ ಪ್ರಸನ್ನನಾಗುವ ಭಗವಂತನು ನಮ್ಮನ್ನು ಸಂಸಾರ ಬಂಧನದಲ್ಲಿ ಇರಿಸಿದರೂ ಮುಖದಲ್ಲಿ ಸ್ವಲ್ಪ ನಗು ಕಾಣಿಸಿಕೊಳ್ಳುವಂತೆ, ಆಗಾಗ್ಗೆ ಆದರೂ ಆನಂದ ಕಾಣಿಸಿಕೊಳ್ಳುವಂತೆ ಅನುಗ್ರಹಿಸುವನು.

'ಸುರಾನಂದಃ' – ಎಂಬ ಪಾಠವಿರುವಲ್ಲಿ – ಸುರ ಎನಿಸುವ ದೇವತೆಗಳಿಗೆ ಆನಂದವನ್ನು ನೀಡುವವನು – ಎಂಬ ಅರ್ಥ. ಅನಿರುದ್ಧ ಎನಿಸುವ ಭಗವಂತನು ಭೀಷ್ಮರೆದುರು ಬದ್ಧನಂತೆ ಕುಳಿತಿದ್ದರೆ, ದೇವತೆಗಳಿಗೆ ಆನಂದವನ್ನು ನೀಡಿ 'ಸುರಾನಂದ' ಎನಿಸುವನು. ಸಂಸಾರದಲ್ಲಿದ್ದುಕೊಂಡು ಭಗವಂತನ ಸೇವೆ ಮಾಡುತ್ತ ಸಂತೋಷದಲ್ಲಿ ಇರುವವರು ಸುರರು. ಅವರಿಗೆ ಮತ್ತಷ್ಟು ಆನಂದವನ್ನು ಭಗವಂತ ನೀಡುವನು. ಮಧ್ಯೇ ಕ್ಲೇಶ ನೀಡುವನು, ಇದರ ಉದ್ದೇಶವಾದರೂ ಅವರಿಗೆ ಮುಂದೆ ಮತ್ತಷ್ಟು ಆನಂದ ನೀಡುವುದಕ್ಕಾಗಿ. ಮತ್ತೆ ಸ್ವಲ್ಪ ಜಾಸ್ತಿ ಸಿಹಿ ತಿನ್ನುವುದಕ್ಕೋಸ್ಕರ ಭೋಜನದ ಮಧ್ಯೇ ಮಧ್ಯೇ ಹೇಗೆ ಖಾರ ಹಾಕಲಾಗುವುದೋ ಹಾಗೆ. ದೇವತೆಗಳಿಗೆ ಕ್ಲೇಶ ಬಂದರೂ ಅದನ್ನು ದೇವರ ಪೂಜೆ ಎಂದು ಅವರು ಅನುಭವಿಸುವರು. ಆದ್ದರಿಂದ ಅವರ ಪಾಲಿಗೆ ಆನಂದವೇ ಆಗುವುದು.

**೧೮೯. ಗೋವಿಂದಃ – * ಕೃಷ್ಣರೂಪದಲ್ಲಿ ಗೋವುಗಳನ್ನು ಸಾಕಿದವನು.**
*** ವಾಮನ ರೂಪದಿಂದ ಭೂಮಿಯನ್ನು ಪಡೆದವನು.**
*** ವರಾಹ ರೂಪದಿಂದ ಭೂಮಿಯನ್ನು ಅದರ ಸ್ಥಾನದಲ್ಲಿ ಸ್ಥಾಪಿಸಿದವನು.**
*** ವೇದ ಪ್ರತಿಪಾದ್ಯ.**

**ವಿವರಣೆ** : ಗೋವಿಂದ ಶಬ್ದಕ್ಕೆ ನೂರು ಅರ್ಥಗಳಿವೆ, ಅವುಗಳಲ್ಲಿ ಮೂರು ಅರ್ಥಗಳನ್ನಾದರೂ ನೋಡೋಣ. ಸುಲಭದ ಅರ್ಥ – ಗೋವುಗಳನ್ನು ಹೊಂದಿದವನು. ಕೃಷ್ಣ ಕಟ್ಟಿದಷ್ಟು ಆಕಳುಗಳನ್ನು ಯಾರೂ ಕಟ್ಟಿಲ್ಲ.

ಭೂಮಿಯನ್ನು ಪಡೆದವನು – 'ಗಾಂ ವಿಂದತೇ ಇತಿ ಗೋವಿಂದಃ' ಎಂಬುದು ಮತ್ತೊಂದು ಅರ್ಥ. ವಾಮನನಾಗಿ ಬಲಿಚಕ್ರವರ್ತಿಯಿಂದ ಭೂಮಿಯನ್ನು ಪಡೆದವನು. ಹಾಗೆಯೇ ಹಿರಣ್ಯಾಕ್ಷ ಭೂಮಿಯನ್ನು ಕಕ್ಷೆಯಿಂದ ತಪ್ಪಿಸಿ ನೀರಿನಲ್ಲಿ ಮುಳುಗುವಂತೆ ಮಾಡಿದಾಗ ವರಾಹ ರೂಪದಿಂದ ಭೂಮಿಯನ್ನು ಉದ್ಧಾರ ಮಾಡಿ ಅದರ ಕಕ್ಷೆಯಲ್ಲಿ ಸ್ಥಾಪಿಸಿದವನು.

ಭಗವಂತನನ್ನು ಹೀಗೆ ಗೋವಿಂದನಾಮದಿಂದ ಭೂಮಿಯನ್ನು ಪಡೆದವನು ಎಂದು ಉಪಾಸನೆ ಮಾಡಿದಲ್ಲಿ ಅದರಿಂದ ಪ್ರಸನ್ನನಾಗುವ ಭಗವಂತ ನಮಗೂ ನೆಲೆ

ಒದಗಿಸಿಕೊಡುವವನು. ನಮಗೆ ಕಾಲು ಊರಲು ಸ್ವಲ್ಪ ಭೂಮಿಯನ್ನು ದೊರಕಿಸಿಕೊಡುವನು.

ಮತ್ತೊಂದು ಅರ್ಥ – ಗೋಭಿಃ ವಿಂದತೇ ಇತಿ ಗೋವಿಂದಃ ವೇದ ಪ್ರತಿಪಾದ್ಯ. ಗೋ ಎಂದರೆ ಮಾತು. ಆದರೆ ನಮ್ಮ ನಿಮ್ಮ ಮಾತುಗಳಿಂದ ದೇವರು ಸಿಗುವುದಿಲ್ಲ. ಆದುದರಿಂದ ಗೋ ಎಂದರೆ ವೇದದ ಮಾತು. ದೇವರನ್ನು ಸ್ವಲ್ಪ ಮಟ್ಟಿಗಾದರೂ ಪರಿಚಯಿಸಿ ಕೊಡುವವು ವೇದದ ಮಾತುಗಳು. 'ವೇದಾ ಹ್ಯೇವ ಏನಂ ವೇದಯಂತಿ......' ಪ್ರತ್ಯಕ್ಷಕ್ಕೆ ಎಟಕದ, ಊಹೆಗೆ ನಿಲುಕದ ದೇವರನ್ನು ವೇದಗಳಷ್ಟೇ ತಿಳಿಸಬಲ್ಲವು.

ಭೀಷ್ಮರು ಕೃಷ್ಣನಲ್ಲಿ ತಿಳಿಸ್ತಾರೆ – ನೀನು ಕಣ್ಣೆದುರಿಗೆ ಇರುವಿಯಾದರೂ ನಿನ್ನನ್ನು ತಿಳ್ಕೊಳ್ಳಬೇಕು ವೇದಗಳಿಂದಲೇ. ಇದು ಭಗವಂತನ ವೈಶಿಷ್ಟ್ಯ.

**೧೯೦. ಗೋವಿದಾಂ ಪತಿಃ – ಶಬ್ದದ ಮೂಲಕ ದೇವರನ್ನು ತಿಳಿದವರನ್ನು ರಕ್ಷಣೆ ಮಾಡುವವನು.**

**ವಿವರಣೆ** : ಗೋ ಎಂದರೆ ವೇದದ ಮಾತುಗಳು. 'ಗೋವಿದ' ರು ಎಂದರೆ ವೇದದ ಮಾತುಗಳನ್ನು ಬಲ್ಲವರು. ಪತಿ ಎಂದರೆ ಒಡೆಯ ಹಾಗೂ ಕಾಪಾಡುವವನು ಎಂದರ್ಥ.

ಭಗವಂತ ಯಾರಿಗೆ ಒಡೆಯ? ಯಾರನ್ನು ಪಾಲನೆ ಮಾಡುವನು? ಅಂತಾರೆ – 'ಗೋವಿದಾಂ ಪತಿಃ' ಯಾರು ನಾಲ್ಕಾದರೂ ವೈದಿಕ ಸಾಹಿತ್ಯವನ್ನು ಓದಿರ್ತಾರೆ, ದೇವರನ್ನು ತಿಳಿಸತಕ್ಕ ಪುಸ್ತಕವನ್ನು ಸ್ವಲ್ಪವಾದರೂ ಓದಿರ್ತಾರೆ ಅಂತಹವರು 'ಗೋವಿದ'ರು.

ವೇದವನ್ನೇ ಆಗಬೇಕಿಲ್ಲ; ವೇದವನ್ನು ಪುರಾಣ, ಇತಿಹಾಸದಲ್ಲಿ ತರ್ಜುಮೆ ಮಾಡಲಾಗಿದೆ. ಪುರಾಣಾದಿಗಳು ಸಂಸ್ಕೃತದಲ್ಲಿ ಇವೆ. ಅರ್ಥವಾಗುವುದಿಲ್ಲ – ಎಂದರೆ ಪುರಾಣಾದಿಗಳನ್ನು ಹಾಡುಗಳ ರೂಪಕ್ಕೆ ಕನ್ನಡೀಕರಿಸಿದರು. ಅದೂ ಅರ್ಥವಾಗಿಲ್ಲ ಎಂದಾಗ 'ಲೇ ಲೇ ಲೇ ಲೇ ಗಾ......'ಎಂದು ವಾದಿರಾಜ ತೀರ್ಥರು ತುಳುವಿಗೆ ಇಳಿಸಿದರು. ಇಷ್ಟು ಇಳಿಸಿದರೂ ಅರ್ಥವಾಗುವುದಿಲ್ಲ ಎಂದರೆ ಈ ಜನ್ಮದಲ್ಲಿಯೇ ಅರ್ಥವಾಗುವುದಿಲ್ಲ – ಎಂದರು.

'ನಾನು ಪ್ರತಿನಿತ್ಯ ಸ್ವಲ್ಪವಾದರೂ ವೇದವನ್ನಾಗಲೀ, ಪುರಾಣ ಶ್ಲೋಕಗಳನ್ನಾಗಲೀ, ದಾಸರ ಹಾಡನ್ನಾಗಲೀ ಪಠಿಸಿಯೇ ತೀರುವೆನೆಂದು ಯಾರು ದೀಕ್ಷಿತರಾಗುವರೋ ಅವರೇ 'ಗೋವಿದ' ರು. ಅವರಿಗೆ ಭಗವಂತ ವಿಶೇಷವಾಗಿ ಒಡೆಯನಾಗಿ ರಕ್ಷಕನಾಗಿರ್ತಾನೆ.

**ಮರೀಚಿರ್ದಮನೋ ಹಂಸಃ ಸುಪರ್ಣೋ ಭುಜಗೋತ್ತಮಃ ।**
**ಹಿರಣ್ಯನಾಭಃ ಸುತಪಾಃ ಪದ್ಮನಾಭಃ ಪ್ರಜಾಪತಿಃ ॥ ೨೧ ॥**

**೧೯೧. ಮರೀಚಿಃ – ಸಮಸ್ಯೆಗೊಳಗಾದವರಿಗೆ ದಾರಿ ತೋರಿಸುವ ಬೆಳಕು.**

**ವಿವರಣೆ :** ಮರೀಚಿ ಶಬ್ದಕ್ಕೆ ಬೆಳಕು ಎಂಬ ಅರ್ಥವಿದೆ. ಸಂಸಾರದಲ್ಲಿ ತುಂಬ ಸಮಸ್ಯೆಗೊಳಗಾದವರ ಪಾಲಿಗೆ ನೀನು 'ಮರೀಚಿ' ಆಗಿ, ಬೆಳಕು ಆಗಿ ದಾರಿ ತೋರಿಸುವಿ. 'ಮರೀಚಿಕೆ' ಆಗಿ, 'ನೀರಿನ ವಸರು' ಆಗಿ ಭಗವಂತ ನಮಗೆ ಸ್ಫೂರ್ತಿ ಕೊಡ್ತಾನೆ.

ಗೊಂದಲದಲ್ಲಿ ಸಿಲುಕಿದಾಗ ದಾರಿ ತೋರುವ ಆಶಾಕಿರಣ – ಭಗವಂತ. ಅರ್ಜುನ ಅಶ್ವತ್ಥಾಮಾಚಾರ್ಯರ ವಿರುದ್ಧ ಕಾದಾಡುತ್ತಿದ್ದಾಗ, ಅಸುರರೂ ಅವನನ್ನು ಯುದ್ಧಕ್ಕೆ ಕರೆಯುತ್ತಿದ್ದರು. ಆಗ ಅರ್ಜುನ ಗೊಂದಲಕ್ಕೆ ಸಿಲುಕಿ **'ಕಾರ್ಯಂ ಕೃಷ್ಣಮಪೃಚ್ಛತ'** – ತಾನು ಏನು ಮಾಡಬೇಕು? ಎಂದು ಕೃಷ್ಣನಲ್ಲಿ ವಿಚಾರಿಸಿದಾಗ ಅವನು ಅರ್ಜುನನ ರಥವನ್ನು ಅಶ್ವತ್ಥಾಮಾಚಾರ್ಯರಿರುವಲ್ಲಿಗೆ ಕರೆದೊಯ್ದು ಅರ್ಜುನನ ಪಾಲಿಗೆ 'ಮರೀಚಿ; ಆಗಿದ್ದನು.

ಭಗವಂತ ನಮ್ಮ ಸಮಸ್ಯೆಗಳಿಗೂ ಹೇಗೆ ದಾರಿ ತೋರಿಸುವನು – ಎಂಬುದಕ್ಕೆ ಇದೊಂದು ನಿದರ್ಶನ.

**೧೯೨. ದಮನಃ – ಗೊಂದಲ ರೂಪವಾದ ದುಷ್ಟತನವನ್ನು ಬರದಂತೆ ಮಾಡುವವನು.**

**ವಿವರಣೆ :** 'ದಮಯತೀತಿ ದಮನಃ' ದುಷ್ಟರನ್ನು ನಿಗ್ರಹಿಸುವವನು ಎಂದರ್ಥ. ನಮ್ಮಲ್ಲಿ ಬರತಕ್ಕ ಗೊಂದಲವೇ ದುಷ್ಟತನ. ಅದೇ ನಮ್ಮನ್ನು ಕೊರೆಯುತ್ತಿರುತ್ತದೆ. ಅಂತಹ ಗೊಂದಲವನ್ನು ಪೂರ್ಣವಾಗಿ ತಪ್ಪಿಸಿ ಬಿಡುವನು. ಗೊಂದಲವನ್ನು ತಪ್ಪಿಸಿ, ನಮಗೆ ತೀರ್ಮಾನ ಕೊಡುವವನು – ಮರೀಚಿ ಹಾಗೂ ದಮನ. ಗೊಂದಲ ಬಂದಲ್ಲಿ ಅದಕ್ಕೆ ಪರಿಹಾರ ಹೇಳುವುದು ಒಂದಾಗಿದ್ದರೆ, ಗೊಂದಲ ಬಾರದಂತೆಯೇ ಮಾಡುವುದು ಮತ್ತೊಂದು. ಕೆಸರಿಗೆ ಕೈ ಹಾಕಿ ತೊಳಕೊಳ್ಳುವುದು ಒಂದು; ಕೈ ಹಾಕದೆಯೇ ದೂರ ಇರುವುದು ಮತ್ತೊಂದು. ಸಂಸಾರದಲ್ಲಿ ಕೆಸರಿಗೆ ಕೈ ಹಾಕಿ ಆಗಿದೆ. ಅದನ್ನು ತೊಳೆಯುವ ಅನುಗ್ರಹ ಮಾಡಲು 'ಮರೀಚಿ' ನಾಮಕನಲ್ಲಿ ಕೇಳಿಕೊಂಡರೆ ಮುಂದೆ ಮತ್ತೆ ಮತ್ತೆ ಕೆಸರಿಗೆ ಕೈ ಹಾಕದಂತೆ ಮಾಡಲು 'ದಮನ' ನಾಮಕನಲ್ಲಿ ಪ್ರಾರ್ಥಿಸುವುದು. ಗೊಂದಲವನ್ನು ಕೊಟ್ಟು ಅದನ್ನು ನಿಗ್ರಹ ಮಾಡುವುದು ಒಂದು ಬಗೆಯ ಅನುಗ್ರಹವಾದರೆ, ಗೊಂದಲ ಕೊಡದೆಯೇ ಇರುವುದು ಮತ್ತೊಂದು ಬಗೆಯ ಅನುಗ್ರಹ.

**೧೯೩. ಹಂಸಃ – ಎಲ್ಲ ದೋಷಗಳಿಂದ ದೂರನಾದವನು; ಎಲ್ಲ ಗುಣಗಳ ಸಾರಸ್ವರೂಪಿ.**

**ವಿವರಣೆ :** ಭಗವಂತ ಯಾಕೆ ಹಂಸ? ಎಲ್ಲ ದೋಷಗಳನ್ನು ತ್ಯಾಗ ಮಾಡಿದ್ದರಿಂದ 'ಹ' ಹಾಗೂ ಎಲ್ಲ ಗುಣಗಳ ಸಾರರೂಪನಾದುದರಿಂದ – ಸ. ತ್ಯಾಗ ಅರ್ಥದ ಹಾನ ಶಬ್ದದ ಏಕದೇಶ 'ಹ' ಆದರೆ ಸಾರರೂಪದ ಏಕದೇಶ ಸ. 'ನಿತ್ಯಂ ಹೀನೋಽಖಿಲೈರ್ದೋಷೈಃ

ಸಾರರೂಪೋ ಯತೋ ಹರಿಃ । ಹಂಸ ಇತ್ಯುಚ್ಯತೇ .......’ ಎಂದರು ಹಿರಿಯರು. ಶ್ರೀಹರಿಯಲ್ಲಿ ಯಾವುದೇ ದೋಷ ಹಿಂದೆಯೂ ಇರಲಿಲ್ಲ. ಈಗಲೂ ಇರಲಿಲ್ಲ. ಮುಂದೆಂದೂ ಇರುವುದಿಲ್ಲ. ಆದುದರಿಂದ ‘ಹ’. ಸಕಲಗುಣಗಳ ಸಾರರೂಪನಾದುದರಿಂದ ಸ. ಹಕಾರ ಮತ್ತು ಸಕಾರಗಳ ನಡುವೆ ಒಂದು ಸೊನ್ನೆ ಇದೆ. ಪ್ರಾರಂಭವಾಗುವಲ್ಲಿಂದಲೇ ಕೊನೆಗೊಳ್ಳುವ ವೈಶಿಷ್ಟ್ಯವನ್ನು ಪಡೆದು ‘ಪೂಜ್ಯ’ ಎನಿಸುವ ಸೊನ್ನೆಯು ಹೊಸ್ತಿಲಲ್ಲಿ ಇಟ್ಟ ದೀಪದಂತೆ ಹಕಾರಕ್ಕೂ ಸಕಾರಕ್ಕೂ ಅನ್ವಯವಾಗುವುದು. ಹಕಾರಕ್ಕೆ ಸಂಬಂಧಿಸಿ ಎಲ್ಲ ದೋಷಗಳಿಂದ ಹೀನನಾದವನೆಂದು ತಿಳಿಸಿದರೆ, ಸಕಾರದ ಸಂಬಂಧವನ್ನು ಹೊಂದಿ ಎಲ್ಲ ಗುಣಗಳ ಸಾರನಾದವನೆಂದು ತಿಳಿಸುವುದು. ಆ ದೋಷ ಇಲ್ಲ ; ಈ ದೋಷ ಇಲ್ಲ – ಎಂದು ಎಲ್ಲಾ ದೋಷಗಳ ಹೀನತೆಯನ್ನು ಹೇಳಲಾಗುವ ಪ್ರಯುಕ್ತ ಅದನ್ನು ಸೂಚಿಸುವುದಕ್ಕಾಗಿಯೇ ‘ಹಂ’ ಎಂದು ಉಚ್ಚರಿಸಲಾಗುವಂತೆ ಸೊನ್ನೆಯನ್ನು ಪ್ರಯೋಗಿಸಲಾಗಿದೆ. ಆದರೆ ಗುಣಪೂರ್ಣತೆಯನ್ನು ಪೂರ್ಣವಾಗಿ ಹೇಳಲಾಗುವುದಿಲ್ಲ ಎಂದು ಸೂಚಿಸುವುದಕ್ಕಾಗಿ ಉಚ್ಚರಿಸಲು ಬಾರದಂತೆ ಸಕಾರಕ್ಕಿಂತ ಮುಂಚೆ ಅನುಸ್ವಾರವನ್ನು ಬಳಸಲಾಗಿದೆ.

**೧೯೪. ಸುಪರ್ಣಃ – ವೇದಗಳೆಂಬ ಎಲೆಗಳಿಂದ ಪ್ರತಿಪಾದಿಸಲ್ಪಡುವವನು.**

**ವಿವರಣೆ** : ಪರ್ಣ ಎಂದರೆ ಎಲೆ. ಸು ಎಂದರೆ ಒಳ್ಳೆಯ. ಒಳ್ಳೆಯ ಎಲೆವುಳ್ಳವನೇ ಸುಪರ್ಣ. ಆ ಎಲೆ ಭಾರೀ ದೊಡ್ಡದು. ಕೆಲವು ಕೋಟಿ ಯೋಜನಗಳಷ್ಟು ಅಗಲದ ಎಲೆ ಅದು. ಅದರಲ್ಲಿ ಕೆಲವು ಕೋಟಿ ಯೋಜನ ವಿಸ್ತಾರದ ಪುಟ್ಟ ಮಗು ಮಲಗಿದಂತೆ ! ಇದನ್ನೇ ದಾಸರು – ‘ಆಲದ ಎಲೆಯ ಮೇಲೆ ಮಲಗಿದ ಶಿಶುವೇ’ – ಎಂದು ಹಾಡಿರುವರು. ಪ್ರಲಯಕಾಲದಲ್ಲಿ ನಾಶವಾಗದೆ ಇರುವ, ಲಕ್ಷ್ಮೀರೂಪದ ಎಲೆಯ ಮೇಲೆ ಮಲಗಿರುವವನು ಭಗವಂತನೆಂದು ‘ಸುಪರ್ಣ’ ಎನಿಸುವನು.

ನಾವು ಅದನ್ನು ಆಲದ ಮರದ ಎಲೆ ಅನ್ನುವೆವು. ಆದರೆ ಅದು ಸಾಮಾನ್ಯವಾದ ಅರಳೀಮರದ ಎಲೆ ಅಲ್ಲ. ಕೃಷ್ಣ ಗೀತೆಯಲ್ಲಿ ತಿಳಿಸಿದ – **‘ಛಂದಾಂಸಿ ಯಸ್ಯ ಪರ್ಣಾನಿ.....’** ಸಂಸಾರವೆಂಬ ವೃಕ್ಷದಲ್ಲಿ ವೇದಗಳೇ ಎಲೆಗಳು. ಸಂಸಾರ ವೃಕ್ಷಕ್ಕೆ ಪ್ರವಾಹತೋ ನಾಶವಿರುವುದಾದರೂ ಅದರ ಎಲೆ ಎನಿಸುವ ವೇದಕ್ಕೆ ನಾಶವಿಲ್ಲ. ಇದು ವಿಚಿತ್ರ ಸಂಗತಿ. ವೇದಗಳೆಂಬ ಎಲೆಗಳುಳ್ಳವನು; ವೇದಗಳೆಂಬ ಎಲೆಗಳಿಂದ ಪ್ರತಿಪಾದಿಸಲ್ಪಡುವವನು. ಮರದಲ್ಲಿ ಹೇಗೆ ಕಾಯಿ ಉಳಿಯಿವುದು ಎಲೆಗಳಿಂದಲೋ ಹಾಗೆ ದೇವರು ನಮ್ಮ ಪಾಲಿಗೆ ಉಳಿದಿರುವುದು ವೇದಗಳೆಂಬ ಎಲೆಗಳಿಂದ. ದೇವರು ಪ್ರತ್ಯಕ್ಷದಲ್ಲಾಗಲೀ, ಯುಕ್ತಿಯಲ್ಲಾಗಲೀ ಇರದೆ ವೇದದಲ್ಲಿಯೇ ಇರುವನು. ದೇವರನ್ನು ಹುಡುಕಬೇಕೆಂದರೆ ವೇದಗಳಿಗೇ ಶರಣಾಗಬೇಕು.

**೧೯೫. ಭುಜಗೋತ್ತಮಃ – ಸರ್ಪನಾದ ಶೇಷನಿಗೆ ರುದ್ರನಿಗಿಂತಲೂ ಉತ್ತಮತ್ವವನ್ನು ಕೊಟ್ಟವನು.**

**ವಿವರಣೆ :** ಒಂದೇ ತರಹದ ಯೋಗ್ಯತೆವುಳ್ಳ ಇಬ್ಬರು ವ್ಯಕ್ತಿಗಳಿರುವರು. ಒಂದೇ ಗುರುಗಳಲ್ಲಿ ಅಧ್ಯಯನ ನಡೆಸಿದವರು. ಅವರಲ್ಲಿ ಒಬ್ಬ ತುಂಬ ಮರೆಯುವನು. ಮತ್ತೊಬ್ಬ ಏನು ಮಾಡಿದರೂ ಮುಂದೆ ಬರುವುದಿಲ್ಲ. ಬೆಳಕಿಗೆ ಬರುವುದಿಲ್ಲ. ಇಂತಹ ಪ್ರಸಂಗ ದೇವತೆಗಳಲ್ಲೂ ಬಂತು. ಗರುಡ – ಶೇಷ – ರುದ್ರರು ಸಮಾನರು. ಯೋಗ್ಯತೆಯಲ್ಲಿ ಹೆಚ್ಚುಕಡಿಮೆ ಇಲ್ಲ. ಶೇಷನಿಗೆ ಏನು ತಾಕತ್ತೋ ಆ ತಾಕತ್ತು ರುದ್ರದೇವನಿಗೆ ಒಳಗಿನಿಂದ ಉಂಟು. ಆದರೂ ಶೇಷ ರೂಪದಲ್ಲೇ ಮರೆಯುವುದು; ರುದ್ರರೂಪದಲ್ಲಿ ಮೆರೆಯುವ ಪ್ರಸಂಗವೇ ಇಲ್ಲ. 'ಶರ್ವಾದಿವಂದ್ಯಚರಣಃ .......' – ಎಂದು ಶೇಷನನ್ನು ಹಿರಿಯರು ಸ್ತುತಿಸಿದ್ದುಂಟು. ಸಮಾನಯೋಗ್ಯತೆಯ ರುದ್ರನೂ ನಿನ್ನ ಪಾದಾರವಿಂದಕ್ಕೆ ನಮಿಸಬೇಕು – ಅಂತಹ ಹಿರಿಮೆ ನಿನ್ನದ್ದೆಂದು ಶೇಷನನ್ನು ಸ್ತುತಿಸಿರುವರು. ರುದ್ರನಿಗಿಂತಲೂ ಶೇಷನಿಗೆ ಯಾಕೆ ಮಹತ್ತ್ವ? ಭಗವಂತನ ಸಂಬಂಧ ಪ್ರಯುಕ್ತವಾಗಿ. ಭಗವಂತನು ಯಾವಾಗಲೂ ಒಂದೋ ಶೇಷನ ಮೇಲೆ ಮಲಗಿರುವನು; ಇಲ್ಲವೇ ಕುಳಿತಿರುವನು. ಹೀಗೆ ಪರಮಾತ್ಮನ ವಿಶೇಷ ಸಂಪರ್ಕದಿಂದಾಗಿ ಶೇಷನು ರುದ್ರನಿಗಿಂತಲೂ ಉತ್ತಮನೆನಿಸಿರುವನು.

'ಭುಜಗೋತ್ತಮ' – ಎಂಬ ನಾಮದಿಂದ ಭಗವಂತನು ತನ್ನ ಸಂಪರ್ಕ–ವಿಶೇಷದಿಂದಾಗಿ ಶೇಷನಿಗೆ ಸಮಾನಯೋಗ್ಯತೆಯ ರುದ್ರನಿಗಿಂತಲೂ ಉತ್ತಮತ್ವವನ್ನು ಕೊಟ್ಟವನೆಂದು ಉಪಾಸನೆ ನಡೆಸಿದಲ್ಲಿ ನಮಗೂ ಯೋಗ್ಯತೆಯಲ್ಲಿ ಸಮಾನರಾದ ಉಳಿದವರಿಗಿಂತ ಉತ್ತಮತ್ವವನ್ನು ಭಗವಂತನು ಅನುಗ್ರಹಿಸುವನು.

**೧೯೬. ಹಿರಣ್ಯನಾಭಃ – ಲೋಕಕ್ಕೆ ಹಿತವನ್ನುಂಟುಮಾಡುವ, ರಮಣೀಯವಾದ ಹೊಕ್ಕುಳು ಉಳ್ಳವನು.**

**ವಿವರಣೆ :** ಹಿತಕರವಾದ, ರಮಣೀಯವಾದ ನಾಭಿವುಳ್ಳವನೇ 'ಹಿರಣ್ಯನಾಭ'. ಭಗವಂತನ ನಾಭಿ ಲೋಕಕ್ಕೆ ಹಿತವನ್ನುಂಟುಮಾಡುವುದು. ಭಗವಂತನ ನಾಭಿ ಬಹಳ ಚೆಂದ. 'ಗಂಭೀರಾ ವರ್ತನಾಭಿಃ.....' – ಎಂದು ವರ್ಣಿಸುತ್ತ ನಾಭಿಗೂ ಒಂದು ಲಕ್ಷಣ ಹೇಳಿದ್ದುಂಟು. ಗಂಭೀರ ಎಂದರೆ ಆಳ. ಹೊಕ್ಕಳು ಆಳವಾಗಿರಬೇಕು – ಎಂದರ್ಥ. ಹೇಗೆ ಬಾವಿ ಆಳ ಆದಷ್ಟು ನೀರು ಎಂಬ ಸಂಪತ್ತು ಅಧಿಕವಾಗಿರುವುದೋ ಹಾಗೆ ನಾಭಿ ಆಳ ಆದಷ್ಟು ಶ್ರೀಮಂತಿಕೆ ಅಧಿಕ ಎಂದು ಹೇಳಿರುವರು.

ನಮಗೆ ಹಿತವಾದ ಹಾಗೂ ರಮಣೀಯವಾದ ಬ್ರಹ್ಮಾಂಡವನ್ನು ನಾಭಿಯಲ್ಲಿ ಇಟ್ಟುಕೊಂಡವನೇ ಹಿರಣ್ಯನಾಭ.

ಭಗವಂತ 'ಹಿರಣ್ಯನಾಭ' – ಹೊಕ್ಕುಳಲ್ಲಿ ಬ್ರಹ್ಮಾಂಡವನ್ನು ಹೊರ ಹೊಮ್ಮಿಸಿದುದು – ಮೂಲರೂಪದಲ್ಲಿ. ಕೃಷ್ಣ ರೂಪದಲ್ಲಿ ಬ್ರಹ್ಮಾಂಡವನ್ನು ಕಂಡದ್ದುಷ್ಟೇ. **'ಪೂರ್ಣಮದಃ ಪೂರ್ಣಮಿದಂ....'** ಎಂದಿರುವಂತೆ ಮೂಲರೂಪವೂ ಕೃಷ್ಣ ರೂಪವೂ ಒಂದೇ ಎಂಬ ಅಭಿಪ್ರಾಯದಲ್ಲಿ ಭೀಷ್ಮರು ಎದುರಿಗಿರುವ ಕೃಷ್ಣ ರೂಪವನ್ನು 'ಹಿರಣ್ಯನಾಭಃ' – ಎಂದು ಸ್ತುತಿಸುವರು.

**೧೯೭. ಸುತಪಾಃ – ಒಳ್ಳೆಯ ಜ್ಞಾನವುಳ್ಳವನು.**

**ವಿವರಣೆ** : ಸು ಅಂದರೆ ಒಳ್ಳೆಯ. ತಪಃ ಅಂದರೆ ಜ್ಞಾನ. ನಮ್ಮಲ್ಲಿ ತಪಸ್ಸು ಅಂದರೆ ನಿಯಮಗಳು, ಆಲೋಚನೆ, ತಾಪ ಎಂದೆಲ್ಲ ಹೇಳುವೆವು. ಭಗವಂತನಲ್ಲಿ ತಾಪ, ಆಲೋಚನೆ ಇತ್ಯಾದಿ ಇಲ್ಲ. ಆದ್ದರಿಂದ ಅವನ ತಪಸ್ಸು ಅಂದರೆ ಜ್ಞಾನ. **'ಯಸ್ಯ ಜ್ಞಾನಮಯಂ ತಪಃ'** – ಶಾಸ್ತ್ರಕಾರರು ಅಂದರು ಭಗವಂತ ತಪಸ್ಸು ಮಾಡುತ್ತಿದ್ದಾನೆ ಎಂದರೆ ಅವನು ಜ್ಞಾನಿಯಾಗಿದ್ದಾನೆ ಎಂದೇ ಅರ್ಥ, **'ಸ ತಪೋಽತಪ್ಯತ'** – ಎಂದು ಉಪನಿಷತ್ತಿನಲ್ಲಿ ಬರುವುದು. ಇದಕ್ಕೆ ಜ್ಞಾನಿಯಾಗಿದ್ದಾನೆ ಎಂದೇ ಅರ್ಥ.

ಲೌಕಿಕವಾಗಿ ಹೇಳಬೇಕಾಗಿದ್ದರೂ ಬದರಿಯಲ್ಲಿ ನಾರಾಯಣ ಎಂಬ ರೂಪ ಈಗಲೂ ತಪಸ್ಸಿನ ಭಂಗಿಯಲ್ಲಿಯೇ ಕುಳಿತಿದೆ. ಯಮಧರ್ಮನ ಮಗನಾಗಿ ಅವತಾರ ಮಾಡಿದ ಭಗವಂತನ ರೂಪವೇ ನಾರಾಯಣ. ತಪಸ್ಸಿನ ಭಂಗಿಯಲ್ಲಿ ಕುಳಿತಿರುವ ಆ ನಾರಾಯಣನ ರೂಪವನ್ನೇ ಭೀಷ್ಮರು ಇಲ್ಲಿ ಚಿಂತನೆ ಮಾಡುತ್ತಿರುವರು. ಕೃಷ್ಣನಲ್ಲಿ ಮೂಲರೂಪವನ್ನು ಹೇಗೋ ಹಾಗೆ ನಾರಾಯಣನೇ ಮುಂತಾದ ಅವತಾರ ರೂಪಗಳನ್ನೂ ಭೀಷ್ಮರು ಚಿಂತಿಸುತ್ತಿರುವರು. 'ಸುತಪಾಃ' ಎಂಬುದಕ್ಕೆ ಒಳ್ಳೆಯ, ತಿಳಿಯಾದ ಜ್ಞಾನವುಳ್ಳವನೆಂಬ ಅರ್ಥ. ಜ್ಞಾನದಲ್ಲಿ ವಿಪರೀತ ಜ್ಞಾನ, ಸಂಶಯಾದಿಗಳು ಸೇರಿಕೊಳ್ಳದಿದ್ದಲ್ಲಿ ಅದು ಒಳ್ಳೆಯ ಜ್ಞಾನ ಎನಿಸುವುದು.

ಭಗವಂತನನ್ನು 'ಸುತಪಾಃ' ಒಳ್ಳೆಯ ತಿಳುವಳಿಕೆವುಳ್ಳವನು ಎಂದು ಉಪಾಸನೆ ಮಾಡಿದಲ್ಲಿ ನಮಗೂ ಒಳ್ಳೆಯ ತಿಳುವಳಿಕೆ ಬರುವುದು.

**೧೯೮. ಪದ್ಮನಾಭಃ – ಸೂರ್ಯನಂತೆ ಪ್ರಕಾಶವುಳ್ಳವನು.**

**ವಿವರಣೆ** : ಪದ್ಮನಾಭನಾಮಕ್ಕೆ ಪದ್ಮ ಹೊಕ್ಕುಳಲ್ಲಿ ಉಳ್ಳವನೆಂಬುದು ಪ್ರಸಿದ್ಧವಾದ ಅರ್ಥ. ಇದರ ಜೊತೆಗೆ ಹೀಗೊಂದು ವಿಶಿಷ್ಟಾರ್ಥವನ್ನೂ ಹೇಳಲಾಗಿದೆ – ಪದ್ಮನ + ಆಭ – ಪದ್ಮನಾಭ. ಪದ್ಮ ಅಂದರೆ ಕಮಲ. ನ ಅಂದರೆ ನಯನ. ಪದ್ಮಗಳನ್ನು

ಎಳೆದುಕೊಳ್ಳುವವನು. ಅಂದರೆ ಪದ್ಮಗಳು ತನಗೆ ಅಭಿಮುಖವಾಗಿ ಇರುವಂತೆ ಮಾಡುವನು. ತಾನು ಬಂದಾಗ ಮುಖಪ್ರಸನ್ನತೆಗೆ ಒಳಗಾಗುವಂತೆ, ಅರಳುವಂತೆ ಮಾಡುವನು. ಪದ್ಮಾನಿ ನಯತಿ – ಕಮಲಗಳನ್ನು ಅರಳಿಸುವವನು. ಆದ್ದರಿಂದ ಪದ್ಮನ ಅಂದರೆ ಸೂರ್ಯ. ಆಭಾ ಅಂದರೆ ಪ್ರಕಾಶ. ಸೂರ್ಯನಂತೆ ಪ್ರಕಾಶವುಳ್ಳವನು ಪದ್ಮನಾಭ. ಸೂರ್ಯನಷ್ಟೇ ಪ್ರಕಾಶವುಳ್ಳವನೆಂಬ ಅರ್ಥ ಅಲ್ಲ. ಸೂರ್ಯ ಬೆಳಗುವಂತೆ ಪರಮಾತ್ಮನೂ ಬೆಳಗುವನು ಎಂದಷ್ಟೇ ಅರ್ಥ. ಸೂರ್ಯನ ತೇಜಸ್ಸು ವಿಲಕ್ಷಣ, ಪ್ರಖರ. ಭಗವಂತನ ಬೆಳಕು ಕೂಡಾ ಪ್ರಖರ. ಭಗವಂತನ ಬೆಳಕನ್ನು ಕಾಣಲಿಕ್ಕೆ ಸಾಧ್ಯವಾಗುವುದಿಲ್ಲ.

**೧೯೯. ಪ್ರಜಾಪತಿಃ – * ಪ್ರಜೆಗಳಿಗೆ ಒಡೆಯ.**

***ತಾಯಿಯ ಗರ್ಭದಿಂದ ಮಗು ಹೊರಹೊಮ್ಮುವಂತೆ ಮಾಡುವವನು.**

**ವಿವರಣೆ** : ಪ್ರಜೆಗಳಿಗೆ ಒಡೆಯ ಎಂಬ ಅರ್ಥದ ಜೊತೆಗೆ ಮತ್ತೊಂದು ಹೊಸ ಅರ್ಥ – **'.....ಪ್ರಜಾಪತಿಃ ಪ್ರಜಾಪಾತಾತ್.......'** ಪತ್ನಿಯ ಗರ್ಭದಲ್ಲಿ ಪತಿ ಗರ್ಭಾಧಾನ ಎಂಬ ಪ್ರಕ್ರಿಯೆಯಲ್ಲಿ ತೊಡಗುವನು. ಗರ್ಭಾಧಾನದ ಪ್ರಕ್ರಿಯೆ ಆರಂಭವಾದಂದಿನಿಂದ ತಾಯಿಯ ಗರ್ಭದಿಂದ ಮಗು ಹೊರಹೊಮ್ಮುವ ವರೆಗೆ ಭಗವಂತನ ವಾಸುದೇವ, ಸಂಕರ್ಷಣ, ಪ್ರದ್ಯುಮ್ನ ಹಾಗೂ ಅನಿರುದ್ಧ ಈ ನಾಲ್ಕು ರೂಪಗಳು ಜವಬ್ದಾರಿತನ ಹೊರುವವು. ಗಂಡು ತನ್ನ ಪತ್ನಿ ಎಂಬ ಅಗ್ನಿಯಲ್ಲಿ ತನ್ನ ಧಾತುವನ್ನು ಆಹುತಿಕೊಟ್ಟ. ಅನಂತರ ಅದು ಮಗುವಾಗಿ ತಾಯಿಯ ಗರ್ಭದಿಂದ ಹೊರ ಬರುವವರೆಗೆ ತನ್ನ ಬೇರೆ ಬೇರೆ ರೂಪದಿಂದ ಬೇರೆ ಬೇರೆ ಕಾರ್ಯವನ್ನು ನಿರ್ವಹಿಸುವ ಭಗವಂತನು ತನ್ನ ಪ್ರದ್ಯುಮ್ನರೂಪದಿಂದ ತಾಯಿಯ ಗರ್ಭದಲ್ಲಿ ಒಂಬತ್ತು ತಿಂಗಳು ಕಾಲ ಬೆಳೆದು ಮಗು ಸುರಕ್ಷಿತವಾಗಿ, ತಾಯಿಗೆ ಏನೂ ಹಾನಿ ಆಗದಂತೆ ಹೊರಹೊಮ್ಮುವಂತೆ ಮಾಡುವನು. ಆ ಪ್ರದ್ಯುಮ್ನ ರೂಪವೇ ಪ್ರಜಾಪತಿ ಎನಿಸಿದೆ. **'ಪ್ರಜಾಪತಿಃ ಪ್ರಜಾಪಾತಾತ್........'**

ಗರ್ಭಿಣಿಯ ಬಗ್ಗೆ ಭಯಪಡುವ ಬದಲು ಗರ್ಭದಿಂದ ಸುರಕ್ಷಿತವಾಗಿ ಮಗು ಹೊರಹೊಮ್ಮುವಂತೆ ಪ್ರಜಾಪತಿ ಎನಿಸುವ ಪ್ರದ್ಯುಮ್ನ ರೂಪಿ ಭಗವಂತನ ಉಪಾಸನೆ ನಡೆಸಬೇಕು. ಅವನ ರೂಪ ಹೀಗಿದೆ – ಅವನ ಬಣ್ಣ ಹಳದಿ. ನಾಲ್ಕು ಕೈಗಳಲ್ಲಿ ಮೇಲಿನ ಬಲಗೈಯಲ್ಲಿ ಶಂಖ, ಎಡಗೈಯಲ್ಲಿ ಚಕ್ರ, ಕೆಳಗಿನ ಬಲಗೈಯಲ್ಲಿ ಬಾಣ. ಎಡಗೈಯಲ್ಲಿ ಧನುಸ್ಸು.

ಹೀಗೆ ಪ್ರದ್ಯುಮ್ನನ ರೂಪವನ್ನು ಧ್ಯಾನಿಸುತ್ತ ಅವನಲ್ಲಿ 'ಪ್ರಜಾಪತಿ' ನಾಮದ ಅರ್ಥಾನುಸಂಧಾನ ನಡೆಸಬೇಕು.

‘ಶ್ರೀ ವಾಮನಾಯ ನಮಃ ’ ‘ಶ್ರೀ ಉಪೇಂದ್ರಾಯ ನಮಃ’
‘ಶ್ರೀ ಗೋವಿಂದಾಯ ನಮಃ’



ವಾಮನಜಯಂತಿಯಂದು ವಾಮನಾಲಂಕಾರದಲ್ಲಿ ಮೆರೆಯುತ್ತಿರುವ ಉಡುಪಿ ಶ್ರೀಕೃಷ್ಣನ ಪ್ರತೀಕದಲ್ಲಿ ವಿ.ಸ.ನಾಮದ ‘ವಾಮನಃ’ ‘ಉಪೇಂದ್ರಃ’ ‘ಗೋವಿಂದಃ’ ಮುಂತಾದ ವಾಮನನ ಲೀಲೆ, ಮಹಿಮೆಗಳ ಪ್ರಸ್ತಾವುಳ್ಳ ನಾಮಗಳಿಂದ ಅರ್ಥಾನುಸಂಧಾನ ನಡೆಸಬಹುದಾಗಿದೆ

‘ಶ್ರೀ ಸಿದ್ಧಾಯ ನಮಃ’ ‘ಶ್ರೀ ಮಹೋತ್ಸಾಹಾಯ ನಮಃ’
‘ಶ್ರೀ ಅನಿರ್ವಿಣ್ಣಾಯ ನಮಃ’



ಅಜ ವಿಟ್ಠಲ



ಉಪೇಂದ್ರ ಉಟ್ಠಲ



ವಾಮನ ವಿಟ್ಠಲ

ಪೇಜಾವರ ಮಠದ ಶ್ರೀ ಅಧೋಕ್ಷಜ ತೀರ್ಥರಿಗೂ, ಪುತ್ತಿಗೆ ಮಠದ ಉಪೇಂದ್ರ ತೀರ್ಥರಿಗೂ, ಶೀರೂರು ಮಠದ ವಾಮನತೀರ್ಥರಿಗೂ ಶ್ರೀ ಮಧ್ವಗುರಗಳಿಂದ ಪೂಜಿಸಿ, ಅನುಗ್ರಹೀತವಾದ ವಿಟ್ಠಲನ ಪ್ರತೀಕಗಳಲ್ಲಿ ವಿಟ್ಠಲ ಸೊಂಟದ ಮೇಲೆ ಕೈಗಳನ್ನಿಡುವ ಮೂಲಕ ತಾನು ಭಕ್ತರ ಸೇವೆಯನ್ನು ಸ್ವೀಕರಿಸಲು ಸದಾ ಸಿದ್ಧ, ಅವರ ಉದ್ಧಾರದಲ್ಲಿ ಭಾರೀ ಉತ್ಸಾಹ ಉಳ್ಳವನೆಂಬುದನ್ನು ಸೂಚಿಸುತ್ತಿದ್ದು ಅವನ ಈ ಗುಣಗಳನ್ನು ವಿ.ಸ.ನಾಮದ ‘ಸಿದ್ಧಃ’ ‘ಮಹೋತ್ಸಾಹಃ’ ‘ಅನಿರ್ವಿಣ್ಣಃ’ - ಮುಂತಾದ ನಾಮಗಳಿಂದ ಅನುಸಂಧಾನ ಮಾಡಬಹುದು.

**ಅಮೃತ್ಯುಃ ಸರ್ವದೃಕ್ ಸಿಂಹಃ ಸಂಧಾತಾ ಸಂಧಿಮಾನ್ ಸ್ಥಿರಃ |**
**ಅಜೋ ದುರ್ಮರ್ಷಣಃ ಶಾಸ್ತಾ ವಿಶ್ರುತಾತ್ಮಾ ಸುರಾರಿಹಾ || ೨೨ ||**

**೨೦೦. ಅಮೃತ್ಯುಃ – * ದೇಹ ವಿಯೋಗರೂಪವಾದ ಮರಣ ಇಲ್ಲದನು.**
*** ಅಪಮಾನ ಇಲ್ಲದವನು.**

ವಿವರಣೆ : ಮೃತ್ಯುಎಂದರೆ ಮರಣ. ಅಂತಹ ಮರಣ ಇಲ್ಲದವನು ಅಮೃತ್ಯು. ನಮಗೆ ಸಂಹಾರ ಮಾಡುವವನೊಬ್ಬನಿರುವನು. ಆದುದರಿಂದ ನಾವು ಮರಣಕ್ಕೆ ಒಳಗಾಗುವೆವು. ಹಿರಿಯರು ನರಸಿಂಹನನ್ನು **'ಉಗ್ರಂ ವೀರಂ....'** ಎಂದೆಲ್ಲ ಸ್ತುತಿಸಿ, **'ಮೃತ್ಯುಮೃತ್ಯುಂ'**–ಎಲ್ಲರಿಗೂ ಮಾರಕನಾದ ಯಮನಿಗೂ ಮಾರಕನಾಗಿರುವವನೆಂದು ಸಾರಿರುವರು.

'ಯಮನೆಲ್ಲೋ ಕಾಣೆನೆಂದು ಹೇಳಬೇಡ
ಯಮನೇ ರಾಮನೆಂದು ಸಂದೇಹಬೇಡ'

ಎಂದಿರುವಂತೆ ಯಮನ ಪಾಲಿಗೂ ಯಮ – ಮೃತ್ಯುದೇವತೆ ಶ್ರೀರಾಮಚಂದ್ರ. ಹೀಗೆ ಭಗವಂತನು ಮೃತ್ಯುದೇವತೆಗೂ ಮೃತ್ಯು ಎನಿಸಿರುವುದರಿಂದ ಅವನಿಗೆ ಮತ್ತೊಬ್ಬ ಮೃತ್ಯು – ಮಾರಕ ಇಲ್ಲ. ಆದುದರಿಂದಲೂ ಅವನು ಅಮೃತ್ಯು.

ನಾವೂ ಯಾವುದೇ ಬಗೆಯ ರೌಡಿಸಮ್ ಮಾಡದಿದ್ದರೆ ನಮಗೂ ಕಾಣುವ ಮಾರಕರು ಇಲ್ಲದಿರಬಹುದು . ಆದರೇ ನಾವೇ ಒಂದು ದಿನ ಸಾಯುವೆವು. ಆದರೆ ಭಗವಂತ ಹಾಗಲ್ಲ. ಅವನನ್ನು ಸಂಹರಿಸುವವರೂ ಇಲ್ಲ. ಅವನೇ ದೇಹವಿಯೋಗ ರೂಪವಾದ ಮರಣಕ್ಕೆ ಒಳಗಾಗುವುದೂ ಇಲ್ಲ.

ಸಮಗ್ರ ಮಹಾಭಾರತದ ಯುದ್ಧದಲ್ಲಿ ಬದುಕಿ ಉಳಿದವನೆಂದರೆ ಕೃಷ್ಣ ನೀನೊಬ್ಬನೇ ಎಂದು ಭೀಷ್ಮರು ಸ್ತುತಿಸುವರು – 'ಅಮೃತ್ಯುಃ'

ಭೀಮಾದಿಗಳೂ ಮಹಾಭಾರತ ಯುದ್ಧದಲ್ಲಿ ಉಳಿದುಕೊಂಡಿರುವರು. ಆದರೆ ಅವರು ಕೃಷ್ಣನ ಅನುಗ್ರಹಕ್ಕೆ ಪಾತ್ರರಾಗಿ ಉಳಿದುಕೊಂಡದ್ದು. ಆದುದರಿಂದ ಯಾರ ಅನುಗ್ರಹವನ್ನೂ ಅಪೇಕ್ಷಿಸದೆ ತನ್ನ ಸಾಮರ್ಥ್ಯದಿಂದಲೇ ಮರಣಕ್ಕೊಳಗಾಗದೆ ಇರುವ ಅಮೃತ್ಯು ಶ್ರೀಕೃಷ್ಣನೊಬ್ಬನೇ.

ಮೃತ್ಯು ಶಬ್ದಕ್ಕೆ ಅರ್ಥ ಅನೇಕ. ನಮಗೆ ನಿಮಗೆ ಮೃತ್ಯು ಎಂದರೆ ದೇಹದಿಂದ ಬಿಡುಗಡೆ. ದೊಡ್ಡವರ ಪಾಲಿಗೆ ಅವಮಾನವೇ ಮೃತ್ಯು. ದೇಹದಿಂದ ಪ್ರಾಣ ಹೋಗಬೇಕಾಗಿಲ್ಲ, ಅಪಮಾನ ಆದರೆ ಸಾಕು ಅದೇ ಅವರಿಗೆ ಮರಣ.

ಇಂತಹ ಅಪಮಾನರೂಪವಾದ ಮರಣವೂ ಶ್ರೀಕೃಷ್ಣನಿಗೆ ಇಲ್ಲ. ಯಾಕೆಂದರೆ ಎಲ್ಲಿಗೆ ಹೋದರೂ ಭಗವಂತನಿಗೆ ಅಪಮಾನವೇ ಇಲ್ಲ. ಯಾಕೆಂದರೆ ಎಲ್ಲಿಗೆ ಹೋದರೂ ಭಗವಂತನೇ ಮೆರೆಯುವನು. ದುರ್ಯೋಧನನ ಸಭೆಯಲ್ಲಿ ಕೃಷ್ಣ ಮೆರೆದಂತೆ.ಹೀಗೆ ಭಗವಂತನನ್ನು ಅಮೃತ್ಯುಃ ಮರಣ ಇಲ್ಲದವನು, ಮರಣತುಲ್ಯವಾದ ಅಪಮಾನ ಇಲ್ಲದವನು ಎಂದು ಉಪಾಸನೆ ನಡೆಸಿದಲ್ಲಿ ನಾವೂ ಮರಣದಿಂದಲೂ, ಅಪಮಾನದಿಂದಲೂ ದೂರವಾಗಬಹುದು. ಇದನ್ನೇ ಕೃಷ್ಣ – **‘ನ ಮೇ ಭಕ್ತಃ ಪ್ರಣಶ್ಯತಿ’** –ಎಂದಿರುವನು. ಇಲ್ಲಿ ಭಕ್ತ ಎಂದರೆ ನನ್ನನ್ನು ಅಮೃತ್ಯು ಎಂದು ಭಜಿಸುವವನು ಎಂಬ ಅರ್ಥ.

**೨೧೧. ಸರ್ವದೃಕ್ – * ತನ್ನನ್ನು ತಾನು ನೋಡುವವನು.**

*** ಎಲ್ಲವನ್ನೂ ಕಾಣುವನು.**

ವಿವರಣೆ : ಎಲ್ಲವನ್ನೂ ನೋಡುವವನೇ ಸರ್ವದೃಕ್. ಎಲ್ಲೆಲ್ಲಿ ಏನೇನಿದೆಯೋ ಅವೆಲ್ಲ ಭಗವಂತನಲ್ಲಿ ಇದೆ ಎಂಬ ದೃಷ್ಟಿಯಿಂದ ನಾವು ‘ಸರ್ವಃ ಶರ್ವಃ ಶಿವಃ ಸ್ಥಾಣುಃ.....’ ಎಂಬುದಾಗಿ ಭಗವಂತನನ್ನು ‘ಸರ್ವ’ ಎಂದೇ ಸ್ತುತಿಸಿರುವೆವು. ಹೀಗೆ ಎಲ್ಲವನ್ನೂ ಹೊಂದಿದ್ದು ಸರ್ವ ಎಂದೇ ಪರಿಗಣಿಸಲ್ಪಟ್ಟಿರುವ ತನ್ನನ್ನು ನೋಡುವ ಭಗವಂತನೇ ಸರ್ವದೃಕ್.

ನಾವೂ ದೇವರನ್ನು ಕಾಣುವೆವು. ದೇವರ ಹೊರಗಿನ ವಜ್ರಕವಚ, ವಜ್ರಕಿರೀಟ..... ಇತ್ಯಾದಿಗಳನ್ನಷ್ಟೇ. ದೇವರ ತಲೆಯನ್ನು ಕಂಡರೆ ಅವನ ಬುಡ ನಮಗೆ ಕಾಣಿಸುವುದಿಲ್ಲ. ಅವನ ಬುಡವನ್ನು ಕಂಡರೆ ತಲೆ ಕಾಣಿಸುವುದಿಲ್ಲ. ಹೀಗೆ ನಮ್ಮ ಪಾಲಿಗೆ ದೇವರ ದರ್ಶನ ಎಂದರೆ ತಲೆಬುಡ ಇಲ್ಲದ ದರ್ಶನವಷ್ಟೇ. ಅಷ್ಟೂ ದೊಡ್ಡದಾದ ವ್ಯಕ್ತಿತ್ವ ಅವನದ್ದು.

ದೇವರನ್ನು ಚೆನ್ನಾಗಿ ನೋಡಲು ನಮಗೆ ಗೊತ್ತಿಲ್ಲ. ಯಾವ ವಸ್ತುವನ್ನು ಚೆನ್ನಾಗಿ ನೋಡಲು ಆಗುವುದಿಲ್ಲವೋ ಆ ನೋಟ ತಲೆಬುಡ ಇಲ್ಲದ ನೋಟವಷ್ಟೇ. ಲಕ್ಷ್ಮೀದೇವಿಯ ಎದುರೂ ತನ್ನನ್ನು ಪೂರ್ಣವಾಗಿ ತೆರೆದುಕೊಳ್ಳದವನು. ಆದುದರಿಂದ ಎಲ್ಲವನ್ನೂ ಒಳಗೊಂಡಿದ್ದು ‘ಸರ್ವ’ ಎನಿಸಿರುವ ಅವನನ್ನು ಚೆನ್ನಾಗಿ ನೋಡುವವನೆಂದರೆ ಅವನು ಮಾತ್ರ. ಒಂದು ಅರ್ಥದಲ್ಲಿ **‘ಸ್ವೇ ಮಹಿಮ್ನಿ ಪ್ರತಿಷ್ಠಿತಃ’** – ಎಂದಿರುವಂತೆ ಅವನ ಮಹಿಮೆಗಳು ಅವನಿಂದಷ್ಟೇ ಬೆಳಕಿಗೆ ಬರಬೇಕಾದವು.

ಮತ್ತೊಂದು ಅರ್ಥ ಪ್ರಸಿದ್ಧ – ಎಲ್ಲವನ್ನೂ ಕಾಣುವವನು. ನಾವು

ಯಾರಿಗೂ ತೋರಬಾರದೆಂದು ಎಷ್ಟುಗುಟ್ಟಾಗಿ ನಡೆಸಿದರೂ ಅವೆಲ್ಲವನ್ನೂ ಕಾಣುವ 'ಸರ್ವದೃಕ್' ಭಗವಂತ.

**೨೦೨. ಸಿಂಹಃ – ತುಂಬ ತಾಳ್ಮೆ ಉಳ್ಳವನು.**

**ವಿವರಣೆ :** ನಾವು ದೇವರ ವಿರುದ್ಧ ಎಷ್ಟು ತಪ್ಪುಗಳನ್ನು ಎಸಗಿದರೂ ಆ ಬಗ್ಗೆ ಅವನು ತಾಳ್ಮೆಯಿಂದ ಇರುವನು. ಸಿಂಹ ಮಲಗಿದ್ದಾಗ ಅದರ ಮೇಲೆ ಚಿಕ್ಕಪುಟ್ಟ ಪ್ರಾಣಿಗಳು ಹರಿದಾಡಿದರೂ ಸುಮ್ಮನೆ ಇರುವುದು. ಯಾಕೆಂದರೆ ಅವೆಲ್ಲ ಜುಜುಬಿ ಪಶುಗಳು ತನಗೆ ಏನು ಮಾಡಬಲ್ಲವು? ಎಂಬುದು ಸಿಂಹಕ್ಕೆ ಚೆನ್ನಾಗಿ ಗೊತ್ತು. ಹೀಗೆ ಭಾರೀ ತಾಳ್ಮೆ ಉಳ್ಳ ಪ್ರಾಣಿಯಾದ್ದರಿಂದ ಅದಕ್ಕೆ ಸಿಂಹ ಎಂಬ ಹೆಸರು.

ದುರ್ಯೋಧನ, ದುಶ್ಶಾಸನ, ಕಂಸ, ಜರಾಸಂಧ – ಮುಂತಾದ ಕೃಷ್ಣನ ಸಂಬಂಧಿಗಳೇ ಅವನ ವಿರುದ್ಧವಾಗಿ ಏನೇನು ಅಪಚಾರ ಎಸಗಿದರೂ ಕೃಷ್ಣ ತಾಳ್ಮೆಯಿಂದ ಸುಮ್ಮನಿದ್ದ. ಆದ್ದರಿಂದಲೇ ಅವನು 'ಸಿಂಹ'

**೨೦೩. ಸಂಧಾತಾ – * ಪಾಂಡವರಿಗೂ, ಕೌರವರಿಗೂ ಸಂಧಾನ ಮಾಡಲು ಯತ್ನಿಸಿದವನು.**

*** ಭೂಮಿಗೂ ಅಂತರಿಕ್ಷಕ್ಕೂ ಮಳೆ ನೀರಿನ ಮೂಲಕ ಜೋಡಿಸುವವನು.**

**ವಿವರಣೆ :** **'ಕೃಷ್ಣಸಂಧಾನ'** ಎಂದು ಬಹಳ ಪ್ರಸಿದ್ಧವಾದುದು. ದೂರ ಇರುವ ಇಬ್ಬರನ್ನು ಮಾನಸಿಕವಾಗಿ ಜೊತೆಗೂಡಿಸುವುದೇ ಸಂಧಾನ. ಮಾನಸಿಕವಾಗಿ ಜೊತೆಗೂಡಿಸುವುದೆಂದರೆ ಇಬ್ಬರ ಮನಸ್ಸಿನಲ್ಲೂ ಒಂದೇ ವಿಚಾರ ಬರುವಂತೆ ಮಾಡುವುದು. ಪಾಂಡವರ ಮನಸ್ಸಿನಲ್ಲಿ ತಮಗೆ ಐದು ಗ್ರಾಮಗಳನ್ನಾದರೂ ಕೌರವರು ಕೊಡಲಿ ಎಂದು ಇದ್ದ ವಿಚಾರವನ್ನು ಕೌರವರ ಮನಸ್ಸಿನಲ್ಲೂ ತುಂಬಿಸಿದ್ದರೆ ಸಂಧಾನ ಆಗುತ್ತಿತ್ತು. ಆದರೆ ಕೌರವರು ಅದನ್ನು ಒಪ್ಪದ ಪ್ರಯುಕ್ತ 'ಕೃಷ್ಣಸಂಧಾನ' ಆಗಲಿಲ್ಲ. ಆದರೂ ಪ್ರಸಿದ್ಧಿ ಕೃಷ್ಣಸಂಧಾನ ಎಂಬುದಾಗಿಯೇ. ಕೆಲಸ ಆಗದಿದ್ದರೂ ಆ ನಿಟ್ಟಿನಲ್ಲಿ ಪ್ರಯತ್ನಪಟ್ಟರೂ ಹೆಸರು ಬಂದೇ ಬರುವುದೆಂದು ಇದರಿಂದ ಸೂಚಿತ.

ಅಂತೂ ಶ್ರೀಕೃಷ್ಣ ಈ ಅರ್ಥದಲ್ಲಿ 'ಸಂಧಾತಾ' ಎನಿಸಬಲ್ಲ.

ಹಿರಿಯರು ಮತ್ತೊಂದು ಅರ್ಥ ಹೇಳಿರುವರು – ಭೂಮಿಗೂ, ಅಂತರಿಕ್ಷಕ್ಕೂ ಸಂಧಿಯನ್ನು ಮಾಡುವವನೇ 'ಸಂಧಾತಾ'. ಭೂಲೋಕಕ್ಕೂ, ಸ್ವರ್ಗಲೋಕಕ್ಕೂ ಸಂಧಿಯನ್ನು ಅಂದರೆ ಸಂಬಂಧವನ್ನು ಮಾಡುವವನೇ ಸಂಧಾತಾ. ಭಗವಂತನ ಅನಿರುದ್ಧ ಎಂಬ ರೂಪ ಹೀಗೆ ಸಂಧಾನ ಮಾಡಿ ಸಂಧಾತಾ ಎನಿಸುವುದು. ಅನಿರುದ್ಧ

ಮಾಡುವ ಸಂಧಾನ ಈ ಬಗೆಯದ್ದು. ಮೋಡ ಇರುವುದು ಆಕಾಶದಲ್ಲಿ. ನೀರಿರುವುದು ಅಲ್ಲಿ. ನಾವಿರುವುದು ಇಲ್ಲಿ. ನಮಗೂ ಮೋಡಕ್ಕೂ ನೀರನ್ನು ಕೊಡುವ ಮೂಲಕ ಮಳೆಯನ್ನು ಕೊಡುವ ಮೂಲಕ ಸಂಬಂಧವನ್ನು ಕಲ್ಪಿಸಿಕೊಡುವವ ಅನಿರುದ್ಧ. ಹಾಗಾದರೆ ಮಳೆಯ ಮೂಲಕ ನಮಗೂ ಅಂತರಿಕ್ಷಕ್ಕೂ ಸಂಬಂಧ ಉಂಟಾದಂತಾಯಿತು. ಮಳೆ ಬರುವುದು, ಮಳೆಯ ನೀರನ್ನು ಉಪಯೋಗಿಸಿ ಕೃಷಿ ಮಾಡಿದೆವು. ಬೆಳೆ ಬೆಳೆದೆವು. ಹವಿಸ್ಸು ಮಾಡಿದೆವು. ಅಗ್ನಿಯ ಮೂಲಕ ಪುನಃ ಅಂತರಿಕ್ಷದ ದೇವತೆಗಳಿಗೆ ಕೊಟ್ಟೆವು. ಅಲ್ಲಿಂದ ಇಲ್ಲಿಗೆ ಸಂಬಂಧ; ಇಲ್ಲಿಂದ ಅಲ್ಲಿಗೆ ಸಂಬಂಧ. ಇದೇ ಸಂಧಾನ. ಅನಿರುದ್ಧ ರೂಪಿ ಭಗವಂತನು ಈ ಸಂಧಾವನ್ನು ನಿರ್ವಹಿಸುವನು.

ಜಗನ್ನಾಥದಾಸರು ಈ ಬಗ್ಗೆ ಸ್ಪಷ್ಟ ಚಿತ್ರಣ ನೀಡುವರು ‘ಧ್ವನಿ ಸಿಡಿಲು ಸಂಕರ್ಷಣನು ಮಿಂಚಿನೊಳು ಶ್ರೀ ಪ್ರದ್ಯುಮ್ನ ವೃಷ್ಟಿಗಳ ಹನಿಗಳೊಳಗಿಪ್ಪ ಅನಿರುದ್ಧನು ವರ್ಷವೆಂದೆನಿಸಿ.......’

ವರ್ಷವಿಡೀ ಈ ಬಗೆಯ ಸಂಧಾನ ನಡೆಯುತ್ತಿರಬೇಕು. ವರ್ಷದ ನಾಲ್ಕು ತಿಂಗಳುಗಳಲ್ಲಾದರೂ, ಬೇಡ, ಎರಡು ತಿಂಗಳುಗಳಲ್ಲಾದರೂ ಆಗುತ್ತಿರಬೇಕು. ಆದರೆ ಹಾಗೆ ಆಗುತ್ತಿಲ್ಲ. ಇದಕ್ಕೆ ನಮ್ಮ ಚಿಂತನೆಯಲ್ಲಿರುವ ನ್ಯೂನತೆಯೇ ಕಾರಣ. ಬರೇ ಮಳೆ ಮಳೆ ಎಂದರೆ ಸಾಲದು. ಮಳೆ ಬರಿಸುವಲ್ಲಿ ಅನಿರುದ್ಧನ ಪಾತ್ರವನ್ನು ಗುರುತಿಸಿಕೊಂಡು, ಅವನ ಆ ನಿಟ್ಟಿನ ಸಂಧಾನದ ಕೌಶಲವನ್ನು ಅನುಸಂಧಾನಕ್ಕೆ ತಂದುಕೊಳ್ಳುತ್ತ ಅವನನ್ನು ಸ್ತುತಿಸಬೇಕು. ಅದಕ್ಕಾಗಿಯೇ ಜಗನ್ನಾಥದಾಸರು ಇದನ್ನು ಕನ್ನಡೀಕರಿಸಿರುವುದು. ಭೀಷ್ಮರು ಅನಿರುದ್ಧರೂಪಿ ಪರಮಾತ್ಮನನ್ನು ಕೃಷ್ಣನಲ್ಲಿ ಹೀಗೆ ಚಿಂತನೆ ಮಾಡುತ್ತಿದ್ದಾರೆ.

**೨೦೪. ಸಂಧಿಮಾನ್ – * ಸಂಧಿಯ ವರ್ಣದಿಂದ ಪ್ರತಿಪಾದ್ಯನಾಗಿರುವವನು.**

*** ಜೊತೆಗೂಡುವಿಕೆಯನ್ನು ತನ್ನ ವಶದಲ್ಲಿ ಇಟ್ಟುಕೊಂಡಿರುವವನು.**

ವಿವರಣೆ : ಶಬ್ದಗಳನ್ನು ಬಿಡಿಸಿ ಬಿಡಿಸಿ ಪಠಿಸುವುದು ಒಂದು ಕ್ರಮವಾದರೆ, ಜೊತೆಗೆಯೇ ಸೇರಿಸಿ ಪಠಿಸುವುದು ಮತ್ತೊಂದು ಕ್ರಮ. ಉಷ್ಣ ಉದಕ ಎನ್ನುವಂತೆ, ಉಷ್ಣೋದಕ ಎಂದೂ ಹೇಳಬಹುದು. ಹೀಗೆ ಜೊತೆಗೆ ಸೇರಿಸಿ ಹೇಳುವುದನ್ನು ಸಂಧಿ ಮಾಡಿ ಹೇಳುವುದೆಂದು ವ್ಯವಹರಿಸಲಾಗುವುದು. ಶಬ್ದಗಳನ್ನು ಸಂಧಿ ಮಾಡಿ ಹೇಳಿದರೆ ಸ್ವಲ್ಪ ಸಮಯದಲ್ಲಿ ಹೆಚ್ಚು ಶಬ್ದಗಳನ್ನು ಹೇಳಲಾಗುವುದರ ಜೊತೆಗೆ ಸಂಧಿಯ ಆ ಅಕ್ಷರದಿಂದ ಭಗವಂತನ ಮತ್ತೊಂದು ರೂಪವನ್ನು ಚಿಂತನೆ

ಮಾಡಿದಂತಾಗುವುದು.

'ಸಂಧಿಮಾನ್'– ಎನ್ನುವ ಹೆಸರು ಎರಡು ಶಬ್ದಗಳ ಮಧ್ಯದ ಸಂಧಿಯ ಅಕ್ಷರದಿಂದ ಹೇಳಲ್ಪಡುವವನೆಂದು ಅವನ ಗುಣವನ್ನು ಪ್ರತಿಪಾದಿಸುತ್ತಿದೆ.

ಕೃಷ್ಣರೂಪಕ್ಕೆ ನೇರವಾಗಿ ಸಂಬಂಧಿಸುವಂತೆ 'ಸಂಧಿಮಾನ್' – ಎಂಬ ಹೆಸರಿಗೆ ಸಂಧಿಯು – ಇಬ್ಬರು ತಮ್ಮೊಳಗಿನ ಭಿನ್ನಾಭಿಪ್ರಾಯವನ್ನು ಬಿಟ್ಟು ಮಾನಸಿಕವಾಗಿ ಒಟ್ಟುಗೂಡುವುದು ಯಾರ ಅಧೀನವಾಗಿದೆಯೋ ಅಂತಹವನೆಂಬ ಮತ್ತೊಂದು ಅರ್ಥವೂ ಇದೆ.

ಪಾಂಡವ ಕೌರವರಲ್ಲಿ ಸಂಧಾನ ನಡೆಸಲು ಕೃಷ್ಣ ಹೋದ. ಆದರೆ ದುರ್ಯೋಧನ ಒಪ್ಪಲಿಲ್ಲ. ಕೃಷ್ಣನಿಗೆ ಸಂಧಾನ ಆಗಬೇಕೆಂದು ಇದ್ದರೂ ಅದು ಕೈಗೂಡಲಿಲ್ಲ – ಎಂದು ಭಾವಿಸುವುದುಂಟು. ಆದರೆ ಭೀಷ್ಮರು ಹೇಳ್ತಾರೆ – ಕೌರವ ಪಾಂಡವರ ಸಂಧಾನ ದುರ್ಯೋಧನನ ಕೈಯಲ್ಲಿ ಅಲ್ಲ, ಅದು ಕೃಷ್ಣನ ಕೈಯಲ್ಲಿಯೇ ಇತ್ತು. ಅವನು ಮನಸ್ಸು ಮಾಡಲಿಲ್ಲ.ಅದರಿಂದಷ್ಟೇ ಅದು ಮುರಿಯಿತು. ಮಾನಸಿಕವಾಗಿ ಬೇರ್ಪಡಿಸಿ, ಪರಸ್ಪರವಾಗಿ ತಿಕ್ಕಾಟವನ್ನುಂಟುಮಾಡಿ 'ವಿಗ್ರಹವಾನ್' ಎನಿಸುವವನೂ ಅವನೇ. ಅಂತಹ ತಿಕ್ಕಾಟವನ್ನು ಪರಿಹರಿಸಿ, ಮಾನಸಿಕವಾಗಿ ಜೊತೆಗೂಡುವಂತೆ ಮಾಡಿ 'ಸಂಧಿಮಾನ್' ಎನಿಸುವವನೂ ಅವನೇ.

ಮನೆಯ ಅಣ್ಣತಮ್ಮಂದಿರು ಜೊತೆಗಿರುವಂತೆ ಆಗಬೇಕೆಂದು ಅವನನ್ನು 'ಸಂಧಿಮಾನ್' ಎಂದು ಉಪಾಸನೆ ನಡೆಸಬೇಕು. ವಿಘಟಕವ್ಯಕ್ತಿಗಳಲ್ಲಿ ಪರಸ್ಪರವಾಗಿ ಭಿನ್ನಾಭಿಪ್ರಾಯ ಮಾಡುವಂತಾಗಬೇಕೆಂದು ಅವನನ್ನು 'ವಿಗ್ರಹವಾನ್' ಎಂದು ಉಪಾಸನೆ ನಡೆಸಬೇಕು.

**೨೦೫. ಸ್ಥಿರಃ - ಕಿಂಚಿತ್ತೂ ಮನಶ್ಚಾಂಚಲ್ಯಕ್ಕೆ ಒಳಗಾಗದವನು.**

**ವಿವರಣೆ:** ದುರ್ಯೋಧನ ಒಪ್ಪಿಕೊಂಡಿದ್ದರೆ ಸಂಧಾನ ಆಗುತ್ತಿತ್ತೋ ಏನೋ ಎಂದು ಕೃಷ್ಣನಲ್ಲಿಯೇ ತಿಳಿಸಿದರೂ ಆ ಬಗ್ಗೆ ಕೃಷ್ಣ ಯಾವುದೇ ವಿಕಾರಕ್ಕೆ, ಏನೂ ಅಸಮಾಧಾನಕ್ಕೆ ಒಳಗಾಗದೆ ಮಾನಸಿಕವಾಗಿ ಸ್ಥಿರವಾಗಿಯೇ ಇರುವನು.

ಭಗವದ್ಗೀತೆಯಲ್ಲಿ ಕೃಷ್ಣ ತನ್ನ ಬಗ್ಗೆ ಒಂದು ಮಾತನ್ನು ಹೇಳಿಕೊಂಡಿರುವನು. **'ಭೂಧರಾಣಾಮಹಂ ಸ್ಥೈರ್ಯಂ.....'** ಚಳಿ, ಗಾಳಿ, ಮಳೆ ಎಷ್ಟಿದ್ದರೂ ಬೆಟ್ಟ ಒಂದೇ ರೀತಿಯಾಗಿ ಇರುವುದು. ಯಾಕೆ ? ಕೃಷ್ಣ ಅಂದ - ನಾನು ಅದರಲ್ಲಿ ದಾರ್ಢ್ಯ ಎಂಬ ರೂಪದಿಂದ ಇದ್ದೇನೆ. ಆದ್ದರಿಂದ ಅದು ದೃಢವಾಗಿ ಉಂಟು ಎಂದು. ಬೆಟ್ಟಗಳಿಗೆ

ಕೃಷ್ಣ ತನ್ನ ಸ್ಥೈರ್ಯವನ್ನು ನೀಡಿದ್ದಲ್ಲ. ಮತ್ತೆ, ಅವುಗಳಿಗೆ ತನ್ನ ಸ್ಥೈರ್ಯದ ಪ್ರತಿಬಿಂಬಾಂಶವನ್ನಷ್ಟೇ ನೀಡಿರುವವನು ಕೃಷ್ಣ. ದೇವರ ಸ್ಥೈರ್ಯವನ್ನು ಕಾಣಬೇಕೆಂದರೆ ಬೆಟ್ಟದಲ್ಲಿಯ ಸ್ಥೈರ್ಯವನ್ನು ಕಾಣಬೇಕು. ದೇವರು ಕಾಣಿಸದ ಪ್ರಯುಕ್ತ ಅವನ ಸ್ಥೈರ್ಯವನ್ನು ನೇರವಾಗಿ ನಾವು ಕಾಣಲಾರೆವು. ಜಗತ್ತಿನ ಬೇರೆ ಬೇರೆ ವಸ್ತುಗಳ ಗುಣಧರ್ಮಗಳ ಮೂಲಕ ಭಗವಂತನ ಗುಣಧರ್ಮಗಳನ್ನು ಪರಿಚಯಿಸಿಕೊಳ್ಳಬಹುದು. ಭಗವಂತನು ಭಕ್ತರ ಬಗ್ಗೆ ಎಷ್ಟು ತಗ್ಗಿ ನಡೆಯುವನೆಂದು ತಿಳಿಯಬೇಕಾದರೆ ಕೆಳಮುಖವಾಗಿ ಹರಿಯುವ ನೀರಿನ ನಡತೆಯನ್ನು ಕಾಣಬೇಕು. ಹಾಗೆಯೇ ಅವನ ಸ್ಥೈರ್ಯವನ್ನು ಬೆಟ್ಟದ ಸ್ಥೈರ್ಯದಿಂದ ಪರಿಚಯಿಸಿಕೊಳ್ಳಬೇಕು.

ಜೀವನದಲ್ಲಿ ಎಷ್ಟೇ ಏರುಪೇರುಗಳು ಸಂಭವಿಸಿದರೂ ಮನಶ್ಚಾಂಚಲ್ಯಕ್ಕೆ ಒಳಗಾಗದೆ ಇರಬೇಕಾದರೆ ಭಗವಂತನನ್ನು 'ಸ್ಥಿರ' – ಎಂದು ಉಪಾಸನೆ ನಡೆಸಬೇಕು.

'ಭೀಷ್ಮರು', 'ದ್ರೋಣರು', 'ಕೃಪರು' – ಇವರೆಲ್ಲ ಮೊದಲಿನಿಂದ ಕೊನೆಯವರೆಗೂ ಒಂದೇ ಪಥದಲ್ಲಿ ಸ್ಥಿರವಾಗಿ ಇರಲು ಕಾರಣ ಅವರು ಕೃಷ್ಣನನ್ನು 'ಸ್ಥಿರ' – ಎಂದು ಉಪಾಸನೆ ನಡೆಸಿದ್ದರು.

**೨೦೬. ಅಜಃ - ಹುಟ್ಟು ಇಲ್ಲದವನು.**

ವಿವರಣೆ : ನ ಜಾಯತೇ ಇತಿ ಅಜಃ - ಎಂದೂ ಹುಟ್ಟದವನು. ಕೌಸಲ್ಯೆಯ ಗರ್ಭದಲ್ಲಿ ರಾಮನಾಗಿ, ದೇವಕಿಯ ಗರ್ಭದಲ್ಲಿ ಕೃಷ್ಣನಾಗಿ ಕಾಣಿಸಿಕೊಂಡನೇ ಹೊರತು ನಮ್ಮಂತೆ ಗರ್ಭವಾಸ ದುಃಖವನ್ನು ಅನುಭವಿಸಿ ಹೊರಬಂದವನಲ್ಲ. ಗರ್ಭ ಎಂಬ ಪರದೆ ಸರಿಸಿದಾಗ ಇದ್ದಕ್ಕಿದ್ದಂತೆ ಕಾಣಿಸಿಕೊಳ್ಳುವವನು.

ದೇವರನ್ನು ಹೀಗೆ 'ಅಜ' – ಹುಟ್ಟು ಇಲ್ಲದವನೆಂದು ಉಪಾಸನೆ ನಡೆಸಿದರೆ ದೇವರು ನಮ್ಮ ಹುಟ್ಟನ್ನೂ ಅಡಗಿಸಿಬಿಡುವನು. 'ನಿನ್ನ ಹುಟ್ಟನ್ನೇ ಅಡಗಿಸಿ ಬಿಡುತ್ತೇನೆ' – ಎಂದು ನಮ್ಮಲ್ಲಿ ಕೆಲವರು ಗದರಿಸುವುದುಂಟು. ಆದರೆ ಅದು ಬರೇ ಮಾತಿನಲ್ಲಿ. ಹುಟ್ಟನ್ನೇ ಅಡಗಿಸುವ ಸಾಮರ್ಥ್ಯ ದೇವರಲ್ಲಿ ಮಾತ್ರ ಇರುವುದು ಅವನು ನಮ್ಮ ಸಂಸಾರಬಂಧನವನ್ನು ತೊಲಗಿಸಿ ಕರ್ಮಾದಿಗಳಿಗನುಗುಣವಾಗಿ ನಾವು ಪಡೆಯಬೇಕಾದ ನೂರಾರು ಜನ್ಮಗಳನ್ನು ಅಡಗಿಸಿ ಮುಕ್ತರಾಗುವಂತೆ ಮಾಡಬಲ್ಲ. ಯಾವುದೋ ಧಾನ್ಯದಲ್ಲಿ ಸೇರಿಕೊಂಡು ತಂದೆಯ ಶರೀರವನ್ನು ಸೇರಿ, ಅಲ್ಲಿಂದ ತಾಯಿಯ ಶರೀರಕ್ಕೆ ಹೋಗಿ, ಅಲ್ಲಿ ಒಂಭತ್ತು ತಿಂಗಳು ಕಾಲ ರಕ್ತಮಾಂಸಗಳ ನಡುವೆ ಕೊಳೆಯುತ್ತಿದ್ದು, ಅಲ್ಲಿಂದ ಒಂದು ದಿನ ಹೊರಹೊಮ್ಮುವ ದುಃಖಮಯವಾದ ಜನ್ಮವನ್ನು ನಾವು ಎಂದೆಂದೂ ಹೊಂದದಂತೆ ಮಾಡಬಲ್ಲವನು

ದೇವರು ಮಾತ್ರ.

ಅವನನ್ನು 'ಅಜ' – ಎಂದೂ ಹುಟ್ಟದವನು, ಹುಟ್ಟುವ ಮೂಲಕ ದುಃಖಕ್ಕೆ ಒಳಗಾಗದವನು – ಎಂದು ಅವನನ್ನು ಸ್ತುತಿಸಿದೆವೆಂದರೆ ನಮ್ಮ ಪಾಲಿಗೂ ಹುಟ್ಟು ಬಾರದಂತೆ ಅನುಗ್ರಹಿಸುವನು. ಹುಟ್ಟಿಗೆ ಒಳಗಾಗುವಾಗಲೂ ಅದರಿಂದ ಹೆಚ್ಚು ದುಃಖ ಆಗದಂತೆ ನೋಡಿಕೊಳ್ಳುವನು.

**೨೦೭. ದುರ್ಮರ್ಷಣಃ – ಯಾರನ್ನು ಎದುರಿಸಲು ಆಗಲಾರದೋ ಅಂತಹವನು.**

**ವಿವರಣೆ :** ಮರ್ಷಣ ಎಂದರೆ ಎದುರಿಸುವಿಕೆ. ಯಾರಿಂದಲೂ ಎದುರಿಸಲು ಆಗದವನೇ ದುರ್ಮರ್ಷಣ. ಕೃಷ್ಣನನ್ನು ಎದುರು ಹಾಕಿಕೊಂಡವರಿಗೆ ಉಳಿಗಾಲವೇ ಇಲ್ಲ.

ಅಭಿಮನ್ಯು ಕಾದಾಡುತ್ತ ಇದ್ದಾಗ ದ್ರೋಣಾಚಾರ್ಯರಾಗಲೀ, ಕೃಪಾಚಾರ್ಯರಾಗಲೀ, ಅಶ್ವತ್ಥಾಮಾಚಾರ್ಯರಾಗಲೀ, ಬೇಡ, ಕರ್ಣ – ಯಾವ ಕರ್ಣ ದುರ್ಯೋಧನನ ಗರಡಿಯಲ್ಲಿ ಪಳಗಿದವನೋ ಅಂತಹ ಕರ್ಣ ಎದುರಿಗೆ ಬಂದು ಅಭಿಮನ್ಯುವನ್ನು ಯಾಕೆ ಕೊಂದಿಲ್ಲ ಆಚಾರ್ಯರು ನಿರ್ಣಯಿಸುವರು – **'ದ್ರೋಣಾದಯಸ್ತಂ ಹರಿಕೋಪಭೀತಾಃ ಪ್ರತ್ಯಕ್ಷತೋ ಹಂತುಮಶಕ್ನುವಂತಃ'** ಶ್ರೀಕೃಷ್ಣನ ಕೋಪಕ್ಕೆ ಭಯಪಟ್ಟು ಆ ನಿಟ್ಟಿನಲ್ಲಿ ದ್ರೋಣಾದಿಗಳು ತೊಡಗಲಿಲ್ಲ. ಅನ್ಯಾಯ ಮಾಡುವವರು ಕೃಷ್ಣ ಎದುರಿಗೆ ಬರುವನೆಂದರೆ ಬೇರೆಯೇ ದಾರಿಯನ್ನು ಹಿಡಿದು ಸಾಗುವರು. ನಮ್ಮಲ್ಲಿ ಹೇಗೆ ಅನ್ಯಾಯವನ್ನೆಸಗುವವರಿಗೆ ದೇವಸ್ಥಾನಕ್ಕೆ ಬಂದು ದೇವರ ಎದುರು ನಿಲ್ಲಲು ಏನೋ ಕಸಿವಿಸಿ ಆಗುವುದೋ ಹಾಗೆ.

ನಿನ್ನನ್ನು ಎದುರಿಸುವ ತಾಕತ್ತು ಯಾರಿಗೂ ಇಲ್ಲ. ನಿನ್ನ ಬಲವನ್ನು ಸಹಿಸುವ ತಾಕತ್ತು ಉಳ್ಳವರು ಯಾರು ಇಲ್ಲ – ಎಂಬ ಅಭಿಪ್ರಾಯದಿಂದ ಭೀಷ್ಮರು ಕೃಷ್ಣನನ್ನು 'ದುರ್ಮರ್ಷಣಃ'– ಎಂದು ಸ್ತುತಿಸಿರುವರು.

**೨೦೮. ಶಾಸ್ತಾ – ಶಾಸನ, ಉಪದೇಶ ಮಾಡುವವನು.**

**ವಿವರಣೆ:** 'ಅದು ಮಾಡು ; ಇದು ಮಾಡಬೇಡ.' 'ಹಾಗೆ ಇರು ; ಹೀಗೆ ಇರಬೇಡ' ......' ಈ ರೀತಿಯಲ್ಲಿಯೇ ಭಗವಂತನ ಮಾತು. ದೇವರು ಮಾತನಾಡಿದನೋ ಅಲ್ಲೊಂದು ಶಾಸನ ಉಂಟು ಎಂದೇ ಅರ್ಥ. ಅರ್ಜುನನಲ್ಲಿ ಹದಿನೆಂಟು ಅಧ್ಯಾಯಗಳಲ್ಲಿ ಮಾತನಾಡಿದ ಕೃಷ್ಣನ ಮಾತು ಅದು ಮಾಡು ; ಇದು ಮಾಡಬೇಡ'– ಹೀಗೆ ಶಾಸನ ರೂಪದಲ್ಲಿಯೇ ಇರುವಂತಹದ್ದು. 'ಶ್ರುತಿಸ್ಮೃತೀ

ಹರೇರಾಜ್ಞೇ....' ಎಂದಿರುವಂತೆ ಅಷ್ಟೊಂದು ವೇದಗಳು, ಪುರಾಣಗಳು, ಇತಿಹಾಸ– ಅವುಗಳಲ್ಲಿ ಬೇರೆ ಬೇರೆ ಕಥೆಗಳು, ಇತಿಹಾಸ ಇವೆಲ್ಲವುಗಳ ಸಾರ –'ಹಾಗೆ ಇರು, ಹೀಗೆ ಇರಬೇಡ'– ಎಂಬ ಶಾಸನೆಯಷ್ಟೇ. ಯಾರು ಹೇಳಿದ್ದು ? ವೇದವ್ಯಾಸರು ಹೇಳಿದ್ದು. ತಾವು ನೇರವಾಗಿ ಹೇಳದೆ 'ವೈಶಂಪಾಯನ ಉವಾಚ' 'ಶ್ರೀಶುಕ ಉವಾಚ' 'ನಾರದ ಉವಾಚ'– ಎಂದೆಲ್ಲ ಇರುವಂತೆ ತಮ್ಮ ಶಿಷ್ಯರಾದ ವೈಶಂಪಾಯನಾದಿಗಳ ಮೂಲಕ ತಮ್ಮ ಶಾಸನೆಯನ್ನು ಪುರಾಣಾದಿಗಳಲ್ಲಿ ತಿಳಿಸಿರುವರು. ಆ ಶಾಸನೆಗಳಿಗೆಲ್ಲ ಮೂಲ ಪ್ರವರ್ತಕರು ಶ್ರೀವೇದವ್ಯಾಸರೇ. ಮನುಷ್ಯರಾದ ನಮ್ಮೊಡನೆ ನೇರವಾಗಿ ಮಾತನಾಡಲು ಬಯಸದ ಅವರು ತಮ್ಮ ಶಿಷ್ಯರ ಮೂಲಕ ತಮ್ಮ ಶಾಸನೆಯನ್ನು ತಲುಪಿಸಿರುವರಷ್ಟೇ. ಹೇಗೆ ತಂದೆಯಾದವನು ತನ್ನ ಯಜಮಾನಿಗೆ ಏನನ್ನಾದರೂ ಶಾಸನ ನೀಡಬೇಕೆಂದರೆ ತನ್ನ ಮಕ್ಕಳ ಮೂಲಕ ಹೇಳಿಕಳುಹಿಸುವನೋ ಹಾಗೆ.

**೨೧೯. ವಿಶ್ರುತಾತ್ಮಾ – ವೇದಗಳಲ್ಲಿ ಪ್ರಸಿದ್ಧವಾದ ಸ್ವರೂಪ ಉಳ್ಳವನು.**

**ವಿವರಣೆ:** ವಿಶ್ರುತ ಎಂದರೆ ಪ್ರಸಿದ್ಧವಾದ, 'ಆತ್ಮಾ' ಎಂದರೆ ಸ್ವರೂಪ. ಆದ್ದರಿಂದ ಪ್ರಸಿದ್ಧವಾದ ಸ್ವರೂಪವುಳ್ಳವನೇ 'ವಿಶ್ರುತಾತ್ಮಾ.'

ದೇವರು ತುಂಬ ಪ್ರಸಿದ್ಧ. ಎಲ್ಲಿ ? ನಮ್ಮ ನಿಮ್ಮ ಮನೆಗಳಲ್ಲಾಗಲೀ, ಮನಗಳಲ್ಲಾಗಲೀ ಅಲ್ಲ. ಮತ್ತೆ, ವೇದಗಳಲ್ಲಿ ತುಂಬ ಪ್ರಸಿದ್ಧ. ವೇದ ಎಷ್ಟು ಇದೆ ಎಂದು ಗೊತ್ತಿಲ್ಲ. ಆದರೆ ಎಲ್ಲ ವೇದಗಳೂ ಭಗವಂತನ ಸ್ವರೂಪವನ್ನೇ ಹೇಳುತ್ತಿವೆ. ಕೃಷ್ಣ ಭಗವದ್ಗೀತೆಯಲ್ಲಿ ಒಂದು ಮಾತು ಹೇಳಿದ – 'ವೇದೈಶ್ಚ ಸರ್ವೈರಹಮೇವ ವೇದ್ಯಃ.....' ಎಲ್ಲ ವೇದಗಳೂ ನನ್ನನ್ನೇ ಸಾರುತ್ತಿವೆ. ಯಾಕೆ ? ಇತರ ದೇವತೆಗಳನ್ನು, ಯಜ್ಞಾದಿಕರ್ಮಗಳನ್ನು ವೇದಗಳು ಹೇಳುತ್ತಿಲ್ಲವೇ ? ಹೇಳುತ್ತಿವೆ ; ಆದರೆ ಭಗವಂತನನ್ನು ಎಷ್ಟು ಭರದಿಂದ, ಉತ್ಸಾಹದಿಂದ ಸಾರುತ್ತಿವೆಯೋ ಅಷ್ಟು ಉತ್ಸಾಹ ಇತರ ದೇವತೆಗಳನ್ನಾಗಲೀ, ಯಜ್ಞಾದಿಗಳನ್ನಾಗಲೀ ತಿಳಿಸುವಲ್ಲಿ ಅವುಗಳಿಗೆ ಇಲ್ಲ.

ಹೀಗೆ ದೇವರು ವೇದಗಳಲ್ಲಿ ಇಷ್ಟು ಪ್ರಸಿದ್ಧನಾಗಿರುವವನಾದರೂ ನಮ್ಮಲ್ಲಿ ಅಪ್ರಸಿದ್ಧನೇ. ಇದಕ್ಕೆ ಕಾರಣ ನಮ್ಮ ಔದಾಸೀನ್ಯ. ಅವನನ್ನು ಚೆನ್ನಾಗಿ ತಿಳಿದುಕೊಳ್ಳಬೇಕು. ಎಂಬ ತವಕ ನಮ್ಮಲ್ಲಿಲ್ಲ. ವೇದಗಳಲ್ಲಿ ಪ್ರಸಿದ್ಧನಾಗಿರುವವನು ಎಂಬ ಅಭಿಪ್ರಾಯದಲ್ಲಿ ಕೃಷ್ಣನನ್ನು 'ವಿಶ್ರುತಾತ್ಮಾ'– ಎಂದು ಸ್ತುತಿಸಿರುವ ಭೀಷ್ಮರು ವೇದಗಳಲ್ಲಿ ಹೇಗೋ ಹಾಗೆ ವೈದಿಕರೆನಿಸುವ ನಮ್ಮಲ್ಲೂ ಅವನು ಪ್ರಸಿದ್ಧನಾಗಬೇಕು. ಹಾಗಾಗುವಂತೆ ನಾವು ಯತ್ನಿಸಬೇಕು ಎಂದೂ ಸೂಚಿಸಿರುವರು.

೨೧೦. ಸುರಾರಿಹಾ – * ದೇವತೆಗಳ ಶತ್ರುಗಳನ್ನು ನಾಶಮಾಡುವವನು.

* ಸಜ್ಜನರ ವಿಘ್ನ ರೂಪದ ಶತ್ರುಗಳನ್ನು ನಾಶಪಡಿಸುವವನು.

ವಿವರಣೆ : ಸುರ – ದೇವತೆಗಳು, ಅರಿ – ಅವರ ಶತ್ರುಗಳು ಹಾ ಎಂದರೆ ನಾಶ ಮಾಡುವವನು. ಆದ್ದರಿಂದ ದೇವತೆಗಳ ಶತ್ರುಗಳನ್ನು ಸಂಹಾರ ಮಾಡುವವನೇ 'ಸುರಾರಿಹಾ'. ಇಲ್ಲಿ ದೇವತೆಗಳನ್ನು 'ಸುರ' ಶಬ್ದದಿಂದ ಕರೆಯುವ ಮೂಲಕ ದೇವತೆಗಳಷ್ಟೇ ಅಲ್ಲದೆ, 'ಸುಷ್ಠು ರಮಂತೇ ಇತಿ ಸುರಾಃ'– ಎಂಬ ನಿರ್ವಚನದ ಪ್ರಕಾರ ಸಾತ್ವಿಕವಾಗಿ ಸಂತೋಷ ಪಡುವ ಸಜ್ಜನರನ್ನೂ ಇಟ್ಟುಕೊಳ್ಳಲಾಗಿದೆ. ದೇವರ ಪ್ರತೀಕವನ್ನು ಕಾಣುವುದು, ದೇವರ ಚಿಂತನೆ ನಡೆಸುವುದು, ದೇವರ ವಿಚಾರಗಳನ್ನು ಕೇಳುವುದು – ಇತ್ಯಾದಿಯಾಗಿ ಸಾತ್ವಿಕ ರೀತಿಯಿಂದ ರಮಣ ಮಾಡುವ, ಸುಖ ಪಡುವ ಸಜ್ಜನರು ಸುರರೆನಿಸುವರು. ಸಂಸಾರದ ಜಂಜಾಟಕ್ಕೆ ತಲೆ ಕೊಟ್ಟು ಕೊಟ್ಟು ದಣಿದ ಸಜ್ಜನರು ಭಗವಂತನ ಚಿಂತನೆಯನ್ನು ಕೇಳಿಯಾದರೂ ಸ್ವಲ್ಪ ನೆಮ್ಮದಿ ಪಡೋಣ ಎಂದು ಬಯಸುವುದುಂಟು. ಅದಕ್ಕಾಗಿ ಪ್ರವಚನಕ್ಕೆ ಎಂದು ಹೊರಟರೆಂದರೆ ಯಾರೋ ಅತಿಥಿಗಳು ಬಂದು ಬಿಡುವರು. ಇದೇ ಸಮಯಕ್ಕೆ ಯಾಕೆ ಬಂದರಪ್ಪ ! ಎಂದು ನಖಶಿಖಾಂತ ಸಿಟ್ಟು ಬರುವುದು. ಆದರೆ ಏನೂ ಮಾಡುವಂತಿಲ್ಲ !

ಅದಕ್ಕಾಗಿ ಅಂತಹ ಪ್ರಸಂಗ ಬರಲೇ ಬಾರದೆಂದು ದೇವರನ್ನು 'ಸುರಾರಿಹಾ'- ಎಂದು ಉಪಾಸನೆ ಮಾಡಬೇಕು.

ಸುರ ಎಂದರೆ ಸಾತ್ವಿಕ ರೀತಿಯಿಂದ ಭಗವಂತನ ಚಿಂತನಾದಿಗಳನ್ನು ನಡೆಸಿ ರಮಿಸುವ ಸಜ್ಜನರು. ಅವರ ಅರಿಗಳು – ವಿಘ್ನರೂಪದ ಶತ್ರುಗಳು. ಅವುಗಳನ್ನು ನಾಶ ಪಡಿಸುವವನು, ಪರಿಹರಿಸುವವನು – 'ಸುರಾರಿಹಾ'

**ಗುರುರ್ಗುರುತಮೋ ಧಾಮ ಸತ್ಯಃ ಸತ್ಯಪರಾಕ್ರಮಃ |**
**ನಿಮಿಷೋಽನಿಮಿಷಃ ಸ್ರಗ್ವೀ ವಾಚಸ್ಪತಿರುದಾರಧೀಃ || ೨೩ ||**

೨೧೧. ಗುರುಃ – ಅಜ್ಞಾನವನ್ನು ಕಬಳಿಸಿ, ಆಂತರಿಕದೃಷ್ಟಿಯನ್ನು ತೆರೆಸುವವನು.

ವಿವರಣೆ : ಭೀಷ್ಮರು ಪರಶುರಾಮನಲ್ಲಿ ನಾಲ್ನೂರ ಇಪ್ಪತ್ತೈದು ವರ್ಷ ಕಾಲ ವಿದ್ಯಾಭ್ಯಾಸ ಮಾಡಿದವರು. ಅಂತಹ ಪರಶುರಾಮನನ್ನು ಶ್ರೀಕೃಷ್ಣನಲ್ಲಿ ಕಾಣುತ್ತ, ಕೃಷ್ಣನನ್ನು 'ಗುರು'– ಎಂದು ಸ್ತುತಿಸಿರುವರು.

'ಗಿರತೀತೀ ಗುರುಃ'– ಎಂಬುದಾಗಿ ಕಬಳಿಸುವವನು ಎಂಬ ಅರ್ಥದಲ್ಲಿ

ಗುರುಶಬ್ದ ರೂಪುಗೊಳ್ಳುವುದು. ಗುರುಗಳಲ್ಲಿಗೆ ಬರುವಾಗ ಶಿಷ್ಯ ತುಂಬ ಹೊತ್ತುಕೊಂಡು ಬರುವನು. ಅವನ್ನೆಲ್ಲ ಗುರುವಾದವನು ಕಬಳಿಸಿ ಬಿಡಬೇಕು. ಶಿಷ್ಯ ಏನನ್ನು ಹೊತ್ತು ತರುವನು ? 'ಅದು ತಿಳಿದಿಲ್ಲ ; ಇದು ತಿಳಿದಿಲ್ಲ'– ಎಂದು ಅಜ್ಞಾನದ ಮೂಟೆಯನ್ನೇ ಹೊತ್ತು ತಂದಿರುವನು. ಗುರು ಅವುಗಳಿಗೆಲ್ಲ ಸರಿಯಾದ ಸಮಾಧಾನ ನೀಡಿ ಅವನ್ನು ಕಬಳಿಸಿ ಬಿಡಬೇಕು. ಅಂದರೆ ಪರಿಹರಿಸಿ ಬಿಡಬೇಕು. ಶಿಷ್ಯ ಕೇಳಿದ ಪ್ರಶ್ನೆಗಳಿಗೆ, ಅವನಿಗೆ ಅರ್ಥವಾಗಿ, ಆ ಬಗ್ಗೆ ಅವನ ಸಂದೇಹಗಳು ಪರಿಹಾರವಾಗುವಂತೆ ಉತ್ತರಿಸಬೇಕು. ಹೊರತು ತನಗೆ ಅವೆಲ್ಲ ಗೊತ್ತುಂಟು ಎಂದು ಸಾರುವಂತೆ ಉತ್ತರಿಸಿದರೆ ಸಾಲದು. ಹೀಗೆ ಉತ್ತರಿಸಿದರೆ ಗುರುಗಳಿಗೆ ಗೊತ್ತುಂಟು ಎಂದು ತಿಳಿಯುವುದೇ ಹೊರತು ಶಿಷ್ಯನ ಅಜ್ಞಾನ, ಸಂದೇಹ ಪರಿಹಾರವಾಗುವುದಿಲ್ಲ. ಗುರುವಾದವನು ಶಿಷ್ಯರ ಪ್ರಶ್ನೆಗಳಿಗೆ ಹೀಗೆ ಉತ್ತರಿಸಬಾರದೆಂಬುದನ್ನು 'ಗುರು'– ಎಂಬ ಅನ್ವರ್ಥಕ ಶಬ್ದವೇ ಸೂಚಿಸುತ್ತಿದೆ.

ಕೃಷ್ಣ ಭೀಷ್ಮರಿಗೆ ಪರಶುರಾಮರೂಪದಿಂದ ಗುರುವಾದದ್ದಷ್ಟೇ ಅಲ್ಲದೆ, ದ್ರೌಪದೀವಸ್ತ್ರಾಪಹರಣವೇ ಮುಂತಾದ ಅನೇಕ ಪ್ರಸಂಗಗಳಲ್ಲಿ ಭೀಷ್ಮರು ಕಾಲು ಜಾರಿದಾಗ ಅವರ ಆಂತರಿಕಕಣ್ಣನ್ನು ತೆರೆಸುವ ಮೂಲಕ ಅವರಿಗೆ ಗುರು ಎನಿಸಿರುವನು.

ಪರಶುರಾಮನೂ ಭೀಷ್ಮರಿಗೆ ಅಸ್ತ್ರಶಸ್ತ್ರಾಭ್ಯಾಸ ನಡೆಸುವಾಗಷ್ಟೇ ಗುರುವಾದದ್ದಲ್ಲ. ಅಂಬೆಯ ವಿಷಯದಲ್ಲಿ ಕಾದಾಟ ನಡೆಸಿದಾಗಲೂ ವಿಶಿಷ್ಟ ರೀತಿಯಿಂದ ಗುರು ಎನಿಸಿರುವನು. ಭೀಷ್ಮರಿಗೆ ಅದುವರೆಗೆ ದೇವರು ಬಹಳ ಎತ್ತರದಲ್ಲಷ್ಟೇ ಇರುವವರೆಂಬ ಭಾವನೆ ಇತ್ತು. ಆದರೆ ಪರಶುರಾಮ ಅಂಬೆಯ ಸಲುವಾಗಿ ಶಿಷ್ಯನ ವಿರುದ್ಧ ಕಾದಾಡಿ, ಶಿಷ್ಯನಿಗೆ ಕೀರ್ತಿಯನ್ನು ತಂದುಕೊಡುವುದಕ್ಕಾಗಿ ಸೋತಂತೆ ನಟಿಸುವಷ್ಟೂ, ಸಲುಗೆಯಿಂದ ನಡೆದುಕೊಳ್ಳುವ ಮೂಲಕ ದೇವರಿಗೆ ಭಕ್ತರಲ್ಲಿ ಅಷ್ಟು ವಾತ್ಸಲ್ಯ ಎಂಬ ಬಗ್ಗೆಆಂತರಿಕ ಕಣ್ಣನ್ನು ತೆರೆಸಿದರು. ಪ್ರಾಯಶಃ ಗುರು ಪರಶುರಾಮರ ಈ ನಡತೆಯೇ ಭೀಷ್ಮರಿಗೆ ಮುಂದೆ ಕೃಷ್ಣನಿಂದ ಮಹಾಭಾರತ ಯುದ್ಧದಲ್ಲಿ ಆಯುಧವನ್ನು ಹಿಡಿಸಿಯೇ ತೀರುವೆನೆಂಬ ಪ್ರತಿಜ್ಞೆ ಕೈಗೊಳ್ಳಲು ಸ್ಫೂರ್ತಿ ನೀಡಿದ್ದಿರಬಹುದು.

**೨೧೨. ಗುರುತಮಃ – ಗುರು ಎನಿಸಿಕೊಳ್ಳಲು ಬೇಕಾದ ತಿಳುವಳಿಕೆ ಇತ್ಯಾದಿಗಳನ್ನು ಪರಿಪೂರ್ಣವಾಗಿ ಪಡೆದಿರುವವನು.**

**ವಿವರಣೆ :** ಭೀಮನೂ ಭೀಷ್ಮರಿಗೆ ಕಣ್ಣು ತೆರೆಸಿದ ಗುರು. ಭೀಷ್ಮರು ತಪ್ಪಿ ಬೀಳ್ವಾರೆ

ಅಂದಾಗ ಭೀಮಸೇನ ಎದ್ದು ನಿಂತು ಅವರ ತಪ್ಪಿನ ಬಗ್ಗೆ ಬೆಳಕು ಚೆಲ್ಲಿದಾಗ, 'ಸತ್ಯಂ ತ್ವಯೋಕ್ತಂ ಉಪವಿಶ' – ನೀನು ಹೇಳಿರುವಂತೆ ಕ್ಷತ್ರಿಯರಲ್ಲಿ ಬಲವುಳ್ಳವನೇ ಶ್ರೇಷ್ಠ ; ಹೌದು – ಎಂದು ಭೀಷ್ಮರು ಒಪ್ಪಿಕೊಂಡದ್ದಿದೆ. ಹೀಗೆ ಅನೇಕ ಪ್ರಸಂಗಗಳಲ್ಲಿ ಭೀಷ್ಮರು ಭೀಮನಿಂದ ತುಂಬ ಪಾಠ ಕಲಿತಿದ್ದಾರೆ. ಆದ್ದರಿಂದ ಭೀಮನೂ ಗುರವಾದ. ಕೃಷ್ಣನೂ ಗುರುವಾದ. ಹಾಗಾದರೆ ಈ ಗುರುಗಳಲ್ಲಿ ವ್ಯಾತ್ಯಾಸ ಇದೆಯೋ ಇಲ್ಲವೋ ಎಂದಾಗ ಇಲ್ಲೇ ಭೀಷ್ಮರು ಅನ್ನುವರು – ನೀನು ಗುರುವೂ ಹೌದು, ಗುರುತಮನೂ ಹೌದು.

ಆಂಗ್ಲ ಭಾಷೆಯ ದಾಟಿಯಲ್ಲಿ ಹೇಳಬೇಕಾದರೆ 'Good' ಅನ್ನಿಸಿಕೊಳ್ಳುವ ವ್ಯಕ್ತಿಗಳು ತುಂಬ ಇರುವರು. 'Better' ಎನಿಸಿಕೊಳ್ಳುವವರು ಸ್ವಲ್ಪ ವಿರಳ. 'Best' ಎನಿಸಿಕೊಳ್ಳುವವರಂತೂ ತುಂಬ ವಿರಳ. ಅಂತೆಯೇ ಲೋಕದಲ್ಲಿ ಎಲ್ಲರೂ 'ಗುರು' ಎನಿಸಿಕೊಳ್ಳಬಲ್ಲರು. ಆದರೆ 'ಗುರುತಮ' ದೇವರು ಮಾತ್ರ. ಗುರು ಎನಿಸಿಕೊಳ್ಳುವವರಿಗೂ ಕೆಲವೊಮ್ಮೆ ಹೇಳಬೇಕಾದದ್ದು ಮರೆತು ಹೋಗುವುದು. ಆದರೆ ಎಂದೆಂದೂ ಯಾವುದನ್ನೂ ಮರೆಯದೆ ಕಾಲ ಕಾಲಕ್ಕೆ ಯಾರ್ಯಾರಿಗೆ ಯಾವುದ್ಯಾವುದನ್ನು ತಿಳಿಸಬೇಕೋ ಅವೆಲ್ಲವನ್ನೂ ತಿಳಿಸುವವನು ದೇವರು. ಆದ್ದರಿಂದಲೇ ಅವನು ಗುರುತಮ. ಅವನು ಎಲ್ಲರಿಗೂ ಗುರು ಆಗಿರುವನಷ್ಟೇ ಅಲ್ಲದೆ, ಅವನಿಗೆ ಯಾರೂ ಮತ್ತೊಬ್ಬ ಗುರು ಇಲ್ಲ. ಆದುದರಿಂದಲೂ ಅವನೇ ಗುರುತಮ. ಹೀಗೆ ಎಲ್ಲರಿಗೆ ಗುರು ಎನಿಸಬೇಕಾದರೆ ಏನೇನನ್ನು ತಿಳಿದುಕೊಂಡಿರಬೇಕೋ ಅವೆಲ್ಲವನ್ನೂ ಪೂರ್ಣಪ್ರಮಾಣದಲ್ಲಿ ತಿಳಿದವನೇ ಗುರುತಮ. ಅವನಿಗಿಂತ ಹೆಚ್ಚಿನ ತಿಳುವಳಿಕೆ ಬೇರೆ ಯಾರಲ್ಲೂ ಇಲ್ಲ ಎನ್ನುವಷ್ಟೂ ತಿಳುವಳಿಕೆ ಅವನಲ್ಲಿ ಇರುವುದರಿಂದಲೇ ಅವನು ಗುರುತಮ.

ಭೀಷ್ಮರು ಕೃಷ್ಣನನ್ನು 'ತಂದೆ ನೀನೇ, ತಾಯಿ ನೀನೇ, ಬಂಧು ನೀನೇ, ಬಳಗ ನೀನೇ....' ಎಂದು ಮತ್ತೊಂದು ಸಂದರ್ಭದಲ್ಲಿ ಹೇಳಿದಂತೆ ಈಗ 'ಗುರುವೂ ನೀನೇ, ಗುರುತಮನೂ ನೀನೇ.....' ಎಂದು ಸ್ತುತಿಸಿರುವರು.

೨೧೩. ಧಾಮ – ಆಶ್ರಯ ಆಗಿರುವವನು.

ವಿವರಣೆ : ಗುರು ಆಗಿ ಅಜ್ಞಾನವನ್ನು ನಾಶ ಮಾಡುವವನು. 'ಗುರುತಮ'ನಾಗಿ ಜ್ಞಾನೋಪದೇಶ ನೀಡಿ ಪವಿತ್ರಗೊಳಿಸುವನು. **'ಚೋದಯಿತ್ರೀ ಸೂನೃತಾನಾಂ ಚೇತಂತೀ ಸುಮತೀನಾಮ್'**– ಎಂದು ಋಗ್ವೇದದ ಮಂತ್ರವೊಂದು ಸಾರುತ್ತಿರುವಂತೆ ಗುರುವಿನೊಳಗಿದ್ದು ಒಳ್ಳೆಯ ಉಪದೇಶವನ್ನು ಕೊಡಿಸುವವನೂ ಅವನೇ.

ಶಿಷ್ಯನಲ್ಲಿದ್ದು ಅವನ ಅಜ್ಞಾನವನ್ನು ಪರಿಹರಿಸಿ ಒಳ್ಳೆಯ ಜ್ಞಾನವನ್ನು ನೀಡುವವನೂ ಅವನೇ. ಹೀಗೆ ದೇವರು ಗುರು ಆಗಿ, ಗುರುತಮನಾಗಿ, ಅಜ್ಞಾನವನ್ನೂ ಹೋಗಲಾಡಿಸಿ, ಜ್ಞಾನೋಪದೇಶ ನೀಡಿ ಪವಿತ್ರಗೊಳಿಸುವುದಾದರೂ ಯಾತಕ್ಕಾಗಿ? ಅವನನ್ನು ತನ್ನ ಬಳಿಗೆ ಕರೆದೊಯ್ದು, ಅವನಿಗೆ ಆಸರೆ ನೀಡುವುದಕ್ಕಾಗಿ. ಆದ್ದರಿಂದ **'ಗುರುರ್ಗುರುತಮೋ ಧಾಮ....'** ಎಂಬುದಕ್ಕೆ ಒಟ್ಟಾಗಿ ಅರ್ಥ ಹೇಳುವುದಾದರೆ 'ಗುರು' - ಅಜ್ಞಾನವನು ಹೋಗಲಾಡಿಸಿ 'ಗುರುತಮ'– ಜ್ಞಾನವನ್ನು ತುಂಬಿಸಿ 'ಧಾಮ' ಆಶ್ರಯನಾಗಿರುವವನು.

**೨೧೪. ಸತ್ಯಃ – ಒಳ್ಳೆಯ ಸುಖ ಹಾಗೂ ತಿಳುವಳಿಕೆ ಉಳ್ಳವನು.**

**ವಿವರಣೆ :** .......ಭಾಗವತದಲ್ಲಿ **'ಸತ್ಯಂ ಪರಂ ಧೀಮಹಿ'**– ಎಂದು ದೇವರನ್ನು ಸತ್ಯ ಎಂದೇ ಕರೆಯಲಾಗಿದೆ.

ಸತ್ + ತ್ + ಯ – ಇವು ಮೂರು ಸೇರಿ 'ಸತ್ಯ' ಎಂಬ ಶಬ್ದ ರೂಪುಗೊಳ್ಳುವುದು. ಸತ್ ಎಂದರೆ ಒಳ್ಳೆಯ, ತ್ ಎಂದರೆ ಆನಂದ, ಯ ಎಂದರೆ ತಿಳುವಳಿಕೆ. ಒಳ್ಳೆಯ ಆನಂದ, ಒಳ್ಳೆಯ ತಿಳುವಳಿಕೆ.

ದುಃಖಾಮಿಶ್ರಿತವಾದ ಆನಂದ ಒಳ್ಳೆಯ ಆನಂದ.
ಅನಿತ್ಯ ಅಲ್ಲದ ಆನಂದ ಒಳ್ಳೆಯ ಆನಂದ.

ಯಾವುದಕ್ಕಿಂತ ಹೆಚ್ಚಿನ ಆನಂದ ಮತ್ತೊಂದು ಇಲ್ಲವೋ ಅದು ಒಳ್ಳೆಯ ಆನಂದ. ಆನಂದದಲ್ಲಿ ಒಳ್ಳೆಯತನ ಎಂದರೆ ಇಷ್ಟು ರೀತಿಯಾಗಿ ಹೇಳಲಾಗುವುದು.

ಹೇಗಿದ್ದಿಯಾ ?
ಸುಖವಾಗಿದ್ದೇನೆ.
ಸುಖ ಹೇಗಿದೆ ?
ಒಳ್ಳೆಯ ಸುಖ.

ಖಂಡಿತಾ ಈಗ ಒಳ್ಳೆಯ ಸುಖ ಎಂದು ಹೇಳಬಾರದು. ಈ ಸುಖಕ್ಕಿಂತ ಹೆಚ್ಚಿನ ಸುಖ ಇಲ್ಲ ಎಂದಾದರೆ ಒಳ್ಳೆಯ ಸುಖ ಎನ್ನಬಹುದಿತ್ತು. ಇಂದಿನ ಸುಖವೇ ಯಾವಾಗಲೂ ಇರುವುದೆಂದರೆ ಒಳ್ಳೆಯ ಸುಖ ಎನ್ನಬಹುದಿತ್ತು. ಈ ಸುಖದಲ್ಲಿ ದುಃಖ ಸ್ವಲ್ಪವೂ ಬೆರೆತಿಲ್ಲ ಎಂದರೆ ಒಳ್ಳೆಯ ಸುಖ ಎನ್ನಬಹುದು. ಈಗ ನಾವು ಅನುಭವಿಸುವ ಸುಖ ಬಿಸಿ ತುಪ್ಪ ನುಂಗಿದಾಗ ಆಗಬಹುದಾದ ಸುಖದಂತಷ್ಟೇ. ತುಪ್ಪವನ್ನು ನುಂಗುವುದರಿಂದ ಸುಖ ಆಗುವುದು. ಆದರೆ ಅದು ಬಿಸಿ ಆಗಿದ್ದು ಬಾಯಿ

ಸುಡುತ್ತಿರುವುದರಿಂದ ಅದನ್ನು ನುಂಗಲಿಕ್ಕೂ ಆಗುವುದಿಲ್ಲ. ಉಗುಳುವುದಕ್ಕೂ ಆಗುವುದಿಲ್ಲ. ಅಂತಹ ಪರಿಸ್ಥಿತಿಯಲ್ಲಿ ಬಿಸಿತುಪ್ಪವನ್ನು ನುಂಗಿಬಿಟ್ಟರೆ ಹೇಗೆ ಸುಖ ಆಗುವುದೋ ಆ ಬಗೆಯ ಸುಖವನ್ನಷ್ಟೇ ನಾವು ನೀವು ಈಗ ಅನುಭವಿಸುತ್ತಿರುವುದು. ಆದ್ದರಿಂದ ಇದು ಒಳ್ಳೆಯ ಸುಖ ಅಲ್ಲ, 'ಸತ್' ಸುಖ ಅಲ್ಲ.

ನಮ್ಮ ಜ್ಞಾನವೂ ಹಾಗೆಯೇ. ನಾವು ಇಂದು ತಿಳಿದದ್ದನ್ನು ನಾಳೆ ಮರೆಯುವುದುಂಟು. ತಿಳಿಯುವಾಗಲೂ ಸಂಶಯ ಬರುತ್ತಿರುವುದುಂಟು. ನಮಗಿಂತಲೂ ಹೆಚ್ಚಾಗಿ ತಿಳಿದವರು ಇದ್ದಾರೆ. ಹೀಗೆ ನಮ್ಮ ತಿಳುವಳಿಕೆ ಅನಿತ್ಯವಾಗಿರುವುದರಿಂದ, ಸಂಶಯಮಿಶ್ರಿತವಾಗಿರುವುದರಿಂದ ಹಾಗೂ ಕೆಳಮಟ್ಟದ್ದಾಗಿರುವುದರಿಂದ 'ಸತ್'– ಒಳ್ಳೆಯದೆಂದು ಪರಿಗಣಿಸಲು ಯೋಗ್ಯವಾದುದಲ್ಲ.

ಆದರೆ ಭಗವಂತ ಒಳ್ಳೆಯ ಸುಖವನ್ನೂ, ಒಳ್ಳೆಯ ತಿಳುವಳಿಕೆಯನ್ನೂ ಹೊಂದಿರುವವನಾಗಿರುವುದರಿಂದ 'ಸತ್ಯ' ಎನಿಸುವನು. ಭೀಷ್ಮರು ಕ್ಷತ್ರಿಯ-ಕರ್ತವ್ಯವನ್ನು ನಿರ್ವಹಿಸಿ ಶರಪಂಜರದ ಮೇಲೆ ಮಲಗಿರುವುದರಿಂದ ಒಂದು ಹಂತದಲ್ಲಿ ಸುಖವನ್ನು ಅನುಭವಿಸುತ್ತಿದ್ದರೂ ಬಾಣಗಳು ಮೈತುಂಬ ಚುಚ್ಚಿರುವುದರಿಂದ ದುಃಖವನ್ನೂ ಅನುಭವಿಸುತ್ತಿರುವರು. ಚತುರ್ಮುಖನ ಶಾಪದ ಫಲವನ್ನು ಉಣ್ಣುತ್ತಿರುವರು. ಈ ಬಗೆಯ ದುಃಖದಿಂದ ದೂರವಾಗಿ ತನಗೆ ಒಳ್ಳೆಯ ಸುಖ ದೊರೆಯುವಂತಾಗಬೇಕೆಂದು ಭಗವಂತನ ಸತ್ಯರೂಪವನ್ನು ಉಪಾಸಿಸುತ್ತಿರುವರು.

**೨೧೫. ಸತ್ಯಪರಾಕ್ರಮಃ – ತಡೆಯಿಲ್ಲದೆ, ನಿರವಧಿಕವಾಗಿದ್ದು, ಸ್ವಾಭಾವಿಕವಾಗಿರುವುದರಿಂದ 'ಸತ್ಯ' ಎನಿಸುವ ಸಾಮರ್ಥ್ಯವುಳ್ಳವನು.**

ವಿವರಣೆ : ಪರಾಕ್ರಮ ಎಂದರೆ ಸಾಮರ್ಥ್ಯ. ಭಗವಂತನ ಪರಾಕ್ರಮ ಸತ್ಯ. ಹಿಂದೆ ದೇವರ ಸುಖ ಹಾಗೂ ತಿಳುವಳಿಕೆ ಸತ್ ಎನ್ನಲಾಗಿದೆ. ಈಗ ಸುಖ ಹಾಗೂ ತಿಳುವಳಿಕೆಯಂತೆ ಅವನ ಪರಾಕ್ರಮವೂ ಸತ್ಯ ಎಂದು ಸ್ತುತಿಸಲಾಗುವುದು.

ಪರಾಕ್ರಮ ಸತ್ಯ ಎಂದರೇನು ? ತಡೆ ಇಲ್ಲದಿರುವಿಕೆ. ದೇವರ ಪರಾಕ್ರಮಕ್ಕೆ, ಸಾಮರ್ಥ್ಯಕ್ಕೆ ತಡೆ ಎಂಬುದೇ ಇಲ್ಲ. ದೇವರು ಎದುರು ಬಂದನೆಂದರೆ ಉಳಿದವರು ತಪ್ಪಿಸಿಕೊಂಡು ಹೋಗಬೇಕೇ ಹೊರತು ದೇವರು ಎಂದೂ, ಎಲ್ಲೂ ತಪ್ಪಿಸಿಕೊಂಡು ಹೋಗುವ, ಹೋಗಬೇಕಾದ ಪ್ರಸಂಗವೇ ಇಲ್ಲ. ನೇರವಾಗಿ ತನ್ನದೇ ದಾರಿಯಲ್ಲಿ ಭಗವಂತ ಸಾಗುತ್ತಿರುತ್ತಾನೆ.

ಹೀಗೆ ಭಗವಂತನದ್ದು ತಡೆಯಿಲ್ಲದ ಸಾಮರ್ಥ್ಯ. ಜೊತೆಗೆ ಭಗವಂತನ ಸಾಮರ್ಥ್ಯಕ್ಕಿಂತ ಹೆಚ್ಚಿನ ಸಾಮರ್ಥ್ಯ ಯಾರಲ್ಲೂ ಇಲ್ಲ. ಸಾಮರ್ಥ್ಯದಲ್ಲಿ ಇವನಿಗಿಂತ ಇವನಿಗೆ ಹೆಚ್ಚು. ಇವನಿಗಿಂತ ಇವನಿಗೆ ಹೆಚ್ಚು, ಎಂದು ತಾರತಮ್ಯ ಏರುತ್ತ ಏರುತ್ತ ಹೋಗಿ ಪರಮಾತ್ಮನಲ್ಲಿ ನಿಂತು ಬಿಡುವುದು. ಅವನಿಗಿಂತ ಅಧಿಕ ಪರಾಕ್ರಮ ಯಾರಲ್ಲೂ ಇಲ್ಲ. ಆದುದರಿಂದಲೂ ಅವನು ಸತ್ಯಪರಾಕ್ರಮ.

ಹೀಗೆ ಭಗವಂತನ ಪರಾಕ್ರಮ ತಡೆಯಿಲ್ಲದ್ದು, ನಿರವಧಿಕವಾದದ್ದು ಹಾಗೂ ಎಂದೂ ಕುಂದದೆ ಇರುವಂತಹದ್ದು. ನಮ್ಮ ನಿಮ್ಮ ಸಾಮರ್ಥ್ಯ ಆಧಿವ್ಯಾಧಿಗಳ ಪ್ರಭಾವದಿಂದ ಕುಂದಬಲ್ಲದು. ಆದರೆ ದೇವರ ಪರಾಕ್ರಮ ಸಹಜಪರಾಕ್ರಮ ಎನಿಸಿದ್ದು, ಅದು ಎಂದೂ ಕುಂದುವ ಪ್ರಸಂಗವೇ ಇಲ್ಲ. ಆದ್ದರಿಂದ ಭಗವಂತನು ಸತ್ಯಪರಾಕ್ರಮನು.

**೨೧೬. ನಿಮಿಷಃ – ಯಾರಿಂದಾಗಿ ಸಮಸ್ತ ಜಗತ್ತು ರಾತ್ರಿಕಾಲದಲ್ಲಿ ಕಣ್ಣುಮುಚ್ಚಿ ಮಲಗುವುದೋ ಅಂತಹವನು.**

**ವಿವರಣೆ :** ನಿಮಿಷತಿ ನಿಮೀಲತಿ ಸರ್ವಂ ಜಗತ್ ಅನೇನೇತಿ ನಿಮಿಷಃ ಹತ್ತು ದಿನಗಳ ಕಾಲ ಕಾದಾಡಿ ತುಂಬ ದಣಿದಿದ್ದ ಬೀಷ್ಮರು ವಿಶ್ರಾಂತಿಗಾಗಿ ಶರಪಂಜರದ ಮೇಲೆ ಮಲಗಿರುವರು. ಆದರೂ ತಮ್ಮ ಪ್ರಾರಬ್ಧಕರ್ಮ ಮುಗಿಯದೆ ಇರುವುದರಿಂದ ಅವರಿಗೆ ವಿಶ್ರಾಂತಿ ದೊರಕುತ್ತಿಲ್ಲ. ಉತ್ತರಾಯಣದ ಪುಣ್ಯಕಾಲ ಬರುವವರೆಗೂ ಅವರು ಹೀಗೆಯೇ ದುಃಖವನ್ನು ಅನುಭವಿಸುತ್ತಿರಬೇಕು. ಉತ್ತರಾಯಣದ ಪುಣ್ಯಕಾಲ ಬಂತೆಂದರೆ ಪ್ರಾಣತ್ಯಾಗ ಮಾಡಿ, ಕಣ್ಣು ಮುಚ್ಚಿ ವಿಶ್ರಾಂತಿಯನ್ನು ಪಡೆಯಬಲ್ಲರು. ಆ ಬಗೆಯ ವಿಶ್ರಾಂತಿಯನ್ನು ನೀಡಲು ಭೀಷ್ಮರು ಕೃಷ್ಣನನ್ನು 'ನಿಮಿಷ'– ಕಣ್ಣು ಮುಚ್ಚಿಸಿ ವಿಶ್ರಾಂತಿಯನ್ನು ನೀಡುವವನೇ ಎಂದು ಉಪಾಸಿಸುವರು.

ಇಡೀ ಜಗತ್ತು ಭಗವಂತನಿಂದಾಗಿ ಕಣ್ಣು ಮುಚ್ಚಿ ವಿಶ್ರಾಂತಿ ಪಡೆಯುವುದು. ಆದುದರಿಂದ ಅವನು ನಿಮಿಷ. ಜಗತ್ತಿನಲ್ಲಿ ಅನೇಕರು ಹಸಿವಿನಿಂದ ಬಳಲುತ್ತಿದ್ದರೆ, ಬೇರೆ ಅನೇಕರು ನಿದ್ದೆಯಿಲ್ಲದೆ ಬಳಲುತ್ತಿರುವರು. ಅಂತಹವರು ಭಗವಂತನನ್ನು 'ನಿಮಿಷ '– ಎಂದು ಉಪಾಸನೆ ನಡೆಸಬೇಕು.

**೨೧೭. ಅನಿಮಿಷಃ – ಎದೆಂದೂ ವಿಶ್ರಾಂತಿ ಪಡೆಯದವನು.**

**ವಿವರಣೆ :** ನಮಗೆ ವಿಶ್ರಾಂತಿ ನೀಡುವಿ. ಆದರೆ ನಮ್ಮೊಳಗಿರು ನಿನಗೆ ಮಾತ್ರ ವಿಶ್ರಾಂತಿ ಇಲ್ಲ. ಆದುದರಿಂದಲೇ ನೀನು 'ಅನಿಮಿಷ.' ಅಪೇಕ್ಷೆ ಪಟ್ಟ ಉಳಿದವರಿಗೆ ನೀನು ವಿಶ್ರಾಂತಿ ನೀಡುವಿ. ನಿನಗೆ ವಿಶ್ರಾಂತಿ ಇಲ್ಲ. ನೀನು ವಿಶ್ರಾಂತಿ ಪಡೆಯಲು

ತೊಡಗಿದರೆ, ನೀನು ಕಣ್ಣು ಮುಚ್ಚಿದರೆ ನಮ್ಮ ಪಾಡೇನು ! ಆದುದರಿಂದ ನೀನು ಅನಿಮಿಷ. ನೀನು ಎಚ್ಚರಿಕೆಯಲ್ಲಿ ಇರಬೇಕು. ಕ್ಷಣ ಕ್ಷಣವೂ ವಿಶ್ರಾಂತಿಯಿಲ್ಲದೆ ದುಡಿಯುವ ವ್ಯಕ್ತಿ ಎಂದರೆ ದೇವರು ಒಬ್ಬನೇ. ಯಾಕೆಂದರೆ, ಒಂದು ಕ್ಷಣವೂ ಪುರುಸೊತ್ತು ಇಲ್ಲದೆ ನಡೆಯುತ್ತಿರುವುದು ಕಾಲ. ನಮ್ಮ ಕಾರ್ಯಕ್ರಮ ಮುಗಿಯದಿದ್ದರೂ ಕಾಲ ನಿಲ್ಲುವುದಿಲ್ಲ. ಹಾಗಾದರೆ ಕಾಲವನ್ನು ಮುಂದುವರಿಸುತ್ತ ಹೋಗಬೇಕಾದರೆ ಕಾಲನಿಯಾಮಕ ಭಗವಂತನು ಸದಾ ಚಟುವಟಿಕೆಯಲ್ಲಿ ತೊಡಗಿರಲೇಬೇಕು. 'ಅನಿಮಿಷ'ನಾಗಿ, ವಿಶ್ರಾಂತಿಯಿಲ್ಲದವನಾಗಿ ದುಡಿಯುತ್ತಿರಬೇಕು.

ಕಾಲಕ್ಕೆ ತಕ್ಕಂತೆ ನಮ್ಮ ಕಾರ್ಯಕ್ರಮವನ್ನು ಹೊಂದಿಸಿಕೊಳ್ಳಬೇಕೇ ಹೊರತು ಕಾಲವನ್ನು ಸ್ವಲ್ಪ ತಡೆ ಹಿಡಿದು ನಿಲ್ಲಿಸುವಂತಿಲ್ಲ. ಹೀಗೆ ತಡೆಯಿಲ್ಲದೆ ಸಾಗುತ್ತಿರುವ ಕಾಲದ ನಿಯಮವನ್ನು ನಡೆಸುತ್ತ ಭಗವಂತನೂ 'ಅನಿಮಿಷ' ನಾಗಿರುವನು.

ವಿಶ್ರಾಂತಿಯ ಆವಶ್ಯಕತೆವುಳ್ಳ ನಮಗೆ ವಿಶ್ರಾಂತಿಯನ್ನು ನೀಡುವ ಮೂಲಕ 'ನಿಮಿಷ' ಎನಿಸುವ ಭಗವಂತನು ತಾನು ವಿಶ್ರಾಂತಿಯಿಲ್ಲದೆ ಕಾಲವನ್ನು ನಿಯಮಿಸುತ್ತ 'ಅನಿಮಿಷ'ನೂ ಆಗಿರುವನು.

**೨೧೮. ಸ್ರಗ್ವೀ – * ಭಕ್ತರು ಮಾಡಿ ಸಮರ್ಪಿಸಿದ ಕರ್ಮಗಳೆಂಬ ಪುಷ್ಪಗಳ ಮಾಲೆಯನ್ನು ಧರಿಸಿರುವವನು.**

*** ಮೊಣಕಾಲಿನವರೆಗೆ ಚಾಚುವ, ಸರ್ವಋತುಗಳಲ್ಲೂ ಅರಳುವ ಅಹಿಂಸಾದಿಭಾವ ಪುಷ್ಪಗಳ ವನಮಾಲೆಯನ್ನೂ ಧರಿಸಿರುವವನು.**

**ವಿವರಣೆ :** ಸ್ರಕ್ ಎಂದರೆ ಮಾಲೆ. ಮಾಲಿಕೆಯನ್ನು ಧರಿಸಿದವನೇ ಸ್ರಗ್ವೀ. ಭಗವಂತನನ್ನು ಯಾವಾಗಲೂ ಮಾಲೆ ಹಾಕಿಕೊಂಡವನನ್ನಾಗಿಯೇ ಚಿಂತನೆ ನಡೆಸಬೇಕು.

ಭಗವಂತನು ಧರಿಸುವ ಮಾಲೆ ಸಾಮಾನ್ಯ ಪುಷ್ಪಗಳ ಮಾಲೆ ಅಲ್ಲ. ಮತ್ತೆ, ನಾವು ನೀವು ಮಾಡುವ ಕರ್ಮಗಳನ್ನೆಲ್ಲ ಹೆಣೆದು, ಹೆಣೆದು ಮಾಲೆ ಮಾಡಿ ಅರ್ಪಿಸೋಣ. ಬೇರೆ ಬೇರೆ ಕರ್ಮ ನಡೆದಾಗ ಅವನ್ನೆಲ್ಲ ಆ ಮಾಲೆಯಲ್ಲಿ ಸೇರಿಸೋಣ. ರಾತ್ರಿ ಹಾಸಿಗೆ ಮೇಲೆ ಕುಳಿತು ಆ ದಿನ ನಡೆದ ಕರ್ಮಗಳನ್ನೆಲ್ಲ ಮಾಲೆ ಮಾಡಿ 'ಕೃಷ್ಣಾರ್ಪಣಮಸ್ತು' – ಅಂದೆವೆಂದರೆ ಕರ್ಮಗಳ ಆ ಮಾಲೆಯನ್ನು ಭಗವಂತನು ಧರಿಸುವನು.

ಭೀಷ್ಮರು ತಾವು ವಸುವಾಗಿದ್ದ ಕಾಲದಿಂದ ಇದುವರೆಗೂ ನಡೆಸಿದ ಕರ್ಮಗಳ ಪುಷ್ಪಗಳನ್ನೆಲ್ಲ ಹೆಣೆದು ಎದುರಿನಲ್ಲಿ ಕುಳಿತಿರುವ ಶ್ರೀ ಕೃಷ್ಣನ ಕೊರಳಿಗೆ ಸಮರ್ಪಿಸುತ್ತಿರುವರು 'ಸ್ರಗ್ವೀ' – ಎಂಬುದಾಗಿ.

ಎಷ್ಟೋ ಬಾರಿ ನಾವು ಕರ್ಮಗಳನ್ನು ಮಾಡಿದಾಗಲೂ ಅವುಗಳನ್ನು ದೇವರಿಗೆ ಅರ್ಪಿಸಲು ಮರೆತು ಬಿಡುವುದುಂಟು. ಈ ಅರ್ಥದಲ್ಲಿ 'ಸ್ರಗ್ವೀ'- ಎಂದು ದೇವರನ್ನು ಉಪಾಸನೆ ಮಾಡಿದೆವೆಂದರೆ ನಾವು ಅರ್ಪಿಸದಿದ್ದರೂ ನಮ್ಮ ಕರ್ಮಗಳನ್ನು ಸ್ವೀಕಾರ ಮಾಡಿ ಅವುಗಳಿಗೆ ಫಲ ನೀಡುವನು. ಕೆಟ್ಟ ಕರ್ಮಗಳಾಗಿದ್ದರೆ ಅವುಗಳ ಕೆಟ್ಟ ಫಲ ಕಡಿಮೆ ಪ್ರಮಾಣದಲ್ಲಿ ಬರುವಂತೆ ಅನುಗ್ರಹಿಸುವನು.

ಪುಷ್ಪದ ಮಾಲೆಯನ್ನೇ ಧರಿಸಿಕೊಂಡವನೆಂಬ ಮತ್ತೊಂದು ಅರ್ಥ ಇದ್ದೇ ಇದೆ. 'ವನಮಾಲೀ ಪೀತವಾಸಾಃ.....' ಎಂದು ಕೃಷ್ಣಾಷ್ಟೋತ್ತರ ಶತನಾಮಸ್ತೋತ್ರದಲ್ಲಿ ವನಮಾಲೆಯನ್ನು ಧರಿಸಿದವನನ್ನಾಗಿ ಶ್ರೀಕೃಷ್ಣನನ್ನು ಸ್ತುತಿಸಲಾಗಿದೆ.

'ಆಜಾನುಲಂಬಿನೀಂ ಮಾಲಾಂ.....' ಎಂದಿರುವಂತೆ ಕಾಲ ಗಂಟಿನವರೆಗೆ ಚಾಚಿಕೊಂಡಿರುವವಂತಹ 'ಸರ್ವರ್ತುಕುಸುಮೋಜ್ವಲಾ,.....' ಎಂದಿರುವಂತೆ ಎಲ್ಲ ಋತುಗಳಲ್ಲಿ ಆಗತಕ್ಕ ಹೂಗಳಿಂದಲೂ ಕೂಡಿರುವ ಮಾಲೆ 'ವನಮಾಲಾ' ಎನಿಸುವುದು. ಎಲ್ಲ ಋತುಗಳಲ್ಲಿ ಆಗತಕ್ಕ ಪುಷ್ಪಗಳೆಂದರೆ 'ಅಹಿಂಸಾ ಪ್ರಥಮಂ ಪುಷ್ಪಂ ಪುಷ್ಪಮಿಂದ್ರಿಯನಿಗ್ರಹಃ । ಸರ್ವಭೂತದಯಾಪುಷ್ಪಂ ಕ್ಷಮಾಪುಷ್ಪಂ ವಿಶಿಷಯತೇ । ಜ್ಞಾನಪುಷ್ಪಂ ತಪಃ ಪುಷ್ಪಂ ಧ್ಯಾನಪುಷ್ಪಂ ತು ಸಪ್ತಮಮ್ । ಸತ್ಯಂ ಚೈವಾಷ್ಟಮಂ ಪುಷ್ಪಮೇಭಿಸ್ತುಷ್ಯತಿ ಕೇಶವಃ' ಎಂದು ಹೇಳಿರುವಂತೆ, ಅಹಿಂಸೆ, ಇಂದ್ರಿಯನಿಗ್ರಹ, ಜ್ಞಾನ, ಕ್ರಿಯೆ.... ಮುಂತಾದ ಭಾವಪುಷ್ಪಗಳು. ಇವು ಎಂದೆಂದೂ ಬಾಡದ ಪುಷ್ಪಗಳು. ಇವುಗಳಿಂದ ಅಲಂಕೃತವಾದ ವನಮಾಲೆಯನ್ನು ಭಗವಂತನಿಗೆ ಅರ್ಪಿಸಬೇಕು.

**೨೧೯. ವಾಚಸ್ಪತಿಃ – ಮಾತುಗಳಿಗೆ ಅಧಿಪತಿ.**

**ವಿವರಣೆ:** ತನ್ನ ಹಿಡಿತದಲ್ಲಿಟ್ಟುಕೊಂಡು ಮಾತನಾಡುವವನು. ಅರ್ಥಯಿಲ್ಲದ ಮಾತು ದೇವರ ಬಾಯಿಯಿಂದ ಬರುವುದೇ ಇಲ್ಲ. ಮಾತು ಬಂತೋ ಅದಕ್ಕೆ ಅರ್ಥ ಉಂಟು. ಶಾಸ್ತ್ರದಲ್ಲಿ ಎಲ್ಲಾದರೂ ಉಲ್ಲೇಖಗೊಂಡ ದೇವರ ಮಾತಿಗೆ ಬೇಕಾದರೆ ಅರ್ಥ ಸಿಗಲಿಲ್ಲ ಎಂದಾಗಬಹುದು. ಹೊರತು ಅರ್ಥ ಇಲ್ಲ ಎಂದಾಗಲು ಸಾಧ್ಯವೇ ಇಲ್ಲ.

'ಅಶ್ವತ್ಥಾಮಾ ಹತಃ' – ಎಂದು ದೇವರ ಬಾಯಿಯಿಂದ ಬಂತು. ಅದಕ್ಕೂ

ಅರ್ಥ ಇದ್ದೇ ಇದೆ. ದೇವರು ಸುಳ್ಳು ಹೇಳಿದ ಎಂದು ಧರ್ಮರಾಜ ಚಿಂತಿಸಿದ. ಅದರ ಫಲವಾಗಿಯೇ ನರಕವನ್ನು ಕಾಣಬೇಕಾಯಿತು.

ಮಾತಿಗೆ ಪತಿಯಾದ ದೇವರ ಬಾಯಿಯಿಂದ ಮಾತು ಹೊರಡಿತೋ ಅದಕ್ಕೆ ಅರ್ಥ ಉಂಟು ಎಂದೇ ನಿಶ್ಚಯ. 'ಮೊಲದ ಕೋಡು' - ಎಂದು ದೇವರ ಬಾಯಿಯಿಂದ ಬಂತೆಂದಾದರೆ ಅಲ್ಲಿ ಮೊಲಕ್ಕೆ ಕೋಡು ಬಂತು ಎಂದೇ ಅರ್ಥ. ಮೊಲಕ್ಕೆ ಕೋಡು ಬಂದಿಲ್ಲವೋ ಹಾಗಾದರೆ ಭಗವಂತನ ಬಾಯಿಯಿಂದ ಆ ಬಗ್ಗೆ ಮಾತು ಬರಲು ಸಾಧ್ಯವೇ ಇಲ್ಲ.

ಈ ರೀತಿಯಾಗಿ ಮಾತುಗಳಿಗೆ ಅಧಿಪತಿಯಾಗಿರುವವನೇ 'ವಾಚಸ್ಪತಿಃ.'

**೨೨೦. ಉದಾರಧೀಃ – ಉತ್ಕೃಷ್ಟವಾದ, ಶ್ರೇಷ್ಠವಾದ ಬುದ್ಧಿ ಉಳ್ಳವನು.**

**ವಿವರಣೆ :** ಯಾವಾಗ ಯಾರನ್ನು ಹೇಗೆ ಹಿಡಿದರೆ ಕೆಲಸ ಆಗುವುದೆಂಬುದನ್ನು ಕಲಿಯಬೇಕು ಕೃಷ್ಣನಿಂದ. ಲೌಕಿಕವಾಗಲೀ, ಆಧ್ಯಾತ್ಮಿಕವಾಗಲೀ ಆ ಬಗ್ಗೆ ಚೆನ್ನಾಗಿ ಬಲ್ಲವ ಶ್ರೀಕೃಷ್ಣನಾಗಿದ್ದ. ಪಾಂಡವರಿಗೆ ಲೌಕಿಕವಾಗಿ ಬಂದ ಆಪತ್ತುಗಳನ್ನೆಲ್ಲ ಪರಿಹರಿಸಿದವನು ಶ್ರೀಕೃಷ್ಣ. ಧರ್ಮರಾಜ ಮತ್ತು ಅರ್ಜುನ ತಮಗೆ ಪ್ರಾಣ ಹೋಗುವ ಪ್ರಸಂಗ ಬಂದಾಗಲೂ ಕೃಷ್ಣನಿಂದ ಉಳಿದುಕೊಂಡವರು.

ನಮಗೂ ಬದುಕಿನಲ್ಲಿ ಬಗೆಹರಿಯದ ಸಮಸ್ಯೆಗಳು ಎದುರಾದಾಗ ದೇವರನ್ನು 'ಉದಾರಧೀಃ' – ಎಂದು ಉಪಾಸನೆ ನಡೆಸೋಣ. ದೇವರು ಆ ಸಮಸ್ಯೆಯ ಪರಿಹಾರಕ್ಕೆ ಬೇಕಾದ ಜ್ಞಾನದ ಸ್ಫೂರ್ತಿ ಬರುವಂತೆ ಮಾಡುವನು.

**ಅಗ್ರಣೀರ್ಗ್ರಾಮಣೀಃ ಶ್ರೀಮಾನ್ ನ್ಯಾಯೋ ನೇತಾ ಸಮೀರಣಃ |**
**ಸಹಸ್ರಮೂರ್ಧಾ ವಿಶ್ವಾತ್ಮಾ ಸಹಸ್ರಾಕ್ಷಃ ಸಹಸ್ರಪಾತ್ || ೨೪ ||**

**೨೨೧. ಅಗ್ರಣೀಃ – ಮೊದಲ ಪ್ರೇರಕ.**

**ವಿವರಣೆ :** ಅಗ್ರಂ ನಯತೀತಿ – ಅಗ್ರಣೀಃ ಮೊದಲ ಪ್ರೇರಕ. ನಮಗೆ ಇದು ತಪ್ಪು, ಅದು ಒಪ್ಪು ಎಂದು ಯಾರು ತಿಳಿಸುವರು? ತಂದೆತಾಯಂದಿರು, ಶಾಲೆಯಲ್ಲಿ ಗುರುಗಳು. ಸಮಾಜದಲ್ಲಿ ಕೆಲವು ಎತ್ತರದ ವ್ಯಕ್ತಿಗಳು. ಅವರಿಗೆ ತಪ್ಪುಒಪ್ಪುಗಳ ಅರಿವು ನೀಡಿದವರು ಅವರ ತಂದೆ ತಾಯಿಗಳು, ಗುರುಗಳು, ಅವರಿಗಿಂತ ಎತ್ತರದ ವ್ಯಕ್ತಿಗಳು. ಹೀಗೆ ಯಾರೋ ಕೆಲವರ ತನಕ ಹೋಗಬಹುದು. ಮುಂದೆ ಹೇಗೆ? ಆ ವ್ಯಕ್ತಿ ಹೇಳಿದ - ಏನೋ ನನಗೆ ಸ್ಫೂರ್ತಿ ಆಯಿತು - ಅದು ತಪ್ಪು, ಇದು ಒಪ್ಪು ಎಂದು. ನಾನು ಹೇಳಿದೆ - ಎಂದು ಈ ಬಗೆಯ ಸ್ಫೂರ್ತಿ. ಪಕ್ಕನೆ ತೋರುವುದು

ಇದೆಯಲ್ಲಾ ಇದೇ ದೇವತೆಗಳಿಂದ ಬಂದ ಪ್ರೇರಣೆ. ದೇವತೆಗಳಿಂದ ಥಟ್ಟನೆ ತೋರಿಬರುವಂತಹದ್ದೇ ಸ್ಫೂರ್ತಿ. ಇದು ಗುರುಗಳು ಹೇಳಿಕೊಟ್ಟು ಬಂದಂತಹದ್ದಲ್ಲ. ಆದರೂ ಪ್ರಶ್ನೆಗೆ ಉತ್ತರ ತೋಚಿತು. ಇದು ದೇವತೆಗಳಿಂದ ಬಂದ ಸ್ಫೂರ್ತಿ ಎಂದು ನಾವು ಪರಿಗಣಿಸುವೆವು.

ದೇವತೆಗಳೆಂದರೆ ತತ್ತ್ವಾಭಿಮಾನಿ ದೇವತೆಗಳು. ಅವರಿಗೆ ಎಲ್ಲಿಂದ ಬಂತು? ಚತುರ್ಮುಖ ಪ್ರೇರಣೆ ಮಾಡಿದನು. ಚತುರ್ಮುಖನಿಗೆ ಎಲ್ಲಿಂದ ಬಂತು ? ಲಕ್ಷ್ಮಿ ಪ್ರೇರಣೆ ಮಾಡಿದಳು. ಲಕ್ಷ್ಮಿಗೆ ಎಲ್ಲಿಂದ ಬಂತು? ನಾರಾಯಣನಿಂದ ಬಂತು. ನಾರಾಯಣನಿಗೆ ಎಲ್ಲಿಂದ ಬಂತು? ಯಾರಿಂದಲೂ ಬಂದಿಲ್ಲ. ಸ್ವತಂತ್ರ. ಹಾಗಾದರೆ ಮೊದಲು ಪ್ರೇರಣೆ ಮಾಡಿದವನು ನಾರಾಯಣ. ನಂತರದಲ್ಲಿ ಲಕ್ಷ್ಮಿ, ನಂತರದಲ್ಲಿ ಚತುರ್ಮುಖ. ನಂತರದಲ್ಲಿ ತತ್ತ್ವಾಭಿಮಾನಿ ದೇವತೆಗಳು. ನಂತರದಲ್ಲಿ ನನ್ನ ಗುರುಹಿರಿಯರು.

ಹಾಗಾದರೆ ನಾನೊಂದು ಚಟುವಟಿಕೆಯಲ್ಲಿ ತೊಡಗಬೇಕೆಂದರೆ ಮೊದಲಿನ ಪ್ರೇರಣೆ ಯಾರಿಂದ ಬಂತೋ ಅವನೇ 'ಅಗ್ರಣೀ'. 'ಅಗ್ರಸ್ಥಾನ' ಇತ್ಯಾದಿಗಳಲ್ಲಿ ಪ್ರಸಿದ್ಧವಾಗಿರುವಂತೆ ಅಗ್ರ ಎಂದರೆ ಮೊದಲು. 'ನೀ' – ಎಂದರೆ ನಯತಿ, ಪ್ರೇರಯತಿ. ಮೊದಲು ಹೀಗೆ ಮಾಡಬೇಕು, ಹೀಗೆ ಮಾಡಬಾರದು – ಎಂದು ನಿಯಮ ಮಾಡುವ ವ್ಯಕ್ತಿ ಭಗವಂತ. ಅವನಿಂದ ನಮ್ಮಲ್ಲಿಯವರೆಗೆ ಬರಬೇಕೆಂದರೆ ಅನೇಕ ಮಾಧ್ಯಮಗಳು ಬೇಕು. ಆ ಮಾಧ್ಯಮಗಳಲ್ಲಿ ಯಾರೂ ತಾವು ತಾವಾಗಿಯೇ ಪ್ರೇರಣೆ ಮಾಡುವವರಲ್ಲ. ತಮ್ಮ ತಮ್ಮ ಹಿರಿಯರ ಪ್ರೇರಣೆಗನುಗುಣವಾಗಿ ಪ್ರೇರಿಸುವವರು ಅವರು. ಆದರೆ ದೇವರಿಗೆ ಪ್ರೇರಿಸುವ ಮತ್ತೊಬ್ಬ ಹಿರಿಯ ಇಲ್ಲ. ಅವನೇ ಹಿರಿಯ. ವ್ಯಕ್ತಿ ಹೀಗೆ ಮಾಡಬೇಕು ಹೀಗೆ ಮಾಡಬಾರದು – ಎಂದು ತೀರ್ಮಾನ ತೆಗೆದುಕೊಳ್ಳುವ ವ್ಯಕ್ತಿಗೆ ಅಗ್ರಣೀ ಎಂದು ಹೆಸರು. ಲಕ್ಷ್ಮಿಯಾಗಲೀ, ಚತುರ್ಮುಖನಾಗಲೀ, ರುದ್ರನಾಗಲೀ ಮೊದಲನೆಯ ತೀರ್ಮಾನ–ತೆಗೆದುಕೊಳ್ಳುವವರಲ್ಲ. ಆದ್ದರಿಂದ ಭೀಷ್ಮರು ಕೃಷ್ಣನನ್ನು ಸ್ತುತಿಸುವರು – ನಿನ್ನದ್ದೇ ಮೊದಲನೆಯ ತೀರ್ಮಾನ. ಮೊದಲನೆಯ ತೀರ್ಮಾನವೂ, ಅಂತಿಮ ತೀರ್ಮಾನವೂ ನಿನ್ನದ್ದೇ.

ಭೀಷ್ಮರು ಕೃಷ್ಣನನ್ನು ಎದುರು ಕುಳ್ಳಿರಿಸಿಕೊಂಡು ಹೇಳ್ತಿದ್ದಾರೆ – ಈ ಮಹಾಭಾರತ ಯುದ್ಧಕ್ಕೂ 'ಅಗ್ರಣೀ' ನೀನೇ. ಜನರೆಲ್ಲ ಹೇಳಬಹುದು – ಈ ಯುದ್ಧಕ್ಕೆ ಭೀಷ್ಮರೇ ಕಾರಣರು ಎಂದು. ಮೇಲ್ನೋಟಕ್ಕೆ ಇದು ಹೌದು ಎನಿಸಬಹುದು. ಆದರೆ ದ್ರೌಪದಿಗೆ ಅವಮಾನ ಆದ ಆ ಸಭೆಯಲ್ಲಿ ನಾನು ತೆಪ್ಪಗೆ

ಕೊಡುವಂತೆ ಪ್ರೇರಿಸಿದವನು ನೀನೇ. ಒಂದೊಮ್ಮೆ ನೀನು ಹಾಗೆ ಪ್ರೇರಿಸದಿದ್ದರೆ, ನಾನು ದುರ್ಯೋಧನನ ಆ ಕೆಟ್ಟ ಪ್ರವೃತ್ತಿಯನ್ನು ಪ್ರತಿಭಟಿಸುತ್ತಿದ್ದೆ. ಭೀಮ ಪ್ರತಿಜ್ಞೆ ಮಾಡುವ ಪ್ರಸಂಗ ಬರುತ್ತಿರಲಿಲ್ಲ. ಮುಂದೆ ಯುದ್ಧ ನಡೆಯುತ್ತಿರಲಿಲ್ಲ. ದುರ್ಯೋಧನ ಸಾಯುವ ಅವಕಾಶ ಆಗುತ್ತಿರಲಿಲ್ಲ. ಹಾಗಾಗಬಾರದೆಂದು ನೀನು ಆ ಪ್ರಸಂಗದಲ್ಲಿ ಸುಮ್ಮನೆ ಇರುವಂತೆ ನನಗೆ ಪ್ರೇರಣೆ ನೀಡಿದಿ. ಅದರ ಪರಿಣಾಮವಾಗಿಯೇ ದುರ್ಯೋಧನ ಸಾಯುವಂತಾಯಿತು. 'ಆದದ್ದೆಲ್ಲ ಒಳಿತೇ ಆಯಿತು' – ಈ ಬಗೆಯ ಘಟನೆಗಳ ಹಿನ್ನೆಲೆಯಲ್ಲೇ ಹೊರಟ ಮಾತಿದು. ಹಿರಿಯರ ಕೆಲವು ನಡತೆಗಳ ಬಗ್ಗೆ ಸಮಾಜ ಇದರಿಂದ ಸಂದೇಶವನ್ನು ಪಡೆದುಕೊಳ್ಳಬೇಕು.

ಕೃಷ್ಣ ! ಹೊರಗಿನ ನೋಟದಲ್ಲಿ ಈ ಯುದ್ಧಕ್ಕೆ ನಾನೇ ಕಾರಣನಂತೆ ಕಾಣಬಹುದು. ಆದರೆ ಆ ಸಂದರ್ಭದಲ್ಲಿ ತೆಪ್ಪಗೆ ಕುಳಿತುಕೊಳ್ಳುವಂತೆ ನನ್ನನ್ನು ಪ್ರೇರಿಸಿದ ನೀನೇ ಈ ಯುದ್ಧಕ್ಕೆ 'ಅಗ್ರಣೀ' – ಎಂದು ಭೀಷ್ಮರು ಸ್ತುತಿಸುವರು.

**೨೨೨. ಗ್ರಾಮಣೀಃ – ಸಮುದಾಯಕ್ಕೆ ಐಕಮತ್ಯವನ್ನು ಕೊಟ್ಟು ಪ್ರೇರಿಸುವವನು.**

**ವಿವರಣೆ :**ಗ್ರಾಮ ಎಂದರೆ ಸಮುದಾಯ. ಅದನ್ನು ಮುಂದೆ ಸಾಗಿಸುವವನೇ ಗ್ರಾಮಣೀ. ನಮ್ಮ ಸಮಾಜಕ್ಕೆ ಉಪಯುಕ್ತವಾದದ್ದೇ ಭೀಷ್ಮರ ಬಾಯಿಯಿಂದ ಹೊರಹೊಮ್ಮುತ್ತಿದೆ. ಏನೋ ಸಮಸ್ಯೆಗೆ ಪರಿಹಾರಕ್ಕಾಗಿ ಬಹುಮತ ದೊರಕಬೇಕಾಗಿದೆ. ಬಹುಮತ ದೊರಕಬೇಕೆಂದರೆ ಭಗವಂತನನ್ನು 'ಗ್ರಾಮಣೀಃ' – ಎಂದು ಉಪಾಸಿಸಬೇಕು. ಸಮುದಾಯಕ್ಕೇನೇ ಪ್ರೇರಣೆ ಮಾಡುವವನೇ 'ಗ್ರಾಮಣೀ'.

ಏನೋ ಅನ್ಯಾಯ ನಡೆಯುತ್ತಿದೆ. ಅದನ್ನು ನಾವು ಪ್ರತಿಭಟಿಸುತ್ತಿದ್ದೇವೆ. ಅದಕ್ಕೆ ಇಡೀ ಸಮಾಜದ ಬೆಂಬಲ ನಮಗೆ ಬೇಕಾಗಿದೆ. ಭಗವಂತನನ್ನು 'ಗ್ರಾಮಣೀಃ' – ಎಂದು ಉಪಾಸನೆ ನಡೆಸಿದೆವೆಂದರೆ ಇಡೀ ಗ್ರಾಮಕ್ಕೆ ಗ್ರಾಮವೇ ಅನ್ಯಾಯದ ವಿರುದ್ಧ ಪ್ರತಿಭಟನೆಗೆ ಸಿದ್ಧವಾಗುವುದು.

ರಾಜಕಾರಣಿಗಳು ಹೆಚ್ಚಾಗಿ ಹಿಂದುಗಳನ್ನೇ ಹಿಗ್ಗೋ ಮುಗ್ಗೋ ಎಳೆದಾಡುವರು. ಯಾಕೆಂದರೆ ಹಿಂದುಗಳಲ್ಲಿ ಅಂತಹ ಒಗ್ಗಟ್ಟು ಇಲ್ಲ. ಯಾರಾದರೂ ಅನ್ಯಾಯವನ್ನು ಪ್ರತಿಭಟಿಸಲು ಮುಂದಾದನೆಂದರೆ ಅವನ ಕಾಲು ಜಗ್ಗಿ ಕುಳ್ಳಿರಿಸುವರೇ ಹೊರತು ಅವನಿಗೆ ಬೆಂಬಲ ಕೊಡುವುದಿಲ್ಲ.

ಆದುದರಿಂದ ನಮ್ಮ ದೇಶದಲ್ಲಿ ಈ ಬಗೆಯ ಅನ್ಯಾಯ ನಡೆಯುತ್ತಿದೆ ಎಂದರೆ ಇಡೀ ಸಮಾಜ ಅದಕ್ಕೆ ವಿರುದ್ಧ ಎದ್ದು ನಿಲ್ಲಬೇಕೆಂದರೆ ಭಗವಂತನನ್ನು

'ಗ್ರಾಮಣೀಃ' – ಎಂದು ಉಪಾಸಿಸಬೇಕು. ಗ್ರಾಮ ಎಂದರೆ ಸಮುದಾಯ. ಗ್ರಾಮಣೀ ಎಂದರೆ ಸಮುದಾಯಕ್ಕೆ ಐಕಮತ್ಯ ಬಂದು ಅನ್ಯಾಯದ ವಿರುದ್ಧವಾಗಿ ಮುಂದುವರಿಯುವಂತೆ ಮಾಡುವವನು ಎಂದರ್ಥ.

ಒಂದು ಕಡೆ ಹನ್ನೊಂದು ಅಕ್ಷೌಹಿಣೀ ಸೇನೆ. ಮತ್ತೊಂದು ಕಡೆ ಏಳು ಅಕ್ಷೌಹಿಣೀ ಸೇನೆ. ಇಷ್ಟು ದೊಡ್ಡ ಸೇನೆಗಳಿಗೆ ಐಕಮತ್ಯ ಬರುವಂತೆ ಮಾಡಿದವನೇ ಕೃಷ್ಣ.

ಒಬ್ಬ ದುರ್ಯೋಧನ ಸಭೆಯಿಂದ ಹೊರಗೆ ಹೊರಟನೆಂದರೆ ಅವನ ಹಿಂದೆ ಅವನ ತೊಂಭತ್ತೊಂಭತ್ತು ತಮ್ಮಂದಿರು ಹೊರಗೆ ಹೋಗುವಂತೆ ಪ್ರೇರಿಸಿದವನು ನೀನು. ಯಾಕೆ ಅವರನ್ನೆಲ್ಲ ಪ್ರೇರಿಸಿದ ? ಭೀಮಸೇನ ಮುಂದೆ ಆ ನೂರು ಮಂದಿಗಳನ್ನೂ ಕೊಲ್ಲಬೇಕಾಗಿದೆ. ಏನೂ ಅಪರಾಧವಿಲ್ಲದೆ ಕೊಲ್ಲಲಾಗುವುದಿಲ್ಲ ತಾನೆ ? ದುರ್ಯೋಧನ, ದುಃಶ್ಯಾಸನ ಇವರ ಅಪರಾಧ ಎದ್ದು ಕಾಣುವುದು. ಉಳಿದ ತೊಂಭತ್ತೆಂಟು ಕೌವರವರ ಅಪರಾಧ ಏನೂ ಇಲ್ಲ ತಾನೆ ? ಎಂದಾಗಬಾರದು. ಅದಕ್ಕಾಗಿ ಕೃಷ್ಣ ತಾನು ಧೃತರಾಷ್ಟ್ರನ ಸಭೆಯಲ್ಲಿ ಧರ್ಮದ ಬಗ್ಗೆ ಉಪನ್ಯಾಸ ನೀಡುತ್ತಿದ್ದಾಗ ದುರ್ಯೋಧನನನ್ನು ಹಿಂಬಾಲಿಸಿಕೊಂಡು ಅವನ ಉಳಿದೆಲ್ಲಾ ತಮ್ಮಂದಿರೂ ಸಭೆಯಿಂದ ಹೊರ ಹೋಗುವಂತೆ ಪ್ರೇರಿಸಿದ. ಇದರಿಂದ ಶ್ರೀ ಕೃಷ್ಣನನ್ನು ಅವಮಾನಿಸಿದಂತಾಯಿತು. ಒಬ್ಬರ ಉಪನ್ಯಾಸ ನಡೆಯುತ್ತಿದ್ದಾಗ, ಮಧ್ಯದಲ್ಲಿ ಎದ್ದು ಹೊರಟುಹೋದರೆ ಅವರನ್ನು ಅವಮಾನಿಸಿದಂತೆ. ಹೀಗೆ ತನ್ನ ಸ್ವಾಮಿಯಾದ ಕೃಷ್ಣನನ್ನು ಅವಮಾನಿಸಿದಕ್ಕಾಗಿಯೇ ಭೀಮಸೇನ ನೂರು ಮಂದಿ ಕೌರವರನ್ನೂ ಯುದ್ಧದಲ್ಲಿ ಕೊಂದ. ತನಗೆ ಅವಮಾನಿಸಿದರೂ ಅವನ್ನು ಸಹಿಸಿಕೊಳ್ಳುವ ಭೀಮ ತನ್ನ ಸ್ವಾಮಿ ಕೃಷ್ಣನಿಗೆ ಅವಮಾನಿಸುವುದನ್ನು ಎಂದೂ ಸಹಿಸಲಾರ. ಗಾಂಧಾರಿ ಈ ಬಗ್ಗೆ ಆಕ್ಷೇಪಿಸಿದಾಗ ಭೀಮಸೇನ ಹೀಗೆಯೇ ಸಮಾಧಾನಿಸಿರುವನು.

ಈ ರೀತಿಯಾಗಿ ಶ್ರೀ ಕೃಷ್ಣ ಭೀಮನ ದುಷ್ಟಸಂಹಾರಕ್ಕೆ ಅನುಕೂಲವಾಗುವಂತೆ ಕೌರವರ ಗ್ರಾಮವನ್ನು ಅಂದರೆ ಸಮುದಾಯವನ್ನು ಆ ಸಭೆಯಿಂದ ಹೊರಟುಹೋಗು ವ ಬಗ್ಗೆ ಐಕಮತ್ಯವನ್ನು ಕೊಟ್ಟು ಪ್ರೇರಿಸಿರುವನು.

ಆದುದರಿಂದ ನಾವೂ ಅನ್ಯಾಯದ ವಿರುದ್ಧ ಪ್ರತಿಭಟಿಸಿದಾಗ ನಮಗೆ ಜನರ ಸಮುದಾಯದ ಬೆಂಬಲ ದೊರಕಬೇಕೆಂದರೆ ಭಗವಂತನನ್ನು ಗ್ರಾಮಣೀಃ ಎಂದು ಉಪಾಸಿಸೋಣ.

**೨೨೩. ಶ್ರೀಮಾನ್ – ಎಲ್ಲ ರೀತಿಯ ಸಂಪತ್ತುಗಳನ್ನು ಒಳಗೊಂಡವನು.**

ವಿವರಣೆ : ಶ್ರೀ ಉಳ್ಳವನೇ ಶ್ರೀಮಾನ್. ಶ್ರೀ ಎಂದರೆ ಸಂಪತ್ತು. ಯಾವ ಸಂಪತ್ತು? ಬಲ ಸಂಪತ್ತು, ಭಕ್ತ ಸಂಪತ್ತು, ಇಂದ್ರಿಯ ಸಂಪತ್ತು, ಆಭರಣ ಸುತ್ತು...... ಹೀಗೆ ಸಂಪತ್ತು ಎಂದು ಏನೇನಿದೆಯೋ ಅವೆಲ್ಲವನ್ನೂ ಹೊಂದಿರುವವನು ಶ್ರೀಮಾನ್. ಅದಕ್ಕಾಗಿಯೇ ನಿರ್ದಿಷ್ಟವಾಗಿ ಯಾವುದೇ ಒಂದು ಸಂಪತ್ತನ್ನು ಉಲ್ಲೇಖಿಸದೆ, ಶ್ರೀ ಶಬ್ದದಿಂದ ಸಾಮಾನ್ಯವಾಗಿ ಎಲ್ಲ ಬಗೆಯ ಸಂಪತ್ತುಗಳನ್ನೂ ಪರಾಮರ್ಶಿಸಿ 'ಶ್ರೀಮಾನ್' ಎಂದಷ್ಟೇ ಹೇಳಿದ್ದು. ನಮ್ಮಲ್ಲಿ ಒಬ್ಬನಲ್ಲಿ ಧನಸಂಪತ್ತಿದ್ದರೆ, ಜನಸಂಪತ್ತು ಇರಬೇಕಾಗಿಲ್ಲ. ಮತ್ತೊಬ್ಬನಲ್ಲಿ ಜನಸಂಪತ್ತು, ಜನಬೆಂಬಲ ಇದ್ದರೆ ಧನಸಂಪತ್ತು ಇರಬೇಕಾಗಿಲ್ಲ. ಆಗ ಅಂತಹವರನ್ನು ಧನಸಂಪತ್ತುಳ್ಳವನು, ಜನಬೆಂಬಲವುಳ್ಳವನು ಹೀಗೆಲ್ಲ, ವಿಶಿಷ್ಟವಾಗಿಯೇ ಉಲ್ಲೇಖಿಸಬೇಕಾಗುವುದು. ಆದರೆ ದೇವರಲ್ಲಿ ಎಲ್ಲ ಬಗೆಯ ಸಂಪತ್ತುಗಳಿರುವುದರಿಂದಲೇ ಅವನು 'ಶ್ರೀಮಾನ್' ಸಂಪತ್ತು ಉಳ್ಳವನು. ಉಳಿದ ವ್ಯಕ್ತಿಗಳನ್ನು 'ಶ್ರೀಮಾನ್ ದೇವದತ್ತ' 'ಶ್ರೀಮಾನ್ ಯಜ್ಞದತ್ತ' ಎಂದೆಲ್ಲ ಕರೆಯುವೆವೇ ಹೊರತು 'ಶ್ರೀಮಾನ್' ಎಂಬ ನಾಮದಿಂದಲೇ ಕರೆಯುವುದಿಲ್ಲ. ಯಾಕೆಂದರೆ ಯಾರಲ್ಲೂ ಎಲ್ಲ ರೀತಿಯ ಸಂಪತ್ತುಗಳು ಇಲ್ಲ. ಆದುದರಿಂದ ಎಲ್ಲ ರೀತಿಯ ಸಂಪತ್ತುಗಳುಳ್ಳ ದೇವರೊಬ್ಬನೇ ಶ್ರೀಮಾನ್.

ಈ ಅರ್ಥದಲ್ಲಿ ದೇವರನ್ನು ಶ್ರೀಮಾನ್ ಎಂದು ಉಪಾಸನೆ ನಡೆಸಿದಲ್ಲಿ ನಮಗೂ ನಮ್ಮ ನಮ್ಮ ಯೋಗ್ಯತೆಗನುಗುಣವಾಗಿ ಎಲ್ಲ ರೀತಿಯ ಸಂಪತ್ತುಗಳು ಸಿದ್ಧಿಸುವಂತಾಗಬೇಕು.

ವೈದಿಕರಿಗೆ ಶಿಷ್ಯ ಸಂಪತ್ತಿನ ಜೊತೆಗೆ ಧನಸಂಪತ್ತೂ ಬೇಕೇ ಬೇಕು. 'ದ್ವೇ ವಾವ ವೇದಿತವ್ಯೇ ಪರಾ ಚೈವಾಪರಾ ಚ'– ಎಂಬುದಾಗಿ ಅಪರ ವಿದ್ಯೆಯ ಅಧ್ಯಯನ ನಡೆಸಬೇಕೆಂದು ಹೇಳಿದ್ದು ಧನಸಂಪತ್ತಿನ ಗಳಿಕೆಯ ದೃಷ್ಟಿಯಿಂದಲೂ. ಆದ್ದರಿಂದ ಎಲ್ಲ ಬಗೆಯ ಸಂಪತ್ತುಗಳು ನಮ್ಮ ನಮ್ಮ ಯೋಗ್ಯತಾನುಸಾರವಾಗಿ ಸಿದ್ಧಿಸುವಂತಾಗಲೆಂದು ದೇವರನ್ನು 'ಶ್ರೀಮಾನ್' ಎಂದು ಉಪಾಸಿಸೋಣ.

**೨೨೪. ನ್ಯಾಯಃ – ಆಯಾ ವ್ಯಕ್ತಿಗಳ ಕರ್ಮಕ್ಕನುಗುಣವಾಗಿ ಫಲವನ್ನು ಒದಗಿಸಿಕೊಡುವ ನ್ಯಾಯ ಯಾರ ಸ್ವರೂಪವೋ ಅಂತಹವನು.**

ವಿವರಣೆ : ಲೋಕದಲ್ಲಿ 'ವೇದಮೂರ್ತಿ' 'ನ್ಯಾಯಮೂರ್ತಿ' – ಎಂದೆಲ್ಲ ವ್ಯವಹರಿಸುವುದುಂಟು. ಯಾವಾಗ ಕೇಳಿದರೂ ವೇದವನ್ನು ಪಠಿಸುತ್ತಿರುವ, ವೇದಾರ್ಥವನ್ನು ಹೇಳಲು ಸಿದ್ಧರಾಗಿರುವ ವ್ಯಕ್ತಿಯನ್ನು ವೇದಮೂರ್ತಿ ಎನ್ನುವೆವು.

ಹಾಗೆಯೇ ಯಾವಾಗ ಬೇಕಾದರೂ ನ್ಯಾಯಗಳನ್ನು ತಿಳಿಸುವ ವ್ಯಕ್ತಿಯನ್ನು 'ನ್ಯಾಯಮೂರ್ತಿ' ಎನ್ನುವೆವು. ಅದರಂತೆ ಭಗವಂತನು ನ್ಯಾಯಸ್ವರೂಪವೇ ಆಗಿರುವನು – ಎಂಬ ಅಭಿಪ್ರಾಯದಲ್ಲಿ 'ನ್ಯಾಯ' ಎಂದೇ ಸ್ತುತಿಸಿರುವರು. 'ನ್ಯಾಯಮೂರ್ತಿ' – ಎಂದು 'ಮೂರ್ತಿ' ಎನ್ನುವ ಶಬ್ದದ ಅವಶ್ಯಕತೆ ಇಲ್ಲ ಎಂದು 'ನ್ಯಾಯ'– ಎಂದೇ ಸ್ತುತಿಸಿರುವರು. ಏನು ಭಗವಂತನ ನ್ಯಾಯ ? ಯಾವ ಯಾವ ವ್ಯಕ್ತಿ ಏನೇನು ಕರ್ಮ ಮಾಡಿ ಭೂಮಿಗೆ ಬಂದಿರುವನೋ ಆಯಾ ವ್ಯಕ್ತಿಗೆ ಆಯಾ ಕರ್ಮಕ್ಕನುಗುಣವಾಗಿ ಫಲವನ್ನು ದೊರಕಿಸಿಕೊಡುವುದೇ ಭಗವಂತನ ನ್ಯಾಯಾಲಯದ ಧರ್ಮ. ಒಬ್ಬನ ಕರ್ಮದ ಫಲವನ್ನು ಮತ್ತೊಬ್ಬನಿಗೆ ನೀಡುವುದಿಲ್ಲ.

ಯಾವ ಯಾವ ಕಾಲದಲ್ಲಿ ಯಾರು ಯಾರು ಉದಯಿಸಬೇಕೋ ಅವರವರಿಗೆ ಉದಯಿಸಲು ಬೇಕಾದ ತೀರ್ಮಾನ ಕೊಡುವವನು ಭಗವಂತ. ಎಲ್ಲ ಹಗ್ಗಗಳು ಭಗವಂತನ ಕೈಯಲ್ಲಿವೆ. ಸೂರ್ಯನಿಗೆ ಒಂದು ಹಗ್ಗ ಹಾಕಿದ, ಚಂದ್ರನಿಗೆ ಮತ್ತೊಂದು ಹಗ್ಗ ಹಾಕಿದ. ನಕ್ಷತ್ರಗಳಿಗೆ ಇನ್ನೊಂದು ಹಗ್ಗ ಹಾಕಿದ. ಇನ್ನು ಧೂಮಕೇತು.... ಇವೆಲ್ಲವುಗಳಿಗೆ ಹಗ್ಗ ಹಾಕಿ ಭಗವಂತನು ಆ ಎಲ್ಲ ಹಗ್ಗಗಳನ್ನು ತನ್ನ ಕೈಯ ಬೆರಳುಗಳಿಗೆ ಸಿಕ್ಕಿಸಿಕೊಂಡ. 'ಗೊಂಬೆಯಾಟವಯ್ಯಾ ಬಹ್ಮಾಂಡದಲ್ಲಿ..,..' ಎಂದು ದಾಸರು ಇದನ್ನು ನೋಡಿಯೇ ಅಂದದ್ದು. ಬೆಳಿಗ್ಗೆ ಆರುಗಂಟೆ ಆಯ್ತು. ಸೂರ್ಯನ ಹಗ್ಗ ಯಾವ ಬೆರಳಿಗೆ ಸಿಕ್ಕಿಸಿಕೊಂಡಿದ್ದನೋ ಅದನ್ನು ಎಳೆದ, ಸೂರ್ಯ ಮೇಲಕ್ಕೆ ಬಂದ. ಹೊರತು ಆ ಹೊತ್ತಿಗೆ ಚಂದ್ರನಿಗೆ ಕಟ್ಟಿದ ಹಗ್ಗವನ್ನು ಎಳೆಯಲಿಲ್ಲ. ಹಾಗೆ ಎಳೆದಿದ್ದರೆ ಚಂದ್ರನೂ ಆ ಕಾಲದಲ್ಲಿ ಕಾಣಿಸಿಕೊಳ್ಳುತ್ತಿದ್ದ ! ಹಾಗಾಗಬಾರದು. ಇದು ದೇವರ ನ್ಯಾಯ. ಯಾವ ಹೊತ್ತಿಗೆ ಯಾರು ಉದಯಿಸಬೇಕೋ, ಯಾರು ಅಸ್ತಮಿಸಬೇಕೋ ಎಂಬುದನ್ನು ಅವನು ತೀರ್ಮಾನ ಮಾಡಿ ಅವರಿಗೆ ಉದಯವನ್ನೋ ಅಸ್ತಮಾನವನ್ನೋ ನೀಡುವನು.

ನಮ್ಮ ವೈಯಕ್ತಿಕ ಜೀವನಕ್ಕೆ ಅಳವಡಿಸಿಕೊಳ್ಳುವುದೆಂದರೆ, ಅವರವರ ಪ್ರಾರಬ್ಧಕರ್ಮದ ಫಲವನ್ನು ಅವರವರಿಗೆ ಉಣಿಸುವುದು ಹಾಗೂ ಮತ್ತೊಬ್ಬರ ಪ್ರಾರಬ್ಧಕರ್ಮದ ಫಲವನ್ನು ಇನ್ನೊಬ್ಬರಿಗೆ ಉಣಿಸದೆ ಇರುವುದೇ ಭಗವಂತನ ನ್ಯಾಯಾಲಯದ ಧರ್ಮ. ಇದು ಭಗವಂತನ ಧರ್ಮ, ಆದುದರಿಂದ ಭಗವಂತನಿಗೆ ನ್ಯಾಯ ಎಂಬ ಹೆಸರು.

ಭೀಷ್ಮರು ಹೇಳ್ತಾರೆ – ಹತ್ತು ದಿನ ಕಾಲ ದುರ್ಯೋಧನನ ಪಕ್ಷದಲ್ಲಿದ್ದುಕೊಂಡು ಅವನ ಪರವಾಗಿ ಯುದ್ಧ ಮಾಡಬೇಕೆಂಬುದು ನನ್ನ

ಹಣೆಯಲ್ಲಿ ಬರೆದಿತ್ತು. ಅದಕ್ಕೆ ಅನುಗುಣವಾಗಿ ನನ್ನನ್ನು ನಡೆಸಿದ್ದಿ ಕೃಷ್ಣ ! ಆದುದರಿಂದ ನೀನು ನ್ಯಾಯ.

ಹಣೆಯಲ್ಲಿ ಬರೆದಂತೆ ನಡೆಸುವುದೇ ನ್ಯಾಯ.

ಕೆಲವು ಸಂದರ್ಭಗಳಲ್ಲಿ ನಾವು ಅನ್ನುವುದುಂಟು –' ಯಾರು ಮಾಡಿದ ತಪ್ಪಿಗೆ ಯಾರಿಗೆ ಶಿಕ್ಷೆಯೋ !' – ಎಂದು.

ಒಂದು ತರಗತಿಯಲ್ಲಿ ನಾಲ್ಕನೇ ಬೆಂಚಿನಲ್ಲಿ ಕುಳಿತ ಹುಡುಗನೊಬ್ಬ ಪಾಠ ನಡೆಯುತ್ತಿದ್ದಾಗ ಏನೋ ಅಪಸ್ವರ ಎತ್ತಿದ. ಅಧ್ಯಾಪಕರಿಗೆ ಆ ಬೆಂಚಿನಿಂದ ಅಪಸ್ವರ ಹೊರಡಿತೆಂದು ತಿಳಿಯಿತು. ಆದರೆ ಆ ಬೆಂಚಿನ ಯಾವ ಹುಡುಗ ಅಪಸ್ವರವನ್ನು ಎತ್ತಿದನೆಂದು ಗೊತ್ತಾಗಲಿಲ್ಲ. ವಿಚಾರಿಸಿದರೂ ಉತ್ತರ ದೊರಕಲಿಲ್ಲ. ಆ ಬೆಂಚಿನ ಐದು ಹುಡುಗರೂ ಅಧ್ಯಾಪಕರಿಂದ ಹೊಡೆತ ತಿನ್ನಬೇಕಾಯಿತು. ಪಾಠ ಮುಗಿದ ಮೇಲೆ ಆ ಬೆಂಚಿನ ನಾಲ್ಕು ಹುಡುಗರೂ ಅಪಸ್ವರವನ್ನೆತ್ತಿದ ಹುಡುಗನಲ್ಲಿ ಉದ್ಗಾರ ಎತ್ತುವರು 'ಯಾರೋ ಮಾಡಿದ ತಪ್ಪಿಗೆ ಯಾರಿಗೋ ಶಿಕ್ಷೆ ! '– ಎಂದು.

ಜೀವನದಲ್ಲಿ ಹೀಗೆ ದೇವರು ಯಾರೋ ಮಾಡಿದ್ದನ್ನು ಮತ್ತೆ ಯಾರಿಂದಲೋ ಉಣ್ಣಿಸುವನು ತಾನೇ ? ನ್ಯಾಯ ತಪ್ಪಿತಲ್ಲಾ ? ಎಂದರೆ ಇಲ್ಲ.

ಹಿಂದಿನ ಜನ್ಮದಲ್ಲಿ ಆ ನಾಲ್ಕು ಹುಡುಗರು ಈ ಹುಡುಗನಿಗೆ ಹೊಡಿಸಿದ್ದರು. ಅದನ್ನು ಭಗವಂತನು ಈ ಜನ್ಮದಲ್ಲಿ ತೀರಿಸಿದನಷ್ಟೇ. ಹೀಗೆ ಭಗವಂತನು ಅಲ್ಲಿಂದಲ್ಲಿಗೆ ಪರಸ್ಪರ ಕೂಡಿಸುವನೇ ಹೊರತು. ತನ್ನ ಸ್ವಂತದ್ದನ್ನು ಎಲ್ಲೂ ಸೇರಿಸುವುದೆಂದೇ ಇಲ್ಲ.

ಇಂತಹ ಚಿಂತನೆ ನಮ್ಮ ಜೀವನದಲ್ಲಿ ಬಂತು ಎಂದರೆ ಯಾರೂ ಯಾರ ಮೇಲೂ ರೇಗಾಡುವ ಪ್ರಸಂಗವೇ ಇಲ್ಲ.

ನಾವು ಸುಮ್ಮನಿದ್ದಾಗ, ತಲೆಯ ಮೇಲೆ ಏನಾದರೂ ಸಮಸ್ಯೆ ಹೊರಿಸಲ್ಪಟ್ಟಿತೋ ಕಳೆದ ಜನ್ಮದಲ್ಲಿ ಆ ವ್ಯಕ್ತಿಯ ಬಗ್ಗೆ ಏನೋ ಮಾಡಿದ್ದೆ, ಅದರ ಫಲವಾಗಿ ಭಗವಂತ ಈಗ ಅವನ ಪರವಾಗಿ ಈ ಸಮಸ್ಯೆಯನ್ನು ಕೊಟ್ಟಿರುವನೆಂದು ಅನುಸಂಧಾನ ಬಂತೋ, ನಮಗೆ ಜೀವನದಲ್ಲಿ ಸಮಾಧಾನ ಸಿದ್ಧಿಸಿದಂತಾಗುವುದು. ಇದೇ ಕರ್ಮಸಿದ್ಧಾಂತ. ಅವರವರ ಕರ್ಮ ಅವರವರ ಪಾಲಿಗೆ. ಈ ಜನ್ಮದ ಕರ್ಮ ಇಂದೇ ಆಗಬೇಕಿಲ್ಲ.

ಹೀಗೆ 'ಕರ್ಮಸಿದ್ಧಾಂತ'ಕ್ಕೆ ಆಧಾರವಾಗಿ ನ್ಯಾಯವನ್ನೊದಗಿಸುವುದರಿಂದಲೇ ಭಗವಂತನು ನ್ಯಾಯ. ನಮಗೆ ಜೀವನದಲ್ಲಿ ನ್ಯಾಯ ಒದಗುವಂತಾಗಬೇಕೆಂದು ಭಗವಂತನನ್ನು ನ್ಯಾಯ ಎಂದು ಉಪಾಸಿಸೋಣ.

**೨೨೫. ನೇತಾ – ಎಲ್ಲರನ್ನೂ ಕಟ್ಟಿಕೊಂಡು ಹೋಗುವವನು.**

**ವಿವರಣೆ:** ನೇತಾ ಶಬ್ದಕ್ಕೆ ಕರೆದುಕೊಂಡು ಹೋಗುವವನು ಎಂದೇ ಅರ್ಥ. ನಾಯಕ, ನಯನ ಮುಂತಾದ ಶಬ್ದಗಳೆಲ್ಲ ಆ ಹೆಸರಿನ ಕ್ರಿಯಾಪದದಿಂದಲೇ ರೂಪುಗೊಂಡವು. ಚೇತನರಲ್ಲಿ ಅತ್ಯಂತ ಕೆಳಗಿರುವ ಕಲಿಯಿಂದ ಪ್ರಾರಂಭಿಸಿ, ಚೇತನರಲ್ಲಿ ಅತ್ಯಂತ ಎತ್ತರದಲ್ಲಿರುವ ಲಕ್ಷ್ಮಿಯವರೆಗೆ ಇರುವ ಎಲ್ಲ ಚೇತನರನ್ನೊಳಗೊಂಡ ಬ್ರಹ್ಮಾಂಡವನ್ನು ಹಿಡಿದುಕೊಂಡು ಭಗವಂತನು ಮುಂದೆ ಸಾಗುತ್ತ ಇರುವನು. ಚತುರ್ಮುಖನಿಗೆ ಐವತ್ತು ವರ್ಷಗಳಾದವು. ಐವತ್ತು ವರ್ಷಗಳಿಂದ ಇದನ್ನು ಹಿಡಿದುಕೊಂಡು ಭಗವಂತ ಹೊರಟಿದ್ದಾನೆ. ಇನ್ನು ಐವತ್ತು ವರ್ಷ ಎಳೆದುಕೊಂಡು ಹೋಗಬೇಕು. ಆಗ ಕೆಲವರಿಗೆ ಬೇರೆ ಬೇರೆ ಗತಿ ಆಗುವುದು. ಮತ್ತೆ ಸ್ವಲ್ಪ ವಿಶ್ರಾಂತಿ ಪಡೆದ. ವಿಶ್ರಾಂತಿ ಎಂದು ನಾವು ಲೌಕಿಕವಾಗಿ ಕರೆಯುವುದೇ ಹೊರತು ಅದು ಅವನ ಪಾಲಿಗೆ ನಿಜವಾದ ವಿಶ್ರಾಂತಿ ಅಲ್ಲ. ಪುನಃ ಇವರನ್ನು ಕಟ್ಟಿಕೊಂಡು ಹೊರಟ 'ನೇತಾ'. ಹೀಗೆ ಪ್ರತಿಯೊಬ್ಬರನ್ನೂ ಕಟ್ಟಿಕೊಂಡು ಹೊರಟವ ಭಗವಂತ.

**೨೨೬. ಸಮೀರಣಃ – ಚೆನ್ನಾಗಿ ಪ್ರೇರಿಸುವವನು.**

**ವಿವರಣೆ:** ಬರೇ ಎಲ್ಲರನ್ನೂ ಎಳೆದುಕೊಂಡು ಹೋಗುವುದಷ್ಟೇ ಅಲ್ಲದೆ, ಆಯಾ ಕಾಲದಲ್ಲಿ ಆಯಾ ವ್ಯಕ್ತಿಯಿಂದ ಏನೇನು ಚಟುವಟಿಕೆ ನಡೆಯಬೇಕೋ ಅಂತಹ ಚಟುವಟಿಕೆಯಲ್ಲಿ 'ಈರಣ'– ಅಂದರೆ ಪ್ರೇರಣೆ ನೀಡುತ್ತಿರುವನು. ಬರೇ ಈರಣ ಅಲ್ಲ, ಸಮೀರಣ – ಅಂದರೆ ಚೆನ್ನಾಗಿ ಪ್ರೇರಣೆ. ಮಾಡಬೇಕು ಅಂದರೆ ಮಾಡಲೇಬೇಕು. ಆಯಿತು ಆ ವ್ಯಕ್ತಿಯಿಂದ ಆ ಕಾರ್ಯ ಆಗಿಯೇ ಬಿಟ್ಟಿತು. ಯಾಕೆಂದರೆ ಅದನ್ನು ಭಗವಂತ ಮಾಡಿಸಿದ್ದು . ಹೇಗೆ ? ಪ್ರೇರಣೆ ನೀಡುವ ಮೂಲಕ.

ಹಿರಿಯರೊಂದು ಮಾತು ಹೇಳಿರುವರು – ನಾವು ನೀವು ಯಾರಿಂದಲಾದರೂ ಕೆಲಸ ಮಾಡಿಸುವುದು ಆಯಾ ವ್ಯಕ್ತಿಯ ಎದುರಿಗೆ ನಿಂತು ಬೈದು, ಹೊಡೆದು, ಆದರೆ ದೇವತೆಗಳು ಹಾಗಲ್ಲ.

**ನ ದೇವಾ ದಂಡಮಾದಾಯ ರಕ್ಷಂತಿ ಪಶುಪಾಲವತ್ |**
**ಯಂ ತು ರಕ್ಷಿತುಮಿಚ್ಛಂತಿ ಬುದ್ಧ್ಯಾ ಸಂಯೋಜಯಂತಿ ತಮ್ ||**

ಯಾರಿಂದ ಯಾವ ಕೆಲಸ ಆಗಬೇಕೆಂದು ಸಂಕಲ್ಪ ಮಾಡುವರೋ ಅವರ ಮನಸ್ಸಿನೊಳಗೆ ಪ್ರವೇಶ ಮಾಡಿ, ಅವರ ಬುದ್ಧಿಯನ್ನು ಪ್ರೇರಿಸುವ ಮೂಲಕ ಆ ಕೆಲಸವನ್ನು ಮಾಡಿಸುವರು. ದೇವತೆಗಳ ಬುದ್ಧಿಯನ್ನು ಪ್ರೇರಿಸುವವನು ಭಗವಂತ.

ಹೀಗೆ ಪ್ರತಿಯೊಬ್ಬ ವ್ಯಕ್ತಿಯ ಮನಸ್ಸಿನೊಳಗೆ ಪ್ರವೇಶಿಸಿ ಅವರ ಬುದ್ಧಿಯನ್ನು ಪ್ರೇರಿಸಿ ಅವರಿಗೆ ಹೇಗೆ ಮಾಡಬೇಕು, ಹೀಗೆ ಮಾಡಬಾರದು – ಎಂದು ತೋರುವಂತೆ ಮಾಡುವವನು ಸಮೀರಣ.

ಭೀಷ್ಮರು ಹತ್ತು ದಿನಗಳ ಕಾಲ ದುರ್ಯೋಧನನ ಪರವಾಗಿ ಹೋರಾಟ ನಡೆಸಿದ್ದನ್ನು 'ಸಮೀರಣ'– ಎಂದು ಕೃಷ್ಣಾರ್ಪಣ ಬಿಡುತ್ತಿದ್ದಾರೆ–

''ಏನು ಮಾಡುವ ಪುಣ್ಯಪಾಪಗ–
ಳಾನೆ ಮಾಡುವೆನೆಂಬುವಾಧಮ |
ಹೀನಕರ್ಮಕೆ ಪಾತ್ರನಾ ಪುಣ್ಯಕ್ಕೆ ಹರಿಯೆಂಬ ||
ಮಾನವನು ಮಧ್ಯಮನು ದ್ವಂದ್ವಕ್ಕೆ
ಶ್ರೀನಿವಾಸನೆ ಕರ್ತೃವೆಂದು ಸ–
ದಾನುರಾಗದಿ ನೆನೆದು ಸುಖಿಸುವರೇ ನರೋತ್ತಮರು''(ಹ.ಕ.ಸಾ. 13 - 8)

ಜಗನ್ನಾಥದಾಸರ ಧಾಟಿ – ಕೆಟ್ಟದು ಹಾಗೂ ಒಳ್ಳೆದು ಎಲ್ಲವನ್ನೂ ನಾನೇ ಮಾಡಿದ್ದು ಎನ್ನುವ ನೀನು ಅಧಮ. ಮತ್ತೆ, ಕೆಟ್ಟದ್ದನ್ನು ನಾನು ಮಾಡಿದ್ದು, ಒಳ್ಳೆಯದನ್ನು ದೇವರು ಮಾಡಿದ್ದು– ಎನ್ನುವ ನೀನು ಮಧ್ಯಮ, ಮತ್ತೆ, ಯಾರು ಉತ್ತಮ ? ಒಳ್ಳೆದನ್ನೂ, ಕೆಟ್ಟದನ್ನೂ ಎಲ್ಲವನ್ನೂ ಭಗವಂತನೇ ಮಾಡಿಸುವನು – ಎಂದು ತಿಳಿಯುವವನೇ ಸದಾ ಸುಖಿಸುವವನು ನರೋತ್ತಮನು.

ಒಂದು ವೇಳೆ ಕೆಟ್ಟದ್ದನ್ನು ನಾನೇ ಮಾಡಿದ್ದೆಂದು ತಿಳಿದರೆ ಕೆಟ್ಟದ್ದನ್ನು ಮಾಡುವ ಸ್ವಾತಂತ್ರ್ಯ ತನಗೆ ಇದೆ ಎಂದಂತಾಗುವುದು. ದೇವರ ಸ್ವಾತಂತ್ರ್ಯವನ್ನು ಕಿತ್ತಂತಾಗುವುದು. ಇದು ಸಲ್ಲ.

ಆದುದರಿಂದ **'ದ್ವಂದ್ವಕೆ ಶ್ರೀನಿವಾಸನೇ ಕರ್ತೃ'** – ಎಂದು ತಿಳಿಯುವವನೇ ಸದಾ ಸುಖಿಸುವ ನರೋತ್ತಮನು – ಎಂದು ಜಗನ್ನಾಥದಾಸರು ಸಿದ್ಧಾಂತಿಸಿರುವರು. ಇದಕ್ಕನುಗುಣವಾಗಿ ಭೀಷ್ಮರು ತಾನು ಹತ್ತು ದಿನ ಹೋರಾಡಿದೆ. – 'ಕೃಷ್ಣಾರ್ಪಣಮ್', ತಾನು ದುರ್ಯೋಧನನಿಗೆ ಬೆಂಬಲ ನೀಡಿದೆ – ಕೃಷ್ಣಾರ್ಪಣಮ್, ದ್ರೌಪದಿಗೆ ಅಪಮಾನವನ್ನೆಸಗಿದಾಗ ಬರೇ ಕಣ್ಣು ಕಣ್ಣು ಬಿಟ್ಟು ನೋಡುತ್ತಿದ್ದೆ –'ಕೃಷ್ಣಾರ್ಪಣಮ್'– ಎಂದು 'ಸಮೀರಣಃ' – ಎಂಬ ನಾಮದ

ಮೂಲಕ ತಮ್ಮ ಮೂಲಕ ನಡೆದ 'ದ್ವಂದ್ವ'ವನ್ನೂ ಶ್ರೀಕೃಷ್ಣನ ಪಾದಾರವಿಂದಕ್ಕೆ ಅರ್ಪಿಸುತ್ತಿದ್ದಾರೆ.

**೨೨೭. ಸಹಸ್ರಮೂರ್ಧಾ – * ಸಾವಿರಾರು ತಲೆಗಳುಳ್ಳವನು.**

*** ಭಾರೀ ತಲೆ, ಬುದ್ಧಿ ಸಾಮರ್ಥ್ಯವುಳ್ಳವನು.**

ವಿವರಣೆ : ಮೂರ್ಧಾ ಅಂದರೆ ತಲೆ. ಸಹಸ್ರ ಎಂದರೆ ಸಾವಿರಾರು ಎಂಬ ಅರ್ಥವೇ ಹೊರತು ಸಾವಿರ ಎಂದೇ ಅರ್ಥ ಅಲ್ಲ. ಆದ್ದರಿಂದ ಸಹಸ್ರಮೂರ್ಧಾ ಎಂದರೆ ಸಾವಿರಾರು, ಬಹಳ ತಲೆ ಉಳ್ಳವನು ಎಂದು ಸಿದ್ಧಿಸುವುದು. **'ಸಹಸ್ರಶೀರ್ಷಾ ಪುರುಷಃ ಸಹಸ್ರಾಕ್ಷಃ ಸಹಸ್ರಪಾತ್ .....'** ಎಂದು ಪುರುಷಸೂಕ್ತದಲ್ಲಿ ವರ್ಣಿಸಿರುವಂತೆ ಭೀಷ್ಮರು ಮಲಗಿದಲ್ಲಿ ಹಿಂದೆ ಕಂಡ ಕೃಷ್ಣನ ವಿಶ್ವರೂಪವನ್ನು ಆವೃತ್ತಿಮಾಡಿಕೊಳ್ಳುತ್ತಿರುವರೋ ಏನೋ ! ಕೃಷ್ಣನ ಸಾವಿರಾರು ತಲೆಗಳನ್ನು ಭೀಷ್ಮರೂ ಕಂಡಿದ್ದಾರೆ. ಅಂತಿಮಕ್ಷಣದಲ್ಲಿ ಇರುವ ತಾವು ಈಗ ಮೆಲುಕು ಹಾಕುತ್ತಿರುವರು.

'ಸಹಸ್ರಮೂರ್ಧಾ' ಎಂದರೆ ಭಾರೀ ತಲೆವುಳ್ಳವರು. ಇದು ಎರಡು ಅರ್ಥಗಳಲ್ಲಿ ತೆರೆದುಕೊಳ್ಳಬಹುದು. ಭಾರೀ ತಲೆಗಳೆಂದರೆ ಸಾವಿರ, ಹತ್ತುಸಾವಿರ..... ಹೀಗೆ ಸಂಖ್ಯೆಯಲ್ಲಿ ಅನೇಕಾನೇಕ ತಲೆವುಳ್ಳವರು –ಎಂಬುದು ಒಂದು ಅರ್ಥವಾದರೆ, ತಲೆಯೊಳಗಿನ ಬುದ್ಧಿಸಾಮರ್ಥ್ಯ ಭಾರೀ ಪ್ರಮಾಣದಲ್ಲಿರುವುದರಿಂದ ಭಾರೀ ತಲೆವುಳ್ಳವರು ಎಂಬುದು ಮತ್ತೊಂದು ಅರ್ಥ. ಬುದ್ಧಿ ಒಂದೇ ಆದರೂ ಅದಕ್ಕೆ ತೋಚುವ ವಿಷಯಗಳು ತುಂಬ ಆದರೆ ಭಾರೀ ಬುದ್ಧಿ ಎನ್ನಲಾಗುವುದು. ಆ ಅಭಿಪ್ರಾಯದಲ್ಲಿಯೇ 'ಭಾರೀ ತಲೆ' ಎನ್ನಲಾಗುವುದು.

ಲೆಕ್ಕ ಮಾಡಿದರೂ ಒಂದು ತಲೆಯಿಂದ ಹಿಡಿದು ಅನಂತ ತಲೆಗಳು ಭಗವಂತನಿಗೆ ಇವೆ. ಅವನು ಒಂದು ತಲೆಯಿಂದ ಹಿಡಿದು ಅನಂತ ತಲೆಗಳವರೆಗೂ ದರ್ಶನ ನೀಡುವನು. **'ಅಧಿಕಾರಿಣಾಂ ಗುಣವಿಶೇಷವಶಾದ್ ದ್ವಿಪದಾದ್ಯ–ನಂತಚರಣಾಂತತಯಾ ಅತಿಭಾಸಿತಂ .......'**– ಎಂಬುದಾಗಿ ಮಧ್ವವಿಜಯದಲ್ಲಿ ವೈಕುಂಠದಲ್ಲಿ ಭಗವಂತನು ಯಾವ ಯಾವ ಅಧಿಕಾರಿಗೆ ಎಷ್ಟೆಷ್ಟು ದರ್ಶನ ನೀಡುವನು? ಎಂದು ವಿವರಿಸುತ್ತ ಎರಡು ಕಾಲಿನ ವ್ಯಕ್ತಿಗಳಿಗೆ ಎರಡು ಕಾಲಿನ ಭಗವದ್ರೂಪದ ದರ್ಶನ. ಒಂದು ತಲೆಯ ವ್ಯಕ್ತಿಗೆ ಒಂದು ತಲೆಯ ಭಗವದ್ರೂಪದ ದರ್ಶನ. ಯಾವ ಯಾವ ದೇವತೆಗೆ ಎಷ್ಟೆಷ್ಟು ತಲೆ ಎಂದು ಹೇಳಬರುವುದಿಲ್ಲ. ಒಂದೊಮ್ಮೆ ಎರಡು ತಲೆಯ ದೇವತೆಯಿದ್ದರೆ ಅವನಿಗೆ ಎರಡು ತಲೆಯ

ಭಗವದ್ರೂಪದ ದರ್ಶನ. ಒಂದು ತಲೆಯುಳ್ಳವನಿಗೆ ಎರಡು ತಲೆವುಳ್ಳ ರೂಪವನ್ನು ಕಾಣುವಾಗ ಹೇಸಿಗೆ ಕಾಣಬಹುದು. ಎರಡು ತಲೆವುಳ್ಳವನಿಗೆ ಒಂದು ತಲೆಯ ರೂಪವನ್ನು ಕಂಡಾಗ ಹೇಗೋ ಹಾಗೆ. ಲೋಕದಲ್ಲಿ ಮಾತೇ ಇದೆ –'ಮಂಗನಿಗೆ ಮಾನವರನ್ನು ಕಂಡಾಗ ಹೇಸಿಗೆ ಕಾಣುವುದು' ನಮಗೆ ಮಂಗನನ್ನು ಕಂಡಾಗ ಹೇಗೋ ಹಾಗೆ. ಯಾವಾಗಲೂ ಆಯಾ ಜಾತಿಯವರಿಗೆ ಆಯಾ ಜಾತಿಯವರು ಚೆಂದ. ಮತ್ತೊಂದು ಜಾತಿಯವರು ಅಷ್ಟು ಚೆಂದ ಅಲ್ಲ. ಲೋಕದಲ್ಲಿ ಸಹಜ. ಆದ್ದರಿಂದ ಬಹಳ ಕೈಕಾಲುಗಳೆಂದಾಗ ನಮಗೆ ಅದು ವಿಕೃತವಾಗಿ ತೋರಬಹುದು. ಆದರೆ ಅಷ್ಟೇ ಕೈಕಾಲುಗಳನ್ನು ಪಡೆದವರಿಗೆ ಅಷ್ಟೇ ಕೈಕಾಲುಗಳುಳ್ಳ ರೂಪ ಚೆಂದವಾಗಿ ಕಾಣಿಸುವುದು. ಆದ್ದರಿಂದ ಭಗವಂತನು ಎಲ್ಲರಿಗೂ ಚೆಂದವಾಗಿ, ಮನೋಹರನಾಗಿ ಕಾಣಿಸಬೇಕು. ಅದಕ್ಕಾಗಿ ನೋಡುವವರು ಹೇಗಿರುವರೋ ಹಾಗೆ ಭಗವಂತನಿರಬೇಕು. ಆಗ ಎಲ್ಲರಿಗೂ ಚೆಂದವಾಗಿ ಕಾಣುವನು. ಹೇಗೆ ಊಟಕ್ಕೆ ಕುಳಿತ ಎಲ್ಲರೂ ಊಟ ಚೆನ್ನಾಗಿದೆ ಎನ್ನಬೇಕಾದರೆ, ಅವರವರಿಗೆ ರುಚಿಸುವಂತಹ ಭಕ್ಷ್ಯಭೋಜ್ಯಗಳನ್ನೇ ಬಡಿಸಬೇಕೋ ಹಾಗೆ ಅವರವರ ಸ್ವರೂಪಕ್ಕನುಗುಣವಾಗಿ ಭಗವಂತ ತನ್ನ ರೂಪದಲ್ಲಿ ಅಂಗಾಂಗಗಳನ್ನು ತೋರಿಸಿದರೆ ಜೀವರು ಎಷ್ಟು ಚೆಂದದ ಭಗವಂತ ಎಂದು ಉದ್ಗಾರ ತೆಗೆಯುವರು. ಅದಕ್ಕೇ ಹಿರಿಯರು ಅಂದರು – ಸೌಂದರ್ಯ ಇರುವುದು ನೋಡುವವರ ಕಣ್ಣುಗಳಲ್ಲಿ ಎಂದು.

ಭೀಷ್ಮರು 'ಸಹಸ್ರಮೂರ್ಧಾ' – ಭಾರೀ ತಲೆ ಉಳ್ಳವನು – ಯಾರ್‍ಯಾರಿಗೆ ಎಷ್ಟೆಷ್ಟು ತಲೆಗಳನ್ನು ಕಾಣಿಸಿದರೆ ಚೆಂದ ಕಾಣುವಿಯೋ ಅಷ್ಟಷ್ಟು ತಲೆವುಳ್ಳವನಾಗಿ ಕಾಣಿಸಿಕೊಳ್ಳುವವನು ನೀನು – ಎಂದು ಸ್ತುತಿಸಿದರು.

**೨೨೮. ವಿಶ್ವಾತ್ಮಾ – ಪರಿಪೂರ್ಣ ಸ್ವರೂಪವುಳ್ಳವನು.**

**ವಿವರಣೆ :** ವಿಶ್ವ ಎಂದರೆ ಪರಿಪೂರ್ಣ. ಆತ್ಮಾ ಎಂದರೆ ಸ್ವರೂಪ. ಭಗವಂತನು ಪೂರ್ಣವಾದ ಸ್ವರೂಪವುಳ್ಳವನಾದುದರಿಂದಲೇ ವಿಶ್ವಾತ್ಮಾ.

ಶ್ಲೋಕದ ಈ ಉತ್ತರಾರ್ಧದಲ್ಲಿ ಸಹಸ್ರಶಬ್ದದಿಂದ ಆರಂಭವಾಗುವ ಮೂರುನಾಮಗಳಿದ್ದು, ಮಧ್ಯ ಒಂದು ನಾಮವಷ್ಟೇ 'ವಿಶ್ವಾತ್ಮಾ' – ಎಂದಿದೆ.ಇದರ ಬದಲು ಸಹಸ್ರಶಬ್ದದಿಂದ ಆರಂಭವಾಗುವ ಮತ್ತೊಂದು ನಾಮವನ್ನು ಸೇರಿಸಿಬಿಟ್ಟಿದ್ದರೆ ಪ್ರಾಸದ ದೃಷ್ಟಿಯಿಂದ ಚೆನ್ನಾಗಿರುತ್ತಿತ್ತು. ಆದರೆ ಹಾಗೆ ಮಾಡಿಲ್ಲ. ಯಾಕೆಂದರೆ ಭಗವಂತನ ಸಹಸ್ರಮೂರ್ಧಾ, ಸಹಸ್ರಾಕ್ಷ, ಸಹಸ್ರಪಾತ್ ನಾಮಗಳು ಅವನ ಪರಿಪೂರ್ಣತೆಯನ್ನು ಸೂಚಿಸುತ್ತಿವೆ, ಅವರವರಿಗೆ ಬೇಕಾದಂತೆ ತಲೆ, ಕಣ್ಣು, ಕಾಲುಗಳನ್ನು ತೋರಿಸುವುದೇ ಪರಿಪೂರ್ಣತೆ. ಅದನ್ನೇ 'ವಿಶ್ವಾತ್ಮಾ' ನಾಮದಿಂದ

ಸೂಚಿಸಿರುವರು. ವಿಶ್ವ ಎಂದರೆ ಪೂರ್ಣ. ಆತ್ಮಾ ಎಂದರೆ ಸ್ವರೂಪ. ಪೂರ್ಣವಾದ ಸ್ವರೂಪವುಳ್ಳ ಭಗವಂತನ ಸ್ವರೂಪದಲ್ಲಿ ಸ್ವಲ್ಪವೂ ನ್ಯೂನತೆ ಇಲ್ಲ.

ಒಂದು ತರಗತಿಯಲ್ಲಿ ನಲ್ವತ್ತು ಬುದ್ಧಿಯ ನಲ್ವತ್ತು ವಿದ್ಯಾರ್ಥಿಗಳಿದ್ದಾರೆ. ಆದರೆ ಅವರೆಲ್ಲರಿಗೂ ಹಿಡಿಸುವಂತೆ ಪಾಠ ಮಾಡುವ ಅಧ್ಯಾಪಕ ಪೂರ್ಣ ಅಧ್ಯಾಪಕತ್ವವುಳ್ಳವ ಎಂದು ಹೇಗೋ ಹಾಗೆ ಯಾರ್ಯಾರಿಗೆ ಎಷ್ಟೆಷ್ಟು ಕೈಕಾಲುಗಳ ದರ್ಶನಬೇಕೋ ಅಷ್ಟಷ್ಟು ಕೈಕಾಲುಗಳುಳ್ಳ ಸ್ವರೂಪವನ್ನು ತೋರಿಸಿಕೊಡುವುದೇ ಭಗವಂತನ ಪೂರ್ಣತೆ.

**೨೨೯. ಸಹಸ್ರಾಕ್ಷಃ – * ಸಾವಿರಾರು ಕಣ್ಣುಗಳುಳ್ಳವನು.**

*** ಸಾವಿರಾರು ಇಂದ್ರಿಯಗಳುಳ್ಳವನು.**

**ವಿವರಣೆ** : ಅಕ್ಷ ಎಂದರೆ ಕಣ್ಣು ಎಂಬಂತೆಯೇ ಇಂದ್ರಿಯ ಎಂದೂ ಅರ್ಥ ಇದೆ. ಆದುದರಿಂದ ಸಹಸ್ರಾಕ್ಷ ಎಂದರೆ ಸಾವಿರಾರು ಕಣ್ಣುಗಳುಳ್ಳವನು ಎಂಬಂತೆಯೇ ಸಾವಿರಾರು ಬೇರೆ ಬೇರೆ ಇಂದ್ರಿಯಗಳುಳ್ಳವನು ಎಂಬ ಅರ್ಥವೂ ಹೊರಡುವುದು.

ಸಾವಿರಾರು ಕಿವಿಗಳು ಅಂದರೆ ಮೈತುಂಬ ಕಿವಿಗಳು ಎಂದೇನೂ ಎನಿಸಬೇಕಿಲ್ಲ. ಮತ್ತೆ ಅವನ ಕೈಗಳೂ ಕಿವಿಯ ಕೇಳುವ ಕೆಲಸವನ್ನು ಮಾಡಬಲ್ಲವು. ಕಿವಿಗಳೂ ನೋಡುವ ಕಣ್ಣಿನ ಕೆಲಸವನ್ನು ಮಾಡಬಲ್ಲವು.

ಒಬ್ಬರು ದೇವರ ಕಿವಿ ಮುಚ್ಚಿ ಏನೋ ಹೇಳಲು ಪ್ರಾರಂಭಿಸಿದರು. ದೇವರು ತನ್ನ ಕೈಗಳನ್ನು ಮುಂದಿಟ್ಟು ಕೇಳಲು ಪ್ರಾರಂಭಿಸಿದ. ಮತ್ತೊಬ್ಬರು ದೇವರ ಕಣ್ಣು ಮುಚ್ಚಿ ಏನೋ ಮಾಡಲು ಪ್ರಾರಂಭಿಸಿದ. ದೇವರು ತನ್ನ ಕಿವಿಗಳ ಮೂಲಕ ನೋಡಲು ಪ್ರಾರಂಭಿಸಿದ. ಫಜೀತಿ! ದೇವರೆದುರು ಗುಟ್ಟು ಮಾಡುವಂತಿಲ್ಲ!

ಸುಮಾರು ಮೂವತ್ತು ವರ್ಷಗಳ ಹಿಂದೆ ಪತ್ರಿಕೆಯಲ್ಲಿ ಒಂದು ಸುದ್ದಿ ಬಂದಿತ್ತು – 'ಕಿವಿ ಕಂಕುಳಗಳಲ್ಲಿ ಓದುವ ಸಹೋದರಿಯರು' – ಎಂದು. ಏನಾದರೂ ಬರೆದು ಅವರ ಕಿವಿಯ ಮುಂದೆಯೋ, ಕಂಕುಳಗಳಲ್ಲೋ ಇಟ್ಟರೆ ಅವರು ಓದುತ್ತಿದ್ದರು – ಎಂದು.

ಹಾಗಾದರೆ ಆ ವ್ಯಕ್ತಿಗಳಿಗೆ ಆ ಶಕ್ತಿಯನ್ನು ನೀಡಬೇಕೆಂದರೆ ಭಗವಂತನಲ್ಲಿ ಅಂತಹ ಶಕ್ತಿ ಇರಲೇಬೇಕು ತಾನೆ ? ಹೀಗೆ ಭಗವಂತನ ಎಲ್ಲ ಇಂದ್ರಿಯಗಳಲ್ಲಿ ಎಲ್ಲ ಇಂದ್ರಿಯಗಳ ಸಾಮರ್ಥ್ಯವಿರುವುದರಿಂದಲೇ, ಒಂದು ತಲೆ ಮಾತ್ರ ಅಲ್ಲ, ಕಣ್ಣು ಕೈ ಕಾಲುಗಳೆಲ್ಲ ತಲೆಯ ಕೆಲಸ ಮಾಡುವುದರಿಂದ 'ಸಹಸ್ರಮೂರ್ಧಾ' ಎರಡು

ಕಣ್ಣುಗಳು ಮಾತ್ರವಲ್ಲ ತಲೆ, ಕೈ, ಕಾಲುಗಳೆಲ್ಲ ಕಣ್ಣುಗಳ ಕೆಲಸ ಮಾಡುವುದರಿಂದ 'ಸಹಸ್ರಾಕ್ಷ'. ಎರಡು ಕಾಲುಗಳು ಮಾತ್ರವಲ್ಲ ತಲೆ ಕಣ್ಣು ಕಿವಿಗಳೆಲ್ಲ ಕಾಲುಗಳ ಕೆಲಸ ಮಾಡುವುದರಿಂದ 'ಸಹಸ್ರಪಾತ್'.

ಈ ರೀತಿಯಾಗಿ ದೇವರ ಪ್ರತಿಯೊಂದು ಇಂದ್ರಿಯವೂ ಉಳಿದೆಲ್ಲ ಇಂದ್ರಿಯಗಳ ಸಾಮರ್ಥ್ಯವನ್ನು ಹೊಂದಿರುವುದರಿಂದಲೂ ಅವನು 'ವಿಶ್ವಾತ್ಮಾ'– ಪೂರ್ಣ ವ್ಯಕ್ತಿತ್ವವುಳ್ಳವನು. ನಾವು ಒಂದು ಇಂದ್ರಿಯವನ್ನು ಕಳೆದುಕೊಂಡೆವೆಂದರೆ ಅದರ ಕೆಲಸ ನಡೆಸಲು ಸಾಧ್ಯವೇ ಇಲ್ಲ. ಆದರೆ ದೇವರಿಗೆ ಹಾಗಲ್ಲ. ಅವನಿಗೆ ಯಾವ ಇಂದ್ರಿಯವನ್ನೂ ಕಳೆದುಕೊಳ್ಳುವ ಪ್ರಸಂಗವೇ ಇಲ್ಲದಿದ್ದರೂ, ಒಂದು ಇಂದ್ರಿಯ ಕೆಲಸ ಮಾಡಿಲ್ಲದಿದ್ದರೆ ಅದರ ಕೆಲಸವನ್ನು ಮತ್ತೊಂದು ಇಂದ್ರಿಯ ಮಾಡಬಲ್ಲದು. ಒಂದು ಯಂತ್ರ ಕೆಟ್ಟರೆ ಅದರ ಕೆಲಸವನ್ನು ಮತ್ತೊಂದು ಯಂತ್ರ ನಡೆಸಬಲ್ಲದು. ಹೀಗೆ ಅವನ ವ್ಯಕ್ತಿತ್ವದಲ್ಲಿ ಎಂದೂ ಯಾವ ಬಗೆಯ ಕುಂದುಕೊರತೆಗೂ ಅವಕಾಶವೇ ಇಲ್ಲದ ಪ್ರಯುಕ್ತ ಅವನು 'ವಿಶ್ವಾತ್ಮಾ' – ಪೂರ್ಣ ವ್ಯಕ್ತಿತ್ವದವನು.

**೨೩೦. ಸಹಸ್ರಪಾತ್ – * ಸಾವಿರಾರು ಪಾದಗಳುಳ್ಳವನು.**

*** ಸಾವಿರಾರು ನಡಿಗೆಗಳುಳ್ಳವನು.**

ವಿವರಣೆ: ಬಹಳ ಚರಣಗಳುಳ್ಳವನು. ಬಹಳ ನಡಿಗೆಗಳುಳ್ಳವನು. ನಿಲ್ಲುವವನಲ್ಲ. ವಿಶ್ರಾಂತಿ ಪಡೆಯುವವನಲ್ಲ. ಆದ್ದರಿಂದ ಪೂರ್ಣವಾದ ವ್ಯಕ್ತಿತ್ವವುಳ್ಳವನು.

**ಆವರ್ತನೋ ನಿವೃತ್ತಾತ್ಮಾ ಸಂವೃತಃ ಸಂಪ್ರಮರ್ದನಃ |**
**ಅಹಃಸಂವರ್ತಕೋ ವಹ್ನಿರನಿಲೋ ಧರಣೀಧರಃ || ೨೫ ||**

**೨೩೧. ಆವರ್ತನಃ – ವೇದದಲ್ಲಿ ಉಲ್ಲೇಖಗೊಂಡಂತೆ ಜಗತ್ತನ್ನು ಒಂದೇ ರೀತಿಯಾಗಿ ಪುನಃ ಪುನಃ ಸೃಷ್ಟಿ ಮಾಡುವವನು.**

ವಿವರಣೆ: ವೇದಪಾಠ ಆದ ಮೇಲೆ ಅದನ್ನು ಹಾಗೆಯೇ ಬಿಡಬೇಡ. ಅದನ್ನು ಸ್ವಲ್ಪ 'ಆವರ್ತನೆ' ಮಾಡು –ಎಂದು ಪ್ರಯೋಗಿಸಲಾಗುವುದು. ಇಲ್ಲಿ ಆವರ್ತನೆ ಮಾಡುವುದೆಂದರೆ ಪುನಃ ಪುನಃ ಅದನ್ನು ಹೇಳುವುದು. ಅದರಂತೆ ಭಗವಂತನು ಜಗತ್ತನ್ನು ಆವರ್ತನೆ ಮಾಡುವನೆಂದರೆ ಪುನಃ ಪುನಃ ಸೃಷ್ಟಿ ಮಾಡುತ್ತಲೇ ಇರುವನು. ಹೋದ ಕಲ್ಪದಲ್ಲಿ ಜಗತ್ತನ್ನು ಸೃಷ್ಟಿ ಮಾಡಿದ್ದ. ಅದರಂತೆ ಹಿಂದಿನ ಕಲ್ಪದಲ್ಲೂ, ಅದಕ್ಕಿಂತ ಹಿಂದಿನ ಕಲ್ಪದಲ್ಲೂ ಜಗತ್ತನ್ನು ಸೃಷ್ಟಿ ಮಾಡಿದ್ದ. ಅದರಂತೆ ಈ ಕಲ್ಪದಲ್ಲಿ

ಜಗತ್ತನ್ನು ಸೃಷ್ಟಿ ಮಾಡಿದ್ದಾನೆ. ಇನ್ನು ಮುಂದಿನ ಕಲ್ಪದಲ್ಲೂ, ಅದರ ಮುಂದಿನ ಕಲ್ಪದಲ್ಲೂ ಸೃಷ್ಟಿ ಮಾಡುವನು. ಹೀಗೆ ಭಗವಂತನ ಸೃಷ್ಟಿ ಕಾರ್ಯಕ್ಕೆ ಆವೃತ್ತಿ. ಪುನಃ ಪುನಃ ಸೃಷ್ಟಿಕಾರ್ಯ ನಡೀತಾನೇ ಇದೆ. ಅವನು ಸುಮ್ಮನೆ ಕೂಡುವುದೆಂದೇ ಇಲ್ಲ. ಅದೂ ಹೇಗೆ ಸೃಷ್ಟಿ ಮಾಡುವನೆಂದರೆ, ಕಳೆದ ಕಲ್ಪದಲ್ಲಿ ಹೇಗೆ ಸೃಷ್ಟಿ ಮಾಡಿದ್ದನೋ ಈ ಕಲ್ಪದಲ್ಲೂ ಅದೇ ರೀತಿಯಾಗಿ ಸೃಷ್ಟಿ. ಸ್ವಲ್ಪವೂ ವ್ಯತ್ಯಾಸವಿಲ್ಲ. **'ಧಾತಾ ಯಥಾಪೂರ್ವಮಕಲ್ಪಯತ್'** ಈ ಕಲ್ಪದಲ್ಲಿ ಕುದುರೆಗೆ, ಮನುಷ್ಯರಿಗೆ ಕೋಡು ಇಲ್ಲ ಎಂದರೆ ಹಿಂದಿನ ಕಲ್ಪದಲ್ಲೂ, ಮುಂದಿನ ಕಲ್ಪದಲ್ಲೂ ಕುದುರೆಗೂ, ಮನುಷ್ಯರಿಗೂ ಕೋಡು ಇಲ್ಲ. ಅವನ ಸೃಷ್ಟಿಯ ಆವೃತ್ತಿ ಈ ಬಗೆಯಲ್ಲಿ. ಇದರ ಬದಲಾಗಿ ಒಂದೊಂದು ಕಲ್ಪದಲ್ಲಿ ಒಂದೊಂದು ಬಗೆಯ ಸೃಷ್ಟಿಯಾದರೆ ಅದು ಆವೃತ್ತಿ ಎನಿಸುವುದಿಲ್ಲ. ಆವೃತ್ತಿ ಮಾಡುವುದೆಂಬುದನ್ನು ಪೂರಾ ಕನ್ನಡೀಕರಿಸುವುದೆಂದರೆ ಮೆಲುಕು ಹಾಕುವುದು. ನಾನು ಹೇಳಿದ ಕ್ರಮದಲ್ಲಿಯೇ ಪುನಃ ಪುನಃ ಹೇಳಿಕೊಂಡರಷ್ಟೇ ಅದು ಕನ್ನಡದಲ್ಲಿ ಮೆಲುಕು ಹಾಕುವುದೆಂದೂ, ಸಂಸ್ಕೃತದಲ್ಲಿ 'ಆವೃತ್ತಿ' ಎಂದೂ ಕರೆಸಿಕೊಳ್ಳಲ್ಪಡುವುದು. ಭಗವಂತನ ಜಗತ್ ಸೃಷ್ಟಿ – ಆವರ್ತನೆ. ಹೋದ ಕಲ್ಪದ ಸೃಷ್ಟಿಗೂ ಈ ಕಲ್ಪದ ಸೃಷ್ಟಿಗೂ ಸ್ವಲ್ಪವೂ ವ್ಯತ್ಯಾಸವಿಲ್ಲ.

ಹಾಗಾದರೆ ನಾವು ಹೋದ ಕಲ್ಪದಲ್ಲೂ ಹೀಗೆ ರಾಜಾಂಗಣದಲ್ಲಿ ಬಂದು ಉಪನ್ಯಾಸ ಕೇಳುತ್ತಿದ್ದೆವೋ ? ನೀವು ಉಪನ್ಯಾಸ ನೀಡುತ್ತಿದ್ದಿರೋ ? ಎಂದು ನೀವು ಕೇಳಬಹುದು. ಇಲ್ಲ, ನಾವೂ ನೀವೂ ವೇದದಲ್ಲಿ ಉಲ್ಲೇಖಗೊಂಡಿಲ್ಲ. ನಾವು ವೇದದ ತಂಟೆಗೆ ಹೋಗುವುದಿಲ್ಲ. ವೇದ ನಮ್ಮ ತಂಟೆಗೆ ಬರುವುದಿಲ್ಲ. ವೇದದಲ್ಲಿ ಋಷಿಗಳಿಂದ ಪ್ರಾರಂಭಿಸಿ ಎತ್ತರದ ವ್ಯಕ್ತಿತ್ವದ ವ್ಯಕ್ತಿಗಳ ಉಲ್ಲೇಖ ಬಂದಿದೆ. ಅವರನ್ನು ದೇವರು ಪ್ರತಿ ಕಲ್ಪದಲ್ಲೂ ಸೃಷ್ಟಿಸುವನು. ವಿಶ್ವಾಮಿತ್ರ ವಸಿಷ್ಠರಿಗೆ ಈ ಕಲ್ಪದಲ್ಲಿ ಜಗಳವಾಗಿರುವಂತೆ ಕಳೆದ ಕಲ್ಪದಲ್ಲೂ, ಮುಂದಿನ ಕಲ್ಪದಲ್ಲೂ ಜಗಳ ಆಗುವಂತೆ ಸೃಷ್ಟಿಸುವನು. ಪ್ರಾಣಿಗಳನ್ನು ಸೃಷ್ಟಿಸುವನು. ಎಂದಷ್ಟೇ ವೇದದಲ್ಲಿ ಇರುವುದರಿಂದ ಪ್ರತಿ ಕಲ್ಪದಲ್ಲೂ ಪ್ರಾಣಿಗಳನ್ನು ಸೃಷ್ಟಿಸುವನೇ ಹೊರತು ಆಯಾ ಪ್ರಾಣಿಗಳನ್ನೇ ಸೃಷ್ಟಿಸುವನೆಂದು ವೇದದಲ್ಲಿ ಇಲ್ಲದ ಪ್ರಯುಕ್ತ, ಈ ಕಲ್ಪದ ಆಯಾ ಪ್ರಾಣಿಗಳನ್ನೇ ಸೃಷ್ಟಿಸುವುದಿಲ್ಲ.

ಹೀಗೆ ದೇವರು ವೇದದಲ್ಲಿ ಉಲ್ಲೇಖಗೊಂಡಿರುವಂತೆ ಜಗತ್ತನ್ನು ಮತ್ತೆ ಮತ್ತೆ ಸೃಷ್ಟಿಸುವುದರಿಂದ 'ಆವರ್ತನ' ಎನಿಸುವನು. ಭಗವಂತನನ್ನು 'ಆವರ್ತನ'– ಎಂದು ಉಪಾಸನೆ ನಡೆಸಿದಲ್ಲಿ, ಆಧ್ಯಾತ್ಮಿಕ, ಧಾರ್ಮಿಕ ವಿಷಯಗಳನ್ನು ಮರೆತು

ಬಿಡದೆ ಮತ್ತೆ ಮತ್ತೆ ಮೆಲುಕು ಹಾಕಿ ನೆನಪಿನಲ್ಲಿಟ್ಟುಕೊಳ್ಳುವಂತೆ ಭಗವಂತನು ಅನುಗ್ರಹಿಸುವನು. ಕೆಟ್ಟ ವಿಷಯಗಳನ್ನು ಮರೆತುಬಿಟ್ಟು ಒಳ್ಳೆಯ ವಿಷಯಗಳನ್ನಷ್ಟೇ ಆವೃತ್ತಿ ಮಾಡಲು ಅನುಕೂಲಮಾಡಿಕೊಡುವನು.

**೨೩೨. ನಿವೃತ್ತಾತ್ಮಾ – ಸಾಂಸಾರಿಕ ಎಲ್ಲ ಬಗೆಯ ಜಂಜಾಟದಿಂದ ದೂರವಾದ ಸ್ವರೂಪವುಳ್ಳವನು.**

**ವಿವರಣೆ :** ಭಗವಂತನನ್ನು 'ಆವರ್ತನ' ಎಂದು ಉಪಾಸನೆ ಮಾಡಿದರೆ ಏನು ದೊರಕುವುದು ಎಂಬುದಕ್ಕೆ ಉತ್ತರ – 'ನಿವೃತ್ತಾತ್ಮಾ'. ಸಂಸಾರದಿಂದ ನಿವೃತ್ತವಾದ ಸ್ವರೂಪವುಳ್ಳವನೇ ಎಂಬ ಅಭಿಪ್ರಾಯದಲ್ಲಿ ಭೀಷ್ಮರು ಕೃಷ್ಣನನ್ನು 'ನಿವೃತ್ತಾತ್ಮಾ'– ಎಂದು ಕರೆಯುವರು.

ನಿವೃತ್ತ ಎಂದರೆ ಗೊತ್ತು ನಮಗೆ.
ವರ್ಷ ಎಷ್ಟು ಆಯ್ತು?
ಐವತ್ತೆಂಟು .

ನಿವೃತ್ತಿ ಆಯ್ತಾ ?
ಓ ಆಗಿದೆ.
ಅದೇ ನಿವೃತ್ತಿ ಎಂದರೆ. ಜಂಜಾಟದಿಂದ ದೂರ ಹೋಗುವಿಕೆ,
ಸಾಂಸಾರಿಕ ದುಃಖದಿಂದ, ಜಂಜಾಟದಿಂದ ನಿವೃತ್ತವಾದ ಸ್ವರೂಪ.

ಭಗವಂತ ಎಂದು ಸಾಂಸಾರಿಕ ದುಃಖದಿಂದ ನಿವೃತ್ತನಾದವನು ಎಂದು ಕೇಳಬಾರದು. ಯಾಕೆಂದರೆ ಅವನು ಅನಾದಿಕಾಲದಿಂದಲೂ ಸಂಸಾರದಿಂದ ನಿವೃತ್ತನಾಗಿರುವವನು. ಆದುದರಿಂದಲೇ ಅವನನ್ನು 'ನಿತ್ಯಮುಕ್ತ' – ಎಂದೂ ಕರೆಯುವುದುಂಟು.

ಧನಾಗಾರದಿಂದ ಎಂದು ನಿವೃತ್ತಿಯಾಯಿತು ? ಎಂದು ಕೇಳಿದಾಗ –ಐದು ವರ್ಷಗಳ ಹಿಂದೆ ಎಂದೆಲ್ಲ ಉತ್ತರಿಸುವಂತೆ ನಮಗೆ ಸಂಸಾರದಿಂದಲೂ ನಿವೃತ್ತಿ ಯಾವುದೋ ಒಂದು ಅವಧಿಯಲ್ಲಿ. ದೇವರಿಗೆ ಮಾತ್ರ ಹಾಗಿಲ್ಲ. ಅವನು ಸಂಸಾರದಿಂದ ಎಂದೆಂದೂ ನಿವೃತ್ತನೇ.

ಎಲ್ಲ ಬಗೆಯ ಸಾಂಸಾರಿಕ ಜಂಜಾಟಗಳಿಂದ ದೂರನಾಗಿರುವ ಭಗವಂತನನ್ನು 'ನಿವೃತ್ತಾತ್ಮಾ'– ಎಂದು ಉಪಾಸನೆ ಮಾಡೋಣ. ನಮಗೂ ಸಾಸಾರಿಕ ಜಂಜಾಟದಿಂದ ಒಂದು ದಿನ ನಿವೃತ್ತಿ ಆಗಬಲ್ಲದು. ನಮ್ಮ ಮನಸ್ಸಿನಲ್ಲಿ 'ಆವೃತ್ತಿ' ಆಯಿತೆಂದರೆ ಮಾತ್ರ ನಿವೃತ್ತಿ ದೊರಕಲು ಸಾಧ್ಯ.

ಯಾರ ಮನೆಯಲ್ಲಿ ಸಮಸ್ಯೆಗಳಿಲ್ಲ ? ಕಛೇರಿಯಿಂದ ಮನೆಗೆ ತೆರಳಿದಾಕ್ಷಣ ಹತ್ತಾರು ಸಮಸ್ಯೆಗಳು ಧುತ್ತನೆ ಎದುರಾಗುವವು. ಆ ಸಮಸ್ಯೆಗಳಿಂದಾಗಿ ಸಾಂಸಾರಿಕ ಜಂಜಾಟ ಉಂಟಾಗುವುದು. ಹಾಗಾಗಬಾರದು. ಸಮಸ್ಯೆಗಳಿದ್ದರೂ ಮನಸ್ಸಿನಲ್ಲಿ ಜಂಜಾಟ ಉಂಟಾಗಬಾರದು. 'ಈಸಬೇಕು ಈಸಿ ಜೈಸಬೇಕು.....'. ಒಬ್ಬರು ಬಂದು ನನ್ನಲ್ಲಿ ವಿಚಾರಿಸಿದರು. 'ಇಷ್ಟೆಲ್ಲ ಸಮಸ್ಯೆಗಳಿರುವಾಗ ನಿಮಗೆ ಎಷ್ಟು ತಲೆಬಿಸಿ ಆದೀತು!' ಎಂದು. ಅದಕ್ಕೆ ನಾವು ಉತ್ತರಿಸಿದೆವು – ಬಿಸಿಲು ಬಿಸಿಯೇ ಹೊರತು ನಮ್ಮ ತಲೆ ಏನೂ ಬಿಸಿಯಾಗಲಾರದು. ನೀವು ನಮಗೆ ತಲೆಬಿಸಿಯಾಗುವುದೆಂದು ತಲೆಬಿಸಿ ಮಾಡಿಕೊಂಡಿರುವಿರಲ್ಲಾ, ಅದಕ್ಕಾಗಿಯಷ್ಟೇ ನಮಗೆ ತಲೆಬಿಸಿ ! '– ಎಂದೆವು. ಯಾವುದೇ ಸಮಸ್ಯೆಯನ್ನು ತಲೆಗೆ ಹಚ್ಚಿಕೊಂಡರಷ್ಟೇ ಅದು ತಲೆಬಿಸಿಗೆ ಪ್ರಯೋಜಕವಾಗಬಲ್ಲದು. ಆದರೆ 'ಇಟ್ಹಾಂಗೆ ಇರುವೆನೋ ಹರಿಯೇ ದೊರೆಯೇ' ನಮಗೆ ದಾಸರು ಹೆಜ್ಜೆ ಹೆಜ್ಜೆಗೆ ಒಂದೊಂದು ಹಾಡನ್ನು ರಚಿಸಿ ಕೊಡುವ ಮೂಲಕ ಸಮಾಧಾನವನ್ನು ಒದಗಿಸಿಕೊಟ್ಟಿರುವರು. ನಾವು ಎಷ್ಟು ತಲೆಬಿಸಿ ಮಾಡಿಕೊಂಡರೂ 'ಅದು ಏನು ಆಗಬೇಕೋ ಅದೇ ಆಗುವುದು!' ಏನು ತಡೆಗಟ್ಟಿದರೂ ದೈವಸಂಕಲ್ಪ ಹೇಗಿದೆಯೋ ಹಾಗೆಯೇ ಆಗುವುದು.

ಆದುದರಿಂದ ನಮ್ಮ ಸಂಕಲ್ಪ ಇಷ್ಟೇ –

**'ಕ್ಷೇಮಂ ವಿಧಾಸ್ಯತಿ ಸ ನೋ ಭಗವಾಂಸ್ತ್ರ್ಯಧೀಶಃ**
**ತ್ರಾತಾಽಸ್ಮದೀಯವಿಮೃಶೇನ ಕಿಯಾನಿಹಾರ್ಥಃ '**

ಕ್ಷೇಮಂ ವಿಧಾಸ್ಯತಿ ಸಃ – ಅವನು ನನಗೆ ಒಳ್ಳೆದು ಮಾಡುವನು. ಯಾರು? 'ಭಗವಾನ್ ತ್ರ್ಯಧೀಶಃ'. ಅದು ಬಿಟ್ಟು 'ಅಸ್ಮದೀಯವಿಮೃಶೇನ ಕಿಯಾನಿಹಾರ್ಥಃ ......' ಅದು ಹಾಗೆ ಆಗಬೇಕು. ಹೀಗೆ ಆಗಬೇಕು – ಎಂದು ತಲೆಕೆಡಿಸಿಕೊಂಡು ಏನು ಮಾಡುತ್ತಿ ? ಅದರ ಬದಲು 'ಎನಗೆ ಒಳ್ಳೆದು ಮಾಡು'– ಎಂದು ದೇವರಲ್ಲಿ ಬೇಡು.

ಈ ರೀತಿಯಾಗಿ ಸಂಸಾರ ಜಂಜಾಟದಿಂದ ದೂರ ಆಗುವಿಕೆ ನಿವೃತ್ತಾತ್ಮಾ ಎಂದು ಭಗವಂತನ ಉಪಾಸನೆಯ ಫಲ.

**೨೩೩. ಸಂವೃತಃ – ತನ್ನನ್ನು ಮುಚ್ಚಿಕೊಂಡಿರುವವನು.**

ವಿವರಣೆ : ಸಂಸಾರ ಜಂಜಾಟದಿಂದ ದೂರ ಹೋಗಬೇಕು. ಯಾರನ್ನು ತಿಳಿದುಕೊಂಡಾಗ ಸಂಸಾರ ಜಂಜಾಟದಿಂದ ದೂರ ಸರಿಯಬಹುದು ? ನಮ್ಮನ್ನು, ನಿಮ್ಮನ್ನು ಅಲ್ಲ, ಮತ್ತೆ ಭಗವಂತನನ್ನು. ಆದರೆ ಅವನನ್ನು ತಿಳಿದುಕೊಳ್ಳೋಣ

ಅಂದರೆ **'ಯತೋ ವಾಚೋ ನಿವರ್ತಂತೇ....'** ಯಾವ ಶಬ್ದವೂ ಅವನನ್ನು ಪೂರ್ಣವಾಗಿ ತಿಳಿಸುವುದಿಲ್ಲ. ಪ್ರತಿಯೊಂದು ಶಬ್ದವೂ ಅವನ ಬಳಿಗೆ ಹೋಗುವುದು. ಅಲ್ಪ ಸ್ವಲ್ಪ ಅವನನ್ನು ತಿಳಿಸುವುದು. ಹಿಂತಿರುಗಿ ಬರುವುದು. ಯಾಕೆ? ಭಗವಂತನು ಯಾರ ಮುಂದೆಯೂ ತನ್ನನ್ನು ಬಿಚ್ಚಿ ಕೊಟ್ಟಿಲ್ಲ. ತನ್ನ ಗುಟ್ಟನ್ನು ಭಗವಂತ ಯಾರಿಗೂ ಒಪ್ಪಿಸಿಲ್ಲ. ಆದುದರಿಂದಲೇ ಲಕ್ಷ್ಮಿಯ ಬಗೆಗೆ ನಾವು ಹೀಗೆ ಕಾಣ್ತೇವೆ – 'ಬಗೆ ಬಗೆಯ ನೂತನವ ಕಾಣುತ ಮಿಗೆ ಹರುಷದಿಂ ಪೊಗಳಿ ಹಿಗ್ಗುವ ತ್ರಿಗುಣಮಾನಿ ಮಹಾಲಕುಮಿ.....'– ಲಕ್ಷ್ಮಿಗೇನೇ ತನ್ನ ಗಂಡನ ಗುಟ್ಟು ಪೂರ್ಣವಾಗಿ ಗೊತ್ತಾಗಿಲ್ಲಾಂತೆ; ನಮಗೆ ಹೇಗೆ ಗೊತ್ತಾಗಬೇಕು ? ಇನ್ನೂ ವಿಧವಿಧವಾಗಿ ತನ್ನ ಪತ್ನಿಯ ಮುಂದೆ ಭಗವಂತ ತೆರೆದುಕೊಳ್ಳುವನಂತೆ. ಆದ್ದರಿಂದಲೇ ಅವಳಿಗೇ ತನ್ನ ಗಂಡನನ್ನು ಪೂರ್ಣವಾಗಿ ಅರ್ಥೈಸಿಕೊಳ್ಳಲು ಸಾಧ್ಯವಾಗಲಿಲ್ಲ. ಆದುದರಿಂದಲೇ ಲಕ್ಷ್ಮಿಗೆ ಭಗವಂತನಲ್ಲಿ ಪ್ರೀತಿ ದಿನದಿಂದ ದಿನಕ್ಕೆ ಉಕ್ಕುತ್ತ ಇದೆ. ಯಾಕೆ ? ನನ್ನ ಗಂಡ ನಿನ್ನೆಯಂತೆ ಇವತ್ತು ಇಲ್ಲ; ಇವತ್ತಿನಂತೆ ನಾಳೆ ಇಲ್ಲ. 'ಬಗೆ ಬಗೆಯ ನೂತನವ ಕಾಣುತ'–ಹೀಗೆ ಭಗವಂತನು ತನ್ನನ್ನು ಆದಷ್ಟು ಮುಚ್ಚಿಕೊಂಡಿರುವನು. ಸಮಾಜದ ಮುಂದೆ ಸುಲಭದಲ್ಲಿ ತೆರೆದಿಡುವುದಿಲ್ಲ. **'ಹಿರಣ್ಮಯೇನ ಪಾತ್ರೇಣ ಸತ್ಯಸ್ಯಾಪಿಹಿತಂ ಮುಖಮ್'**– ಚಿನ್ನದ ಪಾತ್ರದಿಂದ ತನ್ನನ್ನು ಮುಚ್ಚಿಕೊಂಡಿರುವನಂತೆ. ಬೆಂಕಿ ಬೂದಿಯ ಒಳಗೆ ಉಂಟು. ಬೆಂಕಿ ಕಾಣಬೇಕೆನ್ನುವವರು ಬೂದಿಯನ್ನು ಸರಿಸುವ ಕೆಲಸವನ್ನು ಮಾಡಬೇಕು. ಊದಿ ಬೂದಿಯನ್ನು ಸರಿಸಬೇಕು. ಊದುವುದೆಂದರೂ ಗಾಳಿ ಹಾಕುವುದೆಂದರೂ ಒಂದೇ ಅರ್ಥ. ಗಾಳಿ ಅಂದರೂ ವಾಯುದೇವರು ಅಂದರೂ ಒಂದೇ ಅರ್ಥ. ಅಂತಹ ವಾಯುದೇವರು ಮಧ್ವರಾಗಿ ಉಸುರಿದ ಶಾಸ್ತ್ರದ ಚಿಂತನೆಯೇ ಬೂದಿಯನ್ನು ಸರಿಸಲು ಬೇಕಾದ ಗಾಳಿಯ ಊದುವಿಕೆ. ಇದರಿಂದಾಗಿ ಸ್ವಗುಣಾಚ್ಛಾದಿಕಾ ಎಂಬ ಮಾಯಾಪರದೆಯಂತೆ ಪರಮಾಚ್ಛಾದಿಕಾ ಎಂಬ ಮಾಯಾಪರದೆ ಸರಿದು 'ಸಂವೃತ' ಎನಿಸಿದ ಭಗವಂತನ ದರ್ಶನ ದೊರಕಬಲ್ಲದು.

ಭಗವಂತನು ತನ್ನನ್ನು ತಾನು ಯಾಕೆ ಮುಚ್ಚಿಕೊಂಡಿದ್ದಾನೆ ಗೊತ್ತೋ ? ಅವನ ಬಗ್ಗೆ ನಮಗೆ ಕುತೂಹಲ ಜಾಸ್ತಿಯಾಗುವುದಗೋಸ್ಕರ. ಪೆಟ್ಟಿಗೆಯೊಳಗೆ ಏನೂ ಇಲ್ಲದಿದ್ದರೂ ನಿತ್ಯ ಬೀಗ ಹಾಕಿ ತೆರೆಯುತ್ತಿದ್ದರೆ ಅದನ್ನು ಕಾಣುವ ಮಗುವಿಗೆ ಆ ಪೆಟ್ಟಿಗೆಯ ಬಗ್ಗೆ ಕುತೂಹಲ ಉಂಟಾಗುವುದು – ಹೇಗೋ ಹಾಗೆ. ಕುತೂಹಲ ಜಾಸ್ತಿಯಾದಾಗ ತಿಳಿದುಕೊಳ್ಳಬೇಕೆಂದು 'ತವಕ' ಅಧಿಕವಾಗುವುದು. ಅದಕ್ಕೋಸ್ಕರ 'ಆವೃತ್ತಿ' ಮಾಡ್ತೇವೆ. ಅದರಿಂದಾಗಿ ನಿವೃತ್ತಿ ಆಗುವುದು. ಸಂಸಾರದ ಜಂಜಾಟದಿಂದ ನಿವೃತ್ತಿಯಾಗುವುದು.

ಭೀಷ್ಮರು ಅಂತಾರೆ – ಕೃಷ್ಣ ಇಂದೂ ನಿನ್ನನ್ನು ಪೂರ್ಣವಾಗಿ ನನಗೆ ಅರ್ಥ ಮಾಡಿಕೊಳ್ಳಲು ಆಗುವುದಿಲ್ಲ. ಅರ್ಥ ಆಗದಂತೆ ಮುಚ್ಚಿಕೊಂಡು ಬಿಡುವಿ. ಕೆಲವರೆದುರು ತೆರೆದುಕೊಳ್ಳುವಿಯಾದರೂ ಅಲ್ಲಿಯೂ ಮುಚ್ಚಿಕೊಳ್ಳುವುದೇ ಜಾಸ್ತಿ. ಆದ್ದರಿಂದ ನೀನು 'ಸಂವೃತಃ'.

**೨೩೪. ಸಂಪ್ರಮರ್ದನಃ – ಚೆನ್ನಾಗಿ ದಂಡಿಸುವವನು.**

ವಿವರಣೆ : ನಾವು 'ನಿವೃತ್ತಾತ್ಮಾ' ರಾಗಬೇಕು. ಜಂಜಾಟದಿಂದ ದೂರ ಆಗಬೇಕು. ಅದಕ್ಕಾಗಿ 'ಸಂವೃತ'ನಾದ, ಮುಚ್ಚಿಕೊಂಡ ಭಗವಂತ ನಮ್ಮೆದುರು ತೆರೆದುಕೊಳ್ಳುವಂತೆ ಮಾಡಬೇಕು. ಹೀಗೆ ಆಗಬೇಕೆಂದರೆ ಬರೇ ಭಗವಂತನ 'ಆವೃತ್ತಿ' ಮಾಡಿಕೊಂಡರೆ ಸಾಲದು. ಜೊತೆಗೆ ಸಂಸಾರದಲ್ಲಿ ತುಂಬ ಹೊಡೆತಕ್ಕೆ ಒಳಗಾಗಬೇಕು. ಪಾಂಡವರು ಕೃಷ್ಣನ 'ಆವೃತ್ತಿ'ಯ ಜೊತೆಗೆ ಬೇರೆ ಬೇರೆ ಬಗೆಯ ಸಂಪ್ರಮರ್ದನಕ್ಕೂ ಒಳಗಾಗಿದ್ದರು. ನಾವು ವೇದಾಂತಕ್ಕೆ ಇಳಿಯುದೇ ಸಂಸಾರದ ಜಂಜಾಟದಿಂದ ಬೇಸತ್ತು. 'ಸಂಕಟ ಬಂದಾಗ ವೇಂಕಟರಮಣ'– ಎಂದಂತೆ ನಮಗೆ ದೇವರ, ಧರ್ಮದ, ಆಧ್ಯಾತ್ಮದ ನೆನಪು ಬರುವುದೇ ಸಂಸಾರದಲ್ಲಿ ಸಾಕಷ್ಟು ಸಂಕಟಗಳನ್ನು ಅನುಭವಿಸಿದಾಗ. ಅದಕ್ಕಾಗಿಯೇ ಭಗವಂತನು ತನ್ನ ಭಕ್ತರಿಗೆ ಸಂಕಟಗಳನ್ನು ಒದಗಿಸುವುದು. ಅದರಿಂದ ಬೇಸತ್ತು ತನ್ನ ಚಿಂತನೆಯಲ್ಲಿ ತೊಡಗಲಿ ಎಂದು. ಆದುದರಿಂದ ಭಗವಂತನು 'ಸಂಪ್ರಮರ್ದನ' ತನ್ನ ಭಕ್ತರಿಗೂ ಸಂಸಾರದಲ್ಲಿ ಬೇರೆ ಬೇರೆ ಬಗೆಯ ಸಂಕಟಗಳನ್ನು ನೀಡಿ ದಂಡಿಸುವವನು. ಇದರ ಫಲಿತಾಂಶ – ಸಂಸಾರದಲ್ಲಿ ಬೇಸತ್ತ ಭಕ್ತ 'ಸಂವೃತ' ನಾದ ಭಗವಂತನು ತನ್ನ ಪಾಲಿಗೆ 'ಅವೃತ'ನಾಗುವಂತೆ ಮಾಡಲು ಯತ್ನಿಸುವನು. ಸಂಸಾರದಲ್ಲಿ ಕೆಲವೊಮ್ಮೆ 'ನನ್ನನ್ನು ಬೈಯಲು, ಹೊಡೆಯಲು ನೀನು ಯಾರು ? ಬೇಕಾದರೆ ಅವರು ಬೈಯಲಿ, ಹೊಡೆಯಲಿ'– ಎಂದು ಹೇಳುವುದುಂಟು. ಹಾಗೆಯೇ ಭೀಷ್ಮರು ಕೃಷ್ಣನಲ್ಲಿ ಕೇಳಿಕೊಳ್ಳುವರು – ನನ್ನನ್ನು ದಂಡಿಸಲು ದುರ್ಯೋಧನ ಯಾರು ? ನನ್ನನ್ನು ಬೇಕಾದರೆ ನೀನು ದಂಡಿಸು, ನನ್ನ ಪಾಲಿಗೆ 'ಸಂಪ್ರಮರ್ದನ ' ಎನಿಸು.

ಸಂಸಾರದಲ್ಲಿ ಯಾರಿಂದಾದರೂ ಹೊಡೆತ ಬರುವ ಸಂಭವವಿದ್ದರೆ, ಅಯೋಗ್ಯರಿಂದ ಅಂತಹ ಹೊಡೆತ ಬಾರದೆ, ಯೋಗ್ಯರಿಂದಲೇ ಹೊಡೆತ ದೊರಕುವಂತಾಗಲಿ ಎಂಬ ಆಶಾಸನೆಯ ಸೂಚನೆ ಇದರಲ್ಲಡಗಿದೆ.

**೨೩೫. ಅಹಃಸಂವರ್ತಕಃ – ಹಗಲು ಮತ್ತು ರಾತ್ರಿಗಳಿಂದ ಕೂಡಿದ ದಿನವನ್ನು ನಡೆಸುವವನು.**

ವಿವರಣೆ : ಅಹಃ ಎಂದರೆ ಹಗಲು ಮಾತ್ರ ಅಲ್ಲ. ಹಗಲೂ, ರಾತ್ರಿಯೂ ಸೇರಿ ಪೂರ್ಣದಿನ. ಅಹಃ ಎನಿಸುವ ಪೂರ್ಣದಿನವನ್ನು 'ಸಂವರ್ತಕಃ'- ನಡೆಸುವವನು. ಹಗಲು ಮತ್ತು ರಾತ್ರಿ ಎರಡೂ ದೇವರಿಂದ ಆಗುವುದು.

ಭೀಷ್ಮರು ಶರಪಂಜರದ ಮೇಲೆ ಮಲಗಿದ್ದರೂ ಮಹಾಭಾರತ ಯುದ್ಧದ ಬಗ್ಗೆ ವಿಚಾರಿಸುತ್ತಿದ್ದರು. ಜಯದ್ರಥನ ಸಂಹಾರದ ಬಗ್ಗೆ ಅವರಿಗೆ ಹೀಗೆ ಮಾಹಿತಿ ದೊರಕಿದೆ – ಸೂರ್ಯ ಅಸ್ತಮಾನ ಹೊಂದುವ ಮುಂಚೆ ಜಯದ್ರಥನನ್ನು ಕೊಲ್ಲುವುದಾಗಿ ಅರ್ಜುನನ ಪ್ರತಿಜ್ಞೆ. ಸಂಜೆ ಆಗುತ್ತಿದೆ. ಆದರೂ ಜಯದ್ರಥನನ್ನು ಕೊಲ್ಲಲು ಆಗುತ್ತಿಲ್ಲ. ಇದ್ದಕ್ಕಿದ್ದಂತೆ ಕತ್ತಲು ಕವಿಯುವುದು. ಜಯದ್ರಥ ಎದುರಿಗೆ ಬರುವನು. ಕೃಷ್ಣನು ಜಯದ್ರಥನನ್ನು ಸಂಹರಿಸಲು ಅರ್ಜುನನಿಗೆ ಆದೇಶಿಸುವನು. ಅರ್ಜುನ ಜಯದ್ರಥನನ್ನು ಸಂಹರಿಸುವನು. ಸೂರ್ಯ ಅಸ್ತಮಾನ ಹೊಂದಿದ ಮೇಲೆ ಜಯದ್ರಥನನ್ನು ಕೊಂದ ಅರ್ಜುನನಿಂದ ಅವನ ಪ್ರತಿಜ್ಞೆ ಮುರಿಯಲ್ಪಟ್ಟಂತಾಗಿದೆ ಎಂದು ಆಕ್ಷೇಪದ ಧ್ವನಿಗಳು ಕೇಳಿಸುತ್ತಿದ್ದಂತೆಯೇ ಪುನಃ ಸೂರ್ಯ ಕಾಣಿಸಿಕೊಳ್ಳುವನು. ಹಗಲು ಆಗುವುದು.

ಕೃಷ್ಣನ ಈ ಚಮತ್ಕಾರವನ್ನು ಗಮನದಲ್ಲಿಟ್ಟುಕೊಂಡೇ ಭೀಷ್ಮರು ಕೃಷ್ಣನನ್ನು ಸ್ತುತಿಸುವರು – 'ಅಹಃಸಂವರ್ತಕಃ' ಹಗಲು ಹಾಗೂ ರಾತ್ರಿ ಇವುಗಳನ್ನೊಳಗೊಂಡ ಸಮಗ್ರ ದಿನವನ್ನು ನಡೆಸುವವನು, ನಿಯಮಿಸುವವನು ನೀನೇ.

'ಭೀಷೋದೇತಿ ಸೂರ್ಯಃ'– ಎಂಬುದಾಗಿ ಉಪನಿಷತ್ತಿನಲ್ಲಿ ದೇವರ ತಾಕತ್ತಿಗೆ ಅನುಗುಣವಾಗಿಯೇ ಸೂರ್ಯನು ಕಾಲಕಾಲಕ್ಕೆ ಸರಿಯಾಗಿ ಉದಯಿಸುವನು, ಅಸ್ತಮಿಸುವನು ಎಂದು ಹೇಳಲಾಗಿದೆ.

'ಒಬ್ಬನು ಅವನ ಮಗ.... ಮತ್ತಿಬ್ಬರು ಅವನಿಗೆ ಅಂಜಿ ಅಬ್ಬರದಲಿ ಆವಾಗ ಸುಳಿವರು ಶೋಭಾನೆ......' ಇಬ್ಬರು ಅಬ್ಬರದಲಿ ಆಕಾಶದಲ್ಲಿ ಅವನಿಗೆ ಅಂಜಿ ಸುಳಿವರು. ಸೂರ್ಯಚಂದ್ರರೇ ಆ ಇಬ್ಬರು. ಭಗವಂತನಿಗೆ ಅಂಜಿ ಅವರು ಆವಾಗ ಒಬ್ಬ ರಾತ್ರಿಯಲ್ಲಿ ಮತ್ತೊಬ್ಬ ಹಗಲಿನಲ್ಲಿ ಸುಳಿವರು, ಸಂಚಾರ ಮಾಡುವರು. ಹೀಗೆ ಸೂರ್ಯಚಂದ್ರರ ಸಂಚಾರ ದೇವರ ಕೈಯಲ್ಲಿ.

ಹಗಲು ಎಚ್ಚರಿಕೆಗೂ, ರಾತ್ರಿ ನಿದ್ದೆಗೂ ಸಂಕೇತ. ಒಳ್ಳೆಯ ವಿಷಯದಲ್ಲಿ ಎಚ್ಚರಿಕೆಯೂ, ಕೆಟ್ಟ ವಿಷಯದಲ್ಲಿ ನಿದ್ದೆಯೂ ಬರುವಂತಾಗಬೇಕು. ಒಳ್ಳೆಯ ಮಾರ್ಗದಲ್ಲಿ ಸಂಚರಿಸುವುದಕ್ಕೆ ಹಗಲು ಅಂದರೆ ಬೆಳಕು, ಕೆಟ್ಟ ಮಾರ್ಗದಲ್ಲಿ ಸಂಚರಿಸುವುದಕ್ಕೆ ರಾತ್ರಿ – ಅಂದರೆ ಕತ್ತಲು ದೊರಕುವಂತಾಗಬೇಕು.

ಹಾಗಾಗಬೇಕಾದರೆ ಭಗವಂತನನ್ನು 'ಅಹಃಸಂವರ್ತಕಃ'– ಹಗಲು ಮತ್ತು ರಾತ್ರಿಗಳನ್ನು ತನ್ನ ಹಿಡಿತದಲ್ಲಿಟ್ಟುಕೊಂಡು ಯಾರ್‍ಯಾರಿಗೆ ಯಾವುದ್ಯಾವುದು ಬೇಕೋ ಅದನ್ನು ನೀಡುವುವವನೆಂದು ಉಪಾಸನೆ ಮಾಡಬೇಕು.

**೨೩೬. ವಹ್ನಿಃ – ಕೊಟ್ಟದ್ದನ್ನು ತೆಗೆದುಕೊಂಡು ಬೇಕಾದವರಿಗೆ ತಲುಪಿಸುವವನು.**

**ವಿವರಣೆ :** ನಾವು ಕೊಟ್ಟ ಆಹುತಿಯನ್ನು ಹೊರುವುದು, ದೇವತೆಗಳಿಗೆ ತಲುಪಿಸುವುದು. ಇದಕ್ಕಾಗಿಯೇ ನಾವು ಬೆಂಕಿಯನ್ನು 'ವಹ್ನಿ' ಎಂದು ಕರೆಯುವೆವು. 'ವಹತಿ ನಯತಿ ಚೇತಿ ವಹ್ನಿಃ'– ಹೊರುವುದು ಮಾತ್ರವಲ್ಲ, ತಲುಪಿಸುವುದೂ ಕೂಡಾ.

ಅಗ್ನಿಗೆ ಈ ಬಗೆಯ ಸಾಮರ್ಥ್ಯ ಬರಲು ಕಾರಣ ಅಗ್ನಿಯ ಒಳಗಿರುವ ಪರಶುರಾಮ. ಅಗ್ನ್ಯಂತರ್ಗತ ಪರಶುರಾಮನು ನಾವು ಕೊಟ್ಟ ಆಹುತಿಯನ್ನು ಸ್ವೀಕರಿಸುವಂತೆಯೂ, ಆಯಾ ದೇವತೆಗಳಿಗೆ ತಲುಪಿಸುವಂತೆಯೂ ಅಗ್ನಿಗೆ ತಾಕಿತ್ತು ಮಾಡಿರುವ ಪ್ರಯುಕ್ತ ಅಗ್ನಿ ಆ ಕೆಲಸ ಮಾಡುತ್ತಿರುವನು.

'ವಹ್ನಿ' ನಾಮದ ಅರ್ಥವಾದ ತೆಗೆದುಕೊಳ್ಳುವುದು ಹಾಗೂ ತಲುಪಿಸುವುದು– ಮುಖ್ಯವಾಗಿ ದೇವರಲ್ಲೇ ಇರುವುದು. ನಾವು ಗಣಪತಿ, ನಾಗ ಇತ್ಯಾದಿ ಯಾವುದ್ಯಾವುದೋ ದೇವತೆಗಳನ್ನು ಉದ್ದೇಶಿಸಿ ವ್ರತ, ಕರ್ಮಗಳನ್ನೆಲ್ಲ ನಡೆಸುವೆವು. ಅವನ್ನು ಆಯಾ ದೇವತೆಗಳಿಗೆ ತಲುಪಿಸುವವನು ಭಗವಂತ. ಅದರಿಂದ ಸಂತುಷ್ಟರಾದ ದೇವತೆಗಳು ನಮಗೆ ಅದರ ಫಲವನ್ನು ನೀಡುವರು. ಅದನ್ನು ನಮಗೆ ತಲುಪಿಸುವವನು ದೇವರು. ಹೀಗೆ ನಮ್ಮ ಹಾಗೂ ದೇವತೆಗಳ ಮಾಧ್ಯಮವಾಗಿ ಇರುವವನು ದೇವರು. ಅದಕ್ಕೆ ಅಂದರು ಶಾಸ್ತ್ರಕಾರರು –'ಭಗವಂತನ ಮೂಲಕವೇ ಕೊಡು' ನೇರವಾಗಿ ಕೊಡಬೇಡ. ಪಾಂಡವರ ಮಾತನ್ನು ದುರ್ಯೋಧನಾದಿಗಳಿಗೆ ತಲುಪಿಸಿದ ಶ್ರೀಕೃಷ್ಣ ಕೌರವರ ಮಾತನ್ನು ಪಾಂಡವರಿಗೆ ತಲುಪಿಸಿ 'ರಾಯಭಾರಿ' ಎನಿಸಿರುವವನು.

**೨೩೭. ಅನಿಲಃ– ನಮ್ಮಿಂದ ಏನನ್ನೂ ಸ್ವೀಕರಿಸಲು ಬಯಸದವನು.**

**ವಿವರಣೆ :** ಲ ಎಂದರೆ ಸ್ವೀಕರಿಸುವವನು. ಹಿಂದಿಯಲ್ಲಿ 'ಲೋ' ಎಂದು ಇದರಿಂದಾಗಿಯೇ ಬಂದದ್ದು. ನಿಲ ಎಂದರೆ ಚೆನ್ನಾಗಿ ಸ್ವೀಕರಿಸುವವನು. ಅನಿಲ ಎಂದರೆ ಸ್ವೀಕರಿಸದವನು.

ಭಗವಂತನು ತನಗೆ ಏನು ಕೊಡುವಿರಿ ಎಂದು ಎಂದೂ ಕೇಳುವುದೇ ಇಲ್ಲ.

ಕೌರವರಿಗೆ ಪಾಂಡವರ ಸಂದೇಶವನ್ನು ತಲುಪಿಸಿ, ಕೌರವರ ವಿಚಾರವನ್ನು ಪಾಂಡವರಿಗೆ ತಲುಪಿಸಿದ ಕೃಷ್ಣ ತನಗೆ ಏನು ಕೊಡುವಿರಿ ?– ಎಂದು ಕೇಳಲೇ ಇಲ್ಲ. ಆದುದರಿಂದ ಕೃಷ್ಣ ಅನಿಲ. ನಮ್ಮ ಕೆಲಸವನ್ನು ಮಾಡಿ, ನಮ್ಮಿಂದ ಏನನ್ನೂ ಅಪೇಕ್ಷೆ ಪಡದಿರುವವನೇ ಅನಿಲ.

**೨೩೮. ಧರಣೀಧರಃ – ಭೂಮಿಯನ್ನು ಹೊತ್ತವನು, ಭೂಮಿಗೆ ಗೌರವ ದೊರಕುವಂತೆ ಮಾಡಿದವನು.**

ವಿವರಣೆ : ಧರಣಿ ಎಂದರೆ ಭೂಮಿ. ಧರ ಎಂದರೆ ಹೊತ್ತವನು. ವರಾಹ ರೂಪಿ ಭಗವಂತನು ಭೂಮಿಯನ್ನು ಹೊತ್ತ.

ಸ್ನಾನ ಮಾಡುವಾಗ ಮೃತ್ತಿಕೆಯನ್ನು ಮೈಗೆ ಹಚ್ಚಿಕೊಳ್ಳಬೇಕೆಂದು ಶಾಸ್ತ್ರಕಾರರು ಹೇಳಿರುವರು. ಮೈಯ ಮಣ್ಣನ್ನು ಮಣ್ಣಿನಿಂದಲೇ ತೆಗೆಯಬೇಕು. ಗಂಟು ನೋವೋ ಮಣ್ಣನ್ನು ಹಚ್ಚಿಕೊಳ್ಳಬೇಕು, ಚರ್ಮ ಬಿಳಿಯಾಗಿದೆಯೋ ಮಣ್ಣನ್ನು ಹಚ್ಚಿಕೊಳ್ಳಬೇಕು. ಹೀಗೆ ಮಣ್ಣಿಗೆ ಶುದ್ಧಗೊಳಿಸುವ, ದೇಹಕ್ಕೆ ಬೇಕಾದ ಪುಷ್ಟಿಯನ್ನು ನೀಡುವ ಸಾಮರ್ಥ್ಯ ಯಾರಿಂದ ಬಂದದ್ದು ? ಭಗವಂತನಿಂದ. ‘ಉದ್ಧೃತಾऽಸಿ ವರಾಹೇಣ ಕೃಷ್ಣೇನ ಶತಬಾಹುನಾ....’ ಎಂಬ ಮಂತ್ರದಲ್ಲಿ ವರಾಹರೂಪಿ ಪರಮಾತ್ಮನು ಭೂಮಿಯನ್ನು ಹೊತ್ತಿರುವನೆಂದು ತಿಳಿಸಲಾಗುವುದಲ್ಲದೆ, ಮೃತ್ತಿಕೆಗೆ ಶುದ್ಧ ಮಾಡುವ, ಪುಷ್ಟಿ ನೀಡುವ ಸಾಮರ್ಥ್ಯವನ್ನು ನೀಡಿರುವನೆಂದೂ ಸೂಚಿಸಲಾಗಿದೆ.

ಆದ್ದರಿಂದ ಭೂಮಿಯನ್ನು ಹೊತ್ತವನು ಹಾಗೂ ಭೂಮಿಗೆ ಗೌರವ ದೊರಕುವಂತೆ ಅದರಲ್ಲಿ ಶಕ್ತಿ ತುಂಬಿಸಿರುವವನು ದೇವರು.

**ಸುಪ್ರಸಾದಃ ಪ್ರಸನ್ನಾತ್ಮಾ ವಿಶ್ವಧೃಗ್ ವಿಶ್ವಭುಗ್ ವಿಭುಃ |**
**ಸತ್ಕರ್ತಾ ಸತ್ಕೃತಃ ಸಾಧುರ್ಜಹ್ನುರ್ನಾರಾಯಣೋ ನರಃ || ೨೬ ||**

**೨೩೯. ಸುಪ್ರಸಾದಃ – ಯಾರ ಪ್ರಸಾದದಿಂದಾಗಿ ಎಲ್ಲವನ್ನೂ ಹೊಂದಬಹುದೋ ಅಂತಹ ಒಳ್ಳೆಯ ಪ್ರಸಾದ ಉಳ್ಳವನು.**

ವಿವರಣೆ : ಒಳ್ಳೆಯ ಪ್ರಸಾದ, ಪ್ರಸನ್ನತೆ ಉಳ್ಳವನೇ ಸುಪ್ರಸಾದ. ಭಗವಂತನ ಪ್ರಸನ್ನತೆಯಿಂದ ಹೊಂದಲು ಆಗದಿರುವಂತಹದ್ದೇ ಇಲ್ಲ. **‘ಕಿಮಲಭ್ಯಂ ಭಗವತಿ ಪ್ರಸನ್ನೇ ಶ್ರೀನಿಕೇತನೇ’**

ಭಗವಂತ ಸಂತುಷ್ಟವಾದನೆಂದರೆ ನಾವು ಜೀವನದಲ್ಲಿ ಏನೇನನ್ನು ನಿರೀಕ್ಷಿಸುವೆವೋ, ಏನೇನನ್ನು ಅಪೇಕ್ಷಿಸುವೆವೋ ಅವೆಲ್ಲವೂ ದೊರಕುವುದು.

ಎಲ್ಲರ ಜಾತಕವನ್ನೂ ಜಾಲಾಡುವ ವಿದುರ ಸ್ತ್ರೀಯರ ಬಗ್ಗೆ ಹೀಗೊಂದು ಮಾತನ್ನು ಹೇಳುವನು –

'ಪ್ರಸಾದೋ ನಿಷ್ಫಲೋ ಯಸ್ಯ ಕ್ರೋಧಶ್ಚಾಪಿ ನಿರರ್ಥಕಃ |
ನ ತಂ ಭರ್ತಾರಮಿಚ್ಛಂತಿ ಸ್ತ್ರಿಯಃ ''

ಒಬ್ಬನ ಮೇಲೆ ಸಂತುಷ್ಟನಾದನೆಂದರೆ ಅವನಿಗೆ ಮುಂಬಡ್ತಿ ದೊರಕುವಂತಾಗಬೇಕು, ಯಾರ ಮೇಲೆ ಸಿಟ್ಟುಗೊಳ್ಳುವನೋ ಅವನಿಗೆ ನೀರಿಲ್ಲದ ಊರಿಗೆ ವರ್ಗಾವಣೆ ಆಗುವಂತಾಗಬೇಕು – ಅಂತಹ ಗಂಡಸರನ್ನೇ ಸ್ತ್ರೀ ತನ್ನ ಪತಿಯನ್ನಾಗಿ ಪಡೆಯಲು ಬಯಸುವಳು.

ಹೀಗೆ ದೇವತೆಗಳನ್ನಾಗಲೀ, ದೇವರನ್ನಾಗಲೀ ನಮ್ಮ ಬಗ್ಗೆ ಸುಪ್ರಸನ್ನರಾಗಿರಿ ಎಂದು ಬೇಡಿಕೊಳ್ಳಬೇಕು.

ಭೀಷ್ಮರು ಕೃಷ್ಣನಲ್ಲಿ ನಿವೇದಿಸಿಕೊಳ್ಳುವರು – ನೀನು ಎನ್ನ ಬಗ್ಗೆ ಸರ್ವದಾ ಸುಪ್ರಸನ್ನನಾಗಿಯೇ ಇದ್ದವನು. ಆದುದರಿಂದಲೇ ಜೀವನದಲ್ಲಿ ನಾನು ಏನೇನನ್ನು ಸಂಕಲ್ಪಿಸಿದ್ದೆನೋ ಅವೆಲ್ಲ ಈಡೇರಿವೆ.

**೨೪೦. ಪ್ರಸನ್ನಾತ್ಮಾ – ಯಾವಾಗಲೂ ಸಂತುಷ್ಟವಾದ ಸ್ವರೂಪವುಳ್ಳವನು.**

**ವಿವರಣೆ :** ನಮ್ಮ ಮೇಲೆ ಭಗವಂತನ ಪ್ರಸಾದ ಮಾಡುವನು, ದುರ್ಯೋಧನನ ಮೇಲೆ ಸಿಟ್ಟು ಮಾಡುವನು – ಇಲ್ಲ. ದೇವರು ಒಂದೇ ರೀತಿಯಾಗಿ ಇರುವನು. ಯಾರ ಮೇಲೂ ದೇವರು ಸಿಟ್ಟುಗೊಳ್ಳುವುದೆಂದೇ ಇಲ್ಲ. ಹಾಗಾದರೆ ದೇವರಿಗೆ ಸಿಟ್ಟು ಬಂದಂತೆ ಕಂಡಿತಲ್ಲಾ ? ಹೌದು. ಸಿಟ್ಟು ಬಂದಂತೆ ಕಂಡದ್ದಷ್ಟೇ. ಉಳಿದವರು ಸಿಟ್ಟಿಗೆದ್ದದ್ದರಿಂದ ದೇವರೂ ಸಿಟ್ಟಿಗೆದ್ದಂತೆ ಕಾಣುವುದಷ್ಟೇ. ಲೋಕ ಇರುವ ಕ್ರಮದಲ್ಲೇ ಇರುವುದಾದರೂ ಹಳದಿರೋಗ ಬಂದವನಿಗೆ ಲೋಕವೆಲ್ಲ ಹೇಗೆ ಹಳದಿಯಾಗಿ ಕಾಣುವುದೋ ಹಾಗೆ. ನಮ್ಮ ಮನಸ್ಸು ವ್ಯಗ್ರವಾಗಿದ್ದರೆ ಮುಂದೆ ಇರುವವರನ್ನೂ ಹಾಗೆಯೇ ಕಾಣುವೆವು. ನಾವು ಸಿಟ್ಟಿಗೆದ್ದಿದ್ದರೆ ಎದುರಾಳಿಯನ್ನೂ ಸಿಟ್ಟಿಗೆದ್ದವನಂತೆ ಕಾಣುವೆವು. ದುರ್ಯೋಧನ ಸಿಟ್ಟಿನವನಾದುದರಿಂದ ಕೃಷ್ಣನನ್ನೂ ಸಿಟ್ಟಿನವನೆಂದು ಕಂಡನೇ ಹೊರತು **'ನ ಮೇ ದ್ವೇಷ್ಯೋಽಸ್ತಿ ನ ಪ್ರಿಯಃ'**

ಎಂದಿರುವಂತೆ ಭಗವಂತನಿಗೆ ಬೇಡದವನೆಂದು ಇಲ್ಲ.

ಆದ್ದರಿಂದ ಭಗವಂತ ‘ಪ್ರಸನ್ನಾತ್ಮಾ’– ಯಾವಾಗಲೂ ಅನುಗ್ರಹೋನ್ಮುಖನಾಗಿಯೇ ಇರುವವನು. ಎದುರಿಗೆ ಹೋಗುವವರ ಭಾವನೆಗೆ ಅನುಗುಣವಾಗಿ ಫಲ ಸಿದ್ಧಿಸುವುದೇ ಹೊರತು ದೇವರು ಯಾವಾಗಲೂ ಅನುಗ್ರಹೋನ್ಮುಖನಾಗಿಯೇ ಇರುವನು.

ದೇವರ ಪ್ರತಿಮೆಗಳ ಕೈಗಳಲ್ಲಿ ವರಾಭಯ ಮುದ್ರೆಗಳಿರುವವು. ಯಾವ ವ್ಯಕ್ತಿ ಎದುರಿಗೆ ಬಂದರೂ ವರಾಭಯ ಮುದ್ರೆಗಳೇ. ಅಂದರೆ ಪ್ರತಿಮೆಯ ಸನ್ನಿಹಿತನಾದ ದೇವರು ಯಾವಾಗಲೂ ‘ಪ್ರಸನ್ನತ್ಮಾ’ – ಸಂತುಷ್ಟ ಸ್ವರೂಪಿ ಎನಿಸಿದ್ದು, ಎಲ್ಲರಿಗೂ ಅಭಯ ನೀಡಲೂ, ವರಗಳನ್ನು ಅನುಗ್ರಹಿಸಲೂ ಸಿದ್ಧನಾಗಿರುವನೆಂದು ಸೂಚಿತವಾಗುವುದು.

ಯಾವಾಗಲೂ ರೇಗಾಡುವ ಸ್ವಭಾವ ದೇವರದ್ದಲ್ಲ. ರೇಗಾಡಿದರೆ ದೇವರು ಎನಿಸಲಾರ. ನಾವು ದೇವರಲ್ಲ. ಯಾಕೆಂದರೆ ರೇಗಾಡ್ತೇವೆ. ಆದುದರಿಂದ ದೇವರು ರೇಗಾಡುವುದಿಲ್ಲವಾದುದರಿಂದಲೇ ‘ದೇವರು’ ಎನಿಸಿರುವನು.

ಹೀಗೆ ದೇವರನ್ನು ‘ಪ್ರಸನ್ನಾತ್ಮಾ’– ಯಾವಾಗಲೂ ಶಾಂತ ಸ್ವರೂಪಿಯಾಗಿದ್ದು, ನನಗೂ ಅಂತಹ ಪ್ರಸನ್ನತೆಯನ್ನು ಅನುಗ್ರಹಿಸು ಎಂದು ಉಪಾಸನೆ ನಡೆಸಬೇಕು.

**೨೪೧. ವಿಶ್ವಧೃಕ್ – ಜಗತ್ತಿನಲ್ಲಿ ನಿರ್ಭೀತಿಯಿಂದ ಇರುವವನು.**

**ವಿವರಣೆ:** ಪ್ರಾಯಶಃ ಜಗತ್ತಿನಲ್ಲಿ ಯಾವುದೇ ಭಯ ಇಲ್ಲದ ಒಂದು ಶಕ್ತಿ ಎಂದಿದ್ದರೆ ಅದು ಒಬ್ಬನೇ. ಯಾರು ? ನೀನೇ ಎನ್ನುವರು ಭೀಷ್ಮರು ಕೃಷ್ಣನನ್ನು ಕುರಿತು. ಧೃಕ್ ಶಬ್ದಕ್ಕೆ ನಿರ್ಭೀತಿಯಿಂದ ಇರುವವನು ಎಂದರ್ಥ. ವಿಶ್ವ ಎಂದರೆ ಜಗತ್ತು. ಅದರಲ್ಲಿ ಎಲ್ಲ ಬಂತು. ಸಾಯುವ ಹಾಗೂ ಸಾಯದ ಜಗತ್ತು. ಸಾಯುವ ಜಗತ್ತು ಎಂದರೆ ಸಂಸಾರ. ಸಾಯದ ಜಗತ್ತು ಮುಕ್ತಿ. ಸಂಸಾರದಲ್ಲೂ ಜೀವಿಗಳಿದ್ದಾರೆ, ಮುಕ್ತಿಯಲ್ಲೂ ಜೀವಿಗಳಿದ್ದಾರೆ. ಎರಡು ಕಡೆಗಳಲ್ಲೂ ನಿರ್ಭೀತಿಯಿಂದ ಇರುವವನೆಂದರೆ ದೇವರೊಬ್ಬನೇ. ಯಾವುದೇ ದೇಶದಲ್ಲಿ ಯಾವುದೇ ಕಾಲದಲ್ಲಿ ಯಾವ ಪ್ರಸಂಗದಲ್ಲೂ, ಯಾವುದೇ ವ್ಯಕ್ತಿಯಿಂದ ಭಯರಹಿತನಾದವನೇ ‘ವಿಶ್ವಧೃಕ್’.

ಸಂಧಾನಕ್ಕಾಗಿ ದುರ್ಯೋಧನಾದಿಗಳಲ್ಲಿಗೆ ಹೋಗುವಾಗ ಕೃಷ್ಣ ತನ್ನ ಜೊತೆಗೆ ಯಾರನ್ನೂ ಕರಕೊಂಡು ಹೋಗಲೇ ಇಲ್ಲ. ಯುಧಿಷ್ಠಿರ ತನ್ನ

ಸಮಾಧಾನಕ್ಕಾಗಿ ಕೃಷ್ಣನ ಜೊತೆಗೆ ಸೇನೆಯನ್ನು ಕಳುಹಿಸಿದ್ದರೂ ಕೃಷ್ಣನಿಗೆ ಅದರ ಅಪೇಕ್ಷೆ ಇರಲಿಲ್ಲ. ಹಸ್ತಿನಪುರದಲ್ಲಿ ದುರ್ಯೋಧನಾದಿಗಳನ್ನು ಕಡೆಗಣಿಸಿ ನೇರವಾಗಿ ವಿದುರನಲ್ಲಿಗೆ ಹೋದ. ಸಭೆಯಲ್ಲಿ ದುರ್ಯೋಧನಾದಿಗಳು ಬಂಧಿಸಲು ಸಂಚು ಹೂಡುತ್ತಿದ್ದಾರೆ, ಸ್ವಲ್ಪ ಎಚ್ಚರಿಕೆಯಿಂದ ಇರು, ಎಂದು ವಿದುರ ಎಚ್ಚರಿಸಲು, ನಿದ್ದೆಯನ್ನೇ ಮಾಡದ, ಭಯಕ್ಕೇ ಒಳಗಾಗದ, ನಾನು ಯಾರದ್ದೇ ವಿಷಯದಲ್ಲಿ ಯಾಕೆ ಎಚ್ಚರಿಕೆಯಿಂದ ಇರಬೇಕು–ಎಂದು ಕೇಳಿದ. ದುರ್ಯೋಧನ ನೋಡುತ್ತಿರುವಂತೆಯೇ ಕರ್ಣನನ್ನೂ, ಅಶ್ವತ್ಥಾಮಾಚಾರ್ಯರನ್ನು ತನ್ನ ಜೊತೆಗೆ ಕರಕೊಂಡು ಹೊರಟ. ದುರ್ಯೋಧನ ಏನು ಮಾಡ್ತಾನೋ ಏನೋ ಎಂಬ ಭಯಕ್ಕೆ ಅವಕಾಶವೇ ಇಲ್ಲ.

ಯಾರು ಭಯಪಡುವುದು? ಯಾಕೆ ಭಯಪಡುವುದು? ನಮಗಿಂತ ಒಬ್ಬ ಬಲಿಷ್ಠ ಇದ್ದು, ಅವನಿಗೇನಾದರೂ ನಾವು ಅನ್ಯಾಯ ಮಾಡಿದ್ದರೆ ಅವನು ಹೇಳಿದ ಕ್ರಮದಲ್ಲಿ ನಾವು ಇರಲಿಲ್ಲ ಎಂದರೆ, ಅವನಿಗೆ ವಿರುದ್ಧವಾಗಿ ನಡೆದುಕೊಂಡೆವೆಂದರೆ ಅವನಿಗೆ, ಆ ವಿಷಯದಲ್ಲಿ ನಾವು ಭಯ ಪಡಬೇಕು.

ಕೃಷ್ಣನಿಗೆ ಅಂತಹ ಪ್ರಸಂಗವೇ ಇಲ್ಲ. ಅವನಿಗೆ ಒಬ್ಬ ಹೇಳುವವರು ಎಂದು ಇದ್ದರೆ ತಾನೇ – ಅವನು ಅವರಿಗೆ ವಿರುದ್ಧವಾಗಿ ನಡೆದುಕೊಂಡು, ಅವರಿಗಾಗಿ ಭಯಪಡುವ ಪ್ರಸಂಗ! ಆದರೆ ಕೃಷ್ಣನಿಗೆ ಹಾಗೆ ಹೇಳುವವರಾಗಲೀ, ಕೇಳುವವರಾಗಲೀ ಯಾರೂ ಇಲ್ಲ. ನಮಗಾದರೂ ವೇದ ಇದೆ. ಅದಕ್ಕೆ ವಿರುದ್ಧವಾಗಿ ನಡೆದುಕೊಂಡೆವೆಂದರೆ ನರಕಕ್ಕೆ ಭಯಪಡಬೇಕಾಗುವುದು. ಆದರೆ ಹೇಳುವವರು ಕೇಳುವವರು ಇಲ್ಲದ ಒಬ್ಬನೇ ಒಬ್ಬ ವ್ಯಕ್ತಿ ಎಂದರೆ ಕೃಷ್ಣ ಎಂದ ಮೇಲೆ ಅವನು ಯಾರಿಗೂ ಭಯಪಡುವ ಪ್ರಸಂಗವೇ ಇಲ್ಲ ಎಂದೇ ಭೀಷ್ಮರು ಅವನನ್ನು 'ವಿಶ್ವಧೃಕ್' ಎಂದು ಸ್ತುತಿಸಿರುವರು.

ಭಗವಂತನನ್ನು 'ವಿಶ್ವಧೃಕ್' ಎಂದು ಉಪಾಸನೆ ಮಾಡಿದೆವೆಂದರೆ ಜಗತ್ತಿನಲ್ಲಿ ಯಾರಿಗೂ ಭಯಪಡಬೇಕಾದ ಪ್ರಸಂಗ ಬರುವುದಿಲ್ಲ.

**೨೪೨. ವಿಶ್ವಭುಕ್ – ಎಲ್ಲ ಬಗೆಯ ಬೈಗುಳ ಮಾತುಗಳನ್ನೂ ಜೀರ್ಣಿಸಿಕೊಳ್ಳುವವನು.**

**ವಿವರಣೆ :** ಎಲ್ಲವನ್ನೂ ನುಂಗುವವನು, ಎಲ್ಲವನ್ನೂ ತನ್ನೊಳಗೆ ಸೇರಿಸಿಕೊಳ್ಳುವವನು. ಜಾರ, ಚೋರ..... ಮುಂತಾದ ಎಂತಹ ಮಾತು ಬಂದರೂ ಅವನ್ನೆಲ್ಲ ಜೀರ್ಣಿಸಿಕೊಳ್ಳುವ ತಾಕತ್ತು ದೇವರಲ್ಲಿದೆ. ಒಳ್ಳೆಯ ಕೆಲಸ ಮಾಡಲು

ಹೊರಟಾಗ ಸಮಾಜದಲ್ಲಿ ಅವಮಾನಕ್ಕೆ ಪ್ರಯೋಜಕಗಳಾದ ನಾನಾ ಮಾತುಗಳು ಬಂದರೆ ಅವನ್ನೆಲ್ಲ ಜೀರ್ಣಿಸಿಕೊಳ್ಳುವ ತಾಕತ್ತೇ 'ವಿಶ್ವಭುಕ್' ಎಂಬ ನಾಮದಿಂದ ಸೂಚಿತವಾಗಿದೆ.

**೨೪೩. ವಿಭುಃ – ನಾನಾ ರೂಪಗಳನ್ನು ತಾಳುವವನು.**

**ವಿವರಣೆ :** 'ವಿಭು' 'ಪ್ರಭು' ಸಾಮಾನ್ಯವಾಗಿ ಒಂದೇ ಅರ್ಥದ ಶಬ್ದಗಳಂತೆ ಕಾಣಿಸುವವು. ಆದರೆ ಶ್ರೀ ಮಧ್ವರು ಅವುಗಳ ವೈಲಕ್ಷಣವನ್ನು ಹೀಗೆ ಸ್ಪಷ್ಟಪಡಿಸಿರುವರು – 'ವಿವಿಧತಯಾ ಭವತೀತಿ ವಿಭುಃ' ನಾನಾ ರೀತಿಯಲ್ಲಿ ಇರುವವನು, ನಾನಾ ರೂಪಗಳನ್ನು ತಾಳುವವನು. ಚೋರತ್ವಕ್ಕೆ ಒಂದು ಬೇರೆಯೇ ರೂಪ. ಜಾರತ್ವಕ್ಕೆ ಒಂದು ಬೇರೆಯೇ ರೂಪ. ಅಧ್ಭುತತ್ವಕ್ಕೆ ಅದ್ಭುತವಾದ ರೂಪ. ಒಂದೊಂದು ಹೆಣ್ಮಗಳ ಬಳಿ ಭಗವಂತನದು ಒಂದೊಂದು ರೂಪ. ಹೆಣ್ಮಕ್ಕಳು ಬೇರೆ ಬೇರೆ ಇದ್ದಾರೆ, ಆದರೆ ಭಗವಂತ ಒಬ್ಬನೇ. ನಾನಾ ರೂಪಗಳನ್ನು ಧರಿಸಿ ಅವರ ಜೊತೆಗೆ ವಿಹಾರ ಮಾಡಿದ. ನಾವೂ ಕರೀತೇವೆ ದೇವರನ್ನು, ನೀವೂ ಕರೀತೀರಿ ದೇವರನ್ನು. ಮತ್ತೊಬ್ಬನೂ ಕರೀತಾನೆ. ಯಾರು, ಎಲ್ಲಿ ಯಾವಾಗ ಕರೆದರೂ ಕೂಡ ತಾನು ತಯಾರು ಎನ್ನುವನು ಭಗವಂತ. ಇದು ಯಾರಿಗೆ ಸಾಧ್ಯ? 'ವಿಭು' ಎನಿಸಿದವನಿಗಷ್ಟೇ ಸಾಧ್ಯ.

'ಪ್ರಭು' ಎನಿಸುವವನು ಒಂದೇ ಕಡೆಯಲ್ಲಿದ್ದುಕೊಂಡು ಬೇರೆ ಬೇರೆಯವರಿಂದ ಬೇರೆ ಬೇರೆ ಕೆಲಸ ಮಾಡಿಸುವವನಾದರೆ, 'ವಿಭು' ಎನಿಸುವವನು ಅಲ್ಲೆಲ್ಲ ಇದ್ದುಕೊಂಡು ಬೇರೆ ಬೇರೆ ಕೆಲಸ ಮಾಡಿಸುವವನು. ಭೀಷ್ಮರು ಕೃಷ್ಣನಲ್ಲಿ ಅನ್ನುವರು – ನೀನು ವಿಭು. ಯಾರಿಂದ ಏನು ಕೆಲಸ ಮಾಡಿಸಬೇಕೋ ಅಲ್ಲಿದ್ದುಕೊಂಡು ಅವರಿಂದ ಆಯಾ ಕೆಲಸ ಮಾಡಿಸುವವನು. ನನ್ನ ಬಳಿಯಲ್ಲಿ ಹೇಗೆ ಕುಳಿತಿರುವಿಯೋ ಹಾಗೆಯೇ ಅಲ್ಲಿ ಧೃತರಾಷ್ಟ್ರನ ಬಳಿಯಲ್ಲೂ ಕುಳುತಿರುವಿ. ಗಾಂಧಾರಿಯ ಬಳಿಯಲ್ಲೂ ಕುಳಿತಿರುವಿ. ಆದುದರಿಂದ ನೀನು ವಿಭು.

**೨೪೪. ಸತ್ಕರ್ತಾ – ಸ್ವತಂತ್ರವಾಗಿ ಮಾಡುವಿಕೆ ಉಳ್ಳವನು.**

**ವಿವರಣೆ :** ಒಳ್ಳೆಯ ರೀತಿಯಲ್ಲಿ ಮಾಡುವವನೇ 'ಸತ್ಕರ್ತಾ'. ಸ್ವತಂತ್ರವಾಗಿ ಮಾಡುವುದೇ ಒಳ್ಳೆಯ ರೀತಿಯಲ್ಲಿ ಮಾಡುವುದು. ಆದುದರಿಂದ ಸತ್ಕರ್ತಾ ಎನ್ನುವುದಕ್ಕೆ ಸ್ವತಂತ್ರವಾಗಿ ಮಾಡುವವನು ಎಂಬ ಅರ್ಥ. ಎಷ್ಟೋ ಬಾರಿ ಒಳ್ಳೆಯ ಕೆಲಸವನ್ನೇ ಮಾಡಬೇಕೆಂದು ತೊಡಗ್ತೇವೆ. ಆದರೆ ಅದನ್ನು ಮುಂದುವರಿಸಲಾಗುವುದಿಲ್ಲ. ಯಾಕೆ ? ಅದನ್ನು ಮುಂದುವರಿಸಿಕೊಂಡು

ಹೋಗಬೇಕಾದ ಸ್ವಾತಂತ್ರ್ಯ ನಮ್ಮಲ್ಲಿಲ್ಲ. ನಾವೇನೋ ಮಾಡಬೇಕೆಂದು ಸಂಕಲ್ಪ ಮಾಡಿದ್ದರೂ, ದೈವ ಸಂಕಲ್ಪ ಮಾಡಿರುವುದಿಲ್ಲ. ಆದುದರಿಂದ ನಮ್ಮ ಕೆಲಸ ಅರ್ಧದಲ್ಲಿ ನಿಂತು ಹೋಗುವುದು. ಕೆಲಸ ಅರ್ಧದಲ್ಲಿ ನಿಂತಿತೆಂದರೆ, ಹಿರಿಯರು ಟೀಕಿಸ್ತಾರೆ – ಏನಿದು ? ಅರ್ಧದಲ್ಲಿ ನಿಲ್ಲಿಸಲಾಗಿದೆ ?ಇದೇನು ಒಳ್ಳೆಯ ಕೆಲಸವಲ್ಲವೇನೋ? – ಎಂದು. ಆದ್ದರಿಂದ ಸ್ವತಂತ್ರವಾಗಿ ಮಾಡುವವನೇ 'ಸತ್ಕರ್ತಾ'.

ಹಿರಿಯರು ಒಂದು ಮಾತು ಅಂದರು –''ಅಸತ್ಕರ್ತಾ ತು ಜೀವಃ ಸ್ಯಾತ್ ಸತ್ಕರ್ತಾ ಪರಮೇಶ್ವರಃ'' – ಜೀವರಾದ ನಾವೂ ಕೆಲಸಗಳನ್ನು ಮಾಡುವೆವು. ಆದರೆ ನಮ್ಮನ್ನು 'ಅಸತ್ಕರ್ತಾ' – ಎಂದು ಕರೆದರು. ಅಸತ್ಕರ್ತಾ ಎಂದರೆ ಅಸ್ವತಂತ್ರನಾಗಿ ಮಾಡಿದವನು. ಸಂಕಲ್ಪ ಮಾಡಿದ್ದನ್ನೆಲ್ಲ ಕೃತಿಯಲ್ಲಿ ಇಳಿಸಲಿಕ್ಕೆ ಆಗದಿರುವುದೇ ಅಸ್ವಾತಂತ್ರ್ಯ. ಎಣಿಸಿದ್ದನ್ನು ಮಾಡಲಿಕ್ಕೆ ಆಗದೆ ಇರುವುದೇ ಅಸ್ವಾತಂತ್ರ್ಯ. ಆದ್ದರಿಂದ ನಾವೆಲ್ಲ 'ಅಸತ್ಕರ್ತರು'. ಅಸ್ವತಂತ್ರಕರ್ತರು. ಒಬ್ಬನೇ ಭಗವಂತ 'ಸತ್ಕರ್ತಾ'– ಸ್ವತಂತ್ರನಾಗಿ ಕರ್ತಾ. ಯಾರು ಹೇಳಿಯೂ ಅವನು ಮಾಡುವುದಿಲ್ಲ. ತನಗೆ ತೋಚಿದ್ದೆಲ್ಲವನ್ನೂ ಮಾಡುವನು. ಸಂಕಲ್ಪಿಸಿದ್ದೆಲ್ಲವನ್ನೂ ಮಾಡುವನು.

ಕೃಷ್ಣನಾಗಿ ಧರೆಗೆ ಇಳಿಯುವಾಗಲೇ ಯಾರ ಯಾರ ಸಂಹಾರ ಆಗಬೇಕು? ಉದ್ಧಾರ ಹೇಗೆ ಹೇಗೆ ಆಗಬೇಕು? ಎಂದೆಲ್ಲ ಸಂಕಲ್ಪಿಸಿಯೇ ಇರುವನು. ಅದಕ್ಕನುಗುಣವಾಗಿಯೇ ಹಿಂದೆಯೂ ಮುಂದೆಯೂ ನಡೆಯುವುದು.

**"ಹರಿಚಿತ್ತ ಸತ್ಯ ಹರಿಚಿತ್ತ, ನರಚಿತ್ತಕ್ಕೆ ಬಂದದು ಲವಲೇಶ ನಡೆಯದು, ಹರಿಚಿತ್ತ ಸತ್ಯ"** – ಸಹಸ್ರನಾಮದ 'ಸತ್ಕರ್ತಾ' ನಾಮಕ್ಕೆ ದಾಸರದ್ದೊಂದು ಹಾಡು. ಪ್ರಾಯಶಃ ಸಹಸ್ರನಾಮದ ಒಂದೊಂದು ನಾಮಕ್ಕೂ ಬೇರೆ ಬೇರೆ ಹರಿದಾಸರ ಹಾಡುಗಳು ಇರುವವು. ಪ್ರತಿನಿತ್ಯ ಸಹಸ್ರನಾಮವನ್ನು ಪಠಿಸುತ್ತಿದ್ದ ದಾಸರು, ಅದರ ಒಂದೊಂದೂ ನಾಮವೂ ಅರ್ಥವಾಗಬೇಕೆಂದು ಅದನ್ನು ಕನ್ನಡೀಕರಿಸಬೇಕು. ಹಾಡು ರಚನೆಯ ಮೂಲಕವೇ ಕನ್ನಡೀಕರಿಸುತ್ತಿದ್ದರು.

**೨೪೫. ಸತ್ಕೃತಃ – ಒಳ್ಳೆಯ ರೀತಿಯಲ್ಲಿ ಸತ್ಕರಿಸಲ್ಪಡುವವನು.**

*** ಸತ್ಕೃತಿಃ – ಒಳ್ಳೆಯ ಪ್ರಯತ್ನ ಉಳ್ಳವನು**

**ವಿವರಣೆ :** ದೇವರು ಬರುವನೆಂದರೆ ಯಾರೂ ಬೇಡವೆನ್ನಲಾರರು. ದೇವರ ಬರುವಿಕೆ ಎಲ್ಲರಿಂದಲೂ ಅಪೇಕ್ಷಿತ.

ದುರ್ಯೋಧನನೇ ಒಂದು ಮಾತು ಅಂದಿದ್ದಾನೆ–

"ಸ ಹಿ ಪೂಜ್ಯತಮಃ ಲೋಕೇ ........."

ಹಿಂದೆ ಭೀಮನ ಬಗ್ಗೆಯೂ ಒಂದು ಒಳ್ಳೆಯ ಮಾತು ಅಂದಿದ್ದ. ಅದರಂತೆಯೇ ಕೃಷ್ಣನ ಬಗ್ಗೆಯೂ ಇಂತಹ ಮಾತು ಹೇಳಿರುವನು. ಹೀಗೆ ಗುರುಗಳ ಬಗ್ಗೆ ಒಳ್ಳೆಯ ಮಾತು ದುರ್ಯೋಧನನ ಬಾಯಿಯಿಂದಲೂ ಹೊರಹೊಮ್ಮಿತ್ತು.

'ಸಹಿ ಪೂಜ್ಯತಮಃ ಲೋಕೇ .......' – ಅವನೇ ಲೋಕದಲ್ಲಿ ಪೂಜ್ಯನೆನಿಸಿರುವನು. ಬರೇ ಪೂಜ್ಯನಲ್ಲ 'ಪೂಜ್ಯತಮ' ಅಂದರೆ ಕೃಷ್ಣನನ್ನು ಬಿಟ್ಟರೆ ಅವನಿಗಿಂತ ಎತ್ತರದ ಪೂಜ್ಯತ್ವವುಳ್ಳವನು ಮತ್ತೊಬ್ಬನಿಲ್ಲ.

**ಸಹಿ ಪೂಜ್ಯತಮಃ ಲೋಕೇ ಕೃಷ್ಣಃ ಪೃಥುಲಲೋಚನಃ |**
**ತ್ರಯಾಣಾಮಪಿ ಲೋಕಾನಾಂ ವಿದಿತಂ ಮಮ ಸರ್ವಥಾ ||**

ವಿಶಾಲ ನೇತ್ರವುಳ್ಳ ಕೃಷ್ಣನೇ, ಮೂರು ಲೋಕಗಳಲ್ಲೂ ಅತ್ಯಧಿಕ ಪೂಜ್ಯ ಎನ್ನುವುದು ನನಗೆ ಗೊತ್ತಿದೆ.

ಆದರೆ ಪೂಜಿಸಬೇಕು ಎಂದು ಮಾತ್ರ ಅನಿಸುವುದಿಲ್ಲ.

'ಜಾನಾಮಿ ಧರ್ಮಂ .......' – ಧರ್ಮ ಎನಿಸುವ ಕೃಷ್ಣ ಅತ್ಯಧಿಕ ಪೂಜ್ಯ ಎಂದು ತಿಳಿದಿದ್ದೇನೆ. ಆದರೆ '....... ನ ಚ ಮೇ ಪ್ರವೃತ್ತಿಃ' ಅವನನ್ನು ಪೂಜಿಸಬೇಕೆಂದು ಮಾತ್ರ ನನಗೆ ತೋರುವುದಿಲ್ಲ. ಅಪ್ಪ ಎಂದು ಗೊತ್ತು ಆದರೆ ಅವನ ಮಾತನ್ನು ಕೇಳಲು ಸಿದ್ಧನಿಲ್ಲ – ಎಂದಂತೆ

ಹೀಗೆ ಶ್ರೀಕೃಷ್ಣ ದುರ್ಯೋಧನನಿಂದಲೂ 'ಸತ್ಕೃತ' – ಎಂದು ಒಪ್ಪಲ್ಪಟ್ಟಿದ್ದಾನೆಂದರೆ, ಇನ್ನಾರೂ ಅವನನ್ನು 'ಸತ್ಕೃತ' ಅಲ್ಲ ಅನ್ನಲು ಸಾಧ್ಯವೇ ಇಲ್ಲ. ಯಾಕೆಂದರೆ ಅತ್ಯಂತ ದುಷ್ಟನಾದ ದುರ್ಯೋಧನನೇ ದುಷ್ಟತನದಲ್ಲಿ ಅತ್ಯಂತ ಎತ್ತರದವನಾಗಿದ್ದು, ಇನ್ನಾರೂ ಅವನಷ್ಟು ದುಷ್ಟರು ಇರಲು ಸಾಧ್ಯವೇ ಇಲ್ಲ ತಾನೇ?

ಪರಿಶ್ರಮಸಾಧ್ಯವಾದ ಕೆಲಸ ಮಾಡಲು ತೊಡಗುವಾಗ ಭಗವಂತನನ್ನು 'ಸತ್ಕರ್ತಾ'- ಎಂದು ಉಪಾಸನೆ ಮಾಡಿದಲ್ಲಿ ಆ ಕೆಲಸ ಅನಾಯಾಸವಾಗಿ ನೆರವೇರುವಂತೆ ಅನುಗ್ರಹಿಸುವನು. 'ಸತ್ಕೃತ'- ಎಂದು ಭಗವಂತನ ಉಪಾಸನೆ ನಡೆಸಿದಲ್ಲಿ ಸಮಾಜದಲ್ಲಿ ನಮ್ಮ ಯೋಗ್ಯತೆಗನುಗುಣವಾಗಿ ಸತ್ಕಾರ, ಗೌರವ ನಮಗೆ ದೊರಕಬಲ್ಲದು.

'ಸತ್ಕೃತಃ'- ಎಂಬ ಪಾಠದ ಬದಲು 'ಸತ್ಕೃತಿಃ'- ಎಂದು ಪಾಠ ಇರುವುದಾದರೆ ಹೀಗೆ ಅರ್ಥೈಸಿಕೊಳ್ಳಬೇಕು – ಕೃತಿ ಎಂದರೆ ಪ್ರಯತ್ನ. ಒಳ್ಳೆಯ ಪ್ರಯತ್ನ ಉಳ್ಳವನೇ

ಸತ್ಕೃತಿ. ಭಗವಂತನ ಪ್ರತಿಯೊಂದು ಪ್ರಯತ್ನವೂ ಒಳ್ಳೆಯದ್ದು. ಅಂದರೆ ಯಾವ ಕೆಲಸಕ್ಕಾಗಿ ಪ್ರಯತ್ನ ಮಾಡಲ್ಪಡುವುದೋ ಆ ಪ್ರಯತ್ನದಿಂದ ಆ ಕಾರ್ಯ ಈಡೇರದೆ ಇರುವುದೇ ಇಲ್ಲ.

**೨೪೬. ಸಾಧುಃ – ಎಲ್ಲವನ್ನೂ ಸಿದ್ಧಿಸಿಕೊಂಡವನು.**

**ವಿವರಣೆ :** 'ರಾಧ ಸಾಧ ಸಂಸಿದ್ಧೌ'- ಎಂಬ ಕ್ರಿಯಾಪದದಿಂದ ರೂಪುಗೊಡ ಸಾಧು ಶಬ್ದದ ಅರ್ಥ ಎಲ್ಲ ಸಿದ್ಧಿ ಉಳ್ಳವನು.

'ಭಾಗ್ಯದ ಲಕ್ಷ್ಮೀಬಾರಮ್ಮ.....'- ಎಂಬ ಪದ್ಯದಲ್ಲಿ 'ಸಜ್ಜನ ಸಾಧು ಪೂಜೆಯ ವೇಳೆಗೆ ಮಜ್ಜಿಗೆ ಒಳಗಿನ ಬೆಣ್ಣೆಯಂತೆ.....'- ಎಂಬುದಾಗಿ ಸಜ್ಜನರು ಮಾಡುವ ಸಾಧುವಿನ ಪೂಜೆಯ ವೇಳೆಗೆ ಮಜ್ಜಿಗೆ ಒಳಗಿನ ಬೆಣ್ಣೆಯಂತೆ ಬರಲು ಲಕ್ಷ್ಮೀದೇವಿಯಲ್ಲಿ ಪ್ರಾರ್ಥಿಸಲಾಗುವುದು. ಹೀಗೆ ಎಲ್ಲ ಸಿದ್ಧಿವುಳ್ಳ ಭಗವಂತನನ್ನು ಇಲ್ಲಿ 'ಸಾಧು' ಹೆಸರಿನಿಂದ ಉಲ್ಲೇಖಿಸಲಾಗಿದೆ. ಆದುದರಿಂದ ನಾವು 'ಸಾಧು ಸಂತರು...' ಬಂದರು ಎಂಬುದಾಗಿ ಭಗವಂತನನ್ನೂ ಸಿದ್ಧಿಸಿಕೊಂಡು ಬಿಟ್ಟಿದ್ದಾರೆ, ಒಂದು ವೇಳೆ ಸಿದ್ಧಿಸಿಕೊಳ್ಳದಿದ್ದರೂ ಆ ಪರಂಪರೆಯಲ್ಲಿ ಬಂದಿದ್ದಾರೆ ಎಂಬ ದೃಷ್ಟಿಯಿಂದ ಹಾಗೆ ಉಲ್ಲೇಖಿಸುವೆವು. 'ಕಾವಿ' ಎಲ್ಲವನ್ನೂ ಸಿದ್ಧಿ ಮಾಡಿಕೊಂಡ ಸಂಕೇತ ಎಂದು ಇಟ್ಟುಕೊಂಡು ಕಾವಿ ತೊಟ್ಟವರು ಬಂದರೆಂದರೆ ಸಾಧುಗಳು ಬಂದರು ಎಂದು ವ್ಯವಹರಿಸಲಾಗುವುದು.

ಭೀಷ್ಮರು ಸಾಧುನಾಮದಿಂದ ಕೃಷ್ಣನನ್ನು ಸ್ತುತಿಸುವಾಗ, ನನ್ನ ಮರಣಕ್ಕೆ ನನ್ನ ಪತ್ನಿ ವರಾಂಗಿಯೇ ನಿಮಿತ್ತಳಾಗುವಂತಾಗಬೇಕೆಂದು ವಸಿಷ್ಠರಲ್ಲಿ ಸನ್ನಿಹಿತನಾಗಿದ್ದ ಚತುರ್ಮುಖನ ಮೂಲಕ ನನಗೆ ಶಾಪಕೊಡಿಸಿದ್ದ ನೀನು ವರಾಂಗಿ ಶಿಖಂಡಿಯಾಗಿ ಬಂದು ನನ್ನ ಮರಣಕ್ಕೆ ಪ್ರಯೋಜಕಳಾಗುವಂತೆ ಮಾಡಿ, ನಿನ್ನ ಸಂಕಲ್ಪಕ್ಕನುಗುಣವಾಗಿ ಎಲ್ಲವನ್ನೂ ಸಾಧಿಸಿಯೇ ಬಿಟ್ಟೆ – ಎಂದು ಅನುಸಂಧಾನ ಮಾಡದಿರಲಾರರು.

**೨೪೭. ಜಹ್ನುಃ – * ಯಾವಾಗಲೂ ದೋಷಗಳನ್ನು ಬಿಟ್ಟಿರುವವನು.**

*** ಭಕ್ತರ ದೋಷಗಳನ್ನು ಬಿಡಿಸುವವನು.**

**ವಿವರಣೆ :** ನಾವು ಜಾಹ್ನವೀ ಎಂದು ಕೇಳಿರುವೆವು. ಗಂಗೆಗೆ ಜಾಹ್ನವೀ ಎಂಬ ಹೆಸರು. ಜಹ್ನು ಎಂಬ ಋಷಿಯ ಕಿವಿಯಿಂದ ಹೊರಬಂದ ಪ್ರಯುಕ್ತ ಗಂಗೆ ಜಾಹ್ನವೀ ಎನಿಸುವಳು. ಜಾಹ್ನವೀಹೆಸರಿನ ನಿಜವಾದ ಅರ್ಥ - ನಮ್ಮಲ್ಲಿ ನಿಮ್ಮಲ್ಲಿ ಸೇರಿಕೊಂಡ

ಪಾಪಗಳಿಂದ ನಮಗೆ ಬಿಡುಗಡೆ ನೀಡುವವಳು. 'ಗಂಗಾ ಗಂಗೇತಿ ಯೋ ಬ್ರೂಯಾತ್ ಯೋಜನಾನಾಂ ಶತೈರಪಿ| ಮುಚ್ಯತೇ ಸರ್ವಪಾಪೇಭ್ಯಃ ವಿಷ್ಣುಲೋಕಂ ಸ ಗಚ್ಛತಿ'- ಎಂದು ಗಂಗೆಯ ವೈಭವವನ್ನು ವರ್ಣನೆ ಮಾಡ್ತಾರೆ ಶಾಸ್ತ್ರಕಾರರು. ಪ್ರತಿನಿತ್ಯ ಬೆಳಿಗ್ಗೆ ಎದ್ದು 'ಗಂಗೇ ಗಂಗೇ' ಎಂದು ಗಟ್ಟಿಯಾಗಿ ಹೇಳಿದರೆ ಸಾಕು, ನಮ್ಮಲ್ಲಿರುವ ಎಲ್ಲ ಪಾಪಗಳ ಬಿಡುಗಡೆ ಆಗುವುದು. ಗಂಗೆಯಲ್ಲಿ ಇಷ್ಟು ಶಕ್ತಿ ಇದೆ. ಹೀಗೆ 'ಹಾಪಯತಿ ಪಾಪಾನಿ....' ಪಾಪಗಳಿಂದ ಬಿಡುಗಡೆ ನೀಡುವಳೆಂಬುದಕ್ಕಾಗಿ ಗಂಗೆ 'ಜಾಹ್ನವೀ' ಎನಿಸುವಳು. ಹಾಗಾದರೆ ದೇವರು ಯಾಕೆ ಜಹ್ನು ಎನಿಸುವನೆಂಬ ರಹಸ್ಯವೂ ತಿಳಿದಂತಾಯಿತು. ಜಹಾತಿ - ನಿತ್ಯಂ ದೋಷಾನ್ ಪಾಪಾನಿ ಚ - ಯಾವುದೇ ದೋಷ, ಪಾಪ ತನ್ನ ಬಳಿಗೆ ಸುಳಿಯದಂತೆ ದೂರ ಸರಿಸಿದ್ದಾನೋ ಅವನಿಗೆ ಜಹ್ನು ಎಂಬ ಹೆಸರು. ದೊಷಗಳನ್ನು, ಪಾಪಗಳನ್ನು ಬಿಟ್ಟಿದ್ದಾನೆ ಎಂದರೆ ಅದುವರೆಗೆ ಅವುಗಳು ಇದ್ದವು ಎಂದರ್ಥವಾಗುವುದು. ಅದಕ್ಕಾಗಿ 'ನಿತ್ಯಂ ಜಹಾತಿ....' ಯಾವಾಗಲೂ ಬಿಟ್ಟಿರುವವನು ಎಂದರೆ ದೋಷಗಳ, ಪಾಪಗಳ ಸಂಪರ್ಕವೇ ಅವನಿಗೆ ಇಲ್ಲ ಎಂದು ಫಲಿಸುವುದು.

ತಾನು ಮಾತ್ರವಲ್ಲ, ತನ್ನನ್ನು ಈ ಅರ್ಥದಲ್ಲಿ 'ಜಹ್ನು' ಎಂದು ಯಾರು ಉಪಾಸನೆ ಮಾಡುವರೋ ಅವರ ದೋಷಗಳನ್ನೂ ದೂರ ಮಾಡುವನು -ಹಾಪಯತಿ ದೋಷಾನ್ ಎಂಬ ಅರ್ಥದಲ್ಲೂ 'ಜಹ್ನು'- ಎನಿಸುವನು.

'ದೋಷದೂರನೆ ವಾಸುದೇವನೆ.....'- ಎಂದು ದಾಸರು 'ಜಹ್ನು' ಎನಿಸಿರುವ ನಾಮಕ್ಕೆ ಸಂಬಂಧಿಸಿದಂತೆ ಒಂದು ಹಾಡನ್ನು ರಚಿಸಿರುವರು. ದೋಷದೂರನಾಗಿ 'ಜಹ್ನು' ಎನಿಸಿರುವ ನೀನು ನನ್ನ ದೋಷಗಳನ್ನೂ ದೂರಮಾಡು ಎಂದು ಉಪಾಸನೆ ಮಾಡಬೇಕು.

'ಜಹ್ನು'- ಎಂಬ ನಾಮವನ್ನು ಪಠಿಸುವಾಗ ಹಕಾರಕ್ಕೆ ಅಡಿ ಒತ್ತಾಗಿ ನಕಾರ ಬಂದಿದೆ ಎಂಬುದನ್ನು ಮರೆಯದೆ ನಕಾರದ ಉಚ್ಚಾರಣೆಯ ಮುಂಚೆ ಹಕಾರವನ್ನೂ ಉಚ್ಚರಿಸಬೇಕು.

**೨೪೮. ನಾರಾಯಣಃ – * ನೀರಿನಲ್ಲಿ ಪವಡಿಸಿರುವವನು.**

*** ಗುಣಗಳಿಗೆ ಆಸರೆಯಾದವನು.**

*** ದೋಷ ದೂರನಾಗಿರುವವನು.**

**ವಿವರಣೆ :** ನಾರಾಯಣ ಶಬ್ದದ ಅರ್ಥ ಬಹಳ ಪ್ರಸಿದ್ಧ. ನಾರಾ ಎಂದರೆ ನೀರು. ಅಯನ ಎಂದರೆ ಆಶ್ರಯ. ಆದ್ದರಿಂದ ನೀರೇ ಆಶ್ರಯವಾಗಿ ಉಳ್ಳವನೇ ನಾರಾಯಣ.

ನೀರಿನಲ್ಲಿ ಇರುವವನು. ಇದು ಸಾಮಾನ್ಯವಾದ ಅರ್ಥ.

ಆದರೆ ನಮಗೆ ಮುಖ್ಯವಾಗಿ ಬೇಕಾಗುವ ಅರ್ಥ - ಅರ ಎಂದರೆ ದೋಷ. ದೋಷಗಳಿಗೆ ವಿರುದ್ಧಗಳಾದ ಗುಣಗಳೇ 'ನಾರ'. ಅಂತಹ ಗುಣಗಳಿಗೆ ಆಶ್ರಯನಾದವನೇ ನಾರಾಯಣ, ಗುಣಾಶ್ರಯ.

ಹೀಗೆಯೇ – ಅರಾಯಣ – ಎಂದರೆ ದೋಷಾಶ್ರಯ. ದೋಷಗಳಿಗೆ ಆಶ್ರಯನಲ್ಲದಿರುವುದರಿಂದಲೇ ನಾರಾಯಣ.

ಕಳ್ಳತನ ಮಾಡದ ವ್ಯಕ್ತಿಯಲ್ಲಿ, ಕಳ್ಳತನ ಮಾಡಿದ್ದಿಯೋ? ಎಂದು ವಿಚಾರಿಸಿದಲ್ಲಿ ಅವನಿಂದ ಹೇಗೆ ಮೊದಲು 'ಇಲ್ಲ ಇಲ್ಲ' - ಎಂಬ ಪ್ರತಿಕ್ರಿಯೆ ಬರುವುದೋ ಹಾಗೆ 'ನ' - ಅಲ್ಲ - ಎಂದು ಮೊದಲೇ ಮುಖ್ಯವಾದ ಪ್ರತಿಕ್ರಿಯೆಯನ್ನು ಸೂಚಿಸಿ, ಬಳಿಕ 'ಅರಾಯಣ' - ದೋಷಗಳಿಗೆ ಆಸರೆ' - ಎಂದು ಹೇಳಲಾಗುವುದು ಈ ಅರ್ಥದಲ್ಲಿ.

ಹೀಗೆ ಗುಣಾಶ್ರಯ, ದೋಷದೂರ ಎಂಬುದು ನಾರಾಯಣ ನಾಮದ ಎರಡು ಪ್ರಮುಖಾರ್ಥಗಳು.

**೨೪೯. ನರಃ – ಯಾವುದೇ ಬಗೆಯ ನಾಶಕ್ಕೊಳಗಾಗದವನು.**

ವಿವರಣೆ : 'ನ ರೀಯತೇ' ರೀಙ್ ಕ್ಷಯೇ – ನಾಶ ಇಲ್ಲದವನು.

ಯಾವುದೇ ರೀತಿಯಾದ ನಾಶವಿಲ್ಲದವನು ದೇವರು. ಶಾಸ್ತ್ರಕಾರರು ಅನೇಕ ಬಗೆಯ ನಾಶಗಳನ್ನು ಗುರುತಿಸುವರು. ದೇಹವನ್ನು ಕಳೆದುಕೊಳ್ಳುವ ಮೂಲಕ ನಾಶವಿಲ್ಲ. ಅವಮಾನಕ್ಕೊಳಗಾಗುವ ಮೂಲಕ ನಾಶವಿಲ್ಲ. ಗಣ್ಯವ್ಯಕ್ತಿಯೊಬ್ಬನಿಗೆ ಅವಮಾನವಾದರೆ ಅವನು ಸತ್ತ ಎನ್ನುತ್ತೇವೆ. ಒಬ್ಬ ಪ್ರಾಣ ಕಳಕೊಂಡನೆಂದರೆ ಸತ್ತ ಎನ್ನುತ್ತೇವೆ.

ಈ ಬಗೆಯ ಯಾವುದೇ ನಾಶವನ್ನು ಹೊಂದದ ಭಗವಂತನು ನರ.

**ಅಸಂಖ್ಯೇಯೋಽಪ್ರಮೇಯಾತ್ಮಾ ವಿಶಿಷ್ಟಃ ಶಿಷ್ಟಕೃಚ್ಛುಚಿಃ |**
**ಸಿದ್ಧಾರ್ಥಃ ಸಿದ್ಧಸಂಕಲ್ಪಃ ಸಿದ್ಧಿದಃ ಸಿದ್ಧಿಸಾಧನಃ || ೨೭ ||**

**೨೫೦. ಅಸಂಖ್ಯೇಯಃ – ಎಣಿಸಲಿಕ್ಕೆ ಆಗದಷ್ಟು ಗುಣ, ಕ್ರಿಯೆ, ರೂಪ, ಅವಯವಗಳನ್ನೆಲ್ಲ ಹೊಂದಿರುವವನು.**

ವಿವರಣೆ : ಸಂಖ್ಯೇಯ ಎಂದರೆ ಎಣಿಸಲಿಕ್ಕೆ ಯೋಗ್ಯವಾದದ್ದು. ಎಣಿಸಲಿಕ್ಕೆ

ಸಾಧ್ಯವಿಲ್ಲದವು ಅಸಂಖ್ಯೇಯ. ದೇವರ ಗುಣಗಳನ್ನು ಎಣಿಸಲಿಕ್ಕೆ ಸಾಧ್ಯವಿಲ್ಲ. ದೇವರಲ್ಲಿ ಎಷ್ಟು ಗುಣಗಳುಂಟು? ಲೆಕ್ಕ ಮಾಡಿದವರಿಲ್ಲ. 'ಮೇದಿನಿ ಪರಮಾಣ್ವಂಬುಕಣಂಗಳ ನೈದಬಹುದು ಪರಿಗಣತಿಯಲಿ | ಮಾಧವನ ಆನಂದಾದಿ ಗುಣಗಳ ಎಣಿಸಲು ಸಾಧ್ಯವಿಲ್ಲ ಫಲವಿದು ಬಾಳ್ವುದಕೆ' - ದೇವರ ಗುಣಗಳನ್ನು ಎಣಿಸಲಿಕ್ಕೆ ಸಾಧ್ಯವಿಲ್ಲ ಎಂದು ತಿಳಿಯುವುದೇ ಬಾಳ್ವುದಕೆ ಸಾರ್ಥಕತೆ.

**'ವಿಷ್ಣೋರ್ನುಕಂ ವೀರ್ಯಾಣಿ ಪ್ರವೋಚಂ**
**ಯಃ ಪಾರ್ಥಿವಾನಿ ವಿಮಮೇ ರಜಾಂಸಿ.....'**

ಅಕಸ್ಮಾತ್ ಎಲ್ಲರೂ ಸೇರಿ ಸಮುದ್ರದ ಬಳಿಗೆ ಹೋಗಿ 'ಇಷ್ಟು ಉಸುಕನ್ನು ನೀನು ಲೆಕ್ಕ ಮಾಡು' 'ಇಷ್ಟು ಉಸುಕನ್ನು ನೀನು ಲೆಕ್ಕ ಮಾಡು' ಎಂದು ಒಟ್ಟು ಸೇರಿ ಉಸುಕಿನ ಕಣಗಳನ್ನು ಲೆಕ್ಕ ಮಾಡಬಹುದು. ಮೇದಿನಿ ಪರಮಾಣ್ವಂಬುಕಣಂಗಳನು ಪರಿಗಣತಿಯಲ್ಲಿ ಐದಬಹುದು. ಆದರೆ ಭಗವಂತನ ಆನಂದಾದಿಗುಣಗಳನ್ನು ಲೆಕ್ಕ ಮಾಡ್ತೇನೆ ಎಂದು ಹೊರಟರೆ ಅವನು ಮೂರ್ಖ ಎನಿಸುವನು. **'ನೈವೋದಾಪುರ್ಗ್ಗುಣಂತೋಽಂತಂ ಯದ್ಗುಣಾನಾಮಜಾದಯಃ'**

ಚತುರ್ಮುಖಾದಿಗಳು ದೇವರ ಗುಣಗಳನ್ನು ಲೆಕ್ಕ ಮಾಡ್ತಾನೇ ಇದ್ದಾರೆ..... ಇಂದಿಗೂ ಆ ಲೆಕ್ಕ ಮುಗಿಯಲಿಲ್ಲ. ಆದ್ದರಿಂದಲೇ ಅವನು 'ಅಸಂಖ್ಯೇಯ'

ದೇವರ ಗುಣಗಳನ್ನು ಹೇಗೋ ಹಾಗೆ ಅವನ ಕ್ರಿಯೆಗಳನ್ನೂ, ರೂಪಗಳನ್ನೂ ಲೆಕ್ಕ ಮಾಡಲು ಸಾಧ್ಯವಿಲ್ಲ. ದೇವರಿಗೆ ಎಷ್ಟು ಕಣ್ಣು ಮುಂತಾದ ಅವಯವಗಳಿವೆ ಎಂಬುದನ್ನೂ ಲೆಕ್ಕ ಮಾಡಲು ಸಾಧ್ಯವಿಲ್ಲ.

ಹೀಗೆ ಯಾವ ಲೆಕ್ಕಕ್ಕೂ ಸಿಗದ ವ್ಯಕ್ತಿಯಾದುದರಿಂದ ದೇವರು ಅಸಂಖ್ಯೇಯ ಎನಿಸುವನು. ಆದುದರಿಂದಲೇ ಅವನ ಗುಣಗಳೂ ಅನಂತಗಳು. ಕ್ರಿಯೆಗಳೂ ಅನಂತಗಳು. ರೂಪಗಳು, ಅವಯುವಗಳೂ ಅನಂತಗಳು. ಅಂದರೆ ಎಣಿಸಿ ಕೊನೆಗಾಣಿಸಬಹುದಾದವುಗಳಲ್ಲ.

**೨೫೦. ಅಪ್ರಮೇಯಾತ್ಮಾ – ಯಾರ ಸ್ವರೂಪವನ್ನು ಸಮಗ್ರವಾಗಿ ತಿಳಿದುಕೊಳ್ಳಲು ಸಾಧ್ಯವಿಲ್ಲವೋ ಅಂತಹವನು.**

**ವಿವರಣೆ :** ಮೇಯ, ಪ್ರಮೇಯ, ಅಪ್ರಮೇಯ – ತಿಳಿದುಕೊಳ್ಳಲು ಯೋಗ್ಯವಾದದ್ದು ಮೇಯ. ಇಲ್ಲಿಯ ಪುಸ್ತಕ, ಮಂತ್ರಾಕ್ಷತೆ ತಟ್ಟೆ – ಇವನ್ನೆಲ್ಲ ತಿಳಿದುಕೊಳ್ಳಬಹುದಾಗಿದೆ. ಆದುದರಿಂದ ಅವೆಲ್ಲ ಮೇಯ. ಚೆನ್ನಾಗಿ ತಿಳಿದುಕೊಳ್ಳಲು ಸಾಧ್ಯವಾದದ್ದು ಪ್ರಮೇಯ. ಲೋಕದ ಜುಜುಬಿ ವಸ್ತುಗಳನ್ನು

ಬೇಕಾದರೆ ಚೆನ್ನಾಗಿ ತಿಳಿದುಕೊಳ್ಳಬಲ್ಲೆವು. ಅವು ಎಂದು ಹುಟ್ಟಿಕೊಂಡಿತು? ಅದರ ಪ್ರಯೋಜನವೇನು? ಎಂದು ಅದಕ್ಕೆ ನಾಶ? – ಇವೆಲ್ಲ ಮಾಹಿತಿಗಳನ್ನೂ ಬೇಕಾದರೆ ಸಂಪಾದಿಸಿಕೊಳ್ಳಬಲ್ಲೆವು. ಅವಶ್ಯಕತೆಯಿಲ್ಲ ಎಂದು ಅಷ್ಟೊಂದು ತಿಳಿದುಕೊಳ್ಳುವ ಗೋಜಿಗೆ ಹೋಗುವುದಿಲ್ಲ ಅಷ್ಟೇ. ಆದರೆ ಭಗವಂತನನ್ನು ಮಾತ್ರ ಎಷ್ಟು ಪ್ರಯತ್ನಪಟ್ಟರೂ ಚೆನ್ನಾಗಿ ಅಂದರೆ ಸಮಗ್ರವಾಗಿ ತಿಳಿದುಕೊಳ್ಳಲು ಸಾಧ್ಯವೇ ಇಲ್ಲ. ಅವನ ಗುಣಗಳನ್ನು ಲೆಕ್ಕ ಮಾಡಲು ಸಾಧ್ಯವಿಲ್ಲ. ಹಾಗೆಯೇ ಇವನು ಇಂತಹವನೇ ಎಂದು ದೇವರ ಸ್ವರೂಪವನ್ನು ತೀರ್ಮಾನ ಮಾಡಲೂ ಸಾಧ್ಯವಿಲ್ಲ. 'ಬಗೆ ಬಗೆಯ ನೂತನವ ಕಾಣುತ ಮಿಗೆ ಹರುಷದಿಂ ಪೊಗಳಿ ಹಿಗ್ಗುವ ತ್ರಿಗುಣಮಾನಿ ಮಹಾಲಕುಮಿ' ಹೊಸ ಹೊಸ ........ ಇವತ್ತಿನಂತೆ ನಾಳೆ ಇಲ್ಲ ನಾಳೆಯಂತೆ ನಾಡದ್ದು ಇಲ್ಲ.

ಒಂದು ಮನೆಯಲ್ಲೇ ಗಂಡನನ್ನು ಸರಿಯಾಗಿ ಅರ್ಥ ಮಾಡಿಕೊಳ್ಳಲಿಕ್ಕೆ ಹೆಂಡತಿಗಾಗುವುದಿಲ್ಲ, ಹೆಂಡತಿಯನ್ನು ಚೆನ್ನಾಗಿ ಅರ್ಥ ಮಾಡಿಕೊಳ್ಳಲಿಕ್ಕೆ ಗಂಡನಿಗಾಗುವುದಿಲ್ಲ. ಹೀಗಿರುವಾಗ ಆ ಭಗವಂತನನ್ನು ಹೇಗೆ ತಾನೇ ಚೆನ್ನಾಗಿ ಅರ್ಥ ಮಾಡಿಕೊಳ್ಳಲು ಸಾಧ್ಯ? **'ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ'** - ಮಾತುಗಳಿಗೆ ಎಟಕದವನು, ಅಷ್ಟು ಮಾತ್ರವಲ್ಲ. ಮನಸ್ಸಿಗೂ ಎಟಕದವನು ಅವನು. ಕೆಲವು ವಸ್ತುಗಳ ಬಗ್ಗೆ ಮಾತುಗಳಿಂದ ಸರಿಯಾಗಿ ಹೇಳಲು ಬರುವುದಿಲ್ಲ. ಆದರೆ ಮನಸ್ಸಿನಿಂದ ಚೆನ್ನಾಗಿ ಚಿಂತಿಸಬಹುದಾಗುತ್ತದೆ. ಆದರೆ ಭಗವಂತ ಹಾಗಲ್ಲ. ಮಾತಿಗೂ ಎಟಕುವುದಿಲ್ಲ, ಮನಸ್ಸಿಗೂ ಎಟಕುವುದಿಲ್ಲ. ಶಾಸ್ತ್ರದ ಮಾತುಗಳು ಭಗವಂತನನ್ನು ತಿಳಿಸಲು ಧುಮುಕುತ್ತವೆ. ಏನೋ ಅಲ್ಪ ಸ್ವಲ್ಪ ಅವನನ್ನು ತಿಳಿಸುತ್ತವೆ ಕೂಡಾ. ಆದರೆ ಅವನ ನಖಶಿಖಾಂತ ಸ್ವರೂಪವನ್ನು ಸಮಗ್ರವಾಗಿ ಹೇಳಲಾಗದೆ ಹಿಂತಿರುಗುವುವು - 'ಯತೋ ವಾಚೋ ನಿವರ್ತಂತೇ ಅಪ್ರಾಪ್ಯ .......'

ದೇವರು ಅಮೇಯ ಅಲ್ಲ; ಮತ್ತೆ ಅಪ್ರಮೇಯನಷ್ಟೇ. ಅಮೇಯ ಎಂದರೆ ಯಾವುದನ್ನು ಸ್ವಲ್ಪವೂ ತಿಳಿದುಕೊಳ್ಳಲಾಗುವುದಿಲ್ಲವೋ ಅದು. ಮೊಲದ ಕೋಡು ಆ ರೀತಿಯಾಗಿ ಅಮೇಯು. ಆದರೆ ಭಗವಂತನ ಬಗ್ಗೆ ಸ್ವಲ್ಪವನ್ನು ತಿಳಿದುಕೊಳ್ಳಬಹುದಾದರಿಂದ ಅಮೇಯ ಅಲ್ಲ. ಸಮಗ್ರವಾಗಿ, ಸಾಕಲ್ಯೇನ ಅವನನ್ನು ಯಾರಿಗೂ ತಿಳಿದುಕೊಳ್ಳಲಾಗದ ಪ್ರಯುಕ್ತ ಅವನು ಅಪ್ರಮೇಯನಷ್ಟೇ.

ದೇವರನ್ನು ಸಮಗ್ರವಾಗಿ ತಿಳಿದುಕೊಂಡ ಒಬ್ಬನೇ ಒಬ್ಬ ಎಂದರೆ ಅವನೇ. ಆದುದರಿಂದ ಅವನೊಬ್ಬನನ್ನು ಬಿಟ್ಟರೆ ಬೇರೆ ಯಾರಿಂದಲೂ ಸಮಗ್ರವಾಗಿ ತಿಳಿಯಲು ಅಶಕ್ಯನಾಗಿರುವುದರಿಂದ ದೇವರು 'ಅಪ್ರಮೇಯ'.

**೨೫೧. ವಿಶಿಷ್ಟಃ – ಪ್ರತಿಯೊಂದು ಗುಣದ ವಿಷಯದಲ್ಲೂ ಉಳಿದೆಲ್ಲರಿಗಿಂತ ಬೇರೆಯಾಗಿರುವವನು.**

**ವಿವರಣೆ :** ಹೀಗೆ ದೇವರು ಅಸಂಖ್ಯೇಯ, ಅಪ್ರಮೇಯಾತ್ಮಾ ಎಂದೆಲ್ಲ ಆಗಿರುವುದರಿಂದಲೇ ನಮ್ಮ ಗುಂಪಿಗೆ ಸೇರುವುದಿಲ್ಲ. ನಮಗಿಂತೆಲ್ಲ ಬೇರೆ ಆದುದರಿಂದಲೇ ಅವನನ್ನು ಪರ ಎಂದು ಕರೆಯುವುದು. ಪರ ಎಂದರೂ ವಿಶಿಷ್ಟ ಎಂದರೂ ಒಂದೇ.

ಹತ್ತು ಜನರು ಸೇರಿ ಒಂದು ಕಾರ್ಯಕ್ಕೆ ಹೊರಟಾಗ ಮತ್ತೊಬ್ಬನು ನೀವು ಹೋಗಿ ನಾನು ಮತ್ತೆ ಬರುವೆನೆಂದರೆ, ಅವನದ್ದೇನು ವೈಶಿಷ್ಟ್ಯ? ನಮ್ಮ ಜೊತೆಗೇ ಬರಬಾರದೇ ? - ಎನ್ನುತ್ತೇವೆ. ಇಲ್ಲಿ ವೈಶಿಷ್ಟ್ಯ ಎಂಬ ಶಬ್ದವನ್ನು ನಮ್ಮ ಗುಂಪಿಗೆ ಸೇರದೆ ಪ್ರತ್ಯೇಕತೆಯಿಂದ ಇರುವಿಕೆ ಎಂಬಾರ್ಥದಲ್ಲಿ ಬಳಸಲಾಗುವುದು.

ಭೀಷ್ಮರು ಈ ಅಭಿಪ್ರಾಯದಲ್ಲಿಯೇ ಕೃಷ್ಣನನ್ನು ಸಮಗ್ರವಾಗಿ ತಿಳಿದುಕೊಳ್ಳಲು ಸಾಧ್ಯವಿಲ್ಲ, ಅವನ ಗುಣಾದಿಗಳನ್ನು ಎಣಿಸಲೂ ಶಕ್ಯವಿಲ್ಲ - ಹೀಗೆ ನಮ್ಮೆಲ್ಲರಿಗಿಂತ ವಿಲಕ್ಷಣನಾಗಿರುವುದರಿಂದ ವಿಶಿಷ್ಟನಾಗಿರುವವನು - ಎಂದು ಸ್ತುತಿಸಿರುವರು.

ನಮ್ಮಲ್ಲೂ ಪ್ರತಿಯೊಬ್ಬರಲ್ಲೂ ಆಯಾ ಕ್ಷೇತ್ರಕ್ಕೆ ಸಂಬಂಧಿಸುವ ಬೇರೆ ಬೇರೆ ಬಗೆಯ ವೈಶಿಷ್ಟ್ಯವನ್ನು ದೇವರು ನೀಡಿರುತ್ತಾನೆ. ನಾವು ಅದನ್ನು ಗುರುತಿಸಿಕೊಂಡು, ಅದನ್ನು ಬೆಳೆಸಿಕೊಳ್ಳಬೇಕು. ದೇವರನ್ನು 'ವಿಶಿಷ್ಟ' - ಎಂದು ಉಪಾಸನೆ ಮಾಡುವುದರಿಂದ ನಮ್ಮ ಯೋಗ್ಯತೆಗನುಗುಣವಾದ ವೈಶಿಷ್ಟ್ಯವನ್ನು ನಾವು ಪಡೆದುಕೊಳ್ಳಬಹುದಾಗಿದೆ. ಪ್ರತಿಯೊಬ್ಬರಲ್ಲೂ ಒಂದೊಂದು ಬಗೆಯ ವೈಶಿಷ್ಟ್ಯ ಇರುವುದಾದರೆ ದೇವರಲ್ಲಿ ಎಲ್ಲಬಗೆಯ ವೈಶಿಷ್ಟಗಳೂ ತುಂಬಿಕೊಂಡಿವೆ. ಸಂಧಾನದಲ್ಲೂ ಅವನು ವಿಶಿಷ್ಟ, ವಿಘಟನೆಯಲ್ಲೂ ವಿಶಿಷ್ಟ, ಸೌಂದರ್ಯದಲ್ಲೂ, ಮಾತುಗಾರಿಕೆಯಲ್ಲೂ ...... ಹೀಗೆ ಪ್ರತಿಯೊಂದು ಗುಣದ ವಿಷಯದಲ್ಲೂ ವಿಶಿಷ್ಟನಾಗಿರುವುದರಿಂದ ಅವನನ್ನು ವಿಶೇಷವಾಗಿ ವಿಶಿಷ್ಟ ಎಂದು ಸ್ತುತಿಸಲಾಗಿದೆ.

**೨೫೨. ಶಿಷ್ಟಕೃತ್ – ಒಳ್ಳೆಯವನನ್ನಾಗಿ ಮಾಡುವವನು.**

**ವಿವರಣೆ:** ದುಷ್ಟರ ಕೂಟದಲ್ಲಿ ಸೇರಿ ಮಕ್ಕಳು ಪೂರ್ಣವಾಗಿ ಕೆಡುತ್ತಿದ್ದಾರೆ ಎಂದಾಗ ದೇವರನ್ನು 'ಶಿಷ್ಟಕೃತ್'– ಎಂದು ಮೊರೆಯಿಡಬೇಕು. ಶಿಷ್ಟ ಎಂದರೆ ಒಳ್ಳೆಯವನು. ಒಳ್ಳೆಯವನನ್ನಾಗಿ ಮಾಡುವವನೇ ಶಿಷ್ಟಕೃತ್. ನಮ್ಮ ಮಕ್ಕಳಲ್ಲಿ ಸಹಜವಾಗಿ

ಒಳ್ಳೆಯತನವಿದ್ದು, ದುಷ್ಟರ ಕೂಟದಿಂದಾಗಿಯಷ್ಟೇ ಅವರು ದುಷ್ಟರಾಗಿದ್ದಾರೆಂದರೆ ದೇವರನ್ನು ನಾವು 'ಶಿಷ್ಟಕೃತ್'– ಎಂದು ಸ್ತುತಿಸಿದಲ್ಲಿ ನಮ್ಮ ಮಕ್ಕಳನ್ನು ದುಷ್ಟರ ಕೂಟದಿಂದ ತಪ್ಪಿಸಿ ಶಿಷ್ಟರನ್ನಾಗಿ, ಒಳ್ಳೆಯವರನ್ನಾಗಿ ಮಾಡುವನು.

ಒಳ್ಳೆಯವರು ಸಹಜವಾಗಿ ಒಳ್ಳೆತನ ಉಳ್ಳವರು, ದುಷ್ಟರ ಸಂಪರ್ಕದಿಂದಾಗಿ, ಕೆಟ್ಟರೆ, ದಾರಿ ತಪ್ಪಿದರೆ ಅಂತಹವರನ್ನು ಒಳ್ಳೆಯವರನ್ನಾಗಿ ಮಾಡುವ ಶಕ್ತಿ ಉಳ್ಳವನೇ 'ಶಿಷ್ಟಕೃತ್'.

ಪುರಾಣಾದಿಗಳಲ್ಲಿ ಬರುವ ಅಜಾಮಿಳಾದಿಗಳ ಚರಿತ್ರೆಯನ್ನು ನಾವು ಕೇಳುತ್ತೇವೆ. ಯಾರು ಸ್ವಾಭಾವಿಕವಾಗಿ ಒಳ್ಳೆಯುವರಾಗಿದ್ದು,, ದುಷ್ಟರ ಸಂಪರ್ಕದಿಂದಷ್ಟೇ ಕೆಟ್ಟವರಾಗಿರ್ತಾರೋ ಅವರನ್ನಷ್ಟೇ ದೇವರು ಒಳ್ಳೆಯವರನ್ನಾಗಿ ಮಾಡುವನು. ಒಳಗೆ ಇರುವ ಸ್ವಭಾವಕ್ಕಷ್ಟೇ ಬೆಳಕು ಚೆಲ್ಲುವವನು ದೇವರು ಹೊರತು ಸ್ವಭಾವವನ್ನು ಬದಲಾಯಿಸುವ ಕೆಲಸಕ್ಕೆ ಕೈ ಹಾಕುವುದಿಲ್ಲ.

ಭೀಷ್ಮರು ಸ್ವಭಾವತಃ ಶಿಷ್ಟರು. ದುರ್ಯೋಧನನ ಸಂಪರ್ಕದಿಂದಷ್ಟೇ ದುಷ್ಟರೆನಿಸಿದ್ದಾರೆ. ಅಂತಹವರನ್ನು ಕೊನೆಯ ಕಾಲದಲ್ಲಿ ಬಂದು ಶಿಷ್ಟರನ್ನಾಗಿ ಪರಿವರ್ತಿಸಿದ. ಆದರೆ ಅದೇ ಸ್ವಭಾವತಃ ದುಷ್ಟನಾಗಿದ್ದ ದುರ್ಯೋಧನನನ್ನು ಕೊನೆಯವರೆಗೂ ಶಿಷ್ಟನನ್ನಾಗಿಸುವ ಗೋಜಿಗೇ ಹೋಗಲಿಲ್ಲ.

ಶ್ರೀ ರಾಘವೇಂದ್ರ ಸ್ವಾಮಿಗಳು ತಮ್ಮ 'ಇಂದು ಎನಗೆ ಗೋವಿಂದ......' ಎಂಬ ಹಾಡಿನ '..... ದಾರಿ ತಪ್ಪಿ ನಡೆದೆ ಸೇರಿದೆ ಕುಜನರ ಆರೂ ಕಾಯುವರಿಲ್ಲ ಸೇರಿದೆ ನಿನಗಯ್ಯ....' ಎಂಬ ನುಡಿಯಲ್ಲಿ ಕುಜನರ ಸಂಪರ್ಕದಿಂದಾಗಿ ದಾರಿ ತಪ್ಪಿ ನಡೆದ ವ್ಯಕ್ತಿಯನ್ನು 'ಶಿಷ್ಟ'ನನ್ನಾಗಿ ಮಾಡುವ ಧೀರ ವೇಣುಗೋಪಾಲನ 'ಶಿಷ್ಟಕೃತ್' ಮಹಿಮೆಯನ್ನು ಸೂಚ್ಯವಾಗಿ ಸ್ತುತಿಸಿರುವರು.

**೨೫೩. ಶುಚಿಃ – ತಾನು ಬೆಳಗಿಕೊಂಡು, ಮತ್ತೊಬ್ಬರನ್ನು ಬೆಳಗಿಸುವವನು.**

ವಿವರಣೆ : ಶುಚಿ ಅಂದರೆ ನಿರ್ಮಲ. ಲೋಕದಲ್ಲಿ 'ಶೋಚತಿ' – ಎಂಬುದಕ್ಕೆ ಶೋಕಪಡುವವನು ಎಂಬ ಅರ್ಥವಾದರೆ ಶಾಸ್ತ್ರಕಾರರ ಪ್ರಕಾರ 'ಪ್ರಕಾಶತೇ' ಬೆಳಗುವವನು ಎಂಬ ಅರ್ಥವೂ ಇದೆ. ನೈರ್ಮಲ್ಯವೂ ಒಂದು ಬಗೆಯ ಪ್ರಕಾಶ. ಆದುದರಿಂದ ನಿರ್ಮಲನಾಗಿರುವವನು ಪ್ರಕಾಶದಿಂದ ಕೂಡಿರುವವನೆಂಬ ಅಭಿಪ್ರಾಯದಲ್ಲೂ 'ಶುಚಿ' ಎಂದು ವ್ಯವಹರಿಸಲ್ಪಡುವನು. ವ್ಯಕ್ತಿಯು ನಿರ್ಮಲನಾಗಿದ್ದರೆ ಅವನು ಬೆಳಕಿಗೆ ಬರುವನು – ಅವನಷ್ಟು ನಿರ್ಮಲ ಯಾರೂ ಇಲ್ಲ ಅಪ್ಪ ! ಎಂದು.

ಹೀಗೆ ಶುಚಿ ಎಂಬುದರಿಂದ ಶೋಚತಿ – ತಾನು ಬೆಳಕಿಗೆ ಬರುವವನು ಹಾಗೂ ಶೋಚಯತಿ – ಮತ್ತೊಬ್ಬರನ್ನು ಬೆಳಕಿಗೆ ತರುವವನು – ಎಂಬ ಅರ್ಥ ಹೊರಡುವುದು.

**'ನಾಯಮಾತ್ಮಾ ಪ್ರವಚನೇನ ಲಭ್ಯೋ ನ ಮೇಧಯಾ ನ ಬಹುನಾ ಶ್ರುತೇನ'** ದೇವರನ್ನು ಸಾಕಷ್ಟು ಪ್ರವಚನಗಳನ್ನು ಕೇಳುವುದರಿಂದಾಗಲೀ, ಭಾರೀ ಬುದ್ಧಿವಂತಿಕೆಯಿಂದಾಗಲೀ, ತುಂಬ ಶಾಸ್ತ್ರ ಶ್ರವಣದಿಂದಾಗಲೀ ತಿಳಿಯಲು ಸಾಧ್ಯವಿಲ್ಲ, ಹೊಂದಲೂ ಸಾಧ್ಯವಿಲ್ಲ ಎಂದು ಸಾರುವ ಉಪನಿಷತ್ತು **'ಯಮೇವೈಷ ವೃಣುತೇ ತೇನ ಲಭ್ಯಃ'**– ಯಾರಿಗೆ ತನ್ನನ್ನು ತೋರಗೊಡಬೇಕೆಂದು ದೇವರಿಗೆ ತೋರುವುದೋ ಅಂತಹವನೆದುರು **'ತಸ್ಯೈಷ ಆತ್ಮಾ ವಿವೃಣುತೇ ತನೂಂ ಸ್ವಾಮ್'**– ತನ್ನನ್ನು ಬೆಳಗಿಸುವನು, ಆ ಭಕ್ತನ ಸ್ವರೂಪವನ್ನೂ ಬೆಳಕಿಗೆ ತರುವನು ಎಂದು ಪ್ರತಿಪಾದಿಸಿದೆ.

ನಮಗೆ ನಾವು ಯಾರು ಎಂದೇ ಗೊತ್ತಿಲ್ಲ, ದೇವರು ಯಾರು ಎಂದು ಸುತರಾಂ ಗೊತ್ತಿಲ್ಲ. ಹೀಗಿದ್ದರೂ ನಾವು ಮತ್ತೊಬ್ಬರನ್ನು ತಿಳಿಯಲು ತೊಡಗುವೆವು. ಆದ್ದರಿಂದ ದೇವರು ನಮ್ಮ ಬಗ್ಗೆ ಪ್ರಸನ್ನನಾದನೆಂದರೆ ಮೊದಲು ನಮ್ಮ ಸ್ವರೂಪವನ್ನು ಬೆಳಗಿಸಿ ನಾವು ಯಾರು ಎಂದು ತಿಳಿಸಿಕೊಡುವನು, ಬಳಿಕ ತನ್ನ ಸ್ವರೂಪವನ್ನು ನಮ್ಮೆದುರು ಬೆಳಗಿಸಿ ತಾನು ಯಾರು ಎಂದು ತೋರಿಸಿಕೊಡುವನು. 'ಶುಚಿ'– ಎಂಬ ಹೆಸರು ದೇವರ ಈ ಲೀಲೆಯನ್ನು ತಿಳಿಸುವುದು.

**೨೫೪. ಸಿದ್ಧಾರ್ಥಃ – ಎಲ್ಲವನ್ನೂ ಪಡೆದುಕೊಂಡು ಸಿದ್ಧರೆನಿಸಿಕೊಂಡವರಿಂದಲೂ ಮತ್ತೆ ಮತ್ತೆ ಅಪೇಕ್ಷಿಸಲ್ಪಡುವವನು.**

**ವಿವರಣೆ :** ಸಿದ್ಧರಿಂದ ಅಪೇಕ್ಷಿಸಲ್ಪಡುವವನೇ ಸಿದ್ಧಾರ್ಥ. ಸಿದ್ಧರೆಂದರೆ ಯಾರು? ಯಾರು ಜೀವನದಲ್ಲಿ ಎಲ್ಲವನ್ನೂ ಪಡೆದುಕೊಂಡಿರುವರೋ, ಯಾರಿಗೆ ಜೀವನದಲ್ಲಿ ಯಾವುದರದ್ದೂ ಅಪೇಕ್ಷೆ ಇಲ್ಲವೋ ಅವರು ಸಿದ್ಧರು. ದೇವರನ್ನು ಕಾಣುವುದನ್ನೂ ಪಡಕೊಂಡವರು ಆ ಸಿದ್ಧರು. ಆದರೂ ಅಂತಹವರಿಂದಲೂ ಭಗವಂತ ಮತ್ತೂ ಮತ್ತೂ ಅಪೇಕ್ಷಿಸಲ್ಪಡುತ್ತಾನೆ. ಅವರು ದೇವರನ್ನು ನೋಡಿಯಾಗಿದೆ. ಆದರೂ ದೇವರನ್ನು ಮತ್ತೂ ನೋಡಬೇಕು ಎಂದು ಬಯಸುವರು. ಹೀಗೆ ಎಲ್ಲವನ್ನೂ ಪಡೆದುಕೊಂಡ ವ್ಯಕ್ತಿಗಳಿಗೂ ಕೂಡಾ ಮತ್ತೂ ಬೇಕು ; ಬೇಕು ; ಬೇಕು ; - ಎಂದು ಬಯಸಲ್ಪಡುವ ಭಗವಂತನಿಗೆ ಸಿದ್ಧಾರ್ಥ – ಸಿದ್ಧರಿಂದಲೂ ಬಯಸಲ್ಪಡುವವನು– ಎಂಬ ಹೆಸರು. ನಾವಾದರೆ ಒಮ್ಮೆ ದೇವರ ಗುಡಿಗೆ ಬಂದರೆ, ಒಮ್ಮೆ

ನೋಡಿಯಾಯಿತು. ಮತ್ತೊಮ್ಮೆ ಯಾಕೆ ನೋಡಬೇಕು ? - ಎಂದು ಭಾವಿಸುವೆವು. ಯಾಕೆಂದರೆ ನಾವು ನಿಜವಾಗಿ ದೇವರನ್ನು ಕಂಡಿಲ್ಲ. ಹೇಗೆ ಒಂದು ಭಕ್ಷ್ಯವನ್ನು ತಿಂದ ವ್ಯಕ್ತಿಗೆ ಪುನಃ ಪುನಃ ಆ ಭಕ್ಷ್ಯವನ್ನು ತಿನ್ನಬೇಕೆನಿಸುವುದೋ ಹಾಗೆ ದೇವರನ್ನು ನಿಜವಾಗಿ ಕಂಡವರಿಗೆ, ಅನುಭವಿಸಿದವರಿಗೆ ಮತ್ತೆ ಮತ್ತೆ ದೇವರನ್ನು ಕಾಣುವ, ಅನುಭವಿಸುವ ತವಕ ಉಂಟಾಗುವುದು. ಪಾಂಡವರ ಮನೆಗೆ ಕೃಷ್ಣ ಮತ್ತೆ ಮತ್ತೆ ಹೋಗುತ್ತಿದ್ದರೂ, ಕೃಷ್ಣನನ್ನು ಪುನಃ ಪುನಃ ನೋಡಲು ಬಯಸುತ್ತಿದ್ದ ಪಾಂಡವರಿಗೆ ಕೃಷ್ಣನ ಆಗಮನದಲ್ಲಿ ಸ್ವಲ್ಪ ವಿಳಂಬವಾದರೂ ಯಾಕೆ ಇನ್ನೂ ಕೃಷ್ಣ ಬಂದಿಲ್ಲ?– ಎಂಬ ಚಿಂತೆ ಕಾಡುತ್ತಿತ್ತು.

ನಾವು ಯಾರ ಮನೆಗೋ ದೂರವಾಣಿಯ ಮೂಲಕ 'ನಿಮ್ಮನ್ನು ಕಾಣಲು ನಿಮ್ಮ ಮನೆಗೆ ಬರಬೇಕೆಂದಿರುವೆ'– ಎಂದು ವಿಚಾರಿಸಿದಾಗಲೇ, ಮನೆಯಲ್ಲಿ ಅವರು ಇಲ್ಲ, ಬರಬೇಡಿ'– ಎಂದು ಹೇಳಿಸಿಕೊಳ್ಳುವ ವ್ಯಕ್ತಿತ್ವದ ಬದಲು, 'ಆಗಲಿ, ಅವಶ್ಯವಾಗಿ ಬನ್ನಿ ನಮಗೂ ನಿಮ್ಮನ್ನು ಕಾಣಬೇಕೆಂದಿದೆ' ಎಂದು ಉತ್ತರ ಪಡೆದುಕೊಳ್ಳಲು ಬೇಕಾದ ವ್ಯಕ್ತಿತ್ವವು ನಮ್ಮಲ್ಲಿ ಸಿದ್ಧಿಸಬೇಕಾದರೆ ಭಗವಂತನನ್ನು 'ಸಿದ್ಧಾರ್ಥಃ'– ಎಂದು ಜೀವನದಲ್ಲಿ ಬೇಕಾದುದನ್ನೆಲ್ಲ ಪಡೆದುಕೊಂಡು 'ಸಿದ್ಧ' ಎನಿಸಿಕೊಂಡವರಿಂದಲೂ ಅಪೇಕ್ಷಿಸಲ್ಪಡುವ ವ್ಯಕ್ತಿತ್ವದಿಂದ ಕೂಡಿದವನನ್ನಾಗಿ ಉಪಾಸನೆ ಮಾಡಬೇಕು.

**೨೫೫. ಸಿದ್ಧಸಂಕಲ್ಪಃ – ಯಾರ ಪ್ರತಿಯೊಂದು ಸಂಕಲ್ಪವೂ ಈಡೇರುವುದೋ ಅಂತಹವನು.**

ವಿವರಣೆ : ಮಾಡಿದ ಸಂಕಲ್ಪವನ್ನು ಕೊನೆಗೊಳಿಸುವವನು ದೇವರು. 'ಹೀಗಾಗಬೇಕು'– ಎಂದು ದೇವರು ಸಂಕಲ್ಪ ಮಾಡಿದನೋ ಆ ಕೆಲಸ ಆಗಿಯೇ ತೀರುವುದು. ನಮ್ಮಲ್ಲಾದರೆ ಸಂಕಲ್ಪ ಆದ ಮೇಲೂ ಕೆಲಸ ಆಗಬೇಕೆಂದಿಲ್ಲ. ಸಂಕಲ್ಪಕ್ಕೆ ಒಂದು ಪ್ರಯತ್ನವಾದರೆ, ಕೆಲಸಕ್ಕೆ ಮತ್ತೊಂದು ಪ್ರಯತ್ನ. ಮೊದಲು ಸಂಕಲ್ಪ ಮಾಡುವುದು – ಈ ಕೆಲಸವನ್ನು ನಡೆಸಬೇಕು ಎಂದು. ಆ ಮೇಲೆ ಆ ಕೆಲಸಕ್ಕೆ ಸಂಬಂಧಪಡುವವರನ್ನೆಲ್ಲ ಹುಡುಕಲು ತೊಡಗುವುದು. ಎಲ್ಲ ತಯಾರಾಯಿತೆಂದಾಗ ಎಲ್ಲಿಂದಲೋ ಸೂತಕದ ಸುದ್ದಿಯೊಂದು ಬಂತೆಂದರೆ ಆ ಸಂಕಲ್ಪ ಅಲ್ಲಿಗೇ ಕೊನೆಗೊಳ್ಳುವುದು. ಹೀಗೆ ಎಷ್ಟೋ ಪ್ರಸಂಗಗಳಲ್ಲಿ ಸಂಕಲ್ಪ ಮಾಡ್ತೇವೆ, ಆದರೆ ಆ ಕೆಲಸಗಳನ್ನು ಕೊನೆಗೊಳಿಸಲು ನಮ್ಮಿಂದ ಆಗುವುದಿಲ್ಲ. ಆದರೆ ದೇವರಿಗೆ ಹಾಗಿಲ್ಲ. ಅವನು ಸಂಕಲ್ಪ ಮಾಡಿದನೋ ಸಾವಿರ ವಿಘ್ನಗಳು ಬಂದರೂ ಆ ಕೆಲಸ ಆಗಿಯೇ ತೀರುವುದು. ಆದುದರಿಂದಲೇ ಅವನು

'ಸಿದ್ಧಸಂಕಲ್ಪ'. – ಮಾಡಿದ ಸಂಕಲ್ಪವನ್ನು ಈಡೇರಿಸುವವನು.

ಭೀಷ್ಮರು ಕೃಷ್ಣನನ್ನು 'ಸಿದ್ಧಸಂಕಲ್ಪ'– ಎಂದು ಸ್ತುತಿಸುತ್ತಿರುವರು. ಯದ್ಯಪಿ ಭೀಷ್ಮರ ವಿಷಯದಲ್ಲೇ ಕೃಷ್ಣನ ಸಂಕಲ್ಪ ಮುರಿದಂತೆ ಕಾಣುವುದು. ಮಹಾಭಾರತ ಯುದ್ಧದಲ್ಲಿ ಆಯುಧವನ್ನು ಹಿಡಿಯುವುದಿಲ್ಲ ಎಂಬುದು ಕೃಷ್ಣನ ಸಂಕಲ್ಪ. ಏನಾದರೂ ಮಾಡಿ ಕೃಷ್ಣನಿಂದ ಆಯುಧವನ್ನು ಹಿಡಿಸಿಯೇ ತೀರುವೆನೆಂದು ಭೀಷ್ಮರ ಸಂಕಲ್ಪ. ಕೊನೆಗೂ ಭೀಷ್ಮರ ಸಂಕಲ್ಪಕ್ಕನುಗುಣವಾಗಿ ಕೃಷ್ಣನ ಸಂಕಲ್ಪವೇ ಮುರಿದಂತೆ ಕಾಣುವುದು. ಆದರೆ ತನ್ನ ಸಂಕಲ್ಪವನ್ನು ಮುರಿದಾದರೂ ಭಕ್ತರ ಸಂಕಲ್ಪವನ್ನು ಈಡೇರಿಸುವೆನೆಂಬುದೇ ಕೃಷ್ಣನ ಸಂಕಲ್ಪ. ಆ ಸಂಕಲ್ಪ ಈಡೇರಿದೆ ಅಂದ ಮೇಲೆ ಕೃಷ್ಣನ 'ಸಿದ್ಧಸಂಕಲ್ಪತ್ವ' ಕ್ಕೇನೂ ಚ್ಯುತಿ ಇಲ್ಲ. ಕೃಷ್ಣನ ಸಂಕಲ್ಪವನ್ನು ಸುಳ್ಳು ಮಾಡಿದ್ದಕ್ಕಾಗಿ ಭೀಷ್ಮರಿಗೆ ಪಾಪ ಬರುವ ಪ್ರಸಕ್ತಿ ಇತ್ತೋ ಏನೋ. ಶ್ರೀ ಕೃಷ್ಣ ಸಿದ್ಧಸಂಕಲ್ಪ, ಭಕ್ತರ ಸಂಕಲ್ಪವನ್ನು ಈಡೇರಿಸುವ ಸಂಕಲ್ಪವನ್ನು ಸಾಕಾರಗೊಳಿಸಿದವನೆಂದು ಸ್ತುತಿಸುವ ಮೂಲಕ ಅದರ ಪರಿಹಾರ ಆದಂತಾಗಿದೆ.

ನಮಗೆ ಜೀವನದಲ್ಲಿ ಹೆಜ್ಜೆ ಹೆಜ್ಜೆಗೆ ಭಗವಂತನ ಸಿದ್ಧಸಂಕಲ್ಪತ್ವದ ಉಪಾಸನೆ ಬೇಕು. ಯಾಕೆಂದರೆ ನಾವು ಭ್ರಷ್ಟಸಂಕಲ್ಪರಾಗುವುದೇ ಹೆಚ್ಚು. ಹಾಗಾದರೆ ನಮ್ಮ ಒಳ್ಳೆಯ ಸಂಕಲ್ಪ ಆದಷ್ಟು ಈಡೇರುವಂತಾಗಬೇಕೆಂದರೆ ನಾವು ಭಗವಂತನನ್ನು 'ಸಿದ್ಧಸಂಕಲ್ಪ'– ಎಂದು ಉಪಾಸಿಸೋಣ.

**೨೫೬. ಸಿದ್ಧಿದಃ – ಮಂತ್ರಾದಿಗಳನ್ನು ಜಪಿಸುವವರಿಗೆ ಆಯಾ ಮಂತ್ರದ ಸಿದ್ಧಿಯನ್ನು ನೀಡುವವನು.**

**ವಿವರಣೆ :** ಭೀಷ್ಮರು ಕೃಷ್ಣನ ಕೈಯಿಂದ ಚಕ್ರವನ್ನು ಹಿಡಿಸಿಯೇ ತೀರುವೆನೆಂದು ಪ್ರತಿಜ್ಞೆ ಮಾಡಿದರು ತಾನೇ? ಒಳಗಿನಿಂದ ಅಷ್ಟು ಸಿದ್ಧಿ ಇದ್ದರಷ್ಟೇ ಅಂತಹ ಪ್ರತಿಜ್ಞೆ ಮಾಡಲು ಸಾಧ್ಯ.

ಸಿದ್ಧಿ ಎಂದರೆ ಸಾಮಾನ್ಯವಾಗಿ ಮಂತ್ರಜಪ ಮಾಡಿ ಗಳಿಸಿಕೊಳ್ಳಲ್ಪಡುವಂತಹದ್ದು. ಆಯಾ ಮಂತ್ರದ ಅಕ್ಷರಲಕ್ಷ ಸಂಖ್ಯೆಯಲ್ಲಿ ಮಂತ್ರ ಜಪಿಸಲ್ಪಟ್ಟಿತೆಂದರೆ ಆಯಾ ಮಂತ್ರ ಸಿದ್ಧಿಸಿದೆ ಎಂದು ಭಾವಿಸಲಾಗುವುದು. ಕೃಷ್ಣಷಡಕ್ಷರ ಮಂತ್ರ ಆರು ಲಕ್ಷ ಸಂಖ್ಯೆಯಲ್ಲಿ, ನಾರಾಯಣಾಷ್ಟಾಕ್ಷರ ಮಂತ್ರ ಎಂಟು ಲಕ್ಷ ಸಂಖ್ಯೆಯಲ್ಲಿ ಶಿವಪಂಚಾಕ್ಷರ ಮಂತ್ರ ಐದು ಲಕ್ಷ ಸಂಖ್ಯೆಯಲ್ಲಿ, ಗಾಯತ್ರೀಮಂತ್ರ ಇಪ್ಪತ್ನಾಲ್ಕು ಲಕ್ಷ ಸಂಖ್ಯೆಯಲ್ಲಿ ಜಪಿಸಲ್ಪಟ್ಟಿತೆಂದರೆ ಆಯಾ

ಮಂತ್ರದ ವಿಷಯದಲ್ಲಿ 'ಸಿದ್ಧಿ' ಆಗುವುದು. ಅದರ ಫಲವಾಗಿ, ಉಳಿದವರ ದುಃಖದುಮ್ಮಾನಗಳನ್ನು ದೂರ ಮಾಡುವ ಸಾಮರ್ಥ್ಯ ಅವರಲ್ಲಿ ಸಿದ್ಧಿಸುವುದು. ದೇವರು ಕಣ್ಣು ತೆರೆದರೆ ಮಾತ್ರ ಮಂತ್ರಸಿದ್ಧಿ ಆಗುವುದು. ಹೀಗೆ ಭೀಷ್ಮರ ವಾಗಿಂದ್ರಿಯದಲ್ಲೂ 'ಸಿದ್ಧಿ' ಇದ್ದರಿಂದಲೇ ಅವರ ಬಾಯಿಯಿಂದ ಅಂತಹ ಮಾತು ಹೊರಹೊಮ್ಮಿ, ಅದು ಕೃಷ್ಣನಿಂದ ಈಡೇರಿಸಲ್ಪಟ್ಟಿದೆ.

ಆದರೆ ಭೀಷ್ಮರ ವಾಗಿಂದ್ರಿಯದಲ್ಲಿ ಆ 'ಸಿದ್ಧಿ'ಯನ್ನು ನೀಡಿರುವವನಾದರೂ ಯಾರು ? ಕೃಷ್ಣನೇ. ಇದನ್ನೇ ಭೀಷ್ಮರು ಸ್ತುತಿಸುವರು – 'ಸಿದ್ಧಿದಃ'. ಮಂತ್ರವನ್ನು ಜಪಿಸುವವರಿಗೆ ಆಯಾ ಮಂತ್ರದ ಸಿದ್ಧಿ ದೊರಕುವಂತೆ ಅನುಗ್ರಹಿಸುವ ನೀನೇ ನನ್ನ ವಾಗಿಂದ್ರಿಯದಲ್ಲಿದ್ದುಕೊಂಡು 'ಸಿದ್ಧಿದ'ನಾಗಿರುವುದರಿಂದಲೇ, ನನ್ನ ಪ್ರತಿಜ್ಞೆ ನಿನ್ನಿಂದ ಈಡೇರುವಂತಾಯಿತು. ಮಾತಿಗೆ ಅನುಗುಣವಾದ ಫಲವೇ ಸಿದ್ಧಿ ತಾನೇ ?

**೨೫೭. ಸಿದ್ಧಿಸಾಧನಃ – ಬಿಡುಗಡೆಯನ್ನು ಸಾಧಿಸಿಕೊಡುವವನು.**

**ವಿವರಣೆ :** ಸಿದ್ಧಿ ಶಬ್ದಕ್ಕೆ ಮಾತಿಗನುಗುಣವಾದ ಫಲ, ಜ್ಞಾನ, ಮೋಕ್ಷ ಇತ್ಯಾದಿ ಅನೇಕ ಅರ್ಥಗಳಿವೆ. ಸಿದ್ಧಿಸಾಧನ ಎಂಬಲ್ಲಿ ಸಿದ್ಧಿ ಎಂದರೆ ಮೋಕ್ಷ ಎಂಬ ಅರ್ಥವನ್ನು ಇಟ್ಟುಕೊಳ್ಳೋಣ. ಭಗವಂತನು ಸಿದ್ಧಿಗೆ , ಮೋಕ್ಷಕ್ಕೆ, ಬಿಡುಗಡೆಗೆ ಸಾಧನ. ಮರ ಕಡಿಯಲಿಕ್ಕೆ ಕೊಡಲಿ, ಮಾತನಾಡಲಿಕ್ಕೆ ಬಾಯಿ, ನಡೆಯಲಿಕ್ಕೆ ಕಾಲು ಸಾಧನ ಎನಿಸಿದಂತೆ ನಮಗೆಲ್ಲ ಈ ಬಂಧನದಿಂದ ಬಿಡುಗಡೆ ಹೊಂದಲು ಭಗವಂತ ಸಾಧನ.

ಭೀಷ್ಮರು ಬಂಧನದಲ್ಲಿ ಸಿಲುಕಿದ್ದಾರೆ, ಶರಪಂಜರದಲ್ಲಿ ಮಲಗಿದ್ದಾರೆ. ದುಃಖವನ್ನು ಅನುಭವಿಸುತ್ತಿದ್ದಾರೆ. ಒಂದೆರಡು ದುಃಖ ಅಲ್ಲ. ಪ್ರಾಣ ಹೋಗುವಾಗ ಎಷ್ಟು ದುಃಖ ಆಗುವುದೋ ಅಷ್ಟು ದುಃಖವನ್ನು ಅನುಭವಿಸುತ್ತಿದ್ದಾರೆ. ಒಬ್ಬನ ಪ್ರಾಣ ಹೋಗುವಾಗ ಆಗುವ ದುಃಖ ಅಲ್ಲ. ಎಂಟು ಜನ ಪ್ರಾಣ ಕಳೆದುಕೊಳ್ಳುವಾಗ ಎಷ್ಟು ದುಃಖವನ್ನು ಅನುಭವಿಸುವರೋ ಆ ಎಲ್ಲ ದುಃಖವನ್ನು ಸೇರಿಸಿದಾಗ ಆಗುವಷ್ಟು ದುಃಖ. ಭೀಷ್ಮರು ಶರಪಂಜರದಲ್ಲಿ ಮಲಗಿ ಅಷ್ಟು ದುಃಖವನ್ನು ಅನುಭವಿಸುತ್ತಿದ್ದಾರೆ. ಏನೋ ಅನ್ಯಾಯ ಮಾಡಿದ್ದಕ್ಕೆ ತಾನೇ ಇಷ್ಟೊಂದು ದುಃಖವನ್ನು ಅನುಭವಿಸಬೇಕಾಯಿತು ! ಆದ್ದರಿಂದ ಆದಷ್ಟು ಬೇಗ ಈ ದುಃಖದಿಂದ ಮೋಕ್ಷವನ್ನು, ಬಿಡುಗಡೆಯನ್ನು ನೀಡಪ್ಪ – ಎಂಬ ಆಶಯದಲ್ಲಿ ಕೃಷ್ಣನನ್ನು 'ಸಿದ್ಧಿದಃ'– ಎಂದು ಸ್ತುತಿಸುವರು.

**ವೃಷಾಹೀ ವೃಷಭೋ ವಿಷ್ಣುರ್ವೃಷಪರ್ವಾ ವೃಷೋದರಃ ।**

**ವರ್ಧನೋ ವರ್ಧಮಾನಶ್ಚ ವಿವಿಕ್ತಃ ಶ್ರುತಿಸಾಗರಃ || ೨೮ ||**

**೨೫೮. ವೃಷಾಹೀ – ಶ್ರೇಷ್ಠವಾದ ಪ್ರಕಾಶವುಳ್ಳವನು.**

**ವಿವರಣೆ :** ಗುಣವುಳ್ಳವನು ಹೇಗೆ ಗುಣೀ ಎನಿಸುವನೋ ಹಾಗೆ 'ವೃಷಾಹ'ವುಳ್ಳವನು ವೃಷಾಹೀ. 'ಪುರುಷರ್ಷಭ' ಮುಂತಾದ ಕಡೆಗಳಲ್ಲಿ ಶ್ರೇಷ್ಠ ಎಂಬ ಅರ್ಥದಲ್ಲಿ ವೃಷಭ ಶಬ್ದ ಬಳಸಲಾಗುವುದು. ವೃಷಶಬ್ದಕ್ಕೂ ಅದೇ ಅರ್ಥ. ಅಹ ಎಂದರೆ ಹಗಲು. ಹಗಲು ಅಂದರೆ ಪ್ರಕಾಶ, ಬೆಳಕು. ಆದುದರಿಂದ 'ವೃಷಾಹೀ'- ಎಂಬುದಕ್ಕೆ ಶ್ರೇಷ್ಠವಾದ ಪ್ರಕಾಶವುಳ್ಳವನು ಎಂಬ ಅರ್ಥ.

ಭಗವಂತನ ಪ್ರಕಾಶದ ಮುಂದೆ ಸೂರ್ಯನ, ಚಂದ್ರನ, ಅಗ್ನಿಯ ಪ್ರಕಾಶವೆಲ್ಲ ಮಸುಕಾಗಿ ಬಿಡುವುದು. ಯಾಕೆಂದರೆ, ಭಗವಂತನ ಪ್ರಕಾಶ ಉಳಿದೆಲ್ಲ ಪ್ರಕಾಶ-ಪದಾರ್ಥಗಳ ಪ್ರಕಾಶಕ್ಕಿಂತಲೂ ಮಿಗಿಲು. ಆದುದರಿಂದಲೇ ಭಗವಂತನ ಪ್ರಕಾಶ ಶ್ರೇಷ್ಠ.

ಶ್ರೀಕೃಷ್ಣ ಧೃತರಾಷ್ಟ್ರನಿಗೆ ವಿಶ್ವರೂಪವನ್ನು ತೋರಿಸಿದಾಗ ದುರ್ಯೋಧನಾದಿಗಳು ಅದನ್ನು ಕಾಣಲಾರದೆ ಕಣ್ಣು ಮುಚ್ಚಿಕೊಂಡು ಹೊರ ನಡೆದರೆಂದರೆ ಅವನ ಪ್ರಕಾಶ ಎಷ್ಟು ಪ್ರಖರ ಎಂದು ಊಹಿಸಬಹುದು.

ಶ್ರೀ ಮಧ್ವ ಗುರುಗಳ ಚರಿತ್ರೆಯಲ್ಲಿ 'ದುರ್ಮಂತ್ರ್ಯೈಃ ಖಲಪಖಲೈಃ.....' ಇತ್ಯಾದಿ ಮಾತಿನಲ್ಲಿ ಹೀಗೊಂದು ಘಟನೆಯ ಉಲ್ಲೇಖ ಬಂದಿದೆ. ದುಷ್ಟರ ಪ್ರಚೋದನೆಗೆ ಒಳಗಾಗಿ ಸರಿದಂತರ ಗ್ರಾಮದ ಅಧಿಪತಿ ಮಧ್ವರಿಗೆ ಹೊಡೆಯಬೇಕೆಂದು ಬರುವನು. ಮಧ್ವರು ಆ ಗ್ರಾಮದಿಂದ ಹೊರಡುತ್ತಿರುವರು. ದೂರದಿಂದ ಮಧ್ವರನ್ನು **'ಪ್ರೋದ್ಯಂತಂ ರವಿಮಿವ.....'** ಉದಯಿಸುವ ಸೂರ್ಯನಂತೆ ಕಾಂತಿಸಂಪನ್ನರನ್ನಾಗಿ ಕಂಡು, ಆಶ್ಚರ್ಯಚಕಿತನಾಗಿ ಪ್ರಣಾಮ ಮಾಡಿ ಬಿಡುವನು.

ಶ್ರೀ ಮಧ್ವರಲ್ಲಿ ಇಂತಹ ಕಾಂತಿ ಎಲ್ಲಿಂದ ಬಂತು ? ಭಗವಂತನನ್ನು 'ವೃಷಾಹೀ' - ಎಂದು ಉಪಾಸನೆ ನಡೆಸುವ ಮೂಲಕ ಬಿಂಬದ ಕಾಂತಿ ಪ್ರತಿಬಿಂಬದಲ್ಲಿ ಪ್ರತಿಫಲಿಸುವಂತಾಗಿದೆಯಷ್ಟೇ.

**೨೫೯. ವೃಷಭಃ – ಭಕ್ತರ ಅಭೀಷ್ಟಗಳನ್ನು ಸುರಿಸುವವನು.**

**ವಿವರಣೆ :** ವರ್ಷತೀತಿ ವೃಷಭಃ, 'ವೃಷು ಸೇಚನೇ' - ಭಕ್ತರ ಅಭೀಷ್ಟಗಳನ್ನೆಲ್ಲ ಸುರಿಸುವವನು.

ವೇದ ಭಗವಂತನನ್ನು ವೃಷಭ ಎಂದು ಕರೆದಿದೆ. -

**ಚತ್ವಾರಿ ಶೃಂಗಾ ತ್ರಯೋ ಅಸ್ಯ ಪಾದಾ ದ್ವೇ ಶೀರ್ಷೇ ಸಪ್ತ ಹಸ್ತಾಸೋ ಅಸ್ಯ ।**
**ತ್ರಿಧಾ ಬದ್ಧೋ ವೃಷಭೋ ರೋರವೀತಿ ಮಹೋ ದೇವೋ ಮರ್ತ್ಯಾನ್ ಆವಿವೇಶ ॥**

ಇದರಲ್ಲಿ ಭಗವಂತನ ವಿಚಿತ್ರರೂಪದ ವರ್ಣನೆ ಬಂದಿದೆ.
ಚತ್ವಾರಿ ಶೃಂಗಾ: ನಾಲ್ಕು ಕೋಡುಗಳು. ತ್ರಯೋ ಅಸ್ಯ ಪಾದಾ: ಮೂರು ಪಾದಗಳು ದ್ವೇ ಶೀರ್ಷೇ : ಎರಡು ತಲೆಗಳು. ಸಪ್ತ ಹಸ್ತಾಸಃ : ಏಳು ಕೈಗಳು. ತ್ರಿಧಾ ಬದ್ಧಃ ಮೂರು ಕಡೆಗಳಲ್ಲಿ ಸಂಬದ್ಧನಾಗಿದ್ದಾನೆ. ಯಾರನ್ನು ಪ್ರವೇಶ ಮಾಡಿದ್ದಾನೆ ? ಮರ್ತ್ಯಾನ್ ಆವಿವೇಶ' ಮರಣಶೀಲರಾದ ಮಾನವರನ್ನೆಲ್ಲ ಪ್ರವೇಶಿಸಿದ್ದಾನೆ. ಯಾರು? 'ವೃಷಭೋ ಮಹೋ ದೇವಃ'- ವೃಷಭ ಎಂಬ ಹೆಸರಿನ ಮಹಾದೇವ.

ಚತ್ವಾರಿ ಶೃಂಗಾ : ಅಂದರೆ ನಾಲ್ಕು ವೇದಗಳೇ ಈ ವ್ಯಕ್ತಿಯ ಕೋಡಿನಂತೆ ಇರುವವು. ಹಸುವನ್ನು ಹೇಗೋ 'ಶೃಂಗಗ್ರಾಹಿಕತಯಾ' - ಕೋಡನ್ನು ಹಿಡಿದು ಪರಿಚಯಿಸಲಾಗುವುದೋ ಹಾಗೆ ದೇವರನ್ನು ಶೃಂಗಗ್ರಾಹಿಕತಯಾ ಪರಿಚಯಿಸಲು ಪ್ರಯೋಜಕಗಳಾಗುವವು ನಾಲ್ಕು ವೇದಗಳು. ಆದುದರಿಂದಲೇ ಅವುಗಳನ್ನು ಕೋಡುಗಳು ಎಂದೇ ಕರೆಯಲಾಗಿದೆ.

ತ್ರಯೋ ಅಸ್ಯ ಪಾದಾಃ – ಆ ವ್ಯಕ್ತಿಗೆ ಮೂರು ಪಾದಗಳು. ಪಾದ ಶಬ್ದಕ್ಕೆ ಇರಲಿಕ್ಕೆ ಜಾಗ ಎಂದರ್ಥ. ನಿಲ್ಲಲಿಕ್ಕೆ ಜಾಗ ಮೂರು ಶ್ವೇತದ್ವೀಪ, ವೈಕುಂಠ ಹಾಗೂ ಅನಂತಾಸನ. ಇವು ಮೂರು ವಾಸಸ್ಥಾನಗಳು.

ದ್ವೇ ಶೀರ್ಷೇ – ತಲೆಯ ಬೊಂಡು ಇರುವವರೆಗೆ ಮಾತ್ರ ನಮ್ಮ ಅಸ್ತಿತ್ವ. ಹೀಗೆ ನಾವು ತಲೆಯನ್ನು ಆಶ್ರಯಿಸಿಕೊಂಡಿರುವುದರಿಂದಲೇ ನಮ್ಮ ತಲೆ 'ಶೀರ್ಷ' ಎನಿಸುವುದು. ಆ ವ್ಯಕ್ತಿಯಾದರೂ ಚೇತನ ಹಾಗೂ ಅಚೇತನ ಎಂಬ ಎರಡನ್ನು ಆಶ್ರಯಿಸಿಕೊಂಡಿರುವುದರಿಂದ ಅವನಿಗೆ 'ದ್ವೇ ಶೀರ್ಷೇ' – ಎನ್ನಲಾಗಿದೆ.

ಸಪ್ತ ಹಸ್ತಾಸಃ – ಏಳು ಲೋಕಗಳಲ್ಲಿ ತನ್ನ ಚಟುವಟಿಕೆಗಳನ್ನು ಹರಡಿರುವವನು.

ತ್ರಿಧಾ ಬದ್ಧಃ – ಪ್ರತಿಯೊಬ್ಬರ ದೇಹದಲ್ಲೂ ಹೃದಯ, ಕಂಠ, ಕಣ್ಣು – ಈ ಮೂರು ಜಾಗಗಳಲ್ಲಿ ಕಟ್ಟಲ್ಪಟ್ಟು ಎಚ್ಚರ, ಸ್ವಪ್ನ,ನಿದ್ರೆ ಈ ಮೂರು ಅವಸ್ಥೆಗಳಿಗೆ ನಿಯಾಮಕನಾಗಿ ವಿಶ್ವ, ತೈಜಸ, ಹಾಗೂ ಪ್ರಾಜ್ಞ ಎಂಬ ಹೆಸರಿನ ರೂಪಗಳಿಂದ ಮೂರು ಕಡೆಗಳಲ್ಲಿ ಇರುವನು. ಶ್ವಾಸ ಇರುವಷ್ಟು ಕಾಲ – ಒಂದೋ ಎಚ್ಚರದಲ್ಲಿ, ಒಂದೋ ಸ್ವಪ್ನದಲ್ಲಿ, ಇಲ್ಲವೇ ನಿದ್ರೆಯಲ್ಲಿ ಜೀವ ಇರುವುದರಿಂದ ಭಗವಂತನು 'ತ್ರಿಧಾ ಬದ್ಧ'ನಾಗಿಯೇ ಇರುವನು.

ಹೀಗೆ ತಿಳಿದುಕೊಂಡರೆ ಆ ಮಹಾದೇವ ನಮ್ಮ ಪಾಲಿಗೆ 'ವೃಷಭ'– ಅಭೀಷ್ಟಗಳನ್ನು ಸುರಿಸುವವನಾಗುವನು.

ಋಗ್ವೇದದ ಈ ಮಂತ್ರದಲ್ಲಿ ಮಹಾದೇವ ಎನಿಸಿರುವ ಭಗವಂತನನ್ನು ನಾಲ್ಕು ಕೋಡುಗಳುಳ್ಳವನು, ಮೂರು ಪಾದಗಳುಳ್ಳವನು, ಎರಡು ಶೀರ್ಷಗಳುಳ್ಳವನು, ಸಪ್ತ ಪಾದಗಳುಳ್ಳವನು – ಮೂರು ಕಡೆಗಳಲ್ಲಿ ಬದ್ಧನಾಗಿರುವನು. – ಎಂದು ಯಾರು ಉಪಾಸನೆ ನಡೆಸುವರೋ ಅವರ ಪಾಲಿಗೆ ಅವನು 'ವೃಷಭ' ಅಭೀಷ್ಟಗಳನ್ನು ವರ್ಷಣೆ ಮಾಡುವವನಾಗುವನು – ಎಂದು ಪ್ರತಿಪಾದಿಸಲಾಗಿದೆ.

ಋಗ್ವೇದದಲ್ಲಿ ಉಲ್ಲೇಖಗೊಂಡ 'ವೃಷಭ' ನಾಮದಿಂದಲೇ ಭೀಷ್ಮರೂ 'ವೃಷಭ' ಎಂದು ಕೃಷ್ಣನನ್ನು ಕರೆದಿರುವರು.

**೨೬೦. ವಿಷ್ಣುಃ – * ಸರ್ವತ್ರ ಪ್ರವೇಶ ಮಾಡುವವನು.**

*** ಎಲ್ಲ ಗುಣಗಳೂ ಯಾರಲ್ಲಿ ಪ್ರವೇಶಿಸಿರುವವೋ ಅಂತಹವನು.**

**ವಿವರಣೆ :** ವಿಶತೀತಿ ವಿಷ್ಣುಃ – ಎಲ್ಲ ಕಡೆಯೂ ತಲೆ ಹಾಕುವುದರಿಂದ ದೇವರಿಗೆ ವಿಷ್ಣು ಎಂದು ಹೆಸರು. ನಾವು ನೀರಿನೊಳಗೆ ಪ್ರವೇಶ ಮಾಡ್ತೇವೆ. ಆದರೆ ಮಣ್ಣಿನೊಳಗೆ ನಮಗೆ ಪ್ರವೇಶಿಸಲಾಗದು. ಬೇಕಾದರೆ ಮಣ್ಣಿನ ಮೇಲೆ ಕುಳಿತುಕೊಳ್ಳುವೆವು. ಆದರೆ ನೀರಿನ ಮೇಲೆ ಕುಳಿತುಕೊಳ್ಳಲಾಗದು. ದೇವರು ಹಾಗಲ್ಲ. ನೀರಿನ ಮೇಲೆಯೂ ಕುಳಿತುಕೊಳ್ಳಬಲ್ಲನು. ಮಣ್ಣಿನ ಒಳಗೂ ಹೊಕ್ಕಬಲ್ಲ.

ಹೀಗೆ ಪ್ರತಿಯೊಂದು ವಸ್ತುವಿನಲ್ಲೂ ಪ್ರವೇಶಿಸಿ, ತಲೆ ಹಾಕುವುದರಿಂದ ಅವನು ವಿಷ್ಣು. ನಮ್ಮಲ್ಲಿ ದೋಷ ಎನಿಸುವ ಈ ಧರ್ಮ ದೇವರಲ್ಲಿ ಗುಣ ಎನಿಸಬಲ್ಲದು. ನಾವು ಮತ್ತೊಬ್ಬರ ವ್ಯವಹಾರಕ್ಕೆ ತಲೆ ಹಾಕಿದರೆ ನಿನಗ್ಯಾಕೆ ಅಧಿಕ ಪ್ರಸಂಗ ಎಂದು ಬೈಸಿಕೊಳ್ಳಬೇಕಾಗುವುದು. ಆದರೆ ದೇವರು ಮಾತ್ರ ಎಲ್ಲೆಡೆ, ಎಲ್ಲ ವ್ಯವಹಾರಗಳಲ್ಲೂ ತಲೆ ಹಾಕುವವನೆಂದು ವಿಷ್ಣುನಾಮದ ಅರ್ಥವಾಗಿ, ಅವನ ಹೆಗ್ಗಳಿಕೆಯ ಪ್ರಯೋಜಕವಾಗಿ ಹೊಗಳುವೆವು. ಹಾಗೆಯೇ ಎಲ್ಲ ಗುಣಗಳೂ ಯಾರಲ್ಲಿ ಸೇರಿಕೊಳ್ಳುವವೋ ಅವನು ವಿಷ್ಣು. ಯಾವುದು ಗುಣ ಎಂದಿದೆ ಅದೆಲ್ಲವೂ ದೇವರಲ್ಲಿ ಪ್ರವೇಶಿಸುವುದು. 'ವಿಶಂತಿ ಗುಣಾಃ ಅಸ್ಮಿನ್ನಿತಿ ವಿಷ್ಣುಃ' ಯಾರು ಎಲ್ಲದರಲ್ಲೂ ಸೇರಿಕೊಂಡಿರುವನೋ, ಯಾರಲ್ಲಿ ಎಲ್ಲ ಗುಣಗಳೂ ಸೇರಿಕೊಂಡಿರುವವೋ ಅವನು ವಿಷ್ಣು.

**೨೬೧. ವೃಷಪರ್ವಾ– ಭಕ್ತರ ಪುಣ್ಯ ಕೆಲಸಗಳನ್ನು ತುಂಬಿಸುವವನು.**

**ವಿವರಣೆ :** ವೃಷ ಎಂದರೆ ಪುಣ್ಯ ಕೆಲಸಗಳು. ಅವುಗಳನ್ನು ಪರ್ವತಿ – ಪೂರಯತೀತಿ ಪೂರ್ಣಗೊಳಿಸುವವನೇ 'ವೃಷಪರ್ವಾ.'

ನಮ್ಮ ಪುಣ್ಯ ಕೆಲಸಗಳನ್ನು ದೇವರು ಹೇಗೆ ಪೂರ್ಣಗೊಳಿಸುವನು ? ನಾವು ಜಪ, ಪೂಜೆ, ಯಜ್ಞ, ದೇವರ ಪ್ರದಕ್ಷಿಣೆ - ಮುಂತಾದ ಪ್ರತಿಯೊಂದು ಪುಣ್ಯಕರ್ಮ ನಡೆಸಿದ ಮೇಲೂ ಒಂದು ಪ್ರಾರ್ಥನೆಯನ್ನು ಸಲ್ಲಿಸುವೆವು - 'ಯಸ್ಯ ಸ್ಮೃತ್ಯಾ ಚ ನಾಮೋಕ್ತ್ಯಾ ತಪೋಯಜ್ಞ ಕ್ರಿಯಾದಿಷು ನ್ಯೂನಂ ಸಂಪೂರ್ಣತಾಂ ಯಾತಿ ಸದ್ಯೋ ವಂದೇ ತಮಚ್ಯುತಮ್' ಯಾವ ಅಚ್ಯುತನ ಸ್ಮರಣೆಯಿಂದಾಗಿ ಹಾಗೂ ನಾಮಗಳ ಉಚ್ಚಾರಣೆಯಿಂದಾಗಿ ತಪಸ್ಸು, ಯಜ್ಞ, ಕ್ರಿಯಾದಿಗಳಲ್ಲಿ ಏನು ನ್ಯೂನತೆ ಬಂದರೂ ಅದು ಪರಿಪೂರ್ಣ ಎನಿಸುವುದೋ ಅಂತಹ ಅಚ್ಯುತನಿಗೆ ವಂದನೆ.

ಜಪ ಮಾಡುವಾಗ ಮನಸ್ಸು ಎಲ್ಲೋ ಇರುವುದು; ಪೂಜಿಸುವಾಗ ಅದೆಷ್ಟೋ ಅಪರಾಧಗಳು ನಡೆಯುವವು. ಯಜ್ಞ ಮಾಡುವಾಗ ಆಹುತಿಗಳಲ್ಲಿ ನ್ಯೂನತೆ ಬರುವುದು. ಹೀಗೆ ಯಾವುದೇ ಧಾರ್ಮಿಕ ಕರ್ಮ ನೂರಕ್ಕೆ ನೂರು ಪಾಲು ಸರಿಯಾಗಿ ನಡೆಸಲು ಸಾಧ್ಯವೇ ಇಲ್ಲ. ಇಷ್ಟೇ ಅಲ್ಲದೆ, ಎಷ್ಟೋ ಬಾರಿ ಕರ್ಮವನ್ನು ಪೂರ್ಣಗೊಳಿಸಲಾಗದೆ ಮಧ್ಯದಲ್ಲಿಯೇ ಕರ್ಮವನ್ನು ಬಿಟ್ಟು ಬಿಡಬೇಕಾಗುವುದು. ಆದರೆ ಅಂತಹ ಪ್ರಸಂಗಗಳಲ್ಲೆಲ್ಲ ಭಗವಂತನ ಭಕ್ತಿಪೂರ್ವಕ ಸ್ಮರಣೆ ಹಾಗೂ ಅಚ್ಯುತ, ಅನಂತ, ಗೋವಿಂದ ಎಂಬ ನಾಮಗಳ ಉಚ್ಚಾರಣೆ ನಡೆಸಿದೆವೆಂದರೆ ಅವುಗಳಿಂದ ಪ್ರಸನ್ನನಾಗುವ ಭಗವಂತನು ಆ ಕರ್ಮ ಎಷ್ಟೇ ಲೋಪದೋಷಗಳಿಂದ ಕೂಡಿದ್ದಿರಲಿ, ನ್ಯೂನತೆಗೆ ಒಳಗಾಗಿದ್ದಿರಲಿ ಆ ಲೋಪದೋಷ ನ್ಯೂನತೆಗಳನ್ನೆಲ್ಲ ಪರಿಹರಿಸಿ ಆಯಾ ಕರ್ಮ ಪೂರ್ಣವಾಗಿ ಆಚರಿಸಲ್ಪಟ್ಟಿದ್ದರೆ ಎಷ್ಟು ಪುಣ್ಯವೋ ಅಷ್ಟು ಪುಣ್ಯವನ್ನು ಅನುಗ್ರಹಿಸುವನು. ಆದುದರಿಂದಲೇ ಅವನು 'ವೃಷಪರ್ವಾ' . ಈ ನಾಮದ ಉಪಾಸನೆ ನಮಗೆ ಪ್ರತಿನಿತ್ಯ ಬೇಕು. ನಿತ್ಯ ನಾವು ಸಂಧ್ಯಾವಂದನೆಯನ್ನೋ, ಪೂಜೆಯನ್ನೋ ಮಾಡ ಹೊರಟಾಗ ಮನಸ್ಸು ಎಲ್ಲೋ ಹೋಗುವ ಪ್ರಯುಕ್ತ ನಮ್ಮ 'ವೃಷ'ದ, ಧರ್ಮದ ಲೋಟ ಕಾಲು ಭಾಗವಷ್ಟೇ ತುಂಬುವುದು. ಆದರೂ ಭಕ್ತವತ್ಸಲನಾದ ದೇವರು ಇನ್ನೂ ಮುಕ್ಕಾಲು ಭಾಗವನ್ನು ತಾನೇ ತುಂಬಿಸಿ 'ವೃಷಪರ್ವಾ' ಎಂದೆನಿಸಿ ಮೆರೆಯುವನು.

**೨೬೨. ವೃಷೋದರಃ – ತೆಳುವಾಗಿ, ಸುಂದರವಾದ ಹೊಟ್ಟೆ ಉಳ್ಳವನು.**

**ವಿವರಣೆ :** ಒಳ್ಳೆಯ ಹೊಟ್ಟೆ ಉಳ್ಳವನೇ ವೃಷೋದರ. ಪುಟ್ಟ ಹೊಟ್ಟೆಯೇ ಒಳ್ಳೆಯ

ಹೊಟ್ಟೆ. **'ಉದರಂ ಚಿಂತ್ಯಮೀಶಸ್ಯ ತನುತ್ವೇಽಪ್ಯಖಿಲಂಭರಮ್'** - ಎಂದು ದ್ವಾದಶ ಸ್ತೋತ್ರದಲ್ಲಿ ಶ್ರೀ ಮಧ್ವ ಗುರುಗಳು ಭಗವಂತನ ಉದರ ತೆಳ್ಳಗಾಗಿದೆ ಎಂದೇ ಸ್ತುತಿಸಿರುವರು. ಹೊಟ್ಟೆ ಚಿಕ್ಕದಾಗಿ, ಚೊಕ್ಕವಾಗಿ ಇರಬೇಕು. ಆದರೆ ಅದರ ಹೊಕ್ಕಳು ಮಾತ್ರ ಗಂಭೀರವಾಗಿದ್ದಿರಬೇಕು.

ಶ್ರೀ ಮಧ್ವರ ಚರಿತ್ರೆಯಲ್ಲಿ ಒಂದು ಘಟನೆಯ ಉಲ್ಲೇಖ ಬರುವುದು. ಮಧ್ವರು ಕೇರಳದಲ್ಲಿ ಒಂದು ಕಡೆ ಉಪನ್ಯಾಸಕ್ಕೆ ಹೋಗಿದ್ದರು. ಅಲ್ಲಿ ಒಬ್ಬ ಭಿಕ್ಷೆಗೆ ಕರೆದ. ಆಚಾರ್ಯರು ಹೋದರು. ಪರಿಷ್ಕೃತವಾಗಿ ಭೋಜನವಾಯಿತು. ಕೇರಳದಲ್ಲಿ ಹಣ್ಣುಗಳು ಜಾಸ್ತಿ. ಒಬ್ಬರು ನೂರ ಎಂಟು ಬಾಳೆಹಣ್ಣುಗಳನ್ನು ಮಧ್ವರ ಎದುರಿಗೆ ಇಟ್ಟು ಇವನ್ನೆಲ್ಲ ನೀವೇ ತಿನ್ನಬೇಕು ಎಂದರು. ಶ್ರೀ ಮಧ್ವರು ಅಷ್ಟೂ ಬಾಳೆಹಣ್ಣುಗಳನ್ನು ತಿಂದರು. ಅಚ್ಯುತಪ್ರೇಕ್ಷಾಚಾರ್ಯರಿಗೆ ಆಶ್ಚರ್ಯ! ಶಿಷ್ಯ ಇಷ್ಟು ಬಾಳೆಹಣ್ಣುಗಳನ್ನು ತಿಂದರೂ ಹೊಟ್ಟೆ ಮೇಲೆ ಬರಲೇ ಇಲ್ಲ. ಆ ಬಗ್ಗೆ ಶಿಷ್ಯರಲ್ಲಿ ವಿಚಾರಿಸಿದಾಗ, ತಿಂದದ್ದನ್ನೆಲ್ಲ ಜೀರ್ಣಿಸುವ ಅಗ್ನಿ ತಮ್ಮ ಹೊಟ್ಟೆಯಲ್ಲಿದೆ ಎಂದು ಅವರು ಸಮಾಧಾನಿಸುವರು. ಹೀಗೆ ಹೊಟ್ಟೆ ತೆಳುವಾಗಿರುವುದೇ ಲಕ್ಷಣ.

ಭೀಷ್ಮರೂ ಕೃಷ್ಣನನ್ನು ವೃಷೋದರನಾಮದಿಂದ ಅವನ ಶಾರೀರಿಕ ಲಕ್ಷಣಗಳಲ್ಲಿ ಒಂದಾಗಿ ಹೊಟ್ಟೆ ತೆಳುವಾಗಿ, ಸುಂದರವಾಗಿ ಇರುವುದನ್ನು ಸ್ತುತಿಸಿರುವರು.

**೨೬೩. ವರ್ಧನಃ – ಭಕ್ತರನ್ನು ಚೆನ್ನಾಗಿ ಬೆಳೆಸುವ ಸ್ವಭಾವವುಳ್ಳವನು.**

**ವಿವರಣೆ :** 'ವರ್ಧಯತೀತಿ ವರ್ಧನಃ' ಭಕ್ತರನ್ನು ಚೆನ್ನಾಗಿ ಬೆಳೆಸುವವನು. ಆಚೆ ಶಿಷ್ಟರನ್ನೂ ಈಚೆ ದುಷ್ಟರನ್ನೂ ಬೆಳೆಸುವವನು. ರಾವಣ ಬೆಳೆದ, ಕುಂಭಕರ್ಣ ಬೆಳೆದ, ಜರಾಸಂಧ ಬೆಳೆದ. ಅವರು ಬೆಳೆದು ಒಂದು ಹಂತಕ್ಕೆ ಬರುವ ತನಕ ಭಗವಂತ ಸುಮ್ಮನಿದ್ದ. ಬಳಿಕ ಅಳಿಸಿದ. ಹೀಗೆ ದುಷ್ಟರನ್ನು ಒಂದು ದಿನ ಪೂರ್ಣವಾಗಿ ಅಳಿಸುವುದಕ್ಕಾಗಿಯೇ ಅದುವರೆಗೆ ಅವರನ್ನು ಬೆಳೆಸುವನು.

ಶಿಷ್ಟರನ್ನು, ಸಜ್ಜನರನ್ನು ಚೆನ್ನಾಗಿ ಬೆಳೆಸುವನು. ಭಕ್ತರ ಬೆಳವಣಿಗೆಗೆ ಸ್ವಲ್ಪವೂ ತೊಂದರೆ ಆಗದಂತೆ ಮುತುವರ್ಜಿ ವಹಿಸುವನು.

ಭೀಷ್ಮರು ತಾವು ಆಗಾಗ್ಗೆ ತಪ್ಪು ಮಾಡಿದಾಗ ಅವನ್ನೆಲ್ಲ ಸರಿಪಡಿಸಿ ತಿದ್ದಿತೀಡಿ ತನ್ನನ್ನು ಚೆನ್ನಾಗಿ ಬೆಳೆಸಿದವನೆಂಬ ಅಭಿಪ್ರಾಯದಲ್ಲಿ 'ವರ್ಧನಃ'- ಎಂದು ಸ್ತುತಿಸುವರು.

ನಮಗೆ ಬೆಳವಣಿಗೆ ಬೇಕು. ಹೇಗೆ ಬೆಳೆಯಬೇಕೆಂದು ಗೊತ್ತಿಲ್ಲ. ಆದ್ದರಿಂದ ಕೃಷ್ಣನಲ್ಲಿ ಒಪ್ಪಿಸಿ ಬಿಡೋಣ - 'ಎನ್ನನ್ನು ಬೆಳೆಸಪ್ಪ!' - ಎಂದು. ನಮ್ಮ ಮಾತನ್ನು ಕೃಷ್ಣ ಕೇಳಬೇಕೆಂದರೆ ಹೇಗೆ ನಾವು ಇರಬೇಕೋ ಹಾಗೆ ಇರೋಣ. ಹಾಗಾದರಷ್ಟೇ ನಮ್ಮನ್ನು ಬೆಳೆಸುವ ಹೊಣೆಗಾರಿಕೆಯನ್ನು ಭಗವಂತ ವಹಿಸಿಕೊಳ್ಳುವನು.

ಹೇಗೆ ತಂದೆ ತಾಯಿಯಂದಿರು ತಮ್ಮ ಮಗುವನ್ನು ಒಂದು ಹಂತದ ವರೆಗೆ ಬೆಳೆಸಿ, ಆಮೇಲೆಯಷ್ಟೇ ಮುಂದಿನ ಅವನ ಬೆಳವಣಿಗೆಗಾಗಿ ಗುರುಗಳ ಕೈಗೆ ಅವನನ್ನು ನೀಡುವರೋ, ಹಾಗೆಯೇ ನಮ್ಮ ಬೆಳವಣಿಗೆ ಒಂದು ಹಂತಕ್ಕೆ ಬಂದಾಗ, ಅಂದರೆ ಒಂದು ಹಂತದ ಸದಾಚಾರಗಳನ್ನು ಅಳವಡಿಸಿಕೊಂಡ ಬಳಿಕ ನಮ್ಮನ್ನು ದೇವರಿಗೆ ಮುಂದಿನ ಬೆಳವಣಿಗೆಗಾಗಿ ನಿವೇದಿಸಿಕೊಳ್ಳೋಣ.

**೨೬೪. ವರ್ಧಮಾನಃ – ತನ್ನ ತಿಳುವಳಿಕೆಯನ್ನು ನೀಡುವ ಮೂಲಕ ಬೆಳೆಯುತ್ತಿರುವವನು.**

**ವಿವರಣೆ :** ನಮ್ಮನ್ನು ಬೆಳೆಸುವುದು ಮಾತ್ರವಲ್ಲ, ಅವನೂ ಬೆಳೆಯುತ್ತಿದ್ದಾನೆ. ಭಗವಂತನನ್ನು ಶಾಶ್ವತ, ಒಂದೇ ರೀತಿಯಾಗಿ ಇರುವವನು ಎಂದು ಶಾಸ್ತ್ರದಲ್ಲಿ ಪ್ರತಿಪಾದಿಸಲಾಗಿದೆ. ಇದು ಅವನ ಮಟ್ಟಿಗೆ. ಅಂದರೆ ಅವನು ತನ್ನ ಮಟ್ಟಿಗೆ ಒಂದೇ ರೀತಿಯಾಗಿ ಇರುವವನು. ಆದರೆ ನಮ್ಮ ಮಟ್ಟಿಗೆ ಬೆಳೆಯುತ್ತಾ ಇದ್ದಾನೆ. ಇಂದು ದೇವರನ್ನು ಸ್ವಲ್ಪ ತಿಳಿದುಕೊಂಡೆವು. ನಾಳೆ ಇನ್ನೂ ಸ್ವಲ್ಪ ಹೆಚ್ಚು ತಿಳಿದುಕೊಳ್ಳುವೆವು. ನಾಡದ್ದು ಮತ್ತೂ ಸ್ವಲ್ಪ ಹೆಚ್ಚು ತಿಳಿದುಕೊಳ್ಳುತ್ತೇವೆ. ಹಾಗಾದರೆ ನಮ್ಮಲ್ಲಿ ದೇವರು ಬೆಳೆದ; ಬೆಳೆದ; ಬೆಳೆದ. ಇದ್ದಕ್ಕಿದ್ದಂತೆ ಸಹಸ್ರನಾಮದ ಪ್ರವಚನಕ್ಕೆ ಬಂದು ಕುಳಿತರೆ ದೇವರ ಬಗ್ಗೆ ಏನೂ ತಿಳಿಯುವುದಿಲ್ಲ.. ಪ್ರತಿನಿತ್ಯ ಪ್ರವಚನಕ್ಕೆ ಬರುತ್ತಿದ್ದರೆ ದೇವರ ಬಗ್ಗೆ ಸ್ವಲ್ಪ ಸ್ವಲ್ಪ ತಿಳಿಯಲು ಪ್ರಾರಂಭವಾಗುವುದು. ಹಾಗಾದರೆ ಸ್ವಲ್ಪ ಸ್ವಲ್ಪ ದೇವರ ಬೆಳವಣಿಗೆ ಆಗಲು ಶುರುವಾಯಿತು - ಎಂದರ್ಥ.

'ವರ್ಧಮಾನಃ' ಯಾರು ಭಗವಂತನಲ್ಲಿ ತಮ್ಮನ್ನು ಬೆಳೆಸಲು ಒಪ್ಪಿಸುವರೋ ಅವರಲ್ಲಿ ಭಗವಂತನು ಬೆಳೆಯಲು ಪ್ರಾರಂಭಿಸುವನು. ನಮ್ಮಲ್ಲಿ ಭಗವಂತ ಬೆಳೆಯುವುದೇ ನಮ್ಮ ಬೆಳವಣಿಗೆ. ಮನೆಯಲ್ಲಿ ಮಕ್ಕಳನ್ನು ಚೆನ್ನಾಗಿ ಬೆಳೆಸಿದರೆಂದರೆ ತಂದೆ ತಾಯಿಯಂದಿರು ಚೆನ್ನಾಗಿ ಬೆಳೆದರೆಂದು ಅರ್ಥ ತಾನೇ ? ಅದರಂತೆ ಭಗವಂತ ನಮ್ಮನ್ನು ಬೆಳೆಸುವುದು ಎಂದರೆ ಭಗವಂತ ತನ್ನ ಪ್ರಜ್ಞೆ ನಮ್ಮಲ್ಲಿ ದಿನದಿಂದ ದಿನಕ್ಕೆ, ಜಾಸ್ತಿ ಬರುವಂತೆ ಮಾಡುವುದು. ನಮ್ಮ ನಿಮ್ಮಲ್ಲಿ ಹೀಗೆ ದಿನದಿನಕ್ಕೆ ಭಗವಂತನ ಬೆಳವಣಿಗೆ ಎಷ್ಟಾಗುತ್ತೋ ! ನಿಜವಾಗಿ ತನ್ನಲ್ಲಿ ಭಗವಂತನ ಪ್ರಜ್ಞೆಯನ್ನು ದಿನದಿಂದ

ದಿನಕ್ಕೆ ಜಾಸ್ತಿ ಮಾಡಿಕೊಂಡು ತನ್ನ ಬೆಳವಣಿಗೆಯನ್ನು ಮಾಡಿಕೊಳ್ಳುತ್ತಿರುವವಳು ಲಕ್ಷ್ಮೀದೇವಿ ಮಾತ್ರ - **"ಬಗೆ ಬಗೆಯ ನೂತನವ ಕಾಣುತ ಮಿಗೆ ಹರುಷದಿಂ ಪೊಗಳಿ ಹಿಗ್ಗುವ"** ಶಾಸ್ತ್ರದಲ್ಲಿ ಬೇರೆ ಯಾವ ವ್ಯಕ್ತಿಯಲ್ಲೂ ಈ ಬಗೆಯ ಸಾಧನೆಯನ್ನು ಕಾಣುವಂತಿಲ್ಲ. ಲಕ್ಷ್ಮೀದೇವಿ ಮಾತ್ರ ದಿನದಿಂದ ದಿನಕ್ಕೆ ದೇವರನ್ನು ತನ್ನಲ್ಲಿ ಬೆಳೆಸಿಕೊಳ್ಳುತ್ತಲೇ ಇದ್ದಾಳೆ. ನಿನ್ನೆ ಒಂದು ರೀತಿಯಲ್ಲಿ ದೇವರನ್ನು ಕಂಡಿದ್ದರೆ, ಇಂದು ಮತ್ತೊಂದು ರೀತಿಯಲ್ಲಿ ದೇವರನ್ನು ಕಾಣುವಳು. ಅಂದರೆ ನಿನ್ನೆದ್ದನ್ನು ಬಿಟ್ಟಿದ್ದಾಳೆ; ಮರೆತು ಬಿಟ್ಟಿದ್ದಾಳೆ ಎಂದರ್ಥವಲ್ಲ. ನಿನ್ನೆದ್ದನ್ನೂ ಬಿಡದೆ ಇಂದು ಮತ್ತೊಂದನ್ನೂ ಸೇರಿಸಿಕೊಂಡಿರುವಳಷ್ಟೇ. ನಾಳೆ ಮತ್ತೊಂದನ್ನೂ ಸೇರಿಸುವಳು. ನಾಡದ್ದು ಇನ್ನೊಂದನ್ನು. ಹೀಗೆ ದೇವರು ಲಕ್ಷ್ಮಿಯಲ್ಲಿ ದಿನದಿಂದ ದಿನಕ್ಕೆ ಬೆಳೀತಾ ಬೆಳೀತಾ.... ಇನ್ನೂ ಬೆಳೆಯುತ್ತನೇ ಇದ್ದಾನೆ.

ದೇವರನ್ನು ನಮ್ಮಲ್ಲಿ ಬೆಳೆಸುವ ಕೆಲಸ ಮಾಡಬೇಕು. ಅದಾಗದಿದ್ದರೆ ಉಳಿಸುವ ಕೆಲಸವನ್ನಾದರೂ ಮಾಡೋಣ. ಅಳಿಸುವ ಕೆಲಸವನ್ನಂತೂ ಖಂಡಿತಾ ಮಾಡಬಾರದು.

ಉಳಿಸುವುದು ಎಂದರೆ ದೇವರ ಬಗ್ಗೆ ಎಷ್ಟನ್ನು ಕೇಳಿದ್ದೇವೋ ಅಷ್ಟನ್ನೇ ನೆನಪಿನಲ್ಲಿಟ್ಟುಕೊಳ್ಳುವುದು. ದೇವರ ಬಗ್ಗೆ ಕೇಳಿದ್ದನ್ನು ಮರೆತು ಬಿಟ್ಟೆವೆಂದರೆ ದೇವರು ನಮ್ಮಲ್ಲಿ ಅಳಿದ ಎಂದರ್ಥ. ಅಳಿಸುವುದು ಬೇಡ; ದೇವರನ್ನು ಅಳಿಸಿದೆವೆಂದರೆ ನಾಳೆ ನಾವು ಅಳಬೇಕಾಗುತ್ತದೆ. ಬೆಳೆಸಲು ಸಾಧ್ಯವಿಲ್ಲ, ಆದರೆ ಹಿರಿಯರು ಕೊಟ್ಟ ದೇವರನ್ನು ನಮ್ಮಲ್ಲಿ ಉಳಿಸೋಣ.

ಭೀಷ್ಮರಲ್ಲಂತೂ ದೇವರು ದಿನದಿಂದ ದಿನಕ್ಕೆ ಬೆಳೆಯುತ್ತಲೇ ಇದ್ದಾನೆ. ಭೀಷ್ಮರು ದಕ್ಷಿಣಾಯನದಲ್ಲೇ ದೇಹತ್ಯಾಗ ಮಾಡದೆ ಉತ್ತರಾಯಣದವರೆಗೆ ನಿರೀಕ್ಷಣೆ ಮಾಡಿದ್ದೇ ತಾನು ಪರಶುರಾಮರ ಮೂಲಕ ಪಡೆದುಕೊಂಡಿದ್ದ ಜ್ಞಾನ ನಶಿಸಿ ಹೋಗದೆ ಉಳಿದ ಯೋಗ್ಯರಿಗೂ ತಲುಪುವಂತಾಗಬೇಕೆಂಬ ಉದ್ದೇಶದಿಂದಲೇ. ಹೊರತು ದಕ್ಷಿಣಾಯನದಲ್ಲಿ ದೇಹತ್ಯಾಗ ಮಾಡಿದರೆ ಸದ್ಗತಿ ಆಗುವುದಿಲ್ಲ. ಎಂಬ ಕಾರಣಕ್ಕಾಗಿ ಅಲ್ಲ. ಅಂತಹ ಉತ್ತಮರು ಯಾವ ಕಾಲದಲ್ಲಿ ಸತ್ತರೂ ಅವರಿಗೆ ಸದ್ಗತಿ ಆಗದಿರುವುದಿಲ್ಲ. ಆದುದರಿಂದ ಭೀಷ್ಮರು ಉತ್ತರಾಯಣದವರೆಗೆ ಕಾದದ್ದೇ ಜ್ಞಾನವನ್ನು ಬಂದವರಿಗೆಲ್ಲ ದಾನ ಮಾಡಬೇಕೆಂದೇ. ಹೀಗೆ ಕೃಷ್ಣನ ಎದುರೇ ಅವನ ಕುರಿತಾದ ಜ್ಞಾನವನ್ನು ದಾನ ಮಾಡುತ್ತ ಕ್ಷಣ ಕ್ಷಣಕ್ಕೆ ಶ್ರೀ ಕೃಷ್ಣನ ಹೊಸ ಹೊಸ ಪ್ರಜ್ಞೆ ತನ್ನಲ್ಲಿ ಹೆಚ್ಚಾಗುವಂತೆ ಮಾಡುವ ಮೂಲಕ ಕೃಷ್ಣನನ್ನು ಬೆಳೆಸುತ್ತ ಬೆಳೆಸುತ್ತ ಇದ್ದರು.

ಅಂತಹ ಬೆಳವಣಿಗೆಯನ್ನು ಇಟ್ಟುಕೊಂಡೇ ಕೃಷ್ಣನನ್ನು 'ವರ್ಧಮಾನಃ'- ಎಂದು ಸ್ತುತಿಸಿರುವರು.

**೨೬೫. ವಿವಿಕ್ತಃ – ನಮ್ಮೆಲ್ಲರಿಗಿಂತ ಬೇರೆಯಾಗಿರುವವನು.**

**ವಿವರಣೆ :** ಯಾವ ತಿಳುವಳಿಕೆಯ ಮೂಲಕ ಭಗವಂತ ನಮ್ಮಲ್ಲಿ ಬೆಳೆಯುತ್ತಿರುವುದು? ದೇವರನ್ನು ತಿಳಿಯಬೇಕು. ಏನೆಂತ ದೇವರನ್ನು ತಿಳಿಯಬೇಕು? ಎಂದಾಗ ಭೀಷ್ಮರು ಸ್ತುತಿಸಿದರು – 'ವಿವಿಕ್ತಃ' – ನಮ್ಮೆಲ್ಲರಿಗಿಂತ ಬೇರೆಯಾದವನು ಎಂದು ಅವನನ್ನು ತಿಳಿಯಬೇಕು.

ಹಾಲು, ನೀರು, ಮಜ್ಜಿಗೆ ಈ ಮೂರು ದ್ರವ ವಸ್ತುಗಳಿಗೂ ತುಪ್ಪ ಹಾಕಿದರೆ ಅವುಗಳೊಂದಿಗೆ ಸೇರಿಕೊಳ್ಳದೆ ಪ್ರತ್ಯೇಕವಾಗಿಯೇ ಇರುವುದು. ಹಾಲಿಗೆ ನೀರು ಸೇರಿಸಿದರೆ ಒಟ್ಟಾಗುವುದು. ಆದರೆ ತುಪ್ಪ ಹಾಕಿದರೆ ಅದು ಪ್ರತ್ಯೇಕವಾಗಿಯೇ ಇರುವುದು. ಅದೇ ರೀತಿ ನೀರು ಹಾಗೂ ಮಜ್ಜಿಗೆ ಅನ್ಯೋನ್ಯವಾಗಿ ಸೇರಿಕೊಳ್ಳುವವು. ಆದರೆ ನೀರಿಗೋ, ಮಜ್ಜಿಗೆಗೋ ತುಪ್ಪ ಹಾಕಿದರೆ, ಅದು ಅವುಗಳೊಂದಿಗೆ ಸೇರಿಕೊಳ್ಳದೆ ಪ್ರತ್ಯೇಕವಾಗಿಯೇ ಇರುವುದು. ಅದರಂತೆ ಭಗವಂತನೂ ತ್ರಿವಿಧ ಜೀವರಾಶಿಯಲ್ಲೂ ಸೇರದೆ ಪ್ರತ್ಯೇಕವಾಗಿಯೇ ಇರುವನು. ಹಾಲು ಸಾತ್ವಿಕಸ್ವಭಾವದ ದೇವಜೀವರನ್ನು ಸೂಚಿಸಿದರೆ, ಮಜ್ಜಿಗೆ ತಾಮಸಸ್ವಭಾವದ ಅಸುರಜೀವರನ್ನು ಸೂಚಿಸುವುದು, ನೀರು ಮನುಷ್ಯಜೀವರನ್ನು ಸೂಚಿಸಿಕೊಡುವುದು. ಆದುದರಿಂದ ಆ ಮೂರು ಬಗೆಯ ದ್ರವಗಳಲ್ಲೂ ತುಪ್ಪ ಪ್ರತ್ಯೇಕವಾಗಿಯೇ ಇರುವಂತೆ ತ್ರಿವಿಧ ಜೀವರಾಶಿಯಲ್ಲೂ ಭಗವಂತನು ಇರುವನಾದರೂ ಅವರೆಲ್ಲರಿಗಿಂತ 'ವಿವಿಕ್ತ'ನಾಗಿಯೇ ಇರುವನು.

ನಮ್ಮೊಳಗೆ ಇದ್ದರೂ, ನಮ್ಮ ಜೊತೆಗೇ ಇದ್ದರೂ ಹಾಲಿನಲ್ಲಿ ತುಪ್ಪದಂತೆ ನಮಗಿಂತ ಪ್ರತ್ಯೇಕವಾಗಿಯೇ ಇರುವನೆಂಬುದೇ ಭಗವಂತನ ತಿಳುವಳಿಕೆ. ನಮ್ಮಂತೆ ದೋಷವುಳ್ಳವನಲ್ಲ; ಅಜ್ಞಾನವುಳ್ಳವನಲ್ಲ; ಹುಟ್ಟು ಸಾವು ಉಳ್ಳವನಲ್ಲ; ಅಸ್ವಾತಂತ್ರ್ಯವುಳ್ಳವನಲ್ಲ; ಇತಿಮಿತಿಗಳಿಗೆ ಒಳಗಾಗುವವನಲ್ಲ - ಹೀಗೆ ಪ್ರತಿಯೊಂದು ಧರ್ಮದ ವಿಷಯದಲ್ಲೂ ನಮಗಿಂತ ವಿಲಕ್ಷಣನಾಗಿರುವವನು ಭಗವಂತನೆಂಬ ತಿಳುವಳಿಕೆಯೇ - ದಿನದಿಂದ ದಿನಕ್ಕೆ ದೃಢವಾಗುವುದೇ ಭಗವಂತ ನಮ್ಮಲ್ಲಿ 'ವರ್ಧಮಾನ'- ಬೆಳೆಯುವುದು - ಎಂದರ್ಥ.

**೨೬೬. ಶ್ರುತಿಸಾಗರಃ - ವೇದಗಳಿಗೆ ಸಮುದ್ರದಂತೆ ಇರುವವನು.**

**ವಿವರಣೆ :** ಭಗವಂತ ಹೇಗಿದ್ದಾನೆ? ಸಮುದ್ರದಂತೆ ಇದ್ದಾನೆ. ಯಾವುದರ ಸಮುದ್ರ? ಶ್ರುತಿಗಳ ಸಮುದ್ರ. ನೀರು ಎಲ್ಲಿ ಬತ್ತಿದರೂ ಸಮುದ್ರದಲ್ಲಿ ಇದ್ದೇ ಇರುವುದು. ಹಾಗೆಯೇ ನಮ್ಮ ನಿಮ್ಮ ಬಾಯಿಯಲ್ಲಿ ಶ್ರುತಿ ನಿಂತು ಹೋಗಬಹುದು. ಆದರೆ ಭಗವಂತನ ಬಾಯಿಯಿಂದ ಮಾತ್ರ ಯಾವಾಗಲೂ ವೇದ ಹೊರಹೊಮ್ಮುತ್ತಲೇ ಇರುವುದು. ಹೀಗೆ ವೇದದ 'ವಮನ' – ವಾಂತಿ ಮಾಡುವುದು ಇದನ್ನು ನಡೆಸುತ್ತಲೇ ಇರುವುದರಿಂದಲೂ ದೇವರು 'ವಾಮನ' ಎನಿಸುವನು. 'ಸಂತತಂ ಚಿಂತಯೇತ್ ಕಂಠಂ ಭಾಸ್ವತ್‌ಕೌಸ್ತುಭಭಾಸಕವ್ | ವೈಕುಂಠಸ್ಯಾಖಿಲಾ ವೇದಾಃ ಉದ್ಗೀರ್ಯಂತೇಽನಿಶಂ ಯತಃ' – ಎಂದು ಮಧ್ವಗುರುಗಳು ಸ್ತುತಿಸಿರುವಂತೆ ಭಗವಂತನ ಕಂಠದಿಂದ ವೇದಗಳು ಹೊರಹೊಮ್ಮುತ್ತ ಇರುವವು. ಕೇಳುವವರು ಯಾರು? ಎರಡು ಕಿವಿಗಳಿದ್ದರೆ ಸಾಕು. ಯಾರ ಕಿವಿಗಳು? ಹೇಳುವ ಭಗವಂತನದ್ದೇ ಕಿವಿಗಳು. ಅಂದರೆ ಅವನೇ ತಾನು ಹೇಳುವುದನ್ನು ಕೇಳುತ್ತಿರುತ್ತಾನೆ.

ಸಮುದ್ರದಿಂದ ನೀರು ಹೋಗುತ್ತದೆ, ಸಮುದ್ರಕ್ಕೆ ಬಂದು ಸೇರುತ್ತದೆ. ಸಮುದ್ರದಿಂದ ಎಷ್ಟು ಹೋದರೂ ಸಮುದ್ರದ ನೀರು ಬರಿದಾಗಲಾರದು. ಸೂರ್ಯ ಎಷ್ಟು ನೀರನ್ನು ಹೀರಿದರೂ ಸಮುದ್ರದ ನೀರು ಬರಿದಾಗಲಾರದು. ಭೀಷ್ಮರು ಕೃಷ್ಣನಲ್ಲಿ ನಿವೇದಿಸಿಕೊಳ್ಳುವರು – ಕೃಷ್ಣ ನಿನ್ನ ಮುಂದೆ ಸಹಸ್ರನಾಮವನ್ನು ಪಠಿಸುತ್ತಿದ್ದೇನೆ. ಎಂದರೆ ಸಮುದ್ರಕ್ಕೆ ನದಿ ಬಂದು ಸೇರಿದಂತೆ. ಒಂದು ದಿನ ನದಿ ಬರಿದಾಗುವುದು. ಉತ್ತರಾಯಣ ಬಂತೆಂದರೆ ನದಿ ಬತ್ತುವುದು. ಆದರೆ, ನೀರು ಸಮುದ್ರದಲ್ಲಿ ಹಾಗೆಯೇ ಇರುವುದು. ಈ ವಿಷ್ಣುಸಹಸ್ರನಾಮ ನಿನ್ನಲ್ಲಿ ಸೇರಿಕೊಂಡಿರುವುದು. ಶಾಶ್ವತವಾಗಿ ನೆಲೆಗೊಳ್ಳುವುದು.

ಹೀಗೆಯೇ ನಾವು, ನೀವು ಸ್ತೋತ್ರ ನಡೆಸುವೆವು. ಸ್ತೋತ್ರ ಎಂಬ ನೀರು ನಮ್ಮ ನಿಮ್ಮ ಶರೀರವೆಂಬ ನದಿಯಿಂದ ಹೊರಟಿದೆ. ಭಗವಂತನೆಂಬ ಸಮುದ್ರದಲ್ಲಿ ಶಾಶ್ವತವಾಗಿ ಇರುವುದು. ಆದುದರಿಂದ ನಾವು ಅಳಿದರೂ ನಮ್ಮ ನಿಮ್ಮ ಸ್ತೋತ್ರ ಉಳಿದುಕೊಳ್ಳುವುದು.

ಭೀಷ್ಮರು ಅಂತಾರೆ - ನಾನೀಗ ಸಾಯಲು ಸಿದ್ಧನಾಗಿದ್ದೇನೆ. ನನ್ನ ಬಾಯಿಯಿಂದ ಏನೆಲ್ಲ ಬರಬೇಕೋ ಅದೆಲ್ಲ ಬರುತ್ತಿದೆ. ನಾಳೆ ಬರಿದಾಗಬಹುದು. ಆದರೂ ನಿನ್ನಲ್ಲಿ ಉಳಿಯುವುದು. ಅದಕ್ಕಾಗಿ ಕೊನೆಯ ಕ್ಷಣದಲ್ಲಿ ವಿಷ್ಣುಸಹಸ್ರನಾಮ ಹೇಳಿ 'ಕೃಷ್ಣಾರ್ಪಣಮ್' ಬಿಡುತ್ತಿದ್ದೇನೆ.

ನಾವು ಯಾವುದೇ ಸಾಧನೆ ನಡೆಸಿ, ನಮ್ಮಲ್ಲಿಯೇ ಇಟ್ಟುಕೊಂಡೆವೆಂದರೆ

ನಾವು ಅಳಿಯುವಾಗ ನಮ್ಮ ಸಾಧನೆಯೂ ಅಳಿದು ಹೋದೀತು ! ಹಾಗಾಗಬಾರದೆಂದು 'ಕೃಷ್ಣಾರ್ಪಣ'ದ ಮೂಲಕ ಕೃಷ್ಣನಲ್ಲಿ ಸಾಧನೆಗಳನ್ನು ಅರ್ಪಿಸುವೆವು. ಇದರಿಂದಾಗಿ ಶಾಶ್ವತವಾಗಿ ಉಳಿಯುವುದು.

ಸಮಸ್ತ ವೇದಗಳಿಗೆ ನೀನು ಸಮುದ್ರದಂತೆ ಇರುವವನು; ಸಮಸ್ತ ವೇದಗಳು ನಿನ್ನಲ್ಲಿ ನೀರು ಸಮುದ್ರವನ್ನು ಹೇಗೋ ಹಾಗೆ ಆಶ್ರಯಿಸಿಕೊಂಡಿವೆ. ಯಾರಿಗೆ ಯಾವಾಗ ಬೇಕೋ ಆಗ ಅವರಿಗೆ ಆ ಭಾಗವನ್ನು ನೀಡಲು ನೀನು ಸಮರ್ಥನಾಗಿರುವಿ – ಎಂದು 'ಶ್ರುತಿಸಾಗರ' ನಾಮದಿಂದ ಕೃಷ್ಣನನ್ನು ಸ್ತುತಿಸಿರುವರು.

**ಸುಭುಜೋ ದುರ್ಧರೋ ವಾಗ್ಮೀ ಮಹೇಂದ್ರೋ ವಸುದೋ ವಸುಃ |**
**ನೈಕರೂಪೋ ಬೃಹದ್ರೂಪಃ ಶಿಪಿವಿಷ್ಟಃ ಪ್ರಕಾಶನಃ || ೨೯ ||**

**೨೬೭. ಸುಭುಜಃ – * ಒಳ್ಳೆಯ ತೋಳು ಉಳ್ಳವನು.**

*** ದೇವಕಿ ವಸುದೇವನೆ ಮುಂತಾದ ಒಳ್ಳೆಯವರಲ್ಲಿ ಕಾಣಿಸಿಕೊಳ್ಳುವವನು.**

**ವಿವರಣೆ :** ಒಳ್ಳೆಯ ತೋಳು ಉಳ್ಳವನೆಂಬುದು ಸುಭುಜನಾಮದ ಸಾಮಾನ್ಯಾರ್ಥ. ಸುಭು+ಜ-ಎಂದು ಪರಿಚ್ಛೇದ ಮಾಡಿ ವಿಶೇಷಾರ್ಥವನ್ನು ಪಡೆಯಬಹುದಾಗಿದೆ. ಸುಭು ಎಂದರೆ ಚೆನ್ನಾಗಿ ಇರುವವರು. ಯಾರು ? ವಸುದೇವ ದೇವಕಿಯರು, ಕೌಸಲ್ಯೆ ದಶರಥರು, ರೇಣುಕಾ ಜಮದಗ್ನಿಗಳು ಇವರೆಲ್ಲ ಸುಭುಗಳು. ಹೇಗೆ ಇರಬೇಕೆಂದು ಶಾಸ್ತ್ರ ತಿಳಿಸಿದೆಯೋ ಹಾಗೆ ಒಳ್ಳೆಯ ರೀತಿಯಿಂದ ಇದ್ದವರು. ಅವರಲ್ಲಿ 'ಜ' ಕಾಣಿಸಿಕೊಂಡವನೇ ಸುಭುಜ. ಒಳ್ಳೆಯವರಲ್ಲಿ ಕಾಣಿಸಿಕೊಳ್ಳುವವನಾದುದರಿಂದಲೇ ಭಗವಂತ ಸುಭುಜ. 'ಜ' - ಎಂದರೆ ಜನ್ಮ ಪಡೆಯುವವನು. ದೇವರ ಪಾಲಿಗೆ ಜನ್ಮ ಎಂದರೆ ಕಾಣಿಸಿಕೊಳ್ಳುವಿಕೆಯೇ.

**೨೬೮. ದುರ್ಧರಃ - ದುಖವುಳ್ಳ ದೈತ್ಯರಿಗೆ ನಾಶವನ್ನು ಕೊಡುವವನು.**

**ವಿವರಣೆ :** ದುರ್ ಎಂದರೆ ದುಃಖ. ದುಃಖವನ್ನು ಧರಿಸಿಕೊಳ್ಳುವ ದೈತ್ಯರೇ 'ದುರ್ಧ'ರು. ಮನುಷ್ಯರಿಗೂ ದುಃಖ ಇದೆ. ಆದರೆ ಅದು ಅಶಾಶ್ವತ. ಸ್ಫಟಿಕ ಮಣಿಯ ಬಳಿಯಲ್ಲಿ ಕೆಂಪು ದಾಸವಾಳ ಇಟ್ಟಾಗ ಆ ಮಣಿಯಲ್ಲಿ ಹೇಗೆ ಕೆಂಪು ಬಣ್ಣ ಕಾಣುವುದೋ ಹಾಗೆ ಬರೇ ತಾತ್ಕಾಲಿಕ. ಆದುದರಿಂದ ಶಾಶ್ವತವಾಗಿ ದುಃಖವುಳ್ಳ ದೈತ್ಯರೇ ಮುಖ್ಯವಾಗಿ 'ದುರ್ಧ'ರು. ಅವರನ್ನು ನಾಶಮಾಡುವವನು (ರೀಙ್ ಕ್ಷಯೇ) ದುರ್ಧರ, ದೈತ್ಯನಾಶಕ. ಬರೇ ದೈತ್ಯನಾಶಕ ಎಂದರೆ ದೈತ್ಯ ಜಾತಿಯಲ್ಲಿ ಬಂದ ಪ್ರಹ್ಲಾದನಿಗೂ ನಾಶಕ ಎಂಬ ಅರ್ಥ ಬಂದೀತು. ಹಾಗಾಗಬಾರದು. ಅದಕ್ಕಾಗಿ

ದುಃಖಿಗಳಾದ ದೈತ್ಯರ ನಾಶಕ ಎನ್ನಲಾಗಿದೆ. ಪ್ರಹ್ಲಾದ ದೈತ್ಯರ ಜಾತಿಯಲ್ಲಿ ಬಂದರೂ ಸುಖಿಯೇ ಹೊರತು ದುಃಖಿಯಲ್ಲ. ಆದುದರಿಂದ ದುಃಖಿದಗಳಾದ ದೈತ್ಯರ ನಾಶಕ ಎಂದಾಗ ಪ್ರಹ್ಲಾದನ ನಾಶಕ್ಕೆ ಪ್ರಸಕ್ತಿ ಬರುವುದಿಲ್ಲ.

ಸಹಜವಾಗಿ ದುಃಖವುಳ್ಳ ದೈತ್ಯರಿಗೆ ನಾಶವನ್ನು ಕೊಡುವವನು ಎಂಬ ಅಭಿಪ್ರಾಯದಲ್ಲಿ ಕೃಷ್ಣನನ್ನು 'ದುರ್ಧರ' - ಎಂದು ಸ್ತುತಿಸುತ್ತಿರುವ ಭೀಷ್ಮರ ಪ್ರಕಾರ ತಾವು ದೈತ್ಯನಾದ ದುರ್ಯೋಧನನ ಪಕ್ಷದಲ್ಲಿ ಇದ್ದರೂ, ಸಹಜವಾಗಿ ದುಃಖವುಳ್ಳವನೆನಿಸದ ಪ್ರಯುಕ್ತ ತನ್ನ ನಾಶಕನಾಗದೆ, ಸಹಜವಾಗಿ ದುಃಖವುಳ್ಳ ದುರ್ಯೋಧನಾದಿಗಳಿಗೆ ಮಾತ್ರ ಭೀಮಾದಿಗಳ ಮೂಲಕ ನಾಶಕ ಎನಿಸಿರುವ ಕೃಷ್ಣ.

**೨೬೯. ವಾಗ್ಮೀ - ಅರ್ಥಪೂರ್ಣವಾದ ಮಾತನ್ನು ಆಡುವವನು.**

**ವಿವರಣೆ :** ವಾಗ್ಮೀ ಶಬ್ದಕ್ಕೆ ಅರ್ಥ ಮಾತುಗಾರಿಕೆ ಉಳ್ಳವನು. ಮಾತುಗಾರಿಕೆ ಅರ್ಥಪೂರ್ಣವಾಗಿದ್ದಿರಬೇಕು. ಶ್ರೀಕೃಷ್ಣ ಸಂಧಾನಕ್ಕಾಗಿ ಹಸ್ತಿನಪುರಕ್ಕೆ ಹೋಗುವಾಗ ತನ್ನದ್ವೇ ರೂಪಗಳೆನಿಸಿರುವ ಪರಶುರಾಮ ಹಾಗೂ ವೇದವ್ಯಾಸರನ್ನೂ, ಇತರ ಮುನಿಗಳನ್ನೂ ಕರೆದೊಯ್ದು. ಯಾಕೆಂದರೆ ತನ್ನ ಮಾತು ವ್ಯರ್ಥವಾಗಬಾರದು; ಅರ್ಹರು ಅದನ್ನು ಕೇಳಿಸಿಕೊಳ್ಳುವಂತಾಗಬೇಕು ಎಂದು. ಒಂದು ವೇಳೆ ಅವರ್ಯಾರೂ ಇಲ್ಲದಿದ್ದಲ್ಲಿ ಹಸ್ತಿನಾಪುರದಲ್ಲಿ ದುರ್ಯೋಧನಾದಿ ದುಷ್ಟರು ಮಾತ್ರ ಇದ್ದು, ಅವರೆದುರು ಹೇಳುವ ಕೃಷ್ಣನ ಮಾತುಗಳು ವ್ಯರ್ಥವೆನಿಸುತ್ತಿದ್ದವು ತಾನೇ? ನಮ್ಮಲ್ಲಿ ಹೇಗೆ ಮತಪ್ರಚಾರದ ಸಂದರ್ಭದಲ್ಲಿ ತಮ್ಮ ಜನಗಳನ್ನೇ ಆ ಸಭೆಗೆ ಕರೆದೊಯ್ಯುತ್ತಾರೆ. ಯಾಕೆಂದರೆ ಅಲ್ಲಿಯ ಜನರಿಗೆ ಇವರ ಭಾಷಣ ಅರ್ಥವಾಗಲಾರದು ಎಂದು.

ಅದೇ ರೀತಿ ಕೃಷ್ಣ ಹೇಳಿದ ಮಾತು ದುರ್ಯೋಧನಾದಿಗಳಿಗೆ ಅರ್ಥ ಆಗಲಾರದು. ಅರ್ಥ ಆಗಿಲ್ಲ ಎಂದರೆ ಮಾತು ವ್ಯರ್ಥ. ಭಗವಂತನ ಬಾಯಿಯಿಂದ ಬಂದ ಮಾತು ವ್ಯರ್ಥ ಆಗಬಾರದು. ಅದಕ್ಕಾಗಿ ಕೃಷ್ಣ ತನ್ನ ಜೊತೆಗೆ ವೇದವ್ಯಾಸ, ಪರಶುರಾಮರನ್ನೂ, ಋಷಿಗಳನ್ನೂ ಕರೆದೊಯ್ದಿದ್ದ. ಋಷಿಗಳನ್ನು ಕರೆದೊಯ್ದ ಪ್ರಯುಕ್ತ ಆ ಋಷಿಗಳಿಗೆ ಕೃಷ್ಣನ ಮಾತು ಸ್ವಲ್ಪವಾದರೂ ಅರ್ಥ ಆಯಿತು. ಪರಶುರಾಮ ಹಾಗೂ ವೇದವ್ಯಾಸರು ಬಂದದ್ದರಿಂದ ಪೂರಾ ಅರ್ಥವಾಯಿತು. ಹಾಗಾಗಿ ಕೃಷ್ಣನ ಮಾತುಗಾರಿಕೆ ವ್ಯರ್ಥ ಆಗಲಿಲ್ಲ. ವ್ಯರ್ಥವಾಗದ ಮಾತುಗಳನ್ನು ಆಡಿದಾಗ ಮಾತ್ರ ಅವರನ್ನು ವಾಗ್ಮಿಗಳು ಎಂದು ಕರೆಯುವರು. ಇದಕ್ಕೆ ಬದಲಾಗಿ ಏನೇನೋ ಮಾತನಾಡುತ್ತ ಇದ್ದರೆ ಅವರು ವಾಗ್ಮಿಗಳೆನಿಸುವುದಿಲ್ಲ.

ಊಟ ಪ್ರಾರಂಭವಾಗಿಲ್ಲ. ಭೋಜನ ಶಾಲೆಯಲ್ಲಿ ಮಾತೋ ಮಾತು. ಆದರೆ ಇಷ್ಟು ಮಾತ್ರಕ್ಕೆ ಭೋಜನ ಶಾಲೆಯಲ್ಲಿ ಎಷ್ಟು ವಾಗ್ಮಿಗಳಪ್ಪ! ಎಂದು ಯಾರೂ ಹೇಳುವುದಿಲ್ಲ ತಾನೇ? ಏನು ಒದರ್‍ತಾರೆ ಎನ್ನುವವರೇ ಹೊರತು ಏನು ಮಾತುಗಾರಿಕೆ ಎನ್ನುವುದಿಲ್ಲ. ಯಾಕೆಂದರೆ ಅವೆಲ್ಲ ವ್ಯರ್ಥವಾದ ಮಾತುಗಾರಿಕೆ. ಆದ್ದರಿಂದ ಸಾರ್ಥಕವಾದ ಮಾತುಗಾರಿಕೆ ಯಾರ ಬಾಯಿಯಿಂದ ಹೊರಹೊಮ್ಮುವುದೋ ಅವನಷ್ಟೇ ವಾಗ್ಮೀ ಎನಿಸುವನು. ಅನುಸ್ಯೂತವಾಗಿ ಮಾತನಾಡಬೇಕಿಲ್ಲ. ತೂಕದ ಮಾತುಗಳನ್ನಾಡಿದರೆ ಸಾಕು ಅವನು ವಾಗ್ಮೀ.

**೨೭೦. ಮಹೇಂದ್ರಃ - ಇತಿಮಿತಿ ಇಲ್ಲದ, ಶ್ರೇಷ್ಠವಾದ ಸಂಪತ್ತು ಉಳ್ಳವನು.**

**ವಿವರಣೆ :** ಐಶ್ವರ್ಯ ಉಳ್ಳವನೆಂಬ ಅಭಿಪ್ರಾಯದಲ್ಲಿ ಶಚೀಪತಿಯನ್ನು ಇಂದ್ರ ಎಂದು ಕರೆಯಲಾಗುವುದು. ಆದರೆ ದೇವರು ಶಚೀಪತಿಗೂ ಐಶ್ವರ್ಯವನ್ನು ಕೊಟ್ಟವನಾದುದರಿಂದ 'ಮಹೇಂದ್ರ.'

ಪಾಂಡವರು ತಮ್ಮ ಸ್ವಂತ ಸಾಮರ್ಥ್ಯದಿಂದ ರಾಜ್ಯ ಪಡೆದದ್ದಲ್ಲ. ಅರ್ಜುನ ಧನುರ್ಧಾರಿಯಾಗಿ ತನ್ನ ಗಾಂಡೀವ ಧನುಸ್ಸಿನಿಂದ ದುರ್ಯೋಧನಾದಿಗಳನ್ನು ಬಡಿದು ರಾಜ್ಯ ಪಡೆದದ್ದಲ್ಲ. ಮತ್ತೆ ಅವನನ್ನು ಇಂದ್ರನನ್ನಾಗಿ ಮಾಡಿದವನು ಶ್ರೀಕೃಷ್ಣ. ಆದುದರಿಂದಲೇ ಶ್ರೀಕೃಷ್ಣ ಮಹೇಂದ್ರ. ಇಂದ್ರ ಎಂದರೆ ಸಂಪತ್ತು ಉಳ್ಳವನು. ಪಾಂಡವರನ್ನು ಸಂಪತ್ತು ಉಳ್ಳವರನ್ನಾಗಿ ಮಾಡಿದ್ದು ನೀನು. ಯಾಕೆ ? ನೀನು ಅವರಿಗಿಂತಲೂ ಹೆಚ್ಚು ಸಂಪತ್ತು ಉಳ್ಳವನು. ನಿನ್ನ ಸಂಪತ್ತನ್ನೇ ಪಾಂಡವರಿಗೆ ಕೊಟ್ಟು 'ನೀವು ರಾಜರಾಗಿ' - ಎಂದು ಅನುಗ್ರಹಿಸಿದವನು. ಪಾಂಡವರ ಸಂಪತ್ತು ಎಲ್ಲಿ ಉಂಟು ? ನಮಗೆ ನಿಮಗೆ ಸ್ವಂತ ಸಂಪತ್ತು ಇಲ್ಲವೇ ಇಲ್ಲ. ದೇವರೇ ತನ್ನ ಸಂಪತ್ತಿನ ಒಂದು ಭಾಗವನ್ನು ನಮಗೆ ಅನುಗ್ರಹಿಸುವನು. 'ನೀನು ಶ್ರೀಮಂತನಾಗು' ಎನ್ನುವನು. ಇಷ್ಟೇ. ವಿನಹ ನಮ್ಮದ್ದೇ ಸ್ವಂತ ಸಂಪತ್ತು ಇಲ್ಲ. ದೇವರದ್ದೇ ಸಂಪತ್ತನ್ನು ಪಾಂಡವರಿಗೆ ಕೊಟ್ಟದ್ದಷ್ಟೇ. ಮೊದಲು ಆ ಸಂಪತ್ತು ದುರ್ಯೋಧನನಲ್ಲಿತ್ತು. ಅದನ್ನು ತೆಗೆದು ಪಾಂಡವರಿಗೆ ಕೊಟ್ಟ. ನಿಮ್ಮಲ್ಲಿ ಸ್ವಲ್ಪ ಸಮಯ ಇರಲಿ ಎನ್ನುವನು. ಮತ್ತೇನು ಮಾಡುವನು ? ಅವರಿಂದ ತೆಗೆದು ಇನ್ನೊಬ್ಬರಿಗೆ ನೀಡುವನು. ಇಷ್ಟೇ ದೇವರು ಮಾಡುವ ಕೆಲಸ. ಇಲ್ಲಿಂದ ಅಲ್ಲಿಗೆ, ಅಲ್ಲಿಂದ ಇಲ್ಲಿಗೆ. ಯಾರಿಗೂ ತಮ್ಮ ಸ್ವಂತ ಸಂಪತ್ತು ಎಂದು ಹೇಳಿಕೊಳ್ಳಲು ಭಗವಂತನು ಬಿಡುವುದೇ ಇಲ್ಲ. ತಾನೇ ಒಂದು ಕಡೆ ಸಂಪತ್ತನ್ನು ಇಟ್ಟಿರುವನು. ಅವನು ಸ್ವಲ್ಪ ದಿನ ಅನುಭವಿಸಿದನೆಂದರೆ ಅವನನ್ನು ದಿವಾಳಿ ಮಾಡಿ, ಮತ್ತೊಬ್ಬನಿಗೆ ನೀಡುವನು. ಹೀಗೆ ಯಾರದ್ದೋ ಒಬ್ಬನ ಸಂಪತ್ತನ್ನು ಹಿಡಿದುಕೊಂಡು ಇಲ್ಲಿಂದ ಅಲ್ಲಿಗೆ, ಅಲ್ಲಿಂದ ಇಲ್ಲಿಗೆ ಸುತ್ತಾಡಿಸುತ್ತ

ಇರುವನು.

ಈ ಹಿನ್ನೆಲೆಯಲ್ಲಿ ಭೀಷ್ಮರು ಹೇಳುವರು ದುರ್ಯೋಧನನೂ ಹಸ್ತಿನಪುರದ ಇಂದ್ರ ಅಲ್ಲ. ಧರ್ಮರಾಜನೂ ಇಂದ್ರ ಅಲ್ಲ. ಮತ್ತೆ ಅವರನ್ನು ಇಂದ್ರರನ್ನಾಗಿ ಮಾಡಿದ ನೀನೇ ನಿಜವಾಗಿ 'ಮಹೇಂದ್ರ'. ಇತಿಮಿತಿ ಇಲ್ಲದ, ಶ್ರೇಷ್ಠವಾದ, ಭಾರೀ ಸಂಪತ್ತು ಉಳ್ಳವನೇ ಮಹೇಂದ್ರ.

**೨೭೧. ವಸುದಃ - * ಸಂಪತ್ತನ್ನು ಕೊಡುವವನು.**

*** ಜ್ಞಾನದ ತುಡಿತವುಳ್ಳವರಿಗೆ ಜ್ಞಾನಗಳಿಕೆಗೆ ಬೇಕಾದ ವ್ಯವಸ್ಥೆಯನ್ನು ಕಲ್ಪಿಸಿ ಕೊಡುವವನು.**

**ವಿವರಣೆ :** 'ವಸು' ಸಂಪತ್ತನ್ನು 'ದ' ಕೊಡುವವನು - ಎಂಬ ಅರ್ಥ ಗೊತ್ತು. 'ವ' ಎಂದು ಬೇರೆ ಮಾಡಿ 'ಸುದ' - ಎಂದು ಬೇರೆ ಮಾಡಿ ನೋಡೋಣ. ವ ಎಂದರೆ ಜ್ಞಾನ. ಸು - ಚೆನ್ನಾಗಿ ದ - ಕೊಡುವವನು.

ನಾವು ನಿಜವಾಗಿ ಜ್ಞಾನಾಪೇಕ್ಷಿಗಳೋ ? ನಮಗೆ ಜ್ಞಾನ ಪಡೆಯಬೇಕೆಂದು ತುಂಬ ಕುತೂಹಲ ಇದೆಯೋ ? ಖಂಡಿತಾ ದೇವರು ಜ್ಞಾನ ಪಡೆಯಲು ಅನುಕೂಲ ಮಾಡಿಕೊಡುವನು. ಒಳಗಿನಿಂದ ಅಷ್ಟು ತುಡಿತ ಇದ್ದರೆ ಮಾತ್ರ. ಸುಮ್ಮನೆ ನಾಟಕೀಯವಾಗಿ ಇದ್ದರೆ ಸಾಲದು. ಸಹಜವಾಗಿ ತುಡಿತ ಇತ್ತೆಂದರೆ ಭಗವಂತನು ಅನುಕೂಲ ಮಾಡಿಕೊಟ್ಟೇ ಕೊಡುವನು. ಅದಕ್ಕೆ ಬೇಕಾದ ವಾತಾವರಣವನ್ನು ಖಂಡಿತಾ ನಿರ್ಮಿಸಿ ಕೊಡುವನು. ನಮ್ಮೂರಿಗೆ ಯಾರಾದರೊಬ್ಬ ಪಂಡಿತ ಬಂದೇ ಬರುವರು.

ಪರೀಕ್ಷಿದ್ರಾಜನಲ್ಲಿಗೆ ಶುಕಾಚಾರ್ಯರು ಬಂದಂತೆ. ಪರೀಕ್ಷಿದ್ರಾಜನಿಗೆ ಜ್ಞಾನದಲ್ಲಿ ಅಷ್ಟು ಹಸಿವು ಇತ್ತು. ದೇವರು ಅದಕ್ಕೆ ಬೇಕಾದ ವ್ಯವಸ್ಥೆಯನ್ನು ಕಲ್ಪಿಸಿಕೊಟ್ಟ.

ನಮಗೆ ಜ್ಞಾನ ಪಡೆಯಬೇಕೆಂಬ ಶ್ರದ್ಧೆ ಇದ್ದರಷ್ಟೇ ಜ್ಞಾನ ಪಡೆಯಲು ಅವಕಾಶವನ್ನು ಕಲ್ಪಿಸಿಕೊಡುವನು. ಉಪನ್ಯಾಸಕ್ಕೆ ನಾವು ಹೊರಟಾಗ ನೆಂಟರು ಮನೆಗೆ ಬಾರದಂತೆ ಮಾಡುವನು. ಆದುದರಿಂದ 'ವ' ತಿಳುವಳಿಕೆಯನ್ನು ಸು - ಚೆನ್ನಾಗಿ ದ- ಕೊಡುವವನು. ತುಡಿತ ಇತ್ತೆಂದರೆ ಜ್ಞಾನಸಂಪಾದನೆಗೆ ಬೇಕಾದ ವಾತಾವರಣವನ್ನು ನಿರ್ಮಿಸಿ ಕೊಡುವವನು.

ಭೀಷ್ಮರು ಅಂತಾರೆ - ನನಗೆ ಒಳಗೆ ಇದ್ದದ್ದನ್ನೆಲ್ಲ ವಾಂತಿ ಮಾಡಬೇಕೆಂದು

ತುಡಿತ ಇತ್ತು. ನೀನೇ ಬಂದು ಕುಳಿತಿ. ಈಗ ವಾಂತಿ ಮಾಡುತ್ತಿದ್ದೇನೆ. ಇಲ್ಲಿಂದ ವಾತಾವರಣ ನಿರ್ಮಾಣವಾಗುತ್ತಿದೆ. ಕೃಷ್ಣ ಬಂದು ಹೋದ ಮೇಲೆ ಭೀಷ್ಮರಿಂದ ಎಷ್ಟು ಮಂದಿ ವಿದ್ಯೆಯನ್ನು ಪಡೆದರು ಗೊತ್ತಾ ? ಯಾಕೆ, ಭೀಷ್ಮರಿಗೆ ವಿದ್ಯಾದಾನ ಮಾಡುವುದರಲ್ಲಿ ಅಷ್ಟೊಂದು ಕಳಕಳಿ.

ನಮ್ಮ ವಿದ್ಯಾಗುರುಗಳಾದ ಶ್ರೀ ವಿದ್ಯಾಮಾನ್ಯತೀರ್ಥರಿಗೆ ಪಾಠ ಮಾಡಬೇಕೆಂಬ ಈ ಬಗೆಯ ತುಡಿತ ಇತ್ತು. ಆದ್ದರಿಂದಲೇ ಒಬ್ಬ ಶಿಷ್ಯನ ವಿದ್ಯಾಭ್ಯಾಸ ಮುಗಿಯಿತು ಎಂದಾಗ ಇನ್ನೊಬ್ಬ ವಿದ್ಯಾರ್ಥಿ ಪಾಠ ಕೇಳಲು ತಯಾರು! ಅವರೇನೂ ವಿದ್ಯಾರ್ಥಿಗಳಿಗಾಗಿ ತಡಕಾಡಬೇಕಾಗಿದ್ದಿಲ್ಲ. ಅವರ ಆ ಬಗೆಯ ತುಡಿತವನ್ನು ಕಂಡು ದೈವವೇ ಪಾಠಕ್ಕೆ ಬೇಕಾದ ವ್ಯವಸ್ಥೆಯನ್ನು ಕಲ್ಪಿಸಿಕೊಟ್ಟಿತ್ತು.

**೨೭೨. ವಸುಃ - * ಸಜ್ಜನರ ಪಾಲಿಗೆ ಸಂಪತ್ತು ಆಗಿರುವವನು.**

*** ಯಾವ ವ್ಯಕ್ತಿಯ, ವಸ್ತುವಿನ, ಘಟನೆಯ ದರ್ಶನದಿಂದ ಸಜ್ಜನರ ಮನಸ್ಸಿಗೆ ವ್ಯಗ್ರತೆ ಉಂಟಾಗುವುದೋ ಆ ವ್ಯಕ್ತಿ, ವಸ್ತು ಅಥವಾ ಘಟನೆ ಕಾಣದಂತೆ ಮಾಡುವನು.**

**ವಿವರಣೆ :** 'ವಸು' ಎಂದರೆ ಸಂಪತ್ತು ಎಂಬ ಒಂದು ಅರ್ಥ ಇದ್ದೇ ಇದೆ. ಇದರ ಜೊತೆಗೆ ಮತ್ತೊಂದು ಅರ್ಥ - ಕಾಣದಂತೆ ಮಾಡುವವನು. ಯಾವ ವಸ್ತು ಅಥವಾ ಘಟನೆ ಸಾಧಕರ ಮನಸ್ಸಿಗೆ ವ್ಯಗ್ರತೆಯನ್ನುಂಟುಮಾಡಬಲ್ಲದೋ ಆ ವಸ್ತುವನ್ನಾಗಲೀ, ಘಟನೆಯನ್ನಾಗಲೀ ಸಾಧಕರಿಗೆ ತಿಳಿಯದಂತೆ, ಕಾಣದಂತೆ ಮಾಡುವವನು.

ಬಟ್ಟೆಯನ್ನು ಸಂಸ್ಕೃತದಲ್ಲಿ ವಸ್ತ್ರ ಎಂದು ಕರೆಯಲಾಗುವುದು. ಯಾಕಂದರೆ 'ವಸ್ತೇ ರಮಯತಿ - ಇತಿ ಚ' ಮೈಯನ್ನು ಮುಚ್ಚಿ ಕಾಣದಂತೆ ಮಾಡುವುದು. ಹಾಗೂ ಸಂತೋಷಪಡಿಸುವುದು. ಚಳಿಯಲ್ಲಿ ನಡುಗುತ್ತ ಇದ್ದೆವು. ಕಂಬಳಿ ಬಂತು. ಮೈ ಸುತ್ತಿ ಆನಂದಪಡಿಸಿತು. ಆದುದರಿಂದಲೇ 'ವಸ್ತ್ರ'.

ಯಾವ ವಸ್ತುವನ್ನು ಕಂಡರೆ ಸಜ್ಜನರ ಮನಸ್ಸು ವ್ಯಗ್ರವಾಗುವುದೋ, ಸಜ್ಜನರಿಗೆ ಆ ವಸ್ತು ಕಾಣದಂತೆ ಮಾಡುವುದೇ 'ವಸು' ಶಬ್ದದ ಅರ್ಥ.

ಸಜ್ಜನರಿಗೆ ಸಜ್ಜನರು ಕಾಣುವಂತೆ ಮಾಡುವನು; ದುರ್ಜನರು ಕಾಣದಂತೆ ಮಾಡುವನು. ಯಾಕೆಂದರೆ ದುರ್ಜನರು ಕಾಣಿಸಿಕೊಂಡರೆಂದರೆ ಮನಸ್ಸು ವ್ಯಗ್ರವಾಗುವುದು.

ಭೀಷ್ಮರು ಕೃಷ್ಣನನ್ನು ಹೀಗೆ ಉಪಾಸನೆ ಮಾಡುತ್ತಿದ್ದಾರೆ - ನಾನು ಉಪದೇಶ

ನೀಡಬೇಕೆಂದರೆ ನನ್ನ ಮನಸ್ಸಿಗೆ ದುರ್ಯೋಧನಾದಿಗಳೂ, ಅವರ ಕುಕೃತ್ಯಗಳೂ ಕಾಣಿಸಿಕೊಳ್ಳಬಾರದು. ಅವೆಲ್ಲ ಕಾಣಿಸಿಕೊಂಡವೆಂದರೆ ಉಪದೇಶ ಹೊರಡಲೇ ಸಾಧ್ಯವಿಲ್ಲ. ಆದುದರಿಂದ ಆ ದುಷ್ಟರೆಲ್ಲ ಮನಸ್ಸಿಗೆ ಕಾಣಿಸಿಕೊಳ್ಳದಂತೆ ನನ್ನ ಪಾಲಿಗೆ 'ವಸು' ಆಗಿ ಅನುಗ್ರಹಿಸು.

**೨೭೩. ನೈಕರೂಪಃ - * ಭಕ್ತರ ರಕ್ಷಣೆಗಾಗಿ ಅನೇಕಾನೇಕ ರೂಪಗಳನ್ನು ತಾಳಿರುವವನು.**

**ವಿವರಣೆ :** ಏಕರೂಪಃ ನ - ನೈಕರೂಪಃ - ಭಗವಂತನಿಗೆ ಒಂದೇ ರೂಪ ಅಲ್ಲ. ನಮಗಾದರೆ ಒಂದೇ ರೂಪ. ನಾವು ಹೀಗೆಯೇ. ನಮ್ಮದು ಮತ್ತೊಂದು ರೂಪ ಎಂದಿಲ್ಲ. ಆದರೆ ಭಗವಂತನಿಗೆ ಹಾಗಲ್ಲ. ಒಂದೇ ರೂಪದಿಂದ ಹತ್ತಾರು ವ್ಯಕ್ತಿಗಳನ್ನು ರಕ್ಷಣೆ ಮಾಡತಕ್ಕವನು ಭಗವಂತ ಅಲ್ಲ. ಒಂದೊಂದು ರೂಪದಿಂದ ಒಬ್ಬೊಬ್ಬ ವ್ಯಕ್ತಿಗಳ ರಕ್ಷಣೆ ನಡೆಸುವವನು ಅವನು. ಇದು ಭಗವಂತನಿಗೆ ನಮ್ಮ ಮೇಲಿರುವ ಕಾಳಜಿ.

ಸಾಮಾನ್ಯವಾಗಿ ಹೇಗಿರುವುದು? - ಒಬ್ಬೊಬ್ಬನ ರಕ್ಷಣೆಗೆ ಒಬ್ಬೊಬ್ಬನನ್ನು ಕೊಡಲು ನಮ್ಮಲ್ಲಿ ಜನ ಇಲ್ಲದಿರುವುದರಿಂದ ಒಬ್ಬೊಬ್ಬನಿಗೆ ಹತ್ತಾರು ಜನರನ್ನು ರಕ್ಷಿಸುವ ಹೊಣೆಗಾರಿಕೆಯನ್ನು ವಹಿಸಿಕೊಡಲಾಗುವುದು. ಆದರೆ ನಮ್ಮ ಬಗ್ಗೆ ವಿಶೇಷ ಕಾಳಜಿ ಹೊತ್ತಿರುವ ಭಗವಂತ ಒಬ್ಬೊಬ್ಬ ಜೀವನ ರಕ್ಷಣೆಗೆ ಒಂದೊಂದು ರೂಪ ತಾಳುವನು.

ನಾವು ದೇವರನ್ನು ಕಾಣಲಿಕ್ಕೆ ಪ್ರಯತ್ನಪಡಬೇಕು. ದೇವರ ಯಾವ ರೂಪವನ್ನು ಕಾಣಲು ಯತ್ನಿಸಬೇಕು ದೇವರು ಯಾವ ರೂಪದಿಂದ ನಮ್ಮ ರಕ್ಷಣೆಗಾಗಿ ಕಟಿಬದ್ಧನಾಗಿರುವನೋ ಆ ರೂಪವನ್ನು ಕಾಣಲಿಕ್ಕೇ ಯತ್ನಿಸಬೇಕು ? ಇದೇ ಸಾಧನಾನುಷ್ಠಾನ ಎನಿಸುವುದು. ಹೊರಗಿದ್ದ ರಾಮ ಕೃಷ್ಣಾದಿರೂಪಗಳನ್ನು ನೋಡುವುದಾದರೂ ಅಷ್ಟೊಂದು ಕ್ಲೇಶಸಾಧ್ಯವಾದುದಲ್ಲ. ನಮ್ಮೊಳಗೆ ನಮ್ಮ ರಕ್ಷಣೆಗಾಗಿಯೇ ದೇವರ ಒಂದು ರೂಪ ಇದೆ ತಾನೇ ? ಆ ರೂಪವನ್ನು ಕಂಡೆವೋ, ಸಾಕ್ಷಾತ್ಕಾರವಾಯಿತು ಎಂದೆನಿಸುವುದು. ನಮ್ಮ ರಕ್ಷಣೆಗಾಗಿಯೇ ನಮ್ಮೊಳಗಿರುವ ಭಗವಂತನ ರೂಪವನ್ನು ಬಿಂಬರೂಪ ಎನ್ನುವರು. ಜೀವನ ಜೊತೆಗೇ ಇರುವ ರೂಪ ಅದು. ಈಗ ಅದು ನಮಗೆ ಕಾಣದು. ಈಗ ನಾವು ಕಣ್ಣು ಮುಚ್ಚಿದರೂ ಹೊರಗೆ ಕಂಡ ಭಗವದ್ರೂಪವನ್ನೇ ಮಾನಸಿಕ ಸಂಸ್ಕಾರದಿಂದಾಗಿ ನೋಡುವೆವು, ಹೊರತು ಜೀವನ ಜೊತೆಗೇ ಇರುವ ಬಿಂಬರೂಪವನ್ನು ಕಾಣಲಾರೆವು. ಆ ರೂಪವನ್ನು ಕಾಣುವುದಕ್ಕೆ ಸಾಕ್ಷಾತ್ಕಾರ ಎಂದು ಹೆಸರು. ದೇವತೆಗಳೆಲ್ಲ ತಮ್ಮ ತಮ್ಮ ಭಗವಂತನ

ಬಿಂಬರೂಪವನ್ನು ಕಂಡಿರುವರು. ಆದುದರಿಂದಲೇ ಅವರೆಲ್ಲ ದೇವರ ಸಾಕ್ಷಾತ್ಕಾರ ಪಡೆದವರು.

ಒಂದೇ ರೂಪದಿಂದ ಎಲ್ಲರ ರಕ್ಷಣೆ ಮಾಡದೆ, ಪ್ರತಿಯೊಬ್ಬರ ರಕ್ಷಣೆಗೂ ಪ್ರತ್ಯೇಕವಾಗಿ ರೂಪ ತಾಳಿರುವವನು ದೇವರು. ಆದುದರಿಂದ ಅವನು ‘ಏಕರೂಪಃ ನ’ - ನೈಕರೂಪಃ - ತುಂಬ ರೂಪಗಳುಳ್ಳವನು.

**ಪರಮಾತ್ಮನೇ ಸತತಮೇಕರೂಪಿಣೇ ದಶರೂಪಿಣೇ ಶತಸಹಸ್ರರೂಪಿಣೇ |**
**ಅವಿಕಾರಿಣೇ ಸ್ಫುಟಮನಂತರೂಪಿಣೇ ಸುಖಚಿತ್‌ಸಮಸ್ತತನವೇ ನಮೋನಮಃ ||**

-ಎಂದು ಹಿರಿಯರು ಭಗವಂತನ ಅನೇಕ ರೂಪಗಳ ಸಂಗ್ರಹ ಮಾಡಿರುವರು. ವಾಸುದೇವಾದಿ ನಾಲ್ಕು ರೂಪಗಳು, ಮತ್ಸ್ಯಾದಿ ದಶರೂಪಗಳು, ಅಜಾದಿ ನೂರು ರೂಪಗಳು, ವಿಶ್ವಾದಿ ಸಾವಿರ ರೂಪಗಳು ....... ಹೀಗೆಯೇ ಬೇರೆ ಬೇರೆ ಗುಂಪಿಗೆ ಸೇರಿದಂತೆ ಅನೇಕಾನೇಕರೂಪಗಳಿವೆ ಭಗವಂತನಿಗೆ.

ಒಂದು ದೇಹದಲ್ಲೇ ಬೇರೆ ಬೇರೆ ಅವಯವಗಳಲ್ಲಿ, ಇಂದ್ರಿಯಗಳಲ್ಲಿ, ನಾಡಿಗಳಲ್ಲಿ ಬೇರೆ ಬೇರೆ ರೂಪಗಳಿಂದ ಇರುವವನು ಭಗವಂತ. ಹೀಗೆ ಭಕ್ತರ ರಕ್ಷಣೆಗಾಗಿ ಅನೇಕಾನೇಕ ರೂಪಗಳನ್ನು ತಾಳಿರುವುದು ಅವನ ವೈಭವ.

**೨೭೪. ಬೃಹದ್ರೂಪಃ - ಯಾರ ಪ್ರತಿಯೊಂದು ರೂಪವೂ ಗುಣಪೂರ್ಣವಾಗಿದೆಯೋ ಅಂತಹವನು.**

**ವಿವರಣೆ :** ಇಂದ್ರನ ರೂಪ ಅರ್ಜುನ, ಶೇಷನ ರೂಪ ಬಲರಾಮ. ಆದರೆ ಇಂದ್ರನಿಗೂ ಅರ್ಜುನನಿಗೂ ವ್ಯತ್ಯಾಸ ಉಂಟು. ಶೇಷನಿಗೂ ಬಲರಾಮನಿಗೂ ವ್ಯತ್ಯಾಸ ಉಂಟು. ಶೇಷನಷ್ಟು ಬಲರಾಮ ಬಲಿಷ್ಠನಲ್ಲ. ಇಂದ್ರನಷ್ಟು ಅರ್ಜುನ ಬಲಿಷ್ಠನಲ್ಲ. ಯದ್ಯಪಿ ಇಂದ್ರನ ರೂಪನೇ ಅರ್ಜುನ. ಹಾಗಾದರೆ ಇಂದ್ರ ಏಕರೂಪ ಅಲ್ಲ. ನೈಕರೂಪ. ಎರಡು ರೂಪವುಳ್ಳವನು. ಆದರೆ ಆ ರೂಪಗಳಲ್ಲಿ ಏರುಪೇರು ಉಂಟು. ಇಂದ್ರನಿಗೆ ಗೊತ್ತಿದ್ದದ್ದೆಲ್ಲ ಅರ್ಜುನನಿಗೆ ಗೊತ್ತಿಲ್ಲ. ಇಂದ್ರನಿಗಿರುವಷ್ಟು ಬಲ ಅರ್ಜುನನಿಗೆ ಇಲ್ಲ. ಆದ್ದರಿಂದ ಅರ್ಜುನನ ರೂಪ ಇಂದ್ರನಷ್ಟು ಪೂರ್ಣ ಅಲ್ಲ. ಇಂದ್ರನಿಗಿಂತ ಕಡಿಮೆ ಮಟ್ಟದ್ದು. ಹಾಗೆಯೇ ಬಲರಾಮನ ರೂಪವೂ ಶೇಷನಷ್ಟು ಪೂರ್ಣ ಅಲ್ಲ. ಶೇಷನಿಗಿಂತ ಕಡಿಮ್ಮೆ ಮಟ್ಟದ್ದು. ಆದರೆ ಭಗವಂತನ ರೂಪಗಳು ಹಾಗಲ್ಲ. ನನ್ನೊಳಗೆ ಒಂದು ರೂಪದಿಂದ ದೇವರು ಇರುವನು. ನಿಮ್ಮೊಳಗೆ ಬೇರೆ ಬೇರೆ ರೂಪದಿಂದ ಇರುವನು. ಮತ್ಸ್ಯನಾಗಿ, ಕೂರ್ಮನಾಗಿ, ರಾಮನಾಗಿ, ಕೃಷ್ಣನಾಗಿ ಬಂದ. ಆ ಎಲ್ಲಾ ರೂಪಗಳೂ ಬೃಹತ್ - ಪೂರ್ಣಗಳೇ. ಯಾವ ನ್ಯೂನತೆಯೂ ಎಲ್ಲೂ

ಇಲ್ಲ. ಮತ್ಸ್ಯನಿಗೆ ಎಷ್ಟು ಬಲವೋ ಅಷ್ಟೇ ಬಲ ಕೃಷ್ಣನಿಗೆ. ಬಲದಲ್ಲಾಗಲೀ, ಜ್ಞಾನದಲ್ಲಾಗಲೀ, ಸುಖದಲ್ಲಾಗಲೀ, ವ್ಯಾಪ್ತಿಯಲ್ಲಾಗಲೀ ಭಗವಂತನ ಯಾವ ರೂಪವೂ ಕೊರತೆಗೊಳಗಾಗಿರುವುದಿಲ್ಲ.ಎಲ್ಲ ರೂಪಗಳೂ ಬೃಹತ್. ಅಂದರೆ ಪೂರ್ಣ. ಆದ್ದರಿಂದ ಅವನು ಬೃಹದ್ರೂಪ.

**"ಪೂರ್ಣಮದಃ ಪೂರ್ಣಮಿದಂ ಪೂರ್ಣಾತ್ ಪೂರ್ಣಮುದಚ್ಯತೇ |**
**ಪೂರ್ಣಸ್ಯ ಪೂರ್ಣಮಾದಾಯ ಪೂರ್ಣಮೇವಾವಶಿಷ್ಯತೇ"**

ಎಂಬ ಉಪನಿಷತ್ತಿನ ಮಾತು ಭಗವಂತನು ಮೂಲರೂಪದಲ್ಲಿ ಎಷ್ಟು ಪೂರ್ಣನೋ ಅವತಾರ ರೂಪಗಳಲ್ಲೂ ಅಷ್ಟೇ ಪೂರ್ಣ ಎಂದು ಅವನ ಪೂರ್ಣತೆಯನ್ನು ಸಾರಿದೆ. ದೀಪದ ದೃಷ್ಟಾಂತದಿಂದ ಇದನ್ನು ಸಮರ್ಥಿಸಲಾಗುವುದು. ಒಂದು ದೀಪದಿಂದ ಇನ್ನೊಂದು ದೀಪವನ್ನು ಹಚ್ಚಿದರೆ ಮೊದಲಿನ ದೀಪಕ್ಕೂ ಅದರಿಂದ ಹಚ್ಚಿದ ಮತ್ತೊಂದು ದೀಪಕ್ಕೂ ಹೇಗೆ ಏನೂ ವ್ಯತ್ಯಾಸವಿಲ್ಲವೋ ಹಾಗೆ.

ಹೀಗೆ ಭಗವಂತನ ಪ್ರತಿಯೊಂದು ರೂಪವೂ ಬೃಹತ್ - ಗುಣಪೂರ್ಣ ಆಗಿರುವುದರಿಂದ ಅವನು 'ಬೃಹದ್ರೂಪ',

**೨೭೫. ಶಿಪಿವಿಷ್ಟಃ - ಪಶುಗಳಲ್ಲೂ ಪ್ರೇರಕನಾಗಿ ಪ್ರವೇಶಿಸಿರುವವನು.**

**ವಿವರಣೆ :** ನಾವು ಇದುವರೆಗೂ ದೇವಾದಿಗಳಲ್ಲೂ, ಮನುಷ್ಯರಲ್ಲೂ ಇರುವ ದೇವರ ರೂಪಗಳ ಬಗ್ಗೆ ಕಂಡೆವು. ಬರೇ ಇವರಲ್ಲಿ ಮಾತ್ರ ದೇವರು ಇರುವುದಲ್ಲ, ಮತ್ತೆ ಪಶುಗಳಲ್ಲೂ ಇರುವನು - ಶಿಪಿ ಎಂದರೆ ಪಶುಗಳು. ಅವುಗಳಲ್ಲಿ ವಿಷ್ಟಃ - ಆವಿಷ್ಟ, ಪ್ರವಿಷ್ಟಃ - ಅವುಗಳಲ್ಲೂ ದೇವರು ಪ್ರವೇಶಿಸಿರುವನು. ಆದುದರಿಂದಲೇ ಪ್ರತಿನಿತ್ಯ ವೈಶ್ವದೇವ ಆದ ಮೇಲೆ 'ವಾಯಸಬಲಿ' ಎಂಬುದಾಗಿ ಕಾಗೆ, ನಾಯಿ ಇತ್ಯಾದಿಗಳಿಗೆ ಸ್ವಲ್ಪ ಅನ್ನ ಹಾಕಬೇಕು. ಅದರಿಂದ ಅವುಗಳಲ್ಲಿರುವ ದೇವರ ಆರಾಧನೆ ನಡೆದಂತಾಗುವುದು.

'ಶಿಪಿ' ಎಂದರೆ ಪ್ರಾಣಿಗಳು. 'ವಿಷ್ಟಃ' - ಎಂದರೆ ಅವುಗಳಲ್ಲೂ ಸೇರಿಕೊಂಡಿರುವವನು. 'ಹೇಸಿಗೆ ಇಲ್ಲದವ ಕರಡಿಯಾ ಕೂಡಿದ' - ಎಂದು ದಾಸರಾಯರು ಹೇಳಿರುವಂತೆ ಕರಡಿಯಾ ಕೂಡಿದ ಎಂದರೆ ಜಾಂಬವತಿಯ ಜೊತೆಗೆ ಸೇರಿದನೆಂದರ್ಥ. ಜಾಂಬವತಿ ಕರಡಿಯ ಮಗಳು ತಾನೇ? ಭಗವಂತನಿಗೆ ಸ್ವಲ್ಪವೂ ಹೇಸಿಗೆ ಇಲ್ಲ. ಯಾರಾದರೂ ಮಾನವರು ಕರಡಿಯ ಮಗಳನ್ನು ತರುವುದುಂಟೋ? ಲಗ್ನ ಆಗುವುದುಂಟೋ? ಭಗವಂತನಿಗೆ ಹೇಸಿಗೆ ಇಲ್ಲ. ಯಾಕೆಂದರೆ ಅವನು ಅಲ್ಲಿದ್ದರೂ ತನ್ನನ್ನು ಅಂಟಿಸಿಕೊಳ್ಳುವುದಿಲ್ಲ. ಆದ್ದರಿಂದ ಹೇಸಿಗೆ ಇಲ್ಲ. ಆದ್ದರಿಂದ

ಪ್ರತಿಯೊಂದು ಕಡೆಯಲ್ಲಿಯೂ, ಪ್ರತಿಯೊಂದು ಜೀವಜಂತುಗಳಲ್ಲೂ ಭಗವಂತನಿದ್ದಾನೆ ಎಂದು ಭೀಷ್ಮರು ವಿಶಾಲವಾದ ಅನುಸಂಧಾನ ಮಾಡಿಕೊಳ್ಳುತ್ತಿದ್ದಾರೆ. ಅಂದರೆ ಪ್ರಾಣಿಗಳ ಮೇಲೆ ನಮಗೆ ಸಹಜವಾಗಿ ದಯೆ ಉಂಟಾಗಬೇಕು. ದೇವರನ್ನು ತಿಳಿದುಕೊಳ್ಳುವುದೆಂದರೆ ‘ಇಲ್ಲಿ ದೇವರಿದ್ದಾನೆ’ - ಎಂದು ತಿಳಿದುಕೊಳ್ಳುವುದೇ. ಈ ಪ್ರತಿಮೆಗಳಲ್ಲಿ ದೇವರಿದ್ದಾನೆ - ಎಂದು ತಿಳಿದುಕೊಳ್ಳುವುದು. ಪ್ರಾಣಿಗಳೂ - ದೇವರ ಪ್ರತಿಮೆಯಾಗಬಲ್ಲವು.

**೨೭೬. ಪ್ರಕಾಶನಃ - ಪ್ರಾಣಿಗಳಲ್ಲೂ, ಮನುಷ್ಯರಲ್ಲೂ ಬೇರೆ ಬೇರೆ ಬಗೆಯ ವೈಶಿಷ್ಟ್ಯ ಹೊರಹೊಮ್ಮುವಂತೆ ಪ್ರಕಾಶವನ್ನು ನೀಡುವವನು.**

**ವಿವರಣೆ :** ‘ನಾಯಿ ಬಾಗಿಲ ಮುಂದೆಯೇ ಬಂದು ಸತ್ತಿತು’. ‘ಆಕಳು ಏಕಾದಶಿಯಂದು ಸತ್ತಿತು’. - ಹೀಗೆ ಪ್ರಾಣಿಗಳಲ್ಲಿ ಏನೋ ವೈಲಕ್ಷಣವನ್ನು ಕಾಣ್ತೇವೆ. ತಾನೇ ? ಯಮಧರ್ಮ ನಾಯಿ ರೂಪ ತಾಳಿ ಯುಧಿಷ್ಠಿರನ ಹಿಂದೆಯೇ ಹೋದ. ಯಾಕೆ, ಸಮಾಜದಲ್ಲಿ ಹೀಗೆ ವಿಲಕ್ಷಣ ಪ್ರಾಣಿಗಳು ಇರುವವು - ಎಂದು ತಿಳಿಸಿಕೊಡುವುದಕ್ಕಾಗಿಯಷ್ಟೇ.

ಈ ರೀತಿಯಾಗಿ ನಾಯಿ, ಆಕಳು ಮುಂತಾದವುಗಳಲ್ಲಿ ಯಾಕೆ ವೈಲಕ್ಷಣ್ಯ ಬಂತು? ಅವುಗಳಲ್ಲಿ ‘ಪ್ರಕಾಶಂ ನಯತಿ’-ಬೆಳಕನ್ನು, ವಿಲಕ್ಷಣಶಕ್ತಿಯನ್ನು ತಂದುಕೊಡುವವನು - ಎಂಬ ಅರ್ಥದಲ್ಲಿ ‘ಪ್ರಕಾಶನ’ ಎಂಬ ರೂಪದಿಂದ ಭಗವಂತನು ಇರುವನು. ಭಗವಂತನು ಪ್ರಾಣಿಗಳಲ್ಲಿ ಪ್ರಕಾಶವನ್ನು, ಅಂದರೆ ವಿಲಕ್ಷಣ ಶಕ್ತಿಯನ್ನು ತಂದುಕೊಡುವನು. ಎಂಬ ಅಭಿಪ್ರಾಯದಲ್ಲಿ ಪ್ರಕಾಶನ ಎನಿಸುವನು. ಆದ್ದರಿಂದಲೇ ಆ ಪ್ರಾಣಿಗಳು ಕೆಲವು ಸಂದರ್ಭಗಳಲ್ಲಿ ಮನುಷ್ಯರಿಗಿಂತ ವಿಲಕ್ಷಣವಾಗಿ ವರ್ತನೆ ಮಾಡುವವು.

ನಾವು ಮನುಷ್ಯರಿಗೆ ಪಶುಗಳ ದೃಷ್ಟಾಂತವನ್ನು ಕೊಡುವೆವು. ಭರತನಾಟ್ಯ ಮಾಡಲು ತೊಡಗಿದರೆ ನವಿಲಿನಂತೆ ನಟಿಸುವವನು ಎನ್ನುವೆವು. ನೋಡಲಿಕ್ಕೆ ಪ್ರಾರಂಭಿಸಿದರೆ ಮಂಗನಂತೆ ನೋಡಬೇಕು. ಚಾಕ್ರಿ ಮಾಡಲಿಕ್ಕೆ ಪ್ರಾರಂಭಿಸಿ ಕತ್ತೆಯಂತೆ ಚಾಕ್ರಿ ಮಾಡಬೇಕು. ಹಾಡುವುದಾದರೆ ಕೋಗಿಲೆಯಂತೆ ಹಾಡಬೇಕು. ಮನೆ ಕಾಯುವುದಾದರೆ ನಾಯಿಯಂತೆ ಮನೆ ಕಾಯಬೇಕು.

ಹೀಗೆ ‘ಶಿಪಿವಿಷ್ಟ’ ಎನಿಸಿ ಪ್ರಾಣಿಗಳಲ್ಲಿರುವ ಭಗವಂತನು ‘ಪ್ರಕಾಶನ’ಎನಿಸಿ, ಆಯಾ ಪ್ರಾಣಿಗಳಲ್ಲಿರುವ ಕುಣಿಯುವ, ಹಾಡುವ - ಹೀಗೆ ಎಲ್ಲ ವಿಧದ ಶಕ್ತಿಯನ್ನು ಹೊಂದಿಸಿರುವನು.

ಹಾಡುವ ಪ್ರಕಾಶ, ನಲಿಯುವ ಪ್ರಕಾಶ - ಹೀಗೆ ಎಲ್ಲ ಬಗೆಯ ಪ್ರಕಾಶಗಳೂ ನಿನ್ನಲ್ಲಿದ್ದು, ಅವುಗಳಲ್ಲಿ ಒಂದೊಂದು ಪ್ರಕಾಶವನ್ನುಒಂದೊಂದು ಪಶುವಿನಲ್ಲಿ ಇಟ್ಟಿರುವಿ. ನೀನು ಪಶುಗಳಲ್ಲಿ ಇರುವುದು ಮಾತ್ರವಲ್ಲ; ಆಯಾ ಶಕ್ತಿ ಬರುವಂತೆಯೂ ಮಾಡುವಿ. ನವಿಲಿನಲ್ಲಿ ಕುಣಿಯುವ ರೂಪದಿಂದ, ಕೋಗಿಲೆಯಲ್ಲಿ ಹಾಡುವ ರೂಪದಿಂದ, ಹೀಗೆ ಬೇರೆ ಬೇರೆ ರೂಪದಿಂದ ಇದ್ದುಕೊಂಡು ಆಯಾ ಪ್ರಕಾಶವನ್ನು ಅನುಗ್ರಹಿಸುವಿ. ಎಂದು ಸ್ತುತಿಸುವರು ಭೀಷ್ಮರು

ಪ್ರಾಣಿಗಳ ದೃಷ್ಟಾಂತವನ್ನು ಮನುಷ್ಯರಿಗೆ ನೀಡಲಾಗುವ ಪ್ರಯುಕ್ತ ಪ್ರಾಣಿಗಳಲ್ಲಿ 'ಪ್ರಕಾಶನ'ನಾಗಿ ಇರುವನೆಂದು ಹೇಳಿದ್ದೇ ಹೊರತು ಬರೇ ಪ್ರಾಣಿಗಳಿಗೆ ಪ್ರಕಾಶವನ್ನು ಕೊಡುವವನಲ್ಲ. ಮನುಷ್ಯಪ್ರಾಣಿಗಳಲ್ಲೂ ಪ್ರಕಾಶ ಕೊಡುವವನು.

ನಮ್ಮ ಮೂಲಕವೂ ಏನೋ ವಿಶಿಷ್ಟ ಸಾಧನೆ ನಡೆಯಬಹುದು. ಆಗ ಪ್ರಕಾಶನ ಎನಿಸುವ ಭಗವಂತನು ನಮ್ಮಲ್ಲಿದ್ದುಕೊಂಡು ಆ ಸಾಧನಾನುಷ್ಠಾನಕ್ಕೆ ಬೇಕಾದ ಪ್ರಕಾಶವನ್ನು, ಶಕ್ತಿಯನ್ನು ಕೊಟ್ಟದ್ದರಿಂದ ನಮ್ಮ ಮೂಲಕ ಆ ಸಾಧನೆ ನಡೆದಿದೆ - ಎಂಬ ಅನುಸಂಧಾನ ಇರಬೇಕು ಎಂಬುದು ಪ್ರಕಾಶನನಾಮದಿಂದ ಸೂಚಿತವಾಗುವುದು.

**ಓಜಸ್ತೇಜೋದ್ಯುತಿಧರಃ ಪ್ರಕಾಶಾತ್ಮಾ ಪ್ರತಾಪನಃ |**
**ಋದ್ಧಃ ಸ್ಪಷ್ಟಾಕ್ಷರೋ ಮಂತ್ರಶ್ಚಂದ್ರಾಂಶುರ್ಭಾಸ್ಕರದ್ಯುತಿಃ || ೩೦ ||**

**೨೭೭. ಓಜಸ್ತೇಜೋದ್ಯುತಿಧರಃ - ದೇಹ ಬಲ, ಆತ್ಮಬಲ ಹಾಗೂ ಕಾಂತಿ ಇವುಗಳನ್ನು ಧಾರಣೆ ಮಾಡುವವನು.**

**ವಿವರಣೆ :** ಓಜಸ್ಸು, ತೇಜಸ್ಸು ಹಾಗೂ ದ್ಯುತಿ ಇವುಗಳ ಧರ ಅಂದರೆ ಧಾರಣೆ ನಡೆಸಿದವನು.

ಶರೀರದ ಸಾಮರ್ಥ್ಯವೇ ಓಜಸ್ಸು. ಶರೀರದಲ್ಲಿಯ ಭುಜಬಲ. ಒಬ್ಬ ವ್ಯಕ್ತಿ ಹೊಡೆಯಲಿಕ್ಕೆ ಬಂದರೆ ಸ್ವಂತ ನಮ್ಮ ಭುಜದ ಬಲದಿಂದ ತಡೆಯುವುದು, ಬುದ್ಧಿಶಕ್ತಿ ಖರ್ಚು ಮಾಡಿ ತಡೆಯುವುದಲ್ಲ. ಅವನ ಆಕ್ರಮಣಕ್ಕೆ ತನ್ನ ದೇಹವನ್ನು ಒಡ್ಡುವುದು. ಇದೇ ಓಜಸ್ಸು ಎನಿಸಿದೆ.

ತೇಜಸ್ಸು ಎಂದರೆ ಆತ್ಮಬಲ. ವಯಸ್ಸು ಎಂಭತ್ತೈದು. ದೇಹದಲ್ಲಿ ಏನೂ ಬಲವಿಲ್ಲ. ಆದರೂ ನಡೆದುಕೊಂಡು ಬಂದಿದ್ದಾರೆ ಎಂದರೆ 'ನಿಮ್ಮ ಆತ್ಮಬಲ ಬಹಳ ಪ್ರಮಾಣದಲ್ಲಿದೆ' ಎನ್ನುವೆವು. ಆತ್ಮಬಲವನ್ನೇ ಪ್ರಾಣಶಕ್ತಿ ಎಂದೂ

ಕರೆಯಲಾಗುವುದು. ಇದನ್ನೇ ಶಾಸ್ತ್ರಕಾರರು ತೇಜಸ್ಸು ಎಂದು ಕರೆದರು.

ದ್ಯುತಿಶಬ್ದಕ್ಕೆ ಪ್ರಕಾಶ ಎಂದರ್ಥ. ಪ್ರಕಾಶ ಎಂದರೆ ಬೆಳಕು. ಇವುಗಳ ಧರ - ಧಾರಣೆ ಮಾಡಿದವನು.

ದೇವಶಬ್ದ ದ್ಯುತಿವುಳ್ಳವನೆಂಬ ಅರ್ಥದಲ್ಲಿಯೇ ರೂಪುಗೊಂಡದ್ದು. 'ಅಗ್ನಿಮೀಳೇ........ ಯಜ್ಞಸ್ಯ ದೇವಂ.......' ಎಂಬ ಮಂತ್ರದಲ್ಲಿ ಅಗ್ನಿನಾರಾಯಣ ವಿಶಿಷ್ಟವಾದ ದ್ಯುತಿವುಳ್ಳವನಾಗಿರುವುದರಿಂದಲೇ 'ದೇವ' - ಎಂದು ಉಲ್ಲೇಖಿಸಲ್ಪಡುವವನು.

ಸೂರ್ಯನಿಂದ ಬಿಸಿಲು ಮತ್ತು ಪ್ರಕಾಶ ಎಂಬ ಎರಡು ಬಗೆಯ ದ್ಯುತಿ ಹೊರಡುವುದು. ಬಿಸಿಲು ಹೊರಗಿರುವುದು. ಪ್ರಕಾಶ ಒಳಗೆ ಹರಡುವುದು. ಕೃಷ್ಣನಲ್ಲಿ ಎರಡೂ ಇದೆ. ದುಷ್ಟರ ಪಾಲಿಗೆ ಬಿಸಿಲಿನಂತೆ ಸುಡುವನು. ಸಜ್ಜನರಿಗೆ ಪ್ರಕಾಶ ನೀಡುವನು.

ಅಂತೂ ಎಲ್ಲ ರೀತಿಯಾದ ಶಕ್ತಿಗಳು, ಎಲ್ಲ ರೀತಿಯಾದ ಪ್ರಕಾಶಗಳು ಭಗವಂತನಲ್ಲಿ ಮಡುಗಟ್ಟಿವೆ - ಎಂಬುದೇ **'ಓಜಸ್ತೇಜೋದ್ಯುತಿಧರಃ'** ನಾಮದ ಆಶಯ.

**೨೭೮. ಪ್ರಕಾಶಾತ್ಮಾ - * ಯಾರ ಸ್ವರೂಪವೇ ಬೆಳಕೋ ಅಂತಹವನು.**

*** ಸರಸ್ವತಿಯನ್ನು ಸೊಸೆಯನ್ನಾಗಿ ಹೊಂದಿರುವ ಪ್ರಯುಕ್ತ ಒಳ್ಳೆಯ ಸುಖವುಳ್ಳವನು.**

**ವಿವರಣೆ :** ಈ ನಾಮಕ್ಕೆ ಯಾರ ಸ್ವರೂಪವೇ ಬೆಳಕು - ಎಂಬ ಒಂದು ಅರ್ಥ ಇದ್ದೇ ಇದೆ. ಇನ್ನೊಂದು ಅರ್ಥ ಕೊಡುವುದಾದರೆ ಪ್ರ+ಕ+ಆಶಾ+ ಆತ್ಮಾ - ಪ್ರಕಾಶಾತ್ಮಾ. ಪ್ರ ಎಂದರೆ ಪ್ರಕರ್ಷ-ಉತ್ತಮವಾದದ್ದು. ಕ ಎಂದರೆ ಸುಖ. ಉತ್ತಮವಾದ ಸುಖವುಳ್ಳವನು 'ಪ್ರಕ'. ಯಾಕೆ ಉತ್ತಮ ಸುಖವುಳ್ಳವನು ? 'ಆಶಾತ್ಮಾ'. ಆಶಾ ಎಂದರೆ ಸರಸ್ವತಿ. ಅವಳನ್ನು ಸೊಸೆಯನ್ನಾಗಿ ಸ್ವೀಕರಿಸಿದವನು.

ಉಪನಿಷತ್ತು ಒಂದು ಕಡೆ ಹೇಳಿದೆ - 'ಪ್ರಾಣೋ ಹಿ ಆಶಾಯಾ ಭೂಯಾನ್' ಮುಖ್ಯಪ್ರಾಣನು ಆಶಾಳಿಗಿಂತ ಉತ್ತಮನು. ಸರಸ್ವತಿಗೆ ಆಶಾ ಎಂದು ಹೆಸರು.

ನಮ್ಮಲ್ಲಿ ಆಶೆಗಳು, ಆಕಾಂಕ್ಷೆಗಳು ಹುಟ್ಟುವಂತೆ ಮಾಡುವವಳು ಸರಸ್ವತಿಯಾದುದರಿಂದ ಅವಳು ಆಶಾ ಎನಿಸುವಳು. ಭಗವಂತನ ಬಗ್ಗೆ ತಿಳ್ಕೊಳ್ಳಬೇಕು. ದೇವಸ್ಥಾನಕ್ಕೆ ಹೋಗಬೇಕು. ಪ್ರವಚನಗಳಲ್ಲಿ ಪಾಲ್ಗೊಳ್ಳಬೇಕು-

ಇವೇ ಮೊದಲಾದ ಸದಿಚ್ಛೆಗಳು ಮೂಡುವುದು ಸರಸ್ವತಿಯಿಂದ. ಆದುದರಿಂದ ಅವಳು 'ಆಶಾ'. ಅಂತಹ ಸರಸ್ವತಿಯನ್ನು ಆತ್ಮಾ - ತನ್ನ ಸೊಸೆಯನ್ನಾಗಿ ಸ್ವೀಕಾರ ಮಾಡಿರುವವನು. 'ಆದತ್ತೇ ಸ್ವೀಕರೋತೀತಿ ಆತ್ಮಾ' - ಎಂದು ವ್ಯುತ್ಪತ್ತಿಯನ್ನಿಟ್ಟುಕೊಂಡಾಗ ಆತ್ಮಶಬ್ದಕ್ಕೆ ಸ್ವೀಕಾರ ಮಾಡುವವನೆಂಬ ಅರ್ಥ ಫಲಿಸುವುದು. ಭಗವಂತನ ಮಗ ಚತುರ್ಮುಖ ಎಂದ ಮೇಲೆ ಅವನ ಪತ್ನಿ ಸರಸ್ವತಿ ಭಗವಂತನಿಗೆ ಸೊಸೆ. ಆದುದರಿಂದಲೇ ಭಗವಂತನಿಗೆ ಉತ್ತಮವಾದ ಸುಖ.

ಒಬ್ಬ ವ್ಯಕ್ತಿಗೆ ಜೀವನದಲ್ಲಿ ಸುಖ ಬರುವುದು ತಿಳುವಳಿಕೆ ಉಂಟಾದಾಗ. ಮುಖದಲ್ಲಿ ಪ್ರಸನ್ನತೆ ಕಾಣಿಸುವುದೇ ಜ್ಞಾನ ಬಂದಾಗ. ಅಧ್ಯಾಪಕರು ಇದನ್ನು ಅನುಭವಿಸಿರುವರು. ತಾವು ಹೇಳಿದ ಪಾಠ ವಿದ್ಯಾರ್ಥಿಗಳಿಗೆ ಅರ್ಥವಾಯಿತೆಂದರೆ ವಿದ್ಯಾರ್ಥಿಗಳ ಮುಖದಲ್ಲಿ ಪ್ರಸನ್ನತೆ ಉಂಟಾಗುವುದು. ಇದನ್ನು ಗುರುತಿಸಿದ ಅಧ್ಯಾಪಕರಿಗೆ ನಮ್ಮ ಪಾಠ ಸಾರ್ಥಕವಾಯಿತೆಂದು ಧನ್ಯತಾಭಾವನೆ ಉಂಟಾಗುವುದು.

ಮುಖದಲ್ಲಿ ಪ್ರಸನ್ನತೆ ಬರುವುದು ತಿಳುವಳಿಕೆ ಬಂದಾಗ. ಹಾಗಾದರೆ ಉತ್ತಮವಾದ ಸುಖ ಸರಸ್ವತಿಯನ್ನು ನಮ್ಮವಳನ್ನಾಗಿ ಮಾಡಿಕೊಂಡಾಗ ಉಂಟಾಗುವುದು. ಆಶಾ ಎನಿಸುವ ಸರಸ್ವತಿಯನ್ನು ಸೊಸೆಯನ್ನಾಗಿ ಸ್ವೀಕಾರ ಮಾಡಿದ್ದರಿಂದ ಉತ್ತಮವಾದ ಸುಖವುಳ್ಳವನು 'ಪ್ರಕಾಶಾತ್ಮಾ'.

ಇದು ಶಬ್ದಶಬ್ದದ ಅರ್ಥ. ಒಟ್ಟು ತಾತ್ಪರ್ಯ - ತುಂಬ ತಿಳುವಳಿಕೆವುಳ್ಳ-ವನಾದುದರಿಂದ ಆನಂದ ಸ್ವರೂಪಿ.

ಸರಿಯಾದ ತಿಳುವಳಿಕೆಯಿಲ್ಲದಿದ್ದರೆ ಭಯ. ಭಯ ಇದ್ದರೆ ಸುಖದಲ್ಲಿ ನ್ಯೂನತೆ. ಆದರೆ ಪೂರ್ಣ ತಿಳುವಳಿಕೆವುಳ್ಳವನಾಗಿದ್ದು, ನಿರ್ಭೀತನಾಗಿರುವುದರಿಂದ ಆನಂದಸ್ವರೂಪಿ.

**೨೭೯. ಪ್ರತಾಪನಃ - ದುರ್ಜನರ ಸಾಮರ್ಥ್ಯವನ್ನು ತೆಗೆಯುವವನು.**

**ವಿವರಣೆ :** ಪ್ರತಾಪಂ ನಯತಿ ಅಥವಾ ಅಪನಯತಿ ದುರ್ಜನರ ಸಾಮರ್ಥ್ಯವನ್ನು ತೆಗೆಯುತ್ತಾನೆ. ಸಜ್ಜನರಿಗೆ ಸಾಮರ್ಥ್ಯವನ್ನು ಹೊಂದಿಸುವನು. ಎರಡೂ ಕೆಲಸ ಮಾಡುವನು. ದುರ್ಯೋಧನನ ರಾಜ್ಯವೆಂಬ ಸಾಮರ್ಥ್ಯವನ್ನು ಪಾಂಡವರಿಗೆ ಒದಗಿಸಿದ.

ಭೀಷ್ಮರು ಭಗವಂತನ ಈ ಧರ್ಮವನ್ನು ಅನುಭವಿಸುತ್ತಿದ್ದಾರೆ. ಮಹಾಭಾರತ ಯುದ್ಧದಲ್ಲಿ ಭಾರೀ ಮೆರೆದೆ; ಶಿಖಂಡಿಯನ್ನು ಮುಂದಿಟ್ಟು ನನ್ನ ಪ್ರತಾಪವನ್ನು

ಎಳೆದುಕೊಂಡಿ, ಕೃಷ್ಣ.

ಹೀಗೆ ಭೀಷ್ಮರು ತಮ್ಮ ಸಾಮರ್ಥ್ಯವನ್ನು ಕೃಷ್ಣನಿಗೆ ಅರ್ಪಿಸುವರು. ಬದಲಾಗಿ ಯಾರೋ ಶಿಖಂಡಿಗೆ ತಮ್ಮ ಸಾಮರ್ಥ್ಯವನ್ನು ಅರ್ಪಿಸಿಲ್ಲ.

**೨೮೦. ಋದ್ಧಃ - ಎಲ್ಲ ಕಾಲದಲ್ಲೂ, ಎಲ್ಲ ದೇಶದಲ್ಲೂ ಎಲ್ಲ ರೀತಿಯಿಂದಲೂ ತುಂಬಿದವನು.**

**ವಿವರಣೆ :** 'ಋಧು ವೃದ್ಧೌ' - ಎಂಬ ಧಾತುವಿನಿಂದ ನಿಷ್ಪನ್ನವಾದ 'ಋದ್ಧ' - ಎಂಬ ನಾಮಕ್ಕೆ ತುಂಬಿಕೊಂಡಿರುವವನು ಎಂಬ ಅರ್ಥ. ಯಾವಾಗ ? ಯಾವುದರಿಂದ ? ಎಂದು ಹೇಳದ ಪ್ರಯುಕ್ತ ಎಲ್ಲ ಕಾಲದಲ್ಲೂ ಎಲ್ಲದರಿಂದಲೂ ತುಂಬಿಕೊಂಡಿರುವವನು - ಎಂದು ಸಿದ್ಧಿಸುವುದು.

ನಮ್ಮಲ್ಲಿ ಆದರೆ, ಅವರು ಧನಕನಕಗಳಿಂದ ತುಂಬಿಕೊಂಡಿರುವವರು. ಇವರು ವಿದ್ಯೆಯಿಂದ ತುಂಬಿಕೊಂಡಿರುವವರು. ಅವರು ಆಸ್ತಿ ಪಾಸ್ತಿಗಳಿಂದ ತುಂಬಿದ್ದಾರೆ .... ಹೀಗೆ ಹೇಳಬೇಕಾಗುವುದು. ಯಾಕೆಂದರೆ ಪ್ರತಿಯೊಬ್ಬರೂ ಕೆಲವುಗಳಿಂದಷ್ಟೇ ತುಂಬಿರುವಷ್ಟೇ ಹೊರತು ಎಲ್ಲಗಳಿಂದ ಅಲ್ಲ. ಆದರೆ ಭಗವಂತನಿಗೆ ಹಾಗಲ್ಲ. ಋದ್ಧಃ - ತುಂಬಿದ್ದಾನೆ. ಯಾವುದರಿಂದ ? ಧನಕನಕಗಳಿಂದ, ವಿದ್ಯೆಯಿಂದ, ಬಲದಿಂದ, ಆಸ್ತಿಪಾಸ್ತಿಗಳಿಂದ, ವ್ಯಾಪ್ತಿಯಿಂದ, ಭಕ್ತರಿಂದ, ವಿರೋಧಿಗಳಿಂದ ಕೂಡಾ ಭಗವನಿಗೆ ಇರುವಷ್ಟು ವಿರೋಧಿಗಳು ಇನ್ನಾರಿಗೂ ಇಲ್ಲ. ಎಲ್ಲ ದೈತ್ಯರೂ ಭಗವಂತನ ವಿರೋಧಿಗಳು. ನಮಗಾದರೆ ಎಲ್ಲ ದೈತ್ಯರು ವಿರೋಧಿಗಳಲ್ಲ. ಯಾಕೆಂದರೆ ಕೆಲವು ದೈತ್ಯರ ಜೊತೆ ನಾವು ಗೆಳೆತನವನ್ನು ಮಾಡಿಕೊಂಡಿರುವುದು

ಭಗವಂತನಿಗೆ ಈ ಹೆಸರು - ಪೂರ್ಣಪ್ರಮಾಣದಲ್ಲಿ ಹೊಂದಿಕೆಯಾಗುವುದು. ನಮ್ಮಲ್ಲಿ ಮಾತ್ರ ನಮ್ಮ ನಮ್ಮ ಯೋಗ್ಯತೆಗನುಗುಣವಾಗಿ ಯಾವ ಯಾವ ಗುಣಧರ್ಮದ ತುಂಬಿರುವೆವೋ ಅದಕ್ಕನುಗುಣವಾಗಿ 'ಋದ್ಧ' ಶಬ್ದ ತೆರೆದುಕೊಳ್ಳುವುದು.

ನಮ್ಮ ಯೋಗ್ಯತೆಗೆ ತಕ್ಕಂತೆ ಪೂರ್ಣತೆ ಸಿದ್ಧಿಸಬೇಕಾದರೆ ನಾವು ಭಗವಂತನನ್ನು ಋದ್ಧ ಎಂದು ಉಪಾಸನೆ ಮಾಡಬೇಕು.

ಶ್ರೀಕೃಷ್ಣ ಹದಿನೆಂಟು ದಿನ ಮಹಾಭಾರತ ಯುದ್ಧ ನಡೆಯಬೇಕೆಂದು ಸಂಕಲ್ಪ ಮಾಡಿದ್ದಾನೆಂದ ಮೇಲೆ ಭೀಷ್ಮರು ಆ ಹದಿನೆಂಟು ದಿನಗಳ ಕಾಲವೂ ಅವನ ಪೂಜಾ

ರೀತಿಯಿಂದ ಯುದ್ಧ ಮಾಡಬೇಕಿತ್ತು. ಆದರೆ ಭೀಷ್ಮರು ಹತ್ತೇ ದಿನಗಳ ಕಾಲ ಯುದ್ಧ ಮಾಡಿದರು. ಹೀಗೆ ಯುದ್ಧ ನಡೆಸಬೇಕಾದ ಸೇವೆಯಲ್ಲಿ ನ್ಯೂನತೆ ಬಂದರೂ, ಅದನ್ನು ತುಂಬಿಸಿ ಅನುಗ್ರಹಿಸು ಎಂದು ಭೀಷ್ಮರು ಪ್ರಾರ್ಥಿಸುತ್ತಿರುವರು.

**೨೮೧. ಸ್ಪಷ್ಟಾಕ್ಷರಃ - ವೇದರೂಪದ ಅಕ್ಷರಗಳಷ್ಟೇ ಯಾರನ್ನು ಸ್ಪಷ್ಟವಾಗಿ ತಿಳಿಸಬಲ್ಲವೋ ಅಂತಹವನು.**

**ವಿವರಣೆ :** ಕೃಷ್ಣ ನನ್ನೆದುರು ಕುಳಿತಿರುವಿ. ನಿನ್ನನ್ನು ನೋಡುತ್ತಿರುವೆ ಕೂಡ. ಆದರೆ, ನಿನ್ನ ಮುಂಭಾಗ ನೋಡುತ್ತಿದ್ದರೆ ಹಿಂಭಾಗ ಕಾಣುತ್ತಿಲ್ಲ. ಇಂತಹ ಅವಸ್ಥೆಯಲ್ಲಿ ನಾನಿದ್ದೇನೆ.

ಹಾಗಾದರೆ ನಿನ್ನನ್ನು ಸ್ಪಷ್ಟವಾಗಿ ತಿಳಿಸತಕ್ಕಂತಹದ್ದು ಯಾವುದು ? ಯಾವುದರಿಂದ ನಿನ್ನನ್ನು ಚೆನ್ನಾಗಿ ತಿಳಿದುಕೊಳ್ಳಬೇಕು ? ಕಣ್ಣು ಚೆನ್ನಾಗಿ ತಿಳಿಸುವುದಿಲ್ಲ, ನಿನ್ನನ್ನು ಅಲ್ಲಿ ಮುಟ್ಟಿದರೆ ಇಲ್ಲಿ ಮುಟ್ಟಲಿಕ್ಕಾಗುವುದಿಲ್ಲ. ಇಲ್ಲಿ ಮುಟ್ಟಿದರೆ ಅಲ್ಲಿ ಮುಟ್ಟಲಿಕ್ಕಾಗುವುದಿಲ್ಲ. ಹಾಗಾದರೆ ನಿನ್ನನ್ನು ಸ್ಪಷ್ಟವಾಗಿ, ಚೆನ್ನಾಗಿ ತಿಳಿಸತಕ್ಕದ್ದು ಯಾವುದು? - ಎಂಬ ಪ್ರಶ್ನೆ ಬಂದರೆ ಭೀಷ್ಮರು ಉತ್ತರಿಸುವರು - ಅಕ್ಷರಗಳಲ್ಲದೆ ಬೇರೊಂದು ಪರಮಾತ್ಮನನ್ನು ಚೆನ್ನಾಗಿ ತಿಳಿಸತಕ್ಕದ್ದು ಇಲ್ಲ. ನೀನು ಚೆನ್ನಾಗಿ ಗೋಚರಿಸಲ್ಪಡುವುದಾದರೆ ಅಕ್ಷರಗಳಿಗೆ ಮಾತ್ರ. ವೇದರಾಶಿಯೇ ಅಕ್ಷರಗಳು. ವೇದರಾಶಿ ಯಾವುದೇ ಬಗೆಯ ಸಂಶಯವನ್ನಿಟ್ಟುಕೊಂಡು ದೇವರ ಬಗ್ಗೆ ಚಿತ್ರಣ ಕೊಡುವುದಿಲ್ಲ. ಬದಲಾಗಿ ‘ದೇವರು ಹೀಗೆಯೇ’ - ಎಂಬುದಾಗಿ ಚಿತ್ರಣ ನೀಡುವವು. ನಮ್ಮ ಕಣ್ಣುಗಳು ದೇವರ ಬಗ್ಗೆ ಸ್ಪಷ್ಟ ಚಿತ್ರಣ ನೀಡಲಾರವು. ಯಾಕೆಂದರೆ ಕಣ್ಣುಗಳಿಂದ ನಾವು ದೇವರು ‘ಹೀಗೆಯೇ’ - ಎಂದು ನೋಡಿದರೆ ಮತ್ತೊಂದು ಕ್ಷಣದಲ್ಲಿ ದೇವರು ಬದಲಾಗುವನು. ಆ ಬದಲಾವಣೆಯನ್ನು ಗುರುತಿಸಿ, ಇನ್ನೊಬ್ಬರಿಗೆ ಅದನ್ನು ತಿಳಿಸೋಣ ಎಂದರೆ ಪುನಃ ಬದಲಾಗುವನು. ಆದ್ದರಿಂದ ನಮ್ಮ ಕಣ್ಣುಗಳಿಂದ ಭಗವಂತನನ್ನು ನೋಡಿ, ಅವನು ಹೀಗೆಯೇ ಎಂದು ತೀರ್ಪು ಕೊಡಲು ಬರುವುದಿಲ್ಲ. ಭಗವಂತನ ಬಗ್ಗೆ ಹೀಗೆಯೇ ಎಂದು ತೀರ್ಪು ಕೊಡುವಂತಹದ್ದು ಅಕ್ಷರಗಳ ಸಮೂಹ. ಐವತ್ತೊಂದು ಅಕ್ಷರಗಳ ಸಮೂಹವನ್ನೇ ‘ವೇದ’ - ಎಂದು ಕರೆಯುವುದು. ವೇದಗಳೆಂಬ ಅಕ್ಷರಗಳು ದೇವರನ್ನು ಸ್ಪಷ್ಟವಾಗಿ ತಿಳಿಸಿಕೊಡುತ್ತವೆ. ಆದ್ದರಿಂದ ಸ್ಪಷ್ಟವಾದ ಅಕ್ಷರಗಳು ಉಳ್ಳವನು, ಅರ್ಥಾತ್ ಅಕ್ಷರಗಳಿಂದ ಸ್ಪಷ್ಟವಾಗಿ ಹೇಳಲ್ಪಡುವವನು.

ಅಕ್ಷರಗಳು ಭಗವಂತನನ್ನು ಚೆನ್ನಾಗಿ ತಿಳಿಸಿಕೊಡುವವು. ಎಂದರೆ ತಮಗೆ

ತೋರಿದ್ದನ್ನು ಚೆನ್ನಾಗಿ ತಿಳಿಸಿಕೊಡುವವು. ಈ ಬಗ್ಗೆ ಏನೂ ಸಂಶಯವಿಲ್ಲ. ಆದರೆ ಆ ಅಕ್ಷರಗಳಿಗೂ ಭಗವಂತನ ವ್ಯಕ್ತಿತ್ವದ ಕಾಣದ ಭಾಗವೂ ಇದೆ. ಕಂಡ ಭಾಗವನ್ನು ಚೆನ್ನಾಗಿ ತಿಳಿಸಿಕೊಡುವವು ಎಂದಷ್ಟೇ.

ಆದ್ದರಿಂದಲೇ 'ಶ್ರುತಿಗೆ ಸಿಲುಕದ ಅಪ್ರತಿಮಮಹಿಮ ನೀನು' - ಎಂದು ದಾಸರಾಯರು ಹಾಡಿರುವರು. ಶ್ರುತಿಗೂ ಸಿಲುಕುವುದಿಲ್ಲ ಭಗವಂತ. ಆದರೆ ವೇದ ದೇವರ ಬಗ್ಗೆ ಚಿತ್ರಣ ಕೊಡುವುದಕ್ಕೆ ಪ್ರಾರಂಭಿಸಿದರೆ, ಅದು ಎಷ್ಟು ಚಿತ್ರಣ ಕೊಡುವುದೋ ಅಷ್ಟರ ಮಟ್ಟಿಗೆ ಸಂಶಯವಿಲ್ಲ. ತಾನು ಕಂಡ ಭಾಗವನ್ನು ಸ್ಪಷ್ಟವಾಗಿ ನಮ್ಮ ಮುಂದೆ ತೆರೆದಿಡುವುದು. ನಮಗಾದರೆ ಭಗವಂತನಲ್ಲಿ ಕಂಡ ಭಾಗವನ್ನೂ ಸ್ಪಷ್ಟವಾಗಿ ತಿಳಿಯಲಿಕ್ಕೆ ಸಾಧ್ಯವಾಗುವುದಿಲ್ಲ.

ಆದ್ದರಿಂದ ಭೀಷ್ಮರು ಅಕ್ಷರಗಳಿಗೆ ಮಾತ್ರ ಸ್ಪಷ್ಟವಾಗಿ ಗೋಚರಿಸುವವನು ನೀನು - ಎಂದು ಸ್ತುತಿಸುವರು.

**೨೮೨. ಮಂತ್ರಃ - ಗೌರವವನ್ನು ಕೊಟ್ಟು ರಕ್ಷಣೆ ಮಾಡುವವನು.**

**ವಿವರಣೆ :** 'ಮಾನಾತ್ ತ್ರಾಯತೇ ಇತಿ ಮಂತ್ರಃ' ಮಂತ್ರಕ್ಕೆ ಮಂತ್ರ ಎಂಬ ಹೆಸರು ಯಾಕೆ ಬಂದಿದೆ ? 'ಮಾನಾತ್ ತ್ರಾಯತೇ' ಅಥವಾ 'ಮನನಾತ್ ತ್ರಾಯತೇ' - ಯಾರು ನಿತ್ಯ ಅದನ್ನು ಪಠಿಸುವನೋ, ಮನನ ಮಾಡುವನೋ ಅವನನ್ನು ಅದು ರಕ್ಷಣೆ ಮಾಡುವುದೆಂಬ ದೃಷ್ಟಿಯಿಂದ ಅದು 'ಮಂತ್ರ' ಎನಿಸಿದೆ. 'ಮಂತ್ರೀ' - ಎಂಬುದೂ ನಮ್ಮನ್ನು ರಕ್ಷಣೆ ಮಾಡುವವನೆಂಬ ಅರ್ಥದಲ್ಲೇ ಬಂದದ್ದು. ರಕ್ಷಣೆ ಮಾಡತಕ್ಕ ಮಾತುಗಳಿಗೆ ಮಂತ್ರ ಎಂದು ಹೆಸರು ಬಂತು. ಭೀಷ್ಮರು ಕೃಷ್ಣನನ್ನು 'ನೀನು ಮಂತ್ರ' ಎನ್ನುವರು. 'ಮಾನಾತ್ ತ್ರಾಯತೇ' ಅಂದರೆ - ಭೀಷ್ಮರು ಅನ್ನುವರು - ಸಮಾಜದಲ್ಲಿ ನನಗೆ ಭಾರೀ ಗೌರವವಿದೆ. ಎಲ್ಲರೂ ಭೀಷ್ಮರು ಏನು ಅನ್ನುವರೆಂದೇ ಕಾಯುತ್ತಿರುವರು. ಭೀಷ್ಮರು ಏನಾದರೂ ತೀರ್ಪು ಕೊಟ್ಟರೆಂದರೆ ಅದು ಸರ್ವೋಚ್ಚ ನ್ಯಾಯಾಲಯದ ತೀರ್ಪಿನಂತೆಯೇ. ಮತ್ತೆ ಚರ್ಚೆಗೆ ಅವಕಾಶವೇ ಇಲ್ಲ. ನನಗೆ ಸಮಾಜದಲ್ಲಿ ಇಷ್ಟೊಂದು ಗೌರವವಿದೆ. ಈ ಗೌರವಕ್ಕೆ ಸ್ವಲ್ಪವೂ ಚ್ಯುತಿ ಬಾರದಂತೆ ರಕ್ಷಣೆ ಮಾಡಿದವನು ನೀನು ಎಂದು ಭೀಷ್ಮರು ಕೃಷ್ಣನಲ್ಲಿ ತಿಳಿಸುವರು. ಒಂದು ಸಂದರ್ಭದಲ್ಲಿ ನೀನೂ ನನ್ನ ಬಳಿಗೆ ಬಂದು ಭೀಷ್ಮರು ಏನು ಹೇಳುವರೋ ಹಾಗೆ ನಡೆಯೋಣ ಎಂದು ನನಗೆ ಗೌರವ ತಂದು ಕೊಟ್ಟಿರುವಿ.

ಉಳಿದವರೆಲ್ಲ ನಾನು ಹೇಳಿದಂತೆ ಕೇಳಿದ್ದಾರೆ, ನಡೆದಿದ್ದಾರೆ ನಿಜ, ಆದರೆ ನಾನು ಹೇಳಿದ್ದೆಲ್ಲ ನಡೆದದ್ದು ನಿನ್ನಿಂದಾಗಿ. ನಾನು ಹೇಳಿದಂತೆ ನನ್ನ ಕೊನೆಯ

ಮಾತನ್ನು ನಡೆಸಿಕೊಟ್ಟವನು ನೀನೇ. ಇದರಿಂದಾಗಿ ನನಗೆ ಸಮಾಜದಲ್ಲಿ ಮತ್ತಷ್ಟು ಗೌರವ ಬಂತು.

'ಶ್ರೀಕೃಷ್ಣನ ಕೈಯಿಂದ ಚಕ್ರ ಹಿಡಿಸ್ತೇನೆ' - ಎಂಬುದು ನನ್ನ ಮಾತು. ಅದಕ್ಕೆ ಸರಿಯಾಗಿ ನೀನು ಚಕ್ರ ಹಿಡಿದುಕೊಂಡು ಬಂದಿ ತಾನೇ ? ಆದ್ದರಿಂದ ನನಗೆ ಗೌರವವನ್ನು ಕೊಟ್ಟು ನನ್ನನ್ನು ಕಾಪಾಡಿದವನು ನೀನು. ಆದುದರಿಂದ ನನ್ನ ಪಾಲಿಗೆ ಮಂತ್ರ ನೀನೇ.

ಅದಕ್ಕೆ ದಾಸರು ಅಂದದ್ದು - 'ಆ ಮಂತ್ರ ಈ ಮಂತ್ರ ಜಪಿಸಿ ನೀ ಕೆಡಬೇಡ ಸೋಮಶೇಖರ ತನ್ನ ಭಾಮೆಗೆ ಪೇಳಿದ ಮಂತ್ರ ರಾಮಮಂತ್ರವ ಜಪಿಸೋ...' ರಾಮಮಂತ್ರ, ಕೃಷ್ಣ ಮಂತ್ರ ಎರಡೂ ಒಂದೇ. ನಾವು ಆ ಮಂತ್ರಗಳನ್ನು ಜಪಿಸಿದರೆ ಭಗವಂತನು ನಮಗೆ ಸಮಾಜದಲ್ಲಿ ಗೌರವವನ್ನು ಕೊಟ್ಟು ರಕ್ಷಣೆ ಮಾಡುವನು. ಆದ್ದರಿಂದ ಎನ್ನ ಪಾಲಿನ 'ಮಂತ್ರ ನೀನೇ'- ಎಂದು ಭೀಷ್ಮರು ಸ್ತುತಿಸುವರು.

ಗಣಪತಿಮಂತ್ರ ಜಪ ಮಾಡೋಣ. ಪಂಚಾಕ್ಷರಿಮಂತ್ರ ಜಪ ಮಾಡೋಣ. ಆದರೆ ಅವುಗಳಿಂದ ಬರೇ ಗಣಪತಿ, ಶಿವ ಇವರು ಪ್ರತಿಪಾದ್ಯರೆಂಬ ಭಾವನೆ ಸಲ್ಲ. ರುದ್ರನೊಳಗೆ ನರಸಿಂಹನ ಚಿಂತನೆ ಮಾಡಿಕೊಂಡು ಪಂಚಾಕ್ಷರಿ ಮಂತ್ರವನ್ನು ಜಪಿಸೋಣ. ಗಣಪತಿಯೊಳಗೆ ವಿಶ್ವನ ಚಿಂತನೆ ಮಾಡಿಕೊಂಡು ಗಣಪತಿ ಮಂತ್ರವನ್ನು ಜಪಿಸೋಣ. ಮುಖ್ಯಪ್ರಾಣನಲ್ಲಿ ರಾಮಚಂದ್ರನ ಚಿಂತನೆ ಮಾಡಿಕೊಂಡು ಜಪ ಮಾಡೋಣ. ಆಗಷ್ಟೇ ಆ ಮಂತ್ರಜಪದ ಮೂಲಕ ಭಗವಂತನು ನಮಗೆ ಸಮಾಜದಲ್ಲಿ ಗೌರವವನ್ನು ಕೊಟ್ಟು ರಕ್ಷಣೆ ಮಾಡುವನು.

**೨೮೩. ಚಂದ್ರಾಂಶುಃ - * ಚಂದ್ರನಂತೆ ತಂಪಾದ ಕಿರಣಗಳಿಂದ ಸಮಾಜವನ್ನು ತಿಳಿ ಮಾಡುವವನು.**

*** ವೇದಾದಿಗಳನ್ನು ವಿಭಾಗ ಮಾಡಿಕೊಟ್ಟು ಆಯಾ ವ್ಯಕ್ತಿಗಳನ್ನು ನೆಮ್ಮದಿಯಿಂದ ಇರುವಂತೆ ಮಾಡುವವನು.**

**ವಿವರಣೆ :** ಚಂದ್ರನಂತೆ ತಂಪಾದ, ತಿಳಿಯಾದ ಕಿರಣ ಉಳ್ಳವನೆಂಬ ಅರ್ಥ ಪ್ರಸಿದ್ಧ. ಇದು ಸಾಮಾನ್ಯವಾದ ಅರ್ಥ. ಕದಡಿದ ಸಮಾಜವನ್ನು ತಿಳಿ ಮಾಡುವವನು ಭಗವಂತ. ಚಂದ್ರ ಹೇಗೆ ತನ್ನ ತಂಪಾದ ಕಿರಣಗಳಿಂದ ತಿಳಿ ಮಾಡುವನೋ ಹಾಗೆ.

ಈ ಅರ್ಥದ ಜೊತೆಗೆ ಶಾಸ್ತ್ರಕಾರರು ಮತ್ತೊಂದು ಅರ್ಥವನ್ನು ತಿಳಿಸುವರು. ಚಂದತೀತಿ ಚಂದ್ರಃ. ಕನ್ನಡದಲ್ಲಿ 'ಏನು ಚಂದ' ಎಂದು ಬಂದದ್ದು ಅಲ್ಲಿಂದಲೇ. ವಿಚಾರ ಮಾಡ್ತಾ ಹೋದರೆ ನಾವು ತುಳು, ಕನ್ನಡ ಮಾತನಾಡುವುದಕ್ಕಿಂತ ಸಂಸ್ಕೃತ

ಮಾತನಾಡುವುದೇ ಹೆಚ್ಚು. ಆದರೆ ನಾವು ಸಂಸ್ಕೃತ ಮಾತನಾಡುತ್ತಿದ್ದೇವೆಂದು ನಮಗೇ ಗೊತ್ತಿಲ್ಲ.

ಯಾವುದರಿಂದ ನಮ್ಮ ಮನಸ್ಸಿಗೆ ಆಹ್ಲಾದ ಉಂಟಾಗುವುದೋ ಅದು ಚಂದ. ಅದನ್ನು ಮಾತ್ರ ಚಂದ ಎಂದು ಕರೆಯುವೆವು. ಹಗಲು ಸೂರ್ಯನ ತಾಪದಿಂದ ಸುಸ್ತಾಗಿ, ರಾತ್ರಿ ಬೆಳದಿಂಗಳು - ಎಂದು ಅಡ್ಡಾಡಲು ಪ್ರಾರಂಭಿಸುವೆವು. ಯಾಕೆಂದರೆ ನಮ್ಮ ಮನಸ್ಸಿಗೆ ಆನಂದವನ್ನು, ನೆಮ್ಮದಿಯನ್ನು ಕೊಡುವವನು ಚಂದ್ರ. ಆ ಮೇಲೆ- 'ಅಂಶು' ಎಂದಿದೆ, 'ಅಂಶಯತೀತಿ ಅಂಶುಃ' - ವಿಭಾಗ ಮಾಡುವವನು.

ಆದ್ದರಿಂದ ಚಂದ್ರಾಂಶು - ಎಂಬುದರಿಂದ ನೆಮ್ಮದಿ ಕೊಡುವವನು ಹಾಗೂ ವಿಭಾಗ ಮಾಡುವವನು - ಎಂಬ ಅರ್ಥ ಹೊರಡುವುದು. ಇದರ ತಾತ್ಪರ್ಯ - ವಿಭಾಗ ಮಾಡಿ ನೆಮ್ಮದಿಯನ್ನು, ಆನಂದವನ್ನು ಕೊಡುವವನು - ಎಂದು.

ವೇದವನ್ನು ವಿಭಾಗ ಮಾಡಿ ಕೆಲವರಿಗೆ ಋಕ್ ಶಾಖೆ, ಮತ್ತೆ ಕೆಲವರಿಗೆ ಯಜುಃ ಶಾಖೆ, ಇನ್ನು ಕೆಲವರಿಗೆ ಸಾಮ ಶಾಖೆ - ಹೀಗೆ ವಿತರಿಸಿದವನು ಭಗವಂತನು. ಹಾಗೆಯೇ ವ್ಯಕ್ತಿಗಳಿಗೆ ಆಯಾ ವರ್ಣವನ್ನು ವಿಭಜಿಸಿ ಕೊಟ್ಟವನು ಅವನು. ಹೀಗೆ ವಿಭಜಿಸಿಕೊಟ್ಟರೂ ಯಾರೂ ಆ ವಿಭಾಗದ ಬಗ್ಗೆ ಅತೃಪ್ತಿ, ಅಸಮಾಧಾನ ತಾಳದೆ, ನೆಮ್ಮದಿಯಿಂದಲೇ ಇರುವಂತೆ ಮಾಡಿರುವವನು ಭಗವಂತನು. ಲೋಕದಲ್ಲಾದರೆ ಆಸ್ತಿ, ಪಾಸ್ತಿಗಳ ವಿಭಾಗ ನಡೆಯಿತೆಂದರೆ ಅಲ್ಲಿ ಅತೃಪ್ತಿ, ಅಸಮಾಧಾನ ಇದ್ದೇ ಇರುವುದು. ಆದರೆ ಭಗವಂತ ನಡೆಸಿಕೊಟ್ಟ ವೇದ ವಿಭಾಗ, ವರ್ಣ ವಿಭಾಗ ಮುಂತಾದವುಗಳಲ್ಲಿ ಯಾರಿಗೂ ಅತೃಪ್ತಿ, ಅಸಮಾಧಾನ ಇಲ್ಲ; ಬದಲಾಗಿ ಪ್ರತಿಯೊಬ್ಬರಿಗೂ ತಮ್ಮ ತಮ್ಮ ಪಾಲಿಗೆ ಬಂದ ವೇದ ವಿಭಾಗಾದಿಗಳ ಬಗ್ಗೆ ನೆಮ್ಮದಿಯೇ ಇದೆ.

ಹೀಗೆ ವಸ್ತುಗಳನ್ನು, ಧರ್ಮಗಳನ್ನು, ಕರ್ಮಗಳನ್ನು, ವೇದಗಳನ್ನು ಬೇರೆ ಬೇರೆ ವಿಭಾಗ ಮಾಡಿ ಆಯಾ ವ್ಯಕ್ತಿಗಳು ನೆಮ್ಮದಿಯಿಂದ ಇರುವಂತೆ ಮಾಡಿದವನೇ 'ಚಂದ್ರಾಂಶುಃ'

ಲೋಕದಲ್ಲಿ ನಡೆಯುವ ಆಸ್ತಿವಿಭಾಗ ಇತ್ಯಾದಿಗಳ ಸಂದರ್ಭದಲ್ಲಿ ಯಾರಿಗೂ ಅತೃಪ್ತಿ ಆಗದೆ, ಆ ಬಗ್ಗೆ ನೆಮ್ಮದಿ ಉಂಟಾಗಬೇಕೆಂದರೆ ಭಗವಂತನನ್ನು 'ಚಂದ್ರಾಂಶು' - ಎಂದು ಉಪಾಸನೆ ನಡೆಸಬೇಕು.

**೨೮೪. ಭಾಸ್ಕರದ್ಯುತಿಃ - ಒಳಗೆ ತೋರಿದ ವಿಷಯವನ್ನು ಹೊರಗೆ ಹಾಕಿಸುವ ಸಾಮರ್ಥ್ಯ ಉಳ್ಳವನು.**

**ವಿವರಣೆ :** ಭಾಸ ಅಂದರೆ ಪ್ರಕಾಶ. ಕರ ಎಂದರೆ ಉಂಟು ಮಾಡುವ. ದ್ಯುತಿ ಅಂದರೆ ಸಾಮರ್ಥ್ಯ. ಪ್ರಕಾಶವನ್ನುಂಟು ಮಾಡುವ ಸಾಮರ್ಥ್ಯವುಳ್ಳವನೇ -'ಭಾಸ್ಕರದ್ಯುತಿ'. **'........ಮತ್ತಃ ಸ್ಮೃತಿರ್ಜ್ಞಾನಮಪೋಹನಂ ಚ'** - ಎಂದು ಗೀತೆಯಲ್ಲಿ ಇದನ್ನೇ ಹೇಳಿರುವುದು. ಒಳಗೆ ನನಗೆ ವಿಷಯ ತಿಳಿದಿದೆ. ಒಳಗೆ ವಿಷಯ ಭಾಸ ಆಗಿದೆ-ತೋರಿದೆ. ಒಳಗೆ ತೋರಿದ ವಿಷಯವನ್ನು ನಾನು ಹೊರಗೆ ಹಾಕಬೇಕು. ನನ್ನಲ್ಲಿ ಈ ವಿಷಯ ತೋರಿದೆ, ಎಂದು ನಾನು ಜನರಿಗೆ ಗೊತ್ತುಪಡಿಸಬೇಕು. ಹೀಗಾಗಬೇಕಾದರೆ ಯಾರ ಹಿನ್ನೆಲೆ ಬೇಕು ? ಈ ವಿಷಯ ಹೀಗೆ - ಎಂದು ಭಗವಂತ ನೆನಪಿಸಿಕೊಡಬೇಕು. ಆಗಷ್ಟೇ ಅದನ್ನು ಹೊರಗೆ ಅರುಹಬಹುದಾಗುತ್ತದೆ. ಆಗ ನಿಮಗೆ ತಿಳಿಯುವುದು - ಅವರಲ್ಲಿ ಇದ್ದ ವಿಷಯವನ್ನು ಪ್ರಕಾಶಪಡಿಸಿದರು - ಎಂದು. ಇವರಲ್ಲಿ ಈ ವಿಷಯ ಇತ್ತು. ನಮಗೆ ಅದು ಗೊತ್ತಾಯಿತು. ತನ್ನಲ್ಲಿದ್ದ 'ಭಾಸ '- ತಿಳುವಳಿಕೆ, ಅದನ್ನು 'ಕರ' ಹೊರಗೆ ಜನಕ್ಕೆ ಕೊಡಬೇಕು. ಹಾಗಾಗಬೇಕಾದರೆ ಯಾರ - ದ್ಯುತಿ - ಸಾಮರ್ಥ್ಯ ಬೇಕು ? ಕೃಷ್ಣ ನಿನ್ನ ಸಾಮರ್ಥ್ಯ ಬೇಕು. ಆದುದರಿಂದ ನೀನು 'ಭಾಸ್ಕರದ್ಯುತಿಃ' ಇದನ್ನೇ ನೀನು **'ಮತ್ತಃ ಸ್ಮೃತಿರ್ಜ್ಞಾನಮಪೋಹನಂ ಚ....'** ಎಂದು ತಿಳಿಸಿರುವಿ. ಹೇಳಬೇಕೆಂದು ಸಂಕಲ್ಪ ಮಾಡಿದ್ದನ್ನು ಮರೆಸುವವನೂ ನೀನು. ನೆನಪಿಸುವವನೂ ನೀನೇ. ನಮಗೆ ಮರೆಸುವಿಕೆ ಬೇಡ, ನೆನಪಿಸುವಿಕೆ ಬೇಕು. ಅದಕ್ಕೋಸ್ಕರ -'ಭಾಸ್ಕರದ್ಯುತಿ' ಎಂದು ಉಪಾಸನೆ ನಡೆಸಬೇಕು. ಹೊರ ಹಾಕಬೇಕಾದ ವಿಷಯ ಈ ಚೀಲದಲ್ಲಿ ತುಂಬಿದೆ. ಈ ಚೀಲದಿಂದ ಹೊರಹಾಕಬೇಕಾಗಿದೆ. ಆದರೆ ಹೊರಹಾಕುವ ತಾಕತ್ತು ಇಲ್ಲಿ ಇಲ್ಲ. ಅದು 'ಭಾಸ್ಕರದ್ಯುತಿ' ಎನಿಸುವ ನಿನ್ನ ಮೂಲಕವೇ ಆಗಬೇಕಾದದ್ದು.

**ಅಮೃತಾಂಶೂದ್ಭವೋ ಭಾನುಃ ಶಶಬಿಂದುಃ ಸುರೇಶ್ವರಃ |**
**ಔಷಧಂ ಜಗತಃಸೇತುಃ ಸತ್ಯಧರ್ಮಪರಾಕ್ರಮಃ || ೩೧ ||**

**೨೮೫. ಅಮೃತಾಂಶೂದ್ಭವಃ – * ಸೂರ್ಯ ಚಂದ್ರಾದಿಗಳಿಗೆ ನಾಶವಿಲ್ಲದ ಕಿರಣಗಳನ್ನು ನೀಡಿರುವವನು.**

*** ತನ್ನ ಭಕ್ತರಾದ ರುದ್ರಾದಿದೇವತೆಗಳಿಗೆ ನಾಶವಿಲ್ಲದ ಕೀರ್ತಿಯನ್ನು ನೀಡಿರುವವನು.**

**ವಿವರಣೆ :** ಅಮೃತ – ನಾಶವಿಲ್ಲದ, ಅಂಶು - ಕಿರಣಗಳಿಗೆ, ಉದ್ಭವ – ಕಾರಣನಾಗಿರುವವನು. ಸೂರ್ಯ, ಚಂದ್ರ, ನಕ್ಷತ್ರಗಳು, ಬೆಂಕಿ – ಹೀಗೆ ಬೆಳಕನ್ನು ನೀಡುವ ವಸ್ತುಗಳು ಯಾವುದ್ಯಾವುದು ಇವೆಯೋ ಅವುಗಳ ಕಿರಣಗಳು

ಸಾಯುವುದಿಲ್ಲ. ಹಗಲಿಗೆ ಸೂರ್ಯ ಕಿರಣಗಳನ್ನು ಹೊರಗೆ ಬಿಡುತ್ತಾನೆ, ರಾತ್ರಿಗೆ ಅವುಗಳನ್ನೆಲ್ಲ ಒಳಗೆ ತೆಗೆದುಕೊಳ್ಳುವನು. ನಮಗೆ ಈಗ ಕತ್ತಲೆ ಇರಬಹುದು. ಆದರೆ ಇದೇ ಸೂರ್ಯ ಮತ್ತೊಂದು ಕಡೆ ಬೆಳಗಿಕೊಂಡು ಇರುವನು. ಮೇರು ಪರ್ವತದ ಆ ಬದಿಗೆ ಹೋಗುವನು. ಹೊರತು ಸೂರ್ಯನಲ್ಲಿ ಕಿರಣ ಕಡಿಮೆಯಾಗುವುದೆಂದು ಇಲ್ಲ. ಭಗವಂತನು ಹೇಗೆ ಬಲಿಯಿಂದ ನೂರು ಯಾಗಗಳನ್ನು ಮಾಡಿಸಿ ಇಂದ್ರನ ಪದವಿಯನ್ನು ಕೊಟ್ಟನೋ, ರುದ್ರನಿಂದ ಸಾಧನೆ ಮಾಡಿಸಿ ಶೇಷನ ಪದವಿಯಲ್ಲಿ ಇಟ್ಟನೋ ಹಾಗೆಯೇ ದೇವತೆಯೊಬ್ಬನಿಂದ ಸಾಧನೆ ಮಾಡಿಸಿ, ಅವನಿಂದ ಕಿರಣಗಳನ್ನು ಮತ್ತೆ ಕಸಿದುಕೊಳ್ಳುವುದಿಲ್ಲ. ಆದ್ದರಿಂದ ಅಂಶುಗಳು - ಕಿರಣಗಳು ಅಮೃತ - ಮರಣ ಇಲ್ಲದವು. ಕಿರಣಗಳಿಗೆ ಮಸುಕು ಬರುವುದು ಎಂದಿಲ್ಲ. ಕಿರಣಗಳಿಂದ ರಹಿತನಾಗಿ ಸೂರ್ಯ ಇರುವುದು ಎಂದಿಲ್ಲ. ಹೀಗೆ ನಾಶವಿಲ್ಲದ ಕಿರಣಗಳು ಇರುವುದಕ್ಕೆ ಕಾರಣನಾದವನೇ 'ಅಮೃತಾಂಶೂದ್ಭವ'. ಬರೇ ಸೂರ್ಯನಲ್ಲಿ ಅಲ್ಲದೆ, ಚಂದ್ರ, ನಕ್ಷತ್ರ, ಅಗ್ನಿ - ಮುಂತಾದವುಗಳಲ್ಲೂ ನಾಶವಿಲ್ಲದ ಕಿರಣಗಳು ಇರುವುದಕ್ಕೆ ಕಾರಣನಾಗಿರುವವನು ಭಗವಂತ.

ಹೀಗೆ ಸೂರ್ಯಚಂದ್ರಾದಿಗಳಿಗೆ ಕಿರಣಗಳನ್ನು ಕೊಟ್ಟು ಜಗತ್ತಿನಲ್ಲಿ ಪ್ರಸಿದ್ಧ ಪಡಿಸಿದರೆ, ತನ್ನ ಭಕ್ತರಿಗೆ ಕೀರ್ತಿ ಎಂಬ ಕಿರಣವನ್ನು ಕೊಟ್ಟು ಅವರು ಜಗತ್ತಿನಲ್ಲಿ ಪ್ರಸಿದ್ಧರಾಗುವಂತೆ ಮಾಡುವನು.

ನಾವು ದೇವತೆಗಳನ್ನು ತೆಗೆದುಕೊಂಡು ನೋಡಿದರೆ ಎಲ್ಲ ದೇವತೆಗಳೂ ಒಂದಲ್ಲ ಒಂದು ಬಾರಿ ಜಾರಿದ್ದಾರೆ. ಆದರೆ ಲೋಕದಲ್ಲಿ ಅವರಿಗೆ ಸಿಗತಕ್ಕ ಪೂಜೆ ಪುರಸ್ಕಾರಗಳಲ್ಲಿ ಸ್ವಲ್ಪವೂ ಕಮ್ಮಿ ಇಲ್ಲ ತಾನೇ?

ಚಂದ್ರನನ್ನು ಗುರುಪತ್ನೀಗಮನ ಮಾಡಿದ್ದಿ ಎಂದೇನೂ ನಾವು ಕಡೆಗಣಿಸಿಲ್ಲ. ಸುಗ್ರೀವನನ್ನು ಪರದಾರಾಗಮನ ಮಾಡಿದವನೆಂದೇನೂ ತಿರಸ್ಕಾರ ಮಾಡಿಲ್ಲ. ಇಂದ್ರಾವತಾರಿ ವಾಲಿ ಸುಗ್ರೀವನ ರಾಜ್ಯ ಕಸಿದುಕೊಂಡನೆಂದೇನೂ ಇಂದ್ರನಿಗೆ ನೀಡುವ ಗೌರವದಲ್ಲಿ ಧಕ್ಕೆ ಮಾಡಿಲ್ಲ. ರುದ್ರನಾಗಲೀ, ಇಂದ್ರನಾಗಲೀ, ವರುಣನಾಗಲೀ ಯಾವುದೇ ದೇವತೆಯಾಗಲಿ ಅವನು ಜಾರಿದ್ದರೂ ಅವನಿಗೆ ಲೋಕದಲ್ಲಿ ಪೂಜೆಪುರಸ್ಕಾರ ದೊರಕಿಸುವಲ್ಲಿ ಸ್ವಲ್ಪವೂ ಕಮ್ಮಿ ಆಗದಂತೆ ನೋಡಿಕೊಂಡವನು ಭಗವಂತ.

ಭೀಷ್ಮರು ತಮ್ಮ ಅನುಭವದ ಆಧಾರದಲ್ಲಿಯೇ ಸ್ತುತಿಸುತ್ತಿದ್ದಾರೆ - ನಾನು ಜೀವನದಲ್ಲಿ ದುರ್ಯೋಧನಾದಿಗಳ ಸಹವಾಸದಿಂದ ಅಲ್ಲಲ್ಲಿ ಜಾರಿದ್ದಿರಬಹುದು.

ಆದರೆ ಲೋಕದ ಮನ್ನಣೆಯಿಂದ ಕಿಂಚಿತ್ತೂ ವಂಚಿತನಾಗಿಲ್ಲ. ಎನ್ನ ಮಿತ್ರ ದ್ರೋಣಾಚಾರ್ಯರೂ ಹಾಗೆಯೇ. ತನ್ನ ಮಗನ ಅಳುವನ್ನು ನಿಲ್ಲಿಸುವುದಕ್ಕಾಗಿ, ಒಂದು ಆಕಳನ್ನು ತರುವುದಕ್ಕಾಗಿ ಎಲ್ಲೆಲ್ಲೋ ಹೋದರು, ಯಾರ್ಯಾರ ವಿರುದ್ಧವಾಗಿ ಹಗೆ ಕಟ್ಟಿಕೊಂಡರು. ದ್ರುಪದನ ಮೇಲೆ ದಂಡೆತ್ತಿ ಹೋದರು. ಏನೇನೋ ಮಾಡಿದರು. ಆದರೂ ಸಮಾಜದಲ್ಲಿ 'ದ್ರೋಣರಂತೆ ಇರಬೇಕು' - ಎಂದು ಒಪ್ಪಿಕೊಳ್ಳುವಂತೆ ದ್ರೋಣರನ್ನು ಆದರ್ಶವ್ಯಕ್ತಿಯನ್ನಾಗಿಯೇ ಇಟ್ಟಿರುವಿ.

ಹಾಗಾದರೆ ಸಮಾಜದಲ್ಲಿ ನಿನ್ನ ಭಕ್ತರು ಎಂದು ಯಾರು ಇರುವರೋ ಅವರಿಗೆ ಒಮ್ಮೆ ನೀನು ಕೀರ್ತಿಯನ್ನು ಕೊಟ್ಟರೆ, ಮತ್ತೆ ನೀನು ಆ ಕೀರ್ತಿಯನ್ನು ಕಸಿದುಕೊಳ್ಳುವುದಿಲ್ಲ. ಸೂರ್ಯಚಂದ್ರಾದಿಗಳಿಗಾಗುವಾಗ - ಅಂಶು ಎಂದರೆ ಕಿರಣ, ಭಗವದ್‌ಭಕ್ತರಿಗಾಗುವಾಗ ಅಂಶು ಎಂದರೆ ಕೀರ್ತಿ. ನಾಶವಿಲ್ಲದ ಕಿರಣಗಳಿಗೆ, ನಾಶವಿಲ್ಲದ ಕೀರ್ತಿಗೆ ಕಾರಣನಾದವನು 'ಅಮೃತಾಂಶೂದ್ಭವ'.

**೨೮೬. ಭಾನುಃ – ಭೂಮಿಯನ್ನು ದುಷ್ಟರಿಂದ ಕಸಿದುಕೊಂಡು ಒಳ್ಳೆಯವರಿಗೆ ಕೊಡುವವನು.**

**ವಿವರಣೆ :** ಭಾನು ಎಂದು ಸೂರ್ಯನಿಗೆ ಹೆಸರು ಇದೆ. 'ಬಾನುಡು ಬೊಳ್ಳಿ ಮೂಡುಂಡ್' – ಎಂದು ತುಳುವಿನಲ್ಲಿ ಬಾನು ಎಂದರೆ ಆಕಾಶ. ಈ ಭಾನು ಶಬ್ದ ಸಂಸ್ಕೃತದಿಂದ ಬಂದದ್ದು. ಎಲ್ಲಾ ಭಾಷೆಗಳಲ್ಲೂ ಸಂಸ್ಕೃತ ಸೇರಿಕೊಂಡಿದೆ.

ಭೀಷ್ಮರು ಎದುರಿಗಿರುವ ಕೃಷ್ಣನನ್ನು ಕಂಡರು. ವಾಮನ ರೂಪದ ನೆನಪು ಬಂತು. ರಾಮರೂಪದ ನೆನಪು ಬಂತು, ಎಲ್ಲಾ ರೂಪಗಳೂ 'ಭಾನು'ಗಳೇ. ಏನು 'ಭಾನು' ಎಂದರೆ ?'ಭಾ ಅವಧಾರಣೇ' – ಎಂಬ ಕ್ರಿಯಾ ಪದದಿಂದ ನಿಷ್ಪನ್ನವಾದ 'ಭಾ' – ಎಂದರೆ ನಮ್ಮನ್ನೆಲ್ಲ ಧರಿಸುವ ಭೂಮಿ ಎಂದರ್ಥ. ನಮಗೆ ಆಚೆ ಈಚೆ ಸಂಚರಿಸಲು ಆಶ್ರಯ ಕೊಡುವುದೆಂಬ ಅಭಿಪ್ರಾಯದಲ್ಲಿ ನಾವು ಪ್ರಕಾಶವನ್ನೂ 'ಭಾ' – ಎಂದು ಕರೆಯುವೆವು. 'ಭಾ' ಎನಿಸುವ ಭೂಮಿಯನ್ನು ಕೃಷ್ಣ ದುರ್ಯೋಧನನಿಂದ ಕಿತ್ತುಕೊಂಡು ಪಾಂಡವರಿಗೆ ನೀಡಿರುವನು – 'ನಯತೀತಿ ನುಃ'. ಒಂದು ಕಡೆ ಇರುವ ಆಸ್ತಿಯನ್ನು ಮತ್ತೊಂದು ಕಡೆಗೆ ಕೊಡುವವನೇ ಭಾನು. ವಾಮನ ಹಾಗೆಯೇ ಮಾಡಿದ. ಬಲಿಚಕ್ರವರ್ತಿಯಲ್ಲಿದ್ದ ಭೂಮಿಯನ್ನು ದೇವತೆಗಳಿಗೆ ಕೊಟ್ಟ. ಆದ್ದರಿಂದ ಅವನೂ ಭಾನು. ರಾಮ ರಾವಣನ ಭೂಮಿಯನ್ನು ವಿಭೀಷಣನಿಗೆ ಕೊಟ್ಟ. ಆದ್ದರಿಂದ ರಾಮನೂ ಭಾನು. ಕೃಷ್ಣ ಜರಾಸಂಧನ ಭೂಮಿಯನ್ನು ಅವನ ಮಗನಿಗೂ ಕಂಸನ ಭೂಮಿಯನ್ನು ಅವನ ಅಪ್ಪನಿಗೂ ಕೊಟ್ಟ. ಆದುದರಿಂದ ಕೃಷ್ಣ

ಭಾನು.

ಯಾವ ಅವತಾರದಲ್ಲೂ ತಾನು ಇಟ್ಟುಕೊಳ್ಳುವುದೆಂದು ಇಲ್ಲವೇ ಇಲ್ಲ. ಒಬ್ಬನಿಂದ ಮತ್ತೊಬ್ಬನಿಗೆ ನೀಡುವುದು.

ನಮಗೆ ಈ ಮನುಷ್ಯಶರೀರ ಎಂಬ ಭೂಮಿಯನ್ನು ಕೊಟ್ಟಿರುವ ಅವನು ಇದನ್ನು ಚೆನ್ನಾಗಿ ಉಪಯೋಗಿಸಿಕೊಂಡಿಲ್ಲ ಎಂದರೆ ಇನ್ನಾರಿಗೋ ಇದನ್ನು ಕೊಟ್ಟು, ಬೇರೆ ಯಾವುದೋ ಪಶುಗಳ ಶರೀರಭೂಮಿಯನ್ನು ನಮಗೆ ಕೊಡುವನು. ಹಾಗಾಗದಂತೆ ಎಚ್ಚರವಹಿಸಬೇಕು.

ಆದುದರಿಂದ 'ಅಮೃತಾಂಶೂದ್ಭವ' ಎಂಬ ನಾಮದಿಂದ ಎನಗೆ ನಾಶವಾಗದ ಕೀರ್ತಿಯನ್ನು ಕೊಡು ಎಂದು ಪ್ರಾರ್ಥಿಸಿದರೆ, 'ಭಾನು' ಎಂಬ ನಾಮದಿಂದ ಎನಗೆ ಒಳ್ಳೆಯ ನೀರಾವರಿಯ ಭೂಮಿಯನ್ನು ಅಂದರೆ ಹತ್ತು ಇಂದ್ರಿಯಗಳಲ್ಲು ಚೆನ್ನಾಗಿ, ಭಗವಂತನ ಬಗ್ಗೆ, ಧರ್ಮದ ಬಗ್ಗೆ ತೊಡಗಬಲ್ಲವುಗಳಾಗಿ ಯಾವ ಶರೀರದಲ್ಲಿ ಇರುವವೋ ಅಂತಹ ಶರೀರಭೂಮಿಯನ್ನು ಕೊಡು ಎಂದು ಪ್ರಾರ್ಥಿಸಬೇಕು.

**೨೮೭. ಶಶಬಿಂದುಃ – ಜೀವರಿಗೆ ಬಿಂದುವಿನ ರೂಪದಲ್ಲಿ ಸುಖವನ್ನು ನೀಡುತ್ತಿರುವ ಅತ್ಯಂತ ಸುಖಸ್ವರೂಪಿಯಾಗಿರುವವನು.**

**ವಿವರಣೆ :** ಮೊಲಕ್ಕೆ 'ಶಶ' ಎಂದು ಹೆಸರಿದೆ. ಆದುದರಿಂದಲೇ ಅಂತಹ ಮೊಲದ ಚಿಹ್ನೆ ಉಳ್ಳ ಚಂದ್ರನನ್ನು 'ಶಶೀ' ಎನ್ನಲಾಗುವುದು. 'ಶಶ ಪ್ಲುತಗತೌ' – ಎಂಬ ಕ್ರಿಯಾಪದದಿಂದ ನಿಷ್ಪನ್ನವಾದ ಶಶಶಬ್ದಕ್ಕೆ ಹಾರುತ್ತ ಹಾರುತ್ತ ಹೋಗುವಂತಹದ್ದೆಂದು ಅರ್ಥ. ಆದರೆ ಇಲ್ಲಿ ಸುಖ ಎಂಬ ಅರ್ಥದಲ್ಲಿ ಶಕಾರವನ್ನು ಬಳಸಲಾಗಿದೆ. ಶಶ ಎಂದರೆ ಸುಖಸುಖ. ರುದ್ರದೇವರನ್ನು ಶಂಕರ ಎಂದು ಕರೆಯುವುದು ಸುಖವನ್ನು ಕೊಡುವವರು ಎಂಬ ಅಭಿಪ್ರಾಯದಿಂದ. ಮನವನ್ನು ಸ್ತಿಮಿತದಲ್ಲಿಟ್ಟು ಸುಖ ಕೊಡುವವರು ರುದ್ರದೇವರು. 'ಮನವ ನರಹರಿಯಲ್ಲಿ ಕೊಡು ಶಂಭೋ, ಕೈಲಾಸವಾಸ ಗೌರೀಶ ಈಶ' ಮನಸ್ಸಿಗೆ ನಿಯಾಮಕರು ರುದ್ರದೇವರು. ಹೀಗೆ ಮಾನಸಿಕ ನೆಮ್ಮದಿ ನೀಡಿ ಸುಖಕ್ಕೆ ಕಾರಣರಾಗಿರುವುದರಿಂದ ರುದ್ರದೇವರಿಗೆ ಶಂಕರ ಎಂದು ಹೆಸರು.

'ಶಶ' - ಎಂದು ಸುಖಬೋಧಕ ಶಕಾರವನ್ನು ಎರಡು ಬಾರಿ ಬಳಸಿ ದೇವರಲ್ಲಿ ಭಾರೀ ಸುಖ ಇದೆ ಎಂದು ಸೂಚಿಸಲಾಗಿದೆ. ವ್ಯವಹಾರದಲ್ಲೂ 'ಸಾಕು ಸಾಕು' 'ಆಯಿತು ಆಯಿತು' ಎಂದೆಲ್ಲ ಒಂದೇ ಶಬ್ದವನ್ನೂ ಎರಡು ಬಾರಿ ಬಳಸಿದರೆ ಆ

ಶಬ್ದಾರ್ಥದಲ್ಲಿ ಆಧಿಕ್ಯ ಸೂಚಿಸಲ್ಪಡುವುದು. ನಮ್ಮ ನಿಮ್ಮ ಸುಖ ದುಃಖಮಿಶ್ರಿತವಾಗಿರುವುದರಿಂದ 'ಶ' ಎನಿಸುವುದೇ ಹೊರತು 'ಶಶ' ಎನಿಸಲಾರದು. ಆದರೆ ದೇವರ ಸುಖ ದುಃಖಮಿಶ್ರಿತವಲ್ಲ ಎಂದು 'ಶಶ' ಎನಿಸಿದೆ. ಉಪನಿಷತ್ತು ದೇವರನ್ನು 'ಜ್ಞಾನಜ್ಞಾನಃ ಸುಖಸುಖಃ......' ಎಂದು ಅವನ ಜ್ಞಾನದಲ್ಲಿ ಅಜ್ಞಾನ, ವಿಪರೀತ ಜ್ಞಾನಗಳ ಸೋಂಕು ಇಲ್ಲದಿರುವುದರಿಂದ 'ಜ್ಞಾನ ಜ್ಞಾನ' ಎಂದೂ, ದುಃಖದ ಸ್ಪರ್ಶ ಇಲ್ಲದ ಸುಖವುಳ್ಳವನಾಗಿರುವುದರಿಂದ ಸುಖಸುಖನೆಂದೂ ಕರೆದಿದೆ. ಅಂತೆಯೇ ಅವನು 'ಶಶ'.

ಹೀಗೆ ಭಗವಂತನ ಸುಖ 'ಸಿಂಧು' ಆದರೆ ನಮ್ಮದು ಬರೇ ಬಿಂದು. ಅವನ ಆನಂದದ ಎದುರು ನಮ್ಮ ಆನಂದ ಬಿಂದು ಎನಿಸಲೂ ಅರ್ಹವಲ್ಲ. ನಮ್ಮ ಸುಖ ಆ ಆನಂದದೆದುರು ನಗಣ್ಯ. ಆದರೂ ಬಿಂದುವಿನಂತೆ ಅತ್ಯಂತ ಅಲ್ಪ ಎಂಬ ಆಶಯದಲ್ಲಷ್ಟೇ 'ಶಶಬಿಂದುಃ' ಎನ್ನಲಾಗಿದೆ.

ಹೀಗೆ ಜೀವರಲ್ಲಿ ಆ ಸುಖದ ಸಿಂಧುವಿನ ಬಿಂದು ಕಾಣಿಸಿಕೊಳ್ಳಬೇಕೆಂದರೂ ಅವನ ಅನುಗ್ರಹವೇ ಕಾರಣ. ಪೂರ್ಣಸುಖಸ್ವರೂಪಿಯಾದ ನೀನು ಎನಗೆ ಸ್ವಲ್ಪವಾದರೂ ಆನಂದವನ್ನು ನೀಡುವವನು – ಶಶಬಿಂದು.

ಶರಪಂಜರದಲ್ಲಿ ಬಿದ್ದುಕೊಂಡಿರುವ ಭೀಷ್ಮರ ಮೈತುಂಬ ಬಾಣಗಳು ಚುಚ್ಚುತ್ತ ಇದ್ದರೂ ಧರ್ಮೋಪದೇಶ ನೀಡಲು ಬೇಕಾದ ಮಾನಸಿಕ ಸ್ತಿಮಿತವನ್ನು ನೀಡಿ, ಮಾನಸಿಕ ಪ್ರಸನ್ನತೆಯನ್ನು ಅನುಗ್ರಹಿಸುತ್ತಿರುವವನು 'ಶಶ' ಎನಿಸಿರುವ ಶ್ರೀಕೃಷ್ಣ ಎಂಬ ಅಭಿಪ್ರಾಯದಲ್ಲಿ ಭೀಷ್ಮರು ಕೃಷ್ಣನನ್ನು 'ಶಶಬಿಂದು' – ಎಂದು ಸ್ತುತಿಸುತ್ತಿರುವರು.

**೨೮೮. ಸುರೇಶ್ವರಃ – ಭಕ್ತರಿಗೆ ಚೆನ್ನಾಗಿ ಕೊಡುವವನು ಹಾಗೂ ಕೊಟ್ಟದ್ದನ್ನು ಅವರವರ ಯೋಗ್ಯತೆಗನುಗುಣವಾಗಿಯೇ ಅನುಭವಿಸುವಂತೆ ತನ್ನ ಹಿಡಿತದಲ್ಲಿಟ್ಟುಕೊಳ್ಳುವ ಸ್ವಾಮಿ.**

**ವಿವರಣೆ :** ಸುರ ಎಂದರೆ ಚೆನ್ನಾಗಿ ಕೊಡುವವನು. ಈಶ್ವರ ಎಂದರೆ ಒಡೆಯ. ಕೊಟ್ಟದ್ದನ್ನು ತನ್ನ ಹಿಡಿತದಲ್ಲಿ ಇಟ್ಟುಕೊಳ್ಳುವ ಸ್ವಾಮಿ. 'ಸುಷ್ಠು ರಾತಿ ಇತಿ ಸುರಃ' – ಚೆನ್ನಾಗಿ ಕೊಡುತ್ತಾನೆ. ಕೊಡುವಾಗ ಭಗವಂತ ಭಾರೀ ಕೊಡುತ್ತಾನೆ. ಆದರೆ, ಅದರ ಅಷ್ಟನ್ನೂ ಉಪಯೋಗಿಸಿಕೊಳ್ಳುವೆನೆಂದರೆ ಅವನು ಅದನ್ನು ಹಿಡಿತದಲ್ಲಿಟ್ಟುಕೊಂಡು ಎಷ್ಟು ಬೇಕೋ ಅಷ್ಟೇ ಕೊಡ್ತಾನೆ.

ಮನೆಯಲ್ಲಿ ಮೂಟೆ ಮೂಟೆ ಅಕ್ಕಿ ಇದೆ. ಆದರೆ ಅಷ್ಟನ್ನೂ ಒಂದೇ ದಿನ

ಉಣ್ಣಲಾಗುವುದಿಲ್ಲ. ಹೊಟ್ಟೆಗೆ ಹಿಡಿಸುವಷ್ಟನ್ನೇ ಉಣ್ಣಬೇಕಷ್ಟೇ. ಅಷ್ಟರಲ್ಲೂ ಒಮ್ಮೆ ಅಜೀರ್ಣರೋಗ ಕೊಟ್ಟು ಸ್ವಲ್ಪವನ್ನೂ ಉಣ್ಣದಂತೆ ತನ್ನ ಹಿಡಿತದಲ್ಲಿಟ್ಟುಕೊಳ್ಳುವನು. ಅಂತಹ ಭಗವಂತನೇ ನಿಜವಾಗಿ 'ಕೊಟ್ಟಾರಿ'. ನಾವು ಯಾರ್‍ಯಾರನ್ನೋ ಕೊಟ್ಟಾರಿ ಎನ್ನುವೆವಷ್ಟೇ. ತುಂಬ ಸಂಗ್ರಹ ಮಾಡಿ ಹಾಕಿಸ್ತಾನೆ. ಆದರೆ ಸ್ವಲ್ಪವನ್ನೇ ಕೊಡುತ್ತಾನೆ. ಒಂದು ದಿನ ತುಂಬ ಜನ ಬರುವಂತೆ ಮಾಡಿ ಅವರೆಲ್ಲರಿಗೆ ಊಟ ಮಾಡುವಂತೆ ಕೊಡಿಸಿದ. ಮತ್ತೊಂದು ದಿನ ಕೆಲವೇ ಜನರು ಬರುವಂತೆ ಮಾಡಿ ಕೊಟ್ಟಾರದಿಂದ ಕೊಡಿಸದೆ ಹೆಚ್ಚು ಜನರು ಉಣ್ಣದಂತೆ ಮಾಡಿದ. ಆದ್ದರಿಂದ ಭಕ್ತರಿಗೆ ಚೆನ್ನಾಗಿ ಕೊಡುವಿ. ಆದರೆ, ನನಗೆ ಇಷ್ಟೆಲ್ಲ ಇದೆ ; ನಾನು ಇದನ್ನೆಲ್ಲ ಅನುಭವಿಸುವೆನು ಎಂದಾಗ ಅದನ್ನು ನಿನ್ನ ಹಿಡಿತದಲ್ಲಿ ಇಟ್ಟುಕೊಂಡು ನಮಗೆ ಸಂಪತ್ತು ತುಂಬ ಇದ್ದರೂ ಕೂಡಾ ಅದನ್ನು ಅನುಭವಿಸುವಾಗ ಅದರ ಒಡೆತನ ನಿನ್ನಲ್ಲಿ ಎಂಬ ಅನುಸಂಧಾನ ಬರುವಂತೆ ಮಾಡುವಿ ಎಂಬುದನ್ನು 'ಸುರೇಶ್ವರ' ಎಂಬಲ್ಲಿಯ ಈಶ್ವರಶಬ್ದದಿಂದ ಭೀಷ್ಮರು ಕೃಷ್ಣನನ್ನು ಸ್ತುತಿಸುವರು.

ಭೀಷ್ಮರಿಗೆ ಅನೇಕ ವ್ಯಕ್ತಿಗಳು 'ತಾವು ಹೆಣ್ಣು ಕೊಡ್ತೇವೆ' ಎಂದು ಮುಂದೆ ಬಂದಿರುವರು. ಆದರೆ ಭಗವಂತ, ಅವರು ಆ ಯಾರನ್ನೂ ಅನುಭವಿಸದಂತೆ ಮಾಡಿಬಿಟ್ಟ.

ಭಕ್ತರಿಗೆ ಚೆನ್ನಾಗಿ ಕೊಟ್ಟು, ಕೊಟ್ಟದ್ದನ್ನು ಅವರು ಅನುಭವಿಸುವಾಗ ಅವರ ಯೋಗ್ಯತೆಗನುಗುಣವಾಗಿ ತನ್ನ ಹಿಡಿತದಲ್ಲಿಟ್ಟುಕೊಳ್ಳುವ ಒಡೆಯನೇ ಸುರೇಶ್ವರ.

**೨೮೯. ಔಷಧಮ್ – ಬೇರೆ ಬೇರೆ ಸಮಸ್ಯೆಗಳ ತಾಪಗಳನ್ನು ಪರಿಹರಿಸಿ ಪ್ರಾಣಧಾರಣೆಗೆ ಕಾರಣನಾಗಿರುವವನು.**

**ವಿವರಣೆ :** ಮದ್ದನ್ನು 'ಔಷಧ' ಎಂದು ಕರೆಯಲಾಗುವುದು. ಯಾಕೆ ? 'ಉಷ ದಾಹೇ' ಎಂಬ ಕ್ರಿಯಾಪದದಿಂದ ದಾಹ, ತಾಪ ಎಂಬ ಅರ್ಥದಲ್ಲಿ ಉಷ ಶಬ್ದವು ರೂಪುಗೊಳ್ಳುವುದು. ಬಂಜರುಭೂಮಿಗೆ 'ಊಷರ' ಎನ್ನುವುದೂ ಅಲ್ಲಿ ದಾಹ ವಿಶೇಷವಾಗಿ ಇರುವುದರಿಂದಲೇ. ಚೆನ್ನಾಗಿ ರೋಗಗಳ ದಾಹವನ್ನು ಹೊಂದಿರುವವರೇ 'ಓಷ'ರು. ಅವರನ್ನೇ 'ಔಷ' ಎಂದು ಕರೆಯಲಾಗುವುದು. ಅಂತಹವರಿಗೆ ರೋಗಕ್ಕೆ ಪರಿಹಾರ ನೀಡಿ, ದಾಹವನ್ನು ಕಮ್ಮಿ ಮಾಡುವ ಮೂಲಕ ಪ್ರಾಣ ಧಾರಣೆ ಮಾಡುವ ಪ್ರಯುಕ್ತ ಮದ್ದು ಔಷಧ ಎನಿಸುವುದು. ಹೀಗೆ ಯಾವುದು ನಮ್ಮ ತಾಪವನ್ನು ಪರಿಹಾರ ಮಾಡಿ, ನಾವು ಪ್ರಾಣಧಾರಣೆ ಮಾಡಲು ಕಾರಣವಾಗುತ್ತೋ ಅದನ್ನು ಲೋಕದಲ್ಲಿ 'ಔಷಧ' ಎನ್ನಲಾಗುವುದು.

ಭೀಷ್ಮರು ಅಂತಾರೆ – ನೀನೇ ಔಷಧ. ತುಂಬ ದೈಹಿಕ ಕಾಯಿಲೆಗಳನ್ನು ಅನುಭವಿಸುತ್ತಿದ್ದೇವೆ, ತುಂಬ ಮಾನಸಿಕ ವ್ಯಥೆಗಳನ್ನು ಅನುಭವಿಸುತ್ತಿದ್ದೇವೆ. ಇವುಗಳಿಗೆಲ್ಲ ಮೂರು ಮಾತ್ರೆಗಳನ್ನು ಕೊಡುತ್ತೇನೆಂದು ವೇದವ್ಯಾಸರು ಹೇಳಿದರು– **'ಅಚ್ಯುತಾನಂತಗೋವಿಂದನಾಮೋಚ್ಚಾರಣಭೇಷಜಾತ್। ನಶ್ಯಂತಿ ಸಕಲಾಃ ರೋಗಾಃ ಸತ್ಯಂಸತ್ಯಂ ವದಾಮ್ಯಹಮ್'**

ಅಚ್ಯುತ ಅನಂತ ಗೋವಿಂದ ಎಂಬ ಭಗವಂತನ ನಾಮಕೀರ್ತನೆಯೇ ಆ ಮೂರು ಮಾತ್ರೆಗಳು. ಅವುಗಳನ್ನು ಯಾವಾಗಲೂ ಸೇವಿಸುತ್ತಿರಬೇಕು. ಎಷ್ಟು ಸಂಖ್ಯೆಯಲ್ಲಿ ಬೇಕಾದರೂ ನುಂಗುತ್ತಿರಬಹುದು. ಯಾವ ರೋಗವೂ ಬರಲಾರದು. ಈಗಾಗಲೇ ಯಾವುದಾದರೂ ರೋಗ ಬಂದಿದ್ದರೆ ಅದು ಪರಿಹಾರವಾಗುವುದು. ಮುಂದೆ ಯಾವುದೇ ರೋಗ ಬರುವುದೇ ಇಲ್ಲ. ಆ ಹಿನ್ನೆಲೆಯಲ್ಲೇ ಭೀಷ್ಮರು ಅಂತಾರೆ- ಔಷಧಮ್ - ನೀನೇ ಮದ್ದು.

ಸಾಂಸಾರಿಕಸಮಸ್ಯೆಗಳಿಂದ ತುಂಬ ತಾಪಗಳನ್ನು ಅನುಭವಿಸಿದ ನಾವು ಸಾಯೋಣ ಎಂದು ಭಾವಿಸಿದಾಗ ಭಗವಂತನು ನಮಗೆ 'ಸಾಯಬೇಡ ನಿನ್ನ ಸಮಸ್ಯೆಗಳನ್ನೆಲ್ಲ ನಾನು ಪರಿಹಾರ ಮಾಡ್ತೇನೆ' - ಎಂದು ನಮ್ಮ ಜೀವಧಾರಣೆ ಮಾಡ್ತಾನೆ. ಆದ್ದರಿಂದ ಅವನಿಗೆ 'ಔಷಧ' - ಎಂಬ ಹೆಸರು.

ಯಾರಾದರೂ ತಮ್ಮ ಬೇರೆ ಬೇರೆ ಸಮಸ್ಯೆಯನ್ನು ಹೇಳುತ್ತ ನಮ್ಮಲ್ಲಿಗೆ ಬಂದಾಗ ನಾವು ಕೊಡುವ ಔಷಧವೂ ಇದೇ. ಅಚ್ಯುತ ಅನಂತ ಗೋವಿಂದ ಎಂಬ ಮೂರು ಮಾತ್ರೆಗಳನ್ನು ಮತ್ತೆ ಮತ್ತೆ ನುಂಗುತ್ತಿರಿ ಎಂದಷ್ಟೇ. ಆ ಮಾತ್ರೆಗಳಲ್ಲದೆ ನಮ್ಮ ಚೀಲದಲ್ಲಿ ಬೇರೆ ಮಾತ್ರೆಗಳೇ ಇಲ್ಲ.

ಭೀಷ್ಮರು ತಾವು ಜೀವನದಲ್ಲಿ ಅನೇಕ ಸಮಸ್ಯೆಗಳು ಎದುರಾದಾಗ ಅವನ್ನೆಲ್ಲ ಪರಿಹರಿಸಿ, ಅವರ ಪ್ರಾಣಧಾರಣೆಗೆ ಕಾರಣನಾದವನು ಭಗವಂತನೇ. ಇದರ ಅನುಸಂಧಾನ ನಡೆಸುತ್ತ ಭೀಷ್ಮರು – 'ಔಷಧಮ್' ಎಂದು ಸ್ತುತಿಸುತ್ತಿದ್ದಾರೆ. ಸ್ಥೂಲವಾಗಿ ಹೇಳುವುದಾದರೆ 'ಔಷಧಮ್' ಎಂಬುದಕ್ಕೆ 'ತಾಪಪರಿಹಾರಕ' ಎಂಬ ಅರ್ಥ.

**೨೯೦. ಜಗತಃಸೇತುಃ – ಚೇತನಸಮುದಾಯಕ್ಕೆ ಸೇತುವೆಯಂತೆ ಆಸರೆಯಾಗಿರುವವನು.**

**ವಿವರಣೆ :** ಕನ್ನಡದ ಸೇತುವೆಯೇ ಸಂಸ್ಕೃತದಲ್ಲಿ ಸೇತು. ಲೋಕದ ಸೇತುವೆ ಮುಂದೆ

ಹೋಗುವ ನೀರನ್ನು ತಡೆಯುವುದು. ಜೀವ ಹುಟ್ಟುತ್ತಾನೆ ಸಾಯುತ್ತಾನೆ ..... ಹೀಗೆ ಎಷ್ಟೆಷ್ಟೋ ಜನ್ಮ, ಎಷ್ಟೆಷ್ಟೋ ಸಾವುಗಳನ್ನು ಹೊಂದಿದ ಜೀವನವನ್ನು ಸಾಗಿಸ್ತಾ ಇದ್ದಾನೆ. 'ಬಹೂನಾಮೇಮಿ ಪ್ರಥಮಃ ಬಹೂನಾಮೇಮಿ ಮಧ್ಯಮಃ....' ಎಂದು ನಚಿಕೇತ ಹೇಳಿದಂತೆ ಮುಂದೆ ಎಷ್ಟೋ ಜನ ಸಾಯುವವರಿದ್ದಾರೆ. ಅವರಿಗೆಲ್ಲ ನಾನು ಮೊದಲಿಗ. ಈಗಾಗಲೇ ಸತ್ತವರನ್ನೂ, ಮುಂದೆ ಸಾಯುವವರನ್ನೂ ಇಟ್ಟುಕೊಂಡಾಗ ನಾನು ಮಧ್ಯಮ ಎಂದು ಸಾಗುತ್ತ ಇದ್ದರೆ ಇದಕ್ಕೊಂದು ಕೊನೆ ಇಲ್ಲವೇ? ಎಲ್ಲಿ ಕೊನೆಯೋ ಅದೇ ಸೇತುವೆ. ಭಗವಂತನ ಪಾದವೇ ಕೊನೆಯಾದುದರಿಂದ ಅದುವೇ ಸೇತುವೆ.

ಹುಟ್ಟಿದ , ಸತ್ತ, ಹುಟ್ಟಿದ, ಸತ್ತ...... ಕೊನೆಗೊಂದು ದಿನ ಭಗವಂತನ ಸಾಕ್ಷಾತ್ಕಾರ ಪಡೆದ. ಅಂದಿಗೆ ಅವನ ಹುಟ್ಟುಸಾವುಸರಪಳಿ ಕೊನೆಗೊಂಡಿತು. ಆದುದರಿಂದ ಭಗವಂತನ ಸ್ವರೂಪ ಅವನ ಪಾಲಿಗೆ 'ಸೇತುವೆ' ಆಯಿತು.

'ಗಚ್ಛತೀತಿ ಜಗತ್' ಚಲನೆವುಳ್ಳವರನ್ನಷ್ಟೇ ಜಗತ್ ಎಂದು ಕರೆಯುವುದು. ಚೈತನ್ಯ ಇರತಕ್ಕ ವ್ಯಕ್ತಿಗಳಿಗೆ ಭಗವಂತನು ಕೊನೆಯ ಆಶ್ರಯ ಎಂಬ ಅಭಿಪ್ರಾಯದಲ್ಲಿ 'ಜಗತಃಸೇತುಃ' ಎಂದೆನಿಸಿರುವನು. ಕೊನೆಯಿಲ್ಲದ ಹುಟ್ಟುಸಾವುಗಳ ಸರಮಾಲೆಯಲ್ಲಿ ಬಳಲುವ ಪ್ರಸಂಗವನ್ನು ತಪ್ಪಿಸಿ, ಮಧ್ಯದಲ್ಲಿ ಬಂದು ಅವರ ಪಾಲಿಗೆ ಸೇತು ಎನಿಸುವನು. ನೀರು ಹೇಗೆ ಸೇತುವೆಯ ಬುಡದಲ್ಲಿಯೇ ನಿಲ್ಲುವುದೋ ಹಾಗೆ ಭಗವಂತ ಹುಟ್ಟುಸಾವುಗಳಿಗೆ ತಡೆ ಹಾಕಿದಾಗ ಅವನ ಕಾಲಬುಡದಲ್ಲೇ ಜೀವರು ಬಂದು ನಿಲ್ಲುವರು.

ಹುಟ್ಟಿ ಸತ್ತು, ಹುಟ್ಟಿ ಸತ್ತು ಬಳಲುತ್ತಿರುವ ಜಗತ್ತಿಗೆ ಭಗವಂತನೇ ಸೇತುವೆ. ಜಗತ್ತು ಬೇರೆ ಯಾವುದೇ ವ್ಯಕ್ತಿಗಳ ಸಮೀಪಕ್ಕೆ ಹೋಗಲಾರದು.

ಭೀಷ್ಮರು ಚತುರ್ಮುಖನ ಶಾಪಕ್ಕೆ ತುತ್ತಾಗಿ ಎಂಟು ಜನ್ಮಗಳ ಸಾವಿನ ನೋವನ್ನು ಅನುಭವಿಸುತ್ತ, ಅದರಿಂದ ಪಾರಾಗಿ ಶ್ರೀಕೃಷ್ಣನ ಪಾದಾರವಿಂದವನ್ನು ಸೇರಿಕೊಳ್ಳಲು ಹವಣಿಸುತ್ತ, ಅವನನ್ನು 'ಜಗತಃಸೇತುಃ' - ಎಂದು ಉಪಾಸನೆ ನಡೆಸುವರು.

**೨೯೧. ಸತ್ಯಧರ್ಮಪರಾಕ್ರಮಃ – * ಸತ್ಯಗಳಾದ ಧರ್ಮಗಳನ್ನೂ ಪರಾಕ್ರಮವನ್ನೂ ಹೊಂದಿರುವವನು.**

*** ಸತ್ಯಗಳಾದ ಧರ್ಮಗಳುಳ್ಳ, ಅವನಲ್ಲಿ ಆಸಕ್ತರಾದವರೆಡೆಗೆ ಚೆನ್ನಾಗಿ**

**ಹೋಗುವವನು.**

**ವಿವರಣೆ:** ಈ ನಾಮವನ್ನು 'ಸತ್ಯ+ಧರ್ಮ+ಪರ+ಆಕ್ರಮ' ಎಂದು ಬಿಡಿಸಬಹುದು. ಸತ್ಯಧರ್ಮ ಎಂದು ದೇವರ ಹೆಸರು. ಧರ್ಮಗಳೆಂದರೆ ಜ್ಞಾನ, ಆನಂದ, ಬಲ, ವ್ಯಾಪ್ತಿ, ಪ್ರಕಾಶ, ವಾತ್ಸಲ್ಯ ಮುಂತಾದ ಗುಣಗಳು. ಯಾರಲ್ಲಿ ಇರುವ ಈ ಧರ್ಮಗಳೆಲ್ಲ ಸುಳ್ಳು ಎಂದು ಹೇಳುವ ಮತ ಇರುವುದರಿಂದ ಅದನ್ನು ನಿರಾಕರಣೆ ಮಾಡುವುದಕ್ಕಾಗಿಯೇ ಧರ್ಮಗಳೆಲ್ಲ ಸತ್ಯಗಳು ಎಂದು ಒತ್ತಿ ಹೇಳಲಾಗಿದೆ.

ಅವರು ದೊಡ್ಡ ಪಂಡಿತರು. ಆದರೆ ಅವರಲ್ಲಿರುವ ಪಾಂಡಿತ್ಯ ಸುಳ್ಳು - ಎಂದರೆ ಏನರ್ಥ?

ಲೋಕದಲ್ಲಿ ಎಷ್ಟು ವಸ್ತುಗಳಿಲ್ಲ ? ಆ ವಸ್ತುಗಳಲ್ಲೂ ಬೇರೆ ಬೇರೆ ಗುಣಗಳಿರುವವು ತಾನೇ ? ಅವುಗಳೇನೂ ಸುಳ್ಳು ಎಂದೆನಿಸುವವುಗಳಲ್ಲ. ಆದುದರಿಂದಲೇ ಅವನು 'ಸತ್ಯಧರ್ಮಾ.' 'ಕವಿಮಗ್ನಿಮುಪಸ್ತುಹಿ ಸತ್ಯಧರ್ಮಾಣ ಮಧ್ವರೇ' ಎಂದು ಋಗ್ವೇದವೇ ದೇವರನ್ನು ಸತ್ಯಧರ್ಮಾ ಎಂದು ಹೊಗಳುತ್ತಿದೆ. ಸತ್ಯಗಳಾದ, ಪ್ರಾಮಾಣಿಕಗಳಾದ, ಯಥಾರ್ಥಗಳಾದ ಧರ್ಮಗಳುಳ್ಳವನು. ಇಲ್ಲದಿದ್ದದ್ದನ್ನು ಉಂಟು ಎಂದು ತಿಳಿಯುವುದಲ್ಲ. ಇರುವುದನ್ನೇ ಇರುವುದನ್ನಾಗಿ ತಿಳಿದುಕೊಳ್ಳುವುದು.

ಹೀಗೆ 'ಸತ್ಯಧರ್ಮಾ' ಎನಿಸುವ ಭಗವಂತನಲ್ಲೇ ಆಸಕ್ತರಾದವರು - 'ಸತ್ಯಧರ್ಮಪರರು'. ಅದರಲ್ಲೇ ಆಸಕ್ತನಾದವನು ಎಂಬ ಅರ್ಥದಲ್ಲಿ ನಮ್ಮಲ್ಲಿ 'ತತ್ಪರ' ಎಂಬ ಶಬ್ದ ಬಳಕೆಯಲ್ಲಿದೆ ತಾನೇ ? ಅದರಂತೆ ಯಾರು ಜೀವನದಲ್ಲಿ ಭಗವಂತನನ್ನು ಪೂರ್ಣವಾಗಿ ಅಳವಡಿಸಿಕೊಂಡು ಅವನಲ್ಲಿ ಆಸಕ್ತರಾಗಿ 'ಸತ್ಯಧರ್ಮ ಪರ'ರೆನಿಸಿರುವರೋ ಅಂತಹವರ ಬಳಿಗೆ ಚೆನ್ನಾಗಿ ಬರುವವನು 'ಆ + ಕ್ರಮತೇ'- ಸತ್ಯಧರ್ಮಪರಾಕ್ರಮ.

**'ದಾರಾನ್ ಸುತಾನ್ ಪ್ರಿಯಾನ್ ಪ್ರಾಣಾನ್ ಪರಸ್ಮೈ ಸನ್ನಿವೇದಯೇತ್...'** ಎಂದಿರುವಂತೆ ಯಾರು ಎಲ್ಲವನ್ನೂ ಬಿಟ್ಟು ದೇವರಿಗೆ ಒಪ್ಪಿಸುವರೋ ಅವರನ್ನು ಕಾಪಾಡುವ ಕೆಲಸವನ್ನು ದೇವರು ಮಾಡುವನು. ನಮಗೆ ನಮ್ಮ ಪತ್ನಿ, ಪುತ್ರರು, ಬಂಧುಗಳು, ಧನವನ್ನೆಲ್ಲ ನಮ್ಮ ಬಳಿಯಲ್ಲೇ ಇರುವಂತೆ ಕಾಪಾಡಬೇಕೆಂದರೆ ಅವೆಲ್ಲವನ್ನೂ ದೇವರಿಗೆ ಅರ್ಪಿಸಬೇಕು. ಆಗ ಅವನು ಅವೆಲ್ಲ ತನ್ನದೆಂದು ಸಂರಕ್ಷಿಸುವನು. ಇದರಿಂದಾಗಿ ಅವೆಲ್ಲ ನಮ್ಮ ಬಳಿಯೇ ಇದ್ದಂತಾಗುವುದು ತಾನೇ ?

ಆದ್ದರಿಂದ ಭೀಷ್ಮರು ಸ್ತುತಿಸುತ್ತಾರೆ – ಯಾರು 'ಸತ್ಯಧರ್ಮಪರ' ರೋ ಸತ್ಯಧರ್ಮ ಎನಿಸುವ ನಿನ್ನಲ್ಲೇ ಆಸಕ್ತರಾಗಿರುವರೋ ಅವರಲ್ಲಿ 'ಆಕ್ರಮಃ' ಚೆನ್ನಾಗಿ ಬಂದು ನೆಲೆವೂರುತ್ತಿ. ಅವರಿಗೆ ಚೆನ್ನಾಗಿ ದರ್ಶನ ನೀಡುವಿ. ಅವರ ಜೊತೆಗೇ ಯಾವಾಗಲೂ ಇರುವಿ. ಇದೆಲ್ಲ 'ಆಕ್ರಮ' ಶಬ್ದದ ಅರ್ಥದ ವಿಸ್ತಾರ.

ನಮಗೆ ದೇವರು ನಮ್ಮ ಬಳಿಗೆ ಬಂದು ನಮ್ಮ ಜೊತೆಯಲ್ಲೇ ಇರಬೇಕೆಂದು ಬಯಕೆ ಇದೆ ತಾನೇ ? ಅದಕ್ಕೆ ದೇವರು ಅನ್ನುವನು – ನೀನು 'ಮತ್ಪರ'ನಾಗು, ನಾನು 'ತ್ವತ್ಪರ'ನಾಗುವೆನು. ಎನಗೆ ನಿನ್ನನ್ನು ಕೊಡು, ನಿನಗೆ ಎನ್ನನ್ನು ಕೊಡುವೆನು ಎಂಬುದಾಗಿ. ಇದು 'ಸತ್ಯಧರ್ಮಪರಾಕ್ರಮ' ನಾಮದ ಆಂತರ್ಯ. ಸತ್ಯವಾದ ಧರ್ಮ ಹಾಗೂ ಪರಾಕ್ರಮ ಉಳ್ಳವನೆಂಬ ಮತ್ತೊಂದು ಅರ್ಥವೂ ಇದೆ. ಆದರೆ ಧರ್ಮಶಬ್ದದಿಂದಲೇ ಪರಾಕ್ರಮ ರೂಪವಾದ ಧರ್ಮವನ್ನು ಇಟ್ಟುಕೊಳ್ಳಲು ಬರುವ ಪ್ರಯುಕ್ತ ಪ್ರತ್ಯೇಕವಾಗಿ ಪರಾಕ್ರಮ ಶಬ್ದದಿಂದ ಅದರ ಉಲ್ಲೇಖ ಸ್ವಾರಸ್ಯಕರ ಎನಿಸಲಾರದು.

**ಭೂತಭವ್ಯಭವನ್ನಾಥಃ ಪವನಃ ಪಾವನೋऽನಲಃ |**
**ಕಾಮಹಾ ಕಾಮಕೃತ್ ಕಾಂತಃ ಕಾಮಃ ಕಾಮಪ್ರದಃ ಪ್ರಭುಃ ‖ ೩೨ ‖**

**೨೯೨. ಭೂತಭವ್ಯಭವನ್ನಾಥಃ – ಹಿಂದಿನ, ಮುಂದಿನ ಹಾಗೂ ಈಗಿನ ಕಾಲಗಳಿಗೆ ಒಡೆಯನಾಗಿರುವವನು.**

**ವಿವರಣೆ :** ಮೂರು ಕಾಲಗಳನ್ನು ತನ್ನ ಹಿಡಿತದಲ್ಲಿಟ್ಟುಕೊಂಡವನು 'ಭೂತಭವ್ಯಭವನ್ನಾಥಃ'. ಭಗವಂತನು ಕಾಲಾತೀತ. ಅವನಿಗೆ ಕಾಲದ ಸಂಬಂಧ ಇಲ್ಲ. ದೇವರ ವಿಷಯದಲ್ಲಿ ಭೂತಕಾಲ, ವರ್ತಮಾನ ಕಾಲ, ಭವಿಷತ್ಕಾಲ - ಎಂದು ಇಲ್ಲವೇ ಇಲ್ಲ. ನಾವು ನಿರ್ದಿಷ್ಟವಾದ ಯಾವುದೋ ಒಂದು ಕಾಲದಲ್ಲಿ ಮಾತ್ರ ಇರುವುದರಿಂದ ಆ ಕಾಲಕ್ಕಿಂತ ಹಿಂದಿನ ಕಾಲ ಭೂತಕಾಲ ಎಂದೂ, ಮುಂದಿನ ಕಾಲ ಭವಿಷ್ಯತ್ಕಾಲ ಎಂದೂ ಇದೆ. ಆದರೆ ದೇವರು ಎಲ್ಲಾ ಕಾಲದಲ್ಲೂ ಇರುವುದರಿಂದ ಅವನಿಗೆ ಭೂತಕಾಲವಾಗಲೀ, ಭವಿಷ್ಯತ್ಕಾಲವಾಗಲೀ ಇಲ್ಲ ಎಂದು ಅವನ ಪಾಲಿಗೆ ಒಂದೇ ಕಾಲ ಇರುವುದು.

ಆದರೆ ನಮ್ಮ ನಿಮ್ಮ ಜೀವನಕ್ಕೆ ಭೂತ ಅಂದರೆ ಹಿಂದೆ, ಭವ್ಯ ಎಂದರೆ ಮುಂದೆ, ಭವತ್ ಎಂದರೆ ವರ್ತಮಾನ, ಹೀಗೆ ಮೂರು ಕಾಲಗಳಿರುವುದರಿಂದ, ಆ ಕಾಲಗಳಲ್ಲಿ ಭೂತಕಾಲವನ್ನು ವರ್ತಮಾನಕಾಲವನ್ನಾಗಿ ಮಾಡುವ ತಾಕತ್ತೂ

ಅವನಲ್ಲಿದೆ. ಭವಿಷ್ಯತ್ಕಾಲವನ್ನು ಭೂತಕಾಲವನ್ನಾಗಿ ಮಾಡುವ ಸಾಮರ್ಥ್ಯವೂ ಅವನಲ್ಲಿ ಇರುವುದರಿಂದ ಅವನು ಭೂತ ಭವ್ಯಭವನ್ನಾಥ ಎನಿಸುವನು. 'ಕಾಲಾಂತರ್ಗತ ಕಾಲನಿಯಾಮಕ ಕಾಲಾತೀತ ತ್ರಿಕಾಲಜ್ಞ' ಎಂಬುದಾಗಿ, 'ಜೀವಾಂತರ್ಗತ ಜೀವನಿಯಾಮಕ......' ಎಂದೆಲ್ಲ ಹೇಳಿರುವಂತೆ ಕಾಲವನ್ನೂ ಸೇರಿಸಿ ಕಾಲದ ಬಗ್ಗೆ ಅವನಿಗಿರುವ ಒಡೆತನವನ್ನು ನಾಲ್ಕು ಮುಖಗಳಲ್ಲಿ ತಿಳಿಸಲಾಗಿದೆ.

ಭಗವಂತನಿಗೆ ಒಂದು ಹೆಸರು - ಕಾಲಾತೀತ. ಕಾಲಕೃತವಿಕಾರಗಳಿಗೆ ಒಳಗಾಗುವನು ಅಲ್ಲ ಎಂಬುದು ಅದರ ಅರ್ಥ. ನಾವು ಕಾಲದ ಹಿಡಿತದಲ್ಲಿದ್ದೇವೆ. ಆದುದರಿಂದ ಬಾಲ್ಯ ಹೋಗುವುದು, ಯೌವನ ಬರುವುದು. ಯೌವನ ಹೋಗುವುದು, ವಾರ್ಧಕ್ಯ ಬರುವುದು. ಕಾಲದ ಹಿಡಿತದಲ್ಲಿ ನಾವು ಇರುವುದರಿಂದ ಹಾಗೆ ಬಂತು. ಕಾಲದ ಹಿಡಿತದಲ್ಲಿ ಇರುವುದರಿಂದ ನಮ್ಮಲ್ಲಿ ವಿಕಾರಗಳು ಬರುವವು. ಭಗವಂತನಾದರೂ ಕಾಲದ ಹಿಡಿತಕ್ಕೆ ಒಳಪಡದವನಾದುದರಿಂದ ಕಾಲಕೃತವಾದ ಯಾವುದೇ ವಿಕಾರ ಅವನಲ್ಲಿ ಇಲ್ಲ. ಮೂರು ಕಾಲಗಳನ್ನೂ ತನ್ನ ಹಿಡಿತದಲ್ಲಿ ಇಟ್ಟುಕೊಂಡವನು. ಕಾಲಕೃತ ವಿಕಾರಗಳನ್ನು ತಪ್ಪಿಸಿಕೊಳ್ಳಬೇಕೆಂದರೆ ಸಾಂಸಾರಿಕ ಜಂಜಾಟದಿಂದ ದೂರ ಆಗಬೇಕು. ಮೋಕ್ಷಕ್ಕೆ ಹೋಗಬೇಕು. ಮೋಕ್ಷದಲ್ಲಿ ಬೆಳೆಯುವುದೂ ಇಲ್ಲ ; ಅಳಿಯುವುದೂ ಇಲ್ಲ ; ಉಳಿಯುವುದು ಮಾತ್ರ. ಒಂದೇ ರೀತಿಯಾಗಿ ಇರ್ತಾನೆ.

ಭೀಷ್ಮರು ದೇವರನ್ನು 'ಭೂತಭವ್ಯಭವನ್ನಾಥಃ'-ಮೂರುಕಾಲಗಳಿಗೂ ಒಡೆಯನಾಗಿರುವವನೆಂಬುದಾಗಿ ತಮ್ಮ ಮುಕ್ತಿಗೆ ಬೇಕಾದ ಉಪಾಸನೆಯನ್ನು ನಡೆಸುತ್ತಿದ್ದಾರೆ.

**೨೯೩. ಪವನಃ – ನಮ್ಮನ್ನು ರಕ್ಷಿಸುವ ತತ್ತ್ವಾಭಿಮಾನಿ ದೇವತೆಗಳಿಗೂ ಆಸರೆ ಆಗಿರುವವನು.**

**ವಿವರಣೆ :** 'ಪ' ಮತ್ತು 'ವನ' ಸೇರಿ ಪವನ ಎಂದು ರೂಪುಗೊಂಡಿದೆ. ನಮ್ಮನ್ನು ರಕ್ಷಣೆ ಮಾಡುವ ತತ್ತ್ವಾಭಿಮಾನಿ ದೇವತೆಗಳು 'ಪ' - ಸೂರ್ಯ, ಚಂದ್ರ, ವಾಯು, ಅಗ್ನಿ, ಇಂದ್ರ, ಹಾಗೂ ಜಯಂತ - ಇವರು ತಾನೇ ನಮ್ಮ ದೇಹದ ಒಂದೊಂದು ಅವಯವದಲ್ಲಿ ಒಂದೊಂದು ಚಟುವಟಿಕೆಯನ್ನು ಮಾಡುವವರು. ಆದುದರಿಂದ ನಮಗೆ ರಕ್ಷಕರು ತತ್ತ್ವಾಭಿಮಾನಿ ದೇವತೆಗಳು. ಅವರು 'ಪಾಂತಿ ಇತಿ ಪಾಃ'- ರಕ್ಷಣೆ ಮಾಡುವುದರಿಂದ 'ಪ' ಎನಿಸುವರು. ಅವರು ರಕ್ಷಣೆ ಮಾಡಬೇಕೆಂದರೆ ಅವರಿಗೆ

ರಕ್ಷಣೆ ನಿನ್ನಿಂದ ಎಂದು ಭೀಷ್ಮರು ಸ್ತುತಿಸುವರು -'ಪವನ'- ನೀನು ಅವರನ್ನು ಕಾಯುತ್ತಿ. ಅವರು ಎನ್ನನ್ನು ಕಾಯುವರು ಎಂದು ಭೀಷ್ಮರು ಸ್ತುತಿಸುವರು. ಸಮಾಜವನ್ನು ಕಾಯುವವರು ತತ್ತ್ವಾಭಿಮಾನಿ ದೇವತೆಗಳಾದರೆ ಅವರನ್ನು ಕಾಯುವವನು ನೀನು. ಆದುದರಿಂದ 'ಪವನ' ಎನಿಸಿರುವಿ. ಇಲ್ಲಿಯ 'ವನ ಸಂಭಕ್ತೌ'- ಎಂಬ ಕ್ರಿಯಾಪದದಿಂದ ನಿಷ್ಪನ್ನವಾದ ವನಶಬ್ದ ಆಶ್ರಯ ಎಂಬ ಅರ್ಥವನ್ನು ನೀಡುವುದು. ಕಾಡಿನಲ್ಲಿ ಅನೇಕ ಮರಗಳಿದ್ದು ಅವುಗಳಲ್ಲಿ ಒಂದನ್ನೊಂದು ಆಶ್ರಯಿಸಿಕೊಂಡಿರುವುದರಿಂದಲೇ ಕಾಡಿಗೆ ವನ ಎಂಬ ಹೆಸರು ಬಂದದ್ದು. ತತ್ತ್ವಾಭಿಮಾನಿ ದೇವತೆಗಳಿಗೆ ಭಗವಂತನು 'ವನ'- ಎಂದರೆ ಆಶ್ರಯ. ನಮ್ಮನ್ನು ರಕ್ಷಿಸುವ ತತ್ತ್ವಾಭಿಮಾನಿ ದೇವತೆಗಳು 'ಪ' ಎನಿಸಿದ್ದು, ಅವರಿಗೂ ರಕ್ಷಣೆ ನೀಡಿ ಆಶ್ರಯನಾಗಿರುವುದರಿಂದ ಭಗವಂತನು ಪವನ.

ಕೊನೆಯವರೆಗೂ ಕಣ್ಣು, ಕಿವಿ, ಮೂಗು ಮುಂತಾದ ಇಂದ್ರಿಯಗಳನ್ನು ಚೆನ್ನಾಗಿ ಹೊಂದಿರಬೇಕೆಂದರೆ ನಮಗೆ ಇಂದ್ರಿಯಾಭಿಮಾನಿಗಳಾಗಿ ರಕ್ಷಣೆ ನೀಡುತ್ತಿರುವ ದೇವತೆಗಳಿಗೆ ಪ್ರೇರಣೆ ನೀಡಿ, ಅವರ ಮೂಲಕ ರಕ್ಷಣೆ ನೀಡು ಎಂಬುದಾಗಿ ಪವನನಾಮದಿಂದ ಭಗವಂತನ ಉಪಾಸನೆ ನಡೆಸಬೇಕು.

**೨೯೪. ಪಾವನಃ – ದೇಹಕ್ಕೆ ಪಾವಿತ್ರ್ಯವನ್ನು ಕೊಡುವವನು.**

**ವಿವರಣೆ:** ಪಾವಿತ್ರ್ಯ ಕೊಡುವವನೆಂಬುದು ಪಾವನ ಶಬ್ದದ ಅರ್ಥ. ತತ್ತ್ವಾಭಿಮಾನಿ ದೇವತೆಗಳು ಈ ಶರೀರದಲ್ಲಿ ಇರುವಂತೆ ಮಾಡಿ ದೇಹಕ್ಕೆ ಪಾವಿತ್ರ್ಯವನ್ನು ನೀಡುವವನು ಭಗವಂತನು. ಈ ಶರೀರದಿಂದ ತತ್ತ್ವಾಭಿಮಾನಿಗಳು ಹೊರಟು ಹೋದರೆಂದರೆ ಆ ಸುದ್ದಿಯನ್ನು ಕೇಳಿದರೇನೇ ಅಪಾವಿತ್ರ್ಯ ! ಅಂತಹ ಶರೀರವನ್ನು ಮುಟ್ಟಿದರೆ ಅದೆಷ್ಟು ಅಪಾವಿತ್ರ್ಯ ಇದ್ದೀತು !

ನಾವು ಆಚಮನದಲ್ಲಿ ಪ್ರತಿನಿತ್ಯ ಬೇರೆ ಬೇರೆ ಇಂದ್ರಿಯವನ್ನು ಸ್ಪರ್ಶಿಸಿಕೊಂಡು ಅಲ್ಲಲ್ಲಿ ಇರುವ ತತ್ತ್ವಾಭಿಮಾನಿಗಳ ಚಿಂತನೆ ನಡೆಸುವುದು ಅವರು ಕೊನೆಯವರೆಗೂ ನಮ್ಮ ಶರೀರದಲ್ಲಿದ್ದುಕೊಂಡು ಆಯಾ ಇಂದ್ರಿಯದ ಸಾಮರ್ಥ್ಯವನ್ನು ನೀಡಬೇಕೆಂಬುದಕ್ಕಾಗಿಯೇ. ಕಣ್ಣಿನಲ್ಲಿ ಸೂರ್ಯ ಇದ್ದಾನೆ, ಕಿವಿಯಲ್ಲಿ ದಿಗಭಿಮಾನಿಗಳು ಇದ್ದಾರೆ. ವಾಗಿಂದ್ರಿಯದಲ್ಲಿ ಅಗ್ನಿ ಇದ್ದಾನೆ ಎಂದು ಇತ್ಯಾದಿ ರೀತಿಯಿಂದ ಅನುಸಂಧಾನ ನಡೆಸುತ್ತಾ ಇದ್ದೆವೆಂದರೆ ಆಯಾ ತತ್ತ್ವಾಭಿಮಾನಿದೇವತೆಗಳು ದೇಹದಲ್ಲಿ ಮುಖ್ಯಪ್ರಾಣ ಇರುವವರೆಗೂ ಇದ್ದೇ ಇರುವರು. ಅದರಿಂದಾಗಿ ದೇಹಕ್ಕೆ ಪಾವಿತ್ರ್ಯ ಬರುವುದು.

ತತ್ತ್ವಾಭಿಮಾನಿ ದೇವತೆಗಳು ರಕ್ಷಕರಾಗಿ ದೇಹದಲ್ಲಿ ಇರುವಂತೆ ಮಾಡುವುದರಿಂದ 'ಪವನ' ಎನಿಸುವ ಭಗವಂತನು, ಅಂತಹ ತತ್ತ್ವಾಭಿಮಾನಿ ದೇವತೆಗಳ ಸನ್ನಿಧಾನದಿಂದಾಗಿ ದೇಹಕ್ಕೆ ಪಾವಿತ್ರ್ಯವನ್ನು ಉಂಟು ಮಾಡುವುದರಿಂದ 'ಪಾವನ' ಎಂದೆನಿಸುವನು.

೨೯೫. ಅನಲಃ – * ನಮ್ಮ ಕಶ್ಮಲಗಳಿಗೆಲ್ಲ ಬೆಂಕಿಯಂತೆ ಇರುವವನು.

* ಮುಖ್ಯಪ್ರಾಣನ ಮೂಲಕ ನಮ್ಮ ಸಾಧನೆಗಳನ್ನು ಸ್ವೀಕರಿಸುವವನು.

ವಿವರಣೆ : ಅನಿಲ ಎಂದರೆ ಗಾಳಿ. ಅನಲ ಎಂದರೆ ಬೆಂಕಿ ಎಂಬ ಒಂದು ಅರ್ಥ ಇದೆ. 'ತೂಲರಾಶಿಯೊಳ್ ಅನಲ ಪೊಕ್ಕಂತೆ.....' - ಎಂದು ದಾಸರು ತಿಳಿಸಿರುವಂತೆ ಹತ್ತಿರಾಶಿಗೆ ಬೆಂಕಿ ಬಿದ್ದಂತೆ ನಮ್ಮಲ್ಲಿರುವ ಕಶ್ಮಲಗಳಿಗೆಲ್ಲ ಬೆಂಕಿ ಎನಿಸಿರುವವನು ಭಗವಂತ. ಈ ಅರ್ಥದಲ್ಲೂ ಭಗವಂತನನ್ನು 'ಅನಲ' ಎನ್ನಬಹುದು. ಇದಕ್ಕಿಂತಲೂ ಉತ್ತಮವಾದ ಮತ್ತೊಂದು ಅರ್ಥ ಇದೆ. ಅನ + ಲ = ಈ ಎರಡು ಶಬ್ದಗಳು ಸೇರಿ ರೂಪುಗೊಂಡ ನಾಮ ಅನಲ ಎಂಬುದಾಗಿ ಇಟ್ಟುಕೊಳ್ಳಬಹುದು. ಅನ ಅಂದರೆ ಮುಖ್ಯಪ್ರಾಣ. ಪ್ರಾಣ ಎಂಬಲ್ಲೂ ಅನ ಶಬ್ದವೇ ಇರುವುದು ತಾನೇ? ಆದಾನ ಎಂಬ ಅರ್ಥದ ಲಾ ಎಂಬ ಕ್ರಿಯಾಪದದಿಂದ ರೂಪುಗೊಂಡ 'ಲ' ಎಂದರೆ ಸ್ವೀಕರಿಸುವವನು ಎಂದರ್ಥ. ಹಾಗಾದರೆ ಮುಖ್ಯಪ್ರಾಣನನ್ನು ಸ್ವೀಕರಿಸುವವನು ಎಂಬುದು ಅನಲನಾಮದ ಅರ್ಥ.

ದೇವರಿಗೆ ಮುಖ್ಯಪ್ರಾಣನದ್ದು ಮಾತ್ರ ಪರಿಚಯ. ನಮ್ಮ ನಿಮ್ಮ ಪರಿಚಯ ಅಷ್ಟಿಷ್ಟೇ. ಆದ್ದರಿಂದಲೇ ನಾವು ದೇವರ ಬಳಿಗೆ ಹೋಗಬೇಕೆಂದರೆ 'ಭಾರತೀರಮಣ ಮುಖ್ಯಪ್ರಾಣಾಂತರ್ಗತ.....' ಎಂದೆವೆಂದರೆ ಯಾರು ಬಂದವನು ? - ಎಂದು ವಿಚಾರಿಸುವನಂತೆ. ಇಲ್ಲದಿದ್ದರೆ ನಮ್ಮನ್ನು ಕೇಳುವುದೇ ಇಲ್ಲ.

ಯಾವುದೇ ಸಾಧನೆ ಮುಖ್ಯಪ್ರಾಣನ ಮೂಲಕವೇ ನಡೆಯಬೇಕಾದದ್ದು ಆದುದರಿಂದ ಬರೇ 'ಕೃಷ್ಣಾರ್ಪಣ' ಅನ್ನದೆ, 'ಮುಖ್ಯಪ್ರಾಣಾಂತರ್ಗತ ಕೃಷ್ಣಾರ್ಪಣ'- ಎಂದೇ ಹೇಳಬೇಕು.

ದಾಸರು ಉಡುಪಿಗೆ ಬಂದವರು 'ಕಂಡೆನಾ ಉಡುಪಿಯಲಿ.....' ಎಂಬ ಹಾಡಿನಲ್ಲಿ ತಿಳಿಸಿರುವಂತೆ ಕನಕನ ಕಿಂಡಿಯಲ್ಲಿ ಮೊದಲು ನೋಡಿದರು. ಆ ಮೇಲೆ ಚಂದ್ರೇಶ್ವರಕ್ಕೆ ಹೋದರು. ಅನಂತೇಶ್ವರಕ್ಕೆ ಹೋದರು. ಮಧ್ವ ಸರೋವರದಲ್ಲಿ ಕಾಲು ತೊಳೆದುಕೊಂಡರು. ಒಳಗೆ ಬಂದರು. ಒಳಗೆ ಮುಖ್ಯಪ್ರಾಣನನ್ನು ಕಂಡರು. ಆ ಹಾಡಿನಲ್ಲಿ ಹಾಗೆಯೇ ಬರುವುದು. ಆ ಮೇಲೆ 'ಉಡಿದಾರ ಉಡಿಘಂಟೆ ನಾ

ಕಂಡೆ.....' ಎಂದು ನವಗ್ರಹ ಕಿಂಡಿಯಲ್ಲಿ ಮಂಡೆ ಇಟ್ಟು ಕೃಷ್ಣನನ್ನು ಕಂಡರು. ಹಾಗಾದರೆ ಮೊದಲು ಮುಖ್ಯಪ್ರಾಣನ ದರ್ಶನ. ಆ ಮೇಲೆ ಕೃಷ್ಣನ ದರ್ಶನ. ಆದ್ದರಿಂದ ಮುಖ್ಯಪ್ರಾಣಾಂತರ್ಗತ ಕೃಷ್ಣ. ಭಗವಂತ ಸ್ವೀಕಾರ ಮಾಡುವುದೇ ಅನಲನ ಮೂಲಕ. 'ಅನ' ಎನಿಸುವ ಮುಖ್ಯಪ್ರಾಣನ ಮೂಲಕ ನಮ್ಮ ಪೂಜೆಯನ್ನು ಸ್ವೀಕರಿಸುವುದರಿಂದಲೇ ಭಗವಂತನಿಗೆ ಅನಲ ಎಂಬ ಹೆಸರು.

ಭೀಷ್ಮರು ಹತ್ತುದಿನಗಳ ಕಾಲ ಹೋರಾಡಿದ್ದಾರೆ. ಅವರ ಆ ಸೇವೆಯನ್ನು ಭೀಮನ ಮೂಲಕ ಸ್ವೀಕಾರ ಮಾಡಬೇಕೆಂದೇ ಶ್ರೀಕೃಷ್ಣ ಒಂಭತ್ತನೆಯ ದಿನದ ರಾತ್ರಿಯಂದು ಪಾಂಡವರನ್ನು ಕರೆದುಕೊಂಡು ಭೀಷ್ಮನಲ್ಲಿಗೆ ಹೋಗಿದ್ದನು. ಸಂಧಾನಕ್ಕೆ ಒಬ್ಬನೇ ಹೋಗಿದ್ದ ಕೃಷ್ಣನಿಗೆ ಭೀಷ್ಮನನ್ನು ಕೊಲ್ಲುವ ಉಪಾಯವನ್ನು ಕೇಳಲೂ ಒಬ್ಬನೇ ಹೋಗಲು ಆಗುತ್ತಿದ್ದಿಲ್ಲವೇ ?  ಬರೇ ಭೀಮನನ್ನು ಕರೆದೊಯ್ದರೆ ಏನೋ ತಪ್ಪು ಕಲ್ಪನೆ ಬಂದೀತೆಂದು ಇತರ ಪಾಂಡವರನ್ನೂ ಭೀಮಸೇನನ ಜೊತೆಗೆ ಕೃಷ್ಣ ಕರೆದೊಯ್ದಿದ್ದ. ಆದರೆ ಕೃಷ್ಣನಿಗೆ  ಭೀಮನನ್ನಷ್ಟೇ ಕರೆದೊಯ್ಯುವ ಉದ್ದೇಶವಿತ್ತು. ಭೀಷ್ಮರ ಒಂಭತ್ತು ದಿನದ ಯುದ್ಧದ ಸೇವೆಯನ್ನು ಭೀಮನ ಮೂಲಕ ಸ್ವೀಕರಿಸಬೇಕೆಂಬುದೇ ಆ ಉದ್ದೇಶ.

ಇದನ್ನು ವಿವೇಚಿಸಿಕೊಳ್ಳುತ್ತ ಭೀಷ್ಮರು ಕೃಷ್ಣನನ್ನು 'ಅನಲ'- ಎಂದು ಸ್ತುತಿಸುವರು.

ಆದುದರಿಂದ ನಾವು ನಿತ್ಯ ನಡೆಸುವ ಕರ್ಮಗಳು ಭಗವಂತನ ಪಾದದ ಮೂಲಕ್ಕೆ ಸೇರಬೇಕೆಂದರೆ 'ಮುಖ್ಯಪ್ರಾಣಾಂತರ್ಗತ ಕೃಷ್ಣ'ನಿಗೆ ಅರ್ಪಿಸೋಣ.

**೨೯೬. ಕಾಮಹಾ – ವಿಷಯ ಪದಾರ್ಥಗಳ ಇಚ್ಛೆ ಬಾರದಂತೆ ಮಾಡುವವನು.**

**ವಿವರಣೆ :** ಯೌವನ ಬಂದಾಗ 'ಅದು ಬೇಕು, ಇದು ಬೇಕು'- ಎಂದು ವಿಷಯ ಪದಾರ್ಥಗಳ ಕುರಿತಾದ ಇಚ್ಛೆ ಏನು ಮೂಡುವುದು ಅದೇ ಕಾಮ ಎನಿಸುವುದು. ಅದನ್ನು ಹಂತಿ – ಅದು ಬಾರದಂತೆ ಮಾಡುವನು. ಅಪೇಕ್ಷೆ ಇದ್ದವರಿಗೆ ಎಂದೇ ಅರ್ಥ. ದುರ್ಯೋಧನನಿಗೆ ಅಂತಹ ಅಪೇಕ್ಷೆ ಇರಲಿಲ್ಲ. ಆದ್ದರಿಂದ ಅವನಿಗೆ ದ್ರೌಪದಿಯ ಕುರಿತಾದ ಕಾಮವನ್ನು ಭಗವಂತನು ಪರಿಹರಿಸಿಲ್ಲ.

ಆದುದರಿಂದ ವಿಷಯಪದಾರ್ಥಗಳ ಕಾಮನೆಯನ್ನು ಭಗವಂತನು ಬಿಡಿಸುವನು. ಭಗವಂತನು ನಮ್ಮ ಸಂಕಲ್ಪ ಏನು ಎಂದು ನೋಡಿ, ಸಂಕಲ್ಪಕ್ಕೆ ಅನುಗುಣವಾಗಿ ಕೆಲಸ ಮಾಡಿಸುವನು.

ಆದ್ದರಿಂದಲೇ ಗೀತೆಯಲ್ಲಿ ಒಂದು ಮಾತು ಬಂದಿದೆ -'ವಿಷಯಾ ವಿನಿವರ್ತಂತೇ ನಿರಾಹಾರಸ್ಯ ದೇಹಿನಃ'- ವಿಷಯ ಪದಾರ್ಥಗಳು ನಮ್ಮಿಂದ ದೂರ ಆಗಬೇಕಾದರೆ ಆಹಾರ ಕಮ್ಮಿ ಮಾಡಬೇಕು. ಒಂದೊಮ್ಮೆ ಯೋಗ್ಯತೆ ಚೆನ್ನಾಗಿಯೇ ಇದ್ದು, ಪ್ರಾರಬ್ಧಕರ್ಮವಶಾತ್ ವಿಷಯಪದಾರ್ಥಗಳನ್ನು ಭೋಗಿಸಬೇಕೆಂಬ ಚಾಪಲ್ಯ ಇದ್ದರೆ ದೇವರು ಅದನ್ನು ಬಿಡಿಸ್ತಾನೆ. ಭೀಷ್ಮರಿಗೆ ಅಂತಹ ಚಾಪಲ್ಯವನ್ನು ಬಿಡಿಸಿದ್ದಾನೆ. ಆದ್ದರಿಂದಲೇ ಭೀಷ್ಮರು ತಮ್ಮ ಅನುಭವದ ಅಧಾರದಲ್ಲೇ 'ಕಾಮಹಾ' ಅಂದರು. ಅವರಿಗೆ ಬೇಕು ಬೇಕಾದಂತೆ ವಿಷಯಪದಾರ್ಥಗಳನ್ನು ಅನುಭವಿಸುವ ಅವಕಾಶ ಇದ್ದರೂ ಅವರು ಅವನ್ನೆಲ್ಲ ಕಾಲಿನಿಂದ ಒದ್ದು ದೂರು ಸರಿಸಿದರೆಂದರೆ 'ಕಾಮಹಾ' ನಾಮಕ ಭಗವಂತನ ಅನುಗ್ರಹವೇ ಅದಕ್ಕೆ ಕಾರಣ.

ಯಾವ ಲೌಕಿಕಪದಾರ್ಥಗಳಿಂದ ನಮಗೆ ಆಧ್ಯಾತ್ಮಿಕ, ಧಾರ್ಮಿಕ ಸಾಧನಾನುಷ್ಠಾನಕ್ಕೆ ಉಪಟಳ ಎಂದು ತೋರುವುದೋ - ಭಗವಂತನನ್ನು 'ಕಾಮಹಾ'- ಎಂದು ಉಪಾಸನೆ ಮಾಡಿದೆವೆಂದರೆ ಆ ಪದಾರ್ಥಗಳು ಬೇಕು ಎಂದೇ ತೋಚದಂತೆ ಭಗವಂತನು ಮಾಡುವನು.

ಬೇಕು ಎಂದು ತೋರಿ, ಆ ಪದಾರ್ಥಗಳು ಸಿಗದಿದ್ದಾಗ ತಾನೇ ಮಾನಸಿಕ ಹಿಂಸೆ ? ಅಂತಹ ಹಿಂಸೆ ಆಗದಿದ್ದಂತೆ, ಬೇಕು ಎಂದು ತೋರದಂತೆಯೇ ಭಗವಂತನು ಅನುಗ್ರಹಿಸುವನು. ಆದುದರಿಂದ ವಿಷಯಪದಾರ್ಥಗಳ ಇಚ್ಛೆಯೇ ಮೂಡದಂತೆ ಮಾಡುವವನು 'ಕಾಮಹಾ'.

**೨೯೭. ಕಾಮಕೃತ್ – ಭಗವಂತನಿಗೆ ಸಂಬಂಧಿಸುವ ಇಚ್ಛೆಯನ್ನು ಉಂಟು ಮಾಡುವವನು.**

**ವಿವರಣೆ:** ಸರಿ, ವಿಷಯಪದಾರ್ಥಗಳ ಇಚ್ಛೆ ತೊಲಗಿತು. ಮುಂದೆ ಏನು ? ಕಾಮಕೃತ್ – ಲೌಕಿಕಕಾಮನೆಯನ್ನು ತೆಗೆದು ಆಧ್ಯಾತ್ಮಿಕ ಕಾಮನೆಯನ್ನು ಕೊಡುವನು. ಲೌಕಿಕಕಾಮನೆ ಇದ್ದರೆ ಆಧ್ಯಾತ್ಮಿಕಕಾಮನೆ ಉಂಟಾಗುವುದಿಲ್ಲ. ಭಗವಂತ ಆ ಕಾಮನೆಯನ್ನು ಕೊಡುವುದಿಲ್ಲ. ಭೀಷ್ಮರಿಗೆ ಭಾರೀ ಆಧ್ಯಾತ್ಮಿಕ ಕಾಮನೆ ಉಂಟಾಗುವುದಕ್ಕೆ ಕಾರಣ - ಲೌಕಿಕ ಕಾಮನೆಯ ಉಚ್ಚಾಟನೆ.

ಭಗವಂತನಿಗೆ ಸಂಬಂಧಿಸುವ ಇಚ್ಛೆಯೇ ಕಾಮ ಎನಿಸಿದ್ದು, ಅಂತಹ ಕಾಮವನ್ನು ಒಳಗಿನಿಂದ ಉಂಟು ಮಾಡುವವನೆಂಬ ಅಭಿಪ್ರಾಯದಲ್ಲಿ 'ಕಾಮಕೃತ್' ಎಂದು ಸ್ತುತನಾಗಿರುವನು.

**೨೯೮. ಕಾಂತಃ – ಲೌಕಿಕ ಸುಖವನ್ನು ಕೊನೆಗೊಳಿಸಿ, ಅಲೌಕಿಕ ಸುಖವನ್ನು ಅನುಗ್ರಹಿಸುವವನು.**

ವಿವರಣೆ : ಲೌಕಿಕ ಕಾಮನೆಗಳನ್ನು ಬಿಡಿಸಿ 'ಕಾಮಹಾ' ಎನಿಸಿದ ಭಗವಂತನನ್ನು ತನ್ನ ಬಗ್ಗೆ ಇಚ್ಛೆಯನ್ನು ಹುಟ್ಟಿಸಿ 'ಕಾಮಕೃತ್' ಆದ. ಭಕ್ತನಲ್ಲಿ ಹೀಗೆ ತನ್ನ ಬಗ್ಗೆ ಇಚ್ಛೆಯನ್ನು ಹುಟ್ಟಿಸಿ, ಕೊನೆಗೊಂದು ದಿನ ಅವನಿಗೆ ತನ್ನ ದರ್ಶನವನ್ನು ನೀಡಿ ಬಳಿಕ ಅವನ ಪಾಲಿಗೆ 'ಕಾಂತ' ಎನಿಸುವನು. ನನ್ನ ದರ್ಶನ ಆಯಿತು ತಾನೇ ? ಹಾಗಾದರೆ ಇನ್ನು ಮೇಲೆ ನನ್ನಲ್ಲಿಗೆ ಬಾ. ಈ ಸಂಸಾರದಲ್ಲಿ ಇರಬೇಡ ಎನ್ನುವನು. ಇದೇ 'ಕಾಂತ' ನಾಮದ ಅಂತರ್ಯ. 'ಕ' ಎಂದರೆ ಲೌಕಿಕ ಸುಖ. ಅದಕ್ಕೆ ಕೊನೆ ಕೊಡುವವನೇ 'ಕಾಂತ.' ನಮಗೆ ಮೋಕ್ಷ ನೀಡುವ ಮೂಲಕ ಈ ಲೌಕಿಕ ಸುಖವನ್ನು ಕೊನೆಗೊಳಿಸುವವನು. ಈ ಸುಖ ಬೇಡ. ಇದು ದುಃಖಮಿಶ್ರಿತ ಅಲ್ಪ ಸುಖ. ನಿನಗೆ ಪೂರ್ಣವಾದ, ದುಃಖಸ್ಪರ್ಶ ಇಲ್ಲದ ಸುಖ ಕೊಡುವೆನೆಂದು ಕರೆದೊಯ್ಯುವನು. 'ಕಾಂತ'- ಲೌಕಿಕ ಸುಖಕ್ಕೆ ಕೊನೆಯನ್ನುಂಟು ಮಾಡುವವನಾಗುವನು. ಸಾಂಸಾರಿಕ ಸುಖವನ್ನು ತಪ್ಪಿಸಿ, ಉತ್ತಮ ಸುಖವನ್ನು ಅನುಗ್ರಹಿಸುವನು.

ಒಳ್ಳೆಯ ಸುಖವನ್ನು ಅನುಗ್ರಹಿಸುವವನಷ್ಟೇ ಕೆಟ್ಟ ಸುಖವನ್ನು ಪರಿಹರಿಸಬಲ್ಲ. ಆದುದರಿಂದ ಕೆಟ್ಟ ಸಾಂಸಾರಿಕ ಸುಖವನ್ನು ನಾಶ ಮಾಡುವನೆಂದರೆ ಅವರ ಪಾಲಿಗೆ ಮೋಕ್ಷದಲ್ಲಿಯ ಒಳ್ಳೆಯ ಸುಖವನ್ನು ನೀಡುವನೆಂದೇ ಅರ್ಥ.

ವಿಷಯಪದಾರ್ಥಗಳ ವಾಸನೆ ಬಿಡಿಸಿದ. ಭಗವಂತನಿಗೆ ಸಂಬಂಧಿಸುವ ವಾಸನೆಯನ್ನು ಉಂಟು ಮಾಡಿದ. ಇದರಿಂದಾಗಿ ದೇವರ ಸಾಕ್ಷಾತ್ಕಾರ ಆಯಿತೆಂದಾಗ ಲೌಕಿಕ ಸುಖಕ್ಕೆ ಇತಿ ಶ್ರೀ ಹಾಡಿದ. ಇದನ್ನೇ 'ಕಾಂತ' ಎಂಬ ನಾಮ ತಿಳಿಸುವುದು.

'ಲಕ್ಷ್ಮೀಕಾಂತ'- ಎಂಬುದಕ್ಕೂ ಲಕ್ಷ್ಮಿಯ ಸುಖಕ್ಕೆ ಕೊನೆಯನ್ನು ತಿಳಿಸಿಕೊಡುವವನು ಎಂದೂ ಅರ್ಥ. ಲಕ್ಷ್ಮಿಯ ಸುಖ ಇಷ್ಟೇ ಎಂದು ತೀರ್ಮಾನ ಮಾಡಿರುವವನು ಎಂಬ ಅಭಿಪ್ರಾಯ.

ದೇವರಲ್ಲಿ ಯಾರೋ ಕೇಳಿದ್ರಂತೆ ನಿನಗೆ ಲಕ್ಷ್ಮಿ ಬೇಕಾ ?
ಅದಕ್ಕೆ ದೇವರು 'ಬೇಡ' ಎಂದನಂತೆ.
ಯಾಕ ?
ನಾನು 'ಲಕ್ಷ್ಮೀಕಾಂತ'- ಲಕ್ಷ್ಮಿಯನ್ನು ಕಟ್ಟಿಕೊಂಡು ಅದರಿಂದ ಎಷ್ಟು ಸುಖ ಎಂದು ಅಳೆದು ನೋಡಿದವನು ಎಂದನಂತೆ.

‘ಶ್ರೀ ತಾರಣಾಯ ನಮಃ’ ‘ಶ್ರೀ ತಾರಾಯ ನಮಃ’
‘ಶ್ರೀ ಉತ್ತಾರಣಾಯ ನಮಃ’



‘ಅಂಬಿಗಾ ನಾ ನಿನ್ನ ನಂಬಿದೆ.....’ ಎಂದಿರುವಂತೆ ಭಕ್ತರನ್ನು ಸಂಸಾರಸಾಗರದಿಂದ ದಾಟಿಸುವ ಭಗವಂತನ ಮಹಿಮೆಯನ್ನು, ಲೀಲೆಯನ್ನು ಗಣೇಶ ಚತುರ್ಥಿಯ ಸಂದರ್ಭದಲ್ಲಿ ಗಣೇಶ ಪ್ರತೀಕವನ್ನು ಜಲದೊಳಗೆ ಬಿಡುವ ದಿನದಂದು ಅಂಬಿಗನ ಅಲಂಕಾರದಲ್ಲಿ ವಿರಾಜಿಸುವ ಉಡುಪಿ ಶ್ರೀ ಕೃಷ್ಣನ ಪ್ರತೀಕದಲ್ಲಿ ವಿ.ಸ. ನಾಮದ ‘ತಾರಣಃ’ ‘ತಾರಃ’ ‘ಉತ್ತಾರಣಃ’ - ಮುಂತಾದ ನಾಮಗಳಿಂದ ಅರ್ಥಾನುಸಂಧಾನ ನಡೆಸಬಹುದಾಗಿದೆ.

‘ಶ್ರೀ ರಾಮಾಯ ನಮಃ’ ‘ಶ್ರೀ ಸುಧನ್ವನೇ ನಮಃ’
‘ಶ್ರೀ ಭೂಶಯಾಯ ನಮಃ’



ಪಲಿಮಾರು ಮಠದ ಶ್ರೀಹೃಷೀಕೇಶತೀರ್ಥರಿಗೆ ಶ್ರೀಮಧ್ವಗುರುಗಳು ಪೂಜಿಸಿ, ಅನುಗ್ರಹಿಸಿದ ಶ್ರೀ ರಾಮಚಂದ್ರನ ಪ್ರತೀಕದಲ್ಲಿ ವಿ.ಸ.ನಾಮದ ಶ್ರೀ ರಾಮಚಂದ್ರನ ಮಹಿಮೆಗಳ, ಲೀಲೆಗಳ ಪ್ರಸ್ತಾವವುಳ್ಳ ‘ರಾಮಃ’ ‘ಸುಧನ್ವಾ’ ‘ಭೂಶಯಃ’ - ಮುಂತಾದ ನಾಮಗಳಿಂದ ಅರ್ಥಾನುಸಂಧಾನ ನಡೆಸಬಹುದಾಗಿದೆ.

ನಮಗೆ ಒಂದು ವಸ್ತುವಿನ ಇತಿಮಿತಿ ಗೊತ್ತಿದ್ದರೆ 'ಅದು ಅಷ್ಟೇ' ಆದುದರಿಂದ ನಮಗೆ ಬೇಡ ಎಂದು ಕಡೆಗಣಿಸುವಂತೆ ದೇವರು ಲಕ್ಷ್ಮಿಯನ್ನು ಯಾಕೆ ಕಡೆಗಣಿಸುವನೆಂದರೆ- ಅವಳಲ್ಲಿ ಸುಖ ಇಷ್ಟೇ ಎಂದು ಅವನಿಗೆ ತಿಳಿದಿದೆ ಅಂತೆ. ಅವಳಲ್ಲಿದ್ದ ಸುಖಕ್ಕೆ 'ಕ' ಕ್ಕೆ 'ಅಂತ' ಕೊನೆ ಉಂಟು. ಲಕ್ಷ್ಮಿಗೆ ಇಷ್ಟೇ ಸುಖ ಎಂದು ಶಾಸ್ತ್ರಕಾರರು ತೀರ್ಮಾನ ಮಾಡಿದ್ದಾರೆ. ಆದರೆ ದೇವರ ಸುಖ ಇತಿಮಿತಿಗೆ ಒಳಪಡದಂತಹದ್ದು. ಆದ್ದರಿಂದ ದೇವರು ಹೇಳಿದ ಲಕ್ಷ್ಮೀದೇವಿಯ ಸುಖವೂ ಒಂದು ಅಂತಕ್ಕೆ ಒಳಪಡುವಂತಹದ್ದಾದುದರಿಂದ ನನಗೆ ಆ ದೃಷ್ಟಿಯಿಂದ ಬೇಡ ಎಂದು.

**೨೯೯. ಕಾಮಃ – ಇತಿ ಮಿತಿಯಿಲ್ಲದ ಸುಖವುಳ್ಳವನು .**

ವಿವರಣೆ : ಲೌಕಿಕ ಸುಖ ಬಿಡಿಸಿದ ನೀನು ಬೇರೆ ಸುಖವನ್ನು ನೀಡುವಿಯೋ ?

ಹೌದು ನೀಡುವೆ.

ನಿನ್ನಲ್ಲಿ ಸುಖ ಇದೆಯೋ ? ಎಷ್ಟಿದೆ ?

ಮಃ ಎಂದರೆ ಮಿತಿ. ಅಮ ಎಂದರೆ ಮಿತಿ ಇಲ್ಲದ್ದು. ಕ ಎಂದರೆ ಸುಖ. ಹಾಗಾದರೆ ಮಿತಿಯಿಲ್ಲದ ಸುಖವುಳ್ಳವನೇ ಕಾಮ.

ಈಗ ನಮಗೆ ಸ್ವಲ್ಪ ಧೈರ್ಯ ಉಂಟಾಗುವುದು ಈ ಲೌಕಿಕ ಸುಖವನ್ನು ಬಿಟ್ಟವ. ಯಾಕೆಂದರೆ ಅವನಲ್ಲಿ ಅಂತಹ ಸುಖ ಬೇಕಾದಷ್ಟು ಇದೆ.

ಕೆಸರಲ್ಲಿ ಮುಳುಗಿದವನು ಪರರ ಬಾಧಿಪ ಕೆಸರ ಬಿಡಿಸುವನೇ ? ಎಂದಂತೆ ಸಂಸಾರ ಜಂಜಾಟದಲ್ಲಿ ಮುಳುಗಿದವರೊಬ್ಬರು ತಮ್ಮ ಜೊತೆಗೆ ಬಂದರೆ ಸಾಂಸಾರಿಕ ಜಂಜಾಟವನ್ನು ಬಿಡಿಸುವೆನೆಂದರೆ ಮೊದಲು ನೀವು ಜಂಜಾಟದಿಂದ ಹೊರಬನ್ನಿ. ಆ ಮೇಲೆ ನಮ್ಮ ಜಂಜಾಟವನ್ನು ಬಿಡಿಸುವಿರಂತೆ ಎಂದು ಆಕ್ಷೇಪಿಸಬಹುದು. ಆದರೆ ದೇವರು ಸಾಂಸಾರಿಕ ಸುಖ ಬಿಟ್ಟು ತನ್ನಲ್ಲಿಗೆ ಬಾ ಎಂದರೆ ನಾವು ಧೈರ್ಯವಾಗಿ ಅವನ ಜೊತೆಯಲ್ಲಿ ಹೋಗಬಹುದು. ಯಾಕೆಂದರೆ ಅವನಲ್ಲಿ ಅಪರಿಮಿತ ಸುಖ ಇರುವುದರಿಂದ ಅಂತಹ ಸುಖವನ್ನು ಅವನು ಕೊಡಬಲ್ಲ.

**೩೦೦. ಕಾಮಪ್ರದಃ – ಅಪರಿಮಿತ ಸುಖವನ್ನು ಕೊಡುವವನು.**

ವಿವರಣೆ : ಹೌದು, ದೇವರು ಇತಿಮಿತಿಯಿಲ್ಲದ ಸುಖವುಳ್ಳವನು. ನಮ್ಮನ್ನು ಸಾಂಸಾರಿಕ ಜಂಜಾಟದಿಂದ ಬಿಡಿಸಿದ. ಆದರೆ ತನ್ನಲ್ಲಿರುವ ಸುಖವನ್ನು ನಮಗೆ ನೀಡಲು ಸಿದ್ಧನಾಗಿರುವನೋ ? ಎಂದರೆ 'ಕಾಮಪ್ರದಃ' ಇತಿಮಿತಿಗೊಳಪಡದ

ಸುಖವನ್ನು ಹೊಂದಿ 'ಕಾಮ' ಎನಿಸಿರುವ ದೇವರು, ಎಲ್ಲ ಸಾಂಸಾರಿಕ ಸುಖವನ್ನೂ ಬಿಟ್ಟು 'ನೀನೇ ಗತಿ' ಎಂದು ಅವನಲ್ಲಿಗೆ ಹೋದರೆ ಅವನು ನಮ್ಮ ಬಗ್ಗೆ 'ಕಾಮಪ್ರದ'ನಾಗುವನು. ಕಾಮ ಎನಿಸುವ ಅಪರಿಮಿತವಾದ ಸುಖವನ್ನು ನಮಗೂ ನೀಡುವನು.

ಮೋಕ್ಷಕ್ಕೆ ಹೋದ ಮೇಲೆ ನಿತ್ಯ ಸುಖವೇ. ದುಃಖ ಎಂಬುದೇ ಇಲ್ಲ. ನಿತ್ಯ ಹಗಲೇ. ರಾತ್ರಿ ಎಂಬುದೇ ಇಲ್ಲ. 'ಕಾಮಃ' ಎನಿಸುವ ಅವನು ಮಾತ್ರ ಕೊನೆಯಿಲ್ಲದ ಸುಖವುಳ್ಳವನಲ್ಲ ; 'ಕಾಮಪ್ರದ' ಎಂದೆನಿಸಿ ನಮಗೂ ಕೊನೆಯಿಲ್ಲದ ಸುಖ ಕೊಡುವನು.

ಲೋಕದ ಲೋಭಿ ಶ್ರೀಮಂತರಂತೆ ಅಲ್ಲ ದೇವರು. ಅವನು ಮಹಾ ಉದಾರಿ.

**೩೦೧. ಪ್ರಭುಃ – ಯಾವುದೇ ಏರುಪೇರಿಗೆ ಒಳಗಾಗದೆ ಚೆನ್ನಾಗಿ ಇರುವವನು.**

**ವಿವರಣೆ :** ದೇವರು ಹೀಗೆ ಸುಖ ಕೊಡುತ್ತ ಹೋದರೆ ಅವನಲ್ಲಿ ಸುಖ ಕಮ್ಮಿ ಆಗುವ ಪ್ರಸಂಗ ಇಲ್ಲವೇ ? ಇಲ್ಲ - 'ಪ್ರಭುಃ'- ಪ್ರಕರ್ಷೇಣ ಭವತಿ - ಒಂದೇ ರೀತಿಯಾಗಿ ಇರುವವನು. ನಾವು ಅವನ ಬಳಿಗೆ ಹೋಗುವ ಮೊದಲು ಎಷ್ಟು ಸುಖ ಇತ್ತೋ ನಾವು ಅವನಲ್ಲಿಗೆ ಹೋಗಿ ಅವನಿಂದ ಅಪರಿಮಿತ ಸುಖ ಪಡೆದುಕೊಂಡ ಮೇಲೂ ಅವನಲ್ಲಿ ಅಷ್ಟೇ ಸುಖ. ಪ್ರಭು ಎನ್ನುವುದಕ್ಕೆ 'ಪ್ರಕರ್ಷೇಣ ಭವತಿ' ಚೆನ್ನಾಗಿ ಇದ್ದಾನೆ ಎಂದರ್ಥ. ಚೆನ್ನಾಗಿ ಇದ್ದಾನೆ ಎಂದು ಯಾವಾಗ ಹೇಳುವುದು ? ಸ್ವಲ್ಪವೂ ಏರುಪೇರು ಇಲ್ಲದೆ ಇದ್ದಾಗ ಚೆನ್ನಾಗಿ ಇದ್ದಾನೆ ಎನ್ನಲಾಗುವುದು. ಎಂತಹ ಪ್ರಸಂಗ ಬಂದರೂ ಯಾವುದೇ ಬಗೆಯ ಏರುಪೇರುಗಳಿಗೆ ಒಳಗಾಗದವನೇ ಪ್ರಭು.

ಅನಂತ ಕಾಲದಿಂದ ಎಷ್ಟೆಷ್ಟೋ ವ್ಯಕ್ತಿಗಳು ಮೋಕ್ಷಕ್ಕೆ ಹೋಗುತ್ತಿದ್ದಾರೆ. ಅವರೆಲ್ಲರಿಗೂ ಭಗವಂತನು ಅನಂತಾನಂದವನ್ನು ನೀಡುತ್ತ ಇದ್ದಾನೆ. ಆದರೂ ಅವನಲ್ಲಿ ಏನೂ ಏರುಪೇರು ಆಗದಿರುವುದರಿಂದ ಅವನು ಪ್ರಭು.

ಲೌಕಿಕವಾಸನೆಯನ್ನು ಬಿಡಿಸ್ತಾನೆ ; ತನ್ನ ವಾಸನೆಯನ್ನು ಹಿಡಿಸ್ತಾನೆ ; ಸಾಂಸಾರಿಕಸುಖವನ್ನು ತ್ಯಜಿಸುವಂತೆ ಮಾಡ್ತಾನೆ. ಮೋಕ್ಷಕ್ಕೆ ಕರೆದೊಯ್ದು ಅಲ್ಲಿ ಅಪರಿಮಿತ ಆನಂದ ನೀಡ್ತಾನೆ. ಆದರೂ ತಾನು ನಿರ್ವಿಕಾರನಾಗಿಯೇ ಇರುತ್ತಾನೆ ಎಂಬುದಾಗಿ 'ಕಾಮಹಾ ಕಾಮಕೃತ್ ಕಾಂತಃ ಕಾಮಃ ಕಾಮಪ್ರದಃ ಪ್ರಭುಃ'- ಎಂಬ ಆರು ನಾಮಗಳು ಭಗವಂತನ ಮೋಕ್ಷಪ್ರದಾನಪ್ರಕ್ರಿಯೆಯ ಮೇಲೆ ಕ್ರಮವಾಗಿ ಬೆಳಕು ಚೆಲ್ಲುವವುಗಳು.

**ಯುಗಾದಿಕೃದ್ ಯುಗಾವರ್ತೋ ನೈಕಮಾಯೋ ಮಹಾಶನಃ |**
**ಅದೃಶ್ಯೋ ವ್ಯಕ್ತರೂಪಶ್ಚ ಸಹಸ್ರಜಿದನಂತಜಿತ್ || ೩೩ ||**

**೩೦೨. ಯುಗಾದಿಕೃತ್ – ಯುಗದ ಪ್ರಾರಂಭವನ್ನು ಮಾಡುವವನು.**

ವಿವರಣೆ : ಪ್ರತಿವರ್ಷ ಯುಗಾದಿ ಬರುವುದು. ಸೌರಮಾನದ ಪ್ರಕಾರ ಮೇಷ ಸಂಕ್ರಮಣದ ಮರುದಿನ ಯುಗಾದಿ ಎನಿಸಿದರೆ, ಚಾಂದ್ರಮಾನದ ಪ್ರಕಾರ ಫಾಲ್ಗುಣ ಮಾಸದ ಅಮಾವಾಸ್ಯೆಯ ಮರುದಿನ ಯುಗಾದಿ ಎನಿಸಿದೆ. ಯುಗದ ಆರಂಭದ ದಿನ ಯುಗಾದಿ - ಅಂತಹ ಯುಗಾದಿಯನ್ನು ನಡೆಸಿದವನು ಭಗವಂತ. ಸದ್ಯ ಯಾವ ಯುಗ ಪ್ರಾರಂಭವಾಯಿತು ? ಕಲಿಯುಗ. **'ಯದಾ ದುರ್ಯೋಧನೋಽಪತತ್ ಸಮಾರಬ್ಧಂ ಕಲಿಯುಗಮ್'** - ಭೀಮನ ಗದೆಯ ಆಘಾತಕ್ಕೊಳಗಾಗಿ ಯಾವಾಗ ದುರ್ಯೋಧನನ ಪ್ರಾಣಪಕ್ಷಿ ಹಾರಿ ಹೋಯಿತೋ ಅಂದಿನಿಂದ ಕಲಿಯುಗ ಪ್ರಾರಂಭವಾಯಿತು. ಕಲಿಸ್ವರೂಪಿ ದುರ್ಯೋಧನ ದೈಹಿಕವಾಗಿ ಕಾಣಿಸಿಕೊಂಡೇ ರಾಜ್ಯಭಾರ ಮಾಡುತ್ತಿದ್ದುದು ಕಲಿಯುಗದಲ್ಲಿ ಅಲ್ಲ, ಮತ್ತೆ ದ್ವಾಪರಯುಗದಲ್ಲಿ. ಕಲಿಯುಗದಲ್ಲಾದರೂ ತಾನು ಕಾಣಿಸಿಕೊಳ್ಳದೆಯೇ ತನ್ನ ಕಾರುಭಾರು ನಡೆಸುತ್ತಿರುತ್ತಾನೆ. ರಾಜಕಾರಣಿಗಳು ಕಲಿಯಿಂದಲೂ ಕಲಿಯಲಿಕ್ಕೆ ಇದೆ. ಕಾಣಿಸಿಕೊಳ್ಳದೆಯೇ ಕಾರ್ಯಗಳನ್ನು ನಡೆಸುತ್ತಿರಬೇಕು - ಎಂದು. - ಈಗ ಕಲಿಯ ಸಾಮ್ರಾಜ್ಯ. ಕಲಿಯ ಕೃತಿಗಳೆಲ್ಲ ಕಾಣಿಸುತ್ತಿದೆ - ಆದರೆ ಕಲಿ ಕಾಣಿಸಿಕೊಳ್ಳುತ್ತಿಲ್ಲ.

ಮಹಾಭಾರತಯುದ್ಧದ ಕೊನೆಯ ದಿನ ಭೀಮನಿಂದ ದುರ್ಯೋಧನ ಹತನಾಗಬೇಕೆಂದು ಕೃಷ್ಣ ಸಂಕಲ್ಪಿಸಿದ್ದರಿಂದ ಅಂದೇ ದುರ್ಯೋಧನ ಬಿದ್ದ, ಕಲಿಯುಗ ಆರಂಭವಾಯಿತು. ಒಂದೊಮ್ಮೆ ಇನ್ನೂ ಕೆಲವು ವರ್ಷಗಳ ಮುಂಚೆಯೇ ಕಲಿಯುಗ ಆರಂಭವಾಗಲಿ ಎಂದು ಕೃಷ್ಣ ಸಂಕಲ್ಪಿಸಿದ್ದರೆ, ಆ ಸಂಕಲ್ಪಕ್ಕನುಗುಣವಾಗಿ ಭೀಮ ಆವಾಗಲೇ ದುರ್ಯೋಧನನನ್ನು ಹೊಡೆದು ಸಾಯಿಸುತ್ತಿದ್ದ. ಜೂಜಾಟದ ಸಂದರ್ಭದಲ್ಲೋ ಅದಕ್ಕಿಂತಲೂ ಅರ್ಜುನನ ಹದಿನಾಲ್ಕು ವರ್ಷ ವಯಸ್ಸಿನ ಅವಧಿಯಲ್ಲೇ - ಮನೆಯಿಂದ ದಬ್ಬುತ್ತೀರಾದರೆ ನಿಮ್ಮನ್ನೆಲ್ಲ ಒಂದೇ ಹಿಡಿತಕ್ಕೆ ಚಚ್ಚುತ್ತೇನೆ ಎಂದು ಭೀಮಸೇನ ಗುಡುಗಿದ್ದ. ಒಂದು ವೇಳೆ ಆಗಲೇ ಭೀಮಸೇನ ದುರ್ಯೋಧನನನ್ನು ಮುಗಿಸಿಬಿಟ್ಟಿದ್ದರೆ, 'ಯದಾ ದುರ್ಯೋಧನೋಽಪತತ್ ಸಮಾರಬ್ಧಂ ಕಲಿಯುಗಮ್'- ಎಂದು ಆಗಲೇ ಕಲಿಯುಗ ಆರಂಭವಾಗುತ್ತಿತ್ತು! ಆದರೆ ಕೃಷ್ಣನ ಸಂಕಲ್ಪ ಅಷ್ಟು ಬೇಗ ಕಲಿಯುಗ ಪ್ರಾರಂಭವಾಗಬಾರದೆಂದು ಇದ್ದದ್ದರಿಂದ ಅದಕ್ಕನುಗುಣವಾಗಿ ಭೀಮಸೇನ ದುರ್ಯೋಧನನನ್ನು ಆಗ

ಕೊಂದಿಲ್ಲ. ಆದುದರಿಂದಲೇ ಕಲಿಯುಗದ ಪ್ರಾರಂಭ ಮುಂದೆ ಹೋಯಿತು.

ಕಲಿಯುಗ ನಮಗೆಲ್ಲ ಅನುಭವಕ್ಕೆ ಗೋಚರಿಸಿರುವುದರಿಂದ ಅಂತಹ ಯುಗದ ಆರಂಭ ಎಂದೆ ಅಷ್ಟೇ. ಹೀಗೆ ಎಲ್ಲಾ ಯುಗಗಳನ್ನೂ ಆರಂಭಿಸಿರುವವನು ಭಗವಂತನೇ. ಬರೇ ಯುಗಗಳಷ್ಟೇ ಅಲ್ಲ ; ದಿನಾದಿಕೃತ್ ಕೂಡಾ ಅವನೇ. ಆರು ಗಂಟೆಗೆ ಸೂರ್ಯೋದಯ ಎಂದು ಪಂಚಾಂಗದಲ್ಲಿ ಪ್ರಕಟಿಸಿದ್ದರೂ ಅಂದು ಐದು ಗಂಟೆಗೆಯೇ ಸೂರ್ಯೋದಯವಾಗುವಂತೆ ಅಥವಾ ಏಳು ಗಂಟೆಗೆ ಸೂರ್ಯೋದಯವಾಗುವಂತೆ ಮಾಡುವ ತಾಕತ್ತು ಭಗವಂತನಿಗಿದೆ. ಆದುದರಿಂದ ಯುಗಾದಿಕೃತ್ - ಎಂದಿರುವಂತೆಯೇ 'ದಿನಾದಿಕೃತ್' 'ಮಾಸಾದಿಕೃತ್' 'ವರ್ಷಾದಿಕೃತ್' ಕೂಡಾ ಅವನೇ ಆಗಿರುವನು. ಹೀಗೆ ಭಗವಂತನ ಕಾಲನಿಯಾಮಕತ್ವವನ್ನು ಈ ನಾಮ ಸಾರುತ್ತಿದೆ. 'ಕಾಲನಿಯಾಮಕ ಕಾಲಪ್ರವರ್ತಕ ಕಾಲಾತೀತ ತ್ರಿಕಾಲಜ್ಞ'- ಎಂದು ದಾಸರು ತಿಳಿಸಿರುವಂತೆ ಭಗವಂತನಿಗೆ ಕಾಲದ ಕುರಿತು ಇರುವ ಪ್ರಭುತ್ವವನ್ನು 'ಯುಗಾದಿಕೃತ್' ನಾಮದಿಂದ ಭೀಷ್ಮರು ಸ್ತುತಿಸಿರುವರು.

ಕೃಷ್ಣ ಭೀಮಸೇನನ ಮೂಲಕ ದುರ್ಯೋಧನನನ್ನು ಸಾಯಿಸಿ ಕಲಿಯುಗವನ್ನು ಪ್ರಾರಂಭಿಸಿರುವನು. ಕೆಟ್ಟ ನಡತೆಗಳಲ್ಲಿ ತೊಡಗಿದ್ದ ವ್ಯಕ್ತಿಯ ಜೀವನದ ಗತಿ ಬದಲಾಗಿ ಒಳ್ಳೆಯ ನಡತೆಗಳಲ್ಲಿ ತೊಡಗಿದನೆಂದರೆ ಅವನ ಯುಗ ಬದಲಾಯಿತು - ಎನ್ನುವೆವು. ಈ ರೀತಿಯಾಗಿ ಜೀವನದ ಯುಗದ ಬದಲಾವಣೆಗೆ ಮುಖ್ಯ ಸಂಕಲ್ಪ ಭಗವಂತನ ಸಂಕಲ್ಪವೇ. ಆದುದರಿಂದ ನಮ್ಮ ಜೀವನದ ಅಥವಾ ನಮ್ಮ ಮಕ್ಕಳ ಜೀವನದ ಕೆಟ್ಟ ಮುಖ ಬದಲಾಗಿ ಒಳ್ಳೆಯ ಯುಗ, ತಿರುವು ಆರಂಭವಾಗುವಂತಾಗಬೇಕೆಂದರೆ ಭಗವಂತನನ್ನು ಯುಗಾದಿಕೃತ್ ಎಂದು ಉಪಾಸನೆ ನಡೆಸೋಣ.

**೩೦೩. ಯುಗಾವರ್ತಃ – * ಯುಗವನ್ನು ಮುಂದುವರಿಸಿಕೊಂಡು ಹೋಗುವವನು.**

*** ಬದುಕಿನ ಕ್ರಮವನ್ನು ಮುಂದಿನ ಜನ್ಮದಲ್ಲೂ ಮುಂದುವರಿಸುವವನು.**

ವಿವರಣೆ : ಯುಗವನ್ನು ಆರಂಭಿಸಿದರೆ ಸಾಲದು ; ಬದಲಾದ ಯುಗವನ್ನು ಅದೇ ರೀತಿಯಾಗಿ ಮುಂದುವರಿಸಿಕೊಂಡು ಹೋಗಬೇಕು. ಇದನ್ನೇ ಸ್ತುತಿಸಲಾಗಿದೆ - **'ಯುಗಾವರ್ತಃ'** - ಯುಗಂ ಆವರ್ತಯತೀತಿ ಯುಗಾವರ್ತಃ' ಬದಲಿಸುವುದು

ಮುಖ್ಯವಲ್ಲ ; ಬದಲಿಸಿದುದನ್ನು ಮುಂದುವರಿಸಿಕೊಂಡು ಹೋಗಬೇಕು. ಈ ತಾಕತ್ತು ಭಗವಂತನಲ್ಲಿ ಮಾತ್ರ.

ಎಷ್ಟೋ ಬಾರಿ ನಾವು ಒಪ್ಪಿಕೊಳ್ಳುವುದುಂಟು. ನಮ್ಮಲ್ಲಿ ಅಥವಾ ನಮ್ಮ ಬಂಧುಗಳಲ್ಲಿ ಬದಲಾವಣೆ ಏನೋ ಆಗಿದೆ. ಅದು ಜೀವನವಿಡೀ ಮುಂದುವರಿಯುವಂತೆ ದೇವರೇ ಮಾಡಬೇಕು. ಹಾಗೆ ಮುಂದುವರಿಸಿಕೊಂಡು ಹೋಗುವ ಸಾಮರ್ಥ್ಯ ನಮ್ಮಲ್ಲಿ ಇಲ್ಲ ಎಂದು.

'ಯುಗಾದಿಕೃತ್' - ಎನಿಸಿ ಯುಗವನ್ನು ಪ್ರಾರಂಭಿಸಿದವನು, ಆ ಯುಗವನ್ನು ಪೂರ್ಣಗೊಳಿಸಿಯೇ ತೀರುವನು. ಬದಲಾಗಿ, ಮಧ್ಯೇ ಮತ್ತೊಂದು ಯುಗವನ್ನು ತೂರಿಸುವುದೆಂದಿಲ್ಲ. ಆದಿ ಮಾಡಿದ ಯುಗವನ್ನು ಪೂರ್ಣಗೊಳಿಸಿ 'ಯುಗಾವರ್ತಃ' ಎನಿಸುವನು. ನಾವಾದರೆ ಎಷ್ಟೋ ಕೆಲಸಗಳನ್ನು ಪ್ರಾರಂಭಿಸಿ ಪೂರ್ಣಗೊಳಿಸಲಾಗದೆ ಹಾಗೆಯೇ ಬಿಟ್ಟುಬಿಡುವುದುಂಟು. ಈ ಹಿನ್ನೆಲೆಯಲ್ಲೇ 'ಆರಂಭಶೂರಾಃ ಖಲು ದಾಕ್ಷಿಣಾತ್ಯಾಃ....' - ಎಂಬ ಮಾತು ಹೊರಟಿರುವುದು. ಹೀಗಾಗದೆ ಪ್ರಾರಂಭಿಸಿದ ಕೆಲಸವನ್ನು ಕೊನೆಗೊಳಿಸುವಂತಾಗಬೇಕೆಂದರೆ ಭಗವಂತನನ್ನು ಯುಗಾವರ್ತಃ ಎಂದು ಉಪಾಸಿಸೋಣ.

ಯುಗ ಎಂದರೆ ಈ ಬದುಕಿನ ಕ್ರಮ, ಪದ್ಧತಿ ಎಂದಿಟ್ಟುಕೊಂಡರೆ ಅದನ್ನು 'ಆವರ್ತಯತಿ' - ಮುಂದಿನ ಜನ್ಮದಲ್ಲೂ ಮುಂದುವರಿಯುವಂತೆ ಮಾಡುವವನು ಎಂದು ಸ್ತುತಿಸಿದಲ್ಲಿ ಭಗವಂತನು ಈ ಜನ್ಮದ 'ಯುಗ'ವನ್ನೇ ಮುಂದಿನ ಜನ್ಮದಲ್ಲೂ ದೊರಕುವಂತೆ ಅನುಗ್ರಹಿಸುವನು.

**೩೦೪. ನೈಕಮಾಯಃ - ಒಂದಲ್ಲದ ಶಕ್ತಿ ಉಳ್ಳವನು.**

**ವಿವರಣೆ :** ಒಬ್ಬ ಒಳ್ಳೆಯವನಿದ್ದರೆ ಅವನ ಯೋಗ್ಯತೆಗನುಗುಣವಾಗಿ ಒಳ್ಳೆಯ ಯುಗವನ್ನು ಆರಂಭಿಸಿ, ಅದನ್ನು ಮುಂದುವರಿಸುತ್ತಿರಬೇಕು ; ಮತ್ತೊಬ್ಬ ಕೆಟ್ಟವನಿದ್ದರೆ ಅವನ ಪಾಲಿಗೆ ಕೆಟ್ಟ ಯುಗವನ್ನು ಆರಂಭಿಸಿ, ಮುಂದುವರಿಸಬೇಕು. ಹೀಗೆ ಒಬ್ಬೊಬ್ಬರಿಗೆ ಒಂದೊಂದು ಯುಗವನ್ನು ಆರಂಭಿಸಿ, ನಡೆಸಲು ಭಗವಂತನಿಗೆ ಸಾಧ್ಯವಿದೆಯೋ ? ಎಂಬ ಸಂದೇಹಕ್ಕೆ 'ನೈಕಮಾಯಃ' - ಎಂಬ ಹೆಸರು ಉತ್ತರಿಸುತ್ತಿದೆ.

ಮಾಯಾ ಅಂದರೆ ಭಗವಂತನ ಶಕ್ತಿ. ಏಕ ಎಂದರೆ ಒಂದು. ನೈಕ ಎಂದರೆ ಒಂದು ಅಲ್ಲ. ಶಾಸ್ತ್ರಕಾರರು ಒಂದು ಅಲ್ಲ ಎಂದಷ್ಟೇ ತಿಳಿಸಿರುವರು. ಒಂದಲ್ಲದಿದ್ದರೆ

ಮತ್ತೆಷ್ಟು ? ನಿನಗೆ ಎಷ್ಟು ಬೇಕೋ ಅಷ್ಟು ಇಟ್ಟುಕೋ. ಎಲ್ಲರೂ ಭಗವಂತನ ಶಕ್ತಿಯನ್ನು ಒಂದೇ ರೀತಿಯಾಗಿ ಉಪಾಸನೆ ಮಾಡುವವರಲ್ಲ. ಅವರವರ ಯೋಗ್ಯತೆಗೆ ಅನುಗುಣವಾಗಿ ಉಪಾಸನೆ ನಡೆಸಬೇಕು. ದೇವರೆಂದರೆ ಶಕ್ತಿಯ ರಾಶಿ. ಅದರಲ್ಲಿ ಯೋಗ್ಯತೆಗೆ ತಕ್ಕಂತೆ ಶಕ್ತಿಗಳನ್ನು ಗ್ರಹಣ ಮಾಡಿ ಉಪಾಸನೆ ನಡೆಸುವಂತಹದ್ದು. ಅದಕ್ಕಾಗಿಯೇ ಭಗವಂತನನ್ನು 'ಅನಂತಮಾಯಃ' ಎನ್ನದೆ ಅದೇ ಅರ್ಥ ಹೊರಡುವಂತೆ ಜೊತೆಗೆ ವ್ಯಕ್ತಿಗಳ ಯೋಗ್ಯತೆಗೆ ಅನುಗುಣವಾಗಿ ಉಪಾಸನೆ ನಡೆಸಲು ಬೇಕಾದ ಅರ್ಥವನ್ನು ಪಡೆಯಬಹುದಾದಂತೆ 'ನೈಕಮಾಯಃ' ಎನ್ನಲಾಗಿದೆ.

**೩೦೫. ಮಹಾಶನಃ – ಬಹಳ ದೊಡ್ಡ ಊಟ ಉಳ್ಳವನು.**

**ವಿವರಣೆ:** ಹೀಗೆ ಭಗವಂತ ಶಕ್ತಿಗಳನ್ನು ತನ್ನ ಯೋಗ್ಯತೆಗನುಗುಣವಾಗಿ ಉಪಾಸನೆ ಮಾಡಿ ಜೀವನದಲ್ಲಿ ಪಕ್ವತೆಗೊಳಿಸುವ ಭಕ್ತರನ್ನು ತನ್ನ ಅಶನಕ್ಕಾಗಿ ಬಳಸಿಕೊಳ್ಳುವನು - 'ಮಹಾಶನಃ' - ಹೇಗೆ ನಾವು ನಮಗೆ ಇಷ್ಟವಾದದ್ದನ್ನೇ ನಮ್ಮ ಅಶನದಲ್ಲಿ ತೆಗೆದುಕೊಳ್ಳುವೆವೋ ಹಾಗೆ ಭಗವಂತನು ಯಾರು ತಮ್ಮ ಜೀವನವನ್ನು ಚೆನ್ನಾಗಿ ನಡೆಸುವರೋ ಅವರನ್ನು ತನ್ನ ಅಶನವಾಗಿ ಸ್ವೀಕರಿಸುವನು. ದುರ್ಯೋಧನ ಮತ್ತು ಯುಧಿಷ್ಠಿರ ಇವರಿಬ್ಬರು ಎದುರಿಗಿದ್ದರೆ ಇವನು ಬೇಡ ಎಂದು ದುರ್ಯೋಧನನನ್ನು ದೂರ ಇಟ್ಟು, ಇವನು ಎನಗಿರಲಿ ಎಂದು ಯುಧಿಷ್ಠಿರನನ್ನು ತನ್ನ ಅಶನವನ್ನಾಗಿ ಸ್ವೀಕರಿಸುವನು.

**೩೦೬. ಅದೃಶ್ಯಃ – ಯಾರಿಗೂ ಪೂರ್ಣವಾಗಿ ಕಾಣಿಸಿಕೊಳ್ಳದ ಸ್ವಭಾವದವನು.**

**ವಿವರಣೆ :** ದೃಶ್ಯ ಎಂದರೆ ಕಾಣಿಸತಕ್ಕದ್ದು. ಅದೃಶ್ಯ ಎಂದರೆ ಕಾಣಿಸತಕ್ಕದ್ದಲ್ಲ. ದೇವರ ಸ್ವಭಾವೇ ಕಾಣಿಸಿಕೊಳ್ಳದಿರುವಂತಹದ್ದು. ಹೊರತು ಅವನಿಗೆ ಕೈಕಾಲುಗಳು ಇಲ್ಲದಿರುವುದರಿಂದ ಕಾಣಿಸುವುದಿಲ್ಲ ಎಂದಲ್ಲ. ಕ್ರಮಪ್ರಕಾರ ದೇವರಿಗೆ ಎಲ್ಲ ಅಂಗಪ್ರತ್ಯಂಗಗಳೂ ಇವೆ. ದೇವರಿಗೆ ಆಕಾರ ಇಲ್ಲ ; ಆದುದರಿಂದ ಅವನು ಕಾಣಿಸುವುದಿಲ್ಲ ಎಂದವ ವಿಕಾರಕ್ಕೊಳಗಾದಾನಷ್ಟೇ.

ಭೀಷ್ಮರು ಕೃಷ್ಣನನ್ನು ಎದುರು ಕುಳ್ಳಿರಿಸಿಕೊಂಡು, ಅವನನ್ನು ನೋಡುತ್ತ ನೀನು ಕಾಣಿಸದವನು ಎಂದು ಸ್ತುತಿಸಿರುವರು. ಅಂದರೆ ನೀನು ನನಗೆ ಎಷ್ಟು ಕಾಣಿಸಿಕೊಂಡಿರುವಿಯೋ, ಅದಕ್ಕಿಂತ ಅನಂತ ಪಾಲು ಕಾಣಿಸಿಕೊಳ್ಳದ ವ್ಯಕ್ತಿತ್ವ ನಿನ್ನದು - ಎಂಬ ಆಶಯ.

ಯಾರ ಎದುರೂ ನಿನ್ನನ್ನು ಪೂರ್ಣವಾಗಿ ತೆರೆದುಕೊಳ್ಳುವ ಸ್ವಭಾವ

ನಿನ್ನದ್ದಲ್ಲ ಎಂಬ ಅಭಿಪ್ರಾಯದಲ್ಲಿ ಭೀಷ್ಮರು ಕೃಷ್ಣನನ್ನು 'ಅದೃಶ್ಯಃ' - ಎಂದು ಸ್ತುತಿಸುವರು.

**೩೦೭. ವ್ಯಕ್ತರೂಪಃ - ಕಾಣಿಸಿಕೊಳ್ಳೋಣ ಎಂದು ತನಗೆ ಅನಿಸಿದಾಗ ಕಾಣಿಸಿಕೊಳ್ಳುವವನು.**

ವಿವರಣೆ: ದೇವರು ಅದೃಶ್ಯ ಎಂದರೆ ಸ್ವಲ್ಪವೂ ಕಾಣಿಸಿಕೊಳ್ಳುವುದಿಲ್ಲವೋ ? ಎಂದರೆ 'ವ್ಯಕ್ತರೂಪಃ' - ಕಾಣಿಸಿಕೊಳ್ಳುವನು. ಕಾಣಿಸಿಕೊಳ್ಳದೇ ಇರುವ ದೇವರ ಉಸಾಬರಿಯೇ ಬೇಡ ಎಂದರೆ - 'ವ್ಯಕ್ತರೂಪಃ' ಕಾಣಿಸಿಕೊಳ್ಳುವವನು 'ಚ' - ಕೂಡಾ.

ಒಬ್ಬರು ಆಚಾರ್ಯರು ತನಗೆ ದೇವರು ಕಂಡಿಲ್ಲ ಎಂದರು. ಯಾಕೆಂದರೆ ಜಗತ್ತು ಕಾಣುತ್ತಿರುವುದರಿಂದ ನನಗೆ ಕಂಡಿಲ್ಲ. ಹಗ್ಗದಲ್ಲಿ ಹಾವು ಕಾಣುತ್ತಿದೆ ಎಂದರೆ ಹಗ್ಗ ಕಾಣುತ್ತಿಲ್ಲ ಎಂದೇ ಅರ್ಥ ತಾನೇ ? ಎಂದು ಅವರು ಅದನ್ನು ಉಪಪಾದಿಸಿರುವ ಕ್ರಮ.

ಮತ್ತೊಬ್ಬ ಆಚಾರ್ಯರು ಅಂದರು - ಅವನು ಕಾಣಿಸುವ ಸ್ವಭಾವದವನೇ ಅಲ್ಲ - ಎಂದು. ಆದ್ದರಿಂದ ಈ ಇಬ್ಬರು ಆಚಾರ್ಯರ ಹಿಂದೆ ಸಾಗಲು ಹಿಂಜರಿಯುವುದು ಸಹಜ. ಯಾಕೆಂದರೆ ಅವರಿಗೇ ಕಾಣಿಸದ ದೇವರನ್ನು ಮತ್ತೊಬ್ಬರಿಗೆ ಅವರು ಹೇಗೆ ತಾನೇ ಕಾಣಿಸಿಯಾರು ?

ಶ್ರೀ ಮಧ್ವಾಚಾರ್ಯರು ಅಂದರು - ಹೌದು ; ನಿನಗೆ ಈಗ ದೇವರು ಕಾಣಿಸುವುದಿಲ್ಲ ; ಆದರೆ ನಾನು ತೋರಿಸುವೆನು. ನಿಮಗೆ ದೇವರು ಕಾಣಿಸಿರುವರೋ? ಹೌದು. ಆದುದರಿಂದಲೇ '..... ನಮೋ ನಾರಾಯಣಾಯ ತೇ' - ನಾರಾಯಣ 'ನಿನಗೆ' ನಮಸ್ಕಾರ ಎಂದು ಸ್ತುತಿಸಿರುವರು. 'ನಿನಗೆ' ಎನ್ನಬೇಕಾದರೆ ಕಾಣುತ್ತಿರಲೇಬೇಕು ತಾನೇ ?

ಭೀಷ್ಮರು ಸ್ತುತಿಸಿದ್ದಾರೆ - ಜುಜುಬಿಗಳ ಎದುರು ದೇವರು ಕಾಣಿಸಿಕೊಳ್ಳುವವನಲ್ಲ 'ಅದೃಶ್ಯಃ' - ಆದರೆ ದೇವರನ್ನು ಕಾಣಬೇಕೆಂದು ತುಂಬ ತವಕ ಇದ್ದವನಿಗೆ ತನ್ನನ್ನು ತೋರಿಸಿಕೊಳ್ಳೋಣ ಎಂದು ಅವನಿಗೆ ಅನಿಸಿದರೆ 'ವ್ಯಕ್ತರೂಪಶ್ಚ' - ಕಾಣಿಸಿಕೊಳ್ಳುವವನೂ ಕೂಡಾ. 'ಯಮೇವೈಷ ವೃಣುತೇ ತೇನ ಲಭ್ಯಃ ......' - ಅಳುತ್ತ ಇರುವ ಮಗುವಿನ ಹತ್ತಿರಕ್ಕೆ ಹೋಗೋಣ ಎಂದು ಅದರ ಅಮ್ಮನಿಗೆ ಅನಿಸಿದರಷ್ಟೇ ಆಕೆ ಅದನ್ನು ಸಮೀಪಿಸುವಂತೆ, ದೇವರಿಗೆ ಈ ಭಕ್ತನೆದುರು ಕಾಣಿಸಿಕೊಳ್ಳೋಣ ಎಂದು ಅನಿಸಿದರಷ್ಟೇ ಅವರೆದುರು ಕಾಣಿಸಿಕೊಳ್ಳುವನು.

ಮೊದಲು ಅದೃಶ್ಯನಾಗಿದ್ದನೆಂದರೆ ಅವನಲ್ಲಿ ಕುತೂಹಲ ಹೆಚ್ಚುವುದು ; ಆ ಬಳಿಕ ಕಾಣಿಸಿಕೊಂಡನೆಂದರೆ ಆ ಕುತೂಹಲ ಭಕ್ತಿಯಾಗಿ ಪರಿಣಮಿಸಿ ಮತ್ತೆ ಅದು ಹೋಗುವುದಿಲ್ಲ. ಅದಕ್ಕಾಗಿ ಭಗವಂತ ಮೊದಲು 'ಅದೃಶ್ಯ' ಎನಿಸಿ, ಮತ್ತೆ ವ್ಯಕ್ತರೂಪನಾಗುವನೆಂದು ಸ್ತುತಿಸಲಾಗಿದೆ.

**೩೦೮. ಸಹಸ್ರಜಿತ್ - ತನ್ನ ಜೊತೆಗೆ ಅನುಸರಿಸಿ ಬರುವ ಶಬ್ದಗಳ ಅರ್ಥಗಳನ್ನು ಪೂರ್ಣವಾಗಿ ಹೊಂದಿರುವವನು.**

**ವಿವರಣೆ :** ಸಹ - ಎಂದರೆ ಒಟ್ಟಿಗೆ. ಸ್ರ - ಎಂದರೆ ಸರಣ ; ಅನುಸರಣ. ಜೊತೆಗೇ ಅನುಸರಿಸುವಂತಹದ್ದು. ಪ್ರತಿಯೊಂದು ಶಬ್ದವೂ ದೇವರ ಜೊತೆಗೆ ಅನುಸರಿಸುವಂತಹದ್ದು. ದೇವರ ಜೊತೆಗೇ ಅನುಸರಿಸುವ ಶಬ್ದ 'ಸ್ವಲ್ಪ ಆ ವ್ಯಕ್ತಿಯ ಜೊತೆಗೂ, ಆ ವಸ್ತುವಿನ ಜೊತೆಗೂ ಹೋಗು' - ಎಂದು ಕಳುಹಿಸಿ ಕೊಟ್ಟರಷ್ಟೇ ಅದು ಇನ್ನೊಬ್ಬ ವ್ಯಕ್ತಿಯ, ವಸ್ತುವಿನ ಜೊತೆಗೂ ಅನುಸರಿಸುವುದಷ್ಟೇ ಮುಖ್ಯವಾಗಿ ದೇವರ ಜೊತೆಗೇ ಅನುಸರಿಸುವುದು. ಇಂದ್ರ ಎಂಬ ಶಬ್ದ ಲಕ್ಷ್ಮೀಪತಿಯಾದ ದೇವರ ಜೊತೆಗೆ ಹೊರಟಿತು. ಯಾಕೆಂದರೆ ಇಂದ್ರ ಎಂಬುದಕ್ಕೆ ಭಾರೀ ಸಂಪತ್ತು ಉಳ್ಳವನೆಂಬ ಅರ್ಥ. ಲಕ್ಷ್ಮೀಪತಿಯಲ್ಲಷ್ಟೇ ಅಷ್ಟು ಸಂಪತ್ತು ಇರುವುದರಿಂದ ಇಂದ್ರ ಶಬ್ದ ಅವನ ಜೊತೆಗೇ ಸಾಗಿತು.

ಲಕ್ಷ್ಮೀಪತಿ ಇಂದ್ರಶಬ್ದವನ್ನು ಶಚೀಪತಿಯ ಸಮೀಪಕ್ಕೂ ಕಳುಹಿಸಿದ. ಆಗಷ್ಟೇ ಅವನಲ್ಲಿಗೆ ಸಾಗಿತು. ಹೀಗೆ ದೇವರು ಯಾವುದಾದರೊಂದು ಶಬ್ದವನ್ನು ಕಳುಹಿಸಿಕೊಟ್ಟರಷ್ಟೇ ಅದು ಇನ್ನೊಬ್ಬರಲ್ಲಿಗೆ ಹೋಗುವುದೇ ಹೊರತು ಸಹಜವಾಗಿ ದೇವರ ಜೊತೆಗೆಯೇ ಸಾಗುವುದು.

'ಸಹಸ್ರನಾಮ'- ಎಂಬಲ್ಲೂ ಸಹಸ್ರ ಶಬ್ದಕ್ಕೆ ಸಾವಿರ ಎಂದು ಒಂದು ಅರ್ಥವಾದರೆ ಮತ್ತೊಂದು ಅರ್ಥ - ಸಹ ಭಗವಂತನ ಜೊತೆಗೇ ಇರುವ ನಾಮಗಳು ಎಂದು.

ಆದುದರಿಂದ ತನ್ನ ಜೊತೆಗೇ ಅನುಸರಿಸಿ ಬರುವ ಶಬ್ದಗಳನ್ನು 'ಜಿತ್'- ಗೆದ್ದವನು, ಅಂದರೆ ಅವುಗಳ ಅರ್ಥಗಳನ್ನು ತನ್ನಲ್ಲಿ ತುಂಬಿಸಿಕೊಂಡವನು.

**೩೦೯. ಅನಂತಜಿತ್ – ದೇಶ, ಕಾಲ, ಗುಣ, ವ್ಯಕ್ತಿ - ಹೀಗೆ ಎಲ್ಲವನ್ನೂ ಗೆದ್ದವನು.**

**ವಿವರಣೆ:** ಜಿತ್ ಎಂದರೆ ಗೆದ್ದವನು. ದೇವರು ಎಲ್ಲವನ್ನೂ ಗೆದ್ದಿದ್ದಾನೆ. ಕಾಲವನ್ನು, ದೇಶವನ್ನು, ಗುಣಗಳನ್ನು, ವ್ಯಕ್ತಿಗಳನ್ನು - ಹೀಗೆ ಎಲ್ಲವನ್ನೂ ಗೆದ್ದಿರುವವನು.

ಕಾಲವನ್ನು, ದೇಶವನ್ನು ಗೆಲ್ಲುವುದೆಂದರೆ ಎಲ್ಲ ಕಾಲದಲ್ಲಿ, ಎಲ್ಲ ದೇಶದಲ್ಲಿ ಇರುವವನು. ಕಾಲ, ದೇಶ ಪ್ರಯುಕ್ತ ವಿಕಾರ ಬಾರದಂತೆ ಮಾಡುವುದೂ ಕಾಲ - ದೇಶಗಳನ್ನು ಗೆಲ್ಲುವುದು. ಗುಣಗಳನ್ನು ಗೆಲ್ಲುವುದೆಂದರೆ ಆ ಗುಣಗಳು ತಮ್ಮಲ್ಲಿ ಬರುವಂತೆ ಮಾಡುವುದು ಎಂದರ್ಥ.

ಹೀಗೆ ಯಾವುದ್ಯಾವುದು ಇದೆಯೋ ಅದೆಲ್ಲವನ್ನೂ ಗೆದ್ದವನಾದುದರಿಂದಲೇ ದೇವರು 'ಅನಂತಜಿತ್'. ಎಲ್ಲವನ್ನೂ ತನ್ನ ಹಿಡಿತದಲ್ಲಿರುವಂತೆ, ತನಗೆ ಸಂಬಂಧಿಸಿರುವಂತೆ ಮಾಡಿರುವುದರಿಂದ ಅವನು 'ಅನಂತಜಿತ್'. ಒಂದೆರಡನ್ನು ಗೆದ್ದವನಲ್ಲ ಎಲ್ಲವನ್ನೂ ಗೆದ್ದವನೆಂಬ ಆಶಯದಲ್ಲಿ ಭೀಷ್ಮರು 'ಅನಂತಜಿತ್' - ಎಂದು ಸ್ತುತಿಸಿರುವರು.

**ಇಷ್ಟೋ ವಿಶಿಷ್ಟಃ ಶಿಷ್ಟೇಷ್ಟಃ ಶಿಖಂಡೀ ನಹುಷೋ ವೃಷಃ |**
**ಕ್ರೋಧಹಾ ಕ್ರೋಧಕೃತ್ ಕರ್ತಾ ವಿಶ್ವಬಾಹುರ್ಮಹೀಧರಃ || ೨೪ ||**

**೩೧೦. ಇಷ್ಟಃ – * ಪ್ರಿಯನಾಗಿರುವವನು**
*** ಇಚ್ಛೆಯನ್ನು ಪೂರೈಸುವವನು.**

ವಿವರಣೆ : ಭಗವಂತನು ಇಷ್ಟ ಅಂದರೆ ಬೇಕಾದವನು. ಇದು ಎಲ್ಲರ ಅನುಭವಕ್ಕೆ ಬಂದಿರುವಂತಹದ್ದು. ಭಗವಂತ ಹೇಗೆ ಇಷ್ಟನಾಗಿರುವನೆಂಬುದು ಗೊತ್ತಿರುವುದಿಲ್ಲ. ಅದನ್ನು ತಿಳಿಸಿಕೊಟ್ಟರೆ - ಹೌದು ಭಗವಂತ ಇಷ್ಟ ಎಂದು ಒಪ್ಪಿಕೊಳ್ಳಲಾಗುವುದು. ಯಾಕೆಂದರೆ ಅವನ ಇಷ್ಟತ್ವವು ನಮ್ಮ ಬದುಕಿನಲ್ಲಿ ಅಷ್ಟೊ ಹಾಸುಹೊಕ್ಕಾಗಿ ಸೇರಿಕೊಂಡಿದೆ.

ನಾವು ಹೆಂಡತಿ ಮಕ್ಕಳನ್ನು ನಮಗೆ ಅತ್ಯಂತ ಇಷ್ಟರಾದವರೆಂದು ಒಪ್ಪಿಕೊಳ್ಳುವೆವು. ಅವರು ಯಾಕೆ ನಮಗೆ ಇಷ್ಟರಾದರು ? ಹಿರಿಯರು ಅಂದರು

**'.......ದಾರಾಪತ್ಯಧನಾದಯಃ**
**ಯತ್‌ಸಂಪರ್ಕಾತ್ ಪ್ರಿಯಾ ಆಸನ್ ತತಃ ಕೋಽನ್ಯಪರಃ ಪ್ರಿಯಃ'**

ಹೆಂಡತಿಯನ್ನು ಮಕ್ಕಳನ್ನು ಪ್ರೀತಿಸ್ತೇವೆ. ಯಾಕೆಂದರೆ ಅವರಲ್ಲಿ ದೇವರಿದ್ದಾನೆ ಎಂಬುದಕ್ಕಾಗಿ. ಇದು ನಮಗೆ ಗೊತ್ತಿಲ್ಲ. ಯಾಕೆ ಹೆಂಡತಿಯನ್ನು, ಮಕ್ಕಳನ್ನು ಪ್ರೀತಿಸುತ್ತಿ ಎಂದರೆ ಅವರು ನನ್ನ ಹೆಂಡತಿ ; ನನ್ನ ಮಕ್ಕಳು. ಆದ್ದರಿಂದ ಅವರನ್ನು ಪ್ರೀತಿಸುತ್ತೇನೆ - ಎಂದಷ್ಟೇ ಉತ್ತರ.

ಹಾಗಾದರೆ ಒಂದು ದಿನ ಆ ಹೆಂಡತಿ ಸತ್ತಳು. ಆಗ ಅವಳ ಶರೀರವನ್ನು

ಹೊರ ಹಾಕಲು ಹೇಳುವನು. ಯಾಕೆ ? ಹೆಂಡತಿಯ ಶರೀರ ಅದೇ ತಾನೇ ? ಆ ಶರೀರವನ್ನೇ ಪ್ರೀತಿಸುತ್ತಿದ್ದದ್ದು ತಾನೇ ? ನಿಜ ; ಆದರೆ ಆ ಶರೀರದಲ್ಲಿ ಈಗ ದೇವರು ಇಲ್ಲ. ದೇವರು ಶರೀರದಿಂದ ಹೊರಟಿದ್ದಾನೆ. ಆದುದರಿಂದ ಆ ಶರೀರವನ್ನು ಹೊರಹಾಕಿ ಎನ್ನಲಾಗುವುದು.

ಹೀಗೆ ಪ್ರತಿಪಾದಿಸಿದಾಗ ದೇವರು ನಮಗೆ ಇಷ್ಟ ಎಂಬುದು ಮನವರಿಕೆಯಾಗುವುದು. ಉಪನಿಷತ್ತೂ ಹೀಗೆಯೇ ಸಾರುತ್ತಿದೆ - **'ಆತ್ಮನಸ್ತು ಕಾಮಾಯ ಪತಿಃ ಪ್ರಿಯಃ ಭವತಿ ಪುತ್ರಃ ಪ್ರಿಯಃ ಭವತಿ, ದಾರಾಃ ಪ್ರಿಯಾಃ ಭವಂತಿ....ಸರ್ವಂ ಪ್ರಿಯಂ ಭವತಿ.....'** ನಮಗೆ ಮನೆಯಲ್ಲಿ, ಸಮಾಜದಲ್ಲಿ ಗಂಡ, ಮಕ್ಕಳು, ಹೆಂಡತಿ, ಅಕ್ಕಪಕ್ಕದ ಮನೆಯವರು ಹೀಗೆ ಅನೇಕಾನೇಕರು ಪ್ರಿಯರಿರುವರು. ಆದರೆ ಅವರು ಯಾಕೆ ನಮಗೆ ಪ್ರಿಯರೆನಿಸಿರುವರೆಂದರೆ **'ಆತ್ಮನಸ್ತು ಕಾಮಾಯ....'** - ದೇವರು ಅಲ್ಲಿ ಇದ್ದಾನೆ ಎಂಬುದಕ್ಕಾಗಿಯಷ್ಟೇ. ಆದುದರಿಂದಲೇ ದೇವರು ಅಲ್ಲಿಂದ ಹೊರಟು ಹೋದನೆಂದರೆ ಹಿಂದೆ ಪ್ರಿಯರೆನಿಸಿದ ವ್ಯಕ್ತಿಗಳನ್ನು ಹೊರಹಾಕಿ ಬಿಡಲಾಗುವುದು.

'ಗೋವಿಂದಾ ನಮೋ ಗೋವಿಂದಾ ನಮೋ.......' ಎಂಬ ಪದ್ಯದಲ್ಲಿ ದಾಸರು ದೇವರ ಸಂಪರ್ಕ ಇರುವವರೆಗಷ್ಟೇ ಒಂದು ವಸ್ತುವನ್ನು ನಾವು ಪ್ರೀತಿಸುವೆವೆಂದು ಸ್ತುತಿಸಿರುವರು.

'ಇಷು ಇಚ್ಛಾಯಾಮ್' - ಎಂಬ ಕ್ರಿಯಾಪದದಿಂದ ರೂಪುಗೊಂಡ 'ಇಷ್ಟ' ನಾಮವು ಇಚ್ಛೆಯನ್ನು ಪೂರೈಸಿದವನು ಎಂಬ ಅರ್ಥವನ್ನೂ ನೀಡಬಲ್ಲದು. ಭಗವಂತನು ನಮ್ಮೆಲ್ಲರ ಇಚ್ಛೆಯನ್ನು ಪೂರೈಸುವವನಾಗುವುದರಿಂದಲೂ ನಮ್ಮೆಲ್ಲರ ಪಾಲಿಗೆ ಇಷ್ಟ ಎನಿಸುವನು.

ಭೀಷ್ಮರಂತೂ ಭಗವಂತನನ್ನು ಈ ಅರ್ಥದಲ್ಲಿ 'ಇಷ್ಟ' ಎಂದು ಉಪಾಸನೆ ಮಾಡದೆ ಖಂಡಿತಾ ಇರಲಾರರು. ಯಾಕೆಂದರೆ ಕೃಷ್ಣ ಮಹಾಭಾರತಯುದ್ಧದಲ್ಲಿ ಆಯುಧ ಹಿಡಿಯುವುದಿಲ್ಲ ಎಂಬ ತನ್ನ ಪ್ರತಿಜ್ಞೆಯನ್ನೂ ದೂರಮಾಡಿ 'ಕೃಷ್ಣನ ಕೈಯಿಂದ ಆಯುಧ ಹಿಡಿಸಿಯೇ ತೀರುವೆನು' ಎಂಬ ಭಕ್ತರಾದ ಭೀಷ್ಮರ ಪ್ರತಿಜ್ಞೆಯನ್ನು ಪೂರೈಸಿ ಅವರ ಇಚ್ಛೆಯನ್ನು ತುಂಬಿಸಿರುವವನು ತಾನೇ ?

ನಾವೂ ದೇವರನ್ನು ಈ ಅರ್ಥದಲ್ಲಿ 'ಇಷ್ಟ' ಎಂದು ಉಪಾಸನೆ ನಡೆಸಿದೆವೆಂದರೆ ಅವನು ನಮ್ಮ ಇಚ್ಛೆಗಳನ್ನು ಪೂರೈಸುವನು.

**೭೧೧. ವಿಶಿಷ್ಟಃ –ಪ್ರಲಯ ಕಾಲದಲ್ಲೂ ನಾಶಕ್ಕೊಳಗಾಗದೆ ಉಳಿದುಕೊಂಡಿರುವವನು.**

**ವಿವರಣೆ :** ಶೇಷ ಎಂದರೆ ಉಳಿದದ್ದು. 'ಬೊಮ್ಮನ ಲಯದಲ್ಲಿ ಇದ್ದವನಿಗೆ ಲಯವುಂಟೆ....' - ಎಂದು ಶ್ರೀ ವಾದಿರಾಜ ಸ್ವಾಮಿಗಳು ಸಾರಿರುವಂತೆ ಬ್ರಹ್ಮಾದಿಗಳೆಲ್ಲರಿಗೂ ನಾಶವಾದರೂ 'ಶಿಷ್ಟ' - ಉಳಿದುಕೊಂಡವನು ಭಗವಂತ. ಪ್ರಲಯದಲ್ಲಿ ಎಲ್ಲರಿಗೂ ನಾಶ ಬಂದರೂ ಯಾರು ವಿಶೇಷವಾಗಿ ಉಳಿದುಕೊಳ್ಳುವನೋ ಅವನು 'ವಿಶಿಷ್ಟ'. ಆದುದರಿಂದ ಸೃಷ್ಟಿಗಿಂತ ಮೊದಲೂ, ಪ್ರಲಯ ಆದ ಮೇಲೂ ಇದ್ದವನೇ 'ವಿಶಿಷ್ಟ'.

ಹೀಗೆ ದೇವರು ಪ್ರಲಯ ಕಾಲದಲ್ಲೂ ನಾಶ ಹೊಂದದೆ ವಿಶಿಷ್ಟನಾಗಿರುವುದರಿಂದಲೇ ನಮಗೆ 'ಇಷ್ಟ'.

**೭೧೨. ಶಿಷ್ಟೇಷ್ಟಃ – ವೇದದಲ್ಲಿ ಹೇಳಿರುವ ನಿಯಮಗಳನ್ನೆಲ್ಲ ಪಾಲಿಸಿ ಶಿಷ್ಟರೆನಿಸಿಕೊಂಡವರಿಗೆ ಇಷ್ಟನಾಗಿರುವವನು.**

**ವಿವರಣೆ:** ಶಿಷ್ಟರೆಂದರೆ ಜ್ಞಾನಿಗಳು. ಅಂತಹ ಜ್ಞಾನಿಗಳಿಗೆ ಇಷ್ಟನಾಗಿರುವುದರಿಂದಲೇ ಭಗವಂತನು 'ಶಿಷ್ಟೇಷ್ಟ'

ವೇದದಲ್ಲಿ ಹೇಳಿರುವ ನಿಯಮಗಳನ್ನೆಲ್ಲ ಪಾಲಿಸುವವರನ್ನು ' ಶಿಷ್ಟ' ರೆಂದು ಕರೆಯಲಾಗುವುದು. ಅಂತಹವರಿಗೆ ಭಗವಂತನು ವಿಶೇಷವಾಗಿ 'ಇಷ್ಟ' ನು.

ಭಗವಂತನು ಎಲ್ಲರಿಗೂ ಇಷ್ಟನೇ. ಪ್ರವಚನಕ್ಕೆ ಸ್ವಲ್ಪ ಹೊತ್ತು ಬಂದು ಮಧ್ಯೇ ಹೋಗುವವರಿಗೂ ಇಷ್ಟನೇ. ಆದರೆ ಪೂರ್ಣವಾಗಿ ಪ್ರವಚನದಲ್ಲಿ ಕುಳಿತವರಿಗೆ ವಿಶೇಷವಾಗಿ ಇಷ್ಟ. ಇದರಂತೆ ಎಲ್ಲರಿಗೂ ಇಷ್ಟನಾದರೂ ಶಿಷ್ಟರಿಗೆ ವಿಶೇಷವಾಗಿ ಇಷ್ಟ.

ಭೀಮಸೇನ ಗಾಂಧಾರಿಯ ಎದುರು ಯಾರನ್ನು ಶಿಷ್ಟರೆಂದು ಕರೆಯಬೇಕು? ಯಾರನ್ನು ಅಶಿಷ್ಟರೆಂದು ಕರೆಯಬೇಕು ? ಎಂದು ಪಟ್ಟಿಯನ್ನೇ ಕೊಡುವನು. ಆ ಪಟ್ಟಿಯ ಪ್ರಕಾರ ನೂರಕ್ಕೆ ನೂರು ಪಾಲು ಶಿಷ್ಟರೆಂದು ಯಾರಿರುವರೋ ಅವರಿಗೆ ಭಗವಂತ ಇಷ್ಟ.

ಹಾಗಾದರೆ ನಾವೂ ಭೀಮಸೇನ ಪ್ರಸ್ತುತ ಪಡಿಸಿದ ಶಿಷ್ಟರ ಪಟ್ಟಿಯಲ್ಲಿ ಸೇರಿಕೊಂಡು ಶಿಷ್ಟರಾಗೋಣ. ಆಗ ಭಗವಂತ ನಮಗೆ ಇಷ್ಟನಾಗುವನು.

**೩೧೩. ಶಿಖಂಡೀ – * ನವಿಲಿನ ಗರಿಯನ್ನು ತಲೆಯಲ್ಲಿ ಹೊಂದಿರುವವನು.**

*** ಜಟೆಯನ್ನು ತಲೆಯಲ್ಲಿ ಹೊಂದಿರುವವನು.**

*** ಯೋಗ್ಯರಿಗೆ ಲೌಕಿಕವಾದ, ಕ್ಷುಲ್ಲಕವಾದ ಸುಖ ದೊರಕದಂತೆ ಮಾಡುವವನು.**

**ವಿವರಣೆ :** ನವಿಲಿನ ಗರಿಯೂ ಶಿಖಂಡ ಎನಿಸುವುದು. ಮಕ್ಕಳಿಗೆ ತಲೆಯ ಮೇಲೆ ಕಟ್ಟಲಾಗುವ ಜಟೆಯೂ ಶಿಖಂಡ ಎನಿಸುವುದು. ಕೃಷ್ಣನಿಗೆ ಬಾಲ್ಯದಲ್ಲಿ ಈ ಎರಡು ಬಗೆಯ ಶಿಖಂಡಗಳೂ ಇದ್ದುದರಿಂದ ಅವನು 'ಶಿಖಂಡೀ' ಎನಿಸುವನು.

'ಮುದ್ದು ಮುಖದವ ಮೂರು ಜಟೆಯಲ್ಲಿ ಇದ್ದ ಉಡುಪಿಯು ಸ್ಥಳದಲ್ಲಿ.....' - ಎಂಬ ಹಾಡಿನಲ್ಲಿ ಉಡುಪಿ ಕೃಷ್ಣನ ಶಿಖಂಡದ ವರ್ಣನೆ ನಡೆದಿದೆ.

'ಶ' ಎಂದರೆ ಲೌಕಿಕ ಸುಖ. ಅಂತಹ ಲೌಕಿಕ ಸುಖದಲ್ಲಿಯೇ ಬಿದ್ದುಕೊಂಡಿರುವವನು 'ಶಿ'. ಆದರೆ ಅಂತಹವನ ಯೋಗ್ಯತೆ ಒಳ್ಳೆಯದಿದ್ದು ಲೌಕಿಕ ಸುಖದಲ್ಲಿ ಬಿದ್ದುಕೊಂಡಿರುವನೆಂದರೆ, ಅವನನ್ನು ಖಂಡಿಸಿ, ಸಾಂಸಾರಿಕ ದುಃಖದುಮ್ಮಾನಗಳಿಗೊಳಪಡಿಸಿ ಅವನು ಆದಷ್ಟು ಬೇಗ ಮೋಕ್ಷದತ್ತ ಹೆಜ್ಜೆ ಹಾಕುವಂತೆ ಮಾಡುವನು. ಆದುದರಿಂದಲೂ ಭಗವಂತ 'ಶಿಖಂಡೀ.'

ಬೀಷ್ಮರು ಇದನ್ನು ತನ್ನ ಜೀವನದಲ್ಲಿಯೇ ಅನುಭವಿಸಿರುವರು. ಭೀಷ್ಮರಿಗೆ ಹೆಂಡತಿ ಸಿಗದಂತೆ, ಯಾವುದೇ ರಾಜ್ಯದ ಅಧಿಕಾರ ಸಿಗದಂತೆ, ಕೊನೆಗೆ ದುರ್ಯೋಧನನ ರಾಜ್ಯದಲ್ಲೂ ಸರಿಯಾದ ಗೌರವ ಸಿಗದಂತೆ ಮಾಡಿರುವವನು ಶ್ರೀಕೃಷ್ಣ. ಹೆಂಡತಿ - ರಾಜ್ಯಾಧಿಕಾರ - ದುರ್ಯೋಧನನ ಆಸ್ಥಾನದಲ್ಲಿ ಗೌರವ ಇವೆಲ್ಲ 'ಶಿ' - ಲೌಕಿಕವಾದ ಕ್ಷುಲ್ಲಕ ಸುಖ. ಅದು ಭೀಷ್ಮರಿಗೆ ಸಿಗದಂತೆ, ದಕ್ಕದಂತೆ ಮಾಡಿ, ಅವರ ಪಾಲಿಗೆ 'ಶಿಖಂಡೀ' ಎನಿಸಿ, ಲೌಕಿಕ ಸುಖದಿಂದ ವಂಚಿತರಾದ ಅವರು ಅಧ್ಯಾತ್ಮ ಸುಖದೆಡೆಗೆ ಸಾಗುವಂತೆ ಮಾಡಿರುವನು.

**೩೧೪. ನಹುಷಃ – ಸಂಸಾರದಲ್ಲಿ ಬಂಧಿಸುವವನು ಹಾಗೂ ಜ್ಞಾನದಾನ ಮಾಡುವವನು**

**ವಿವರಣೆ :** 'ನಹುಷ' - ಎಂದು ಇತಿಹಾಸದಲ್ಲಿ ಒಬ್ಬ ಚಕ್ರವರ್ತಿಯ ಪ್ರಸ್ತಾಪ ಬರುವುದು. ಇಲ್ಲಿ ಆ ನಹುಷನ ಉಲ್ಲೇಖ ಅಲ್ಲ. ಇಲ್ಲಿ ಯೌಗಿಕವಾಗಿ, ಶಬ್ದದ ಅವಯವ ಅವಯವವನ್ನು ಬಿಡಿಸಿದಾಗ ಹೊರಡುವ ಅರ್ಥದಲ್ಲಿ ಈ ನಾಮವನ್ನು ಪಠಿಸಲಾಗಿದೆ. ನಹು - ಬಂಧನಮಾಡುವವನು. ಷ - ದಾನ ಮಾಡುವವನು. ಆದುದರಿಂದ 'ನಹುಷ' ಎಂಬ ಹೆಸರು ಭಗವಂತನಿಗೆ. ನಹ್ಯತಿ - ಬಧ್ನಾತಿ -

ಸಂಸಾರಕ್ಕೆ ನಮ್ಮನ್ನು ತಂದು ಹಾಕಿ ನಮ್ಮನ್ನು ಬಂಧಿಸಿದ. ಆದುದರಿಂದಲೇ ನಹು. ಆಮೇಲೆ ಜೀವಯೋಗ್ಯತೆ ಚೆನ್ನಾಗಿ ಇತ್ತೆಂದರೆ ಷ - ಜ್ಞಾನದಾನ ಮಾಡುತ್ತಾನೆ. 'ಷಣು ದಾನೇ' - ಎಂಬ ಧಾತುವಿನಿಂದ ನಿಷ್ಪನ್ನವಾದ 'ಷ' ಶಬ್ದಕ್ಕೆ ದಾನ ಮಾಡುವವನು ಎಂಬ ಅರ್ಥ ಸಿದ್ಧಿಸುವುದು.

ಸಂಸಾರ ಬಂಧನದಲ್ಲಿ ಯಾಕೆ ಸಿಲುಕಿಸಿದ್ದಾನಪ್ಪ ! - ಎಂದು ಕೊರಗಬಾರದು. ಯಾಕೆಂದರೆ ಸಂಸಾರದಲ್ಲಿ ನಮ್ಮನ್ನು ಬಂಧಿಸಿರುವ ಅವನ ಉದ್ದೇಶ ಜ್ಞಾನದಾನ ಮಾಡಿ ಕ್ರಮೇಣ ಸ್ವರೂಪಸುಖದ ದಾನ ಮಾಡುವಂತಹದ್ದು.

**೩೧೫. ವೃಷಃ – ಭಕ್ತರ ಅಭೀಷ್ಟಗಳನ್ನು ಸುರಿಸುವವನು.**

**ವಿವರಣೆ:** ಹೀಗೆ ಭಗವಂತನನ್ನು 'ನಹುಷ' - ಎಂದು ಉಪಾಸನೆ ನಡೆಸಿದಲ್ಲಿ ಅವನು ನಮ್ಮ ಪಾಲಿಗೆ 'ವೃಷ' ಎನಿಸುವನು.

ವೃಷ ಎಂದರೆ ವರ್ಷತಿ - ನಮ್ಮ ಅಭೀಷ್ಟಗಳ ವರ್ಷಣೆ ಮಾಡುವವನು, ಸುರಿಸುವವನು.

ನಮಗೆ ಭಗವಂತ 'ನಹುಷ' ಆಗಲಿ - ನಮ್ಮನ್ನು ಬಂಧಿಸಿ, ಸುಖದಾನ ಮಾಡುವವನಾಗಲಿ ಬಳಿಕ 'ವೃಷ'ನಾಗಲಿ - ನಮ್ಮ ಅಭೀಷ್ಟಗಳನ್ನು ಸುರಿಸುವವನಾಗಲಿ.

**೩೧೬. ಕ್ರೋಧಹಾ – ಸಾತ್ತ್ವಿಕರ ಸಿಟ್ಟನ್ನು ಅಡಗಿಸುವವನು.**

**ವಿವರಣೆ :** ಕ್ರೋಧಂ ಹಂತಿ - ಸಿಟ್ಟನ್ನು ತೆಗೆಯುವವನು ಎಂದರ್ಥ. ಸಾತ್ತ್ವಿಕರಿಗೆ ಸಿಟ್ಟು ಬಾರದಂತೆ ಮಾಡುವನು - ಆದ್ದರಿಂದ ಸಾತ್ತ್ವಿಕರ ಪಾಲಿಗೆ ದೇವರು- ಕ್ರೋಧಹಾ.

ಸಿಟ್ಟು ಬಂದರೆ ಶರೀರದಲ್ಲಿ ರಕ್ತಸಂಚಾರ ಅಧಿಕವಾಗಿ ಆರೋಗ್ಯ ಕೆಡುತ್ತದೆ. ಅದಕ್ಕಾಗಿಯೇ 'ತಾಳುವಿಕೆಗಿಂತನ್ಯ ತಪವು ಇಲ್ಲ' - ಕ್ರೋಧ ಮಾಡಬಾರದೆಂದು ವಾದಿರಾಜರು ಸಂದೇಶಿಸಿರುವರು.

ಭೀಷ್ಮರು ದುರ್ಯೋಧನನ ಬಳಿಯಲ್ಲೇ ಇದ್ದುಕೊಂಡು ಅವನು ಎಷ್ಟು ಮೂದಲಿಸಿದರೂ ಕ್ರೋಧಕ್ಕೆ ಒಳಗಾಗುತ್ತಿರಲಿಲ್ಲ. ಇದು ಭಂಗವಂತನನ್ನು 'ಕ್ರೋಧಹಾ' ನಾಮದಿಂದ ಉಪಾಸನೆ ಮಾಡಿದ ಫಲ. ಸಾತ್ತ್ವಿಕರಿಗೆ ಸಿಟ್ಟು ಬಾರದಂತೆ ಮಾಡುವವನು. ಅಕಸ್ಮಾತ್ತಾಗಿ ಸಿಟ್ಟು ಬಂದರೂ ಆದಷ್ಟು ಬೇಗ ಅದರ ಪರಿಹಾರ ಆಗುವಂತೆ ಮಾಡುವವನು 'ಕ್ರೋಧಹಾ'

**೩೧೭. ಕ್ರೋಧಕೃತ್ – ಕ್ರೋಧವನ್ನು ಉಂಟು ಮಾಡುವವನು.**

**ವಿವರಣೆ :** ಸ್ವಲ್ಪವೂ ಕ್ರೋಧವೇ ಇಲ್ಲ ಎಂದರೆ ಅಂತಹ ವ್ಯಕ್ತಿಯಿಂದ ಉಪಯೋಗವೇ ಇಲ್ಲ ಎಂದು ಭಾವಿಸುವುದುಂಟು. ಅದಕ್ಕಾಗಿ ದೇಹದಲ್ಲಿ ರಕ್ತಸಂಚಾರ ಅಧಿಕವಾಗುವಂತೆ ಕ್ರೋಧ ಇರಬಾರದು ನಿಜ. ಆದರೆ ಕ್ರೋಧಕ್ಕೊಳಗಾದವನಂತೆ ನಟಿಸುತ್ತಿರಬೇಕು.

ದ್ರೋಣಾಚಾರ್ಯರಿಗೆ ಸಿಟ್ಟೇ ಬರುತ್ತಿರಲಿಲ್ಲ. ಅಂತಹವರಿಗೂ ದ್ರುಪದನ ವಿರುದ್ಧ ಸಿಟ್ಟು ಬಂತು. ಜಿತೇಂದ್ರಿಯರಾಗಿದ್ದ ದ್ರೋಣಾಚಾರ್ಯರಿಗೆ ಹೇಗೆ ಸಿಟ್ಟು ಬಂತು ? ಎಂದರೆ ಆಚಾರ್ಯರು ಹೇಳ್ತಾರೆ - ನನಗೆ ಗೊತ್ತಿಲ್ಲ. ಶ್ರೀಹರಿಯ ಇಚ್ಛಾನುಸಾರವಾಗಿ ಅವರಿಗೆ ಸಿಟ್ಟು ಬಂತು ಎಂದಷ್ಟೇ ಸಮಾಧಾನಿಸಬಹುದು ಎಂದಿರುವರು- **'.........ಇತೀರಿತೇಽಸ್ಯಾಶು ಬಭೂವ ಕೋಪೋ ಜಿತೇಂದ್ರಿಯಸ್ಯಾಪಿ ಮುನೇರ್ಹರೀಚ್ಛಯಾ'**

ಹೀಗೆ ಸಾತ್ವಿಕರಿಗೆ ಸಿಟ್ಟು ಬಂದರೆ ಅದನ್ನು ತಣಿಸುವವನೂ, ಸಿಟ್ಟು ಬಾರದ ಸಾತ್ವಿಕರಿಗೆ ಕೆಲವೊಮ್ಮೆ ಸಿಟ್ಟು ಬರುವಂತೆ ಮಾಡುವವನೂ 'ಕ್ರೋಧಕೃತ್' ಎನಿಸಿರುವ ಭಗವಂತ.

ಬುಸುಗುಟ್ಟಬೇಕು ; ಕಚ್ಚಬಾರದು - ಎನ್ನುವಂತೆ ನಮಗೆ ಸಿಟ್ಟು ಬರಬೇಕಾದ ಸಂದರ್ಭಗಳಲ್ಲಿ ಸಿಟ್ಟು ಬರಬೇಕು ; ಎಲ್ಲಿ ಸಿಟ್ಟು ಬರಬಾರದೋ ಅಲ್ಲಿ ಸಿಟ್ಟು ಬರಬಾರದು.

ಭಗವಂತ ಅರ್ಜುನನ ಬಗ್ಗೆ ಸಿಟ್ಟಿನವನಂತೆ ನಟನೆ ಮಾಡಿ ಭೀಷ್ಮರೆಡೆಗೆ ಓಡುವ ಮೂಲಕ ಅರ್ಜುನ ತೀವ್ರವಾಗಿ ಯುದ್ಧದಲ್ಲಿ ತೊಡಗುವಂತೆ ಮಾಡಿದ. ಇದು ಕೃಷ್ಣನ ಸಿಟ್ಟಿನ ನಟನೆ. ಅದರಂತೆ ಸಿಟ್ಟಿನ ನಟನೆ ಮಾಡಬೇಕಷ್ಟೇ. ನಾಟಕ ಮಾಡಬೇಕಾದರೂ ಅದಕ್ಕೆ ಭಗವಂತನೇ ಸ್ಫೂರ್ತಿ ನೀಡಬೇಕು.

ಜನರಿಗೆ ನಮ್ಮ ಬಗ್ಗೆ ಭಯ, ಪ್ರೀತಿ ಎರಡೂ ಇರಬೇಕೆಂದರೆ ಭಗವಂತನನ್ನು 'ಕ್ರೋಧಹಾ' 'ಕ್ರೋಧಕೃತ್' ಎಂದು ಉಪಾಸನೆ ನಡೆಸೋಣ. ಕ್ರೋಧವನ್ನು ತಣ್ಣಗೆ ಮಾಡಿ ಪ್ರೀತಿ ಉಂಟಾಗುವಂತೆಯೂ, ಕ್ರೋಧವನ್ನು ಉಂಟುಮಾಡಿ ನಮ್ಮ ಬಗ್ಗೆ ಭಯವನ್ನು ಉಂಟಾಗುವಂತೆಯೂ ಮಾಡುವನು.

**೩೧೮. ಕರ್ತಾ – ಪ್ರಲಯ ಕಾಲದಲ್ಲಿ ಎಲ್ಲವನ್ನೂ ಕತ್ತರಿಸಿ ಹಾಕುವವನು.**

**ವಿವರಣೆ :** 'ಕೃತೀ ಛೇದನೇ' - ಎಂಬುದಾಗಿ ಛೇದನಾರ್ಥದ ಕೃತೀ ಎಂಬ

ಧಾತುವಿನಿಂದ ನಿಷ್ಪನ್ನವಾದ ನಾಮ ಕರ್ತಾ. ಕತ್ತರಿಸುವವನು ಎಂಬ ಅರ್ಥ. ಸಿಟ್ಟಿಗೆ ಅಯೋಗ್ಯರಾದ ಸಾತ್ವಿಕರ ಪಾಲಿಗೆ 'ಕ್ರೋಧಹಾ' - ಎನಿಸಿ ಕ್ರೋಧವನ್ನು ಪರಿಹರಿಸಿ ಪ್ರಲಯ ಕಾಲದಲ್ಲಿ ಅವರನ್ನು ಕತ್ತರಿಸಿ ಮೋಕ್ಷಕ್ಕೆ ಕಳುಹಿಸುವನು. ಸಿಟ್ಟಿಗೆ ಯೋಗ್ಯರಾದ ತಾಮಸರ ಪಾಲಿಗೆ 'ಕ್ರೋಧಕೃತ್' - ಎನಿಸಿ ಕ್ರೋಧ ಉಂಟಾಗುವಂತೆ ಮಾಡಿ, ಪ್ರಲಯಕಾಲದಲ್ಲಿ ಅವರನ್ನೂ ಕತ್ತರಿಸಿ ಅಂಧತಮಸ್ಸಿಗೆ ಕಳುಹಿಸುವನು.

ಪ್ರಲಯಕಾಲ ಬಂದಾಗ ಎಲ್ಲವನ್ನೂ ಕತ್ತರಿಸಿ ಬಿಸಾಡುವ ವ್ಯಕ್ತಿತ್ವ ಉಳ್ಳವನು ಭಗವಂತ.

ಕರ್ತಾ ಎಂದರೆ ಮಾಡುವವನು ಎಂಬ ಅರ್ಥವೂ ಇದೆ. ಆದರೆ ಮಾಡುವಿಕೆಯೂ ಯಾವುದಾದರೊಂದು ವಸ್ತುವಿನ ಕತ್ತರಿಸುವಿಕೆಯಿಂದಲೇ ರೂಪುಗೊಳ್ಳುವಂತಹದ್ದು. ಮಡಿಕೆಯ ಕರ್ತಾ ಎಂದರೆ ಮಣ್ಣನ್ನು ಕತ್ತರಿಸಿ ಮಡಿಕೆ ಮಾಡುವವನು ತಾನೇ ?

**೩೧೯. ವಿಶ್ವಬಾಹುಃ – ಎಲ್ಲವನ್ನೂ ತುಂಬಿಸಿಕೊಂಡ ಕೈಗಳು ಉಳ್ಳವನು.**

**ವಿವರಣೆ :** ವಿಶಾಲವಾದ ಕೈಗಳುಳ್ಳವನೇ ವಿಶ್ವಬಾಹು. ಸಹಸ್ರಶೀರ್ಷಾ ಪುರುಷಃ.... ಎಂದು ಪುರುಷಸೂಕ್ತ ಸಾರುತ್ತಿರುವಂತೆ ಭಗವಂತನಿಗೆ ಸಾವಿರಾರು ತಲೆ, ಕಣ್ಣುಗಳು ಹೇಗೋ ಹಾಗೆ ಕೈಗಳೂ ಇವೆ. ಆ ಕೈಗಳು ಎಲ್ಲವನ್ನೂ ತಮ್ಮಲ್ಲಿ ತುಂಬಿಸಿಕೊಂಡಿರುವವು. ಎಲ್ಲವನ್ನೂ ಅಂದರೆ ದೇವರ ಹೃದಯವನ್ನೂ. ಶ್ರೀಮಧ್ವರು ಹೀಗೊಂದು ಗಂಭೀರ ಹಾಸ್ಯ ಮಾಡ್ತಾರೆ - ದೇವರದ್ದು ವಿಶಾಲ ಹೃದಯ ತಾನೇ ? ಅಂತಹ ಹೃದಯವನ್ನೂ ಅವನ ಬಾಹುಗಳು ತಮ್ಮೊಳಗೆ ಸೇರಿಸಿಕೊಂಡಿವೆ - **'.....ಅನಂತಂ ಅಂತವದಿವ ಭುಜಯೋರಂತರಂಗತಮ್'**

ನೋಡುವುದಕ್ಕೆ ನನ್ನ ಕೈಯಿಂದಾಗುವುದಿಲ್ಲ ; ಕೇಳಲಿಕ್ಕೆ ನನ್ನ ಕೈಯಿಂದಾಗುವುದಿಲ್ಲ ; ದಾನ ಮಾಡಲು ಅವರ ಕೈ ಗಿಡ್ಡ. ಅವರ ಕೈ ದೊಡ್ಡದು..... ಹೀಗೆ ಲೌಕಿಕ ವ್ಯವಹಾರದಲ್ಲೂ ಕೈ ಎಲ್ಲವನ್ನೂ ಒಳಗೊಂಡಿರುವುದು.

ಭಗವಂತನ ಕೈಗಳಂತೂ ಎಲ್ಲವನ್ನೂ ಒಳಗೊಂಡಿದ್ದು 'ವಿಶ್ವಬಾಹು' ಎನಿಸುವಂತೆ ಅವನನ್ನು ಮಾಡಿವೆ. ಅವನನ್ನು ಹೀಗೆ ಉಪಾಸನೆ ನಡೆಸಿದಲ್ಲಿ ನಮ್ಮ ಕೈಗಳೂ ನಮ್ಮ ಯೋಗ್ಯತೆಗನುಗುಣವಾಗಿ ಎಲ್ಲವನ್ನೂ ಒಳಗೊಳ್ಳುವಂತೆ ಮಾಡುವನು.

**೩೨೦. ಮಹೀಧರಃ – ಕೂರ್ಮ ರೂಪದಿಂದ ಎಲ್ಲವನ್ನೂ ಧಾರಣೆ**

**ಮಾಡಿರುವವನು.**

ವಿವರಣೆ : ಕೂರ್ಮ ರೂಪದಿಂದ ಭೂಮಿಯನ್ನು ಧರಿಸಿದವನೇ 'ಮಹೀಧರ'. 'ಮಹೀ' ಎಂಬುದಕ್ಕೆ ಎಲ್ಲವನ್ನೂ ಎಂಬ ಅರ್ಥ. ಎಲ್ಲವನ್ನೂ ಧಾರಣೆ ಮಾಡಿರುವುದರಿಂದಲೇ ಮಹೀಧರ.

**ಅಚ್ಯುತಃ ಪ್ರಥಿತಃ ಪ್ರಾಣಃ ಪ್ರಾಣದೋ ವಾಸವಾನುಜಃ |**
**ಅಪಾಂ ನಿಧಿರಧಿಷ್ಠಾನಮಪ್ರಮತ್ತಃ ಪ್ರತಿಷ್ಠಿತಃ || ೩೫ ||**

**೩೨೧. ಅಚ್ಯುತಃ – ಸ್ಥಾನದ, ಗುಣಗಳ, ಪತ್ನಿಯ – ಹೀಗೆ ಯಾವುದೇ ಚ್ಯುತಿ ಇಲ್ಲದವನು.**

ವಿವರಣೆ : ಚ್ಯುತಿ ಇಲ್ಲದವನು, ಸ್ಥಾನದಿಂದ ಭ್ರಷ್ಟನಾಗದವನು ಅಚ್ಯುತ. ಚತುರ್ಮುಖನವರೆಗೂ ಒಂದಲ್ಲ ಒಂದು ದಿನ ತಮ್ಮ ತಮ್ಮ ಸ್ಥಾನವನ್ನು ಕಳಕೊಂಡು 'ಸ್ಥಾನಭ್ರಷ್ಟ'ರೆನಿಸುವರು. ಚತುರ್ಮುಖ ಸತ್ಯ ಲೋಕಾಧಿಪತಿಯಾಗಿರುವನು. ನೂರು ವರ್ಷಗಳು ಸಂದವೋ ಆ ಸ್ಥಾನವನ್ನು ತೆರವು ಮಾಡಬೇಕು. ಅದಕ್ಕೆ ಮತ್ತೊಬ್ಬ ಬರುವವನಿರುವನು. ಆದರೆ ಚತುರ್ಮುಖನ ನೂರು ವರ್ಷಗಳ ತನಕ ಅವನ ಪದವಿಯನ್ನು ಯಾರೂ ಕಬಳಿಸುವವರಿರುವುದಿಲ್ಲ. ಆದರೆ ಇಂದ್ರಾದಿಗಳಿಗೆ ಹಾಗಲ್ಲ. ಈಗಿನ ರಾಜಕಾರಣಿಗಳಂತೆ ಅವರ ಪದವಿ ಮತ್ತೆ ಮತ್ತೆ ಹಿರಣ್ಯಕಶಿಪು ಮುಂತಾದ ಅಸುರರಿಂದ ಆಕ್ರಮಿಸಲ್ಪಡುತ್ತ ಇರುವುದು. ಆದ್ದರಿಂದ ಇವರೆಲ್ಲ ಚ್ಯುತರು. ಇಂತಹ ಚ್ಯುತಿ ಇಲ್ಲದವನು ದೇವರೊಬ್ಬನೇ.

ದ್ವಾದಶ ಸ್ತೋತ್ರದಲ್ಲಿ **'ಅಚ್ಯುತೋ ಯೋ ಗುಣೈಃ ನಿತ್ಯಮೇವಾಖಿಲೈಃ...'** ಎಂಬುದಾಗಿ ಭಗವಂತನು ಜ್ಞಾನ, ಸುಖ ಮುಂತಾದ ಯಾವುದೇ ಗುಣಗಳ ಚ್ಯುತಿಗೂ ಒಳಗಾಗುವವನಲ್ಲ ಎಂದು ಸ್ತುತಿಸಲಾಗಿದೆ. ನಮ್ಮಲ್ಲಿ ಆದರೆ ಇಂದು ಜ್ಞಾನ ಇದೆ. ನಾಳೆ ಅದು ಇರಬೇಕಾದದ್ದಿಲ್ಲ. ಇಂದು ಸುಖಿಗಳಾದ ನಾವು ನಾಳೆ ದುಃಖಿಗಳೂ ಆಗಬಹುದು. ಆದರೆ ಭಗವಂತನೆಂದೂ ಜ್ಞಾನಸುಖಾದಿ ಗುಣಗಳ ಚ್ಯುತಿಗೆ ಒಳಗಾಗಲಾರ.

ಆದುದರಿಂದ ಭಗವಂತನು ಸ್ಥಾನದ ಚ್ಯುತಿಯಿಂದಷ್ಟೇ ಅಲ್ಲದೆ ಗುಣದ ಚ್ಯುತಿ, ಪತ್ನಿಯ ಚ್ಯುತಿ, ವ್ಯಾಪ್ತಿಯ ಚ್ಯುತಿ - ಹೀಗೆ ಯಾವುದೇ ಚ್ಯುತಿಗೆ ಒಳಗಾಗದವನಾದುದರಿಂದ 'ಅಚ್ಯುತ' ಎನಿಸುವನು.

ಜೀವನದಲ್ಲಿ ಪದವಿಯ ಚ್ಯುತಿ, ಗೌರವಾದಿಗಳ ಚ್ಯುತಿ, ಪತ್ನೀ ಪುತ್ರಾದಿಗಳ

ಚ್ಯುತಿ ಬರಬಾರದೆಂದಿದ್ದರೆ ಭಗವಂತನನ್ನು ಅಚ್ಯುತ ಎಂದು ಉಪಾಸನೆ ಮಾಡಬೇಕು.

**೩.೨೨. ಪ್ರಥಿತಃ – ಪ್ರತಿಯೊಬ್ಬರಿಗೂ ಪ್ರಸಿದ್ಧನಾಗಿರುವವನು.**

**ವಿವರಣೆ :** ಪ್ರಥಿತಃ ಅಂದರೆ ಪ್ರಸಿದ್ಧ. ದೇವರ ಬಗ್ಗೆ ಯಾರಿಗೆ ಗೊತ್ತಿಲ್ಲ ? ಯಾರಿಗೆ ಪರಿಚಯ ಇಲ್ಲ? ನಾಸ್ತಿಕನಿಗೂ ಪರಿಚಯ ಇದೆ. ಯಾಕೆಂದರೆ 'ಇಲ್ಲ' ಎನ್ನಬೇಕಾದರೆ ದೇವರು ಗೊತ್ತಿದ್ದಿರಲೇಬೇಕು ತಾನೇ ? ಬರೇ 'ಇಲ್ಲ' ಎನ್ನುವುದಕ್ಕೆ ಅರ್ಥ ಇಲ್ಲ. ಯಾರು ಇಲ್ಲ ಎನ್ನದೆ ದೇವರನ್ನು ನಿರಾಕರಿಸಲು ಆಗುವುದೇ ಇಲ್ಲ ತಾನೇ ?

ನಮ್ಮ ನಿಮ್ಮ ಪರಿಚಯ ಎಲ್ಲರಿಗೂ ಇಲ್ಲದಿದ್ದಿರಬಹುದು. ಆದರೆ ದೇವರ ಪರಿಚಯ ಇಲ್ಲದ ವ್ಯಕ್ತಿಯೇ ಇಲ್ಲ. ಆದ್ದರಿಂದ ಭೀಷ್ಮರು ಕೃಷ್ಣನನ್ನು ಸ್ತುತಿಸುವರು- 'ಪ್ರಥಿತಃ' ಎಂದು.

**೩.೨೩. ಪ್ರಾಣಃ – ಒಳ್ಳೆಯ ಚಟುವಟಿಕೆ ಉಳ್ಳವನು.**

**ವಿವರಣೆ:** ಪ್ರಾಣ ಅಂದರೆ ಚೇಷ್ಟೆ. ಪ್ರಕರ್ಷೇಣ ಅಣತಿ - ಒಳ್ಳೆಯ ಚೇಷ್ಟೆ ಉಳ್ಳವನು. ದೇವರು ಒಂದು ಅಡಿ ಮುಂದೆ ಇಟ್ಟನೋ ಸಮಾಜಕ್ಕೆ ಒಳ್ಳೆಯದಾಯಿತೆಂದರ್ಥ. ಸೆರೆಮನೆಯಿಂದ ಹೊರಟನೋ, ನದಗೋಕುಲದಿಂದ ಹೊರಟನೋ - ಏನೋ ಒಳ್ಳೆಯದಾಗುವುದೆಂದರ್ಥ. ಹೀಗೆ ಪರಮಾತ್ಮನ ಪ್ರತಿಯೊಂದು ಚೇಷ್ಟೆಯೂ ಪ್ರಕೃಷ್ಟವಾದದ್ದು. ಸಮಾಜಕ್ಕೆ ಒಳಿತನ್ನು ಉಂಟು ಮಾಡುವಂತಹದ್ದು.

**೩.೨೪. ಪ್ರಾಣದಃ – ತನ್ನ ಚಟುವಟಿಕೆಗನುಗುಣವಾಗಿ ಜೀವರಲ್ಲಿ ಚಟುವಟಿಕೆಗಳನ್ನು ನೀಡುವವನು.**

**ವಿವರಣೆ :**ತಾನು ಒಳ್ಳೆಯ ಚಟುವಟಿಕೆಯನ್ನು ಹೊಂದಿರುವಂತೆ ಸಮಾಜಕ್ಕೂ ಒಳ್ಳೆಯ ಚಟುವಟಿಕೆಯನ್ನು ನೀಡುವವನು - 'ಪ್ರಾಣದಃ'

ರಾಜನೂ ಸೇವಕನ ಮೂಲಕ ಚಟುವಟಿಕೆಗಳನ್ನು ಮಾಡಿಸುವನು. ಆದರೆ ಹೇಗೆ ? ಸಿಂಹಾಸನದಲ್ಲಿ ಕುಳಿತು 'ಹಾಗೆ ಮಾಡು' 'ಹೀಗೆ ಮಾಡು' - ಎಂದು ಸೇವಕನಿಗೆ ಆಜ್ಞೆ ಮಾಡುವನು. ಆ ಆಜ್ಞೆಗನುಗುಣವಾಗಿ ಸೇವಕ ತಾನೇ ಚಟುವಟಿಕೆಗಳನ್ನು ನಡೆಸುವನು ಹೊರತು ರಾಜನೇನೂ ಸೇವಕನ ಒಳಹೊಕ್ಕು ಚಟುವಟಿಕೆಗಳನ್ನು ನಡೆಸುವುದಿಲ್ಲ. ಆದರೆ ದೇವರು ಹಾಗಲ್ಲ. 'ಹೆಜ್ಜೆಗಳನ್ನಿಡು' 'ಮಾತುಗಳನ್ನಾಡು' 'ವಸ್ತುಗಳನ್ನು ನೋಡು' ಎಂದು ಆದೇಶಿಸುವ ದೇವರೂ ಹೆಜ್ಜೆಗಳನ್ನಿಡಬೇಕು ; ಮಾತುಗಳನ್ನು ಆಡಬೇಕು ; ವಸ್ತುಗಳನ್ನು ನೋಡಬೇಕು ; ಆಗಷ್ಟೇ ನಾವೂ ಹೆಜ್ಜೆಗಳನ್ನಿಡುವೆವು ; ಮಾತುಗಳನ್ನಾಡುವೆವು ; ವಸ್ತುಗಳನ್ನು

ನೋಡುವೆವು.

ಆದ್ದರಿಂದ ನಮಗೂ ದೇವರಿಗೂ ರಾಜ ಸೇವಕರೊಳಗಿರುವಂತೆ ಬರೇ ಈಶ - ದಾಸ ಸಂಬಂಧ ಅಲ್ಲ ; ಮತ್ತೆ ನೆರಳು-ವ್ಯಕ್ತಿಗಳೊಳಗಿರುವ ಸಂಬಂಧ. ನೆರಳಲ್ಲಿ ಕಿಂಚಿತ್ತಾದರೂ ಚಲನೆ ಬರಬೇಕೆಂದರೆ ನಮ್ಮಲ್ಲಿ ಚಲನೆ ಇರಬೇಕು. ಅದರಂತೆ ನಮ್ಮ ಕಾಲು ಚಲಿಸಬೇಕೆಂದರೆ, ನಮ್ಮ ಕಾಲಲ್ಲಿ ವ್ಯಾಪಿಸಿರುವ ದೇವರ ಕಾಲು ಚಲಿಸಬೇಕು. ನಮ್ಮ ಕೈಯೊಳಗಿರುವ ದೇವರ ಕೈ ಚಲಿಸದೆ ನಮ್ಮ ಕೈ ಚಲಿಸದು.

ಆದುದರಿಂದ ದೇವರು ತಾನು ಒಳ್ಳೆಯ ಚಟುವಟಿಕೆಯುಳ್ಳವನಾಗಿ, ಸಮಾಜಕ್ಕೆ ಒಳ್ಳೆಯ ಚಟುವಟಿಕೆಯನ್ನು ನೀಡುವನು. 'ಪ್ರಾಣಃ ಪ್ರಾಣದಃ....' ಈ ಎರಡು ಹೆಸರುಗಳು ಭಗವಂತನ ತಾನು ಮಾಡಿ ನಮ್ಮಿಂದ ಮಾಡಿಸುವ ಈ ಪ್ರವೃತ್ತಿಯನ್ನೇ ತಿಳಿಸುತ್ತಿವೆ.

ದೊಡ್ಡವರ ಲಕ್ಷಣವೇ ಇದು. ಯಾವತ್ತೂ ವಿದ್ಯಾಮಾನ್ಯ ತೀರ್ಥರು ನಮಗೆ ಹಾಗೆ ಮಾಡಿ ಹೀಗೆ ಮಾಡಿ ಎಂದು ಹೇಳುತ್ತಲೇ ಇರಲಿಲ್ಲ. ಬದಲಾಗಿ ತಾವು ಹಾಗೆ ನಡೆದುಕೊಂಡು ನಾವೂ ಹಾಗೆ ನಡೆದುಕೊಳ್ಳುವಂತೆ ಮಾಡುತ್ತಿದ್ದರು. ಮನೆಯಲ್ಲಿ ಅಪ್ಪನಾದವನು ತಾನು ಸಂಧ್ಯಾವಂದನೆ ಮಾಡಿ ಅದನ್ನು ನೋಡಿದ ತನ್ನ ಮಗನೂ ಸಂಧ್ಯಾವಂದನೆ ನಡೆಸುವಂತೆ ಮಾಡಬೇಕು. ಹೊರತು ತಾನು ಮಾಡದೆಯೇ ಮಗನಲ್ಲಿ 'ಸಂಧ್ಯಾವಂದನೆ ಮಾಡು' - ಎಂದು ಆದೇಶಿಸಿದ್ದಲ್ಲಿ 'ನೀನು ಮೊದಲು ಮಾಡು'- ಎಂದು ಮಗ ಅಪ್ಪನಿಗೆ 'ಮಂಗಳಾರತಿ' ಎತ್ತುವ ಪ್ರಸಂಗ ಬರುವುದು !

ನಾವು ಬಲಗಾಲನ್ನು ಮುಂದಿಡಬೇಕೆಂದರೆ ಭಗವಂತನು ಆ ಕಾಲೊಳಗಿರುವ ತನ್ನ ಬಲಗಾಲನ್ನು ಮೊದಲು ಮುಂದಿಡುವನು. ಎಡಗೈಯಿಂದ ತೆಗೆದುಕೊಳ್ಳಬೇಕೆಂದರೆ, ಅದರೊಳಗಿರುವ ಭಗವಂತನ ಎಡಗೈಯಿಂದ ತೆಗೆದುಕೊಳ್ಳುವನು.

ಆದುದರಿಂದಲೇ 'ಪ್ರಾಣಃ ಪ್ರಾಣದಃ......' ಎಂದು ಸ್ತುತನಾಗಿರುವನು.

**೩೨೫. ವಾಸವಾನುಜಃ – * ವಾಮನ ರೂಪದಲ್ಲಿ ದೇವೇದ್ರನ ತಮ್ಮನಾಗಿ ಅವತರಿಸಿರುವವನು.**

*** ದೇವತೆಗಳ ಪ್ರಾರ್ಥನೆಗೆ ಅನುಗುಣವಾಗಿ ಅವತಾರ ತಾಳುವವನು.**

**ವಿವರಣೆ** : ವಾಸವ ಎಂದರೆ ದೇವೇಂದ್ರ. ವಾಮನ ರೂಪದಲ್ಲಿ ದೇವೇಂದ್ರನ ತಮ್ಮನಾಗಿ, ಉಪೇಂದ್ರನಾಗಿ ಅವತರಿಸಿದವನೆಂಬುದು ಒಂದು ಅರ್ಥ. ಇದು

ಪ್ರಸಿದ್ಧವಾದ ಅರ್ಥ.

ಕೃಷ್ಣನಿಗೇ ಸಂಬಂಧಪಡುವ ಮತ್ತೊಂದು ಅರ್ಥ ಎಂದರೆ ವಸುಗಳು ದೇವತೆಗಳು. ಅವರಿಗೆ ಸಂಬಂಧಪಡುವ ಪ್ರಾರ್ಥನೆ ವಾಸವ. ಭಗವಂತನು ಧರೆಯಲ್ಲಿ ಅವತಾರ ತಾಳಬೇಕೇ ? ಹಾಗಾದರೆ ದೇವತೆಗಳು ಅವನಿಗೆ ಪ್ರಾರ್ಥನೆಯನ್ನು ಸಲ್ಲಿಸಲೇಬೇಕು. ಯಾಕೆಂದರೆ ಅವನು ತನಗಾಗಿ ಅವತಾರ ತಾಳುವುದಲ್ಲ, ಮತ್ತೆ ಭಕ್ತರಿಗಾಗಿ. ಆದುದರಿಂದ ವಾಸವ ದೇವತಾಸಂಬಂಧಿ ಪ್ರಾರ್ಥನೆಯನ್ನು ಅನುಜ ಅನುಸರಿಸಿ ಅವತಾರ ತಾಳುವವನು.

ನಮಗೆ ನೇರವಾಗಿ ಭಗವಂತನಲ್ಲಿ ಪ್ರಾರ್ಥನೆ ಸಲ್ಲಿಸುವ ಸಾಮರ್ಥ್ಯ ಇಲ್ಲ ಎಂದರೆ ನಾವು ದೇವತೆಗಳಲ್ಲಿ ಪ್ರಾರ್ಥನೆ ಸಲ್ಲಿಸಬೇಕು. ದೇವತೆಗಳಾದರೂ ಪರಮಾತ್ಮನನ್ನು ಪ್ರಾರ್ಥಿಸುವರು. ಅವರ ಪ್ರಾರ್ಥನೆಗೆ ಅನುಗುಣವಾಗಿ ಅವತರಿಸುವುದರಿಂದ ಅವನು 'ವಾಸವಾನುಜ' ಎನಿಸುವನು.

**೩೨೬. ಅಪಾಂ ನಿಧಿಃ – * ನೀರಿಗೆ ನಿಧಿ. ನೀರನ್ನು ತನ್ನ ಹಿಡಿತದಲ್ಲಿಟ್ಟುಕೊಂಡವನು.**
*** ನಾವು ಮಾಡುವ ಕರ್ಮಗಳಿಗೂ ನಿಧಿ.**

ವಿವರಣೆ : ನೀರನ್ನು ನಾವು ಬೇಕು ಎಂದರೂ ಕೆಲವೊಮ್ಮೆ ಕೊಡುವುದಿಲ್ಲ. ಬೇಡ ಎಂದರೂ ಕೆಲವೊಮ್ಮೆ ಕೊಡುವನು. ಇದರಿಂದ ನೀರು ನಮ್ಮ ವಶದಲ್ಲಿ ಇಲ್ಲ ಎಂಬುದು ಸ್ಪಷ್ಟ.

ಹೀಗೆ ಅಪ್ ಶಬ್ದಕ್ಕೆ ನೀರು ಎಂಬ ಅರ್ಥ ಇರುವಂತೆ ಕರ್ಮಗಳು ಎಂಬ ಅರ್ಥವೂ ಇದೆ. ನಾವು ಮಾಡುವ ಪ್ರತಿಯೊಂದು ಕರ್ಮಕ್ಕೂ ಅವನೇ ನಿಧಿ ; ಆಸರೆ. ನಾವು ಸಂಕಷ್ಟಚತುರ್ಥೀವ್ರತ ಮಾಡೋಣ ; ಮುಖ್ಯಪ್ರಾಣನಿಗೆ ರಂಗಪೂಜೆ ಮಾಡಿಸೋಣ ; ಕೊನೆಗೆ ಭೂತಕ್ಕೊಂದು ಕೋಲ ಕೊಡೋಣ - ಇವೆಲ್ಲವನ್ನೂ 'ಕೃಷ್ಣಾರ್ಪಣ' ಎಂದೇ ಕೊನೆಗೊಳಿಸುವುದು. ಗಣಪತ್ಯರ್ಪಣ, ಮುಖ್ಯಪ್ರಾಣಾರ್ಪಣ.... ಹೀಗೆ ಇತರ ಯಾವುದೇ ದೇವತೆಗಳಿಗೆ ಅರ್ಪಿಸುವ ಕ್ರಮ ಇಲ್ಲ. ಕೃಷ್ಣನಲ್ಲೇ ಎಲ್ಲ ಕರ್ಮಗಳನ್ನೂ ಅರ್ಪಿಸುವುದರಿಂದ ಅವುಗಳಿಗೆಲ್ಲ ಅವನೇ ನಿಧಿ. **'ತಸ್ಮಿನ್ನಪೋ ಮಾತರಿಶ್ವಾ ದಧಾತಿ'** - ಎಂಬ ಉಪನಿಷತ್ತಿನ ಮಾತು ಮಾತರಿಶ್ವಾ - ವಾಯುದೇವ ಅಪಃ - ನಾವು ಮಾಡಿದ ಕರ್ಮಗಳನ್ನು ತಸ್ಮಿನ್ - ಪರಮಾತ್ಮನಲ್ಲಿ ದಧಾತಿ - ಒಪ್ಪಿಸುವನು ಎಂದು ಪ್ರತಿಪಾದಿಸುತ್ತಿದೆ. ಹೀಗೆ ಭಗವಂತ ನಮ್ಮ ನಿಮ್ಮ ಕರ್ಮಗಳ ನಿಧಿ.

ಯಾಕೆ ಭಗವಂತನಲ್ಲಿಯೇ ನಮ್ಮ ಕರ್ಮಗಳನ್ನು ಅರ್ಪಿಸುತ್ತೇವೆ ಅಂದರೆ ಅವನು ನಮ್ಮ ಕರ್ಮಗಳನ್ನು ಸ್ವಲ್ಪವೂ ತಿಂದು ಹಾಕುವುದಿಲ್ಲ ಎಂದು ನಮಗೆ ಸ್ಪಷ್ಟ. ಇತರ ದೇವತೆಗಲ್ಲಿ ಅರ್ಪಿಸಿದರೆ ಅವರೆಲ್ಲಾದರೂ ತಿಂದು ಬಿಟ್ಟರೆ ! ಹೇಗೆ ರಾಷ್ಟ್ರೀಕೃತ ಧನಾಗಾರದಲ್ಲಿಯೇ ನಮ್ಮ ಹಣ ಇಟ್ಟರೆ ಅದು ಸುರಕ್ಷಿತವಾಗಿ ಇರುವುದೋ ಹಾಗೆ. ಒಂದು ಧ್ವನಿಸುರುಳಿಯನ್ನು ಕಿವುಡನ ಕೈಯಲ್ಲಿ ಕೊಟ್ಟರೆ ಅವನು ಖಂಡಿತಾ ಅದನ್ನು ಬಳಸಿಕೊಳ್ಳುವುದಿಲ್ಲ ಎಂಬ ನಿಶ್ಚಯವನ್ನು ಹೊಂದಬಹುದೋ ಹಾಗೆ ಕರ್ಮದ ಅವಶ್ಯಕತೆ ಇಲ್ಲದ ಭಗವಂತ ನಮ್ಮ ಕರ್ಮಗಳನ್ನು ಹಾಗೆಯೇ ಇಟ್ಟುಕೊಂಡು ನಾವು ಸಾಯುವಾಗ ನಮಗೆ ಒಪ್ಪಿಸುವನು. ಅದಕ್ಕಾಗಿ ನಾವು ಅಂತಹ ಭಗವಂತನನ್ನೇ 'ಅಪಾಂ ನಿಧಿಃ' ಮಾಡಿಕೊಂಡಿರುವೆವು.

ಭೀಷ್ಮರು ತಮ್ಮ ಎಂಟುನೂರು ವರ್ಷಗಳ ದೀರ್ಘ ಬದುಕಿನಲ್ಲಿ ನಡೆಸಿದ ಕರ್ಮಗಳನ್ನೆಲ್ಲ ಎದುರಿಗಿರುವ ಕೃಷ್ಣನಿಗೆ ಅರ್ಪಿಸಿ ಅವನನ್ನು ಸ್ತುತಿಸುತ್ತಿರುವರು - 'ಅಪಾಂ ನಿಧಿಃ'

**೩೨೭. ಅಧಿಷ್ಠಾನಮ್ – ಸಕಲ ಜಗತ್ತಿಗೂ ಮೂಲಾಧಾರನಾಗಿರುವವನು.**

**ವಿವರಣೆ :** ಒಬ್ಬ ವ್ಯಕ್ತಿಗೆ ಅಥವಾ ವಸ್ತುವಿಗೆ ಅನೇಕ ಆಧಾರಗಳಿರುವವು. ಆದರೆ ಅವೆಲ್ಲ ಮೇಲ್ನೋಟಕ್ಕಷ್ಟೇ ಆಧಾರಗಳು. ಎಲ್ಲದ್ದಕ್ಕೂ ಮೂಲಾಧಾರ ಭಗವಂತನೇ. ಆದುದರಿಂದ ಅವನೇ ಅಧಿಷ್ಠಾನ. **'ಅಧಿಷ್ಠಾನಮಿತಿ ಪ್ರೋಕ್ತಂ ಮೂಲಾಧಾರಂ ವಿಚಕ್ಷಣೈಃ'** - ಎಂದಿರುವಂತೆ ಭಗವಂತನು ಎಲ್ಲದಕ್ಕೂ ಮೂಲಾಧಾರನಾಗಿರುವುದರಿಂದ ಅಧಿಷ್ಠಾನ ಎನಿಸುವನು.

ಜಡಭರತ ರಹೂಗಣರಾಜನಲ್ಲಿ **'.......ಭರ್ತುಃ ಸ ಮೇ ಸ್ಯಾದ್ ಯದಿ ವೀರ ಭಾರಃ....'** ನಾನು ನಿನ್ನ ಪಲ್ಲಕ್ಕಿಯನ್ನು ಹೊರುವವನಾಗಿದ್ದರೆ ನೀನು ನನಗೆ ಬೈಯುವುದು ಉಚಿತವೆನಿಸುತ್ತಿತ್ತು. ಆದರೆ ನಾನು ಹೊರುವವನೇ ಅಲ್ಲ. ಮತ್ತೆ, ಭಗವಂತನೇ ಹೊರುವವನು. ಯಾಕೆಂದರೆ ಅವನೇ ಮೂಲಾಧಾರ ಎಂಬ ಅಭಿಪ್ರಾಯದಲ್ಲಿ ಮಾತುಗಳನ್ನು ಹೇಳಿ, ರಹೂಗಣನ ಕಣ್ಣನ್ನು ಅರಳಿಸಿರುವನು.

**೩೨೮. ಅಪ್ರಮತ್ತಃ – ತಿಳಿಗೇಡಿತನ ಇಲ್ಲದವನು.**

**ವಿವರಣೆ :** ಒಳ್ಳೆಯ ತಿಳುವಳಿಕೆವುಳ್ಳವನು, ಎಂದೂ ಮೂರ್ಖನಂತೆ ನಡೆದುಕೊಳ್ಳುವವನಲ್ಲ. ನಮ್ಮಲ್ಲಿ 'ಬುದ್ಧಿಜೀವಿಗಳು' ಎಂಬ ಹೆಸರಿನ ಸುನಾಮಿಗಳು

ಸಾವಿರಾರು ಮಂದಿಗಳ ಪ್ರಾಣಗಳನ್ನು ಕಬಳಿಸುವರು. ಇದು ಪ್ರಮಾದದ, ತಿಳಿಗೇಡಿತನದ ಕೆಲಸ. ಭಗವಂತ ಎಂದೂ ಈ ಬಗೆಯ ತಿಳಿಗೇಡಿತನದ ಕೆಲಸ ಮಾಡುವವನಲ್ಲ. ನಮ್ಮ ಬಾಯಿಯಿಂದ ಎಂದೂ ತಿಳಿಗೇಡಿತನದ, ಹೊಣೆಗೇಡಿತನದ ಮಾತು ಬರಬಾರದೆಂದಿದ್ದರೆ ಭಗವಂತನನ್ನು 'ಅಪ್ರಮತ್ತಃ', ಎಂದೂ ತಿಳಿಗೇಡಿತನಕ್ಕೆ ಒಳಗಾಗದವನೆಂದು ಉಪಾಸನೆ ನಡೆಸೋಣ.

**೩೨೯. ಪ್ರತಿಷ್ಠಿತಃ – ತನ್ನ ಸ್ವಂತಿಕೆಯಿಂದಲೇ ಮೆರೆಯುತ್ತಿರುವವನು.**

**ವಿವರಣೆ :** ನಾವು ಹೊಗಳಿದ್ದರಿಂದ, ಪೂಜೆ ಮಾಡಿದ್ದರಿಂದ ದೇವರು ಎತ್ತರದ ಸ್ಥಾನದಲ್ಲಿ ಇರುವುದಲ್ಲ ; ಮತ್ತೆ ನಾವು ಹೊಗಳೋಣ ; ಬಿಡೋಣ ; ಅವನು ತನ್ನ ಎತ್ತರದ ಸ್ಥಾನದಲ್ಲಿ ಯಾವಾಗಲೂ ಮೆರೆಯುತ್ತಿರುವನು - **'ಸ್ವೇ ಮಹಿಮ್ನಿ ಪ್ರತಿಷ್ಠಿತಃ'** - ತನ್ನ ಮಹಿಮೆಗಳ ಆಧಾರದ ಮೇಲೆ ವಿರಾಜಿಸುತ್ತಿರುವವನು. ನಮ್ಮಿಂದಾಗಿ ದೇವರಿಗೆ ಮಹತ್ತ್ವ ಬಂದದ್ದಲ್ಲ ಬದಲಾಗಿ ಅವನು ಸ್ವಂತಿಕೆಯಿಂದಾಗಿಯೇ ಮೆರೆಯುತ್ತಿರುವನು. ನಮ್ಮಲ್ಲಾದರೆ ಇವನು ಅವರ ಮಗ - ಎಂದು ತಂದೆಯ ಪ್ರಯುಕ್ತವಾಗಿಯೋ, ಇವರು ಅವರ ತಂದೆ - ಎಂದು ಮಗನ ಪ್ರಯುಕ್ತವಾಗಿಯೋ - ಹೀಗೆ ಮತ್ತೊಬ್ಬರ ಪ್ರಯುಕ್ತವಾಗಿಯೇ ಗೌರವಾದರಗಳು. ಆದರೆ ದೇವರಿಗೆ ಹಾಗಲ್ಲ. ಅವನು ಹಿಂದುಗಳ ದೇವರು ; ಅವನು ಭಾರತದದೇವರು - ಎಂದೆಲ್ಲ ದೇವರಿಗೆ ಹಿರಿಮೆ ಅಲ್ಲ ; ಅವನು ಸ್ವಂತಿಕೆಯಿಂದಲೇ ಮೆರೆಯುತ್ತಿರುವವನು.

ನಿನ್ನ ಕಾಲ ಮೇಲೆ ನಿಲ್ಲಲು ಕಲಿ ಎಂದು ಹೇಳಿಸಿಕೊಳ್ಳುವವರು ಅಂತಹ ಸ್ಥಿತಿಯನ್ನು ಪಡೆದುಕೊಳ್ಳಬೇಕೆಂದರೆ ಭಗವಂತನನ್ನು 'ಪ್ರತಿಷ್ಠಿತ' ಎಂದು ಉಪಾಸನೆ ಮಾಡಬೇಕು.

**ಸ್ಕಂದಃ ಸ್ಕಂದಧರೋ ಧುರ್ಯೋ ವರದೋ ವಾಯುವಾಹನಃ |**
**ವಾಸುದೇವೋ ಬೃಹದ್ಭಾನುರಾದಿದೇವಃ ಪುರಂದರಃ || || ೩೬ ||**

**೩೩೦.- ಸ್ಕಂದಃ – ತನ್ನ ಒಳಗಿದ್ದದ್ದನ್ನು ಹೊರಹಾಕುವವನು.**

ವಿವರಣೆ: 'ಸ್ಕಂದಿಶ್ ಗತಿಶೋಷಣಯೋಃ'- ಎಂಬ ಕ್ರಿಯಾಪದದಿಂದ ರೂಪುಗೊಂಡ ಶಬ್ದ ಸ್ಕಂದ. ಯಾರು ಪ್ರಳಯ ಕಾಲದಲ್ಲಿ ತನ್ನ ಉದರದಲ್ಲಿ ಸೇರಿಸಿಕೊಂಡಿದ್ದ ಸಮಸ್ತ ಜಗತ್ತನ್ನು ಸೃಷ್ಟಿಕಾಲದಲ್ಲಿ ಹೊರಗೆ ಹಾಕಿರುವನೋ ಅವನೇ ಸ್ಕಂದ. 'ಸ್ಕಂದನಾತ್ ಸ್ಕಂದಃ' ಪಾರ್ವತಿಯ ಮಗ ತಾರಕಾಸುರನನ್ನು ಕೊಲ್ಲಲು ಭಗವಂತನ

ಅನುಗ್ರಹದಿಂದ ತನ್ನ ವಿಲಕ್ಷಣವಾದ ಬಲವನ್ನು ಹೊರ ಹಾಕಿದ್ದರಿಂದ ಸ್ಕಂದ ಎನಿಸಿರುವನು. ಕೃಷ್ಣ ಅವನಲ್ಲಿ ಸ್ಕಂದ ರೂಪದಿಂದ ಸೇರಿಕೊಂಡಿದ್ದ. ಆದ್ದರಿಂದಲೇ ಭೀಷ್ಮರು ಕೃಷ್ಣನನ್ನು ಸ್ಕಂದ ಎಂದು ಕರೆದಿರುವರು. ಹೃದಯದಲ್ಲಿ ತುಂಬಿಕೊಂಡಿದ್ದ ಭಗವದ್ಗೀತೆಯನ್ನು ಹೊರಗೆ ಹಾಕಿದುದರಿಂದಲೂ ಕೃಷ್ಣ ಸ್ಕಂದ. ಒಳಗಿರುವ ಯಾವುದನ್ನು ಹೊರ ಹಾಕಿದಾಗ, ಅದರಿಂದ ಸಮಾಜಕ್ಕೆ ಉಪಯೋಗವಿದೆಯೋ ಅಂತಹದ್ದನ್ನು ಹೊರ ಹಾಕಿದಾಗ 'ಸ್ಕಂದ' ಎನಿಸಲು ಯೋಗ್ಯನಾಗುವನು. ಕೃಷ್ಣ ತನ್ನೊಳಗಿದ್ದ ಜಗತ್ತನ್ನು ಹೊರ ಹಾಕಿದ್ದರಿಂದ, ಭಗವದ್ಗೀತೆಯನ್ನು ಹೊರ ಹಾಕಿದ್ದರಿಂದ ಸಮಾಜಕ್ಕೆ ಉಪಯೋಗವಿದೆ. ಹೀಗೆ ಉಪಯೋಗವಿರುವುದನ್ನು ಹೊರ ಹಾಕಿದ್ದರಿಂದ ಅವನು 'ಸ್ಕಂದ'. ವಾಂತಿ ಮುಂತಾದ ರೂಪದಿಂದ ನಮ್ಮ ಮೂಲಕವೂ ಹೊರಹೊಮ್ಮಿಸಲಾಗುವುದು. ಆದರೆ ಅದರಿಂದ ಸಮಾಜಕ್ಕೆ ಏನೂ ಉಪಯೋಗವಿರದ ಪ್ರಯುಕ್ತ ನಾವು 'ಸ್ಕಂದ' ಎನಿಸಲಾರೆವು.

ಕೆಲವೊಮ್ಮೆ ನಮ್ಮೊಳಗೆ ಎಷ್ಟೋ ವಿಚಾರಗಳು ಇರುವವು. ಆದರೆ ಜನರಿಗೆ ಉಪಯೋಗವಾಗುವಂತೆ ಅದನ್ನು ಹೊರ ಹಾಕಲಿಕ್ಕೆ ನಮ್ಮಿಂದ ಆಗುತ್ತಿಲ್ಲ. ನಾವು ಹೇಗೆ ಹೇಳಿದರೂ ಅವರಿಗೆ ಅದು ತಿಳಿಯದು. ಇಂತಹ ಸಂದರ್ಭದಲ್ಲಿ ನಾವು ದೇವರನ್ನು 'ಸ್ಕಂದಃ' ಎಂದು ಉಪಾಸಿಸಬೇಕು. ಆಗ ದೇವರು ಸಮಾಜಕ್ಕೆ ಉಪಯೋಗವಾಗುವಂತೆ ನಮ್ಮೊಳಗಿನ ವಿಚಾರ ಹೊರಹೊಮ್ಮುವಂತೆ ಅನುಗ್ರಹಿಸುವನು.

**೩೩೧. ಸ್ಕಂದಧರಃ – ನಾಲ್ಕು ಶಕ್ತಿಗಳನ್ನು ಹೊರಹೊಮ್ಮಿಸುವ ಸೂರ್ಯನಿಗೆ ಧಾರಕ.**

**ವಿವರಣೆ :** ತನ್ನಲ್ಲಿ ವಿಶಿಷ್ಟವಾಗಿ ಇರುವ ಬೆಳಕನ್ನು ಹೊರಹಾಕುವವನು. ತನ್ನಲ್ಲಿ ವಿಶಿಷ್ಟವಾಗಿ ಇರುವ ಬೆಳಕನ್ನು ಹೊರಹಾಕುವುದರಿಂದ ಸೂರ್ಯನೂ ಸ್ಕಂದ ಎನಿಸುವನು. ಸೂರ್ಯನಲ್ಲಿ ಬೆಳಕು ಮಾತ್ರವಲ್ಲ ಇನ್ನೂ ಕೆಲವು ಶಕ್ತಿಗಳಿವೆ. ಸೂರ್ಯನೊಳಗಿರುವ ನಾರಾಯಣನ ಆ ಶಕ್ತಿಗಳು ಸೂರ್ಯನ ಮೂಲಕ ಹೊರಹೊಮ್ಮುವವು. 'ತಾಪನೀ' - ಎಂದರೆ ಸುಡುವ ಶಕ್ತಿ , ಪಾಚಿಕಾ - ಎಂದರೆ ಪಕ್ವ ಮಾಡುವ ಶಕ್ತಿ ; ಮಾವು , ಹಲಸು ಮುಂತಾದವು ಹಣ್ಣಾಗುವುದು ಸೂರ್ಯನ ಈ ಶಕ್ತಿಯಿಂದಲೇ. ಶೋಷಣೀ - ಒಣಗಿಸುವಿಕೆ ಮತ್ತೊಂದು ಶಕ್ತಿ. ನೀರು ಮುಂತಾದುವನ್ನು ಒಣಗಿಸುವವನು ಸೂರ್ಯನೇ. 'ಪ್ರಕಾಶಿನೀ' - ಬೆಳಕು ಕೊಡುವಿಕೆ - ಹೀಗೆ ಈ ನಾಲ್ಕು ಶಕ್ತಿಗಳು ನಾವು ಸೂರ್ಯನಲ್ಲಿ ಕಾಣುವೆವು. ಆದರೆ ಶಾಸ್ತ್ರಕಾರರು

ತಿಳಿಸುವರು - **'ನೈವ ರಾಜನ್ ರವೇಃ ಶಕ್ತಿಃ'** ಅದು ಸೂರ್ಯನ ಶಕ್ತಿ ಅಲ್ಲ ಮತ್ತೆ **'ಶಕ್ತಿರ್ನಾರಾಯಣಸ್ಯ ಹಿ'** - ದೇವರು ತನ್ನ ನಾಲ್ಕು ಶಕ್ತಿಗಳನ್ನು ಸೂರ್ಯನ ಮೂಲಕ ಸಮಾಜಕ್ಕೆ ಕೊಟ್ಟ. ದೇವರು ಒಬ್ಬೊಬ್ಬರ ಮೂಲಕ ಒಂದೊಂದು ಶಕ್ತಿಯನ್ನು ಸಮಾಜಕ್ಕೆ ಕೊಡುವನು. ಎಲ್ಲ ಶಕ್ತಿಗೆ ಮೂಲ ದೇವರೇ. ತನ್ನ ಶಕ್ತಿಯನ್ನೇ ಒಬ್ಬೊಬ್ಬರ ಮೂಲಕ ಪ್ರಕಟ ಮಾಡುವನು. ಹೀಗೆ ಸೂರ್ಯನ ಮೂಲಕ ಹೊರಹೊಮ್ಮುವ ನಾಲ್ಕು ಶಕ್ತಿಗಳೂ ದೇವರದ್ದೇ ಆದರೂ ಸೂರ್ಯ ಅವುಗಳನ್ನು ಹೊರ ಹಾಕುವನು. ಆದುದರಿಂದ ಸೂರ್ಯನಿಗೆ ಹೆಸರು - 'ಸ್ಕಂದ'. ಸೂರ್ಯ ಆ ಶಕ್ತಿಗಳನ್ನು ಹೊರ ಹಾಕಲಿಕ್ಕೆ ಕಾರಣ ಭಗವಂತ. ಆದ್ದರಿಂದ 'ಸ್ಕಂದಧರ'ಭಗವಂತ. ವಿಶಿಷ್ಟಗಳಾದ ನಾಲ್ಕು ಶಕ್ತಿಗಳನ್ನು ಹೊರ ಹಾಕುವುದರಿಂದ ಸೂರ್ಯ ಸ್ಕಂದ ಎನಿಸುವನು ; ಸೂರ್ಯ ಹಾಗೆ ಆ ಶಕ್ತಿಗಳನ್ನು ಹೊರ ಹಾಕುವಂತೆ ಅವನ ಧಾರಣೆ ನಡೆಸುವವನು ದೇವರು ಸ್ಕಂದಧರ.

**೩೩೨. ಧುರ್ಯಃ – ಭಾರವನ್ನು ಹೊರುವವನು.**

**ವಿವರಣೆ** : ಧುರಂ - ಭಾರವನ್ನು ಹೊರುವವನೇ ಧುರ್ಯ. ಧೂಃ ಅಂದರೆ ಭಾರ. ಮಹಾಭಾರತ ಯುದ್ಧಕ್ಕೆ ಹೊರಡುವ ಮುನ್ನ ಕೃಷ್ಣ ಭೀಮಾರ್ಜುನರಲ್ಲಿ ಹೀಗೊಂದು ಮಾತು ಹೇಳಿದ್ದ - 'ಅಸ್ಮಿನ್ ಯುದ್ಧೇ ಭೀಮಸೇನ ತ್ವಯಿ ಭಾರಃ ಸಮಾಹಿತಃ ಧೂರರ್ಜುನೇನ ವೋಢವ್ಯಾ...'. ಕೃಷ್ಣಾಸೇವಾಧುರಂಧರ ಎಂದು ಶ್ರೀಕೃಷ್ಣನ ಸೇವೆ ಎಂಬ ಭಾರವನ್ನು ಹೊತ್ತವರು ಎಂಬ ಅರ್ಥದಲ್ಲಿ ಬಿರುದನ್ನು ನೀಡಲಾಗುವುದು.

ಭೀಷ್ಮರು ಕೃಷ್ಣನಲ್ಲಿ ಹೇಳುವರು - ನೀನು ಭೀಮಸೇನನಲ್ಲಿ ಯುದ್ಧದ ಭಾರ ಹೊರಿಸಿದ್ದರೆ, ನಾನು ಹೇಳುತ್ತೇನೆ - ಬರೇ ಪಾಂಡವರ ಸೇನೆದ್ದು ಮಾತ್ರವಲ್ಲ; ಕೌರವ ಸೇನೆದ್ದೂ - ಹೀಗೆ ಎರಡೂ ಸೇನೆಗಳ ಪೂರ್ಣ ಭಾರ ಹೊತ್ತವನು ನೀನೇ. ಉತ್ತುವ ಭಾರ - ನೊಗದ ಮೇಲೆ ಇರುವುದು. ನಾವು ನೇಗಿಲನ್ನು ಎಷ್ಟು ಎಷ್ಟು ಆಳಕ್ಕೆ ಒತ್ತುತ್ತೇವೋ ಆಗ ನೊಗ ಎತ್ತುಗಳ ಕುತ್ತಿಗೆಯನ್ನು ಜಗ್ಗುತ್ತೆ. ಆಗ ಭಾರ ಎತ್ತಿನ ಮೇಲೆ. ಹೀಗೆಯೇ ಕೃಷ್ಣ ಹೇಳುವನು ಭೀಮನಲ್ಲಿ ಯುದ್ಧದ ಇಡೀ ಭಾರ ನಿನ್ನ ಮೇಲೆ ನಿಂತಿದೆ ಎಂದು. ಆದರೆ ಭೀಷ್ಮರು ಅಂತಾರೆ ಇಡೀ ಹದಿನೆಂಟು ದಿನಗಳ ಯುದ್ಧದ ಭಾರ ಕೃಷ್ಣನ ಮೇಲೆ ಇದ್ದುದು. ಯಾಕೆಂದರೆ ಅವನೇ ಮಹಾಭಾರತ ಯುದ್ಧಕ್ಕೆ ಪ್ರತಿಜ್ಞೆ ತೊಟ್ಟಿದ್ದವನು ತಾನೇ ? ಧರ್ಮಕ್ಕೆ ಜಯತಂದು ಕೊಡುವೆನೆಂದು ಪಣ ತೊಟ್ಟವ ನೀನಾದುದರಿಂದ ನೀನೇ 'ಧುರ್ಯ' ಎನ್ನುವರು ಭೀಷ್ಮರು.

ಯುದ್ಧ ಮಾತ್ರವಲ್ಲ ; ಜಗತ್ತಿನ ಎಲ್ಲಾ ಭಾರವನ್ನೂ ಹೊತ್ತಿರುವವನು

ಭಗವಂತನೇ. ಭಗವಂತನನ್ನು 'ಧುರ್ಯಃ' ಎಂದು ಉಪಾಸನೆ ನಡೆಸಿದಲ್ಲಿ ನಮ್ಮ ಎಲ್ಲ ಕೆಲಸಗಳ ಭಾರವನ್ನೂ ಅವನೇ ಹೊರುವನು.

**೩೩೩. ವರದಃ – * ವರವನ್ನು ಕೊಡುವವನು.**

*** ವರಾಹವತಾರದಲ್ಲೂ ನರಸಿಂಹಾವತಾರದಲ್ಲೂ ವಕ್ರಗಳಾದ ಹಲ್ಲುಗಳುಳ್ಳವನು.**

ವಿವರಣೆ: ವರವನ್ನು ಕೊಡುವವನು ಎಂಬ ಒಂದು ಅರ್ಥ ಇದ್ದೇ ಇದೆ. ಇನ್ನೊಂದು ರೀತಿಯಿಂದಲೂ ಅರ್ಥ ಹೊರಡಿಸಬಹುದು. ವ+ರದ ವರದ. ವ ಅಂದರೆ ವಕ್ರವಾದ ರದ ಎಂದರೆ ಹಲ್ಲುಗಳು. ಆನೆಗೆ ಎರಡು ದಾಡೆಗಳು ಹಲ್ಲುಗಳಾಗಿ ಇರುವುದರಿಂದಲೇ ದ್ವಿರದ ಎಂಬ ಹೆಸರು ಬಂದಿದೆ. ಭಗವಂತನು ವರಾಹಾವತಾರದಲ್ಲಿ ವಕ್ರವಾದ ಎರಡು ಹಲ್ಲುಗಳು ಉಳ್ಳವ. ಹಾಗೆಯೇ ನರಸಿಂಹಾವತಾರದಲ್ಲೂ ವಕ್ರವಾದ ಹಲ್ಲುಗಳನ್ನು ಕಂಡವರಾದುದರಿಂದ ಅವನನ್ನು 'ವರದ' - ಎಂದು ಸ್ತುತಿಸುವರು. ನಮಗೂ ಕೋರೆ ದಾಡೆಗಳಿವೆ ಆದರೆ ಹೊರಗೆ ಇವೆ. ಆನೆಗಾದರೂ ಒಳಗೆ ಇವೆ ಎಂಬುದಷ್ಟೇ ವಿಶೇಷ.

**೩೩೪. ವಾಯುವಾಹನಃ – ವಾಯುದೇವನೇ ವಾಹನವಾಗಿ ಉಳ್ಳವನು.**

ವಿವರಣೆ : ಭಗವಂತನು ಪಕ್ಷಿವಾಹನನೂ ಹೌದು ; ವಾಯುವಾಹನನೂ ಹೌದು. ಪಕ್ಷಿವಾಹನನಾಗುವುದಕ್ಕಿಂತ ಮುಂಚೆ ವಾಯುವಾಹನನಾಗಿರುವನು. ಜೀವನು ಶರೀರವನ್ನು ಪ್ರವೇಶಿಸುವಾಗಲೂ, ಶರೀರದಿಂದ ಹೊರ ಹೊಮ್ಮುವಾಗಲೂ ಆ ಶರೀರದಿಂದ ದೇವರನ್ನೂ, ಜೀವನನ್ನೂ ಹೊತ್ತುಕೊಂಡು ಸಾಗುವವನು ವಾಯುದೇವ. ಒಂದು ಹೆಗಲಲ್ಲಿ ಜೀವನನ್ನೂ, ಮತ್ತೊಂದು ಹೆಗಲಲ್ಲಿ ಭಗವಂತನನ್ನೂ ಹೊರುವನು.

ರಾಮಾಯಣದಲ್ಲಿ ಒಂದು ಪ್ರಸಂಗ ಬರುವುದು. ರಾಮ ಲಕ್ಷ್ಮಣರು ಸೀತೆಯನ್ನು - ಹುಡುಕುತ್ತ ಕಿಷ್ಕಿಂಧೆಗೆ ಬಂದಾಗ ಸುಗ್ರೀವ ಅವರನ್ನು ಪರಿಚಯಿಸಿಕೊಂಡು ಬರಲು ಆಂಜನೇಯನನ್ನು ಕಳುಹಿಸಿಕೊಡುವನು. ಆಂಜನೇಯ ಅವರ ಜೊತೆಗೆ ಸಂಭಾಷಣೆ ನಡೆಸಿ ಬಳಿಕ ರಾಮಲಕ್ಷ್ಮಣರಿಬ್ಬರನ್ನೂ ತನ್ನ ಬೇರೆ ಬೇರೆ ಹೆಗಲ ಮೇಲೆ ಹೊತ್ತುಕೊಂಡು ಸುಗ್ರೀವನತ್ತ ಸಾಗುವನು. ರಾಮನಿಗೆ ಆಂಜನೇಯನ ಈ ಪ್ರವೃತ್ತಿಯನ್ನು ಕಂಡು ನಗು ಬರುವುದು. 'ಹಸನ್' - ಎಂಬ ಶಬ್ದದಿಂದ ಮಹಾಭಾರತ ತಾತ್ಪರ್ಯ ನಿರ್ಣಯದಲ್ಲಿ ಈ ವಿಚಾರವನ್ನು

ತಿಳಿಸಲಾಗಿದೆ. ವಾಯುದೇವರ ಮೂಲರೂಪಕ್ಕೆ ವಹಿಸಿಕೊಟ್ಟ ಕರ್ತವ್ಯವನ್ನು ಅವತಾರ ರೂಪದಲ್ಲೂ ನಡೆಸಲಾಗುತ್ತಿದೆ - ಎಂದು ಶ್ರೀರಾಮನ ನಗುವಿನ ಹಿನ್ನೆಲೆ. ಹೀಗೆ ಗರುಡ ಪಕ್ಷಿ ಹುಟ್ಟುವ ಮುಂಚೆ, ಭಗವಂತ ವಾಯುವಾಹನ. ವಾಯುದೇವನನ್ನು ತನ್ನ ವಾಹನವಾಗಿ ಬಳಸಿಕೊಂಡವನು. ಗರುಡ ಪಕ್ಷಿಯಾದರೂ ಕೆಲವೊಮ್ಮೆ ದೈತ್ಯಾವೇಶಕ್ಕೆ ಒಳಗಾಗಿ ದೇವರನ್ನು ಹೊರದಿರುವುದುಂಟು. ಆದರೆ ವಾಯುದೇವ ಎಂದೆಂದೂ ಭಗವಂತನನ್ನು ಒಳಗೂ ಹೊರಗೂ ಹೊತ್ತಿರುವನು. ವಾಯುದೇವ ರೂಪವಾದ ವಾಹನವನ್ನು ಬಿಟ್ಟು ಭಗವಂತ ಎಂದೂ ಇರುವುದೇ ಇಲ್ಲ.

ಉಪನಿಷತ್ತಿನಲ್ಲಿ ಹೀಗೊಂದು ಪ್ರಮೇಯದ ಪ್ರತಿಪಾದನೆ ನಡೆದಿದೆ. ದೇವರು ಸೃಷ್ಟಿ ಮಾಡುವಾಗಲೇ 'ಎಲ್ಲಿ ಅವನಿದ್ದರಷ್ಟೇ ನಾನು ಇರುವುದೋ ಅಂತಹವನನ್ನಾಗಿ ವಾಯುದೇವನನ್ನು ಸೃಷ್ಟಿ ಮಾಡುವೆನು' ಎಂದು ಆಲೋಚನೆ ಮಾಡಿ ವಾಯುದೇವನನ್ನು ಸೃಷ್ಟಿ ಮಾಡಿರುವನು. ಅವನಿದ್ದಲ್ಲೆಲ್ಲ ನಾನಿರಲೇಬೇಕು; ಆದರೆ ನಾನಿದ್ದಲ್ಲೆಲ್ಲ ಅವನಿರಬೇಕೆಂಬ ನಿಯಮವೇನೂ ಇಲ್ಲ. ಯಾಕೆಂದರೆ ಭಗವಂತನ ವ್ಯಾಪ್ತಿ ಬ್ರಹ್ಮಾಂಡಕ್ಕಿಂತ ಹೊರಗೂ ಇದೆ. ಅಲ್ಲಿ ವಾಯುದೇವ ಇಲ್ಲ. ವಾಯುದೇವ ಎಲ್ಲೆಲ್ಲಿರುವನೋ ಅಲ್ಲೆಲ್ಲ ನಾನಿರಬೇಕು. ಹೀಗೆ ಯೋಚಿಸಿದ ಭಗವಂತನಿಂದ ವಾಯುದೇವ ಸೃಷ್ಟಿಸಲ್ಪಟ್ಟವನಾದುದರಿಂದ ವಾಯುದೇವ ಇರುವಲ್ಲೆಲ್ಲ ದೇವರು ಇದ್ದೇ ಇರುವನು. ಆದುದರಿಂದಲೇ ಹಿರಿಯರು ವಾಯುದೇವನ ಮೂಲಕ ದೇವರನ್ನು ಕಾಣು ; ಹಾಗಾದರೆ ದೇವರು ತಪ್ಪುವುದೇ ಇಲ್ಲ ಎಂದು ಎಚ್ಚರಿಸಿರುವರು. ಆದುದರಿಂದ ಭೀಷ್ಮರು ವಾಯುದೇವನನ್ನು ವಾಹನನನ್ನಾಗಿ ಉಲ್ಲೇಖಿಸಿ 'ವಾಯುವಾಹನಃ' ಎಂದು ಭಗವಂತನನ್ನು ಸ್ತುತಿಸಿರುವರು.

ಶ್ರೀ ವಾದಿರಾಜ ಸ್ವಾಮಿಗಳು ತಮ್ಮ ಲಕ್ಷ್ಮೀಶೋಭಾನಪದದಲ್ಲಿ 'ಲಕ್ಷ್ಮೀನಾರಾಯಣರ ಚರಣಕ್ಕೆ ಶರಣೆಂಬೆ ಪಕ್ಷಿವಾಹನ್ನಗೆರಗುವೆ ಪಕ್ಷಿವಾಹನ್ನಗೆರಗುವೆ ಅನುದಿನ.......' ಎಂಬುದಾಗಿ ಮೊದಲ 'ಪಕ್ಷಿವಾಹನ' ಶಬ್ದದಿಂದ ಗರುಡವಾಹನ ಎಂಬ ಅರ್ಥವನ್ನು ಇಟ್ಟುಕೊಂಡಿದ್ದರೆ ಎರಡನೆಯ 'ಪಕ್ಷಿವಾಹನ' ಶಬ್ದದಿಂದ 'ವಾಯುವಾಹನ' - ಎಂಬ ಅರ್ಥವನ್ನು ಇಟ್ಟುಕೊಂಡಿರುವರು. ವಿಷ್ಣು ಸರ್ವೋತ್ತಮತ್ವದ ಪಕ್ಷವನ್ನು ಮೋಕ್ಷಾವಸ್ಥೆಯಲ್ಲೂ ಬದಲಾಗದೆಂದು ದೃಢವಾಗಿ ನಂಬಿರುವ, ಪ್ರತಿಪಾದಿಸಿರುವ ಮಧ್ವಗುರುಗಳ ಮೂಲಾವತಾರ ವಾಯುದೇವ ವಿಷ್ಣುಸರ್ವೋತ್ತಮತ್ವದ ಪಕ್ಷವುಳ್ಳ ಪ್ರಯುಕ್ತ

'ಪಕ್ಷೀ'. ಅಂತಹ ಪಕ್ಷಿಯೇ ವಾಹನವಾಗಿ ಉಳ್ಳ ವಾಯುವಾಹನನೆನಿಸಿರುವ ಭಗವಂತ 'ಪಕ್ಷಿವಾಹನ' ಎನಿಸಬಲ್ಲನು. ಈ ಅಭಿಪ್ರಾಯದಲ್ಲಿಯೇ ಭಗವಂತನನ್ನು ಲಕ್ಷ್ಮೀ ಶೋಭಾನ ಪದದ ಮೊದಲ ಮಂಗಲ ಪದ್ಯದಲ್ಲಿ ಎರಡನೆಯ 'ಪಕ್ಷಿವಾಹನ' ಶಬ್ದದಿಂದ ಸ್ತುತಿಸಲಾಗಿದೆ.

**೩೩೫. ವಾಸುದೇವಃ – ಎಲ್ಲೆಡೆ, ಯಾವಾಗಲೂ ಕ್ರೀಡಿಸುತ್ತ ಇರುವವನು.**

**ವಿವರಣೆ :** ವಸತಿ - ವಾಸ ಮಾಡುವವನು ; ಇರುವವನು - ವಾಸು. ಎಲ್ಲಿ ಇರುವವನು ? ಯಾವಾಗ ಇರುವವನು ? ಎಂಬುದರ ಬಗ್ಗೆ ಏನೂ ಉಲ್ಲೇಖ ಇಲ್ಲದಿರುವುದರಿಂದ ಎಲ್ಲ ಕಡೆ ಇರುವವನು, ಯಾವಾಗಲೂ ಇರುವವನು, ಎಂದು ಇಟ್ಟುಕೊಳ್ಳಬಹುದು.

ಆದುದರಿಂದ 'ವಾಸುದೇವ'- ಎಂಬ ಹೆಸರನ್ನಿಟ್ಟು 'ವಾಸು' ಎಂದು ಕರೆದರೂ ಅದೇನೂ ಅರ್ಥಹೀನ ಹೆಸರೆನಿಸುವುದಿಲ್ಲ. 'ರಾಮಕೃಷ್ಣ' 'ಅನಂತರಾಮ' ಮುಂತಾದ ಹೆಸರುಗಳನ್ನಿಟ್ಟು ಅರ್ಧ ಹೆಸರನ್ನು ಕರೆದರೆ ಹೇಗೋ ಹಾಗೆ. ಕೃಷ್ಣ ಎಂಬ ಹೆಸರಿನ ಬದಲಿಗೆ 'ಕಿಟ್ಟ' - ಎಂದು ಕರೆದರಷ್ಟೇ ಅದು ಅರ್ಥಹೀನ ಎನಿಸಬಲ್ಲದು.

ಹೀಗೆ ದೇವರು ಎಲ್ಲ ಕಡೆ ಯಾವಾಗಲೂ ಇರುವವನಾದರೆ ಅವನಿಗೆ ಅದೆಷ್ಟು ಶ್ರಮ ಆಗಲಿಕ್ಕಿಲ್ಲ ! - ಎಂಬ ಸಂದೇಹವನ್ನು ಪರಿಹರಿಸುವುದು - 'ದೇವಃ' - 'ದಿವು ಕ್ರೀಡಾಯಾಂ' - ಎಂಬ ಕ್ರಿಯಾಪದದಿಂದ ರೂಪುಗೊಂಡ ದೇವಶಬ್ದ ದೇವರು ಕ್ರೀಡಾರೂಪದಿಂದ ಅನಾಯಾಸವಾಗಿ ಎಲ್ಲೆಡೆ ಯಾವಾಗಲೂ ಇರುವವನೆಂದು ತಿಳಿಸಬಲ್ಲದು. ಆದುದರಿಂದ ಅವನಿಗೆ ಶ್ರಮದ ಪ್ರಸಕ್ತಿಯೇ ಇಲ್ಲ.

**೩೩೬. ಬೃಹದ್‌ಭಾನುಃ – ಅತಿದೊಡ್ಡದಾದ ತೇಜಃ ಪುಂಜ.**

**ವಿವರಣೆ:** ಭಾನು ಶಬ್ದಕ್ಕೆ ಪ್ರಕಾಶ ಎಂಬ ಅರ್ಥ. ಬೃಹತ್ ಅಂದರೆ ದೊಡ್ಡದು.**'ನ ತದ್ ಭಾಸಯತೇ ಸೂರ್ಯಃ ನ ಶಶಾಂಕಃ ನ ಪಾವಕಃ'** ಭಗವಂತನಲ್ಲಿ ಇರುವಷ್ಟು ಪ್ರಕಾಶ ಮತ್ತಾರಲ್ಲೂ ಇಲ್ಲ. ಧೃತರಾಷ್ಟ್ರನಿಗೆ ಭಗವಂತನು ತನ್ನ ವಿಶ್ವರೂಪದ ದರ್ಶನ ಮಾಡಲು ದೃಷ್ಟಿ ನೀಡಿದ್ದ. ಆದರೆ ವಿಶ್ವರೂಪದ ತೀಕ್ಷ್ಣತೇಜಸ್ಸಿನಿಂದ ಧೃತರಾಷ್ಟ್ರನಿಗೆ ಹೆಚ್ಚು ಹೊತ್ತು ಅದನ್ನು ನೋಡಲು ಆಗಲಿಲ್ಲ. ದುರ್ಯೋಧನನಿಗಂತೂ ಸ್ವಲ್ಪವೂ ನೋಡಲಾಗದೆ ಹೊರಟೇ ಹೋಗಿದ್ದ. ಅಂಬಿಕೆ, ಅಂಬಾಲಿಕೆಯರಿಗೂ ಶ್ರೀ ವೇದವ್ಯಾಸರ ವಿಲಕ್ಷಣವಾದ ತೇಜಸ್ಸನ್ನು ಕಾಣಲು ಆಗದೆ

ಕಣ್ಣು ಮುಚ್ಚಿಕೊಂಡಿದ್ದರು.

ಆದ್ದರಿಂದ ವಿಲಕ್ಷಣವಾದ, ಅತಿತೀಕ್ಷ್ಣವಾದ ದೊಡ್ಡ ತೇಜಸ್ಸು ಉಳ್ಳವನು ಭಗವಂತ. ದೇವರು ಅಂದರೆ ಪ್ರಕಾಶಪುಂಜ 'ಬೃಹದ್ಭಾನುಃ'. ಕತ್ತಲೆಗೆ ಸ್ವಲ್ಪವೂ ಅವಕಾಶ ಇಲ್ಲದ ದೊಡ್ಡ ತೇಜಸ್ಸು. ಸೂರ್ಯನ ಉದಯ ಆಯಿತೆಂದರೆ ಮನೆಯ ಒಳಗೆ ಮೂಲೆಯಲ್ಲಿ ಎಲ್ಲಾದರೂ ಕತ್ತಲು ಉಳಿದೀತು. ಆದರೆ ಭಗವಂತನ ಉದಯ ಆಯಿತೆಂದರೆ ಯಾವ ಮೂಲೆಯಲ್ಲೂ ಸ್ವಲ್ಪವೂ ಕತ್ತಲು ಉಳಿಯಲಾರದು.

ಭಗವಂತನ ಉದಯ ಎಂದರೆ ಭಗವಂತನ ಜ್ಞಾನೋದಯ. ಒಬ್ಬ ವ್ಯಕ್ತಿಯಲ್ಲಿ ಭಗವಂತನ ಉದಯ ಆಯಿತೆಂದರೆ, ಜ್ಞಾನೋದಯ ಆಯಿತೆಂದರೆ ನಾವು ಏನನ್ನು ಬಚ್ಚಿಟ್ಟರೂ ಅವನಿಗೆ ತಿಳಿಯುವುದು. ಅಂದರೆ ದೇವರ ಮುಂದೆ ಕತ್ತಲು ಇಲ್ಲ. ದೇವರ ತಿಳುವಳಿಕೆ ಎಂಬ ಪ್ರಕಾಶದ ಮುಂದೆ ಯಾವುದನ್ನೂ ಬಚ್ಚಿಡಲು ಸಾಧ್ಯ ಇಲ್ಲ. ಆದ್ದರಿಂದಲೇ ದೇವರ ಎದುರು ಹೋಗುವಾಗ ಕವಚವನ್ನು ಕಳಚಿಟ್ಟು ಹೋಗುವುದು. ಆ ಮೂಲಕ ನಿನ್ನೆದುರು ಯಾವುದನ್ನೂ ಬಚ್ಚಿಡಲು ಆಗದೆಂದು ಒಪ್ಪಿಕೊಳ್ಳುವುದು. ನಕ್ಷತ್ರ ಪ್ರಕಾಶಕ್ಕಿಂತ ಚಂದ್ರನ ಪ್ರಕಾಶ ದೊಡ್ಡದು. ಚಂದ್ರನ ಪ್ರಕಾಶಕ್ಕಿಂತ ಸೂರ್ಯನ ಪ್ರಕಾಶ ದೊಡ್ಡದು - ಹೀಗೆ ಅಳೆಯುತ್ತ ಹೋದರೆ ಯಾರ ಪ್ರಕಾಶಕ್ಕಿಂತ ದೊಡ್ಡದಾದ ಮತ್ತೊಂದು ಪ್ರಕಾಶ ಇಲ್ಲವೋ ಅಂತಹ 'ಬೃಹದ್ಭಾನುಃ' ಅತಿ ದೊಡ್ಡದಾದ ತೇಜಃ ಪುಂಜ ದೇವರು.

**೩೩೭. ಆದಿದೇವಃ – ಎಲ್ಲರಿಗಿಂತ ಮೊದಲು ಇದ್ದ, ದೇವ.**

**ವಿವರಣೆ :** 'ಬೊಮ್ಮನಾ ಲಯದಿ ಇದ್ದವಗೆ ಲಯವುಂಟೆ....'- ವಾದಿರಾಜರು ಅಂದರು - ಚತುರ್ಮುಖನ ಪ್ರಲಯ ಕಾಲದಲ್ಲೂ ಇದ್ದಾನೆ ಭಗವಂತ, ಆ ಮೇಲೆ ಅಂತೂ ಇದ್ದೇ ಇರುವನು. ಆ ಬಳಿಕ ಚತುರ್ಮುಖ ಹುಟ್ಟಿದ. ಸರಸ್ವತಿ, ರುದ್ರ - ದೇವ, ಪಾರ್ವತಿ, ಇಂದ್ರ..... ಹೀಗೆ ಒಬ್ಬೊಬ್ಬರೇ ಹುಟ್ಟಿದರು. ಇವರೆಲ್ಲ ಹುಟ್ಟಲು ಕಾರಣನಾಗಿ ಮೊದಲು ಇದ್ದವನೇ ಭಗವಂತ. ಆದುದರಿಂದಲೇ ಅವನು ಆದಿದೇವ. ಎಲ್ಲರಿಗಿಂತ ಮೊದಲು ಇರತಕ್ಕ ದೇವ. ಎಲ್ಲರಿಗೂ ಮೊದಲಿಗ.

ಜೀವನದಲ್ಲಿ ಅನಾಯಾಸವಾಗಿ ಬದುಕುವಂತಾಗಬೇಕೆಂದರೆ ಭಗವಂತನನ್ನು 'ವಾಸುದೇವ' ಎಂದೂ, ನಮ್ಮ ಮೂಲಕ ಯಾರಿಗಾದರೂ ಬೆಳಕು ಬೀರುವಂತಾಗ ಬೇಕೆಂದರೆ, 'ಬೃಹದ್ಭಾನುಃ' - ಎಂದೂ ಉಪಾಸನೆ ಮಾಡಬೇಕು. ತರಗತಿಯಲ್ಲಿ, ಸಮಾಜದಲ್ಲಿ ಮೊದಲಿಗನಾಗಿ ಮೆರೆಯ ಬೇಕೆಂದರೆ ಭಗವಂತನನ್ನು 'ಆದಿದೇವ'

ಎಂದು ಉಪಾಸಿಸೋಣ. ಶ್ರೀ ವಿಷ್ಣುತೀರ್ಥರು **'ಸಂಖ್ಯಾ ವಾ ಪೂರಣೀ ಮಾಗಾನ್ಮಧ್ವದಾಸಮಿತಿ ವ್ಯಧಾತ್'** - ಎಂದು ನಿರೂಪಿಸಿರುವಂತೆ ಹತ್ತರ ಕೂಡೆ ಹನ್ನೊಂದನೆಯುವರಾಗಿ ಶ್ರೀಮಧ್ವರ ಶಿಷ್ಯರೆಂದು ಪರಿಗಣಿತರಾಗದೆ ಮೊದಲನೆಯುವರಾಗಿಯೇ ಇದ್ದರು. ಯಾಕೆಂದರೆ ಅವರು ಭಗವಂತನನ್ನು 'ಆದಿದೇವ'- ಎಂದು ಉಪಾಸನೆ ನಡೆಸಿದ್ದರು. ಭೀಷ್ಮರೂ ಕೂಡಾ ಭಗವಂತನನ್ನು 'ಆದಿದೇವ'- ಎಂದು ಉಪಾಸನೆ ನಡೆಸಿದ್ದರ ಫಲವಾಗಿಯೇ ಸೇನಾಧಿಪತ್ಯವೇ ಮುಂತಾದ ಪ್ರಸಂಗಗಳಲ್ಲಿ ಮೊದಲಿಗರಾಗಿಯೇ ಪರಿಗಣಿತರಾಗಿದ್ದರು.

**೩೩೮. ಪುರಂದರಃ – * ರುದ್ರದೇವ ಪ್ರಯೋಗಿಸಿದ ಬಾಣದಲ್ಲಿ ಸನ್ನಿಹಿತನಾಗಿದ್ದುಕೊಂಡು ತ್ರಿಪುರಾಸುರರ ಪಟ್ಟಣಗಳನ್ನು ನಾಶಪಡಿಸಿದವನು.**
*** ಮೋಕ್ಷಕ್ಕೆ ಸಾಗುವ ಸಾಧಕರು ಬ್ರಹ್ಮರಂಧ್ರದಿಂದ ಪ್ರಾಣವನ್ನೇ ಕಳೆದುಕೊಳ್ಳುವಂತೆ ಅವರ ಚರಮ ದೇಹವನ್ನು ಸೀಳುವವನು.**

**ವಿವರಣೆ :** ಪುರ ಅಂದರೆ ಪಟ್ಟಣ. ದರ ಅಂದರೆ ಸೀಳುವಿಕೆ. ತ್ರಿಪುರಾಸುರರ ಮೂರು ಪಟ್ಟಣಗಳಿದ್ದವು ತಾನೇ ? ಅವುಗಳನ್ನು ನಾಶ ಮಾಡಿದವರು ರುದ್ರದೇವರು ಎಂದು ಸಾಮಾನ್ಯ ಪ್ರಸಿದ್ಧಿ. ಆದುದರಿಂದಲೇ 'ತ್ರಿಪುರಾಸುರಸಂಹಾರಿ' - ಎಂದು ರುದ್ರದೇವರನ್ನು ಹೊಗಳುವುದುಂಟು.

ಆದರೆ ರುದ್ರದೇವರು ಸಂಹಾರ ಮಾಡಿದ್ದೋ ? ರುದ್ರದೇವರು ಬಿಲ್ಲಿಗೆ ಜೋಡಿಸಿ ಕಳುಹಿಸಿದ ಬಾಣವೋ ? ರುದ್ರ ದೇವರಲ್ಲ. ಬಿಲ್ಲಿನ ಮೂಲಕ ಪ್ರಯೋಗಿಸಿದ ಬಾಣವೇ ತ್ರಿಪುರಗಳನ್ನು ಸಂಹಾರ ಮಾಡಿದ್ದು. ಆ ಬಾಣ ಯಾರು ಗೊತ್ತೋ ? ಶ್ರೀ ವಿಷ್ಣುವೇ ಅಲ್ಲಿ ಬಾಣವಾಗಿ ಕೂತಿದ್ದು. ಆದ್ದರಿಂದ ತ್ರಿಪುರಗಳನ್ನು ವಿಷ್ಣುವೇ ಕೊಂದದ್ದು. ರುದ್ರದೇವನಿಗೆ ಪುರಗಳನ್ನು ನಾಶ ಮಾಡುವ ತಾಕತ್ತು ಇದ್ದಿದ್ದರೆ ಅವನು ಬಿಲ್ಲು ಬಾಣಗಳನ್ನು ಬಳಸಿಕೊಳ್ಳುವ ಅವಶ್ಯಕತೆ ಇರುತ್ತಿರಲಿಲ್ಲ ತಾನೇ ? ಆದ್ದರಿಂದ ಅವನು ತ್ರಿಪುರಾಸುರರ ಪುರಗಳನ್ನು ನಾಶಮಾಡುವುದಕ್ಕೆ ಬಳಸಿಕೊಂಡಿದ್ದ ಬಾಣದಲ್ಲಿ ಸನ್ನಿಹಿತನಾಗಿ ತ್ರಿಪುಸುರರ ಪುರಗಳನ್ನು ಸಂಹಾರ ಮಾಡಿರುವ ಶ್ರೀ ಹರಿಯೇ ಪುರಂದರ.

ಈ ಅರ್ಥಕ್ಕಿಂತಲೂ ಮುಖ್ಯವಾದ ಅರ್ಥ ಮತ್ತೊಂದಿದೆ. ಪುರಂ ಅಂದರೆ ತ್ರಿಪುರಾಸುರರ ಪಟ್ಟಣಕ್ಕಿಂತಲೂ ಮುಖ್ಯವಾಗಿ ನಮ್ಮ ನಿಮ್ಮೆಲ್ಲರ ಶರೀರ. 'ಪುರಂ ಏಕಾದಶದ್ವಾರಂ.....' - ಎಂದು ಕಾಠಕೋಪನಿಷತ್ತು ಈ ಶರೀರವನ್ನು ಹನ್ನೊಂದು ದ್ವಾರಗಳಿಂದ ಕೂಡಿದ್ದನ್ನಾಗಿ ನಿರೂಪಿಸಿದೆ. ನಮಗೆ ದೇಹದಲ್ಲಿ ಎರಡು ಕಣ್ಣುಗಳು,

ಎರಡು ಕಿವಿಗಳು, ಬಾಯಿ, ಮೂಗು, ಮಲ, ಮೂತ್ರ ವಿಸರ್ಜಿಸುವ ದ್ವಾರಗಳು ಹೀಗೆ ಒಟ್ಟು ಒಂಭತ್ತು ದ್ವಾರಗಳ ಪರಿಚಯ ಇದೆ. ನಾಭಿಯೂ ಒಂದು ದ್ವಾರ . ಹಾಗೆಯೇ ಬ್ರಹ್ಮರಂಧ್ರ - ಮತ್ತೊಂದು ದ್ವಾರ. ಹೀಗೆ ಒಟ್ಟು ಹನ್ನೊಂದು ದ್ವಾರಗಳು. ಹೀಗೆ ಹನ್ನೊಂದು ದ್ವಾರಗಳನ್ನೊಳಗೊಂಡ ಶರೀರವನ್ನು 'ಪುರಂ ಏಕಾದಶದ್ವಾರಂ....' - ಎಂಬುದಾಗಿ ದೊಡ್ಡ ಪಟ್ಟಣ ಎನ್ನಲಾಗಿದೆ. ಈ ಪಟ್ಟಣವನ್ನು ಸೀಳಿ ಬ್ರಹ್ಮರಂಧ್ರದಿಂದ ಜೀವನನ್ನು ಕರೆದುಕೊಂಡು ಬ್ರಹ್ಮ ಹೊರಟನೆಂದರೆ ಆ ಜೀವ ಮತ್ತೆ ಹುಟ್ಟಬೇಕಾದ ಪ್ರಸಂಗ ಇಲ್ಲ. ಅದನ್ನೇ ಅಂತಿಮ ಮರಣ ಎನ್ನಲಾಗುವುದು. ಮೋಕ್ಷಕ್ಕೆ ಹೋಗುವ ಸಂದರ್ಭದಲ್ಲಿ ಜೀವನು ಶರೀರವನ್ನು ಸೀಳಿಕೊಂಡು ಬ್ರಹ್ಮರಂಧ್ರದ ಮೂಲಕ ಹೋಗುವನು. ಭಗವಂತ ಶರೀರವನ್ನು ಸೀಳುವನು. ಬ್ರಹ್ಮರಂಧ್ರದ ದಾರಿ ಮಾಡಿಕೊಡುವನು. ಬಳಿಕ ಜೀವ ಆ ದಾರಿಯಲ್ಲಿ ಸಾಗುವನು. ಹೀಗೆ ಆ ಪ್ರಸಂಗದಲ್ಲಿ ಶರೀರವನ್ನು ಸೀಳುವವನು ಭಗವಂತನಾದುದರಿಂದ ಅವನನ್ನು ಪುರಂದರ ಎಂದು ಕರೆಯಲಾಗುವುದು.

ಭಗವಂತನನ್ನು 'ಪುರಂದರ' ಎಂಬ ನಾಮದಿಂದ ಉಪಾಸನೆ ನಡೆಸುವ ಫಲವಾಗಿ ಬ್ರಹ್ಮರಂಧ್ರದ ಮೂಲಕ ಪ್ರಾಣದ ಉತ್ಕ್ರಮಣಕ್ಕೆ ಒಳಗಾಗ ಬಹುದಾಗಿದೆ. ಕಣ್ಣು, ಕಿವಿ, ಬಾಯಿ, ಮೂಗು ಮುಂತಾದ ದ್ವಾರಗಳಿಂದ ಪ್ರಾಣ ಹೋಗುವುದುಂಟು. ಕೆಲವೊಮ್ಮೆ ಕೆಳಗಿನ ರಂಧ್ರಗಳಿಂದಲೂ ಪ್ರಾಣ ಹೋಗುವುದು. ಕೆಳಗಿನ ರಂಧ್ರಗಳಿಂದ ಪ್ರಾಣ ಹೋದಂತೆ ಕೆಳ ಕೆಳಗಿನ ಲೋಕಕ್ಕೆ ಹೋಗುವುದೆಂದು ನಂಬಲಾಗಿದೆ. ಆದುದರಿಂದ ಬ್ರಹ್ಮರಂಧ್ರದಿಂದ ಪ್ರಾಣ ಹೋಯಿತೆಂದರೆ ಅದರಿಂದಾಗಿ ಊರ್ಧ್ವಲೋಕಕ್ಕೆ ಹೋಗಬಹುದಾಗಿದೆ. ಬ್ರಹ್ಮರಂಧ್ರದಿಂದ ಪ್ರಾಣಹೋಗ ಬೇಕೆಂದರೆ ನಮ್ಮ ಶರೀರದ ವಿದಾರಣೆ, ಸೀಳುವಿಕೆ ನಡೆಯಬೇಕು. ಅದನ್ನು ಭಗವಂತ ನಡೆಸುವನು. ಆದುದರಿಂದ ಅವನು ಪುರಂದರ.

**ಅಶೋಕಸ್ತಾರಣ ಸ್ತಾರಃ ಶೂರಃ ಶೌರಿರ್ಜನೇಶ್ವರಃ**
**ಅನುಕೂಲಃ ಶತಾವರ್ತಃ ಪದ್ಮೀ ಪದ್ಮನಿಭೇಕ್ಷಣಃ || ೩೬ ||**

**೩೩೯. ಅಶೋಕಃ – ದುಃಖರಹಿತ.**

**ವಿವರಣೆ :** ಶೋಕ ಎಂದರೆ ದುಃಖ. ಆದುದರಿಂದ ಶೋಕರಹಿತ ಎಂದರೆ ದುಃಖ ರಹಿತ. ದುಃಖ ಭಗವಂತನಲ್ಲಿ ಸ್ವಲ್ಪವೂ ಇಲ್ಲ. ಹಿಂದೆ ಇತ್ತು ಈಗ ಇಲ್ಲ ಎಂದಲ್ಲ. ಎಂದೂ ಭಗವಂತನಿಗೆ ದುಃಖದ ಲೇಶವೂ ಇಲ್ಲ. ಒಂದು ರೀತಿಯಲ್ಲಿ ಬೆಳಕು ಮತ್ತು ಕತ್ತಲೆಗಳಂತೆ ಭಗವಂತ ಮತ್ತೆ ದುಃಖ ಎನ್ನಬಹುದು. ಬೆಳಕು ಮತ್ತು ಕತ್ತಲೆ

ಹೇಗೆ ಒಟ್ಟು ಸೇರಲು ಸಾಧ್ಯವೇ ಇಲ್ಲವೋ ಹಾಗೆಯೇ ಭಗವಂತ ಮತ್ತು ದುಃಖ ಒಟ್ಟು ಸೇರಲು ಸಾಧ್ಯವೇ ಇಲ್ಲ.

ರಾಮಾವತಾರದಲ್ಲಿ **'......ದುಃಖೀ ಸೀತಾಂ ಚ ಮಾರ್ಗತೇ'** ಎಂದು ತಿಳಿಸಿರುವಂತೆ ದುಃಖಿಯಾಗಿದ್ದು ಸೀತೆಯ ಹುಡುಕಾಟದಲ್ಲಿ ತೊಡಗಿದ್ದ ತಾನೇ? **'ಲೀಲೈಷಾಸುರಮೋಹಿನೀ...'** - ಎಂದು ಅಲ್ಲಿಯೇ ಉತ್ತರವನ್ನು ನೀಡಲಾಗಿದೆ. ಕೆಟ್ಟವರಿಗೆ ದುಃಖ ಆಗಬೇಕು. ಹಾಗಾಗಬೇಕಾದರೆ **'ತಂ ಯಥಾ ಯಥಾ ಉಪಾಸತೇ ತದೇವ ಭವತಿ'** - ಎಂಬ ನಿಯಮದಂತೆ ಅವರು ದೇವರನ್ನು ದುಃಖೀ ಎಂದು ಉಪಾಸನೆ ಮಾಡಬೇಕು. ಅದಕ್ಕಾಗಿ ಭಗವಂತ ದುಃಖಿಯಂತೆ ನಟಿಸಿದ್ದನಷ್ಟೇ.

**೩೪೦. ತಾರಣಃ – ಆದಷ್ಟು ಬೇಗ ಸಂಸಾರದಿಂದ, ದುಃಖದಿಂದ ಪಾರು ಮಾಡುವವನು.**

**ವಿವರಣೆ : ತಾರಯತೀತಿ ತಾರಣಃ** – ಸ್ವಯಂ ದುಃಖರಹಿತನಾದ ಭಗವಂತನು ನಮ್ಮನ್ನು ದುಃಖದಿಂದ ದಾಟಿಸುವವನು. ತರಣ ಎಂದರೆ ದಾಟುವುದು. ತಾರಣ ಎಂದರೆ ದಾಟಿಸುವುದು. ಭಗವಂತ ತಾನು ದಾಟಿ ನಮ್ಮನ್ನು ದಾಟಿಸುವುದಲ್ಲ. ಮತ್ತೆ, ತಾನು ಯಾವಾಗಲೂ ಆ ದಡದಲ್ಲೇ ಇದ್ದುಕೊಂಡು ನಮ್ಮನ್ನೂ ಬನ್ನಿ ಎನ್ನುವನಷ್ಟೇ.

ಸಂಸಾರದಿಂದ ದಾಟಿಸುವನು, ಸಂಸಾರದ ದುಃಖದಿಂದ ದಾಟಿಸುವನು. ಸಂಸಾರದಲ್ಲಿ ದುಃಖ ತಪ್ಪುವುದೆಂದಿಲ್ಲ. ಭಗವಂತ ನಮಗೆ ಒಂದು ದುಃಖ ಕೊಟ್ಟ; ಅದನ್ನು ಮುಗಿಸಿದ. ಮತ್ತೊಂದು ದುಃಖ ಕೊಟ್ಟ. ಅದನ್ನೂ ಕೊನೆಗೊಳಿಸಿದ. ಹೀಗೆಯೇ ಸಂಸಾರದಲ್ಲಿ ಒಂದೊಂದು ದುಃಖದಿಂದ ದೂರವಾಗುವುದೇ 'ಅಯ್ಯಪ್ಪ ಆ ದುಃಖ ಹೋಯಿತು !' - ಎಂದು ಸುಖದಂತೆ ಕಾಣಿಸುವುದಷ್ಟೇ ಹೊರತು ಸುಖ ಬರುವುದೆಂದು ಇಲ್ಲ. ಒಂದು ದುಃಖ ಹೋಗಿ, ಅದರ ಸ್ಥಾನಕ್ಕೆ ಮತ್ತೊಂದು ದುಃಖ ಬರುತ್ತಿದ್ದರೂ ಸದ್ಯ 'ಈ ದುಃಖ ಹೋಯಿತಲ್ಲ ! - ಎಂದು ಅಷ್ಟಕ್ಕೇ ತೃಪ್ತಿ ಪಡುವವರು ನಾವು.

ನಾವು ಸಂಸಾರಕ್ಕೆ ಬಂದಿದ್ದೇವೆ ಎಂದ ಮೇಲೆ ಇಲ್ಲಿ ಇಷ್ಟು ದುಃಖಗಳನ್ನು ಅನುಭವಿಸಲೇಬೇಕು ; ಇಷ್ಟು ಸಮಸ್ಯೆಗಳನ್ನು ಎದುರಿಸಲೇಬೇಕು - ಎಂದಿದೆ. ಅವನ್ನೆಲ್ಲ ಆದಷ್ಟು ಬೇಗ ಬೇಗ ಅನುಭವಿಸುವಂತೆ ಮಾಡಿ ನಮ್ಮನ್ನು ಸಂಸಾರದಿಂದ, ದುಃಖದಿಂದ ದಾಟಿಸುವವನೇ 'ತಾರಣ'. ಅವನನ್ನು ಈ ಅಭಿಪ್ರಾಯದಲ್ಲಿ 'ತಾರಣ'' - ಎಂದು ಉಪಾಸನೆ ಮಾಡಿದೆವೆಂದರೆ ನಮ್ಮ ದುಃಖಗಳನ್ನೂ, ಸಮಸ್ಯೆಗಳನ್ನೂ

ಆದಷ್ಟು ಬೇಗ ಅನುಭವಿಸುವಂತೆ ಮಾಡಿ, ನಮ್ಮನ್ನು ಅವುಗಳಿಂದ ದಾಟಿಸಿ, ಅನುಗ್ರಹಿಸುವನು.

**೩೪೧. ತಾರಃ – ಸಂಸಾರವನ್ನು ದಾಟಲು ದೋಣಿ ಆಗಿ ಇರುವವನು.**

**ವಿವರಣೆ :** ಓಂಕಾರಕ್ಕೆ ತಾರ ಎಂಬ ಹೆಸರಿದೆ. ಭಗವಂತನು ನಮ್ಮ ಪಾಲಿಗೆ 'ತಾರಣ'ನಾಗಿ ನಮ್ಮನ್ನು ದಾಟಿಸುವನು. ಹಾಗೆ ದಾಟಿಸಬೇಕೆಂದರೆ 'ತಾರ' ಎನಿಸುವ ಓಂಕಾರದ, ಅಂತಹ ಓಂಕಾರವೇ ಬೀಜವಾಗಿ ಉಳ್ಳ ಶಾಸ್ತ್ರದ ಅಧ್ಯಯನ ಮಾಡಿಸಿ, ಆದರಿಂದಾಗಿ ತನ್ನ ತಿಳುವಳಿಕೆ ಬರುವಂತೆ ಮಾಡುವನು. ಅಂದರೆ ನಾವು ಸಂಸಾರವನ್ನು ದಾಟಲು 'ತಾರ'- ದೋಣಿ ತಾರ - ಓಂಕಾರ.

ಭಗವಂತ ತಾರಣ - ದಾಟಿಸುವವನು. ನಾವು ದಾಟುವವರು. ಓಂಕಾರ ತಾರ - ದೋಣಿ.

'ಅಂಬಿಗ ನಾ ನಿನ್ನ ನಂಬಿದೆ.....' ಎಂದು ದಾಸರು ಬಿನ್ನವಿಸಿಕೊಂಡಂತೆ ಭಗವಂತ ತಾರಣನಾಗಿದ್ದು, ನಾವು ಓಂಕಾರ ಎಂಬ 'ತಾರ' ರೂಪ ದೋಣಿಯ ಮೂಲಕ ದಾಟುವವರು.

'ತ್ವತ್ಪಾದಪೋತಂ ಆಶ್ರಿತಾಃ.......' - ಎಂದು ಭಾಗವತದಲ್ಲಿ ಭಗವಂತನ ಪಾದವನ್ನೇ ದೋಣಿಯನ್ನಾಗಿ ಪರಿಗಣಿಸಲಾಗಿದೆ. ಆದರಿಂದ ಓಂಕಾರ ಎಂಬ ತಾರದಲ್ಲಿ, ದೋಣಿಯಲ್ಲಿ ಕುಳಿತರೆ, ಭಗವಂತನೇ ತಾನು ಓಂಕಾರದಲ್ಲೂ ಕುಳಿತುಕೊಂಡು ಓಂಕಾರಕ್ಕೆ ನಮ್ಮನ್ನು ದಾಟಿಸುವ ಶಕ್ತಿಯನ್ನು ಕೊಟ್ಟು ನಮ್ಮನ್ನು ದಾಟಿಸುವನು.

ಆದ್ದರಿಂದ ಭಗವಂತನು ಸ್ವಯಂ ತಾನು ಅಂಬಿಗನಾಗಿ, ಓಂಕಾರ ರೂಪದ ತಾರದಲ್ಲಿ ತಾನು 'ತಾರ'ನಾಗಿ, ದೋಣಿಯಾಗಿ ಒಳಗೆ ಕುಳಿತು ನಮ್ಮನ್ನು ದಾಟಿಸುವನು. ದಾಟಬೇಕಾದರೆ ಅಂಬಿಗ ಬೇಕು ; ದಾಟುವವರು ಬೇಕು. ದೋಣಿ ಬೇಕು. ಸಂಸಾರವನ್ನು ನಾವು ದಾಟುವವರು. ನಮ್ಮೊಳಗೆ ಭಗವಂತ ಇದ್ದು ನಾವು ದಾಟುವಂತೆ ಮಾಡುವನು. ದೋಣಿಯಲ್ಲಿ ಭಗವಂತ ಸೇರಿಕೊಂಡಿದ್ದರಿಂದಲೇ ದೋಣಿ ಅಲ್ಲಿವರೆಗೆ ಸಾಗುವುದು. ದೋಣಿ ಒಡೆದರೆ, ದೋಣಿಯಲ್ಲಿ ನೀರು ಸೇರಿಕೊಂಡರೆ - ದೋಣಿ ಮುಂದುವರಿಯುವಂತಿಲ್ಲ.

ಆದರೆ ದೋಣಿಯಲ್ಲಿ ಸೇರಿಕೊಂಡ ಭಗವಂತ ದೋಣಿ ಸುರಕ್ಷಿತವಾಗಿ ಇರುವಂತೆ ನೋಡಿಕೊಳ್ಳುವನು. ಆದ್ದರಿಂದ ಭಗವಂತ ದಾಟಿಸುವವನಾಗಿ 'ತಾರಣ'

ಆದ, ದೋಣಿಯಲ್ಲಿದ್ದುಕೊಂಡು 'ತಾರ'ನಾದ. ನಮ್ಮೊಳಗೆ ಇದ್ದುಕೊಂಡು ದಾಟುವವನೂ ಆಗಿರುವನು. 'ಬಾಧ್ಯಬಾಧಕನಾಗಿ ನಿರ್ಭೀತ......' ಎಂಬ ಮಾತಿನಲ್ಲಿ ಬಾಧ್ಯನೂ - ಬಾಧಕನೂ ಅವನು - ಎಂದೇ ಸಾರಲಾಗಿದೆ. ಬಾಧಕನೂ - ಹೊಡಿಯುವವನೂ ಅವನೇ. ಬಾಧ್ಯನೂ ಹೊಡೆಸಿಕೊಳ್ಳುವವನೂ ಅವನೇ. ಬೈಯುವವನೂ ಅವನೇ. ಬೈಸಿಕೊಳ್ಳುವವನೂ ಅವನೇ. ನಮಗೆ ಎದುರಾಳಿ ಹೊಡೆದಾಗ, ಆ ಹೊಡೆತವನ್ನು ತಿನ್ನುವ ತಾಕತ್ತು ನಮಗೆ ಎಲ್ಲಿಂದ ಬಂತು ? 'ಬಾಧ್ಯ'ನಾಗಿ ದೇವರು ಒಳಗೆ ಇರುವುದರಿಂದಲೇ ನಮಗೆ ಆ ಬಗೆಯ ತಾಕತ್ತು ಬರುವುದು. ಆದ್ದರಿಂದ ಏಟು ತಿನ್ನುವ ತಾಕತ್ತು ನೀಡಿ 'ಬಾಧ್ಯ' ಎನಿಸುವನು. ಸಂಸಾರದಲ್ಲಿ ದಾಟಿಸುವವನಾಗಿ 'ತಾರಣ' ಎನಿಸಿರುವ ಭಗವಂತನು ಸಂಸಾರವನ್ನು ದಾಟಲು ದೋಣಿಯಂತೆ ಇದ್ದು 'ತಾರ'ನೂ ಆಗಿರುವನು.

**೩೪೨. ಶೂರಃ – ಸಂಸಾರ ದಾಟಿಸುವುದನ್ನು ಪೂರ್ಣಗೊಳಿಸುವವನು.**

ವಿವರಣೆ : ಶೂರ ಎಂದರೆ ಪರಾಕ್ರಮಿ. ಸಂಸಾರವನ್ನು ದಾಟಿಸುವುದು ಸುಲಭದ ಕೆಲಸ ಅಲ್ಲ. ತುಂಬ ಸಾಮರ್ಥ್ಯ ಬೇಕಾಗುವುದು. ಯಾಕೆಂದರೆ ಕೆಲವೊಮ್ಮೆ ಪ್ರವಾಹದ ಎದುರಾಗಿ ಸಾಗಬೇಕಾಗುವುದು. ಪ್ರವಾಹದ ಏರಿಳಿತಗಳಿಗೆ ಅನುಗುಣವಾಗಿ ದೋಣಿಯನ್ನು ನಡೆಸಿಕೊಂಡು ಹೋಗಬೇಕಾಗುತ್ತದೆ. ನಮಗೆ ಆ ದಡವನ್ನು ಸೇರಬೇಕಾಗಿದೆ. ನೀರು ರಭಸವಾಗಿ ಹರಿಯುತ್ತಿದೆ. ಆದ್ದರಿಂದ ನೇರವಾಗಿ ಸಾಗಲು ಸಾಧ್ಯವಿಲ್ಲ. ಪ್ರವಾಹದ ವೇಗ ಎಲ್ಲಿ ಕಡಿಮೆ ಇರುವುದೋ ಆ ಕಡೆಗೆ ದೋಣಿಯನ್ನು ಹಾಯಿಸುತ್ತ ಉಪಾಯದಿಂದ ಸಾಗಿಸಬೇಕು. ಹೀಗಾಗಬೇಕಾದರೆ ಶೌರ್ಯ ಬೇಕು. ಶೌರ್ಯ ಎಂದರೆ ಅರಬ್ಧಾಂತಗಾಮಿತ್ವ. ಅವರನ್ನು ನಂಬಿಕೊಂಡು ನಾವು ದೋಣಿಯಲ್ಲಿ ಕುಳಿತರೆ ನಮ್ಮನ್ನು ಆಚೆಯ ದಡಕ್ಕೆ ಸೇರಿಸುವುದು ಖಂಡಿತ ಎಂದು ಖಾತ್ರಿ ಇದ್ದಾಗ ಮಾತ್ರ ಆ ದೋಣಿಯನ್ನು ಹತ್ತುವೆವು. ದೋಣಿಯನ್ನು ಹತ್ತುವಾಗ 'ನನಗೆ ಈಜಲು ಬರುವುದಿಲ್ಲ'- ಎಂದರೂ 'ತೊಂದರೆ ಇಲ್ಲ'- ದೋಣಿಯಿಂದ ದಾಟಿಸುವಾಗ ಏನಾದರೂ ಅನಾಹುತವಾದರೂ ಅದರಿಂದ ಪಾರು ಮಾಡಿ ಆ ದಡ ತಲುಪಿಸುವೆನೆಂದು ಆಶ್ವಾಸನೆ ನೀಡುವವನನ್ನೇ 'ಶೂರ '-ಎಂದು ಕರೆಯಲಾಗುವುದು. ಆರಂಭ ಮಾಡಿದ ಕೆಲಸವನ್ನು ಕೊನೆಗೊಳಿಸುವವನನ್ನೇ ಶೂರ ಎಂದು ಕರೆಯಲಾಗುತ್ತಿದ್ದು, ಸಂಸಾರವನ್ನು ದಾಟಿಸುವಲ್ಲೂ ಈ ರೀತಿಯಾಗಿ ನಡೆದುಕೊಳ್ಳುವವ 'ಶೂರ'- ಎಂದು ಕರೆಸಿಕೊಳ್ಳುವುದರಲ್ಲಿ ಔಚಿತ್ಯವಿದೆ.

ಭೀಷ್ಮರು ಕೃಷ್ಣನನ್ನು 'ಶೂರ'- ಎಂದು ಸ್ತುತಿಸಿರುವುದರಿಂದ ಸಂಸಾರವನ್ನು

ದಾಟಿಸಲು ಆರಂಭಿಸಿರುವ ಕಾರ್ಯವನ್ನು ಮಧ್ಯದಲ್ಲಿ ಬಿಟ್ಟು ಬಿಡದೆ ಪೂರ್ಣಗೊಳಿಸುವವನು ಎಂದು ದೃಢವಾಗುವುದರಿಂದ ಸರಿಯಾಗಿ ಈಜಲು ಬಾರದವರೂ ನಾವು ಭಗವಂತನನ್ನು 'ತಾರಣ'ನನ್ನಾಗಿ ಆಶ್ರಯಿಸಬಹುದಾಗಿದೆ.

**೩೪೩. ಶೌರಿಃ – ಶೂರ ಎನಿಸುವ ಮುಖ್ಯಪ್ರಾಣನ ಮೂಲಕ ಸಮಾಜದಲ್ಲಿ ಪರಿಚಿತನಾದವನು**

**ವಿವರಣೆ :** ಶೂರನ ಮಗ ಶೌರಿ. ಶೂರ ಎಂದರೆ ದೇವರು ಎಂದು ನೋಡಿದ್ದೇವೆ. ಇನ್ನೊಬ್ಬನಿರುವನು. ಅವನೇ ಮುಖ್ಯಪ್ರಾಣ. ಅವನ ಹೆಸರೇ ಮಗನಿಗೆ ಅಪ್ಪನ ನೇರ ಮಗನಾದುದರಿಂದ ಬಂದಿದೆ. ಅನಂತರದ ಮಕ್ಕಳಿಗೆ ಆ ಹೆಸರು ಬರಬೇಕಾಗಿಲ್ಲ. **'ಜ್ಯೇಷ್ಠಭ್ರಾತಾ ಪಿತೃಸಮಃ'**- ಎಂದು ಶಾಸ್ತ್ರಕಾರರು ಮೊದಲ ಮಗನಿಗೆಯೇ ಪ್ರಾಶಸ್ತ್ಯವನ್ನು ನೀಡಿರುವರು. ಆದ್ದರಿಂದ ದೇವರ ಹಿರಿಯ ಮಗನಾದ ವಾಯುದೇವ ದೇವರ 'ಶೂರ' ಎಂಬ ಹೆಸರನ್ನು ಪಡೆದುಕೊಂಡಿರುವನು. ದೇವರಂತೆ ವಾಯುದೇವನೂ ತಾನು ಆರಂಭಿಸಿದ ಕೆಲಸವನ್ನು ಪೂರ್ಣಗೊಳಿಸುವನು. ಆದ್ದರಿಂದಲೂ ಶೂರ ಎನಿಸಿರುವನು. ಅಂತಹ ಶೂರ ಎನಿಸಿರುವ ವಾಯುದೇವನ ಮಗ ದೇವರು. ದೇವರ ಮಗ ವಾಯುದೇವ. ಅಂದರೆ ಯಾರನ್ನು ತಂದೆ ಎಂದು ಕರೆಯುವುದು ? ಯಾರನ್ನು ಮಗ ಎಂದು ಕರೆಯುವುದು ? ತಂದವನನ್ನು ತಂದೆ ಎಂದು ಕರೆಯುವುದು. ಬಂದವನನನ್ನು ಮಗ ಎಂದು ಕರೆಯುವುದು. ಆದ್ದರಿಂದಲೇ ದಾಸರು ಹೇಳಿರುವುದು 'ನೀ ತಂದೆ ನಾ ಬಂದೆ'. ಅಪ್ಪನಿಗೆ ತಂದೆ ಎಂಬ ಹೆಸರೇ ತಂದವನು ಎಂಬ ಅಭಿಪ್ರಾಯದಲ್ಲಿಯೇ. ವಾಯುದೇವನನ್ನು ಭಗವಂತ ಸೃಷ್ಟಿ ಮಾಡಿ ತಂದ. ಆದುದರಿಂದ ವಾಯುದೇವನಿಗೆ ಭಗವಂತ ತಂದೆ. ಆದರೆ ನಮಗೆ ದೇವರನ್ನು ಕೊಟ್ಟವ ; ದೇವರು ಹೇಗೆ ಇದ್ದಾನೆಂದು ಪರಿಚಯಿಸಿಕೊಟ್ಟವ ವಾಯುದೇವ. ಆಚಾರ್ಯತ್ರಯರ ಪೈಕಿ ಶಂಕರಾಚಾರ್ಯರು ಇನ್ನೂ ತನಗೆ ದೇವರು ಕಂಡಿಲ್ಲ ಎಂದರೆ ರಾಮಾನುಜಾಚಾರ್ಯರು ನನಗೆ ದೇವರು ಕಾಣುವುದೇ ಇಲ್ಲ ಎಂದರು. ಮಧ್ವರಾದರೂ '........ನಮೋ ನಮಸ್ತೇ' - ನಿನಗೆ ನಮಸ್ಕಾರ ಎನ್ನುವುದರ ಮೂಲಕ ತಾವು ದೇವರನ್ನು ಕಂಡಿರುವೆವೆಂದು ಒಪ್ಪಿಕೊಂಡಿರುವರು. ಆದ್ದರಿಂದಲೇ ಅವರು ಸಮಾಜಕ್ಕೆ ದೇವರನ್ನು ಪರಿಚಯಿಸಿಕೊಟ್ಟಿರುವರು. ದೇವರ ತಂದೆ ಎನಿಸಿರುವರು. **'ಯಸ್ತಾ ವಿಜಾನಾತ್ ಸ ಪಿತುಷ್ಪಿತಾಸತ್.....'** - ಎಂಬ ಋಗ್ವೇದದ ಮಂತ್ರವೊಂದು ಸಾರುತ್ತಿರುವಂತೆ ಜಗತ್ತಿಗೆ ತಂದೆಯಾದ ಭಗವಂತನ ಸರಿಯಾದ ಪರಿಚಯವನ್ನು ನೀಡುವ ಮೂಲಕ ಜಗತ್ತಿನಲ್ಲಿ ಅವನನ್ನು

ತಂದವನಾಗಿರುವುದರಿಂದ ಭಗವಂತನಿಗೆ ಮಧ್ವರೂಪದ ವಾಯುದೇವ ತಂದೆಯಾದ. ಹೀಗೆ 'ಶೂರ' ಎನಿಸುವ ವಾಯುದೇವನಿಂದ ಸಮಾಜಕ್ಕೆ ಕಾಣಿಸಿಕೊಂಡ ಪ್ರಯುಕ್ತ ಅವನ ಮಗನಂತೆ ಇರುವ ಭಗವಂತನು ಶೌರಿ. ಭಗವಂತನ ದರ್ಶನ ಶೂರ ಎನಿಸುವ ಮುಖ್ಯಪ್ರಾಣನ ಮೂಲಕವೇ ಆಗಬೇಕು. ಇಲ್ಲದಿದ್ದಲ್ಲಿ ಅಂಬಿಕೆ, ಅಂಬಾಲಿಕೆಯರಿಗೆ ಹೇಗೆ ವೇದವ್ಯಾಸರು ವಿಕೃತ ರೂಪದಿಂದ ಕಂಡರೋ ಹಾಗೆ ಭಗವಂತನ ಯದ್ವಾ ತದ್ವಾ ದರ್ಶನ ಆದೀತು. ಹಾಗಾಗದೆ ತಿಳಿಯಾದ, ಸಾತ್ವಿಕವಾದ ದೇವರ ದರ್ಶನ ಆಗಬೇಕೆಂದರೆ ಶೂರ ಎನಿಸುವ ಮುಖ್ಯಪ್ರಾಣನ ಮೂಲಕವೇ ಆಗಬೇಕು. ಭಗವಂತನನ್ನು 'ಶೌರಿ' ಎಂದು ಉಪಾಸನೆ ಮಾಡಿದೆವೆಂದರೆ ಅವನು ನಮಗೆ ಮುಖ್ಯಪ್ರಾಣನ ಮೂಲಕ ಸಾತ್ವಿಕ ದರ್ಶನ ದೊರಕುವಂತೆ ಅನುಗ್ರಹಿಸುವನು.

**೩೪೪. ಜನೇಶ್ವರಃ – * ಜನಗಳಿಗೆ ಒಡೆಯ.**

*** ತಾನು ಹುಟ್ಟದೆ ಉಳಿದವರನ್ನೆಲ್ಲ ಹುಟ್ಟಿಸುವವನು.**

**ವಿವರಣೆ :** ಜನಗಳಿಗೆ ಈಶ್ವರ ಎಂಬುದು ಒಂದು ಅರ್ಥವಾದರೆ, ಮತ್ತೊಂದು ಅರ್ಥ ಜ + ನೇಶ್ವರ - ಎಂದು ಪದಚ್ಛೇದವನ್ನು ಒಪ್ಪಿಕೊಂಡು ಹೊರಡಿಸಬಹುದಾದ ಅರ್ಥ. ಜನಯತೀತಿ ಜಃ - ನಮ್ಮನ್ನೆಲ್ಲ ಸೃಷ್ಟಿ ಮಾಡುವವನು. ತಂದೆ ತಾಯಂದಿರನ್ನು ಮಾಧ್ಯಮವಾಗಿ ಇಟ್ಟುಕೊಂಡು ನಮ್ಮನ್ನು ಭೂಮಿಗೆ ತರುವ ಮೂಲಕ ನಮಗೆ ಕಾಣಿಸದ ತಂದೆ ಆಗಿರುವವನು. ಹೀಗೆ ನಮಗೆ ತಂದೆ ಅವನಾದರೆ, ಅವನನ್ನು ಹುಟ್ಟಿಸಿದವರು ಯಾರೂ ಇಲ್ಲ ಅವನಿಗೆ ಒಡೆಯರು ಯಾರೂ ಇಲ್ಲ **'ನ ಈಶ್ವರಃ ಯಸ್ಯ ಸಃ ನೇಶ್ವರಃ'** ಭಗವಂತ ತಾನು ಹುಟ್ಟುವುದಿಲ್ಲ ; ಆದರೆ ನಮ್ಮನ್ನು ಹುಟ್ಟದೆ ಬಿಡುವುದಿಲ್ಲ. ದಾಸರು ಈ ಅಭಿಪ್ರಾಯದಿಂದಲೇ ಹಾಡಿರುವರು - ಸ್ವದೇಶಿ ನಾನು; ಪರದೇಶಿ ನೀನು; ಯಾಕೆಂದರೆ ನನಗೆ ಜನಕ ನೀನು. ಆದರೆ ನಿನಗೆ ಯಾರೂ ಜನಕರಿಲ್ಲ. ನನಗೆ ಗುರು ನೀನು, ಆದರೆ ನಿನಗೆ ಯಾರೂ ಗುರು ಇಲ್ಲ. ಜನೇಶ್ವರ ಎಂಬ ಹೆಸರು ಈ ವಿಚಾರವನ್ನೇ ಸಾರುತ್ತಿದೆ.

**೩೪೫. ಅನುಕೂಲಃ–* ಎಲ್ಲರಿಗೂ ಅವರವರಿಗೆ ಬೇಕಾಗುವಂತೆ ವ್ಯವಹರಿಸಿ ಅನುಕೂಲನಾಗಿರುವವನು.**

*** ಜಲಾಶಯಗಳ ದಡಗಳಿಂದ ಹತ್ತು ಮಾರುಗಳಷ್ಟು ದೂರದವರೆಗೆ ತನ್ನ ಸನ್ನಿಧಾನವನ್ನು ಹೊಂದಿರುವವನು.**

**ವಿವರಣೆ :** ದೇವರು ನಮಗೆ ಯಾವಾಗಲೂ ಅನುಕೂಲನಾಗಿಯೇ ಇರುವವನು ಎಂಬುದು ಪ್ರಸಿದ್ಧವಾದ ಅರ್ಥ. ಆಗುವುದೆಲ್ಲ ಒಳ್ಳೆಯದಕ್ಕೇ ಎಂಬ ಒಂದು

ಸಿದ್ಧಾಂತ ಇದೆ. ಅದರ ಹಿನ್ನೆಲೆಯಲ್ಲೇ ಅನುಕೂಲಃ ಎಂದು ಹೊರಟಿದೆ. ಭಗವಂತ ಎಲ್ಲರಿಗೂ ಅನುಕೂಲನಾಗಿರುವನು. ದುರ್ಯೋಧನನಿಗೂ ಅನುಕೂಲ. ಭೀಮಸೇನನಿಗೂ ಅನುಕೂಲ. ದುರ್ಯೋಧನ ನರಕ ಹೊಂದಲು ಅನುಕೂಲನಾಗಿದ್ದರೆ ಭೀಮಸೇನ ಸ್ವರ್ಗ ಹೊಂದಲು ಅನುಕೂಲನಾಗಿರುವನು. ಇಬ್ಬರಿಗೂ ಅನುಕೂಲನಾಗಿ ವ್ಯವಹರಿಸುವನು.

ಹೀಗೆ ಎಲ್ಲರಿಗೂ ಅನುಕೂಲನಾಗಿರುವವನು ಎಂಬುದು ಸಾಮಾನ್ಯವಾದ ಅರ್ಥ.

ಮತ್ತೊಂದು ಅರ್ಥ - ಬಾವಿಯೇ ಮುಂತಾದ ಜಲಾಶಯಗಳ ದಡಕ್ಕಿಂತ ಹತ್ತು ಮಾರು ದೂರದವರೆಗೆ ಸನ್ನಿಧಾನವನ್ನು ಹೊಂದಿರುವವನು. ಬಾವಿ, ಕೊಳ, ಸರೋವರ, ನದಿ, ಸಮುದ್ರ - ಇವುಗಳ ನೀರಿನಲ್ಲಿ ಮಾತ್ರವಲ್ಲ ; ಅವುಗಳ ದಡಕ್ಕಿಂತ ಹತ್ತು ಮಾರು ದೂರದವರೆಗೂ ಜಲಾಭಿಮಾನಿಗಳ ಹಾಗೂ ಭಗವಂತನ ಸನ್ನಿಧಾನವಿರುವುದು. ಹೇಗೆ '....ಅತ್ಯತಿಷ್ಠದ್ದಶಾಂಗುಲಮ್' ಎಂದಿರುವಂತೆ ಜ್ಞಾನಿಯ ಶಿರಸ್ಸಿಗಿಂತ ಹತ್ತು ಅಂಗುಲಗಳಷ್ಟು ದೂರದವರೆಗೂ ದೇವರ ಸನ್ನಿಧಾನವಿರುವುದೋ ಹಾಗೆ. ಆದುದರಿಂದಲೇ ಕೊಳ ಮುಂತಾದ ಜಲಾಶಯಗಳ ನೀರಿನ ಮೇಲೆಯೇ ಹೇಗೆ ಉಗುಳುವುದೇ ಮುಂತಾದವನ್ನು ನಡೆಸಬಾರದೋ ಹಾಗೆಯೇ ಜಲಾಶಯಗಳ ದಡಗಳ ಹತ್ತು ಮಾರು ದೂರದವರೆಗೂ ಉಗುಳುವುದೇ ಮುಂತಾದವನ್ನು ನಡೆಸಬಾರದು. ವೃತ್ರಾಸುರನ ಸಂಹಾರದಿಂದಾಗಿ ಬಂದ ಬ್ರಹ್ಮಹತ್ಯೆಯ ಒಂದು ಅಂಶವನ್ನು ದೇವೇಂದ್ರ ನೀರಿಗೆ ಕೊಡಲು ಅದಕ್ಕೆ ಪ್ರತಿಯಾಗಿ ಅದಕ್ಕೆ ಒಂದು ವರವನ್ನು ನೀಡುವನು. ನೀರಿನಲ್ಲಿ ಯಾರಾದರೂ ಉಗುಳುವುದೇ ಮುಂತಾದುವನ್ನು ನಡೆಸಿದರೆ ಆ ಬ್ರಹ್ಮಹತ್ಯೆ ಅವರ ಪಾಲಿಗೆ ಹೋಗಲಿ ಎಂದು. ಆದುದರಿಂದ ಜಲಾಶಯಗಳ ನೀರಿನಲ್ಲಿ ಉಗುಳುವುದೇ ಮುಂತಾದುವನ್ನು ಎಸಗಿದರೆ ಹೇಗೆ 'ಬ್ರಹ್ಮಹತ್ಯೆ' ಸಂಭವಿಸುವುದೋ ಹಾಗೆಯೇ ದಡದ ಹತ್ತು ಮಾರು ಜಾಗದೊಳಗೆ ನಡೆಸಿದರೂ ಆ ಪಾಪ ಸಂಭವಿಸುವುದರಿಂದ ಆ ಅಪರಾಧ ಎಸಗಲ್ಪಡದಂತೆ ಜಾಗರೂಕರಾಗಿರಬೇಕು.

**೩೪೬ ಶತಾವರ್ತಃ – * ನೂರಾರು ಅವತಾರಗಳನ್ನು ಹೊಂದಿರುವವನು.**

*** ನೂರು ಮಂದಿ ದೇವತೆಗಳಿಗೆ ಯಜ್ಞಗಳಲ್ಲಿ ಸೋಮಪಾನಕ್ಕೆ ಆವೃತ್ತಿ ಉಳ್ಳಂತೆ ಮಾಡಿರುವವನು.**

**ವಿವರಣೆ :** ಶತ ಎಂದರೆ ನೂರಾರು. ಆವರ್ತಃ ಆವರ್ತನೆ ಉಳ್ಳವನು. ಭಗವಂತನು

**'......ದಶರೂಪಿಣೇ ಶತಸಹಸ್ರರೂಪಿಣೇ....'** ಎಂದಿರುವಂತೆ ನೂರಾರು ಆವರ್ತನಗಳು, ಅವತಾರಗಳು ಉಳ್ಳವನು.

ಇದೊಂದು ಸಾಮಾನ್ಯ ಅರ್ಥವಾದರೆ ಮತ್ತೊಂದು ವಿಶೇಷಾರ್ಥ ಹೀಗಿದೆ- ನಮ್ಮಲ್ಲಿ ಒಂಭತ್ತು ಕೋಟಿ ; ಮೂವತ್ತ ಮೂರು ಕೋಟಿ ಹೀಗೆ ಅನೇಕ ಕೋಟಿ ದೇವತೆಗಳು ಇರುವರು. ಅವರಲ್ಲಿ ನೂರು ಮಂದಿಗಳನ್ನು ಮಾತ್ರ ಸೋಮಪಾನಾರ್ಹರನ್ನಾಗಿ ಮಾಡಿರುವನು. ಒಂಭತ್ತು ಕೋಟಿ ಸಂಖ್ಯೆಯ ದೇವತೆಗಳಲ್ಲಿ ನೂರು ದೇವತೆಗಳನ್ನಷ್ಟೇ ಆಯ್ಕೆ ಮಾಡಿ ಯಾರ್‍ಯಾರು ಎಲ್ಲೆಲ್ಲಿ ಯಜ್ಞ ಮಾಡುವರೋ ಅಲ್ಲಿಗೆ ಆವೃತ್ತರಾಗಬೇಕು ; ಹೋಗಿ ಸೋಮರಸ ಪಾನ ಮಾಡಬೇಕೆಂದು ತಿಳಿಸುವನು.

ವಾಯುದೇವ, ಬೃಹಸ್ಪತಿ, ಋಭು, ದ್ಯುಲೋಕಾಭಿಮಾನಿ, ಪೃಥಿವೀಲೋಕಾಭಿಮಾನಿ, ಎಂಟು ವಸುಗಳು, ಏಕಾದಶ ರುದ್ರರು, ದ್ವಾದಶ ಆದಿತ್ಯರು, ನಲ್ವತ್ತೊಂಭತ್ತು ಮರುತ್ತು ದೇವತೆಗಳು, ಹತ್ತು ವಿಶ್ವೇದೇವತೆಗಳು, ಮೂರು ಪಿತೃ ದೇವತೆಗಳು, ಎರಡು ಅಶ್ವನೀ ದೇವತೆಗಳು - ಹೀಗೆ ಕೋಟಿ ಕೋಟಿ ದೇವತೆಗಳಲ್ಲಿ ಕೇವಲ ನೂರು ದೇವತೆಗಳಿಗೆ ಯಜ್ಞಗಳಲ್ಲಿ ಸೋಮಪಾನಾರ್ಹತೆಯನ್ನು ನೀಡಲಾಗಿದೆ.

ಈ 'ಶತ'ರನ್ನು ಆವೃತ್ತಿ ಮಾಡುವವನು ; ನೀವೇ ಯಜ್ಞಗಳಲ್ಲಿ ಮತ್ತೆ ಮತ್ತೆ ಬರಬೇಕು. ಒಂದು ಸಂದರ್ಭದಲ್ಲಿ ಒಂದು ದೇವತೆಗಳು ; ಮತ್ತೊಂದು ಸಂದರ್ಭದಲ್ಲಿ ಮತ್ತೊಂದು ದೇವತೆಗಳು ಹೀಗೆ ಅಲ್ಲ. ಶತಸಂಖ್ಯೆಯ ಆ ದೇವತೆಗಳೇ ಆವೃತ್ತರಾಗಬೇಕು. ಹೀಗೆ ನೂರು ಮಂದಿ ದೇವತೆಗಳನ್ನು ಆಯ್ಕೆ ಮಾಡಿ ಅವರಿಗೆ ಸೋಮರಸದ ಆಹುತಿ ದೊರಕುವಂತೆ ಮಾಡಿದ್ದರಿಂದ 'ಶತಾವರ್ತ' ಎನಿಸುವನು.

**೩೪೭. ಪದ್ಮೀ – ನಮ್ಮ ಸ್ವರೂಪವನ್ನು ಬಲ್ಲವನು.**

**ವಿವರಣೆ :** ಪದ್ - ಸ್ವರೂಪ, ಮ - ತಿಳುವಳಿಕೆ, ಈ - ಉಳ್ಳವನು. ಆದ್ದರಿಂದ ಸ್ವರೂಪದ ತಿಳುವಳಿಕೆವುಳ್ಳವನೇ 'ಪದ್ಮೀ'.

ದೊಡ್ಡವರ ಸ್ವರೂಪವನ್ನು ಪಾದಶಬ್ದದಿಂದ ಕರೆಯಬೇಕೆಂಬ ನಿಯಮ. 'ಶ್ರೀಪಾದರು ಬಂದರು' - ಮುಂತಾದ ವ್ಯವಹಾರಗಳಲ್ಲಿ ಪಾದಶಬ್ದದಿಂದಲೇ ಸ್ವರೂಪವನ್ನು ಕರೆಯಲಾಗಿದೆ. ಆದುದರಿಂದ ಪದ್ ಎಂದರೆ ಸ್ವರೂಪ. ಮ ತಿಳುವಳಿಕೆ, ಈ ಉಳ್ಳವನು. ಹೀಗೆ ಪ್ರತಿಯೊಬ್ಬರ ಸ್ವರೂಪದ ತಿಳುವಳಿಕೆವುಳ್ಳವನೇ

'ಪದ್ಮೀ'. ಎಲ್ಲರ ಜಾತಕ ದೇವರ ಕೈಯಲ್ಲಿದೆ ಎಂಬ ಆಶಯ.

ತಂದೆ ತಾಯಂದಿರು ತುಂಬ ಬೈಯಲು ತೊಡಗಿದರೆಂದರೆ 'ನಾನು ಏನು ಅಂತ ನಿಮಗೆ ಗೊತ್ತು ; ಹೀಗಿದ್ದರೂ ಬೈಯುತ್ತೀರಲ್ಲ !' ಎಂದು ಅವರಲ್ಲಿ ಕೇಳಿಕೊಳ್ಳುವಂತೆ ದೇವರಲ್ಲೂ ನಾನು ಏನು ಎಂಬುದು ನಿನಗೆ ಚೆನ್ನಾಗಿ ಗೊತ್ತಿದೆ. ನನ್ನ ಸ್ವರೂಪ ಒಳ್ಳೆಯದಾಗಿರುವುದರಿಂದ ಯಾರದ್ದೋ ದುಷ್ಟಭಾವದಿಂದಾಗಿ ಹೀಗೆ ನಡೆಯಿತು ; 'ಮತ್ತಃ ಪ್ರವೃತ್ತಂ, ನ ಮಯಾ ಕೃತಮ್' - ನನ್ನ ಮೂಲಕ ನಡೆದದ್ದು ಹೌದು ; ಆದರೆ ನಾನು ಮಾಡಿದ್ದಲ್ಲ - ಎಂದು ವಿನಂತಿಸಿಕೊಂಡಾಗ ನಮ್ಮ ಸ್ವರೂಪವನ್ನು ಬಲ್ಲ ಭಗವಂತನು ನಮ್ಮನ್ನು ಕ್ಷಮಿಸುವನು. ಆದುದರಿಂದ ನಮ್ಮ ಸ್ವರೂಪವನ್ನು ಬಲ್ಲವನೆಂಬ ಅಭಿಪ್ರಾಯದಲ್ಲಿ ಅವನನ್ನು 'ಪದ್ಮೀ' - ಎಂದು ಉಪಾಸಿಸೋಣ.

**೩೪೮. ಪದ್ಮನಿಭೇಕ್ಷಣಃ – ಸ್ವರೂಪಕ್ಕನುಗುಣಾಗಿ ತನ್ನ ದರ್ಶನವನ್ನು ಕೊಡುವವನು.**

**ವಿವರಣೆ:** ಪದ್ಮ ಎಂದರೆ ಸ್ವರೂಪದ ತಿಳುವಳಿಕೆ ಎಂದು ಕಂಡಿದ್ದೇವೆ. ನಿಭ ಎಂದರೆ ಸದೃಶವಾದ. ಈಕ್ಷಣ ಅಂದರೆ ನೋಟ ಉಳ್ಳವನು. ಯಾರ ಯಾರ ಸ್ವರೂಪ ಹೇಗೋ ಅವರವರ ಸ್ವರೂಪಕ್ಕೆ ಅನುಗುಣವಾಗಿ ಅವರವರನ್ನು ನೋಡಿಕೊಳ್ಳುವವನು 'ಪದ್ಮನಿಭೇಕ್ಷಣ'. ನಮ್ಮ ನಮ್ಮ ಸ್ವರೂಪಕ್ಕೆ ಅನುಗುಣವಾಗಿ ಭಗವಂತನ ದೃಷ್ಟಿ. ಸ್ವರೂಪ ಒಂದು ರೀತಿ ; ಭಗವಂತನ ದೃಷ್ಟಿ ಮತ್ತೊಂದು ರೀತಿ ಎಂದು ಇಲ್ಲ. ನಮಗೆ ಎಷ್ಟು ಕಾಣಲಿಕ್ಕೆ ನಮ್ಮ ಹಣೆಯಲ್ಲಿ ಬರೆದಿದೆಯೋ ಅಷ್ಟು ನಮಗೆ ಅವನು ಕಾಣಿಸಿಕೊಳ್ಳುವನು. ಅದಕ್ಕಿಂತ ಜಾಸ್ತಿಯೂ ಇಲ್ಲ ; ಅದಕ್ಕಿಂತ ಕಮ್ಮಿಯೂ ಇಲ್ಲ. ಆದುದರಿಂದ ಸ್ವರೂಪಕ್ಕೆ ಅನುಗುಣವಾಗಿ ತನ್ನ ದರ್ಶನ ಕೊಡುವವನು 'ಪದ್ಮನಿಭೇಕ್ಷಣ'.

ಭೀಷ್ಮರು ಯೋಚಿಸ್ತಾರೆ - ಕೊನೆಯ ಕಾಲದಲ್ಲಿ ನನ್ನ ಪಕ್ಕದಲ್ಲಿ ನಿನ್ನನ್ನು ಕುಳ್ಳಿರಿಸಿ ಸ್ತುತಿಸುವಂತಹದ್ದು ನನ್ನ ಹಣೆಯಲ್ಲಿ ಬರೆದಿದೆ. ಅದಕ್ಕನುಗುಣವಾಗಿ ನನಗೆ ದರ್ಶನ ನೀಡುತ್ತಿರುವಿ. ಮುಂದೆ ಕೊನೆಯ ಕ್ಷಣಕ್ಕೆ ನಿನ್ನನ್ನು ಕಾಣದ ಸ್ಥಿತಿ ನನ್ನ ಹಣೆಯಲ್ಲಿ ಬರೆದಿದೆ. ಅದಕ್ಕನುಗುಣವಾಗಿ ಆ ಕ್ಷಣದಲ್ಲಿ ನನ್ನ ಮನಸ್ಸಿಗೆ ಕಾಣಿಸಿಕೊಳ್ಳುವುದಿಲ್ಲ.

**ಪದ್ಮನಾಭೋಽರವಿಂದಾಕ್ಷಃ ಪದ್ಮಗರ್ಭಃ ಶರೀರಭೃತ್ |**
**ಮಹರ್ದ್ಧಿರ್ಋದ್ಧೋ ವೃದ್ಧಾತ್ಮಾ ಮಹಾಕ್ಷೋ ಗರುಡಧ್ವಜಃ || || ೩೮ ||**

**೩೪೯. ಪದ್ಮನಾಭಃ – * ಹೊಕ್ಕುಳಲ್ಲಿ ಪದ್ಮವನ್ನು ಹೊಂದಿರುವವನು.**
*** ವೇದ ಪ್ರತಿಪಾದ್ಯರಲ್ಲಿ ಶ್ರೇಷ್ಠನಾಗಿರುವವನು.**

ವಿವರಣೆ : ಪದ್ಯಂತೇ ಇತಿ ಪದ್ಮಾಃ - ವೇದಗಳಿಂದ ಹೇಳಲ್ಪಡುವವರು. ವೇದಗಳು ಯಾರನ್ನು ಹೇಳುವವು ? ದೇವತೆಗಳನ್ನು. ಆದ್ದರಿಂದ ವೇದಗಳಿಂದ ಹೇಳಲ್ಪಡುವ ಪ್ರಯುಕ್ತ ಪದ್ಮಗಳು ದೇವತೆಗಳು. ಅವರೆಲ್ಲರಿಗಿಂತ ಶ್ರೇಷ್ಠನಾದ ನಾರಾಯಣ ಪದ್ಮನಾಭ. ನಾಭಿ ಎಂದರೆ ಶ್ರೇಷ್ಠ.

ವೇದ ದೇವತೆಗಳನ್ನು ಹಾಗೆಯೇ ಹೇಳುತ್ತಿಲ್ಲ, ಮತ್ತೆ ಅವರಲ್ಲಿರುವ ಲೋಪದೋಷಗಳನ್ನು ತಿಳಿಸಿ, ಅಂತಹ ಲೋಪದೋಷಗಳನ್ನು ಸ್ವಲ್ಪ ಮಟ್ಟಿಗೆ ಕಳಕೊಂಡ ಅವರಿಗಿಂತ ಉತ್ತಮರಾದವರನ್ನೂ ತಿಳಿಸುವುದು. ಇಂದ್ರನನ್ನು ತಿಳಿಸುವುದು ; ಅವನಿಗಿಂತಲೂ ಸ್ವಲ್ಪ ವಾಸಿಯಾದವಳೆಂದು ಪಾರ್ವತಿಯನ್ನು ತಿಳಿಸುವುದು ; ಅವಳಿಗಿಂತಲೂ ವಾಸಿಯಾದವನೆಂದು ರುದ್ರನನ್ನು ತಿಳಿಸುವುದು. ಅವನಿಗಿಂತಲೂ ಸ್ವಲ್ಪ ವಾಸಿಯಾದವಳೆಂದು ಭಾರತೀ ಮತ್ತು ಸರಸ್ವತಿಯರನ್ನು ತಿಳಿಸುವುದು ; ಅವರಿಗಿಂತಲೂ ವಾಸಿಯಾದವರೆಂದು ವಾಯು ಮತ್ತು ಚತುರ್ಮುಖರನ್ನು ತಿಳಿಸುವುದು ; ಅವರಿಗಿಂತಲೂ ವಾಸಿಯಾದವಳನ್ನಾಗಿ ಲಕ್ಷ್ಮೀದೇವಿಯನ್ನು ತಿಳಿಸಿ, ಅವಳಿಗಿಂತಲೂ ವಾಸಿಯಾದವನನ್ನಾಗಿ ನಾರಾಯಣನನ್ನು ತಿಳಿಸುವುದು. ಅಂತಹ ನಾರಾಯಣನಿಗಿಂತಲೂ ವಾಸಿಯಾದವನೊಬ್ಬ ಇಲ್ಲವೇ ಇಲ್ಲ. ಆದುದರಿಂದ ವೇದಪ್ರತಿಪಾದ್ಯ ದೇವತೆಗಳಿಗಿಂತೆಲ್ಲ ಶ್ರೇಷ್ಠನಾಗಿರುವವನು 'ಪದ್ಮನಾಭ'. ನಾಭಿ ಎಂದರೆ ಶ್ರೇಷ್ಠ ಎಂದರ್ಥ. ಗಾಡಿ, ರಥ - ನಿಂತಿರುವುದು ಅದರ ಚಕ್ರದ ಮಧ್ಯದಲ್ಲಿರುವ 'ನಾಭಿ'ಯಲ್ಲಿ. ಆದುದರಿಂದಲೇ ಆ ನಾಭಿ ಬಿತ್ತೆಂದರೆ ಇಡೀ ಗಾಡಿಯೇ ಬೀಳುವುದು. ಹೀಗೆ ನಾಭಿಗೆ ತುಂಬ ಪ್ರಾಶಸ್ತ್ಯ ಇದೆ.

ನಮ್ಮಲ್ಲೂ 'ನಾಭಿ'ಗೇ ಪ್ರಾಶಸ್ತ್ಯ. ಏನು ಮಾತನಾಡುವುದಾದರೂ ನಾಭಿಯಿಂದಲೇ ಹೊರಡಬೇಕಾದುದು. ಮಗು ಹುಟ್ಟಿದಾಕ್ಷಣ ನಾಭಿಯ ಬಳ್ಳಿಯನ್ನೇ ತುಂಡರಿಸಿ ಬೇರ್ಪಡಿಸುವ ಕ್ರಮ.

ವೇದಗಳು ಇಂದ್ರಾದಿ ದೇವತೆಗಳನ್ನು ಭಾರೀ ಭಾರೀ ಹೊಗಳುವವು. ಆದರೆ ಸಮಗ್ರ ವೇದಗಳಿಗೆ ನಾಭಿಯ ಸ್ಥಾನದಲ್ಲಿ ಇರುವವನು ಭಗವಂತ. ವೇದಪ್ರತಿಪಾದ್ಯ

ದೇವತೆಗಳಲ್ಲೆಲ್ಲ 'ನಾಭಿ'ಯಾಗಿ, ಶ್ರೇಷ್ಠನಾಗಿ ಇರುವವನು ಭಗವಂತ.

ಇತರ ದೇವತೆಗಳನ್ನು ಪ್ರತಿಪಾದಿಸುವ ವೇದದಲ್ಲಿ 'ನೀನು ಯಾತಕ್ಕಾಗಿ ಇತರ ದೇವತೆಗಳನ್ನು ಪ್ರತಿಪಾದಿಸುತ್ತಿರುವಿ' - ಎಂದು ವಿಚಾರಿಸಿದರೆ ಅದು ಹೇಳುವುದು 'ನಾನು ಭಗವಂತನ ತಿಳುವಳಿಕೆ ಬರುವುದಕ್ಕಾಗಿ ಇತರ ದೇವತೆಗಳನ್ನು ಪ್ರತಿಪಾದಿಸುತ್ತಿರುವೆನು. ಹಾಗಾದರೆ ವೇದಪ್ರತಿಪಾದ್ಯ ದೇವತೆಗಳಲ್ಲೆಲ್ಲ ನಾಭಿಯಂತೆ ಶ್ರೇಷ್ಠನಾಗಿರುವವನು ಭಗವಂತ. ಆದುದರಿಂದಲೇ ಅವನು ಪದ್ಮನಾಭ.

ಹೊಕ್ಕುಳಲ್ಲಿ ಪದ್ಮವನ್ನು ಹೊಂದಿರುವವನೆಂಬುದು ಸಾಮಾನ್ಯವಾದ ಅರ್ಥವಾದರೆ ವೇದಪ್ರತಿಪಾದ್ಯರಲ್ಲಿ ಶ್ರೇಷ್ಠನಾಗಿರುವವನೆಂಬುದು ವಿಶಿಷ್ಟವಾದ ಅರ್ಥ.

**೩೫೦. ಅರವಿಂದಾಕ್ಷಃ – * ದೋಷಗಳನ್ನು ಹೊಂದಿದ ದುಷ್ಟರನ್ನು ಚೆನ್ನಾಗಿ ನಾಶ ಮಾಡುವವನು.**

*** ಕಮಲದ ಎಸಳಿನಂತೆ ಕಣ್ಣುಗಳುಳ್ಳವನು.**

**ವಿವರಣೆ :** ಅರ ಎಂದರೆ ದೋಷಗಳು ; ವಿಂದ - ಎಂದರೆ ದೋಷಗಳನ್ನು ಹೊಂದಿರುವವರು. ಆಕ್ಷಃ - ಅಂತಹವರನ್ನು ಚೆನ್ನಾಗಿ ನಾಶ ಮಾಡುವವನು - ಆ ಸಮ್ಯಕ್ ಕ್ಷಪಯತೀತಿ ಆಕ್ಷಃ.

ದೋಷಗಳನ್ನು ಸ್ವಾಭಾವಿಕವಾಗಿ ಹೊಂದಿರುವವರು ದುಷ್ಟರೇ. ಹೊರತು ಶಿಷ್ಟರಾಗುವುದಿಲ್ಲ. ಶಿಷ್ಟರಲ್ಲಿ ಕೆಲವು ದೋಷಗಳು ಕಾಣಿಸಿಕೊಂಡರೂ ಅವು ತಾತ್ಕಾಲಿಕಗಳಷ್ಟೇ. ಆದ್ದರಿಂದ 'ಅರವಿಂದ'- ಎಂದರೆ ದುಷ್ಟರು. ಅವರನ್ನು 'ಆಕ್ಷಃ' - ಚೆನ್ನಾಗಿ ನಾಶಮಾಡುವವನು. ದುಷ್ಟಮರ್ದನ ಎನಿಸಿರುವ ಭಗವಂತನೇ ಅರವಿಂದಾಕ್ಷ.

ಕಮಲದಂತೆ ಕಣ್ಣು ಉಳ್ಳವ ಎಂಬ ಪ್ರಸಿದ್ಧಾರ್ಥ ಇದ್ದೇ ಇದೆ. ಕಮಲದ ಎಸಳಿನಂತೆ ಕಣ್ಣುಗಳಿರುವವೇ ಹೊರತು ಕಮಲದಂತೆ ದುಂಡಗಾಗಿ ಇರುವುದೆಂದಿಲ್ಲ. ನರಸಿಂಹನನ್ನು ಸ್ತುತಿಸುವಾಗ 'ಉರುವೃತ್ತನೇತ್ರಂ' - ಎಂದು ದುಂಡಗಾದ ದೊಡ್ಡ ಕಣ್ಣುಗಳುಳ್ಳವನೆನ್ನುವೆವಾದರೂ ರಾಮ ಕೃಷ್ಣ ಮುಂತಾದ ರೂಪಗಳಿಗೆ ಸಂಬಂಧಿಸಿದಂತೆ 'ಅರವಿಂದದಲಾಯತಾಕ್ಷ' - ಕಮಲದ ಎಸಳಿನಂತೆ ದೀರ್ಘವಾದ ಕಣ್ಣುಗಳುಳ್ಳವನೆಂದೇ ಆಗಬೇಕು. ಆ ಆಶಯದಲ್ಲಿಯೇ 'ಅರವಿಂದಾಕ್ಷ' ಎಂದು ಕರೆಯಲಾಗುವುದಷ್ಟೇ.

**೩೫೧. ಪದ್ಮಗರ್ಭಃ – ಪದ್ಮರೂಪದಲ್ಲಿರುವ ಜಡಪ್ರಕೃತಿಯನ್ನು ಸೃಷ್ಟಿಯ ಪ್ರಾರಂಭದಲ್ಲಿ ತನ್ನ ಉದರದಿಂದ ಹೊರಹೊಮ್ಮಿಸುವವನು.**

**ವಿವರಣೆ :** ಪದ್ಮ ಎಂದರೆ ಕಮಲ ; ಅದನ್ನು ಗಿರತೀತಿ ಗರ್ಭಃ - ಹೊರ - ಹೊಮ್ಮಿಸುವವನು.

ಪ್ರಲಯಕಾಲದಲ್ಲಿ ಭಗವಂತನ ಉದರದೊಳಗೆ ಜಡಪ್ರಕೃತಿ ನೀರಿನ ರೂಪದಲ್ಲಿ ಇರುವುದು. ಪ್ರಲಯ ಕಾಲ ಮುಗಿದು ಸೃಷ್ಟಿ ಪ್ರಾರಂಭವಾಗಬೇಕೆಂದಾಗ ಭಗವಂತನನು ರಜೋಽಭಿಮಾನಿನಿ 'ಭೂ' ದೇವಿಗೆ ಆದೇಶ ನೀಡುವವನು. ಅವಳು ವಾಯುದೇವನಿಗೆ ಆಜ್ಞಾಪಿಸುವಳು. ವಾಯುದೇವ ಗಾಳಿ ಬೀಸಿ ಆ ನೀರು ಒಣಗಿ ಪದ್ಮದ ರೂಪ ತಾಳುವಂತೆ ಮಾಡುವನು. ಹೇಗೆ ನೀರನ್ನು ಹಿಮದ ಗಡ್ಡೆಯ ತುಂಡನ್ನಾಗಿ ಮಾಡಿ ಅದಕ್ಕೆ ಸಕ್ಕರೆ, ಬಣ್ಣ ಇತ್ಯಾದಿಗಳನ್ನು ಸಂಯೋಜಿಸಿ ತಿನ್ನುವ ತಿಂಡಿಯನ್ನಾಗಿ ಮಾಡಲಾಗುವುದೋ ಹಾಗೆ.

ಹೀಗೆ ಒಣಗಿದ ಪದ್ಮದ ರೂಪದಲ್ಲಿರುವ ಜಡಪ್ರಕೃತಿಯನ್ನು ಭಗವಂತನು ಹೊಕ್ಕುಳ ಮೂಲಕ ಹೊರಹೊಮ್ಮಿಸುವನು. ಆದುದರಿಂದಲೇ ಅವನು 'ಪದ್ಮಗರ್ಭ'. ಚತುರ್ಮುಖನ ಪ್ರಲಯ ಮುಗಿದು ಸೃಷ್ಟಿ ಪ್ರಾರಂಭವಾಗುವಾಗೆಲ್ಲ ಹೀಗೆ ಪದ್ಮವನ್ನು ಹೊರಹೊಮ್ಮಿಸುವನು. ಆದುದರಿಂದ ಇದುವರೆಗೆ ಅಂತಹ ಎಷ್ಟು ಪದ್ಮಗಳನ್ನು ಹೊರಹೊಮ್ಮಿಸಿರುವನೋ ! ಮುಂದೆ ಅದೆಷ್ಟು ಅಂತಹ ಪದ್ಮಗಳನ್ನು ಹೊರಹೊಮ್ಮಿಸಲಿರುವನೋ ! ಹೀಗೆ ಅನಂತಾನಂತ ಸಂಖ್ಯೆಯಲ್ಲಿ ಜಗತ್ತಿನ ರೂಪದ ಪದ್ಮಗಳನ್ನು ಹೊರಹೊಮ್ಮಿಸುವುದರಿಂದ ಭಗವಂತನು 'ಪದ್ಮಗರ್ಭ'ನು.

**೩೫೨. ಶರೀರಭೃತ್ – ತನ್ನ ಶರೀರದಂತಿರುವ ಅವ್ಯಕ್ತ ಮುಂತಾದ ಇಪ್ಪತ್ನಾಲ್ಕು ತತ್ವಗಳನ್ನು ಧರಿಸಿಕೊಂಡಿರುವವನು.**

**ವಿವರಣೆ :** ಶರೀರಧಾರಣೆ ಮಾಡಿದವನು ಶರೀರಭೃತ್. ಇಪ್ಪತ್ನಾಲ್ಕು ತತ್ವಗಳೇ ಭಗವಂತನ ಶರೀರ. ಅವ್ಯಕ್ತ, ಮಹತ್ತತ್ವ, ಅಹಂಕಾರತತ್ವ, ಬುದ್ಧಿತತ್ವ, ಪಂಚಭೂತಗಳು, ಪಂಚ ತನ್ಮಾತ್ರೆಗಳು, ಏಕಾದಶ ಇಂದ್ರಿಯಗಳು – ಈ ಇಪ್ಪತ್ನಾಲ್ಕು ತತ್ವಗಳೇ ಭಗವಂತನ ಶರೀರ. ನಮ್ಮ ಪ್ರೇರಣೆಯಿಂದ ಯಾವುದು ಆಚೆ ಈಚೆ ಓಡಾಡುವುದೋ ಅದನ್ನು ಶರೀರ ಎಂದು ಕರೆಯಲಾಗುವುದು. ಅವ್ಯಕ್ತ ಮುಂತಾದ ಇಪ್ಪತ್ನಾಲ್ಕು ತತ್ವಗಳು ಭಗವಂತನ ಪ್ರೇರಣೆಗಳೊಳಗಾಗಿ ತಮ್ಮ ತಮ್ಮ

ಕೆಲಸ ಮಾಡುವವು. ಆದರಿಂದ ಆ ಇಪ್ಪತ್ನಾಲ್ಕು ತತ್ವಗಳು ಭಗವಂತನ ಶರೀರ.

**'ಮಹಾಭೂತಾನ್ಯಹಂಕಾರೋ ಬುದ್ಧಿರವ್ಯಕ್ತಮೇವ ಚ | ಇಂದ್ರಿಯಾಣಿ ದಶೈಕಂ ಚ ಪಂಚ ಚೇಂದ್ರಿಯಗೋಚರಾಃ ........ ಏತತ್ ಕ್ಷೇತ್ರಂ ......'** - ಎಂದಿರುವಂತೆ ಅವ್ಯಕ್ತ ತತ್ವವೇ ಮುಂತಾದ ಇಪ್ಪತ್ನಾಲ್ಕು ತತ್ವಗಳನ್ನು ಶರೀರ ಎಂದು ಕರೆಯಲಾಗಿದೆ. ಎಲ್ಲ ವಸ್ತುಗಳ ಸೃಷ್ಟಿಗೆ ಕಾರಣಗಳಾಗಿರುವ ಈ ತತ್ವಗಳನ್ನು ತನ್ನ ಶರೀರದಂತೆ ಮಾಡಿಕೊಂಡು ಅವುಗಳನ್ನೂ ಧರಿಸಿಕೊಂಡಿರುವ 'ಶರೀರಭೃತ್' ಭಗವಂತ.

**೩೫೩. ಮಹರ್ದ್ಧಿಃ – ತುಂಬ ಅಭಿವೃದ್ಧಿ, ಬೆಳವಣಿಗೆ ಉಳ್ಳವನು.**

**ವಿವರಣೆ :** ಋದ್ಧಿ ಎಂದರೆ ಅಭಿವೃದ್ಧಿ. ಮಹ ಎಂದರೆ ಬಹಳ. ಬಹಳ ಅಂದರೆ ಅವಧಿ ಇಲ್ಲದಷ್ಟು. ಅಷ್ಟೂ ಅಭಿವೃದ್ಧಿ ಉಳ್ಳವನು ಭಗವಂತ. ಲಕ್ಷ್ಮೀದೇವಿಯಿಂದ ಪ್ರಾರಂಭಿಸಿ ಪ್ರತಿಯೊಬ್ಬರ ಬೆಳವಣಿಗೆಗೂ ಒಂದು ಅವಧಿ ಇದೆ. ಲಕ್ಷ್ಮೀದೇವಿ ಚತುರ್ಮುಖನ ಬೆಳವಣಿಗೆಗಿಂತ ಕೋಟಿ ಪಟ್ಟು ಅಧಿಕ ಅಭಿವೃದ್ಧಿ ಉಳ್ಳವಳು. ಹೀಗೆ ಅವಳ ಅಭಿವೃದ್ಧಿಗೂ ಅವಧಿ ಇದೆ. ಆದರೆ ಭಗವಂತನ ಬೆಳವಣಿಗೆಗೆ ಮಾತ್ರ ಇಷ್ಟೇ ಎಂದು ತೀರ್ಮಾನ ಇಲ್ಲ. ಚತುರ್ಮುಖನಿಗೂ ಲಕ್ಷ್ಮಿಗೂ ಒಂದು ಕೋಟಿಯಷ್ಟು ಅಂತರ. ಆದರೆ ಲಕ್ಷ್ಮಿಗೂ ನಾರಾಯಣನಿಗೂ ಅಂತರ ಇಷ್ಟೇ ಎಂದು ಹೇಳುವಂತಿಲ್ಲ. ಆಗ 'ಅಬ್ಬ ಭಾರೀ ಅಭಿವೃದ್ಧಿ ಉಳ್ಳವ!' ಎಂದಷ್ಟೇ ಹೇಳಲಾಗುವುದು. ಉಳಿದೆಲ್ಲರ ಅಭಿವೃದ್ಧಿಯಲ್ಲಿ 'ಅಸ್ವಾತಂತ್ರ್ಯ' - ಎಂಬ ದೋಷ ಸೇರಿಕೊಂಡಿರುವುದರಿಂದ ಅವರ ಅಭಿವೃದ್ಧಿಯನ್ನು ಇಷ್ಟು ಇಷ್ಟು ಎಂದು ಹೇಳಲು ಬರುವುದು. ಆದರೆ ದೇವರ ಅಭಿವೃದ್ಧಿಯಲ್ಲಿ, ಬೆಳವಣಿಗೆಯಲ್ಲಿ ಅಸ್ವಾತಂತ್ರ್ಯ ಸೇರಿಕೊಳ್ಳದಿರುವುದರಿಂದ ದೇವರ ಅಭಿವೃದ್ಧಿ ...... 'ಮಹಾ' - ತುಂಬ ಎಂದಷ್ಟೇ ಹೇಳಲಾಗುವುದು.

**೩೫೪. ಋದ್ಧಃ – ಯಥಾರ್ಥ ಜ್ಞಾನ ಕಾರಣಗಳಾದ ವೇದಗಳನ್ನು ಧರಿಸಿರುವವನು.**

**ವಿವರಣೆ :** ಋತ್ - ಋತ - ಯಥಾರ್ಥ. ಯಥಾರ್ಥಗಳಾದ ವೇದಗಳು. ಇದ್ದದ್ದನ್ನು ಇದ್ದ ಹಾಗೆಯೇ ಹೇಳುವ ವೇದಗಳು ಋತಗಳು. ವೇದಗಳು ಎಂದೂ ಸುಳ್ಳು ಮಾತನಾಡುವುದಿಲ್ಲ. ವೇದದಲ್ಲಿ ಹೇಳಿದೆಯಾ ; ಹಾಗಾದರೆ ಅದು ಉಂಟು ಎಂದೇ ಅರ್ಥ. ಆದುದರಿಂದ ಋತ - ಸತ್ಯ ; ಸತ್ಯವನ್ನಾಡುವ ವೇದಗಳು. ಅಂತಹ 'ಋತ್'ಗಳನ್ನು 'ಧ' - ಎಂದರೆ ಧರಿಸಿದವನು ಋದ್ಧ. ವೇದವನ್ನು ಧರಿಸಿದವನು

ಯಾರು ? ಭಗವಂತ. ನಮಗೆ ನಿಮಗೆ ಅಲ್ಪ ಸ್ವಲ್ಪ ವೇದ ಬರುವುದಾದರೆ ಸಮಗ್ರ ವೇದವನ್ನು ಬಲ್ಲವ ಭಗವಂತ. ಹಯಗ್ರೀವನನ್ನು **'ನಸ್ತಃ ಮುಖಾದಪಿ ನಿರಂತರಂ ಉದ್ಗಿರಂತಂ ವಿದ್ಯಾಃ.....'** ಮೂಗು ಮತ್ತೆ ಬಾಯಿಯಿಂದ ಸಮಸ್ತ ವೇದಗಳನ್ನು ವಮನ ಮಾಡುತ್ತಿದ್ದಾನೆ ಎಂದು ಚಿಂತನೆ ಮಾಡಬೇಕು. ಹಾಗೆ ಚಿಂತನೆ ಮಾಡಿ ಜಪ ಮಾಡಿದರೆ ನಮಗೆ ವಿದ್ಯೆ ಫಲಿಸುವುದು.

ಹೀಗೆ ಸಮಸ್ತ ವಿದ್ಯೆಗಳ ಆಕರಗಳಾದ ವೇದಗಳನ್ನು ಧಾರಣೆ ಮಾಡಿರುವ ಹಯಗ್ರೀವ 'ಋದ್ಧ'.

**೩೫೫. ವೃದ್ಧಾತ್ಮಾ – * ಧರ್ಮವನ್ನೇ ಹೇಳುವ ಸ್ವರೂಪವುಳ್ಳವನು.**

**ವಿವರಣೆ :** ಋದ್ಧಾತ್ಮಾ ಅಲ್ಲ ; ವೃದ್ಧ + ಆತ್ಮಾ ವೃದ್ಧಾತ್ಮಾ. ವೃದ್ಧ ಎಂದರೆ ಮುದುಕ ಎಂಬ ಅರ್ಥ ಅಲ್ಲ. **'ನ ತೇ ವೃದ್ಧಾಃ ಯೇ ನ ವದಂತಿ ಧರ್ಮಂ.....'** - ಎಂದು ಮಹಾಭಾರತದಲ್ಲಿ ಧರ್ಮವನ್ನು ಹೇಳದವರು ವೃದ್ಧರಲ್ಲ ಎಂದು ಹೇಳುವ ಮೂಲಕ ಧರ್ಮವನ್ನು ಹೇಳುವವರೇ ವೃದ್ಧರೆಂದು ಸೂಚಿಸಲಾಗಿದೆ. ಆತ್ಮಾ ಎಂದರೆ ವ್ಯಕ್ತಿ. ಆದುದರಿಂದ ವೃದ್ಧಾತ್ಮಾ ಎಂದರೆ ಧರ್ಮವನ್ನೇ ಹೇಳುವವನು ಎಂಬ ಅರ್ಥ.

ಎಂದೂ ಅಧರ್ಮವನ್ನು ಹೇಳುವವನೇ ಅಲ್ಲ. ಅವನ ಬಾಯಿಯಿಂದ ಮಾತು ಬಂತೋ ಅದು ಏನೇ ಆಗಿರಲಿ ಅದು ಧರ್ಮವೇ. ಅಶ್ವತ್ಥಾಮ ಬದುಕಿದ್ದಾಗಲೇ 'ಅಶ್ವತ್ಥಾಮಾ ಹತಃ...'- ಎಂಬ ಮಾತು ಕೂಡಾ, 'ನಾನು ಮಣ್ಣನ್ನು ತಿನ್ನಲಿಲ್ಲ'- ಎಂಬ ಮಾತು ಕೂಡಾ ಧರ್ಮವೇ. ಧರ್ಮಾಧರ್ಮ ವ್ಯವಸ್ಥೆಯೇ ಅವನಿಗೆ ಸೇರಿದ್ದು.

ಭೀಷ್ಮರು ತಮ್ಮ ಎಂಟುನೂರು ವರ್ಷಗಳ ದೀರ್ಘ ಬದುಕಿನಲ್ಲಿ ಶ್ರೀಕೃಷ್ಣನ ಯಾವುದ್ಯಾವುದು ಗುಣ, ಮಹಿಮೆ, ಲೀಲೆಗಳನ್ನು ಕಂಡಿದ್ದರೋ, ಅನುಭವವಿಸಿದ್ದರೋ ಅವೆಲ್ಲವನ್ನೂ ವಿಷ್ಣುಸಹಸ್ರನಾಮಾರೂಢವಾಗಿ ಅನುಸಂಧಾನ ನಡೆಸುತ್ತಿರುವರು.

**೩೫೬. ಮಹಾಕ್ಷಃ – * ದೊಡ್ಡದಾದ ಕಣ್ಣುಗಳುಳ್ಳವನು.**

*** ಭಾರೀ ಪ್ರಮಾಣದ ನಾಶಕ್ಕೆ ಕಾರಣನಾಗಿರುವವನು.**

**ವಿವರಣೆ :** ಮಹಾ - ದೊಡ್ಡದಾದ ಅಕ್ಷ - ಕಣ್ಣುಗಳುಳ್ಳವನು.

ಇದೊಂದು ಪ್ರಸಿದ್ಧವಾದ ಅರ್ಥವಾದರೆ, ಇದರ ಜೊತೆಗೆ ಮತ್ತೊಂದು ಅರ್ಥ - ಮಹಾ - ಭಾರೀ ಕ್ಷ - ನಾಶ ಮಾಡುವವನು. ಅವನಷ್ಟು ನಾಶಮಾಡುವವರು

ಮತ್ತೊಬ್ಬರಿಲ್ಲ. ಚತುರ್ಮುಖನೂ ನಾಶ ಮಾಡುವನು. ಆದರೆ ತನ್ನನ್ನೂ, ತನ್ನ ಲೋಕವನ್ನೂ ಬಿಟ್ಟು ನಾಶ ಮಾಡುವನಷ್ಟೇ. ಭಗವಂತ ಹಾಗಲ್ಲ, ಯಾವುದೆಲ್ಲವನ್ನು ತಾನು ಸೃಷ್ಟಿ ಮಾಡಿರುವನೋ ಅವೆಲ್ಲವನ್ನೂ ನಾಶ ಮಾಡುವನು.

ಮುಕ್ತರನ್ನೂ ಒಂದು ಬಗೆಯ ನಾಶಕ್ಕೆ ಒಳಪಡಿಸುವನು. ಮುಕ್ತರು ಸ್ಥಿತಿ ಕಾಲದಲ್ಲಿ ಮೋಕ್ಷದಲ್ಲೂ, ಇತರ ಲೋಕಗಳಲ್ಲೂ ತಿರುಗಾಡುತ್ತಿದ್ದರೆ ಪ್ರಲಯಕಾಲದಲ್ಲಿ ಅಂತಹ ಮುಕ್ತರನ್ನೂ ತನ್ನ ಉದರದೊಳಗೆ ಸೇರಿಸಿಕೊಳ್ಳುವನು. ಲಕ್ಷ್ಮೀದೇವಿಯನ್ನೂ ಪ್ರಲಯಕಾಲದಲ್ಲಿ ನೀರನ್ನಾಗಿ ಮಾರ್ಪಡಿಸಿ, ತಾನು ಅದರಲ್ಲಿ ಮಗುವಾಗಿ ಇರುವನು. 'ಬೊಮ್ಮನ ಪ್ರಲಯದಲ್ಲಿ.....' ಎಂದು ಪ್ರಲಯದಲ್ಲಿ ಚತುರ್ಮುಖನ ಲೋಕಗಳೂ ಮುಳುಗುವವೆಂದು ಸೂಚಿಸಲಾಗಿದೆ. ಒಬ್ಬ ಮನು ಹೋಗಿ ಮತ್ತೊಬ್ಬ ಮನು ಬರುವವರೆಗಿನ ಅವಧಿಯಲ್ಲಿಯ 'ಮನ್ವಂತರ ಪ್ರಲಯ'ವನ್ನು ಬೇಕಾದರೆ ಚತುರ್ಮುಖನು ನೀಡಿಯಾನು. ಆದರೆ ಮಹಾಪ್ರಲಯವನ್ನು ನೀಡುವವನು ಭಗವಂತನೇ. ಆದುದರಿಂದ ಅವನು 'ಮಹಾಕ್ಷ'.

ಭೀಷ್ಮರು ಕೃಷ್ಣನನ್ನು ಮಹಾಭಾರತ ಯುದ್ಧದ ಹದಿನೆಂಟು ಅಕ್ಷೌಹಿಣೀ ಸೇನೆಯನ್ನೂ ನಾಶ ಮಾಡಿದವನು ನೀನೇ ಎಂಬ ಅಭಿಪ್ರಾಯದಲ್ಲಿ 'ಮಹಾಕ್ಷಃ' ಎಂದು ಸ್ತುತಿಸಿರುವರು.

ಭಗವಂತನಲ್ಲಿ ಯಾವ ಶಬ್ದವನ್ನು ಪ್ರಯೋಗಿಸಿದರೂ ಅದು ಅವನ ಗುಣವನ್ನೇ ಪ್ರತಿಪಾದಿಸಿ ಅವನ ಸ್ತುತಿಯಾಗಿಯೇ ಪರಿಣಮಿಸುವುದು. ಭಕ್ತರ ಬಾಯಿಯಿಂದ ಯಾವಶಬ್ದ ಹೊರಹೊಮ್ಮಿದರೂ ಅದನ್ನು ತನ್ನ ಸ್ತುತಿಯನ್ನಾಗಿ ಸ್ವೀಕರಿಸಿ ಸಂತೋಷಪಟ್ಟು ಅನುಗ್ರಹಿಸುವ 'ಕರುಣಾನಿಧಿ' ಭಗವಂತ. ಭೀಷ್ಮರು ಹದಿನೆಂಟು ಅಕ್ಷೌಹಿಣೀ ಸೇನೆಯನ್ನು ನಾಶಪಡಿಸಿದವನೆಂದು 'ಮಹಾಕ್ಷ' ನಾಮದಿಂದ ಸ್ತುತಿಸಿದರೆ ಅದನ್ನು ತನ್ನ ಸ್ತುತಿಯನ್ನಾಗಿಯೇ ಸ್ವೀಕರಿಸಿದ ಉದಾರಿ ಕೃಷ್ಣ.

**೩೫೭. ಗರುಡಧ್ವಜಃ – * ಗರುಡನನ್ನು ತನ್ನ ರಥದ ಪತಾಕೆಯಲ್ಲಿ ಚಿಹ್ನೆಯಾಗಿ ಹೊಂದಿರುವವನು**

*** ಗರುಡ ವಾಹನ.**

**ವಿವರಣೆ :** ರಥದ ಪತಾಕೆಯಲ್ಲಿ ಗರುಡನ ಚಿಹ್ನೆಯನ್ನು ಹೊಂದಿದವನೆಂಬುದು ಒಂದು ಅರ್ಥವಾದರೆ, ಗರುಡನನ್ನು ವಾಹನನನ್ನಾಗಿ ಹೊಂದಿರುವವನೆಂಬುದು ಮತ್ತೊಂದು ಅರ್ಥ.

ಗಜೇಂದ್ರನನ್ನು ಬಿಡುಗಡೆಗೊಳಿಸಲು ಭಗವಂತನು ಗರುಡಾರೂಢನಾಗಿ ಬಂದನೆಂದು ತಿಳಿಸುವಾಗ ಭಾಗವತದಲ್ಲಿ **‘ಛಂದೋಮಯೇನ ಗರುಡೇನ.....’** - ಎಂಬುದಾಗಿ ಗರುಡನಿಗೆ. ‘ಛಂದೋಮಯ’ - ಎಂಬ ವಿಶೇಷಣ ನೀಡಲಾಗಿದೆ. ಯಾವಾಗಲೂ ತನ್ನ ರೆಕ್ಕೆಗಳನ್ನು ಬಡಿಯುವಾಗ ಅದರಿಂದ ಸಾಮದ ನಾದವನ್ನು ಹೊರಡಿಸುವವನಾದುದರಿಂದ ಗರುಡ ಛಂದೋಮಯ. ಸಾಮಗಾನಪ್ರಿಯನಾದ ಭಗವಂತ ಅದಕ್ಕಾಗಿಯೇ ಯಾವಾಗಲೂ ಗರುಡನನ್ನೇ ವಾಹನವಾಗಿ ಬಳಸಿಕೊಳ್ಳುವನು.

ಆದುದರಿಂದಲೇ ಈ ಹಿನ್ನೆಲೆಯಲ್ಲಿ ಭಗವಂತನನ್ನು ‘ಗರುಡಧ್ವಜ’ - ಎಂದು ಉಪಾಸನೆ ನಡೆಸಿದರೆ **‘ಆ ನೋ ಭದ್ರಾಃ ಕ್ರತವೋ ಯಂತು ವಿಶ್ವತಃ’**- ಎಂದು ವೇದದಲ್ಲಿ ಹಾರೈಸಲಾಗುವಂತೆ ಹತ್ತು ದಿಕ್ಕುಗಳಿಂದಲೂ ಒಳ್ಳೆಯ ಶಬ್ದಗಳೇ ಕಿವಿಗೆ ಬೀಳುವಂತಾಗುವುದು.

**ಅತುಲಃ ಶರಭೋ ಭೀಮಃ ಸಮಯಜ್ಞೋ ಹವಿರ್ಹರಿಃ |**
**ಸರ್ವಲಕ್ಷಣಲಕ್ಷಣ್ಯೋ ಲಕ್ಷ್ಮೀವಾನ್ ಸಮಿತಿಂಜಯಃ ||೩೯||**

**೩೫೮. ಅತುಲಃ – ಸಾಟಿಯಿಲ್ಲದವನು.**

**ವಿವರಣೆ :** ತುಲಾ ಎಂದರೆ ಸಾಟಿ ; ಆದುದರಿಂದ ಅತುಲ ಸಾಟಿಯಿಲ್ಲದವನು. ದಾಸರು ಒಂದು ಹಾಡಿನಲ್ಲಿ ಹೀಗೆ ಹೇಳಿಕೊಂಡಿರುವರು -

**ನಿನಗಾರು ಸರಿಯಿಲ್ಲ ಎನಗನ್ಯ ಗತಿಯಿಲ್ಲ**
**ನಿನಗೂ ಎನಗೂ ನ್ಯಾಯ ಹೇಳೋವವರಿಲ್ಲ**

ನಾನೊಬ್ಬ ಇಂತಹವ. ನೀನೊಬ್ಬ ಅಂತಹವ. ನನಗೆ ನಿನ್ನನ್ನು ಬಿಟ್ಟರೆ ಗತಿಯೇ ಇಲ್ಲ. ನಿನ್ನಂತಹವರು ಯಾರಾದರೂ ಇದ್ದಾರೆಯೇ ? ಎಂದು ಹುಡುಕೋಣವೋ ಎಂದರೆ ‘ನಿನಗನ್ಯ ಸರಿಯಿಲ್ಲ’ ಒಂದು ವೇಳೆ ನಿನಗೆ ಸರಿಸಾಟಿಯಾದವನು ಮತ್ತೊಬ್ಬನಿರುತ್ತಿದ್ದರೆ ‘ನೀನ್ಯಾಕೋ ನಿನ್ನ ಹಂಗ್ಯಾಕೋ....’ ಎಂದು ಕೇಳಬಹುದಿತ್ತು ! ಆದರೆ ನಿನಗೆ ಸರಿಸಾಟಿಯಾದವನು ಮತ್ತೊಬ್ಬನಿಲ್ಲದ ಪ್ರಯುಕ್ತ ಎನಗೆ ನಿನ್ನ ಬಿಟ್ಟರೆ ಅನ್ಯ ಗತಿ ಇಲ್ಲ.

ಭಗವಂತನು ಹೀಗೆ ಸಾಟಿಯಿಲ್ಲದೆ ‘ಅತುಲ’ ಎನಿಸಿರುವುದರಿಂದಲೇ ಅವನನ್ನು ‘ಸರ್ವೋತ್ತಮ’, ‘ಗುಣಪರಿಪೂರ್ಣ’.... ಎಂದೆಲ್ಲ ಶಾಸ್ತ್ರದಲ್ಲಿ ಕರೆಯಲಾಗಿದೆ.

**೩೫೯. ಶರಭಃ – * ಶರಭ ಪ್ರಾಣಿಯಲ್ಲಿ ಅಂತರ್ಯಾಮಿಯಾಗಿ ಇರುವವನು.**
*** ಬಾಣಗಳಲ್ಲಿ ವಿರಾಜಿಸುತ್ತಿರುವವನು.**
*** ಮನಸ್ಸಿನಲ್ಲಿ ಶೋಭಿಸುವವನು.**

**ವಿವರಣೆ :** ನಮ್ಮಲ್ಲಿ ಒಂದು ಪ್ರಾಣಿಯೂ 'ಶರಭ' ಎಂದು ಕರೆಯಲ್ಪಡುವುದು. ಅದರ ಒಳಗೆ ಇರುವ ಭಗವಂತನೂ ಶರಭ ಎನಿಸುವನು. ಮತ್ತೊಂದು ಅರ್ಥ - ಶರ ಎಂದರೆ ಬಾಣ. ಭ - ಎಂದರೆ ಶೋಭಿಸುವವನು.

ಭೀಷ್ಮರು ಮಹಾಭಾರತಯುದ್ಧದಲ್ಲಿ ಅನುಭವಿಸಿದ್ದನ್ನು ನೆನಪಿಸಿಕೊಳ್ಳುವರು. ಅವರು ಪ್ರಯೋಗಿಸಿದ್ದ ಕೆಲವು ಬಾಣಗಳು ಗುರಿಯನ್ನು ತಲುಪಿದ್ದವು. ಮತ್ತೆ ಕೆಲವು ಗುರಿ ತಪ್ಪಿ ಎಲ್ಲೆಲ್ಲಿಗೋ ಹೋಗಿ ಬಿದ್ದಿದ್ದವು. ಇದು ಯಾಕೆ ಹೀಗೆ ? ದೇವರನ್ನು ಸ್ಮರಿಸಿಕೊಂಡು ಯಾವ ಬಾಣಗಳನ್ನು ಪ್ರಯೋಗಿಸುತ್ತಿದ್ದರೋ ಅವೆಲ್ಲ ಗುರಿಯನ್ನು ತಲುಪುತ್ತಿದ್ದವು. ಯಾಕೆಂದರೆ - ಆ ಬಾಣಗಳಲ್ಲಿ ಭಗವಂತನು ವಿರಾಜಿಸುತ್ತಿದ್ದನು. **'ಶರೇಷು ಭಾತಿ ವಿರಾಜತೀತಿ ಶರಭಃ'**

ರುದ್ರ ದೇವರು ತ್ರಿಪುರಾಸುರರ ಮೂರು ಪಟ್ಟಣಗಳನ್ನು ಬಾಣಗಳಿಂದ ನಾಶಪಡಿಸಿದ್ದು, ಆ ಬಾಣಗಳ ವಿಷ್ಣುವಿದ್ದ ಬಾಣದ ಮೂಲಕ ಸಂಹರಿಸಿದ್ದನಷ್ಟೇ.

ಹಾಗೆಯೇ ಮಹಾಭಾರತ ಯುದ್ಧದ ಎರಡೂ ಸೇನೆಯಿಂದ ಪ್ರಯೋಗಿಸಲ್ಪಡುತ್ತಿದ್ದ ಬಾಣಗಳು ಗುರಿ ತಲುಪಿ ಶತ್ರುಗಳನ್ನು ಸಂಹರಿಸಿದ್ದವೆಂದರೆ ಅಲ್ಲಿ 'ಶರಭ'- ಬಾಣಗಳಲ್ಲಿ ವಿರಾಜಿಸುತ್ತಿದ್ದವನು ಕೃಷ್ಣ.

ಇನ್ನೊಂದು ಬಗೆಯ ಅರ್ಥ ಹೀಗಿದೆ -

ಶರ ಎಂದರೆ ಮನಸ್ಸು. **'ಪ್ರಣವೋ ಧನುಃ ಶರೋ ಹ್ಯಾತ್ಮಾ ಬ್ರಹ್ಮ ತಲ್ಲಕ್ಷ್ಯ– ಮುಚ್ಯತೇ.....'**- ಶರವೇ ಆತ್ಮಾ - ಮನಸ್ಸು, ಪ್ರಣವ - ಧನಸ್ಸು, ಬ್ರಹ್ಮ - ಲಕ್ಷ್ಯ - ಎಂದು ಉಪನಿಷತ್ತು ಘೋಷಿಸಿದೆ.

ಶರ ಅಂಕು ಡೊಂಕಾಗಿದ್ದರೆ ಅದು ವೇಗವಾಗಿ ಹೋಗಲಾರದು. ಆದರೆ ಶರ ಋಜುವಾಗಿದ್ದರೆ ಗುರಿಯೆಡೆಗೆ ವೇಗವಾಗಿ ಸಾಗುವುದು. ಅದೇ ರೀತಿಯಾಗಿ ಮನಸ್ಸೆಂಬ ಶರ ಭಗವಂತನಲ್ಲಿಗೆ ಸಾಗಬೇಕೆಂದರೆ ಅದು ಋಜುವಾಗಿರಬೇಕು - ಪ್ರಾಮಾಣಿಕವಾಗಿರಬೇಕು. ಅಂತಹ ಋಜುವಾದ, ಶುದ್ಧವಾದ ಮನಸ್ಸಿನಲ್ಲಿ ಭಗವಂತನು ಶೋಭಿಸುವುದರಿಂದ 'ಶರಭ' ಎನಿಸುವನು.

ಸಾಯುವ ಕಾಲದಲ್ಲಿ ಮನಸ್ಸು ವಕ್ರವಾಗಿರುವುದರಿಂದಲೇ ಮನಸ್ಸಿನಲ್ಲಿ ದೇವರು ವಿರಾಜಿಸುವುದಿಲ್ಲ. 'ಸಾಯುತ್ತೇನೆ' - ಎಂಬ ಭಾವನೆಯೇ ಮನಸ್ಸಿನಲ್ಲಿ ತುಂಬಿರುವುದು. ದೇವರೇ ತುಂಬಿರುವುದಿಲ್ಲ. ಲೌಕಿಕ ವಿಷಯಗಳನ್ನೆಲ್ಲ ಅಲ್ಲಲ್ಲಿಗೇ ಬಿಟ್ಟು ದೇವರ ಚಿಂತನೆಯಲ್ಲಿ ತೊಡಗಿದರೆ ಮನಸ್ಸು ಋಜುವಾಗುವುದು. ಅಲ್ಲಿ ದೇವರು ಬಂದು ನೆಲೆಸುವನು.

**೩೬೦. ಭೀಮಃ – ತುಂಬಿದ ತಿಳುವಳಿಕೆ ಉಳ್ಳವನು.**

**ವಿವರಣೆ :** ಭೀಮ ಶಬ್ದಕ್ಕೆ ಶ್ರೀ ಮಧ್ವ ಗುರುಗಳೇ ಹೀಗೆ ಅರ್ಥ ನೀಡಿರುವರು - ಯಾರಲ್ಲಿ ಎಲ್ಲ ವಿದ್ಯೆಗಳೂ ತುಂಬಿವೆಯೋ ಅಂತಹವನು ಭೀಮ - **'ಭೃತಾಃ ಮಾಃ ಯಸ್ಮಿನ್ ಸಃ'** ಎಂಬುದಾಗಿ.

ನಮ್ಮ ನಿಮ್ಮ ಗುಂಪಲ್ಲಿ ಅಂದರೆ ಸಂಸಾರಿಗಳ ಮಧ್ಯದಲ್ಲಿ ಭೀಮಸೇನನಷ್ಟು ತಿಳುವಳಿಕ ಬೇರೆ ಯಾರಲ್ಲೂ ಇಲ್ಲದಿರುವುದರಿಂದ ಅವನು 'ಭೀಮ' ಎನಿಸುವನು. ಇಂತಹ ಭೀಮಸೇನನಿಗಿಂತಲೂ ಅಧಿಕ ತಿಳುವಳಿಕೆ ಪರಮಾತ್ಮನಲ್ಲಿ ಇರುವುದರಿಂದ ಪರಮಾತ್ಮ ಮುಖ್ಯವಾಗಿ ಭೀಮ. ತುಂಬಿದ ತಿಳುವಳಿಕೆ ಉಳ್ಳವನೆಂಬುದೇ ಭೀಮ ಶಬ್ದದ ಅರ್ಥ.

**೩೬೧. ಸಮಯಜ್ಞಃ – ಯಾವ ಯಾವ ಘಟನೆ ಯಾವ ಯಾವ ಸಮಯದಲ್ಲಿ ನಡೆಯಬೇಕೆಂಬುದನ್ನು ಬಲ್ಲವನು.**

**ವಿವರಣೆ :** ಸಮಯವನ್ನು ತಿಳಿದವನೇ 'ಸಮಯಜ್ಞ'. ಭಗವಂತನು ಯಾವುದನ್ನೇ ಆಗಲಿ ಸಮಯ ತಪ್ಪಿ ಮಾಡುವುದಿಲ್ಲ. ಮಗುವೊಂದು ಹುಟ್ಟಿದಾಕ್ಷಣ ಸತ್ತಿತು. ಅಥವಾ ಹತ್ತು ವರ್ಷದ ಮಗು ಸತ್ತತು. ಇಲ್ಲವೇ ಮಗು ಹುಟ್ಟಿದಾಕ್ಷಣ ಅದರ ತಾಯಿ ಸತ್ತಳು. ಇಂತಹ ಪ್ರಸಂಗಗಳಲ್ಲೆಲ್ಲ ಭಗವಂತನು ಅವ್ಯವಸ್ಥಿತವಾಗಿ ನಡೆಸುವಂತೆ ಕಾಣುವುದು. ಆದರೆ ಭಗವಂತನು ಯಾವುದನ್ನೂ ಸಮಯ ತಪ್ಪಿ ಮಾಡುವುದಿಲ್ಲ. ಆ ಮಗು ಹುಟ್ಟಿದಾಕ್ಷಣ ಸಾಯಬೇಕಾದ ಸಮಯ ಆಗಿತ್ತು. ಅದನ್ನು ತಿಳಿದ ಭಗವಂತ ಆ ಮಗು ಸಾಯುವಂತೆ ಮಾಡಿದನಷ್ಟೇ.

ನಾವು ಬೇಕಾದರೆ ಸಮಯ ಪರಿಪಾಲನೆ ಮಾಡದಿರಬಹುದು. ಭಗವಂತ ಮಾತ್ರ ಎಂದೂ ಸಮಯ ಪರಿಪಾಲನೆ ಮಾಡದಿರುವುದಿಲ್ಲ. ನಾವು ಭಗವಂತನು ಸರ್ವಜ್ಞ ಎಂದು ಉಪಾಸನೆ ಮಾಡುವೆವು. ಆದರೆ 'ಸಮಯಜ್ಞ' ಎಂದು ಉಪಾಸನೆ ಮಾಡುವುದಿಲ್ಲ. ಅದರ ಫಲವಾಗಿಯೇ ಬೇರೆಲ್ಲ ತಿಳಿದಿದ್ದರೂ ನಮಗೆ

'ಸಮಯಪ್ರಜ್ಞೆ' ಇರುವುದೇ ಇಲ್ಲ.

ಭಗವಂತನನ್ನು 'ಸಮಯಜ್ಞ'- ಎಂದು ಉಪಾಸನೆ ಮಾಡಿದರೆ ಅದರ ಫಲವಾಗಿ ನಮಗೆ ಸಮಯಪ್ರಜ್ಞೆ ಉಂಟಾಗುವುದು.

**೩೬೨. ಹವಿರ್ಹರಿಃ – ಹವಿಸ್ಸನ್ನು ತೆಗೆದುಕೊಳ್ಳುವವನು ಹಾಗೂ ಆಯಾ ದೇವತೆಗಳಿಗೆ ತಲುಪಿಸುವವನು.**

ವಿವರಣೆ : ಹವಿಃ ಅಂದರೆ ಹವಿಸ್ಸನ್ನು ತೆಗೆದುಕೊಳ್ಳುವವನು. ಹರಿಃ ಅಂದರೆ ಆ ಹವಿಸ್ಸನ್ನು ಆಯಾ ದೇವತೆಗಳಿಗೆ ವಿತರಣೆ ಮಾಡುವವನು. **'ಹೂಯತೇ ಇತಿ ಹವಿಃ'**- ನಾವು ಆ ಹೋಮ ಈ ಹೋಮ 'ಸಂಧಿಶಾಂತಿ' ಮುಂತಾದುವೆಲ್ಲವನ್ನೂ ಮಾಡುವೆವು. ಅಗ್ನಿಯಲ್ಲಿ ಆಹುತಿಯನ್ನೂ ನೀಡುವೆವು. ಆಗ ನಮ್ಮ ಉದ್ದೇಶ ಹೀಗೆ ಇರುವುದು. ಇದು ಮುಖ್ಯಪ್ರಾಣನಿಗೆ ತಲುಪಲಿ, ಇದು ರಾಹುವಿಗೆ ತಲುಪಲಿ.... ಅಗ್ನಿಯಲ್ಲಿ ಹಾಕುವೆವು. ಅಗ್ನಿಯಲ್ಲಿ ಹಾಕಿದ್ದರಿಂದ ಅಗ್ನಿ ಆ ಆಹುತಿಗಳನ್ನು ಆಯಾ ದೇವತೆಗಳಿಗೆ ತಲುಪಿಸುವವನೆಂದು ಭಾವಿಸುವೆವು. ಆದರೆ ನಿಜವಾಗಿ ನಾವು ಕೊಟ್ಟ ಆಹುತಿಯನ್ನು ಭಗವಂತನು ತಲುಪಿಸುವವನು. ಹೀಗೆ ನಾವು ದೇವರ ಕೈಯಲ್ಲಿ ಆಹುತಿ ಕೊಟ್ಟರೆ ದೇವರು ಆಯಾ ದೇವತೆಗಳಿಗೆ ತಲುಪಿಸುವನು. ನಾವೇ ನೇರವಾಗಿ ಗ್ರಹಗಳ, ಇತರ ದೇವತೆಗಳ ಕೈಯಲ್ಲಿ ಕೊಡ್ತೇವೆ ಎಂದರೆ ಅದು ಅವರಿಗೆ ಸಿಗುವುದಿಲ್ಲ. ಆ ವ್ಯಕ್ತಿಗಳಿಗೆ ತಲುಪಿಸಬೇಕು ಭಗವಂತ. ಅದರಿಂದ ಭಗವಂತನನ್ನೂ 'ಹವಿಃ' ನಮ್ಮಿಂದ ಆಹುತಿಗಳನ್ನು ಹೋಮಿಸಲ್ಪಡುವವನು.ನಮ್ಮಿಂದ ಆಹುತಿಯನ್ನು ತೆಗೆದುಕೊಳ್ಳುವವನು. ತೆಗೆದುಕೊಂಡು 'ಹರಿಃ' 'ಹರತೀತಿ ಹರಿಃ' ಯಾರಿಗೆ ತಲುಪಿಸಬೇಕೋ ಅವರಿಗೆ ತಲುಪಿಸುವನು. ಯಾವುದೇ ಹೋಮ ಮಾಡೋಣ, ಅದರಲ್ಲಿ ಭಗವಂತನ ಅನುಸಂಧಾನವಿಲ್ಲದಿದ್ದರೆ ಆ ದೇವತೆಗಳಿಗೆ ಈ ಹೋಮ ತಲುಪುವುದಿಲ್ಲ. ಆದುದರಿಂದಲೇ ಇವನ ಪಾಲಿಗೆ ಹೋಮ ಫಲಿಸುವುದಿಲ್ಲ. ಈ ಅಭಿಪ್ರಾಯದಲ್ಲಿ 'ಹವಿರ್ಹರಿಃ' - ಎಂದು ಸ್ತುತಿಸಲಾಗುವುದು. ಹೇಗೆ ಇತರ ಯಾವುದೇ ಕಥೆಗಳೂ 'ಹರಿಕಥೆ' - ಎಂದೇ ಎನಿಸುವವೋ ಅಂತೆಯೇ ಯಾವುದೇ ದೇವತೆಗೆ ನೀಡುವ ಆಹುತಿಯೂ ಶ್ರೀಹರಿಯ ಮೂಲಕವೇ ತಲುಪಬೇಕಾದದ್ದೆಂಬುದನ್ನು 'ಹವಿರ್ಹರಿಃ' ನಾಮ ತಿಳಿಸುವುದು.

**೩೬೩. ಸರ್ವಲಕ್ಷಣಲಕ್ಷಣ್ಯಃ - ಎಲ್ಲ ದೈಹಿಕ ಲಕ್ಷಣಗಳಿಂದ ಗುರುತಿಸಲ್ಪಡುವವನು.**

**ವಿವರಣೆ :** ಒಂದು ದೇಹ ಚೆನ್ನಾಗಿ ಇರುವುದೆಂದರೆ ಅದರಲ್ಲಿ ಮೂವತ್ತೆರಡು ಲಕ್ಷಣಗಳು ಇರಬೇಕೆಂದು ಶಾಸ್ತ್ರಕಾರರು ತಿಳಿಸಿರುವರು. ಈ ಲಕ್ಷಣಗಳಲ್ಲಿ ದೇಹದ ಉದ್ದ, ಅಗಲ, ಬೇರೆ ಬೇರೆ ಅಂಗಗಳ ಉದ್ದಗಲಗಳು, ಕೆಂಪು, ಬಿಳಿಪು ಬಣ್ಣಗಳು - ಇವೆಲ್ಲ ಸೇರಿಕೊಂಡಿವೆ. ಮೇಲೆ ಮೇಲಿನ ದೇವತೆಗಳಲ್ಲಿ ಹೆಚ್ಚೆಚ್ಚು ಲಕ್ಷಣಗಳಿದ್ದು ಕೆಳಕೆಳಕ್ಕೆ ಬಂದಂತೆ ಲಕ್ಷಣಗಳು ಕಡಿಮ್ಮೆಯಾಗುತ್ತ ಬರುವವು. ಮೂವತ್ತೆರಡೂ ಲಕ್ಷಣಗಳು ಯಾರಲ್ಲಿ ಇವೆಯೋ ಅವನೇ ದೇವರು. ಉಳಿದವರಲ್ಲಿ ಕ್ರಮೇಣ ಕಡಿಮ್ಮೆಯಾಗುತ್ತಾ ಬರುವುದು. ಹೀಗೆ ಎಲ್ಲಾ ದೈಹಿಕ ಲಕ್ಷಣಗಳಿಂದಲೂ, ಮೂವತ್ತೆರಡೂ ಲಕ್ಷಣಗಳಿಂದಲೂ ಲಕ್ಷಣ್ಯ - ಪರಿಚಯಿಸಲ್ಪಡುವವನು ದೇವರು.

ಆ ಮೂವತ್ತೆರಡೂ ಲಕ್ಷಣಗಳನ್ನೂ ಅಲ್ಲದಿದ್ದರೂ ಕೆಲವು ಲಕ್ಷಣಗಳನ್ನಾದರೂ ಇಟ್ಟುಕೊಂಡು ದೇವರು ಹೌದೋ ಅಲ್ಲವೋ ಎಂದು ಪರೀಕ್ಷಿಸಬಹುದಾಗಿದೆ. ತಲೆಯನ್ನು ನೇರ ನಿಲ್ಲಿಸಿದಾಗ ಕಿವಿಯು ಭುಜಗಳನ್ನು ಮುಟ್ಟುತ್ತಿರಬೇಕು. ಬಾಹುಗಳು ಮೊಣಕಾಲವರೆಗೆ ಚಾಚುತ್ತಿರಬೇಕು. ಕಣ್ಣುಗಳು ಕಿವಿಗಳವರೆಗೆ ಚಾಚಿರಬೇಕು........ ಹೀಗೆ ಎದ್ದು ಕಾಣಬಹುದಾದ ಕೆಲವು ದೈಹಿಕ ಲಕ್ಷಣಗಳಿಂದ ವ್ಯಕ್ತಿಗಳನ್ನು ಪರೀಕ್ಷಿಸಬಹುದಾಗಿದೆ.

ಭೀಷ್ಮರು ಕೃಷ್ಣನಲ್ಲಿ ಹೇಳ್ತಾರೆ - ನಿನ್ನಲ್ಲಿ ಮೂವತ್ತೆರಡೂ ಶಾರೀರಿಕ ಲಕ್ಷಣಗಳು ಎದ್ದು ಕಾಣುತ್ತಿವೆ. ಆದ್ದರಿಂದಲೇ ನೀನು 'ಸರ್ವಲಕ್ಷಣಲಕ್ಷಣ್ಯ'.

ದೇವರ ಪ್ರತಿಮೆಗೇ ಅನೇಕ ಲಕ್ಷಣಗಳಿರಬೇಕೆಂದು ಶಾಸ್ತ್ರಕಾರರು ತಿಳಿಸುತ್ತಿರುವಾಗ ದೇವರ ದೇಹದಲ್ಲಿ ಎಷ್ಟು ಲಕ್ಷಣಗಳಿರಬೇಡ !

**೩೬೪. ಲಕ್ಷ್ಮೀವಾನ್ – * ಎಲ್ಲ ಬಗೆಯ ಸಂಪತ್ತುಗಳಿಗೆ ಅಭಿಮಾನಿಯಾದ ಲಕ್ಷ್ಮೀದೇವಿಯನ್ನು ತನ್ನ ಹಿಡಿತದಲ್ಲಿಟ್ಟುಕೊಂಡವನು.**

*** ಎಲ್ಲ ಬಗೆಯ ಸಂಪತ್ತುಗಳನ್ನು ಹೊಂದಿರುವವನು.**

**ವಿವರಣೆ:** ಲಕ್ಷ್ಮೀ ಎಂದರೆ ಜಡಸಂಪತ್ತಿನ ಅಭಿಮಾನಿನಿ. ನಮ್ಮಲ್ಲಿ ಹಣ, ಆಸ್ತಿ.... ಇತ್ಯಾದಿ ಜಡಸಂಪತ್ತು ಇದೆ. ಇದು ಲಕ್ಷ್ಮಿಯ ಹಿಡಿತದಲ್ಲುಂಟು. ಲಕ್ಷ್ಮೀದೇವಿ ತನ್ನನ್ನು ನಮಗೆ ತೋರಗೊಡದೆ ತನ್ನಿಂದ ಅಭಿಮನ್ಯವಾದ, ಹಿಡಿತದಲ್ಲಿರುವ ಜಡಸಂಪತ್ತನ್ನಷ್ಟೇ ನಮಗೆ ಕೊಟ್ಟಿರುವಳು. ಆದರೆ ಭಗವಂತ ಹಾಗಿಲ್ಲ. ಜಡಸಂಪತ್ತಿನ ಅಭಿಮಾನಿಯಾದ ಲಕ್ಷ್ಮೀದೇವಿಯನ್ನೇ ತನ್ನ ಹಿಡಿತದಲ್ಲಿಟ್ಟುಕೊಂಡಿರುವನು. ಆದ್ದರಿಂದ - ಅಂದರು 'ಲಕ್ಷ್ಮೀವಾನ್'.

ಲಕ್ಷ್ಮೀದೇವಿಯು ಇಂದ್ರಿಯ ಸಂಪತ್ತು, ವ್ಯಾಪ್ತಿ ಸಂಪತ್ತು, ಜನ ಸಂಪತ್ತು, ಧನರೂಪದ ಸಂಪತ್ತು ಹೀಗೆ ನಾನಾ ಬಗೆಯ ಸಂಪತ್ತಿಗೆ ಅಭಿಮಾನಿನಿ. ಅಂತಹ ಲಕ್ಷ್ಮೀದೇವಿಯನ್ನೇ ತನ್ನ ಹಿಡಿತದಲ್ಲಿಟ್ಟುಕೊಂಡಿರುವನೆಂದರೆ ಭಗವಂತನು ಎಲ್ಲ ಬಗೆಯ ಸಂಪತ್ತನ್ನೂ ಪೂರ್ಣ ಪ್ರಮಾಣದಲ್ಲಿ ಹೊಂದಿರುವವನೆಂಬ ಅರ್ಥ.

**೩೭೫. ಸಮಿತಿಂಜಯಃ – ಸರಿಯಾದ ತಿಳುವಳಿಕೆ ಪಡೆಯಬೇಕೆಂಬ ಬಯಕೆಯಿಂದ, ಉದ್ದೇಶದಿಂದ ಸೇರಿರುವ ಹತ್ತಾರು ಜನರ ಗುಂಪು 'ಸಮಿತಿ' ಎನಿಸಿ ಅದಕ್ಕೆ ಜಯ ತಂದು ಕೊಡುವವನು.**

ವಿವರಣೆ : ಗಲಾಟೆ ಮಾಡುವುದಕ್ಕಾಗಿ ಇರುವಂತಹದ್ದು 'ಸಂಘರ್ಷ' ಎನಿಸಿದರೆ, ಶಾಂತಿಗಾಗಿ, ಸಂಧಾನಕ್ಕಾಗಿ ಇರುವಂತಹದ್ದು 'ಸಮಿತಿ'. ದುರ್ಯೋಧನನ ಪಕ್ಷ ಸಂಘರ್ಷಕ್ಕಾಗಿ ಇರುವಂತಹದ್ದು. ಪಾಂಡವರ ಪಕ್ಷವಾದರೂ ಸಮಿತಿ. ಸಂ ಎಂದರೆ ಒಳ್ಳೆಯ. ಮಿತಿ ಎಂದರೆ ತಿಳುವಳಿಕೆ. ಆದ್ದರಿಂದ ಒಳ್ಳೆಯ ತಿಳುವಳಿಕೆ ಪಡೆಯಬೇಕೆಂಬ ಉದ್ದೇಶದಿಂದ ಹತ್ತಾರು ಜನ ಸೇರಿದರೆ ಅದು ಸಮಿತಿ ಎನಿಸುವುದು. ಆದ್ದರಿಂದಲೇ ಪಾಂಡವರದ್ದು ಸಮಿತಿ.

ಸರಿಯಾದ ತಿಳುವಳಿಕೆಯನ್ನು ಸಮಾಜಕ್ಕೆ ಕೊಡುವ ಸರಿಯಾದ ತಿಳುವಳಿಕೆ ಉಳ್ಳ ಜನರ ಗುಂಪೇ 'ಸಮಿತಿ'. ಪಾಂಡವರದ್ದು ಸಮಿತಿಯಾಗಿರುವುದರಿಂದಲೇ ಕೃಷ್ಣ ಪಾಂಡವರ ಸಮಿತಿಗೆ ಜಯವನ್ನು ತಂದುಕೊಟ್ಟ. ಆದ್ದರಿಂದಲೇ ಸಮಿತಿಂಜಯ ಎನಿಸಿರುವನು.

**ವಿಕ್ಷರೋ ರೋಹಿತೋ ಮಾರ್ಗೋ ಹೇತುರ್ದಾಮೋದರಃ ಸಹಃ ||**
**ಮಹೀಧರೋ ಮಹಾಭಾಗೋ ವೇಗವಾನಮಿತಾಶನಃ ||೩೯||**

**೩೭೬. ವಿಕ್ಷರಃ – ಭಕ್ತರು ಅಪೇಕ್ಷಿಸಿದ್ದನ್ನು ಸತತವಾಗಿ ನೀಡುತ್ತಿರುವವನು.**

ವಿವರಣೆ : ವಿ ಅಂದರೆ ವಿಶೇಷವಾಗಿ. ಸಂತತವಾಗಿ ಕೊಡುವಿಕೆಯನ್ನು ಕ್ಷರಣ ಎನ್ನಲಾಗುವುದು. ನಿರಂತರವಾಗಿ, ಬೇಕಾದಾಗೆಲ್ಲ ಸಿಗುವಂತೆ ಕೊಡುವಿಕೆ ಕ್ಷರಣ. ಆಗೊಮ್ಮೆ, ಈಗೊಮ್ಮೆ ಕೊಡುವಿಕೆ ಬರೇ ದಾನ. ನಮಗೆ ಭಗವಂತ ಬರೇ ದಾನ ಮಾಡುವುದಲ್ಲ. ನಿರಂತರ ದಾನ ಮಾಡುತ್ತಾನೆ. ಉಸಿರಾಡಲು ನಿರಂತರವಾಗಿ ಗಾಳಿಯನ್ನು ನೀಡುವನು. ಸಂಚಾರ ಮಾಡಲು ನಿರಂತರವಾಗಿ ಅವಕಾಶವನ್ನು ಕಲ್ಪಿಸಿಕೊಡುವನು. ಕೇಳುವುದು ನಮ್ಮ ಕೈಯಲ್ಲಿದೆ. ನಾವು ಯಾವಾಗ ಯಾವುದನ್ನು ಕೇಳುವೆವೋ ಆವಾಗ ಅದನ್ನು ಕೊಡಲು ಭಗವಂತ ಸಿದ್ಧ. ಕೇಳದೆ ಕೊಡುವುದಿಲ್ಲ.

ನಮಗೆ ನಿತ್ಯ ಕ್ಷಣಕ್ಷಣಕ್ಕೂ ಬದುಕಬೇಕು ; ಬದುಕಬೇಕು - ಎಂದು ಅಪೇಕ್ಷೆ ಇರುವುದು. ಭಗವಂತ 'ತೆಗೆದುಕೋ ಗಾಳಿ' - ಎಂದು ಗಾಳಿಯನ್ನು ನೀಡುತ್ತಿರುವನು. ಇದಕ್ಕೆ ಬದಲಾಗಿ ಸಾಯಬೇಕೆಂದು ನಮಗೆ ಅಪೇಕ್ಷೆ ಇದೆ ಎಂದರೆ ಭಗವಂತ ಮೂಗು ಸ್ತಬ್ಧವಾಗುವಂತೆ ಮಾಡಿಬಿಡುವನು. ಶ್ವಾಸೋಚ್ಛ್ವಾಸ ನಡೆಸಲಾಗುವುದಿಲ್ಲ. ಇದು 'ವಿಕ್ಷರ' ನಾಮಕ ಭಗವಂತನದ್ದೇ ಕಾರುಬಾರು.

ಹೀಗೆ ವ್ಯಕ್ತಿಗಳು ಅಪೇಕ್ಷೆ ಪಟ್ಟದ್ದನ್ನು ಸದಾಕಾಲ ಕೊಡುವನೆಂಬ ದೃಷ್ಟಿಯಿಂದ ಭಗವಂತನು 'ವಿಕ್ಷರಃ'

**೩೬೭. ರೋಹಿತಃ – * ಕೆಂಪು ಬಣ್ಣದವನು.**

*** ನಮ್ಮ ಸಮಸ್ಯೆಗಳ ಪರಿಹಾರಕ್ಕಾಗಿ ಇಳಿದು ಬಂದವನು.**

**ವಿವರಣೆ :** ರೋಹಿತ ಶಬ್ದಕ್ಕೆ ಕೆಂಪು ಎಂಬ ಒಂದು ಅರ್ಥ ಇದೆ. ಸದ್ಯ ವಿಷ್ಣುಸಹಸ್ರ ನಾಮವನ್ನು ಪಠಿಸುತ್ತಿರುವಾಗ ಎದುರಿಗಿರುವ ಕೃಷ್ಣ ಕೆಂಪಲ್ಲ. ಮೇಘಶ್ಯಾಮಲ. ಕೆಂಪು ಬಣ್ಣದ ಭಗವದ್ರೂಪವನ್ನು ನಮ್ಮ ನಮ್ಮ ಹೃದಯದಲ್ಲಿ ಧ್ಯಾನ ಮಾಡಬೇಕು.

ಎದುರಿಗೆ ಕೃಷ್ಣ ಕೂತಿದ್ದಾಗ 'ರೋಹಿತ'- ಎಂಬ ನಾಮವು ಹೀಗೆ ತೆರೆದುಕೊಳ್ಳುವುದು - 'ಅವ' - ಶಬ್ದವನ್ನು ಸೇರಿಸಿದರೆ 'ಅವರೋಹಿತಃ' - ಎಂದಾಗುವುದು. ಇದಕ್ಕೆ ಕೆಳಗೆ ಇಳಿದು ಬಂದವನು ಎಂಬ ಅರ್ಥ ಸಿದ್ಧಿಸುವುದು. ಕೃಷ್ಣ ! ನಮಗಾಗಿ ನೀನು ಇಳಿದು ಬಂದವನು. ನಿಮಗೆ ಏನಾದರೂ ಸಮಸ್ಯೆ ಇದ್ದರೆ ನನ್ನಲ್ಲಿಗೆ ಮೇಲೆ ಬನ್ನಿ - ಎಂದವನಲ್ಲ. ಬದಲಾಗಿ, ನಾನೇ ನೀವಿದ್ದಲ್ಲಿಗೆ ಬರುವೆನು - ಎಂದು ಕೃಷ್ಣ ಇಲ್ಲಿಗೆ ಬಂದು ನಮ್ಮ ಸಮಸ್ಯೆಗಳಿಗೆ ಸ್ಪಂದಿಸಿರುವನು. ನಮ್ಮ ಪಾಲಿಗೆ ಕೃಷ್ಣ 'ಅವರೋಹಿತಃ.' ಆದರೆ ಭೀಷ್ಮರ ಪಾಲಿಗೆ 'ಆರೋಹಿತಃ' - ಮೇಲಕ್ಕೆ ಕರೆದೊಯ್ಯಬೇಕು. ಅದಕ್ಕಾಗಿಯೇ ಭೀಷ್ಮರು ಬರೇ 'ರೋಹಿತ' ಎಂಬ ಶಬ್ದವನ್ನೇ ಬಳಸಿ, ಯಾರ್‍ಯಾರಿಗೆ ಹೇಗೆ ಹೇಗೆ ಬೇಕೋ ಹಾಗೆ ಭಗವಂತನನ್ನು ಆರೋಹಿತ ಎಂದೋ ಅವರೋಹಿತ ಎಂದೋ ಉಪಾಸನೆ ನಡೆಸಲು ಸೂಚಿಸಿರುವರು.

**೩೬೮. ಮಾರ್ಗಃ – ಮೋಕ್ಷವನ್ನು ಹೊಂದಲು ಬೇಕಾದ ಸಲಕರಣೆ.**

**ವಿವರಣೆ :** ಮಾರ್ಗ ಅಂದರೆ ದಾರಿ. ದಾರಿಗೆ ಮಾರ್ಗ ಎಂಬ ಹೆಸರು ಯಾಕೆ ಬಂದಿದೆ? ಏನನ್ನಾದರೂ ಪಡೆಯುವುದಕ್ಕಾಗಿ ಅಳವಡಿಸಬೇಕಾದ ಕ್ರಮಕ್ಕೆ 'ಮಾರ್ಗ' ಎನ್ನಲಾಗುವುದು. 'ಎಲ್ಲರೂ ನಿಮ್ಮ ಬಳಿಗೆ ಬರಬೇಕೆಂದರೆ ಮುಖದಲ್ಲಿ ನಗುವ 'ಮಾರ್ಗ'ವನ್ನು ಅಳವಡಿಸಿಕೊಳ್ಳಿ'- ಎಂದು ಪ್ರಯೋಗಿಸಲಾಗುವುದು. 'ಮೃಗ

ಅನ್ವೇಷಣೇ'- ಎಂಬ ಕ್ರಿಯಾಪದದಿಂದ ರೂಪುಗೊಂಡ ಮಾರ್ಗ ಶಬ್ದವು ಯಾವುದದ್ದಾದರೂ ಅನ್ವೇಷಣೆಗೆ ಬೇಕಾದ ಕ್ರಮವನ್ನು ತಿಳಿಸಿಕೊಡಬಲ್ಲದು. ವಸ್ತುವನ್ನು ಪಡೆಯುವುದಕ್ಕೆ ಬೇಕಾದ ಸಾಧನವೇ ಮಾರ್ಗ. ಭೀಷ್ಮರು ಅಂತಾರೆ - ಕೃಷ್ಣ, ನನಗೆ ನಿತ್ಯಸುಖ ಎಂಬ ವಸ್ತು ಬೇಕಾಗಿದೆ ; ಅದನ್ನು ಪಡೆಯಲು ಸಲಕರಣೆ ನೀನೇ. ಆದುದರಿಂದ ನೀನು ಮಾರ್ಗ. ಮಡಿಕೆ ಬೇಕೋ ಅದಕ್ಕೆ ಮಾರ್ಗ ಕುಂಬಾರ, ಬಟ್ಟೆ ಬೇಕೋ ಅದಕ್ಕೆ ಮಾರ್ಗ ನೇಕಾರ ; ಹಾಗೆಯೇ ಮೋಕ್ಷ ಬೇಕೋ ಅದಕ್ಕೆ ಮಾರ್ಗ ಭಗವಂತ. ಸ್ವರ್ಗಾದಿಗಳಿಗೆ ಬೇಕಾದರೆ ಇತರ ದೇವತೆಗಳೂ ಮಾರ್ಗವಾಗಿದ್ದಿರಬಹುದು. ಆದರೆ ಮೋಕ್ಷ ಸಿಗಬೇಕಾದರೆ ಅದಕ್ಕೆ ದೇವರೇ ಮಾರ್ಗ.

**೩೧೯. ಹೇತುಃ – ಎಲ್ಲದಕ್ಕೂ ಕಾರಣನಾಗಿರುವವನು.**

**ವಿವರಣೆ : 'ಹೇತುರ್ನಾ ಕಾರಣಂ ಬೀಜಂ.....'** ಎಂದಿರುವಂತೆ ಹೇತು ಎಂದರೆ ಕಾರಣ. ನಿನಗ್ಯಾಕೆ ಸುಖ ? ದೇವರು ಕೊಟ್ಟ. ನಿನಗ್ಯಾಕೆ ದುಃಖ ? ದೇವರು ಕೊಟ್ಟ. ಅವನಿಗ್ಯಾಕೆ ಕಣ್ಣಿಲ್ಲ ? ದೇವರು ಹಾಗೆ ಮಾಡಿದ - ಹೀಗೆ ಪ್ರತಿಯೊಂದಕ್ಕೂ ಕಾರಣನಾಗಿ ನಿಂತಿರುವ ಒಬ್ಬನೇ ಒಬ್ಬ ಎಂದರೆ ಭಗವಂತ. ಭಗವಂತನಲ್ಲದೆ ಲೋಕದಲ್ಲಿ ಯಾರಿಗೂ ಯಾವುದೂ ಆಗುವುದಿಲ್ಲ. ಒಳ್ಳೆಯವನಾಗುವುದಕ್ಕೂ ಭಗವಂತ ಕಾರಣ, ಕೆಟ್ಟವನಾಗುವುದಕ್ಕೂ ಭಗವಂತನೇ ಕಾರಣ. ಆದರೆ ಅವರವರ ಕರ್ಮವನ್ನಿಟ್ಟುಕೊಂಡು ಭಗವಂತ ಅವರವರನ್ನು ಒಳ್ಳೆಯವರನ್ನಾಗಿಯೋ, ಕೆಟ್ಟವರನ್ನಾಗಿಯೋ ಮಾಡುವವನು. ಬೀಜ ತಾನಾಗಿ ಮರ ಆಗುವುದಿಲ್ಲ. ಬೀಜದಿಂದ ಮರ ಆಗಲಿಕ್ಕೆ ಹೇಗೆ ಒಬ್ಬ ವ್ಯಕ್ತಿ ಬೇಕೋ ಹಾಗೆಯೇ ಕರ್ಮ ಫಲಿಸಬೇಕಾದರೆ ಕರ್ಮಾಧ್ಯಕ್ಷನಾದ ಭಗವಂತ ಬೇಕೇ ಬೇಕು.

ಭೀಷ್ಮರು ಕೃಷ್ಣನಲ್ಲಿ ಹೇಳುವರು - ನಾನು ಶರಪಂಜರದಲ್ಲಿ ಮಲಗಲು ನೀನೇ ಕಾರಣ ; ಹದಿನೆಂಟು ದಿನಗಳಲ್ಲಿ ಹತ್ತು ದಿನಗಳ ಯುದ್ಧ ನಡೆಯಲು ನೀನೇ ಕಾರಣ. ಪಾಂಡವರು ಕಾಡಿಗೆ ಹೋಗಲೂ ನೀನೇ ಕಾರಣ. ಹೀಗೆ ಪ್ರತಿಯೊಂದಕ್ಕೂ ಭಗವಂತ ಕಾರಣನಾಗಿರುವುದರಿಂದ ಅದಕ್ಕೆ ಇದಕ್ಕೆ ಎಂದೇನನ್ನೂ ಉಲ್ಲೇಖಿಸದೆ 'ಹೇತುಃ' ಎಂದಷ್ಟೇ ಸ್ತುತಿಸುವ ಮೂಲಕ ಎಲ್ಲದಕ್ಕೂ ಕಾರಣನಾಗಿರುವವನು - ಎಂದು ಅಭಿಪ್ರಾಯಪಡಲಾಗಿದೆ.

**೩೨೦. ದಾಮೋದರಃ – ಇಂದ್ರಿಯ ನಿಗ್ರಹವುಳ್ಳವರಿಗೆ ಉತ್ತಮವಾಗಿ ದುಃಖದ ನಾಶ ಮಾಡುವವನು.**

**ವಿವರಣೆ :** ದಾಮ+ಉ+ದರ - ಈ ಮೂರು ಸೇರಿ ದಾಮೋದರ ಎಂದು ರೂಪುಗೊಳ್ಳುವುದು. ದಮ ಎಂದರೆ ಇಂದ್ರಿಯ ನಿಗ್ರಹ, ಅದು ಉಳ್ಳವರು 'ದಾಮ'ರು. ಅಂದರೆ ಯಾರು ಇಂದ್ರಿಯಗಳು ಬಯಸಿದಂತೆ ಕುಣಿಯದೆ ತಾವು ಹೇಳಿದಂತೆ ಇಂದ್ರಿಯಗಳನ್ನು ನಡೆಸಿಕೊಳ್ಳುವರೋ ಅವರು 'ದಾಮ'ರು. ಅವರ ಸಂಸಾರಬಂಧನದ, ದುಃಖದ ದರ - ಸೀಳುವಿಕೆ, ನಾಶ ಉಳ್ಳವನು. ನಮಗೆ ನಮ್ಮ ಶರೀರದ ಮೇಲೆ ಅಭಿಮಾನವಿರುವುದರಿಂದ ಅಂತಹ ಶರೀರದ ಮೇಲೆ ಯಾರಾದರೂ ಹೊಡೆದರೆಂದರೆ ದುಃಖ ಆಗುವುದು. ಆದರೆ ಇಂದ್ರಿಯಗಳ ಹಿಡಿತದ ಮೂಲಕ ದೇಹಾಭಿಮಾನವನ್ನು ಕಳೆದುಕೊಂಡೆವೆಂದರೆ ಶರೀರದ ಮೇಲೆ ಏನು ಮಾಡಿದರೂ ಏನೂ ಆಗಲಾರದು.

ಹೀಗೆ 'ದಾಮ'ರಿಗೆ ಉ - ಉತ್ತಮವಾಗಿ ಅಂದರೆ ಇನ್ನೊಮ್ಮೆ ದುಃಖಬಾರದಂತೆ ದುಃಖದ ನಾಶ ಮಾಡುವನು. ಆದುದರಿಂದಲೇ 'ದಾಮೋದರ'.

**೩೭೧. ಸಹಃ – ಗುಣಪೂರ್ಣ ಹಾಗೂ ದೋಷದೂರನಾಗಿರುವವನು.**

**ವಿವರಣೆ :ಸಾರತ್ವಾತ್ ಸಃ, ದೋಷದೂರತ್ವಾತ್ ಹಃ** - ಆದುದರಿಂದ ದೇವರು ಸಹಃ. ಅಂದರೆ ದೇವರು ಸಾರರೂಪ. ಭಗವಂತ ಪ್ರತಿಯೊಂದರಲ್ಲೂ ಸಾರಃ ಶ್ರೇಷ್ಠ. ಸಿಹಿಯಲ್ಲೂ ಅವನೇ ಸಾರ - ಶ್ರೇಷ್ಠ. ಕಹಿಯಲ್ಲೂ ಅವನೇ ಸಾರ - ಶ್ರೇಷ್ಠ ; ಹೀಗೆ ಪ್ರತಿಯೊಂದು ಧರ್ಮದಲ್ಲೂ, ಗುಣದಲ್ಲೂ ಅವನೇ ಶ್ರೇಷ್ಠನಾಗಿರುವುದರಿಂದ ಅವನು ಸಾರ. ಅದನ್ನೇ 'ಸಃ' ಎಂದು ತಿಳಿಸಲಾಗಿದೆ.

ಪ್ರತಿಯೊಂದು ದೋಷದಿಂದಲೂ ದೂರನಾಗಿರುವುದರಿಂದ ಅವನು ಹ. ಇವೆರಡನ್ನೂ ಒಟ್ಟಿಗೆ ಸೇರಿಸಿದರೆ ಗುಣಪೂರ್ಣ, ದೋಷದೂರನಾಗಿರುವುದರಿಂದಲೇ ಭಗವಂತ - ಸಹಃ

**೩೭೨. ಮಹೀಧರಃ – * ವರಾಹ, ಕೂರ್ಮ ರೂಪಗಳಿಂದ ಭೂಮಿಯ ಉದ್ಧಾರ ನಡೆಸಿರುವವನು.**

*** ಕೃಷ್ಣ ರೂಪದಿಂದ ದುಷ್ಟರ ಸಂಹಾರ ನಡೆಸಿ ಜನರಿಗೆ ಭೂಮಿಯ ಬಗ್ಗೆ ಆದರ ಗೌರವಗಳು ಉಂಟಾಗುವಂತೆ ಮಾಡಿರುವವನು.**

**ವಿವರಣೆ :** ಮಹೀ ಎಂದರೆ ಭೂಮಿ. ಮಹ್ಯತೇ ಇತಿ ಮಹೀ - ಎಲ್ಲರಿಂದಲೂ ಪೂಜಿಸಲ್ಪಡುವವಳು. ತನ್ನ ಮೇಲೆ ಯಾರು ಏನೇ ಮಾಡಲಿ ಅದನ್ನು ಸಹಿಸಿಕೊಂಡು ತೆಪ್ಪಗಿರುವಳು ಭೂಮಿ. ಆದ್ದರಿಂದ ಎಲ್ಲರೂ ಅವಳನ್ನು ಪೂಜಿಸುವರು.

ಭೂಮಿಗೆ ಹೀಗೆ ಸರ್ವಪೂಜ್ಯತ್ವ ಯಾಕೆ ಬಂತು ? ಭೀಷ್ಮರು ಅಂತಾರೆ - ಕೃಷ್ಣ ! ನೀನು ಅವಳನ್ನು ಎತ್ತಿ ಹಿಡಿದಿರುವಿ. ಆದುದರಿಂದಲೇ ಭೂಮಿ ಸರ್ವಪೂಜ್ಯಳಾಗಿರುವಳು. ಹಗ್ಗ ದೇವರ ತಲೆ ಮೇಲೆ ಹೋಗಿ ಕುಳಿತುಕೊಳ್ಳುವ ಮಹತ್ತ್ವವನ್ನು ಪಡೆಯುವುದು ; ಯಾಕೆ ? ಹೂಗಳು ಅದನ್ನು ಎತ್ತಿ ಹಿಡಿದಿದ್ದರಿಂದ. ಅಂತೆಯೇ ಭೂಮಿಯನ್ನು ದೇವರು ಎತ್ತಿ ಹಿಡಿದಿದ್ದರಿಂದ ಭೂಮಿಗೆ ಮಹತ್ತ್ವ ಬಂತು. ಹೀಗೆ ಭೂಮಿಯನ್ನು ದೇವರು ಎತ್ತಿ ಹಿಡಿದಿರುವುದರಿಂದಲೇ 'ಮಹೀಧರ' ಎನಿಸುವನು.

ಭೂಮಿಯನ್ನು ಎತ್ತಿ ಹಿಡಿದವನು ; ಭೂಮಿಯ ಉದ್ಧಾರ ಮಾಡಿದವನು ಮಹೀಧರ. ಭಗವಂತನು ವರಾಹ ರೂಪದಿಂದ ಭೂಮಿಯ ಉದ್ಧಾರ ಮಾಡಿರುವನು. ಹಾಗೆಯೇ ಆಮೆಯ ರೂಪದಿಂದ ಈ ಬ್ರಹ್ಮಾಂಡವನ್ನೂ ಹೊತ್ತಿರುವನು. ಶಾಸ್ತ್ರಕಾರರು ಹೇಳುವಂತೆ ಭಗವಂತನು ಬ್ರಹ್ಮಾಂಡದ ಕೆಳಗಿನ ಭಾಗದಲ್ಲಿ ಕೂರ್ಮ ರೂಪದಿಂದ ಧರಿಸಿರುವನು. ಆ ಕೂರ್ಮನ ಮೇಲೆ ವಾಯುದೇವನ ಕೂರ್ಮರೂಪ ಇರುವುದು. ಅವನ ಮೇಲೆ ಶೇಷ ಇದ್ದುಕೊಂಡು ಬ್ರಹ್ಮಾಂಡವನ್ನು ಧರಿಸಿರುವನು.

ಹೀಗೆ ವರಾಹ ಮತ್ತು ಕೂರ್ಮ ರೂಪಗಳಿಂದ ಭೂಮಿಯನ್ನು ಎತ್ತಿ ಹಿಡಿದಿದ್ದರೆ, ಕೃಷ್ಣರೂಪದಿಂದ ದುರ್ಯೋಧನಾದಿ ದುಷ್ಟರನ್ನು ನಾಶ ಮಾಡಿಸಿ, ಜನರಿಗೆ ಭೂಮಿಯ ಬಗ್ಗೆ ಆದರ ಗೌರವ ಉಂಟಾಗುವಂತೆ ಮಾಡಿರುವನು. ಆದುದರಿಂದಲೂ ಅವನು ಮಹೀಧರ.

**೩೭೩. ಮಹಾಭಾಗಃ – ಮಹಾಭಾಗ್ಯಶಾಲಿ.**

**ವಿವರಣೆ :** ಭಾಗ ಶಬ್ದಕ್ಕೆ ಭಾಗ್ಯ ಎಂದರ್ಥ. ದಾಸರು ಒಂದು ಹಾಡು ರಚಿಸಿರುವರು - 'ಇದು ಭಾಗ್ಯ ! ಇದು ಭಾಗ್ಯ ! ಇದು ಭಾಗ್ಯವಯ್ಯ ! ಪದುಮನಾಭನ ಪಾದ - ಭಜನೆ ಸುಖವಯ್ಯ !' - ಭಗವಂತನ ಪಾದದ ಭಜನೆಯ ಸುಖವೇ ಇಷ್ಟೊಂದು ಭಾಗ್ಯ ಎನ್ನುವುದಾದರೆ, ಭಗವಂತನ ಭಾಗ್ಯ ಎಂತಹದ್ದಾಗಿರಬೇಡ ! ಆದ್ದರಿಂದಲೇ ಭಗವಂತ ಮಹಾಭಾಗ.

ಯಾರು ಮುಟ್ಟಿದ್ದೆಲ್ಲ ಚಿನ್ನವಾಗುವುದೋ, ಯಾರಿಗೆ ಜೀವನದಲ್ಲಿ ಎಂದೂ ಸೋಲು ಇಲ್ಲವೋ, ಯಾರು ಹೇಳಿದ ಮಾತೇ ವೇದ ಎನಿಸುವುದೋ, ಯಾರು ಎಂದೂ ಅಧರ್ಮಪಥದಲ್ಲಿ ನಡೆಯುವುದಿಲ್ಲವೋ ಅವರನ್ನು 'ಮಹಾಭಾಗ'- ಎಂದು ಕರೆಯುವರು.

ಲೋಕದಲ್ಲಿ ಯಾವಾಗಲೂ ಮಾನಸಿಕ ಶಾಂತಿಯಿಂದ ಕೂಡಿದ್ದರೆ, ಯಾವಾಗಲೂ ಸಂಪನ್ನನಾಗಿದ್ದರೆ - ಅಂತಹವರನ್ನೇ ಮಹಾಭಾಗ್ಯಶಾಲಿಗಳು ಎಂದು ಕರೆಯುವುದುಂಟು.

ಏನು ಸಂಕಲ್ಪ ಮಾಡಲಾಗುವುದೋ ಅದನ್ನು ಈಡೇರಿಸಿಕೊಳ್ಳುವುದೇ ಮಹಾಭಾಗ್ಯ. ದುರ್ಯೋಧನ ಯಾವಾಗ ಬೀಳಬೇಕು ? ಪಾಂಡವರಿಗೆ ಯಾವಾಗ ಜಯ ದೊರಕಬೇಕು ? - ಎಂಬುದಾಗಿ ಕೃಷ್ಣ ಸಂಕಲ್ಪ ಮಾಡಿದ್ದನೋ ಅದಕ್ಕನುಗುಣವಾಗಿಯೇ ನಡೆದಿದೆ. ಆದ್ದರಿಂದ ಅವನು ಮಹಾಭಾಗ.

ನಾವು ನಿಂತ ನೆಲದಲ್ಲಿ ನಮಗೆ ಆದರ ದೊರಕಬೇಕು, ನಮ್ಮ ಉದ್ಧಾರ ಆಗಬೇಕು. ಅದಕ್ಕಾಗಿ ಭಗವಂತನನ್ನು 'ಮಹೀಧರ' - ಎಂದು ಉಪಾಸನೆ ನಡೆಸೋಣ.

ನಮಗೆ ಮಾನಸಿಕ ನೆಮ್ಮದಿಯಿಂದ ಬಾಳುವಂತಾಗಬೇಕೆಂದರೆ ಭಗವಂತನನ್ನು 'ಮಹಾಭಾಗ' - ಎಂದು ಉಪಾಸಿಸೋಣ.

**೩೭೪. ವೇಗವಾನ್ – ದೈಹಿಕವೇ ಮುಂತಾದ ಎಲ್ಲ ಬಗೆಯ ವೇಗವುಳ್ಳವನು.**

**ವಿವರಣೆ :** ವೇಗವಾನ್ ಎಂದರೆ ವೇಗವುಳ್ಳವನು. ಭಗವಂತನು ದೇಹದಿಂದ ಮಾತ್ರ ವೇಗವಾನ್ ಅಲ್ಲ ; ಬುದ್ಧಿಯಿಂದಲೂ 'ವೇಗವಾನ್'

ನಾವು ನಿರೀಕ್ಷಿಸಿದಕ್ಕಿಂತಲೂ ಚೆನ್ನಾಗಿ ವಿಚಾರವೊಂದನ್ನು ಕೊನೆಗೊಳಿಸಿದರೆಂದರೆ 'ಈ ವಿಚಾರದಲ್ಲಿ ಭಾರೀ ಬುದ್ಧಿಯನ್ನೋಡಿಸಿದರು' - ಎಂದು ಹೇಳುವೆವು. ಇದೇ ಬುದ್ಧಿಯ ವೇಗ.

ಮಹಾಭಾರತದಲ್ಲಿ ಒಂದು ಮಾತು ಬರುವುದು - ಕೃಷ್ಣನ ಬುದ್ಧಿಗೆ ಮಾತ್ರ ವೇಗ ಅಲ್ಲ; ಅವನ ದೇಹಕ್ಕೂ ವೇಗವಿದೆ. ಅವನ ದೇಹಕ್ಕೆ ಮಾತ್ರ ವೇಗ ಅಲ್ಲ ; ಕೃಷ್ಣ ಕುಳಿತ ಅರ್ಜುನನ ರಥಕ್ಕೂ ವೇಗ ಇದೆ. ಎಷ್ಟುವೇಗ ಇದೆ ಎಂದರೆ - **'........ರಥಂ ಮನೋವೇಗಮಯಾಪಯತ್ ಹರಿಃ ಯಥಾ ಶರಾಪೇತಮಮುಷ್ಯ ಪೃಷ್ಠತಃ....'** ಅರ್ಜುನನ ರಥವನ್ನು ಕೃಷ್ಣ ಓಡಿಸ್ತಾ ಇದ್ದಾನೆ. ಅರ್ಜುನ ಮುಂದೆ ಇದ್ದ ಶತ್ರುಗಳಿಗೆ ಬಾಣ ಬಿಡ್ತಾನೆ. ಅರ್ಜುನ ಬಿಟ್ಟ ಬಾಣ ಶತ್ರುವಿಗೆ ತಾಗಿತೋ ಎಂದು ನೋಡುವ ಕ್ರಮ ಹೇಗೆಂದರೆ ಹಿಂದೆ ನೋಡುವ ಮೂಲಕ. ಯಾಕೆಂದರೆ ಆ ರಥ ಮುಂದೆ ಹೋಗಿಯಾಗಿರುವುದು. ಆ ಬಾಣ ಶತ್ರುವಿಗೆ ತಾಗುವ ಮೊದಲು ಕೃಷ್ಣನ ರಥ ಮುಂದೆ ಹೋಗಿಯಾಗಿರುವುದು. '....ರಥಂ ಮನೋವೇಗಮಯಾಪಯತ್....' ಮನಸ್ಸಿನ ವೇಗದಷ್ಟು ವೇಗದಿಂದ ರಥವನ್ನು

ಕೃಷ್ಣ ಸಾಗಿಸುತ್ತಿದ್ದ ಎಂದು ನಿರೂಪಿಸಲಾಗಿದೆ.

ಇಷ್ಟು ವೇಗವುಳ್ಳವನು ಕೃಷ್ಣ. ಕೃಷ್ಣನ ಈ ಬಗೆಯ ವೇಗವನ್ನೆಲ್ಲ ಕಣ್ಣಾರೆ ಕಂಡಿದ್ದ ಭೀಷ್ಮರು 'ವೇಗವಾನ್' ಎಂದು ಸ್ತುತಿಸುತ್ತಿರುವರು. ದೇವರನ್ನು ಹೀಗೆ ವೇಗವಾನ್ ಎಂದು ಉಪಾಸನೆ ಮಾಡಿ ನಾವು ಕೂಡ ದೈಹಿಕವಾದ, ಬೌದ್ಧಿಕವಾದ, ವೈಚಾರಿಕವಾದ ವೇಗವನ್ನು ಪಡೆದುಕೊಳ್ಳೋಣ.

**೩೭೫. ಅಮಿತಾಶನಃ - * ಮಹಾಭಾರತ ಯುದ್ಧದಲ್ಲಿ ಲೆಕ್ಕವಿಲ್ಲದಷ್ಟು ಯೋಧರನ್ನು ಕಬಳಿಸಿದವನು.**

*** ಪ್ರಲಯಕಾಲದಲ್ಲೂ ಮಿತಿಗೊಳಗಾಗದಷ್ಟು ಕಬಳಿಸುವವನು.**

*** ಅ ಎನಿಸುವ ಅವನಿಗೇ ಮೀಸಲಾದ ಆಹುತಿ ಉಳ್ಳವನು.**

**ವಿವರಣೆ :** ಮಹಾಭಾರತ ಯುದ್ಧದಲ್ಲಿಯ ಯೋಧರನ್ನೆಲ್ಲ ಕಬಳಿಸಿದವನು ಕೃಷ್ಣ. ಕೃಷ್ಣ ವಿಶ್ವರೂಪದ ದರ್ಶನ ನೀಡುವಾಗ ಅವನ ಬಾಯಿಯೊಳಗೆ ಭೀಷ್ಮಾದಿಗಳನ್ನೆಲ್ಲ ಕಬಳಿಸಿರುವುದನ್ನು ಭೀಷ್ಮಾದಿಗಳೇ ಕಂಡಿರುವರು. ಯುದ್ಧ ಪ್ರಾರಂಭವಾಗುವಾಗಲೇ ಕೃಷ್ಣ ಎಲ್ಲರನ್ನೂ ಕಬಳಿಸಿಯಾಗಿದೆ. ಮಹಾಭಾರತ ಯುದ್ಧದಲ್ಲಿ ಅವನು ಅಷ್ಟು ಕೊಂದ ಇವನು ಇಷ್ಟು ಕೊಂದ ಎಂದೆಲ್ಲ ಲೆಕ್ಕ ಮಾಡುವರು ! ಆದರೆ ನಿಜವಾಗಿ ಎಲ್ಲರನ್ನೂ ಕೊಂದದ್ದೂ ಶ್ರೀಹರಿಯೇ. 'ಅಮಿತಾಶನ' ಎನಿಸಿರುವ ಶ್ರೀಕೃಷ್ಣ ಮಹಾಭಾರತ ಯುದ್ಧದಲ್ಲಿ ಎಷ್ಟು ಜನರನ್ನು ಕಬಳಿಸಿರುವನೆಂಬುದಾಗಿ ಲೆಕ್ಕಪತ್ರ ಇಲ್ಲದಷ್ಟೂ ಕಬಳಿಸಿರುವನು.

ಇದು ಈಗ ಆದರೆ ; ಪ್ರಲಯ ಕಾಲದಲ್ಲಿ ಅಷ್ಟನ್ನೂ ಕಬಳಿಸುವನು. ಆದುದರಿಂದ 'ಅಮಿತಾಶನ'. ಮಿತಿಗೆ ಒಳಪಡುವಂತಹದ್ದೇ ಮಿತ. ಹೀಗೆ ಮಿತ ಅಲ್ಲದಿರುವಂತಹದ್ದೇ ಅಮಿತ.

ಮತ್ತೊಂದು ರೀತಿಯಿಂದ ಅ+ಮಿತ - ಅ ಎನಿಸುವ ಭಗವಂತನಿಗೇ ಮೀಸಲಾದ ಅಶನ. ನಮ್ಮಲ್ಲಿ ಯಾರಿಗೂ ಈ ರೀತಿಯಾಗಿ ಊಟ ಮಾಡಲು ಸಾಧ್ಯವೇ ಇಲ್ಲ. ಆದ್ದರಿಂದ ಅವನಷ್ಟೇ ಅಮಿತಾಶನ.

ಭೀಷ್ಮರು ತಮ್ಮ ಅಂತ್ಯಕಾಲದಲ್ಲಿ ಕೃಷ್ಣನನ್ನು ಹೀಗೆ ಉಪಾಸನೆ ಮಾಡುತ್ತಿದ್ದಾರೆ 'ಅಮಿತಾಶನ' - ನಾನು ಯಾರ್ಯಾರ ಕೈಯಿಂದಲೋ ಸಾಯುವ ಬದಲು 'ಅ' ಎನಿಸುವ ನಿನಗೆ ಮಿತ ಯೋಗ್ಯವಾದ 'ಅಶನ' ಆಹುತಿ ಆಗುವಂತಾಗಬೇಕು.

ನಾವು ಕೂಡ ಸರಿಯಾಗಿ ಮರಣಕ್ಕೊಳಗಾಗಿ, ಶಾಸ್ತ್ರೀಯವಾಗಿ ನಮ್ಮ ಅಂತ್ಯಸಂಸ್ಕಾರ ನಡೆದು ನಮ್ಮ ಶರೀರ ಅಗ್ನಿನಾರಾಯಣನಿಗೆ ಆಹುತಿಯಾಗಿ ಅರ್ಪಿತವಾಗಬೇಕೆಂದರೆ ಭಗವಂತನನ್ನು 'ಅಮಿತಾಶಯನ' ಅ ಎನಿಸುವ ಭಗವಂತನಿಗೆ, ಮಿತ - ಮೀಸಲಾದ ಅಶನ - ಆಹುತಿ ಉಳ್ಳವನೆಂದು ಉಪಾಸನೆ ಮಾಡೋಣ.

**ಉದ್ಭವಃ ಕ್ಷೋಭಣೋ ದೇವಃ ಶ್ರೀಗರ್ಭಃ ಪರಮೇಶ್ವರಃ |**
**ಕರಣಂ ಕಾರಣಂ ಕರ್ತಾ ವಿಕರ್ತಾ ಗಹನೋ ಗುಹಃ ||೪೧||**

**೩೭೬. ಉದ್ಭವಃ – ಸಂಸಾರದಿಂದ ಹೊರಗೆ ಇರುವವನು.**

**ವಿವರಣೆ :** ಸಂಸಾರವನ್ನು ಮೆಟ್ಟಿ ನಿಂತವನು 'ಉದ್ಭವ'. ಭವ ಎಂದರೆ ಸಂಸಾರ. 'ಉತ್' ಎಂದರೆ ಉದ್ಗತ. ಸಂಸಾರದಿಂದ ಹೊರಗೆ ಇರುವವನು.

ನಾವು ಕೂಡ ಒಂದು ದಿನ ಸಂಸಾರದಿಂದ ಹೊರಗೆ ಹೋಗಬಹುದು. ಆದರೆ ಭಗವಂತ ಸಂಸಾರದಿಂದ ಹೊರಗೆ ಇರುವವನು. ಸಂಸಾರದಿಂದ ಹೊರಗೆ ಹೋಗುವುದಕ್ಕೂ, ಹೊರಗೆ ಇರುವುದಕ್ಕೂ ತುಂಬ ವ್ಯತ್ಯಾಸ ಉಂಟು. ಹೊರಗೆ ಹೋದವನೆಂದರೆ ಹೋಗುವವರೆಗೆ ಒಳಗೆ ಇದ್ದ ಎಂಬ ಅರ್ಥ ಬರುವುದು. ಸಂಸಾರದಿಂದ ಹೊರಗೆ ಇರುವುದೆಂದರೆ ಒಂದು ದಿನವೂ ಸಂಸಾರದಲ್ಲಿ ಇರುವವನಲ್ಲ ಎಂಬ ಅಭಿಪ್ರಾಯ.

ಸಂಸಾರ ಎಂದರೇನು ? ಸಾಮಾನ್ಯವಾಗಿ ದುಃಖಪೂರ್ಣವಾದ ಸ್ಥಿತಿಯೇ ಸಂಸಾರ ಎಂದು ಭಾವಿಸುವುದುಂಟು. ಆದರೆ ಚತುರ್ಮುಖನೂ ಸಂಸಾರದಲ್ಲಿರುವನು. ಅವನಿಗೇನೂ ದುಃಖವಿಲ್ಲ. ಆದ್ದರಿಂದ ಸಂಸಾರ ಎಂದರೆ ಚೇತನಕ್ಕೆ ಒಂದು ಆವರಣ; ಆಚ್ಛಾದನೆ ಎಂದರ್ಥ. ಪ್ರಕಾಶಸ್ವರೂಪಿಯಾದ ಚೇತನನಿಗೆ, ದೀಪಕ್ಕೆ ಪಾತ್ರವನ್ನು ಕೌಚಿ ಹಾಗಿದಂತೆ ಒಂದು ಆವರಣದ ಆಚ್ಛಾದನೆಯೇ ಸಂಸಾರ. ಯಾವ ಚೇತನನಿಗೆ, ಆತ್ಮನಿಗೆ ಆವರಣ, ಮುಚ್ಚಳ ಇದೆಯೋ ಅವನನ್ನು ಸಂಸಾರಿ ಎಂದು ಕರೆದರು. ಲಕ್ಷ್ಮಿಗೂ, ಪರಮಾತ್ಮನಿಗೂ ಆ ಮುಚ್ಚಳ ಇಲ್ಲವೇ ಇಲ್ಲ. ಆದ್ದರಿಂದಲೇ ಅವರನ್ನು ನಿತ್ಯಮುಕ್ತರು ಎಂದು ಕರೆದರು.

ನಾವು ಸಂಸಾರದ ಮುಚ್ಚಳವನ್ನು ಕಳೆದುಕೊಂಡಾಗ ನಮ್ಮನ್ನು ಮುಕ್ತರು ಎಂದಷ್ಟೇ ಕರೆಯುವುದು ; ನಿತ್ಯಮುಕ್ತರು ಎಂದು ಕರೆಯುವುದಿಲ್ಲ. ಲಕ್ಷ್ಮೀನಾರಾಯಣರಷ್ಟೇ ನಿತ್ಯಮುಕ್ತರು. ಅಂದರೆ ಅವರು ಎಂದೆಂದೂ

ಸಂಸಾರಿಗಳಲ್ಲ. ಇದನ್ನೇ ಭೀಷ್ಮರು - 'ಉದ್ಭವ' - ಎಂದು ಸ್ತುತಿಸಿರುವರು.

ಸಂಸಾರವನ್ನು ಮೆಟ್ಟಿ ನಿಂತವನೆಂಬ ಅರ್ಥದಲ್ಲಿ ಭಗವಂತನನ್ನು 'ಉದ್ಭವ'ಎಂದು ಉಪಾಸನೆ ಮಾಡಿದರೆ ಅದರ ಫಲವಾಗಿ ಕ್ರಮೇಣ ಮುಕ್ತಿಯನ್ನು ಅನುಗ್ರಹಿಸುವನಲ್ಲದೆ, ಸಂಸಾರದಲ್ಲಿ ಇರುವಾಗಲೂ ದುಃಖವನ್ನು ಮೆಟ್ಟಿ ನಿಲ್ಲುವ ತಾಕತ್ತನ್ನು ಭಗವಂತನು ಅನುಗ್ರಹಿಸುವನು.

ಭೀಷ್ಮರು ಒಂದು ಕಡೆಯಿಂದ ಮೊಮ್ಮಕ್ಕಳಿಂದ ಸೋಲಿನ ದುಃಖವನ್ನೂ, ಮತ್ತೊಂದು ಕಡೆಯಿಂದ ಶರಪಂಜರದಲ್ಲಿ ಮಲಗಿರುವ ಪ್ರಯುಕ್ತ ಚುಚ್ಚುತ್ತಿರುವ ಬಾಣಗಳ ನೋವನ್ನೂ ಅನುಭವಿಸುತ್ತ ಉತ್ತರಾಯಣಕ್ಕಾಗಿ ನಿರೀಕ್ಷಿಸುತ್ತಿರುವ ತಾವು ಆ ನೋವನ್ನು ಉತ್ತರಾಯಣ ಬರುವವರೆಗೆ ಸಹಿಸಿಕೊಳ್ಳುವಂತೆ ಅನುಗ್ರಹಿಸಬೇಕೆಂಬ ಅಭಿಪ್ರಾಯದಲ್ಲಿ ಅವನನ್ನು 'ಉದ್ಭವ' - ಎಂದು ಸ್ತುತಿಸುತ್ತಿರುವರು.

**೩೭೭. ಕ್ಷೋಭಣಃ - ಮನಸ್ಸಿನಲ್ಲಿ ವಿಕಾರವನ್ನುಂಟು ಮಾಡುವವನು.**

**ವಿವರಣೆ :** ಕ್ಷೋಭ'ಯತೀತಿ ಕ್ಷೋಭ'ಣಃ, ಮನಸ್ಸಿಗೆ ವಿಕಾರವನ್ನು ತಂದುಕೊಡುವವನೆಂಬ ಅರ್ಥ. ನಾವು ಯಾವುದೇ ಚಟುವಟಿಕೆ ನಡೆಸಬೇಕಾದರೂ ಮೊದಲು ನಮ್ಮ ಮನಸ್ಸಿನಲ್ಲಿ ಕ್ಷೋಭೆ, ಅಂದರೆ ವಿಕಾರ ಉಂಟಾಗಬೇಕು. ನಮಗೆ ಮೊದಲು ತೋರಬೇಕು - ಅದನ್ನು ಮಾಡೋಣ ಎಂದು. ಇಲ್ಲಿಂದ ಹೊರಡಬೇಕಾದರೂ 'ಇಲ್ಲಿಂದ ಏಳೋಣ' - ಎಂದು ಮನಸ್ಸಿಗೆ ತೋರಬೇಕು. ಅದಕ್ಕೆ ಸರಿಯಾದ ಪ್ರಯತ್ನ ನಡೆದು, ಬಳಿಕ ಹೊರಡುವುದು. ಆದ್ದರಿಂದಲೇ ಭೀಮಸೇನ ಕಾಮ ದೊಡ್ಡದು ಅಂದ. ಪ್ರತಿಯೊಂದು ಪ್ರವೃತ್ತಿಯ ಹಿನ್ನೆಲೆಯಲ್ಲಿ ಮನಸ್ಸಿನ ಇಚ್ಛೆ ಉಂಟಾಗಬೇಕು.

ನಾವೀಗ ಮನಸ್ಸಿನ ದುಃಖದ ವಿಕಾರವನ್ನಷ್ಟೇ ಕ್ಷೋಭೆ ಎಂದು ವ್ಯವಹರಿಸುವೆವು. ಆದರೆ ಶಾಸ್ತ್ರಕಾರರು ಮನಸ್ಸಿನ ಯಾವುದೇ ಬಗೆಯ ವಿಕಾರವೂ ಕ್ಷೋಭೆ ಎನಿಸುವುದೆಂದು ತಿಳಿಸುವರು. ಅಂತಹ ಮಾನಸಿಕ ವಿಕಾರವನ್ನು ತಂದು ಕೊಡುವ ಭಗವಂತ ಕ್ಷೋಭಣ.

ಸೃಷ್ಟಿ ಮಾಡಬೇಕೆಂದು ಸಂಕಲ್ಪಿಸಿದ ಭಗವಂತ ಚತುರ್ಮುಖನನ್ನೂ, ಸರಸ್ವತಿಯನ್ನೂ ಸೃಷ್ಟಿ ಮಾಡಿ ಅವರೊಳಗೆ ಪ್ರವೇಶಿಸಿ ಅವರ ಮನಸ್ಸನ್ನು ವಿಕಾರಕ್ಕೊಳಪಡಿಸಿದ. ಚತುರ್ಮುಖಸರಸ್ವತಿಯರು ಒಂದುಗೂಡಿದರು. ಸೃಷ್ಟಿ ನಡೆಸಿದರು. ಹೀಗೆಯೇ ರುದ್ರಪಾರ್ವತಿಯರ ಮನಸ್ಸಿನ ವಿಕಾರವನ್ನೂ ಹುಟ್ಟಿಸಿ ಅವರ

ಮೂಲಕ ಸೃಷ್ಟಿ ನಡೆಸಿದ. ಲೋಕದಲ್ಲಿ ಯಾರೇ ಸತಿಪತಿಯರು ಒಟ್ಟುಗೂಡಬೇಕೆಂದರೆ ಅವರವರ ಮನಸ್ಸಿನಲ್ಲಿ ಅದಕ್ಕೆ ಬೇಕಾದ ಮನಸ್ಸಿನ ವಿಕಾರವನ್ನು ಉಂಟುಮಾಡುವವನೇ ‘ಕ್ಷೋಭಣ’ ಎನಿಸುವ ಭಗವಂತ.

ಮನಸ್ಸಿನಲ್ಲಿ ಕೋಪವೇ ಮುಂತಾದ ನಾನಾಭಾವನೆಗಳಿಗೆ ಬೇಕಾದ ವಿಕಾರಗಳಾಗುವವು. ಕಣ್ಣು ಯಾವುದನ್ನಾದರೂ ನೋಡಬೇಕಾದರೂ ಮೊದಲು ಮನಸ್ಸಿನಲ್ಲಿ ನೋಡಬೇಕೆಂಬ ವಿಕಾರ ಉಂಟಾಗಿ ಅಂತಹ ಮನಸ್ಸಿನ ಸಂಪರ್ಕ ಕಣ್ಣಿಗೆ ಆಗಬೇಕು. ಇದೇ ರೀತಿಯಾಗಿ ಕಿವಿಯಿಂದ ಏನನ್ನಾದರೂ ಕೇಳಬೇಕಾದರೂ, ಕೈಯಿಂದ ಮುಟ್ಟಬೇಕಾದರೂ, ಮೂಗಿನಿಂದ ಮೂಸಬೇಕಾದರೂ - ಮೊದಲು ಮನಸ್ಸಿನಲ್ಲಿ ಆಯಾ ಪ್ರವೃತ್ತಿಗೆ ಬೇಕಾದ ವಿಕಾರ ಆಗಬೇಕು. ಆ ಎಲ್ಲ ವಿಕಾರವನ್ನು ಹುಟ್ಟಿಸುವವನು ‘ಕ್ಷೋಭಣ’ ಎನಿಸುವ ಭಗವಂತನೇ.

ಹೀಗೆ ಒಳ್ಳೆಯ ಪ್ರವೃತ್ತಿಗೂ, ಕೆಟ್ಟ ಪ್ರವೃತ್ತಿಗೂ ಪ್ರಯೋಜಕವಾಗುವ ಮನಸ್ಸಿನ ವಿಕಾರವನ್ನು ಭಗವಂತನು ಉಂಟು ಮಾಡುವನಾದರೂ, ನಾವು ಅವನಲ್ಲಿ ಒಳ್ಳೆಯ ಪ್ರವೃತ್ತಿಗಳಿಗೆ ಪ್ರಯೋಜಕವಾಗುವಂತೆ ನಮ್ಮಲ್ಲಿ ಮನಸ್ಸಿನ ವಿಕಾರಗಳನ್ನು ಉಂಟು ಮಾಡುವಂತೆ ‘ಕ್ಷೋಭಣ’ ನಾಮದ ಮೂಲಕ ಅವನನ್ನು ಉಪಾಸನೆ ನಡೆಸಬೇಕು.

**೩೭೮. ದೇವಃ - ಪ್ರಕಾಶ, ವಿಜಯ, ಇಚ್ಛೆ, ಸ್ತುತಿ, ವ್ಯವಹಾರ, ವ್ಯಾಪ್ತಿ ಹಾಗು ಪೂರ್ಣ ಸುಖ ಈ ಏಳನ್ನು ಪೂರ್ಣ ಪ್ರಮಾಣದಲ್ಲಿ ಹೊಂದಿರುವವನು.**

**ವಿವರಣೆ :** ಸುಮಾರು ಅರ್ಥಗಳನ್ನು ದೇವನಾಮಕ್ಕೆ ಶಾಸ್ತ್ರಕಾರರು ತಿಳಿಸಿಕೊಡುವರು - **‘ದ್ಯೋತನಾತ್ ವಿಜಯಾತ್ ಕಾಂತ್ಯಾ ಸ್ತುತ್ಯಾ ವ್ಯವಹೃತೇರಪಿ | ಗತ್ಯಾ ರತ್ಯಾ ಚ ದೇವಾಖ್ಯಂ......’**

ಆದುದರಿಂದ ಇಷ್ಟು ಅರ್ಥಗಳಲ್ಲಿ ಭಗವಂತನೊಬ್ಬನೇ ‘ದೇವ’ ಎನಿಸುವನು. ಉಳಿದವರೆಲ್ಲ ‘ದೇವತೆ’ಗಳೆನಿಸುವರಷ್ಟೇ.

**ದ್ಯೋತನಾತ್** - ಪ್ರಕಾಶವುಳ್ಳವನಾದುದರಿಂದ ಭಗವಂತನಿಗೆ ದೇವ ಎಂಬ ಹೆಸರು.

**ವಿಜಯಾತ್** - ದೇವರಿಗೆ ಎಲ್ಲಿ, ಯಾರಿಂದ ಸೋಲು ಬಂದಿದೆ ? ತನ್ನ ಭಕ್ತರನ್ನು ಬಿಟ್ಟರೆ ಬೇರೆ ಯಾರಿಂದಲೂ ಯಾವಾಗಲೂ ಅವನು ಸೋತವನಲ್ಲ. ಭಕ್ತರಿಂದ ಸೋಲುವುದೂ ದೇವರಿಗೆ ಒಂದು ಗೆಲುವೇ. ಶಿಷ್ಯರಿಂದ ಸೋಲುವುದು ಗುರುಗಳಿಗೆ ಹೇಗೆ ಗೆಲುವೋ ಹಾಗೆ. ಹೀಗೆ ಸರ್ವತ್ರ ಜಯಶಾಲಿಯಾಗಿರುವುದರಿಂದ ಅವನಿಗೆ

ದೇವ ಎಂಬ ಹೆಸರು.

**ಕಾಂತ್ಯಾ** - ಕಾಂತಿ ಎಂದರೆ ಇಚ್ಛೆ. ಲೋಕದಲ್ಲಿ ಕಾಂತಿ ಎಂದರೆ ಪ್ರಕಾಶ ಎಂಬ ಅರ್ಥ ಇದೆ. ಆದರೆ ಆ ಅರ್ಥವನ್ನು ದ್ಯೋತನಾತ್ ಎಂಬ ಪದದಿಂದ ಮೊದಲೇ ಸೂಚಿಸಲಾಗಿದೆ. ಆದುದರಿಂದ ಇಲ್ಲಿ ಕಾಂತಿ ಎಂದರೆ ಇಚ್ಛೆ. ನಮ್ಮಲ್ಲಿ ಯಾವುದಾದರೊಂದು ಇಚ್ಛೆ ಉಂಟಾಗಿದೆಯೋ ಹಾಗಾದರೆ ಭಗವಂತ ನಮ್ಮೊಳಗೆ ಇದ್ದಾನೆ ಎಂದರ್ಥ. ಲಕ್ಷ್ಮಿಯನ್ನು ಪ್ರಾರಂಭ ಮಾಡಿಕೊಂಡು ತೃಣ ಜೀವದವರೆಗೆ ಪ್ರತಿಯೊಬ್ಬರಲ್ಲೂ ಇಚ್ಛೆ ಬರುವುದು ಭಗವಂತನಿಂದ. ಆದ್ದರಿಂದ ಯಾರಿಂದಾಗಿ ಪ್ರತಿಯೊಬ್ಬರಿಗೂ ಬೇರೆ ಬೇರೆ ಇಚ್ಛೆ ಉಂಟಾಗುವುದೋ ಅವನೇ ದೇವ.

**ಸ್ತುತ್ಯಾ** - ಎಲ್ಲರ ಹೊಗಳುವಿಕೆಗೂ ಪಾತ್ರನಾಗಿರುವವನು. ಲಕ್ಷ್ಮೀದೇವಿ ಉಳಿದೆಲ್ಲರ ಹೊಗಳಿಕೆಗೆ ಒಳಪಡುವವಳು. ಆದರೆ ದೇವರು ಲಕ್ಷ್ಮಿಯನ್ನು ಹೊಗಳುವುದೆಂದಿಲ್ಲ. ಭಾರತಿಯನ್ನು ಉಳಿದೆಲ್ಲರೂ ಹೊಗಳುವರು. ಆದರೆ ಲಕ್ಷ್ಮೀನಾರಾಯಣರು ಹಾಗೂ ಚತುರ್ಮುಖ ಭಾರತಿಯನ್ನು ಹೊಗಳುವುದೆಂದಿಲ್ಲ.

ಹೀಗೆ ಕೆಳಗೆ ಕೆಳಗೆ ಬಂದಂತೆ ಮೇಲೆ ಮೇಲೆ ಇರುವವರು ಹೊಗಳುವುದನ್ನು ಬಿಡುವರು.

ಹಾಗಾದರೆ ಎಲ್ಲರಿಂದಲೂ ಹೊಗಳಲ್ಪಡುವವನು ಭಗವಂತನೊಬ್ಬನೇ ಆಗಿದ್ದು, ಆದುದರಿಂದಲೇ ಅವನನ್ನು ದೇವ ಎಂದು ಕರೆಯಲಾಗಿದೆ.

**ವ್ಯವಹೃತೇಃ** - ವ್ಯವಹಾರ, ಜಗತ್ತಿನ ಪ್ರತಿಯೊಂದು ಚಟುವಟಿಕೆಯೂ ಯಾರಿಂದ ಆಗುವುದೋ ಅವನನ್ನು 'ದೇವ'- ಎಂದು ಕರೆಯಲಾಗಿದೆ.

**ಗತ್ಯಾ** - ಗತಿ ಎಂದರೆ ವ್ಯಾಪ್ತಿ. ಇರುವಿಕೆ. ದೇವರು ಎಲ್ಲಿ ಇಲ್ಲ ? ಎಲ್ಲೂ ದೇವರು ಇಲ್ಲ ಎಂದು ಹೇಳುವಂತಿಲ್ಲ. ಹೀಗೆ ಎಲ್ಲೆಡೆ ವ್ಯಾಪಿಸಿರುವುದರಿಂದ ಅವನನ್ನು 'ದೇವ' ಎಂದು ಕರೆಯಲಾಗಿದೆ. ಚತುರ್ಮುಖನಿಗೆ, ಭಾರತಿಗೆ ಹೀಗೆ ಉಳಿದ ಯಾವ ದೇವತೆಗಳಿಗೂ ಎಲ್ಲೆಡೆ ಇರುವಿಕೆ ಇಲ್ಲ. ಅವನೊಬ್ಬನೇ ಎಲ್ಲೆಡೆ ಇರುವವನಾದುದರಿಂದ ಅವನನ್ನು 'ದೇವ' ಎಂದು ಕರೆಯಲಾಗಿದೆ.

**ರತ್ಯಾ** - ರತಿ ಶಬ್ದಕ್ಕೆ ಸಂತೋಷ ಎಂದರ್ಥ. ಲಕ್ಷ್ಮೀ ಸಂತೋಷ ಪಡುವಳು ನಾರಾಯಣನಿಂದ. ಆದರೆ ನಾರಾಯಣ ಸಂತೋಷ ಪಡುವನು - ಉಳಿದ ಯಾರಿಂದಲೂ ಅಲ್ಲ ; ಮತ್ತೆ ತನ್ನಿಂದಲೇ ತಾನು ಸಂತೋಷ ಪಡುವನು. 'ಸ್ವರಮಣ' ಎನಿಸುವ ಭಗವಂತನಿಗೆ ತೃಪ್ತಿ ಪಡುವುದಕ್ಕೆ ಇನ್ನಾರ ಸಹಾಯವೂ ಬೇಕಿಲ್ಲ.

ಕೆಲವೊಮ್ಮೆ ನಾವೂ ತುಂಬ ಯತ್ನ ಪಟ್ಟು ಏನನ್ನಾದರೂ ಸಾಧಿಸಿದೆವೆಂದರೆ ಅದಕ್ಕೆ ನಾವೇ ತೃಪ್ತಿ ಪಡುವುದುಂಟು. ಆದನ್ನೂ ಸ್ವಲ್ಪ ಮಟ್ಟಿಗೆ 'ಸ್ವರಮಣ' ಎನ್ನಬಹುದೋ ಏನೋ. ಆದರೆ ಇಲ್ಲಿ ಆಯಾಸ, ಶ್ರಮ ಸೇರಿಕೊಂಡಿರುವುದು. ಆದರೆ ಭಗವಂತ ಹೀಗಲ್ಲ. ತಾನು ತಾನಾಗಿಯೇ ಅನಾಯಾಸವಾಗಿ ತೃಪ್ತಿ ಪಡುತ್ತಿರುವವನು.

ಈ ಏಳೂ ಅರ್ಥಗಳು ಪೂರ್ಣಪ್ರಮಾಣದಲ್ಲಿ ಯಾರಲ್ಲಿ ಸೇರಿ-ಕೊಂಡಿವೆಯೋ ಅವನನ್ನು 'ದೇವ' - ಎಂದು ಕರೆಯಲಾಗಿದೆ.

**೩೭೯. ಶ್ರೀಗರ್ಭಃ - * ಸಂಪತ್ತನ್ನು ತನ್ನ ಗರ್ಭದಲ್ಲಿ ಇಟ್ಟುಕೊಂಡವನು.**

*** ಹಿರಣ್ಮಯವಾದ ಬ್ರಹ್ಮಾಂಡವನ್ನು ತನ್ನ ಉದರದಲ್ಲಿ ಹೊತ್ತುಕೊಂಡವನು.**

**ವಿವರಣೆ :** ಸಂಪತ್ತನ್ನು ಗರ್ಭದಲ್ಲಿ ಇಟ್ಟುಕೊಂಡವನೆಂಬುದು ಒಂದು ಅರ್ಥ. ಪ್ರತಿಯೊಂದು ಕಲ್ಪದಲ್ಲೂ ಭಗವಂತನು ಒಂದೊಂದು ಬ್ರಹ್ಮಾಂಡವನ್ನು ಹೊರ ಹಾಕುವನು. ಆ ಬ್ರಹ್ಮಾಂಡ ಹಿರಣ್ಮಯ. ಚಿನ್ನದ್ದು. ಆದ್ದರಿಂದ ಸಂಪತ್ತುರೂಪದ, ಹಿರಣ್ಮಯವಾದ ಬ್ರಹ್ಮಾಂಡವನ್ನು ತನ್ನ ಗರ್ಭದಲ್ಲಿ ಉದರದಲ್ಲಿ ಹೊತ್ತವನು - ಎಂಬುದು ಮತ್ತೊಂದು ಅರ್ಥ.

**೩೮೦. ಪರಮೇಶ್ವರಃ - ಉತ್ತಮವಾಗಿ ಪ್ರೇರಣೆ ಮಾಡುವವನು ; ಆದುದರಿಂದಲೇ ಶ್ರೇಷ್ಠ ಎನಿಸಿರುವನು.**

**ವಿವರಣೆ :** ಪರಮೇಶ+ವರ ಪರಮೇಶ್ವರ. ಪರಮ+ಈಶ್ವರ ಎಂಬುದಾಗಿ ಪದ ವಿಭಾಗವನ್ನೂ ಇಟ್ಟುಕೊಳ್ಳಬಹುದು. ಇದು ಮತ್ತೊಂದು ಬಗೆಯ ಪದ ವಿಭಾಗ. ಪರಮ ಈಶ - ಉತ್ತಮವಾಗಿ ಪ್ರೇರಣೆ ಮಾಡುವವನು ; ಆದುದರಿಂದಲೇ ವರ - ಶ್ರೇಷ್ಠನಾದವನು. ಭಗವಂತ ಹೀಗೆ ಎಂದು ಪ್ರೇರಣೆ ಮಾಡಿದನೆಂದರೆ 'ಹಾಗಲ್ಲ ಹೀಗೆ' - ಎಂದು ಮತ್ತೊಬ್ಬ ಪ್ರೇರಣೆ ಮಾಡುವವನಿಲ್ಲ. ಇಂದ್ರಾದಿಗಳು ನಮ್ಮನ್ನು ಒಂದು ಬಗೆಯಲ್ಲಿ ಪ್ರೇರಣೆ ಮಾಡಿ,ಅದಕ್ಕೆ ವಿರುದ್ಧವಾಗಿ ಭಗವಂತ ಮತ್ತೊಂದು ಬಗೆಯಲ್ಲಿ ಪ್ರೇರಣೆ ಮಾಡಬಲ್ಲ. ಯಾರೋ ಜ್ಯೋತಿಷ್ಕರು ತಿಳಿಸಿ ಗಣಪತಿಯ ಉಪಾಸನೆ ಮಾಡಿದರೂ ಫಲ ಸಿಗಬೇಕಾಗಿಲ್ಲ. ಯಾಕೆಂದರೆ, ಗಣಪತಿ ಆ ಫಲ ದೊರಕಲೆಂದು ಪ್ರೇರಣೆ ಮಾಡಿದ್ದರೂ ಭಗವಂತ ಆ ಫಲ ದೊರಕಬಾರದೆಂದು ಪ್ರೇರಣೆ ಮಾಡಿದ್ದರಿಂದಾಗಿ ಆ ಫಲ ದೊರಕುವುದಿಲ್ಲ. ಹಾಗಾದರೆ ಯಾರ ಪ್ರೇರಣೆಯ

ಮುಂದೆ ಇನ್ನೊಬ್ಬನ ಪ್ರೇರಣೆ ನಡೆಯುವುದಿಲ್ಲ - ಅವನೇ ಪರಮೇಶ. ಆದುದರಿಂದಲೇ ಅವನು ವರ - ಉತ್ತಮ.

ಯಾರ ಆಜ್ಞೆಯು ಮುಂದೆ ಇನ್ನೊಬ್ಬರ ಆಜ್ಞೆ ನಡೆಯುವುದಿಲ್ಲವೋ ಅಂತಹವನ ಆಜ್ಞೆ ನಮಗೆ ಬೇಕಾಗಿದೆ. ಆದ್ದರಿಂದ ಭಗವಂತನ ಆಜ್ಞೆ ನಮಗೆ ಬೇಕು. ಅನ್ಯ ದೇವತೆಗಳ ಅಪ್ಪಣೆ ನಮಗೆ ಬೇಡ. ಯಾಕೆಂದರೆ ನಮ್ಮ ಜೀವನದಲ್ಲಿ ಅದು ನಡೆಯುವುದಿಲ್ಲ ಭಗವಂತನ ಆಜ್ಞೆ ಅದಕ್ಕೆ ವಿರುದ್ಧವಾಗಿ ಇದ್ದರೆ. ಭಗವಂತನ ಆಜ್ಞೆಗೆ ಅನುಗುಣವಾಗಿಯೇ ಇತರ ದೇವತೆಗಳ ಆಜ್ಞೆ ಇತ್ತೆಂದರೆ ಅದು ನಡೆದೇ ತೀರುವುದು.

ಭೀಷ್ಮರು ಯುದ್ಧದಲ್ಲಿ ಬೀಳುವ ಹಿಂದಿನ ದಿನ ಕೃಷ್ಣನೇ ಅವರ ಶಿಬಿರಕ್ಕೆ ಹೋಗಿ 'ನಾಳೆ ಶಿಖಂಡಿಯ ಎದುರು ಬೀಳಬೇಕು' ಎಂದು ಆಜ್ಞೆ ನೀಡಿದ್ದ. ಕೃಷ್ಣನ ಆಜ್ಞೆಯ ಮುಂದೆ ದುರ್ಯೋಧನನ 'ನೀವು ಬೀಳಬಾರದು' - ಎಂಬ ಆಜ್ಞೆ ನಡೆದಿಲ್ಲ.

ಯಾರ ಅಪ್ಪಣೆ ನಮ್ಮ ಜೀವನದಲ್ಲಿ ಚೆನ್ನಾಗಿ ಕೆಲಸ ನಡೆಸಿ ಕೊಡುವುದೋ ಅವರ ಅಪ್ಪಣೆಯೇ ಬೇಕು. ಆದುದರಿಂದಲೇ 'ಪರಮೇಶ' ಎನಿಸಿಕೊಳ್ಳುವ ಅವನೇ 'ವರ' ಉತ್ತಮ ಎನಿಸುವನು.

**೩೮೧. ಕರಣಂ - * ಪ್ರತಿಯೊಂದು ಕಾರ್ಯಕ್ಕೂ ನೇರವಾದ ಕಾರಣ.**

*** ಕೈಗಳನ್ನು ತಲುಪಿಸಿರುವವನು.**

**ವಿವರಣೆ :** ನೇರವಾದ ಕಾರಣ 'ಕರಣ' ಎನಿಸಿದರೆ, ಪರಂಪರಯಾ ಕಾರಣವಾದುದು 'ಕಾರಣ' ಎನಿಸುವುದು. ಬಟ್ಟೆಗೆ ಹತ್ತಿ ಕಾರಣವೆನಿಸಿದರೆ, ನೂಲು ಕರಣವೆನಿಸುವುದು. ನಾವು ಹುಟ್ಟಲು ನಮ್ಮ ತಂದೆ ತಾಯಂದಿರು ಕರಣರೆನಿಸಿದರೆ, ನಮ್ಮ ಅಜ್ಜ ಅಜ್ಜಿಯರು ಕಾರಣರು. ಆದುದರಿಂದ ಸಮೀಪದ ಕಾರಣ ಕರಣ ಎನಿಸಿದರೆ, ದೂರದ ಕಾರಣ ಕಾರಣವೆನಿಸುವುದು.

ದೇವರು ಈ ಜಗತ್ತಿಗೆ ಕರಣನೋ ? ಕಾರಣನೋ ? ಎಂದರೆ ಕರಣನೂ ಹೌದು ; ಕಾರಣನೂ ಹೌದು. ಯಾಕೆಂದರೆ ಅವನು ದೂರದ ಕಾರಣನೂ ಹೌದು; ಸಮೀಪದ ಕಾರಣನೂ ಹೌದು.

ಇನ್ನೊಂದು ಅರ್ಥ - ಕರ+ಣ. ಕರ ಅಂದರೆ ಕೈಗಳನ್ನು 'ಣ' ಕೊಟ್ಟವನು. ಕರೌ ನಯತಿ - ಪ್ರಾಪಯತಿ ಹೊಂದಿಸುವವನು - ಕರಣ. ನಮಗೆ ಚೆಂದದ ಕೈಗಳನ್ನು ನೀಡಿರುವವನೇ ಕರಣ. ನಮ್ಮ ಪ್ರತಿಯೊಂದು ವ್ಯವಹಾರವೂ ಕೈಗಳನ್ನೇ ಮುಖ್ಯವಾಗಿ

ಅವಲಂಬಿಸಿರುವವು. ಅಂತಹ ಉತ್ತಮವಾದ ಕೈಗಳನ್ನು ನೀಡಿರುವವನು ಭಗವಂತನು. ಅವನು ತನ್ನ ಆರಾಧನೆಗಾಗಿ ಎರಡು ಕೈಗಳನ್ನು ಅನುಗ್ರಹಿಸಿರುವನು.

ಶ್ರೀ ವಾದಿರಾಜ ಸ್ವಾಮಿಗಳು ಹಯಗ್ರೀವನಲ್ಲಿ ಹೀಗೆ ಬೇಡಿಕೊಂಡಿರುವರು- **'ಕರೌ ತ್ವದರ್ಚನೇ ನಿತ್ಯಂ.....'** ನಿನ್ನ ಆರಾಧನೆಗಾಗಿ ಕೈಗಳು. ಏನು ಆರಾಧನೆ ? ಒಂದು ಪುಷ್ಪಾಂಜಲಿ ಉಂಟೇ ಉಂಟು. ಮತ್ತೊಂದು **'ಸುಖತೀರ್ಥಸ್ಯ ಲೇಖನೇ....'** ಹಿರಿಯರು ದೇವರ ಬಗ್ಗೆ ಹೇಳಿದರೆ, ಹಾಗೆ ಹೇಳಿದ್ದನ್ನು ಬರೆದುಕೊಳ್ಳಲು ಕೈಗಳು.

ಹೀಗೆ ಒಳ್ಳೆಯ ಕೈಗಳನ್ನು ನೀಡುವವನೇ ಕರಣ. ಭೀಷ್ಮರು ಕ್ಷತ್ರಿಯರು. ಅವರಿಗೆ ಶತ್ರುಗಳನ್ನು ಸದೆಬಡಿಯುವುದೇ ಕೈಗಳ ಪ್ರಧಾನಉದ್ದೇಶ. ನಾಲ್ಕು ವರ್ಣದವರಿಗೂ ಯಾವುದು ಇಲ್ಲದಿದ್ದರೆ ತಮ್ಮ ತಮ್ಮ ವರ್ಣದ ಧರ್ಮಗಳನ್ನು ನಡೆಸಲಾಗುವುದಿಲ್ಲವೋ ಅಂತಹ ಉತ್ತಮ ಕೈಗಳನ್ನು ನೀಡುವುದರಿಂದಲೇ ಭಗವಂತ 'ಕರಣ'.

'ಅದನ್ನು ಕೇಳಲು ನನ್ನ ಕೈಯಿಂದ ಆಗುವುದಿಲ್ಲ ; ಅದನ್ನು ಮಾಡಲು ನನ್ನ ಕೈಯಿಂದ ಆಗುವುದಿಲ್ಲ....' ಹೀಗೆ ಪ್ರತಿಯೊಂದನ್ನೂ ನಡೆಸಲು ಆಗುವುದಿಲ್ಲ ಎಂಬುದನ್ನು 'ಕೈ'ಯನ್ನು ಸೇರಿಸಿ ಹೇಳುವ ಪ್ರವೃತ್ತಿ ಭಗವಂತನನ್ನು 'ಕರಣ' ಎಂದು ಉಪಾಸನೆ ಮಾಡುವುದರಿಂದ ಬದಲಾಗಿ 'ನನ್ನ ಕೈಯಿಂದ ಅದು ಯಾಕೆ ಆಗುವುದಿಲ್ಲ? ಅದನ್ನು ಕೇಳಲು ನನ್ನ ಕೈಯಿಂದ ಯಾಕೆ ಆಗುವುದಿಲ್ಲ' - ಎಂಬ ಉತ್ಸಾಹ, ಸ್ಫೂರ್ತಿ ಉಂಟಾಗಬಲ್ಲದು.

**೩೮೨. ಕಾರಣಂ - ಚತುರ್ಮುಖ ಅಥವಾ ವಾಯುದೇವನ ದೋಷಗಳನ್ನು ದೂರ ಮಾಡಿರುವವನು.**

**ವಿವರಣೆ :**ಕ+ಅರ+ಣ - ಕ+ಅರ = ಕಾರ - ಹೀಗೆ ಬಿಡಿಸಿ ಬಿಡಿಸಿ ಹೇಳುವುದು ಕೆಲವರ ಪಾಲಿಗೆ 'ಖಾರ' ಆಗಬಹುದು. ಆದರೂ ಮುಂದೆ ಆರೋಗ್ಯವಾಗುತ್ತದೆ ಎಂದು ಖಾರವನ್ನೂ ಅನುಭವಿಸಬೇಕು. ಕ ಎಂದರೆ ಚತುರ್ಮುಖನ ಅರ ಎಂದರೆ ದೋಷಗಳನ್ನು - ಣ ಎಂದರೆ 'ನಯತಿ' - ಅಪನಯತಿ ದೂರ ಸರಿಸುವವನು. ಚತುರ್ಮುಖನಲ್ಲಿ ಅಥವಾ ವಾಯುದೇವನಲ್ಲಿ ಯಾವುದೇ ದೋಷ ಇಲ್ಲದಂತೆ ಮಾಡಿರುವವನು - ಕಾರಣ. ಚತುರ್ಮುಖನಾಗಲೀ ವಾಯುದೇವನಾಗಲೀ ದೇವರ ಬಗ್ಗೆ ಒಮ್ಮೆಯೂ ತಪ್ಪು ಮಾತನ್ನು ಆಡಿದ್ದಿಲ್ಲ. ಯಾಕೆಂದರೆ ತಪ್ಪು ಮಾತು ಬರುವುದು ದೋಷದಿಂದಾಗಿ. ಚತುರ್ಮುಖನನ್ನೂ, ವಾಯುದೇವನನ್ನೂ ಯಾವುದೇ ದೋಷ ಇಲ್ಲದಂತೆ ಮಾಡಿ, ಅವರಿಂದ ದೇವರ ಬಗ್ಗೆ ತಪ್ಪು ಮಾತು ಹೊರಡದಂತೆ

ಮಾಡಿರುವವನು ಭಗವಂತ.

ಹಾಗೆಯೇ ಚತುರ್ಮುಖನಲ್ಲೂ, ವಾಯುದೇವನಲ್ಲೂ ದೋಷಗಳನ್ನು ದೂರ ಮಾಡಿ, ಅವರಿಗೆ ‘ಆನಂದತೀರ್ಥಪರಾನಂದವರದ’ ಎಂದಿರುವಂತೆ ಪರಾನಂದ ದೊರಕುವಂತೆ ಮಾಡಿರುವವನು ಕಾರಣ.

ಭೀಷ್ಮರು ತಮ್ಮ ದೋಷ ದೂರ ಮಾಡುವವನೆಂದು ಉಪಾಸನೆ ಮಾಡುವ ಬದಲು ಚತುರ್ಮುಖ, ವಾಯುದೇವರ ದೋಷ ದೂರ ಮಾಡುವನೆಂದು ಉಪಾಸನೆ ಮಾಡುತ್ತಿದ್ದಾರೆ. ಇದು ಉತ್ತಮರ ಸ್ವಭಾವ. ದೇವರಲ್ಲಿ ತಮಗೆ ಕೊಡು ಎಂದು ಕೇಳದೆ, ಇತರ ಭಕ್ತರಿಗೆ ಕೊಟ್ಟವನೆಂದು ಸ್ತುತಿಸುವುದು. ಮಧ್ಯಗೇಹ ಭಟ್ಟರು ಅನಂತಾಸನನಲ್ಲಿ ತಮಗೆ ಪುತ್ರನನ್ನು ಕೊಡು ಎಂದು ಕೇಳದೆ ಕರ್ದಮಾದಿಗಳಿಗೆ ಉತ್ತಮ ಪುತ್ರರನ್ನು ಕೊಟ್ಟವನೆಂದು ಸ್ತುತಿಸಿರುವರು. ಹೀಗೆ ಸ್ತುತಿಸಿದಾಗ ಭಗವಂತನು ಹಾಗೆ ಕೇಳಿದವರಿಗೂ ಕೊಟ್ಟೇ ಕೊಡುವನು.

ಚತುರ್ಮುಖನ ದೋಷ ದೂರ ಮಾಡಿದವನೆಂದು ಉಪಾಸನೆ ನಡೆಸಿದ ಭೀಷ್ಮರ ದೋಷಗಳನ್ನೂ ಭಗವಂತನು ದೂರ ಮಾಡದೆ ಇರುವುದಿಲ್ಲ.

**೩೮೩. ಕರ್ತಾ - ಎಲ್ಲವನ್ನೂ ಮಾಡುವವನು.**

**ವಿವರಣೆ :** ಕರ್ತಾ ಎಂದರೆ ಮಾಡುವವನು. ಏನು ಮಾಡುವವನು ? ಅದನ್ನು, ಇದನ್ನು ಹೇಳದೆ ‘ಕರ್ತಾ’ ಮಾಡುವವನು ಎಂದಷ್ಟೇ ಹೇಳಿರುವುದರಿಂದ ಎಲ್ಲವನ್ನೂ ಮಾಡುವವನು - ಎಂದು ತಿಳಿಯುವುದು.

ನಮಗೆ ಸಂಬಂಧಿಸುವ ಒಳ್ಳೆದನ್ನೂ, ಕೆಟ್ಟದನ್ನೂ ಮಾಡುವವನು. ಮೇಲ್ನೋಟಕ್ಕೆ ನಮಗೆ ಕೆಟ್ಟದ್ದಾಗಿ ಕಂಡರೂ ಆಂತರಿಕವಾಗಿ ಒಳ್ಳೆಯದ್ದೇ ಆಗಿರುವುದು. ಇದನ್ನು ಸರಿಯಾಗಿ ವಿಶ್ಲೇಷಿಸಿಕೊಂಡಿರಬೇಕು.

ಹೀಗೆ ಒಳ್ಳೆದು, ಕೆಟ್ಟದು ಎನ್ನದೆ ಎಲ್ಲವನ್ನೂ ಮಾಡುವವನು ‘ಕರ್ತಾ’.

**೩೮೪. ವಿಕರ್ತಾ - ತನ್ನ ಪಾತ್ರ ಎದ್ದು ತೋರುವಂತೆ ವಿಶೇಷವಾಗಿ ಮಾಡುವವನು.**

**ವಿವರಣೆ :** ಕರ್ತಾ ಎಂಬುದಕ್ಕೆ ಮಾಡುವವನು ಎಂಬ ಅರ್ಥ. ಅವನೇ ಮಾಡುವನೋ ಬೇರೆ ಯಾರಾದರೂ ಮಾಡಿದರೋ - ಎಂದು ಸ್ಪಷ್ಟವಾಗುವುದಿಲ್ಲ. ಆದರೆ ಕೆಲವು ಸಂದರ್ಭಗಳಲ್ಲಿ ತಾನೇ ಮಾಡಿದ್ದೇನೆ ಎಂದು ಸ್ಪಷ್ಟವಾಗಿ ಗೊತ್ತಾಗುವಂತೆ

ವಿಶೇಷವಾಗಿ ಮಾಡುವನು 'ವಿಕರ್ತಾ'.

ನಾವು ಎಷ್ಟೋ ಬಾರಿ 'ಅದೃಷ್ಟವಶಾತ್' ಆಯಿತು ಎಂದು ಒಪ್ಪಿಕೊಳ್ಳುವುದುಂಟು. ಅದೇ ದೇವರು ನೇರವಾಗಿ, ವಿಶೇಷವಾಗಿ ಮಾಡುವುದು. ಭಗವಂತ ಇನ್ನೊಬ್ಬರ ಮೂಲಕ ಮಾಡಿಸುವನು. ಕೆಲವೊಮ್ಮೆ ಅನಿರೀಕ್ಷಿತವಾಗಿ ಸಂಭವಿಸುವುದು ; ದೊರಕುವುದು. ಇದು ಇನ್ನೊಬ್ಬರ ಮೂಲಕ ಅಲ್ಲ. ಪರೀಕ್ಷೆಯಲ್ಲಿ ಅನಿರೀಕ್ಷಿತವಾಗಿ 98 ಅಂಕಗಳು ಬಂದರೆ - ಇದರಲ್ಲಿ ಇತರರ ಪಾತ್ರವು ಕಾಣದಿರುವುದರಿಂದ, ಭಗವಂತನೇ ಇಲ್ಲಿ 'ವಿಕರ್ತಾ' ವಿಶೇಷವಾಗಿ ನೆರವೇರಿಸುವವನು.

ಅದೃಷ್ಟದಿಂದಾಗಿ ನಡೆಯಿತೆಂದರೂ 'ಕಾಣದ ಕೈ'ಯಿಂದ ನೆರವೇರಿತೆಂದರೂ ಒಂದೇ.

ತನ್ನ ಪಾತ್ರ ಎದ್ದು ಕಾಣದಂತೆ ನಡೆಸುವ ಭಗವಂತ 'ಕರ್ತಾ' ಎನಿಸಿದರೆ, ತನ್ನ ಪಾತ್ರ ಎದ್ದು ಕಾಣುವಂತೆ ವಿಶೇಷವಾಗಿ ನಡೆಸುವ ಭಗವಂತ ವಿಕರ್ತಾ. ಯಾವಾಗಲೂ ನಮ್ಮ ರಕ್ಷಣೆ ಮಾಡುತ್ತಾ ಕರ್ತಾ ಎನಿಸುವ ಭಗವಂತನು ಒಮ್ಮೆ ಯಾರೋ ಬಂದರೆಂದು ಬಾಗಿಲು ತೆರೆಯಲು ಹೋದಾಗ ಅದುವರೆಗೆ ನಾವು ಕೂತಿದ್ದ ಸ್ಥಳದ ಮೇಲಿದ್ದ ಫ್ಯಾನ್ ದೊಪ್ಪನೆ ಕೆಳಗೆ ಬೀಳಲು ಆ ಫ್ಯಾನಿನ ಪತನದಿಂದ ನಮಗೆ ಹಾನಿಯಾಗದಂತೆ ವಿಶೇಷವಾಗಿ ರಕ್ಷಿಸಿರುವ ಪ್ರಯುಕ್ತ 'ವಿಕರ್ತಾ' ಎನಿಸುವನು.

ಈ ರೀತಿಯಾಗಿ ಭಗವಂತನು 'ವಿಕರ್ತಾ' ಎಂದೆನಿಸಿ ನಮ್ಮ ಬದುಕಿನಲ್ಲಿ ಆಗಾಗ್ಗೆ ಅನುಗ್ರಹಿಸುತ್ತಿರುವುದು ಎಲ್ಲರ ಗಮನಕ್ಕೂ ಬರುವಂತಹದ್ದೇ.

**೩೮೫. ಗಹನಃ - ಪೂರ್ಣವಾಗಿ ಅರ್ಥ್‌ವಮಾಡಿಕೊಳ್ಳಲಾಗದಷ್ಟು ಗಂಭೀರನಾಗಿರುವವನು.**

**ವಿವರಣೆ :** 'ಅಬ್ಬಾ' ಇದು ಬಹಳ ಗಹನ ಅಪ್ಪ ! ಅರ್ಥನೇ ಆಗುವುದಿಲ್ಲ ! ಎಂದರು ಭೀಷ್ಮಾಚಾರ್ಯರು. ಇಷ್ಟೆಲ್ಲ ದೇವರು ನಡೆಸುತ್ತಿದ್ದರೂ ಇನ್ನೂ ದೇವರು ಗಹನ- ಗಂಭೀರ - ಆಳ.

ಭೀಷ್ಮರು ಇಷ್ಟು ಸಮಯ ಕೃಷ್ಣನ ಒಡನಾಟದಲ್ಲಿ ಇದ್ದವರು. ಆದರೂ ಅವರು ಅಂತಾರೆ 'ನನಗೆ ಇಷ್ಟು ವಯಸ್ಸು ಮಾತ್ರ ಆದದ್ದು. ಇನ್ನೂ ಕೃಷ್ಣನನ್ನು ಪೂರ್ಣವಾಗಿ ಅರ್ಥ ಮಾಡಿಕೊಳ್ಳಲು ಆಗಲೇ ಇಲ್ಲ.' ಆದುದರಿಂದಲೇ ಕೃಷ್ಣ ಗಹನ.

ಕೂಡಲೇ ಅರ್ಥವಾಗದ ವ್ಯಕ್ತಿತ್ವದವನೇ ಗಹನ.

**೩೮೬. ಗುಹಃ - ತನ್ನನ್ನೂ, ಜೀವನ ಸ್ವರೂಪವನ್ನೂ ಕಾಣದಂತೆ ಮುಚ್ಚಿಕೊಂಡಿರುವವನು.**

**ವಿವರಣೆ :** ತನ್ನನ್ನು ಮುಚ್ಚಿಕೊಂಡಿರುವವನು 'ಗುಹ'. ಆದುದರಿಂದಲೇ ಅವನು 'ಗಹನ'. ಯಾರ ಮುಂದೆಯೂ ಅವನು ತನ್ನನ್ನು ಪೂರ್ಣವಾಗಿ ತೆರೆದುಕೊಳ್ಳುವುದೆಂದೇ ಇಲ್ಲ.

ವಸ್ತು ಕಾಣಿಸಿದಂತೆ ಮಾಡತಕ್ಕದ್ದೇ 'ಗುಹಾ'. ಭಗವಂತನು ತನ್ನನ್ನು ನಮಗೆ ಕಾಣಿಸಿದಂತೆ ಮಾಡುವುದಷ್ಟೇ ಅಲ್ಲ ನಮ್ಮನ್ನೂ ನಮಗೆ ಕಾಣಿಸಿದಂತೆ ಮಾಡುವನು. 'ಸ್ವಗುಣಾಚ್ಛಾದಿಕಾ' - ಎಂಬ ಪ್ರಕೃತಿಯ ಪರದೆಯನ್ನು ಹಾಕಿ ನಾವು ನಮಗೆ ಕಾಣದಂತೆ ಮಾಡಿದರೆ, 'ಪರಮಾಚ್ಛಾದಿಕಾ' - ಎಂಬ ಪರದೆಯನ್ನು ಹಾಕಿ ತಾನೂ ನಮಗೆ ಕಾಣದಂತೆ ಮಾಡುವನು.

ನಮಗೆ ನಾವು ಕಾಣಿಸದಿರುವುದರಿಂದಲೇ ಕೆಲವೊಮ್ಮೆ ನಮ್ಮ ಮೇಲೆಯೇ ನಮಗೆ ಸಂಶಯ ಬರುವುದುಂಟು. ಕೆಲವೊಮ್ಮೆ ಭಾರೀ ಆಸಕ್ತಿಯಿಂದ ಪ್ರವಚನದಲ್ಲಿ ಭಾಗವಹಿಸುವ ನಮಗೆ ಮತ್ತೆ ಕೆಲವೊಮ್ಮೆ 'ಸಾಕಪ್ಪ ! ಎಷ್ಟು ಕೇಳುವುದು ! - ಎಂದು ಇದ್ದಕ್ಕಿದ್ದಂತೆ ವೈರಾಗ್ಯ ಬರುವುದುಂಟು. ಅಂತಹ ಪ್ರಸಂಗಗಳಲ್ಲಿ ಹಿಂದಿನ ದಿನ ಇದ್ದ ಆಸಕ್ತಿ, ಹುರುಪು, ಉತ್ಸಾಹ ಮರುದಿನ ಮಾಯವಾಗಬೇಕೆಂದರೆ ನಾವು ಯಾರು ? ನಿನ್ನೆ ಉತ್ಸಾಹಕ್ಕೊಳಗಾಗಿದ್ದ ವ್ಯಕ್ತಿಯೇ ನಾನು ಹೌದೋ ಅಲ್ಲವೋ ? - ಎಂದು ನಮ್ಮ ಬಗ್ಗೆಯೇ ನಮಗೆ ಸಂಶಯ ಮೂಡುವುದುಂಟು.

ಹೀಗೆ ಭಗವಂತನು ತನ್ನನ್ನೂ, ಜೀವನ ಸ್ವರೂಪವನ್ನೂ ಕಾಣಿಸಿದಂತೆ ಮಾಡುವುದರಿಂದಲೇ 'ಗುಹ' ಎನಿಸಿರುವನು.

**ವ್ಯವಸಾಯೋ ವ್ಯವಸ್ಥಾನಃ ಸಂಸ್ಥಾನಃ ಸ್ಥಾನದೋ ಧ್ರುವಃ |**
**ಪರರ್ದ್ಧಿಃ ಪರಮಸ್ಪಷ್ಟಸ್ತುಷ್ಟಃ ಪುಷ್ಟಃ ಶುಭೇಕ್ಷಣಃ ||೪೨||**

**೩೮೭. ವ್ಯವಸಾಯಃ - ನಿಶ್ಚಯಾತ್ಮಕವಾದ ಜ್ಞಾನರೂಪಿ.**

**ವಿವರಣೆ :** ನಮ್ಮಲ್ಲಿ ಕೃಷಿ ಮಾಡುವುದಕ್ಕೆ 'ವ್ಯವಸಾಯ ಮಾಡುತ್ತಿದ್ದೇನೆ'- ಎಂಬ ವ್ಯವಹಾರ ಬಂದಿದೆ. ಆದರೆ ಭೀಷ್ಮರು ಅಂತಾರೆ - ವ್ಯವಸಾಯ ಎಂಬುದು ದೇವರ ಹೆಸರು.

**'ವ್ಯವಸಾಯಾತ್ಮಿಕಾ ಬುದ್ಧಿರೇಕೇಹ ಕುರುನಂದನ'**- ಎಂಬುದಾಗಿ ಗೀತಾಚಾರ್ಯ ನಿಶ್ಚಿತಾತ್ಮಕ ತಿಳುವಳಿಕೆ ಎಂಬ ಅರ್ಥದಲ್ಲಿ ವ್ಯವಸಾಯ ಶಬ್ದವನ್ನು ಬಳಸಿರುವನು.

ಇತರ ಕ್ಷೇತ್ರಗಳಲ್ಲಿ ದುಡಿದರೆ ಫಲ ದೊರಕುವುದೆಂದು ನಿಶ್ಚಯವಿಲ್ಲದ್ದು, ಬೇಸಾಯದಲ್ಲಾದರೆ ಫಸಲೇ ಅಲ್ಲದಿದ್ದರೂ ಹುಲ್ಲಾದರೂ ದೊರಕಿಯೇ ತೀರುವುದೆಂದು ಫಲದವಿಷಯದಲ್ಲಿ ನಿಶ್ಚಯವಿರುವ ಪ್ರಯುಕ್ತವೇ ಬೇಸಾಯಕ್ಕೂ ವ್ಯವಸಾಯ ಎಂಬ ವ್ಯವಹಾರ ಬಂದಿರಬಹುದೋ ಏನೋ !

ನಿಶ್ಚಿತಾತ್ಮಕವಾದ ಜ್ಞಾನ ಸ್ವರೂಪಿ ಭಗವಂತ. ಯಾವುದರ ಬಗ್ಗೆಯೇ ಆಗಬಹುದು 'ಹಾಗೋ ಹೀಗೋ'- ಎಂದು ಕೇಳಿದರೆ ಹಾಗೆಯೇ ಅಥವಾ ಹೀಗೆಯೇ - ಎಂದು ತೀರ್ಮಾನ ನೀಡುವವನು ಭಗವಂತ. ನಾವಾದರೆ 'ನಾಳೆ ಹೇಳುವೆವು'- ಎಂದು ಹೇಳಿ ನಮ್ಮ ಸಂದೇಹವನ್ನು ಮುಚ್ಚಿಟ್ಟುಕೊಳ್ಳುವೆವು. ಭಗವಂತ ಹಾಗಲ್ಲ.

ಮಹಾಭಾರತ ಯುದ್ಧದಲ್ಲಿ ಅನೇಕ ಪ್ರಸಂಗಗಳು ಬರುವುದುಂಟು. ಒಮ್ಮೆ ಅರ್ಜುನನನ್ನು ಒಂದು ಕಡೆಯಿಂದ ಸಂಶಪ್ತಕರು ಯುದ್ಧಕ್ಕೆ ಕರೆಯುವರು; ಮತ್ತೊಂದು ಕಡೆಯಿಂದ ಅಶ್ವತ್ಥಾಮಾಚಾರ್ಯರು ಕರೆಯುವರು. ಅರ್ಜುನ **'ಕಾರ್ಯಂ ಕೃಷ್ಣಮಪೃಚ್ಛತ'** ಏನು ಮಾಡಬೇಕೆಂದು ಕೃಷ್ಣನಲ್ಲಿ ಕೇಳಿದಾಗ ಕೃಷ್ಣ ಏನೂ ಸಂದೇಹ ಪಡದೆ ನೇರವಾಗಿ ಅಶ್ವತ್ಥಾಮಾಚಾರ್ಯರಲ್ಲಿ ಅರ್ಜುನನ ರಥವನ್ನು ಕೊಂಡೊಯ್ದು. ಇದಕ್ಕೆ **'ವ್ಯವಸಾಯಾತ್ಮಿಕಾ ಬುದ್ಧಿಃ'** - ಒಳ್ಳೆಯ ಪಳಗಿದ ಬುದ್ಧಿ ಎಂದು ಹೆಸರು. ಯಾವಾಗ ಬುದ್ಧಿಯನ್ನು ಪಳಗಿಸುವೆವೋ ಆಗ ನಮಗೊಂದು ತೀರ್ಮಾನ ಬರುವುದು. ಭೀಷ್ಮರು ಕೃಷ್ಣನನ್ನು ಸ್ತುತಿಸುವರು - ನೀನೇ ಪಳಗಿದ ಬುದ್ಧಿಸ್ವರೂಪ. ನಿಶ್ಚಯಾತ್ಮಕ ಜ್ಞಾನಸ್ವರೂಪ.

ಭಗವಂತನನ್ನು ಹೀಗೆ 'ವ್ಯವಸಾಯ' - ಎಂದು ಉಪಾಸನೆ ನಡೆಸಿದೆವೆಂದರೆ ಫಲಿತಾಂಶ - ಅನೇಕ ಸಮಸ್ಯೆಗಳು ಸುತ್ತುವರಿದಾಗ ತೀರ್ಮಾನ ತೆಗೆದುಕೊಳ್ಳಲು ಬೇಕಾದ ಸ್ಫೂರ್ತಿಯನ್ನು ಭಗವಂತನು ನೀಡುವನು. ಆ ತೀರ್ಮಾನದಿಂದಲೂ ಏನಾದರೂ ಸಮಸ್ಯೆ ಉಂಟಾಯಿತೆಂದರೆ ಅದನ್ನು ಬಗೆಹರಿಸುವುದಕ್ಕೂ ಬೇಕಾದ ಸಾಮರ್ಥ್ಯವನ್ನು ಭಗವಂತನು ಅನುಗ್ರಹಿಸುವನು.

**೩೮೮. ವ್ಯವಸ್ಥಾನಃ - ದೈತ್ಯರಿಗೆ ತನ್ನ ಬಗ್ಗೆ ವಿಪರೀತವಾದ ತಿಳುವಳಿಕೆಯನ್ನು ನೀಡುವವನು**

**ವಿವರಣೆ :** ವಿ + ಅವಸ್ಥಾನ ವ್ಯವಸ್ಥಾನ. ಯಣ್ ಸಂಧಿಯಾಗಿ ರೂಪುಗೊಂಡ ನಾಮ.

ಸಾತ್ವಿಕರಿಗೆ ಭಗವಂತನು ತನ್ನ ಬಗ್ಗೆ ವ್ಯವಸಾಯಾತ್ಮಕವಾದ ಜ್ಞಾನವನ್ನು ನೀಡಿದರೆ ದೈತ್ಯರಿಗೆ, ಅಸುರರಿಗೆ ತನ್ನ ಬಗ್ಗೆ ವಿಪರೀತವಾದ ತಿಳುವಳಿಕೆಯನ್ನೇ ನೀಡುವನು. ದೈತ್ಯರ ಬಗ್ಗೆ ವಿ + ಅವಸ್ಥಾನ ವಿಪರೀತವಾಗಿ ಇರುವಿಕೆ. ದೈತ್ಯರು ಎಂದೂ ಕೂಡಾ ದೇವರು ಹೇಗೆ ಇದ್ದಾನೋ ಹಾಗೆ ತಿಳಿದುಕೊಳ್ಳುವುದೇ ಇಲ್ಲ. ವಿಪರೀತವಾಗಿಯೇ ತಿಳಿದುಕೊಳ್ಳುವರು. ರಾಮನಿಗೆ ಸೋಲು ಬಂತು. ಸೀತೆಗಾಗಿ ರಾಮ ದುಃಖಿಸಿದ. ಹೀಗೆ ದೇವರನ್ನು ತಪ್ಪಾಗಿಯೇ ತಿಳಿದುಕೊಳ್ಳುವವರು ದೈತ್ಯರು. ಯಾರಾದರೂ ರಾಮಚಂದ್ರ ನಾಟಕ ಮಾಡಿದ್ದೇ ವಿನಹ ರಾಮಚಂದ್ರನಿಗೆ ದುಃಖ ಇಲ್ಲ - ಎಂದರೆ ನಿಮಗೆ ಗೊತ್ತಿಲ್ಲ ಎನ್ನುವರೇ ಹೊರತು ಅದನ್ನು ಎಂದೆಂದೂ ಒಪ್ಪಿಕೊಳ್ಳಲಾರರು. ರಾಮಚಂದ್ರನಿಗೆ ದುಃಖ ಇಲ್ಲ ಎನ್ನುವವನಿಗೇ 'ನಿನಗೆ ಗೊತ್ತಿಲ್ಲ' ಎನ್ನುವರು. ಇದು ಯಾಕೆ ? ಸಾತ್ವಿಕರ ಪಾಲಿಗೆ ತನ್ನ ಬಗ್ಗೆ ಸರಿಯಾದ ತಿಳುವಳಿಕೆಯನ್ನು ನೀಡಿ 'ವ್ಯವಸಾಯ' ಎನಿಸಿರುವ ಭಗವಂತ ಅಸುರರ, ದೈತ್ಯರ ಪಾಲಿಗೆ ತನ್ನ ಬಗ್ಗೆ 'ವ್ಯವಸ್ಥಾನ' ಎನಿಸಿ ತಪ್ಪು ತಿಳುವಳಿಕೆ ನೀಡುವನು. **'ವಿಬುಧಾಸುರಸೌಖ್ಯ-ದುಃಖಸತ್ಕಾರಣಾಯ.....'** ಎಂದಿರುವಂತೆ ವಿಬುಧ ಎನಿಸುವ ದೇವತೆಗಳಿಗೆ ಸರಿಯಾದ ಜ್ಞಾನ ಕೊಟ್ಟು ಸುಖವನ್ನೂ, ಅಸುರರಿಗೆ ತಪ್ಪು ತಿಳುವಳಿಕೆ ನೀಡಿ ದುಃಖವನ್ನೂ ನೀಡುವನು. ಇದನ್ನೇ ವ್ಯವಸಾಯ ಹಾಗೂ ವ್ಯವಸ್ಥಾನ ಎಂಬ ನಾಮಗಳಿಂದ ಪ್ರತಿಪಾದಿಸಲಾಗಿದೆ.

ಒಂದೇ ಅರಮನೆ, ಒಂದೇ ಭವನ, ಒಂದೇ ಕೋಣೆ - ಅದರಲ್ಲಿ ಒಂದೇ ಅವಧಿಯಲ್ಲಿ ಕೃಷ್ಣನೂ ಕೂತಿದ್ದಾನೆ ; ಭೀಷ್ಮರೂ ಕೂತಿದ್ದಾರೆ. ಭೀಷ್ಮರಿಗೂ ಕೃಷ್ಣನ ಪ್ರಜ್ಞೆ ಬರುತ್ತಿದೆ ; ದುರ್ಯೋಧನನಿಗೂ ಕೃಷ್ಣನ ಪ್ರಜ್ಞೆ ಬರುತ್ತಿದೆ. ಹೀಗೆ ಒಂದೇ ಜಾಗದಲ್ಲಿ, ಒಂದೇ ಕಾಲದಲ್ಲಿ ಒಂದೇ ವ್ಯಕ್ತಿಯ ಬಗ್ಗೆ ಉಂಟಾಗುವ ತಿಳುವಳಿಕೆ ಮಾತ್ರ ಪರಸ್ಪರವಾಗಿ ವಿಲಕ್ಷಣವಾದುದು. ಭೀಷ್ಮರಿಗೆ 'ವ್ಯವಸಾಯ'ವಾದರೆ ದುರ್ಯೋಧನನಿಗೆ 'ವ್ಯವಸ್ಥಾನ'.

ಹೀಗೆ ಭೀಷ್ಮರು ಶರಪಂಜರದಲ್ಲಿ ತಮ್ಮ ಅನುಭವವನ್ನು ಮೆಲುಕು ಹಾಕುತ್ತಿರುವರು.

**೩೮೯. ಸಂಸ್ಥಾನಃ – ವಿಚ್ಛೇದ ಇಲ್ಲದಂತೆ ಪರಂಪರೆ ಮುಂದುವರೆಯುವಂತೆ ಮಾಡುವವನು.**

**ವಿವರಣೆ: 'ಮಠಸಂಸ್ಥಾನ'-** ಎಂದು ವ್ಯವಹರಿಸಲಾಗುವುದು. ಮಠವನ್ನು ಸಂಸ್ಥಾನ ಎಂದು ಕರೆಯಲಾಗುವುದೇ ಹೊರತು ಮನೆಯನ್ನು ಸಂಸ್ಥಾನ ಎನ್ನಲಾಗುವುದಿಲ್ಲ.

ಯಾವುದರ ಪರಂಪರೆ ನಿಲ್ಲುವುದಿಲ್ಲವೋ ಅದನ್ನು ಸಂಸ್ಥಾನ ಎನ್ನಲಾಗುವುದು. ಸಮ್ಯಕ್ ತಿಷ್ಠತಿ ಚೆನ್ನಾಗಿ ಅಂದರೆ ವಿಚ್ಛೇದ ಇಲ್ಲದಂತೆ ಇದೆ ಎಂಬ ಅಭಿಪ್ರಾಯದಲ್ಲಿ 'ಸಂಸ್ಥಾನ' ಎನಿಸುವುದು. ವಿಚ್ಛೇದ ಇಲ್ಲದೆ ಮುಂದುವರಿಯುವ ಪರಂಪರೆ ಸಂಸ್ಥಾನ.

ಹೀಗೆ ವಿಚ್ಛೇದ ಇಲ್ಲದೆ ಪರಂಪರೆ ಮುಂದುವರಿಯುವುದಕ್ಕೆ ಕಾರಣನಾದ ಭಗವಂತನೇ 'ಸಂಸ್ಥಾನ'. ಕುರುಪರಂಪರೆ ಕ್ಷೇಮಕ ರಾಜನವರೆಗೂ ನಿಲ್ಲದೆ ಮುಂದುವರಿಯುವಂತೆ ಮಾಡಿರುವನು. ಮುಂದೆ ಕಲಿಯುಗದಲ್ಲಿ ಆ ಪರಂಪರೆಯ ರಾಜರು ಬೇಡ ಎಂಬ ದೃಷ್ಟಿಯಿಂದಷ್ಟೇ ಕುರುಪರಂಪರೆಯನ್ನು ಅಲ್ಲಿಗೇ ಕೊನೆಗೊಳಿಸಿರುವನು.

ಸಂತಾನ ಪರಂಪರೆಯೂ ಆಗಿದ್ದಿರಬಹುದು, ಶಿಷ್ಯಪರಂಪರೆಯೂ ಆಗಿದ್ದಿರಬಹುದು. ವಿಚ್ಛೇದವಿಲ್ಲದಂತೆ ಮುಂದುವರಿಯಲು ಸಂಸ್ಥಾನ - ಸಮ್ಯಕ್ ಸ್ಥಾಪಯತಿ - ವಿಚ್ಛೇದವಿಲ್ಲದಂತೆ ನಿಲ್ಲಿಸುವ ಭಗವಂತನ ಅನುಗ್ರಹ ಕಾರಣ. ಆದುದರಿಂದ ನಮ್ಮ ಸಂತಾನಪರಂಪರೆಯಾಗಲೀ ಶಿಷ್ಯಪರಂಪರೆಯಾಗಲೀ ಮುಂದುವರಿಯುತ್ತ ಇರಬೇಕೆಂದು ಅಪೇಕ್ಷೆ ಪಡುವವರು ಭಗವಂತನನ್ನು 'ಸಂಸ್ಥಾನ'- ಎಂದು ಉಪಾಸನೆ ನಡೆಸಬೇಕು.

**೩೯೦. ಸ್ಥಾನದಃ – * ಆಯಾ ವ್ಯಕ್ತಿಗಳನ್ನು ಅವರವರಿಗೆ ಯೋಗ್ಯಗಳಾದ ಸ್ಥಾನಗಳಲ್ಲಿ ಕೂಡಿಸುವವನು.**

*** ಯೋಗ್ಯ ವ್ಯಕ್ತಿಗಳನ್ನು ಅವರವರ ಸ್ಥಾನದಲ್ಲಿ ಕೂಡಿಸುವವನು.**

**ವಿವರಣೆ: 'ಸ್ಥಾನಂ ದದಾತಿ'** ಇತಿ ಸ್ಥಾನದಃ, ಆ ಸ್ಥಾನದಲ್ಲಿ ಕೂಡಿಸುವ ಯೋಗ್ಯತೆ ಇದೆಯೋ ಆ ವ್ಯಕ್ತಿಯನ್ನು ಅಲ್ಲಿ ಕೂಡಿಸುವನು. ಯೋಗ್ಯತೆ ಇಲ್ಲವೋ ಹಾಗಿದ್ದರೆ ವ್ಯಕ್ತಿ ಆ ಸ್ಥಾನದಲ್ಲಿ ಕುಳಿತಿದ್ದರೂ ಅವನನ್ನು ಅಲ್ಲಿಂದ ಎಬ್ಬಿಸುವನು.

ದುರ್ಯೋಧನನಿಗೆ ಹಸ್ತಿನಾಪುರದ ಸಿಂಹಾಸನದಲ್ಲಿ ಕುಳಿತುಕೊಳ್ಳುವ ಯೋಗ್ಯತೆ ಇಲ್ಲ. ಆದುದರಿಂದಲೇ ಅವನು ಕೆಲವು ದಿನಗಳ ಮಟ್ಟಿಗೆ ಆ ಸ್ಥಾನದಲ್ಲಿ ಕುಳಿತಿದ್ದರೂ ಅವನನ್ನು ಅಲ್ಲಿಂದ ಉಚ್ಚಾಟನೆ ಮಾಡಿಸಿದ.

ಭೀಷ್ಮರು ಕೃಷ್ಣನಲ್ಲಿ ಬೇಡುವರು ನಾನು ದ್ಯುನಾಮಕ ವಸು ಆಗಿದ್ದಾಗ ಏನೋ ಮಾಡಬಾರದಾದ ಅಕೃತ್ಯವನ್ನು ಎಸಗಿದ್ದಕ್ಕಾಗಿ ನನ್ನನ್ನು ವಸುಸ್ಥಾನದಿಂದ ಉಚ್ಚಾಟನೆ ಮಾಡಿ, ಭೂಮಿಗೆ ಕಳುಹಿಸಿದಿ. ಪುನಃ ಆ ಸ್ಥಾನವನ್ನು ನನಗೆ ಅನುಗ್ರಹಿಸು.

ನಾವೂ ಕೆಲವೊಮ್ಮೆ ಸ್ಥಾನ ಪಲ್ಲಟಗೊಂಡಾಗ ಪುನಃ ನಮ್ಮ ಸ್ಥಾನ ನಮಗೆ

ದಕ್ಕುವಂತೆ ದೇವರನ್ನು 'ಸ್ಥಾನದಃ' - ಎಂದು ಉಪಾಸನೆ ಮಾಡೋಣ.

**೩೯೧. ಧ್ರುವಃ – ಶಾಶ್ವತವಾದ ಸ್ಥಾನವನ್ನು ಹೊಂದಿರುವವನು.**

**ವಿವರಣೆ : 'ಸ್ಥಾನದಃ'** ನಾಮದಿಂದ ಉಳಿದವರಿಗೆ ಅವರವರಿಗೆ ಯೋಗ್ಯಗಳಾದ ಸ್ಥಾನಗಳನ್ನು ನೀಡುವವನೆಂದಾಗ, ಉಳಿದವರಿಗೆ ಸ್ಥಾನಗಳನ್ನು ಕೊಡುವ ಇವನ ಸ್ಥಾನವಾದರೂ ಎಷ್ಟು ಗಟ್ಟಿ ? - ಎಂದರೆ 'ಧ್ರುವಃ' - ಎಂದೆಂದೂ ಚ್ಯುತಿಬಾರದ ಸ್ಥಾನದಲ್ಲಿರುವವನು. 'ಧ್ರುವ' ನಕ್ಷತ್ರವನ್ನು ಧ್ರುವ ಎನ್ನುವೆವು ಯಾಕಾಗಿ ? ಶಾಶ್ವತ ಸ್ಥಿರ ಧ್ರುವ - ಇವುಗಳಿಗೆಲ್ಲ ಒಂದೇ ಅರ್ಥ ಎಂದೆಂದೂ ನಾಶವಾಗದೆ ಇರುವವು ಎಂದು ಅರ್ಥ.

ಪದವಿಗಳಲ್ಲೆಲ್ಲ ಶ್ರೇಷ್ಠ ಎಂದು ಪರಿಗಣಿತವಾಗಿರುವ ಚತುರ್ಮುಖನ ಪದವಿಗೂ ಒಮ್ಮೆ ತತ್ವಾರ ಬರುವುದುಂಟು. ಅವನು ಮೋಕ್ಷಕ್ಕೆ ಹೋಗುವಾಗ ಅವನ ಪದವಿಯನ್ನು ತೆರವುಗೊಳಿಸಬೇಕು. ಹೀಗೆ ಎಲ್ಲ ಸ್ಥಾನಗಳೂ ಒಂದಲ್ಲ ಒಂದು ದಿನ ತೆರವುಗೊಳಿಸಬೇಕಾದವು. ಆದರೆ ಭಗವಂತನ ಪದವಿ ಶಾಶ್ವತ. ಆದುದರಿಂದಲೇ ಇನ್ನೊಬ್ಬ ಆ ಪದವಿಗೆ ಬರುವಂತಿಲ್ಲ.

ಬ್ಯಾಂಕ್ ಮುಂತಾದ ಸಂಸ್ಥೆಗಳಲ್ಲಿ ತುಂಬ ಸರ್ವೀಸ್ ಮಾಡಿದ ವ್ಯಕ್ತಿ ಕ್ರಮೇಣ ಅದರ ಅಧ್ಯಕ್ಷ ಸ್ಥಾನವನ್ನೂ ಏರಬಹುದು. ಹಾಗೆ ತುಂಬ ಸಾಧನೆ ಮಾಡಿ ಮಾಡಿ ಕ್ರಮೇಣ ದೇವರ ಪದವಿಗೆ ಬರಬಹುದೋ ? ಖಂಡಿತಾ ಸಾಧ್ಯವಿಲ್ಲ. ಬ್ಯಾಂಕಿನಲ್ಲಿ ಹಿಂದೆ ಅಧ್ಯಕ್ಷನಾಗಿದ್ದವನು ಸ್ಥಾನವನ್ನು ಖಾಲಿ ಮಾಡಿದ್ದರಿಂದ ಮತ್ತೊಬ್ಬ ಆ ಸ್ಥಾನವನ್ನು ಏರುವಂತಾಯಿತು. ಆದರೆ ದೇವರು ಎಂದೂ ತನ್ನ ಸ್ಥಾನವನ್ನು ತೆರವು ಮಾಡುವುದಿಲ್ಲ. ಅವನದ್ದು ತೆರವು ಮಾಡಲು ಯೋಗ್ಯವಾದ ಸ್ಥಾನವೇ ಅಲ್ಲದ್ದರಿಂದ ಆ ಸ್ಥಾನಕ್ಕೆ ಮತ್ತೊಬ್ಬ ಬಹುವ ಪ್ರಶ್ನೆಯೇ ಇಲ್ಲ. ಇದನ್ನೇ 'ಧ್ರುವಃ ' - ಎಂಬ ನಾಮ ತಿಳಿಸುತ್ತಿದೆ.

ಹೀಗೆ ಉಳಿದವರಿಗೆ ಅವರವರ ಯೋಗ್ಯತಾನುಸಾರವಾಗಿ ಬೇರೆ ಬೇರೆ ಸ್ಥಾನಗಳನ್ನು ಕೊಟ್ಟು 'ಸ್ಥಾನದ' ಎನಿಸುವ ಭಗವಂತ ತಾನು ಮಾತ್ರ ಶಾಶ್ವತವಾಗಿ ತನ್ನ ಸ್ಥಾನದಲ್ಲೇ ಇರುವವನಾಗಿ 'ಧ್ರುವ' ಎನಿಸುವನು.

**೩೯೨. ಪರರ್ದ್ಧಿಃ – * ಚತುರ್ಮುಖನಿಗೆ ಅಭಿವೃದ್ಧಿಯನ್ನು ಕೊಟ್ಟಿರುವವನು.**

**ವಿವರಣೆ :** ಪರ ಎಂದರೆ ಚತುರ್ಮುಖ. ಅವನಿಗೆ ಋದ್ಧಿ ಅಂದರೆ ಸಮೃದ್ಧಿಯನ್ನು ಅನುಗ್ರಹಿಸಿರುವವನು. ಜೀವೋತ್ತಮನಿಂದ ಪ್ರಾರಂಭಿಸಿ ಜೀವಾಧಮಕಲಿಯವರೆಗೂ

ಪ್ರತಿಯೊಬ್ಬರ ಹಣೆಯಲ್ಲೂ ನೂರುವರ್ಷಗಳ ಅವಧಿಯ ಒಳಿತು ಕೆಡುಕುಗಳನ್ನು ಬರೆಯಬೇಕೆಂದರೆ ಬ್ರಹ್ಮನಿಗೆ ಅದೆಷ್ಟು ಜಾಣ್ಮೆ ಬೇಕಿಲ್ಲ. ಚತುರ್ಮುಖನಿಗೆ ಅಷ್ಟೊಂದು ನೈಪುಣ್ಯವನ್ನೂ ಅಭಿವೃದ್ಧಿಯನ್ನೂ ಅನುಗ್ರಹಿಸಿರುವವನು ನೀನೇ ಎಂದು ಕೃಷ್ಣನನ್ನು ಭೀಷ್ಮರು ಸ್ತುತಿಸುವರು.

**'ಶ್ವಪಚಾದಪಿ ಕಷ್ಟತ್ವಂ ಬ್ರಹ್ಮೇಶಾನಾದಯಃ ಸುರಾಃ |**
**ತದೇವಾಚ್ಯುತ ಯಾಂತ್ಯೇವ ಯದ್ಯೈವ ತ್ವಂ ಪರಾಙ್ಮುಖಃ' ||**

ಪರಮಾತ್ಮನಲ್ಲಿ ಭಕ್ತನೊಬ್ಬನು ಸಲ್ಲಿಸುವ ಪ್ರಾರ್ಥನೆ. ಹೇ ಅಚ್ಯುತ ! ಎಲ್ಲರಿಗಿಂತ ಎತ್ತರದಲ್ಲಿರುವ ಚತುರ್ಮುಖನ ಬಗ್ಗೆಯೂ ಒಂದೊಮ್ಮೆ ನೀನು ಸ್ವಲ್ಪ ಅಸಮಾಧಾನ ತಾಳಿದಿ ಎಂದರೆ ಕೂಡಲೇ ಅವನು ಚಂಡಾಲನಿಗಿಂತಲೂ ಕೆಳ ಸ್ಥಿತಿಯನ್ನು ಹೊಂದಬೇಕಾಗುವುದು ! ಆದರೆ ಎಂದೂ ನೀನು ಚತುರ್ಮುಖನ ಬಗ್ಗೆ ಆ ರೀತಿಯಾಗಿ ಪರಾಙ್ಮುಖನಾಗುವುದಿಲ್ಲ. ಯಾಕೆಂದರೆ ಚತುರ್ಮುಖ ಎಂದೂ ನಿನಗೆ ಅತೃಪ್ತಿಯನ್ನುಂಟು ಮಾಡುವ ಕೆಲಸವನ್ನು ಮಾಡುವುದೇ ಇಲ್ಲ. ಆದುದರಿಂದ ಪರ ಎನಿಸುವ ಚತುರ್ಮುಖನಿಗೆ ಋದ್ಧಿಯನ್ನು, ಚೆನ್ನಾಗಿ ಅಭಿವೃದ್ಧಿಯನ್ನು ನೀಡಿ ಎಲ್ಲರಿಗಿಂತ ಎತ್ತರದ ಸ್ಥಾನದಲ್ಲಿ ಇಟ್ಟಿರುವವನೇ 'ಪರರ್ದ್ಧಿಃ'

ನಮಗೆ ಉತ್ತಮ ಸ್ಥಾನವನ್ನು ಕೊಡು ಎಂದು ದೇವರಲ್ಲಿ ಕೇಳುವ ಬದಲು ಚತುರ್ಮುಖನಿಗೆ ಉತ್ತಮ ಸ್ಥಾನವನ್ನು ಕೊಟ್ಟವನು ಎಂದು ಸ್ತುತಿಸಿದೆವೆಂದರೆ ನಮಗೂ ಉತ್ತಮ ಸ್ಥಾನವನ್ನು ಕೊಟ್ಟೇ ಕೊಡುವನು.

**೩೯೩. ಪರಮಸ್ಪಷ್ಟಃ – ಶ್ರೇಷ್ಠವಾದ ವೇದ ವಿದ್ಯೆಗೆ ಗೋಚರಿಸುವವನು.**

**ವಿವರಣೆ:** ಸ್ಪಷ್ಟ ಎಂದರೆ ಚೆನ್ನಾಗಿ ಗೋಚರಿಸುವವನು. ಯಾವುದರಿಂದ ? 'ಪರಮ' ದಿಂದ. ಪರ ಎಂದರೆ ಶ್ರೇಷ್ಠವಾದ ಮ ಎಂದರೆ ವೇದವಿದ್ಯೆ. ಅರುವತ್ತನಾಲ್ಕು ವಿದ್ಯೆಗಳಲ್ಲಿ ಪರ ಅಂದರೆ ಶ್ರೇಷ್ಠವಾದ ವಿದ್ಯೆ ಎಂದರೆ ವೇದವಿದ್ಯೆ. ಉಳಿದ ಯಾವುದೇ ವಿದ್ಯೆ ವೇದವಿದ್ಯೆಯ ಮುಂದೆ ಏನೂ ಅಲ್ಲ. ಅಂತಹ ಶ್ರೇಷ್ಠವಾದ ವೇದವಿದ್ಯೆಯಿಂದಲೇ ಸ್ಪಷ್ಟವಾಗುವವನು ಭಗವಂತ. ವೇದ ವಿದ್ಯೆ ಬಿಟ್ಟು ಬೇರೆ ಯಾವ ವಿದ್ಯೆಯೂ ಅವನನ್ನು ಸ್ಪಷ್ಟಗೊಳಿಸದು. ಆದುದರಿಂದ 'ಪರಮ' ಎನಿಸುವ ಶ್ರೇಷ್ಠವಾದ ವೇದವಿದ್ಯೆಯಿಂದ ಸ್ಪಷ್ಟವಾಗುವವನೇ ಪರಮಸ್ಪಷ್ಟ.

ನಮಗೆ ಈಗ ದೇವರು ಸ್ಪಷ್ಟವಾಗುವುದಿಲ್ಲ. ಯಾಕೆಂದರೆ ದೇವರನ್ನು ನಾವು ನೋಡಲಿಲ್ಲ. ದೇವರನ್ನು ನೋಡಿದಾಗಷ್ಟೇ ಅವನು ನಮಗೆ ಸ್ಪಷ್ಟವಾಗುವನು.

ಹಾಗಾದರೆ ದೇವರು ನಮಗೆ ಸ್ಪಷ್ಟವಾಗಬೇಕಾದರೆ ಅವನನ್ನು ನೋಡಬೇಕು. ದೇವರನ್ನು ನೋಡಬೇಕೆಂದರೆ ಶ್ರೇಷ್ಠವಾದ ವಿದ್ಯೆ ಬೇಕು. ಯಾವ ವಿದ್ಯೆ ಅದು? ಅದು ವೇದವಿದ್ಯೆ. ಕಣ್ಣಿಗೆ ಕಾಣದ, ಕಿವಿಗೆ ಕೇಳಿಸದ ದೇವರು ಸ್ವಲ್ಪವಾದರೂ ಗೋಚರಿಸುವುದು ವೇದವಿದ್ಯೆಯಿಂದ. 'ಶ್ರುತಿಗೆ ಸಿಲುಕದವ...' ಎಂಬ ಮಾತು ಶ್ರುತಿಗೂ ಪೂರ್ಣವಾಗಿ ಅವನು ಗೋಚರಿಸುವುದಿಲ್ಲ ಎಂದು ಸಾರುತ್ತಿದೆಯಾದರೂ ಸ್ವಲ್ಪ ಮಟ್ಟಿಗಾದರೂ ಅವನು ಗೋಚರಿಸಬೇಕೆಂದರೆ ಅದು ವೇದ ವಿದ್ಯೆಯಿಂದಲೇ. ಅದನ್ನು 'ಪರಮಸ್ಪಷ್ಟ' ನಾಮ ಪ್ರತಿಪಾದಿಸುತ್ತಿದೆ.

**೩೯೪. ತುಷ್ಟಃ – ಸ್ವಲ್ಪ ಪ್ರಮಾಣದ ಸಾಧನೆಯಿಂದಲೂ ತೃಪ್ತನಾಗುವವನು.**

**ವಿವರಣೆ :** ವೇದವಿದ್ಯೆ ಪರಮಾತ್ಮನನ್ನು ತಿಳಿಸುವುದೇ ಸ್ವಲ್ಪ ಪ್ರಮಾಣದಲ್ಲಿ. ಅದರಿಂದ ನಾವು ತಿಳಿಯುವುದು ಇನ್ನಷ್ಟು ಸ್ವಲ್ಪ ಪ್ರಮಾಣದಲ್ಲಿ. ನಾನು ತಿಳಿದ್ದನ್ನು ನಿಮಗೆ ತಿಳಿಸಿರುವುದು ಮತ್ತಷ್ಟು ಸ್ವಲ್ಪ ಪ್ರಮಾಣದಲ್ಲಿ. ನೀವು ಅದನ್ನು ತಿಳಿದುಕೊಂಡದ್ದು ಇನ್ನಷ್ಟು ಸ್ವಲ್ಪ ಪ್ರಮಾಣದಲ್ಲಿ. ಆದರೂ ದೇವರು ಅಷ್ಟಕ್ಕೇ ತುಷ್ಟನಾಗುವವನು. ಇಷ್ಟಾದರೂ ತಿಳಿದುಕೊಂಡಿದ್ದಿಯಲ್ಲಾ? ಇಷ್ಟಕ್ಕೇ ನಾನು ತುಷ್ಟನಾಗಿದ್ದೇನೆ ಎನ್ನುವನು ಭಗವಂತ. ನಾವು ಎಷ್ಟೇ ಆಗಲೀ ದೇವರ ಬಗ್ಗೆ ತಿಳಿಯಲು ಪ್ರಯತ್ನ ಮಾಡಿದರೂ ಸಾಕು, ಅಷ್ಟಕ್ಕೇನೇ ಭಗವಂತನು ತುಷ್ಟನಾಗುವವನು.

**'ಯತತೋಽಪಿ ಹರೇಃ ಪದಸಂಸ್ಮರಣೇ ಸಕಲಂ ಹ್ಯಘಮಾಶು ಲಯಂ ವ್ರಜತಿ'**- ಎಂದು ಶ್ರೀಮಧ್ವಗುರುಗಳು ತಿಳಿಸಿರುವಂತೆ ಭಗವಂತನ ಪಾದದ ಸ್ಮರಣೆಗಾಗಿ ಯತ್ನಿಸಿದರೂ ಸಾಕು, ಅವನ ಪಾದ ಸ್ಮರಣೆಯನ್ನು ನಡೆಸಲು ಆಗುವುದಿಲ್ಲವಲ್ಲಾ ಎಂದು ಕೊರಗಿದರೂ ಸಾಕು, ಅಷ್ಟರಿಂದಲೂ ಭಗವಂತನು ನಮ್ಮ ಬಗ್ಗೆ 'ತುಷ್ಟ' ನಾಗುವನು. ಯಾಕೆಂದರೆ ಅವನ ಹೆಸರೇ ತುಷ್ಟ - ಯಾವಾಗಲೂ ತೃಪ್ತನಾಗಿರುವವನು.

ಹೀಗೆ ದೇವರು ತುಷ್ಟನಾಗಿರುವವನು, ತೃಪ್ತನಾಗಿರುವವನು ಎಂದು ಇಷ್ಟೇ ಸಾಧನೆಯಲ್ಲಿ ನಿಂತು ಬಿಡಬಾರದು. ಮುಂದುವರಿಯುವ ತಾಕತ್ತು ಇದ್ದೂ ಅದನ್ನು ಬಳಸಿಕೊಳ್ಳದಿದ್ದರೆ ಅಂತಹವರನ್ನು ದೇವರು ಬಡಿತಾನೆ. ಆದರೆ ಸ್ವಲ್ಪವೇ ಸಾಮರ್ಥ್ಯ, ಅಷ್ಟೇ ವಾತಾವರಣ ಇದ್ದರೆ ಅದಕ್ಕನುಗುಣವಾಗಿಯಾದರೂ ನಡೆಸುವ ಸಾಧನಗೆ ಭಗವಂತನು ತುಷ್ಟನಾಗುವನು. ಮಹಾಭಾರತ ಯುದ್ಧ ಹದಿನೆಂಟು ದಿನಗಳ ಕಾಲ ನಡೆದಿದ್ದು, ಅದರಲ್ಲಿ ಭೀಷ್ಮರು ಹತ್ತು ದಿನಗಳಷ್ಟೇ ಪಾಲ್ಗೊಂಡಿದ್ದರೂ

ಅಷ್ಟರಿಂದಲೇ ಕೃಷ್ಣ ತುಷ್ಟ. ವಿರಾಟನ ಮಗ ಮಹಾಭಾರತಯುದ್ಧದ ಮೊದಲನೆಯ ದಿನವೇ ಸತ್ತಿದ್ದ. ಆದರೆ ಅವನ ಒಂದು ದಿನದ ಯುದ್ಧದಿಂದಲೂ ಕೃಷ್ಣ ತುಷ್ಟನಾಗಿದ್ದನು.

ಈ ಪ್ರವಚನದಲ್ಲಿ ಶ್ರೋತೃಗಳಾಗಿ ಪಾಲ್ಗೊಂಡಿರುವ ನಿಮ್ಮ ಇಷ್ಟೇ ಶ್ರವಣದಿಂದಲೂ ದೇವರು ತುಷ್ಟನಾಗುವನು. ಅದ್ದರಿಂದ ಬೇರೆಯವರನ್ನು ಒಲಿಸುವುದು ಕಷ್ಟ. ದೇವರನ್ನು ಒಲಿಸುವುದು ಬಹಳ ಸುಲಭ. ಯಾಕೆಂದರೆ ತನ್ನ ಬಗ್ಗೆ ಅಳವಡಿಸುವ ಸ್ವಲ್ಪ ಪ್ರಮಾಣದ ಯತ್ನಕ್ಕೂ ಬೆಲೆಕೊಟ್ಟು ತೃಪ್ತಿ ಪಡುವ 'ತುಷ್ಟ'ನು ಅವನು.

**೩೯೫. ಪುಷ್ಟಃ – ಸರ್ವತೋಮುಖವಾದ ಅಭಿವೃದ್ಧಿವುಳ್ಳವನು.**

**ವಿವರಣೆ :** ಇಡೀದೇಹದಲ್ಲಿ ಒಂದೇ ರೀತಿಯ ಬೆಳವಣಿಗೆ ಉಳ್ಳವನು ಪುಷ್ಟ. ಹೊರತು ಕಾಲು ಮಾತ್ರ ದಪ್ಪ, ಅಥವಾ ಇನ್ನಾವುದೋ ಅಂಗ ದಪ್ಪವಾಗಿದ್ದಾಗ ಅಂತಹವನು ಪುಷ್ಟ ಎನಿಸುವುದಿಲ್ಲ. ಬದಲಾಗಿ ಸರ್ವತೋಮುಖವಾದ ಅಭಿವೃದ್ಧಿ ಉಳ್ಳಾಗಷ್ಟೇ 'ಪುಷ್ಟ' ಎನಿಸುವನು.

ನಮ್ಮಲ್ಲಿ ದೈಹಿಕ ಅಭಿವೃದ್ಧಿ ಇಲ್ಲ. ಕಾಲಿಕ ಅಭಿವೃದ್ಧಿ ಇಲ್ಲ, ವಾಚಿಕ ಅಭಿವೃದ್ಧಿ ಇಲ್ಲ, ಮಾನಸಿಕ ಅಭಿವೃದ್ಧಿ ಇಲ್ಲ. ಹೀಗೆ ಯಾವ ಬಗೆಯ ಅಭಿವೃದ್ಧಿಯನ್ನು ತೆಗೆದುಕೊಂಡರೂ ನಮ್ಮಲ್ಲಿ ನ್ಯೂನತೆ ಇದೆ. ಆದರೆ ಭಗವಂತನಲ್ಲಿ ಪ್ರತಿಯೊಂದು ಅಭಿವೃದ್ಧಿಯೂ ಇರುವುದರಿಂದ ಅವನು ಪೂರ್ಣಪ್ರಮಾಣದಲ್ಲಿ ಪುಷ್ಟ ; ಸರ್ವತೋಮುಖವಾದ ಅಭಿವೃದ್ಧಿವುಳ್ಳವನು. ಹೇಗೆ ದೇಹದಲ್ಲಿ ಸರ್ವತೋಮುಖವಾದ ಅಭಿವೃದ್ಧಿ ಇದ್ದರಷ್ಟೇ ದೈಹಿಕವಾಗಿ ಪುಷ್ಟ ಎಂದು ವ್ಯವಹರಿಸಲಾಗುವುದೋ ಹಾಗೆ ಸರ್ವತೋಮುಖವಾದ ಅಭಿವೃದ್ಧಿ ಇರುವುದರಿಂದಲೇ ಭಗವಂತ ಪುಷ್ಟ.

**೩೯೬. ಶುಭೇಕ್ಷಣಃ – ಒಳ್ಳೆಯದನ್ನುಂಟು ಮಾಡುವ ನೋಟ ಉಳ್ಳವನು.**

**ವಿವರಣೆ :** ಈಕ್ಷಣ ನೋಡುವಿಕೆ. ಅವನನ್ನು ನೋಡುವುದೂ ಆಗಬಹುದು. ಅವನು ನೋಡುವುದೂ ಆಗಬಹುದು. ಅವನು ನಮ್ಮನ್ನು ನೋಡುವನೋ ಆ ನೋಟವೂ ಶುಭ. ನಾವು ಅವನನ್ನು ನೋಡುವೆವೋ ಆ ನೋಟವೂ ಶುಭ.

ಬೆಳಿಗ್ಗೆ ಎದ್ದಾಕ್ಷಣ ಬೆಕ್ಕು ಮುಂತಾದವುಗಳನ್ನು ಕಾಣಬಾರದೆಂದು ತಲೆಯಲ್ಲಿ ಅವುಗಳನ್ನೇ ಯೋಚಿಸುತ್ತಿದ್ದಲ್ಲಿ ಅವು ಕಾಣದಿದ್ದರೂ ತಲೆಯಲ್ಲಿ ಬಂದದ್ದರಿಂದ

ಆವತ್ತಿನ ಕೆಲಸ ಹಾಳಾಗಿಯೇ ಹೋಗುವುದು. ನೇರವಾಗಿ ನೋಡುವುದಕ್ಕಿಂತಲೂ ಮನಸ್ಸಿನಲ್ಲಿ ಯೋಚಿಸುವುದೇ ಮುಖ್ಯ.

ಆದ್ದರಿಂದ ಬೆಳಿಗ್ಗೆ ಎದ್ದಾಕ್ಷಣ ಅದನ್ನು ನೋಡಬಾರದು, ಇದನ್ನು ನೋಡಬಾರದು - ಎಂದೆಲ್ಲ ಯತ್ನಿಸುವ ಬದಲು ಹಾಸಿಗೆಯಲ್ಲಿ ಕುಳಿತುಕೊಂಡು 'ಹರೇ ರಾಮ ಹರೇ ರಾಮ......' ಎಂದು ಹದಿನಾರು ಬಾರಿ ರಾಮ ಮತ್ತು ಕೃಷ್ಣ ನಾಮಗಳ ಪಠನ ಮಾಡಬೇಕು. ರಾಮಚಂದ್ರನನ್ನೂ, ಶ್ರೀಕೃಷ್ಣನನ್ನೂ ಮನಸ್ಸಿನಲ್ಲಿ ನೋಡಿದಂತಾಗುವುದು. ಬೆಳಿಗ್ಗೆ ಎದ್ದಾಕ್ಷಣ ಮನಸ್ಸಿನ ಕಣ್ಣಿನಿಂದ 'ಶುಭ - ಈಕ್ಷಣ' ನಡೆಸಿದ್ದರಿಂದ ಅಂದು ದಿನವಿಡೀ ಶುಭವಾಗುವುದು. ಅದಕ್ಕೇ ಹಿರಿಯರು ಅಂದದ್ದು ಬೆಳಿಗ್ಗೆ ಚಾಪೆಯಿಂದ ಏಳುವಾಗಲೇ ಮಂಗಲಾಷ್ಟಕ ಪಠಿಸಲು ಪ್ರಾರಂಭಿಸಬೇಕು. ಇದರಿಂದ ಭಗವಂತನ ದರ್ಶನ ಆಗಿ, ನಮ್ಮ ಪಾಲಿಗೆ ಶುಭ - ಈಕ್ಷಣ ಆಗಬೇಕು.

ದೇವರು ನಮ್ಮನ್ನು ನೋಡುವುದರಿಂದ ಹೇಗೆ ನಮಗೆ ಶುಭವೋ ಹಾಗೆ ನಾವು ದೇವರನ್ನು ನೋಡುವುದರಿಂದಲೂ ನಮಗೆ ಶುಭ.

ಭೀಷ್ಮರು ತನ್ನೆದುರಿಗಿರುವ ಕೃಷ್ಣನಲ್ಲಿ ನಿವೇದಿಸಿಕೊಳ್ಳುತ್ತಿರುವರು - ಕೃಷ್ಣ! ನನ್ನ ಎದುರಿಗೇ ಕುಳಿತುಕೊಂಡು ನನ್ನನ್ನು ನೋಡುತ್ತಿರುವಿ. ನಾನೂ ನಿನ್ನನ್ನು ನೋಡುತ್ತಿದ್ದೇನೆ. ಆದುದರಿಂದ ನಿನ್ನ ದರ್ಶನ ಹಾಗೂ ನನ್ನ ದರ್ಶನ ಸಂಭವಿಸಿದೆ. ಇವು ನನ್ನ ಪಾಲಿಗೆ ಶುಭಗಳಾಗುವವು, ಒಳ್ಳೆಯದನ್ನುಂಟು ಮಾಡುವವು.

ಜನರಿಗೆ ಶುಭ - ಒಳ್ಳೆಯದನ್ನು ಕೊಡುವ ಈಕ್ಷಣ - ದರ್ಶನ ಉಳ್ಳವನು.

ಭಗವಂತನ ದರ್ಶನ ಯಾವಾಗ ಒಳ್ಳೆಯದನ್ನುಂಟು ಮಾಡುವುದೆಂಬ ಪ್ರಶ್ನೆಗೆ- 'ಈಕ್ಷಣ' - ಶಬ್ದದಿಂದ ಸಮಾಧಾನದ ಧ್ವನಿ ಮೂಡುವುದು. ಯಾವ ಕ್ಷಣದಲ್ಲಿ ದರ್ಶನವಾಗುವುದೋ ಈ ಕ್ಷಣದಲ್ಲೇ - ಒಳ್ಳೆಯದಾಗುವುದು. ಹೀಗೆ ಕನ್ನಡದ ಶಬ್ದವನ್ನೂ ಸೇರಿಸಿಕೊಂಡು ಸಮಾಧಾನವನ್ನು ಪಡೆದುಕೊಳ್ಳಬಹುದಾಗಿದೆ.

**ರಾಮೋ ವಿರಾಮೋ ವಿರಜೋ ಮಾರ್ಗೋ ನೇಯೋ ನಯೋಽನಯಃ |**
**ವೀರಃ ಶಕ್ತಿಮತಾಂ ಶ್ರೇಷ್ಠೋ ಧರ್ಮೋ ಧರ್ಮವಿದುತ್ತಮಃ || ೪೩ ||**

**೩೯೭. ರಾಮಃ – ಉತ್ತಮ ಸುಖವನ್ನೂ, ಉತ್ತಮ ತಿಳುವಳಿಕೆಯನ್ನೂ ಹೊಂದಿರುವವನು.**

**ವಿವರಣೆ :** ರ + ಆ + ಮ - ರಾಮ. ಮೊದಲು ರ ಇದೆ. ಕೊನೆಗೆ ಮ ಇದೆ. ಮಧ್ಯದಲ್ಲಿ ಆ ಇದೆ. ರ ಎನ್ನುವುದಕ್ಕೆ ರತಿ, ರಮಣ, ಸುಖ ಎಂಬ ಅರ್ಥ. ಮ

ಎಂಬುದಕ್ಕೆ ತಿಳುವಳಿಕೆ ಎಂಬ ಅರ್ಥ. 'ಆ' ಕಾರವನ್ನು ಈಚೆಗೂ ಆಚೆಗೂ ಅನ್ವಯಿಸಿಕೊಳ್ಳಬೇಕು. ಹೊಸ್ತಿಲಲ್ಲಿ ಇಟ್ಟ ದೀಪ ಹೇಗೆ ಹೊರಗೂ ಒಳಗೂ ಬೆಳಕು ಚೆಲ್ಲುವುದೋ ಹಾಗೆ. ಮಧ್ಯದಲ್ಲಿರುವ ಆಕಾರ ಮೊದಲಿನ ರಕಾರಕ್ಕೂ, ಕೊನೆಯ ಮಕಾರಕ್ಕೂ ಸೇರುವುದು. ಆ ಎಂದರೆ ಒಳ್ಳೆಯ ರ - ಸುಖ ಹಾಗೂ ಮ- ತಿಳುವಳಿಕೆ ಉಳ್ಳವನೇ ರಾಮ.

ಕೃಷ್ಣನಾಮದ ಉಚ್ಚಾರಣೆಯಾದರೂ ಸ್ವಲ್ಪ ಕಠಿಣ. ಆದರೆ ರಾಮ ನಾಮದ ಉಚ್ಚಾರಣೆಯೂ ಬಹು ಸುಲಭ. ಈ ನಾಮದ ಉಚ್ಚಾರಣೆ ನಡೆಸುತ್ತ ಇರುವಾಗ ಈ ಅರ್ಥದ ಅನುಸಂಧಾನ ಜೊತೆಗೇ ಇರಬೇಕು. ಅರ್ಥವಾಗದೆಯೇ ನಾಮವನ್ನು ಉಚ್ಚಾರಣೆ ಮಾಡಿದರೂ ಫಲ ಇಲ್ಲದಿಲ್ಲ. ಆದರೆ ಅರ್ಥಾನುಸಂಧಾನ ಮಾಡಿಕೊಂಡು ನಾಮದ ಉಚ್ಚಾರಣೆ ನಡೆಸಿದಾಗ ಎಷ್ಟು ಫಲವೋ ಅಷ್ಟು ಫಲ ದೊರಕುವುದಿಲ್ಲ.

ರ - ಆ - ಮ ಉತ್ತಮವಾದ ಸುಖ, ಉತ್ತಮವಾದ ತಿಳುವಳಿಕೆ ಉಳ್ಳವನೇ ರಾಮ. ನಮ್ಮಲ್ಲಿ ಸುಖವೂ ಇದೆ, ತಿಳುವಳಿಕೆಯೂ ಇದೆ. ಆದರೆ ಸುಖದ ಜೊತೆಗೆ ದುಃಖವೂ ಸೇರಿಕೊಂಡಿದೆ. ಆದುದರಿಂದ ಅದು ಉತ್ತಮ ಸುಖ ಅಲ್ಲ. ನಮ್ಮ ತಿಳುವಳಿಕೆಯ ಜೊತೆಗೆ ಅಜ್ಞಾನವೂ ಸೇರಿಕೊಂಡಿದೆ. ಆದುದರಿಂದ ನಮ್ಮಲ್ಲಿ ಉತ್ತಮ ತಿಳುವಳಿಕೆ ಇಲ್ಲ. ತಿಳಿಯಾದ ತಿಳುವಳಿಕೆ, ಅಜ್ಞಾನರಹಿತವಾದ ಜ್ಞಾನ, ದುಃಖರಹಿತವಾದ ಸುಖ ಯಾರಲ್ಲಿ ಇದೆಯೋ ಅವನು ರಾಮ. ಯಾರು ರಾಮನೋ ಅವನಲ್ಲಿ ಉತ್ತಮವಾದ ಸುಖ, ಉತ್ತಮವಾದ ತಿಳುವಳಿಕೆ ಇದೆ. 'ರಾಮ ರಾಮ ರಾಮ ಎನ್ನಿರೋ' - ಎಂದು ಮೂರು ಬಾರಿ ರಾಮನಾಮವನ್ನು ಪಠಿಸಿದರೆ ಮುಖದಲ್ಲಿ ಆನಂದದ ಲಕ್ಷಣ ಕಾಣಿಸಿಕೊಳ್ಳುವುದು.

ಹೀಗೆ ಭೀಷ್ಮರು ಕೃಷ್ಣನನ್ನು ಎದುರಿಗಿಟ್ಟುಕೊಂಡು ರಾಮ ವ್ಯಕ್ತಿತ್ವದ ಅನುಸಂಧಾನ ನಡೆಸುತ್ತಿರುವರು.

**೩೯೮. ವಿರಾಮಃ – ಸಂಸಾರ ಪಯಣದಿಂದ ಸೋತವರಿಗೆ ವಿಶ್ರಾಂತಿಯನ್ನುಂಟು ಮಾಡುವವನು.**

**ವಿವರಣೆ :** ಹಿಂದಿನ ನಾಮದಲ್ಲಿ ತಿಳಿಸಿದಂತೆ ಭಗವಂತನನ್ನು ರಾಮ ಎಂದು ಉಪಾಸನೆ ನಡೆಸಿದರೆ ಏನು ಫಲ ದೊರಕುವುದೆಂದು ಮುಂದಿನ ನಾಮ ತಿಳಿಸುತ್ತಿದೆ- 'ವಿರಾಮಃ' - ಜೀವನದಲ್ಲಿ ಒಬ್ಬ ತಾಯಿಯ ಗರ್ಭದಿಂದ ಮತ್ತೊಬ್ಬ ತಾಯಿಯ ಗರ್ಭಕ್ಕೆ ಪ್ರಯಾಣ ನಡೆಸುತ್ತ ಇರುವೆವು. ಈ ಪ್ರಯಾಣ ಎಲ್ಲಿಂದ ಪ್ರಾರಂಭ ?

ಗೊತ್ತಿಲ್ಲ. ಎಲ್ಲಿ ಕೊನೆಗೊಳ್ಳುವುದು ? ಅದೂ ಗೊತ್ತಿಲ್ಲ. ಹಾಗಾದರೆ ಈ ಪ್ರಯಾಣದಿಂದ ವಿರಾಮ ಬೇಡವೇ ? ವಿಶ್ರಾಂತಿ ಬೇಡವೇ ? ಈ ದೀರ್ಘ ಪ್ರಯಾಣದಿಂದ ‘ವಿರಾಮ’ ಬೇಕೆಂದರೆ ಭಗವಂತನನ್ನು ‘ರಾಮ’ ಎಂದು ಉಪಾಸನೆ ಮಾಡಬೇಕು.

ಹುಟ್ಟುವುದು, ಸಾಯುವುದು ಎಂಬ ಕೆಲಸದಲ್ಲಿ ನಿರತರಾದ ನಮಗೆ ವಿಶ್ರಾಂತಿ, ವಿರಾಮ - ಎಂದರೆ ಮೋಕ್ಷವನ್ನು ಪಡೆಯುವುದು, ಹುಟ್ಟು ಸಾವು ಇಲ್ಲದ ಸ್ಥಳವನ್ನು ಪಡೆಯುವುದು. ಇದಕ್ಕೆ ರಾಮಬೇಕು. ಆ ದೃಷ್ಟಿಯಿಂದ ರಾಮನಿಂದಾಗಿ ನಮಗೆ ಜೀವನದಲ್ಲಿ ವಿರಾಮ. ಯಾರಿಂದಾಗಿ ನಮಗೆ ಜೀವನದಲ್ಲಿ ವಿರಾಮ ದೊರಕುವುದೋ ಅವನನ್ನೇ ವಿರಾಮಶಬ್ದದಿಂದ ಕರೆಯುವೆವು. ನಮ್ಮ ವಿಶ್ರಾಂತಿಗೆ ಕಾರಣವಾಗಿರುವುದರಿಂದ ‘ವಿಶ್ರಾಂತಿಗೃಹ’ ಎನಿಸುವಂತೆ ನಮ್ಮ ‘ವಿರಾಮ’ಕ್ಕೆ ಕಾರಣವಾಗಿರುವುದರಿಂದ ಅವನು ವಿರಾಮ.

ಶರಪಂಜರದ ಮೇಲೆ ವಿಶ್ರಾಂತಿ ಪಡೆಯುತ್ತ ಭೀಷ್ಮರು ಎದುರಿಗಿರುವ ಕೃಷ್ಣನನ್ನು ‘ವಿರಾಮ’ - ಎಂದು ಸ್ತುತಿಸುತ್ತಿರುವರು.

ದೇವರನ್ನು ‘ರಾಮ’ ಎಂದು ಉಪಾಸನೆ ಮಾಡಿದೆವೆಂದರೆ ನಮಗೆ ಒಳ್ಳೆಯ ತಿಳುವಳಿಕೆ, ಒಳ್ಳೆಯ ಸುಖ ದೊರಕಿದರೆ, ‘ವಿರಾಮ’ - ಎಂದು ಉಪಾಸನೆ ಮಾಡಿದರೆ ನಮ್ಮ ಸಂಸಾರ ಪಯಣದಿಂದ ವಿಶ್ರಾಂತಿ ದೊರಕುವುದು.

**೩೯೯. ವಿರಜಃ – ಯಾವುದೇ ಕಶ್ಮಲ ಇಲ್ಲದವನು.**

**ವಿವರಣೆ:** ರಾಮ ಎಂದು ಉಪಾಸನೆ ಮಾಡಿದಾಗ ನಮಗೆ ನೆಮ್ಮದಿ, ಶುದ್ಧ ತಿಳುವಳಿಕೆ ಉಂಟಾದದ್ದಾದರೂ ಯಾಕೆ ? ವಿರಾಮ ಎಂದು ಉಪಾಸನೆ ಮಾಡಿದ್ದರಿಂದ ನಮಗೆ ವಿಶ್ರಾಂತಿ ದೊರೆತದ್ದಾದರೂ ಯಾಕೆ ? ಅವನು - ‘ವಿರಜಃ’ - ವಿಗತರಜಸ್ - ರಾಮನಲ್ಲಿ ರಜೋಗುಣ ಇಲ್ಲ. ರಾಮನಿಂದ ಸಿಗುವ ವಿಶ್ರಾಂತಿಯಲ್ಲೂ ರಜೋಗುಣ ಇಲ್ಲ. ಅಂತಹ ವಿಶ್ರಾಂತಿಯನ್ನು ಪಡೆಯಲು ಬೇಕಾದ ಮಾರ್ಗದಲ್ಲೂ ರಜೋಗುಣ ಇಲ್ಲ. ಬರೇ ರಜೋಗುಣ ಅಲ್ಲ, ತಮೋಗುಣವೂ ಇಲ್ಲ, ಸತ್ತ್ವಗುಣವೂ ಇಲ್ಲ. ಮಧ್ಯದ ರಜೋಗುಣವನ್ನು ಉಲ್ಲೇಖ ಮಾಡಿ ಪ್ರಕೃತಿಯ ಮೂರು ಗುಣಗಳೂ ಇಲ್ಲ ಎಂಬುದನ್ನು ‘ವಿರಜಃ’ - ಎಂಬ ನಾಮದಿಂದ ತಿಳಿಸಲಾಗಿದೆ. ಲೋಕದಲ್ಲಿರುವ ಸತ್ತ್ವಗುಣವೂ ಕಶ್ಮಲದಿಂದ ಕೂಡಿದ್ದು. ರಾಮ ಎಂತಹವನು ? ಅವನಿಂದ ಉಂಟಾಗುವ ವಿರಾಮ ಎಂತಹದ್ದು ? ಅದನ್ನು ಪಡೆಯಲು ಬೇಕಾದ ಮಾರ್ಗ

ಎಂತಹದ್ದು ? 'ವಿರಜಃ' - ಯಾವುದೇ ಕಶ್ಮಲವನ್ನು ಹೊಂದದಿರುವಂತಹದ್ದು ರಾಮನೂ, ಅವನಿಂದ ದೊರೆಯತಕ್ಕ ವಿಶ್ರಾಂತಿಯೂ, ಅದನ್ನು ಪಡೆಯಲು ಬೇಕಾದ ಮಾರ್ಗವೂ - ವಿರಜಃ - ಕಶ್ಮಲರಹಿತ.

ಲೋಕದಲ್ಲಿ ಕೆಲವೊಮ್ಮೆ ನಾವು ಹಿಡಿಯುವ ಮಾರ್ಗ ಕಶ್ಮಲದ ಮಾರ್ಗವಾಗಿರುತ್ತದೆ. ನಮಗೆ ಇದು ತಿಳಿದಿದ್ದರೂ ಯಾರಾದರೂ ನಿಮ್ಮ ಮಾರ್ಗ ಕಶ್ಮಲದ ಮಾರ್ಗ ಎಂದರೆ ನಮಗೆ ಸಿಟ್ಟು ಬರುವುದು. ಇದರಿಂದಲೇ ಸ್ಪಷ್ಟ - ನಮ್ಮ ಮಾರ್ಗ ಕಶ್ಮಲ ರಹಿತ ಅಲ್ಲ ಎಂದು.

ಆದರೆ ರಾಮನನ್ನು ತಿಳಿಯಲು ಅವನಿಂದ ವಿರಾಮವನ್ನು ಪಡೆಯಲು ಇರುವ ಮಾರ್ಗ 'ವಿರಜಃ' - ಯಾವುದೇ ದೋಷಯಿಲ್ಲದ ಮಾರ್ಗ.

ಹೀಗೆ ರಾಮನನ್ನು 'ವಿರಜಃ' - ಎಂದು ಉಪಾಸನೆ ಮಾಡಿದಲ್ಲಿ ನಾವು ಶುದ್ಧ ತಿಳುವಳಿಕೆಯನ್ನೂ, ನೆಮ್ಮದಿಯನ್ನೂ ನಿರ್ಮಲವಾದ ವಿಶ್ರಾಂತಿಯನ್ನೂ ಪಡೆಯಬಲ್ಲೆವು.

**೪೦೦. ಮಾರ್ಗಃ – ಉತ್ತಮ ವಿಶ್ರಾಂತಿಯನ್ನು ಪಡೆಯಲು ಸಾಧನ ಆಗಿರುವವನು.**

**ವಿವರಣೆ:** ಒಳ್ಳೆಯ ತಿಳುವಳಿಕೆ ಬೇಕು. ಒಳ್ಳೆಯ ನೆಮ್ಮದಿ ಬೇಕು, ಒಳ್ಳೆಯ ವಿಶ್ರಾಂತಿ ಬೇಕು - ಇದಕ್ಕೆಲ್ಲ ಯಾರು ಸಾಧನ ? ರಾಮನೇ. ಆದುದರಿಂದ ಅವನೇ ಮಾರ್ಗ. ಮರವನ್ನು ತುಂಡು ಮಾಡಲು ಸಾಧನ ಕೊಡಲಿ. ಅದರಂತೆ ಜೀವನದಲ್ಲಿ ವಿಶ್ರಾಂತಿಗೆ ಮಾರ್ಗ - ರಾಮ.

ಶಾಸ್ತ್ರದಲ್ಲಿ ಒಂದು ಮಾತು ಬಂದಿದೆ. ಲೋಕದಲ್ಲಿ ನದಿಯನ್ನು ದಾಟಲು ದೋಣಿ ಬೇಕು. ಹಾಗೆಯೇ ಸಂಸಾರ-ಸಾಗರವನ್ನು ದಾಟಲೂ ದೋಣಿಬೇಕು. ಭಗವಂತನ ಪಾದವೇ ಆ ದೋಣಿ. ಲೋಕದಲ್ಲಿ ನದಿಯನ್ನು ದೋಣಿಯಿಂದ ದಾಟಿ ಅದನ್ನು ಅಲ್ಲಿಗೇ ಬಿಟ್ಟು ಬೇರೆ ದಡಕ್ಕೆ ಹೋಗುವೆವು. ಆದರೆ ಸಂಸಾರ ಸಾಗರವನ್ನು ಭಗವಂತನ ಪಾದದಿಂದ ದಾಟಿ, ಅದನ್ನು ಅಲ್ಲಿಗೇ ಬಿಟ್ಟು ಬಿಡುವುದಿಲ್ಲ. ಯಾಕೆಂದರೆ ಅದು ಸಂಸಾರ - ಸಾಗರವನ್ನು ದಾಟಿದ ಮೇಲೂ ಆಸರೆಯಾಗಿರುವುದು. ಮೋಕ್ಷದಲ್ಲೂ ಅದನ್ನು ಬಿಟ್ಟರೆ ಬೇರೆ ಗತಿ ಇಲ್ಲ. ಹೀಗೆ ಸಂಸಾರ - ಸಾಗರವನ್ನು ದಾಟುವುದಕ್ಕೂ, ದಾಟಿದ ಮೇಲೂ 'ಮಾರ್ಗ' ನಾಗಿರುವವನು ಭಗವಂತ.

ಹುಡುಕಲಿಕ್ಕಿರುವ ಸಾಧನ ಮಾರ್ಗ ಎನಿಸುವಂತೆ ಪಡೆಯಲಿಕ್ಕಿರುವ ಸಾಧನವೂ ಮಾರ್ಗ ಎನಿಸುವುದು. ರಾಮನಿಂದ ಉತ್ತಮ ವಿಶ್ರಾಂತಿಯನ್ನು

## ‘ಶ್ರೀನೈಕಾತ್ಮನೇ ನಮಃ’ ‘ಶ್ರೀ ಸ್ವಂಗಾಯ ನಮಃ’







**‘ಯಥಾ ಚಿತ್ರೇ ಹಿ ದೃಶ್ಯಂತೆ ಅಚಿಂತ್ಯೇಶ್ವರ ಶಕ್ತಿತಃ|**

**ಹಸ್ತಪಾದೋದರಾದ್ಯಂಗಾಃ ನವನಾರ್ಯೋ ಗಜಾತ್ಮನಾ’**

- ಎಂಬುದಾಗಿ ‘ಯೋಗದೀಪಿಕಾ’ ದಲ್ಲಿ (10 -5) ಭಗವಂತನ ಪ್ರತಿಮೆಯಲ್ಲಿ ಆವಾಹಿಸ ಬೇಕಾದ ಅವನ ರೂಪದಲ್ಲಿ ಅವನೇ ತನ್ನ ವಾಸುದೇವಾದಿರೂಪಗಳಿಂದ ಹೇಗೆ ತನ್ನ ತಲೆ, ಬಾಹು ಮುಂತಾದ ಅವಯವಗಳಾಗಿ ಇರುವನೆಂಬುದನ್ನು ಮನವರಿಕೆ ಮಾಡಲು ನೀಡಲಾದ ನವನಾರೀಕುಂಜರ ದ ದೃಷ್ಟಾಂತದ ಕೆತ್ತನೆಯನ್ನು ಉಡುಪಿ ಶ್ರೀಕೃಷ್ಣನ ಬೆಳ್ಳಿಯ ಪಾಲಕಿಯಲ್ಲಿ ಕಾಣಬಹುದಾಗಿದೆ. ಜೊತೆಗೆ ‘ಪಂಚನಾರೀತುರಗ’ದ ದೃಶ್ಯವನ್ನೂ ಕಾಣಬಹುದಾಗಿದೆ.

ಇದರಿಂದ ವಿ.ಸ.ನಾಮದ ‘ನೈಕಾತ್ಮಾ’ ‘ಸ್ವಂಗ’ ‘ಶುಭಾಂಗ’ - ಇತ್ಯಾದಿ ನಾಮಗಳ ಅರ್ಥಾನುಸಂಧಾನ ಮಾಡಬಹುದಾಗಿದೆ.

ಚಿತ್ರ - ಆನಂದಮಠದ

‘ಶ್ರೀಗೋಹಿತಾಯ ನಮಃ’ ‘ಶ್ರೀ ಗೋವಿಂದಾಯ ನಮಃ’



ಗೋವಿಗೆ ಆನಿಸಿಕೊಂಡು ನಿಂತಿರುವ ಮೂಲಕ ತನ್ನ ಗೋಪ್ರಿಯತ್ವವನ್ನು ಸಾರುತ್ತಿರುವ ಉಡುಪಿ ಶ್ರೀಕೃಷ್ಣನ ಮೇಲಿನ ಅಲಂಕಾರದಿಂದ ವಿ.ಸ.ನಾಮದ ‘ಗೋಹಿತಃ’ ‘ಗೋಪತಿಃ’ ‘ಗೋವಿಂದಃ’ ಮುಂತಾದ ದೇವರಿಗೆ ಗೋವುಗಳ ನಂಟಿನ ಪ್ರಸ್ತಾವವುಳ್ಳ ನಾಮಗಳ ಅರ್ಥಾನುಸಂಧಾನ ನಡೆಸಬಹುದಾಗಿದೆ.

ಪಡೆಯಲಿಕ್ಕೆ ಇರುವ ಮಾರ್ಗವೂ ಅವನೇ.

**೪೦೧. ನೇಯಃ – ಪಾಠ ಪ್ರವಚನಾದಿಗಳ ಮೂಲಕ ಒಬ್ಬರಿಂದ ಮತ್ತೊಬ್ಬರಲ್ಲಿಗೆ ಕೊಂಡೊಯ್ಯಲ್ಪಡಲು ಯೋಗ್ಯನಾಗಿರುವವನು.**

**ವಿವರಣೆ :** ಹೀಗೆ ಭಗವಂತ ನಮ್ಮ ಪಾಲಿಗೆ ರಾಮ 'ವಿರಾಮ' ಹಾಗೂ 'ಮಾರ್ಗ' ನಾಗಿ ಅನುಗ್ರಹಿಸಬೇಕೆಂದರೆ ಅವನು 'ನೇಯ'ನಾಗಬೇಕು. ಒಯ್ಯಲ್ಪಡುವವ ನಾಗಬೇಕು. ಹೇಗೆ ಒಯ್ಯುವುದು ? ಯಾರ ಮೂಲಕ ಒಯ್ಯುವುದು ? ಗುರು ಶಿಷ್ಯನಿಗೆ ದೇವರನ್ನು ಒಯ್ಯಬೇಕು. ಶಿಷ್ಯ ತನ್ನ ಶಿಷ್ಯನಿಗೆ ಒಯ್ಯಬೇಕು, ಅವನು ತನ್ನ ಶಿಷ್ಯನಿಗೆ ಒಯ್ಯಬೇಕು. ಅಂದರೆ ಉಪದೇಶ ಮಾಡುವ ಮೂಲಕ ಗುರುವಿನಲ್ಲಿದ್ದ ಭಗವಂತ ಶಿಷ್ಯನಲ್ಲೂ, ಅನಲ್ಲಿದ್ದ ಭಗವಂತ ಅವನ ಶಿಷ್ಯನಲ್ಲೂ ಒಯ್ಯಲ್ಪಡಬೇಕು. ಅಂದರೆ ವಿದ್ಯೆಯ ಮೂಲಕ ಪಡೆದುಕೊಳ್ಳಬೇಕು.

ನಮಗೆ ಒಳ್ಳೆಯ ತಿಳುವಳಿಕೆ ಬೇಕೇ ? ಒಳ್ಳೆಯ ನೆಮ್ಮದಿ ಬೇಕೇ ? ಒಳ್ಳೆಯ ವಿಶ್ರಾಂತಿ ಬೇಕೇ ? ಒಳ್ಳೆಯ ಮಾರ್ಗದರ್ಶನ ಬೇಕೇ ? ಹಾಗಾದರೆ 'ನೇಯಃ'- ನಮ್ಮಲ್ಲಿರುವ ಭಗವಂತ ಮತ್ತೊಬ್ಬರಲ್ಲಿಗೆ ಕೊಂಡೊಯ್ಯಲ್ಪಡಬೇಕು, ಅವರಲ್ಲಿರುವವನು ಇನ್ನೊಬ್ಬರಲ್ಲಿಗೆ, ಇನ್ನೊಬ್ಬರಲ್ಲಿರುವವನು ಮತ್ತೊಬ್ಬರಲ್ಲಿಗೆ ಉಪದೇಶದ ಮೂಲಕ ಭಗವಂತನು ಕೊಂಡೊಯ್ಯಲ್ಪಡುತ್ತ ಇರಬೇಕು.

ಪಾಠ ಪ್ರವಚನದ ಮೂಲಕ, ಉಪನ್ಯಾಸದ ಮೂಲಕ, ಉಪದೇಶದ ಮೂಲಕ ಒಬ್ಬನಲ್ಲಿರುವ ಭಗವಂತ ಮತ್ತೊಬ್ಬರಲ್ಲಿ ಒಯ್ಯಲ್ಪಡುವವನು, ಆದುದರಿಂದ ನೇಯ. ಒಬ್ಬನಲ್ಲಿರುವ ಲೌಕಿಕ ವಿಷಯವನ್ನು ಇನ್ನೊಬ್ಬನಲ್ಲಿ ಉಪದೇಶದ ಮೂಲಕ ಒಯ್ಯಲ್ಪಡುವುದಕ್ಕಿಂತ ದೇವರ ವಿಷಯ ಒಯ್ಯಲ್ಪಡುವುದು ಒಳ್ಳೆದು. ಆದುದರಿಂದ ಉಪದೇಶದ ಮೂಲಕ ಒಯ್ಯಲ್ಪಡಲು ಯೋಗ್ಯನಾದ ಭಗವಂತ 'ನೇಯ'.

**೪೦೨. ನಯಃ – ಕೊಂಡೊಯ್ಯುವವನು.**

**ವಿವರಣೆ :** 'ನೇಯ' ನಾಮದಿಂದ ತಿಳಿಸಿದಂತೆ ಭಗವಂತನನ್ನು ಶಿಷ್ಯರಲ್ಲಿ ಒಯ್ದಿರೆ ಅವನು ನಮ್ಮನ್ನು ಒಯ್ಯುವನು ಎಂಬುದನ್ನು 'ನಯಃ' ನಾಮ ತಿಳಿಸುವುದು. ಕೊಂಡೊಯ್ಯುವವನು ಎಂಬುದು ಅದರ ಅರ್ಥ.

ನಾವು ಶಿಷ್ಯರಲ್ಲಿ ದೇವರನ್ನು ಒಯ್ದೆವೆಂದರೆ ಅವನು ನಮ್ಮನ್ನು ಮೇಲಕ್ಕೆ ಒಯ್ಯುವನು. 'ಕಟ್ಟುವರ ಕಟ್ಟು ಬಿಡಿಸುವ...' ಎಂದಿರುವಂತೆ ನಾವು ಅವನನ್ನು

ಭಕ್ತಿಪಾಶದಿಂದ ಕಟ್ಟಿದೆವೋ ಆಗ ಅವನು ನಮ್ಮ ಭವಪಾಶದ ಕಟ್ಟು ಬಿಡಿಸುವನು ಹೇಗೋ ಹಾಗೆ ನಾವು ಅವನನ್ನು ಒಯ್ದೆವೆಂದರೆ ಅವನು ನಮ್ಮನ್ನು ಒಯ್ಯುವನು.

ಭಗವಂತನನ್ನು ಮತ್ತೊಬ್ಬರಿಗೆ ತಿಳಿಸಿ ಅವರಲ್ಲಿಗೆ ಅವನನ್ನು ಕೊಂಡೊಯ್ಯುವುದೇ ದೊಡ್ಡ ಪೂಜೆ. ಆ ಪೂಜೆ ನಡೆಸಿದವರ ಪಾಲಿಗೆ ಅವನು 'ನಯ' - ಕೊಂಡೊಯ್ಯುವವನಾಗಿ ಅನುಗ್ರಹಿಸುವನು.

**೪೦೩. ಅನಯಃ – ಮುಖ್ಯಪ್ರಾಣನ ಮೂಲಕ ನಮ್ಮನ್ನು ತನ್ನೆಡೆಗೆ ಕೊಂಡೊಯ್ಯುವವನು.**

**ವಿವರಣೆ :** 'ನಯಃ' - ಎಂಬ ನಾಮದಿಂದ ಸೂಚಿತವಾಗಿರುವಂತೆ ಭಗವಂತನು ನಮ್ಮನ್ನು ಯಾರ ಮೂಲಕ ಕೊಂಡೊಯ್ಯುವವನು ? - ಎಂಬ ಪ್ರಶ್ನೆಗೆ ಸಮಾಧಾನ ದೊರಕುವಂತೆ ಸ್ತುತಿಸಲಾಗಿದೆ - ಅನಯಃ. ಅನ ಎಂದರೆ ಮುಖ್ಯಪ್ರಾಣ. ಅಂತಹ ಮುಖ್ಯಪ್ರಾಣನ ಮೂಲಕ ಕೊಂಡೊಯ್ಯುವವನೇ ಅನಯ. ಸ್ವಯಂ ದೇವನೇ ಬಂದು ಕೊಂಡೊಯ್ಯುವುದಿಲ್ಲ. ಮತ್ತೆ ಮುಖ್ಯಪ್ರಾಣನ ಮೂಲಕವೇ.

ಮೋಕ್ಷಕ್ಕೆ ಬೇಕಾದ ಸಾಧನೆಯೆಲ್ಲ ಪೂರ್ಣವಾಗಿದ್ದರೂ, ಪ್ರಾರಬ್ಧ ಕರ್ಮವನ್ನು ಭೋಗಿಸಿ ಮುಗಿಸಿದ್ದರೂ ಚತುರ್ಮುಖನ ಪ್ರಾರಬ್ಧಕರ್ಮ ಮುಗಿಯದೆ ಮೋಕ್ಷಕ್ಕೆ ಹೋಗುವಂತಿಲ್ಲ. ಯಾಕೆಂದರೆ ಅವನೇ ಮೋಕ್ಷದೆಡೆಗೆ ನಮ್ಮನ್ನು ಕರೆದೊಯ್ಯಬೇಕಾದವನು.

ಭೋಜನದಲ್ಲಿ ತೊಡಗಿಸಿದಾಗ ಉಳಿದವರ ಊಟ ಮುಗಿದರೂ ಆ ಪಂಕ್ತಿಯಲ್ಲಿ ಹಿರಿಯನಾದವನ ಊಟ ಮುಗಿಯದೆ ಉಳಿದವರು ಏಳುವಂತಿಲ್ಲ ಹೇಗೋ ಹಾಗೆ ಚತುರ್ಮುಖನ ಸಾಧನೆ ಮುಗಿಯದೆ ಸಾಧನೆಯನ್ನು ಮುಗಿಸಿದ ಉಳಿದವರು ಮೋಕ್ಷದೆಡೆಗೆ ಹೋಗವಂತಿಲ್ಲ.

ಹೀಗೆ ಚತುರ್ಮುಖ ನಮ್ಮನ್ನು ದೇವರೆಡೆಗೆ ಕೊಂಡೊಯ್ಯುವವನು. ದೇವರು ನಮ್ಮನ್ನು ನೇರವಾಗಿ ತನ್ನೆಡೆಗೆ ಕೊಂಡೊಯ್ಯುವುದಿಲ್ಲ. ಅನ ಎನಿಸುವ ಮುಖ್ಯಪ್ರಾಣನ ಮೂಲಕ ತನ್ನೆಡೆಗೆ ಕೊಂಡೊಯ್ಯುವನು. ಆದುದರಿಂದ 'ಅನಯ' ಎನಿಸುವನು.

ನಮ್ಮ ನಿಮ್ಮ ಕರ್ಮವನ್ನೂ ದೇವರು ನೇರವಾಗಿ ಸ್ವೀಕರಿಸದೆ ಮುಖ್ಯ ಪ್ರಾಣನ ಮೂಲಕವೇ ಸ್ವೀಕರಿಸುವನು. ಅದಕ್ಕಾಗಿಯೇ ಉಡುಪಿಯ ಶ್ರೀಕೃಷ್ಣ ಮಠದಲ್ಲಿ ಶ್ರೀಕೃಷ್ಣನ ಎದುರೇ ಮುಖ್ಯಪ್ರಾಣನನ್ನು ಸ್ಥಾಪಿಸಲಾಗಿದೆ. ಆಂಜನೇಯನಿಗೆ

ಶ್ರೀರಾಮನ ಸಂಬಂಧವೇ ಹೊರತು ಕೃಷ್ಣನದ್ದಲ್ಲ. ಹೀಗಿರುವಾಗ ಉಡುಪಿ ಕೃಷ್ಣನ ಎದುರು ಆಂಜನೇಯ ಪ್ರತಿಷ್ಠೆಯ ಔಚಿತ್ಯ ಏನು ? - ಎಂದು ಕೆಲವರ ಸಂದೇಹ. ಅದು ಆಂಜನೇಯನ ಮೂಲರೂಪವಾದ ಮುಖ್ಯಪ್ರಾಣನ ಪ್ರತೀಕ. ಹೊರತು ಆಂಜನೇಯನದ್ದಲ್ಲ. ನಾವು ಮಾಡುವ ಕರ್ಮಗಳನ್ನೆಲ್ಲ ಕೃಷ್ಣನಡಿಗೆ ಅರ್ಪಿಸುವವನು ಮುಖ್ಯಪ್ರಾಣನಾದುದರಿಂದ ಅಂತಹ ಮುಖ್ಯಪ್ರಾಣನನ್ನು ಅಲ್ಲಿ ಪ್ರತಿಷ್ಠಾಪಿಸಲಾಗಿದೆ.

ಹೀಗೆ 'ಅನಯಃ' ಎಂಬ ನಾಮವು ಮುಖ್ಯ ಪ್ರಾಣನ ಮೂಲಕವೇ ಭಗವಂತನು ನಮ್ಮನ್ನು ತನ್ನೆಡೆಗೆ ಕರೆದುಕೊಳ್ಳುವುದು, ಅನುಗ್ರಹಿಸುವುದು- ಎಂಬುದನ್ನು ತಿಳಿಸಿಕೊಡುವುದು.

**೪೦೪. ವೀರಃ – ಆರಂಭಿಸುವ ಕೆಲಸವನ್ನು ಪೂರ್ಣಗೊಳಿಸುವವನು.**

**ವಿವರಣೆ :** ಭುಜಬಲವುಳ್ಳವನು ವೀರ ಆಗಬೇಕಿಲ್ಲ. ವೀರ ಎನಿಸುವವನು ಭುಜಬಲವುಳ್ಳವನಾಗಿರಬೇಕಿಲ್ಲ. ಆರಂಭಗೊಳಿಸಿದ ಕಾರ್ಯವನ್ನು ಮುಗಿಸುವವನು ವೀರ.

ರಾಜಾಂಗಣದಲ್ಲಿ ಐನ್ನೂರು ಕುರ್ಚಿಗಳನ್ನು ತಂದು ಹಾಕಬೇಕೆಂದು ಯಾರಲ್ಲೋ ತಿಳಿಸಿದೆವು. ಆ ವ್ಯಕ್ತಿಗೆ ಅಷ್ಟನ್ನು ಹೊತ್ತು ತರುವಷ್ಟು ಭುಜಬಲವಿಲ್ಲ. ಆದರೆ ಹತ್ತಾರು ಮಂದಿಗಳನ್ನು ಹಿಡಿದು ಸಾವಿರ ಕುರ್ಚಿಗಳನ್ನು ತಂದು ಹಾಕಿಸಿದ. ಅಂತಹವನು ವೀರ. ಕೊಟ್ಟ ಕೆಲಸವನ್ನು ಯಾರು ಚೆನ್ನಾಗಿ ಕೊನೆಗೊಳಿಸುವರೋ ಅವರು ವೀರರು.

ಭಗವಂತ ಯಾವ ಕೆಲಸವನ್ನು ಮಧ್ಯದಲ್ಲಿ ನಿಲ್ಲಿಸಿದ್ದಿದೆ ? ಸೃಷ್ಟಿಸುವುದನ್ನೋ, ಪಾಲಿಸುವುದನ್ನೋ, ಸಂಹರಿಸುವುದನ್ನೋ, ನಿಯಂತ್ರಿಸುವುದನ್ನೋ, ಜ್ಞಾನಿಗಳನ್ನೂ ಮೋಕ್ಷಕ್ಕೆ ಕೊಂಡೊಯ್ಯುವುದನ್ನೋ, ಮೋಕ್ಷದಲ್ಲಿ ಆನಂದವನ್ನು ಉಣ್ಣಿಸುವುದನ್ನೋ - ತನ್ನ ಯಾವ ಕೆಲಸವನ್ನು ಅವನು ಮಧ್ಯದಲ್ಲಿ ನಿಲ್ಲಿಸಿರುವನು? ಯಾವ ವ್ಯಕ್ತಿಯನ್ನು ಭಗವಂತ ಮಧ್ಯದಲ್ಲಿ ಕೈ ಬಿಟ್ಟದ್ದುಂಟು ? ಅವನು ಐವತ್ತೇ ವಯಸ್ಸಿಗೆ ಸತ್ತನೆಂದ ಮೇಲೆ ದೇವರು ಅಷ್ಟಕ್ಕೇ ಅವನಿಗೆ ಕೈಕೊಟ್ಟ ತಾನೇ ? - ಎಂದು ಭಾವಿಸುವಂತಿಲ್ಲ. ಅವನ ಹಣೇಬರಹದಲ್ಲಿ ಐವತ್ತೇ ವರ್ಷ ವಯಸ್ಸು ಬರೆದದ್ದರಿಂದ ಅಷ್ಟಕ್ಕೇ ಅವನು ಸತ್ತ. ಒಂದೊಮ್ಮೆ ಹಣೇ ಬರಹದಲ್ಲಿ ನೂರುವರ್ಷ ಎಂದು ಬರೆದಿದ್ದಲ್ಲಿ ಅವನು ನೇಣು ಹಾಕಿಕೊಂಡರೂ ಆ ನೇಣುವೇ ಕಡಿದು ಬೀಳುವುದು ಹೊರತು ಅವನು

ಸಾಯುವುದಿಲ್ಲ. ಯಾಕೆಂದರೆ ದೇವರು ಅವನ ಹಣೇಬರಹಕ್ಕೇ ಅನುಗುಣವಾಗಿ ಅವನನ್ನು ರಕ್ಷಿಸುತ್ತಿರುತ್ತಾನೆ.

ಚತುರ್ಮುಖ ಯಾರ್‍ಯಾರ ಹಣೆಯಲ್ಲಿ ಎಷ್ಟೆಷ್ಟು ಆಯುಷ್ಯ ಎಂದು ಬರೆದಿರುವನೋ ಅದಕ್ಕನುಗುಣವಾಗಿ ರಕ್ಷಣೆಯ ಕಾರ್ಯವನ್ನು ಕೊನೆಗೊಳಿಸುವ ವೀರ - ಭಗವಂತ.

**೪೦೫. ಶಕ್ತಿಮತಾಂ ಶ್ರೇಷ್ಠಃ – ಶಕ್ತಿ ಸಂಪನ್ನರಲ್ಲೆಲ್ಲ ಉತ್ತಮನಾಗಿರುವವನು.**

ವಿವರಣೆ: ಇವನಿಗಿಂತ ಇವನು ಅಧಿಕ ಶಕ್ತಿವುಳ್ಳವನು, ಇವನಿಗಿಂತ ಅವನು ಹೆಚ್ಚು ಶಕ್ತಿವುಳ್ಳವನು.... ಹೀಗೆಯೇ ಹೇಳುತ್ತ ಇವನಿಗಿಂತ ಇವಳು ಅಧಿಕಶಕ್ತಿವುಳ್ಳವಳು. ಇವನೆಂದರೆ ಚತುರ್ಮುಖ. ಅವನಿಗಿಂತ ಅಧಿಕಶಕ್ತಿವುಳ್ಳ ಇವಳೆಂದರೆ ಲಕ್ಷ್ಮೀದೇವಿ. ಅವಳಿಗಿಂತಲೂ ಅಧಿಕಶಕ್ತಿವುಳ್ಳವನು ನಾರಾಯಣನು. ಅವನಿಗಿಂತ ಅಧಿಕಶಕ್ತಿವುಳ್ಳವನು ಸಿಕ್ಕಿಲ್ಲ. ಹುಡುಕಲಿಕ್ಕಾಗದೆ ಸಿಕ್ಕದಿರುವುದಲ್ಲ, ಮತ್ತೆ ಅಧಿಕಶಕ್ತಿವುಳ್ಳವನು ಇಲ್ಲ. ಆದುದರಿಂದಲೇ ಸಿಕ್ಕಿಲ್ಲ. ಆದುದರಿಂದಲೇ ಅವನನ್ನು 'ಶಕ್ತಿಮತಾಂ ಶ್ರೇಷ್ಠಃ' - ಶಕ್ತಿ ಸಂಪನ್ನರಲ್ಲೆಲ್ಲ ಅಧಿಕ ಶಕ್ತಿವುಳ್ಳವನಾಗಿರುವವನೆಂದು ಸ್ತುತಿಸಲಾಗಿದೆ.

ಯದ್ಯಪಿ ಬ್ರಹ್ಮಾದಿಗಳೆಲ್ಲ ಜಗತ್ತಿನ ವ್ಯವಸ್ಥೆಯನ್ನು ಮಾಡುವರು. ನಮ್ಮಲ್ಲಿ ನಿಮ್ಮಲ್ಲಿ ಇದ್ದುಕೊಂಡು ಪ್ರೇರಣೆ ಮಾಡಿ ಕೆಲಸ ಮಾಡಿಸುವವರು ದೇವತೆಗಳು. ಕಣ್ಣಲ್ಲಿ ಸೂರ್ಯ, ಕಿವಿಯಲ್ಲಿ ಚಂದ್ರ, ಮೂಗಿನಲ್ಲಿ ನಾಸಿಕ್ಯ ವಾಯು, ನಾಲಗೆಯಲ್ಲಿ ಅಗ್ನಿ, ಕೈಯಲ್ಲಿ ಇಂದ್ರ, ಕಾಲಲ್ಲಿ ಜಯಂತ..... ಹೀಗೆಲ್ಲ ಬೇರೆ ಬೇರೆ ದೇವತೆಗಳು ನಮ್ಮ ಇಂದ್ರಿಯಗಳಲ್ಲಿದ್ದುಕೊಂಡು ಆಯಾ ಇಂದ್ರಿಯದ ಶಕ್ತಿಯನ್ನು ನಮಗೆ ಕೊಡುವರು. ಹೀಗೆ ನಮ್ಮಿಂದ ಆಯಾ ಕೆಲಸ ಮಾಡಿಸಲು ಶಕ್ತರಾದ ದೇವತೆಗಳಿಗೂ ಶಕ್ತಿ ಬಂದದ್ದು 'ಶಕ್ತಿಮತಾಂ ಶ್ರೇಷ್ಠ' ನಾದ ಭಗವಂತನಿಂದ. ಇಂದ್ರಾದಿ ದೇವತೆಗಳು ಸ್ವಯಂ ಶಕ್ತರಲ್ಲ. ಆಯಾ ದೇವತೆಗಳ ಒಳಗಿರುವ ಭಗವಂತನಿಂದಾಗಿಯೇ ಅವರು ಶಕ್ತರು. ಇದನ್ನೇ ಅಂತರ್ಯಾಮಿ - ಒಳಗಿದ್ದುಕೊಂಡು ಪ್ರೇರಿಸುವವನು ಎಂದು ಹೇಳಲಾಗಿದೆ. ದೇವತೆಗಳನ್ನು ಭಗವಂತನು ಪ್ರೇರಿಸುವವನು. ನಮ್ಮನ್ನು ಆಯಾ ದೇವತೆಗಳು ಪ್ರೇರಿಸುವರು. ಆ ದೇವತೆಗಳಲ್ಲಿ ನಾವು 'ಯಾಕೆ ಹಾಗೆ ಮಾಡಬೇಕು' ಎಂದಾಗ, 'ನಮಗೆ ಗೊತ್ತಿಲ್ಲ ನಮ್ಮೊಳಗಿನ ದೇವರು ಹಾಗೆ ಪ್ರೇರಿಸಲು ಪ್ರೇರಿಸುವನು' ಎಂದಷ್ಟೇ ಹೇಳುವರು. ಆದ್ದರಿಂದ ಭಗವಂತ 'ಶಕ್ತಿಮತಾಂ ಶ್ರೇಷ್ಠ'.

**೪೦೬. ಧರ್ಮಃ – ಪಾರ್ಥಿವ ಶರೀರದಲ್ಲಿ ತಿಳುವಳಿಕೆಯನ್ನು ಉಂಟುಮಾಡುವವನು.**

**ವಿವರಣೆ :** ಧರ್ + ಮ = ಧರ್ಮ. ಧರಣಿಯೇ ಧರ್. ಧರಣಿ ಎಂದರೆ ಭೂಮಿ. ಭೂಮಿ ಎಂದರೆ ಪೃಥಿವಿ. ನಮ್ಮ ಈ ಶರೀರ ಅಂತಹ ಪೃಥಿವಿಯಿಂದ ರೂಪುಗೊಂಡದ್ದು. ಆದ್ದರಿಂದ ಪಾರ್ಥಿವ ಶರೀರ. ಅಂತಹ ಮೃಣ್ಮಯ ಶರೀರದಲ್ಲೂ 'ಮ' ಅಂದರೆ ತಿಳುವಳಿಕೆಯನ್ನು ತುಂಬಿರುವವನು.

ಪೂರ್ವಜನ್ಮದ ಸಂಸ್ಕಾರದ ಜೊತೆಗೆ ದೈವಾನುಗ್ರಹವಿದ್ದರೆ ಹೇಳಿದ್ದು ಅರ್ಥವಾಗುವುದು. ಕ್ರಮೇಣ ತಿಳುವಳಿಕೆ ಮೂಡುವುದು. ಹಿಂದಿನ ಜನ್ಮದ ಪಾಪಗಳು ಶರೀರದಲ್ಲಿ ತುಂಬಿರುವವು. ಕೇಳಿ ಕೇಳಿ ಆ ಪಾಪ ಪರಿಹಾರವಾಗಿ, ಶ್ರವಣ ನಡೆಸಲು ಅವಕಾಶ ದೊರಕುವುದು. 'ಶ್ರುತಂ ಹರತಿ ಪಾಪಾನಿ....' - ಎಂಬ ಮಾತಿನ ಆಶಯ ಇದೇ.

ಭೀಷ್ಮರು ತಮ್ಮ ಆಯುಷ್ಯದ ಅರ್ಧ ಭಾಗಕ್ಕಿಂತಲೂ ಅಧಿಕ ಭಾಗವನ್ನು ಪರಶುರಾಮರೂಪಿ ಪರಮಾತ್ಮನಿಂದ ತಿಳುವಳಿಕೆಯನ್ನು ತುಂಬಿಸಿಕೊಳ್ಳಲು ಬಳಸಿಕೊಂಡವರು. ಆ ಹಿನ್ನೆಲೆಯಲ್ಲಿ ಧರ್‌ಗೆ ಪಾರ್ಥಿವ ಶರೀರಕ್ಕೆ 'ಮ' ತಿಳುವಳಿಕೆಯನ್ನು ತುಂಬುವವನೇ 'ಧರ್ಮ' ಎಂದು ಸ್ತುತಿಸುವರು.

**೪೦೭. ಧರ್ಮವಿದುತ್ತಮಃ – ಧರ್ಮವನ್ನು ಬಲ್ಲವರಲ್ಲೆಲ್ಲ ಶ್ರೇಷ್ಠನಾದವನು.**

**ವಿವರಣೆ :** ಈ ನಾಮದಲ್ಲಿ ಧರ್ಮ ಎಂದರೆ ನಮ್ಮ ಆಚಾರವಿಚಾರಗಳು. ಹೇಗಿರಬೇಕು ? ಹೇಗಿರಬಾರದು ? ಏನು ಮಾಡಬೇಕು ? ಏನು ಮಾಡಬಾರದು? ಹೀಗೆ ನಮಗೆ ಬೇಕು ಬೇಡಗಳ ಅರಿವು ಇದೆ. ಅದು ಯಾರಿಂದ ಬಂತು ?ನಮ್ಮ ಗುರುಗಳಿಂದ. ಅವರಿಗೆ ಯಾರಿಂದ, ಅವರಿಗೆ ದೇವತೆಗಳಿಂದ, ಅವರಿಗೆ ಚತುರ್ಮುಖನಿಂದ, ಅವನಿಗೆ ಲಕ್ಷ್ಮೀದೇವಿಯಿಂದ, ಅವಳಿಗೆ ಭಗವಂತನಿಂದ. ಹೀಗೆ ಹೇಗೆ ಹೇಗೆ ಸುತ್ತು ಹಾಕಿದರೂ 'ಘಟ್ಟಕುಟ್ಟಿಪ್ರಪಾತ' ನ್ಯಾಯದಂತೆ ಪುನಃ ದೇವರ ಬುಡಕ್ಕೇ ಬರುವುದು.

ಹೇಗೆ ಇರಬೇಕು, ಹೇಗೆ ಇರಬಾರದು ಎಂದು ಬರೆದವನೇ ಅವನು. ಯಾವುದು ಧರ್ಮ ಯಾವುದು ಅಧರ್ಮ - ಎಂದು ಧರ್ಮರಾಜನಿಗೂ ಸರಿಯಾಗಿ ತಿಳುವಳಿಕೆ ಇಲ್ಲ. ಅವನು ಹೆಸರಿಗಷ್ಟೇ ಧರ್ಮರಾಜ. ಅವನಿಗೆ ಸರಿಯಾದ ಧರ್ಮದ ತಿಳುವಳಿಕೆ ಇಲ್ಲದ್ದರಿಂದಲೇ ನರಕವನ್ನು ಕಾಣಬೇಕಾಗಿ ಬಂತು. ಭಗವಂತನಾದರೆ

ಧರ್ಮಾಧರ್ಮಗಳನ್ನು ಚೆನ್ನಾಗಿ ಬಲ್ಲವನು. ಆದ್ದರಿಂದಲೇ ಭೀಷ್ಮರು 'ಧರ್ಮವಿದುತ್ತಮಃ' - ಧರ್ಮವನ್ನು ತಿಳಿದವರಲ್ಲೆಲ್ಲ ಶ್ರೇಷ್ಠನಾಗಿರುವವನು ನೀನೇ ಎಂದು ಸ್ತುತಿಸಿರುವರು.

ನಾವು ಮನೆಯಲ್ಲಿ ಧರ್ಮವನ್ನು ತಿಳಿದವರೆಲ್ಲಲ್ಲ ಉತ್ತಮರು ಎಂಬ ಹಂತಕ್ಕೆ ಏರಬೇಕು. ಉಳಿದವರಲ್ಲಿ ಧರ್ಮದ ಬಗ್ಗೆ ಕೇಳುವ ಸ್ಥಿತಿ ಬರಬಾರದು. ಹೀಗಾಗಬೇಕಾದರೆ ಕೃಷ್ಣನನ್ನು 'ಧರ್ಮವಿದುತ್ತಮಃ' - ಧರ್ಮವನ್ನು ಬಲ್ಲವರಲ್ಲೆಲ್ಲ ಶ್ರೇಷ್ಠನಾಗಿರುವವನೆಂದು ಉಪಾಸನೆ ನಡೆಸಬೇಕು.

**ವೈಕುಂಠಃ ಪುರುಷಃ ಪ್ರಾಣಃ ಪ್ರಾಣದಃ ಪ್ರಣವಃ ಪೃಥುಃ|**
**ಹಿರಣ್ಯಗರ್ಭಃ ಶತ್ರುಘ್ನೋ ವ್ಯಾಪ್ತೋ ವಾಯುರಧೋಕ್ಷಜಃ || ೪೪ ||**

**೪೦೮. ವೈಕುಂಠಃ – ಪರಸ್ಪರವಾಗಿ ಇರುವ ತಡೆಯನ್ನು ದೂರ ಮಾಡುವವನು.**

**ವಿವರಣೆ :** 'ಪ್ರಗತಿ ಕುಂಠಿತವಾಗಿದೆ' - ಎಂದು ವ್ಯವಹರಿಸುವೆವು. ದೋಷ ಎಂಬ ಅರ್ಥದಲ್ಲಿ ಇಲ್ಲಿ ಕುಂಠ ಶಬ್ದವನ್ನು ಬಳಸಲಾಗಿದೆ. ವಿಕುಂಠ ಎಂದರೆ ದೋಷದೂರ. ವಿಕುಂಠವೇ ವೈಕುಂಠ. ಆದುದರಿಂದಲೇ ಭಗವಂತನ ಮನೆಗೆ ವೈಕುಂಠ ಎಂದು ಹೆಸರು. ವೈಕುಂಠ, ಶ್ವೇತದ್ವೀಪ ಹಾಗೂ ಅನಂತಾಸನ ಎಂದು ಭಗವಂತನ ಮೂರು ಸ್ಥಳಗಳನ್ನು ಉಲ್ಲೇಖಿಸುವೆವು. ಇವುಗಳಲ್ಲಿ ವೈಕುಂಠಕ್ಕೆ ಆ ಹೆಸರು ಬರಲು ಕಾರಣ ವಿಗತವಾದ ಕುಂಠ – ದೋಷ ಉಳ್ಳದ್ದು ವಿಕುಂಠ, ವಿಕುಂಠ ಏವ ವೈಕುಂಠ. ಯಾವ ಜಾಗದಲ್ಲಿ ದೋಷ ಸ್ವಲ್ಪ ಪ್ರಮಾಣದಲ್ಲೂ ಇಲ್ಲವೋ ಆ ಜಾಗಕ್ಕೆ ವೈಕುಂಠ ಎಂದು ಹೆಸರು.

ಇಲ್ಲಿ - ಕುಂಠ ಎಂದರೆ ಅಡೆತಡೆ. ಎರಡು ವಸ್ತುಗಳು ಒಟ್ಟು ಸೇರಲು ಕುಂಠವನ್ನು, ಅಡೆತಡೆಯನ್ನು ದೂರ ಮಾಡುವವನೇ ವೈಕುಂಠ. ಪಂಚಭೂತಗಳಲ್ಲಿ ನೀರು–ಮಣ್ಣು ಒಟ್ಟಿಗಿರುವವು, ಗಾಳಿ - ಆಕಾಶ ಒಟ್ಟಿಗೆ ಇರುವವು, ಬೆಂಕಿ - ನೀರು ಒಟ್ಟಿಗಿರುವವು. ಇವುಗಳಿಗೆ ಅಭಿಮಾನಿಗಳಾದ ದೇವತೆಗಳೂ ಒಮ್ಮೊಮ್ಮೆ ಅಸುರಾವೇಶಕ್ಕೆ ಒಳಗಾಗಿ ಪರಸ್ಪರ ಜಗಳಾಡಿಕೊಳ್ಳುವುದುಂಟು. ಆದರೆ ಪಂಚಭೂತಗಳು ಮಾತ್ರ ಎಂದೂ ಪರಸ್ಪರ ಸೇರಿಕೊಳ್ಳದೆ ಇರುವುದೆಂದೇ ಇಲ್ಲ. ಒಂದೊಮ್ಮೆ ಹಾಗೆ ಬೇರೆ ಬೇರೆಯಾಗಿ ಬಿಟ್ಟವೆಂದರೆ ನಮಗೆ ಬದುಕಲಿಕ್ಕೇ ಆಗಲಿಕ್ಕಿಲ್ಲ. ಹಾಗಾದಂತೆ ಭಗವಂತನು ಪಂಚಭೂತಗಳು ಪರಸ್ಪರವಾಗಿ ಸೇರಿಕೊಳ್ಳುವಲ್ಲಿ ಅವುಗಳಲ್ಲಿಯ ದೋಷವನ್ನು, ಅಡೆತಡೆಗಳನ್ನು ಇಲ್ಲದಂತೆ ಮಾಡುವವನು. ಆದ್ದರಿಂದಲೇ ಅವನು ವಿಕುಂಠ, ವಿಕುಂಠನೇ ವೈಕುಂಠ.

ಈಗ ಹೆಚ್ಚಿನ ಮನೆಗಳಲ್ಲಿ ಗಂಡಹೆಂಡರು, ಹೆತ್ತವರು ಮಕ್ಕಳು, ಅಣ್ಣ ತಮ್ಮಂದಿರು ಪರಸ್ಪರವಾಗಿ ಹೊಂದಿಕೊಳ್ಳದಿರುವುದೇ ಹೆಚ್ಚು. ನಮ್ಮ ಮಠದ ಪರಿಭಾಷೆಯಲ್ಲಿ ಹೇಳುವುದಾದರೆ ಎಲ್ಲರೂ 'ಅಮೂರ್ತಿಗಳು.' ಬಾಯಿ ಚಿಕ್ಕದಾಗಿದ್ದು, ಹೊಟ್ಟೆ ದೊಡ್ಡದಾದ ಪಾತ್ರ ಅಮೂರ್ತಿ ಎನಿಸಿದೆ. ಅದು ದೊಡ್ಡ ಹೊಟ್ಟೆಯನ್ನು ಹೊಂದಿರುವುದರಿಂದ ಇತರ ಯಾವುದೇ ಪಾತ್ರೆಯಲ್ಲಿ ಸೇರಿಕೊಳ್ಳುವುದಿಲ್ಲ. ಅದರಂತೆ ಮನೆಯಲ್ಲಿ ಕುಟುಂಬದಲ್ಲಿ ಪರಸ್ಪರವಾಗಿ ಹೊಂದಿಕೊಂಡು ಬದುಕಲು ಏನಾದರೂ ಅಡ್ಡಿ ಆತಂಕಗಳಿದ್ದರೆ ಭಗವಂತನನ್ನು 'ವೈಕುಂಠ' ಎಂದು ಉಪಾಸನೆ ನಡೆಸಿದರೆ ಅದರ ನಿವಾರಣೆ ಆಗುವುದು. ಒಬ್ಬರ ಮನಸ್ಸು ಮತ್ತೊಬ್ಬರ ಮನಸ್ಸಿನಲ್ಲಿ ಸೇರಿಕೊಳ್ಳುವಂತೆ 'ವೈಕುಂಠ' ನಾಮಕ ಭಗವಂತನು ಪ್ರೇರಿಸುವನು.

ಮನೆಯಲ್ಲಿ ಮಾತ್ರವಲ್ಲ, ಸಮಾಜದಲ್ಲೂ ಕಬಡಿ ಆಟ ಆಡುವವರೇ ಹೆಚ್ಚು. ಅಂದರೆ ಒಬ್ಬರ ಕಾಲನ್ನು ಮತ್ತೊಬ್ಬರು ಎಳೆಯುವವರೇ ಹೆಚ್ಚು ಹೊರತು ಮುಂದುವರಿಯಲು ಅನುಕೂಲ ಮಾಡಿಕೊಡುವವರು ವಿರಳ. ಇದಕ್ಕೆ ಕಾರಣ ಪರಸ್ಪರವಾಗಿ ಇರುವ ವೈಮನಸ್ಯ. ಇದು ದೂರ ಆಗಬೇಕೆಂದರೆ ಭಗವಂತನನ್ನು 'ವೈಕುಂಠ' ಎಂದು ಉಪಾಸನೆ ನಡೆಸಬೇಕು.

**೪೦೯. ಪುರುಷಃ – ಪೂರ್ಣಗಳಾದ ಆರು ಗುಣಗಳನ್ನು ಹೊಂದಿರುವವನು.**

**ವಿವರಣೆ :** ಪುರು + ಷ - ಪುರುಷ. ಪುರು ಎಂದರೆ ಪೂರ್ಣಗಳಾದ. ಷ ಎಂದರೆ ಷಟ್ - ಆರುಗುಣಗಳು. ಪೂರ್ಣಗಳಾದ ಆರು ಗುಣಗಳು ಯಾರಲ್ಲಿ ತುಂಬಿವೆಯೋ ಅವನು ಪುರುಷ.

ಪುರುಷ ಎಂದರೆ ಸ್ತ್ರೀಯರಿಗಿಂತ ಬೇರೆಯಾದವರು ಎಂದೇನೂ ಅಲ್ಲ. ಯಾರೆಲ್ಲ ಪೂರ್ಣನಾದ ಭಗವಂತನನ್ನು ತಮ್ಮ ಹೃದಯದಲ್ಲಿ ಹೊತ್ತಿಕೊಂಡಿರುವರೋ ಅವರೆಲ್ಲ ಪುರುಷರೇ. ಆಧ್ಯಾತ್ಮಿಕ ಕ್ಷೇತ್ರದಲ್ಲಿ ಮೀಸಲಾತಿಗೆ ಅವಕಾಶವೇ ಇಲ್ಲ. ಯಾರು ಹೃದಯದಲ್ಲಿ ದೇವರನ್ನು ಹೊತ್ತಿರುವರೋ ಅವರೆಲ್ಲರಿಗೆ ಪ್ರವೇಶ. ದೇವರನ್ನು ಹಾಗೆ ಹೊತ್ತಿರದವರೆಂದರೆ ಹೆಣವಷ್ಟೇ. ಅದಕ್ಕೆ ಪ್ರವೇಶ ಇಲ್ಲ. ದೇವರಲ್ಲಿ ಪೂರ್ಣವಾಗಿರುವ ಆ ಆರು ಗುಣಗಳಲ್ಲಿ ಉಳಿದೆಲ್ಲ ಗುಣಗಳೂ ಸೇರಿವೆ.

ಆ ಆರು ಗುಣಗಳಾದರೂ - 'ಐಶ್ವರ್ಯಸ್ಯ ಸಮಗ್ರಸ್ಯ.....' ಎಂದಿರುವಂತೆ ಸಮಗ್ರ ಐಶ್ವರ್ಯ - ಎಂದರೆ ಒಡೆತನ. ಲಕ್ಷ್ಮೀದೇವಿಯಿಂದ ಪ್ರಾರಂಭಿಸಿ

ಪ್ರತಿಯೊಬ್ಬರ ಮೇಲೂ ಭಗವಂತನ ಒಡೆತನ. ಹೀಗೆ ಉಳಿದವರ ಮೇಲೆ ಮಾತ್ರವಲ್ಲ, ತನ್ನ ಮೇಲೂ ತನ್ನ ಒಡೆತನ ಭಗವಂತನಿಗಿದೆ. ನಾವಾದರೂ ನಮ್ಮ ಹೆಂಡತಿ ಮಕ್ಕಳ ಮೇಲೆಲ್ಲ ಒಡೆತನವನ್ನು ಸ್ಥಾಪಿಸಲು ಯತ್ನಿಸುವೆವು. ಆದರೆ ನಮ್ಮ ಮೇಲೆಯೇ ಒಡೆತನ ನಮಗಿರುವುದಿಲ್ಲ. ಆದುದರಿಂದಲೇ ನೋಡಬಾರದ್ದನ್ನು ನೋಡಿ ನಾಲ್ಕು ಹೊಡೆತಗಳನ್ನು ತಿನ್ನುವೆವು, ಆಡಬಾರದ್ದನ್ನು ಆಡಿ ನಾಲ್ಕು ಹೊಡೆತಗಳನ್ನು ತಿನ್ನುವೆವು. ಆದರೆ ಭಗವಂತ ಹಾಗಲ್ಲ. ಲಕ್ಷ್ಮೀದೇವಿಯೇ ಮುಂತಾದವರ ಮೇಲೆ ಹೇಗೋ ಹಾಗೆ ತನ್ನ ಮೇಲೂ ಒಡೆತನವನ್ನು ಪಡಕೊಂಡಿರುವವನು. ಆದುದರಿಂದಲೇ ಅವನಲ್ಲಿ 'ಸಮಗ್ರ ಐಶ್ವರ್ಯ' ಇದೆ.

'ವೀರ್ಯಸ್ಯ....' ವೀರ್ಯ ಎಂದರೆ ಆರಂಭಿಸಿದ ಕೆಲಸವನ್ನು ಪೂರ್ಣಗೊಳಿಸುವ ಗುಣ. ಇದು ಪೂರ್ಣ ಪ್ರಮಾಣದಲ್ಲಿ ಬೇರೆ ಯಾರಲ್ಲೂ ಇಲ್ಲ, ದೇವರಲ್ಲಿ ಪೂರ್ಣಪ್ರಮಾಣದಲ್ಲಿದೆ.

'ಯಶಸಃ...' ಲಕ್ಷ್ಮಿಗೂ ಕೀರ್ತಿ ಇದೆ. ಆದರೆ ಅದರಲ್ಲಿ ಸ್ವಲ್ಪ ನ್ಯೂನತೆ. ಅವಳನ್ನೂ ಒಬ್ಬ ಕೇಳುವವನಿದ್ದಾನೆ. ಇದೇ ನ್ಯೂನತೆ. ಆದರೆ ಯಾರೂ ಕೇಳುವವನಿಲ್ಲದ ದೇವನಲ್ಲಿ ಸಮಗ್ರವಾದ ಯಶಸ್ಸು ಇದೆ. ಕೀರ್ತಿಯ ಪರಾಕಾಷ್ಠೆ ಇವನಲ್ಲಿದೆ.

'ಶ್ರಿಯಃ....' ಶ್ರೀ ಎಂದರೆ ಸಂಪತ್ತು. ಚತುರ್ಮುಖನಲ್ಲೂ ಸಂಪತ್ತು ಇದೆ. ಆದರೆ ಅವನೇನೂ ಲಕ್ಷ್ಮೀಪತಿ ಅಲ್ಲ. ನಾರಾಯಣನಾದರೂ ಲಕ್ಷ್ಮಿಗೂ ಪತಿ. ಸಕಲ ಸಂಪತ್ತಿಗೂ ಅಭಿಮಾನಿಯಾದವಳು ಲಕ್ಷ್ಮೀದೇವಿ. ಅಂತಹವಳಿಗೂ ಪತಿ ನಾರಾಯಣನೆಂದ ಮೇಲೆ ಅವನ ಸಂಪತ್ತಿನ ಪರಾಕಾಷ್ಠೆ ಸ್ಪಷ್ಟ.

'ಜ್ಞಾನ' ಮತ್ತು 'ವೈರಾಗ್ಯ' - ದೇವರಲ್ಲಿ ವೈರಾಗ್ಯ ಇದೆ. ನಮ್ಮಲ್ಲೂ ವೈರಾಗ್ಯ ಇರುವುದು. ಆದರೆ ದುಡ್ಡಿಗೆ ಸ್ವಲ್ಪ ಬಾಯಿ ಬಿಡುವೆವು. ಹಿಂದೆ ಸತ್ತು ಹೋದನೆಂದು ಖಾತ್ರಿ ಪಡಿಸಲಿಕ್ಕೆ ಮೂಗಿನ ರಂಧ್ರಗಳಲ್ಲಿ ಹತ್ತಿ ಇಡುತ್ತಿದ್ದರು. ಈಗ ಮತ್ತೊಂದು ರೀತಿಯಿಂದ ಪರೀಕ್ಷಿಸಬಹುದು. ಎರಡು ನಾಣ್ಯಗಳನ್ನು ಕಿವಿಯ ಹತ್ತಿರ ಸುರಿಯಬೇಕು. ಆಗಲೂ ಕಣ್ಣು ಬಿಡಲಿಲ್ಲ ಎಂದರೆ ಸತ್ತ. ಕಣ್ಣು ಬಿಟ್ಟನೆಂದರೆ ಸಾಯಲಿಲ್ಲ - ಎಂದು ತೀರ್ಮಾನಿಸಿಕೊಳ್ಳಬಹುದು.

ಆದರೆ ದೇವರೆದುರು ದುಡ್ಡನ್ನಾಗಲಿ, ಇನ್ನಾವುದನ್ನಾಗಲೀ ಇಟ್ಟರೂ ಅದ್ಯಾವುದಕ್ಕೂ ಅವನು ಸ್ಪಂದಿಸುವುದೇ ಇಲ್ಲ. ಅವನಿಗಿರುವಷ್ಟು ವೈರಾಗ್ಯ ಇನ್ನಾರಲ್ಲೂ ಇಲ್ಲ.

ಹೀಗೆ ಪೂರ್ಣವಾದ ಜ್ಞಾನ , ಪೂರ್ಣವಾದ ವೈರಾಗ್ಯ - ಅವನಲ್ಲಿ ಇದೆ.

ಈ ರೀತಿಯಾಗಿ ಐಶ್ವರ್ಯವೇ ಮುಂತಾದ ಆರು ಗುಣಗಳು ಪೂರ್ಣ ಪ್ರಮಾಣದಲ್ಲಿ ಯಾರಲ್ಲಿ ಇದೆಯೋ ಅವನೇ ಪುರುಷ. ಭಗವಂತನನ್ನು 'ಪುರುಷ' ಎಂದು ಉಪಾಸನೆ ಮಾಡಿದಲ್ಲಿ ನಮಗೆ ದಕ್ಕುವಷ್ಟು ಆರುಗುಣಗಳು ನಮ್ಮಲ್ಲಿ ಸಿದ್ಧಿಸುವಂತೆ ಅನುಗ್ರಹಿಸುವನು.

**೪೧೦. ಪ್ರಾಣಃ – ವ್ಯವಸ್ಥಿತವಾಗಿ, ಏನೂ ವ್ಯತ್ಯಾಸವಿಲ್ಲದೆ ಆಹಾರದ ಆಯಾಭಾಗವನ್ನು ಅಲ್ಲಲ್ಲಿಗೆ ಕೊಂಡೊಯ್ಯುವವನು.**

**ವಿವರಣೆ :** ಪ್ರ + ಆ + ಣ = ಪ್ರಾಣ. ಪ್ರ - ವ್ಯವಸ್ಥಿತವಾಗಿ ಆ - ಎಂದರೆ ವ್ಯತ್ಯಾಸವಿಲ್ಲದಂತೆ, ಣ - ಎಂದರೆ ಕೊಂಡೊಯ್ಯುವವನು. ಏನನ್ನು ? ನಾವು ಉಂಡ ಅನ್ನವನ್ನು. ಎಲ್ಲಿಗೆ ? ಮನಸ್ಸು ಇತ್ಯಾದಿಗಳೆಡೆಗೆ. **'ಅನ್ನಂ ಅಶಿತಂ ತ್ರೇಧಾ ವಿಧೀಯತೇ.'** ಎಂದಿರುವಂತೆ ನಾವು ಉಂಡ ಅನ್ನದ ಸೂಕ್ಷ್ಮ ಭಾಗ ಮನಸ್ಸಾಗಿ ಪರಿಣಾಮಗೊಳ್ಳುವುದು. ಅನ್ನದ ಮಧ್ಯಭಾಗ ರಕ್ತ ಮಾಂಸವಾಗಿ ಸೇರಿಕೊಳ್ಳುವುದು. ಅನುಪಯುಕ್ತ ಭಾಗ ಕಶ್ಮಲವಾಗಿ ಹೊರ ಚೆಲ್ಲಲ್ಪಡುವುದು. ಈ ವ್ಯವಸ್ಥೆಯನ್ನು ಪ್ರಾಣನಾಮಕ ಭಗವಂತನು ವ್ಯತ್ಯಾಸವಿಲ್ಲದಂತೆ ಅಂದರೆ ಮನಸ್ಸಿಗೆ ಸೇರಬೇಕಾದದ್ದು. ರಕ್ತಕ್ಕೆ ಸೇರುವಂತಾಗಲೀ, ರಕ್ತಕ್ಕೆ ಸೇರಬೇಕಾದದ್ದು ಮನಸ್ಸಿಗೆ ಸೇರುವಂತಾಗಲೀ- ಮಾಡದೆ ಆಹಾರದ ಯಾವ ಯಾವ ಭಾಗ ಎಲ್ಲೆಲ್ಲಿಗೆ ಸೇರಬೇಕೋ ಅಲ್ಲಲ್ಲಿಗೇ ವ್ಯವಸ್ಥಿತವಾಗಿ, ವ್ಯತ್ಯಾಸವಿಲ್ಲದೆ ಕೊಂಡೊಯ್ಯುವನು.

**'ಅಹಂ ವೈಶ್ವಾನರೋ ಭೂತ್ವಾ ಪ್ರಾಣಿನಾಂ ದೇಹಮಾಶ್ರಿತಃ |**
**ಪ್ರಾಣಪಾನಸಮಾಯುಕ್ತಃ ಪಚಾಮ್ಯನ್ನಂ ಚತುರ್ವಿಧಮ್' ||**

ಊಟಕ್ಕೆ ಕೊಡುವ ಮುಂಚೆ ಅರ್ಥಾನುಸಂಧಾನಪೂರ್ವಕವಾಗಿ ಈ ಮಂತ್ರವನ್ನು ಪಠಿಸಿದೆವೆಂದರೆ ಉಂಡದ್ದು ಚೆನ್ನಾಗಿ ಪಚನವಾಗುವುದು.

ಮುಖ್ಯಪ್ರಾಣನಿಂದ ಕೂಡಿಕೊಂಡು ನಾನು ನೀನು ಉಂಡದ್ದನ್ನು ಚೆನ್ನಾಗಿ ಪಚನ ಮಾಡುವೆನೆಂದು ಕೃಷ್ಣ ನಮಗೆ ಸಂದೇಶ ನೀಡಿರುವನು.

ಇದಕ್ಕನುಗುಣವಾಗಿ ಭಗವಂತನು ನಾವು ಉಂಡದ್ದರ ಯಾವ ಸೂಕ್ಷ್ಮ ಭಾಗ ಮನಸ್ಸಿಗೆ ಸೇರಬೇಕೋ ಆ ಭಾಗವನ್ನು ಮನಸ್ಸಿಗೂ, ಯಾವ ಮಧ್ಯಮ ಭಾಗ ರಕ್ತಕ್ಕೆ ಸೇರಬೇಕೋ ಆಭಾಗವನ್ನು ರಕ್ತಕ್ಕೆ ಸೇರಿಸುವನು. ಯಾವ ಜಾಗ ಹೊರಗೆ ಚೆಲ್ಲಲ್ಪಡಬೇಕೋ ಅದು ಹೊರಗೆ ಚೆಲ್ಲಲ್ಪಡುವಂತೆ ಪ್ರ - ವ್ಯವಸ್ಥಿತವಾಗಿ, ಆ-

ಚೆನ್ನಾಗಿ, ಅಂದರೆ ಸ್ವಲ್ಪವೂ ವ್ಯತ್ಯಾಸವಿಲ್ಲದೆ, ಣ - ನಯತಿ ಆಯಾ ಭಾಗವನ್ನು ಅಲ್ಲಲ್ಲಿಗೆ ಕೊಂಡೊಯ್ಯುವನು. ಆದುದರಿಂದಲೇ ಅವನು ಪ್ರಾಣ.

**೪೧೧. ಪ್ರಾಣದಃ – ಪ್ರಾಣ ಎನಿಸುವ ಅಂತಃಸತ್ವವನ್ನು ತುಂಬಿಸುವವನು.**

ವಿವರಣೆ : 'ಪ್ರಾಣ' ಎನಿಸುವ ಭಗವಂತನು ನಾವು ಉಂಡ ಆಹಾರದ ಆಯಾ ಭಾಗವನ್ನು ಮನಸ್ಸೇ ಮುಂತಾದಲ್ಲಿಗೆ ತಲುಪಿಸಿ, ಅದರಿಂದಾಗಿ ನಾವು ಬದುಕುವಂತೆ ಮಾಡಿ, ನಮ್ಮಲ್ಲಿ ಪ್ರಾಣಶಕ್ತಿಯನ್ನು ತುಂಬುವನು.

ನಮ್ಮಲ್ಲಿ 'ಪ್ರಾಣಶಕ್ತಿ' - ಎಂದು ಬೇರೆಯೇ ಇದೆ. ಆಂಗ್ಲ ಭಾಷೆಯಲ್ಲಿ 'Will Power' ಎಂದು ವ್ಯವಹರಿಸಲಾಗುವುದು.

ಒಬ್ಬ ವಯಸ್ಸಾದ ವ್ಯಕ್ತಿ. ಆದರೂ ಉಪನ್ಯಾಸಕ್ಕೆ ಬಂದಿದ್ದಾರೆ. ದೈಹಿಕ ಶಕ್ತಿ ಇಲ್ಲ. ಆದರೂ ಬಂದಿದ್ದಾರೆ. ಅವರನ್ನು ಕರೆತಂದ ಶಕ್ತಿ ಆಂತರಶಕ್ತಿ. ಅದನ್ನು ಅಂತಃಸತ್ವ ಎನ್ನಲಾಗುವುದು. ದೇವರೇ ಅದನ್ನು ನೀಡುವನು. ಭೀಷ್ಮರು ಎಂಟುನೂರು ವರ್ಷ ವಯಸ್ಸಿನ ಮುದುಕರಾಗಿದ್ದರೂ ಅಭಿಮನ್ಯು ಮುಂತಾದವರೂ ಆಶ್ಚರ್ಯ ಪಡುವಂತೆ ಹೋರಾಡಿದ್ದರು. ಅಂತಹ ಅಂತಃಸತ್ವದಿಂದಾಗಿ ಈಗಿನ ಎಷ್ಟೋ ನಲ್ವತ್ತು ವರ್ಷ ವಯಸ್ಸಿನ ಯುವಕರು ಹಿಂದಿನ ಎಂಭತ್ತು ವರ್ಷದ ಮುದುಕರ ಜೊತೆಗೆ ನಡೆಯಲಿಕ್ಕಾಗದೆ ಸೋಲುವುದುಂಟು ! ಯಾಕೆ ? ಮುದುಕರಲ್ಲಿಯ ಅಂತಹ ಅಂತಃಸತ್ವವೇ ಅವರಲ್ಲಿ ಶಕ್ತಿಯನ್ನು ತುಂಬಿದೆ. ಆದುದರಿಂದ ದೈಹಿಕ ಶಕ್ತಿ ಕುಂದಿದರೂ ಇಂತಹ ಪ್ರಾಣಶಕ್ತಿ ಎನಿಸುವ ಅಂತಃ ಸತ್ವವನ್ನು ತುಂಬಿ ಆಧ್ಯಾತ್ಮಿಕ, ಧಾರ್ಮಿಕ ಚಟುವಟಿಕೆಗಳಲ್ಲಿ ಯಾವಾಗಲೂ ಉತ್ಸಾಹದಿಂದ, ಹುರುಪಿನಿಂದ ಪಾಲ್ಗೊಳ್ಳುವಂತೆ ನಮ್ಮನ್ನು ಅನುಗ್ರಹಿಸಲು 'ಪ್ರಾಣದ' ನಾಮಕ ಭಗವಂತ ಉಪಾಸನೆ ನಡೆಸಬೇಕು.

**೪೧೨. ಪ್ರಣವಃ – * ಚೆನ್ನಾಗಿ ಸ್ತುತಿಸಲ್ಪಡುವವನು.**

*** ತನ್ನ ಬಗ್ಗೆ ತಾನೇ ಚೆನ್ನಾಗಿ ತಿಳಿಸಿಕೊಡಲು ಅರ್ಹನಾಗಿರುವವನು.**

ವಿವರಣೆ : ಪ್ರಕರ್ಷೇಣ ನೂಯತೇ - ಚೆನ್ನಾಗಿ ಸ್ತುತಿಸಲ್ಪಡುವವನು ಪ್ರಣವ. ನಮಗಾಗಿ ಇಷ್ಟೆಲ್ಲ ಉಪಕಾರ ಮಾಡುತ್ತಿರುವವನು ಭಗವಂತನೆಂದ ಮೇಲೆ ಅವನನ್ನು ಚೆನ್ನಾಗಿ ಸ್ತುತಿಸಬೇಕು ತಾನೇ? ಇದನ್ನೇ 'ಪ್ರಣವ' ನಾಮ ಸೂಚಿಸುವುದು. ಅವನು ಸಲ್ಲಿಸುವ ಉಪಕಾರಕ್ಕೆ ಪ್ರತಿಯಾಗಿ ಅವನನ್ನು ಚೆನ್ನಾಗಿ ಸ್ತುತಿಸಬೇಕು ಎಂಬ ಧಾಟಿಯಲ್ಲಿ ಅವನನ್ನು ಪ್ರಣವ - ನಮ್ಮ ನಿಮ್ಮಿಂದ ಸ್ತುತಿಸಲ್ಪಡುವವನು - ಎನ್ನಲಾಗಿದೆ.

ನಮ್ಮಿಂದ ಏನೋ ಅಲ್ಪಸ್ವಲ್ಪ ಹೊಗಳಲ್ಪಡುವನು. ಆದರೆ ಅವನಲ್ಲಿ ಹೊಗಳಿಸಿಕೊಳ್ಳಬೇಕಾದ ಧರ್ಮಗಳು ಇನ್ನೂ ಇವೆ. ಯಾರು ಹೊಗಳಬೇಕು? ಯಾರಿಗೂ ಪೂರ್ಣವಾಗಿ ಹೊಗಳಲಿಕ್ಕೆ ಸಾಧ್ಯವಾಗದಷ್ಟು ಧರ್ಮಗಳು ಅವನಲ್ಲಿ ಇವೆ. ಆದ್ದರಿಂದ ಅವನಲ್ಲಿಯೇ ಕೇಳಿಕೊಳ್ಳಲಾಗುವುದು - ನಿನ್ನನ್ನು ಪೂರ್ಣವಾಗಿ ಹೊಗಳಲು ನಮ್ಮಿಂದ ಆಗುತ್ತಿಲ್ಲ. ಆದ್ದರಿಂದ ನಿನ್ನ ಬಗ್ಗೆ ನೀನೇ ಏನಾದರೂ ಹೇಳು ಎಂದು - ಕೆಲವು ಅಪರಿಚಿತ ಊರಿಗೆ ಹೋದಾಗ ಉಪನ್ಯಾಸದಲ್ಲಿ ನಮ್ಮ ಪರಿಚಯವನ್ನು ನಾವೇ ಮಾಡಿಕೊಳ್ಳಬೇಕೆಂದು ನಿವೇದಿಸಿಕೊಳ್ಳುವುದುಂಟು. ಅದರಂತೆ ಹಾಗೆಯೇ ದೇವರನ್ನು ನಖಶಿಖಾಂತ ಪರಿಚಯಿಸಿಕೊಂಡವರು ಯಾರೂ ಇಲ್ಲ. ಆಗ ಭೀಷ್ಮರು ದೇವರಲ್ಲಿಯೇ ಕೇಳಿಕೊಂಡರಂತೆ ನಿನ್ನ ಪರಿಚಯವನ್ನು ನೀನೇ ಮಾಡಿಕೊಡು ಎಂದು. ದೇವರು ತನ್ನ ಪರಿಚಯವನ್ನು ಮಾಡಿಕೊಡುವನು - ಪ್ರಣೌತಿ- ತನ್ನನ್ನು ಚೆನ್ನಾಗಿ ತಿಳಿಸಿಕೊಡುವವನು ಪ್ರಣವ.

ನಮ್ಮ ನಿಮ್ಮಲ್ಲಿ ಒಬ್ಬನ ಪರಿಚಯವನ್ನು ಮತ್ತೊಬ್ಬ ಮಾಡಿಕೊಡಬಹುದು. ಯಾಕೆಂದರೆ ನಮ್ಮ ವ್ಯಕ್ತಿತ್ವ ಇತಿಮಿತಿಗೆ ಒಳಗಾದದ್ದು. ಆದರೆ ಅನಂತವ್ಯಕ್ತಿತ್ವದ ಭಗವಂತನ ಬಗ್ಗೆ ಚೆನ್ನಾಗಿ ಹೇಳಿಕೊಳ್ಳಲು ಅವನೇ ಸಮರ್ಥ. ಪ್ರಣೌತೀತಿ ಪ್ರಣವಃ. ಯಾರ ಬಗ್ಗೆ ಹೇಳಿಕೊಳ್ಳಲು ತಾನೊಬ್ಬನೇ ಸಮರ್ಥನೋ ಅವನು ಪ್ರಣವ. ಅಂದರೆ ಅದ್ಭುತವಾದ, ನಮ್ಮ ನಿಮ್ಮ ಊಹನೆಗೂ ನಿಲುಕದ, ಶ್ರುತಿಗೂ ಪೂರ್ಣವಾಗಿ ಗೋಚರಿಸದ ಅಪ್ರತಿಮ ಮಹಿಮೆ ಉಳ್ಳವನು.

**೪೧೩. ಪೃಥುಃ – ಇತರ ಯಾರಿಂದಲೂ ಹೇಳಿ ಮುಗಿಸಲಾರದಷ್ಟು ವಿಸ್ತಾರವಾಗಿರುವವನು.**

**ವಿವರಣೆ :** 'ಪ್ರಣವ' ನಾಮವು ಅವನನ್ನು ತಿಳಿಸಿಕೊಡಲು ಅವನೇ ಯೋಗ್ಯನಾಗಿರುವವನೆಂದು ಪ್ರತಿಪಾದಿಸಿದಾಗ ಬರಬಹುದಾದ 'ಯಾಕೆ ?'- ಎಂಬ ಪ್ರಶ್ನೆಗೆ ಸಮಾಧಾನ ರೂಪದಲ್ಲಿರುವ ನಾಮ - ಪೃಥುಃ - ಹೇಳಿದಷ್ಟು ಹೇಳಿದಷ್ಟು ವಿಸ್ತಾರವಾಗಿರುವವನು. ಭೂಮಿ 'ಪೃಥ್ವೀ' ಎನಿಸುವುದೂ ವಿಸ್ತಾರವಾಗಿರುವುದರಿಂದಲೇ. ಯಾರನ್ನು ಹೊಗಳಿ ಕೊನೆ ಮುಟ್ಟಲು ಸಾಧ್ಯವಿಲ್ಲವೋ ಅಷ್ಟೊ ವಿಸ್ತಾರವಾಗಿರುವವನು ಅವನು.

ಶೇಷ ಸಾವಿರ ಬಾಯಿಗಳುಳ್ಳವ. ಸಾವಿರ ಬಾಯಿಗಳಿಗೆ ಸಾವಿರ ನಾಲಗೆಗಳಲ್ಲ, ಮತ್ತೆ, ಎರಡು ಸಾವಿರ ನಾಲಗೆಗಳು. ಒಮ್ಮೆ ಬಾಯಿ ಬಿಟ್ಟನೆಂದರೆ ಎರಡು ಮಾತು

ಹೊರಡುವುದು. ಹಾಗಿರುವಾಗ ಸಾವಿರ ಬಾಯಿ ಬಿಟ್ಟನೆಂದರೆ ಎರಡು ಸಾವಿರ ಮಾತುಗಳು ಹೊರಡುವವು. ಆದರೂ ಭಗವಂತನ ಗುಣಗಳನ್ನು ಹೇಳಿ ಮುಗಿಸಲು ಅವನಿಂದ ಆಗುತ್ತಿಲ್ಲ. **'ನೈವೋದಾಪುರ್ಗೃಣಂತೋಽಂತಂ ಯದ್ಗುಣಾನಾಮಜಾದಯ'**- ಇನ್ನೂ ಕೂಡಾ ಹೊಗಳಿ ಹೊಗಳಿ ಮುಗಿಯಲಿಲ್ಲ. ಯಾಕೆಂದರೆ ಅಷ್ಟೂ ವಿಸ್ತಾರ ; ವಿಸ್ತಾರ. ಬಹಳಷ್ಟು ತೆರೆದುಕೊಂಡವನು.

**೪೧೪. ಹಿರಣ್ಯಗರ್ಭಃ – ಬಹಳ ಕಾಂತಿವುಳ್ಳವನೆಂದು ಹೊಗಳಲ್ಪಡುವವನು.**

**ವಿವರಣೆ :** ಹಿರಣ್ಯ ಎಂದು ಚಿನ್ನಕ್ಕೆ ಹೆಸರು. ಯಾಕೆ ಚಿನ್ನವನ್ನು ಹಿರಣ್ಯ ಎಂದು ಕರೆಯುವರು **'ಹರ್ಯತೀತಿ ಹಿರಣ್ಯಂ'** - ಬಹಳ ಕಾಂತಿ. ಬಹಳ ಆಕರ್ಷಣೆ. ಬೇರೆ ಯಾವ ಲೋಹಕ್ಕೂ ಇರದಷ್ಟು ಕಾಂತಿ ಚಿನ್ನದ್ದು. ತುಂಬ ಕಾಂತಿವುಳ್ಳದ್ದು, ಆಕರ್ಷಣವುಳ್ಳದ್ದು ಎಂಬ ಅರ್ಥದಲ್ಲಿ ಚಿನ್ನ ಹಿರಣ್ಯ ಎನಿಸುವುದು. ಗೀರ್ಯತೇ ಇತಿ ಗರ್ಭಃ ಹೊಗಳಲ್ಪಡುವವನು ಎಂದು ಗರ್ಭ ಶಬ್ದದ ಅರ್ಥ. ಹಾಗಾದರೆ 'ಹಿರಣ್ಯಗರ್ಭ' - ಎಂದು ಒಟ್ಟು ಸೇರಿಸಿದಾಗ ತುಂಬ ಕಾಂತಿವುಳ್ಳವನು, ಚೆಂದವಾಗಿರುವವನೆಂದು ಹೊಗಳಲ್ಪಡುವವನು ಎಂಬ ಅರ್ಥ ಸಿದ್ಧಿಸುವುದು.

ದೇವರನ್ನು ಹೇಗೆ ಹೊಗಳುವುದು ? ಅಪ್ಪಾ ಏನು ನಿನ್ನ ಸೌಂದರ್ಯ! 'ಸಾಕ್ಷಾನ್ಮನ್ಮಥ ಮನ್ಮಥಃ....' ಲೋಕದಲ್ಲಿ ತುಂಬ ಚೆಂದ ಎಂದು ಪ್ರಸಿದ್ಧನಾಗಿರುವ ಮನ್ಮಥನಿಗೂ ಮನ್ಮಥ ಎನಿಸುವಷ್ಟೂ ಸುಂದರನಾಗಿರುವವನು ನೀನು - ಎಂದು ಹೊಗಳಬೇಕು. ಗೋಪಿಕೆಯರು ಸ್ತ್ರೀಯರಾದುದರಿಂದ ಅವರಿಗೆ ಮನ್ಮಥನದ್ದಷ್ಟೇ ಪರಿಚಯ. ಅವನಿಗಿಂತಲೂ ಸುಂದರರಾಗಿರುವ ಚತುರ್ಮುಖಾದಿಗಳ ಪರಿಚಯ ಅವರಿಗಿಲ್ಲ. ಆದುದರಿಂದ 'ಮನ್ಮಥಮನ್ಮಥ' - ಎಂದಷ್ಟೇ ಪರಮಾತ್ಮನ ಸೌಂದರ್ಯವನ್ನು ಸಾರಿರುವರು. ವಾಸ್ತವವಾಗಿ ಮನ್ಮಥನಿಗಿಂತಲೂ ಸುಂದರರಾಗಿರುವ ಚತುರ್ಮುಖಾದಿಗಳಿಗಿಂತಲೂ ಸುಂದರನಾಗಿರುವವನು ಭಗವಂತ. ಹೀಗೆ ಶಾಸ್ತ್ರದಲ್ಲಿ ಹೊಗಳಲ್ಪಡುವವನು 'ಹಿರಣ್ಯಗರ್ಭ.'

ಕೃಷ್ಣನೇನೂ ಬೆಳ್ಳಗಿಲ್ಲ. ಬೆಳ್ಳಗಾಗಿರುವವರೇ ಚೆಂದ ಎಂಬ ಭ್ರಾಂತಿ ಇದೆ. ಆದರೆ ಎಣ್ಣೆಗಪ್ಪಿನ, ನೀಲ ಮೇಘದ ನಸುಗಪ್ಪಿನ ಕೃಷ್ಣ ಆ ಬಣ್ಣದಿಂದಲೂ ಚೆಂದ. ದ್ರೌಪದಿ ಹೇಗೋ ಹಾಗೆ.

ಕೃಷ್ಣ ಬರೇ ಸೌಂದರ್ಯದ ದೃಷ್ಟಿಯಿಂದಷ್ಟೇ ಚೆಂದ ಅಲ್ಲ, ಮಾತುಗಾರಿಕೆಯಿಂದಲೂ ಚೆಂದ, ವಾತ್ಸಲ್ಯದಿಂದಲೂ ಚೆಂದ, ತಿಳುವಳಿಕೆಯಿಂದಲೂ ಚೆಂದ, ...... ಹೀಗೆ ಪ್ರತಿಯೊಂದು ಗುಣದಿಂದಲೂ ಚೆಂದ.

ನಮಗೆ ಯಾವ ಗುಣ ಅವನಿಂದ ಅನುಗ್ರಹಿಸಲ್ಪಡಬೇಕೋ ಆ ಗುಣದಿಂದ ಅವನು ಚೆಂದನಾಗಿರುವವನು ಎಂದು 'ಹಿರಣ್ಯಗರ್ಭ' ನಾಮದಿಂದ ಉಪಾಸನೆ ನಡೆಸೋಣ. ಅವನಿಂದ ಆ ಗುಣವನ್ನು ಪಡೆಯೋಣ.

**೪೧೫. ಶತ್ರುಘ್ನಃ – ಹೊರಗಿನ ಹಾಗೂ ಒಳಗಿನ ಶತ್ರುಗಳನ್ನು ನಾಶ ಮಾಡುವವನು.**

**ವಿವರಣೆ:** ಶುತ್ರುಗಳನ್ನು ಸಂಹಾರ ಮಾಡುವವನು - ಎಂಬ ಅರ್ಥ ಸ್ಪಷ್ಟ. ಯಾವ ಶತ್ರುಗಳು ? ಎಷ್ಟು ಶತ್ರುಗಳು ? 'ಅಂತರ್ಬಹಿಶ್ಚ....' ಒಳಗೂ ಹೊರಗೂ ನಮಗೆ ಶತ್ರುಗಳು ಇದ್ದೇ ಇರುವರು. ಎರಡೂ ಬಗೆಯ ಶತ್ರುಗಳನ್ನು ನಾಶ ಮಾಡುವವನು, ನಿರ್ನಾಮ ಮಾಡುವವನು 'ಶತ್ರುಘ್ನ'. ಪ್ರಾಯಶಃ ಭೀಷ್ಮರು ಮಹಾಭಾರತ ಯುದ್ಧದಲ್ಲಿ ನಡೆದ ದುರ್ಯೋಧನಾದಿಗಳ ಸಂಹಾರ ಕ್ರಿಯೆಯನ್ನೂ ಗಮನದಲ್ಲಿಟ್ಟುಕೊಂಡು ಕೃಷ್ಣನನ್ನು ಈ ನಾಮದಿಂದ ಸ್ತುತಿಸುತ್ತಿರಬಹುದು. ಅರ್ಜುನ ತನ್ನ ಗುರು, ಅಜ್ಜ, ಮಾವ, ಅಣ್ಣ ತಮ್ಮ ಇವರನ್ನೆಲ್ಲ ಹೇಗೆ ಕೊಲ್ಲಲಿ- ಎಂದಾಗ ಕೃಷ್ಣ ಅಂದಿದ್ದ - ನೀನು ನಿನ್ನ ಗುರು, ಅಜ್ಜ ಇವರನ್ನೆಲ್ಲ ಕೊಲ್ಲುತ್ತಿಲ್ಲ. ಗುರುವಿನ ಹೆಣ, ಅಜ್ಜನ ಹೆಣ, ಮಾವನ ಹೆಣ, ಅಣ್ಣನ ಹೆಣ, ತಮ್ಮನ ಹೆಣ- ಇವನ್ನಷ್ಟೇ ಕೊಲ್ಲುತ್ತಿರುವಿ. ಯಾಕೆಂದರೆ ಅವರನ್ನೆಲ್ಲ ಈಗಾಗಲೇ ನಾನು ಕಬಳಿಸಿ ಯಾಗಿದೆ ಎಂದು. ಆದುದರಿಂದ ಮಹಾಭಾರತಯುದ್ಧಕ್ಕೆ ಮುಖ್ಯ ಹೊಣೆಗಾರನಾಗಿ ಶತ್ರುಗಳನ್ನು ಸಂಹರಿಸಿದವನೆಂದು ಭೀಷ್ಮರು ಮಹಾಭಾರತಯುದ್ಧದ ಸಂಹಾರ ಕರ್ಮವನ್ನು ಕೃಷ್ಣನಿಗೆ ಸಮರ್ಪಿಸುವ ಕ್ರಮದಲ್ಲೂ 'ಶತ್ರುಘ್ನ' ನಾಮದಿಂದ ಸ್ತುತಿಸುತ್ತಿದ್ದಾರೆ.

ಕೆಟ್ಟ ಕೆಲಸದಲ್ಲಿ ತೊಡಗಿದಾಗ ಶತ್ರುಗಳ ಅಡ್ಡಿ ಆತಂಕಗಳು ಸಂಭವಿಸಿದರೆ ಒಳ್ಳೆಯದೇ. ಆದರೆ ಒಳ್ಳೆಯ ಕೆಲಸಗಳನ್ನು ಮಾಡುವಾಗಲೂ ಶತ್ರುಗಳ ಮೂಲಕ ಅಡ್ಡಿ ಆತಂಕಗಳು ಸಂಭವಿಸುವುದುಂಟು. ಅಂತಹ ಶತ್ರುಗಳ ನಾಶ ಭಗವಂತನಿಂದ ನಡೆಯಲಿ - ಎಂದು ಅವನನ್ನು 'ಶತ್ರುಘ್ನ' - ಎಂದು ಸ್ತುತಿಸೋಣ.

**೪೧೬. ವ್ಯಾಪ್ತ : – ಜ್ಞಾನಿಗಳಿಗೆ ವಿಶೇಷವಾಗಿ ಆಪ್ತನಾಗಿರುವವನು.**

**ವಿವರಣೆ:** ವ್ಯಾಪ್ತ ಶಬ್ದಕ್ಕೆ ಒಂದು ಅರ್ಥ - ಎಲ್ಲ ಕಡೆ ಇರುವವನು. ವಿ + ಆಪ್ತ ವ್ಯಾಪ್ತ. ಲೋಕದಲ್ಲಿ ಆಪ್ತರು ತುಂಬ ಮಂದಿ ಇರುವರು. ಭಗವಂತನಾದರೂ ಬರೇ ಆಪ್ತ ಅಲ್ಲ. ಮತ್ತೆ ವ್ಯಾಪ್ತ, ವಿಶೇಷವಾಗಿ, ಚೆನ್ನಾಗಿ ಆಪ್ತನಾಗಿರುವವನು.

ಎಲ್ಲೆಡೆ ವ್ಯಾಪಿಸಿದ್ದು ವ್ಯಾಪ್ತ ಎನಿಸಿರುವವನೇ ವಿಶೇಷವಾಗಿ ಆಪ್ತನಾಗಿದ್ದು

ವ್ಯಾಪ್ತ ಎನಿಸಬಲ್ಲನು. ಯಾಕೆಂದರೆ ಕೆಲವೆಡೆ ಮಾತ್ರ ಇರುವುದರಿಂದ ಅಂತಹ ಕೆಲವೆಡೆ ಜಾರಿ ಬಿದ್ದಾಗಷ್ಟೇ ಎತ್ತಲ್ಪಟ್ಟು ಆಪ್ತರೆನಿಸಿಕೊಳ್ಳಲು ಸಾಧ್ಯ. ಭಗವಂತನಾದರೂ ಎಲ್ಲೆಡೆ ವ್ಯಾಪಿಸಿಕೊಂಡಿರುವವನಾದುದರಿಂದ ನಾವು ಎಲ್ಲಿ ಎಲ್ಲಿ ಜಾರಿಬಿದ್ದರೂ ನಮ್ಮನ್ನು ಮೇಲೆ ಎತ್ತಿ ನಮಗೆ ಆಪ್ತನಾಗಬಲ್ಲ. ಆದುದರಿಂದ ವ್ಯಾಪ್ತನಾಗಿರುವುದರಿಂದಲೇ ಅವನು ವಿಶೇಷವಾಗಿ ಆಪ್ತನಾಗಿರುವನು. ಭಗವಂತನು ದುರ್ಯೋಧನನಿಗೂ ಆಪ್ತನೇ. ದುರ್ಯೋಧನ ಉಸಿರಾಡುವಂತೆ, ಆಹಾರವನ್ನು ಸೇವಿಸುವಂತೆ, ಸೇವಿಸಿದ ಆಹಾರ ಜೀರ್ಣವಾಗುವಂತೆ, ಅವನಿಗೆ ರೋಗರುಜಿನಗಳು ಬಾರದಂತೆ ಮಾಡಿದವನು ಭಗವಂತನೇ ತಾನೇ ? ದುರ್ಯೋಧನ ಅದನ್ನು ತಿಳಿದುಕೊಳ್ಳದಿದ್ದರೂ ದೇವರು ಅವನಿಗೆ ಆಪ್ತನೇ ಆಗಿರುವನು. ಮಗು ತಾಯಿಯನ್ನು ತಿಳಿದು ಕೊಳ್ಳದಿದ್ದರೂ ತಾಯಿ ಮಗುವಿನ ರಕ್ಷಣೆಯನ್ನೇನೂ ಮಾಡದಿರುವುದಿಲ್ಲ.

ಹೀಗೆ ಎಲ್ಲರಿಗೂ ಆಪ್ತನಾಗಿರುವ ಭಗವಂತನು ಜ್ಞಾನಿಗಳಿಗೆ ಆಪ್ತತಮನಾಗಿರುವನು - **'ಜ್ಞಾನೀ ಪ್ರಿಯತಮೋಽತೋ ಮೇ....'** - ಎಂದು ಜ್ಞಾನಿ ತನಗೆ ಅತ್ಯಂತ ಪ್ರಿಯನೆಂದು ಕೃಷ್ಣ ಸಾರಿರುವನು. ಆದ್ದರಿಂದ ಜ್ಞಾನಿಗಳ ಪಾಲಿಗೆ ವ್ಯಾಪ್ತ ವಿಶೇಷವಾಗಿ ಆಪ್ತ.

ಜ್ಞಾನಿಗಳಿಗೆ ಅವನು ವಿಶೇಷವಾಗಿ ಆಪ್ತನಾಗಿರಲಿ. ಇದರಿಂದ ನಮಗೇನಂತೆ?- ಎಂದು ಕೆಲವರು ಕೇಳುವುದುಂಟು. ಇದಕ್ಕೆ ಸಮಾಧಾನ - ನಿನ್ನ ಪಾಲಿಗೂ ದೇವರು ವಿಶೇಷವಾಗಿ ಆಪ್ತನೆನಿಸಿ 'ವ್ಯಾಪ್ತ' ನಾಗಬೇಕೆಂದರೆ ನೀನೂ ಜ್ಞಾನಿಯಾಗು.

**೪೧೭. ವಾಯುಃ – ತನ್ನ ತಿಳುವಳಿಕೆಗಾಗಿ ಆಯುಷ್ಯವನ್ನು ನೀಡಿರುವವನು.**

**ವಿವರಣೆ :** ವ + ಆಯು - ವಾಯು. ವ ಎಂದರೆ ತಿಳುವಳಿಕೆ. ಆಯು ಎಂದರೆ ಆಯುಷ್ಯ. ತಿಳುವಳಿಕೆಗೋಸ್ಕರ ಆಯುಷ್ಯವನ್ನು ನೀಡಿದವನೇ ವಾಯು. ಭಗವಂತನು ನಮಗೆ ಆಯುಷ್ಯವನ್ನು ನೀಡಿ ಬದುಕಿಸುತ್ತಿರುವುದು ಯಾತಕ್ಕಾಗಿ ? ತಿನ್ನಲಿಕ್ಕಾಗಿ, ಉಣ್ಣಲಿಕ್ಕಾಗಿ ಅಲ್ಲ. ಮತ್ತೆ ತಿಳುವಳಿಕೆಯ ಸಂಪಾದನೆಗಾಗಿ. ಹೇಗಾದರೂ ಹುಟ್ಟಿದ್ದಿಯಾ. ನನ್ನ ಬಗ್ಗೆ, ಜಗತ್ತಿನ ಬಗ್ಗೆ ಸ್ವಲ್ಪ ತಿಳುವಳಿಕೆಯುನ್ನು ಸಂಪಾದಿಸಿಕೊಳ್ಳು. ಅದಕ್ಕೋಸ್ಕರ ನಿನಗೆ ಆಯುಷ್ಯ ! ವಾರ್ಥಂ - ತಿಳುವಳಿಕೆಗೊಸ್ಕರ, ಆಯುಃ - ಆಯುಷ್ಯವನ್ನು ಕೊಡುವವನು ವಾಯು.

ಏನೋ ಅವಗಡ ಆಯಿತು. ಆದರೂ ಸಾಯಲಿಲ್ಲ. ದೇವರು ಆಯುಷ್ಯ

ಕೊಟ್ಟಿದ್ದಾನೆ. ಯಾಕಾಗಿ ? ಇನ್ನಾದರೂ ನನ್ನನ್ನು ತಿಳಿದುಕೋ. ಅದಕ್ಕಾಗಿಯೇ ಆಯುಷ್ಯವನ್ನು ಕೊಟ್ಟಿರುವೆನು - ಎಂದು.

ವಾಯುದೇವರು ನಮಗೆ ಜ್ಞಾನವನ್ನು ನೀಡುವುದಕ್ಕಾಗಿಯೇ ಆಯುಷ್ಯವನ್ನು ಪಡೆದಿರುವರು ; ಆದುದರಿಂದಲೇ ವಾಯು ಎನಿಸುವರು.

ನಿನ್ನ ತಿಳುವಳಿಕೆಗಾಗಿ ಎನಗೆ ಆಯುಷ್ಯವನ್ನು ಕೊಟ್ಟಿರುವಿ. ಆದ್ದರಿಂದ ನನ್ನ ಆಯುಷ್ಯ ನಿನ್ನ ತಿಳುವಳಿಕೆಯನ್ನು ಪಡೆದುಕೊಳ್ಳುವಲ್ಲಿ ಸಾರ್ಥಕವಾಗುವಂತೆ ಅನುಗ್ರಹಿಸು ಎಂದು ದೇವರನ್ನು 'ವಾಯು' ಎಂಬ ನಾಮದಿಂದ ಸ್ತುತಿಸೋಣ.

**೪೧೮. ಅಧೋಕ್ಷಜಃ - ನಿತ್ಯಜ್ಞಾನವನ್ನು ಹೊಂದಿರುವವನಾಗಿದ್ದು, ಇಂದ್ರಿಯಗಳ ಸಂಪರ್ಕ ಆದ ಮೇಲೆ ಹುಟ್ಟುವ ಜ್ಞಾನವನ್ನು ಕಡೆಗಣಿಸಿರುವವನು.**

**ವಿವರಣೆ :** ಅಧಃ+ಅಕ್ಷ+ಜ - ಅಧೋಕ್ಷಜ. ಯಾವುದೋ ಯಕ್ಷಗಾನದಲ್ಲಿ ದೇವರಿಗೆ ಅಧೋಕ್ಷಜ ಎಂಬ ಹೆಸರು ಯಾಕೆ ಬಂತೆಂದು ತುಂಬ ವಿಕೃತವಾಗಿ ಹೇಳಿದ್ದುಂಟು. ಆದುದರಿಂದಲೇ ಅಂತಹ ಆಟವನ್ನು ನೋಡಿದರೆ ಅದರಿಂದಾಗಿ ಉಂಟಾಗುವ ಪಾಪದ ಪರಿಹಾರಕ್ಕೆ ಹನ್ನೆರಡು ರಂಗಪೂಜೆಯನ್ನು ನೋಡಬೇಕು - ಎಂದು ಬಂದಿರುವಂತಹದ್ದು. ಆದುದರಿಂದಲೇ ಆ ಪ್ರಸಂಗದ ಆಟಕ್ಕೆ ನನ್ನನ್ನು ಕರೆದರೆ ಅದರಲ್ಲಿ ಆ ದೃಶ್ಯ ಮುಗಿದ ಮೇಲೆ ನಾನು ಹೋಗುವ ಪರಿಪಾಠವನ್ನು ಇಟ್ಟುಕೊಂಡಿರುವೆ.

ಆ ಪ್ರಸಂಗದಲ್ಲಿ ಬರುವ ಕೆಟ್ಟ ವಿಚಾರವನ್ನು ಹೇಳಿ ಬಿಡ್ತೇನೆ. ಅದರ ವಿರುದ್ಧ ಎಚ್ಚೆತ್ತುಕೊಳ್ಳಬೇಕೆಂಬ ಉದ್ದೇಶದಿಂದ.

ಒಮ್ಮೆ ಚತುರ್ಮುಖನಿಗೂ ವಿಷ್ಣುವಿಗೂ ಜಗಳವಾಯಿತಂತೆ 'ಅಂತೆ' - ಎನ್ನುವುದನ್ನು ಮರೆತು ಬಿಡಬೇಡಿ. ವಿಷ್ಣು ಚತುರ್ಮುಖನ ಹೊಟ್ಟೆಯೊಳಗೆ ಹೊಕ್ಕು ಬಿಟ್ಟ. ಆಗ ಚತುರ್ಮುಖ ತನ್ನ ಶರೀರದ ನವ ರಂಧ್ರಗಳನ್ನು ಮುಚ್ಚಿಟ್ಟುಕೊಂಡು ಬಿಟ್ಟನಂತೆ. ಅಲ್ಲಿಂದ ಹೊರ ಬರಲಾರದೆ ವಿಷ್ಣು ಬೊಬ್ಬೆ ಇಡುವನಂತೆ. ಕೊನೆಗೆ ಚತುರ್ಮುಖ ತನ್ನ ಕೆಳಗಿನ ರಂಧ್ರವನ್ನು ತೆರೆಯುವನು. ಅದರಿಂದ ವಿಷ್ಣು ಹೊರಗೆ ಬರುವನು. ಆದುದರಿಂದಲೇ 'ಅಧೋಕ್ಷಜ' ಎನಿಸುವನು. ಇದು ನರಕಸಂಪಾದನೆಗೆ ಇರುವ ಉಪಾಸನೆ ! ದೇವರ 'ಅಧೋಕ್ಷಜ' ನಾಮದ ಅರ್ಥವನ್ನು ಹೀಗೆ ಕೆಟ್ಟ ರೀತಿಯಿಂದ ಚಿಂತನೆ ಮಾಡುವವರಿಗೆ ಹೇಗೆ ತಾನೇ ಏಳಿಗೆ ಆದೀತು !

ಭಗವಂತನ 'ಅಧೋಕ್ಷಜ' ನಾಮದ ನಿಜವಾದ ಅರ್ಥ ಹೀಗಿದೆ - ಅಕ್ಷ

ಎಂದರೆ ಇಂದ್ರಿಯಗಳು. ಅಂತಹ ಇಂದ್ರಿಯಗಳ ಸಂಪರ್ಕದಿಂದಾಗಿ ಉಂಟಾಗುವ ತಿಳುವಳಿಕೆ ಅಕ್ಷಜ. ಅಂತಹ ತಿಳುವಳಿಕೆಯನ್ನು ಭಗವಂತ ಕಡೆಗಣಿಸಿದ್ದಾನೆ. 'ಅಧಃ' ಅಂದರೆ ಅಧಃಕೃತ - ಕಡೆಗಣಿಸಲ್ಪಟ್ಟ, ಅಕ್ಷಜ - ಇಂದ್ರಿಯಜನ್ಯ ಜ್ಞಾನವುಳ್ಳವನು. ನಮಗೆ ಕಣ್ಣಿನ ಸಂಪರ್ಕ ಆದ ಮೇಲೆ ರೂಪದ ಜ್ಞಾನ ಬರುವುದು ಕಿವಿಯ ಸಂಪರ್ಕ ಆದ ಮೇಲೆ ಶಬ್ದದ ಜ್ಞಾನ ಬರುವುದು........ ಹೀಗೆ ಐದು ಜ್ಞಾನೇಂದ್ರಿಯಗಳ ಸಂಪರ್ಕ ಆದ ಮೇಲೆ ಆಯಾ ಜ್ಞಾನ ಬರುವುದು. ಭಗವಂತನಿಗೆ ಹೀಗೆಯೋ ? ಅಲ್ಲ ; ಆಯಾ ಇಂದ್ರಿಯದ ಸಂಪರ್ಕ ಆದ ಮೇಲೆ ಆಯಾ ಜ್ಞಾನ ಹುಟ್ಟುವುದಲ್ಲ ; ಮತ್ತೆ ಅವನ ಜ್ಞಾನಗಳು ಯಾವಾಗಲೂ ಇರುವವು.

ಕೆಲವೊಮ್ಮೆ ಶಾಸ್ತ್ರದ ಪರಿಭಾಷೆಯಲ್ಲಿ ಮಾತನಾಡಿದರೆ ಅರ್ಥ ಮಾಡಿಕೊಳ್ಳುವುದೇ ಕಷ್ಟ ಸಾಧ್ಯ. ದೇವರಿಗೆ ನಿನ್ನೆ, ನಾಳೆ ಇಲ್ಲ. ಇಂದು ಮಾತ್ರ. ಭೂತ, ಭವಿಷ್ಯತ್ತುಗಳು ಇಲ್ಲ. ವರ್ತಮಾನ ಮಾತ್ರ. ಆದುದರಿಂದಲೇ ಮುಂದಿನ ವರ್ಷದ ಕೃಷ್ಣಾಷ್ಟಮಿಯಂದು ನಾವು ಸಮರ್ಪಿಸಲಿರುವ ಚಕ್ಕುಲಿ, ಲಡ್ಡುಗಳ ರುಚಿಯನ್ನು ದೇವರು ಇವತ್ತೇ ಸವಿದಾಗಿದೆ !

ಅಧೋಕ್ಷಜ ನಾಮಕ್ಕೆ ಸಂಬಂಧಿಸುವ ವಿಚಾರವೂ ಹೀಗೆಯೇ. ಕಣ್ಣು ಮುಂತಾದ ಇಂದ್ರಿಯಗಳ ಸಂಪರ್ಕ ರೂಪ ಮುಂತಾದ ವಸ್ತುಗಳಿಗೆ ಆದ ಮೇಲೆ ಉಂಟಾಗುವ ಜ್ಞಾನಗಳು ಅವನಿಂದ ಕಡೆಗಣಿಸಲ್ಪಟ್ಟಿವೆ. ಅವನಲ್ಲಿ ಜ್ಞಾನಗಳು ಯಾವಾಗಲೂ ಇರುವುದರಿಂದ ಆಯಾ ವಸ್ತುವಿಗೆ ಇಂದ್ರಿಯಸಂಪರ್ಕ ಆಗಿ ಆಮೇಲೆ ಅವು ಉಂಟಾಗುವ ಪ್ರಸಂಗ ಇಲ್ಲ. ಅಂತೂ ಉಳಿದವರ ಪಾಲಿಗೆ ಇಂದ್ರಿಯಜನ್ಯಗಳೆನಿಸುವ ಜ್ಞಾನಗಳನ್ನು ಯಾವಾಗಲೂ ಹೊಂದಿರುವವನು ಎಂಬುದು ತಾತ್ಪರ್ಯ.

ಇಂದ್ರಿಯಸಂಪರ್ಕವಿಲ್ಲದೆಯೇ ಆಯಾ ಜ್ಞಾನವನ್ನು ಪಡೆದು ಕೊಂಡಿರುವವನೆಂಬ ಅಭಿಪ್ರಾಯದಲ್ಲಿ ದೇವರನ್ನು 'ಅಧೋಕ್ಷಜ' - ಎಂದು ಉಪಾಸನೆ ಮಾಡಿದೆವೆಂದರೆ ದೇವರು ನಮಗೂ ಸ್ವಲ್ಪ ಮಟ್ಟಿಗಾದರೂ ಇಂದ್ರಿಯ ಸಂಪರ್ಕದ ಆವಶ್ಯಕತೆ ಇಲ್ಲದ ಭವಿಷ್ಯದ ಜ್ಞಾನವನ್ನು ಅನುಗ್ರಹಿಸುವನು.

**ಋತುಃ ಸುದರ್ಶನಃ ಕಾಲಃ ಪರಮೇಷ್ಠೀ ಪರಿಗ್ರಹಃ |**
**ಉಗ್ರಃ ಸಂವತ್ಸರೋ ದಕ್ಷೋ ವಿಶ್ರಾಮೋ ವಿಶ್ವದಕ್ಷಿಣಃ || ೪೫ ||**

**೪೯೯. ಋತುಃ - ತಿಳಿಯಲ್ಪಡುವವನು.**

**ವಿವರಣೆ :** ಯಾರೋ ಅಂದರು ದೇವರನ್ನು ತಿಳಿದುಕೊಳ್ಳಲಿಕ್ಕೇ ಆಗುವುದಿಲ್ಲ ಎಂದು. ಅದಕ್ಕೆ ಭೀಷ್ಮರು ಅಂದರು ತಪ್ಪು. ದೇವರನ್ನು ತಿಳಿದುಕೊಳ್ಳಲಾಗುವುದು. ಅವನು ತಿಳುವಳಿಕೆಗೆ ಗೋಚರ ಆಗುವವನು. ಯಾರ್‍ಯಾರ ಪಾತ್ರ ಎಷ್ಟೆಷ್ಟು ದೊಡ್ಡದೋ ಅಷ್ಟಷ್ಟು ತಿಳ್ಕೊಳ್ಳುವರು. ಅಂತೂ ಎಲ್ಲರೂ ದೇವರನ್ನು ತಿಳಿದುಕೊಳ್ಳುವರು.

ದೇವರ ತಿಳುವಳಿಕೆಯೇ ಬರುವುದಿಲ್ಲ ಎಂದರೆ ನಮ್ಮ ನಿಮ್ಮ ಉದ್ಧಾರ ಹೇಗೆ ? ಹಿರಿಯರು ಅನ್ನುವರು - ನಿನ್ನ ಉದ್ಧಾರ ಆಗಬೇಕೆಂದರೆ ದೇವರನ್ನು ತಿಳಿದುಕೊಳ್ಳಬೇಕು. ತಿಳುವಳಿಕೆಗೆ ಗೋಚರಿಸುವವನೇ ಅಲ್ಲದಿದ್ದರೆ ಅವನನ್ನು ತಿಳ್ಕೊಳ್ಳುವುದಾದರೂ ಹೇಗೆ ?

ಋತುಃ - 'ಋ ಗತೌ' - ಎಂಬ ಕ್ರಿಯಾಪದದಿಂದ ಕರ್ಮಾರ್ಥದಲ್ಲಿ ರೂಪುಗೊಂಡ ನಾಮವಾದುದರಿಂದ ಅದಕ್ಕೆ ತಿಳಿಯಲ್ಪಡುವವನು ಎಂಬ ಅರ್ಥ. ವಸಂತ ಋತು ಮುಂತಾದ ಆರು ಋತುಗಳಿಗೂ 'ತಿಳಿಯಲ್ಪಡುವವು' ಎಂಬ ಅರ್ಥದಲ್ಲಿಯೇ ಆ ಹೆಸರು ಬಂದಿರುವುದು. ಮಳೆ, ಚಳಿ, ಸೆಖೆ - ಮುಂತಾದ ಯಾವ ಪ್ರಾಕೃತಿಕ ಘಟನೆಗಳಿಂದ ಕಾಲ ವಿಶೇಷಗಳು ತಿಳಿಯಲ್ಪಡುವವೋ ಅಂತಹ ಕಾಲಗಳು ಋತುಗಳೆನಿಸಿವೆ.

ಹೀಗೆ ತಿಳಿಯಲ್ಪಡುವವನೆಂಬ ಅರ್ಥದಲ್ಲಿ ದೇವರನ್ನು 'ಋತುಃ'- ಎಂದು ಉಪಾಸನೆ ಮಾಡಿದೆವೆಂದರೆ ನಾವೂ ನಾಲ್ಕು ಜನರಿಂದ ತಿಳಿಯಲ್ಪಡುತ್ತ ಬದುಕುವಂತೆ ದೇವರು ನಮ್ಮನ್ನು ಅನುಗ್ರಹಿಸುವನು.

ಕೆಲವು ಪುಸ್ತಕಗಳಲ್ಲಿ 'ಋತುಃ' ಎನ್ನುವುದರ ಬದಲು 'ಕ್ರತುಃ' ಎಂಬ ಪಾಠ ಇದೆ. 'ಕ್ರತು' ಎಂಬ ನಾಮವೇ ಮುಂದೆ ಬರುವುದರಿಂದ ಆ ಸಂದರ್ಭದಲ್ಲಿ ಅದರ ಅರ್ಥವನ್ನು ನೋಡೋಣ.

**೪೨೦. ಸುದರ್ಶನಃ - ಯಾರ ದರ್ಶನದಿಂದ ಕಷ್ಟ ಕಾರ್ಪಣ್ಯಗಳೆಲ್ಲ, ಸಂಶಯಗಳೆಲ್ಲ, ಕರ್ಮಗಳೆಲ್ಲ ನಾಶವಾಗುವವೋ ಅಂತಹ ಒಳ್ಳೆಯ ದರ್ಶನವುಳ್ಳವನು.**

**ವಿವರಣೆ :** ಸುದರ್ಶನ ಅಂದರೆ ಚಕ್ರ ಎಂಬ ಅರ್ಥ ಅಲ್ಲ. ಮತ್ತೆ, ಒಳ್ಳೆಯ ದರ್ಶನ ಕೊಡುವವನು ಎಂಬುದು ಸುದರ್ಶನ ನಾಮದ ಅರ್ಥ. ಒಳ್ಳೆಯ ದರ್ಶನ ಎಂದರೇನು? ಯಾರ ದರ್ಶನ ನಮ್ಮ ಕಷ್ಟಕಾರ್ಪಣ್ಯಗಳನ್ನು ದೂರ ಮಾಡುವುದೋ

ಆ ದರ್ಶನ ಸುದರ್ಶನ, ಒಳ್ಳೆಯ ದರ್ಶನ

**'ಭಿದ್ಯತೇ ಹೃದಯಗ್ರಂಥಿಃ ಛಿದ್ಯಂತೇ ಸರ್ವಸಂಶಯಾಃ |**

**ಕ್ಷೀಯಂತೇ ಚಾಸ್ಯ ಕರ್ಮಾಮಿ ತಸ್ಮಿನ್ ದೃಷ್ಟೇ ಪರಾವರೇ'**

ಒಳಗಿನ ಗಂಟು ಬಿಚ್ಚಿ ಹೋಗುವುದು. ನಾನಾ ಬಗೆಯ ಸಂಶಯಗಳು ಪರಿಹಾರವಾಗುವವು. ಕರ್ಮಗಳು ನಶಿಸಿದವು. ಯಾವಾಗ ? **'ತಸ್ಮಿನ್ ದೃಷ್ಟೇ ಪರಾವರೇ'** ಭಗವಂತನ ದರ್ಶನವಾದಾಗ.

ಆದ್ದರಿಂದ ಯಾರ ದರ್ಶನದಿಂದ ನಮ್ಮ ಕಷ್ಟಕಾರ್ಪಣ್ಯಗಳು, ಸಂಶಯಗಳು, ಕರ್ಮಗಳು ಹೋಗುವವೋ ಅವನ ದರ್ಶನ ಒಳ್ಳೆಯ ದರ್ಶನವೆನಿಸಿದ್ದು, ಆದುದರಿಂದ ಅವನು 'ಸುದರ್ಶನ' ಎನಿಸುವನು.

ಯಾರ ದರ್ಶನದಿಂದ ಸೆರೆಮನೆಯಿಂದ ನಮಗೆ ಬಿಡುಗಡೆ ದೊರಕುವುದೋ ಅಂತಹ ಅಧಿಕಾರಿಯ ದರ್ಶನ ಸುದರ್ಶನ. ಸೆರೆಮನೆಯಲ್ಲಿ ಆಹಾರವನ್ನು ಕೊಡುವುದಕ್ಕಾಗಿಯೂ ಕೆಲವರು ಬರುವರು. ಆದರೆ ಅವರಿಂದೇನೂ ಬಿಡುಗಡೆ ದೊರಕದು. ಆದ್ದರಿಂದ ಅವರ ದರ್ಶನವೇನೂ ಸುದರ್ಶನ ಎನಿಸಲಾರದು. ಮತ್ತೆ; ಸೆರೆಮನೆಯಿಂದ ಬಿಡುಗಡೆಗೆ ಪ್ರಯೋಜಕವಾದ ದರ್ಶನವುಳ್ಳವನೇ ಸುದರ್ಶನ.

ಸಂಸಾರ - ಸೆರೆಮನೆಯಲ್ಲಿ ಕೈದಿಗಳಾಗಿರುವ ನಮ್ಮೆಲ್ಲರ ಪಾಲಿಗೆ ಆ ರೀತಿಯಿಂದ **ಸುದರ್ಶನ** ಭಗವಂತನೊಬ್ಬನೇ. ಯಾಕೆಂದರೆ ಅವನ ದರ್ಶನವಷ್ಟೇ ನಮ್ಮೆಲ್ಲ ಸಮಸ್ಯೆಗಳ ಪರಿಹಾರಕ್ಕೆ ಕಾರಣವಾಗುವುದು. ಎನಗೆ ಕಷ್ಟಕಾರ್ಪಣ್ಯಗಳು ದೂರ ಹೋಗಲು ಬೇಕಾದ ದರ್ಶನ ಕೊಡು ಎಂದು 'ಸುದರ್ಶನ'ನಲ್ಲಿ ಪ್ರಾರ್ಥಿಸೋಣ.

**೪೨೧. ಕಾಲಃ - ಸರ್ವ ಸಂಹಾರಕ ; ಅಭೀಷ್ಟಪ್ರದ.**

**ವಿವರಣೆ :** ಕಾಲ ಅಂದರೆ ನಾಶಕ. ಎಲ್ಲವನ್ನೂಕಾಲವೇ ನಾಶ ಮಾಡುವುದು. ಒಂದು ಹಣ್ಣು ಇತ್ತು. ಒಂದು ದಿನ ಅದು ಕೊಳೆತು ಹೋಯಿತು. ಯಾಕೆ ? ಅದರ ಸಮಯ ಆಯಿತು ; ಕೊಳೆತು ಹೋಯಿತು. ಒಬ್ಬ ವ್ಯಕ್ತಿ ನೂರು ವರ್ಷ ವಯಸ್ಸಿನವ ಒಂದು ದಿನ ಸತ್ತ - ಯಾಕೆ ? ಅವನ ಸಮಯ ಆಯಿತು ; ಅವನು ಸತ್ತ. ಹಾಗಾದರೆ ಪ್ರತಿಯೊಂದೂ ನಾಶವಾಗುವುದು ಕಾಲದಿಂದ. ಒಂದು ವಸ್ತುವನ್ನು ಹಾಗೆಯೇ ಇಟ್ಟಿದ್ದೆವು. ಕ್ರಮೇಣ ಹಾಳಾಗುವುದು. ನಾವು ಹೇಳುವುದೂ ಉಂಟು - 'ವಸ್ತುವನ್ನು ಹಾಗೆಯೇ ಇಡಬೇಡ. ಅದು ಹಾಗೆಯೇ ನಾಶವಾಗುವುದು' ಅಂದರೆ ಕಾಲದಿಂದ

ನಾಶ ಹೊಂದುವುದೆಂದು. ಹಾಗಾದರೆ ಕಾಲವು ನಾಶ ಮಾಡುವಂತಹದ್ದೆಂಬ ಅಭಿಪ್ರಾಯದಲ್ಲಿ ಅದನ್ನು 'ಕಾಲ' ಎಂದು ಕರೆಯುವೆವು.

ಕಾಲದಲ್ಲೂ ಇದ್ದುಕೊಂಡು, ಕಾಲಕ್ಕೂ ಪ್ರೇರಣೆ ನೀಡಿ, ಕಾಲದಿಂದ ನಾಶ ಮಾಡುವವನು ಶ್ರೀಕೃಷ್ಣ. ನಾವು ಕಾಲ ಬಂತು ಸತ್ತ ಎಂದು ಭಾವಿಸುವೆವು. ಆದರೆ ಕಾಲದಲ್ಲಿ ದೇವರು ಇದ್ದುಕೊಂಡು ಅವನನ್ನು ಮುಗಿಸುವಂತೆ ಕಾಲಕ್ಕೆ ಪ್ರೇರಣೆ ನೀಡಿರುವುದರಿಂದಷ್ಟೇ ಕಾಲದಿಂದಾಗಿ ಅವನು ಸತ್ತ. ಕಾಲ ಬಂತು ಸತ್ತ - ಎಂದರೆ ಏನು ಅರ್ಥ ? ಕಾಲದಲ್ಲಿ ಇದ್ದುಕೊಂಡು ಭಗವಂತ ಅವನನ್ನು ಸಾಯಿಸಲು ಪ್ರೇರಿಸಿದ. ಆದುದರಿಂದ ಕಾಲ ಬಂತು. ಅವನು ಸತ್ತ. ಅವನ ಪ್ರೇರಣೆಯಿರದಿದ್ದರೆ ಕಾಲ ಬರುವುದಿಲ್ಲ. ಆದುದರಿಂದ ನೀನೇ ಕಾಲ - ಸರ್ವಸಂಹಾರಕ ಎಂದು ಭೀಷ್ಮರು ಸ್ತುತಿಸಿರುವರು.

ಕಾಲ ಎಂದರೆ ಸಂಹಾರಕ ಎಂದಿರುವಂತೆಯೇ ಅಭೀಷ್ಟಪ್ರದ ಎಂಬ ಅರ್ಥವೂ ಇದೆ. ಒಳ್ಳೆಯದಾಗಲೂ ನಾವು 'ಕಾಲ ಬಂತು ಒಳ್ಳೆಯದಾಯಿತು' ಎನ್ನುವೆವು. ಇದರಿಂದ ಸ್ಪಷ್ಟ - ಕಾಲ ಶಬ್ದಕ್ಕೆ ಅಭೀಷ್ಟಪ್ರದ ಎಂಬ ಅರ್ಥವೂ ಇದೆ.

ಹೀಗೆ ಒಳ್ಳೆಯದಕ್ಕೂ, ಕೆಟ್ಟದಕ್ಕೂ ಕಾರಣ ಎಂಬ ಅರ್ಥದಲ್ಲಿ ದೇವರನ್ನು 'ಕಾಲ' - ಎಂದು ಸ್ತುತಿಸಲಾಗಿದೆ.

**೪೨೨. ಪರಮೇಷ್ಠೀ - ಶ್ರೇಷ್ಠವಾದ ಹೃದಯ ಗುಹೆಯಲ್ಲಿ ನೆಲೆಸಿರುವವನು.**

**ವಿವರಣೆ :** ಪರಮ - ಶ್ರೇಷ್ಠವಾದ ಜಾಗ. ಅಲ್ಲಿ 'ಷ್ಠೀ' ಇರುವ ಸ್ವಭಾವದವನು. ಎಲ್ಲಿ ಒಳ್ಳೆಯ ಜಾಗ ಉಂಟೋ ಅಲ್ಲಿ ಇರುವ ಸ್ವಭಾವ ದೇವರದ್ದು. ಕಶ್ಮಲ ಎಲ್ಲಿ ಇಲ್ಲ ಅಲ್ಲಿ ದೇವರು ಇರುವನು. ಗೋಪಿಚಂದನ ಶುದ್ಧವಾದದ್ದೆಂದು ಅಲ್ಲಿ ಕೃಷ್ಣ ಸೇರಿಕೊಂಡಿದ್ದ. ಅದಕ್ಕಾಗಿಯೇ ದೇವರು ದೇವಸ್ಥಾನದಲ್ಲಿ ಇರಬೇಕೆಂದರೆ ದೇವಸ್ಥಾನ ಸ್ವಚ್ಛವಾಗಿರಬೇಕು ಎಂದು ಹೇಳಿರುವರು. ದೇವರು ನಮ್ಮ ಮನಸ್ಸಿನಲ್ಲಿ ಇರಬೇಕೆಂದರೆ ಮನಸ್ಸು ಸ್ವಚ್ಛವಾಗಿರಬೇಕು ಎಂದು ಹೇಳಿರುವರು.

ಪ್ರತಿಯೊಬ್ಬರ ಹೃದಯಾಕಾಶದಲ್ಲಿ ದೇವರು ಇರುವನು. ಪ್ರತಿಯೊಬ್ಬನ ಹೃದಯದಲ್ಲಿ ಒಂದು ಅವಕಾಶ ಇದೆ. ಅದರಲ್ಲಿ ಇರುವ ಸ್ವಭಾವದವನು ಭಗವಂತ.

ಭಗವಂತ ಯಾರ ತಂಟೆಯೂ ಇಲ್ಲದ ಜಾಗ ತನಗೆ ನೆಲಸಲು ಬೇಕು ಎಂದನಂತೆ. ಆಗ ಒಬ್ಬರು ಚಂದ್ರಲೋಕ ಎಂದರು. ಅಯ್ಯೋ ! ಅಲ್ಲಿಗೂ ಜನರು ನುಗ್ಗಲು ಪ್ರಾರಂಭಿಸಿದ್ದಾರೆ !

ಹಿಮಾಲಯದ ಗೌರೀ ಶಿಖರದ ತುದಿಭಾಗ - ಎಂದು ಇನ್ನೊಬ್ಬ ಸೂಚಿಸಿದ. ಅಲ್ಲಿಗೂ ನಾನು ಹೋಗುವ ಮುಂಚೆಯೇ ಮತ್ತೊಬ್ಬ ಹೋಗಿಯಾಗಿದೆ !

ಸಮುದ್ರದೊಳಗೆ - ಮತ್ತೊಬ್ಬ ಸೂಚಿಸಿದಾಗ ಅಲ್ಲಿಗೂ ಹೊಕ್ಕಾಗಿದೆ. ಕೂಡಲೇ ಬೃಹಸ್ಪತ್ಯಾಚಾರ್ಯರು ಎದ್ದು ಯಾರತಂಟೆಯೂ ಇಲ್ಲದ ಜಾಗವೆಂದರೆ ಪ್ರತಿಯೊಬ್ಬರ - ಹೃದಯ ಎಂದು ಸೂಚಿಸುವರು. ಪ್ರತಿಯೊಬ್ಬರೂ ಬಹಿರ್ಮುಖರೇ ಆಗಿದ್ದು ಅವನು ಏನು ಹೇಳ್ತಾನೆ ? ಇವನು ಏನು ಹೇಳ್ತಾನೆ ? ಇತ್ಯಾದಿ ಗಲಾಟೆಯಲ್ಲಿ ತೊಡಗುವರೇ ಹೊರತು ಅಂತರ್ಮುಖಿಗಾಗಿ ತಮ್ಮ ಹೃದಯದೆಡೆಗೆ ಸಾಗುವುದೇ ಇಲ್ಲ.

**'ಪರಾಂಚಿ ಖಾನಿ ವ್ಯತೃಣತ್ ಸ್ವಯಂಭೂಃ | ತಸ್ಮಾತ್ ಪರಾಕ್ ಪಶ್ಯತಿ ನಾಂತರಾತ್ಮನ್ ......'** ಎಂದು ಉಪನಿಷತ್ತು ಸಾರುತ್ತಿರುವಂತೆ ಚತುರ್ಮುಖ ಇಂದ್ರಿಯಗಳನ್ನು ಬಹಿರ್ಮುಖಗಳನ್ನಾಗಿಯೇ ಸೃಷ್ಟಿ ಮಾಡಿರುವನು. **'ತಸ್ಮಾತ್ ಪರಾಕ್ ಪಶ್ಯತಿ ನಾಂತರಾತ್ಮನ್ .......'** ಮತ್ತೊಬ್ಬರ ಬಗ್ಗೆಯೇ ಯೋಚಿಸುವುದು ಹೊರತು ತನ್ನ ಬಗ್ಗೆ ಯೋಚಿಸುವವರು ವಿರಳ. ಇದುವರೆಗೆ ಯಾರಾದರೂ ತನ್ನ ಬಗ್ಗೆ ಬರೆದು ಪಿ.ಎಚ್.ಡಿ ಮಾಡಿದ್ದು ಇದ್ದೆಯೋ ?

ಆದ್ದರಿಂದಲೇ ಬೃಹಸ್ಪತ್ಯಾಚಾರ್ಯರು ತಿಳಿಸಿದರಂತೆ - ಪ್ರತಿಯೊಬ್ಬರ ಹೃದಯದಲ್ಲಿ ಹೋಗಿ ಕುಳಿತುಕೋ. ಯಾರೂ ನಿನ್ನ ತಂಟೆಗೇ ಬರುವುದಿಲ್ಲ.

ಆದ್ದರಿಂದ ಪರಮೇ-ಶ್ರೇಷ್ಠವಾದ ಹೃದಯ ಗುಹೆ ಎಂಬ ಸ್ಥಳದಲ್ಲಿ ಷ್ಠೀ - ಇರುವ ಸ್ವಭಾವವುಳ್ಳವನು.

ಎನ್ನ ಹೃದಯ ಗುಹೆಯಲ್ಲಿ ನೆಲೆಸು - ಎಂದು ದೇವರನ್ನು 'ಪರಮೇಷ್ಠೀ' ನಾಮದಿಂದ ಉಪಾಸನೆ ನಡೆಸಬೇಕು.

**೪೨೩. ಪರಿಗ್ರಹಃ – ವ್ಯಕ್ತಿಗಳ ಯೋಗ್ಯತೆಗನುಗುಣವಾಗಿ ಎಲ್ಲೆಲ್ಲಿಯೂ ಕಾಣಿಸಿಕೊಳ್ಳುವವನು.**

**ವಿವರಣೆ :** ಎಲ್ಲಿ ದೇವರನ್ನು ಉಪಾಸನೆ ನಡೆಸಬೇಕೆಂದೆನಿಸುವುದೋ ಅಲ್ಲಿ ದೇವರು ಸಿದ್ಧ - ಎನ್ನುವುದನ್ನೇ 'ಪರಿಗ್ರಹ' ನಾಮ ತಿಳಿಸುವುದು. 'ಪರಿತಃ ಗೃಹ್ಯತೇ' ಎಲ್ಲೆಲ್ಲಿಯೂ ಕಾಣಿಸಿಕೊಳ್ಳುವವನು.

ಕಂಭದಲ್ಲಿ ಬೇಕೋ ? ಅಲ್ಲಿ ತಯಾರು ! ನೀರಿನಲ್ಲಿ ಬೇಕೋ ? ಅಲ್ಲಿ ಮತ್ಸ್ಯನಾಗಿ ಸಿದ್ಧ.

**'ಅಗ್ನೌ ಕ್ರಿಯಾವತಾಂ....'** ಎಂದಿರುವಂತೆ ಕೆಲವು ಯಾಜ್ಞಿಕರು ಅಗ್ನಿಯಲ್ಲೇ ಯಜ್ಞಯಾಗಾದಿಗಳನ್ನು ನಡೆಸುವರು ಎಂದರೆ ಅವರಿಗೆ ಅಗ್ನಿಯಲ್ಲೇ ದೇವರು ಕಾಣಿಸಿಕೊಳ್ಳುವನು. ಕೆಲವರಿಗೆ ಯಾಜ್ಞಿಕ ಗೊತ್ತಿಲ್ಲ. ಅವರು ಅಂತರ್ಮುಖಿಗಳಾಗಿ ಹೃದಯದಲ್ಲೇ ದೇವರ ಧ್ಯಾನ ನಡೆಸುವರು. ಅವರಿಗೆ ಅವರ ಹೃದಯದಲ್ಲೇ ದೇವರು ದರ್ಶನ ಕೊಡುವನು. ನಮ್ಮ ನಿಮ್ಮಂತಹವರಿಗೆ ಅಗ್ನಿಯಲ್ಲೂ ದೇವರ ದರ್ಶನ ಆಗುವುದಿಲ್ಲ. ಹೃದಯದಲ್ಲೂ ದೇವರು ಕಾಣಿಸಿಕೊಳ್ಳುವುದಿಲ್ಲ. ಅಂತಹವರು **'ಪ್ರತಿಮಾಸ್ವಪ್ರಬುದ್ಧಾನಾಂ.....'** ಒಂದು ಪ್ರತಿಮೆಯನ್ನು ಇಟ್ಟುಕೊಂಡು ಅದನ್ನು ಕಣ್ಣುಮುಚ್ಚಿ ಮನಸ್ಸಿನಲ್ಲಿ ಚಿಂತಿಸಿದೆವೆಂದರೆ, ಮನಸ್ಸಿನಲ್ಲಿ ಕಾಣಿಸಿಕೊಳ್ಳುವ ದೇವರ ಪ್ರತಿಮೆಯಲ್ಲಿ ದೇವರು ಕಾಣಿಸಿಕೊಳ್ಳುವನು. ಇನ್ನು ಕೆಲವರು ಇರುವರು - ಬಹಳ ಎತ್ತರದ ಮಟ್ಟದವರು. ಅವರಿಗೆ **'ಸರ್ವತ್ರ ವಿದಿತಾತ್ಮನಾಮ್'** - ಎಂದಿರುವಂತೆ ಎಲ್ಲಿ ಬೇಕೋ ಅಲ್ಲಿ ದೇವರು ದರ್ಶನ ನೀಡುವನು.

ಆದ್ದರಿಂದ 'ಪರಿಗ್ರಹಃ' - ಪರಿತಃ ಗೃಹ್ಯತೇ ಇತಿ - ಎಲ್ಲಿ ಬೇಕಾದವರಲ್ಲಿ ಕಾಣಿಸಿಕೊಳ್ಳುವವನು. ನಾವು ಎಲ್ಲಿ ಎಲ್ಲಿ ಕಷ್ಟವನ್ನು ಅನುಭವಿಸುವೆಯೋ ಅಲ್ಲೆಲ್ಲ ದೇವರು ಕಾಣಿಸಿಕೊಳ್ಳುವಂತಾಗಬೇಕೆಂದು ದೇವರನ್ನು 'ಪರಿಗ್ರಹ' ಎಂದು ಉಪಾಸನೆ ನಡೆಸಬೇಕು.

ಪತ್ನಿಯನ್ನೂ 'ಪರಿಗ್ರಹ' ಎಂದು ಕರೆಯುವುದೂ 'ಪರಿತಃ ಗೃಹ್ಣಾತಿ'- ತಾನು ಯಾವುದೇ ಸೇವೆ ನಡೆಸಿದಾಗಲೂ ಅಲ್ಲೆಲ್ಲ ಪತಿಯನ್ನೇ ಪ್ರತಿಮೆಯನ್ನಾಗಿ ಸ್ವೀಕರಿಸುವವಳು - ಎಂಬ ಆಂತರ್ಯದಲ್ಲಿಯೇ.

**೪೨೪. ಉಗ್ರಃ –ಉಗ್ರರ ಪಾಲಿಗೆ ಉಗ್ರನಾಗಿ ಇರುವವನು.**

**ವಿವರಣೆ :** ಎದುರಿಗೆ ಕೂತ ಕೃಷ್ಣನನ್ನು ಭೀಷ್ಮರು 'ಉಗ್ರ' ಎಂದು ಸ್ತುತಿಸಿರುವರು. ಕೃಷ್ಣ ಅದಕ್ಕೆ ಸಂತೋಷಪಟ್ಟ.

ಯುಧಿಷ್ಠಿರ ಶಾಂತನಾಗಬೇಕಾದರೆ, ಬದುಕಬೇಕಾದರೆ ಭಗವಂತನ ಶಾಂತರೂಪ ಕಾರಣ. ಕ್ರೂರನಾದ ದುರ್ಯೋಧನ ಸಾಯಬೇಕಾದರೆ ಭಗವಂತನ ಕ್ರೂರರೂಪ ಕಾರಣ. ಧೃತರಾಷ್ಟ್ರ ಒಂದು ರೀತಿಯಿಂದ ಕ್ರೌರ್ಯದಿಂದ ಹುಟ್ಟಿದ. ಅದಕ್ಕೆ ವೇದವ್ಯಾಸರ ಕ್ರೌರ್ಯರೂಪ ಕಾರಣವಾಯಿತು. ಪಾಂಡುರಾಜ ಒಬ್ಬ ರೋಗಿಯಾಗಿ ಹುಟ್ಟಿದ. ಇದಕ್ಕೆ ಭಗವಂತನ ರೂಪವನ್ನು ಆ ರೀತಿಯಾಗಿ ಕಂಡದ್ದು ಕಾರಣವಾಯಿತು.

ಅಂದರೆ ನಾವು ಜೀವನದಲ್ಲಿ ಏನು ಏನು ಅಪೇಕ್ಷೆ ಪಡುವೆವೋ ದೇವರು ಆ ಆ ರೂಪದಿಂದ ನಮ್ಮ ಒಳ ಕಣ್ಣ ಮುಂದೆ ಬರುವನು. ಏನು ಬೇಕೋ ಅದಕ್ಕೆ ಅನುಗುಣವಾಗಿ ಬರುವನು. ಕೃಷ್ಣ ಉಗ್ರರೂಪ ತಾಳಿದ್ದಕ್ಕೆ ಆ ಉಗ್ರನಾದ ದುರ್ಯೋಧನ ಸತ್ತ.

ದುಷ್ಟರ ವಿಷಯದಲ್ಲಿ ಸದಾ ಕಾಲ ಉಗ್ರನಾಗಿ ಇರುವವನು ಎಂಬುದೇ ಉಗ್ರನಾಮದ ಅರ್ಥ. ಶಾಂತರಿಗೆ ಶಾಂತ ಉಗ್ರರಿಗೆ ಉಗ್ರ. ದುರ್ಯೋಧನನ ಸಾವನ್ನು ದೃಷ್ಟಿಯಲ್ಲಿಟ್ಟುಕೊಂಡು ಭೀಷ್ಮರು ಕೃಷ್ಣನನ್ನು ಹೀಗೆ ಸ್ತುತಿಸುತ್ತಿದ್ದಾರೆ.

ನಮ್ಮ ಸಾಧನಾನುಷ್ಠಾನಕ್ಕಾಗಿ ಉಪಟಳ ಮಾಡುವವರಿಗೆ 'ಉಗ್ರ'ನಾಗಿ ದರ್ಶನ ಕೊಡುವವನು - ಎಂದು ಉಗ್ರನಾಮದಿಂದ ಉಪಾಸನೆ ನಡೆಸಬೇಕು.

**೪೨೫. ಸಂವತ್ಸರಃ – * ಒಳ್ಳೆಯ ಕರುಗಳನ್ನು ಚೆನ್ನಾಗಿ ತೃಪ್ತಿ ಪಡಿಸುವವನು.**
*** ಮನೆಯಲ್ಲಿಯ ಮಕ್ಕಳನ್ನೂ ಚೆನ್ನಾಗಿ ತೃಪ್ತಿ ಪಡಿಸುವವನು.**

**ವಿವರಣೆ :** ಸಂ - ಚೆನ್ನಾಗಿ ವತ್ಸ - ಕರುಗಳನ್ನು ರ - ರಮಯತಿ - ತೃಪ್ತಿ ಪಡಿಸುವವನು. ಹಿಂದೆ ಒಮ್ಮೆ ಸಂವತ್ಸರನಾಮ ಬಂದಿತ್ತು. ಅದಕ್ಕೆ ಬೇರೆ ಅರ್ಥವನ್ನು ಹೇಳಲಾಗಿತ್ತು. ಈಗ ಪ್ರಸ್ತುತವಾದ ಸಂವತ್ಸರ ನಾಮಕ್ಕೆ ಬೇರೆ ಅರ್ಥ.

ಹಿಂದೆ ಬಂದ 'ಉಗ್ರ'ನಾಮಕ್ಕೆ ಸಂಬಂಧಿಸಿಯೋ ಎನ್ನುವಂತೆ 'ಸಂವತ್ಸರ' ಎಂಬ ನಾಮ ಪ್ರಸ್ತುತವಾಗಿದೆ.

ಒಬ್ಬ ರಾಕ್ಷಸ ಇದ್ದ. ಮರದರೂಪದಲ್ಲಿ ವಿಷದ ಗಾಳಿಯನ್ನು ಸೂಸುತ್ತಿದ್ದ. ಆ ಗಾಳಿಗೆ ಪಶುಗಳೆಲ್ಲ ಮೂರ್ಛಿತಗಳಾಗಿ ಬೀಳುವವು. ಬಲರಾಮನೂ ಮೂರ್ಛೆಗೊಳಗಾಗುವ ಪ್ರಸಂಗ ಬರುವುದು. ಆಗ ಶ್ರೀಕೃಷ್ಣ ತಾನು ಉಗ್ರರೂಪ ತಾಳಿ ಆ ವೃಕ್ಷರೂಪದ ಉಗ್ರನನ್ನು ಸಂಹಾರ ಮಾಡಿದ. ಒಳ್ಳೊಳ್ಳೆಯ ಗಿಡ ಮರಗಳನ್ನು ಬೆಳೆಸುತ್ತಲೂ ಇದ್ದ ಕೃಷ್ಣ ಹೀಗೆ ಕೆಟ್ಟ ಮರಗಳನ್ನು ನಾಶಗೊಳಿಸಿ ಪ್ರಕೃತಿಯ ಸಮತೋಲನ ಕಾಪಾಡುತ್ತಿದ್ದ. ಆ ಉಗ್ರ ಮರದಡಿಯಲ್ಲಿ ಕೆಲವು ಅಸುರರು ಹಸುಕರುಗಳ ರೂಪದಲ್ಲಿ ಅಡ್ಡಾಡುತ್ತಿದ್ದವು. ಅವುಗಳನ್ನೂ ನಾಶಗೈದ. ಹೀಗೆ ಕೆಟ್ಟ ಹಸುಕರುಗಳನ್ನು ನಾಶಗೊಳಿಸಿದ್ದು ಒಳ್ಳೆಯ ಕರುಗಳ ರಕ್ಷಣೆಗಾಗಿ. ಇದನ್ನೇ 'ಸಂವತ್ಸರ' ನಾಮ ತಿಳಿಸುತ್ತಿದೆ. ಸಂ - ಸಮೀಚೀನಗಳಾದ ಹೊರತು ಖರ ಅಸುರನ ಹಿಂಬಾಲಕಗಳಾಗಿ ದುಷ್ಟವಾದವುಗಳಲ್ಲ. ವತ್ಸ - ಕರುಗಳನ್ನು ರಮಯತಿ - ತೃಪ್ತಿ ಪಡಿಸುತ್ತಿದ್ದನು. ಹೇಗೆ ? ಸಂ - ಸಮ್ಯಕ್, ಚೆನ್ನಾಗಿ.

ಕೃಷ್ಣ ಕರುಗಳನ್ನು ಕಾದ ವೈಭವವನ್ನು ದಾಸರು ಹೀಗೆ ಹಾಡಿರುವರು-
ಕಾದನ ವತ್ಸವ ಹರಿ ಕಾದನ
ಅಜಗಳಂತಿದ್ದ ಕರುಗಳು ಗಜಗಳಂತೆ ಬೆಳೆದವು
ತ್ರಿಜಗದೊಡೆಯ ವಿಜಯವಿಠಲ ವ್ರಜಕ ದೊರೆ ಆಳುವ
ಕನಕ ರಜತ ಸರಪಳಿ ಆ ದನಕರುಗಳ ಕೊರಳಲಿ

ವಿಜಯದಾಸರು ಆ ಕರುಗಳ ವೈಭವವನ್ನು ಹೀಗೆ ವರ್ಣಿಸುತ್ತಿದ್ದಾರೆ. ಕೆಲವು ಕರುಗಳ ಕೊರಳಲ್ಲಿ ಬೆಳ್ಳಿಯ ಸರಪಳಿ ಆದರೆ, ಮತ್ತೆ ಕೆಲವು ಹಸುಗಳ ಕೊರಳಲ್ಲಿ ಚಿನ್ನದ ಸರಪಳಿ ಅಂತೆ.

ಕೃಷ್ಣ ಕರುಗಳ ಮೇಲ್ವಿಚಾರಣೆ ಮಾಡುತ್ತಿದ್ದುದರಿಂದ ಚಿಕ್ಕ ಚಿಕ್ಕ ಕರುಗಳು ದೊಡ್ಡ ದೊಡ್ಡ ಆನೆಗಳಂತೆ ಬೆಳೆದವಂತೆ !

ವಿಜಯದಾಸರ ಈ ಹಾಡು 'ಸಂವತ್ಸರ' ನಾಮಕ್ಕೆ ಭಾಷ್ಯದಂತೆ ಇದೆ.

ವತ್ಸ ಎಂದರೆ ಹಟ್ಟಿಯಲ್ಲಿರುವ ಕರುಗಳು ಎಂದಷ್ಟೇ ಅರ್ಥವಲ್ಲ. ನಮ್ಮ ಮನೆಯಲ್ಲಿರುವ ಮಕ್ಕಳೂ ವತ್ಸಗಳೇ. ಅವುಗಳನ್ನೂ ನಮ್ಮ ಮಾಧ್ಯಮದಲ್ಲಿ ಚೆನ್ನಾಗಿ ತೃಪ್ತ ಪಡಿಸುವವನು ಭಗವಂತನೇ. ಆದುದರಿಂದ ಈ ಅಭಿಪ್ರಾಯದಲ್ಲೂ ಅವನು 'ಸಂವತ್ಸರ'.

**೪೨೬. ದಕ್ಷಃ – ಕೊಡುವವನೂ, ಕಸಿದುಕೊಳ್ಳುವವನೂ.**

**ವಿವರಣೆ :** ಕೊಡಲಿಕ್ಕೂ, ತೆಗೆದುಕೊಳ್ಳಲಿಕ್ಕೂ ಯಾರು ಸಮರ್ಥರೋ ಅವರನ್ನು ದಕ್ಷರು ಎಂದು ಕರೆಯುವೆವು. ಉತ್ತೀರ್ಣ ಮಾಡಲಿಕ್ಕೂ, ಅನುತ್ತೀರ್ಣ ಮಾಡಲಿಕ್ಕೂ ಯಾರಿಗೆ ಸಾಮರ್ಥ್ಯ ಉಂಟೋ ಅವನೇ ದಕ್ಷ. ಹಿಂಬಡ್ತಿಯನ್ನೂ, ಮುಂಬಡ್ತಿಯನ್ನೂ ನೀಡುವುದಕ್ಕೆ ಸಮರ್ಥರಾದವರೇ ದಕ್ಷರು.

ದ ಅಂದರೆ - ದದಾತಿ ಕೊಡುವವನು ; ಕ್ಷ ಎಂದರೆ ಕ್ಷಣೋತಿ - ತೆಗೆಯುವವನು. ಹೀಗೆ ಕೊಡುವವನನ್ನೂ, ತೆಗೆಯುವವನೂ ದಕ್ಷ. ಎರಡು ಶಬ್ದಗಳು ಸೇರಿ ರೂಪುಗೊಂಡ ಶಬ್ದ ದಕ್ಷ. ಇದರಲ್ಲಿ 'ದ' ವು ಕೊಡುವಿಕೆಯನ್ನೂ 'ಕ್ಷ' ನಾಶವನ್ನೂ ತಿಳಿಸುತ್ತದೆ.

ಮುಂಬಡ್ತಿ ಕೊಡುವುದು ಸುಲಭ. ಯಾಕೆಂದರೆ ಮುಂಬಡ್ತಿ ಪಡೆದವ ನಮಗೆ ಅನುಕೂಲವಾಗಿರುವನು. ಹಿಂಬಡ್ತಿ ಕೊಡುವುದು ಕಷ್ಟ. ಹಿಂಬಡ್ತಿ ಪಡಕೊಂಡವನಿಂದ ಆಗಬಲ್ಲ ಪ್ರತೀಕಾರವನ್ನು ಎದುರಿಸಲು ಸಿದ್ಧರಿರಬೇಕು.

ನಮ್ಮ ಗುರುಗಳು ಆಗಾಗ್ಗೆ ಹೇಳುವುದುಂಟು. ಅವರ ಧಾಟಿಯಲ್ಲೇ ಹೇಳಬೇಕೆಂದರೆ 'No' ಎನ್ನುವುದು ಕಷ್ಟ. 'Yes' ಎನ್ನುವುದು ಬಹಳ ಸುಲಭ. ನಿಮ್ಮ ಶಾಲೆಯಲ್ಲಿ ಒಂದು ಸೀಟು ಕೊಡಿ ಎಂದು ಕೇಳಿಕೊಂಡು ಕೆಲವರು ಬರ್ತಾರೆ. 'No' ಎನ್ನುವರು. ಆಮೇಲೆ ನಮ್ಮಲ್ಲಿ ಹೇಳುವುದುಂಟು – ಆಯಿತು ; ನಿನಗೊಂದು ಸೀಟು ಕೊಡೋಣ - ಎನ್ನುವುದು ಸುಲಭ. ಆದರೆ 'No' ಎನ್ನಬೇಕು. ಅವನ ಮನಸ್ಸಿಗೆ ನೋವಾಗಬಾರದು. ನಮ್ಮ ಬಾಯಿಂದ 'No' ಬಂದರೂ ಅವನ ಮನಸ್ಸಿಗೆ ನೋವಾಗಬಾರದು. ಆ ರೀತಿ ಬಹಳ ಕಷ್ಟ ಎಂದು.

ಅಧ್ಯಾಪಕನೊಬ್ಬ ವಿದ್ಯಾರ್ಥಿಗೆ ಮುಂಬಡ್ತಿಯನ್ನೂ ಕೊಡಬಲ್ಲ; ಹಿಂಬಡ್ತಿಯನ್ನೂ ಕೊಡಬಲ್ಲ. ವಿದ್ಯಾರ್ಥಿಗೆ ಹಿಂಬಡ್ತಿಯನ್ನು ಕೊಟ್ಟರೂ ಅವನಿಗೆ ಬೇಸರ ಆಗದಂತೆ ನಡೆದುಕೊಳ್ಳುವರೆಂದರೆ ಆ ಅಧ್ಯಾಪಕರೇ ನಿಜವಾಗಿ ದಕ್ಷ.

ಭಗವಂತನೂ ನಮ್ಮ ಪಾಲಿಗೆ ಕೆಲವೊಮ್ಮೆ 'ದ' - ಕೊಡುವವನಾಗಿಯೂ ಮತ್ತೆ ಕೆಲವೊಮ್ಮೆ 'ಕ್ಷ'- ತೆಗೆಯುವವನಾಗಿಯೂ ನಡೆದುಕೊಳ್ಳುವನು. ತಿಳಿದವರಿಗಷ್ಟೇ ಭಗವಂತನ ಈ ನಡತೆಯ ಬಗ್ಗೆ ಅಸಮಾಧಾನ ಆಗಲಾರದು. ದೇವರು ಸಂತತಿಯನ್ನು ಕೊಟ್ಟ. ಆದರೆ ಮುಂದೆ ಒಂದು ದಿನ ಅದನ್ನು ಕಸಿದುಕೊಂಡು ಹೋದ. ಆಗ ಗೋಳೋ ಎಂದು ಅಳುತ್ತ ದೇವರ ಬಗ್ಗೆ ಅಸಮಾಧಾನವನ್ನು ತಾಳುವುದುಂಟು. ಇದರ ಬದಲು ಬೇಸರ ಪಡದೆ ಇರುವುದು ದೊಡ್ಡತನ. ಅದು ತಿಳಿದವರಿಗಷ್ಟೇ ಸಾಧ್ಯ.

ದಾಸರು ಹೇಳ್ತಾರೆ - ಕೊಟ್ಟ ದೇವರು ಕೊಂಡು ಹೋದರೆ ಕುಟ್ಟಿಕೊಂಡು ಅಳುವುದೇಕೋ ? ದೇವರು ಕೊಟ್ಟ. ಆ ದೇವರೇ ಅದನ್ನು ಕೊಂಡೊಯ್ದ. ಹೀಗಿರುವಾಗ ನಾನು ಕುಟ್ಟಿಕೊಂಡು ಅಳುವುದು ಅದೆಷ್ಟು ಸಮಂಜಸ ?

ಈ ಸಿದ್ಧಾಂತದ ರಹಸ್ಯ ಯಾರಿಗೆ ಮನವರಿಕೆಯಾಗಿದೆಯೋ ಅವರಿಗೆ ಭಗವಂತ ಕೊಂಡೊಯ್ದಾಗಲೂ ಬೇಸರ ಆಗುವುದಿಲ್ಲ. ಇದು ದೇವರ ದಕ್ಷತೆ.

ಹೀಗೆ ಭಗವಂತನೇ ಕೊಡುವವನು ; ಅವನೇ ಕಸಿದುಕೊಳ್ಳುವವನು ಎಂಬುದೇ ದಕ್ಷನಾಮದ ಅರ್ಥ.

**೪೨೭. ವಿಶ್ರಾಮಃ – * ಶ್ರಮದ ಸಮೂಹವನ್ನು ಕಳಕೊಂಡವನು.**

*** ಉಳಿದವರ ಶ್ರಮ ಸಮೂಹ ಇಲ್ಲದಂತೆ ಮಾಡುವವನು.**

**ವಿವರಣೆ :** ಶ್ರಮಗಳ ಸಮೂಹ ಶ್ರಾಮ. ಭಾರೀ ಭಾರಿ ಶ್ರಮಗಳು, ಒಂದರ ಮೇಲೆ ಮತ್ತೊಂದು ಶ್ರಮ ಉಂಟಾಗುವುದಿದ್ದರೆ ಅದು ಶ್ರಾಮ. 'ವಿ'- ವಿಗತ. ಭಗವಂತನಿಂದ ಶ್ರಮಗಳ ಉಚ್ಚಾಟನೆ ಆಗುವುದು. ವ್ಯಕ್ತಿಗಳ ಶ್ರಮಗಳನ್ನು ತೆಗೆಯುವವನು.

**'ಸ್ವಾಪಂ ಪ್ರಾಪಯತಿ ಶ್ರಮಾಪಹೃತಯೇ.......'** - ಹಿರಿಯರೊಂದು ಮಾತನ್ನು ಅಂದರು. ರಾತ್ರಿ ನಮಗೆ ನಿದ್ದೆ ಬರುವುದು ಯಾರಿಂದ ? ತಾಯಿ ತೊಟ್ಟಿಲು ತೂಗಬಹುದು. ಆದರೆ ಅಷ್ಟು ಮಾತ್ರಕ್ಕೆ ಮಗುವಿಗೆ ನಿದ್ದೆ ಬರಬೇಕಿಲ್ಲ. ತೊಟ್ಟಿಲನ್ನು ತೂಗಿ ತೂಗಿ ತಾಯಿಗೇ ನಿದ್ದೆ ಬಂದರೂ ಕೆಲವೊಮ್ಮೆ ಮಗು ಕೈಕಾಲು ಅಲ್ಲಾಡಿಸುತ್ತಿರುವುದುಂಟು. ಆದ್ದರಿಂದ ನಿದ್ದೆ ಬರುವಂತೆ ಮಾಡುವವನು ದೇವರೇ.

ಉಂಡದ್ದು ಜೀರ್ಣವಾಗಬೇಕಾದರೆ ಎಷ್ಟೋ ಜನ್ಮಗಳಲ್ಲಿ ತಪಸ್ಸು ಮಾಡಿದ್ದಿರಬೇಕು ಎನ್ನುವಂತೆ ಮಲಗಿದ ಕೂಡಲೇ ನಿದ್ದೆ ಬರಬೇಕೆಂದರೂ ಎಷ್ಟೋ ಜನ್ಮಗಳಲ್ಲಿ ತಪಸ್ಸು ಮಾಡಿದ್ದಿರಬೇಕು. **'ಭೋಜ್ಯೇ ಭೋಜನಶಕ್ತಿಶ್ಚ ನಾಲ್ಪಸ್ಯ ತಪಸಃ ಫಲಂ......'** ಎಂಬ ಮಾತನ್ನು ನಿದ್ದೆಯ ವಿಷಯದಲ್ಲೂ ಅನ್ವಯಿಸಿಕೊಳ್ಳಬೇಕು.

ಹಗಲು ತುಂಬ ದುಡಿದು ಶ್ರಮ ಪಟ್ಟಿರುವೆವು. ಅಂತಹ ಶ್ರಮದ ಪರಿಹಾರಕ್ಕಾಗಿ ನಿದ್ದೆ ಬರಿಸುವನು. ಇದನ್ನೇ **'........ ಶ್ರಮಾಪಹೃತಯೇ'** ಅಂದದ್ದು. ಭಗವಂತನದ್ದು ಎಷ್ಟೊಂದು ಕಾರುಣ್ಯ ! ತಾಯಿ ಜೋಜೋ ಹಾಡಿ ನಿದ್ದೆ ಬರಿಸುವಳು. ಮತ್ತೆ ತಾನು ಎಲ್ಲೋ ಹೋಗಿ ನಿದ್ದೆ ಮಾಡುವಳು. ಆದರೆ ಭಗವಂತ ಹಾಗಲ್ಲ. ನಿದ್ದೆ ಬರಿಸುವನು. ಪಕ್ಕದಲ್ಲಿಯೇ ಕುಳಿತು ನಿದ್ರಾಕಾಲದಲ್ಲಿ ರಕ್ಷಿಸುತ್ತಿರುತ್ತಾನೆ. ಅಕಸ್ಮಾತ್ ಮನೆ ಬೀಳುವ, ಹಾವು, ಚೇಳು ಕಚ್ಚುವ ಪ್ರಸಂಗ ಬಂದರೆ ಮಧ್ಯದಲ್ಲಿ ಎಚ್ಚರಿಸುವನು.

ಭೀಷ್ಮರು ತಮ್ಮ ದೀರ್ಘ ಜೀವನದಲ್ಲಿ ದೈಹಿಕವಾಗಿ, ಮಾನಸಿಕವಾಗಿ ಭಾರೀ ಭಾರೀ ಶ್ರಮ ಪಟ್ಟವರು. ಈಗ ಕೃಷ್ಣನ ಸನ್ನಿಧಿಯಲ್ಲಿ ಅಂತಹ ಶ್ರಮಗಳೆಲ್ಲದರ ಪರಿಹಾರದ ಸ್ಥಿತಿಯನ್ನು ಅನುಭವಿಸುತ್ತ ಕೃಷ್ಣನನ್ನು 'ವಿಶ್ರಾಮ' - ಎಂದು ಸ್ತುತಿಸುತ್ತಿರುವರು.

ತನಗೆ ಶ್ರಮ ಇಲ್ಲದವನು ; ಹಾಗೂ ಉಳಿದವರ ಶ್ರಮದ ಸಮೂಹವನ್ನೇ ಪರಿಹರಿಸುವವನು. ಅರ್ಥಾತ್ ತಾನು ಶ್ರಮವಿಲ್ಲದೆಯೇ ಉಳಿದವರ ಶ್ರಮವನ್ನು ಪರಿಹರಿಸುವವನು. ಕೆಲವರು - ಇರ್ತಾರೆ ತಮಗೆ ಶ್ರಮ ಆದರೂ ಉಳಿದವರ ಶ್ರಮದ

ಪರಿಹಾರದಲ್ಲಿ ತೊಡಗುವವರು. ಆದರೆ ಅಂತಹವರ ಶ್ರಮಪರಿಹಾರದ ಉಪಚಾರವನ್ನು ಸ್ವೀಕರಿಸಲೂ ನಮಗೆ ಸಂಕೋಚವಾಗುವುದು. ಭಗವಂತನಾದರೂ ತನಗೆ ಶ್ರಮವಿಲ್ಲದೆ ನಮ್ಮ ಶ್ರಮವನ್ನು ಪರಿಹರಿಸುವನು. ಆದ್ದರಿಂದಲೇ ‘ವಿಶ್ರಾಮ’.

**೪೨೮. ವಿಶ್ವದಕ್ಷಿಣಃ – ದೇಹದಲ್ಲಿ ಪ್ರವೇಶಿಸಿರುವ ಜೀವನು ಚಟುವಟಿಕೆಯಿಂದ ಕೂಡಿರುವಂತೆ ಮಾಡುವವನು.**

**ವಿವರಣೆ :** ವಿಶ್ವ ಎಂದರೆ ಜೀವ. ಯಾಕೆಂದರೆ ಈ ಶರೀರದಲ್ಲಿ ಪ್ರವೇಶಿಸಿ ಇರುವನು. ವಿಶ್ + ವ - ವಿಶತಿ ವರ್ತತೇ ಚ ವಿಶ್ವಃ ಶರೀರದಲ್ಲಿ ಇರುವುದು ಮಾತ್ರವಲ್ಲ; ಒಳ್ಳೆಯ ಚಟುವಟಿಕೆವುಳ್ಳವನಾಗುವನು. ದಕ್ಷಿಣ ಶಬ್ದಕ್ಕೆ ಚಟುವಟಿಕೆವುಳ್ಳವನು ಎಂಬ ಅರ್ಥ. ಹೀಗೆ ಪ್ರತಿಯೊಬ್ಬ ಜೀವನೂ ಶರೀರದಲ್ಲಿದ್ದುಕೊಂಡು ಒಂದಲ್ಲ ಒಂದು ಚಟುವಟಿಕೆಯನ್ನು ನಿರ್ವಹಿಸಲು ಸಮರ್ಥನಾಗಿರುವುದು ಭಗವಂತನಿಂದ. ಶರೀರದಲ್ಲಿ ಪ್ರವೇಶಿಸಿರುವ ಜೀವನು ಚಟುವಟಿಕೆಯಿಂದ ಕೂಡಿರುವಂತೆ ಮಾಡಿರುವವನು ಭಗವಂತ.

**ವಿಸ್ತಾರಃ ಸ್ಥಾವರಸ್ಥಾಣುಃ ಪ್ರಮಾಣಂ ಬೀಜಮವ್ಯಯಮ್ |**
**ಅರ್ಥೋऽನರ್ಥೋ ಮಹಾಕೋಶೋ ಮಹಾಭೋಗೋ ಮಹಾಧನಃ ||೪೬||**

**೪೨೯. ವಿಸ್ತಾರಃ – ದೇವತೆಗಳ ಇಂದ್ರಿಯಶಕ್ತಿಯನ್ನು ವಿಸ್ತಾರಗೊಳಿಸುವ ಮೂಲಕ ದೇವತೆಗಳನ್ನೂ ವಿಸ್ತಾರಗೊಳಿಸುವವನು.**

**ವಿವರಣೆ :** ದೇವತೆಗಳನ್ನು ವಿಸ್ತಾರಗೊಳಿಸುವವನು ; ವಿಶಾಲಗೊಳಿಸುವವನು. ದೇವತೆಗಳನ್ನು ವಿಸ್ತಾರಗೊಳಿಸುವುದೆಂದರೇನು ? ದೇವತೆಗಳ ಮನಸ್ಸೇ ಮುಂತಾದ ಇಂದ್ರಿಯಗಳ ಶಕ್ತಿಯನ್ನು ವಿಸ್ತಾರಗೊಳಿಸುವುದೆಂದರ್ಥ. ಇಂದ್ರಿಯ ಶಕ್ತಿಗಳ ವಿಸ್ತಾರದಿಂದಾಗಿ ಅವರ ವಿಸ್ತಾರವೇ ನಡೆದಂತಾಗುವುದು. ಹಿರಿಯರು ಒಂದು ಮಾತನ್ನು ಹೇಳಿದ್ದುಂಟು -

**ಮನ ಆದೀಂದ್ರಿಯಾಣಾಂ ತು ಶಕ್ತಿವಿಸ್ತಾರ ಏವ ತು |**
**ವಿಸ್ತಾರೋ ದೇವತಾನಾಂ ಸ್ಯಾದ್ ಭಕ್ತೇಷು ಹರಿಣಾ ಕೃತಃ |**

ಹೀಗೆ ನಮ್ಮ ಇಂದ್ರಿಯಗಳಿಗೆ ಅಭಿಮಾನಿಗಳಾಗಿದ್ದು ಇಂದ್ರಿಯನಿಯಾಮಕರಾದ ರುದ್ರಾದಿದೇವತೆಗಳ ಇಂದ್ರಿಯಗಳ ಸಾಮರ್ಥ್ಯವನ್ನೂ ವಿಶಾಲಗೊಳಿಸುವವನು ‘ವಿಸ್ತಾರ’ ಎನಿಸುವ ಭಗವಂತನು.

**೪೩೦. ಸ್ಥಾವರಸ್ಥಾಣುಃ – ಬೆಟ್ಟ ಮುಂತಾದ ಸ್ಥಾವರಗಳು ಸ್ಥಿರವಾಗಿ**

**ನಿಲ್ಲುವಂತೆ ಅವುಗಳೊಳಗೆ ಕಂಭದಂತೆ ಇರುವವನು.**

**ವಿವರಣೆ :** ಎರಡು ರೀತಿಯ ಜಗತ್ತು - ಸ್ಥಾವರ ಹಾಗೂ ಜಂಗಮ. ನಾವೆಲ್ಲ ಜಂಗಮರು.

ಪುರಂದರದಾಸರು ಹಾಡಿರುವರು - 'ಜಂಗಮರು ನಾವೆಲ್ಲ........' ಪುರಂದರದಾಸರನ್ನು ಮುಸಲ್ಮಾನರು ಕರೆದುಕೊಂಡು ಹೋಗಿ ಹಾಡಿ ಅಂದರು - 'ತುರುಕರು ಕರೆದರೆ ಉಣಬಹುದಣ್ಣ' ಎಂದು ಹಾಡಿದರು. ಲಿಂಗಾಯಿತರು ಕರೆದುಕೊಂಡು ಹೋಗಿ ಹಾಡಲು ಹೇಳಿದರು - 'ಲಿಂಗಾಂಗಿಗಳು ನಾವೆಲ್ಲ.....' ಎಂದು ಹಾಡಿದರು. ಹಾಗೆಯೇ ಜಂಗಮರು ಕರೆದು ನಮ್ಮ ಬಗ್ಗೆ ಹಾಡಿ ಎಂದರು - ಆಗ 'ಜಂಗಮರು ನಾವೆಲ್ಲ...' ಎಂದು ಹಾಡಿದರು - ಏನು ಜಂಗಮರು ಅಂದರೆ? **ಗಚ್ಛಂತೀತಿ ಜಂಗಮಾಃ** - ಆಚೆ ಈಚೆ ಓಡಾಡುವವರನ್ನೆಲ್ಲ ಜಂಗಮರು ಎಂದು ಕರೆಯುವುದು. ಒಂದೇ ಕಡೆಯಲ್ಲಿ ನಿಲ್ಲುವವರನ್ನು 'ಸ್ಥಾವರ' ಎಂದು ಕರೆಯುವುದು. ನಾವು ಸ್ಥಾವರರು ಅಲ್ಲ, ಜಂಗಮರು. ಯಾಕೆಂದರೆ ಇನ್ನು ಕೆಲವು ನಿಮಿಷಗಳಲ್ಲಿಯೇ ಇಲ್ಲಿ - 'ಕೆಲವರು ಹೋಗ್ತಾರೆ ; ಕೆಲವರು ಇರ್ತಾರೆ ; ಕೆಲವರು ಬರ್ತಾರೆ......'

ಮರಗಿಡಗಳು, ಬಂಡೆಗಳು, ಕಟ್ಟಡಗಳು - ಸ್ಥಾವರಗಳು. ಇವು ಯಾಕೆ ಸ್ಥಿರವಾಗಿ ನಿಂತಿರುವವು ? ಭಗವಂತ ಇವುಗಳೊಳಗೆ 'ಸ್ಥಾಣು'ವಾಗಿ ನಿಂತಿದ್ದಾನೆ. ಆದ್ದರಿಂದ ಇವು ಸ್ಥಿರವಾಗಿ ನಿಂತಿವೆ. ಸ್ಥಾಣು ಎಂದರೆ ಗಟ್ಟಿಯಾಗಿ ನಿಂತವನು. ಭಗವಂತನು ಸ್ಥಾಣುವಾಗಿ-ಗಟ್ಟಿಯಾಗಿ ನಿಂತವನಾಗಿ ಈ ಕಟ್ಟಡದೊಳಗೆ ಇರುವುದರಿಂದ ಈ ಕಟ್ಟಡ ಸ್ಥಿರವಾಗಿ ನಿಂತಿದೆ. ಆದ್ದರಿಂದ ಈ ಕಟ್ಟಡ ಗಟ್ಟಿಯಿದೆ. ಬೀಳುವುದಿಲ್ಲ - ಎಂದು ಹೇಳುವ ಮುಂಚೆ ಇದರೊಳಗೆ ಭಗವಂತ ಸ್ಥಾಣುವಾಗಿ, ಸ್ಥಿರವಾಗಿ ಇದ್ದಾನೆ ಎಂದು ಚಿಂತನೆ ಮಾಡಬೇಕು. ಎಷ್ಟೋ ಸಂದರ್ಭಗಳಲ್ಲಿ ಕಟ್ಟಡಗಳು ಹತ್ತಾರು ವರ್ಷ ಗಟ್ಟಿಯಾಗಿ ಇರುವವೆಂದು ತಿಳಿಸಿದ ಮರುದಿನದಲ್ಲೇ ಅವು ಕುಸಿಯುವುದುಂಟು. ಯಾಕೆ ? ಅವುಗಳಲ್ಲಿ ಸ್ಥಾಣು ಸ್ಥಾಣುವಾಗಿ ನಿಂತಿಲ್ಲ. ಹೀಗೆ ಸ್ಥಿರಗಳಾದ, ಏಕತ್ರ ಸ್ಥಿತಗಳಾದ ವಸ್ತುಗಳು ಸ್ಥಿರವಾಗಿ ನಿಲ್ಲಲು ಕಾರಣನಾಗಿ ಇರುವವನೇ 'ಸ್ಥಾವರಸ್ಥಾಣು'.

**೪೩೧. ಪ್ರಮಾಣಂ – ಪ್ರತಿಯೊಂದಕ್ಕೂ ಸಾಕ್ಷಿಯಾಗಿ ನಿಲ್ಲುವವನು.**

**ವಿವರಣೆ :** ನಮ್ಮ ಪ್ರತಿಯೊಂದು ಚಟುವಟಿಕೆಗೂ ಸಾಕ್ಷಿಯಾಗಿ ನಿಲ್ಲುವವನು 'ಪ್ರಮಾಣ'. ಕೆಲವೊಮ್ಮೆ ನಾಸ್ತಿಕನೂ ಹೇಳುವುದುಂಟು - 'ನಾನು ದೇವರಾಣೆಗೂ ದೇವರನ್ನು ನಂಬುವುದಿಲ್ಲ' ಹೀಗೆ ನಾಸ್ತಿಕನಿಗೂ ದೇವರು ಬೇಕಾಗುವುದು. ನಾನು

ದೇವರನ್ನು ನಂಬುವುದಿಲ್ಲ - ಎಂದು ಇನ್ನೊಬ್ಬನಿಗೆ ನಂಬಿಸಲಿಕ್ಕೆ ದೇವರಾಣೆ ಬೇಕಾಗುವುದು.

ಹೀಗೆ ಪ್ರತಿಯೊಬ್ಬರ, ಪ್ರತಿಯೊಂದು ಚಟುವಟಿಕೆಗೂ ಸಾಕ್ಷಿಯಾಗಿ ನಿಲ್ಲುವವನು ದೇವರು. ಆದ್ದರಿಂದ ದೇವರಿಗೆ 'ಪ್ರಮಾಣಂ' - ಎಂಬ ಹೆಸರು. ಭೀಷ್ಮರು, ಕೃಷ್ಣನಲ್ಲಿ ತಿಳಿಸ್ತಾರೆ - 'ನಾನು ಹತ್ತು ದಿನ ಮನಃಪೂರ್ವಕ ಹೋರಾಡಿದ್ದಕ್ಕೆ ಕೃಷ್ಣ ನೀನೇ ಪ್ರಮಾಣ'

ದುರ್ಯೋಧನ ಇನ್ನೂ ನನ್ನ ಮೇಲೆ ಸಂಶಯ ಪಡುತ್ತಿದ್ದಾನೆ. 'ಭೀಷ್ಮರು ಮನಃಪೂರ್ವಕ ಹೋರಾಡಿದ್ದಾರೋ ? - ಎಂದು. ಆದರೆ ಇದಕ್ಕೆ ಕೃಷ್ಣ ನೀನೇ 'ಪ್ರಮಾಣ' - ಎನ್ನುತ್ತಿರುವರು ಭೀಷ್ಮರು. ಹಾಗಾದರೆ ಪ್ರಮಾಣ ಶಬ್ದಕ್ಕೆ 'ಸಾಕ್ಷೀ' - ಎಂಬುದು ಅರ್ಥ. ಹೀಗೆ ಪ್ರತಿಯೊಂದಕ್ಕೂ ಸಾಕ್ಷಿಯಾಗಿ ನಿಲ್ಲುವ ಭಗವಂತ 'ಪ್ರಮಾಣ'.

**೪೩೨. ಬೀಜಮವ್ಯಯಮ್ – ಯಾವುದೇ ವಿಕಾರವಿಲ್ಲದೆ, ಕಾರಣನಾಗಿರುವವನು.**

**ವಿವರಣೆ :** ವ್ಯಂಜಯತೀತಿ ಬೀಜಮ್ - ಮಾವಿನ ಮರ ಕಾಣುವಂತೆ ಯಾವುದು ಮಾಡುವುದೋ ಅದು ಮಾವಿನ ಬೀಜ. ಮಾವಿನ ಮರವನ್ನು ಕಾಣುವಂತೆ ಮಾಡುವುದು ನೀರಲ್ಲ ; ಗೊಬ್ಬರವಲ್ಲ. ಮತ್ತೆ ಗೊರಟು. ಆದ್ದರಿಂದ ಅದೇ ಬೀಜ.

ಜಗತ್ತೆಂಬ ವೃಕ್ಷಕ್ಕೆ ಭಗವಂತ ಬೀಜ. ಜಗತ್ತು ಕಾಣುವಂತೆ ಭಗವಂತ ಮಾಡುವನು.

ಆಗ ಒಂದು ಸಂಶಯ ಬರುವುದು. ಮಾವಿನ ಗೊರಟು ತಾನೇ ಮರ ಆಯಿತು. ಗೊರಟಿನ ಹೊರಗಿನ ಭಾಗ ಕಿತ್ತು ಹೋಗಿ ಮಣ್ಣಾಯಿತು. ಒಳಗಿನ ಭಾಗ ಮರವಾಗಿ ವಿಕಾರವಾಯಿತು. ಮರ ಆದ ಮೇಲೆ ಅಗಿದರೆ ಬೇರು ಸಿಕ್ಕೀತು ವಿನಹ ಗೊರಟು ಸಿಗಲಾರದು. ಹಾಗಾದರೆ ಗೊರಟೇ ಮರವಾಗಿ ರೂಪ ತಾಳಿದ್ದು. ಅದೇ ರೀತಿಯಲ್ಲಿ ದೇವರು ಜಗತ್ತಿಗೆ ಬೀಜ ಎಂದರೆ ದೇವರೇ ಜಗತ್ತಾದದ್ದಾ? ಮಣ್ಣೇ ಮಡಿಕೆಯಾದಂತೆ, ಹತ್ತಿಯೇ ಬಟ್ಟೆಯಾದಂತೇ ದೇವರೇ ಜಗತ್ತಾಗಿರುವನೇ ? ಈ ಪ್ರಶ್ನೆಗೆ ಪರಿಹಾರವಾಗಿ ಕೂಡಲೇ ಭೀಷ್ಮರು ಅಂದರು - ಅವ್ಯಯಮ್. ನಾಶವಿಲ್ಲದೆ, ಜಗತ್ತಿಗೆ ಬೀಜನಾಗಿರುವವನು. ಗೊರಟು ನಾಶವಾಗದೆ ಮಾವಿನಮರ ಆದದ್ದಲ್ಲ. ಹಲಸಿನ ಬೀಜ ನಾಶವಾಗದೆ ಹಲಸಿನ ಮರ ಆದದ್ದಲ್ಲ. ಅದೇ ರೀತಿ ಭಗವಂತ ತಾನು ನಾಶ ಆಗಿ ಜಗತ್ತಾದದ್ದಲ್ಲ. ಗೊರಟು ತಾನೇ ಮರದ ವಿಕಾರ ಆದಂತೆ

ಭಗವಂತ ತಾನೇ ಜಗತ್ತಿನ ರೂಪ ತಾಳಿದ್ದಲ್ಲ. ಬದಲಾಗಿ ಭಗವಂತ ತಾನು ಏನೂ ವಿಕಾರ ಹೊಂದದೆ ಜಗತ್ತಿಗೆ ಕಾರಣನಾಗಿರುವನು ಎಂಬುದನ್ನು 'ಬೀಜಮವ್ಯಯಮ್' - ಎಂದು ಎರಡು ಶಬ್ದಗಳನ್ನೊಳಗೊಂಡ ನಾಮದಿಂದ ತಿಳಿಸಲಾಗಿದೆ.

ಕುಂಬಾರ ತಾನು ಪ್ರತ್ಯೇಕವಾಗಿಯೇ ಇದ್ದು ಮಡಿಕೆಗೆ ಕಾರಣನಾಗಿರುವಂತೆ ಭಗವಂತನು ತಾನು ಪ್ರತ್ಯೇಕವಾಗಿಯೇ ಇದ್ದು ಜಗತ್ತು ತೋರುವುದಕ್ಕೆ ಕಾರಣನಾಗಿದ್ದಾನೆ.

ಮಹಾಭಾರತ ಯುದ್ಧದ ಹದಿನೆಂಟು ಅಕ್ಷೌಹಿಣೀ ಸೇನೆಗೂ ಕಾರಣನಾಗಿರುವವನು ಕೃಷ್ಣ. ಆದರೆ ಆ ಬಗ್ಗೆ ಮುಖದಲ್ಲಿ ಏನೂ ವಿಕಾರ ಇಲ್ಲ. ತನ್ನ ನೇತೃತ್ವದಲ್ಲಿ ಇಷ್ಟೊಂದು ದೊಡ್ಡ ಕಾರ್ಯ ನಡೆಯಿತೆಂದು ಹಿಗ್ಗಾಗಲೀ, ನನ್ನಿಂದಾಗಿ ಇಷ್ಟೊಂದು ಮಂದಿ ಸಾಯುವಂತಾದರೆಂದು ಕುಗ್ಗಾಗಲೀ - ಕೃಷ್ಣನ ಮುಖದಲ್ಲಿ ಏನೂ ಕಾಣಿಸುವುದಿಲ್ಲ. ಇದನ್ನು ಭೀಷ್ಮರು 'ಬೀಜಮವ್ಯಯಮ್' ನಾಮದಿಂದ ಅನುಸಂಧಾನ ಮಾಡುತ್ತಿದ್ದಾರೆ.

ನಾವು ಕೂಡ ಕೆಲವೊಮ್ಮೆ ಒಳ್ಳೆಯ ಕಾರ್ಯಕ್ಕೆ ಮತ್ತೆ ಕೆಲವೊಮ್ಮೆ ಕೆಟ್ಟ ಕಾರ್ಯಕ್ಕೆ ಕಾರಣರಾಗುವುದುಂಟು. ಆಗ ಆ ಎರಡು ಸಂದರ್ಭಗಳಲ್ಲೂ ಹಿಗ್ಗಿನ ಅಥವಾ ಕುಗ್ಗಿನ ವಿಕಾರಗಳಿಗೊಳಗಾಗದೆ ಇರುವಂತಾಗಬೇಕೆಂದರೆ ದೇವರನ್ನು 'ಬೀಜಮವ್ಯಯಮ್' - ಎಂದು ಉಪಾಸನೆ ಮಾಡಬೇಕು.

**೪೩೩. ಅರ್ಥಃ – ಪ್ರತಿಯೊಬ್ಬರಿಂದಲೂ ಅಪೇಕ್ಷಿಸಲ್ಪಡುವವನು.**

**ವಿವರಣೆ :** ಅರ್ಥ್ಯತೇ ಇತಿ ಅರ್ಥಃ, 'ಅರ್ಥ್ಯತೇ' ಶಬ್ದದ ಹಿಂದೆ 'ಪ್ರ' - ಎಂಬ ವಿಸರ್ಗವನ್ನು ಹಚ್ಚಿಕಂಡರೆ ನಮಗೆ ಸ್ಪಷ್ಟವಾಗುವುದು - ಪ್ರಾರ್ಥ್ಯತೇ - ಎಲ್ಲರಿಂದಲೂ ಅಪೇಕ್ಷಿಸಲ್ಪಡುವವನು. ಇವನೇ ಅರ್ಥ. ಯಾರಿಗೆ ಬೇಡ ದೇವರು ? ಕಲಿ ಪುರುಷ ದುರ್ಯೋಧನನೇ ಯೋಚಿಸಿದ್ದನಂತೆ ಕೃಷ್ಣ ಊಟಕ್ಕೆ ನಮ್ಮ ಮನೆಗೆ ಬಂದಿದ್ದರೆ ಆಗುತ್ತಿತ್ತು - ಎಂದು. ದುರ್ಯೋಧನ ಕೃಷ್ಣನ ತಂಗಿ ಸುಭದ್ರೆಯನ್ನು ಕೇಳಿದ್ದೇ ಸುಭದ್ರೆಯನ್ನು ತಾನು ಮದುವೆಯಾದರೆ ಕೃಷ್ಣಬಲರಾಮರು ತನ್ನ ಕಡೆಗೆ ಬರುವರು ಎಂದು. ಹೀಗೆ ದುಷ್ಟರಲ್ಲಿ ಪ್ರಚಂಡನಾದ ಕಲಿಗೂ ಕೃಷ್ಣ ಬೇಕು ಎಂದಾದರೆ ನಮ್ಮ ನಿಮ್ಮಂತಹವರಿಗೆ ಕೃಷ್ಣ ಬೇಡವಾ ? ಆದುದರಿಂದ ಅರ್ಥ್ಯತೇ ಇತಿ ಅರ್ಥಃ ಎಲ್ಲರಿಂದಲೂ ಅಪೇಕ್ಷಿಸಲ್ಪಡುವವನು ಭಗವಂತ.

ನಾಸ್ತಿಕರಿಗೂ ದೇವರು ಬೇಕು ಯಾಕೆ ? ಇಲ್ಲ ಎಂದು ಹೇಳಲಿಕ್ಕೆ. ಅವರು 'ದೇವರು' ಎಂದು ಇಟ್ಟುಕೊಳ್ಳದಿದ್ದರೆ ಮತ್ತೇನನ್ನು ಇಲ್ಲ ಎನ್ನುವರು ? ಬರೇ

'ಇಲ್ಲ' ಎನ್ನುವಂತಿಲ್ಲ ತಾನೇ ? ಮತ್ತೆ 'ದೇವರು ಇಲ್ಲ ' - ಎನ್ನಬೇಕು. ಆಗ ಅವರಲ್ಲೂ 'ದೇವರು' ಬಂದ.

ಹೀಗೆ ಪ್ರತಿಯೊಬ್ಬರಿಗೂ ಕೂಡಾ ತಮ್ಮ ಜೀವನದಲ್ಲಿ ಬೇಕಾಗುವನೋ ಅವನೇ ಅರ್ಥ. ಅವನೇ ದೇವರು.

ನಾವು ಹತ್ತು ಜನರಿಂದ ಅಪೇಕ್ಷಿಸಲ್ಪಡುವಂತೆ ಇರಬೇಕು. ಬದಲಾಗಿ, 'ಅವರೋ ಬೇಡ' - ಎನ್ನುವ ಸ್ಥಿತಿ ಇರಬಾರದು. ಅಂತಹವರು ಮನೆಗೆ ಬರಬೇಕು ಎಂದು ಬಯಸುವಂತಿರಬೇಕು. ಹೊರತು ಮನೆಗೆ ಬಂದಾಗ ಬಾಗಿಲು ಹಾಕುವಂತಾಗಬಾರದು, ಆಗಲೇ ಜೀವನಕ್ಕೊಂದು ಅರ್ಥ. ಇದು ಭಗವಂತನನ್ನು 'ಅರ್ಥ' - ಎಂದು ಉಪಾಸನೆ ನಡೆಸುವ ಫಲವಾಗಿ ದೊರಕಬಲ್ಲದು.

**೪೩೪. ಅನರ್ಥಃ – ಸ್ವಪರಯೋಜನವಿಲ್ಲದೆ ಚಟುವಟಿಕೆಗಳನ್ನು ನಡೆಸುವವನು.**

**ವಿವರಣೆ :** 'ಅರ್ಥ' - ಎಂಬ ನಾಮದಿಂದ ಸೂಚಿತವಾದಂತೆ ಎಲ್ಲರಿಗೂ ಬೇಕಾಗುವಂತೆ ಬದುಕದಿದ್ದರೆ ಅನರ್ಥವೇ ಸಂಭವಿಸುವುದೆಂದು ಧ್ವನಿಸುವುದಕ್ಕಾಗಿಯೇ ಎಂಬಂತೆ 'ಅರ್ಥೋಽನರ್ಥೋ.....' ಎಂದು ಎರಡು ನಾಮಗಳು ಒಟ್ಟೊಟ್ಟಿಗೇ ಪಠಿತವಾಗಿವೆ.

'ಅರ್ಥ' ನಾಮ ತಿಳಿಸಿದಂತೆ ಭಗವಂತನು ಎಲ್ಲರಿಗೂ ಬೇಕಾಗುವಂತೆ ಇರುವನು ತಾನೇ ? ಇದರಿಂದ ಅವನಿಗೆ ಏನಾದರೂ ಪ್ರಯೋಜನ ಇದೆಯೇ ? ಇಲ್ಲ - 'ಅನರ್ಥಃ'ಅದರಿಂದ ಪ್ರಯೋಜನ ನಮಗೆಯೇ ಹೊರತು ಅವನಿಗೆ ಯಾವುದೇ ಪ್ರಯೋಜನ ಇಲ್ಲ.

ದೇವರು ಜಗತ್ತಿನ ಸೃಷ್ಟಿ ಮಾಡುವನು. ಇದರಿಂದ ಅವನಿಗೆ ಏನಾದರೂ ಪ್ರಯೋಜನ ಇದೆಯೋ ? ಇಲ್ಲ.

ಬಾಲಲೀಲೆಗಳನ್ನು ತೋರಿಸಿದ. ಇದರಿಂದ ಭಗವಂತನಿಗೆ ಏನಾದರೂ ಲಾಭ ಇದೆಯೋ ? ಇಲ್ಲ.

ಎಲ್ಲರಿಗೂ ಬೇಕಾದಂತೆ ನಡೆದುಕೊಳ್ಳುವನು. ಇದರಿಂದ ಅವನಿಗೆ ಏನಾದರೂ ಪ್ರಯೋಜನ ಇದೆಯೋ ? ಇಲ್ಲ.

ಹೀಗೆ ತನ್ನ ಪ್ರತಿಯೊಂದು ಚಟುವಟಿಕೆಯನ್ನೂ ಸ್ವಪ್ರಯೋಜನರಹಿತವಾಗಿ ಯಾರು ಮಾಡುವನೋ ಅವನೇ 'ಅನರ್ಥ' - ನ ವಿದ್ಯತೇ ಅರ್ಥಃ ಸ್ವಪ್ರಯೋಜನಂ ಯಸ್ಯ ಸಃ ಅನರ್ಥಃ |

ಇದು ನಮ್ಮ ಜೀವನದಲ್ಲಿ ಬರಬೇಕು.

ನಾವು ಯಾಕೆ ಇನ್ನೊಬ್ಬರಿಗೆ ಉಪಕಾರ ಮಾಡ್ತೇವೆ ? ಒಂದು ದಿನ ಅವನೂ ನಮಗೆ ಉಪಕಾರ ಮಾಡಬೇಕು. ನಾವು ಯಾಕೆ ಇನ್ನೊಬ್ಬರಿಗೆ ಉಡುಗೊರೆ ಕೊಡ್ತೇವೆ? ನಮ್ಮ ಮನೆಯಲ್ಲಿ ಕಾರ್ಯಕ್ರಮ ಆದಾಗ ಅವನೂ ನಮಗೆ ಉಡುಗೊರೆ ಕೊಡಬೇಕು. ನಾವು ಯಾಕೆ ಆಶೀರ್ವಾದವೇ ಉಡುಗೊರೆ ಎಂದು ಹಾಕ್ತೇವೆ ? ನೀನೂ ಕೊಡಬೇಡ. ನಾನೂ ನಿನಗೆ ಕೊಡುವುದಿಲ್ಲ - ಎಂದು ತಿಳಿಸಲಿಕ್ಕಷ್ಟೇ.

ಹೀಗೆ ಏನಾದರೂ ಪ್ರಯೋಜನವನ್ನು ಬಯಸಿಯೇ ಮಾಡುವ ಪ್ರವೃತ್ತಿಯನ್ನು ನಾವು ಬದಲಾಯಿಸಿಕೊಳ್ಳಬೇಕು. ಆ ನಿಟ್ಟಿನಲ್ಲಿ ಹೃದಯವೈಶಾಲ್ಯ ಇರಬೇಕು.

ದಾರಿಯಲ್ಲಿ ಒಬ್ಬ ಬಿದ್ದಿದ್ದಾನೆ. ಕರೆದುಕೊಂಡು ಹೋಗೋಣ. ಆದರೆ ನಮ್ಮಲ್ಲಿ ಚಾಲ್ತಿಯಲ್ಲಿ ಬಂದಿದೆ - ಯಾಕೆ ಅವನನ್ನು ಕರೆದೊಯ್ಯುತ್ತೀರಿ ? ಅಂದರೆ ನಮ್ಮ ಜೀವನದಲ್ಲೂ ಹೀಗೆ ಪ್ರಸಂಗ ಬಂದಾಗ ದೇವರು ನಮ್ಮಲ್ಲಿಗೂ ಯಾರನ್ನಾದರೂ ಕಳುಹಿಸಿಕೊಟ್ಟಾನು. ಆದ್ದರಿಂದ ಇವರಿಗೆ ಸಹಾಯ ಮಾಡ್ತೇನೆ. ಇರಲಿ ಆ ಭಾವನೆ ತಪ್ಪಲ್ಲ. ಆದರೆ ಅದಕ್ಕೆ ಎರಡನೇ ಸ್ಥಾನವಷ್ಟೇ. ಸಹಜವಾಗಿ ಕರ್ತವ್ಯ ಎಂಬ ದೃಷ್ಟಿಯಿಂದ ಉಪಕಾರ ಮಾಡಬೇಕು. ಲಾಭದ ದೃಷ್ಟಿಯಿಟ್ಟುಕೊಂಡು ಇನ್ನೊಬ್ಬರಿಗೆ ಸಹಾಯ ಮಾಡುವಂತಾಗಬಾರದು. ನನ್ನ ಕರ್ತವ್ಯ ಎಂಬ ದೃಷ್ಟಿಯಿಂದ ಉಪಕಾರ ಮಾಡಬೇಕು. ಹೊರತು ನನಗೇನಾದರೂ ಲಾಭ ಇದೆ ಎಂಬ ಭಾವನೆಯಿಂದ ಉಪಕಾರ ಮಾಡಬಾರದು.

ಈ ಭಾವನೆ, ಬುದ್ಧಿ ಬರುವುದು ಭಗವಂತನನ್ನು 'ಅನರ್ಥ' - ಎಂದು ಉಪಾಸನೆ ಮಾಡುವುದರಿಂದ.

ಪ್ರಯೋಜವಿಲ್ಲದೆ ಕೆಲಸ ಮಾಡುವ ಸಂದರ್ಭ ಎಲ್ಲಾದರೂ ಇದೆಯೋ ಇದೆ. ಬ್ರಹ್ಮಸೂತ್ರದಲ್ಲಿ ವೇದವ್ಯಾಸರು ದೃಷ್ಟಾಂತ ತೋರಿಸಿದ್ದಾರೆ.

ಶ್ರೀವ್ಯಾಸರಾಜರು ಹೀಗೊಂದು ದೃಷ್ಟಾಂತ ಕೊಡುವರು - ಉಪನ್ಯಾಸಾದಿಗಳನ್ನು ಮಾಡುವಾಗ 'ಕೈಕಾಟ' ನಡೆಸುವುದರಿಂದ ಏನೂ ಪ್ರಯೋಜನವಿಲ್ಲ. ಆದರೂ ಅದನ್ನು ಹೇಗೆ ನಡೆಸಲಾಗುವುದೋ ಹಾಗೆ ಭಗವಂತನು ಸ್ವಪ್ರಯೋಜನವಿಲ್ಲದಿದ್ದರೂ ಜಗತ್ತಿನ ಸೃಷ್ಟ್ಯಾದಿಗಳನ್ನು ನಡೆಸುವನು. **'ಲೋಕವತ್ತು ಲೀಲಾಕೈವಲ್ಯಮ್'** - ಎಂಬ ಬ್ರಹ್ಮಸೂತ್ರದಲ್ಲಿ ಇದನ್ನೇ

ಸಿದ್ಧಾಂತಿಸಲಾಗಿದೆ. ಇದನ್ನೇ 'ಅನರ್ಥ' ನಾಮದಲ್ಲಿ ಸ್ತುತಿಸಲಾಗಿದೆ.

**೪೩೫. ಮಹಾಕೋಶಃ – ಹೊರಗೆ ತೆಗೆದಷ್ಟು ತುಂಬಿಕೊಂಡೇ ಇರುವ ದೊಡ್ಡ ಬೊಕ್ಕಸ.**

ವಿವರಣೆ : ಒಬ್ಬರು ಹೊಸ ಹೊಸ ಅರ್ಥಗಳನ್ನು,ಪ್ರಮೇಯಗಳನ್ನು ತಿಳಿಸುತ್ತಿದ್ದರೆ ಅವರನ್ನು 'ನಡೆದಾಡುವ ಕೋಶ' ಎಂದು ಕರೆಯುವೆವು. ಆದುದರಿಂದ ಎಷ್ಟೆಷ್ಟು ಹೊರಗೆ ತೆಗೆದರೂ ಮತ್ತೆ ಮತ್ತೆ ಹೊರಗೆ ಬರುತ್ತಿರುವುದೋ ಅದನ್ನು ಕೋಶ ಎಂದು ಕರೆಯಲಾಗುವುದು. ಹಿಂದಿನ ರಾಜರ ಬೊಕ್ಕಸ, ಕೋಶ ಯಾವಾಗಲೂ ತುಂಬಿಕೊಂಡೇ ಇತ್ತು. ಹೊರಗೆ ತೆಗೆದಷ್ಟು ತುಂಬಿಕೊಂಡಿದ್ದರೆ ಅದು ಕೋಶ. 'ಅಮರಕೋಶ' - ಒಂದು ಅರ್ಥಕ್ಕೆ ಅನೇಕ ಶಬ್ದಗಳನ್ನು ಕೊಡುವುದು. ಅದೇ ರೀತಿಯಲ್ಲಿ ಭಗವಂತ ಭಾರೀ ದೊಡ್ಡ ಕೋಶ. ಯಾವ ವಿಷಯವನ್ನೇ ಅವನಲ್ಲಿ ವಿಚಾರಿಸಿದರೂ ಆ ಬಗ್ಗೆ ಭಾರೀ ತಿಳಿಸುವನು. ನಾವೇ ಸಾಕು ಎನ್ನುವಷ್ಟೂ ಹೇಳುವನು. ಆದ್ದರಿಂದ ಅವನು ಮಹಾಕೋಶ.

ದೇವರನ್ನು 'ಮಹಾಕೋಶ'- ಎಂದು ಉಪಾಸನೆ ಮಾಡಿದೆವೆಂದರೆ ನಮಗೆ ತುಂಬ ತಿಳುವಳಿಕೆ ಉಂಟಾಗುವುದು. ಒಂದು ವಸ್ತುವಿನ ಬಗ್ಗೆ ತುಂಬ ಶಬ್ದಗಳು ಗೊತ್ತಾಗುವವು. ಇಲ್ಲದಿದ್ದರೆ ಉಪನ್ಯಾಸವಾಗುವಾಗ ಮಧ್ಯದಲ್ಲಿ ಕೆಮ್ಮು ಬರುವುದು. ಅಷ್ಟರತನಕ ಅವನಿಗೆ ಕೆಮ್ಮು ಇರುವುದಿಲ್ಲ. ಉಪನ್ಯಾಸ ಪ್ರಾರಂಭವಾಯಿತೆಂದರೆ ಕೆಮ್ಮು ಶುರುವಾಗುವುದು. ಯಾಕೆ ? ಶಬ್ದದಾರಿದ್ರ್ಯದಿಂದಾಗಿ ಕೆಮ್ಮು. ಶಬ್ದದ ದಾರಿದ್ರ್ಯಕ್ಕೂ ಕೆಮ್ಮಿನ ಸಂಪತ್ತಿಗೂ ಸಂಬಂಧ. ಭಗವಂತನನ್ನು 'ಮಹಾಕೋಶಃ' - ಎಂದು ಉಪಾಸನೆ ಮಾಡಿದೆವೆಂದರೆ ಶಬ್ದಗಳು ನಮ್ಮ ಬಾಯಿಯಿಂದ ನಿರರ್ಗಳವಾಗಿ ಹೊರಹೊಮ್ಮುವವು.

**೪೩೬. ಮಹಾಭೋಗಃ – ನಿಷಿದ್ಧವಲ್ಲದ, ಶಾಸ್ತ್ರದಲ್ಲಿ ವಿಹಿತಗಳಾದ ಸುಖಸವಲತ್ತುಗಳನ್ನು ತುಂಬ ಹೊಂದಿರುವವನು.**

ವಿವರಣೆ: ಭೋಗ ಎಂದರೆ ಸುಖಸೌಲಭ್ಯ. ಕೃಷ್ಣನಿಗೆ ಸುಖಸೌಲಭ್ಯ ಎಷ್ಟಿತ್ತೆಂಬುದು ಸ್ಪಷ್ಟ ತಾನೇ ? ಕೃಷ್ಣ ದುರ್ಯೋಧನನಿಂದ ಪ್ರಾರಂಭಿಸಿ ಪ್ರತಿಯೊಬ್ಬರನ್ನೂ ಕೂಗಿಸಿದ್ದೇ ವಿನಹ ಎಂದೂ ತಾನು ಕೂಗಿದ್ದಿಲ್ಲ. ಅಷ್ಟೂ ಸುಖಸವಲತ್ತನ್ನು ಪಡೆದುಕೊಂಡಿದ್ದವನು ಅವನು.

ನಾವು ಕೂಡಾ ಅನಿಷಿದ್ಧವಾದ ಸುಖ ಸವಲತ್ತನ್ನು ಪಡೆಯಬೇಕು.

ನೆಮ್ಮದಿಯಿಂದ ದೇವರನ್ನು ಸ್ತುತಿಸುವಂತಾಗಬೇಕು. ಅದಕ್ಕಾಗಿ ದೇವರನ್ನು 'ಮಹಾಭೋಗಃ' ಎಂದು ಉಪಾಸಿಸೋಣ.

**೪೩೭. ಮಹಾಧನಃ – ಭಾರೀ ಸಂಪತ್ತನ್ನು ಹೊಂದಿರುವವನು.**

**ವಿವರಣೆ :** ಏನು ಸಂಪತ್ತು ? ಪೂರ್ಣಜ್ಞಾನ, ಪೂರ್ಣಐಶ್ವರ್ಯ, ಪೂರ್ಣಪ್ರಭಾ, ಪೂರ್ಣಆನಂದ, ಪೂರ್ಣತೇಜಸ್ಸು, ಪೂರ್ಣಶಕ್ತಿ ಇವೇ ಆರು ಸಂಪತ್ತುಗಳು. ಪ್ರತಿನಿತ್ಯ ಕೃಷ್ಣ ಮಂತ್ರವನ್ನು ಜಪಿಸುವವರಿಗೆ ಗೊತ್ತಿರುವುದು. ಪ್ರಭೆ ಮತ್ತು ತೇಜಸ್ಸುಗಳಲ್ಲಿ ಏನು ವ್ಯತ್ಯಾಸ ಎಂದು ಸಂದೇಹ ಬರಬಹುದು. ಸೂರ್ಯನದ್ದು ತೇಜಸ್ಸು ; ಚಂದ್ರನದ್ದು ಪ್ರಭೆ. ಇಬ್ಬರೂ ಬೆಳಕನ್ನು ನೀಡುವವರು. ಸೂರ್ಯನ ಬೆಳಕು ತೀಕ್ಷ್ಣ. ಚಂದ್ರನ ಬೆಳಕು ಶಾಂತ. ಸೂರ್ಯನ ಬೆಳಕಿಗೆ ತೇಜಸ್ಸು ಎಂದು ಹೆಸರಾದರೆ, ಚಂದ್ರನ ಬೆಳಕಿಗೆ ಪ್ರಭೆ ಎಂದು ಹೆಸರು. ಇಂತಹ ಪೂರ್ಣಜ್ಞಾನವೇ ಮುಂತಾದ ಮಹಾಸಂಪತ್ತುಗಳನ್ನು ಹೊಂದಿರುವುದರಿಂದಲೇ ಭಗವಂತ ಮಹಾಧನ.

**ಅನಿರ್ವಿಣ್ಣಃ ಸ್ಥವಿಷ್ಠೋ ಭೂರ್ಧರ್ಮಯೂಪೋ ಮಹಾಮುಖಃ |**
**ನಕ್ಷತ್ರನೇಮಿರ್ನಕ್ಷತ್ರೀ ಕ್ಷಮಃ ಕ್ಷಾಮಃ ಸಮೀಹನಃ ||೪೭||**

**೪೩೮. ಅನಿರ್ವಿಣ್ಣಃ – ಮಾಡಿದ ಕೆಲಸವನ್ನೇ ಮತ್ತೆ ಮತ್ತೆ ಮಾಡುವುದರಲ್ಲಿ ವೈರಾಗ್ಯ ಹೊದದವನು.**

**ವಿವರಣೆ :** ನಿರ್ವೇದ ಎಂದರೆ ವೈರಾಗ್ಯ ; ಜುಗುಪ್ಸೆ. ಅನಿರ್ವಿಣ್ಣ ಎಂದರೆ ಜಿಗುಪ್ಸೆ ಇಲ್ಲದವನು ; ವೈರಾಗ್ಯ ಇಲ್ಲದವನು.

ಯಾವುದರಲ್ಲಿ ? ಮಾಡಿದ ಕೆಲಸವನ್ನೇ ಮಾಡುವುದರಲ್ಲಿ ಸ್ವಲ್ಪವೂ ಜುಗುಪ್ಸೆ ಇಲ್ಲ, ವೈರಾಗ್ಯ ಇಲ್ಲ. 'ಸಾಕು' ಎಂಬುದೇ ಇಲ್ಲ. 'ನಿತ್ಯ ಉಪನ್ಯಾಸಕ್ಕೆ ಬರುವಾಗ - ಅವರೇ ಮಾತನಾಡುವವರು, ಹೊಸ ಮುಖ ಇಲ್ಲ. ಸಾಕು, ಎರಡು ದಿನ ಬಿಟ್ಟು ಹೋದರಾಯಿತು' ಒಂದು ವೈರಾಗ್ಯ ಬರುವುದುಂಟು.

ಊಟದಲ್ಲಿ ಸಾರು, ಹುಳಿ, ಚಟ್ನಿ ಇತ್ಯಾದಿಗಳನ್ನು ಪ್ರತಿನಿತ್ಯ ಮಾಡುತ್ತಿದ್ದರೆ ಅವುಗಳ ವಿಷಯದಲ್ಲಿ ವೈರಾಗ್ಯ ಬರುವುದು. ಆದರೆ ಅನ್ನ ಪ್ರತಿನಿತ್ಯ ಇದ್ದರೂ ಅದರ ವಿಷಯದಲ್ಲಿ ವೈರಾಗ್ಯ ಇಲ್ಲ. ಅದರಂತೆ ಇತರ ದೇವತೆಗಳನ್ನು ಪ್ರತಿನಿತ್ಯ ಸ್ತುತಿಸುತ್ತಿದ್ದರೆ ವೈರಾಗ್ಯ ಬರಬಹುದು. ಆದರೆ ದೇವರನ್ನು ಪ್ರತಿನಿತ್ಯ ಸ್ತುತಿಸುತ್ತಿದ್ದರೂ ವೈರಾಗ್ಯ ಉಂಟಾಗುವುದಿಲ್ಲ ; ಉಂಟಾಗಬಾರದು.

ಹೆಂಡತಿಗೆ ಗಂಡನ ಮುಖವನ್ನೇ ಪ್ರತಿನಿತ್ಯ ನೋಡಿ ನೋಡಿ ವೈರಾಗ್ಯ ಬರಬಹುದು. ಆದರೆ ಲಕ್ಷ್ಮೀದೇವಿಗೆ ಪ್ರತಿನಿತ್ಯ ಪರಮಾತ್ಮನ ಮುಖವನ್ನೇ ನೋಡುತ್ತಿದ್ದರೂ ಅದರಲ್ಲಿ ವೈರಾಗ್ಯ ಬರಲಾರದು, ಯಾಕೆಂದರೆ '..... ಬಗೆಬಗೆಯ ನೂತನವ ಕಾಣುತ .....' ಎಂದಿರುವಂತೆ ಪ್ರತಿನಿತ್ಯ ಲಕ್ಷ್ಮೀದೇವಿಗೆ ನಾರಾಯಣನ ಮುಖ ನೂತನವಾಗಿಯೇ ಕಾಣಿಸುವುದು. ಆದುದರಿಂದಲೇ ಸತಿಪತಿಯರಲ್ಲಿ ಲಕ್ಷ್ಮೀನಾರಾಯಣರ ಅನುಸಂಧಾನ ಮಾಡಿಕೊಂಡಾಗ ಪರಸ್ಪರವಾಗಿ ನಿರ್ವೇದಕ್ಕೊಳಗಾಗುವ ಪ್ರಸಂಗ ಬರಲಾರದು.

ಹೀಗೆ ಮಾಡಿದ ಕೆಲಸವನ್ನೇ ಮತ್ತೆ ಮತ್ತೆ ಮಾಡಿದಲ್ಲಿ ಆ ಬಗ್ಗೆ ವೈರಾಗ್ಯ ಬರುವುದು ಸಹಜವಾದರೂ ದೇವರಿಗೆ ಮಾತ್ರ ನಿರ್ವೇದ ಎಂಬುದೇ ಇಲ್ಲ. ಕಲ್ಪಕಲ್ಪಗಳಲ್ಲಿ ಸೃಷ್ಟಿ, ಸ್ಥಿತಿ, ಸಂಹಾರಾದಿಗಳನ್ನು ಮಾಡುತ್ತ ಬರುತ್ತಿದ್ದರೂ ದೇವರಿಗೆ ಈ ತನ್ನ ಚಟುವಟಿಕೆಗಳಲ್ಲಿ ಎಂದೂ ನಿರ್ವೇದ ಇಲ್ಲ. ಕೃಷ್ಣಾವತಾರದಲ್ಲಿ ಬಾಲ್ಯದಿಂದ ಪೂತನಾ, ಶಕಟಾಸುರನೇ ಮುಂತಾದ ದುಷ್ಟರನ್ನು ಮತ್ತೆ ಮತ್ತೆ ಸಂಹರಿಸುತ್ತಿದ್ದರೂ 'ಕೃಷ್ಣ ಇನ್ನು ಸಾಕಪ್ಪ' - ಎಂದೇನೂ ನಿರ್ವೇದಕ್ಕೆ ಒಳಗಾದದ್ದಿಲ್ಲ. ಒಂದು ವೇಳೆ ಕೃಷ್ಣ ಹಾಗೆ ನಿರ್ವೇದಕ್ಕೆ ಒಳಗಾದರೆ ನಾವು ಸತ್ತೆವು!

ಭಗವಂತನ ಈ 'ಅನಿರ್ವಿಣ್ಣ' ನಾಮದ ಉಪಾಸನೆಯಿಂದಾಗಿ ಭಗವಂತನು ನಮ್ಮ ವರ್ಣಾಶ್ರಮಗಳಿಗನುಗುಣವಾಗಿ ವಹಿಸಿಕೊಟ್ಟ ಕರ್ತವ್ಯವನ್ನು ಮತ್ತೆ ಮತ್ತೆ ನಿರ್ವಹಿಸುವಲ್ಲಿ ನಮಗೆ ಎಂದೂ ನಿರ್ವೇದ ಬರಲಾರದು. ಹಾಗೆಯೇ ಬಾಲ್ಯಾದಾರಭ್ಯ ಶ್ರವಣ ಮನನ ನಿದಿಧ್ಯಾಸನಗಳನ್ನು ಮತ್ತೆ ಮತ್ತೆ ನಡೆಸುತ್ತಿದ್ದರೂ 'ಸಾಕಪ್ಪ ಇನ್ನು!' - ಎಂಬ ವೈರಾಗ್ಯ ಬರಲಾರದು.

**೪೩೯. ಸ್ಥವಿಷ್ಠಃ – ಅತ್ಯಂತ ಸ್ಥೂಲನಾಗಿರುವವನು.**

**ವಿವರಣೆ : 'ಅತಿಶಯೇನ ಸ್ಥೂಲಃ'** ಅತ್ಯಂತ ದಪ್ಪನಾಗಿರುವವನು. ತಿಂದು ಕೊಬ್ಬಿ ದಪ್ಪವಾಗಿದ್ದರೆ, ಅಂತಹ ದಪ್ಪವಾಗುವಿಕೆ ದೋಷ. ಆ ಬಗೆಯ ಸ್ಥೌಲ್ಯ, ಅಣುತ್ವ ಭಗವಂತನಲ್ಲಿ ಇಲ್ಲ ಎಂದು ಉಪನಿಷತ್ತು **'......... ಅಸ್ಥೂಲೋ ಅನಣುಃ....'** - ಎಂದು ಸಾರಿದೆ. ಜ್ಞಾನಾನಂದಾತ್ಮಕವಾದ ಭಗವಂತನ ಸ್ಥೌಲ್ಯವೂ ಸುಂದರವಾಗಿರುವುದರಿಂದ ಅಂತಹ ಸ್ಥೌಲ್ಯವನ್ನು ವಿಶೇಷವಾಗಿ ಪಡೆದುಕೊಂಡಿರುವವನೆಂದು 'ಸ್ಥವಿಷ್ಠಃ' - ನಾಮ ಪ್ರತಿಪಾದಿಸುತ್ತಿದೆ.

**೪೪೦. ಭೂಃ – ಇರಬೇಕಾದ ರೀತಿಯಲ್ಲಿ ಇದ್ದಾನೆ.**

**ವಿವರಣೆ :** ಭವತೀತಿ ಭೂಃ, - 'ಇದ್ದಾನೆ'. ಇದ್ದಾನೆ ಶಬ್ದಕ್ಕೆ ಚೆನ್ನಾಗಿ ಇದ್ದಾನೆ

ಎಂದೇ ಅರ್ಥ. ಮನುಷ್ಯನಾಗಿ ಹುಟ್ಟಿದ ಮೇಲೆ ಹೇಗಿರಬೇಕೋ ಹಾಗೆ ಇರಬೇಕಾದರೆ ಭಗವಂತನನ್ನು 'ಭೂಃ' - ಎಂದು ಉಪಾಸನೆ ಮಾಡಬೇಕು. ನಮಗೆ ಕೆಲವು ಕರ್ತವ್ಯಗಳು, ಹೊಣೆಗಾರಿಕೆ ಇವೆ. ಆ ಕರ್ತವ್ಯಗಳನ್ನು ಪಾಲಿಸುತ್ತ ಹೊಣೆಗಾರಿಕೆಗಳನ್ನು ನಿರ್ವಹಿಸುತ್ತ ಇರಬೇಕೆಂದರೆ ಭಗವಂತನನ್ನು 'ಭೂಃ' - ಎಂದು ಉಪಾಸನೆ ನಡೆಸಬೇಕು.

**೪೪೧. ಧರ್ಮಯೂಪಃ – ಧರ್ಮಕ್ಕೆ ಕಂಭದಂತೆ ಆಧಾರನಾಗಿರುವವನು.**

**ವಿವರಣೆ :** ಯಜ್ಞದಲ್ಲಿ ಪಶುವನ್ನು ಕಟ್ಟಲಿಕ್ಕೆ ಇರುವ ಕಂಭಕ್ಕೆ 'ಯೂಪ' - ಎಂಬ ಹೆಸರು. ದೇವರು ಧರ್ಮಸ್ತಂಭನಾದುದರಿಂದ ಧರ್ಮಯೂಪ.

ಭೀಷ್ಮರು ಸ್ತುತಿಸುವರು - ಕೃಷ್ಣ ! ನೀನು ಧರ್ಮಯೂಪ. ಆ ಧರ್ಮಯೂಪಕ್ಕೆ ಕಟ್ಟಿದ ಹಗ್ಗದಿಂದ ನಮ್ಮ ಕೊರಳನ್ನು ಬಂಧಿಸಿರುವುದರಿಂದ ನಾವು ಎಷ್ಟೇ ಹಾರಾಡಿದರೂ ಆ ಧರ್ಮಯೂಪದ ಸುತ್ತ ಸುತ್ತುತ್ತಿರುವೆಯೇ ಹೊರತು ಧರ್ಮಪಥವನ್ನು ಬಿಟ್ಟು ಸಂಚರಿಸುವುದಿಲ್ಲ. ಭೀಷ್ಮರು ಎಂಟುನೂರು ವರ್ಷಗಳ ತಮ್ಮ ಜೀವನಾವಧಿಯಲ್ಲಿ ಯುದ್ಧ ಮಾಡಿದ್ದಿದೆ ; ಪ್ರತಿಜ್ಞೆ ಮಾಡಿದ್ದಿದೆ ...... ಹೀಗೆ ಏನೇನನ್ನು ನಡೆಸಿದ್ದರೂ ಅವೆಲ್ಲ ಧರ್ಮದ ಪಥದಲ್ಲೇ ನಡೆದಿದ್ದವು.

ಇತ್ತೀಚೆಗೆ ಲೌಕಿಕ ಸಭೆಗಳಲ್ಲೂ ಯಾವುದಾದರೊಬ್ಬ ಸ್ವಾಮಿಗಳನ್ನು ಕರೆದು ಧರ್ಮಪೀಠಕ್ಕೆ ಪ್ರವೇಶವನ್ನು ಕಲ್ಪಿಸಲಾಗುತ್ತಿದೆ. ಆದರೆ ಸ್ವಾಮಿಗಳ ಆಸನವನ್ನು ಮೂಲೆಯಲ್ಲಿ ಹಾಕಿ, ರಾಜಕೀಯ ಪುಢಾರಿಗಳನ್ನು ವೇದಿಕೆಯ ಮಧ್ಯದಲ್ಲಿ ಕುಳ್ಳಿರಿಸಲಾಗುವುದು. ಅಂದರೆ 'ಧರ್ಮಯೂಪ'ವಾಗಿ ಸಭೆ ನಡೆಯುವುದಿಲ್ಲ.

ನಮ್ಮ ಬದುಕಿನಲ್ಲಿ ಹೀಗಾಗಬಾರದು. ಧರ್ಮಯೂಪನಾದ ದೇವರಿಗೆ ಕೇಂದ್ರ ಸ್ಥಾನ ದೊರಕಬೇಕು. ಅಂತಹ 'ಧರ್ಮಯೂಪ'ನ ಸುತ್ತ ನಮ್ಮ ಚಟುವಟಿಕೆಗಳು ನಡೆಯುವಂತಾಗಬೇಕು.

**೪೪೨. ಮಹಾಮಖಃ – ಯಜ್ಞಗಳಿಗೆ ಮಹತ್ತ್ವ ಸಿದ್ಧಿಸುವಂತೆ ಮಾಡುವವನು.**

**ವಿವರಣೆ :** ಮಖ ಅಂದರೆ ಯಜ್ಞ. ಯಜ್ಞಗಳು ಬಹು ವಿಧಗಳಾಗಿವೆ. ಜ್ಞಾನಯಜ್ಞ, ಭೋಜನಯಜ್ಞ, ಶಯನಯಜ್ಞ, ಶ್ರವಣಯಜ್ಞ, ಪ್ರವಚನಯಜ್ಞ...... ಹೀಗೆ ಯಜ್ಞಗಳು, 'ಮಹಾ' ಎಂದಾಗುವುದು ಅವುಗಳನ್ನು ನಡೆಸಿ ಕೊನೆಯಲ್ಲಿ 'ಕೃಷ್ಣಾರ್ಪಣಮಸ್ತು' ಎಂದಾಗ ಹಾಗೂ ಆ ಯಜ್ಞಗಳ ಪ್ರಾರಂಭದಲ್ಲಿ 'ಭಗವಂತ ನಿನ್ನ ಪ್ರೀತಿಗೋಸ್ಕರ ಇವುಗಳನ್ನು ನಡೆಸುತ್ತಿದ್ದೇನೆ' ಎಂದು ಸಂಕಲ್ಪ

ಮಾಡುವುದರಿಂದ.

ರಾತ್ರಿ ಮಲಗುವಿಕೆಯೂ ಶಯನಯಜ್ಞ ಆಗಬಲ್ಲದು. ಯಜ್ಞ ಎನಿಸಬೇಕಾದರೆ ಕೆಲವು ನಿಯಮಗಳನ್ನು ಪಾಲಿಸಬೇಕು. **'ಆರ್ದ್ರಪಾದಸ್ತು ಭುಂಜೀತ ನಾರ್ದ್ರಪಾದಸ್ತು ಸ್ವಪೇತ್ ನಿತ್ಯಮ್'** ಎಂದು ನಿಯಮ ಮಾಡಲಾಗಿದೆ. ಊಟಕ್ಕೆ ಕುಳಿತುಕೊಳ್ಳುವ ಮುಂಚೆ ಕಾಲು ತೊಳೆದುಕೊಂಡು ಬರಬೇಕು. ಕಾಲುಗಳನ್ನು ಬಟ್ಟೆಯಿಂದ ಒರೆಸಿಕೊಳ್ಳದೆ, ಅವು ಒದ್ದೆಯಾಗಿರುವಂತೆಯೇ ಕುಳಿತುಕೊಳ್ಳಬೇಕು. ಆದರೆ ಮಲಗುವ ಮುನ್ನ ಕಾಲು ತೊಳೆದುಕೊಂಡು ಕಾಲನ್ನು ಒರೆಸಿಕೊಳ್ಳಬೇಕು. ಒದ್ದೆ ಕಾಲಿನಲ್ಲಿ ಮಲಗಬಾರದು. ಚಾಪೆಯಲ್ಲಿ ಕುಳಿತುಕೊಂಡು ಹೀಗೆ ಭಗವದ್ರೂಪದಗಳನ್ನು ಸ್ಮರಿಸಿಕೊಳ್ಳಬೇಕು.

**'ಜಲೇ ರಕ್ಷತು ವಾರಾಹಃ ಸ್ಥಳೇ ರಕ್ಷತು ವಾಮನಃ**
**ಅಟವ್ಯಾಂ ನಾರಸಿಂಹಶ್ಚ ಶಯನೇ ಪಾತು ಮಾಧವಃ'**

ನಾನು ಮಲಗಿದಾಗ ಮಾಧವ ರಕ್ಷಣೆ ಮಾಡಲಿ ಎಂದು ಪ್ರಾರ್ಥಿಸಿಕೊಂಡು ಮಲಗೋಣ. ಆಗ ಶಯನಯಜ್ಞ ಆಗುವುದು. ಭಗವಂತ ಅದನ್ನು ಯಜ್ಞವನ್ನಾಗಿ ಸ್ವೀಕಾರ ಮಾಡ್ತಾನೆ. ಆ ಯಜ್ಞಕ್ಕೆ ಮಹತ್ತ್ವ ಬರುವುದು. ದುಃಸ್ವಪ್ನ ಬೀಳುವುದಿಲ್ಲ. ಒಳ್ಳೆಯ ನಿದ್ದೆ ಬರುವುದು. ಯಾವಾಗ ಎಚ್ಚರ ಆಗಬೇಕೋ ಆಗ ಎಚ್ಚರ ಆಗುವುದು.

ಹೀಗೆ ಜೀವನದ ಪ್ರತಿಯೊಂದು ಚಟುವಟಿಕೆಯೂ ಯಜ್ಞ ಎನಿಸಿ, ಅದಕ್ಕೆ ಮಹತ್ತ್ವ ಬರುವುದು ಅದನ್ನು ದೇವರಿಗೆ ಅರ್ಪಿಸಿದಾಗ. ಆದುದರಿಂದ ಮಖಗಳಿಗೆ, ಯಜ್ಞಗಳಿಗೆ ಮಹತ್ತ್ವವನ್ನು ಕೊಡುವವನು 'ಮಹಾಮಖಃ' ಎನಿಸುವ ಭಗವಂತನು.

ನಮ್ಮ ಜೀವನಯಜ್ಞಕ್ಕೂ ಮಹತ್ತ್ವ ಸಿದ್ಧಿಸಬೇಕೆಂದರೆ ಪ್ರತಿನಿತ್ಯ ಬೆಳಿಗ್ಗೆ ಎದ್ದಾಕ್ಷಣ ಹಾಗೂ ರಾತ್ರಿ ಮಲಗುವ ಮುಂಚೆ 'ಮಹಾಮಖ' ಎನಿಸುವ ಭಗವಂತನನ್ನು ಸ್ಮರಿಸಿಕೊಳ್ಳೋಣ.

**೪೪೩. ನಕ್ಷತ್ರನೇಮಿಃ – ನಕ್ಷತ್ರ ಮಂಡಲದೊಳಗಿದ್ದುಕೊಂಡು ನಕ್ಷತ್ರಗಳಿಗೆ ನಿಯಾಮಕನಾಗಿರುವವನು.**

**ವಿವರಣೆ :** ಕೊಂಬಚೇಳು ತನ್ನ ಕೊಂಡಿಯನ್ನು ಮಡಚಿಕೊಂಡು ತಲೆ ಕೆಳಗೆ ಮಾಡಿಕೊಂಡಿದ್ದರೆ ಹೇಗೆ ಕಾಣುವುದೋ ಹಾಗೆ ಆಕಾಶದಲ್ಲಿ ಸಮಗ್ರ ಜ್ಯೋತಿರ್ಮಂಡಲ ಇದೆ ಎಂದು ಹಿರಿಯರು ಹೇಳುವರು. ನಮಗೆ ಎಲ್ಲ ನಕ್ಷತ್ರಗಳು ಕಾಣದ ಪ್ರಯುಕ್ತ ಜ್ಯೋತಿರ್ಮಂಡಲದ ಆಕಾರ ಸ್ಪಷ್ಟವಾಗುವುದಿಲ್ಲ. ಹೀಗೆ

ಕೊಂಬಚೇಳಿನ ಆಕಾರದಲ್ಲಿರುವ ಜ್ಯೋತಿರ್ಮಂಡಲದೊಳಗೆ ಭಗವಂತನು ಶಿಂಶುಮಾರನಾಮಕನಾಗಿ ಅದೇ ರೂಪದಿಂದ ಹೊಕ್ಕಿರುವನು. ಅವನ ಅಂಗಾಂಗಗಳನ್ನು ಇಪ್ಪತ್ತೇಳು ನಕ್ಷತ್ರಗಳು, ನವಗ್ರಹಗಳು, ಉಳಿದ ನಕ್ಷತ್ರಾದಿಗಳೆಲ್ಲ ಆಶ್ರಯಿಸಿಕೊಂಡಿರುವವು.

ಭಗವಂತನ ಶಿಂಶುಮಾರ ರೂಪವೇ ಕಾಲನಿಯಾಮಕ. ಆದುದರಿಂದಲೇ ಶ್ರೀ ವಾದಿರಾಜ ಸ್ವಾಮಿಗಳು ಲಕ್ಷ್ಮೀ ಶೋಭಾನ ಪದ್ಯದಲ್ಲಿ -

ಎಲ್ಲರ ಆಯುಷ್ಯವ ಶಿಂಶುಮಾರದೇವ
ಸಲ್ಲೀಲೆಯಿಂದ ತೊಲಗಿಸುವ
ಒಲ್ಲೆ ನಾನಿವರ ನಿತ್ಯಮುತ್ತೈದೆ ಎಂದು
ಬಲ್ಲವರು ಎನ್ನ ಪೇಳುವರು
ಶೋಭಾನೆ......

ಲಕ್ಷ್ಮೀದೇವಿ ಬ್ರಹ್ಮಾದಿ ದೇವತೆಗಳನ್ನು ತೋರಿಸಿ ಹೇಳುತ್ತಿದ್ದಾಳೆ - ಇವರೆಲ್ಲ ಇಂದೋ ನಾಳೆಯೋ ಸಾಯುವವರು. ಇವರ ಕೊರಳಿಗೆ ಮಾಲೆ ಹಾಕುವುದಿಲ್ಲ. ಯಾಕೆ ? 'ಎಲ್ಲರ ಆಯುಷ್ಯವ ಶಿಂಶುಮಾರದೇವ....' ಕಾಲನಿಯಾಮಕ ಶಿಂಶುಮಾರ ಚತುರ್ಮುಖನಿಗೆ ನೂರು ವರ್ಷ ಮುಗಿಯಿತೆಂದರೆ ಅವನನ್ನು ತೆಗೆದೇ ಬಿಡುವನು. ಹೇಗೆ ಸಂಹಾರ ಮಾಡ್ತಾನೆ ? 'ಸಲ್ಲೀಲೆಯಿಂದ ತೊಲಗಿಸುವ.....'. - ಎಲ್ಲರಿಗಿಂತ ಹೆಚ್ಚು ಕಾಲ ಬದುಕುವವನು ಚತುರ್ಮುಖ. ಅವನ ಕೊರಳಿಗೆ ಮಾಲೆ ಹಾಕಿದೆ ಎಂದರೂ 'ನಿತ್ಯಮುತ್ತೈದೆ' - ಎಂದು ಬಿರುದು ಪಡೆದಿರುವ ನಾನು ಚತುರ್ಮುಖ ಸತ್ತ ಮೇಲೆ ಹೇಗೆ ಬದುಕಬೇಕು ? ಆದ್ದರಿಂದಲೇ 'ಒಲ್ಲೆ ನಾನಿವರ.......' ಚತುರ್ಮುಖನೇ ಮುಂತಾದ ಯಾರೂ ನನಗೆ ಬೇಡ ಎಂದಳು ಲಕ್ಷ್ಮೀದೇವಿ. ಹೀಗೆ ಚತುರ್ಮುಖನೇ ಮುಂತಾದ ಎಲ್ಲರಿಗೆ ನಾಶ ಕೊಡುವ ರೂಪ ಶಿಂಶುಮಾರರೂಪ.

ನಮ್ಮೆಲ್ಲರ ಜಾತಕ ನಕ್ಷತ್ರಗ್ರಹಾದಿಗಳನ್ನು ಅವಲಂಬಿಸಿರುವುದು.ಅಂತಹ ನಕ್ಷತ್ರಮಂಡಲವನ್ನು ಶಿಂಶುಮಾರರೂಪದಿಂದ ನಿಯಮಿಸುತ್ತಿರುವ ಭಗವಂತ ನಕ್ಷತ್ರನೇಮಿ - ನಕ್ಷತ್ರನಿಯಾಮಕ. ನಕ್ಷತ್ರಪುಂಜದೊಳಗೆ ಇದ್ದುಕೊಂಡು ನಕ್ಷತ್ರಗಳ ಮೂಲಕ ಆಯಾ ವ್ಯಕ್ತಿಗಳು ಇಷ್ಟು ಹೊತ್ತಿಗೆ ಹುಟ್ಟಬೇಕು ; ಇಷ್ಟು ಹೊತ್ತಿಗೆ ಸಾಯಬೇಕು - ಎಂದೆಲ್ಲ ನಿಯಮಿಸುತ್ತಿರುವವನು.

**೪೪೪. ನಕ್ಷತ್ರೀ – ಸೋಲಿನ ವಿರುದ್ಧ ರಕ್ಷಣೆಗಾಗಿ ಮತ್ತೊಬ್ಬರನ್ನು ಬೇಡದವನು.**

**ವಿವರಣೆ :** ಕ್ಷ ಎಂದರೆ ಗಾಯ ; ಗಾಯ ಎಂದರೆ ಸೋಲು. ಸೋತಾಗ ತಾನೇ ಗಾಯ ಆಗುವುದು ? ಆದುದರಿಂದ ಕ್ಷ ಎಂದರೆ ಸೋಲು. ತ್ರ ಎಂದರೆ ಸೋಲಿನ ರಕ್ಷಣೆ. ತ್ರೀ ಎಂದರೆ ಸೋಲಿನ ವಿರುದ್ಧ ರಕ್ಷಣೆ ಕೊಡುವವನು. ನ ಎಂದರೆ ಇಲ್ಲ. ಹಾಗಾದರೆ ಒಟ್ಟಿಗೆ ಏನು ಅರ್ಥ ಬಂತು ? ನಮಗೆ ನಿಮಗೆ ಸೋಲುವ ಪ್ರಸಂಗ ಬಂದರೆ ಒಬ್ಬ ರಕ್ಷಕ ಬೇಕು. ಆದರೆ ಭಗವಂತನ ಪಾಲಿಗೆ ಅಂತಹ ಪ್ರಸಂಗ ಇಲ್ಲ. ಜೀವನದಲ್ಲಿ ಸೋಲು ಬರುವಾಗ ರಕ್ಷಣೆಗಾಗಿ ಇನ್ನೊಬ್ಬರಲ್ಲಿ ಬೇಡದವನು.

ದೇವರು ತನ್ನ ಅವತಾರಗಳಲ್ಲಿ ಸೋತಂತೆ ನಟಿಸಿದ್ದಿದೆ. ಆದರೆ ಆ ಯಾವ ಸಂದರ್ಭದಲ್ಲೂ ಯಾರ ಮುಂದೆಯೂ ತನಗೆ ರಕ್ಷಣೆ ಬೇಕು - ಎಂದು 'ದೇಹಿ' - ಎಂದು ಬೇಡಲಿಲ್ಲ.

ಹದಿನೆಂಟು ಬಾರಿ ಜರಾಸಂಧನ ವಿರುದ್ಧ ಕಾದಾಡಿದಾಗಲೂ ಕೃಷ್ಣ ಯಾರಲ್ಲೂ ಸಹಾಯವನ್ನು ಬೇಡಲಿಲ್ಲ.

ಯದ್ಯಪಿ ದೇವರು ಯಾವುದೇ ಅವತಾರದಲ್ಲಿ ಸೋಲುವುದಿಲ್ಲ. ಸೋತಂತೆ ನಟಿಸುವುದಷ್ಟೇ. ಅಂತಹ ಪ್ರಸಂಗದಲ್ಲೂ ತನ್ನ ರಕ್ಷಣೆಗೊಸ್ಕರ ಇನ್ನೊಬ್ಬರನ್ನು ಬೇಡುವವನಲ್ಲ. ಸೋಲಿನಿಂದ ರಕ್ಷಣೆಗೋಸ್ಕರ ಇನ್ನೊಬ್ಬರನ್ನು ಅಪೇಕ್ಷಿಸುವವನಲ್ಲ - 'ನಕ್ಷತ್ರೀ'. ಕ್ಷತ್ರೀ - ಸೋಲಿನ ವಿರುದ್ಧ ರಕ್ಷಣೆಗಾಗಿ ಇನ್ನೊಬ್ಬರನ್ನು ಬೇಡುವವನು ; ನ ಕ್ಷತ್ರೀ - ಅಂತಹವನಲ್ಲ.

ನಮ್ಮ ಜೀವನದಲ್ಲೂ ಸೋಲಿನ ರಕ್ಷಣೆಗಾಗಿ ಇನೊಬ್ಬರನ್ನು ಅಂಗಲಾಚುವ ಪ್ರಸಂಗ ಬರದೆ ನಾವೇ ಸೋಲನ್ನು ಎದುರಿಸುವಂತಾಗಬೇಕು. ಇದು 'ನಕ್ಷತ್ರೀ' ನಾಮದ ಉಪಾಸನೆಯ ಫಲ.

**೪೪೫. ಕ್ಷಮಃ – ತಾಳ್ಮೆ ಉಳ್ಳವನು.**

**ವಿವರಣೆ :** ಕ್ಷಮೆ, ತಾಳ್ಮೆ ಉಳ್ಳವನೇ ಕ್ಷಮ. ದುರ್ಯೋಧನ ದುಷ್ಟನೆಂದು ತಿಳಿದಿದ್ದರೂ ಭಗವಂತ ಹದಿಮೂರು ವರ್ಷ ತಾಳಿದ. ಯಾಕೆಂದರೆ ತಾಳುವುದು ಅವನ ಸ್ವಭಾವ. ದೀಪದಂತೆ ಸುಮ್ಮನಿದ್ದ ಭಗವಂತನ ಮೇಲೆ ಪತಂಗದಂತೆ ಜರಾಸಂಧ, ದುರ್ಯೋಧನಾದಿಗಳು ಬಿದ್ದು ಸತ್ತರಷ್ಟೇ.

ತಾಳ್ಮೆ ದೊಡ್ಡ ಗುಣ. ಅದರಲ್ಲಿರುವ ಒಂದು ದೋಷ ಎಂದರೆ 'ಅಶಕ್ತಂ ಮನ್ಯತೇ ಜನಃ' - ಇವರು ದುರ್ಬಲರು ಎಂದು ಸಮಾಜ ತಿಳಿದುಕೊಳ್ಳುತ್ತೆ. ಆದರೆ ಸಮಾಜ ಶಾಂತವಾಗಿರಬೇಕೆಂದರೆ ವ್ಯಕ್ತಿಗಳಲ್ಲಿ ಮೊದಲು ಇರಬೇಕಾದದ್ದು ಕ್ಷಮೆ.

ಭೀಷ್ಮರು ಕೃಷ್ಣನಲ್ಲಿ ನಿವೇದಿಸಿಕೊಳ್ಳುವರು - ನಾನು ದುಯೋಧನಾದಿಗಳ ಮಧ್ಯೇ ಎಂಟುನೂರು ವರ್ಷ ಕಾಲ ಬದುಕಲು ಕಾರಣ ಕ್ಷಮೆ. ಅಂತಹ ಕ್ಷಮೆ ನನ್ನಲ್ಲಿ ಸಿದ್ಧಿಸಿದುದು - ನಿನ್ನನ್ನು 'ಕ್ಷಮಃ' - ಎಂದು ಉಪಾಸನೆ ನಡೆಸಿದರ ಫಲವಾಗಿ.

**೪೪೬. ಕ್ಷಾಮಃ – ಅಯೋಗ್ಯರಿಗೆ ಜ್ಞಾನದ ಬರಗಾಲವನ್ನು ಉಂಟು ಮಾಡುವವನು.**

ವಿವರಣೆ : ಕ್ಷಾಮ ಎಂದರೆ ಬರಗಾಲ. ದುರ್ಯೋಧನನ ಸುತ್ತ ಭೀಷ್ಮ, ದ್ರೋಣ, ವಿದುರ, ಕೃಪ, ಅಶ್ವತ್ಥಾಮಾ, ಕರ್ಣ - ಮುಂತಾದ ಸಜ್ಜನರು ಇದ್ದರೂ ದುರ್ಯೋಧನನಿಗೆ ಜ್ಞಾನದ ಬರಗಾಲ. ತಿಳುವಳಿಕೆಯನ್ನು ನೀಡಬಲ್ಲ ಇಷ್ಟು ಮಂದಿಗಳಿದ್ದರೂ ದುರ್ಯೋಧನನಿಗೆ ಭಗವಂತನ ತಿಳುವಳಿಕೆಯ ಬರಗಾಲ. ಒಂದೇ ಮನೆಯಲ್ಲಿದ್ದ ಭೀಷ್ಮರಿಗೆ ಜ್ಞಾನದ ಸುರಿಮಳೆ ಆದರೆ, ಅದೇ ಮನೆಯಲ್ಲಿದ್ದ ದುರ್ಯೋಧನನಿಗೆ ಜ್ಞಾನದ ಬರಗಾಲ. ಯಾಕೆ ? ದುರ್ಯೋಧನ ದೇವರನ್ನು ಬರಗಾಲ ಎಂದು ಉಪಾಸನೆ ಮಾಡಿದ. ತಾನು ಜೀವನದಲ್ಲಿ ಜ್ಞಾನದ ಬರಗಾಲಕ್ಕೆ ತುತ್ತಾದ. ಆದುದರಿಂದ ದೇವರು ಕ್ಷಮ ಆಗಿರುವಂತೆ ಕ್ಷಾಮನೂ ಹೌದು. ಅಯೋಗ್ಯರಿಗೆ ಜ್ಞಾನದ ಬರಗಾಲ ಬರುವಂತೆ ಮಾಡುವವನಾದುದರಿಂದ ದೇವರು 'ಕ್ಷಾಮ'. ನಾವೇನಾದರೂ ಒಳ್ಳೆಯ ಕೆಲಸಕ್ಕೆ ತೊಡಗಿದಾಗ ಯಾರಾದರೂ ಉಪದ್ರವ ಮಾಡಲು ತೊಡಗಿದರೆಂದರೆ ಅವರ ಬಲಕ್ಕೆ, ಶಕ್ತಿಗೆ ಬರಗಾಲ ಬರುವಂತೆ ಮಾಡಬೇಕೆಂದರೆ ಭಗವಂತನನ್ನು 'ಕ್ಷಾಮ' - ಎಂದು ಉಪಾಸನೆ ನಡೆಸಬೇಕು.

**೪೪೭. ಸಮೀಹನಃ – ಚೆನ್ನಾಗಿ ಚಟುವಟಿಕೆ ನಡೆಸುವವನು.**

ವಿವರಣೆ :ಸಂ+ಈಹತೇ - ಚೆನ್ನಾಗಿ ಚಟುವಟಿಕೆ ನಡೆಸುವವನು. ಈಹ ಚೇಷ್ಟಾಯಾಮ್. ಇದುವರೆಗೆ 'ನಕ್ಷತ್ರನೇಮಿ' 'ಕ್ಷಮ' ಇತ್ಯಾದಿ ನಾಮಗಳಿಂದ ಬೇರೆ ಬೇರೆ ಚಟುವಟಿಕೆಗಳನ್ನು ತಿಳಿಸಲಾಗಿದೆ. ಇವೆಲ್ಲ ಉತ್ತಮಗಳಾದ ಚಟುವಟಿಕೆಗಳು. ಅಂದರೆ ಕಾಲಕಾಲಕ್ಕೆ ಸರಿಯಾಗಿ ಗ್ರಹ, ನಕ್ಷತ್ರಾದಿಗಳು ಉದಯಿಸಲಿಕ್ಕೆ ಬೇಕಾದ ಚಟುವಟಿಕೆ ಉಳ್ಳವನು. ಸೂರ್ಯ ಉದಯಿಸಬೇಕಾದಾಗ ಚಂದ್ರನ ಉದಯ, ಚಂದ್ರ ಉದಯಿಸಬೇಕಾದಾಗ ಸೂರ್ಯನ ಉದಯ - ಹೀಗೆ ಎಂದೂ ಇಲ್ಲ. ಆದುದರಿಂದಲೇ ಭಗವಂತ 'ಸಮೀಹನ'.

**ಯಜ್ಞ ಇಜ್ಯೋ ಮಹೇಜ್ಯಶ್ಚ ಕ್ರತುಃ ಸತ್ರಂ ಸತಾಂಗತಿಃ |**
**ಸರ್ವದರ್ಶೀ ವಿಮುಕ್ತಾತ್ಮಾ ಸರ್ವಜ್ಞೋ ಜ್ಞಾನಮುತ್ತಮಮ್ ||೪೭||**

**೪೪೮. ಯಜ್ಞಃ – ಲೋಕದಲ್ಲಿ ಏನೇನಿದೆಯೋ ಅವೆಲ್ಲವನ್ನೂ ತಿಳಿದಿರುವವನು.**

ವಿವರಣೆ : ಮೇಲ್ನೋಟಕ್ಕೆ ಯಜ್ಞ, ಕ್ರತು, ಸತ್ರ - ಎಂದು ಯಜ್ಞಕ್ಕೆ ಸಂಬಂಧಿಸುವ ಬೇರೆ ಬೇರೆ ಹೆಸರುಗಳಂತೆ ಕಾಣಿಸುವುದು. ಆದರೆ ಇವೆಲ್ಲ ಯಜ್ಞೇಶನಾದ ಭಗವಂತನ ನಾಮಗಳು.

ದೇವರಿಗೆ ಯಜ್ಞ ಎಂಬ ಹೆಸರು ಯಾಕೆ ? ಯದ್ ಅಸ್ತಿ ತದ್ ಜಾನಾತಿ - ಏನು ಉಂಟೋ ಅವೆಲ್ಲವನ್ನೂ ತಿಳಿದವನಾದುದರಿಂದ ದೇವರು ಯಜ್ಞ. ಹಾಗಾದರೆ ಸರ್ವಜ್ಞನಾದ ದೇವರಿಗೆ ಮೊಲದ ಕೋಡು ತಿಳಿದಿಲ್ಲವೇ ? ಮನುಷ್ಯರ ಕೋಡು ತಿಳಿದಿಲ್ಲವೇ ? ಅವನ್ನು ತಂದು ಕೊಡಿ ; ಹಾಗಾದರೆ ತಿಳಿದಿರುತ್ತಾನೆ. ಅವು ಇಲ್ಲ. ಆದುದರಿಂದ ದೇವರು ಅವನ್ನು ತಿಳಿದಿಲ್ಲ. ಯಾವುದು ಇದೆಯೋ ಅವನ್ನಷ್ಟೇ ತಿಳಿದವನು ಅವನು. ಇಲ್ಲದಿರುವಂತಹದ್ದನ್ನೂ ತಿಳಿದನೆಂದರೆ ಅವನು ವಿಪರೀತಜ್ಞಾನಿ ಎನಿಸಿಯಾನು !

ಇಲ್ಲಿ ನಡೆಯುವುದು ಜ್ಞಾನಯಜ್ಞ.ಯಾಕೆ ಜ್ಞಾನಯಜ್ಞ ? ಇಲ್ಲಿ ಉಪನ್ಯಾಸಕರ ಬಾಯಿಯಿಂದ ಹೊರಡುವ ಪ್ರತಿಯೊಂದು ಶಬ್ದವೂ ಶ್ರೋತೃಗಳಿಗೆ ಅರ್ಥವಾಗಬೇಕು. ಆಗಷ್ಟೇ ಅದು ಯಜ್ಞ. ಯದ್ ಅಸ್ತಿ ತದ್ ಜಾನಾತಿ - ಎಂಬ ವ್ಯುತ್ಪತ್ತಿಯ ಆಧಾರದಲ್ಲಿ. ಶ್ರೋತೃಗಳಿಗೆ ಅರ್ಥವಾಗುವುದಿಲ್ಲ ಎಂದರೆ ರಾಜಕೀಯ ವ್ಯಕ್ತಿಗಳ ಭಾಷಣದಂತೆ ಆದೀತಷ್ಟೇ.

ನಾವು ಮನೆಯಲ್ಲಿ ಯಜ್ಞ ಮಾಡಿಸುವಾಗಲೂ - ಪುರೋಹಿತರು ನೂರಕ್ಕೆ ನೂರು ಪಾಲು ಅಲ್ಲಿಯ ಪ್ರಕ್ರಿಯೆಗಳ ಹಿನ್ನೆಲೆಯಲ್ಲಿ ಹೇಳಲಿಕ್ಕಾಗದಿದ್ದರೂ ನೂರಕ್ಕೆ ಇಪ್ಪತ್ತೈದು ಪಾಲಾದರೂ ಹೇಳಬೇಕು. ಅಷ್ಟಾದರೂ ತಯಾರಾಗಬೇಕು. ಯಜ್ಞದ ವ್ಯಾಪ್ತಿಗೊಳಪಟ್ಟ ಪ್ರತಿಯೊಂದರ ತಿಳುವಳಿಕೆಯೂ ಇರಬೇಕು. 'ಯತ್ ಅಸ್ತಿ ತದ್ ಜಾನಾತಿ' - ಎಂದಾಗಬೇಕು. ಏನೋ ಮಂಡಲ ಬರೆಯುವರು ; ಕೂರ್ಚ ಇಡುವರು. ಸ್ರುಕ್ ಸ್ರುವಗಳನ್ನೂ ಇಟ್ಟಿರುವರು. ಏನೋ ಮಂತ್ರ ಹೇಳಿ ಆಹುತಿ ಹಾಕಿದರು ; ಮತ್ತೊಬ್ಬರು ತರ್ಪಣ ಕೊಡುತ್ತಿದ್ದಾರೆ. ಇನ್ನೊಬ್ಬ ಸಮಿಧೆ ಹಾಕುತ್ತಿದ್ದಾನೆ. ಮತ್ತೊಬ್ಬ ಕಲಶಕ್ಕೆ ಪೂಜೆ ಮಾಡುತ್ತಿದ್ದಾನೆ. ಇವೆಲ್ಲವುಗಳ ತಿಳುವಳಿಕೆ ಬೇಕು. ಆಗಷ್ಟೇ ಅದು ನಿಜವಾಗಿ ಯಜ್ಞ ಎನಿಸಬಲ್ಲದು.

ಲೋಕದಲ್ಲಿ ಏನೇನಿದೆಯೋ ಅವೆಲ್ಲವನ್ನು ಭಗವಂತ ತಿಳಿದಿದ್ದಾನೆ - ಯದ್ ಅಸ್ತಿ ತದ್ ಜಾನಾತಿ - ಆದುದರಿಂದ ಭಗವಂತನ ಕಣ್ಣು ತಪ್ಪಿಸಿ ನಾವು ಏನು ಮಾಡಲಿಕ್ಕೂ ಸಾಧ್ಯವಿಲ್ಲ. ಆದ್ದರಿಂದಲೇ ನಾವು ಮಾಡುವುದೆಲ್ಲ ಭಗವಂತನಿಗೆ

ಸಂಬಂಧಿಸುವ ಯಜ್ಞ.

ಲೋಕದಲ್ಲಿ ಇರುವುದೆಲ್ಲವನ್ನೂ ಬಲ್ಲವನು ಭಗವಂತ ಎಂಬ ಅನುಸಂಧಾನದಿಂದ 'ಯಜ್ಞ' ಎಂದು ಉಪಾಸನೆ ನಡೆಸಿದರೆ ಅದರ ಫಲವಾಗಿ ನಮ್ಮ ಮನೆಯಲ್ಲಿ ಏನೇನಿದೆಯೋ ಅವೆಲ್ಲವನ್ನಾದರೂ ನಾವು ತಿಳಿದುಕೊಳ್ಳಬಹುದು. ಒಂದೊಮ್ಮೆ ಅದು ಆಗದಿದ್ದರೂ ನಮ್ಮ ಮನದಲ್ಲಿ ಏನೇನಿದೆಯೋ ಅವನ್ನಾದರೂ ತಿಳಿದುಕೊಳ್ಳಬಹುದಾಗಿದೆ. ಎಷ್ಟೋ ಬಾರಿ ನಮಗೆ ನಮ್ಮ ಮನಸ್ಸಿನಲ್ಲಿ ಏನಿರುವುದೆಂಬುದೇ ತಿಳಿದಿರುವುದಿಲ್ಲ. ಅಂತಹ ಸ್ಥಿತಿ ಬರಲಾರದು.

**೪೪೯. ಇಜ್ಯಃ – ಯಜ್ಞದ ಮೂಲಕ ಪೂಜಿಸಿಕೊಳ್ಳಲು ಯೋಗ್ಯನಾದವನು.**

**ವಿವರಣೆ :** ಆರಾಧನಾ ಯೋಗ್ಯನೇ ಇಜ್ಯನು. ನಾವು ಮಾಡುವ ಯಾವುದೇ ಯಜ್ಞ ಇರಲಿ, ಅದರಲ್ಲಿ ಅಂತರ್ಯಾಮಿ ವಿವಕ್ಷೆ ಮಾಡಿ ದೇವರಿಗೇ ಆಹುತಿ ಕೊಡುವುದು. ಯಾಕೆಂದರೆ ಆಹುತಿಗಳನ್ನು ತೆಗೆದುಕೊಳ್ಳಲು ಅವನೇ ತಾಕತ್ತು ಉಳ್ಳವನು. ಯಾಕೆ ಅವನೇ ಅಂತಹ ತಾಕತ್ತು ಉಳ್ಳವನು ? ಯಜ್ಞನಾಮದಿಂದ ತಿಳಿಸಿದಂತೆ ಅವನೇ ಎಲ್ಲವನ್ನೂ ಬಲ್ಲವನು. ಆದುದರಿಂದ ಯಜ್ಞದ ಆಹುತಿಗಳನ್ನು ತೆಗೆದುಕೊಳ್ಳಲು ಅವನೇ ತಾಕತ್ತು ಉಳ್ಳವನು. ಯಜ್ಞದಲ್ಲಿ ಕೊಡುವ ಆಹುತಿಗಳನ್ನು ತೆಗೆದುಕೊಳ್ಳುವ ತಾಕತ್ತು ಯಾರಿಗೆ ಇದೆಯೋ ಅವನು 'ಇಜ್ಯ' - ಯಜ್ಞದ ಮೂಲಕ ಪೂಜಿಸಿಕೊಳ್ಳಲು ಯೋಗ್ಯನಾಗಿರುವವನು. ಕೊಟ್ಟ ಆಹುತಿಗಳನ್ನು ತೆಗೆದುಕೊಳ್ಳಲು ಯೋಗ್ಯ.

**೪೫೦. ಮಹೇಜ್ಯಃ – ಯಜ್ಞದಿಂದ ಪೂಜಿಸಿಕೊಳ್ಳುವವರಲ್ಲಿ ತುಂಬ ಯೋಗ್ಯನಾಗಿರುವವನು.**

**ವಿವರಣೆ :** ಯಜ್ಞಗಳಲ್ಲಿ ಕೊಟ್ಟ ಆಹುತಿಗಳನ್ನು ತೆಗೆದುಕೊಳ್ಳಲು ಯೋಗ್ಯರು ಇಂದ್ರಾದಿ ದೇವತೆಗಳೂ ಆಗುವರು. ಪವಮಾನ ಹೋಮ ಎಂದಾದರೆ ಅದರಲ್ಲಿ ಆಹುತಿಗಳನ್ನು ತೆಗೆದುಕೊಳ್ಳಲು ಇಂದ್ರಾದಿಗಳಿಗಿಂತಲೂ ಯೋಗ್ಯರಾದ ವಾಯು ದೇವರು. ಶ್ರೀಸೂಕ್ತ ಹೋಮ ಎಂದಾದರೆ ಅದರಲ್ಲಿ ಆಹುತಿ ತೆಗೆದುಕೊಳ್ಳಲು ವಾಯುದೇವರಿಗಿಂತಲೂ ಯೋಗ್ಯಳಾದ ಲಕ್ಷ್ಮೀದೇವಿ. ಪುರುಷಸೂಕ್ತ ಹೋಮ ಎಂದಾದರೆ ಅದರಲ್ಲಿ ಆಹುತಿ ತೆಗೆದುಕೊಳ್ಳಲು ಲಕ್ಷ್ಮೀದೇವಿಗಿಂತಲೂ ಯೋಗ್ಯನಾದ ನಾರಾಯಣ. ಪುರುಷಸೂಕ್ತ ಹೋಮಕ್ಕಿಂತ ದೊಡ್ಡ ಹೋಮ ಮತ್ತೊಂದಿಲ್ಲದ ಪ್ರಯುಕ್ತ ಹವಿಸ್ಸನ್ನು ಸ್ವೀಕರಿಸುವಲ್ಲಿ ನಾರಾಯಣನಿಗಿಂತ ಯೋಗ್ಯನಾದವನು ಮತ್ತೊಬ್ಬನಿಲ್ಲ. ಆದುದರಿಂದಲೇ ಭಗವಂತ ಮಹೇಜ್ಯ. ಯಜ್ಞಗಳಲ್ಲಿ ನಾವು

ಕೊಡುವ ಆಹುತಿಗಳನ್ನು ತೆಗೆದುಕೊಳ್ಳುವವರಲ್ಲಿ ಕೊನೆಯ ವ್ಯಕ್ತಿ ದೇವರೇ. ಇಜ್ಯ ಎಂಬ ನಾಮದಿಂದ ಯಜ್ಞಕ್ಕೆ ಯೋಗ್ಯ ಎಂದಾಗ, ತುಂಬ ದೇವತೆಗಳು ಯಜ್ಞಕ್ಕೆ ಯೋಗ್ಯರಿರುವರು - ಎಂದಾಗ 'ಮಹೇಜ್ಯ' ನಾಮದಿಂದ ಬೇರೆ ಯಾರಲ್ಲೂ ಇಲ್ಲದಷ್ಟು ಭಾರೀ ಯೋಗ್ಯತೆವುಳ್ಳವನೆಂದು ಸ್ತುತಿಸಲಾಗಿದೆ. ಇತರ ದೇವತೆಗಳಲ್ಲಿ ಯಜ್ಞಕ್ಕೆ ಅಲ್ಪ ಸ್ವಲ್ಪ ಯೋಗ್ಯತೆ ಇರುವುದಾದರೂ ಸಂಪೂರ್ಣ ಯೋಗ್ಯತೆ ದೇವರಲ್ಲಿ ಇದೆ.

ಒಂದೇ ತರಗತಿಯಲ್ಲಿ ಇರುವ ವಿದ್ಯಾರ್ಥಿಗಳೆಲ್ಲ ಪಾಠ ಕೇಳಲು ಯೋಗ್ಯರೇ ಆದರೂ ಅವರಲ್ಲಿ ಕೆಲವರು ಹೇಗೆ ತುಂಬ ಯೋಗ್ಯರಿರುವರೋ ಹಾಗೆ ಯಜ್ಞಕ್ಕೆ ಇತರ ದೇವತೆಗಳೂ ಯೋಗ್ಯರೇ ಆಗಿರುವರಾದರೂ ಭಾರೀ ಯೋಗ್ಯನಾಗಿರುವವನು ಭಗವಂತನಾದುದರಿಂದ ಅವನು ಮಹೇಜ್ಯ.

**೪೫೧. ಕ್ರತುಃ – ನಮ್ಮಿಂದ ಮಾಡಲ್ಪಡುವ ಕರ್ಮಗಳಿಂದ ನಮ್ಮನ್ನು ತಾರಣ ಮಾಡಿಸುವವನು.**

**ವಿವರಣೆ:** ಭಗವಂತನು ಪೂಜಿಸಿಕೊಳ್ಳಲು ಭಾರೀ ಯೋಗ್ಯನಾಗಿರುವವನು - ಎಂದು ಉಪಾಸನೆ ಮಾಡಿದಲ್ಲಿ ಅವನು ನಮ್ಮ ಪಾಲಿಗೆ 'ಕ್ರತು' ಆಗಿ ಅನುಗ್ರಹಿಸುವನು.

'ಕ್ರತು' ಎಂಬುದಕ್ಕೆ ಏನು ಅರ್ಥ ? ಕ್ರ ಎಂದರೆ ಕರ್ಮ. ಕ್ರಿಯತೇ ಇತಿ ಕ್ರಂ - ನಮ್ಮಿಂದ ಮಾಡಲ್ಪಡುವ ಕರ್ಮ. ಅದನ್ನು 'ತ' - ತಾರಯತಿ ದಾಟಿಸುವವನು; ದಾಟಿಸುವಂತಹದ್ದು ಅವನ ಸ್ವಭಾವ ಎಂದು ಸೂಚಿಸಲು ಕೊನೆಯಲ್ಲೊಂದು ಉಪ್ರತ್ಯಯ, ಹೀಗೆ ಒಟ್ಟು 'ಕ್ರತು' - ಎಂದರೆ ನಾವು ಮಾಡಿದ ಕರ್ಮಗಳಿಂದ ನಮ್ಮನ್ನು ದಾಟಿಸುವ ಸ್ವಭಾವದವನು.

ಕರ್ಮದಿಂದಲೇ ಎಲ್ಲ ಕರ್ಮಗಳನ್ನು ನಾನು ದೂರ ಮಾಡುವೆನೆಂದರೆ 'ಕೆಸರನ್ನು ಕೆಸರಿಂದ ತೊಳೆದಂತೆ'- ಎಂದು ದಾಸರು ತಿಳಿಸಿದಂತಾಗುವುದು. ಅಂದರೆ ಕೆಸರನ್ನು ಕಳೆದುಕೊಳ್ಳಲು ಹೋಗಿ ಮತ್ತಷ್ಟು ಕೆಸರನ್ನು ಹಚ್ಚಿಕೊಂಡಂತೆ ಆಗುವುದಷ್ಟೇ. ಆದುದರಿಂದ ಕರ್ಮದ ಬಂಧನದಿಂದ ಬಿಡುಗಡೆ ಹೊಂದಲು 'ಕ್ರತು' ಹೆಸರಿನ ಭಗವಂತನನ್ನೇ ಮೊರೆ ಹೊಕ್ಕಬೇಕು. ಕರ್ಮದಿಂದ ಬಿಡುಗಡೆಗೊಳಿಸುವುದರಿಂದಲೇ 'ಕ್ರತು' ಎನಿಸುವ ನೀನು ನನ್ನನ್ನೂ ಕರ್ಮ ಬಂಧನದಿಂದ ತಾರಣ ಮಾಡಿಸು - ಎಂದು ಪ್ರಾರ್ಥಿಸಿಕೊಳ್ಳಬೇಕು.

**೪೫೨. ಸತ್ತ್ರಮ್ – ಸಜ್ಜನರಿಗೆ ರಕ್ಷಣೆ ನೀಡುವವನು.**

**ವಿವರಣೆ :** 'ಕ್ರತು' - ಎಂಬ ನಾಮದಿಂದ ಸೂಚಿತವಾಗಿರುವಂತೆ ಭಗವಂತನು ಕರ್ಮದಿಂದ ನಮಗೆ ಬಿಡುಗಡೆ ನೀಡಿದ ಬಳಿಕ ನಮ್ಮನ್ನು ಕಾಪಾಡುವವರು ಯಾರು? ಸತ್ ತ್ರ, ಯಾರು ಕರ್ಮಗಳಿಂದ ಬಿಡುಗಡೆ ಹೊಂದಿರುವರೋ ಅಂತಹ ಸಜ್ಜನರಿಗೆ ರಕ್ಷಕನಾಗಿರುವವನು ಸತ್‌ತ್ರ. ಕರ್ಮಗಳಿಂದ ಬಿಡುಗಡೆ ಪಡೆದು ಇನ್ನೇನು ಎಂದಿರುವಾಗ ಅಂತಹ ಸಜ್ಜನರಿಗೆ ರಕ್ಷಣೆ ನೀಡುವ ಭಗವಂತ ಸತ್‌ತ್ರ ಎನಿಸುವನು. ರಕ್ಷಣೆಗೆ ನಾನಿರುವೆನೆಂದು ನಮ್ಮ ರಕ್ಷಣೆಗೆ ಧಾವಿಸಿಕೊಂಡು ಬರುವನು.

**೪೫೩. ಸತಾಂಗತಿಃ – ಇರುವವುಗಳಿಗೆಲ್ಲ ಆಶ್ರಯನಾಗಿರುವವನು.**

**ವಿವರಣೆ :** 'ಸತ್ರಮ್' - ಎಂಬ ನಾಮದಿಂದ ಸಜ್ಜನರಿಗೆ ರಕ್ಷಣೆ ನೀಡುವವನೆಂದು ಸ್ತುತಿಸಿದಾಗ ಭಗವಂತನನ್ನು ಸಂಕೋಚಗೊಳಿಸಿದಂತಾಗುವುದು.

ಗೋಪಿಕಾ ಸ್ತ್ರೀಯರು ಕೃಷ್ಣ ನಮ್ಮ ಪತಿ ಎಂದು ಉಪಾಸನೆ ಮಾಡಿದರು. ಅರ್ಜುನ ಕೃಷ್ಣನನ್ನು 'ನನ್ನ ಗೆಳೆಯ' ಎಂದು ತಿಳಿದುಕೊಂಡ. ಇದರಿಂದಾಗಿ ಅವರಿಗೆ ಪಾಪ ಬಂತು. ಏನೋ ಪ್ರಾಯಶ್ಚಿತ್ತ ಮಾಡಿಕೊಂಡು ಪಾಪವನ್ನು ಕಳೆದುಕೊಳ್ಳಬೇಕಾಯಿತು. ಜಗತ್ತಿಗೇ ಪತಿಯಾದ ಕೃಷ್ಣನನ್ನು 'ನನ್ನ ಪತಿ' - ಎಂದು ತಿಳಿದರೆ ಪಾಪ ಬರದೆ ಇರುವುದೇ ? ಇಡೀ ರಾಷ್ಟ್ರಕ್ಕೆ ಪತಿಯಾದವನನ್ನು ನಾವು ಯಾವುದೋ ಒಂದು ರಾಜ್ಯಕ್ಕೆ ಪತಿ ಎಂದರೆ ರಾಷ್ಟ್ರಪತಿಗೆ ಬೇಸರವಾಗುವುದಿಲ್ಲವೇ? ಆ ರಾಜ್ಯಕ್ಕೂ ಪತಿ ಎಂದರೆ ಬೇಸರವಿಲ್ಲ. ಇದರ ಬದಲಾಗಿ ಕರ್ನಾಟಕಕ್ಕೇ ಪತಿ - ಎಂದರೆ ಅಸಮಾಧಾನವಾಗದಿರುವುದಿಲ್ಲ. ಅದರಂತೆ ನನಗೂ ಪತಿ ಎಂದು ಉಪಾಸನೆ ಮಾಡಬಹುದಾದರೂ 'ನನಗೇ ಪತಿ' ಎಂದಲ್ಲಿ ಅವನ ಪತಿತ್ವವನ್ನು ಸಂಕೋಚಗೊಳಿಸಿದಂತಾಗುವುದು. ಜಗತ್ಪತಿಯನ್ನು ನನಗಷ್ಟೇ ಪತಿ ಎಂದರೆ ದೇವರ ಹಿರಿಮೆಯನ್ನು ಸಂಕೋಚಪಡಿಸಿದಂತಾಗುವುದು. ಜಗತ್ತಿಗೆ ಪತಿಯಾದ ನೀನು ಜಗತ್ತಿನಲ್ಲಿ ಸೇರಿಕೊಂಡ ನನಗೂ ಪತಿ ಎಂದರೆ ಆಗ ಸಂಕೋಚ ಮಾಡಿದಂತಾಗುವುದಿಲ್ಲ. 'ನನಗೇ ಪತಿ' ಎನ್ನುವುದಕ್ಕೂ 'ನನಗೂ ಪತಿ' ಎನ್ನುವುದಕ್ಕೂ ತುಂಬ ವ್ಯತ್ಯಾಸವಿದೆ. ನನಗೇ ಪತಿ ಎಂದಾಗ ಪಾಪ ಬರುವುದು; ನನಗೂ ಪತಿ ಎಂದಾಗ ಪ್ರಾಯಶ್ಚಿತ್ತವಾಗಿ ಪುಣ್ಯ ಬರುವುದು.

ಅದರಂತೆ 'ಸತ್ರಮ್' - ಎಂದು ದೇವರನ್ನು ಸ್ತುತಿಸಿದ ಭೀಷ್ಮರು ಕೂಡಲೇ 'ಸತಾಂ ಗತಿಃ' - ಎಂದು ಸ್ತುತಿಸುವರು. 'ಸತಾಂ' - ಎಂದರೆ ಏನೆಲ್ಲ ಉಂಟೋ ಅದಕ್ಕೆಲ್ಲ ನೀನೇ ಗತಿ - ಆಶ್ರಯ. ಸಜ್ಜನರಿಗಷ್ಟೇ ಆಶ್ರಯ ಅಲ್ಲ. ಮೊದಲು

'ಯಜ್ಞ' ನಾಮದಿಂದ ಏನೆಲ್ಲ ಇದೆಯೋ ಅವೆಲ್ಲವನ್ನೂ ತಿಳಿದವನೆಂದು ಸ್ತುತಿಸಲಾಗಿದೆ. ಈಗ 'ಸತಾಂ ಗತಿಃ' ಏನೆಲ್ಲ ಇದೆಯೋ ಅವೆಲ್ಲಕ್ಕೂ ಆಶ್ರಯನಾಗಿರುವವನು ಎಂದು ಸ್ತುತಿಸಲಾಗುತ್ತಿದೆ.

**೪೫೪. ಸರ್ವದರ್ಶೀ – ವರ್ಷದ ಎಲ್ಲ ಅಮಾವಾಸ್ಯೆಗಳನ್ನು ತನ್ನ ಜಪಾದಿಗಳಿಗಾಗಿ ಪಡೆದಿರುವವನು.**

ವಿವರಣೆ : ಸರ್ವ ಧನ ಉಳ್ಳವನು ಹೇಗೆ ಸರ್ವಧನಿಯೋ, ಸರ್ವಗುಣ ಉಳ್ಳವನು ಹೇಗೆ ಸರ್ವಗುಣಿಯೋ ಹಾಗೆ ಸರ್ವದರ್ಶ ಉಳ್ಳವನು ಸರ್ವದರ್ಶೀ. ಸರ್ವ ಎಂದರೆ ಎಲ್ಲ ಎಂಬ ಅರ್ಥ ಪ್ರಸಿದ್ಧ. ದರ್ಶ ಎಂದರೆ ಅಮಾವಾಸ್ಯೆ. ಆದುದರಿಂದ ಸರ್ವದರ್ಶೀ ಎಂದರೆ ಎಲ್ಲ ಅಮಾವಾಸ್ಯೆಗಳೂ ಉಳ್ಳವನು ಎಂಬ ಅರ್ಥ. ಎಲ್ಲ ಅಮಾವಾಸ್ಯೆಗಳೇ ಯಾಕೆ ? ಎಲ್ಲ ಹುಣ್ಣಿಮೆಗಳೂ ಅವನಲ್ಲಿ ಇಲ್ಲವೇ ? ಅಂದರೆ ಉಳಿದೆಲ್ಲ ತಿಥಿಗಳಿಗಿಂತ ಅಮಾವಾಸ್ಯೆಯಲ್ಲಿ ವೈಶಿಷ್ಟ್ಯ ಎಂದರೆ ಅಂದು ಯಾವುದೇ ಮದುವೆಮುಂಜಿ ಮುಂತಾದ ಶುಭ ಕರ್ಮಗಳನ್ನು ನಡೆಸುವಂತಿಲ್ಲ. ಅಮಾವಾಸ್ಯೆಗಿಂತಲೂ ಅದರ ಹಿಂದಿನ ದಿನವಾದ ಚತುರ್ದಶಿಯಂದು ಮತ್ತಷ್ಟು ನಿಷಿದ್ಧ. ಹಾಗಾದರೆ ಆ ದಿನಗಳನ್ನು ಹೇಗೆ ಕಳೆಯುವುದು ? ಭಗವಂತನ ಜಪ, ಧ್ಯಾನಾದಿಗಳನ್ನು ವಿಶೇಷವಾಗಿ ಆ ಎರಡು ದಿನಗಳಲ್ಲಿ ನಡೆಸಬೇಕು. ಅಮಾವಾಸ್ಯೆಯಂದು ನದಿ, ಸಮುದ್ರಗಳಲ್ಲಿ 'ಭರತ' - ನೀರು ಉಕ್ಕೇರುವುದೂ ಅಧಿಕ. ಅದಕ್ಕನುಗುಣವಾಗಿ ನಮ್ಮ ಮನಸ್ಸಿನಲ್ಲೂ ಶಕ್ತಿ ಜಾಗೃತವಾಗುವುದು. ಅದನ್ನು ದೇವರ ಧ್ಯಾನ, ಉಪಾಸನೆಗಳಿಗಾಗಿ ಬಳಸಿಕೊಳ್ಳಬೇಕು. ಹೀಗೆ ವರ್ಷದ ಎಲ್ಲ ದರ್ಶಗಳೂ - ಅಮಾವಾಸ್ಯೆಗಳೂ ಯಾರ ವಿಶೇಷವಾದ ಚಿಂತನೆ, ಜಪ, ಧ್ಯಾನಗಳಿಗಾಗಿ ಇರುವವೋ ಅವನು ಸರ್ವದರ್ಶೀ. ಹೇಗೆ ಏಕಾದಶಿಯಂದು ಮದುವೆ, ಮುಂಜಿ ಇತ್ಯಾದಿಗಳನ್ನು ನಡೆಸದೆ ಭಗವಂತನ ಧ್ಯಾನಾದಿಗಳನ್ನೇ ವಿಶೇಷವಾಗಿ ನಡೆಸಬೇಕೋ ಹಾಗೆ.

ಅಮಾವಾಸ್ಯಾ - ಎಂಬ ಹೆಸರಾದರೂ ಆ ತಿಥಿಗೆ ಯಾಕೆ ಬಂದಿದೆ ? ವಾಸ್ಯಾ- ಎಂದರೆ ವಾಸ ಮಾಡುವಿಕೆ. ಅಮಾ - ಅಂದರೆ ಒಟ್ಟಿಗೆ. ಸೂರ್ಯ ಚಂದ್ರರು ಯಾವ ತಿಥಿಯಲ್ಲಿ ಒಟ್ಟಿಗೆ ಇರುವರೋ ಆ ತಿಥಿ ಅಮಾವಾಸ್ಯಾ. ತಿಂಗಳ ಬೇರೆ ಎಲ್ಲ ತಿಥಿಗಳಲ್ಲಿ ಸೂರ್ಯ ಹಾಗೂ ಚಂದ್ರ ಬೇರೆ ಬೇರೆ ಅವಧಿಯಲ್ಲಿ ಉದಯಿಸುವರು ; ಹಾಗೂ ಅಸ್ತಮಿಸುವರು. ಆದರೆ ಅಮಾವಾಸ್ಯೆಯಂದು ಸೂರ್ಯ ಚಂದ್ರರಿಬ್ಬರೂ ಜೊತೆಯಾಗಿಯೇ ಉದಯಿಸುವರು ; ಜೊತೆಯಾಗಿಯೇ ಅಸ್ತಮಿಸುವರು.

ಆದುದರಿಂದಲೇ ನಮಗೆ ಚಂದ್ರ ಪ್ರತ್ಯೇಕವಾಗಿ ಅಂದು ಕಾಣಿಸುವುದಿಲ್ಲ. ಹೀಗೆ ಸೂರ್ಯ ಚಂದ್ರರು ಆ ತಿಥಿಯಲ್ಲಿ ಜೊತೆಗಿರುವುದರಿಂದಲೇ ಅದಕ್ಕೆ ಮಹತ್ತ್ವ. ಯಾರ ಪ್ರತೀಕದಲ್ಲಿ ಜಪಾದಿಗಳನ್ನು ನಡೆಸಬೇಕೋ ಅವನು ಸೂರ್ಯ. ಯಾವ ಮನಸ್ಸಿನ ಮೂಲಕ ಜಪಾದಿಗಳನ್ನು ನಡೆಸಬೇಕೋ ಅಂತಹ ಮನಸ್ಸನ್ನು ಗಟ್ಟಿ ಮಾಡುವವನು ಚಂದ್ರ. ಜ್ಯೋತಿಷ್ಕರು ಹೇಳುವರು - ಚಂದ್ರ ಮನಸ್ಸಿನ ಕಾರಕ. ರುದ್ರ ಮನಸ್ಸಿನ ಪ್ರೇರಕ. ಚಂದ್ರ ಮನಸ್ಸನ್ನು ಗಟ್ಟಿ ಮಾಡಿದನೆಂದರೆ ಅಂತಹ ಮನಸ್ಸನ್ನು ಪ್ರೇರಿಸುವವನು ರುದ್ರ ಎಂದು. ಹೀಗೆ ಯಾವ ಪ್ರತೀಕದಲ್ಲಿ ಜಪಾದಿಗಳನ್ನು ನಡೆಸಬೇಕೋ ಅಂತಹ ಸೂರ್ಯನೂ, ಯಾವ ಮನಸ್ಸಿನ ಮೂಲಕ ನಡೆಸಬೇಕೋ ಅಂತಹ ಮನಸ್ಸಿನ ಕಾರಕನಾದ ಚಂದ್ರನೂ ಒಟ್ಟಿಗೆ ಇರುವುದರಿಂದಲೇ ಆ ತಿಥಿ ಜಪಾದಿಗಳನ್ನು ನಡೆಸಲು ತುಂಬ ಪ್ರಶಸ್ತ. ಆದುದರಿಂದ ಎಲ್ಲ ದರ್ಶಗಳಲ್ಲೂ ಭಗವಂತನ ವಿಶೇಷ ಚಿಂತನೆಯನ್ನು ಮಾಡಬೇಕಾಗಿದ್ದು, ಅಂತಹ ದರ್ಶಗಳನ್ನು ತನ್ನ ಚಿಂತನೆಗಾಗಿ ಪಡೆದಿರುವ ಭಗವಂತ ಸರ್ವದರ್ಶೀ.

ಅಮಾವಾಸ್ಯೆಯಂದೇ ಅವನ ಚಿಂತನೆಯನ್ನು ವಿಶೇಷವಾಗಿ ಮಾಡಬೇಕೆಂದರೆ ಉಳಿದ ತಿಥಿಗಳಲ್ಲಿ ಮಾಡಲೇಬೇಕು ಎಂಬುದು ಸುತರಾಂ ಸಿದ್ಧವಾಗುವುದು.

**೪೫೫. ವಿಮುಕ್ತಾತ್ಮಾ – ಎಂದೆಂದೂ ಬಂಧನಕ್ಕೊಳಗಾಗದೆಯೇ ಬಿಡುಗಡೆಗೆ ಪಾತ್ರನಾಗಿರುವವನು.**

ವಿವರಣೆ : ಭಗವಂತನನ್ನು ದರ್ಶವೇ ಮುಂತಾದ ಎಲ್ಲ ತಿಥಿಗಳಲ್ಲೂ ಚಿಂತನೆ ನಡೆಸುವವರು 'ಮುಕ್ತಾತ್ಮ'ರಾಗುವರು. ಒಂದಲ್ಲ ಒಂದು ದಿನ ಬಿಡುಗಡೆ ಹೊಂದುವರು.

ನಾವು ಈಗ ಈ ಶರೀರಪಂಜರದಲ್ಲಿ ಬದ್ಧರಾಗಿದ್ದೇವೆ. ಮುಂದೆ ಒಂದು ದಿನ ಇದರಿಂದ ಬಿಡುಗಡೆ ಪಡೆದು ಮುಕ್ತಾತ್ಮರಾಗುವೆವು. ಆದರೆ ದೇವರು ಹಾಗಲ್ಲ; ಬಂಧನಕ್ಕೊಳಗಾಗಿದ್ದು ಅದರಿಂದ ಬಿಡುಗಡೆ ಹೊಂದಿ ಮುಕ್ತಾತ್ಮನೆನಿಸುವವನಲ್ಲ; ಮತ್ತೆ ಎಂದೆಂದೂ ಬಂಧನಕ್ಕೊಳಗಾಗದೆಯೇ ಯಾವಾಗಲೂ ಬಿಡುಗಡೆ ಪಡೆದಿರುವವನು. ಆದುದರಿಂದ ವಿಶೇಷವಾಗಿ ಮುಕ್ತಾತ್ಮ - ವಿಮುಕ್ತಾತ್ಮ. ಲಕ್ಷ್ಮೀದೇವಿ ಹಾಗೂ ಪರಮಾತ್ಮ ಇಬ್ಬರೂ ನಿತ್ಯ ಮುಕ್ತರೆನಿಸಿದ್ದು ಒಮ್ಮೆ ಬಂಧನಕ್ಕೊಳಗಾಗಿದ್ದು ಮತ್ತೆ ಬಿಡುಗಡೆಗೆ ಪಡೆದವರಲ್ಲ ; ಬದಲಾಗಿ ಎಂದೆಂದೂ ಬಂಧನಕ್ಕೊಳಗಾಗದೆಯೇ ಬಿಡುಗಡೆಗೆ ಪಾತ್ರರಾಗಿರುವವರು.

ಕೃಷ್ಣ ಕೌರವಪಾಂಡವ ಸಂಧಾನಕ್ಕಾಗಿ ಹಸ್ತಿನಾಪುರಕ್ಕೆ ಹೋಗಿದ್ದಾಗ

ದುರ್ಯೋಧನಾದಿಗಳು ಅವನನ್ನು ಬಂಧಿಸಬೇಕೆಂದು ತೊಡಗಿದರು. ಆದರೆ 'ವಿಮುಕ್ತಾತ್ಮ'ನಾದ ಅವನನ್ನು ಬಂಧಿಸಲು ಆಗಲೇ ಇಲ್ಲ.

**೪೫೬. ಸರ್ವಜ್ಞಃ – * ಎಲ್ಲವನ್ನೂ ಬಲ್ಲವನು.**

*** ಸರ್ವ ಎನಿಸಿರುವ ತನ್ನನ್ನು ಬಲ್ಲವನು.**

**ವಿವರಣೆ :** ಸರ್ವಂ ಜಾನಾತಿ - ಎಲ್ಲವನ್ನೂ ಬಲ್ಲವನೇ ಸರ್ವಜ್ಞ ಎಂಬುದು ಸ್ಪಷ್ಟ. ಆದರೆ ಸರ್ವ ಎಂದರೆ ಏನು ? ಎಲ್ಲ ಎಂಬ ಒಂದು ಅರ್ಥ ಇದ್ದೇ ಇದೆ. ಅದರ ಜೊತೆಗೆ -

ಸರ್ವ ಎಂದರೆ ದೇವರೇ. ದೇವರು ಯಾಕೆ ಸರ್ವ ಎನಿಸುವನೆಂದರೆ **'ಸರ್ವಂ ಸಮಾಪ್ನೋಷಿ ತತೋಽಸಿ ಸರ್ವಃ ..........'** - ಎಂದು ಅರ್ಜುನ ವಿಶ್ವರೂಪಿ ಪರಮಾತ್ಮನಲ್ಲಿ ಎಲ್ಲವನ್ನೂ ವ್ಯಾಪಿಸಿರುವುದರಿಂದ ನೀನು ಸರ್ವ ಎನಿಸಿರುವಿ ಎಂದು ಸ್ತುತಿಸಿರುವನು.

ಅಂತಹ ಸರ್ವ ಎನಿಸಿರುವ ಪರಮಾತ್ಮನನ್ನು ತಿಳಿದುಕೊಂಡವನು ಅವನೇ ಆದುದರಿಂದ 'ಸರ್ವಂ ಜಾನಾತೀತಿ' ಅವನು ಸರ್ವಜ್ಞ ಎನಿಸುವನು.

ದೇವರನ್ನು ನಾವೆಲ್ಲ ತಿಳಿದಿಲ್ಲ.
ದೇವರನ್ನು ದ್ರೋಣಾದಿಗಳು ತಿಳಿದಿಲ್ಲ.
ದೇವರನ್ನು ಭೀಮಸೇನ ತಿಳಿದುಕೊಂಡಿಲ್ಲ.
ದೇವರನ್ನು ರುಗ್ಮಿಣಿ ಸತ್ಯಭಾಮೆಯರೂ ಚೆನ್ನಾಗಿ ತಿಳಿದುಕೊಂಡಿಲ್ಲ.

ಮತ್ತೆ ದೇವರನ್ನು ತಿಳಿದುಕೊಂಡವರು ಯಾರು ಗೊತ್ತಾ ? ದೇವರನ್ನು ತಿಳ್ಕೊಂಡವನು ದೇವರೇ. ಆದ್ದರಿಂದ ದೇವರಿಗೆ ಸರ್ವಜ್ಞ ಎಂಬ ಹೆಸರು ಬಂದಿದೆ. ಸರ್ವದಲ್ಲಿಯೂ ಇರುವ ಅವನ ರೂಪಗಳನ್ನೆಲ್ಲ ತಿಳಿದಿರುವವನು ಅವನೊಬ್ಬನೇ. ಆದುದರಿಂದಲೂ ಅವನು ಸರ್ವಜ್ಞ.

**೪೫೭. ಜ್ಞಾನಮುತ್ತಮಮ್ – ಶ್ರೇಷ್ಠವಾದ ಜ್ಞಾನಸ್ವರೂಪಿ.**

**ವಿವರಣೆ :** ದೇವರು ತಿಳಿದವನೂ ಹೌದು ; ತಿಳುವಳಿಕೆಯೂ ಹೌದು. ಅವನು ಪರಿಶುದ್ಧವಾದ ತಿಳುವಳಿಕೆ. ಅಜ್ಞಾನದ, ವಿಪರೀತ ಜ್ಞಾನದ ಸೋಂಕೇ ಇಲ್ಲದ ತಿಳುವಳಿಕೆ ಅದು. ಎಂದೂ ಹುಟ್ಟುವುದೂ ಇಲ್ಲ ; ನಶಿಸುವುದೂ ಇಲ್ಲ. ಯಾವುದೇ ದೋಷಕ್ಕೆ ಒಳಗಾಗದಿರುವುದರಿಂದ ಉತ್ತಮ ಎನಿಸಿದೆ. ಆದುದರಿಂದಲೇ ಭೀಷ್ಮರು ಎದುರಿಗಿರುವ ಕೃಷ್ಣನನ್ನು - 'ಜ್ಞಾನಮುತ್ತಮಮ್' - ಉತ್ತಮಂ ಜ್ಞಾನಮ್ -

ಶ್ರೇಷ್ಠವಾದ ತಿಳುವಳಿಕೆ ರೂಪದಲ್ಲಿ ಇರುವವನೇ ಎಂದು ಸ್ತುತಿಸಿರುವರು.

**ಸುವ್ರತಃ ಸುಮುಖಃ ಸೂಕ್ಷ್ಮಃ ಸುಘೋಷಃ ಸುಖದಃ ಸುಹೃತ್ |**
**ಮನೋಹರೋ ಜಿತಕ್ರೋಧೋ ವೀರಬಾಹುರ್ವಿದಾರಣಃ ||೪೯||**

**೪೫೮. ಸುವ್ರತಃ – ಭಕ್ತರ ರಕ್ಷಣೆಯೇ ಮುಂತಾದ ಒಳ್ಳೆಯ ವ್ರತ ಉಳ್ಳವನು.**

**ವಿವರಣೆ :** ವ್ರತ ಎಂದರೆ ದೀಕ್ಷೆ, ನಿಯಮ. ಒಳ್ಳೆಯ ದೀಕ್ಷೆ, ನಿಯಮ ಉಳ್ಳವನೇ ಸುವ್ರತ. ದೇವರು ಏನಾದರೂ ಮಾತು ಹೇಳಿದ ಎಂದರೆ ಅದು ಒಳ್ಳೆಯದು ಎಂದೇ ಅರ್ಥ. 'ನ ಮೇ ಭಕ್ತಃ ಪ್ರಣಶ್ಯತಿ' ಇದೊಂದು ದೇವರ ದೀಕ್ಷೆ, ನನ್ನ ಕಾಲು ಹಿಡಿದವರನ್ನು ನಾನೆಂದೂ ಕೈ ಬಿಡುವುದಿಲ್ಲ - ಎಂಬುದು ದೇವರ ವ್ರತ. ಅದು ನಿಯಮ ಎಂದು ಅದನ್ನು ಕೊನೆಯ ತನಕವೂ ಉಳಿಸಿದ. ವ್ರತ ಒಳ್ಳೆಯದಾಗುವುದು ಆರಂಭಿಸಿದ ವ್ರತ ಕೊನೆಗೊಳಿಸಿದಾಗ. ಚಾತುರ್ಮಾಸ್ಯ ವ್ರತವಾಗಲೀ, ಏಕಾದಶೀ ವ್ರತವಾಗಲೀ ಆರಂಭಿಸಿ, ಕೊನೆಗೊಳಿಸಿದಾಗಷ್ಟೇ ಅದು ಸುವ್ರತ ಎನಿಸುವುದು.

ಭಗವಂತನಿಗೆ ವಿಧಿ ನಿಷೇದಗಳ ಬಾಧ್ಯತೆಯಿಲ್ಲದಿದ್ದರೂ ನಮಗಾಗಿ ಆ ಎಲ್ಲ ವ್ರತಗಳನ್ನು ಪಾಲಿಸುವನು. ಅದಕ್ಕಿಂತಲೂ ಹೆಚ್ಚಾಗಿ ಭಕ್ತರ ರಕ್ಷಣೆಯೇ ಮುಂತಾದ ವಿಷಯಗಳಲ್ಲಿ ಏನಾದರೂ ಮಾತು ಕೊಟ್ಟರೆ ಅದನ್ನು ತಪ್ಪದೆ ಪಾಲಿಸುವನು. ಇಷ್ಟು ದಿನದಲ್ಲಿ ಈ ವ್ಯಕ್ತಿಯನ್ನು ಕೊಲ್ಲುವೆನೆಂದು ಮಾತು ಕೊಟ್ಟಿದ್ದರೆ ಅದಕ್ಕನುಗುಣವಾಗಿಯೇ ನಡೆದುಕೊಳ್ಳುವನು.

ಭೀಷ್ಮರು ಕೃಷ್ಣನಲ್ಲಿ ನಿವೇದಿಸಿಕೊಳ್ಳುವರು - ಮಹಾಭಾರತ ಯುದ್ಧ ಇಷ್ಟು ದಿನ ಕಾಲ ನಡೆಯಬೇಕು. ಅದರಲ್ಲಿ ಇಷ್ಟನೇ ದಿನ ಭೀಷ್ಮ ಪತನ ಹೊಂದಬೇಕು - ಇವೆಲ್ಲ ನೀನು ತೊಟ್ಟ ವ್ರತವಾಗಿದ್ದು, ಆದುದರಿಂದಲೇ ಚಾಚೂ ತಪ್ಪದೆ ನಡೆದಿದೆ.

ಹೀಗೆ ಭಗವಂತನನ್ನು 'ಸುವ್ರತಃ' - ಎಂದು ಉಪಾಸನೆ ನಡೆಸಿದೆವೆಂದರೆ ನಾವು ಕೂಡಾ ಏಕಾದಶೀವ್ರತವೇ ಮುಂತಾದ ವ್ರತಗಳನ್ನು ಆರಂಭಿಸಿ, ಕೊನೆಗೊಳಿಸುವೆವು. ಯಾರಿಗಾದರೂ ಮಾತು ಕೊಟ್ಟಿದ್ದರೆ ಅದನ್ನು ಪಾಲಿಸುವ ವ್ರತವನ್ನೂ ಚೆನ್ನಾಗಿಯೇ ಪೂರೈಸುವೆವು.

**೪೫೯. ಸುಮುಖಃ – ಯಾರ ಬಗ್ಗೆ ನಡೆಸುವ ಒಳ್ಳೆಯ ವ್ರತಾದಿಗಳ, ಕೆಲಸಗಳ ಆರಂಭಮಾತ್ರವೂ ಫಲಪ್ರದವಾಗಿ ಒಳ್ಳೆಯದೆನಿಸುವುದೋ ಅಂತಹವನು.**

**ವಿವರಣೆ :** ಒಳ್ಳೆಯ ಮುಖವುಳ್ಳವನು ಸುಮುಖ. ಆದರೆ ದೇವರ ಮುಖ ಮಾತ್ರ ಒಳ್ಳೆಯದಲ್ಲ, ಪ್ರತಿಯೊಂದೂ ಅಂಗಾಗವೂ ಒಳ್ಳೆಯದು. ಆದುದರಿಂದ ಇಲ್ಲಿ

ಮುಖ ಎಂದರೆ ಆರಂಭ. ಯಾರ ವಿಷಯದಲ್ಲಿ ವ್ರತಾದಿಗಳ ಆರಂಭ ಮಾತ್ರವೂ ಒಳ್ಳೆಯದಾದ್ದದ್ದೋ ಅಂತಹವನು. ಅಂದರೆ 'ಸುವ್ರತಃ' - ಎಂಬ ನಾಮದಲ್ಲಿ ಸೂಚಿತವಾದಂತೆ ಅವನ ಪ್ರೀತಿಗಾಗಿ ನಡೆಸುವ ವ್ರತಗಳು ಒಳ್ಳೆಯವುಗಳು ; ಒಳ್ಳೆಯ ಫಲಪ್ರದಗಳು. ಒಂದೊಮ್ಮೆ ವ್ರತಗಳನ್ನು ಪೂರ್ಣವಾಗಿ ಪೂರೈಸಲಿಕ್ಕೆ ಆಗದಿದ್ದರೂ **'ಆರಂಭಮಾತ್ರಮಿಚ್ಛಾ ವಾ ವಿಷ್ಣುಧರ್ಮೇ ನ ನಿಷ್ಫಲಾ'** - ಎಂದಿರುವಂತೆ ವ್ರತದ ಆರಂಭ ಮಾತ್ರ ಮಾಡಿ ಅದನ್ನು ಪೂರೈಸಲಿಕ್ಕೆ ಆಗದೆ ಮಧ್ಯದಲ್ಲಿಯೇ ಬಿಟ್ಟು ಬಿಡಬೇಕಾದ ಪ್ರಸಂಗ ಬಂದರೂ ಅಷ್ಟಕ್ಕಾದರೂ ಭಗವಂತ ಫಲ ಕೊಟ್ಟೇ ಕೊಡುವನು. ಆದುದರಿಂದ ಅವನ ಕುರಿತಾದ ವ್ರತಾದಿಗಳ ಮುಖಮಾತ್ರವೂ, ಆರಂಭಮಾತ್ರವೂ ಒಳ್ಳೆಯದೇ ಆಗಿದೆ ಎಂದು ಅವನು ಸುಮುಖ ಎನಿಸುವನು. ತನ್ನ ವಿಷಯುದಲ್ಲಿ ಭಕ್ತರು ಕೈಗೊಳ್ಳುವ ಸಂಕಲ್ಪವೂ ಫಲಪ್ರದವಾಗಿ ಒಳ್ಳೆಯದೆನಿಸುವಂತೆ ಮಾಡುವವನು ಸುಮುಖ.

ಆದುದರಿಂದ ದೇವರ ವಿಷಯದಲ್ಲಿ ಒಳ್ಳೊಳ್ಳೆಯ ಸಂಕಲ್ಪಗಳನ್ನಾದರೂ ನಡೆಸೋಣ ಎಂಬುದು 'ಸುಮುಖ' ನಾಮದ ಸಂದೇಶ.

**೪೬೦. ಸೂಕ್ಷ್ಮಃ - * ಒಳ್ಳೆಯದನ್ನಾಗಲೀ, ಕೆಟ್ಟದನ್ನಾಗಲೀ ಮನಸ್ಸಿಗೆ ತುಂಬ ತೆಗೆದುಕೊಳ್ಳುವವನು.**

*** ದೈಹಿಕವಾಗಿಯೂ ಅತ್ಯಂತ ಸೂಕ್ಷ್ಮ.**

**ವಿವರಣೆ:** ದೇವರು ಭಾರೀ ಸೂಕ್ಷ್ಮ. ಅಂದರೆ ತುಂಬ ಮನಸ್ಸಿಗೆ ತೆಗೆದುಕೊಳ್ಳುವವನು. 'sensitive' ಅಂತ ಏನೋ ಹೇಳ್ತೀರಲ್ಲ ! ಹಾಗೆ.

ತಿರುಪತಿ ತಿಮ್ಮಪ್ಪನಿಗೆ ಐವತ್ತು ಸಾವಿರ ರೂ. ಏನ ಒಂದು ಸೀರೆ ಅರ್ಪಿಸಬೇಕು ಎಂದು ಒಬ್ಬ ಹೆಣ್ಮಗಳು ತಂದಿದ್ದಳಂತೆ. ಎಲ್ಲರ ಹತ್ತಿರ ಹೇಳ್ತಾ ಹೇಳ್ತಾ ಬರುತ್ತಿದ್ದಾಳೆ - ಭಾರೀ ತಾನೊಂದು ಕೊಡುಗೆ ಸಲ್ಲಿಸುವವಳಂತೆ. ಗಂಡ ಮುಂದೆ ಸಾಗುತ್ತಿದ್ದಾನೆ. ಗಂಡ ದೇವಾಲಯುದ ದ್ವಾರ ದಾಟಿದ್ದಾನೆಂದಾಕ್ಷಣ ಹೆಂಡತಿಯನ್ನು ತಡೆದೇ ನಿಲ್ಲಿಸಿದರಂತೆ. ಎಷ್ಟೆಷ್ಟು ಅಂಗಲಾಚಿ ಬೇಡಿದರೂ ಒಳಗೆ ಬಿಟ್ಟಿಲ್ಲ. ಐವತ್ತು ಸಾವಿರದ ಸೀರೆ ತಂದಿದ್ದೇನೆ ಎಂದರೆ ಅದನ್ನು ಬೇರೆಲ್ಲಿಗಾದರೂ ಕೊಡು ಎಂದರೇ ಹೊರತು ಆಕೆಯನ್ನು ಒಳಗೆ ಬಿಟ್ಟಿಲ್ಲ. ಇದೆಲ್ಲ ಯಾರ ಕಾರುಬಾರು? ತಿಮ್ಮಪ್ಪನದ್ದೇ. ಅಷ್ಟು ಸೂಕ್ಷ್ಮಸ್ವಭಾವದ ತಿಮ್ಮಪ್ಪ ಆ ಅಧಿಕಾರಿಗಳ ಮೂಲಕ ಆ ಹೆಣ್ಮಗಳನ್ನು ತಡೆದ !

ಹೀಗೆ ತಿರುಪತಿಯಲ್ಲಿ ನಡೆದಂತೆಯೇ ಉಡುಪಿ, ಬದರಿ, ಪುರಿ ಜಗನ್ನಾಥ - ಮುಂತಾದ ಕ್ಷೇತ್ರಗಳಲ್ಲೆಲ್ಲ ಅಲ್ಲಲ್ಲಿಯ ಭಗವದ್ರೂಪಗಳ ಸೂಕ್ಷ್ಮ ಸ್ವಭಾವಕ್ಕೆ ಸಂಬಂಧಿಸಿದಂತೆ ಬೇರೆ ಬೇರೆ ಘಟನೆಗಳು ನಡೆಯುತ್ತಿರುತ್ತವೆ.

ಇದು ಭಗವಂತನ ಮಾನಸಿಕ ಸೂಕ್ಷ್ಮತೆಗೆ ಸಂಬಂಧಿಸಿದ ವಿಚಾರವಾದರೆ, ಅವನು ದೈಹಿಕವಾಗಿಯೂ ಸೂಕ್ಷ್ಮ. ಪರಮಾಣು ಎಂದು ಪ್ರಸಿದ್ಧವಾದ ಅತ್ಯಂತ ಪುಟ್ಟ ಪ್ರಮಾಣದ ವಸ್ತುವಿಗಿಂತ ಚಿಕ್ಕದಾದದ್ದು ಮತ್ತೊಂದು ಇಲ್ಲ ಎನ್ನುವಂತಿಲ್ಲ. ಯಾಕೆಂದರೆ ಆ ಪರಮಾಣುವಿನ ಒಳಗಿರುವ ಭಗವಂತ ಆ ಪರಮಾಣುವಿಗಿಂತಲೂ ಚಿಕ್ಕವನು ತಾನೇ ? ಹೀಗೆ ಲೋಕದಲ್ಲಿ ಯಾವುದು ಯಾವುದು ಸೂಕ್ಷ್ಮ ಎಂದಿದೆಯೋ ಅದಕ್ಕಿಂತ ಸೂಕ್ಷ್ಮ ದೇವರು. ಜೀವ ಬಹಳ ಅಣು. ಅದಕ್ಕಿಂತಲೂ ಚಿಕ್ಕ ರೂಪ ಭಗವಂತನದ್ದು. ಅಣುವಿಗಿಂತಲೂ ಅಣುರೂಪ ಭಗವಂತನದ್ದು. ದೇವರಿಗಿಂತ ಚಿಕ್ಕ ರೂಪ ಮತ್ತೊಂದಕ್ಕಿಲ್ಲ ಎನ್ನುವಲ್ಲಿ ನಿಲ್ಲಬೇಕು. ಆದ್ದರಿಂದಲೇ ಭೀಷ್ಮರು 'ಸೂಕ್ಷ್ಮಃ' - ಎಂದು ದೇವರನ್ನು ಸ್ತುತಿಸುವರು.

**೪೬೧. ಸುಘೋಷಃ - * ಒಳ್ಳೆಯ ಘೋಷಣೆಗಳಿಗೆ ಒಳಗಾಗುವನು.**
*** ವೇದ ಎಂಬ ಒಳ್ಳೆಯ ಧ್ವನಿಯನ್ನು ಹೊರಡಿಸುವವನು.**

ವಿವರಣೆ: ಒಳ್ಳೆಯ ವ್ರತವುಳ್ಳವನು, ಒಳ್ಳೆಯ ಪ್ರಾರಂಭವುಳ್ಳವನು, ಸೂಕ್ಷ್ಮನಾದವನು ಎಂಬುದಾಗಿ ಒಳ್ಳೆಯ ಘೋಷಣೆಗೆ ಒಳಗಾದವನು ಸುಘೋಷ. ಘೋಷ ಎಂದರೆ ಧ್ವನಿ ಎಂದರ್ಥ.

ದೇವರ ಬಗ್ಗೆ ಘೋಷಣೆ ಹಾಕಬೇಕಲ್ಲ ? ಹೇಗೆ ಘೋಷಣೆ ಹಾಕುವುದು? ವಿಶ್ವ, ವಿಷ್ಣು, ವಷಟ್ಕಾರ...... ಮುಂತಾದ ಘೋಷಣೆಗೆ ಒಳಗಾದವನು.

ಇದು ಒಂದು ಅರ್ಥವಾದರೆ, ಮತ್ತೊಂದು ಅರ್ಥ - ದೇವರು ಯಾವಾಗಲೂ ವೇದದ ಉಚ್ಚಾರಣೆ ಮಾಡಿಕೊಂಡಿರುವವನು. ಘೋಷ ಶಬ್ದಕ್ಕೆ ಧ್ವನಿ ಎಂಬ ಅರ್ಥ. ಆದುದರಿಂದ ಒಳ್ಳೆಯ ಧ್ವನಿ ಹೊರಡಿಸುವವನೇ 'ಸುಘೋಷ'.

ಸಾಮಾನ್ಯವಾಗಿ ಹೇಗಿರುವುದೆಂದರೆ ಎತ್ತರದ ಧ್ವನಿಯಲ್ಲಿ ಮಾತನಾಡಿಸಿದರೆ ಇಂಪಾಗಿರುವುದಿಲ್ಲ ; ಇಂಪಾಗಿ ಹಾಡುವವನ ಧ್ವನಿ ಕೇಳಿಸುವುದೇ ಇಲ್ಲ. ಇವನ ಧ್ವನಿಯಾದರೂ ಎತ್ತರದ ಧ್ವನಿ ಹಾಗೂ ಇಂಪಾದ ಧ್ವನಿ, ಭಾರೀ ಜೋರಾಗಿ ಮಾತಾಡುವವನು. ಗಾಂಭೀರ್ಯ ಕಳೆದುಕೊಂಡಿಲ್ಲ. ಕೇಳಲು ಇಂಪಾಗಿರುವುದು. ಆದುದರಿಂದಲೇ 'ಸುಘೋಷಃ', ವೇದ ಎಂಬ ಒಳ್ಳೆಯ ಧ್ವನಿ ಉಳ್ಳವನು. ದೇವರು

ವೇದ ಬಿಟ್ಟರೆ ಬೇರೆ ಮಾತನಾಡುವುದೇ ಇಲ್ಲ. ಬೇರೆ ಮಾತು ದೇವರ ಬಾಯಿಯಲ್ಲಿ ಬರುವುದಿಲ್ಲ.

ನಮ್ಮ ಬಾಯಿಯಿಂದ ಒಳ್ಳೆಯ ಮಾತುಗಳೇ ಹೊರ ಹೊಮ್ಮುವಂತಾಗಬೇಕು. ಏನನ್ನೋ ಮಾತನಾಡಿ ಮತ್ತೆ ನಾಲಗೆ ಕಚ್ಚಿಕೊಳ್ಳುವ ಪ್ರಸಂಗ ಬರಬಾರದು. ಅದಕ್ಕಾಗಿ 'ಸುಘೋಷ' ನಾಮದಿಂದ ಅವನನ್ನು ಉಪಾಸಿಸೋಣ.

**೪೬೨. ಸುಖದಃ - ಒಳ್ಳೆಯ ಸುಖವನ್ನು ಕೊಡುವವನು.**

**ವಿವರಣೆ :** ಒಳ್ಳೆಯ ಸುಖವನ್ನು ಕೊಡುವವನು. ಹಿಂದೆ ಹೇಳಿದ ರೀತಿಯಲ್ಲಿ ಉಪಾಸನೆ ಮಾಡುತ್ತ ಬಂದವರಿಗೆ ಭಗವಂತನು **'ಸುಖಂ ದದಾತಿ'** ಸುಖವನ್ನುಂಟು ಮಾಡುವನು.

**೪೬೩. ಸುಹೃತ್ - ಯಾವುದೇ ಫಲವನ್ನು ಅಪೇಕ್ಷಿಸದೆ ಉಪಕಾರವನ್ನು ಮಾಡುವವನು.**

**ವಿವರಣೆ:** ಹಿಂದೆ ಹೇಳಿದ ರೀತಿಯಲ್ಲಿ ಉಪಾಸನೆ ಮಾಡುತ್ತ ಬಂದವರಿಗೆ ಭಗವಂತ 'ಸುಹೃತ್'. ಸುಹೃತ್ ಎಂದರೆ ನಿರ್ನಿಮಿತ್ತವಾಗಿ ಉಪಕಾರವನ್ನು ಮಾಡುವವನು. ಇನ್ನೊಬ್ಬರಿಂದ ಪ್ರತಿಯಾಗಿ ಏನನ್ನೂ ಅಪೇಕ್ಷಿಸದೆ ಅವರಿಗೆ ಉಪಕಾರ ಮಾಡುವವನು ಸುಹೃತ್.

ನಿಮ್ಮಿಂದ ಏನನ್ನಾದರೂ ಪ್ರತಿಯಾಗಿ ಅಪೇಕ್ಷಿಸಿ, ನಾನು ನಿಮಗೆ ಉಪಕಾರವನ್ನು ಸಲ್ಲಿಸಿದೆನೆಂದರೆ ನನ್ನನ್ನು 'ಸುಹೃತ್' - ಎಂದು ಕರೆಯುವಂತಿಲ್ಲ. 'ಅನಿಮಿತ್ತಬಂಧು' - ಎಂದು ಹೇಳುವಂತೆ ತನಗಾಗಿ ಏನನ್ನೂ ನಿಮಿತ್ತವನ್ನಾಗಿ ಇಟ್ಟುಕೊಳ್ಳದೆ ಬಂಧು ಆದವನೇ 'ಸುಹೃತ್'.

**೪೬೪. ಮನೋಹರಃ - ತನ್ನ ಸೌಂದರ್ಯಾದಿಗಳಿಂದ ಎಲ್ಲರ ಮನಸ್ಸನ್ನು ತನ್ನೆಡೆಗೆ ಸೆಳೆದುಕೊಳ್ಳುವವನು**

**ವಿವರಣೆ:** ಮನೋಹರ ಎಂದರೆ ಚೆಂದ ಎಂಬ ಅರ್ಥ ಪ್ರಸಿದ್ಧ. ಚೆಂದಕ್ಕೆ ಮನೋಹರ ಎಂಬ ಹೆಸರು ಯಾಕೆ ಬಂತು ? ಮನಃ ಹರತಿ ಇತಿ ಮನೋಹರಃ- ಯಾವ ವಸ್ತು ನಮ್ಮ ಮನಸ್ಸನ್ನು ಅಪಹರಿಸುವುದೋ ಆ ವಸ್ತುವಿಗೆ ಮನೋಹರ ಎಂಬ ಹೆಸರು. ಮನಸ್ಸನ್ನು ಅಪಹರಿಸಿದ ವಸ್ತು ಎಂದರೆ ಚೆಂದ ಎಂದೇ ಅರ್ಥ.

ಕೃಷ್ಣ ಎಷ್ಟು ಚೆಂದ ? ಸಾಕ್ಷಾನ್ಮನ್ಮಥಮನ್ಮಥಃ - ಎಂತಾರೆ. ಸಂಧಾನಕ್ಕೆ ಹೋಗುವಾಗ ಕೃಷ್ಣನಿಗೆ ಎಪ್ಪತ್ತು ದಾಟಿದೆ. ನಲ್ವತ್ತು ದಾಟಿದರೇನೇ ನಮ್ಮನ್ನು ನಿಮ್ಮನ್ನು ನೋಡಲು ಆಗುವುದಿಲ್ಲ. ಎಂಭತ್ತನೇ ಶಾಂತಿ ಯಾವಾಗ ? ಎಂದು ವಿಚಾರಿಸುತ್ತಿರುತ್ತಾರೆ. ಆದರೆ ಎಪ್ಪತ್ತೂ ದಾಟಿದ ಕೃಷ್ಣ ಸಂಧಾನಕ್ಕೆ ಹೋಗುವಾಗ ಶ್ರೀಮಧ್ವರು ಒಂದು ಮಾತು ಹೇಳ್ತಾರೆ - ಪುಟ್ಟ ಪುಟ್ಟ ಹೆಣ್ಮಕ್ಕಳೂ ಕೂಡಾ ಅಟ್ಟ ಹತ್ತಿ, ಬಾಗಿಲ ಎಡೆಯಲ್ಲಿ ನಿಂತು ಕೃಷ್ಣನ ಸೌಂದರ್ಯವನ್ನು ಆಸ್ವಾದನೆ ಮಾಡುತ್ತಿದ್ದರು. ಯಾಕೆ ? ಜನ ಸಮ್ಮರ್ದದಿಂದಾಗಿ ಅವರಿಗೆ ಬರಲಿಕ್ಕೆ ಸಾಧ್ಯವಾಗುತ್ತಿಲ್ಲ. 'ರಾಜ ಬೀದಿಯೊಳಗಿಂದ ಕಸ್ತೂರಿ ರಂಗ ತೇಜನೇರಿ ಮೆರೆದು ಬಂದನೋ.....' ಕೃಷ್ಣ ಸಂಧಾನಕ್ಕೆ ಬರತಕ್ಕ ಪ್ರಸಂಗವನ್ನು ವಾದಿರಾಜ ಸ್ವಾಮಿಗಳು ಕಣ್ಣಿಗೆ ಕಟ್ಟುವಂತೆ ಚಿತ್ರಿಸಿರುವರು. ಆ ವಯಸ್ಸಿನಲ್ಲೂ ಕೃಷ್ಣ 'ಸಾಕ್ಷಾನ್ಮನ್ಮಥಮನ್ಮಥ.......' ಮನ್ಮಥನಿಗೂ ಮನ್ಮಥ. ಒಬ್ಬ ಹೆಣ್ಣನ್ನು ಕಂಡಾಗ ಗಂಡುವಿಗೆ, ಗಂಡನ್ನು ಕಂಡಾಗ ಹೆಣ್ಣಿಗೆ ಮನಸ್ಸು ಮಥನಕ್ಕೆ ಒಳಗಾಗುವುದು ; ಇದನ್ನು ನಡೆಸುವುದರಿಂದಲೇ ಕಾಮನಿಗೆ ಮನ್ಮಥ ಎಂಬ ಹೆಸರು. ಅಂತಹ ಮನ್ಮಥನ ಮನಸ್ಸನ್ನೂ ಮಥನ ಮಾಡುವಷ್ಟು ಸೌಂದರ್ಯ ಭಗವಂತನದ್ದಾದುರಿಂದ ಅವನು ಮನ್ಮಥನಿಗೂ ಮನ್ಮಥ.

ವಾದಿರಾಜತೀರ್ಥರು ಲಕ್ಷ್ಮೀಶೋಭಾನೆ ಹಾಡಿನಲ್ಲಿ ಒಂದು ಹಾಸ್ಯದ ಮಾತನ್ನು ಆಡುವರು. ಲಕ್ಷ್ಮೀಸ್ವಯಂವರ ಆಗಬೇಕು ಎಂದಾಗಲೇ ದೇವತೆಗಳನ್ನು ಪಂಕ್ತಿಯಲ್ಲಿ ಕೂಡಿಸಿ ಅಮೃತ ವಿತರಣೆಯ ಕಾರ್ಯಕ್ರಮ ಪ್ರಾರಂಭವಾಗಿತ್ತಂತೆ. ಭಗವಂತನೇ ಮೋಹಿನಿ ರೂಪ ತಾಳಿ ದೇವತೆಗಳಿಗೆ ಅಮೃತವನ್ನು ಬಡಿಸುತ್ತಿದ್ದನಂತೆ. ಈ ಹೆಣ್ಣು ರೂಪವ ಕಂಡು ಲಕುಮಿ 'ಇವಗೆ ಅನ್ಯರು ಏಕೆ ಎಂದು ಬೆರಗಾದಳು - ಶೋಭಾನೆ........' ದೇವರು ಸ್ವಯಂ ಇಷ್ಟು ಸುಂದರನಾಗಿರುವಾಗ ನಾನು ಇವನಿಗೆ ಬೇಕಾ ? ಎಂದು ಲಕ್ಷ್ಮೀದೇವಿ ಭಗವಂತನ ಸೌಂದರ್ಯವನ್ನು ಅನುಭವಿಸಿದ ಕ್ರಮ.

ಹೀಗೆ ಲಕ್ಷ್ಮೀದೇವಿಯ ಮನಸ್ಸೇ ಭಗವಂತನ ಸೌಂದರ್ಯದಿಂದ ಅಪಹೃತವಾಯಿತೆಂದರೆ ಉಳಿದವರ ಮನಸ್ಸಿನ ಪಾಡೇನು !

ಹೀಗೆ ಎಲ್ಲರ ಮನಸ್ಸನ್ನು ಅಪಹಾರ ಮಾಡುವಷ್ಟು ದೇಹದ ಸೌಂದರ್ಯ, ಮಾತಿನ ಸೌಂದರ್ಯ, ಕೃತಿಯ ಸೌಂದರ್ಯ - ಹೀಗೆ ಪ್ರತಿಯೊಂದು ವಿಷಯಕ್ಕೂ ಸಂಬಂಧಪಡುವ ಅಚ್ಚುಕಟ್ಟುತನ, ಸೌಂದರ್ಯ ನಿನ್ನಲ್ಲಿ ಮಡಗಟ್ಟಿರುವುದರಿಂದ ಕೃಷ್ಣ ನೀನು ಮನೋಹರ ಎಂದು ಭೀಷ್ಮರು ಸ್ತುತಿಸುವರು.

ನಮ್ಮ ಕೃತಿ, ನಮ್ಮ ಮಾತು - ಮತ್ತೊಬ್ಬರ ಮನಸ್ಸನ್ನು ಸೆಳೆಯುವಷ್ಟು ಆಕರ್ಷಕವಾಗಿ, ಅಚ್ಚುಕಟ್ಟಾಗಿ ಇರುವಂತಾಗಬೇಕೆಂದರೆ ದೇವರನ್ನು ಮನೋಹರ ಎಂದು ಉಪಾಸಿಸಬೇಕು.

**೪೬೫. ಜಿತಕ್ರೋಧಃ - ಸಿಟ್ಟನ್ನು ತನ್ನ ಹಿಡಿತದಲ್ಲಿಟ್ಟುಕೊಂಡವನು.**

**ವಿವರಣೆ :** ಸಿಟ್ಟನ್ನು ಗೆದ್ದವನೇ ಜಿತಕ್ರೋಧ. ಸಿಟ್ಟನ್ನು ಮಾಡುವುದು ದೊಡ್ಡದಲ್ಲ; ಸಿಟ್ಟು ಬಂದಾಗ ಅದನ್ನು ತಡೆ ಹಿಡಿದುಕೊಳ್ಳುವುದು ದೊಡ್ಡದು. **'ಕಾಮಾತ್ ಕ್ರೋಧೋಽಭಿಜಾಯತೇ'** - ಎಂದು ಕೃಷ್ಣನೇ ಹೇಳಿರುವಂತೆ ತುಂಬ ಕಾಮನೆ ಬಂದಾಗ ನಮಗೆ ಸಿಟ್ಟು ಬರುವುದು. ಯಾಕೆಂದರೆ ನಮ್ಮ ಕಾಮನೆ ಎಷ್ಟೋ ಸಂದರ್ಭಗಳಲ್ಲಿ ಹಿರಿಯರಿಗೆ ವಿರುದ್ಧವಾಗಿ ಇರುವುದು. ಹಿರಿಯರಿಗೆ ವಿರುದ್ಧವಾಗಿ ಇದ್ದರೂ ಅದನ್ನು ಪೂರೈಸಬೇಕೆಂದು ನಮಗೆ ಹಠ ಬಂದಿರುವುದು. ಹಿರಿಯರ ವಿರೋಧವನ್ನು ಗಣನೆಗೇ ತೆಗೆದುಕೊಳ್ಳದೆ ಆ ಕಾಮನೆಯನ್ನು ಪೂರೈಸಿದೆವು. ಅದನ್ನು ಪೂರೈಸುವ ಮಧ್ಯದಲ್ಲಿ ಹಿರಿಯರ ಪಾಲ್ಗೊಳ್ಳುವಿಕೆ ಬೇಕಿರುತ್ತದೆ. ಆದರೆ ಅವರು ಬಹಿಷ್ಕಾರ ಹಾಕಿ ಹೋಗಿರುತ್ತಾರೆ. ಅಂತಹ ಸಂದರ್ಭದಲ್ಲಿ ಎಷ್ಟೇ ಓದಿದವನಾಗಿದ್ದರೂ ತಡೆಯಲಾರದಷ್ಟು ಸಿಟ್ಟು ಬರುವುದು.

ಆದರೆ ಕೃಷ್ಣನ ಸ್ವಭಾವ ಹೀಗಲ್ಲ. ಅವನಿಗೆ ಸಿಟ್ಟಿನ ಸಂಪರ್ಕವೇ ಇಲ್ಲ. ಸಿಟ್ಟಿನ ಪ್ರದರ್ಶನ ಮಾಡಿದರೂ ಅದನ್ನು ತಡೆ ಹಿಡಿದುಕೊಳ್ಳುವನು.

ಸಿಟ್ಟು ಬಂದರೆ ಅದನ್ನು ಹೇಗೆ ಉಪಶಮನಗೊಳಿಸಬೇಕೆಂದು ಒಬ್ಬರು ನಮ್ಮಲ್ಲಿ ಕೇಳಿದರು. ಸಿಟ್ಟು ಬಂದಾಗ ತೆಪ್ಪಗೆ ಕುಳಿತುಕೊಳ್ಳಿ. ಒಂದೂ ಮಾತು ಆಡಬೇಡಿ. ಮಾತನಾಡಿದರೆ ಮಾತಿಗೆ ಮಾತು ಬೆಳೆದು ಕ್ರೋಧಾಗ್ನಿ ಹೆಚ್ಚೆಚ್ಚಾಗಿ ಉರಿಯುತ್ತ ಹೋಗುವುದು. ಹಾಗಾಗದಂತೆ ಮೌನವಾಗಿ ಬಿಟ್ಟರೆ ಬೆಂಕಿಗೆ ನೀರೆರಚಿದಂತೆ ತನ್ನಿಂದ ತಾನಾಗಿಯೇ ಕ್ರೋಧಾಗ್ನಿ ಶಮನ ಹೊಂದುವುದು - ಎಂದೆ.

ವಿದುರ ಧೃತರಾಷ್ಟ್ರನಿಗೆ ಹೇಳಿದ್ದಾನೆ - ಸಿಟ್ಟಿನಷ್ಟು ದೊಡ್ಡ ತಲೆನೋವು ಮತ್ತೊಂದಿಲ್ಲ. ಅದು ಮತ್ತೊಬ್ಬರಿಗೆ ಹಾನಿ ಮಾಡುವುದಕ್ಕಿಂತಲೂ ಹೆಚ್ಚಾಗಿ ನಮ್ಮ ಆರೋಗ್ಯವನ್ನು ಹಾಳು ಮಾಡುವುದು. ಆದ್ದರಿಂದ ಸಿಟ್ಟು ಬಂದಾಗ ಇದರಿಂದ ನಮ್ಮ ಆರೋಗ್ಯ ಕೆಡುತ್ತಿದೆ - ಎಂದು ಎಚ್ಚೆತ್ತಿರಬೇಕು.

ಸಿಟ್ಟನ್ನು ಪೂರ್ಣವಾಗಿ ಗೆದ್ದ ಒಬ್ಬನೇ ಒಬ್ಬ ಕೃಷ್ಣ. ದುರ್ಯೋಧನಾದಿಗಳು ಎಂತೆಂತಹ ಅವಮಾನದ ಮಾತುಗಳನ್ನಾಡಿದರೂ ಅವನ್ನೆಲ್ಲ ಕೇಳಿಸಿಕೊಂಡು ಕೃಷ್ಣ

ಸುಮ್ಮನಿದ್ದ. ದುರ್ಯೋಧನ ಬಂಧಿಸಲು ಬಂದಾಗಲೂ ಕೃಷ್ಣ ಸಿಟ್ಟಿಗೇಳಲಿಲ್ಲ. ಯುದ್ಧರಂಗದಲ್ಲೂ ಕೃಷ್ಣನ ಬಗ್ಗೆ ಏನೇನನ್ನು ಹೇಳಿದ್ದರೂ ಕೃಷ್ಣ ತೆಪ್ಪಗೇ ಕುಳಿತಿದ್ದ. ಆದ್ದರಿಂದಲೇ ಭಗವಂತ ಜಿತಕ್ರೋಧ. ಇದರ ಉಪಾಸನೆಯ ಫಲ ನಮ್ಮಲ್ಲಿ ಏನು ಎಂಬುದನ್ನು ನಾನೇನೂ ಪ್ರತ್ಯೇಕವಾಗಿ ಹೇಳಬೇಕಿಲ್ಲ.

**೪೬೬. ವೀರಬಾಹುಃ - * ಭುಜಬಲ ಉಳ್ಳವನು.**

*** ಇನ್ನೊಬ್ಬರ ಹಿಡಿತದಲ್ಲಿ ಇಲ್ಲದ ಭುಜಬಲ ಉಳ್ಳವನು.**

**ವಿವರಣೆ :** ಭುಜಬಲವುಳ್ಳವನೆಂಬುದು ಒಂದು ಅರ್ಥ. ಶಾಸ್ತ್ರಕಾರರು ಇನ್ನೊಂದು ಅರ್ಥವನ್ನು ಹೀಗೆ ತಿಳಿಸುವರು - ವಿ + ಈರ + ಬಾಹು - ವೀರಬಾಹು. ಈರ ಎಂಬುದಕ್ಕೆ ಅರ್ಥ ಹೇಳುವವರು. ವಿ ಎಂದರೆ ಹೋಗಿದೆ. ಹಾಗಾದರೆ ವೀರ ಎಂದರೆ ಹೇಳುವವರು ಹೋಗಿರುವರು. ಅಂತಹ ಬಾಹು ಉಳ್ಳವನು. ಹೇಳುವವರು ಹೋದ ಬಾಹು ಉಳ್ಳವನು ಎಂದರೆ 'ನಿನ್ನ ಬಲವನ್ನು ಅಲ್ಲಿ ಪ್ರಯೋಗ ಮಾಡು ; ಅಲ್ಲಿ ಪ್ರಯೋಗ ಮಾಡಬೇಡ. ಅವರಿಗೆ ಹೊಡಿ ; ಇವರಿಗೆ ಹೊಡಿಬೇಡ' - ಎಂದು ಹೇಳುವವರು ಯಾರೂ ಇಲ್ಲ. ಅಂದರೆ ಪ್ರೇರಣೆ ಇಲ್ಲದ ಭುಜಬಲ ಉಳ್ಳವನು. ಯಾರಲ್ಲಿ ತಾನು ಬಲಪ್ರಯೋಗ ಮಾಡಬೇಕೆಂಬುದು ತನಗೆ ಗೊತ್ತು. ಇನ್ನೊಬ್ಬರು ಹೇಳಬೇಕಾಗಿಲ್ಲ. ಯಾರನ್ನು ಬಡಿಯಬೇಕು ? ಯಾರನ್ನು ಉಳಿಸಬೇಕು ? ಅವನಿಗೇ ಗೊತ್ತು. ಭುಜದಲ್ಲಿ ಬಲ ಇದೆ ಎಂದು ಸಿಕ್ಕಿದವರನ್ನೆಲ್ಲ ಹೊಡೆಯುತ್ತ ಹೋಗುವುದಿಲ್ಲ. ಭುಜದಲ್ಲಿ ಬಲ ಇದ್ದರೂ ತೆಪ್ಪಗೆ ಕೂಡುವುದೂ ಇಲ್ಲ. ಮತ್ತೆ ಬೇಕಾದಲ್ಲಿ ಹೊಡೀತಾನೆ ; ಕೂಡಬೇಕಾದಲ್ಲಿ ಕೂಡುತ್ತಾನೆ. ಬಲವನ್ನು ಪ್ರಯೋಗ ಮಾಡುವ ವಿಷಯದಲ್ಲಿ ಯಾರ ಉಪದೇಶದ ಅಪೇಕ್ಷೆಯೂ ಇಲ್ಲದವನೇ ವಿಗತಃ ಈರಃ ಯಸ್ಮಿನ್ ತಾದೃಶಃ ಬಾಹುಃ ಯಸ್ಯ ಸಃ - ವೀರಬಾಹುಃ. ಇವನ ಭುಜಬಲಕ್ಕೆ ಹೇಳುವವರೂ ಇಲ್ಲ ; ಕೇಳುವವರೂ ಇಲ್ಲ. ಇನ್ನೊಬ್ಬರ ಹಿಡಿತದಲ್ಲಿ ಇಲ್ಲದ ಭುಜಬಲ ಉಳ್ಳವನು - ವೀರಬಾಹು.

**೪೬೭. ವಿದಾರಣಃ - * ಸೀಳುವವನು.**

*** ವಿಶೇಷವಾಗಿ ಪತ್ನಿಯನ್ನು ಕಟ್ಟಿಕೊಂಡಿದ್ದರೂ ಸುಖವಾಗಿ ಇರುವವನು.**

**ವಿವರಣೆ :** ಸೀಳುವವನು ಎಂಬ ಒಂದು ಅರ್ಥ ಇದ್ದೇ ಇದೆ. ಇದರ ಜೊತೆಗೆ ಮತ್ತೊಂದು ಅರ್ಥ- ವಿದಾರ + ಣ - ವಿದಾರಣ. ದಾರ ಎಂದರೆ ಪತ್ನಿ. ವಿ ಎಂದರೆ ವಿಶೇಷವಾದ ಪತ್ನಿ ಲಕ್ಷ್ಮೀದೇವಿ. ಪತ್ನಿಯನ್ನು ಯಾವಾಗಲೂ ಕಟ್ಟಿಕೊಂಡಿದ್ದರೂ 'ಣ'-ಮುಖದಲ್ಲಿ ನಗು ಮಾಸಿಲ್ಲ. ಎಲ್ಲಿಗೆ ಹೋದರೂ ದೇವರು ಲಕ್ಷ್ಮಿಯನ್ನು

ಬಿಟ್ಟಿರುವುದಿಲ್ಲ. ಆದರೂ ಅವನಿಗೆ ಸುಖಕ್ಕೇನೂ ಕೊರತೆ ಇಲ್ಲ. ನಾವಾದರೆ ಕಟ್ಟಿಕೊಂಡಷ್ಟು ಕಟ್ಟಿಕೊಂಡಷ್ಟು 'ಣ' - ಇಲ್ಲ ; ಸುಖ ಇಲ್ಲ. ಆದರೆ ಭಗವಂತ ಹೀಗಲ್ಲ. ಲಕ್ಷ್ಮಿಯ ಜೊತೆಗೆ ಸದಾಕಾಲ ಇದ್ದೂ ಆನಂದದಿಂದ ಇರುವವನು.

ಹೀಗೆ ಭಗವಂತನನ್ನು ಉಪಾಸನೆ ಮಾಡಿದರೆ **'ಧನ್ಯೋ ಗೃಹಸ್ಥಾಶ್ರಮಃ'** ಎಂದು ಹೆಗ್ಗಳಿಕೆಗೆ ಪಾತ್ರವಾದ ಗೃಹಸ್ಥಾಶ್ರಮವನ್ನು ಪಾಲಿಸುತ್ತಿರುವಾಗಲೂ ಆನಂದದಿಂದ ನಗುನಗುತ್ತ ಇರುವಂತೆ ದೇವರು ಅನುಗ್ರಹಿಸುವನು.

**ಸ್ವಾಪನಃ ಸ್ವವಶೋ ವ್ಯಾಪೀ ನೈಕಾತ್ಮಾ ನೈಕಕರ್ಮಕೃತ್ |**
**ವತ್ಸರೋ ವತ್ಸಲೋ ವತ್ಸೀ ರತ್ನಗರ್ಭೋ ಧನೇಶ್ವರಃ ||೫೦||**

**೪೬೮. ಸ್ವಾಪನಃ – * ತನಗೆ ನಿದ್ದೆ ಇಲ್ಲದವನು.**

*** ನಮಗೆ ನಿದ್ದೆಯನ್ನು ತಲುಪಿಸುವವನು.**

*** ವಿಶ್ರಾಂತಿಯನ್ನು ಹೊಂದಿಸುವವನು.**

*** ತಾನು ಅಭಿಮಾನದಿಂದ ದೂರನಾಗಿರುವುದಲ್ಲದೆ ನಾವೂ ಅಭಿಮಾನದಿಂದ ದೂರವಿರುವಂತೆ ಮಾಡುವವನು.**

ವಿವರಣೆ : ನಿದ್ದೆ ಜಾಸ್ತಿಯಾಗಿದೆಯೆಂದರೆ ಅದನ್ನು ಕಡಿಮ್ಮೆ ಮಾಡುವುದಕ್ಕೆ ಸಂಬಂಧಿಸಿಯೂ ಅರ್ಥ ಇದೆ. ನಿದ್ದೆ ಬರುವುದಿಲ್ಲ ಎಂದಾದರೆ ನಿದ್ದೆಯನ್ನು ಬರಿಸುವುದಕ್ಕೆ ಸಂಬಂಧಿಸಿಯೂ ಅರ್ಥ ಇದೆ.

ಸ್ವಾಪ ಎಂದರೆ ನಿದ್ದೆ. 'ನ' ಎಂದರೆ ಇಲ್ಲ. ಆದುದರಿಂದ ಸ್ವಾಪನ ಎಂದರೆ ನಿದ್ದೆಯೇ ಇಲ್ಲದವನು.

ದ್ವಾದಶ ಸ್ತೋತ್ರದಲ್ಲಿ ಶ್ರೀ ಮಧ್ವಾಚಾರ್ಯರು ಒಂದು ಮಾತು ಹೇಳಿರುವರು- **'ಯದಸುಪ್ತಿಗತೋಽಪಿ ಹರಿಃ ಸುಖವಾನ್ ಸುಖರೂಪಿಣಮಾಹುರತೋ** ನಿಗಮಾಃ...' ನಮಗೆ ನಿಮಗೆ ಮರುದಿನ ಬೆಳಿಗ್ಗೆ ಲವಲವಿಕೆ ಉಂಟಾಗಬೇಕೆಂದರೆ ಹಿಂದಿನ ದಿನದ ರಾತ್ರಿ ಚೆನ್ನಾಗಿ ನಿದ್ದೆ ಬೇಕು. **'ಸ್ವಾಪಂ ಪ್ರಾಪಯತಿ ಶ್ರಮಾಪಹೃತಯೇ.....'** ನಮ್ಮ ಮೇಲಿನ ಕರುಣೆಯಿಂದಾಗಿಯೇ ದೇವರು ನಿದ್ದೆ ಬರಿಸುವನೆಂದು ಹೇಳಲಾಗಿದೆ. ಹೀಗೆ ಭಗವಂತ ರಾತ್ರಿಯನ್ನು ಸೃಷ್ಟಿ ಮಾಡಿರುವುದೇ ನಮಗೆ ನಿಮಗೆ ನಿದ್ದೆ ಕೊಟ್ಟು ನಮ್ಮ ಶ್ರಮವನ್ನು ಪರಿಹರಿಸುವುದಕ್ಕಾಗಿಯೇ. ಆದರೆ ತಾನು ಮಾತ್ರ ಮಲಗುವುದೇ ಇಲ್ಲ. ನಮಗೆ ನಿಮಗೆ ನಿದ್ದೆ ಬರುವಂತೆ ಮಾಡದಿರುವುದಿಲ್ಲ. ನಾವು ಮಲಗಿರುವಾಗ ತಾನು

ಎಚ್ಚರಿಕೆಯಿಂದ ಇದ್ದುಕೊಂಡು ನಮ್ಮನ್ನು ಕಾದುಕೊಂಡಿರುವನು. ಹಗಲಾದರೂ ನಾವು ನಾವೇ ನಮ್ಮನ್ನು ಕಾದುಕೊಳ್ಳುವೆವೆಂದು ಭ್ರಮಿಸಬಹುದು. ಆದರೆ ರಾತ್ರಿ ಕಾಲದಲ್ಲಿ ನಮಗೆ ಎಚ್ಚರವೇ ಇಲ್ಲದಿರುವಾಗ ದೇವರೇ ರಕ್ಷಿಸುವನೆಂಬುದು ಸ್ಪಷ್ಟ.

ನಮಗೆ ನಿದ್ದೆ ಕಡಿಮ್ಮೆ ಆಗಬೇಕೆಂದರೆ ಭಗವಂತನನ್ನು 'ಸ್ವಾಪನ' - ಸ್ವಾಪ + ನ - ನಿದ್ದೆ ಇಲ್ಲದವನು ಎಂದು ಉಪಾಸನೆ ನಡೆಸಬೇಕು.

ನಿದ್ದೆ ಬಾರದವರು ತಮಗೆ ನಿದ್ದೆ ಬೇಕು ಎಂದರೆ 'ಸ್ವಾಪಂ ನಯತಿ - ನಿದ್ದೆಯನ್ನು ತಲುಪಿಸುವವನು - ಎಂಬ ಅರ್ಥದಲ್ಲಿ 'ಸ್ವಾಪನ' - ಎಂದು ಅವನ ಉಪಾಸನೆ ನಡೆಸಬೇಕು.

ಆದುದರಿಂದ ಸ್ವಯಂ ನಿದ್ದೆ ಮಾಡದೆ ನಿದ್ದೆ ಬೇಕಾದವರಿಗೆ ನಿದ್ದೆ ಕೊಡುವವನು - ಎಂಬ ಅರ್ಥ ಸ್ವಾಪನ ನಾಮದಿಂದ ಸಿದ್ಧಿಸುವುದು.

ನಿದ್ದೆ ಎಂದರೆ ವಿಶ್ರಾಂತಿ ಎಂದೇ ಅರ್ಥ. ಭೀಷ್ಮರು ತಮಗೆ ಭಗವಂತನು ಶರಪಂಜರದ ಮೇಲೆ ಮಲಗಿ ವಿಶ್ರಾಂತಿ ಪಡೆದುಕೊಳ್ಳುವಂತೆ ಮಾಡಿರುವನೆಂದು ಕೃಷ್ಣನನ್ನು ಸ್ವಾಪನನಾಮದಿಂದ ಸ್ತುತಿಸುತ್ತಿರುವರು.

ಹಾಗೆಯೇ ನಿದ್ದೆಯಲ್ಲಿ ಅಭಿಮಾನದ ಪರಿತ್ಯಾಗ ಆಗುವುದು. ಆದುದರಿಂದ ಸ್ವಾಪನನಾಮದಿಂದ ಭಗವಂತನು ತಾನು ಯಾವಾಗಲೂ ಅಭಿಮಾನವನ್ನು ತ್ಯಜಿಸಿದವನಾಗಿ ನಾವೂ ಅಭಿಮಾನವನ್ನು ತ್ಯಜಿಸುವಂತೆ ಮಾಡುವನು - ಎಂಬ ಅರ್ಥವನ್ನೂ ಚಿಂತಿಸಬಹುದಾಗಿದೆ.

**೪೭೯. ಸ್ವವಶಃ – * ಪೂರ್ಣವಾಗಿ ತನ್ನ ವಶದಲ್ಲಿರುವವನು.**

*** ಸ್ವಲ್ಪ ಪ್ರಮಾಣದಲ್ಲಿ ಭಕ್ತರ ವಶದಲ್ಲಿ ಇದ್ದರೂ ಪೂರ್ಣವಾಗಿ ಭಕ್ತರ ವಶದಲ್ಲಿ ಇಲ್ಲದವನು.**

**ವಿವರಣೆ :** ತನ್ನ ವಶದಲ್ಲೇ ತಾನಿದ್ದಾನೆ ಎಂಬುದು 'ಸ್ವವಶ' - ಎಂಬುದರ ಅರ್ಥ. ಸ್ವತಂತ್ರನಾದ ಭಗವಂತ ತನ್ನ ವಶದಲ್ಲಿ ಇರುವಂತೆ ಇನ್ನಾರ ವಶದಲ್ಲೂ ಇಲ್ಲವೇ? ಇದ್ದಾನೆ - ಭಕ್ತರ ವಶದಲ್ಲಿ ಇದ್ದಾನೆ. ಪೂರ್ಣವಾಗಿ ಭಕ್ತರ ವಶದಲ್ಲಿ ಇದ್ದಾನೋ? ಇಲ್ಲ - ಸು + ಅವಶಃ - ಚೆನ್ನಾಗಿ ಭಕ್ತರ ವಶದಲ್ಲಿ ಇಲ್ಲದವನು. ಪೂರ್ಣವಾಗಿ ತನ್ನ ವಶದಲ್ಲಿ ಇರುವನಾದರೂ ಭಕ್ತರ ವಶದಲ್ಲಿ ಪೂರ್ಣವಾಗಿ ಇಲ್ಲ. ಭಕ್ತರು ಹೇಳಿದ್ದನ್ನು ಕೆಲವು ಅಂಶದಲ್ಲಷ್ಟೇ ನಡೆಸಿಕೊಡುವನು. ಪೂರ್ಣವಾಗಿ ನಡೆಸುವುದಿಲ್ಲ. ಆದ್ದರಿಂದ ತನ್ನ ಹಿಡಿತದಲ್ಲಿ ಪೂರ್ಣವಾಗಿ ಇದ್ದುಕೊಂಡು ಸ್ವಲ್ಪಪ್ರಮಾಣದಲ್ಲಷ್ಟೇ

ಭಕ್ತರ ವಶದಲ್ಲಿ ಇರುವವನೇ ಸ್ವವಶ. ಸ್ವ + ವಶ ಹಾಗೂ ಸು ಅವಶ. ಭಕ್ತರ ಹಿಡಿತದಲ್ಲಿ ಇಲ್ಲವೋ ? ಇದ್ದಾನೆ ; ಇದ್ದಾನೋ ಇಲ್ಲ - ಎನ್ನುವಂತೆ ಸ್ವಲ್ಪ ವಶದಲ್ಲಿ ಇದ್ದಾನೆ. ಪೂರ ವಶದಲ್ಲಿ ಇಲ್ಲ.

ನಾವಾದರೆ 'ಸ್ವವಶ'ರು ಅಲ್ಲ. ನಮ್ಮ ಹಿಡಿತ ನಮಗೆ ಇಲ್ಲ. ಎಲ್ಲಿಗಾದರೂ ಹೋಗಬೇಕೆಂದರೆ ಏನೋ ತಡೆ ಬಂದು ಹೋಗಲಿಕ್ಕೆ ಆಗದೆ ಇರುವುದೂ ಉಂಟು. ಮನೆಯಲ್ಲೇ ಇರಬೇಕೆಂದು ತೋಚಿದರೆ ಅನಿವಾರ್ಯವಾಗಿ ಎಲ್ಲಿಗೋ ಹೋಗಲೇ ಬೇಕಾಗುವುದೂ ಉಂಟು. ಹೀಗೆ ನಾವು ನಮ್ಮ ವಶದಲ್ಲಿ ಇಲ್ಲ.

ಭಗವಂತನನ್ನು 'ಸ್ವವಶ' - ಎಂದು ಉಪಾಸನೆ ಮಾಡಿದೆವೆಂದರೆ ನಮ್ಮ ಯೋಗ್ಯತೆಗನುಗುಣವಾಗಿ ಸ್ವವಶತ್ವವನ್ನು ಅನುಗ್ರಹಿಸುವನು. ಜೀವನದಲ್ಲಿ ನಾವು ಸಂಕಲ್ಪಿಸಿದಂತೆ ನಡೆದುಕೊಳ್ಳಲು ಬೇಕಾದ ಪರಿಸ್ಥಿತಿಯನ್ನು ನಿರ್ಮಾಣ ಮಾಡುವನು.

**೪೭೦. ವ್ಯಾಪೀ – ವಿಶೇಷವಾಗಿ ಸರ್ವತ್ರ ಇರುವವನು.**

**ವಿವರಣೆ:** ಎಲ್ಲೆಡೆ ವ್ಯಾಪಿಸಿರುವವನೇ ವ್ಯಾಪೀ. ಆಪ - ಇರುವಿಕೆ. ಆಪೀ - ಇರುವಿಕೆ ಉಳ್ಳವನು. ವಿ+ಆಪೀ - ವಿಶೇಷವಾಗಿ, ಚೆನ್ನಾಗಿ ಇರುವಿಕೆ ಉಳ್ಳವನು. ಎಲ್ಲಿ ನೋಡಿದರೂ ದೇವರು ಇದ್ದಾನೆ. ನಮಗೆ ಕಾಣಿಸುವುದಿಲ್ಲವಷ್ಟೇ. ಆದರೆ ಇದ್ದಾನೆ. ಗಾಳಿ ಕಾಣಿಸುವುದಿಲ್ಲ ; ಆದರೂ ಇದೆ. ಕಾಣಿಸದಂತಹದ್ದೂ ಕೆಲವು ಇದೆ.

ಆದುದರಿಂದ ದೇವರು ವ್ಯಾಪೀ - ವಿಶೇಷವಾಗಿ ಸರ್ವತ್ರ ಇರುವವನು. ಗಾಳಿಯೂ ಸರ್ವತ್ರ ಇರುವಂತಹದ್ದು. ಆದರೆ ಅದೇನೂ ರಕ್ಷಿಸುವುದಿಲ್ಲ. ಸತ್ತವನ ಸುತ್ತಲೂ ಗಾಳಿ ಇರುವುದಾದರೂ, ಉಸಿರಾಟದ ಗಾಳಿ ಇಲ್ಲದೆಯೇ ಅವನು ಸತ್ತಿರುವನು. ಆದರೆ ದೇವರು ನಮ್ಮ ರಕ್ಷಣೆಗಾಗಿಯೇ ಎಲ್ಲೆಡೆ ಇರುವವನು.

**೪೭೧. ನೈಕಾತ್ಮಾ – ಎಲ್ಲ ರೂಪಗಳಿಂದ ಎಲ್ಲ ಕಡೆ ವ್ಯಾಪಿಸಿಕೊಂಡಿರುವವನು.**

**ವಿವರಣೆ :** 'ವ್ಯಾಪೀ' ನಾಮದಿಂದ ದೇವರು ಎಲ್ಲ ಕಡೆ ಇರುವವನೆಂದು ತಿಳಿಸಲಾಯಿತು. ಆಗ ದೇವರು ಎಲ್ಲ ಕಡೆ ಹೇಗೆ ಇದ್ದಾನೆ ? ಒಂದೇ ರೂಪದಿಂದ ಇರುವನೋ, ಬೇರೆ ಬೇರೆ ಕಡೆಗಳಲ್ಲಿ ಬೇರೆ ಬೇರೆ ರೂಪದಿಂದ ಇರುವನೋ ? ಎಂದರೆ ತಿಳಿಸಲಾಗಿದೆ - ನೈಕಾತ್ಮಾ - ಭಗವಂತ ಒಂದೇ ರೂಪದಿಂದ ಎಲ್ಲೆಡೆ ಇರುವುದಲ್ಲ. ಮತ್ತೆ, ಒಂದೊಂದು ರೂಪದಿಂದ ಎಲ್ಲ ಕಡೆ ಇರುವವನು. ನನ್ನ ಜೊತೆಗೆ ದೇವರ ಒಂದು ರೂಪ ಇದೆ. ಇಲ್ಲಿ ಕುಳಿತ ಇಷ್ಟು ಮಂದಿಗಳ ಜೊತೆಗೂ ದೇವರ ಬೇರೆ ಬೇರೆ ರೂಪ ಇದೆ. ನನ್ನಲ್ಲಿದ್ದ ರೂಪವೂ ಎಲ್ಲ ಕಡೆ ಇದೆ ; ನಿಮ್ಮಲ್ಲಿದ್ದ

ಭಗವದ್ರೂಪಗಳೂ ಎಲ್ಲ ಕಡೆ ಇವೆ. ಹೀಗೆ ಭಗವಂತನ ಎಲ್ಲ ರೂಪಗಳೂ ಎಲ್ಲ ಕಡೆ ಸೇರಿಕೊಂಡಿವೆ.

ಇದಕ್ಕೊಂದು ಉದಾಹರಣೆ ಕೊಡುವುದುಂಟು - 'ನವನಾರೀ ಕುಂಜರ' ಎಂದು. ಒಂಭತ್ತು ಹೆಣ್ಮಕ್ಕಳನ್ನು ಸೇರಿಸಿ ಒಂದು ಆನೆಯನ್ನಾಗಿ ಮಾಡಿದರಂತೆ. ಒಂದು ಹೆಣ್ಮಗಳು ಆನೆಯ ಸೊಂಡಿಲಿನ ಜಾಗಕ್ಕೆ ಮತ್ತೊಂದು ಹೆಣ್ಮಗಳು ಆನೆಯ ಕಾಲು. ಇನ್ನೊಂದು ಹೆಣ್ಮಗಳು ಆನೆಯ ಬಾಲ. ಹೀಗೆ ಒಂಭತ್ತು ಹೆಣ್ಮಕ್ಕಳ ಮೂಲಕ ರಚಿಸಲಾದ ಆನೆ 'ನವನಾರೀ ಕುಂಜರ'. ಹಿಂದೆ ಇಂತಹ ಆನೆಗಳ ಚಿತ್ರಗಳು ಅಲ್ಲಲ್ಲಿ ಕಾಣಿಸಲಿಕ್ಕೆ ಸಿಗುತ್ತಿತ್ತು. ಹಾಗೆಯೇ ಏಳು ಹೆಣ್ಮಕ್ಕಳನ್ನು ಸೇರಿಸಿ ಕುದುರೆಯ ಚಿತ್ರಣ. ಉಡುಪಿ ಕೃಷ್ಣನ ಬೆಳ್ಳಿಯ ಪಾಲಕ್ಕಿಯಲ್ಲಿ ನವನಾರೀ ಕುಂಜರದ ಹಾಗೂ ಕುದುರೆಯ ಎರಡೂ ಚಿತ್ರಣಗಳಿವೆ.

ಹೀಗೆ ಭಗವಂತನು 'ನವನಾರೀ ಕುಂಜರ'ದಂತೆ ಒಂದೊಂದು ರೂಪದಿಂದಲೂ ಎಲ್ಲೆಡೆ ವ್ಯಾಪ್ತ. ನಾನು ಕುರ್ಚಿಯಲ್ಲಿ ಕುಳಿತಿದ್ದೇನೆ ಎಂದರೆ ಕೈ ಒಂದೆಡೆ ; ಕಾಲು ಮತ್ತೊಂದೆಡೆ.......ಹೀಗೆ ತಾನೇ ? ಭಗವಂತ ಹಾಗಲ್ಲ.ಅವನ ಕೈಯೂ ಎಲ್ಲೆಡೆ ಉಂಟು ; ಕಾಲೂ ಎಲ್ಲೆಡೆ ಉಂಟು. ಎಲ್ಲ ರೂಪಗಳೂ ಎಲ್ಲ ಕಡೆ ಉಂಟು. ಅರ್ಥ ಆಗಿಲ್ಲ ಎಂದರೆ ಅರ್ಥ ಆಗದೆ ಇರುವುದೇ ದೇವರ ವೈಶಿಷ್ಟ್ಯ. ಹೀಗೆ ಎಲ್ಲ ರೂಪಗಳಿಂದ ಎಲ್ಲ ಕಡೆ ವ್ಯಾಪ್ತಿಸಿಕೊಂಡು ಇರುವವನೇ 'ನೈಕಾತ್ಮಾ'.

**೪೭೨. ನೈಕಕರ್ಮಕೃತ್ – ಸಂಚಿತ ಹಾಗೂ ಅಗಾಮಿ ಎಂಬ ಎರಡು ಬಗೆಯ ಕರ್ಮಗಳನ್ನು ನಾಶಪಡಿಸುವವನು.**

**ವಿವರಣೆ :** ನ+ಏಕ+ಕರ್ಮ+ಕೃತ್ - ಎಂದು ಈ ನಾಮವನ್ನು ಬಿಡಿಸಬಹುದಾಗಿದೆ. ನ + ಏಕ - ನೈಕ - ಒಂದಲ್ಲ - ಎರಡು. ಸಂಚಿತ ಮತ್ತು ಅಗಾಮಿ. ಅಂತಹ ಸಂಚಿತ ಹಾಗೂ ಆಗಾಮಿ ಎಂಬ ಎರಡು ಬಗೆಯ ಕರ್ಮಗಳನ್ನು 'ಕೃತ್' - ಕೃಂತತಿ ಛೇದಯತಿ ನಾಶ ಮಾಡುವವನು.

ನಾವು ಹಿಂದಿನ ಜನ್ಮ ಜನ್ಮಾಂತರಗಳಲ್ಲಿ ಮಾಡಿದ ಕರ್ಮಗಳೆಲ್ಲ 'ಸಂಚಿತ' ಕರ್ಮಗಳು. ಮುಂದೆ ಮಾಡಲಿರುವ ಕರ್ಮಗಳು 'ಆಗಾಮಿ' ಕರ್ಮಗಳು. ಈ ಎರಡು ಬಗೆಯ ಕರ್ಮಗಳನ್ನೂ ದೇವರು ನಾಶ ಮಾಡುವನು. ನಾವು ದೇವರ ಸಾಕ್ಷಾತ್ಕಾರ ಪಡೆದೆವೆಂದರೆ, ದೇವರ ದರ್ಶನ ಆಯಿತೆಂದರೆ - ಅದರ ಲಾಭ ಹಿಂದೆ ನಾವು ಮಾಡಿದ ಕರ್ಮಗಳ ನಾಶ ; ಮುಂದೆ ಮಾಡುವ ಕರ್ಮಗಳ ಲೇಪ ಇಲ್ಲ.

ಎರಡು ಬಗೆಯ ಕರ್ಮಗಳನ್ನೂ 'ನೈಕಕರ್ಮ' ಶಬ್ದದಿಂದ ಪರಾಮರ್ಶಿಸಲಾಗಿದೆ. ನ + ಏಕ -ಒಂದಲ್ಲ ; ಎರಡು - ಬರೇ ಹಿಂದಿನದ್ದೂ ಅಲ್ಲ ; ಮುಂದಿನದ್ದೂ ಕೂಡಾ. ಬರೇ ಮುಂದಿನದ್ದೂ ಅಲ್ಲ ; ಹಿಂದಿನದ್ದೂ ಕೂಡಾ. ಹೀಗೆ ನೈಕಕರ್ಮಗಳನ್ನು, ಎರಡು ಬಗೆಯ ಕರ್ಮಗಳನ್ನು ಕೃತ್ - ನಾಶ ಮಾಡುವವನು.

ಪ್ರಾರಬ್ಧ ಕರ್ಮವೊಂದನ್ನು ಬಿಟ್ಟು ಬೇರೆ ಎರಡು ಬಗೆಯ ಕರ್ಮಗಳನ್ನೂ ನಾಶ ಮಾಡುವವನೇ 'ನೈಕಕರ್ಮಕೃತ್'.

**೪೭೩. ವತ್ಸರಃ – ಹೇಳುವ ತಾನೂ ಕೇಳುವವರೂ ತೃಪ್ತಿ ಪಡುವಂತೆ ಹೇಳುತ್ತಿರುವವನು.**

ವಿವರಣೆ : ಸಂವತ್ಸರ ಎಂಬ ಹೆಸರು ಹಿಂದೆ ಬಂದಿತ್ತು. ಈಗ ವತ್ಸರ ಎಂಬ ನಾಮ. ವದತಿ ಇತಿ ವತ್ಸಃ - ಹೇಳುತ್ತ ಇರುವವನು ವತ್ಸ. ಮಗುವನ್ನು ವತ್ಸ ಎಂದು ಕರೆಯುವೆವು. ಕರುವನ್ನು ವತ್ಸ ಎಂದು ಕರೆಯುವೆವು. ಯಾಕೆ ? ಮಗುವಾಗಲೀ, ಕರುವಾಗಲೀ 'ವದತಿ' - ಹೇಳುತ್ತಿರುತ್ತದೆ. ಯಾರನ್ನು ? ಪ್ರಧಾನ ವಸ್ತುವನ್ನು. ಯಾವುದು ಪ್ರಧಾನ ವಸ್ತು ? 'ಅಮ್ಮಾ'. ಉಪನಿಷತ್ತು 'ಮಾತೃದೇವೋ ಭವ......' ಎಂದು ಪೂಜ್ಯತೆಯಲ್ಲಿ ಮೊತ್ತ ಮೊದಲು ಉಲ್ಲೇಖಿಸುವುದೇ 'ಅಮ್ಮ'ನನ್ನು. ಆ ಮೇಲೆ ಅಪ್ಪ, ಆಚಾರ್ಯ...... ಇತ್ಯಾದಿಗಳನ್ನು. ಕರುವಾದರೂ ಹಸಿವಾದಾಗ ಕೂಗುವುದು - ಹಾಲು ಎಂಬ ಪ್ರಧಾನ ವಸ್ತುವಿಗಾಗಿ. ಆದ್ದರಿಂದ ವತ್ಸರ ಎನ್ನುವುದಕ್ಕೆ ಹೇಳುತ್ತಿರುವವನು ಎಂಬ ಅರ್ಥ. ಆಮೇಲೆ 'ರ' - ಎಂದರೆ ಸುಖಪಡುವವನು. ರಮತೇ ಇತಿ ರಃ. ಆದ್ದರಿಂದ ಹೇಳುತ್ತ ಹೇಳುತ್ತ ಸುಖ ಪಡುವವನಿಗೆ 'ವತ್ಸರ' - ಎಂಬ ಹೆಸರು. ಏನನ್ನು ಹೇಳುತ್ತಿರುತ್ತಾನೆ ? ವೇದವನ್ನು ಹೇಳುತ್ತಿರುತ್ತಾನೆ.

ಹಯಗ್ರೀವರೂಪಿ ಪರಮಾತ್ಮನನ್ನು ಕಾಣುವಾಗ ನಾವು ಹೇಗೆ ಚಿಂತನೆ ನಡೆಸಬೇಕು ? ಮುಖ ಕೆಳಗೆ ಹಾಕಿಕೊಂಡು ವೇದವನ್ನು ಹೇಳುತ್ತಿದ್ದಾನೆ ಹಯಗ್ರೀವ. ಪೂರ್ಣವಾಗಿ ಅರ್ಥ ಮಾಡಿಕೊಂಡು ಕೇಳುವವರಿದ್ದರೆ ಅವರ ಮುಖ ನೋಡಿಕೊಂಡು ಹೇಳುತ್ತಿದ್ದನೋ ಏನೋ. ಆದರೆ ಹಾಗೆ ಯಾರೂ ಇಲ್ಲದಿರುವುದರಿಂದ ಪ್ರಾಯಶಃ ಕೆಳಮುಖ ಮಾಡಿ ವೇದವನ್ನು ಹೇಳುತ್ತಿದ್ದಾನೆ. '..... ನಸ್ತೋ ಮುಖಾದಪಿ .......' - ಎಂದಿರುವಂತೆ ಬರೇ ಬಾಯಿಯಿಂದಲ್ಲದೆ ; ಮೂಗಿನ ಮೂಲಕವೂ ವೇದವನ್ನು ಹೇಳುತ್ತಿದ್ದಾನೆ. ಹೇಳುವಾಗ 'ರಮತೇ' - ಸಂತೋಷಪಡುತ್ತಿದ್ದಾನೆ. ಯಾಕೆಂದರೆ ವೇದ ತನ್ನ ಮಹಿಮೆಗಳನ್ನೇ ಹೇಳುತ್ತಿರುವುದು ತಾನೇ ?

ರ ಅಂದರೆ ರಮಣ. ವೇದವನ್ನು ಹೇಳುತ್ತ ಹೇಳುತ್ತ ಯಾರು ತೃಪ್ತಿಪಡುತ್ತಿರುತ್ತಾನೋ ಅವನಿಗೆ ವತ್ಸರ ಎಂಬ ಹೆಸರು.

ಹೇಳುವವರು ಕೇಳುವವರಿಗೂ ತೃಪ್ತಿಯಾಗುವಂತೆ ಹೇಳಬೇಕು. ಇಲ್ಲದಿದ್ದರೆ ಕೇಳುವವರು ಮೂರು 'ಕೆ' ಗಳನ್ನು ಕೊಡಲು ಪ್ರಾರಂಭಿಸುವರು. ಬೇಸರಿಕೆ; ತೂಕಡಿಕೆ ಹಾಗೂ ವಾಕರಿಕೆ......... ಈ ಬಗೆಯ 'ಕೆ' ಗಳು ಬರದಂತೆ ಎಚ್ಚರವಹಿಸಬೇಕು.

ಭಗವಂತನಿಗೆ ತಾನು ಪಠಿಸುತ್ತಿರುವ ವೇದದ ವಿಷಯದಲ್ಲಿ ತನಗೆ ಪೂರ್ಣ ಭರವಸೆ ಇದೆ. ಅಲ್ಲದೆ, ಉತ್ತಮ ಅಧಿಕಾರಿಗಳಿಗೆ ಅದನ್ನು ತಾನು ಉಪದೇಶಿಸುವ ಮೂಲಕ ಅರ್ಥೈಸಬಲ್ಲೆ ಎಂಬ ಭರವಸೆಯೂ ಇದೆ. ಆದ್ದರಿಂದ ತಾನು ಅರ್ಥೈಸಿಕೊಳ್ಳುವ ಮೂಲಕ ತೃಪ್ತಿಪಡುತ್ತ, ಕೇಳುವ ಅಧಿಕಾರಿಗಳಿಗೆ ಅರ್ಥವಾಗುವಂತೆ ಹೇಳುತ್ತಿರುವ ಮೂಲಕ ತೃಪ್ತಿ ಪಡುತ್ತ ವೇದವನ್ನು ಹೇಳುತ್ತ ಇರುವುದರಿಂದ ಭಗವಂತ 'ವತ್ಸರ'.

ಭಗವಂತನ ವತ್ಸರನಾಮದಿಂದ ಹೇಳುವ ತಾನೂ, ಕೇಳುವವರೂ ತೃಪ್ತಿ ಪಡುತ್ತಿರುವ ಗುಣವನ್ನು ಉಪಾಸನೆ ಮಾಡಿದಲ್ಲಿ ಅಧ್ಯಾಪಕರು ಪಾಠ ಮಾಡುವಾಗ ತಾವೂ, ಅದನ್ನು ಕೇಳುವ ವಿದ್ಯಾರ್ಥಿಗಳೂ ತೃಪ್ತಿ ಪಡಬಹುದಾಗಿದೆ.

**೪೭೪. ವತ್ಸಲಃ – * ಭಕ್ತವತ್ಸಲ.**

*** ವೇದೋಚ್ಚಾರಣೆ ನಡೆಸಲು ಪ್ರತಿಯೊಬ್ಬರ ವಕ್ಷಸ್ಥಲವನ್ನು ಸ್ವೀಕಾರ ಮಾಡಿರುವವನು.**

**ವಿವರಣೆ :** ಭಕ್ತವತ್ಸಲ ಎಂಬುದು ವತ್ಸಲ ಶಬ್ದದ ಮುಖ್ಯಾರ್ಥ. ಇದರ ಜೊತೆಗೆ ಶಾಸ್ತ್ರಕಾರರು ಮತ್ತೊಂದು ಅರ್ಥವನ್ನು ತಿಳಿಸಿರುವರು - ವೇದವನ್ನು ಹೇಳುತ್ತ ರಮಿಸುತ್ತಿರುವ ಭಗವಂತನು ತನಗೆ ವೇದ ಹೇಳಲು ಒಂದು ಸ್ಥಳ ಬೇಕೆಂದು ಹುಡುಕುವನು. ಒಂದು ಉತ್ತಮ ಸ್ಥಳವನ್ನು ಆಯ್ಕೆ ಮಾಡುವನು. ಅದನ್ನೇ ತಿಳಿಸುವುದು 'ವತ್ಸಲ' - ಎಂಬ ನಾಮ. ವತ್ಸ ಎಂದರೆ ವಕ್ಷಸ್ಥಲ, ಹೃದಯಾಕಾಶ. ಅದನ್ನು ಲ - ತನಗೆ ಸ್ಥಾನವನ್ನಾಗಿ ಸ್ವೀಕರಿಸಿದವನು ಲಾತಿ - ಆದತ್ತೇ ಇತಿ ಲಃ.

ಯಾವ ಗಲಾಟೆಯೂ ಇಲ್ಲದ ಜಾಗ ತನಗೆಬೇಕೆಂದು ಯೋಚಿಸಿದ ಭಗವಂತನು ನಮ್ಮ ನಿಮ್ಮ ವತ್ಸವನ್ನು, ವಕ್ಷಸ್ಥಲವನ್ನು ತನ್ನ ನೆಲೆಯಾಗಿ ಆಯ್ಕೆ ಮಾಡಿದುದರಿಂದ 'ವತ್ಸಲ' ಎನಿಸಿದ.

ಭಗವಂತನು ಪ್ರತಿಯೊಬ್ಬರ ಹೃದಯಾಕಾಶದಲ್ಲಿದ್ದುಕೊಂಡು ವೇದದ

ಉಚ್ಚಾರಣೆ ನಡೆಸುತ್ತಿರುವುದರಿಂದಲೇ ನಮ್ಮ ಕಿವಿಗಳನ್ನು ನಾವು ಮುಚ್ಚಿಕೊಂಡೆವೆಂದರೆ ನಮಗೆ 'ಗುಂಯ್ಯ್…….' - ಎಂದು ಸದ್ದು ಕೇಳಿಸುವುದು. ಹೇಗೆ ದೂರದ ಮಾತು ವರ್ಣರೂಪದಲ್ಲಿ ಕೇಳಿಸದೆ, ಧ್ವನಿ ರೂಪದಲ್ಲಿ ಮಾತ್ರ ಕೇಳಿಸುವುದೋ ಹಾಗೆ ಭಗವಂತ ಹತ್ತಿರದಲ್ಲೇ ವೇದವನ್ನು ಉಚ್ಚರಿಸುತ್ತಿದ್ದರೂ ಬರೇ ಧ್ವನಿಮಾತ್ರ ನಮಗೆ ಕೇಳಿಸುವುದು.

ಹೀಗೆ ನಮ್ಮ ವಕ್ಷಸ್ಥಲವನ್ನು, ಹೃದಯಾಕಾಶವನ್ನು ಆಯ್ಕೆ ಮಾಡಿ ಅದರಲ್ಲಿದ್ದುಕೊಂಡು ಭಗವಂತ ವೇದೋಚ್ಚಾರಣೆ ನಡೆಸುತ್ತಿರುವುದರಿಂದ 'ವತ್ಸಲ' ಎನಿಸಿರುವನು.

**೪೭೫. ವತ್ಸೀ - ಚತುರ್ಮುಖ ಹಾಗೂ ಮನ್ಮಥ ಎಂಬ ಒಳ್ಳೆಯ ಮಕ್ಕಳನ್ನು ಪಡೆದವನು.**

ವಿವರಣೆ : ವತ್ಸೀ ಎಂದರೆ ಮಕ್ಕಳಿರುವವನೆಂದರ್ಥ.

ಎಷ್ಟು ಮಕ್ಕಳು ? ಇಬ್ಬರು ಮಕ್ಕಳು.

ಅವರ ಹೆಸರೇನು ?

**ಸರಸಿಜಾಸನ ಮನೋಜ ಈರ್ವರು ಸುತರು ಸುರತರಂಗಿಣಿ ತನೂಜೆ**

ದೇವರಿಗೆ ಎರಡು ಗಂಡು ಒಂದು ಹೆಣ್ಣು ಮಕ್ಕಳೆಂದು ದಾಸರು ಲೆಕ್ಕ ಮಾಡಿರುವರು.

ಸುರತರಂಗಿಣಿ - ಗಂಗೆ, ಹೆಣ್ಮಗಳು.

ಸರಸಿಜಾಸನ - ಚತುರ್ಮುಖ ಹಾಗೂ ಮನೋಜ - ಮನ್ಮಥ, ಇವರಿಬ್ಬರು ಗಂಡು ಮಕ್ಕಳು.

ಚತುರ್ಮುಖ ವೇದಕ್ಕೆ ಅಭಿಮಾನಿಯಾಗಿದ್ದು - ಒಳ್ಳೆಯ ಶಬ್ದಗಳೆನಿಸಿದರೆ, ಮನೋಜ - ಒಳ್ಳೆಯ ಇಚ್ಛೆಗೆ ಅಭಿಮಾನಿಯಾಗಿದ್ದು ಒಳ್ಳೆಯ ಇಚ್ಛೆ ಎನಿಸುವನು. ಆದ್ದರಿಂದ ಭಗವಂತ ಒಳ್ಳೆಯಶಬ್ದಗಳನ್ನೇ ನುಡಿಯುವವನು ; ಮನಸ್ಸಿನಲ್ಲಿ ಒಳ್ಳೆಯ ಇಚ್ಛೆಯನ್ನೇ ತಾಳುವವನೆಂಬುದೂ 'ವತ್ಸೀ' ನಾಮದ ಧ್ವನಿ. 'ನಮಗೂ ಒಳ್ಳೆಯ ಮಕ್ಕಳನ್ನು ಕೊಡು' - ಎಂದು ದೇವರಲ್ಲಿ 'ವತ್ಸೀ' ನಾಮದ ಉಪಾಸನೆಯ ಮೂಲಕ ಬೇಡಿಕೊಳ್ಳೋಣ.

**೪೭೬. ರತ್ನಗರ್ಭಃ - * ಗರ್ಭದಲ್ಲಿ ಬ್ರಹ್ಮಾಂಡವೆಂಬ ರತ್ನ ಉಳ್ಳವನು.**

*** ಆನಂದವನ್ನು ಯಾವಾಗಲೂ ಮುಖದ ಮೂಲಕ ಹೊರ ಸೂಸುತ್ತಿರುವವನು.**

**ವಿವರಣೆ :** ಗರ್ಭದಲ್ಲಿ ಒಂದು ರತ್ನ ಇದೆ ಎಂಬ ಒಂದು ಅರ್ಥ ಇದ್ದೇ ಇದೆ. ಅದರ ಜೊತೆಗೆ ಮತ್ತೊಂದು ಅರ್ಥ - ರತಿಃ ಗೀರ್ಯತೇ ಅಭಿವ್ಯಜ್ಯತೇ ಇತಿ ರತ್ನಗರ್ಭ. ಯಾವಾಗ ಬೇಕಾದರೂ ನೋಡೋಣ - ದೇವರ ಮುಖ ಬಾಡಿರುವುದೆಂದು ಇಲ್ಲವೇ ಇಲ್ಲ. ನಮಗೇನೋ ಕುತೂಹಲ - ಒಂದು ದಿನವಾದರೂ ದೇವರ ಬಾಡಿದ ಮುಖವನ್ನು ನೋಡಬಹುದೋ - ಎಂದು. ಆದರೆ 'ಜಪ್ಪಯ್ಯ' ಅಂದರೂ ದೇವರ ಮುಖದಲ್ಲಿ ಬೇಸರದ ಕಳೆಯನ್ನು ಕಾಣಲು ಸಾಧ್ಯವೇ ಇಲ್ಲ. ಯಾಕೆಂದರೆ ಅವನು ರತ್ನಗರ್ಭ - ರತಿಃ ಆನಂದಃ ಗೀರ್ಯತೇ ಸರ್ವದಾ ಇತಿ ರತ್ನಗರ್ಭಃ - ಸದಾಕಾಲ ಒಳಗಿದ್ದ ತನ್ನ ಆನಂದವನ್ನು ಹೊರ ಸೂಸುತ್ತ ಇರುವನು - ಆದುದರಿಂದಲೇ ಅವನು ರತ್ನಗರ್ಭ. ನಮಗೆ ಜೀವನದಲ್ಲಿ ರತ್ನಗಳನ್ನು - ಉತ್ತಮ ವಸ್ತುಗಳನ್ನು ನೋಡಿದಾಗಷ್ಟೇ ರತಿ ಉಂಟಾಗುವುದು. ದೇವರಾದರೂ ತೆಗೆದಷ್ಟು ಮುಗಿಯದಷ್ಟು ಆನಂದವನ್ನು ಹೊಂದಿರುವವನು.

ಭೀಷ್ಮರು ಕೃಷ್ಣನ ಮುಖದಲ್ಲಿ ಎಂದೂ ಬೇಸರದ ಕಳೆಯನ್ನು ಕಂಡವರೇ ಅಲ್ಲ.

ನಮ್ಮ ಮುಖದಲ್ಲೂ ಯಾವಾಗಲೂ ನಗುವಿನ ಕಳೆಯೇ ಇರುವಂತಾಗಬೇಕು. ಅದಕ್ಕಾಗಿ ದೇವರನ್ನು 'ರತ್ನಗರ್ಭ' - ಒಳಗಿನ ರತಿಯನ್ನು ಅಭಿವ್ಯಕ್ತಿಗೊಳಿಸುವವನೆಂದು ಉಪಾಸನೆ ನಡೆಸೋಣ.

**೪೭೭. ಧನೇಶ್ವರಃ – ದೈವ ಹಾಗೂ ಮಾನುಷ ಎಂಬ ಎರಡು ಬಗೆಯ ಸಂಪತ್ತುಗಳಿಗೂ ಒಡೆಯ.**

**ವಿವರಣೆ :** ದುಡ್ಡಿಗೆ ಒಡೆಯನೇ ಧನೇಶ್ವರ. ಯಾವ ದುಡ್ಡು ? **'ದೈವೋ ವಿದ್ಯಾ ಹಿರಣ್ಯಾದಿಃ ಮಾನುಷಃ ಪರಿಕೀರ್ತಿತಃ'** - ಎಂಬುದಾಗಿ ದೇವತೆಗಳದ್ದೊಂದು ಸಂಪತ್ತು; ಮಾನವರದ್ದೊಂದು ಸಂಪತ್ತು.

ಯಾವುದರಿಂದ ನಮಗೆ ಸುಖವೋ ಅದು ಸಂಪತ್ತು.

ದೇವತೆಗಳಿಗೆ ಜ್ಞಾನದಿಂದ ಸುಖ. ನಮಗೆ ಯಾವುದರಿಂದ ಸುಖ ? ಹೇಳಬೇಕಾ ? ಚಿನ್ನ ಮುಂತಾದ ಭೌತಿಕ ಸಂಪತ್ತಿನಿಂದ !

ಭೌತಿಕ ಸಂಪತ್ತು ಬೇಕೋ ? ದೈವ ಸಂಪತ್ತಾದ ವಿದ್ಯೆ ಬೇಕೋ ? ಎಂದು ಕೇಳಿದರೆ, ಓದಿಯಾದರೂ ಮತ್ತೆ ಕೇಳುವುದು ಭೌತಿಕ ಸಂಪತ್ತನ್ನೇ ತಾನೇ ?

ಆದುದರಿಂದ ನಮಗೆ ಬಾಹ್ಯಸಂಪತ್ತೇ ಆಗಬಹುದು ಎನ್ನುವೆವು. ದೇವತೆಗಳಿಗೆ ವಿದ್ಯಾಸಂಪತ್ತಿನಿಂದ ತೃಪ್ತಿಯಾದರೆ, ನಮಗೆ ನಿಮಗೆ ತೃಪ್ತಿ ಭೌತಿಕಸಂಪತ್ತಿನಿಂದ.

ಹೀಗೆ ದೈವ ಸಂಪತ್ತು ಎನಿಸುವ ವಿದ್ಯೆಯನ್ನೂ, ಮಾನುಷ ಸಂಪತ್ತು ಎನಿಸುವ ಚಿನ್ನ ಮುಂತಾದುವನ್ನೂ ಅವರವರಿಗೆ ಒದಗಿಸಿಕೊಡುವವನು ಭಗವಂತನೇ ಆಗಿರುವುದರಿಂದ ಅವನು 'ಧನೇಶ್ವರ' - ಎರಡು ಬಗೆಯ ಧನವನ್ನೂ ತನ್ನ ಹಿಡಿತದಲ್ಲಿ ಇಟ್ಟುಕೊಂಡವನು ; ಸಂಪತ್ತಿಗೆ ಒಡೆಯ.

ನಮಗೆ ವಿದ್ಯಾಸಂಪತ್ತೂ ಬೇಕು ; ಭೌತಿಕಸಂಪತ್ತೂ ಬೇಕು. ಅದಕ್ಕಾಗಿ 'ಧನೇಶ್ವರ'- ಎಂದು ಭಗವಂತನ ಉಪಾಸನೆ ನಡೆಸೋಣ.

**ಧರ್ಮಕೃತ್ ಧರ್ಮಗುಬ್ ಧರ್ಮೀ ಸದಸತ್ ಕ್ಷರಮಕ್ಷರಮ್ |**
**ಅವಿಜ್ಞಾತಾ ಸಹಸ್ರಾಂಶುರ್ವಿಧಾತಾ ಕೃತಲಕ್ಷಣಃ ||೫೧||**

**೪೭೮. ಧರ್ಮಕೃತ್ – * ಅಯೋಗ್ಯರ ಕೈಗೆ ಧರ್ಮ ಸಿಗದಂತೆ ಮಾಡುವವನು.**
*** ಧರ್ಮಾಧರ್ಮಗಳ ನಿರ್ಣಯ ಮಾಡುವವನು.**

**ವಿವರಣೆ :** ಕೃತ್-ಕೃಂತತಿ-ಕರ್ತತಿ. ಕತ್ತರಿಸುವವನು. ಧರ್ಮಕೃತ್ - ಧರ್ಮವನ್ನು ಕತ್ತರಿಸುವವನು. ಎಲ್ಲಿ ? ಅಯೋಗ್ಯರಲ್ಲಿ ಎಲ್ಲಾದರೂ ಧರ್ಮ ಸೇರಿಕೊಂಡಿತೆಂದರೆ ಅಲ್ಲಿ ಕತ್ತರಿ ಹಾಕುವನು. ಅಯೋಗ್ಯರ ಕೈಗೆ ಧರ್ಮ ಸಿಗದಂತೆ ಮಾಡುವನು. ಆದ್ದರಿಂದಲೇ ದುರ್ಯೋಧನ ಅಂದ - ಧರ್ಮ ಎಂದರೆ ನನಗೆ ಗೊತ್ತು. ಆದರೆ ಮಾಡಬೇಕೆಂದು ತೋರುವುದಿಲ್ಲ. ದುರ್ಯೋಧನನಿಗೆ ಧರ್ಮ ಮಾಡಬೇಕೆಂದು ನಿನ್ನಿಂದಾಗಿಯೇ ತೋರುವುದಿಲ್ಲ - ಎನ್ನುವರು ಬೀಷ್ಮರು.

ಯೋಗ್ಯರ ಕೈಯಲ್ಲಿ ಧರ್ಮ ಇರಬೇಕೇ ಹೊರತು ಅಯೋಗ್ಯರ ಕೈಗೆ ಧರ್ಮ ಸಿಗಬಾರದು. ಅಯೋಗ್ಯರ ಕೈಯಿಂದ ಧರ್ಮವನ್ನು ತಪ್ಪಿಸುವುದಕ್ಕಾಗಿಯೇ ಬುದ್ಧಾವತಾರ ಆಯಿತೆನ್ನುವರು ಶಾಸ್ತ್ರಕಾರರು. ಅಯೋಗ್ಯರು ಬೇಕಾದರೆ ಧರ್ಮಶಾಸ್ತ್ರಗಳನ್ನು ಓದಿದರೂ ಧರ್ಮದ ಅನುಷ್ಠಾನಕ್ಕೆ ಅವರಿಗೆ ಬುದ್ಧಿ ಬರದಂತೆ ಮಾಡುವವನು 'ಧರ್ಮಕೃತ್' ಎನಿಸುವ ಭಗವಂತ.

ಇನ್ನೊಂದು ಅರ್ಥ - ಇದು ಧರ್ಮ ; ಇದು ಅಧರ್ಮ - ಎಂದು ಮಾಡುವುದು ಕೃಷ್ಣನ ಕೈಯಲ್ಲಿದೆ. **'ಅಶ್ವತ್ಥಾಮಾ ಹತಃ.........'** ಎಂದು ಯುಧಿಷ್ಠಿರನಲ್ಲಿ ಹೇಳಲು ಶ್ರೀ ಕೃಷ್ಣ ಅಂದ. ಸುಳ್ಳು ಹೇಳುವುದು ಅಧರ್ಮ ಎಂದು ಯುಧಿಷ್ಠಿರ ಶಂಕಿಸಿದಾಗ ಕೃಷ್ಣ ಅಂದ ಅದು ಧರ್ಮ.

ಕೃಷ್ಣ ಬೆಣ್ಣೆ ಕದ್ದ. ಅದು ಅಧರ್ಮ ತಾನೇ ? ಅಲ್ಲ. ಬೇರೆಯವರ ಸೊತ್ತನ್ನು ಕದಿಯುವುದು ಅಧರ್ಮ. ಆದರೆ ತನ್ನ ಸೊತ್ತನ್ನು ತಾನು ತೆಗೆದರೆ ಅದು ಕಳ್ಳತನವೂ ಅಲ್ಲ ; ಅಧರ್ಮವೂ ಅಲ್ಲ.

ಒಬ್ಬ ಗೋಪಿ ಅಂದಳು - ಕೃಷ್ಣ ನನ್ನ ಮನೆಯ ಬೆಣ್ಣೆ ಕದ್ದ - ಎಂದು. ಅದಕ್ಕೆ ಕೃಷ್ಣ ಅಂದ ನೀನು ಹುಟ್ಟುವಾಗ ಬೆಣ್ಣೆಯನ್ನು ಹೊತ್ತು ತಂದಿರುವಿಯಾ ? ಹೋಗುವಾಗ ಹಿಡಿದುಕೊಂಡು ಹೋಗುವಿಯಾ ?

ತೆಪ್ಪಗಾದಳು ಆ ಗೋಪಿ.

ನಿನಗೆ ಮನೆ ಕೊಟ್ಟವ ನಾನು ; ನಿನಗೆ ಮನ ಕೊಟ್ಟವ ನಾನು. ನೀನು ಮೊಸರು ಕಡೆಯುವಾಗ ಮೊಸರು ಬರುವಂತೆ ಮಾಡುವವನು ನಾನು. ಆದ್ದರಿಂದ ಬೆಣ್ಣೆ ನನ್ನ ಸೊತ್ತು. ನಾನು ಅದನ್ನು ತೆಗೆದೆ. ಅದು ಧರ್ಮವೇ.

ಕೃಷ್ಣ ಸಾವಿರಾರು ಸ್ತ್ರೀಯರ ಜೊತೆಗೆ ಕ್ರೀಡಿಸಿರಬಹುದು. ಆದರೆ ಅವರೆಲ್ಲರಲ್ಲಿ ಲಕ್ಷ್ಮೀದೇವಿಯ ಸನ್ನಿಧಾನವಿದ್ದು, ಕೃಷ್ಣ ತನ್ನ ನಿಯತಪತ್ನಿಯಾದ ಲಕ್ಷ್ಮಿಯ ಜೊತೆಗೇ ಕ್ರೀಡಿಸಿದ್ದರಿಂದ ಅದು ಧರ್ಮವೇ.

ಹೀಗೆ ಇದು ಧರ್ಮ ; ಇದು ಅಧರ್ಮ ಎನ್ನುವುದು ದೇವರ ಕೈಯಲ್ಲಿ ಇದೆ. ಹೊರತು ನಮ್ಮ ನಿಮ್ಮ ಕೈಯಲ್ಲಿ ಇಲ್ಲ. ಆದ್ದರಿಂದ - ಇದು ಧರ್ಮ ; ಇದು ಅಧರ್ಮ ಎಂದು ತೀರ್ಮಾನ ಮಾಡುವವನು ಧರ್ಮಕೃತ್.

ಹಾಗೆಯೇ ಕೆಟ್ಟವರ ಕೈಗೆ ಧರ್ಮ ಸಿಗದಂತೆ ಮಾಡುವವನು ಧರ್ಮಕೃತ್. ಎಂಬುದಾಗಿ ಧರ್ಮಕೃತ್ ನಾಮಕ್ಕೆ ಎರಡು ಅರ್ಥಗಳು.

**೪೭೯. ಧರ್ಮಗುಪ್ – ಕೆಟ್ಟವರ ಕೈಗೆ ಧರ್ಮ ಸಿಗದಂತೆ ಮಾಡಿ ಧರ್ಮವನ್ನು ರಕ್ಷಿಸುವವನು.**

**ವಿವರಣೆ :** ಕೆಟ್ಟವರ ಕೈಗೆ ಧರ್ಮ ಸಿಗದಂತೆ ಮಾಡಿ 'ಧರ್ಮಕೃತ್' ಎನಿಸುವ ಭಗವಂತ ಹಾಗೆ ಮಾಡುವ ಮೂಲಕ 'ಧರ್ಮಗುಪ್' - ಧರ್ಮವನ್ನು ಪಾಲಿಸುವವನೆನಿಸುವನು.

ಮನೆಯಲ್ಲಿ ಏನೋ ಒಳ್ಳೆಯ ವಸ್ತು ಇತ್ತು. ಅದು ಮತ್ತೇನೂ ಅಲ್ಲ ; ಏನೋ ತಿಂಡಿ. ಅದನ್ನು ಮಕ್ಕಳು ತಿನ್ನಬಾರದೆಂದು ಡಬ್ಬದಲ್ಲಿ ಹಾಕಿ ಮೇಲೆ ಇಡುವೆವು. ಅಂದರೆ ಮತ್ತೊಬ್ಬರ ಕೈಗೆ ಸಿಗದಂತೆ ಮಾಡಿ ಆ ತಿಂಡಿಯನ್ನು ರಕ್ಷಿಸುವೆವು.

ಅದರಂತೆ ಭಗವಂತ ದುಷ್ಟರ ಕೈಗೆ ಧರ್ಮ ಸಿಗದಂತೆ ಮಾಡುವುದಾದರೂ ಅದನ್ನು ರಕ್ಷಿಸುವುದಕ್ಕಾಗಿ.

'ಧರ್ಮಗುಪ್' - ಯಾರ ಕೈಗೆ ಕೊಟ್ಟರೆ ಧರ್ಮವನ್ನು ಅಭಿವೃದ್ಧಿ ಪಡಿಸುವರೋ ಅವರ ಕೈಗೆ ಧರ್ಮವನ್ನು ಕೊಟ್ಟ. ಯಾರ ಕೈಗೆ ಧರ್ಮವನ್ನು ಕೊಟ್ಟರೆ ಕೆಡಿಸುವರೋ ಅವರಿಂದ ಧರ್ಮವನ್ನು ಕಸಿದುಕೊಂಡ.

ಹೀಗೆ ಕೆಟ್ಟವರ ಕೈಗೆ ಧರ್ಮ ಸಿಗದಂತೆ ಮಾಡಿ ಧರ್ಮವನ್ನು ರಕ್ಷಿಸುವವನು. **'ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇಯುಗೇ'** - ಎಂದು ಕೃಷ್ಣ ತಾನು ಧರ್ಮದ ರಕ್ಷಣೆಗಾಗಿ ಅವತರಿಸುವುದಾಗಿ ತಿಳಿಸಿರುವನು ತಾನೇ ?

**೪೮೦. ಧರ್ಮೀ – ಧರ್ಮದ ವ್ಯವಸ್ಥೆ ಮಾಡುವವನು.**

ವಿವರಣೆ : ಹೀಗೆ ಭಗವಂತನು ಧರ್ಮಕೃತ್ ಹಾಗೂ ಧರ್ಮಗುಪ್ ಆಗಿರುವುದರಿಂದಲೇ 'ಧರ್ಮೀ' ಎನಿಸಿರುವನು. ಧರ್ಮವುಳ್ಳವನೇ ಧರ್ಮೀ.

ಧರ್ಮದ ರಕ್ಷಣೆ ಆಗಬೇಕಾದರೆ ಯಾರ ಕೈಯಲ್ಲಿ ಧರ್ಮವನ್ನು ಕೊಡಬೇಕು? ಯಾರ ಕೈಯಲ್ಲಿ ಕೊಡಬಾರದು ? - ಇದೆಲ್ಲ ವ್ಯವಸ್ಥೆ ಮಾಡುವ ವ್ಯಕ್ತಿಯನ್ನು 'ಧರ್ಮೀ' ಎನ್ನಲಾಗುವುದು.

ಗಣಪತಿ ವಿಘ್ನಾಧಿಪತಿ ಎನಿಸುವನು. ಯಾಕೆ ? ಯಾರಿಗೆ ವಿಘ್ನ ಕೊಡಬೇಕು? ಯಾರಿಗೆ ವಿಘ್ನ ಪರಿಹರಿಸಬೇಕು ? - ಎಂದು ವ್ಯವಸ್ಥೆ ಮಾಡುವವನು ಗಣಪತಿಯಾಗಿರುವುದರಿಂದ ಅವನು 'ವಿಘ್ನಾಧಿಪತಿ' ಎನಿಸುವನು. ಅಂತೆಯೇ ಧರ್ಮದ ಬಗ್ಗೆ ವ್ಯವಸ್ಥೆ ಮಾಡುವ ಭಗವಂತನು ಧರ್ಮೀ.

**೪೮೧. ಸತ್ – ಕಾಣಿಸಿಕೊಳ್ಳುವವನು.**

**೪೮೨. ಅಸತ್ – ಕಾಣಿಸಿಕೊಳ್ಳದವನು.**

ವಿವರಣೆ: ಕಾಣಿಸುವವನು ಸತ್, ಕಾಣಿಸದಿರುವವನು 'ಅಸತ್'. ದೇವರು ಸತೋ? ಅಲ್ಲ ಅಸತ್ ; ದೇವರು ಅಸತೋ ? ಅಲ್ಲ ಸತ್. ದೇವರು ಕಾಣಿಸುವನೋ ? ಇಲ್ಲ ; ದೇವರು ಕಾಣಿಸುವುದಿಲ್ಲವೋ ? ಕಾಣಿಸುವನು.

ಪಂಚಭೂತಗಳಲ್ಲಿ ಭೂಮಿ, ನೀರು, ಬೆಂಕಿ ಕಾಣಿಸುವುದರಿಂದ 'ಸತ್' ಆದರೆ, ಆಕಾಶ ಮತ್ತು ವಾಯು ಕಾಣಿಸದಿರುವುದರಿಂದ 'ಅಸತ್'. ಅಂತೆಯೇ ದೇವರು ಸತ್ ಹೌದು ; ಅಸತ್ ಹೌದು. ಕಾಣಿಸುವವನೂ ಕಾಣಿಸದವನೂ.

ಈಗ ನಮಗೆ ದೇವರು ಕಾಣಿಸುವುದಿಲ್ಲ - ಆದುದರಿಂದ 'ಅಸತ್'. ತುಂಬ ಸಾಧನಾನುಷ್ಠಾನ ನಡೆಸಿದೆವೆಂದರೆ ಅವನ ಅಪರೋಕ್ಷ ಜ್ಞಾನ ಗಳಿಸಿಕೊಂಡೆವೆಂದರೆ ಆಗ ದೇವರು 'ಸತ್'.

ಈಗ ನಾವು ದೇವರು ಇರುವನೆಂದು ಎಷ್ಟು ಹೇಳಿಕೊಳ್ಳುವೆವಾದರೂ ನಮ್ಮ ಪಾಲಿಗೆ ಪೂರ್ಣಪ್ರಮಾಣದಲ್ಲಿ ದೇವರು 'ಸತ್' ಅಲ್ಲ. ದೇವರ್‍ಗು ಇದ್ದಾನೆಂದು ಉಪನ್ಯಾಸ ಮಾಡುತ್ತ ಹತ್ತು ನಿಮಿಷ ಕಾಲ ಮುಂದುವರಿಸಿದೆನೆಂದರೆ ಕೂಡಲೇ ವಾಚ್ ನೋಡಿಕೊಳ್ಳಲು ಪ್ರಾರಂಭಿಸುವಿರಿ - 'ಗಂಟೆ ಆಯಿತು ; ನಾನೊಬ್ಬನೇ ಮನೆಗೆ ಹೋಗಬೇಕು........' - ಎಂದು !

**೪೮೩. ಕ್ಷರಮ್ - ನಾಶವಾಗುವ ಶರೀರದಲ್ಲೂ ರಮಿಸಿಕೊಂಡೇ ಇರುವವನು.**

**ವಿವರಣೆ :** ಕ್ಷ ಎಂದರೆ ಕ್ಷಯ ಸ್ವಭಾವದ, ನಾಶ ಸ್ವಭಾವದ ನಮ್ಮ ನಿಮ್ಮ ಶರೀರ. ಅದರಲ್ಲಿ 'ರಮತೇ' - ಚೆನ್ನಾಗಿ ಕ್ರೀಡಿಸುತ್ತಿರುವವನೇ 'ಕ್ಷರಮ್'. ನಾಶವಾಗುವ ಮನೆಯಲ್ಲಿ ಚೆನ್ನಾಗಿ ಬದುಕಲು ಆಗುವುದೇ ? ಭಗವಂತನಾದರೂ ನಾಶವಾಗುವಂತಹ ಶರೀರದಲ್ಲಿದ್ದರೂ ಸುಖದಿಂದಿರುವುದರಿಂದ 'ಕ್ಷರ' ಎನಿಸುವನು.

ನಾಶವಾಗುವ ವಸ್ತುಗಳಲ್ಲಿದ್ದರೂ ರಮಿಸಿಕೊಂಡೇ ಇರುವವನು 'ಕ್ಷರ'. ನಮ್ಮ ಶರೀರ ಯಾವಾಗ ನಾಶವಾಗುವುದೆಂದು ಗೊತ್ತಿಲ್ಲ. ಇಂತಹ ಸ್ಥಿತಿಯಲ್ಲಿ ಸ್ವಲ್ಪ ನೆಮ್ಮದಿಯಿಂದ ಶರೀರದಲ್ಲಿ , ಮನೆಯಲ್ಲಿ ನಾವು ಇರಬೇಕೆಂದರೆ ಭಗವಂತನನ್ನು 'ಕ್ಷರಮ್' - ಎಂದು ಉಪಾಸನೆ ಮಾಡೋಣ.

**೪೮೪. ಅಕ್ಷರಮ್ - ತುಂಬ, ಇನ್ನಾರೂ ನೀಡದಷ್ಟು ಕೊಡುವವನು.**

**ವಿವರಣೆ :** ಅ - ಅಧಿಕಂ ಕ್ಷರತೀತಿ ಕ್ಷರಮ್ - ಅಕ್ಷರಮ್. ಕ್ಷರತಿ ಅಂದರೆ ಕೊಡುವವನು. ಅಧಿಕಂ - ಅಂದರೆ ನಿರಂತರವಾಗಿ, ಆದುದರಿಂದ ನಿರಂತರವಾಗಿ ಕೊಡುವವನೇ ಅಕ್ಷರಮ್.

ತಂದೆ ಕೊಡುತ್ತಾನೆ ; ತಾಯಿ ಕೊಡುತ್ತಾಳೆ. ಗುರು ಕೊಡುತ್ತಾನೆ ; ಬಂಧುಗಳು ಕೊಡುತ್ತಾರೆ. ಸಮಾಜದವರು ಕೊಡುತ್ತಾರೆ. ಎಷ್ಟು ಕೊಡುತ್ತಾರೆ ? ಎಲ್ಲಿಯತನಕ ಕೊಡುತ್ತಾರೆ ? ತಂದೆ ಕೊಟ್ಟದ್ದು ಎಲ್ಲಿಯವರೆಗೆ ಬಂದೀತು ? ತಾಯಿ ಕೊಟ್ಟದ್ದು ಎಷ್ಟು ದಿನಗಳವರೆಗೆ ಇದ್ದೀತು ? ಸಮಾಜ ಕೊಟ್ಟದ್ದನ್ನು ಎಷ್ಟು ದಿನಗಳವರೆಗೆ ಉಳಿಸಿಕೊಳ್ಳಬಹುದು ?

ಹೀಗೆ ಯಾರು ಕೊಟ್ಟರೂ ನಮಗೆ ಕೊನೆಯ ತನಕ ಬರುವುದಿಲ್ಲ. ಯಾಕೆಂದರೆ ಕೊನೆಯತನಕ ಬರುವಷ್ಟು ಯಾರೂ ಕೊಡುವುದಿಲ್ಲ.

ಆದುದರಿಂದಲೇ ಅ-ಅಧಿಕಂ, ಚೆನ್ನಾಗಿ, ನಿರಂತರವಾಗಿ ತುಂಬ ಕ್ಷರತಿ - ಕೊಡುತ್ತಾನೆ ಎಂಬುದಕ್ಕಾಗಿಯೇ 'ಅಕ್ಷರಮ್' ಎನಿಸುವನು.

ನಮ್ಮ ಎರಡು ಕೈಗಳಲ್ಲಿ ತೆಗೆದುಕೊಳ್ಳಲಾಗದಷ್ಟು ಭಗವಂತ ನೀಡುವುದರಿಂದ 'ಅಕ್ಷರಮ್' - ಎನಿಸುವನು ಭಗವಂತ.

**೪೮೫. ಅವಿಜ್ಞಾತಾ - ಯಾರನ್ನು ಪೂರ್ಣವಾಗಿ ತಿಳಿದವರು ಯಾರೂ ಇಲ್ಲವೋ ಅಂತಹವನು.**

ವಿವರಣೆ : ಭೀಷ್ಮರು ಕೃಷ್ಣನಲ್ಲಿ ಹೇಳುವರು - ಕೃಷ್ಣ ಈವರೆಗೆ ನಿನ್ನ ಬಗ್ಗೆ ಸ್ವಲ್ಪ ಸ್ವಲ್ಪ ಹೇಳಿಕೊಂಡು ಬಂದೆ. ಪೂರ್ಣವಾಗಿ ಹೇಳಬೇಕೋ ? ಕೃಷ್ಣ - 'ಹೇಳಿ' - ಅಂದಾಗ, 'ಗೊತ್ತಿಲ್ಲ' ಎಂದೇ ನಿನ್ನ ಹೆಸರು ಎಂದರು ಭೀಷ್ಮರು.

ದೇವರ ಬಗ್ಗೆ ನಾನು ಹೇಳ್ತೇನೆ ಎಂದು ಹೊರಡುವವನಿಗೆ ದೇವರ ಬಗ್ಗೆ ಗೊತ್ತಿಲ್ಲ - ಎಂದೇ ಅರ್ಥ.

ದೇವರ ಬಗ್ಗೆ ಹೇಗೆ ಹೇಳಲಿ ? - ಎಂದವನನ್ನು ಸ್ವಲ್ಪ ಕೆದಕಬೇಕು ದೇವರ ಬಗ್ಗೆ ಹೇಳಲು.

ಚತುರ್ಮುಖ ರುದ್ರನ ಎದುರು ದೇವರ ಬಗ್ಗೆ ಹೀಗೆ ಸಂದೇಶ ನೀಡಿರುವನು- **'ಅವಿಜ್ಞಾತಂ ವಿಜಾನತಾಂ..........'** ಯಾರು ತಾವು ದೇವರ ಬಗ್ಗೆ ತಿಳಿದಿದ್ದೇವೆ ಎಂದು ತಿಳ್ಕೊಂಡಿರುವರೋ ಅವರಿಗೆ ದೇವರ ಬಗ್ಗೆ ಗೊತ್ತಿಲ್ಲ - ಎಂದೇ ಅರ್ಥ **'..... ವಿಜ್ಞಾತಂ ಅವಿಜಾನತಾಮ್'** ಯಾರು ದೇವರ ಬಗ್ಗೆ ಗೊತ್ತಿಲ್ಲ ಎನ್ನುವರೋ ಅವರಿಗೆ ದೇವರ ಬಗ್ಗೆ ಗೊತ್ತಿದೆ ಎಂದರ್ಥ.

ಯಾರಿಗೂ ಕೂಡಾ ನಖಶಿಖಾಂತ ಪರಿಚಯಿಸಿಕೊಳ್ಳಲು ಆಗದವನೆಂಬುದೇ 'ಅವಿಜ್ಞಾತಾ' - ಎಂಬುದರ ಅರ್ಥ. ಎಂದೆಂದಿಗೂ ರಹಸ್ಯವಾಗಿಯೇ ಉಳಿದುಕೊಂಡ ವಸ್ತುವಿಗೆ ದೇವರು ಎಂಬ ಹೆಸರು.

ಭೀಷ್ಮರು ಹೇಳ್ತಾರೆ ಕೃಷ್ಣನಲ್ಲಿ - ಇಷ್ಟು ವರ್ಷ ನಿನ್ನ ಒಡನಾಟದಲ್ಲಿ ನಾನು ಇದ್ದರೂ ನಿನ್ನನ್ನು ಪೂರ್ಣವಾಗಿ ಅರ್ಥಮಾಡಿಕೊಳ್ಳಲಾಗಲಿಲ್ಲ. ಆದುದರಿಂದಲೇ ನಿನಗೆ ಹೆಸರು - 'ಅವಿಜ್ಞಾತಾ'.

ಸ್ವಲ್ಪ ಸ್ವಲ್ಪ ತಿಳಿಯಲ್ಪಡುತ್ತಾನೆ. ಆದರೆ ಪೂರ್ಣವಾಗಿ ತಿಳಿಯಲ್ಪಡದವನು. ಸಮುದ್ರದ ಪೂರಾ ನೀರು ತರಲು ಸಾಧ್ಯವಿಲ್ಲ. ಆದರೆ ಬೇರೆ ಬೇರೆ ಪಾತ್ರ ಹಿಡಿದುಕೊಂಡು ಹೋಗಿ ಆಯಾ ಪಾತ್ರೆಯಲ್ಲಿ ತುಂಬಿಸಿಕೊಂಡು ಸಮುದ್ರದ ನೀರನ್ನು ತರಬಹುದು. ಅದರಂತೆ ದೇವರನ್ನು ಅವರವರ ಬುದ್ಧಿಮಟ್ಟಕ್ಕೆ ಅನುಗುಣವಾಗಿ ತಿಳಿಯಬಹುದಾದರೂ ಸಮಗ್ರವಾಗಿ ನಖಶಿಖಾಂತ ತಿಳಿಯಲು ಆಗುವುದಿಲ್ಲ. ಎಂದಷ್ಟೇ ಭೀಷ್ಮರು ಸ್ತುತಿಸುವರು - 'ಅವಿಜ್ಞಾತಾ' - ಯಾರನ್ನು ಪೂರ್ಣವಾಗಿ ತಿಳಿದವನು ಯಾರೊಬ್ಬನೂ ಇಲ್ಲವೋ ಅಂತಹವನು.

ಲೋಕದಲ್ಲಿ ಸತಿಪತಿಯರು ಒಬ್ಬರನ್ನೊಬ್ಬರು ಚೆನ್ನಾಗಿ ಅರ್ಥಮಾಡಿಕೊಳ್ಳಲಿಕ್ಕಾಗದಲ್ಲಿ ಅದು ವೈಮನಸ್ಯಕ್ಕೆ ಕಾರಣವಾಗುವುದು. ಆದರೆ ಲಕ್ಷ್ಮೀನಾರಾಯಣರಲ್ಲಿ ಪತಿಯಾದ ನಾರಾಯಣನನ್ನು ಪೂರ್ಣವಾಗಿ ಅರ್ಥ ಮಾಡಿಕೊಳ್ಳಲಾಗದಿರುವಂತಹದ್ದು ಲಕ್ಷ್ಮಿಗೆ ಅವನನ್ನು ಅಧಿಕವಾಗಿ ಪ್ರೀತಿಸುವುದಕ್ಕೆ ಕಾರಣವಾಗುವುದು. ಇದು ಸಂಸಾರ ಮೋಕ್ಷಗಳೊಳಗಿರುವ ವ್ಯತ್ಯಾಸ.

**೪೮೬. ಸಹಸ್ರಾಂಶುಃ - ಮೂಲರೂಪದಲ್ಲಿರುವ ಗುಣ, ಶಕ್ತಿ ವೈಭವಗಳಿಂದೆಲ್ಲ ಸಹಿತನಾಗಿಯೇ ಅವತಾರಾದಿ ರೂಪಗಳನ್ನು ತಾಳುವವನು.**

**ವಿವರಣೆ :** ಸರತೀತಿ ಸ್ರಃ - ಹೋಗುವವನು ; ಅನುಸರಣ ಎಂದರೆ ಅನುಸರಿಸಿ ಹೋಗುವುದು. ಇದರಲ್ಲಿ ಅಸ್ವಾತಂತ್ರ್ಯದ ಸ್ಪರ್ಶ ಇದೆ. ಸರಣ ಎಂದರೆ ಸ್ವತಂತ್ರವಾಗಿ ಹೋಗುವುದು. ಭಗವಂತ ಸ್ವತಂತ್ರವಾಗಿಯೇ ಹೋಗುವುದರಿಂದ 'ಸ್ರ', ಹಾಗೆ ಹೋಗುವಾಗ 'ಅನು' ಅಲ್ಲ ; ಬದಲಾಗಿ 'ಸಹ' - ಅಂದರೆ ಮೂಲರೂಪದಿಂದ ರಾಮ ಕೃಷ್ಣ ಮುಂತಾದ ಅವತಾರ ರೂಪಗಳಿಂದ ಹೊರಡುವಾಗ ಮೂಲರೂಪದ ಗುಣಗಳಿಂದ, ಶಕ್ತಿಗಳಿಂದ ಕೂಡಿಕೊಂಡೇ ಹೊರಡುವನು. ಆದುದರಿಂದ ಅವನು 'ಸಹಸ್ರಃ'. ಆದುದರಿಂದಲೇ ಉಪನಿಷತ್ತು ಸಾರುತ್ತಿದೆ - **'ಪೂರ್ಣಮದಃ ಪೂರ್ಣಮಿದಂ.........'** - ಅದೂ ಪೂರ್ಣ ; ಅಷ್ಟೇ ಇದೂ ಪೂರ್ಣ. ಅದು ಎಂದರೆ ಮೂಲರೂಪ. ಇದು ಎಂದರೆ ಅವತಾರ ರೂಪಗಳು. ಮೂಲರೂಪದ ಎಲ್ಲ ಗುಣಗಳಿಂದಲೂ, ಶಕ್ತಿಗಳಿಂದಲೂ, , ವೈಭವದಿಂದಲೂ ಸಹಿತನಾಗಿಯೇ ಅವತಾರ ರೂಪ ತಾಳುವುದರಿಂದ ಅದರಷ್ಟೇ ಪೂರ್ಣ ಇದೂ ಎಂದೆನಿಸುವಂತಾಗಿದೆ.

ಈ ಒಂದು ವೈಭವ ಭಗವಂತನ ರೂಪಕ್ಕಷ್ಟೇ ಇರುವಂತಹದ್ದು. ಅರ್ಜುನ, ಕರ್ಣ, ವಾಲಿ...... ಇತ್ಯಾದಿಗಳೆಲ್ಲ ಬೇರೆ ಬೇರೆ ದೇವತೆಗಳೇ ಅವತಾರ ತಾಳಿರುವರು.

ಆದರೆ ತಮ್ಮ ತಮ್ಮ ಮೂಲ ರೂಪದಲ್ಲಿ ಇರುವ ಎಲ್ಲ ಗುಣ, ಮಹಿಮೆ, ಶಕ್ತಿಗಳು ಅವತಾರ ರೂಪಗಳಲ್ಲಿ ಇರುವುದಿಲ್ಲ. ಆದ್ದರಿಂದ 'ಸಹಸ್ರ' ಭಗವಂತನೊಬ್ಬನೇ. ಒಂದೊಮ್ಮೆ ಭಗವವಂತನ ಅವತಾರ ರೂಪಗಳಲ್ಲಿ ಅವನ ಮೂಲರೂಪದಷ್ಟು ಗುಣಾದಿಗಳು ಇಲ್ಲ ಎಂದು ಭಾವಿಸಿದೆವೆಂದಾದರೆ ನಮ್ಮ ಇರುವ ಗುಣ, ಶಕ್ತಿಗಳನ್ನೂ ಭಗವಂತ ತೆಗೆದು ಬಿಡುವನು ! ಆದ್ದರಿಂದ ಈ ವಿಷಯದಲ್ಲಿ ತುಂಬ ಎಚ್ಚರದಿಂದ ಇರಬೇಕು.

ಅಂಶು ಎಂದರೆ ಅಂಶ, ಅವತಾರ ರೂಪಗಳು. ವಾಸುದೇವಾದಿ ಚತುರ್ಮೂರ್ತಿಗಳು, ಮತ್ಸ್ಯಾದಿ ದಶ ಅವತಾರಗಳು, ಕೇಶವಾದಿ ದ್ವಾದಶ ರೂಪಗಳು..... ಹೀಗೆ ಭಗವಂತನ ಬೇರೆ ಬೇರೆ ರೂಪಗಳು ಅವನ ಅಂಶಗಳು, ಅಂಶುಗಳು. ಆದುದರಿಂದ ಮೂಲರೂಪದ ಗುಣಾದಿಗಳಿಂದ ಸಹಿತಗಳಾಗಿಯೇ ಬರುವ ಅಂಶಗಳು, ಅಂಶುಗಳು , ಸ್ವರೂಪಾತ್ಮಕ ರೂಪಗಳು ಉಳ್ಳವನೇ ಸಹಸ್ರಾಂಶುಃ. ಭಗವಂತನನ್ನು ಹೀಗೆ ಉಪಾಸನೆ ಮಾಡಿದರೆ ನಾವು ಹಿಂದಿನ ಜನ್ಮದಲ್ಲಿ ತಿಳಿದ ವಿಷಯಗಳನ್ನು ಈ ಜನ್ಮದಲ್ಲಿ ಸಂಸ್ಕಾರ ರೂಪದಿಂದ ತಿಳಿಸಿ ಕೊಡುವನು. ಹಿಂದಿನ ದಿನ ತಿಳಿದದ್ದನ್ನು ಮುಂದಿನ ದಿನ ನೆನಪಿಸಿಕೊಡುವನು. ಬಾಲ್ಯ ಯೌವನಾದಿಗಳಲ್ಲಿ ಅಧ್ಯಯನ ಮಾಡಿದ್ದನ್ನು ಸಾಯುವ ಅವಧಿಯಲ್ಲಿ ಜ್ಞಾಪಿಸಿಕೊಡುವನು.

ಭೀಷ್ಮರು ಬಾಲ್ಯದಲ್ಲಿ, ಯೌವನದಲ್ಲಿ ಪರಶುರಾಮನ ಮೂಲಕ ಬೃಹಸ್ಪತ್ಯಾಚಾರ್ಯರ ಮೂಲಕ ಓದಿದ್ದನ್ನೆಲ್ಲ ನೆನಪಿಗೆ ಬರುವಂತೆ ಮಾಡುತ್ತಿರುವವನು 'ಸಹಸ್ರಾಂಶು' ನಾಮಕ ಭಗವಂತನೆಂದು ಅನುಸಂಧಾನ ಮಾಡುತ್ತಿರುವರು.

**೪೮೭. ವಿಧಾತಾ - ವಿಶೇಷವಾಗಿ ಧಾರಣೆ ಪೋಷಣೆ ಮಾಡುವವನು.**

**ವಿವರಣೆ:** ಧಾತಾ ಎಂದರೆ ಧಾರಣೆ ಮಾಡುವವನು. ವಿಧಾತಾ ಎಂದರೆ ವಿಲಕ್ಷಣವಾಗಿ ಧಾರಣೆ ಮಾಡುವವನು. ಧಾರಣೆ ಎಂದರೆ ಪೋಷಣೆ. ನಮ್ಮನ್ನು ನಮ್ಮ ತಂದೆ, ತಾಯಿ, ಗುರುಗಳು, ಬಂಧುಗಳು........ ಇವರೆಲ್ಲ ಧಾರಣೆ, ಪೋಷಣೆ ಮಾಡಬಲ್ಲರು. ಆದರೆ ಎಷ್ಟು ದಿನಗಳ ತನಕ ಇವರೆಲ್ಲ ಪೋಷಣೆ ಮಾಡಿಯಾರು? ತಂದೆ ತಾಯಂದಿರು ತಮ್ಮ ವೃದ್ಧಾಪ್ಯದವರೆಗೆ ನಮ್ಮನ್ನು ಪೋಷಣೆ ಮಾಡಿ ಬಳಿಕ ನಾವೇ ಅವರನ್ನು ಪೋಷಣೆ ಮಾಡಬೇಕಾದೀತು ! ಹೀಗೆ ಉಳಿದೆಲ್ಲರೂ ಒಂದೊಂದು

ಅವಧಿಯವರೆಗಷ್ಟೇ ನಮ್ಮ ಪಾಲನೆ ಪೋಷಣೆ ಮಾಡುತ್ತಿದ್ದರೆ ನಮ್ಮನ್ನು ಕೊನೆಯವರೆಗೂ ಕೈ ಬಿಡದೆ ವಿಲಕ್ಷಣವಾಗಿ ಧಾರಣೆ ಪೋಷಣೆ ನಡೆಸುವವನು ಭಗವಂತನಾದುದರಿಂದ ಅವನು - 'ವಿಧಾತಾ' - ವಿಶೇಷವಾಗಿ ಧಾರಣೆ ಪೋಷಣೆ ಮಾಡುವವನು.

**೪೮೮. ಕೃತಲಕ್ಷಣಃ - ಪ್ರತಿಯೊಬ್ಬರಲ್ಲೂ ಬೇರ ಬೇರೆ ಲಕ್ಷಣವನ್ನು ಸೃಷ್ಟಿಸಿರುವವನು.**

ವಿವರಣೆ : ಲಕ್ಷಣ ಎಂದರೆ ಚಿಹ್ನೆ. ಕೃತ ಎಂದರೆ ಮಾಡಿದ್ದು, ಕೊಟ್ಟದ್ದು. ಪ್ರತಿಯೊಬ್ಬರಲ್ಲೂ ಬೇರೆ ಬೇರೆ ಚಿಹ್ನೆಯನ್ನು ಕೊಟ್ಟಿರುವವನು ಭಗವಂತ. ಅವಳಿ ಮಕ್ಕಳಲ್ಲೂ ಅನೋನ್ಯವಾಗಿ ಎಷ್ಟೇ ಸಾಮ್ಯ ಇದ್ದರೂ ಬೇರೆ ಬೇರೆಯಾಗಿ ಗುರುತಿಸಬಹುದಾದ ಚಿಹ್ನೆ ಇದ್ದೇ ಇರುವುದು. ಇದು ಸೆಕ್ಕರೆಯ ಭಕ್ಷ್ಯ. ಇದು ಬೆಲ್ಲದ ಭಕ್ಷ್ಯ. ಹೇಗೆ ತಿಳಿಯಿತು ? ತಿಂದು ನೋಡು, ನಿನಗೇ ತಿಳಿಯುವುದು ಎನ್ನುವೆವು. ಹಾಗಾದರೆ ಆ ಭಕ್ಷ್ಯಗಳಲ್ಲಿಯ ಪ್ರತ್ಯೇಕತೆಗೆ ಬೇಕಾದ ಲಕ್ಷಣ ಇದ್ದೇ ಇದೆ ಎಂಬುದು ಸ್ಪಷ್ಟ.

ಇದನ್ನೇ ಮಧ್ವಾಚಾರ್ಯರು ಅಂದೇ ಹೇಳಿರುವರು - 'ಭಿನ್ನಾಶ್ಚ ಭಿನ್ನಧರ್ಮಾಶ್ಚ ಪದಾರ್ಥಾ ನಿಖಿಲಾ ಅಪಿ....' ಪ್ರತಿಯೊಂದು ಪದಾರ್ಥದಲ್ಲೂ ಬೇರೆ ಬೇರೆ ಧರ್ಮವೇ ಇರುವುದರಿಂದ ಪದಾರ್ಥಗಳೆಲ್ಲ ಬೇರೆ ಬೇರೆಯೇ ಆಗಿರುವವು. ವ್ಯಕ್ತಿ ವ್ಯಕ್ತಿಗೆ ಭೇದ. ಒಬ್ಬನೇ ವ್ಯಕ್ತಿಯಲ್ಲೂ ಕಾಲಕಾಲಕ್ಕೆ, ದೇಶ ದೇಶಕ್ಕೆ ಭಿನ್ನತೆ ಕಾಣಿಸಿಕೊಳ್ಳುವಾಗ, ವ್ಯಕ್ತಿ ವ್ಯಕ್ತಿಗೆ ಭೇದ ಇದ್ದೇ ಇರುವುದು. ಅದಕ್ಕೆ ಬೇಕಾದ ಲಕ್ಷಣ, ಚಿಹ್ನೆ ಇರುವುದು. ಎಷ್ಟು ಸಂಖ್ಯೆಯಲ್ಲಿ ಮನುಷ್ಯರಿರುವರೋ ಅಷ್ಟೂ ಸಂಖ್ಯೆಯಲ್ಲಿ ಮುಖಗಳಿದ್ದು, ಅವೆಲ್ಲ ಕಣ್ಣು, ಮೂಗು, ಬಾಯಿ - ಇವನ್ನೆಲ್ಲ ಸಮಾನವಾಗಿ ಹೊಂದಿರುವವಾದರೂ ಮುಖಗಳು ಬೇರೆ ಬೇರೆಯೇ. ಒಬ್ಬನ ಮುಖದಂತೆ ಮತ್ತೊಬ್ಬನ ಮುಖ ಇಲ್ಲ. ಹೀಗೆ ಪ್ರತ್ಯೇಕತೆ ಬರುವಂತೆ ಪ್ರತಿಯೊಂದರಲ್ಲೂ ಬೇರೆ ಬೇರೆ ಲಕ್ಷಣವನ್ನು, ಚಿಹ್ನೆಯನ್ನು ಸೃಷ್ಟಿಸಿದವನು ಯಾರು ? 'ಗೊತ್ತಿಲ್ಲ' ಆ 'ಗೊತ್ತಿಲ್ಲ' ನೇ ದೇವರು. ಗೊತ್ತಿಲ್ಲ ಎಂಬುದು ಅವನದ್ದೇ ಹೆಸರು.

ಹೀಗೆ ಪ್ರತಿಯೊಬ್ಬ ವ್ಯಕ್ತಿಯಲ್ಲೂ, ಪ್ರತಿಯೊಂದು ವಸ್ತುವಿನಲ್ಲೂ ಬೇರೆ ಬೇರೆ ಲಕ್ಷಣವನ್ನು, ಚಿಹ್ನೆಯನ್ನು ನಿರ್ಮಾಣ ಮಾಡಿರುವ ಭಗವಂತ 'ಕೃತ ಲಕ್ಷಣ.'

**ಗಭಸ್ತಿನೇಮಿಃ ಸತ್ತ್ವಸ್ಥಃ ಸಿಂಹೋ ಭೂತಮಹೇಶ್ವರಃ |**
**ಆದಿದೇವೋ ಮಹಾದೇವೋ ದೇವೇಶೋ ದೇವಭೃದ್ಗುರುಃ ||೫೧||**

**೪೮೯. ಗಭಸ್ತಿನೇಮಿಃ – ಸೂರ್ಯ ಮುಂತಾದ ಪ್ರಕಾಶಕ ವಸ್ತುಗಳನ್ನು ನಿಯಮಿಸುತ್ತಿರುವವನು.**

**ವಿವರಣೆ:** ಸೂರ್ಯನನ್ನು ಗಭಸ್ತಿ ಎಂದು ಕರೆಯುವರು. ಗ ಎಂದರೆ ತಿಳಿಯಲ್ಪಡುವ ವಸ್ತುಗಳು. ಯಾರಿಂದಲಾದರೂ ತಿಳಿಯಲ್ಪಡುವವು. ಅಂತಹ ವಸ್ತುಗಳನ್ನು ‘ಭಸ್ತಿ’ ತಿಳಿಸುವವನು. ತಾನು ಉದಯಿಸುತ್ತಿದ್ದಂತೆಯೇ ವಸ್ತುಗಳನ್ನು ತಿಳಿಸಿ ಕೊಡುವುದರಿಂದ ಸೂರ್ಯ ‘ಗಭಸ್ತಿ’. ವಸ್ತುಗಳನ್ನು ತೋರುವಂತೆ ಮಾಡುವವನು ಸೂರ್ಯ. ಅವನು ಅಸ್ತಂಗತ ಆದ ಮೇಲೂ ವಸ್ತುಗಳು ತೋರುವವು. ಯಾಕೆಂದರೆ ಸೂರ್ಯ ತನ್ನ ಶಕ್ತಿಯನ್ನು ಚಂದ್ರ, ವಿದ್ಯುದ್ದೀಪ ಇತ್ಯಾದಿಗಳಲ್ಲಿ ಇಟ್ಟಿರುವನು. ಆದ್ದರಿಂದ ಅವುಗಳ ಮೂಲಕ ವಸ್ತುಗಳು ತೋರುವವು. ಅಂತೂ ವಸ್ತುಗಳು ತೋರುವುದು ಸೂರ್ಯನ ಪ್ರಕಾಶದಿಂದ. ನೇರವಾಗಿ ಅಥವಾ ಪರಂಪರಯಾ ಸೂರ್ಯನಿಂದಲೇ ಬೆಳಗುವವು. ಆದುದರಿಂದಲೇ ಸೂರ್ಯ - ‘ಗಭಸ್ತಿ’.

ಹೀಗೆ ಎಲ್ಲರಿಗಿಂತ ಎತ್ತರದಲ್ಲಿದ್ದುಕೊಂಡು, ಎಲ್ಲರಿಗೆ ಬೆಳಕು ಕೊಡುತ್ತಿರುವ ‘ಗಭಸ್ತಿ’ ಎನಿಸುವ ಸೂರ್ಯನನ್ನೂ ನಿಯಮಿಸುವವನು ಭಗವಂತ ‘ಗಭಸ್ತಿನೇಮಿ’. ನೇಮಿ ಎಂದರೆ ನಿಯಮಿಸುವವನು.

ಕೋಲ ಕಟ್ಟುವ ಜನಾಂಗದವರು ತಮ್ಮ ಭೂತಗಳಿಗೆ ಕೊಡುವ ಕೋಲಗಳಿಗೆ ‘ನೇಮ’ ಎಂಬ ಹೆಸರು. ಯಾಕೆ ? ಅದನ್ನು ನಿಯಮೇನ ಕೊಡಬೇಕು. ಆ ಊರಿನ ದೇವಸ್ಥಾನದಲ್ಲಿ ಉತ್ಸವ ಆಗದಿದ್ದರೂ ಪರವಾಗಿಲ್ಲ ; ಭೂತಕ್ಕೆ ಕೋಲ ಆಗಲೇ ಬೇಕು. ಎಷ್ಟೋ ಊರುಗಳಲ್ಲಿ ಇಂತಹ ಸಂದರ್ಭಗಳಿವೆ.

ಚಕ್ರದ ಮಧ್ಯದಲ್ಲಿ ಇರುವ ‘ನಾಭಿ’ಗೂ ನೇಮಿ ಎಂಬ ಹೆಸರಿದೆ. ನೇಮಿಯು ಚಕ್ರ ಯದ್ವಾತದ್ವಾ ಹೋಗದಂತೆ ನೋಡಿಕೊಳ್ಳುವುದು. ಅದರಂತೆ ಸೂರ್ಯ ಯದ್ವಾ ತದ್ವಾ ಉದಿಸದಂತೆ, ಅಸ್ತಮಿಸದಂತೆ ದೇವರು ನೋಡುತ್ತಿರುತ್ತಾನೆ. ಸೂರ್ಯನನ್ನು ಮಾತ್ರ ಅಲ್ಲ ; ವಸ್ತುಗಳನ್ನು ಬೆಳಗಿಸುವ ಸೂರ್ಯ, ಚಂದ್ರ, ನಕ್ಷತ್ರ ಪುಂಜ - ಇತ್ಯಾದಿ ಪ್ರಕಾಶಕ ವಸ್ತುಗಳಿಗೆಲ್ಲ ನೇಮಿಯಂತೆ ಭಗವಂತ ನಿಯಾಮಕನಾಗಿ ಆಯಾ ಕಾಲದಲ್ಲಿ ಆಯಾ ಪ್ರಕಾಶಕ ವಸ್ತು ಉದಯಿಸುವಂತೆ, ಅಸ್ತಮಿಸುವಂತೆ ನಿಯಮಿಸುತ್ತಿರುವವನು.

**೪೯೦. ಸತ್ತ್ವಸ್ಥಃ – ಜೀವರುಗಳಲ್ಲಿ, ಅವರ ಹೃದಯದಲ್ಲಿ ಇರುವವನು.**

**ವಿವರಣೆ :** ಸತ್ತ್ವ ಶಬ್ದಕ್ಕೆ ಜೀವರುಗಳು ಎಂದರ್ಥ. ಸತ್ತ್ವ ಎಂದರೆ ಪ್ರಕೃತಿಯ ಗುಣ, ಭಗವಂತ ಎಂದೆಲ್ಲ ಅರ್ಥವಿರುವಂತೆ ನಾವು, ನೀವು ಎಲ್ಲ ಜೀವರೂ ಸತ್ತ್ವ. ಅಂತಹ ನಮ್ಮಲ್ಲಿ ದೇವರು ಇದ್ದಾನೆ - ಸತ್ತ್ವಸ್ಥ.

ದೇವರನ್ನು ಅಲ್ಲಿ ಇಲ್ಲಿ ಚಿಂತನೆ ಮಾಡುವ ಮೊದಲು ನಮ್ಮಲ್ಲಿ ದೇವರು ಇದ್ದಾನೆ ; ನಮ್ಮಲ್ಲೂ ನಮ್ಮ ಹೃದಯದಲ್ಲಿ ದೇವರು ಇದ್ದಾನೆ ಎಂದು ಚಿಂತನೆ ಮಾಡೋಣ. ಫೋಟೋ, ಪ್ರತಿಮೆ - ಇತ್ಯಾದಿಗಳ ಮಾಧ್ಯಮದಲ್ಲಿ ನಾವು ದೇವರ ಪೂಜೆಗೆ ತೊಡಗಿದಾಗ ನಮ್ಮ ಹೃದಯದಲ್ಲಿ ಇರುವ ದೇವರನ್ನು ಆ ಫೋಟೋ, ಪ್ರತಿಮೆಗಳಲ್ಲಿ ಆವಾಹನೆ ಮಾಡಬೇಕು. ಒಳಗಿನ ದೇವರನ್ನು ಹೊರಗೆ ತಂದು ಪೂಜಿಸಿದಂತೆ. ಹಾಗಾದರೆ ಮೊದಲು ನಾವು ನಮ್ಮ ಹೃದಯದೊಳಗಿರುವವವನನ್ನಾಗಿ ಚಿಂತಿಸಬೇಕು - 'ಸತ್ತ್ವಸ್ಥಃ'

ಆದ್ದರಿಂದಲೇ **'ಸದಾ ಎನ್ನ ಹೃದಯದಲ್ಲಿ ವಾಸ ಮಾಡೋ ಶ್ರೀಹರೇ....'** ಎಂದು ದಾಸರು ಬೇಡಿಕೊಂಡಿರುವರು. 'ಎನ್ನ' ಎಂದರೆ ದಾಸರದ್ದಷ್ಟೇ ಅಲ್ಲದೆ, ನಮ್ಮೆಲ್ಲರ ಹೃದಯದಲ್ಲಿ ಇರುವವನಾಗಿ ನಮಗೆ ಎಚ್ಚರ ನೀಡು - ಎಂದು ಪ್ರಾರ್ಥನೆಯ ಆಂತರ್ಯ.

ಎಲ್ಲೆಡೆ ದೇವರ ಚಿಂತನೆ ಮಾಡುವ ಮುಂಚೆ ನಮ್ಮ ನಮ್ಮ ಹೃದಯದಲ್ಲಿ ದೇವರ ಚಿಂತನೆ ನಡೆಸಬೇಕು. ಯಾಕೆಂದರೆ ಮುಂದೆ ಒಂದು ದಿನ ಸಂಸಾರದಿಂದ ಬಿಡುಗಡೆ ಹೊಂದುವಾಗ ನಾವು ನಮ್ಮ ಹೃದಯದಲ್ಲಿ ಇರುವ ದೇವರ ದರ್ಶನವನ್ನೇ ಪಡೆದುಕೊಳ್ಳಬೇಕು. ಅದಕ್ಕೆ ಈಗಿಂದಲೇ ಹೃದಯದಲ್ಲೇ ದೇವರನ್ನು ಕಾಣುವ ರೂಢಿಯನ್ನು ಮಾಡುತ್ತಿರಬೇಕು.

ದೇವರನ್ನು ಹೇಗೆ ಧ್ಯಾನ ಮಾಡಬೇಕು ?

ಹೊರಗಿನಿಂದ ಒಂದು ಪ್ರತಿಮೆಯನ್ನೋ, ಚಿತ್ರವನ್ನೋ ಚೆನ್ನಾಗಿ ನೋಡಿ, ಬಳಿಕ ಕಣ್ಣು ಮುಚ್ಚಿ, ಅದೇ ಪ್ರತಿಮೆಯನ್ನೋ ಚಿತ್ರವನ್ನೋ ನಮ್ಮ ನಮ್ಮ ಹೃದಯದಲ್ಲಿ ನೋಡಬೇಕು. ಅಷ್ಟೇ ನಮ್ಮ ನಿಮ್ಮ ಧ್ಯಾನ.

ಯದ್ಯಪಿ ಅದು ಮುಖ್ಯ ಧ್ಯಾನ ಅಲ್ಲದಿದ್ದರೂ ಮನಸ್ಸು ಸ್ವಲ್ಪ ಹೊತ್ತು ಒಂದೇ ಕಡೆ ನಿಂತಿತಲ್ಲ - ಅದೇ ಆ ರೀತಿಯ ಚಿಂತನೆಯ ಲಾಭ. ಮನಸ್ಸು ಹೊರಗೆ ಹೋಗುವುದು ನಿಂತಿತಲ್ಲ ಅದೇ ಲಾಭ. ಇದರಿಂದೇನೂ ದಿಢೀರನೆ ಮೋಕ್ಷ

ದೊರಕಲಾದರು. ಆದರೆ ಮನಸ್ಸಿನ ಹಿಡಿತಕ್ಕೆ ಕಾರಣವಾಗಬಲ್ಲದಷ್ಟೇ. ಹೀಗೆ ಮೊದಲು ಅರ್ಧ ಸೆಕೆಂಡು ಮತ್ತೆ ಒಂದು ಸೆಕೆಂಡು - ಹೀಗೆಯೇ ಸ್ವಲ್ಪ ಸ್ವಲ್ಪ ಹೆಚ್ಚೆಚ್ಚು ಮನಸ್ಸನ್ನು ಹಿಡಿತದಲ್ಲಿಟ್ಟುಕೊಳ್ಳುತ್ತ ಕ್ರಮೇಣ ಧ್ಯಾನ, ಪಾಠ, ಪ್ರವಚನಾದಿಗಳಿಂದ ಸಾಧನೆಯನ್ನು ಮುಂದುವರಿಸಬಹುದಾಗಿದೆ.

ಆದುದರಿಂದ 'ಸತ್ತ್ವಸ್ಥ' ನಾಮ ತಿಳಿಸುವುದು - ನಮ್ಮ ನಮ್ಮ ಹೃದಯದಲ್ಲಿ ದೇವರು ಇರುವನೆಂದು ಚಿಂತನೆ ಮಾಡಬೇಕು. ಭೀಷ್ಮರು ಹಾಗೆ ಚಿಂತನೆ ಮಾಡುತ್ತ ಬಂದಿರುವುದರಿಂದಲೇ ಈಗ ಮರಣಶಯ್ಯೆಯಲ್ಲಿ ಅವರು ಇರುವಾಗ ಕೃಷ್ಣ ಅವರಿಗೆ ದರ್ಶನ ನೀಡಿರುವನು.

**೪೯೧. ಸಿಂಹಃ – ಎಲ್ಲವನ್ನೂ ನಾಶ ಮಾಡುವವನು.**

**ವಿವರಣೆ :** ಹಿನಸ್ತೀತಿ ಸಿಂಹಃ - ಹಿನಸ್ತಿ ಎಂದರೆ ನಾಶ ಮಾಡುವವನು. ಏನನ್ನು ನಾಶ ಮಾಡುವನು ? ಏನನ್ನು ಬೇಕಾದರೂ ನಾಶ ಮಾಡುವನು. ಸೃಷ್ಟಿಕಾಲ ಬಂದಾಗ ಕತ್ತಲೆಯನ್ನು ನಾಶ ಮಾಡುವವನು. ಸ್ಥಿತಿ ಕಾಲದಲ್ಲಿ ನಾವು ಬದುಕಿದ್ದಾಗ ನಮ್ಮಲ್ಲಿರುವ ಕೆಟ್ಟತನವನ್ನು ನಾಶ ಮಾಡುವವನು. ಪ್ರಲಯ ಕಾಲ ಬಂದಾಗ ಎಲ್ಲರನ್ನೂ ನಾಶ ಮಾಡುವವನು - ಎಂಬುದಕ್ಕಾಗಿ ಭಗವಂತನಿಗೆ ನಾಶ ಮಾಡುವವನೆಂಬ ಅರ್ಥದಲ್ಲಿ ಸಿಂಹ ಎಂಬ ಹೆಸರು.

ಕೃಷ್ಣ ಜರಾಸಂಧನ ಸೈನ್ಯ, ಕಾಲಯವನನ ಸೈನ್ಯ - ಹೀಗೆ ಮೊದಲು ಬೇರೆ ಬೇರೆ ಸೇನೆಯನ್ನೆಲ್ಲ ಕಬಳಿಸಿ, ಕೊನೆಗೆ ಮಹಾಭಾರತಯುದ್ಧದಲ್ಲಿ ಹದಿನೆಂಟು ಅಕ್ಷೌಹಿಣೀ ಸೇನೆಯನ್ನು ಕಬಳಿಸಿ ಭೀಷ್ಮನಲ್ಲಿಗೆ ಬಂದು ತೆಪ್ಪಗೆ ಕುಳಿತಿದ್ದಾನೆ. ಆಟ ಆಡಿ ಅಜ್ಜನ ಬಳಿ ತುಂಟ ಮಗು ಬಂದು ಕುಳಿತಂತೆ. ಭೀಷ್ಮರು 'ಸಿಂಹ ಬಂತು ಸಿಂಹ' ಎಂದು ಸ್ತುತಿಸುತ್ತಿದ್ದಾರೆ.

**೪೯೨. ಭೂತಮಹೇಶ್ವರಃ – * ಎಲ್ಲ ಜೀವಿಗಳಿಗೂ ದೊಡ್ಡ ಒಡೆಯ.**
*** ಅನಾದಿಕಾಲದಿಂದಲೂ ದೊಡ್ಡ ಒಡೆಯನಾಗಿರುವವನು.**

**ವಿವರಣೆ :** ಈಶ್ವರ - ಒಡೆಯ ; ಮಹೇಶ್ವರ - ದೊಡ್ಡ ಒಡೆಯ. ಭೂತಗಳಿಗೆ - ಎಲ್ಲ ಜೀವಿಗಳಿಗೆ ದೊಡ್ಡ ಒಡೆಯ - ಭೂತ ಮಹೇಶ್ವರ. ಇದಕ್ಕಿಂತ ಮತ್ತೊಂದು ಅರ್ಥ - ಭೂತದಿಂದ ಅಂದರೆ ಭೂತ ಕಾಲದಿಂದ, ಹಿಂದಿನಿಂದಲೂ ಮಹೇಶ್ವರನಾಗಿರುವವನು ಭೂತಮಹೇಶ್ವರ. ಭಗವಂತನಿಗೆ ಈ ಜಗತ್ತಿನ ಮೇಲೆ ಇವತ್ತು ನಿನ್ನೆಯ ಒಡೆತನ ಅಲ್ಲ ; ಭೂತಕಾಲದಿಂದಲೇ ಒಡೆತನ ಇದೆ. ಇಂದು,

ನಿನ್ನೆ, ನಾಳೆಗಳ ಒಡೆಯನಲ್ಲ. ಬಹಳ ಹಿಂದಿನಿಂದಲೂ ಅವನು ಒಡೆಯ. ಎಷ್ಟು ಹಿಂದಿನಿಂದ ? ಗೊತ್ತಿಲ್ಲ - ಅನಾದಿಕಾಲದಿಂದಲೂ ಈ ಜಗತ್ತಿನ ಒಡೆತನವನ್ನು ಇಟ್ಟುಕೊಂಡವನು ಅವನು.

ನಾವು ನಮ್ಮ ನಮ್ಮ ಮನೆಗಳಲ್ಲಿ ಒಡೆಯರು. ಆದರೆ ಎಷ್ಟರವರೆಗೆ? ಸಾಯುವವರೆಗಷ್ಟೇ. ಅದರ ಮೊದಲೇ ಒಡೆತನ ಹೋಗಲೂಬಹುದು ! ಬ್ರಹ್ಮಾದಿಗಳೂ ಜಗತ್ತಿಗೆ ಒಡೆಯರು. ಆದರೆ ಇವರೆಲ್ಲ ಈಶ್ವರರಷ್ಟೇ. ಮಹೇಶ್ವರ ಭಗವಂತನೊಬ್ಬನೇ. ಅದೂ ಭೂತಕಾಲದಿಂದಲೂ ಮಹೇಶ್ವರನಾಗಿದ್ದು 'ಭೂತ ಮಹೇಶ್ವರ' ಎನಿಸುವವನು ಅವನು ಮಾತ್ರ.

**೪೯೩. ಆದಿದೇವಃ – ನಾವು ಕೊಟ್ಟದ್ದನ್ನು ಸ್ವೀಕರಿಸಿ, ಅದಕ್ಕೆ ಸ್ವಲ್ಪ ಸೇರಿಸಿ ಹಿಂತಿರುಗಿಸುವುದಕ್ಕಾಗಿ ಸರ್ವತ್ರ ಇರುವವನು.**

**ವಿವರಣೆ :** ಆದತ್ತೇ ಇತಿ ಆದಿಃ - ಸ್ವೀಕಾರ ಮಾಡುವವನು ಆದಿ. ಏನನ್ನು ಸ್ವೀಕಾರ ಮಾಡುವನು ? ಏನನ್ನು ಕೊಟ್ಟರೂ ಸ್ವೀಕಾರ ಮಾಡುವನು.

ವಿಷ ಕೊಟ್ಟರೆ ಸ್ವೀಕಾರ ಮಾಡ್ತಾನೋ ?
ವಿಷವನ್ನೂ ಸ್ವೀಕಾರ ಮಾಡ್ತಾನೆ.
ಆದರೆ ಅದನ್ನೇ ನಮಗೆ ತಿರುಗಿ ಕೊಡುವನು.
ಪೂತನೆ ವಿಷ ಕೊಟ್ಟಳು. ಅವಳಿಗೆ ತಿರುಗಿಸಿದ.
ಅದರಂತೆ ದೇವರಿಂದ ನಾವು ಯಾವುದನ್ನು ತಿರುಗಿ ಪಡೆಯಬೇಕೆಂದಿದೆಯೋ ಅದನ್ನೇ ಕೊಡಬೇಕು.

ಅವನಂತೂ ನಾವು ಏನನ್ನು ಕೊಟ್ಟರೂ ಅದನ್ನು ಸ್ವೀಕರಿಸಲಿಕ್ಕೆ ಸಿದ್ಧನಿರುವನು. ಆದುದರಿಂದಲೇ 'ಆದತ್ತೇ ಇತಿ ಆದಿಃ' - ಎಂದು ಅವನ ಹೆಸರು. ನಮ್ಮಿಂದ ತೆಗೆದುಕೊಂಡು ಅದನ್ನು ಏನು ಮಾಡುವನು ? 'ದೇ' - ದದಾತೀತಿ ದೇ - ನಮಗೆ ಅದನ್ನು ತಿರುಗಿ ಕೊಡುವನು. ನಾವು ಅವನಿಗೆ ಕೊಡುವುದೇ ಅವನು ನಮಗೆ ಅದನ್ನು ತಿರುಗಿಕೊಡಬೇಕೆಂದೇ ಹೊರತು ಅವನೇ ಇಟ್ಟುಕೊಳ್ಳಲಿ ಎಂಬ ಉದ್ದೇಶದಿಂದ ಅಲ್ಲ. ಹೇಗೆ ಸ್ವಾಮಿಗಳ ಕೈಗೆ ಯಾವುದಾದರೊಂದು ಬೆಲೆಬಾಳುವ ವಸ್ತುವನ್ನು ಕೊಟ್ಟು 'ನೀವು ಮುಟ್ಟಿ ಅದನ್ನು ನಮಗೆ ಕೊಡಿ' - ಎನ್ನುವೆವೋ ಹಾಗೆಯೇ.

ಹೀಗೆ ಭಗವಂತನು ಭಕ್ತರಿಂದ ಸ್ವೀಕರಿಸಿ, ಅವರಿಗೆ ಕೊಡುವುದಕ್ಕಾಗಿಯೇ ಇರುವವನು - 'ವ' - ವರ್ತತೇ ಇತಿ ವಃ

ದೇವರು ಯಾಕೆ ಇದ್ದಾನೆ ?

ನಾವು ಕೊಟ್ಟದ್ದನ್ನು ತೆಗೆದುಕೊಂಡು, ಅದಕ್ಕೆ ಸ್ವಲ್ಪ ಸೇರಿಸಿ ನಮಗೆ ಹಿಂತಿರುಗಿಸಿಕೊಡುವುದಕ್ಕಾಗಿಯೇ ದೇವರು ಇರುವನು 'ಆದಿದೇ' ವ - ವರ್ತತೇ ಇತಿ ವಃ

ನಾವು ಮಾಡಿದ ಒಳ್ಳೆದ್ದನ್ನು ತೆಗೆದುಕೊಂಡು ಅದಕ್ಕೆ ತನ್ನದ್ದನ್ನು ಸ್ವಲ್ಪ ಸೇರಿಸಿ, 'ದೇ' ಕೊಡುವವನು - 'ಆದಿದೇ'. ಇದಕ್ಕೋಸ್ಕರ 'ವ' ವರ್ತತೇ - ಇರುವವನು.

ಎಲ್ಲಿ ಇರುವನು ? ಎಲ್ಲೆಲ್ಲೂ ಇರುವನು. ಯಾಕೆಂದರೆ ನಾವು ಎಲ್ಲಿ ಬೇಕಾದರೂ ಒಳ್ಳೆಯ ಕೆಲಸ ಮಾಡಿ ಅದನ್ನು 'ಕೃಷ್ಣಾರ್ಪಣ' ಎನ್ನಬಹುದು. ಕೂಡಲೇ ಅದನ್ನು ಸ್ವೀಕರಿಸಲು ಅಲ್ಲೇ ಸಿದ್ಧನಾಗಿರುವನು. ಆದುದರಿಂದ ದಾರಿಯಲ್ಲಿ ಹೋಗುವಾಗ ಒಬ್ಬ ಮುದುಕನನ್ನು ಕೈ ಹಿಡಿದು ರಸ್ತೆ ದಾಟಿಸಿ, ಆ ಕರ್ಮವನ್ನು ಕೃಷ್ಣನಿಗೆ ಅರ್ಪಿಸಬೇಕೆಂದರೆ ದೇವಸ್ಥಾನಕ್ಕೇ ಬರಬೇಕೆಂದಿಲ್ಲ. ಅಲ್ಲೇ 'ಕೃಷ್ಣಾರ್ಪಣಮಸ್ತು' ಅಂದರೂ ಅದನ್ನು ಸ್ವೀಕರಿಸಲು ದೇವರು ತಯಾರು.

ಹೀಗೆ ನಾವು ಮಾಡುವ ಒಳ್ಳೆಯ ಕೆಲಸಗಳನ್ನು ಸ್ವೀಕರಿಸಿ, ಅದಕ್ಕೆ ಸ್ವಲ್ಪ ತನ್ನದ್ದನ್ನು ಸೇರಿಸಿ ನಮಗೆ ಹಿಂತಿರುಗಿಸಲು ಸರ್ವತ್ರ ಇರುವವನೇ 'ಆದಿದೇವ'.

೪೯೪. **ಮಹಾದೇವಃ – * ದೊಡ್ಡ ದೇವ.**

*** ಪ್ರಲಯ ಕಾಲದಲ್ಲಿ ಎಲ್ಲವನ್ನೂ ಕಬಳಿಸುವವನು. ಆದರೆ ಲಕ್ಷ್ಮಿದೇವಿಯು ತಮಸ್ಸು, ನೀರು, ವಟಪತ್ರ ರೂಪದಲ್ಲಿರುವಂತೆ ಉಳಿಸುವವನು.**

**ವಿವರಣೆ :** ದೊಡ್ಡ ದೇವ ಎಂಬ ಒಂದು ಅರ್ಥ ಇದ್ದೇ ಇದೆ. ಇನ್ನೊಂದು ಅರ್ಥ ಹೀಗಿದೆ - ಮಹಾದ + ಈ = ಮಹಾದೇ+ವ. ಮಹಾದ ಎಂದರೆ ಭಾರೀ ತಿನ್ನುವವನು; ಪ್ರಲಯ ಕಾಲದಲ್ಲಿ ಸ್ವಲ್ಪವನ್ನೂ ಬಿಡದೆ ಕಬಳಿಸುವವನು.

'ಎಲ್ಲ ಜಗವ ನುಂಗಿ ದಕ್ಕಿಸಿ ಕೊಂಡವಗೆ
ಸಲ್ಲದು ರೋಗ ರುಜಿನಗಳು'

ಎಂದು ವಾದಿರಾಜ ಸ್ವಾಮಿಗಳು ಸ್ತುತಿಸುವರು. ಪ್ರಲಯದಲ್ಲಿ ಇಡೀ ಜಗತ್ತನ್ನೇ ಕಬಳಿಸುವವನೆಂದು.

ಎಲ್ಲರೂ ಹಂಚಿ ಊಟ ಮಾಡಬೇಕಾದ ನೈವೇದ್ಯವನ್ನು ನಾವು ದೇವರಿಗೆ

ಸಮರ್ಪಿಸಿದಾಗ ಅದೆಲ್ಲವನ್ನೂ ದೇವರು ಕಬಳಿಸುವನು. ಆದುದರಿಂದ ಅವನು 'ಮಹಾದ' - ಮಹಾನ್ - ದೊಡ್ಡ ಅದ - ಭಕ್ಷಕ ; ತಿನ್ನುವವ.

ಈ ಎಂದರೆ ಲಕ್ಷ್ಮೀದೇವಿ. ಅಂತಹ ಲಕ್ಷ್ಮಿಯನ್ನು ಉಳಿಸುವವನು ಈವ. ಪ್ರಳಯದಲ್ಲಿ ಎಲ್ಲರನ್ನು ಕಬಳಿಸಿದರೂ ದೇವರು ತನ್ನ ಪತ್ನಿ ಲಕ್ಷ್ಮಿಯನ್ನು ಕಬಳಿಸುವುದಿಲ್ಲ. ಅವಳು ದುರ್ಗಾರೂಪದಿಂದ ಕತ್ತಲಾಗಿ ಇರುವಳು. ಪ್ರಳಯದ ಜಲವಾಗಿ, ಪ್ರಳಯಕಾಲದಲ್ಲಿಯ ವಟಪತ್ರವಾಗಿ ಇರುವಳು. ಆದುದರಿಂದ 'ಈ' ಲಕ್ಷ್ಮೀದೇವಿಯನ್ನು ವ - ವರ್ತಯತೀತಿ 'ಮಹಾದ'ನಾದರೂ 'ಈವ' ನಾಗಿರುವುದರಿಂದಲೇ ಮಹಾದೇವ ಎನಿಸುವನು.

**೪೯೫. ದೇವೇಶಃ – ದೇವತೆಗಳಿಗೆ ಇಷ್ಟವಾದ ಸುಖವನ್ನು ನೀಡುವವನು.**

**ವಿವರಣೆ :** ದೇವ + ಇ + ಶ - ದೇವೇಶ. ದೇವ ಎಂದರೆ ದೇವತೆಗಳಿಗೆ ಇ ಎಂದರೆ ಇಷ್ಟವಾದ ಶ - ಸುಖವನ್ನು ನೀಡುವವನು.

ಸುಖ ಯಾರಿಗೆ ಬೇಡ ? ಎಲ್ಲರೂ ಸುಖವನ್ನು ಇಷ್ಟ ಪಡುವವರೇ. ನಾವೂ ಸುಖವನ್ನೇ ಇಷ್ಟಪಡುತ್ತೇವಾದರೂ ನಮಗೆ ಸುಖವೇ ಬರುವುದೆಂಬ ನಿಯಮವಿಲ್ಲ. ದೇವತೆಗಳಿಗಾದರೂ ಹಾಗಲ್ಲ. ಅವರು ಇಷ್ಟಪಡುವ ಸುಖವನ್ನೇ ಅವರಿಗೆ ದೇವರು ನೀಡುವನು. ಯಾಕೆಂದರೆ ದೇವತೆಗಳು ಭಗವಂತನ ಸಂತೋಷಕ್ಕಾಗಿ ಎಂತಹ ತ್ಯಾಗಕ್ಕೂ ಸಿದ್ಧರಾಗಿರುವರು. ಆದ್ದರಿಂದ ದೇವತೆಗಳಿಗೆ ಇಷ್ಟವಾದ ಸುಖವನ್ನು ಕೊಡುವವನೆಂದು 'ದೇವೇಶ' ಎನಿಸುವನು.

ಸುಖ ನಮಗೂ ಇಷ್ಟವಾಗಿರುವುದಾದರೂ ದೇವತೆಗಳಷ್ಟು ತ್ಯಾಗ ಮಾಡುವುದಿಲ್ಲವಾದುದರಿಂದ ದೇವರು ನಮಗೆ ಇಷ್ಟವಾದ ಸುಖವನ್ನು ಕೊಟ್ಟೇ ಕೊಡುವನೆಂಬ ನಿಯಮವಿಲ್ಲ.

ಈ ನಾಮವನ್ನು ಯಾವುದಕ್ಕಾಗಿ ನಾವು ಉಪಾಸನೆ ಮಾಡಬೇಕೆಂಬುದು ಸ್ಪಷ್ಟವಾಗಿರುವುದರಿಂದ ಪುನಃ ಬಿಡಿಸಿ ಹೇಳುವ ಆವಶ್ಯಕತೆ ಇಲ್ಲ.

**೪೯೬. ದೇವಭೃದ್ – ದೇವತೆಗಳನ್ನು ಚೆನ್ನಾಗಿ ನೋಡಿಕೊಳ್ಳುವವನು.**

**ವಿವರಣೆ:** ದೇವತೆಗಳನ್ನು ಚೆನ್ನಾಗಿ ಭರಣೆ ಮಾಡುವವನು ; ಧಾರಣೆ ಮಾಡುವವನು; ಅವರನ್ನು ಚೆನ್ನಾಗಿ ನೋಡಿಕೊಳ್ಳುವವನು ದೇವರಾದುದರಿಂದ 'ದೇವಭೃತ್' ಎನಿಸುವನು.

'ದೇವೇಶ' ಎನಿಸುವ ಭಗವಂತನು ದೇವತೆಗಳಿಗೆ ಇಷ್ಟವಾದದ್ದನ್ನು ಕೊಟ್ಟು ಅದನ್ನು ಸಂರಕ್ಷಣೆ ಮಾಡುವುದರಿಂದ 'ದೇವಭೃತ್' ಎನಿಸುವನು. ಯಾರಾದರೂ ಏನನ್ನಾದರೂ ಕೊಟ್ಟರೆ ಮತ್ತೆ ಅದನ್ನು ರಕ್ಷಿಸಿಕೊಳ್ಳಬೇಕಾದವರು ನಾವೇ. ಅದರ ರಕ್ಷಣೆಯ ಹೊಣೆಯನ್ನು ಅವರು ಹೊರುವುದಿಲ್ಲ. ದೇವರಾದರೂ ಹೀಗಲ್ಲ. ದೇವತೆಗಳಿಗೆ ಇಷ್ಟವಾದದ್ದನ್ನು ಕೊಡುವ ಅವನು ಆ ಇಷ್ಟವಾದುದು ದೇವತೆಗಳ ಕೈಜಾರಿ ಹೋಗದಂತೆ ಭರಣೆಯನ್ನೂ, ಧಾರಣೆಯನ್ನೂ ಮಾಡುವನು. ಆದುದರಿಂದಲೇ 'ದೇವೇಶ'ನಾದ ಅವನು 'ದೇವಭೃತ್' ಕೂಡಾ ಆಗಿರುವನು.

**೪೯೭. ಗುರುಃ – ಅಜ್ಞಾನವನ್ನು ಪರಿಹರಿಸುವವನು.**

**ವಿವರಣೆ :** 'ಗಿರತೀತಿ ಗುರುಃ' ನುಂಗಿ ಹಾಕುವವನೇ ಗುರು. ಶಿಷ್ಯ ಹಿಡಿದುಕೊಂಡು ಬಂದದ್ದನ್ನು ಯಾರು ನುಂಗಿ ಹಾಕುವನೋ ಅವನೇ ಗುರು.

ಶಿಷ್ಯ ಏನನ್ನು ಹಿಡಿದುಕೊಂಡು ಬರುವನು ? 'ಅದು ಗೊತ್ತಿಲ್ಲ ; ಇದು ಗೊತ್ತಿಲ್ಲ ; ಅದನ್ನು ಹೇಳಿಕೊಡಿ ; ಇದನ್ನು ಹೇಳಿಕೊಡಿ' ಅಂತೆಲ್ಲ 'ಗೊತ್ತಿಲ್ಲ'ದ ಬಂಡವಾಳವನ್ನು ತಲೆಯಲ್ಲಿ ತುಂಬಿಕೊಂಡು ಬಂದಿರ್ತಾನೆ. ಶಿಷ್ಯ ಏನೇನು ಗೊತ್ತಿಲ್ಲ; ಗೊತ್ತಿಲ್ಲ - ಅನ್ನುತ್ತಿದ್ದನೋ ಅವೆಲ್ಲವನ್ನೂ ಗುರುಗಳು ಅವನಿಗೆ ಗೊತ್ತು ಮಾಡಿದರು. ಗೊತ್ತು ಮಾಡಿ, ಅವನ 'ಗೊತ್ತಿಲ್ಲ'ವನ್ನು ತೆಗೆದೇ ಬಿಟ್ಟರು. ಹೀಗೆ ಶಿಷ್ಯನ ಗೊತ್ತಿಲ್ಲವನ್ನು ತೆಗೆದುಹಾಕುವವರೇ ಗುರುಗಳು. ಆಧ್ಯಾತ್ಮಿಕ ಕ್ಷೇತ್ರದಲ್ಲಿ ಮಾತ್ರ ಇಂತಹ ಗುರು ಇರುವುದು. ಗಿರತಿ ಶಿಷ್ಯನ ಅಜ್ಞಾನವನ್ನು ನುಂಗಿ ಹಾಕಿ ಪರಿಹರಿಸುವ ಸಾಮರ್ಥ್ಯ ಯಾರಲ್ಲಿ ಇದೆಯೋ ಅವನೇ ಗುರು.

ದೇವರಾದರೂ ಬ್ರಹ್ಮಾದಿ ದೇವತೆಗಳಲ್ಲಿರುವ ತನ್ನ ವಿಷಯದ ಅಜ್ಞಾನ (ಜ್ಞಾನಾಭಾವ)ವನ್ನೂ ನುಂಗಿ ಹಾಕಿ, ಜ್ಞಾನದ ಬೆಳಕಿನಿಂದ ತುಂಬಿಸುವವನಾದುದರಿಂದ ಎಲ್ಲರ ಪಾಲಿಗೆ ಗುರು.

ಕೃಷ್ಣ ಅರ್ಜುನ ಉದ್ಧವಾದಿಗಳಿಗಷ್ಟೇ ಗುರು ಆಗಿದ್ದವನಲ್ಲ. ಭೀಷ್ಮರಿಗೂ. ಆಗ ಅವರ ಅಜ್ಞಾನದ ಕತ್ತಲನ್ನು ನುಂಗಿ ಹಾಕಿ ಜ್ಞಾನದ ಬೆಳಕಿನಿಂದ ತುಂಬಿಸಿದ್ದರಿಂದ 'ಗುರು' ಎನಿಸಿದ್ದನು.

ಹೀಗೆ ತಮ್ಮ ಪಾಲಿಗೆ ಗುರುವಾಗಿ ಅನುಗ್ರಹಿಸುತ್ತಿರುವ ಶ್ರೀಕೃಷ್ಣನ ಅನುಗ್ರಹವನ್ನು ಮೆಲುಕು ಹಾಕುತ್ತ ಭೀಷ್ಮರು ಕೃಷ್ಣನನ್ನು 'ಗುರುಃ' - ಎಂದು ಹೊಗಳಿರುವರು.

**ಉತ್ತರೋ ಗೋಪತಿರ್ಗೋಪ್ತಾ ಜ್ಞಾನಗಮ್ಯಃ ಪುರಾತನಃ |**
**ಶರೀರಭೂತಭೃದ್ ಭೋಕ್ತಾ ಕಪೀಂದ್ರೋ ಭೂರಿದಕ್ಷಿಣಃ ||೫೧||**

**೪೯೮. ಉತ್ತರಃ – ಎಲ್ಲರಿಗಿಂತ ಎಷ್ಟು ಎಂದು ತಿಳಿಯಲಾರದಷ್ಟು ಎತ್ತರದವನು.**

ವಿವರಣೆ: ಸಂಸ್ಕೃತದ ಉತ್ತರ ಕನ್ನಡಕ್ಕೆ 'ಎತ್ತರ' ಆಗಿದೆ ಅಷ್ಟೇ. ಉತ್ತರ ಉತ್ತರಕ್ಕೆ ಹೋದಂತೆ ಎತ್ತರ ಎತ್ತರಕ್ಕೆ ಹೋಗುವುದು.

ಆದುದರಿಂದ ನೀನು ಎತ್ತರದವನು ಎಂಬ ಧಾಟಿಯಲ್ಲಿ ಭೀಷ್ಮರು ಕೃಷ್ಣನನ್ನು 'ಉತ್ತರಃ' - ಎಂದು ಸ್ತುತಿಸಿರುವರು.

ಯಾರಿಗಿಂತ ಎತ್ತರ ಎಂದು ಹೇಳಲಿಲ್ಲ.

ಆದುದರಿಂದ 'ಎಲ್ಲರಿಗಿಂತ' ಎಂದಿಟ್ಟುಕೊಳ್ಳುವುದು.

ಎಷ್ಟು ಎತ್ತರ ಎಂದು ಹೇಳಲಿಲ್ಲ.

ಆದುದರಿಂದ 'ಗೊತ್ತಿಲ್ಲ' - ಎಂದಿಟ್ಟುಕೊಳ್ಳುವುದು.

ಎಲ್ಲರಿಗಿಂತ ಎತ್ತರದವನು. ಎಷ್ಟು ಎತ್ತರದವನೆಂದು ಹೇಳಲಿಕ್ಕೆ ಬರದಷ್ಟು ಎತ್ತರದವನು.

ರುದ್ರನಿಗಿಂತ ಭಾರತಿ ಇಷ್ಟು ಎತ್ತರದವಳು ; ಭಾರತಿಗಿಂತ ಮುಖ್ಯಪ್ರಾಣ ಇಷ್ಟು ಎತ್ತರದವನು. ಮುಖ್ಯಪ್ರಾಣನಿಗಿಂತ ಲಕ್ಷ್ಮಿ ಇಷ್ಟೇ ಎತ್ತರದವಳು.

ಲಕ್ಷ್ಮಿಗಿಂತ ನಾರಾಯಣ ಎಷ್ಟು ಎತ್ತರದವನು ?

'ಗೊತ್ತಿಲ್ಲ' ಎನ್ನುವುದೇ ಉತ್ತರ.

ಭೀಷ್ಮರು ಕೃಷ್ಣನಲ್ಲಿ ಹೀಗೆ ನಿವೇದಿಸಿಕೊಳ್ಳುವರು - ನೀನು ಬಹಳ ಎತ್ತರದ ವ್ಯಕ್ತಿ. ಆದರೂ ಒಬ್ಬ ಮಲಗಿದ ಕ್ಷುಲ್ಲಕ ವ್ಯಕ್ತಿಯ ಬಳಿ ಬಂದು ಕೂತಿದ್ದಿಯಲ್ಲಾ? ನನ್ನ ಮಟ್ಟಕ್ಕೆ ಇಳಿದು ಬಂದು ಕೂತಿದ್ದಿಯಲ್ಲಾ ? ಅದೇ ನಿನ್ನ ಎತ್ತರ. ನಮ್ಮ ನಿಮ್ಮ ಮಟ್ಟಕ್ಕೆ ಇಳಿಯುವುದೇ ಎತ್ತರದ ವ್ಯಕ್ತಿಗಳ ಎತ್ತರ. ಹೀಗೆ ದೇವರು ಎತ್ತರದ ವ್ಯಕ್ತಿಯಾಗಿರುವುದರಿಂದಲೇ ನಮಗೇನಾದರೂ ಸಮಸ್ಯೆಗಳು ಬಂದಾಗ ತಾನೇ ನಮ್ಮಲ್ಲಿಗೆ ಇಳಿದು ಬರುವನು. ಹೊರತು ನಮ್ಮನ್ನೇ ತನ್ನಲ್ಲಿಗೆ ಬನ್ನಿ ಎನ್ನುವುದಿಲ್ಲ.

ಕಾಲು ತುರಿಸಿದರೆ ಕೈ ಅಲ್ಲಿಗೆ ಹೋಗಿ ತುರಿಸುವುದೇ ಹೊರತು ಕಾಲನ್ನೇ ಮೇಲೆ ಬರುವಂತೆ ಕೈ ತಿಳಿಸುವುದಿಲ್ಲ. ಅದು ದೊಡ್ಡವರ ಲಕ್ಷಣ. ಕೈಗೆ ಅಭಿಮಾನಿ ದೇವೇಂದ್ರ. ಕಾಲಿಗಾದರೂ ಅಭಿಮಾನಿ ಜಯಂತ. ಅವನಿಗಿಂತ ದೊಡ್ಡವನೆನಿಸಿರುವ

ದೇವೇಂದ್ರ ದೇಹದ ಎಲ್ಲಿ ಏನಾದರೂ ಮೊದಲು ಕೈ ತೊಡಗುವಂತೆ ಮಾಡುವನು.

ಹೀಗೆ ದೊಡ್ಡವರ ಲಕ್ಷಣವನ್ನು ಪಡೆದಿರುವುದರಿಂದಲೇ ದೇವರು 'ಉತ್ತರ' - ಎತ್ತರದ ವ್ಯಕ್ತಿ.

**೪೯೯. ಗೋಪತಿಃ – ಭಗವಂತನ ಜ್ಞಾನವನ್ನು ಸಂರಕ್ಷಿಸುವವರಿಗೆ ಎಲ್ಲವನ್ನೂ ನೀಡುವವನು.**

**ವಿವರಣೆ :** ಗೋ + ಪತಿ ಎಂದೂ ಪದವಿಭಾಗ ಮಾಡಬಹುದು. ಗೋಪ + ತಿ ಎಂದೂ ಪದವಿಭಾಗ ಮಾಡಬಹುದು. ಎರಡನೆಯ ಪದ ವಿಭಾಗವನ್ನೇ ಇಟ್ಟುಕೊಳ್ಳೋಣ.

'ಗೋಪ' - ಎಂದರೆ ಜ್ಞಾನವನ್ನು ತಾವು ಗಳಿಸಿಕೊಂಡು, ಯೋಗ್ಯರಿಗೆ ಅದನ್ನು ವಿತರಣೆ ಮಾಡುವ ಮೂಲಕ ಸಂರಕ್ಷಣೆ ಮಾಡುವವರು. ಜ್ಞಾನವನ್ನು ಉಳಿಸಿಕೊಳ್ಳಲು ಒಳ್ಳೆಯ ಉಪಾಯವೆಂದರೆ ನಾವು ಗಳಿಸಿದ್ದನ್ನು ಇನ್ನೊಬ್ಬರಿಗೆ ಉಪದೇಶಿಸಬೇಕು. ಆಗ ಅದು ಉಳಿಯುವುದು. ನಮ್ಮಲ್ಲಿ ಅಳಿಯುವುದಿಲ್ಲ. ದುಡ್ಡು ಒಬ್ಬನಲ್ಲಿ ಉಳಿಯಬೇಕೆಂದರೆ ಅದನ್ನು ಇನ್ನೊಬ್ಬನಿಗೆ ಕೊಡದೆ ತಾನೇ ಇಟ್ಟುಕೊಳ್ಳಬೇಕು. ಆದರೆ ಜ್ಞಾನ, ವಿದ್ಯೆ, ವೈದಿಕ ವಾಙ್ಮಯ - ಇವೆಲ್ಲ ಇನ್ನೊಬ್ಬರಿಗೆ ಕೊಟ್ಟರಷ್ಟೇ ನಮ್ಮಲ್ಲಿ ಉಳಿಯುವುದು.

ಹೀಗೆ ಜ್ಞಾನವನ್ನು ತಾವು ಸಂಪಾದಿಸಿ, ಯೋಗ್ಯರಿಗೆ ಕೊಡುವ ಮೂಲಕ ತಮ್ಮಲ್ಲಿ ಉಳಿಸಿಕೊಂಡವರು 'ಗೋಪ'ರು. ಜ್ಞಾನವನ್ನು ರಕ್ಷಣೆ ಮಾಡುವವರೆಂದರೆ ಅವರು ತಮ್ಮಲ್ಲಿ ದೇವರನ್ನು ಉಳಿಸಿಕೊಳ್ಳುವವರು ಎಂದೇ ಅರ್ಥ. ಅಂತಹ 'ಗೋಪ'ರಿಗೆ 'ತನೋತಿ' - ಅಂದರೆ ಬೇಕಾದದ್ದನ್ನು ನೀಡುವ ಮೂಲಕ ವಿಸ್ತಾರಗೊಳಿಸುವನು. ಗೋಪಾನ್ ತನೋತಿ - ಎಂದಾದಾಗ 'ಗೋಪತ' - ಎಂದಾಗಬೇಕಿತ್ತು. ಆದರೆ 'ತ' ಎಂಬಲ್ಲಿಯು ಅಕಾರದ ಸ್ಥಾನಕ್ಕೆ, ಇಕಾರವನ್ನು ಪ್ರಯೋಗಿಸಿ, ವಿಶಿಷ್ಟವಾಗಿ ನೀಡುವವನೆಂದು ಸೂಚಿಸಲಾಗಿದೆ.

ಭಗವಂತನ ಜ್ಞಾನವನ್ನು ಸಂರಕ್ಷಿಸುವ ಜ್ಞಾನಿಗಳಿಗೆ, ಸಮಾಜದಲ್ಲಿ ಮನ್ನಣೆ ಮುಂತಾದ ಬೇಕಾದ ಸಂಪತ್ತನ್ನೆಲ್ಲ ನೀಡುವವನು ; ಎಲ್ಲದಕ್ಕಿಂತ ಮುಖ್ಯವಾಗಿ ಮಾನಸಿಕ ಶಾಂತಿಯನ್ನು ನೀಡುವವನು 'ಗೋಪತಿ'.

ನಮಗೆ ಮುಖ್ಯವಾಗಿ ಬೇಕಾದದ್ದೇ ಮಾನಸಿಕ ಶಾಂತಿ ತಾನೇ ? ಬೇರೆ ಎಲ್ಲ ಸಂಪತ್ತು ಇದ್ದರೂ ಮಾನಸಿಕ ಶಾಂತಿ ಇಲ್ಲ - ಎಂದರೆ ಆ ಎಲ್ಲ ಸಂಪತ್ತು

‘ಶ್ರೀ ಜ್ಯೋತಿರಾದಿತ್ಯಾಯ ನಮಃ’ ‘ಶ್ರೀ ಗೋವಿಂದಾಯ ನಮಃ’
‘ಶ್ರೀ ಸವಿತ್ರೇ ನಮಃ’





ಉಡುಪಿ ಶ್ರೀ ಕೃಷ್ಣನಿಗೆ ವಾರದ ಏಳುದಿನಗಳಲ್ಲಿ ತೊಡಿಸಲಾಗುವ ಬೇರೆ ಬೇರೆ ಅಲಂಕಾರದ ವಿವರವನ್ನು ತಿಳಿಸುತ್ತಿರುವ ವಾದಿರಾಜತೀರ್ಥರ ‘ಬಣ್ಣಿಸಲಳವೆ ನಾ ಬಹುವೇಷವುಳ್ಳ ಲಾವಣ್ಯದ ಕಣಿಯಾದ ಉಡುಪಿ ಶ್ರೀಕೃಷ್ಣನ’ ಹಾಡಿನ ಮೊದಲ ಸೊಲ್ಲಿನಲ್ಲಿ ಭಾನುವಾರದಂದು ‘ಭೂಮಿಗೈದುವ ವರ ಸೂರ್ಯನಾರಾಯಣ’ನ ಅಲಂಕಾರವನ್ನು ವರ್ಣಿಸುತ್ತಿದ್ದು, ರಥಸಪ್ತಮಿ ಮುಂತಾದ ದಿನಗಳಂದು ಅಂತಹ ಸೂರ್ಯನಾರಾಯಣನ ಅಲಂಕಾರದಲ್ಲಿ ಮೆರೆಯುತ್ತಿರುವ ಶ್ರೀ ಕೃಷ್ಣನ ಪ್ರತೀಕದಲ್ಲಿ ವಿ.ಸ.ನಾಮದ ಸೂರ್ಯನ ಪ್ರಸ್ತಾವವುಳ್ಳ ‘ಜ್ಯೋತಿರಾದಿತ್ಯಃ’ ‘ಗೋವಿಂದಃ’ ‘ಸವಿತಾ’ - ಮುಂತಾದ ನಾಮಗಳಿಂದ ಅರ್ಥಾನುಸಂಧಾನ ನಡೆಸಬಹುದಾಗಿದೆ.

## ‘ಶ್ರೀ ವ್ಯಾಸಾಯ ನಮಃ ’ ‘ಶ್ರೀ ಅನ್ತಕಾಯ ನಮಃ’
## ‘ಶ್ರೀ ಮಹರ್ಷಯೇ ನಮಃ’



ಶ್ರೀ ವಾದಿರಾಜತೀರ್ಥವರದ ವ್ಯಾಸ



ಶ್ರೀನರಸಿಂಹತೀರ್ಥವರದ ವ್ಯಾಸ



ಶ್ರೀವಿದ್ಯಾಮಾನ್ಯತೀರ್ಥವರದ ವ್ಯಾಸ

ಅದಮಾರು ಮಠದಲ್ಲಿ, ಪಲಿಮಾರು ಮಠದಲ್ಲಿ ಹಾಗೂ ಸೋದೆಮಠದಲ್ಲಿ ಆರಾಧಿಸಲ್ಪಡುತ್ತಿರುವ ಶ್ರೀ ವೇದವ್ಯಾಸರ ಪ್ರತೀಕಗಳಲ್ಲಿ ವಿ.ಸ.ನಾಮದ ವಾಙ್ಮಯ ಕೊಡುಗೆಯ ಶ್ರೀ ವೇದವ್ಯಾಸರ ಪ್ರಸ್ತಾವವುಳ್ಳ ‘ವ್ಯಾಸಃ’ ‘ಅನ್ತಕಃ’ ‘ಮಹರ್ಷಿ’. - ಮುಂತಾದ ನಾಮಗಳಿಂದ ಅರ್ಥಾನುಸಂಧಾನ ನಡೆಸಬಹುದಾಗಿದೆ.

ಉಪಯೋಗಕ್ಕೇ ಬರುವುದಿಲ್ಲ.

ಹೇಗಿದ್ದೀರಿ ? ಎಂದರೆ 'ಹೂಂ; ಇದ್ದೇನೆ' ಎಂಬ ಉತ್ತರವೇ ಬರುವುದು ಹೊರತು 'ಚೆನ್ನಾಗಿ ಇದ್ದೇನೆ' - ಎಂಬ ಉತ್ತರ ಬರುವುದೇ ಇಲ್ಲ. ಇಂತಹ ಉತ್ತರ ಬರಬೇಕೆಂದರೆ ಮಾನಸಿಕ ಶಾಂತಿ ಬೇಕು. ಇದು 'ಇಟ್ಟಾಂಗೆ ಇರುವೆನೋ ಹರಿಯೇ....' - ಎಂಬ ನಿಲುವಿನ ಜ್ಞಾನಿಗಳಿಗಷ್ಟೇ ದೊರಕಬಲ್ಲದು. ಭಗವಂತನೇ ಅವರಿಗೆ ಅಂತಹ ಸಂಪತ್ತನ್ನು ನೀಡುವನು. ಇದನ್ನೇ 'ಗೋಪತಿ' - ಎಂಬ ನಾಮ ಸಾರುತ್ತಿದೆ.

**೫೦೦. ಗೋಪ್ತಾ – ತನ್ನನ್ನು ಬಚ್ಚಿಟ್ಟುಕೊಂಡು ಉಳಿದವರನ್ನು ರಕ್ಷಿಸುವವನು.**

**ವಿವರಣೆ :** ಗೋಪ್ತಾ ಶಬ್ದಕ್ಕೆ ಮುಚ್ಚಿಡುವವನು ಎಂಬ ಅರ್ಥವೂ ಇದೆ. ರಕ್ಷಣೆ ಮಾಡುವವನು ಎಂಬ ಅರ್ಥವೂ ಇದೆ. 'ಗೋಪತಿ' - ಎಂಬ ನಾಮ ಸಾರುತ್ತಿರುವಂತೆ ಭಗವಂತನು ಜ್ಞಾನಿಗಳಿಗೆ ಬೇಕಾದದ್ದನ್ನು ನೀಡಿ ರಕ್ಷಿಸುತ್ತಿರುತ್ತಾನೆ. ಆದರೂ ತಾನು ರಕ್ಷಿಸಿದವನೆಂದು ತನ್ನನ್ನು ರಕ್ಷಿಸಿಕೊಳ್ಳುವುದಿಲ್ಲ. ರಕ್ಷಣೆಯನ್ನೇ ಮಾಡದೆ ತಾವೇ ರಕ್ಷಿಸಿದ್ದೆಂದು ಹೇಳುವ ಕ್ಷುಲ್ಲಕ ವ್ಯಕ್ತಿಗಳೆಲ್ಲಿ ರಕ್ಷಣೆ ಮಾಡಿದರೂ ತಾನು ರಕ್ಷಣೆ ಮಾಡಿದವನೆಂದು ತನ್ನನ್ನು ತೋರಿಸಿಕೊಳ್ಳದ ಭಗವಂತನೆಲ್ಲಿ ! ನಮಗೆ ಹಣ್ಣು ಹಂಪಲುಗಳನ್ನು, ಧವಸಧಾನ್ಯಗಳನ್ನು.... ಹೀಗೆ ಎಲ್ಲವನ್ನೂ ಕೊಡುತ್ತಿರುವ ಭಗವಂತನು ಎಲ್ಲೂ ತಾನು ಕೊಟ್ಟವನೆಂದು ಹೇಳಿಕೊಂಡಿದ್ದಿಲ್ಲ. ಯಾವ ಹಣ್ಣಿನಲ್ಲೂ 'by god' - ದೇವರಿಂದ ಸಂದ ದೇಣಿಗೆ - ಎಂಬ ಲೇಬಲ್ ಹಚ್ಚಿಲ್ಲ.

ಹೀಗೆ ಎಲ್ಲರಿಂದಲೂ ತನ್ನನ್ನು ಬಚ್ಚಿಟ್ಟುಕೊಂಡು ಎಲ್ಲರನ್ನೂ ರಕ್ಷಿಸುತ್ತಿರುವುದರಿಂದಲೇ ಭಗವಂತನನ್ನು 'ಗೋಪ್ತಾ' - ಎಂದು ಕರೆಯಲಾಗುವುದು. ದುರ್ಯೋಧನಾದಿಗಳಿಂದ ತನ್ನನ್ನು ಬಚ್ಚಿಟ್ಟುಕೊಂಡು ಭೀಷ್ಮರನ್ನು, ದ್ರೋಣರನ್ನು ಕೃಷ್ಣ ರಕ್ಷಣೆ ಮಾಡಿದ್ದ. ಇದನ್ನೂ ಭೀಷ್ಮರು ಅನುಸಂಧಾನಕ್ಕೆ ತಂದುಕೊಳ್ಳುತ್ತಿರುವರು.

**೫೦೧. ಜ್ಞಾನಗಮ್ಯಃ – ಸರ್ವಜ್ಞನಾದ ಮುಖ್ಯಪ್ರಾಣನ ಮೂಲಕ ತಿಳಿದುಕೊಳ್ಳಲು ಯೋಗ್ಯನಾಗಿರುವವನು.**

**ವಿವರಣೆ :** ಉಡುಪಿ ಕೃಷ್ಣ ಮಠದಲ್ಲಿ ಶ್ರೀಕೃಷ್ಣನ ಎದುರು ಮುಖ್ಯಪ್ರಾಣನನ್ನು ಪ್ರತಿಷ್ಠೆ ಮಾಡಿದ್ದೇ ಶ್ರೀಕೃಷ್ಣ 'ಜ್ಞಾನಗಮ್ಯ' ಆಗಿರುವುದರಿಂದ.

ಏನು 'ಜ್ಞಾನಗಮ್ಯ' ಎಂದರೆ ?

ಜ್ಞ + ಅನ + ಗಮ್ಯ - ಮೂರು ಶಬ್ದಗಳನ್ನು ಸೇರಿಸಿ ರೂಪುಗೊಂಡ ಶಬ್ದ ಜ್ಞಾನಗಮ್ಯ. ಅನ ಎಂದರೆ ಪ್ರಾಣ. ಪ್ರ + ಅನವೇ ಪ್ರಾಣ ಎಂದಾದದ್ದು. ಅನ ಎಂಬುದೇ ವಾಯುದೇವನ ಹೆಸರು. ನಾವು 'ಅನ್ನ'ಕ್ಕೆ ಹಾರಬಾರದೆಂದು ಪ್ರ ಉಪಸರ್ಗವನ್ನು ಸೇರಿಸಿ ಪ್ರಾಣ ಎನ್ನುವೆವಷ್ಟೇ.

ಮುಖ್ಯಪ್ರಾಣ ಎಂತಹವನು ? 'ಜ್ಞ ' - ಚೆನ್ನಾಗಿ ತಿಳಿದವನು. ಅಂತಹ ಚೆನ್ನಾಗಿ ತಿಳಿದ ಮುಖ್ಯಪ್ರಾಣನಿಂದ - 'ಜ್ಞಾನ'ನಿಂದ 'ಗಮ್ಯ' - ತಿಳಿಯಲು ಯೋಗ್ಯನಾಗಿರುವುದರಿಂದಲೇ ದೇವರು ಜ್ಞಾನಗಮ್ಯ.

ಮಕ್ಕಳನ್ನು ಯಾವ ಶಾಲೆಗೆ ಸೇರಿಸುವೆವು ?

ಯಾವ ಶಾಲೆಯ ಅಧ್ಯಾಪಕರು ಚೆನ್ನಾಗಿ ತಿಳಿದವರಾಗಿರುವರೋ ಅಂತಹವರು ಮಕ್ಕಳಿಗೆ ಸರಿಯಾದ ತಿಳುವಳಿಕೆಯನ್ನು ನೀಡಬಲ್ಲರೆಂದು ಅಂತಹ ಶಾಲೆಗೆಯೇ ಮಕ್ಕಳನನ್ನು ಸೇರಿಸುವೆವು.

ಕೆಲವು ವರ್ಷಗಳ ಹಿಂದೆ ನಮ್ಮ ಮಕ್ಕಳು ಚೆನ್ನಾಗಿ ವೇದಾಂತ ಕಲಿಯಬೇಕು. ಯಾರಲ್ಲಿ ಕಲಿಯಬಹುದೆಂದು ಪರಿಶೀಲಿಸಿ, ವಿದ್ಯಾಮಾನ್ಯ ತೀರ್ಥರು ತಿಳಿಯಾದ ತಿಳುವಳಿಕೆ ಉಳ್ಳವರು ; ಅಂತಹವರಿಂದ ನಮ್ಮ ಮಕ್ಕಳು ಚೆನ್ನಾಗಿ ವೇದಾಂತವನ್ನು ತಿಳಿಯಬಲ್ಲರೆಂದು ವಿದ್ಯಾಮಾನ್ಯ ತೀರ್ಥರಲ್ಲಿಗೆ ಮಕ್ಕಳನ್ನು ಕಳುಹಿಸುತ್ತಿದ್ದರು.

ಅಂತೆ ದೇವರನ್ನು ಸರಿಯಾಗಿ ಬಲ್ಲ 'ಜ್ಞ' ಎನಿಸುವ 'ಅನ' - ಮುಖ್ಯಪ್ರಾಣನು ದೇವರ ಬಗ್ಗೆ ಸರಿಯಾದ ತಿಳುವಳಿಕೆ ನೀಡಲು ಅರ್ಹನಾಗಿರುವವನು. ಆದುದರಿಂದ ಭಗವಂತನು ಜ್ಞಾನ - ಬಲ್ಲವನಾದ ಮುಖ್ಯಪ್ರಾಣನಿಂದ ಗಮ್ಯ - ತಿಳಿಯಲು ಯೋಗ್ಯನಾಗಿರುವವನು. ಅಂದರೆ ಮುಖ್ಯಪ್ರಾಣನ ಮೂಲಕ ಉಳಿದವರು ಭಗವಂತನ ತಿಳುವಳಿಕೆಯುನ್ನು ಪಡೆದುಕೊಳ್ಳಬೇಕು. ಅದಕ್ಕಾಗಿಯೇ ವಾದಿರಾಜ ಸ್ವಾಮಿಗಳು ಕೃಷ್ಣ ಮಠದಲ್ಲಿ ಮುಖ್ಯಪ್ರಾಣನನ್ನು ಪ್ರತಿಷ್ಠಾಪಿಸಿದ್ದು. ದಾಸರು 'ಕಂಡೆನಾ ಕೃಷ್ಣನಾ.....'- ಎಂಬ ಹಾಡಿನಲ್ಲಿ, ತಾವು ಕೃಷ್ಣ ಮಠದಲ್ಲಿ ಮುಖ್ಯಪ್ರಾಣನನ್ನು ಕಂಡ ಮೇಲೆ ಕೃಷ್ಣನ ವೈಭವವನ್ನು ಅನುಭವಿಸಿರುವಂತೆ ಹಾಡಿರುವರು.

ಕಂಡೆನಾ ಕೃಷ್ಣನ - ಎಂದು ಮೊದಲು ಉಲ್ಲೇಖಿಸಿದ್ದು ಕನಕನ ಕಿಂಡಿಯಲ್ಲಿ ಪಡೆದುಕೊಂಡ ಕೃಷ್ಣನ ದರ್ಶನವನ್ನು ಬಳಿಕ ಚಂದ್ರಮೌಳೀಶ್ವರನ ದರ್ಶನ. ಆಮೇಲೆ ಅನಂತಾಸನನ ದರ್ಶನ. ಬಳಿಕ ಮಧ್ವ ಸರೋವರದಲ್ಲಿ ಪಾದ ಪ್ರಕ್ಷಾಲನ. ಅದಕ್ಕೆ

ಅವಕಾಶ ಇಲ್ಲದಿದ್ದರೆ, ಮಧ್ವ ಸರೋವರದ ದರ್ಶನದಿಂದಲೇ ಪಾವಿತ್ರ್ಯವನ್ನು ಗಳಿಸಿಕೊಂಡು ಕೃಷ್ಣಮಠಕ್ಕೆ ಪ್ರವೇಶ. ಅಲ್ಲಿ ಮೊದಲು ಗರುಡನ ದರ್ಶನ. ಬಳಿಕ ಮುಖ್ಯಪ್ರಾಣನ ದರ್ಶನ. ಆಮೇಲೆ ನವಗ್ರಹ ಕಿಂಡಿಯಲ್ಲಿ ಕೃಷ್ಣನ ದರ್ಶನ ಪಡೆದೆವೆಂದರೆ ಆಗ 'ಜ್ಞಾನ'ನ ಅಂದರೆ ಕೃಷ್ಣನನ್ನು ಬಲ್ಲ ಮುಖ್ಯಪ್ರಾಣನ ಮೂಲಕ ಶ್ರೀಕೃಷ್ಣನ ಸರಿಯಾದ ತಿಳುವಳಿಕೆ ಉಂಟಾಗುವುದು.

ಹೀಗೆ ಮುಖ್ಯಪ್ರಾಣ ಭಗವಂತನನ್ನು ಯಥಾರ್ಥವಾಗಿ ಬಲ್ಲವ-ನಾಗಿರುವುದರಿಂದ ಅವನ ಮೂಲಕ ಭಗವಂತನನ್ನು ಸರಿಯಾಗಿ ತಿಳಿದುಕೊಳ್ಳಲು ಸಾಧ್ಯ ಎಂಬ ವಿಚಾರದ ಹಿನ್ನೆಲೆಯಲ್ಲಿ 'ಜ್ಞಾನಗಮ್ಯಃ'- ಎಂಬ ನಾಮ ಹೊರಟಿದೆ.

ಸರ್ವಜ್ಞನಾದ ಮುಖ್ಯಪ್ರಾಣನ ಮೂಲಕ, ಅಂತಹ ಮುಖ್ಯಪ್ರಾಣಾಂತರ್ಗತನಾಗಿ ತಿಳಿಯಲು ಯೋಗ್ಯನೆನಿಸಿರುವವನು 'ಜ್ಞಾನಗಮ್ಯ'.

**೫೦೨. ಪುರಾತನಃ – ಶರೀರದಲ್ಲಿ ಚೆನ್ನಾಗಿ ಇರುವವನು.**

ವಿವರಣೆ: 'ಜ್ಞಾನಗಮ್ಯ' ನಾಮದ ಮೂಲಕ ಮುಖ್ಯಪ್ರಾಣ ದ್ವಾರಾ ಭಗವಂತನನ್ನು ತಿಳಿಯಬೇಕು - ಎಂದು ಸ್ತುತಿಸಿದಾಗ, ಭಗವಂತನನ್ನು ಎಲ್ಲಿ ತಿಳಿಯಬೇಕು ? ಎಂದರೆ ಹೊರಗೆ ತಿಳಿದರೆ ಸಾಲದು ; ಒಳಗೂ ಅವನನ್ನು ತಿಳಿಯಬೇಕು ಎಂದು ಸ್ತುತಿಸಲಾಗುವುದು - 'ಪುರಾತನಃ' ಪುರ ಎಂದರೆ ಶರೀರ. ಆತನ ಎಂದರೆ ಇರುವಿಕೆ. ಆತನ - ಇರುವಿಕೆ ಪುರದಲ್ಲಿ ಎಂಬುದನ್ನು ಪುರಾತನ ನಾಮ ತಿಳಿಸುವುದು. ಕೃಷ್ಣಮಠದಲ್ಲಿ ನವಗ್ರಹ ಕಿಂಡಿಯ ಮೂಲಕ ಕೃಷ್ಣನನ್ನು ಕಾಣಬೇಕಾದಂತೆ 'ನವದ್ವಾರಮಿದಂ ವೇಶ್ಮ.....'- ಎಂದಿರುವಂತೆ ಒಂಭತ್ತು ದ್ವಾರಗಳುಳ್ಳ ಈ ಪಟ್ಟಣದಲ್ಲೂ ದೇವರನ್ನು ಕಾಣಬೇಕು.

ಪುರಾತನ ನಾಮ ಇದನ್ನೇ ತಿಳಿಸುತ್ತಿದೆ. ಪುರ ಎಂದರೆ ಶರೀರ. ಅದರಲ್ಲಿ ಆ - ಚೆನ್ನಾಗಿ ತನೋತಿ - ಇರುವವನು.

ದೇವರು ಅಲ್ಲಿದ್ದಾನೆ ; ಇಲ್ಲಿದ್ದಾನೆ ; ಮತ್ತೊಂದು ಕಡೆ ಇದ್ದಾನೆ ; ಇನ್ನೊಂದು ಕಡೆ ಇದ್ದಾನೆ....... ಇದೆಲ್ಲ ಆಮೇಲೆ. ಮೊದಲು ನಮ್ಮಲ್ಲಿ ದೇವರು ಇದ್ದಾನೆಂದು ತಿಳಿಯೋಣ. ಆ ಮೇಲೆ ಹೊರಗೆ ಎಲ್ಲಿದ್ದಾನೆಂದು ಹುಡುಕಾಡಲು ತೊಡಗೋಣ. ಯದ್ಯಪಿ ನಮ್ಮ ಇಂದ್ರಿಯಗಳು ಹೊರ ಪ್ರಪಂಚದಲ್ಲಿಯೇ ಸಂಚರಿಸುತ್ತಿರುವವು. ಅವುಗಳನ್ನು ಅಂತರ್ಮುಖಗಳನ್ನಾಗಿಸಿ ಒಳಗಿರುವ ದೇವರನ್ನು ಕಾಣೋಣ.

ಭೀಷ್ಮರೂ ತನ್ನೆದುರು ಕೂತ ಕೃಷ್ಣನನ್ನು **'ತಮಿಮಮಹಮಜಂ ಶರೀರಭಾಜಾಂ ಹೃದಿಹೃದಿ ವಿಷ್ಠಿತಮಾತ್ಮಕಲ್ಪಿತಾನಾಮ್ .......'** - ಎಂದು ಭೀಷ್ಮಸ್ತವ ರಾಜದಲ್ಲಿ ಉಲ್ಲೇಖಿಸಿರುವಂತೆ ಎಲ್ಲರ ಹೃದಯದೊಳಗೆ ಹಾಗೂ ತಮ್ಮ ಹೃದಯದೊಳಗೂ ಇರುವವನನ್ನಾಗಿ ಪುರಾತನ ನಾಮದಿಂದ ಅನುಸಂಧಾನ ನಡೆಸುತ್ತಿದ್ದಾರೆ.

**೫೦೩. ಶರೀರೀ – ಉತ್ತಮವಾದ ಶರೀರವನ್ನು ಯಾವಾಗಲೂ ಹೊಂದಿರುವವನು.**

ವಿವರಣೆ : ಎದುರಿಗೆ ಕುಳಿತ ಕೃಷ್ಣನನ್ನು ಭೀಷ್ಮರು 'ಶರೀರೀ' - ಶರೀರವುಳ್ಳವನೇ ಎಂದು ಸ್ತುತಿಸುತ್ತಿದ್ದಾರೆ. ಶರೀರವುಳ್ಳವನೆಂಬುದೂ ಒಂದು ಹೊಗಳಿಕೆ ಆಗುವುದೇ? ವೇದಿಕೆಯಲ್ಲಿರುವವರ ಅಭಿನಂದನ ಭಾಷಣ ಮಾಡುತ್ತ 'ಅಂಗಿ ಹಾಕಿಕೊಂಡವರೇ' - ಎಂದು ಹೊಗಳಿದರೆ ಹೇಗೋ ಹಾಗೆ.

ಭೀಷ್ಮರ ಆಶಯ ಹೀಗೆ. ಮುಂದೆ ಒಬ್ಬ ಆಚಾರ್ಯರು ಬಂದು ದೇವರಿಗೆ ಆಕಾರವೇ ಇಲ್ಲ ; ಶರೀರವೇ ಇಲ್ಲ - ಎನ್ನಲಿದ್ದಾರೆ. ಆದರೆ ಅದು ಅಸಂಗತ. ವೈದಿಕ ವಾಙ್ಮಯದ ಪುಟಪುಟದಲ್ಲಿ ದೇವರ ಸೌಂದರ್ಯದ, ದಿವ್ಯ ಬಣ್ಣದ ವರ್ಣನೆ ಬಂದಿದೆ. ಶರೀರವೇ ಇಲ್ಲದಿದ್ದರೆ ಸೌಂದರ್ಯವಾದರೂ ಹೇಗೆ? ಬಣ್ಣವಾದರೂ ಯಾವುದಕ್ಕೆ ? ಅಡುಗೆ ಚೆನ್ನಗಿದೆ ; ಆದರೆ ಉಪ್ಪು ಮಾತ್ರ ಹಾಕಿಲ್ಲ - ಎಂದರೆ ಹೇಗೋ ಹಾಗೆ ಸೌಂದರ್ಯವಿದೆ ಆದರೆ ಶರೀರವೇ ಇಲ್ಲ ಎಂದಂತಾಗುವುದು. ಆಕಾರವೇ ಇಲ್ಲದ ಆಕಾಶ ಬಹಳ ಸುಂದರವಾಗಿದೆ ಎಂದು ಯಾರಾದರೂ ಹೊಗಳುವುದು ಉಂಟೇ ?

ಆದ್ದರಿಂದ ಮುಂದೆ ಪ್ರಸ್ತಾಪಿಸಲ್ಪಡಲಿರುವ ದೇವರಿಗೆ ಶರೀರವೇ ಇಲ್ಲ - ಎಂಬ ಈ ವಾದವನ್ನು ದೂರ ಮಾಡುವುದಕ್ಕಾಗಿ ಮೊದಲೇ ಭೀಷ್ಮರು ಕೃಷ್ಣನನ್ನು ಸ್ತುತಿಸುವರು - 'ಶರೀರೀ' ಉತ್ತಮವಾದ ಶರೀರವನ್ನು ಯಾವಾಗಲೂ ಧರಿಸಿರುವವನು.

ಧನೀ ಎಂದರೆ ಅಧಿಕ ಹಣವನ್ನು ಯಾವಾಗಲೂ ಹೊಂದಿರುವವನು - ಎಂಬ ಅರ್ಥ ಹೇಗೋ ಹಾಗೆಯೇ ಶರೀರೀ ಎಂಬ ನಾಮದ ಅರ್ಥವೂ.

ಕೃಷ್ಣನ ಶರೀರ 'ಪ್ರೊಫೆಷನೇಟ್‌ಲೀ....' ಪ್ರಮಾಣಕ್ಕನುಗುಣವಾಗಿ ಅಂದರೆ ಉದ್ದಕ್ಕೆ ಅನುಗುಣವಾದ ಅಗಲ ; ದೇಹದ ಉದ್ದಗಲಗಳಿಗನುಗುಣವಾಗಿ ಕೈ,

ಕಾಲು ಇತ್ಯಾದಿ ಅಂಗಾಂಗಗಳು - ಇವನ್ನು ಹೊಂದಿದ್ದು ಅತ್ಯಂತ ಸುಂದರವಾಗಿದೆ. ಹೀಗೆ ಅತ್ಯಂತ ಸುಂದರವಾದ ಶರೀರವನ್ನು ಹೊಂದಿರುವುದರಿಂದಲೂ ಭಗವಂತ 'ಶರೀರೀ'.

ದೇವರನ್ನು 'ಶರೀರೀ' - ಎಂದು ಉಪಾಸನೆ ಮಾಡಿದಲ್ಲಿ ನಾವೂ ದೇಹದ ಸೌಂದರ್ಯವನ್ನು ಹೊಂದಬಹುದಾಗಿದೆ. ಬರೀ ದೇಹದ ಸೌಂದರ್ಯದಿಂದ ಏನೂ ಉಪಯೋಗವಿಲ್ಲವಾದರೂ ಆಂತರಿಕ ಸೌಂದರ್ಯಕ್ಕೆ ಪೋಷಕವಾಗಿ ಬಾಹ್ಯ ಸೌಂದರ್ಯವನ್ನು ಹೊಂದಲು ಯತ್ನಿಸೋಣ.

**೫೦೪. ಭೂತಕೃತ್ – ಲೌಕಿಕವಾದ ಸರ್ವಸಂಪತ್ತನ್ನೂ ಉಂಟುಮಾಡುವವನು.**

**ವಿವರಣೆ:** ಭೂತ ಅಂದರೆ ಭೌತಿಕ ಸಂಪತ್ತು. ಭೂತಿ ಎಂದರೆ ಲಕ್ಷ್ಮೀದೇವಿ. ಅಂತಹ ಭೂತಿ ಅಭಿಮಾನಿಯಾಗಿ ಉಳ್ಳ ಬಾಹ್ಯ ಸಂಪತ್ತು ಭೂತ. ಭೂತ ಎನಿಸುವ ಬಾಹ್ಯಸಂಪತ್ತನ್ನು ಉಂಟುಮಾಡುವವನು ಭಗವಂತನಾದುದರಿಂದ ಅವನು 'ಭೂತಕೃತ್'.

ಸಂಪತ್ತು ಎಂದರೆ ಹಣ, ಒಡವೆ, ಆಸ್ತಿ ಇಷ್ಟೇ ಅಲ್ಲ ; ಒಳ್ಳೆಯ ಶರೀರ, ಒಳ್ಳೆಯ ಇಂದ್ರಿಯಗಳು, ಒಳ್ಳೆಯ ಅಂಗಾಗಂಗಳು - ಇವೆಲ್ಲವುಗಳೂ ಸಂಪತ್ತು. ಒಳ್ಳೆಯ ಜ್ಞಾನ, ಒಳ್ಳೆಯ ಭಕ್ತಿ, ವೈರಾಗ್ಯಗಳೂ ಆರೋಗ್ಯ ಇವೂ ಸಂಪತ್ತುಗಳೇ. ಭೀಷ್ಮರಿಗೆ ದೀರ್ಘ ಆಯುಷ್ಯ, ಅಖಂಡ ಬ್ರಹ್ಮಚರ್ಯ ಮುಂತಾದ ಸಂಪತ್ತುಗಳನ್ನೂ ನೀಡಿರುವ ಭಗವಂತನು ಕೊನೆಯ ಕಾಲದಲ್ಲಿ ತನ್ನ ದರ್ಶನ ರೂಪವಾದ ಮಹಾ ಸಂಪತ್ತನ್ನೂ ಅನುಗ್ರಹಿಸಿರುವನು. ಇವನ್ನೆಲ್ಲ ಮೆಲುಕು ಹಾಕುತ್ತ ಭೀಷ್ಮರು ಸ್ತುತಿಸುವರು 'ಭೂತಕೃತ್'

**೫೦೫. ಭೋಕ್ತಾ – ಎಲ್ಲವನ್ನೂ ಕಬಳಿಸುವ ಮೂಲಕ ಕಸಿದುಕೊಳ್ಳುವವನು.**

**ವಿವರಣೆ:** ದೇವರು 'ಭೂತಕೃತ್' ಎನಿಸಿ ಒಳ್ಳೆಯ ಶರೀರ, ಉತ್ತಮ ಇಂದ್ರಿಯಗಳು, ಶ್ರೇಷ್ಠ ಅಂಗಾಂಗಗಳು, ಹಣ, ಆಭರಣ, ಆಸ್ತಿ - ಹೀಗೆ ಎಲ್ಲ ಭೌತಿಕ ಸಂಪತ್ತನ್ನು ಕೊಟ್ಟು ಕೊಟ್ಟು ಕೊನೆಗೊಂದು ದಿನ ಅವೆಲ್ಲವನ್ನೂ ಭೋಕ್ತಾ ಕಬಳಿಸುವನು. ಅವನನ್ನು ದಿವಾಳಿ ಎಬ್ಬಿಸಿ ಕೊಟ್ಟ ದೇವರೇ ಅವನಿಂದ ಪೂರಾ ಕಸಿದುಕೊಳ್ಳುವನು.

ಆದ್ದರಿಂದ ದೇವರು ಕೊಡುವಾಗ, ಅದನ್ನು ತೆಗೆದುಕೊಳ್ಳಲು ಅವನೆದುರು ಕೈವೊಡ್ಡುವಾಗ, ಯಾವಾಗ ಕಸಿದುಕೊಳ್ಳಲು ತೊಡಗುವನೋ ! - ಎಂಬ ಎಚ್ಚರಿಕೆಯಿಂದಲೇ ಇರಬೇಕು. ಅವನು ಕೊಟ್ಟದ್ದನ್ನು ತೆಗೆದುಕೊಳ್ಳುವಾಗ ಅವನು

ಯಾವ ಕ್ಷಣದಲ್ಲಿ ಬೇಕಾದರೂ ಕಸಿದುಕೊಂಡಾನು ! - ಎಂಬ ಎಚ್ಚರಿಕೆಯಿಂದಲೇ ಅವನೆದುರು ಕೈಯೊಡ್ಡೋಣ. ಆಗ ಸಂಪತ್ತನ್ನು ಕಳೆದುಕೊಳ್ಳುವ ಸ್ಥಿತಿ ಒದಗಿದಲ್ಲಿ ನಿರಾಸೆಯಾಗುವ ಪ್ರಸಂಗ ಇಲ್ಲ.

ಭೀಷ್ಮರಿಗೆ 'ಭೂತಕೃತ್' 'ಭೋಕ್ತಾ' - ನಾಮಗಳಿಂದ ಸ್ತುತಿಸುವಾಗ ದುರ್ಯೋಧನನ ನೆನಪು ಬಾರದಿರಲಿಕ್ಕಿಲ್ಲ. ಭಗವಂತ ಮೊದಮೊದಲು ದುರ್ಯೋಧನನಿಗೆ ಎಲ್ಲೆಡೆ ಜಯವನ್ನೊದಗಿಸಿ, ದ್ಯೂತದ ಮೂಲಕ ಪಾಂಡವರ ಜಯವನ್ನೂ ಒದಗಿಸಿ, ಅವನ ಪಾಲಿಗೆ 'ಭೂತಕೃತ್' ಆದ. ಭೌತಿಕ ಸಂಪತ್ತನ್ನು ಅವನಿಗೆ ಕೊಟ್ಟ. ಆದರೆ ಮತ್ತೆ ಮಹಾಭಾರತ ಯುದ್ಧದ ಮೂಲಕ ದುರ್ಯೋಧನನ ಪಾಲಿಗೆ 'ಭೋಕ್ತಾ' ಎಲ್ಲ ಸಂಪತ್ತನ್ನೂ ಕಬಳಿಸಿದವನು ಆಗುವನು.

**೫೦೬. ಕಪೀಂದ್ರಃ – ಸುಖವನ್ನು ಅನುಭವಿಸುತ್ತ ಇರುವ ಮುಕ್ತಾತ್ಮರಿಗೂ ಒಡೆಯನಾಗಿರುವವನು.**

**ವಿವರಣೆ :** ಕಪೀಂದ್ರ ಶಬ್ದಕ್ಕೆ ಸಾಮಾನ್ಯವಾದ ಅರ್ಥ ಕಪಿ ಎಂದರೆ ಹನೂಮಂತ. ಅವನನ್ನು ಸೈನ್ಯದ ಒಡೆಯನನ್ನಾಗಿ ಮಾಡಿದ ಭಗವಂತ ಕಪೀಂದ್ರ.

ಇನ್ನೊಂದು ಸ್ವಾರಸ್ಯವಾದ ಅರ್ಥ - ಕ ಎಂದರೆ ಸುಖ. ಅದನ್ನು ಯಾವಾಗಲೂ, ಚೆನ್ನಾಗಿ ಅನುಭವಿಸುತ್ತಿರುವ - ಪಿಬಂತೀತಿ - ಕಪಯಃ - ಮುಕ್ತರು. ಕೋತಿಗಳಿಗೂ 'ಕಪಿ' - ಎಂಬ ಹೆಸರು ಈ ಅರ್ಥದ ಹಿನ್ನೆಲೆಯಲ್ಲಿಯೇ ಬಂದಿದ್ದಿರಬಹುದು. ತುಂಬ ಸಂಪತ್ತು ಬಂದಾಗ 'ಕಪಿಯಂತೆ ಹಾರಾಡ್ತಾನೆ.....' ಎಂದು ಉದ್ಗರಿಸಲಾಗುವುದು. ಅಂದರೆ ಯಾವಾಗಲೂ ಹಾರಾಡುತ್ತಿರುವ ಕಪಿಗಳು ಸುಖವಾಗಿರುವವು - ಎಂಬ ಆಶಯ.

ಹೀಗೆ ಯಾವಾಗಲೂ ಸುಖವನ್ನು ಅನುಭವಿಸುತ್ತಿರುವ ಮುಕ್ತರು 'ಕಪಿ'ಗಳು. ಅವರಿಗೂ 'ಇಂದ್ರ' ಒಡೆಯನಾಗಿರುವ ಭಗವಂತ 'ಕಪೀಂದ್ರ'. ನಿತ್ಯ ಸುಖವನ್ನು ಅನುಭವಿಸುತ್ತಿರುವ ಮುಕ್ತಾತ್ಮರಿಗಿಂತಲೂ ಅಧಿಕ ಸುಖವನ್ನು ಅನುಭವಿಸುವವನು.

**೫೦೭. ಭೂರಿದಕ್ಷಿಣಃ – ತುಂಬ ಜ್ಞಾನಸಂದೇಶವನ್ನು ಹೊರಡಿಸುವವನು.**

**ವಿವರಣೆ :** ಭೂರಿ ಎಂದರೆ ಬಹಳ. ದಕ್ಷಿಣೆ ಎಂದರೆ ಯಜ್ಞಯಾಗಾದಿಗಳನ್ನು ನಡೆಸಿದವರಿಗೆ ಕೊಡುವ ಸಂಭಾವನೆ ಎನ್ನುವುದು ಸಾಮಾನ್ಯವಾದ ಅರ್ಥ. ಆದರೆ ಕೃಷ್ಣನ ದೃಷ್ಟಿಯಲ್ಲಿ ದಕ್ಷಿಣೆ ಬೇರೆಯೇ ಇದೆ. ಉದ್ಧವ ಗೀತೆಯಲ್ಲಿ ಹೀಗೆ ಉದ್ಘೋಷಿಸಿರುವನು - 'ದಕ್ಷಿಣಾ ಜ್ಞಾನಸಂದೇಶಃ' ತಿಳುವಳಿಕೆಯ ವಿತರಣೆಯೇ

ಮುಖ್ಯವಾದ ದಕ್ಷಿಣೆ.

ಒಮ್ಮೆ ವಿದ್ಯಾಮಾನ್ಯ ತೀರ್ಥರಲ್ಲಿ ಒಬ್ಬ ಪಾಠಕ್ಕೆ ಬರುತ್ತೇನೆ ಎಂದ. ಪ್ರತಿನಿತ್ಯ ಗುರುದಕ್ಷಿಣೆ ಕೊಡಲು ಸಿದ್ಧನಾದರೆ ಬರಬಹುದು ಅಂದರು. 'ನಾನು ಅಷ್ಟು ಧನಿಕ ಅಲ್ಲ' - ಅಂದ. ಆಗ ಅವರು ನಗುತ್ತ ನಾನು ಬಯಸುವ ಗುರುದಕ್ಷಿಣೆ - 'ದಕ್ಷಿಣಾ ಜ್ಞಾನಸಂದೇಶಃ' ಎಂದಿರುವಂತೆ ನಾನು ಪಾಠ ಮಾಡಿದ್ದನ್ನು ಮರುದಿನ ಒಪ್ಪಿಸುವ ಮೂಲಕ ಜ್ಞಾನ ಸಂದೇಶ ರೂಪದ ದಕ್ಷಿಣೆಯನ್ನು - ಎಂದರು.

ಅದೂ ನನ್ನಿಂದ ಆಗಲಿಕ್ಕಿಲೆಂದು ಅವನು ಹೊರಟು ಹೋದ. ಕೃಷ್ಣನು ಭೂರಿ ದಕ್ಷಿಣಃ - ಬಹಳ ಜ್ಞಾನ ಸಂದೇಶವನ್ನು ಹೊರಡಿಸಿದವನು. ತಾನು ಜ್ಞಾನಸಂದೇಶ ನೀಡುವುದಲ್ಲದೆ, ಮತ್ತೊಬ್ಬರ ಮೂಲಕವೂ ಜ್ಞಾನ ಸಂದೇಶವನ್ನು ಹೊರಡಿಸಿದವನು.

ಭೀಷ್ಮರು ತಮ್ಮ ಅನುಭವದ ಹಿನ್ನೆಲೆಯಲ್ಲೇ ಈ ನಾಮದ ಅರ್ಥವನ್ನು ಮೆಲುಕು ಹಾಕುತ್ತಿರುವರು.

ಪಾಂಡವರಿಗೆ ಉಪದೇಶ ನೀಡಲು ತನ್ನಿಂದಾಗದು ಎಂದಾಗ **'ತ್ವತ್ಕೀರ್ತ್ಯೈ ತ್ವಯಿ ಸಂಸ್ಥಿತಃ ಪ್ರವಕ್ಷಾಮ್ಯಖಿಲಾನ್ ಧರ್ಮಾನ್ ಸೂಕ್ಷ್ಮಂ ತತ್ತ್ವಮಪಿ ....'** ಎಂದು ಅಶ್ವಾಸನೆ ನೀಡಿದ ಕೃಷ್ಣ ತಮ್ಮೊಳಗೆ ಹೊಕ್ಕು ಈ ರೀತಿಯಾಗಿ ಭೂರಿ ದೀರ್ಘವಾದ ದಕ್ಷಿಣೆಯನ್ನು - ಜ್ಞಾನಸಂದೇಶವನ್ನು ಹೊರಡಿಸುತ್ತಿದ್ದಾನೆ - ಎಂಬುದಾಗಿ.

**ಸೋಮಪೋಽಮೃತಪಃ ಸೋಮಃ ಪುರುಜಿತ್ ಪುರುಸತ್ತಮಃ |**
**ವಿನಿಯೋಜ್ಯಃ ಸತ್ಯಸಂಧೋ ದಾಶಾರ್ಹಃ ಸಾತ್ವತಾಂ ಪತಿಃ ||೫೪||**

**೫೦೮. ಸೋಮಪಃ – ಉಮೆಯಿಂದ ಕೂಡಿದ ಮೃತ್ಯುದೇವತೆಯಾದ ರುದ್ರನನ್ನು ರಕ್ಷಿಸುವವನು.**

**ವಿವರಣೆ :** ಸ + ಉಮಾ ಸೋಮ - ಉಮಾಳಿಂದ ಕೂಡಿದವನು. ಉಮಾ ಎಂದರೆ ಪಾರ್ವತಿ. ಅವಳಿಂದ ಕೂಡಿದವನು ರುದ್ರದೇವ. ಅಂತಹ ಸೋಮನನ್ನೂ 'ಪ' - ಅಂದರೆ ರಕ್ಷಣೆ ಮಾಡುವವನು (ಪಾತೀತಿ ಪಃ) ಮೃತ್ಯುವನ್ನೂ ರಕ್ಷಣೆ ಮಾಡುವವನು ಎಂಬ ಅರ್ಥ ಬಂದಂತಾಗುವುದು. ಯಮ ಮೃತ್ಯು ದೇವತೆ. ಅವನಿಗೂ ಮೃತ್ಯು ದೇವತೆ ರುದ್ರ. ಆದುದರಿಂದ ಸೋಮನನ್ನು ರಕ್ಷಿಸುವುದೆಂದರೆ ಮೃತ್ಯು ದೇವತೆಯನ್ನು ರಕ್ಷಿಸುವುದೆಂದರ್ಥ.

ಮೃತ್ಯು ದೇವತೆಗೆ ಅವನ ಮೂಲಕ ನಡೆಯುವ ಮರಣ ಪ್ರಕ್ರಿಯೆಗಾಗಿ ಜನರು ಅವನನ್ನು ತೆಗಳದಂತೆ ಅವನಿಗೆ ರಕ್ಷಣೆ ನೀಡುವವನು ಭಗವಂತ. ಮೃತ್ಯುದೇವತೆಗೆ ಭಗವಂತ ನೀಡುವ ರಕ್ಷಣೆಯ ಚಮತ್ಕಾರ ಹೀಗಿದೆ - ಯಾರು ಸತ್ತರೂ - ‘ಅವರು ಹೃದಯಸ್ತಂಭನದಿಂದ ಸತ್ತರು’ ‘ಇವರು ನೇಣು ಹಾಕಿಕೊಂಡು ಸತ್ತರು’ ‘ಅವರು ವಾಹನ ಅಪಘಾತದಿಂದ ಸತ್ತರು’ - ಹೀಗೆಲ್ಲ ಹೇಳುವರೇ ಹೊರತು ‘ಮೃತ್ಯುದೇವತೆ ಅವರ ಪ್ರಾಣವನ್ನು ಕಸಿದುಕೊಂಡು ಹೋದ’ - ಎಂದು ಮೃತ್ಯುದೇವತೆಯ ಮೇಲೆ ಯಾರೂ ಅಪವಾದವನ್ನು ಹೊರಿಸುವುದಿಲ್ಲ. ಇದೇ ಭಗವಂತ ಮೃತ್ಯುದೇವತೆಯನ್ನು ಅವನ ಮೂಲಕ ನೀಡಲಾಗುವ ಮರಣದ ವಿಷಯದಲ್ಲಿ ಅವನಿಗೆ ಎಲ್ಲರ ಬೈಗುಳ, ತೆಗಳಿಕೆ, ಅಪವಾದ ಬರದಂತೆ ಸಂರಕ್ಷಿಸುವ ಕ್ರಮ. ಹೀಗೆ ಸೋಮ ಎನಿಸುವ ಮೃತ್ಯುದೇವತೆಯನ್ನು ರಕ್ಷಿಸುವ ಪ್ರಯುಕ್ತ ಭಗವಂತ ‘ಸೋಮಪ’ ಎನಿಸುವನು.

**೫೧೯. ಅಮೃತಪಃ – ಅ ಎನಿಸುವ ತನಗಾಗಿ, ತನ್ನ ಪ್ರೀತಿಗಾಗಿ ಸಾಯುವವರಿಗೆ ರಕ್ಷಣೆ ನೀಡುವವನು.**

ವಿವರಣೆ: ಅ - ಭಗವಂತನಿಗಾಗಿ ಮೃತ - ಸಾಯುವವರಿಗೆ ಪಃ - ರಕ್ಷಕನಾಗಿರುವವನು. ಏನು ದೇವರಿಗಾಗಿ ಸಾಯುವುದು ಎಂದರೆ ? ಭಗವಂತನ ಪ್ರೀತಿಗಾಗಿ ವ್ರತ ನಿಯಮಗಳನ್ನು ಅಳವಡಿಸಿಕೊಂಡು, ಅದರಿಂದಾಗಿ ಸತ್ತರೆ ಅವರಿಗೆ ಭಗವಂತ ರಕ್ಷಣೆ ನೀಡುವನು. ಭಗವಂತನ ಪ್ರೀತಿಗಾಗಿ ಬದರಿಯಾತ್ರೆ ಮಾಡಿ, ಅಲ್ಲಿ ಪ್ರಾಣ ಕಳಕೊಂಡರೆ ದೇವರ ರಕ್ಷಣೆ ದೊರಕುವುದು. ಏಕಾದಶೀ ವ್ರತ ಮಾಡಿ ಸತ್ತರೆ ದೇವರು ರಕ್ಷಣೆ ನೀಡುವನು.

ಭೀಷ್ಮ ದ್ರೋಣಾದಿಗಳು ದೇವರ ಪ್ರೀತಿಗಾಗಿಯೇ ತಮ್ಮ ಬದುಕನ್ನು ಮುಡುಪಾಗಿಟ್ಟವರು. ಅಂತಹವರಿಗೆ ಭಗವಂತನ ರಕ್ಷಣೆ ದೊರಕುವುದು.

ಭೀಷ್ಮರು ತನ್ನೆದುರು ಕುಳಿತಿರುವ ಕೃಷ್ಣನನ್ನು ಉದ್ದೇಶಿಸಿ, ನಾನು ನಿನ್ನ ಜೊತೆ ದುಷ್ಟ ನಿಗ್ರಹದಲ್ಲಿ ಸೇವೆ ಸಲ್ಲಿಸುತ್ತ ನಿನಗಾಗಿ ಪ್ರಾಣ ತ್ಯಾಗಕ್ಕೆ ಸಿದ್ಧನಾಗಿರುವವನು. ಅಂತಹ ನನ್ನ ರಕ್ಷಣೆಯ ಹೊಣೆ ನಿನ್ನ ಮೇಲಿದೆ - ಎಂಬ ಧ್ವನಿ ಮೂಡುವಂತೆ ‘ಅಮೃತಪಃ’ - ಎಂದು ಸ್ತುತಿಸುವರು.

**೫೨೦. ಸೋಮಃ – ಸೌಮ್ಯ ಸ್ವಭಾವದವನು.**

ವಿವರಣೆ: ಸೌಮ್ಯ ಸ್ವಭಾವದವನು. ಚಂದ್ರನಿಗೆ ಸೌಮ್ಯ ಸ್ವಭಾವವಿರುವುದರಿಂದಲೇ

ಸೋಮ ಎಂಬ ಹೆಸರು ಬಂದಿರುವಂತಹದ್ದು. ಸೂರ್ಯನದ್ದು ತೀಕ್ಷ್ಣ ಕಿರಣಗಳಾದರೆ, ಚಂದ್ರನದ್ದು ಶಾಂತ ಕಿರಣಗಳು. ಸೂರ್ಯ ದೈಹಿಕ ತಾಪ ಕೊಟ್ಟಂತೆ ಚಂದ್ರ ಯಾವುದೇ ಬಗೆಯ ದೈಹಿಕ ತಾಪ ಕೊಡುವುದಿಲ್ಲ. ಕೆಲವರಿಗೆ ಮಾನಸಿಕ ತಾಪ ಕೊಡಬಹುದು. ಆದರೆ ದೈಹಿಕ ತಾಪ ಕೊಡುವುದಿಲ್ಲ. ಆದುದರಿಂದ ಚಂದ್ರ ಸೋಮ ಎನಿಸಿರುವನು.

ಅಂತಹ ಚಂದ್ರನಿಗೂ ಸೌಮ್ಯ ಸ್ವಭಾವವನ್ನು ನಿಯಮಿಸುವ ಭಗವಂತನು ಚಂದ್ರನಿಗಿಂತಲೂ ಅಧಿಕ ಪ್ರಮಾಣದಲ್ಲಿ 'ಸೋಮ'.

ಜೀವನದಲ್ಲಿ ಭಾರೀ ಭಾರೀ ಸಮಸ್ಯೆಗಳು ಬಂದು ತುಂಬ ಗೊಂದಲದ ಪರಿಸ್ಥಿತಿಗೆ ಒಳಗಾದಾಗ ಅದರಿಂದ ಪಾರಾಗಬೇಕಾದರೆ ಭಗವಂತನನ್ನು 'ಸೋಮ' - ಎಂದು ಉಪಾಸನೆ ನಡೆಸಬೇಕು. ಇದರಿಂದಾಗಿ ಆದಷ್ಟು ನಿರ್ವಿಕಾರರಾಗಿ ಶಾಂತರಾಗಿ ಬದುಕಬಹುದು.

**೫೧೧. ಪುರುಜಿತ್ - ಶ್ರೇಷ್ಠವಾದವುಗಳನ್ನೆಲ್ಲ ತನ್ನದ್ದನ್ನಾಗಿ ಮಾಡಿಕೊಂಡವನು.**

**ವಿವರಣೆ :** ಪುರು ಎಂದರೆ ಶ್ರೇಷ್ಠವಾದದ್ದನ್ನು ಜಿತ್ ಎಂದರೆ ಗೆದ್ದವನು. ಶ್ರೇಷ್ಠವಾದದ್ದನ್ನೆಲ್ಲ ಗೆದ್ದವನೇ ಪುರುಜಿತ್.

ಗೆಲ್ಲುವುದು ಎಂದಾದರೂ ಏನು ? ಇಂದ್ರಿಯಗಳನ್ನು ಗೆದ್ದನೆಂದರೆ ಇಂದ್ರಿಯಗಳನ್ನು ತನ್ನದಾಗಿಸಿಕೊಂಡವನು. ಒಬ್ಬ ರಾಜ ಶತ್ರುವಿನ ಪಟ್ಟಣವನ್ನು ಗೆದ್ದ ಎಂದರೂ ಆ ಪಟ್ಟಣವನ್ನು ತನ್ನದಾಗಿಸಿಕೊಂಡ ಎಂದೇ ಅರ್ಥ.

ಹಾಗೆಯೇ ಭಗವಂತನು ಶ್ರೇಷ್ಠವಾದದ್ದನ್ನೆಲ್ಲ ಗೆದ್ದಿರುವನೆಂದರೆ ಅವನ್ನೆಲ್ಲ ತನ್ನದಾಗಿಸಿಕೊಂಡಿರುವನು. ಎಂದು ಅರ್ಥ.

ಶ್ರೇಷ್ಠವಾದವು ಯಾವುವು ?

ಸ್ವಾತಂತ್ರ್ಯ ಶ್ರೇಷ್ಠವಾದ ಗುಣ. ಆದನ್ನು ತನ್ನದ್ದನ್ನಾಗಿಸಿಕೊಂಡಿರುವನು.. ಪೂರ್ಣಜ್ಞಾನ ಶ್ರೇಷ್ಠವಾದ ಗುಣ. ಅದನ್ನು ತನ್ನದ್ದನ್ನಾಗಿಸಿಕೊಂಡಿರುವನು. ಪೂರ್ಣಸುಖ ಶ್ರೇಷ್ಠವಾದದ್ದು. ಅದನ್ನು ತನ್ನದ್ದನ್ನಾಗಿ ಮಾಡಿಕೊಂಡಿರುವನು. ಮುಕ್ತಾಧಿಪತಿತ್ವ ಶ್ರೇಷ್ಠ ಗುಣ. ಅದನ್ನು ತನ್ನದ್ದನ್ನಾಗಿಸಿಕೊಂಡಿರುವನು. ಲಕ್ಷ್ಮೀಪತಿತ್ವ ಶ್ರೇಷ್ಠ ಗುಣ. ಅದನ್ನು ತನ್ನದ್ದನ್ನಾಗಿಸಿಕೊಂಡಿರುವನು.

ಹೀಗೆ ಶ್ರೇಷ್ಠ ಎಂದು ಯಾವುದ್ಯಾವುದು ಇದೆಯೋ ಅದೆಲ್ಲವನ್ನೂ ದೇವರು ಗೆದ್ದಿರುವನು ; ಅಂದರೆ ತನ್ನದ್ದನ್ನಾಗಿ ಮಾಡಿಕೊಂಡಿರುವನು. ಯಾವುದೇ ದೋಷ

ದೇವರಲ್ಲಿ ಇಲ್ಲ. ಯಾಕೆಂದರೆ ದೋಷಗಳಾದರೆ ಉಳಿದೆಲ್ಲರಲ್ಲೂ ಸಾಮಾನ್ಯವಾಗಿ ಇರುವವು. ಆದ್ದರಿಂದ ಭಗವಂತ ಅಂತಹವುಗಳನ್ನು ತನ್ನಲ್ಲಿ ಇಟ್ಟುಕೊಂಡಿಲ್ಲ. ವಜ್ರದ ಅಂಗಡಿಗೆ ಹೋಗಿ ನನಗೆ ವಿಳ್ಯದೆಲೆ, ಅಡಿಕೆ ಬೇಕು ಎಂದರೆ ಚಿಕ್ಕಪುಟ್ಟ ಅಂಗಡಿಗಳಲ್ಲಿ ಸಿಗಬಹುದಾದ ಅವು ಇಲ್ಲಿ ಇಲ್ಲ. ಅವು ಬೇಕಾದರೆ ಗೂಡುಅಂಗಡಿಗೇ ಹೋಗಬೇಕು - ಎನ್ನಲಾಗುವುದು ತಾನೇ ? ಅಂತೆ ಭಗವಂತ ತನ್ನಲ್ಲಿ ಅಜ್ಞಾನ, ವಿಪರೀತ ಜ್ಞಾನ - ಇತ್ಯಾದಿ ಯಾವುದೇ ದೋಷಗಳನ್ನು ಇಟ್ಟುಕೊಳ್ಳದೆ ಶ್ರೇಷ್ಠ ಶ್ರೇಷ್ಠ ಗುಣಗಳನ್ನಷ್ಟೇ ಇಟ್ಟುಕೊಂಡಿರುವುದರಿಂದ 'ಪುರುಜಿತ್' ಎನಿಸಿರುವನು.

**೫೧೨. ಪುರುಸತ್ತಮಃ – ಅತ್ಯಂತ ಶ್ರೇಷ್ಠವಾದವನು.**

ವಿವರಣೆ: ಪುರು - ಶ್ರೇಷ್ಠ ಸತ್ -ಸೊತ್ತು ; ವಸ್ತು. 'ಪುರುಸೊತ್ತು' ವೇ ಪುರುಸತ್ - ಶ್ರೇಷ್ಠ ವಸ್ತು ಎನಿಸಿದೆ.

ನಮ್ಮಲ್ಲಿ ಏನಾದರೂ ಆಧ್ಯಾತ್ಮಿಕ, ಧಾರ್ಮಿಕ ಸಾಧನೆ ನಡೆಸಬೇಕೆಂದರೆ ಪುರುಸೊತ್ತು ಇಲ್ಲ ; ಪುರುಸೊತ್ತು ಇಲ್ಲ - ಎಂದು ಆಗಾಗ್ಗೆ ಗೋಗರೆಯುವುದುಂಟು. ಏನದು ಪುರುಸೊತ್ತು ಎಂದರೆ ? ಅವಕಾಶ ಎಂಬ ಅರ್ಥ ಅಲ್ಲ. ಯಾಕೆಂದರೆ ಬೇರೆ ಎಲ್ಲ ಕೆಲಸಗಳಿಗೂ ತುಂಬ ಅವಕಾಶ ಇದ್ದೇ ಇರುವುದು. ಆದುದರಿಂದ 'ಪುರುಸೊತ್ತು' - ಎಂದರೆ ದೊಡ್ಡ ಸೊತ್ತು ದೇವರು ; ದೇವರ ಇಚ್ಛೆ - ಎಂದೇ ಅರ್ಥ. ಹಾಗಾಗಿ ಸಾಧನಾನುಷ್ಠಾನ ನಡೆಸಲು ಸಾಕಷ್ಟು ಅವಕಾಶವಿದ್ದರೂ ನಮ್ಮ ಬಾಯಿಯಿಂದ ಹೊರಡುವ 'ಪುರುಸೊತ್ತು ಇಲ್ಲ' - ಎಂಬ ಮಾತಿಗೆ ದೇವರ ಇಚ್ಛೆ ಇಲ್ಲ ಎಂಬ ಅರ್ಥವೇ. ಈ ಅರ್ಥದ ಪರಿವೆ ಇಲ್ಲದೆಯೇ ದೇವರು ನಮ್ಮ ಬಾಯಿಯಿಂದ ಈ ಮಾತನ್ನು ಆಡಿಸುವನು.

ಹೀಗೆ 'ಪುರುಸತ್' - ಅಂದರೆ ಶ್ರೇಷ್ಠ ವಸ್ತು. ಅನೇಕ ಶ್ರೇಷ್ಠ ವಸ್ತುಗಳಿದ್ದು ಅವುಗಳಲ್ಲಿ ಇವನೂ ಒಬ್ಬ ಪುರುಸತ್ - ಶ್ರೇಷ್ಠ ವಸ್ತು ಎಂಬ ಅರ್ಥ ಹೊರಡೀತು. ಅದಕ್ಕಾಗಿ 'ಪುರುಸತ್ತಮಃ' ಎನ್ನಲಾಗಿದೆ. ಆಂಗ್ಲ ಭಾಷೆಯ ಧಾಟಿಯಲ್ಲಿ ಮಾತನಾಡುವುದಾದರೆ, ಅನೇಕ ಉತ್ತಮರಿದ್ದು ಅವರಲ್ಲಿ ಒಬ್ಬ ಎಂದಾದರೆ "Good" - ಎನ್ನಲಾಗುವುದು. ಇಬ್ಬರಲ್ಲಿ ಒಬ್ಬ ಉತ್ತಮನೆಂದಾದರೆ "Better" - ಎನ್ನಲಾಗುವುದು. ಎಲ್ಲರಲ್ಲೂ ಉತ್ತಮ ; ಅವನಿಗಿಂತ ಮತ್ತೊಬ್ಬ ಉತ್ತಮನಿಲ್ಲ ಎಂದರೆ "Best" ಎನ್ನಲಾಗುವುದು. ಅದರಂತೆಯೇ 'ಪುರುಸತ್' 'ಪುರುಸತ್ತರ' 'ಪುರುಸತ್ತಮ' ಶಬ್ದಗಳ ಪ್ರಯೋಗ. ಭಗವಂತನ್ನು 'ಪುರುಸತ್ತಮ' - ಎನ್ನಲಾಗಿದೆ. ಎಂದರೆ ಅವನಷ್ಟು ಶ್ರೇಷ್ಠ ವಸ್ತು ಮತ್ತೊಂದಿಲ್ಲ. ಅವನೇ ಶ್ರೇಷ್ಠ ವಸ್ತುಗಳಲ್ಲೆಲ್ಲ

ಶ್ರೇಷ್ಠನಾದವನು - ಎಂಬುದಾಗಿ.

**೫೧೩. ವಿನಿಯೋಜ್ಯಃ – ಪ್ರತಿಯೊಂದು ಚಟುವಟಿಕೆಯಲ್ಲೂ ತೊಡಗಿಸಿಕೊಳ್ಳಲು ಯೋಗ್ಯನಾದವನು.**

ವಿವರಣೆ: ಕೆಲವು ಪುಸ್ತಕಗಳಲ್ಲಿ 'ವಿನಯೋ ಜಯಃ' - ಎಂಬ ಪಾಠವೂ ಇರಬಹುದು. 'ವಿನಿಯೋಜ್ಯಃ' ಎಂಬುದು ಉತ್ತಮ ಪಾಠ.

ವಿಶೇಷವಾಗಿ ನಿಯೋಜಿಸಿಕೊಳ್ಳಲು ಯೋಗ್ಯನಾದವನು 'ವಿನಿಯೋಜ್ಯ'. ನಮ್ಮ ಪ್ರತಿಯೊಂದು ಕೆಲಸದಲ್ಲೂ ಮೊದಲು ವಿಶೇಷವಾಗಿ ದೇವರನ್ನು ನಿಯೋಜಿಸಿಕೊಳ್ಳಬೇಕು ; ಸೇರಿಸಿಕೊಳ್ಳಬೇಕು. ನಮ್ಮ ಕೆಲಸಕ್ಕೆ ದೇವರ ನಿಯೋಗ ಬರಬೇಕು. ರಾಜಕೀಯ ಕ್ಷೇತ್ರದಲ್ಲಿ ಸತ್ಯಸಂಗತಿಯ ಪರಿಶೀಲನೆಗಾಗಿ ನಿಯೋಗಗಳನ್ನು ಹೊರಡಿಸಲಾಗುವುದು ತಾನೇ ? ಅದರಂತೆ ನಮ್ಮ ಕೆಲಸಗಳಲ್ಲಿ ದೇವರ ನಿಯೋಗ 'ಏಕಸದಸ್ಯತ್ವ'ದ ನಿಯೋಗ. ಈ ತನಿಖೆಯಲ್ಲಿ ಒಬ್ಬನೇ ಸದಸ್ಯ. ಅವನೇ ಅಧ್ಯಕ್ಷ. ಅವನೇ ಕಾರ್ಯದರ್ಶಿ. ದೇವರೇ ಸದಸ್ಯ, ಅಧ್ಯಕ್ಷ, ಕಾರ್ಯದರ್ಶಿ..... ಎಲ್ಲ. ಹೇಗೆ ಲೋಕದಲ್ಲಿ ಯಾವುದಾದರೊಂದು ದೊಡ್ಡ ಕೆಲಸ ಮಾಡಬೇಕೆಂದರೆ ಅದಕ್ಕೆ ಸಮರ್ಥರಾದ ಹತ್ತಾರು ವ್ಯಕ್ತಿಗಳನ್ನು ಸೇರಿಸಿಕೊಳ್ಳುವೆವೋ ಅಂತೆಯೇ ಪ್ರತಿಯೊಂದು ಕೆಲಸದಲ್ಲೂ ಭಗವಂತನನ್ನು ವಿಶೇಷವಾಗಿ ವಿನಿಯೋಜಿಸಿಕೊಳ್ಳಬೇಕು. ಮೊದಲು ಅವನ ಚಿಂತನೆ ನಡೆಸಬೇಕು. ಆಮೇಲೆ ಇತರ ತತ್ತ್ವಾಭಿಮಾನಿ ಮುಂತಾದವರ ಚಿಂತನೆ. ಹೀಗೆ ಅವನನ್ನು ವಿನಿಯೋಜಿಸಿಕೊಳ್ಳದಿದ್ದಲ್ಲಿ, ಸೇರಿಸಿಕೊಳ್ಳದಿದ್ದಲ್ಲಿ ಎಷ್ಟೇ ಸರಳವಾದ, ಚಿಕ್ಕದಾದ ಕೆಲಸವಾದರೂ ಅದು ಬಿದ್ದು ಹೋಗಿ ಬಿಡುವುದು.

ಆದುದರಿಂದ ಪ್ರತಿಯೊಬ್ಬರಿಂದಲೂ ತಮ್ಮ ತಮ್ಮ ಪ್ರತಿಯೊಂದು ಚಟುವಟಿಕೆಯಲ್ಲೂ ವಿಶೇಷವಾಗಿ ವಿನಿಯೋಜಿಸಲ್ಪಡಲು, ಚಿಂತಿಸಲ್ಪಡಲು ಯೋಗ್ಯನಾದವನು 'ವಿನಿಯೋಜ್ಯಃ'

ಊಟ ಮಾಡುವಾಗ, ಮಲಗುವಾಗ, ಸ್ನಾನ ಮಾಡುವಾಗ - ಹೀಗೆ ಪ್ರತಿಯೊಂದು ಕೆಲಸದಲ್ಲೂ ಭಗವಂತನ ನಿಯೋಗ ಇರಬೇಕು. ಅವನನ್ನು ಸೇರಿಸಿಕೊಳ್ಳಬೇಕು. ತೊಡಗಿಸಿಕೊಳ್ಳಬೇಕು. ಅವನು ನಮ್ಮ ಜೊತೆಗೆ ಕೈಗೂಡಿಸಿದ್ದಾನೆಂದು ಚಿಂತಿಸಬೇಕು.

**೫೧೪. ಸತ್ಯಸಂಧಃ – ಸತ್ಯದ ಜೊತೆಗೆಯೇ ಸಂಧಾನ ಮಾಡಿಕೊಳ್ಳುವವನು.**

ವಿವರಣೆ: ಸಂಧಿ ಉಳ್ಳವನೇ ಸಂಧ. ಸತ್ಯದ ಜೊತೆಗೇ ಸಂಧಾನವುಳ್ಳವನು ಸತ್ಯಸಂಧ. ಭಗವಂತ ಎಂದೂ ಸುಳ್ಳಿನ ಜೊತೆಗೆ ಸಂಧಾನ ಮಾಡಿಕೊಳ್ಳುವವನಲ್ಲ. ಅವನ ರಾಜಿಪಂಚಾತಿಗೆ ಸತ್ಯದ ಜೊತೆಗೆಯೇ. 'ಸತ್ಯ' ಯಾವುದು ? ಅದನ್ನು ಬೇರೆ ಬೇರೆ ಶಾಸ್ತ್ರಗಳಿಂದ ತಿಳಿದುಕೊಳ್ಳಬೇಕು. ಒಂದೊಂದು ಪ್ರಸಂಗಕ್ಕೆ ಒಂದೊಂದು ಬಗೆಯ ಸತ್ಯ ಇರಬಹುದು. ರಾಜಾಂಗಣದಲ್ಲಿ ಪ್ರವಚನ ನಡೆಯುತ್ತಿರುವುದು 'ಸತ್ಯ' ಎಂದರೆ ನಿಜವಾಗಿ ನಡೆಯುತ್ತಿದೆ ಎಂದೇ ಅರ್ಥ.

ಮದುವೆ ಮನೆಯಲ್ಲಿ ಆ ಮದುವೆಯ ಮದುಮಗನಿಗೆ ಸಂಬಂಧಿಸಿರುವ ವ್ಯಕ್ತಿಯೊಬ್ಬ ಆಸ್ಪತ್ರೆಯಲ್ಲಿ ಮೃತನಾದರೂ, ಮದುವೆಯ ಸಂದರ್ಭದಲ್ಲಿ 'ಅವನು ಚೆನ್ನಾಗಿದ್ದಾನೆ' - ಎಂದು ಸುಳ್ಳು ಹೇಳುವುದೇ ಸತ್ಯವಾಗುವುದು. ಹೀಗೆ ಸುಳ್ಳು ಹೇಳಿದರೇನೇ ಭಗವಂತ ನಮ್ಮ ಜೊತೆಗೆ ಸಂಧಾನ ಮಾಡಿಕೊಳ್ಳುವನು. ಬದಲಾಗಿ 'ಅವನು ಸತ್ತಿದ್ದಾನೆ' ಎಂದೇ ಹೇಳಿ ಬಿಟ್ಟೆವೆಂದರೆ ಕೂಡಲೇ ಭಗವಂತ ನಮ್ಮಿಂದ ಸಂಧಾನವನ್ನು ಕಳಚಿಕೊಳ್ಳುವನು.

ಆದುದರಿಂದ ಸಂದರ್ಭವನ್ನು ನೋಡಿಕೊಂಡು ತಿಳಿದವರಿಗೆ, ಹಿರಿಯರಿಗೆ ನೋವಾಗದಂತೆ ಮಾತನಾಡುವವರ ಜೊತೆ ಸಂಧಾನ ಮಾಡಿಕೊಳ್ಳುವವನೇ ಸತ್ಯಸಂಧ.

ಕೆಲವೊಮ್ಮೆ ಅಹಿತವಾದ, ಅಪ್ರಿಯವಾದ ಸತ್ಯವನ್ನು ಹೇಳಬಾರದೆಂದು ಸುಳ್ಳು ಹೇಳಿದಲ್ಲಿ ಲೌಕಿಕವಾಗಿ ಏನಾದರೂ ಸಮಸ್ಯೆ ಬರುವುದಿದ್ದರೆ, ಆ ಪ್ರಯುಕ್ತ ಯಾರಿಂದಾದರೂ ಟೀಕಿಸಿಕೊಳ್ಳಬೇಕಾದ, ಹೇಳಿಸಿಕೊಳ್ಳಬೇಕಾದ ಪ್ರಸಂಗ ಇದ್ದರೆ, ಭಗವಂತ 'ಸತ್ಯಸಂಧ'ನಾಗಿ ನಮ್ಮ ಜೊತೆಗೆ ಇದ್ದು ನಮ್ಮಿಂದ ಅದಕ್ಕೆ ಸರಿಯಾದ, ಸಮಾಧಾನ, ಪ್ರತಿಕ್ರಿಯೆ ಹೊರಡುವಂತೆ ಮಾಡಿ ನಮಗೆ ಏನೂ ಅಪಮಾನ, ಹಾನಿ ಇತ್ಯಾದಿಗಳು ಆಗದಂತೆ ನೋಡಿಕೊಳ್ಳುವನು.

**೫೧೫. ದಾಶಾರ್ಹಃ – * ಬೆಸ್ತರ ಹೆಣ್ಣಾದ ಸತ್ಯವತಿ ಯೋಗ್ಯಳಾಗುವಂತೆ ಅನುಗ್ರಹಿಸಿದವನು.**

*** ವಿದ್ಯಾದಾನ ಮಾಡುವ ಸರಸ್ವತಿಯ ಪೂಜೆಗೆ ಅರ್ಹನಾಗಿರುವವನು.**

ವಿವರಣೆ : ದಾಶಾ ಎಂದರೆ ಬೆಸ್ತರ ಹೆಣ್ಣು. ಬೆಸ್ತರ ಹೆಣ್ಣು ಆಗಿದ್ದ ಸತ್ಯವತಿ ಯಾರಿಂದಾಗಿ ಅರ್ಹಳೆನಿಸಿರುವಳೋ ಅಂತಹ ಸತ್ಯವತಿಯನ್ನು ತಾಯಿಯನ್ನಾಗಿ ಸ್ವೀಕರಿಸುವ ಮೂಲಕ ಆಕೆಗೆ ಅರ್ಹತೆಯನ್ನು ಅನುಗ್ರಹಿಸಿದ ವೇದವ್ಯಾಸರು 'ದಾಶಾರ್ಹ'ರು.

ಮತ್ತೊಂದು ಅರ್ಥ - **'ಪ್ರಾಣೋ ವಾ ಆಶಾಯಾಃ ಭೂಯಾನ್'** - ಎಂಬ ಉಪನಿಷತ್ತಿನ ಮಾತಿನಲ್ಲಿ ಸರಸ್ವತಿಯನ್ನು ಆಶಾ ಎಂಬ ಹೆಸರಿನಿಂದ ಕರೆಯಲಾಗಿದೆ. ಪ್ರತಿಯೊಬ್ಬನೂ ಏನನ್ನಾದರೂ ತಿಳಿದುಕೊಳ್ಳಬೇಕೆಂಬ ಆಶೆಗೆ ಒಳಗಾಗಿರುವುದರಿಂದ ತಿಳುವಳಿಕೆಗೆ ಅಭಿಮಾನಿಯಾದ ಸರಸ್ವತಿಯನ್ನು ಆಶಾ ಎಂದೇ ಕರೆದರು. ಅಂತಹ ಸರಸ್ವತಿ ಏನನ್ನು ಕೊಡುವಳು ? ವಿದ್ಯೆಯನ್ನು. ಆದುದರಿಂದ ವಿದ್ಯೆಯನ್ನು ಕೊಡುವ ಸರಸ್ವತಿ ದಾ+ಆಶಾ-ದಾಶಾ - ಇಂತಹ 'ದಾಶಾ'ಳಿಂದ, ವಿದ್ಯೆಯನ್ನು ನೀಡುವ ಸರಸ್ವತಿಯಿಂದ 'ಅರ್ಹಃ' ಪೂಜೆಗೆ ಯೋಗ್ಯನಾದವನು. ಒಟ್ಟಲ್ಲಿ ವಿದ್ಯಾದಾನ ಮಾಡುವವರಿಂದ, ವಿದ್ವಾಂಸರಿಂದ ಪೂಜೆಗೆ ಯೋಗ್ಯನಾದವನು 'ದಾಶಾರ್ಹ' ಎನಿಸುವನು.

ಕಷ್ಟ ಬಂದವರು ದೇವರನ್ನು ಪೂಜಿಸುವರು. ಎಷ್ಟರವರೆಗೆ ? ತಮ್ಮ ಕಷ್ಟ ಕೈಗೂಡುವವರೆಗೆ ಮಾತ್ರ.

ಇಷ್ಟ ಬೇಕಾದವರು ದೇವರನ್ನು ಪೂಜಿಸುವರು. ಎಷ್ಟರವರೆಗೆ ? ತಮ್ಮ ಪರಿಹಾರವಾಗುವವರೆಗೆ ಮಾತ್ರ.

ಕಷ್ಟ ಬರಲಿ ; ಇಷ್ಟ ದೊರಕದಿರಲಿ - ಯಾವಾಗಲೂ ದೇವರನ್ನು ಪೂಜಿಸುವವರು ತಿಳಿದವರು ಮಾತ್ರ. ಆದುದರಿಂದ ಅಂತಹವರಿಂದ ಪೂಜಿಸಿಕೊಳ್ಳಲು ಅರ್ಹನಾಗಿರುವವನೆಂಬುದನ್ನು ವಿಶೇಷವಾಗಿ ಉಲ್ಲೇಖಿಸಲಾಗಿದೆ. ದೇವರು ವಿಶೇಷವಾಗಿ ನಿರೀಕ್ಷಿಸುವುದೇ ತಿಳಿದು ತನ್ನನ್ನು ಪೂಜಿಸುವರ ಪೂಜೆಯನ್ನೇ.

ತಿಳಿಯದವರ ಪೂಜೆಗಿಂತಲೂ ತಿಳಿದವರ ಪೂಜೆ ಭಗವಂತನಿಗೆ ಪ್ರಿಯವಾಗಿದ್ದು, ಅಂತಹ ಪೂಜೆಗೆ ಯೋಗ್ಯನಾದವನಾದುದರಿಂದ 'ದಾಶಾರ್ಹ' ಎನಿಸುವನು.

ಆದ್ದರಿಂದ ನಮ್ಮ ನಿಮ್ಮ ಪೂಜೆಗೆ ಭಗವಂತ ಅರ್ಹನೆನಿಸಬೇಕೆಂದರೆ ಏನು ಮಾಡ್ತೇವೆ ? ಯಾಕೆ ಮಾಡ್ತೇವೆ ? ಹೇಗೆ ಮಾಡ್ತೇವೆ ? ಎಂಬ ತಿಳುವಳಿಕೆಯನ್ನು ಗಳಿಸಿಕೊಳ್ಳಬೇಕೆಂದು 'ದಾಶಾರ್ಹ' ನಾಮ ಎಚ್ಚರಿಸುವುದು.

**೫೧೬. ಸಾತ್ವತಾಂ ಪತಿಃ – ಸಾತ್ವಿಕರಿಗೆ ಅಧಿಪತಿಯಾಗಿರುವವನು.**

**ವಿವರಣೆ:** ಭಗವಂತನನ್ನು ತಿಳಿದು ಪೂಜಿಸುವವರು ಸಾತ್ತ್ವಿಕರು. ಅವರನ್ನೇ 'ಸಾತ್ವತ' ಎನ್ನಲಾಗುವುದು. ಅಂತಹವರಿಗೆ ಒಡೆಯನಾಗಿರುವವನೇ 'ಸಾತ್ವತಾಂ ಪತಿ'.

ತಿಳಿದವರ ಪೂಜೆಯನ್ನು ಸ್ವೀಕಾರ ಮಾಡಿದ ಮೇಲೆ ಅಂತಹ ತಿಳಿದವರಿಗೆ

ತಾನು ಅಧಿಪತಿಯಾಗಿ ನಿಂತಹವನು. ಯಾರು ನಿನಗೆ ಗುರುಗಳು ಅಂದಾಗ 'ನಮ್ಮ ಗುರುಗಳು ದೇವರು' ಅಂದರೆ ಭೇಷ್ ಅನ್ನುವರು.

ಘಟ್ಟದ ಮೇಲಿನ ಎಷ್ಟೋ ಮಂದಿ ನಮ್ಮನ್ನು ಗೌರವಿಸುವುದು ನಾವು ವಿದ್ಯಾಮಾನ್ಯ ತೀರ್ಥರಲ್ಲಿ ಓದಿದವರು ಎಂಬುದಕ್ಕಾಗಿ. ಹಾಗೆಯೇ ನಮಗೆ ಸಮಾಜದಲ್ಲಿ ಮನ್ನಣೆ ದೊರಕಬೇಕೆಂದರೆ ತಿಳಿದು ದೇವರನ್ನು ಪೂಜಿಸೋಣ. ಅದರಿಂದ ಪ್ರಸನ್ನನಾಗುವ ಅವನು ನಮಗೆ ಅಧಿಪತಿಯಾಗಿ ಆ ಪ್ರಯುಕ್ತ ನಮಗೆ ಗೌರವ ದೊರಕುವಂತೆ ಮಾಡುವನು.

**ಜೀವೋ ವಿನಯಿತಾ ಸಾಕ್ಷೀ ಮುಕುಂದೋಽಮಿತವಿಕ್ರಮಃ |**
**ಅಂಭೋನಿಧಿರನಂತಾತ್ಮಾ ಮಹೋದಧಿಶಯೋಽಂತಕಃ ||೫೫||**

**೫೧೭. ಜೀವಃ – * ಸ್ವತಂತ್ರವಾಗಿ ಇರುವವನು.**

*** ಯಾರ ಹಿಡಿತದಲ್ಲಿದ್ದುಕೊಂಡು ನಾವೆಲ್ಲ ಜೀವಿಸುತ್ತಿದ್ದೇವೆಯೋ ಅಂತಹವನು.**

**ವಿವರಣೆ :** ಭೀಷ್ಮರು ಕೃಷ್ಣನನ್ನೇ ಜೀವ ಎಂಬ ಶಬ್ದದಿಂದ ಕರೆಯುತ್ತಿರುವರು. ಯದ್ಯಪಿ ಶಾಸ್ತ್ರಕಾರರು ಜೀವರು ಎಂದಾಗ ನಮ್ಮನ್ನೂ, ಈಶ ಎಂದಾಗ ದೇವರನ್ನೂ ತೋರಿಸುವರು. ಆದರೆ ಭೀಷ್ಮರು ದೇವರನ್ನೇ 'ಜೀವ' ಎಂದಿರುವರು.

ಜೀವತೀತಿ ಜೀವಃ - ಬದುಕಿರುವವನು ಎಂಬುದು ಜೀವಶಬ್ದದ ಅರ್ಥ. ನಾವು ಬದುಕಿರುವವರೆಂದು ಗಟ್ಟಿಯಾಗಿ ಹೇಳಿಕೊಳ್ಳಲಾಗದು. ಈಗ ಬದುಕಿದ್ದರೆ ಇನ್ನೊಂದು ಕ್ಷಣದಲ್ಲಿ ಸಾಯಲೂ ಬಹುದು. 'ನಾನು ಚೆನ್ನಾಗಿ ಬದುಕಿದ್ದೇನೆ' - ಎಂದು ತಂದೆ ತಾಯಂದಿರಿಗೆ ಪತ್ರ ಬರೆದಿದ್ದ ಪುತ್ರ ಆ ಪತ್ರ ತಂದೆ ತಾಯಂದಿರ ಕೈಗೆ ತಲುಪುವುದರೊಳಗಾಗಿ ಸತ್ತು ಹೋಗಬಹುದು !

ಇಷ್ಟೊಂದು ಅಸ್ವತಂತ್ರವಾಗಿ ನಾವು ಬದುಕಿರುವವರು. ಆದುದರಿಂದ ಜೀವರು-ಜೀವಿಸುತ್ತಿರುವವರು - ಎಂದು ಕರೆಸಿಕೊಳ್ಳಲೇ ಅಯೋಗ್ಯರಾಗಿರುವವರು.

ದೇವರಾದರೂ ಸ್ವತಂತ್ರನಾಗಿ ಇರುವುದರಿಂದ ನಮ್ಮ ಬದುಕಿನಂತೆ ಅವನ ಬದುಕಿನಲ್ಲಿ ಅನಿಶ್ಚಿತತೆ ಇಲ್ಲದಿರುವುದರಿಂದ ಅವನು 'ಜೀವ' - ಇರುವವನೆಂದು ಕರೆಸಿಕೊಳ್ಳಲು ಅರ್ಹನಾಗಿರುವವನು. ಆದುದರಿಂದ ಅವನನ್ನೇ 'ಜೀವಃ' - ಎಂದು ಸ್ತುತಿಸಿರುವರು ಭೀಷ್ಮರು. ನಮ್ಮನ್ನೂ 'ಜೀವ'ರು ಎಂದು ಕರೆಯುವರಲ್ಲಾ ? ಎಂದರೆ ನಮ್ಮನ್ನು ಕರೆಯಲು ಏನಾದರೊಂದು ಹೆಸರು ಬೇಕು ; ಬೇರೆ ಹೆಸರು

ಇಲ್ಲ. ಆದ್ದರಿಂದಷ್ಟೇ ನಮ್ಮನ್ನು 'ಜೀವ' - ಎಂದು ಕರೆಯುವರು. ಯಾರೂ ಹೇಳಿಯೂ ಬಂದದ್ದಲ್ಲ ; ಯಾರೂ ಹೇಳಿಯೂ ಹೋದದ್ದಲ್ಲ. ಮತ್ತೆ ಸ್ವತಂತ್ರವಾಗಿ ಬರುವವನು ; ಹೋಗುವವನು - ಅವನೇ ಜೀವ. ಯಾರ ಹಿಡಿತದಲ್ಲಿದ್ದುಕೊಂಡು ನಾವೆಲ್ಲ ಬದುಕುತ್ತಿದ್ದೇವೆಯೋ ಅಂತಹ ದೇವರೇ ಮುಖ್ಯವಾಗಿ ಜೀವ.

**೫೧೮. ವಿನಯಿತಾ – ವಿನಯ ಗುಣವೇ ಮಡುಗಟ್ಟಿದಂತೆ ಇರುವವನು.**

ವಿವರಣೆ : ಕೆಲವು ಪುಸ್ತಕಗಳಲ್ಲಿ 'ವಿನಯಿತಾಸಾಕ್ಷೀ' - ಎಂದು ಒಂದೇ ನಾಮವಾಗಿ ಇರಬಹುದು. ಆದರೆ ಬೇರೆ ಬೇರೆ ನಾಮವಾಗಿ ಇಟ್ಟುಕೊಳ್ಳುವುದೇ ಒಳ್ಳೆಯದು.

ವಿನಯವುಳ್ಳವನು ವಿನಯೀ. ಅವನ ಧರ್ಮ ವಿನೀತನಾಗಿ ಇರುವಿಕೆ. ಶ್ರೀಕೃಷ್ಣ ವಿನಯ ಗುಣಕ್ಕೆ ಒಳಗಾಗಿಯೇ ಪಾಂಡವರ ದೂತನಾಗಿ ದುರ್ಯೋಧನನ ಮನೆಯ ಬಾಗಿಲಿಗೆ ಹೋಗುವನು. ಹೋಗುವ ಮುಂಚೆ ಯುಧಿಷ್ಠಿರಾದಿಗಳ ಅಬಿಪ್ರಾಯ ಕೇಳುವನು. ಅವರೆಲ್ಲ ಸಂಧಾನವೇ ಆಗಬಹುದೆನ್ನುವರು. ಇದು ಉಪಕ್ರಮದಲ್ಲಿ ಉಪಸಂಹಾರದಲ್ಲಿ ದ್ರೌಪದಿ ಸಂಧಾನ ಬೇಡ ಎನ್ನುವಳು. ಉಪಕ್ರಮಕ್ಕಿಂತ ಉಪಸಂಹಾರ ಪ್ರಬಲ. ಆದುದರಿಂದ ಯುಧಿಷ್ಠಿರಾದಿಗಳ ಅಭಿಪ್ರಾಯದಂತೆ ಸಂಧಾನಕ್ಕಾಗಿ ಹೋದ. ಅಲ್ಲಿ ದ್ರೌಪದಿಯ ಅಭಿಪ್ರಾಯದಂತೆ ಸಂಧಾನವನ್ನು ಮುರಿದು ಹಿಂತಿರುಗುವನು. ಹೀಗೆ ಪಾಂಡವರ ದೂತನಾಗಿ ದುಯೋಧನನಲ್ಲಿಗೆ ಕೃಷ್ಣ ಹೋಗಿರುವುದು ಅವನ ವಿನಯಕ್ಕೆ ದ್ಯೋತಕ.

ರಾಮಾವತಾರದಲ್ಲೂ ಅಂಗದನನ್ನು ರಾವಣನಲ್ಲಿಗೆ ಕೊಟ್ಟು ಕಳುಹಿಸಿ ಯುದ್ಧದ ವಿಷಯದಲ್ಲಿ ಅವನ ಅಭಿಪ್ರಾಯವನ್ನು ವಿಚಾರಿಸುವುದು ರಾಮನ ವಿನಯ ಗುಣ.

ಭೀಷ್ಮರು ನಿರ್ವಾಣ ಹೊಂದಿದರೆ ಅವರ ತಿಳುವಳಿಕೆಯೂ ನಾಶವಾಗಿ ಹೋದೀತೆಂದು ಅವರಲ್ಲಿಗೆ ಹೋಗಿ ಅವರಿಂದ ಉಪದೇಶ ಹೊರಡಿಸಿರುವುದು ; ಅವರು ಉಪದೇಶಿಸುವಾಗ 'ಮಲಗಿ ಪರಮಾದರದಿ ಪಾಡಲು ಕುಳಿತು ಕೇಳುವ.....' ಎಂದಿರುವಂತೆ ಕುಳಿತು ಕೇಳುತ್ತಿದ್ದುದು ಶ್ರೀಕೃಷ್ಣನ ವಿನಯ ಗುಣದ ಫಲ.

ಹೀಗೆ ಕೃಷ್ಣನ ವಿನಯಗುಣವನ್ನು ಮೆಲುಕು ಹಾಕುತ್ತ ಭೀಷ್ಮರು ವಿನಯ ಗುಣವೇ ಮಡುಗಟ್ಟಿದಷ್ಟೂ ವಿನಯಸಂಪನ್ನನಾಗಿರುವವನು ಅವನೆಂಬ ಅಭಿಪ್ರಾಯದಲ್ಲಿ 'ವಿನಯಿತಾ' - ಎಂದು ಸ್ತುತಿಸಿರುವರು.

**೫೧೯. ಸಾಕ್ಷೀ – ಎಲ್ಲವನ್ನೂ ತನ್ನ ಕಣ್ಣೆದುರೇ ಕಾಣುವವನು.**

ವಿವರಣೆ : ಯಾರು ಸಾಕ್ಷಾತ್ ದ್ರಷ್ಟಾರನೋ ಅವನು ಸಾಕ್ಷೀ ಎನಿಸುವನು. ಯಾರು ಘಟನೆಯನ್ನು ಕಣ್ಣಾರೆ ಕಂಡಿರುತ್ತಾನೆ ಅಂತಹವನನ್ನು ಕರೆಸಿ ಆ ಬಗ್ಗೆ ಹೇಳಿಸುವುದಕ್ಕೆ ಸಾಕ್ಷಿ ಹೇಳಿಸುವುದು ಎನ್ನಲಾಗುವುದು. ಭೀಷ್ಮರು ಅಂತಾರೆ ಕೃಷ್ಣನಲ್ಲಿ - ನೀನು 'ಸಾಕ್ಷೀ' - ನೋಡುತ್ತಿ.

ಏನನು ? ಎಲ್ಲವನ್ನೂ.
ಹೇಗೆ ? ಪ್ರತ್ಯಕ್ಷವಾಗಿ ನೋಡುತ್ತಿ.

ನಮಗಾದರೂ ಆಕಾಶ, ಗಾಳಿ ಕಾಣುವುದಿಲ್ಲ. ಅವನ್ನೂ ನೀನು ಕಾಣುವಿ. ಹಿಂದಿದ್ದು, ಮುಂದಿದ್ದು ನಮಗೆ ಕಾಣಿಸದು. ಆದರೆ ಅವನ್ನೂ ನೀನು ಕಾಣುವಿ. ಹೀಗೆ ಪ್ರತಿಯೊಂದನ್ನೂ ಕಣ್ಣ ಎದುರಿಗೇ ನೋಡುವವನು ನೀನು. ನಿನ್ನ ಕಣ್ಣು ತಪ್ಪಿಸಿ ಯಾವುದೂ ಇರಲು ಸಾಧ್ಯವೇ ಇಲ್ಲ. ನಿನಗೆ ಕಾಣಿಸದಿದ್ದದ್ದು ಯಾವುದೂ ಇಲ್ಲ. ಆದುದರಿಂದಲೇ ನೀನು 'ಸಾಕ್ಷೀ' - ಎಂದು ಭೀಷ್ಮರು ಕೃಷ್ಣನನ್ನು ಸ್ತುತಿಸುವರು.

ನಿನ್ನೆಯ ನಾಳೆಯ ಪರಿಚಯ ಸ್ವಲ್ಪ ಮಟ್ಟಿಗಾದರೂ ಬೇಕೆಂದರೆ ಭಗವಂತನನ್ನು 'ಸಾಕ್ಷೀ' - ಎಂದು ಉಪಾಸಿಸೋಣ. ಈ ಬಗೆಯ ಅರಿವು ಜ್ಯೋತಿಷ್ಕರಿಗೆ ವಿಶೇಷವಾಗಿ ಬೇಕಾಗಿರುವುದರಿಂದ ಅವರು ಭಗವಂತನನ್ನು 'ಸಾಕ್ಷೀ' - ಎಂದು ಉಪಾಸನೆ ನಡೆಸಬೇಕು.

**೫೨೦. ಮುಕುಂದಃ – * ಮೋಕ್ಷವನ್ನು ಕೊಡುವವನು.**

*** ಪಾದರಸದಂತೆ ತನ್ನನ್ನು ಎಲ್ಲೂ ಅಂಟಿಸಿಕೊಳ್ಳದವನು. ಒಮ್ಮೆ ಕೈ ಜಾರಿ ತಪ್ಪಿ ಹೋದನೆಂದರೆ ಸುಲಭದಲ್ಲಿ ಹಿಡಿಯಲಾಗದವನು.**

ವಿವರಣೆ: ಮುಕು ಎಂದರೆ ಮೋಕ್ಷ. ಅದನ್ನು ಕೊಡುವವನು ಮುಕುಂದ. ಸಂಸ್ಕೃತದ ಶೈಲಿಯ ಪ್ರಕಾರ 'ಮುಕುಂ' - ಎಂದು ಇರುವ ಅನುಸ್ವಾರ ಸಮಾಸದಲ್ಲಿ ಹೋಗಬೇಕು. ಆದರೆ ಇಲ್ಲಿ ಹೋಗದೆ 'ಮುಕುಂದ' ಎಂದೇ ಇದೆ. ಇದರ ಆಶಯ ಹೀಗಿದ್ದಿರಬಹುದು - ದೇವರು ನಮಗೆ 'ಮುಕು' ಎನಿಸುವ ಮೋಕ್ಷವನ್ನು ಅರ್ಧ ಪಾಲು ಕೊಡುವುದೆಂದಿಲ್ಲ ; ಬದಲಾಗಿ ಪೂರ್ಣವಾದ ಮುಕ್ತಿಯನ್ನೇ ಕೊಡುವನು - ಎನ್ನುವುದನ್ನು ಮಧ್ಯದಲ್ಲಿ ಪೂರ್ಣತೆಯ ಸಂಕೇತದಂತಿರುವ ಸೊನ್ನೆ ಸೂಚಿಸುತ್ತಿರಬಹುದು.

ಭಗವಂತ ಮೋಕ್ಷ ಕೊಡುವುದೆಂದರೆ ತನ್ನದ್ದನ್ನು ಏನನ್ನೂ ಕೊಡುವುದಿಲ್ಲ.

ಆದುದರಿಂದ 'ಈಗ ಮೋಕ್ಷ ಕೊಡಲು ನನ್ನಲ್ಲಿ ಇಲ್ಲ ; ನನ್ನಲ್ಲಿ ಇದ್ದಾಗ ಕೊಡುವೆನು' - ಎಂದು ದೇವರು ಹೇಳಬೇಕಾದ ಪ್ರಸಂಗವೇ ಇಲ್ಲ. ನಮ್ಮಲ್ಲಿರುವ ಸುಖವನ್ನು ನೀಡುವುದನ್ನೇ ಮೋಕ್ಷ ಕೊಡುವುದೆನ್ನಲಾಗುವುದು. ನಮ್ಮ ಸುಖಕ್ಕೆ ಪಾತ್ರೆಯೊಂದರ ಆವರಣ ಇದೆ. ಅದನ್ನು ತೆಗೆದು ನಮ್ಮ ಸುಖವನ್ನು ನಾವು ಅನುಭವಿಸುವಂತೆ ಭಗವಂತನು ಮಾಡುವನು. ಹೀಗೆ ಮೋಕ್ಷ ಕೊಡುವಲ್ಲಿ ಅರ್ಧ ಪಾಲು ಎಂದಿಲ್ಲದೆ ; ಪೂರ್ಣವಾಗಿಯೇ ಕೊಡಲಾಗುವುದು - ಎಂಬುದನ್ನೇ 'ಮುಕುಂದ' - ಎಂಬಲ್ಲಿಯ ಸೊನ್ನೆ ಸೂಚಿಸುತ್ತಿರಬಹುದು. ಈ ಸೂಚನೆಗಾಗಿಯೇ ಅದನ್ನು ಲೋಪ ಮಾಡದೆ ಹಾಗೆಯೇ ಉಳಿಸಲಾಗಿದ್ದಿರಬಹುದು. ಧನವನ್ನು ನೀಡುವವನು 'ಧನದ' ಎಂದೆನಿಸುವನು. ಆದರೆ 'ಮುಕು'ವನ್ನು ನೀಡುವವ ಮುಕುಂದನೇ ಹೊರತು 'ಮುಕುದ' ಅಲ್ಲ.

ಮುಕುಂದ ಶಬ್ದಕ್ಕೆ ಕೋಶದಲ್ಲಿ ಪಾದರಸ ಎಂಬ ಅರ್ಥವನ್ನೂ ಹೇಳಲಾಗಿದೆ. ಆ ಅರ್ಥವನ್ನು ಇಟ್ಟುಕೊಂಡಾಗಲೂ ಪಾದರಸದಂತೆ ಎಂಬ ಅರ್ಥದಲ್ಲಿ ದೇವರನ್ನು 'ಮುಕುಂದ' ಎನ್ನಬಹುದಾಗಿದೆ.

ಪಾದರಸ ಆ ಕಡೆ ಈ ಕಡೆ ಹರಿಯುವಾಗ ಎಲ್ಲೂ ತನ್ನನ್ನು ಅಂಟಿಸಿಕೊಳ್ಳುವುದಿಲ್ಲ. ನಿರ್ಲಿಪ್ತನಾದ ಭಗವಂತನೂ ಹಾಗೆಯೇ. ಎಲ್ಲೆಡೆ ಹೋಗಿ ಎಲ್ಲವನ್ನೂ ನಿರ್ವಹಿಸುತ್ತಿರುವವನಾದರೂ ಯಾವುದನ್ನೂ ತನ್ನಲ್ಲಿ ಅಂಟಿಸಿಕೊಳ್ಳುವವನಲ್ಲ.

ಅದರಂತೆ ಪಾದರಸ ಒಮ್ಮೆ ಕೈತಪ್ಪಿ ಹೋಯಿತೆಂದರೆ ಮತ್ತೆ ಥಕ್ಕನೆ ಕೈಗೆ ಸಿಗುವುದಿಲ್ಲ.ದೇವರೂ ಕೈ ಜಾರಿ ಹೋಗಿ ಬಿಟ್ಟನೆಂದರೆ ಮತ್ತೆ ಸುಲಭವಾಗಿ ದೊರಕಲಾರ. ನಾರದರು ಹೀಗೆ ತಮ್ಮ ಕೈ ಜಾರಿ ಹೋದ ದೇವರನ್ನು ಮತ್ತೆ ಹಿಡಿದು ಹಾಕುವುದಕ್ಕಾಗಿಯೇ 'ತ್ರಿಲೋಕಸಂಚಾರಿ'ಗಳಾಗಿರುವರೆನ್ನಲಾಗಿದೆ.

ಹೀಗೆ ಪಾದರಸದಂತೆ ತನ್ನನ್ನು ಎಲ್ಲೂ ಅಂಟಿಸಿಕೊಳ್ಳದವನು. ಒಮ್ಮೆ ಕೈ ಜಾರಿದರೆ ಮತ್ತೆ ಪಕ್ಕನೆ ಹಿಡಿಯಲು ಸಿಗದವನು ಎಂಬ ಅಭಿಪ್ರಾಯದಲ್ಲಿ ಪಾದರಸವನ್ನು ಹೇಳುವ ಮುಕುಂದಶಬ್ದದಿಂದಲೂ ಅವನು ವಾಚ್ಯನಾಗಬಲ್ಲನು.

**೫೨೧. ಅಮಿತವಿಕ್ರಮಃ - * ತ್ರಿವಿಕ್ರಮಾವತಾರದಲ್ಲಿ ಅಳೆಯಲಾಗದಷ್ಟು ವಿಶಿಷ್ಟಗಳಾದ ಹೆಜ್ಜೆಗಳುಳ್ಳವನು.**

*** ಅನೇಕಾನೇಕ ಉದ್ದೇಶಗಳ ಹಿನ್ನೆಲೆಯಲ್ಲಿ ಇಡಲಾಗುವ,**

**ಆದುದರಿಂದಲೇ ಪೂರ್ಣವಾಗಿ ತಿಳಿಯಲಾಗದ ಹೆಜ್ಜೆಗಳುಳ್ಳವನು.**

ವಿವರಣೆ : ವಿಕ್ರಮ-ವಿ + ಕ್ರಮ, ಅಮಿತ + ವಿಕ್ರಮ, ಅಮಿತ ವಿಕ್ರಮ. ಕ್ರಮ ಎಂದರೆ ಹೆಜ್ಜೆ. **'ಕ್ರಮು ಪಾದವಿಕ್ಷೇಪೇ'** - ಎಂಬ ಕ್ರಿಯಾಪದದಿಂದ ರೂಪುಗೊಂಡ ಶಬ್ದ ಕ್ರಮ ಎಂಬುದು. ಆಕ್ರಮಣ ಎಂದರೆ ದಂಡೆತ್ತಿ ಹೋಗುವುದು. ಒಂದು ಹೆಜ್ಜೆ ಮುಂದಿಡುವುದು ಎಂದೇ ಅರ್ಥ. ಹೀಗೆ ಕ್ರಮ ಎಂದರೆ ಹೆಜ್ಜೆ ಎಂದಾದರೆ ವಿಕ್ರಮ ಎಂದರೆ ವಿಶಿಷ್ಟವಾದ ಕ್ರಮ ದೊಡ್ಡ ಹೆಜ್ಜೆ ಎಂದರೆ - ಅಮಿತ ಅಳೆಯಲು ಆಗದಷ್ಟು ದೊಡ್ಡ ಹೆಜ್ಜೆ ಉಳ್ಳವನು. ಯಾರು ? ತ್ರಿವಿಕ್ರಮರೂಪಿ ಪರಮಾತ್ಮ.

ಭೀಷ್ಮರು ಕೃಷ್ಣನ ಪುಟ್ಟ ಹೆಜ್ಜೆಯಲ್ಲಿ ತ್ರಿವಿಕ್ರಮನ ಅಳತೆಗೆ ಸಿಗದಷ್ಟು ದೊಡ್ಡ ಹೆಜ್ಜೆಯನ್ನು ಕಾಣುತ್ತಿರುವರು.

ಹೀಗೆ ತ್ರಿವಿಕ್ರಮಾವತಾರದ ಹೆಜ್ಜೆ ಅಳತೆಗೆ ಸಿಗದದ್ದು ಎಂಬುದು 'ಅಮಿತವಿಕ್ರಮ' ಎಂಬುದಕ್ಕೆ ಒಂದು ಅರ್ಥವಾದರೆ, ಮತ್ತೊಂದು ಅರ್ಥ- ಭಗವಂತ ಯಾವುದೇ ಕಾರ್ಯದಲ್ಲಿ ಒಂದು ಹೆಜ್ಜೆ ಇಟ್ಟ ಎಂದರೆ ಅನೇಕಾನೇಕ ಪ್ರಯೋಜನಗಳ ಹಿನ್ನೆಲೆಯಲ್ಲಿ ಇಡಲಾಗುವ ಆ ಹೆಜ್ಜೆಯ ಉದ್ದೇಶ ನಮ್ಮ ಅಳತೆಗೆ ಸಿಗುವುದಿಲ್ಲ. ಭಗವಂತ ಆ ಹೆಜ್ಜೆಯನ್ನು ಯಾಕೆ ಇಟ್ಟ ? ಎಂಬುದನ್ನು ನಮ್ಮಿಂದ ವಿಚಾರ ಮಾಡಿ ತೀರ್ಮಾನ ಮಾಡುವುದಕ್ಕೆ ಆಗುವುದಿಲ್ಲ

ಭೀಷ್ಮರು ಕೃಷ್ಣನಲ್ಲಿ ನಿವೇದಿಸಿಕೊಳ್ಳುವರು - ಕೃಷ್ಣ, ಮಧುರೆಯಲ್ಲಿ ಅವತಾರ ಮಾಡಿದ ನೀನು ಹೆಜ್ಜೆ ಮುಂದಿಡುತ್ತ ಹೊರಟವ ಇಲ್ಲಿಯವರೆಗೆ ಹೆಜ್ಜೆ ಮುಂದೆ ಇಡುತ್ತ ಬಂದಿರುವಿ. ನಿನ್ನ ಜೊತೆಗೇ ಇರುವವರಿಗೂ ನಿನ್ನ ಒಂದೊಂದು ಹೆಜ್ಜೆಯ ಭಾರವೂ ಎಷ್ಟು ಎಂಬುದನ್ನು ಪೂರ್ಣವಾಗಿ ತಿಳಿಯಲು ಆಗಲಿಲ್ಲ.

ಹೆಜ್ಜೆಯನ್ನು ಅಳೆಯುವುದೆಂದರೆ ಒಂದು ಅಡಿಕೋಲು ಹಿಡಿದುಕೊಂಡು ಹೆಜ್ಜೆ ಎಷ್ಟು ಉದ್ದ ಇದೆ ಎಂದು ನೋಡುವುದಲ್ಲ ; ಮತ್ತೆ ಹೆಜ್ಜೆಯ ತೂಕ ; ಪರಿಣಾಮ, ಪ್ರಭಾವ - ಎಷ್ಟು ಗಾಢವಾದುದು ? ಹೆಜ್ಜೆಯ ಉದ್ದೇಶಗಳು, ಪ್ರಯೋಜನಗಳು - ಎಷ್ಟು ? ಯಾವುವು ? - ಎಂದೆಲ್ಲವನ್ನೂ ಪರಿಶೀಲಿಸುವುದು. 'ತೂಕದ ಮಾತು' - ಎಂದರೆ ಹೇಗೆ ಅರ್ಥಗರ್ಭಿತವಾದ ಮಾತು ಎಂಬ ಅರ್ಥವೋ, ಹಾಗೆಯೇ ಅಳತೆಗೆ ಸಿಗದ ಹೆಜ್ಜೆ ಉಳ್ಳವನೆಂದರೂ ಉಳಿದವರಿಂದ ಪೂರ್ಣವಾಗಿ ತಿಳಿಯಲಾರದಷ್ಟು ಉದ್ದೇಶ, ಅಭಿಪ್ರಾಯಗಳ ಹಿನ್ನೆಲೆಯಲ್ಲಿ ಹೆಜ್ಜೆ ಇಡುವವನೆಂದು ಅರ್ಥ.

ಒಂದು ಹೆಜ್ಜೆ ಇಟ್ಟನೆಂದರೆ ಅದರಿಂದ ಸಾವಿರಾರು ಸಜ್ಜನರಿಗೆ ಉಪಕಾರ

ಆಗಬೇಕು ; ಸಾವಿರಾರು ದುರ್ಜನರ ನಿಗ್ರಹ ಆಗಬೇಕು - ಆ ಬಗೆಯ ಹೆಜ್ಜೆಗಳನ್ನಿಡುವವನೆಂಬ ಅಭಿಪ್ರಾಯದಲ್ಲಿ ಭೀಷ್ಮರು ಕೃಷ್ಣನನ್ನು 'ಅಮಿತವಿಕ್ರಮ' - ಎಂದು ಸ್ತುತಿಸುವರು. ಶರಪಂಜರದಲ್ಲಿ ಪವಡಿಸಿರುವ ನನ್ನಲ್ಲಿಯವರೆಗೆ ಬಂದು ನನ್ನ ಮೂಲಕ ಉಪದೇಶವನ್ನು ಹೊರಡಿಸುವುದರ ಉದ್ದೇಶ 'ಯುಧಿಷ್ಠಿರನನ್ನು ಸಿಂಹಾಸನದಲ್ಲಿ ಕುಳ್ಳಿರಿಸುವುದು' - ಎಂದು ಮೇಲ್ನೋಟಕ್ಕೆ ಕಾಣುವುದು. ಆದರೆ ಆ ಉದ್ದೇಶಕ್ಕಾಗಿ ಇಲ್ಲಿಯವರೆಗೆ ಬರುವ ಅವಶ್ಯಕತೆ ಇರಲಿಲ್ಲ. ನೀನೇ ಯುಧಿಷ್ಠಿರನ ಮನಸ್ಸಿನೊಳಗೆ ಹೊಕ್ಕು ಅವನಿಗೆ ದಾರ್ಢ್ಯ ಬರುವಂತೆ ಮಾಡಬಹುದಿತ್ತು. ಆದರೆ ನನ್ನಲ್ಲಿಯ ವರೆಗೆ ಅವರನ್ನೆಲ್ಲ ಕರೆದುಕೊಂಡು ಪಾದ ಬೆಳೆಸಿದುದರ ಉದ್ದೇಶ ನನ್ನ ಜ್ಞಾನಬಂಡವಾಳವನ್ನು ಹೊರಹಾಕಿಸಬೇಕೆಂಬುದೇ ಆಗಿದೆ. ಹೀಗೆ ನೀನು ಹೆಜ್ಜೆ ಇಡುವುದರ ಉದ್ದೇಶವನ್ನು 'ಇದಮಿತ್ಥಂ' - ಎಂದು ತೀರ್ಮಾನಿಸಲು ಬಾರದಿರುವುದರಿಂದ ನೀನು 'ಅಮಿತವಿಕ್ರಮ' ಎನಿಸುವಿ - ಎಂದು ಹೊಗಳುವರು.

**೫೨೨. ಅಂಭೋನಿಧಿಃ – ಸ್ವರ್ಗಾದಿ ಲೋಕಗಳನ್ನು ದೇವಾದಿಗಳಿಗೆ ಕಾಣುವಂತೆ ಧಾರಣೆ ಮಾಡಿರುವವನು.**

**ವಿವರಣೆ:** ಅಂಭಸ್ ಎಂದರೆ ಸ್ವರ್ಗಾದಿ ಲೋಕಗಳು. ಯಾಕೆ ಸ್ವರ್ಗಾದಿ ಲೋಕಗಳು ಅಂಭಸ್ ಎನಿಸಿವೆ ? ಭೂಲೋಕ ಯಾಕೆ ಅಂಭಸ್ ಅಲ್ಲ ? 'ಅಂ' - ಎಂದರೆ ದೇವರು. ಯಾವ ವಸ್ತುವನ್ನು ಕಂಡು 'ಅ !' - ಎಂದು ಉದ್ಗಾರ ಎತ್ತುವೆವೋ ಅವನೇ ದೇವರು. ಅವನು ಎಲ್ಲದಕ್ಕಿಂತ, ಎಲ್ಲರಿಗಿಂತ ಅದ್ಭುತ. ಆದುದರಿಂದ 'ಅ' ಎನಿಸುವನು. ಅಂತಹ ಅವನನ್ನು ಯಾವಾಗಲೂ ಧರಿಸಿರುವುದರಿಂದ 'ಬಿಭರ್ತಿ' - ಅಂಭಸ್. ಸ್ವರ್ಗಾದಿ ಮೇಲಿನ ಲೋಕಗಳಲ್ಲಿ ಭಗವಂತನು ಎಲ್ಲರಿಗೆ ಕಾಣಿಸಿಕೊಳ್ಳುವಂತೆ ಇದ್ದು ಅವನ್ನು ಧಾರಣೆ ಮಾಡುವನು. ಅಂ ಬಿಭರ್ತೀತಿ ಅಂಭಸ್. ಸ್ವರ್ಗ ಲೋಕದಲ್ಲಿ ಉಪೇಂದ್ರನಾಗಿ ಇದ್ದುಕೊಂಡು, ಯಮಲೋಕದಲ್ಲಿ ರಾಮ ರೂಪದಿಂದ ಇದ್ದುಕೊಂಡು, ವರುಣ ಲೋಕದಲ್ಲಿ ಮತ್ಸ್ಯ ರೂಪದಿಂದ ...... ಹೀಗೆ ಭಗವಂತನು ಬೇರೆ ಬೇರೆ ರೂಪದಿಂದ ಅಲ್ಲಿಯ ಎಲ್ಲರಿಗೆ ಕಾಣಿಸಿಕೊಂಡೇ ಧಾರಕನಾಗಿರುವುದರಿಂದ 'ಅಂಭಸ್' - ಎನಿಸುವ ಸ್ವರ್ಗಾದಿಗಳಿಗೆ ನಿಧಿಯಂತೆ ಆಧಾರನಾಗಿರುವುದರಿಂದ 'ಅಂಭೋನಿಧಿ'- ಎನಿಸುವನು. ಭೂಲೋಕದಲ್ಲಿ ಧಾರಕನಾಗಿ ಇರುವನಾದರೂ ಕಣ್ಣಿಗೆ ಕಾಣುವಂತೆ ಇಲ್ಲದ ಪ್ರಯುಕ್ತ ಭೂಲೋಕ 'ಅಂಭಸ್' ಎನಿಸುವುದಿಲ್ಲ.

ಆದುದರಿಂದ ವಾಮನಾದಿ ರೂಪಗಳಿಂದ ಇರುವ ತನಗೆ ಧಾರಕಗಳಾಗಿದ್ದು

'ಅಂಭಸ್' ಎನಿಸಿರುವ ಸ್ವರ್ಗಾದಿ ಲೋಕಗಳು ಯಾರನ್ನು ಆಶ್ರಯಿಸಿಕೊಂಡಿರುವವೋ ಅಂತಹವನು 'ಅಂಭೋನಿಧಿ.'

ನಮ್ಮ ಶರೀರದಲ್ಲಿದ್ದುಕೊಂಡು ಭಗವಂತ ನಮಗೆ ಆಶ್ರಯನಾಗಿರುವನು. ಆದರೆ ಆ ತಿಳುವಳಿಕೆ ನಮಗೆ ಇಲ್ಲ. 'ಅಂಭೋನಿಧಿಃ' - ಎಂದು ಅವನ ಉಪಾಸನೆ ನಡೆಸಿದೆವೆಂದರೆ 'ಸದಾ ಎನ್ನ ಹೃದಯದಲ್ಲಿ ವಾಸ ಮಾಡೋ ಶ್ರೀ ಹರೇ.....' ಎಂಬ ಪ್ರಾರ್ಥನೆಗನುಗುಣವಾಗಿ ದೇವರು ನಮ್ಮ ಹೃದಯದಲ್ಲಿದ್ದುಕೊಂಡು ನಮ್ಮನ್ನು ಧರಿಸುತ್ತಿರುವನೆಂಬ ಎಚ್ಚರಿಕೆ ಸದಾ ಜಾಗೃತವಾಗಬಲ್ಲದು.

**೫೨೩. ಅನಂತಾತ್ಮಾ – * ಲೆಕ್ಕ ಮಾಡಲು ಶಕ್ಯವಿಲ್ಲದಷ್ಟು ರೂಪಗಳನ್ನು ಧರಿಸಿರುವವನು.**

*** ಇತಿಮಿತಿ ಇಲ್ಲದೆ ಎಲ್ಲೆಡೆ ಹರಡಿರುವವನು.**

ವಿವರಣೆ : ಆತ್ಮಾ ಎಂದರೆ ಶರೀರಗಳು. ಅನಂತ ಎಂದರೆ ಲೆಕ್ಕವಿಲ್ಲದಷ್ಟು. ಭಗವಂತನಿಗೆ ಎಷ್ಟು ಶರೀರಗಳು ? ಅನಂತ ಶರೀರಗಳು. ಎಣಿಸಲು ಆಗದಷ್ಟು ಶರೀರಗಳು.

**ಪರಮಾತ್ಮನೇ ಸತತಮೇಕರೂಪಿಣೇ ದಶರೂಪಿಣೇ ಶತಸಹಸ್ರರೂಪಿಣೇ |**
**ಅವಿಕಾರಿಣೇ ಸ್ಫುಟಮನಂತರೂಪಿಣೇ ಸುಖಚಿತ್‌ಸಮಸ್ತತನವೇ ನಮೋ ನಮಃ ||**

ಮೊದಲು ಭಗವಂತ ನಾರಾಯಣ ಎಂಬ ಒಂದು ರೂಪದಿಂದ ಇರುವನು.

ಆ ಮೇಲೆ ದಶಾವತಾರಗಳನ್ನು ತಾಳುವನು.

ಆ ಮೇಲೆ 'ಅಂ' 'ಅಜಃ' ಇತ್ಯಾದಿ ಐವತ್ತೊಂದು ರೂಪಗಳನ್ನು ತಾಳುವನು.

ಆ ಮೇಲೆ ನಾರಾಯಣಾದಿ ನೂರು ರೂಪಗಳನ್ನು ತಾಳುವನು.

ಹಾಗೆಯೇ ಇನ್ನೂ ಕೆಲವು ಗುಂಪು ಮಾಡಿಕೊಂಡ. ಹೀಗೆ ಒಟ್ಟು ಎಷ್ಟು ಉಂಟು? ಲೆಕ್ಕ ಇಲ್ಲ. ಆದುದರಿಂದಲೇ ಲೆಕ್ಕವಿಲ್ಲದಷ್ಟು ರೂಪಗಳನ್ನು ಧಾರಣೆ ಮಾಡಿರುವವನೇ 'ಅನಂತಾತ್ಮಾ'.

ಆತ್ಮಾ ಎಂದರೆ ಹರಡಿರುವವನು ಎಂಬ ಅರ್ಥವೂ ಇದೆ. ಎಲ್ಲಿಯವರೆಗೆ ಹರಡಿದ್ದಾನೆ ? 'ಅನಂತ' - ಇಷ್ಟರವರೆಗೆ ಎಂದು ಗಡು ಇಲ್ಲದೆ ಎಲ್ಲೆಡೆ ಹರಡಿರುವವನು. ಚತುರ್ಮುಖ, ರುದ್ರ - ಇತ್ಯಾದಿಗಳ ವ್ಯಾಪ್ತಿಗೆ ಇತಿಮಿತಿಗಳಿವೆ. ಆದರೆ ಪರಮಾತ್ಮನ ವ್ಯಾಪ್ತಿ ಇತಿಮಿತಿಗಳಿಗೆ ಒಳಗಾಗದಷ್ಟು. ಹೀಗೆ ಅನಂತ - ಇತಿಮಿತಿ ಇಲ್ಲದ 'ಆತ್ಮಾ' ಹರಡುವಿಕೆ ಉಳ್ಳವನು.

ನಮಗೆ ದೈಹಿಕವಾಗಿ ಹರಡಲು ಸಾಧ್ಯವೇ ಇಲ್ಲ. ಕೀರ್ತಿಯಿಂದಾದರೂ ಸ್ವಲ್ಪ

ಪ್ರಮಾಣದಲ್ಲಿ ಹರಡಿಕೊಳ್ಳಲು ಯತ್ನಿಸಬೇಕು. ನಮ್ಮ ಕೀರ್ತಿ ಎಷ್ಟರವರೆಗೆ ಇಲ್ಲಿ ಹಬ್ಬಿರುವುದೋ ಅಷ್ಟರವರೆಗೆ ಸ್ವರ್ಗದಲ್ಲಿ ನಮಗೆ ಸುಖ ಸಿಗುವುದೆಂಬ ವಿಚಾರ ಇದೆ. ಆದ್ದರಿಂದ ಕೀರ್ತಿಯ ಮೂಲಕ ಹರಡಿಕೊಳ್ಳಲು ಯತ್ನಿಸಬೇಕು. ಇದಕ್ಕಾಗಿ ಭಗವಂತನನ್ನು 'ಅನಂತಾತ್ಮಾ' - ಎಂಬ ನಾಮದಿಂದ ಉಪಾಸನೆ ನಡೆಸಬೇಕು.

**೫೨೪. ಮಹೋದಧಿಶಯಃ – ಶಾಸ್ತ್ರಾಂಬೋಧಿಯಲ್ಲಿ ಮುಳುಗಿರುವವನು.**

**ವಿವರಣೆ :** ಉದಧಿ ಎಂದರೆ ಸಮುದ್ರ. ಮಹೋದಧಿ ಎಂದರೆ ಪ್ರಳಯ ಕಾಲದ ಸಮುದ್ರ. ಅದರಲ್ಲಿ 'ಶಯ'- ಎಂದರೆ ಮಲಗಿಕೊಂಡಿರುವವನು.

ಯಾವಾಗಲೂ ಭಗವಂತನು ನೀರಿನಲ್ಲಿ ಪವಡಿಸಿರುವನು. ನೀರು ಎಂದರೆ ಲಕ್ಷ್ಮೀದೇವಿ. ಆದ್ದರಿಂದ ಯಾವಾಗಲೂ ಲಕ್ಷ್ಮೀದೇವಿಯಲ್ಲಿ ದೇವರು ಪವಡಿಸಿರುವನು. ಲಕ್ಷ್ಮೀದೇವಿಯಲ್ಲಿ ಪವಡಿಸಿರುವುದು ಅಂದರೆ ?

ಮುಖ್ಯಪ್ರಾಣನಿಗೆ 'ಮಾತರಿಶ್ವಾ'- ಎಂಬ ಒಂದು ಹೆಸರು ಇದೆ. ಮಾತೃಗಳು ಅಂದರೆ ಐವತ್ತೊಂದು ಅಕ್ಷರಗಳು. ಅವುಗಳ ಮೂಲಕಗಳಾದ ವಿದ್ಯೆಗಳು. ಅವುಗಳಲ್ಲಿ ಯಾವಾಗಲೂ ಆಸಕ್ತನಾಗಿರುವುದರಿಂದ ವಾಯುದೇವ 'ಮಾತರಿಶ್ವಾ' ಎನಿಸುವನು. ಅವನ ಅವತಾರರಾದ ಮಧ್ವರ ಕೈಯಲ್ಲೂ 'ಜ್ಞಾನಮುದ್ರೆ'ಯನ್ನು ತೋರಿಸುವ ಮೂಲಕ ಅವರೂ ಯಾವಾಗಲೂ ಜ್ಞಾನದಲ್ಲಿ ಮುಳುಗಿರುವವರು ಎಂದು ಚಿಂತಿಸುವೆವು. ವಾಯುದೇವರು ಯಾಕೆ ಹೀಗೆ 'ಮಾತರಿಶ್ವಾ' - ಎನಿಸುವನು ? ಅವನ ಬಿಂಬರೂಪಿ ಪರಮಾತ್ಮ 'ಮಹೋದಧಿಶಯ'ನಾಗಿರುವುದರಿಂದ ಅಂತಹವನ ಪ್ರತಿಬಿಂಬನಾದ ವಾಯುದೇವ 'ಮಾತರಿಶ್ವಾ' ಆಗಿರುವನು. ಪರಮಾತ್ಮ 'ಮಹೋದಧಿಶಯ' - ಎಂದರೆ ಪ್ರಳಯ ನೀರಿನಲ್ಲಿ ಪವಡಿಸಿದವನು. ಪ್ರಳಯದ ನೀರು - ಲಕ್ಷ್ಮೀದೇವಿ. ಅಂತಹ ಲಕ್ಷ್ಮೀದೇವಿ ವೇದ ವಿದ್ಯೆಗೆ ಮುಖ್ಯಾಭಿಮಾನಿನಿ. ಆದುದರಿಂದ ಲಕ್ಷ್ಮೀದೇವಿಯಲ್ಲಿ ಪವಡಿಸಿರುವುದೆಂದರೆ ವೇದ ವಿದ್ಯೆಯಲ್ಲಿ ಮಲಗಿರುವುದು. ಯಾವಾಗಲೂ ವೇದವಿದ್ಯೆಯಲ್ಲಿ ಮುಳುಗಿರುವುದು. ಇದರಿಂದಾಗಿ ಅಂತಹವನ ಪ್ರತಿಬಿಂಬನಾದ ವಾಯುದೇವನೂ 'ಮಾತರಿಶ್ವಾ' ಎನಿಸಿರುವನು ; ಶಾಸ್ತ್ರದಲ್ಲಿ ಮಗ್ನನಾಗಿರುವವನು.

ಹೀಗೆ ಭಗವಂತನನ್ನು ಶಾಸ್ತ್ರ ಸಮುದ್ರದಲ್ಲಿ ಪವಡಿಸಿ 'ಮಹೋದಧಿಶಯ' ಎನಿಸಿರುವವನೆಂದು ಉಪಾಸನೆ ನಡೆಸಿದ ಫಲವೋ ಎಂಬಂತೆ ಭೀಷ್ಮರು ತಾವು ಶರಪಂಜರದಲ್ಲಿ ಮಲಗಿದ್ದರೂ ಶಾಸ್ತ್ರಾರ್ಥ ಚಿಂತನೆ ನಡೆಸುತ್ತಿರುವರು.

**೫೨೫. ಅನ್ತಕಃ – * ಸಂಹಾರ ನಡೆಸುವವನು.**

*** ವೇದವ್ಯಾಸರೂಪದಿಂದ ಶಾಸ್ತ್ರಾರ್ಥಗಳಿಗೆ ನಿರ್ಣಾಯಕನಾಗಿರುವವನು.**

*** ಕೃಷ್ಣ ರೂಪದಿಂದ ಪಾಂಡವಾದಿಗಳ ಸಮಸ್ಯೆಗಳಿಗೆ ನಿರ್ಣಾಯಕನಾಗಿದ್ದವನು.**

**ವಿವರಣೆ:** ಅನ್ತಕ ಶಬ್ದಕ್ಕೆ ಮಾರಕ; ಸಂಹಾರ ನಡೆಸುವವನು ಎಂಬ ಒಂದು ಪ್ರಸಿದ್ಧ ಅರ್ಥ ಇದ್ದೇ ಇದೆ.

ಅನ್ತಕ ಶಬ್ದಕ್ಕೆ ನಿರ್ಣಾಯಕ ಎಂಬ ಮತ್ತೊಂದು ಅರ್ಥವನ್ನೂ ಪರಿಶೀಲಿಸಬಹುದಾಗಿದೆ.

ಅನ್ತ ಎಂದರೆ ಕೊನೆ ಅರ್ಥವೂ ತೀರ್ಪು ; ತೀರ್ಮಾನ ಅರ್ಥದ ಹಿನ್ನಲೆಯಲ್ಲೇ ಬಂದದ್ದು. ಇಬ್ಬರು ಜಗಳವಾಡುತ್ತಿದ್ದರೆ, ಅದನ್ನು ಕೊನೆಗೊಳಿಸಬೇಕೆಂದರೆ ತೀರ್ಮಾನ ಮಾಡಬೇಕು ಎಂದೇ ಅರ್ಥ. ‘ವೇದಾನ್ತ’ - ಶಬ್ದ ಬ್ರಹ್ಮಸೂತ್ರಗಳು ವೇದಾರ್ಥಗಳನ್ನು ನಿರ್ಣಯಿಸುವವು ಎಂಬ ಆಶಯದಲ್ಲಿಯೇ ಬಂದಿದೆ.

ವೇದಗಳಿಗೆ ಯಾವುದು ನಿಜವಾದ ಅರ್ಥ ಎಂದು ಗೊಂದಲ ಉಂಟಾದಾಗ ದೇವರು ವೇದವ್ಯಾಸ ರೂಪದಿಂದ ಬ್ರಹ್ಮಸೂತ್ರಗಳ ಮೂಲಕ ವೇದಾರ್ಥವನ್ನು ನಿರ್ಣಯಿಸಿರುವನು. ಆದುದರಿಂದ ಭಗವಂತನ ವೇದವ್ಯಾಸ ರೂಪ ಅಂತಕ.

ಶ್ರೀಕೃಷ್ಣನೂ ಎಷ್ಟೋ ಬಾರಿ ಜಗಳ ನಡೆದಾಗ ತೀರ್ಮಾನ ಮಾಡಿ ‘ಅನ್ತಕ’- ಎನಿಸಿರುವುದುಂಟು. ಸುಭದ್ರೆಯನ್ನು ಅರ್ಜುನ ಹಾರಿಸಿಕೊಂಡು ಹೋದಾಗ ಸುಭದ್ರೆಯನ್ನು ತರಬೇಕೋ ? ಬೇಡವೋ ? - ಎಂದು ಬಲರಾಮ ಮುಂತಾದ ಯಾದವರಲ್ಲಿ ಗೊಂದಲ ಉಂಟಾದಾಗ ಶ್ರೀಕೃಷ್ಣ ಸರಿಯಾದ ತೀರ್ಪು ಕೊಟ್ಟು ಅನ್ತಕನಾಗಿ ಮೆರೆದಿದ್ದ.

ವನವಾಸದ ಸಂದರ್ಭದಲ್ಲಿ ಯುಧಿಷ್ಠಿರನಿಗೆ ಭೀಮಸೇನನ ಮೂಲಕ ‘ಪೌರುಷವಾದ’ದಬಗ್ಗೆ ಉಪದೇಶ ಕೊಡಿಸಿ, ದುರ್ಯೋಧನಾದಿಗಳ ವಿರುದ್ಧ ಮುಂದೆ ಯುದ್ಧ ಮಾಡಬೇಕೋ ಬೇಡವೋ ಎಂದು ಸಂದೇಹಿಸುತ್ತಿದ್ದ ಯುಧಿಷ್ಠಿರನಿಗೆ ‘ಅನ್ತಕ’ - ನಿರ್ಣಾಯಕನಾಗಿದ್ದ. ಪ್ರಾಯಶಃ ಅದಕ್ಕಾಗಿಯೇ ಕೃಷ್ಣ ಕಾಡಿಗೆ, ಪಾಂಡವರಲ್ಲಿಗೆ ಬಂದಿದ್ದಿರಬಹುದು. ಯುಧಿಷ್ಠಿರನಿಗೆ ಯುದ್ಧದ ಬಗ್ಗೆ ಉಪದೇಶ ನೀಡಲು ಭೀಮನಿಗೆ ಸ್ಫೂರ್ತಿ ಕೊಟ್ಟಿದ್ದಿರಬಹುದು. ಹೀಗೆ ಕೃಷ್ಣನೂ

ಅನೇಕ ಪ್ರಸಂಗಗಳಲ್ಲಿ ಯಾದವರಿಗೆ, ಪಾಂಡವರಿಗೆ ‘ಅನ್ತಕ’ನಾಗಿ, ನಿರ್ಣಾಯಕನಾಗಿ ಅನುಗ್ರಹಿಸಿದ್ದನು.

ನಮ್ಮ ಎಷ್ಟೋ ಬಾರಿ ಶಾಸ್ತ್ರಾರ್ಥ ವಿಷಯದಲ್ಲಿ ಗೊಂದಲ ಉಂಟಾಗುವುದು. ಆಗ ಶಾಸ್ತ್ರಾರ್ಥ ನಿರ್ಣಾಯಕರಾಗಿ ‘ಅನ್ತಕ’ ಎನಿಸಿರುವ ಶ್ರೀವೇದವ್ಯಾಸರನ್ನು ಸ್ಮರಿಸೋಣ. ಶಾಸ್ತ್ರೀಯ ಸಮಸ್ಯೆಗೆ ಅವರು ತೀರ್ಮಾನದ ಸ್ಫೂರ್ತಿಯನ್ನು ಅನುಗ್ರಹಿಸಬಲ್ಲರು.

ವೈಯುಕ್ತಿಕ ಬದುಕಿನಲ್ಲಿ, ಸಾಮಾಜಿಕ ಜೀವನದಲ್ಲೂ ಅನೇಕ ಸಮಸ್ಯೆಗಳು ಎದುರಾದಾಗ ಪಾಂಡವ, ಯಾದವಾದಿಗಳ ಸಮಸ್ಯೆಗಳನ್ನು ಪರಿಹರಿಸಿ, ಅವರ ಪಾಲಿಗೆ ‘ಅನ್ತಕ’ ಎನಿಸಿದ್ದ ಶ್ರೀಕೃಷ್ಣನನ್ನು ಸ್ಮರಿಸೋಣ. ನಮ್ಮ ಸಮಸ್ಯೆಗಳಿಗೂ ತೀರ್ಮಾನದ ಸ್ಫೂರ್ತಿ ಆ ‘ಅನ್ತಕ’ ಕೃಷ್ಣನಿಂದ ದೊರಕಬಲ್ಲದು.

**ಅಜೋ ಮಹಾರ್ಹಃ ಸ್ವಾಭಾವ್ಯೋ ಜಿತಾಮಿತ್ರಃ ಪ್ರಮೋದನಃ |**
**ಆನಂದೋ ನಂದನೋ ನಂದಃ ಸತ್ಯಧರ್ಮಾ ತ್ರಿವಿಕ್ರಮಃ ||೫೬||**

**೫೨೬. ಅಜಃ – * ದೇವತೆಗಳ ಶತ್ರುಗಳಾದ ದೈತ್ಯರ ವಿರುದ್ಧ ಬಾಣ ಪ್ರಯೋಗ ಮಾಡುವವನು.**

*** ದೇವತೆಗಳೂ ದೈತ್ಯರೂ ಪರಸ್ಪರವಾಗಿ ಬಾಣ ಪ್ರಯೋಗ ನಡೆಸುವಂತೆ ಮಾಡುವವನು.**

**ವಿವರಣೆ :** ಅಜತಿ - ಕ್ಷಿಪತಿ ಇತಿ ಅಜಃ | ಕ್ಷಿಪತಿ ಎಂದರೆ ಬಾಣಗಳನ್ನು ಪ್ರಯೋಗಿಸುವವನು, ಶತ್ರುಗಳ ವಿರುದ್ಧ ಬಾಣ ಪ್ರಯೋಗ ನಡೆಸುವವನು. ಆ ಮೂಲಕ ಶತ್ರುಗಳ ವಿನಾಶಕ್ಕೆ ಕಾರಣನಾಗಿರುವವನು - ಅಜ.

ಕೃಷ್ಣಾವತಾರದ ಕಾಲದಲ್ಲಿ ದೇವತೆಗಳೂ ಹುಟ್ಟಿ ಬಂದಿದ್ದಾರೆ. ದೈತ್ಯರೂ ಹುಟ್ಟಿ ಬಂದಿದ್ದಾರೆ. ಅವರಿಗೆ ಇವರು ಶತ್ರುಗಳು,ಇವರಿಗೆ ಅವರು ಶತ್ರುಗಳು. ಹೀಗೆ ಪರಸ್ಪರ ಶತ್ರುಗಳಾಗಿರುವವರು ಅನ್ಯೋನ್ಯವಾಗಿ ಬಾಣ ಪ್ರಯೋಗ ನಡೆಸುವಂತೆ ಮಾಡುವನು.

ಹಾಗೆಯೇ ದೈತ್ಯರ ವಿರುದ್ಧ ದೇವತೆಗಳ ಮೂಲಕ ಬಾಣ ಪ್ರಯೋಗ ಮಾಡಿಸಿ ದೈತ್ಯರ ನಾಶಕ್ಕೆ ಕಾರಣನಾಗಿರುವವನು.

**೫೨೭. ಮಹಾರ್ಹಃ – ಮನಸ್ಸಿನ ಪ್ರಸನ್ನತೆಗೆ ಕಾರಣವಾಗುವ ಉತ್ಸವಗಳಲ್ಲಿ**

**ಪೂಜಿಸಿಕೊಳ್ಳಲು ಯೋಗ್ಯನಾಗಿರುವವನು.**

**ವಿವರಣೆ :** ಮಹ ಶಬ್ದಕ್ಕೆ ಉತ್ಸವ ಎಂಬ ಅರ್ಥ. ಅರ್ಹ ಶಬ್ದಕ್ಕೆ ಪೂಜೆಗೆ ಯೋಗ್ಯ ಎಂಬ ಅರ್ಥ. ಮನಃಪ್ರಸನ್ನತೆಗೆ ಕಾರಣವಾಗುವ ಕಾರ್ಯಕ್ರಮವನ್ನು ಉತ್ಸವ ಎನ್ನಲಾಗುವುದು. ರಥೋತ್ಸವವೇ ಆಗಬೇಕಿಲ್ಲ, ತೆಪ್ಪೋತ್ಸವವೇ ಆಗಬೇಕಿಲ್ಲ, ನಮ್ಮ ಮನೆಯಲ್ಲಿ ಉತ್ಸಾಹಕ್ಕೆ, ಮನಃಪ್ರಸನ್ನತೆಗೆ ಕಾರಣವಾದ ಏನಾದರೊಂದು ಕಾರ್ಯಕ್ರಮವನ್ನು ನಡೆಸುವೆವೆಂದರೆ ಅದೂ ಉತ್ಸವವೇ. ಇಂತಹ ಉತ್ಸವದ ಸಂದರ್ಭದಲ್ಲಿ, ಮನಸ್ಸಿಗೆ ನೆಮ್ಮದಿ ಉಂಟಾಗುವ ಪ್ರಸಂಗದಲ್ಲಿ ದೇವರನ್ನು ಮರೆಯಬಾರದು.

ಸಂಕಟ ಬರುವಾಗ ನಾವು ಅದರ ಪರಿಹಾರಕ್ಕಾಗಿ ದೇವರನ್ನು ಸ್ಮರಿಸುವೆವು.ಆದರೆ ಸಂತೋಷದಲ್ಲಿ ಮುಳುಗಿದಾಗ ದೇವರನ್ನು ಮರೆತು ಬಿಡುವುದು ಸಹಜ. ಆದರೆ ಅಂತಹ ಪ್ರಸಂಗಗಳಲ್ಲೂ ದೇವರನ್ನು ಅವಶ್ಯಕವಾಗಿ ನೆನಪಿಸಿಕೊಳ್ಳಬೇಕು. ಮಹಾರ್ಹಃ - ಮನಸ್ಸಿನ ಪ್ರಸನ್ನತೆ ತಂದು ಕೊಡತಕ್ಕ ಯಾವುದೇ ಕಾರ್ಯದಲ್ಲಿ ಮುಖ್ಯವಾಗಿ ದೇವರಿಗೇ ಪೂಜೆ ಸಲ್ಲಬೇಕು. ಆ ಮೂಲಕ ನಮಗೆ ಮಾನಸಿಕ ಪ್ರಸನ್ನತೆ ಬಂದದ್ದು ದೇವರಿಂದಾಗಿ ಎಂಬ ವಿಶ್ಲೇಷಣೆಯನ್ನು ಮಾಡಿಕೊಳ್ಳಬೇಕು. ಉತ್ಸವವನ್ನು ಆಚರಿಸುವಾಗ ಅದರಿಂದ ಮನಸ್ಸು ತುಂಬ ಪ್ರಸನ್ನವಾಗುವುದು. ಆ ಮನಸ್ಸಿನ ಪ್ರಸನ್ನತೆಯನ್ನು 'ದೇವರೇ ನಿನ್ನಿಂದಾಗಿ ನನ್ನ ಮನಸ್ಸು ಇಷ್ಟು ಪ್ರಸನ್ನವಾಗಿದೆ' - ಎಂದು ಅರ್ಪಿಸಿ, ಅವನನ್ನು ಪೂಜಿಸೋಣ. ಸಂಕಟದ ಸಂದರ್ಭದಲ್ಲಿ ಸಂಕಟ ಪರಿಹಾರಕ್ಕಾಗಿ ಅವನನ್ನು ಸ್ಮರಿಸಬೇಕಾದರೆ, ಉತ್ಸವದ ಸಂತಸದ ಸಂದರ್ಭದಲ್ಲಿ ಅಂತಹ ಸಂತಸಕ್ಕೆ ಕಾರಣನನ್ನಾಗಿ ಅವನನ್ನು ಸ್ಮರಿಸಿಕೊಂಡು ಗೌರವಿಸೋಣ. ನಾಗ, ಗಣಪತಿ, ದುರ್ಗೆ ಮುಂತಾದ ಇತರ ದೇವತೆಗಳ ಹೆಸರಲ್ಲಿ ನಡೆಯುವ ಗಣೇಶೋತ್ಸವ, ನಾಗ ಮಂಡಲ - ಮುಂತಾದ ಉತ್ಸವದ ಸಂದರ್ಭಗಳಲ್ಲೂ ಆಯಾ ದೇವತೆಗಳನ್ನಷ್ಟೇ ಪೂಜಿಸದೆ, ಆಯಾ ದೇವತೆಗಳಿಗೆ ಅಂತಹ ಪೂಜ್ಯವ್ಯಕ್ತಿತ್ವವನ್ನು ಅನುಗ್ರಹಿಸಿರುವ ದೇವರನ್ನು ಮುಖ್ಯವಾಗಿ ಪೂಜಿಸೋಣ.

**೫೨೮. ಸ್ವಾಭಾವ್ಯಃ – ಸ್ವತಂತ್ರನೆಂದು ಚೆನ್ನಾಗಿ ಭಜಿಸಲು ಯೋಗ್ಯನಾಗಿರುವವನು.**

**ವಿವರಣೆ :** ಸ್ವ + ಆ + ಭಾವ್ಯಃ - ಸ್ವಾಭಾವ್ಯಃ, ಸ್ವ ಎಂದರೆ ಸ್ವತಂತ್ರ. ಆ ಎಂದರೆ ಚೆನ್ನಾಗಿ. ಭಾವ್ಯ ಎಂದರೆ ಭಜನೀಯ. ಸ್ವತಂತ್ರತ್ವೇನ ಆ ಭಾವ್ಯಃ ಸ್ವಾಭಾವ್ಯಃ.

'ಭಾವಯಾಮಿ ರಘುರಾಮಂ......' - ಎಂಬ ಒಂದು ಹಾಡು ಇದೆ ತಾನೇ?

ಇದರಲ್ಲಿಭಾವಯಾಮಿ ಎಂದರೆ ಭಜಾಮಿ ಎಂದೇ ಅರ್ಥ.

ಆದುದರಿಂದ ಆ ಭಾವ್ಯ - ಎಂದರೆ ಚೆನ್ನಾಗಿ ಭಜನೆಗೆ ಯೋಗ್ಯನಾದವನು ದೇವರು - ಎಂಬ ಅರ್ಥ.

ದೇವರನ್ನು ಹೇಗೆ ಭಜಿಸಬೇಕು ? 'ಅದು ಕೊಡುತ್ತಿ' 'ಇದು ಕೊಡುತ್ತಿ' ಅಷ್ಟು ಕೈಗಳುಳ್ಳವ, ಲಕ್ಷ್ಮೀಪತಿ.... ಹೀಗೆಲ್ಲ ಚಿಂತನೆ ಮಾಡುವುದಕ್ಕಿಂತ ಮೊದಲು ಮಾಡಬೇಕಾದ ಚಿಂತನೆ - ದೇವರು 'ಸ್ವ' - ಸ್ವತಂತ್ರನಾಗಿರುವವನು.

'ದೇವರು' ಎಂದು ತಲೆಯಲ್ಲಿ ಬಂದಾಕ್ಷಣ 'ಸ್ವತಂತ್ರ' - ಎಂಬ ಚಿಂತನೆ ಬರಬೇಕಾದುದು.

ಭಗವಂತನ ನಾಲ್ಕು ಗುಣಗಳನ್ನು ಎಲ್ಲರೂ ಭಜಿಸಬೇಕೆಂದು ವಿಹಿತವಾದುವುಗಳಲ್ಲಿ 'ಆತ್ಮಾ' - ಎಂಬುದೂ ಒಂದು. ಅದಕ್ಕೆ 'ಸ್ವಾಮೀ' - ಎಂದು ಅರ್ಥ. ಸ್ವತಂತ್ರನಾಗಿದ್ದರೇನೇ ಅವನು ಮುಖ್ಯವಾಗಿ ಸ್ವಾಮೀ ಎನಿಸಲು ಸಾಧ್ಯ. ಆದುದರಿಂದ ಭಗವಂತನ ಆತ್ಮತ್ವಗುಣಕ್ಕೆ - ಸ್ವಾಮಿತ್ವ ಗುಣಕ್ಕೆ ಪೂರಕವಾಗಿ ಅವನ ಸ್ವಾತಂತ್ರ್ಯಗುಣವನ್ನು ಅವಶ್ಯಕವಾಗಿ ಭಜಿಸಬೇಕು. ಇತರ ಯಾವ ದೇವತೆಯೂ ಸ್ವತಂತ್ರನಾಗಿರದೆ ಅವನೊಬ್ಬನೇ ಸ್ವತಂತ್ರನಾಗಿರುವನೆಂದು ಭಜಿಸಬೇಕು.

ಹೀಗೆ ಭಜಿಸಿದಲ್ಲಿ ನಮಗೆ ನಮ್ಮ ನಮ್ಮ ಅಂತಸ್ತಿಗೆ ಅನುಗುಣವಾಗಿಯಾದರೂ ಸ್ವಾತಂತ್ರ್ಯ ಅಂದರೆ ನಮ್ಮ ಇಚ್ಛೆಗೆ, ಸಂಕಲ್ಪಕ್ಕೆ ಅನುಗುಣವಾಗಿ ನಡೆದುಕೊಳ್ಳಲು ಬೇಕಾದ ಅರ್ಹತೆ ಸಿದ್ಧಿಸೀತು.

**೫೨೯. ಜಿತಾಮಿತ್ರಃ – ತನ್ನ ಭಕ್ತರ ಹೊರಗಿನ ಹಾಗೂ ಒಳಗಿನ ಶತ್ರುಗಳನ್ನು ಗೆಲ್ಲುವವನು.**

**ವಿವರಣೆ:** ಜಿತ + ಅಮಿತ್ರಃ ಜಿತಾಮಿತ್ರಃ, ಅಮಿತ್ರರು ಅಂದರೆ ಶತ್ರುಗಳು. ಹೊರಗಿನ ಹಾಗೂ ಒಳಗಿನ ಶತ್ರುಗಳನ್ನು ಗೆದ್ದಿರುವವನು ಜಿತಾಮಿತ್ರ. ದೇವರಿಗೆ ಹೊರಗಿನಿಂದಾಗಲೀ, ಒಳಗಿನಿಂದಾಗಲೀ ಶತ್ರುಗಳು ಇಲ್ಲ. ಅವನ ಭಕ್ತರಿಗೆ ಹೊರಗಿನಿಂದಲೂ,, ಒಳಗಿನಿಂದಲೂ ಶತ್ರುಗಳಿರುವರು. ಅವರನ್ನು ಗೆಲ್ಲಲು ಭಕ್ತರಿಗೆ ಆಗುವುದಿಲ್ಲ. ಆಗ ಭಗವಂತ ತನ್ನ ಭಕ್ತರ ಅಂತಹ ಶತ್ರುಗಳನ್ನು ಗೆಲ್ಲುವನು. ಭಕ್ತರ ಪರವಾಗಿ ಹೋರಾಡುವವನು ಭಗವಂತ. ಅದರ ಗೆಲುವು ಭಕ್ತರಿಗೆ. ಅರ್ಜುನನ ಪರವಾಗಿ ಹೋರಾಡಿದ್ದು ಕೃಷ್ಣ. ಜಯ ಅರ್ಜುನನಿಗೆ. ಹೀಗೆ ಭಕ್ತರ ಹೊರಗಿನ ಹಾಗೂ ಒಳಗಿನ ಶತ್ರುಗಳನ್ನು ಗೆಲ್ಲುವ ಭಗವಂತ ಜಿತಾಮಿತ್ರ.

**೫೩೦. ಪ್ರಮೋದನಃ – ಭಕ್ತರಿಗೆ ಪ್ರಕೃಷ್ಟವಾದ, ಶ್ರೇಷ್ಠವಾದ ಆನಂದವನ್ನು ನೀಡುವವನು.**

**ವಿವರಣೆ :** 'ಜಿತಾಮಿತ್ರ' ನಾಮದಿಂದ ಸೂಚಿತವಾದಂತೆ ಒಳಗಿನ ಹೊರಗಿನ ಶತ್ರುಗಳ ಸಂಹಾರ ಆಯಿತೋ ಕೂಡಲೇ ಭಗವಂತ 'ಪ್ರಮೋದನ' ಆಗುವನು. ಅಂದರೆ ಪ್ರಕೃಷ್ಟವಾದ, ಶ್ರೇಷ್ಠವಾದ ಆನಂದವನ್ನು ನೀಡುವನು. ಆನಂದದಲ್ಲಿ ಪ್ರಕರ್ಷ, ಶ್ರೇಷ್ಠತ್ವ ಎಂದರೆ ಬಂದ ಆನಂದ ಹೋಗದಿರುವಿಕೆ, ಬಂದ ಆನಂದದಲ್ಲಿ ದುಃಖ ಸೇರದಿರುವಿಕೆ ಹಾಗೂ ಎಷ್ಟು ಆನಂದವನ್ನು ಪಡೆಯುವ ಯೋಗ್ಯತೆ ಉಂಟೋ ಅಷ್ಟು ಆನಂದವನ್ನೂ ಹೊಂದುವಿಕೆ. ಇಂತಹ ಪ್ರಕರ್ಷಗಳನ್ನು ಒಳಗೊಂಡ ಆನಂದ ವನ್ನು ನೀಡುವ ಪ್ರಯುಕ್ತ ಭಗವಂತ 'ಪ್ರಮೋದನ'.

ನಮಗೆ ಸಂಸಾರದಲ್ಲೂ ಆನಂದ ಇರುತ್ತದೆ. ಏನನ್ನೋ ತಿನ್ನುತ್ತ ಆನಂದವನ್ನು ಅನುಭವಿಸುತ್ತಿರುತ್ತೇವೆ. ಇನ್ನೂ ಬೇಕು, ಮತ್ತೂ ಬೇಕು ಎನ್ನುವಾಗ ಆ ತಿಂಡಿ ಖಾಲಿಯಾಗುವುದು. ಅದರ ಅನುಭವದ ಆನಂದ ಅಲ್ಲಿಗೇ ಕೊನೆಗೊಳ್ಳುವುದು.

ಮತ್ತೆ ಕೆಲವೊಮ್ಮೆ ತಿನ್ನುವುದರಿಂದಲೋ, ಕೇಳುವುದರಿಂದಲೋ ಆನಂದವನ್ನು ಅನುಭವಿಸುತ್ತಿರುತ್ತೇವೆ. ಕೂಡಲೇ ಕಹಿಸುದ್ದಿಯೊಂದು ಬಂದು ಅದರ ದುಃಖದ ಮಿಶ್ರಣ ಆ ಆನಂದಕ್ಕೆ ಆಗುವುದು.

ಹೀಗೆ ಸಂಸಾರದಲ್ಲಿ ಅನುಭವಿಸುವ ಸುಖ ಸಾಕಷ್ಟು ಇತಿಮಿತಿಗಳಿಗೆ ಒಳಗಾಗಿರುತ್ತದೆ. ಆದರೆ ಒಳಗಿನ ಹೊರಗಿನ ಶತ್ರುಗಳನ್ನು ಗೆದ್ದು ಭಗವಂತನ ಅನುಗ್ರಹದಿಂದ ಪಡೆಯುವ ಸುಖ ಉತ್ಕೃಷ್ಟವಾಗಿರುತ್ತದೆ, ಶ್ರೇಷ್ಠವಾಗಿರುತ್ತದೆ. ಅಂತಹ ಆನಂದವನ್ನು ಭಕ್ತರಿಗೆ ಅನುಗ್ರಹಿಸುವುದರಿಂದಲೇ ಭಗವಂತ 'ಪ್ರಮೋದನ' ಎನಿಸುವನು.

**೫೩೧. ಆನಂದಃ – ಮುಖ್ಯಪ್ರಾಣನ ಅವತಾರ ಶ್ರೀಮಧ್ವರ ಶಾಸ್ತ್ರ ಅರ್ಥವಾಗುವಂತೆ ಮಾಡುವವನು.**

**ವಿವರಣೆ :** ಆನಂ + ದಃ - ಆನಂದಃ, ಅನ ಎಂದರೆ ಮುಖ್ಯಪ್ರಾಣ. ಅಂತಹ ಮುಖ್ಯಪ್ರಾಣನಿಗೆ ಸಂಬಂಧಿಸುವಂತಹದ್ದು 'ಆನ'. ಆನಂ - ಮುಖ್ಯಪ್ರಾಣನಿಗೆ ಸಂಬಧಿಸಿದ್ದನ್ನು ದಃ - ಕೊಡುವವನು.

ಮುಖ್ಯಪ್ರಾಣ ಹನೂಮಂತನಾಗಿ ಬಂದ, ಭೀಮಸೇನನಾಗಿ ಬಂದ. ಹಾಗೆಯೇ

ಮಧ್ವಾಚಾರ್ಯರಾಗಿ ಬಂದ. ಮಧ್ವರೂಪದಲ್ಲಿ ದೇವರ ಪರಿಚಯವನ್ನು ಶಾಸ್ತ್ರದ ಮೂಲಕ ನೀಡಿರುವನು. ಹಾಗಾದರೆ ಮುಖ್ಯಪ್ರಾಣನಿಗೆ ಸಂಬಂಧಿಸಿದ್ದು, ಎಂದರೆ ಮುಖ್ಯಪ್ರಾಣ ಮಧ್ವರೂಪದಲ್ಲಿ ರಚಿಸಿರುವ ಶಾಸ್ತ್ರ. ಅದನ್ನು ದೇವರು ಕೊಡುವನು ಎಂದರೆ ಅದು ನಮಗೆ ಅರ್ಥವಾಗುವಂತೆ, ಮನವರಿಕೆ ಆಗುವಂತೆ ಅನುಗ್ರಹಿಸುವನು ಎಂದರ್ಥ.

ದೈವಾನುಗ್ರಹ ಆಗಿಲ್ಲ ಎಂದರೆ ಮಧ್ವಶಾಸ್ತ್ರವನ್ನು ಎಷ್ಟು ಓದಿದರೂ, ಅಧ್ಯಯನ ಮಾಡಿದರೂ ಅರ್ಥ ಆಗುವುದಿಲ್ಲ, ಮನವರಿಕೆ ಆಗುವುದಿಲ್ಲ. ಅಧ್ಯಯನದ ಪ್ರಾರಂಭದಲ್ಲಿ 'ಹರಿಃ ಓಮ್' ಎಂದು ಓಂಕಾರವಾಚ್ಯನನ್ನಾಗಿ ಶ್ರೀಹರಿಯನ್ನು ಸ್ಮರಿಸಿಕೊಳ್ಳುವ ಉದ್ದೇಶ, ಅವನು ಅಧ್ಯಯನದಿಂದ ಅರಿವು ಮೂಡುವಂತೆ ಅನುಗ್ರಹಿಸಲಿ ಎಂಬುದೇ.

ಹೀಗೆ ಅಧ್ಯಯನ ಮಾಡುವ, ಗ್ರಂಥಗಳು ಅರ್ಥವಾಗುವಂತೆ ಮಾಡುವವನು 'ಆನಂದ' ಎನಿಸುವ ಭಗವಂತ. ಅವು ಯಾವುದೋ ಗ್ರಂಥಗಳಾಗಿದ್ದಿರಬಾರದು. ಮುಖ್ಯಪ್ರಾಣನಿಗೆ ಸಂಬಂಧಸಿದ್ದೇ ಆಗಿದ್ದಿರಬೇಕು. ಅಂದರೆ ಪ್ರಾಮಾಣಿಕ ಗ್ರಂಥಗಳೇ ಆಗಿದ್ದಿರಬೇಕು. ಅವುಗಳು ಅಧ್ಯಯನ ಮಾಡಲ್ಪಟ್ಟರೂ ನಮಗೆ ಅರ್ಥವಾಗಿಲ್ಲ ಎಂದರೆ ಅವು ಇದ್ದರೂ ನಮ್ಮ ಪಾಲಿಗೆ ಇಲ್ಲದಂತೆಯೇ. ಆದುದರಿಂದ ಅವುಗಳನ್ನು ಭಗವಂತ ನಮಗೆ ಅರ್ಥವಾಗುವಂತೆ ಮಾಡುವನೆಂದರೆ ನಮಗೆ ಅವುಗಳನ್ನು ಕೊಟ್ಟಂತೆಯೇ. ಈ ಅಭಿಪ್ರಾಯದಲ್ಲಿಯೇ 'ಆನಂದಃ'- ಎಂದೇ ಸ್ತುತಿಸಲಾಗುವುದು.

**೫೩೨. ನಂದನಃ – ಸ್ವರೂಪ ಸುಖವನ್ನು ಅನುಭವಿಸುವಂತೆ ಮಾಡುವವನು.**

**ವಿವರಣೆ :** 'ಆನಂದ' - ಎಂಬ ನಾಮ ಸೂಚಿಸುವಂತೆ ಭಗವಂತ ಸಚ್ಛಾಸ್ತ್ರ ನಮಗೆ ಅರ್ಥವಾಗುವಂತೆ ಮಾಡುವನು. ಮುಂದೆ ಏನು ? ನಂದನಃ - ನಂದಯತೀತಿ ನಂದನಃ ನಮ್ಮನ್ನು ತೃಪ್ತಿ ಪಡಿಸುವನು.

'ಪ್ರಮೋದನಃ' - ಎಂಬ ನಾಮ ನಮ್ಮನ್ನು ಪ್ರಮೋದಕ್ಕೆ ಒಳಪಡಿಸುವನೆಂದು ತಿಳಿಸಿದರೆ, 'ನಂದನಃ' - ಎಂಬ ನಾಮ ನಮ್ಮನ್ನು ತೃಪ್ತಿ ಪಡಿಸುವನೆಂದು ತಿಳಿಸುವುದು.

ಮೇಲ್ನೋಟಕ್ಕೆ ಈ ಎರಡು ನಾಮಗಳೂ ಒಂದೇ ವಿಷಯವನ್ನು ಪ್ರತಿಪಾದಿಸುತ್ತಿರುವಂತೆ ಕಾಣಿಸುವುದು. ಆದರೆ ಸ್ವಲ್ಪ ವ್ಯತ್ಯಾಸವಿದೆ. ಕಬ್ಬಿನ ಸಿಹಿ, ದ್ರಾಕ್ಷಾ ಹಣ್ಣಿನ ಸಿಹಿ, ಹಲಸಿನ ಸಿಹಿ, ಮಾವಿನ ಸಿಹಿ - ಬೇರೆ ಬೇರೆ ಶಬ್ದದಿಂದಲೇ ಕರೆಸಿಕೊಳ್ಳಲ್ಪಡುವಂತಹದ್ದು. ಪಾಕಶಾಸ್ತ್ರದಲ್ಲಿ ಆ ಸಿಹಿಗಳಿಗೆಲ್ಲ ಬೇರೆ ಬೇರೆ ಶಬ್ದವೇ

ಇದೆ. ಆದರೆ ಅವುಗಳ ಪರಿಚಯ ನಮಗೆ ಇಲ್ಲದುದರಿಂದ ಎಲ್ಲವನ್ನೂ 'ಸಿಹಿ ಸಿಹಿ' - ಎಂದೇ ಕರೆಯುವೆವು. ಅದರಂತೆಯೇ ಸುಖದಲ್ಲೂ ಬೇರೆ ಬೇರೆ ಶಬ್ದದಿಂದ ಕರೆಸಿಕೊಳ್ಳಲ್ಪಡುವ ಬೇರೆ ಬೇರೆ ಬಗೆಯ ಸುಖ ಇದೆ. ಆದರೆ ಆ ಸೂಕ್ಷ್ಮ - ವ್ಯತ್ಯಾಸವನ್ನು ಗುರುತಿಸಲ್ಪಡಲು ನಮಗೆ ಬರದ ಪ್ರಯುಕ್ತ ಎಲ್ಲ ಸುಖವನ್ನೂ ಏನೂ ವ್ಯತ್ಯಾಸವಿಲ್ಲದೆ ಸುಖವಾಚಕ ಎಲ್ಲ ಶಬ್ದಗಳಿಂದಲೂ ವ್ಯವಹರಿಸುವೆವು.

ಯಾವುದಾದರೊಂದು ಸುದ್ದಿಯನ್ನೋ ಶಬ್ದವನ್ನೋ ಕೇಳಿದಾಗ ಆಗುವ ಸುಖವನ್ನು 'ನನಗೆ ಬಹಳ ಪ್ರಿಯವಾಯಿತು' - ಎನ್ನಬೇಕು. 'ನಾಳೆ ನಮ್ಮ ಮನೆಗೆ ಊಟಕ್ಕೆ ಬರಬೇಕು' - ಎಂದು ಊಟಕ್ಕೆ ಆಹ್ವಾನಕೊಟ್ಟ ಶಬ್ದಗಳನ್ನು ಕೇಳಿಯೇ ಖುಷಿ ಆಗುವುದು. ಆ ಖುಷಿಗೆ ಪ್ರಿಯ ಎಂದು ಹೆಸರು. ಮರುದಿನ ಊಟಕ್ಕಾಗಿ ಹೋಗಿ ಅಲ್ಲಿ ಎಲೆಯ ಎದುರು ಕುಳಿತುಕೊಳ್ಳುವನು. ಎಲೆಯಲ್ಲಿಯ ಭಕ್ಷ್ಯಭೋಜ್ಯಾದಿಗಳನ್ನು ಕಾಣುವುದರಿಂದ ಒಂದು ಬಗೆಯ ಆನಂದ ಆಗುವುದು. ಇದಕ್ಕೆ 'ಮೋದ' ಎಂದು ಹೆಸರು. 'ಗೋವಿಂದ....' - ಎಂದು ಹೇಳಿದಾಕ್ಷಣ ಎಲೆಯಲ್ಲಿಯ ಭಕ್ಷ್ಯಭೋಜ್ಯಾದಿಗಳನ್ನು ತಿನ್ನಲು ಪ್ರಾರಂಭಿಸುವನು. ಆಗ ಆಗುವ ಆನಂದಕ್ಕೆ 'ಪ್ರಮೋದ' - ಎಂಬ ಹೆಸರು. ಯಾವ ಶಬ್ದವನ್ನೂ ಕೇಳಲಿಲ್ಲ, ಯಾವ ಭಕ್ಷ್ಯವನ್ನೂ ನೋಡಲಿಲ್ಲ, ಯಾವ ತಿಂಡಿಯನ್ನೂ ತಿಂದಿಲ್ಲ. ಮತ್ತೆ ಗಡದ್ದಾಗಿ ಮಲಗಿ ಗೊರಕೆ ಹೊಡೆದು ಕ್ರಮೇಣ ನಿದ್ರಾವಸ್ಥೆಗೆ ಒಳಗಾಗುವನು. ಬೆಳಿಗ್ಗೆ ಎದ್ದು ಚೆನ್ನಾಗಿ ನಿದ್ದೆ ಬಂತು ಎನ್ನುವನು. ಹೀಗೆ ನಿದ್ರಾವಸ್ಥೆಯಲ್ಲಿ ಅನುಭವಿಸಿದ ಸುಖವೇ ಸ್ವರೂಪಸುಖ ಆಗಿದ್ದು 'ಆನಂದ' - ಎಂದು ಗುರುತಿಸಲ್ಪಡುವುದು. 'ನಂದ' - ಎಂದೂ ಕರೆಸಿಕೊಳ್ಳಲ್ಪಡುವುದು.

ಆದುದರಿಂದ 'ಆನಂದಃ' - ಎನಿಸುವ ಭಗವಂತನು ಮುಖ್ಯಪ್ರಾಣನ ಶಾಸ್ತ್ರ ಅರ್ಥವಾಗುವಂತೆ ಮಾಡಿ, ಬಳಿಕ 'ನಂದನಃ' - ಮೋಕ್ಷಾವಸ್ಥೆಯನ್ನು ಅನುಗ್ರಹಿಸಿ ಶುದ್ಧವಾದ ಸುಖ ಸಿಗುವಂತೆ ಮಾಡುವನು. ಸ್ವರೂಪ ಸುಖವನ್ನು ಅನುಭವಿಸುವಂತೆ ಮಾಡುವನು.

**೫೩೩. ನನ್ದಃ – ಯಾವಾಗಲೂ ಸ್ವರೂಪ ಸುಖವನ್ನು ಅನುಭವಿಸುತ್ತಿರುವನು.**

**ವಿವರಣೆ:** ಸ್ವಯಂ ಯಾವಾಗಲೂ ಸ್ವರೂಪ ಸುಖವನ್ನು ಅನುಭವಿಸುತ್ತಿರುವವನು ನಂದಃ. ನಮಗೆ ಶುದ್ಧವಾದ ಸುಖವನ್ನು ದೇವರು ನೀಡುವನೆಂದರೆ ಅವನಲ್ಲಿ ಶುದ್ಧವಾದ ಸುಖ ಇರಬೇಕು ತಾನೇ ? ಹೌದು, ಅವನಲ್ಲೂ ಶುದ್ಧ ಸುಖ ಇದ್ದೇ ಇದೆ ಎನ್ನುವುದು - 'ನನ್ದ'- ಎಂಬ ನಾಮ.

ಭೀಷ್ಮರು ಕೃಷ್ಣನಲ್ಲಿ ನಿವೇದಿಸಿಕೊಳ್ಳುವರು ಕೃಷ್ಣ ನೀನು 'ಆನಂದ' - ಎನಿಸಿ ಮುಖ್ಯಪ್ರಾಣನ ಶಾಸ್ತ್ರ ಅರ್ಥವಾಗುವಂತೆ ಅನುಗ್ರಹಿಸುವಿ. ಬಳಿಕ ಆ ಶಾಸ್ತ್ರದ ಅನುಸಂಧಾನದಿಂದಾಗಿ ನಮಗೆ ಶುದ್ಧ ಆನಂದವನ್ನು ನೀಡಿ ನಂದನ ಎನಿಸುವಿ. ಅಂತಹ ಆನಂದವನ್ನು ಯಾವಾಗಲೂ ಹೊಂದಿದ್ದು ನೀನು 'ನನ್ದ' ಆಗಿರುವಿ.

**೫೩೪. ಸತ್ಯಧರ್ಮಾ – ನಮ್ಮ ಪಾಂಚಭೌತಿಕ ಶರೀರವನ್ನು ತನ್ನ ಹಿಡಿತದಲ್ಲಿ ಇಟ್ಟು ಕೊಂಡಿರುವವನು.**

**ವಿವರಣೆ :** 'ನಂದನ' - ನಾಮದಿಂದ ಸೂಚಿತವಾದಂತೆ ಸ್ವರೂಪ ಸುಖವನ್ನು ಅನುಭವಿಸಬೇಕಾದರೆ ನಾವೇನು ಮಾಡಬೇಕು ? - ಎಂದರೆ 'ಸತ್ಯಧರ್ಮಾ'- ಪಂಚಭೂತಗಳಿಂದ ನಿರ್ಮಿತವಾದ ಶರೀರವನ್ನು ನಮ್ಮ ನಮ್ಮ ಹತೋಟಿಯಲ್ಲಿ ಇಟ್ಟು ಕೊಳ್ಳಬೇಕು.

ಸತ್ + ತ್ಯ + ಸತ್ತ್ಯ. ಕಣ್ಣಿಗೆ ಕಾಣಿಸುವ ಮಣ್ಣು, ನೀರು, ಬೆಂಕಿ - ಸತ್. ಕಣ್ಣಿಗೆ ಕಾಣಿಸದ ಆಕಾಶ, ಗಾಳಿ ತ್ಯ. ಹಾಗಾದರೆ ಸತ್ತ್ಯ ಎಂದರೆ ಪಂಚಭೂತಗಳಿಂದ ನಿರ್ಮಿತ ಶರೀರ. ಅಂತಹ ಪಾಂಚ ಭೌತಿಕ ಶರೀರವನ್ನು ಧಾರಣೆ ಮಾಡಿರುವುದರಿಂದ ಭಗವಂತ ಸತ್ಯಧರ್ಮಾ. ಶಾಸ್ತ್ರದ ವಿಷಯಗಳನ್ನು ಶರೀರದಲ್ಲಿ ತುಂಬಿಸುವುದಗೋಸ್ಕರ ನಮ್ಮ ಪಾಂಚಭೌತಿಕ ಶರೀರವನ್ನು ತನ್ನ ಹಿಡಿತದಲ್ಲಿ ಇಟ್ಟುಕೊಂಡಿರುವವನು. ಅಂತಹ 'ಸತ್ಯಧರ್ಮಾ' ಎನಿಸುವ ಅವನ ಅನುಗ್ರಹದಿಂದ ನಾವೂ ನಮ್ಮ ಶರೀರವನ್ನು ನಮ್ಮ ಹತೋಟಿಯಲ್ಲಿ ಇಟ್ಟುಕೊಂಡೆವೆಂದರೆ ಭಗವಂತ 'ಆನಂದ' ಆಗಿ ಸಚ್ಛಾಸ್ತ್ರವನ್ನು ನಮಗೆ ನೀಡುವನು.

**೫೩೫. ತ್ರಿವಿಕ್ರಮಃ – ಮೂರು ವೇದಗಳೇ ಮುಂತಾದ ಮೂರರ ಪ್ರತಿಯೊಂದು ಸಮೂಹವನ್ನೂ ಮೆಟ್ಟಿ ನಿಂತಿರುವವನು.**

**ವಿವರಣೆ :** ತ್ರಿ - ಮೂರನ್ನು ವಿ - ವಿಶೇಷವಾಗಿ ಕ್ರಮಃ - ಅತಿಕ್ರಮಿಸಿದವನು. ಯಾವುದು ಮೂರು? ಮೂರು ಕಾಲಗಳು, ಮೂರು ಲೋಕಗಳು, ಮೂರು ಗುಣಗಳು, ಮೂರು ವೇದಗಳು - ಹೀಗೆ ಮೂರು ಅಂತ ಏನೇನು ಇದೆಯೋ ಅವೆಲ್ಲವನ್ನೂ ಅತಿಕ್ರಮಿಸಿದವನು, ಅಂದರೆ ಮೆಟ್ಟಿ ನಿಂತವನು. ಮೂರು ವೇದಗಳೂ ಭಗವಂತನನ್ನು ಹೊಗಳಿ ಹೊಗಳಿ 'ಯತೋ ವಾಚೋ ನಿವರ್ತಂತೇ.....' ಎಂದಿರುವಂತೆ ಅವನ ಗುಣ ಮಹಿಮೆಗಳನ್ನು ಪೂರ್ಣವಾಗಿ ಹೇಳಲಾಗದೆ ಹಿಂತಿರುಗಿರುವವು.

ಕಾಲಕ್ಕೆ ಸಂಬಧಿಸುವ ವಿಕಾರಗಳಾದ ಬಾಲ್ಯ, ಯೌವನ, ವೃದ್ಧಾಪ್ಯಾದಿಗಳು ಇಲ್ಲದವನಾಗಿದ್ದು ಮೂರು ಕಾಲದಲ್ಲೂ ಒಂದೇ ರೀತಿಯಾಗಿ ಇರುವುದರಿಂದ ಮೂರು ಕಾಲಗಳನ್ನೂ ಮೆಟ್ಟಿನಿಂತವನು.

ಪ್ರಕೃತಿಯ ಸತ್ವ, ರಜಸ್, ತಮಸ್ ಗುಣಗಳ ಪ್ರಭಾವಕ್ಕೆ ಒಳಗಾದವನು.

ಹೀಗೆ 'ಮೂರು' ಗಳಿಗೆ ಸಂಬಂಧಿಸುವ ಪ್ರತಿಯೊಂದನ್ನೂ ಮೆಟ್ಟಿನಿಂತಿರುವುದರಿಂದ ಭಗವಂತ ಶುದ್ಧವಾದ ಸುಖವನ್ನು ಅನುಭವಿಸುತ್ತ 'ನಂದ' ಎನಿಸಿರುವನು. ಆನಂದ ತೀರ್ಥರ ಶಾಸ್ತ್ರದ ತಿಳುವಳಿಕೆಯನ್ನು ನಮಗೆ ನೀಡಿ, ನಮಗೂ ಶುದ್ಧ ಆನಂದವನ್ನು ಉಣ್ಣಿಸುವ ಮೂಲಕ 'ನಂದನ'ನಾಗಿ ನಮಗೆ ಅನುಗ್ರಹಿಸುತ್ತಿರುವನು.

**ಮಹರ್ಷಿಃ ಕಪಿಲಾಚಾರ್ಯಃ ಕೃತಜ್ಞೋ ಮೇದಿನೀಪತಿಃ |**
**ತ್ರಿಪದಸ್ತ್ರಿದಶಾಧ್ಯಕ್ಷೋ ಮಹಾಶೃಂಗಃ ಕೃತಾಂತಕೃತ್ || ೫೭ ||**

**೫೩೬. ಮಹರ್ಷಿಃ – ಎಲ್ಲವನ್ನೂ ಬಲ್ಲ ಅತ್ಯಂತ ದೊಡ್ಡ ಋಷಿ.**

**ವಿವರಣೆ :** ಮಹಾನ್ ಋಷಿಃ - ಮಹರ್ಷಿಃ, ಮಹಾನ್ - ಎಂದರೆ ದೊಡ್ಡ. ವೇದವ್ಯಾಸರೊಬ್ಬರೇ ಋಷಿ. ವಿಶ್ವಾಮಿತ್ರಾದಿಗಳು ವ್ಯಾಸರ ಪರಂಪರೆಯಲ್ಲಿ ಬಂದಿರುವುದರಿಂದಷ್ಟೇ ಋಷಿಗಳೆನಿಸಿರುವರು.

ಯಾಕೆ ವೇದವ್ಯಾಸರೊಬ್ಬರೇ ಋಷಿ ?

'ಋಷ ಜ್ಞಾನೇ ' - ಎಂಬ ಕ್ರಿಯಾಪದದಿಂದ ರೂಪುಗೊಂಡ ಋಷಿ ಎಂದರೆ ಯಾರ ತಿಳುವಳಿಕೆಗೆ ಎಲ್ಲವೂ ವಿಷಯವಾಗುವುದೋ ಅಂತಹವರು. ವಸಿಷ್ಠಾದಿ ಋಷಿಗಳ ತಿಳುವಳಿಕೆಗೆ ಎಲ್ಲವೂ ವಿಷಯವಾಗಿದೆ ಎಂದು ಹೇಳಲು ಬರುವುದಿಲ್ಲ. ಅವರೇ ತಮ್ಮ ತಿಳುವಳಿಕೆಗೆ ಎಲ್ಲವೂ ವಿಷಯವಾಗುವುದಿಲ್ಲ- ಎಂದೇ ಒಪ್ಪಿಕೊಂಡಿರುವರು. ಋಷಿಗಳಲ್ಲೆ ಶ್ರೇಷ್ಠರಾದ ವಸಿಷ್ಠರೇ ಎಲ್ಲವನ್ನೂ ತಿಳಿದುಕೊಂಡಿಲ್ಲ ಎಂದ ಮೇಲೆ ಉಳಿದ ಋಷಿಗಳಿಗೆ ಎಲ್ಲದರ ತಿಳುವಳಿಕೆ ಇಲ್ಲ ಎಂಬುದು ಸ್ಪಷ್ಟ.

ಆದುದರಿಂದ ಎಲ್ಲವನ್ನೂ ತಿಳಿದುಕೊಂಡ ಒಬ್ಬರೇ ಒಬ್ಬರೆಂದರೆ ವೇದವ್ಯಾಸರು ಮಾತ್ರ.

ಆದ್ದರಿಂದ 'ಮಹರ್ಷಿ' 'ಏಕರ್ಷಿ' 'ಶ್ರೇಷ್ಠ ಋಷಿ' 'ದೊಡ್ಡ ಋಷಿ' - ಎಂದರೆ ವೇದವ್ಯಾಸರು.

ಭೀಷ್ಮರು ಎದುರಲ್ಲಿರುವ ಕೃಷ್ಣನನ್ನು ಕುರಿತು ಹೇಳುವರು - ಆ ವೇದವ್ಯಾಸರು ಬೇರೆ ಅಲ್ಲ, ನೀನು ಬೇರೆ ಅಲ್ಲ. ಅಂದ ಮೇಲೆ ವೇದವ್ಯಾಸರಂತೆ ನೀನೂ ಮಹರ್ಷಿ. ನಿನಗೆ ನಾನು ಇದುವರೆಗೆ ಏನು ಹೇಳಿದೆ ಎಂಬುದಷ್ಟೇ ಅಲ್ಲದೆ ಮುಂದೆ ಏನೇನು ಹೇಳಲಿರುವೆನು ಎಂಬುದೂ ತಿಳಿದಿದೆ. ಆದ್ದರಿಂದ ನೀನು ಮಹರ್ಷಿ ಎಂದು ಸ್ತುತಿಸುವರು.

**೫೩೭. ಕಪಿಲಾಚಾರ್ಯಃ – ತಾನು ತನ್ನ ಸ್ವರೂಪ ಸುಖವನ್ನು ಅನುಭವಿಸುವವನು ಹಾಗೂ ಉಳಿದ ಯೋಗ್ಯರಿಗೆ ಅವರವರ ಸ್ವರೂಪ ಸುಖವನ್ನು ನೀಡುವವನು. ಹೀಗೆ ತಾನು ಅನುಭವಿಸಿ ಉಳಿದವರಿಗೆ ಅನುಭವಿಸುವಂತೆ ಮಾಡುವವನು.**

**ವಿವರಣೆ :** ಕ + ಪಿ + ಲ ಆಚಾರ್ಯಃ ಕಪಿಲಾಚಾರ್ಯಃ. ಆಚಾರ್ಯ ಎಂದು ಯಾರನ್ನು ಕರೆಯುವುದು? '....ಆಚಾರಾನ್ ಗ್ರಾಹಯತ್ಯುತ | ಸ್ವಯಮಾಚರತೇ ಯಸ್ತು ತಮಾಚಾರ್ಯಂ ಪ್ರಚಕ್ಷತೇ' - ಎಂದಿರುವಂತೆ ತಾನು ತಿಳಿದು ಅದನ್ನು ಆಚರಣೆಯಲ್ಲಿ ಅಳವಡಿಸಿಕೊಂಡು, ಉಳಿದವರಿಗೆ ಆಚರಿಸಲು ಉಪದೇಶಿಸುವವನೇ ಆಚಾರ್ಯ.

ಭೀಷ್ಮರು ಕೃಷ್ಣನನ್ನು ಕಪಿಲಾಚಾರ್ಯ ಎಂದು ಕರೆಯುವರು. ಕ - ಎಂದರೆ ಸುಖ. ಅದನ್ನು ಪಿಬತಿ - ಅನುಭವಿಸುತ್ತಿರುವವನೇ ಕಪಿ, ತಾನು ಅನುಭವಿಸುವುದರ ಜೊತೆಗೆ ಯೋಗ್ಯ ಜೀವರಿಗೆ ಅನುಭವಿಸುವಂತೆ ಸುಖವನ್ನು ನೀಡುವನು - ಲಾತೀತಿ ಲಃ ಕಪಿಲಃ ತನ್ನ ಸ್ವರೂಪ ಸುಖವನ್ನು ಯಾವಾಗಲೂ ಅನುಭವಿಸುತ್ತಿರುವನು. ಉಳಿದ ಯೋಗ್ಯರಿಗೆ ಪ್ರಕೃತಿಯ ಆವರಣವನ್ನು ತೆಗೆದು ಅವರವರ ಸ್ವರೂಪ ಸುಖವನ್ನು ಅನುಭವಿಸುವಂತೆ ಮಾಡುವನು. ಆದುದರಿಂದ ದೇವರು ಕಪಿಲ. ಇದನ್ನೇ ಆಚಾರ್ಯ ಶಬ್ದವೂ ಧ್ವನಿಸುವುದು. ತಾನು ಆಚರಿಸುವನು, ಸುಖವನ್ನು ಅನುಭವಿಸುವನು, ಉಳಿದವರೂ ಆಚರಿಸುವಂತೆ, ಸುಖವನ್ನು ಅನುಭವಿಸುವಂತೆ ಮಾಡುವವನು - ಎಂಬುದಾಗಿ.

ಆದುದರಿಂದ ದೇವರಿಗೆ 'ಕಪಿಲಾಚಾರ್ಯ' - ಎಂಬ ಹೆಸರು.

**೫೩೮. ಕೃತಜ್ಞಃ – ಸ್ವಲ್ಪ ಉಪಕಾರವನ್ನೂ ನೆನಪಿನಲ್ಲಿ ಇಟ್ಟುಕೊಳ್ಳುವವನು.**

**ವಿವರಣೆ :** ಕೃತಜ್ಞ ಶಬ್ದ ಹಿಂದೆ ಒಮ್ಮೆ ಬಂದಿದೆ. ಕೃತಂ ಜಾನಾತೀತಿ ಕೃತಜ್ಞಃ - ತಾನು ಏನೇನನ್ನು ಮಾಡಿರುವನೋ ಅವೆಲ್ಲವನ್ನೂ ತಿಳಿದಿರುವವನು - ಎಂಬ ಅರ್ಥವನ್ನು ಕಂಡಿದ್ದೇವೆ.

ಈಗ ಮತ್ತೊಂದು ಅರ್ಥವನ್ನು ನೋಡೋಣ.

ನಾವು ಏನಾದರೂ ಸ್ವಲ್ಪ ಉಪಕಾರ ಮಾಡಿದ್ದರೂ ಅದನ್ನು ಚೆನ್ನಾಗಿ ತಿಳಿದಿರುವವನು, ನೆನಪಿನಲ್ಲಿಟ್ಟುಕೊಂಡಿರುವವನು.

ಸಂಚಾರದಲ್ಲಿ ನಾವು ಯಾರ್ಯಾರದ್ದೋ ಮನೆಗೆ ಹೋಗಿರ್ತೇವೆ. ಅವರನ್ನೆಲ್ಲ ನೆನಪಿಸಿಕೊಳ್ಳಲು ಸಾಧ್ಯವೇ ? ಕೊನೆಗೆ ಅವರೇ ಸಮಾಧಾನಿಸಿಕೊಳ್ಳುವರು - ನಮಗೆಲ್ಲ ನೀವೊಬ್ಬರಾದರೆ ನಿಮಗೆ ನಮ್ಮಂತಹ ಹತ್ತಾರು ಭಕ್ತರು, ಅಭಿಮಾನಿಗಳು. ಅವರೆಲ್ಲ ರನ್ನು ನೀವು ಹೇಗೆ ತಾನೇ ನೆನಪಿನಲ್ಲಿಟ್ಟುಕೊಳ್ಳಲು ಸಾಧ್ಯ ?

ನಮ್ಮ ನಿಮ್ಮ ಸ್ಥಿತಿ ಹೀಗಾದರೆ ದೇವರದ್ದು ಹಾಗಲ್ಲ. ಅಷ್ಟು ದೊಡ್ಡವನಾದ ದೇವ ನಮ್ಮಿಂದ ಎಷ್ಟು ಪುಟ್ಟ ಉಪಕಾರ ಸಂದರೂ ಅದನ್ನು ಮರೆಯದೆ ನೆನಪಿನಲ್ಲಿಟ್ಟುಕೊಳ್ಳುವನು. ಆದ್ದರಿಂದ ಅವನು 'ಕೃತಜ್ಞ'.

ಭೀಷ್ಮರು ಕೃಷ್ಣನಲ್ಲಿ ತಿಳಿಸುವರು -'ನಾನು ಹತ್ತು ದಿನಗಳಷ್ಟೇ ಯುದ್ಧ ನಡೆಸಿದರೂ ಅಷ್ಟನ್ನೂ ನೆನಪಿನಲ್ಲಿಟ್ಟುಕೊಂಡು, ಅಷ್ಟಕ್ಕೆ ಫಲ ಕೊಡುವುದಕ್ಕೋ ಎಂಬಂತೆ ನಾನು ಪವಡಿಸಿರುವಲ್ಲಿಗೆ ಬಂದಿರುವಿ'- ಎಂದು.

**೫೩೯. ಮೇದಿನೀಪತಿಃ – ಮಧುಕೈಟಭರ ಮೇದಸ್ಸಿನಿಂದ ನಿರ್ಮಿತವಾದ ಭೂಮಿಗೆ ಒಡೆಯನಾಗಿರುವವನು.**

**ವಿವರಣೆ :** ಮೇದಿನೀ ಎಂದರೆ ಭೂಮಿ. ಭೂಮಿಗೆ ಕ್ಷಮಾ, ಧರಿತ್ರೀ - ಮುಂತಾದ ಹೆಸರುಗಳು ಬರಲು ಹೇಗೆ ಬೇರೆ ಬೇರೆ ನಿರ್ವಚನವಿರುವುದೋ ಹಾಗೆ ಮೇದಿನೀ ಎಂಬ ಹೆಸರು ಭೂಮಿಗೆ ಬರುವುದಕ್ಕೂ ಒಂದು ಹಿನ್ನೆಲೆ ಇದೆ. ಮಧುಕೈಟಭರು ಭಗವಂತನ ಕಿವಿಯಿಂದ ಹುಟ್ಟಿಕೊಂಡ ಆದಿದೈತ್ಯರು. 'ಕರ್ಣಪುಟಾದ್ ವಿನಿಃಸೃತೌ...' ಅವರನ್ನು ಭಗವಂತನು ಹಯಗ್ರೀವ ರೂಪದಿಂದ ಸಂಹರಿಸಿ ಅವರ ಮೇದಸ್ಸು ಎಂಬ ಧಾತುವಿನಿಂದ ಈ ಭೂಮಿಯನ್ನು ನಿರ್ಮಿಸಿರುವನು. 'ಅದ್ಭ್ಯಃ ಪೃಥಿವೀ....' ಎಂದಿರುವಂತೆ ಪೃಥಿವಿಯ ಸೃಷ್ಟಿ ನೀರಿನಿಂದ ಆಗಿರುವಂತಹದ್ದು. ಅಂತಹ ನೀರಿಗೆ ಮೇದಸ್ಸನ್ನೂ ಸೇರಿಸಿ ರಚಿಸಲಾಗಿದೆಯಾದುದರಿಂದ ಭೂಮಿ 'ಮೇದಿನೀ' ಎನಿಸಿದೆ. ಅದಕ್ಕೆ ಪತಿ ಆಗಿರುವವನು 'ಮೇದಿನೀ ಪತಿ'.

ಕರ್ಣದಿಂದ ಹುಟ್ಟಿಕೊಂಡ ಮಧುಕೈಟಭರ ಧ್ವಂಸ - ಎಂದರೆ ಕರ್ಣದಿಂದ ಕೇಳಲಾಗುವ ಕೆಟ್ಟ ವಿಚಾರಗಳ ಪರಿಹಾರ. ಗಣಪತಿಗೆ ದೊಡ್ಡ ಕಿವಿಗಳನ್ನು ಕೊಟ್ಟಿರುವುದೂ ಕಿವಿಗೆ ಬಿದ್ದ ಶಬ್ದಗಳನ್ನು 'ಗೇರಿ ಗೇರಿ' ಒಳ್ಳೆಯ ಶಬ್ದಗಳನ್ನಷ್ಟೇ ಒಳಗೆ ಸ್ವೀಕರಿಸಬೇಕು. ಮೂವತ್ತೆರಡು ಶಾರೀರಿಕ ಲಕ್ಷಣಗಳಲ್ಲಿ ಕಿವಿಗಳು

ದೊಡ್ಡದಾಗಿದ್ದಿರಬೇಕೆಂದಿರುವುದೂ ಪ್ರಾಯಶಃ ಈ ಉದ್ದೇಶಕ್ಕಾಗಿಯೇ. ದೊಡ್ಡ ಕಿವಿಗಳಿಂದ ಸಂಗ್ರಹಿಸಲ್ಪಡುವ ಶಬ್ದಗಳಲ್ಲಿ ‘ಗೇರಿ ಗೇರಿ’ ಒಳ್ಳೆಯ ಶಬ್ದಗಳನ್ನಷ್ಟೇ ಒಳಗೆ ಕಳುಹಿಸಿ ಕೊಡುವಂತಾಗಬೇಕು.

ಹೀಗೆ ‘ಮೇದಿನೀ’ ಶಬ್ದ ಭಗವಂತನ ಕಿವಿಯಿಂದ ಹುಟ್ಟಿದ ಮಧುಕೈಟಭರ ಧ್ವಂಸವನ್ನು ನೆನಪಿಸಿ ಕಿವಿಗಳಿಂದ ಒಳ್ಳೆಯ ಶಬ್ದಗಳನ್ನಷ್ಟೇ ಸ್ವೀಕರಿಸಬೇಕೆಂಬ ಧ್ವನಿಯನ್ನು ಹೊರಡಿಸುವುದು.

**೫೪೦. ತ್ರಿಪದಃ – * ವಿಶ್ವ, ತೆಜಸ, ಪ್ರಾಜ್ಞಎಂಬ ಮೂರು ನಾಮಗಳುಳ್ಳವನಾಗಿ ದೇಹದ ಕಣ್ಣು, ಕಂಠ, ಹೃದಯ ಎಂಬ ಮೂರು ಸ್ಥಾನಗಳನ್ನು ಹೊಂದಿರುವವನು.**

*** ಶ್ವೇತದ್ವೀಪ ಅನಂತಾಸನ ಹಾಗೂ ವೈಕುಂಠ ಎಂಬ ಮೂರು ಸ್ಥಾನಗಳುಳ್ಳವನು**

*** ಅಚ್ಯುತ ಅನಂತ ಗೋವಿಂದ ಎಂಬ ಮೂರು ಹೆಸರುಗಳುಳ್ಳವನು.**

**ವಿವರಣೆ:** ಮೂರು ಪದಗಳುಳ್ಳವನೇ ತ್ರಿಪದ. ಪದ ಎಂದರೆ ಸ್ಥಾನ ಎಂಬ ಅರ್ಥವೂ, ಹೆಸರು ಎಂಬ ಅರ್ಥವೂ ಇದೆ.

ಶ್ವೇತದ್ವೀಪ, ಅನಂತಾಸನ ಹಾಗೂ ವೈಕುಂಠ ಎಂಬ ಮೂರು ಸ್ಥಾನಗಳುಳ್ಳವನು ಪರಮಾತ್ಮ. ಹಾಗೆಯೇ ಈ ಪಿಂಡಾಂಡದಲ್ಲಿ ಕಣ್ಣು, ಕಂಠ ಹಾಗೂ ಹೃದಯ ಎಂಬ ಮೂರು ಸ್ಥಾನಗಳುಳ್ಳವನು. ವಿಶ್ವನಾಮಕ ಭಗವಂತ ಕಣ್ಣಿನಲ್ಲಿ ಎಚ್ಚರಿಕೆಯ ಅವಸ್ಥೆಯನ್ನು ನಿಯಮಿಸುತ್ತ ಇರುವನು. ತೈಜಸನಾಮಕ ಭಗವಂತ ಸ್ವಪ್ನಾವಸ್ಥೆಯನ್ನು ನಿಯಮಿಸುತ್ತ ಕಂಠದಲ್ಲಿ ಇರುವನು. ಪ್ರಾಜ್ಞನಾಮಕ ಭಗವಂತ ನಿದ್ರಾವಸ್ಥೆಯನ್ನು ನಿಯಮಿಸುತ್ತ. ಹೃದಯದಲ್ಲಿ ಇರುವನು. ಹೀಗೆ ಒಬ್ಬನೇ ಭಗವಂತ ಮೂರು ರೂಪಗಳಿಂದ ಮೂರು ಸ್ಥಳಗಳಲ್ಲಿದ್ದು ಮೂರು ಅವಸ್ಥೆಗಳನ್ನು ನಿಯಮಿಸುತ್ತ ಮೂರು ಕಾಲಗಳಲ್ಲೂ ಕಾಪಾಡಿಕೊಂಡು ಇರುವನು.

ದೇವರು ವಿಶ್ವನಾಮಕನಾಗಿ ಕಣ್ಣಿನಲ್ಲಿದ್ದು ಹೊರಗಿನ ಜಗತ್ತನ್ನು ತೋರಿಸುವನು. ಅದನ್ನು ನೋಡಿ ನೋಡಿ ಜೀವ ದಣಿದ ಎಂದರೆ ಅವನನ್ನು ಕಂಠಕ್ಕೆ ಕರೆದೊಯ್ದು ಅಲ್ಲಿ ತೈಜಸನಾಮಕ ರೂಪದೊಂದಿಗೆ ತಾನು ಐಕ್ಯ ಹೊಂದಿ, ತೈಜಸರೂಪದಿಂದ ಜೀವನಿಗೆ ಸ್ವಪ್ನ ಜಗತ್ತನ್ನು ತೋರಿಸುವನು. ಎಚ್ಚರ ಜಗತ್ತಿನಲ್ಲಿ ಅನುಭವಿಸಲು ಅಶಕ್ಯವಾದ ಎಷ್ಟೋ ಸಂಗತಿಗಳನ್ನು ಸ್ವಪ್ನದಲ್ಲಿ ತೋರಿಸುವನು. ಅಲ್ಲಿಂದ ಹೃದಯಕ್ಕೆ ಕರೆದೊಯ್ದು ಅಲ್ಲಿ ಪ್ರಾಜ್ಞನಾಮಕ ರೂಪದೊಂದಿಗೆ ಐಕ್ಯ ಹೊಂದಿ ಜೀವನಿಗೆ ಗಾಢವಾದ ನಿದ್ದೆಯನ್ನು ಕೊಡುವನು. ಇದು ವಿಶ್ವ, ತೈಜಸ

ಹಾಗೂ ಪ್ರಾಜ್ಞ ಎಂಬ ತ್ರಿಪದಗಳುಳ್ಳ - ಮೂರು ಹೆಸರುಗಳುಳ್ಳ ಭಗವಂತನು. ಕಣ್ಣು, ಕಂಠ ಹಾಗೂ ಹೃದಯ ಎಂಬ ತ್ರಿಪದಗಳುಳ್ಳವನಾಗಿ, ಮೂರು ಸ್ಥಾನಗಳುಳ್ಳವನಾಗಿ ಮೂರು ಕಾಲಗಳಲ್ಲೂ ತ್ರಿವಿಧ ಜೀವರನ್ನೂ ಸಂರಕ್ಷಿಸುವ ಪರಿ.

ಮತ್ತೊಂದು ಬಗೆಯ 'ತ್ರಿಪದ'- ಅಚ್ಯುತ ಅನಂತ ಹಾಗೂ ಗೋವಿಂದ ಎಂಬ ಮೂರು ಹೆಸರುಗಳುಳ್ಳವನು. ಜಪಾದಿಗಳಲ್ಲಿ ತ್ರಿಕರಣಗಳಿಗೆ ಸಂಬಂಧಿಸುವ ಸಕಲ ಲೋಪ, ದೊಷಗಳ ಪರಿಹಾರಕ್ಕಾಗಿ ಪ್ರಾಯಶ್ಚಿತ್ತ ರೂಪದಲ್ಲಿ ಪಠಿಸಲಾಗುವ ಈ ಮೂರು ನಾಮಗಳು ವಾತ ಪಿತ್ತ ಕಫ ಎಂಬ ಮೂರು ಧಾತುಗಳ ಏರು ಪೇರಿನಿಂದಾಗಿ ಸಂಭವಿಸುವ ರೋಗ ಪರಿಹಾರಕಗಳೂ ಆಗಿವೆ. 'ಅಚ್ಯುತಾನಂತ......' ಎಂಬ ಪದ್ಯದಲ್ಲಿಶ್ರೀ ವೇದವ್ಯಾಸರು ಶಪಥಪೂರ್ವಕವಾಗಿ 'ಸತ್ಯಂ ಸತ್ಯಂ ವದಾಮ್ಯಹಮ್' - ಎಂದು ಉದ್ಘೋಷಿಸಿರುವರು.

**೫೪೧. ತ್ರಿದಶಾಧ್ಯಕ್ಷಃ – ಮೂರನೆಯದ್ದಾದ ಯೌವನಾವಸ್ಥೆಯಲ್ಲಿಯೇ ಇರುವ ದೇವತೆಗಳಲ್ಲಿ ವಿಶೇಷವಾಗಿ ವ್ಯಾಪಿಸಿರುವವನು.**

**ವಿವರಣೆ :** ಬಾಲ್ಯ, ಕೌಮಾರ, ಯೌವನ - ಈ ಮೂರು ದಶೆಗಳು. ಇವುಗಳಲ್ಲಿ ದೇವತೆಗಳು ಯಾವಾಗಲೂ ಯೌವನಾವಸ್ಥೆಯಲ್ಲಿಯೇ ಇರುವವರು. ಆದುದರಿಂದ ತ್ರಿ - ಮೂರನೆಯ ದಶೆ - ಯೌವನಾವಸ್ಥೆ ಸರ್ವದಾ ಉಳ್ಳ ದೇವತೆಗಳು ತ್ರಿದಶರು. ಅವರಲ್ಲಿ 'ಅಧಿ' ಚೆನ್ನಾಗಿ 'ಅಕ್ಷಃ' ವ್ಯಾಪಿಸಿರುವವನು. ದೇವತೆಗಳಲ್ಲಿ ಭಗವಂತನ ಸನ್ನಿಧಾನವಿರುವಷ್ಟು ನಮ್ಮಲ್ಲಿ ದೇವರ ಸನ್ನಿಧಾನ ಇಲ್ಲ.

ನಮ್ಮಲ್ಲಿ ದೋಷಗಳು ಇರುವುದರಿಂದ ದೇವರ ಸನ್ನಿಧಾನ ಕಡಿಮ್ಮೆ. ದೇವತೆಗಳು ಆದಷ್ಟು ದೋಷರಹಿತವಾಗಿರುವುದರಿಂದ ಅವರಲ್ಲಿ ಸನ್ನಿಧಾನ ಹೆಚ್ಚು.

ಭೀಷ್ಮರು ಹೇಳ್ತಾರೆ - ಕೃಷ್ಣ ನನ್ನಲ್ಲಿರುವ ನಿನ್ನ ಸನ್ನಿಧಾನಕ್ಕಿಂತ ಭೀಮಸೇನನಲ್ಲಿ, ಅರ್ಜುನನಲ್ಲಿ, ಧರ್ಮರಾಜನಲ್ಲಿ, ನಕುಲ ಸಹದೇವರಲ್ಲಿ ನಿನ್ನ ಸನ್ನಿಧಾನ ಹೆಚ್ಚು. ಯಾಕೆಂದರೆ ಅವರೆಲ್ಲ ನನ್ನಕ್ಕಿಂತ ಎತ್ತರದ ದೇವತೆಗಳು. ಮೂರನೆಯದಾಗ ಯೌವನವನ್ನೇ ಯಾವಾಗಲೂ ಹೊಂದಿರುವ ದೇವತೆಗಳಲ್ಲಿ 'ಅಧಿ' ವಿಶೇಷವಾಗಿ ಅಕ್ಷಃ - ವ್ಯಾಪಿಸಿರುವವನು. ಆದುದರಿಂದಲೇ ನಮ್ಮಲ್ಲಿ ದೇವರ ಜೊತೆಗೆ ದೇವತೆಗಳ ಪೂಜೆಯೂ ವಿಹಿತವಾಗಿದೆ. ದೇವತೆಗಳನ್ನು ಬಿಟ್ಟು ನಾರಾಯಣನನ್ನು ಪೂಜಿಸಿದರೆ ನಾರಾಯಣ ತೃಪ್ತಿ ಪಡುವುದಿಲ್ಲ. ಆದ್ದರಿಂದ ದೇವತೆಗಳ ಜೊತೆಗೆ ನಾರಾಯಣನ ಪೂಜೆ ನಡೆಯಬೇಕು.

**೫೪೨. ಮಹಾಶೃಂಗಃ – ಸತ್ಕಾರ್ಯಕ್ಕೆ ಬರುವ ವಿಘ್ನಗಳನ್ನು ಸೀಳಿ, ಪರಿಹರಿಸುವವನು.**

ವಿವರಣೆ : ಶೃಂಗ ಎಂದರೆ ಕೋಡು. ದೊಡ್ಡ ಕೋಡು ಉಳ್ಳವನೇ 'ಮಹಾಶೃಂಗ'. 'ಶೃಂಗ' - ಎಂಬ ಹೆಸರು ಕೋಡಿಗೆ ಯಾಕೆ ? ಶೃಣಾತೀತಿ ಶೃಂಗಂ - ತೂರಿಕೊಂಡು, ಸೀಳಿಕೊಂಡು ಬರುವಂತಹದ್ದೆಂದು ಅರ್ಥ. ಆಕಳಿಗೆ ಮೊದಲು ಕಾಲು, ಬಾಲ, ಕಿವಿ - ಇತ್ಯಾದಿ ಉಳಿದೆಲ್ಲ ಅಂಗಾಗಂಗಳು ಇರುವವು. ಕೋಡು ಬರುವ ಜಾಗ ಖಾಲಿ ಇರುತ್ತದೆ. ಆ ಮೇಲೆ ಸೀಳಿಕೊಂಡು ಬರುವುದು. ಆದ್ದರಿಂದಲೇ ಅದು ಶೃಂಗ ಎನಿಸಿದೆ. ಭಗವಂತ ನಮಗೆ ನಿಮಗೆ ಒಂದು ಜಾಗವನ್ನು ಮೀಸಲಿರಿಸುವನು. ಆ ಜಾಗಕ್ಕೆ ಬರಲು ಯಾರಾದರೂ ತೊಂದರೆ ಮಾಡಲು ಬಂದರೆ ಅವರ ವಿಷಯದಲ್ಲಿ ದೊಡ್ಡ ಶೃಂಗದಂತೆ, ನಡೆದುಕೊಳ್ಳುವನು. ಅಂದರೆ ಅವರನ್ನು ಆ ಕಡೆ ಈ ಕಡೆ ತಳ್ಳಿ ಹಾಕುವನು. ರಾಜಾಂಗಣದಲ್ಲಿ ಸಂಜೆಯ ಉಪನ್ಯಾಸಕ್ಕೆ ಬರಬೇಕೆಂದು ಸಂಕಲ್ಪಿಸಿದ್ದೆವು. ಅದೇ ಅವಧಿಗೆ ಏನೋ ತೊಂದರೆ ಬಂತು. ದೇವರನ್ನು ಮಹಾಶೃಂಗ ಎಂದು ಉಪಾಸನೆ ಮಾಡೋಣ. ದೇವರು ಆ ತೊಂದರೆಯನ್ನು ಕೋಡಿನಂತೆ ಆಚೆಈಚೆ ಸರಿಸಿ ನಮಗೆ ಅನುಕೂಲತೆಯನ್ನು ಕಲ್ಪಿಸಿಕೊಡುವನು.

ನಾವು ಏನಾದರೂ ಒಳ್ಳೆಯ ಕೆಲಸ ಮಾಡಲು ತೊಡಗಿದಾಗ ವಿಘ್ನಗಳು ಬಂದರೆ ಅವುಗಳನ್ನು ಶೃಂಗದಂತೆ, ಸೀಳಿ ಆಚೆ ಈಚೆ ಸರಿಸಿ, ನಮಗೆ ಆ ಕೆಲಸ ಮಾಡಲು ಸೌಕರ್ಯವನ್ನು ಒದಗಿಸಿಕೊಡುವನು. ಆದ್ದರಿಂದ ಸತ್ಕಾರ್ಯಕ್ಕೆ ಬರತಕ್ಕ ವಿಘ್ನಗಳನ್ನು ಪರಿಹರಿಸಿಕೊಡುವವನು ಎಂಬುದು 'ಮಹಾಶೃಂಗ' ನಾಮದ ತಾತ್ಪರ್ಯ.

**೫೪೩. ಕೃತಾಂತಕೃತ್ – ತನ್ನ ಸಾಕ್ಷಾತ್ಕಾರದಿಂದ ಕರ್ಮಗಳ ನಾಶವನ್ನು ಮಾಡುವವನು.**

ವಿವರಣೆ : ಕೃತ - ನಾವು ಮಾಡಿದ್ದನ್ನು, ಅಂತ - ಅದಕ್ಕೆ ನಾಶವನ್ನು ಕೃತ್ - ಮಾಡುವವನು. ನಾವು ಕರ್ಮಗಳನ್ನು ಮಾಡ್ತಾ ಮಾಡ್ತಾ ಹೋಗುವೆವು. ಅವುಗಳಲ್ಲಿ ಒಳ್ಳೆಯ ಕರ್ಮಗಳೂ ಕೆಟ್ಟ ಕರ್ಮಗಳೂ ಸೇರಿಕೊಂಡಿರುವವು. ಇಷ್ಟೆಲ್ಲ ಕರ್ಮಗಳನ್ನು ಅನುಭವಿಸಬೇಕಾ ! ಎಂದನಿಸುವುದು. ಆಗ ದೇವರ ತಿಳುವಳಿಕೆ ಪಡೆದು, ಸಾಕ್ಷಾತ್ಕಾರವನ್ನು ಹೊಂದಿದೆವೆಂದರೆ **'ತದಧಿಗಮ ಉತ್ತರಪೂರ್ವಾಘಯೋರಶ್ಲೇಷವಿನಾಶೌ'** ಎಂದಿರುವಂತೆ ನಮ್ಮ ಚೀಲದಲ್ಲಿ ಸಂಚಿತಗಳಾದ ಕರ್ಮಗಳನ್ನೆಲ್ಲ ಸುಟ್ಟು ಹಾಕುವನು. **'ತೂಲದೊಳ್**

**ಅಗ್ನಿಯಂತೆ.....'** ಎಷ್ಟೇ ದೊಡ್ಡ ಹತ್ತಿಯ ರಾಶಿಯಿದ್ದರೂ ಅದು ಒಂದು ಕಿಡಿ ಅಗ್ನಿಯಿಂದ ಹೇಗೆ ಸುಟ್ಟು ಭಸ್ಮವಾಗಬಲ್ಲದೋ ಹಾಗೆ. **'ಜ್ಞಾನಾಗ್ನಿಃ ಸರ್ವಕರ್ಮಾಣಿ ಭಸ್ಮಸಾತ್ ಕುರುತೇऽರ್ಜುನ.....'** ಎಂದಿರುವಂತೆ ಭಗವಂತನ ಸಾಕ್ಷಾತ್ಕಾರವೆಂಬ ಅಗ್ನಿ ಸುಟ್ಟು ಹಾಕಬಲ್ಲದು.

ಸಾಕ್ಷಾತ್ಕಾರವನ್ನು ಪಡೆಯದಿದ್ದರೂ ಅದಕ್ಕಾಗಿ ಯತ್ನಿಸುತ್ತಿರುತ್ತ, 'ಕೊಂಚ ಮಾಡೋ ಪ್ರಾರಬ್ಧವಾ...' - ಎಂದು ಬೇಡಿಕೊಂಡರೆ ಭಗವಂತ ಕಣ್ಣಿಗೆ ಬರಬೇಕಾದ ಆಪತ್ತನ್ನು ಕಣ್ಣಿನ ತುದಿಗೆ ಬರುವಂತೆ ಮಾಡಿ ಪಾರು ಮಾಡುವನು.

ಆದುದರಿಂದ ಅವನನ್ನು 'ಕೃತಾಂತಕೃತ್' - ಕೃತ - ಮಾಡಲ್ಪಟ್ಟ ಕರ್ಮಗಳ ಅಂತಕೃತ್ - ನಾಶ ಮಾಡುವವನು - ಎಂದು ಸ್ತುತಿಸಲಾಗುವುದು.

**ಮಹಾವರಾಹೋ ಗೋವಿಂದಃ ಸುಷೇಣಃ ಕನಕಾಂಗದೀ |**
**ಗುಹ್ಯೋ ಗಭೀರೋ ಗಹನೋ ಗುಪ್ತಶ್ಚಕ್ರಗದಾಧರಃ ||೫೮||**

**೫೪೪. ಮಹಾವರಾಹಃ – * ಶ್ರೇಷ್ಠವಾದ ಹಂದಿ.**
*** ಗೌರವಾರ್ಹರಾದ ಕೆಳಮಟ್ಟದ ಭಕ್ತರನ್ನೂ ಕೈಬಿಡದವನು.**

ವಿವರಣೆ : ಶ್ರೇಷ್ಠವಾದ ಹಂದಿ ಎಂಬ ಒಂದು ಅರ್ಥ ಇದ್ದೇ ಇದೆ. ಹಂದಿಗಾದರೂ ವರಾಹ ಎಂಬ ಹೆಸರು ಯಾಕೆ ಬಂತು ? ವರಾನ್ ಆಹಂತೀತಿ ವರಾಹಃ, ಉತ್ತಮ ವಸ್ತುಗಳನ್ನೆಲ್ಲ ಹಾಳುಗೆಡುಹಿ ಬಿಡುವುದು ; ಅದಕ್ಕಾಗಿ ಹಂದಿ ವರಾಹ ಎನಿಸಿದೆ. ನಾವು ಗೆಡ್ಡೆಗೆಣಸುಗಳನ್ನು ಬೆಳೆದಾಗ ಹಂದಿ ಬಂದು ತನ್ನ ಮೂತಿಯಿಂದ ಪೂರ್ತಿ ಹಾಳು ಮಾಡಿ ಹೋಗುವುದನ್ನು ಕಂಡಿದ್ದೇವೆ. ಭಗವಂತನಾದರೂ ವರಾಹ ರೂಪದಿಂದ ಹಿರಣ್ಯಾಕ್ಷನನ್ನು ಕೊಂದದ್ದನ್ನು ನೋಡಿದ್ದೇವೆ.

ಇನ್ನೊಂದು ಅರ್ಥ - ಮಹ + ಅವರ + ಅಹ - ಮಹಾವರಾಹ ಎಂದು ರೂಪುಗೊಳ್ಳುವುದು. ಭಗವಂತನ ಭಕ್ತರಲ್ಲಿ ಮೂರು ಪ್ರಭೇದಗಳಿವೆ. ಉತ್ತಮ ಭಕ್ತರು ದೇವತೆಗಳು. ಮಧ್ಯಮ ಭಕ್ತರು ಋಷಿಗಳು. ಅಧಮ ಭಕ್ತರು - ಮನುಷ್ಯರು. ಹೀಗೆ ಈ ಮೂರು ವಿಧದ ಭಕ್ತರಲ್ಲಿ ಅವರ - ಕೆಳಮಟ್ಟದ ಭಕ್ತರೂ - 'ಮಹ' - ಪೂಜಾರ್ಹರು ; ಗೌರವಾರ್ಹರು. ಯಾಕೆಂದರೆ ಭಗವದ್ ಭಕ್ತರಾದುದರಿಂದ. ಶ್ರೀಮಧ್ವರು ಸಂದೇಶ ನೀಡಿರುವರು - **'ಆದರಸ್ತತ್ರ ಕರ್ತವ್ಯಃ ಯತ್ರ ಭಕ್ತಿರ್ಹರೇರ್ವರಾ.......'** ಭಗವದ್‌ಭಕ್ತಿ ಇತ್ತೆಂದರೆ ಅವನು ಇತರ ಅಂಶಗಳಿಂದ ಅತ್ಯಂತ ನಿಕೃಷ್ಟನಾಗಿದ್ದರೂ ಅವನಲ್ಲಿ ಆದರ ಮಾಡಬೇಕು ಎಂದು.

ಆದುದರಿಂದ ಅವರ ಭಕ್ತರಾದರೂ ಮಹ - ಪೂಜ್ಯರು ; ಗೌರವಾರ್ಹರು. ಅಂತಹ ಭಕ್ತರನ್ನು 'ಅಹ' - ಭಗವಂತನು ದೂರ ಮಾಡುವುದಿಲ್ಲ. ಹ ಎಂದರೆ ಹೇಯ - ತ್ಯಾಜ್ಯ ; ಅಹ ಎಂದರೆ ಅಹೇಯ ; ಅತ್ಯಾಜ್ಯ. ದೂರ ಮಾಡುವುದಿಲ್ಲ ಎಂದರ್ಥ. ಆದುದರಿಂದ ಭಗವಂತ 'ಮಹಾವರಾಹ'. ಹೀಗೆ ಅವನ ಭಕ್ತವಾತ್ಸಲ್ಯವನ್ನು ಎತ್ತಿ ತೋರಿಸುವ ನಾಮ ಇದಾಗಿದೆ.

ಶ್ರೀ ವಾದಿರಾಜ ಸ್ವಾಮಿಗಳು ಭಗವಂತನ ಈ ಬಗೆಯ ಭಕ್ತವಾತ್ಸಲ್ಯವನ್ನು ಹೀಗೆ ಸ್ತುತಿಸಿರುವರು - **'ಕ್ಷಿತ್ಯಾಂ ಅತ್ಯಲ್ಪಭೃತ್ಯೇಷ್ವಪಿ ಕುಜನಕೃತೌ-ದ್ಧತ್ಯಭೂತ್ಯಾಜಕಾಯ'** ಭೂಮಿಯಲ್ಲಿರುವ ಭಗವಂತನ ಅತ್ಯಂತ ಕೆಳಮಟ್ಟದ ಭಕ್ತರ ಬಗ್ಗೆಯೂ ಯಾರಾದರೂ ಕುಜನರು ತೊಂದರೆ ಮಾಡಿದರೆಂದರೆ ಅಂತಹವರ 'ಭೂತ್ಯಾಜಕಾಯ' ಉಚ್ಚಾಟನೆಯನ್ನೇ ನಡೆಸಿ ಬಿಡುವಷ್ಟು ಭಕ್ತವತ್ಸಲನಾಗಿರುವವನು ಭಗವಂತ.

ಅಶೋಕವನವನ್ನು ಪುಡಿಗೈದ ಹನುಮಂತನನ್ನು ರಾವಣನ ಎದುರು ನಿಲ್ಲಿಸಿದಾಗ, ರಾವಣ ಹನುಮಂತನನ್ನು ಯಾರು ? - ಎಂದು ವಿಚಾರಿಸುವನು. ಆಗ ಹನೂಮಂತ ತಾನು ಸುಗ್ರೀವನ ಸೇವಕ ಎಂದು ತನ್ನನ್ನು ಪರಿಚಯಿಸಿಕೊಳ್ಳುತ್ತ **'ಮತ್ತಃ ಪ್ರತ್ಯವರಃ ಕಶ್ಚಿತ್ ನಾಸ್ತಿ ಸುಗ್ರೀವಸನ್ನಿಧೌ'** ಸುಗ್ರೀವನ ಬಳಿಯಲ್ಲಿರುವ ಸೇವಕರಲೆಲ್ಲ ಅತ್ಯಂತ ಕೆಳಗಿನವನು ನಾನು. ನನಗಿಂತಲೂ ಕೆಗಿನ ವ್ಯಕ್ತಿ ಮತ್ತೊಬ್ಬನಿಲ್ಲ - ಎನ್ನುವನು.

ಭಗವಂತನ ಭಕ್ತರು ಎಂದು ಹೇಳಿಕೊಳ್ಳುವಾಗಲೂ ಹೀಗೆಯೇ ತಮ್ಮನ್ನು ಅತ್ಯಂತ ಕೆಳಮಟ್ಟದ ಭಕ್ತರನ್ನಾಗಿ ಪರಿಚಯಿಸಿಕೊಳ್ಳಬೇಕು. ವಿನಯವನ್ನು ತೋರಿಸಿಕೊಳ್ಳುವುದು ಒಂದು ಉದ್ದೇಶವಾದರೆ, ತಾನು ಭಗವಂತನ ಭಕತಿಯನ್ನು ಅಳವಡಿಸಿಕೊಂಡುದು ಸಾಲದು - ಎಂಬ ಭಾವನೆ ಪ್ರಬಲವಾಗಿ ಇರಬೇಕು - ಎಂಬುದು ಮತ್ತೊಂದು ಉದ್ದೇಶ.

ಹೀಗೆ ತಾನು ಅತ್ಯಂತ ಕೆಳಗಿನ ಭಕ್ತನಾದರೂ, ತನ್ನಲ್ಲಿರುವ ಭಗವದ್ ಭಕ್ತಿಯ ಪ್ರಭಾವದಿಂದಾಗಿ 'ಮಹ' - ಪೂಜ್ಯನಾಗಿದ್ದು, ಅಂತಹ ತನ್ನನ್ನು ಭಗವಂತನು 'ಅಹಃ' ಕೈ ಬಿಡುವುದಿಲ್ಲ - ಆದುದರಿಂದ ಭಗವಂತನು 'ಮಹಾವರಾಹ'. ಈ ಅರ್ಥದಲ್ಲಿ ಭಗವಂತನನ್ನು 'ಮಹಾವರಾಹ' - ಎಂದು ಉಪಾಸನೆ ನಡೆಸಿದಲ್ಲಿ ತನ್ನನ್ನು ಜೀವನದಲ್ಲಿ ಯಾರೂ ಕೇಳುವವರಿಲ್ಲ ಎಂದು ಯಾವಾಗಲೂ ದುಃಖಿಸಬೇಕಾದ ಪ್ರಸಂಗವೇ ಒದಗುವುದಿಲ್ಲ.

**೫೪೫. ಗೋವಿಂದಃ – ಸೂರ್ಯಮಂಡಲವನ್ನು ತನ್ನ ಪ್ರತಿಮೆಯನ್ನಾಗಿ ಹೊಂದಿರುವವನು.**

ವಿವರಣೆ : ಗೋ ಎಂದರೆ ಸೂರ್ಯ. ಸೂರ್ಯನಲ್ಲಿ ನಾವು ಸೂರ್ಯ ನಮಸ್ಕಾರದ ಮೂಲಕವೋ, ಗಾಯತ್ರ್ಯಾದಿ ಮಂತ್ರಗಳಿಂದಲೋ ದೇವರ ಉಪಾಸನೆ ಮಾಡಬೇಕು.

ನಮಗೆ ದೈಹಿಕವಾಗಿ ಹಾಗೂ ಮಾನಸಿಕವಾಗಿ ಆರೋಗ್ಯ ಅಭಿವೃದ್ಧಿ ಆಗುವುದಕ್ಕೋಸ್ಕರ ಸೂರ್ಯನಲ್ಲಿ ದೇವರ ಉಪಾಸನೆ ಮಾಡಬೇಕು.

ಆದುದರಿಂದ ಸೂರ್ಯನನ್ನು ತನ್ನ ಪ್ರತಿಮೆಯನ್ನಾಗಿ ಹೊಂದಿ, ಅವನ ಮೂಲಕ ಬೆಳಕನ್ನು ಕೊಡುವನು ಎಂಬುದು 'ಗೋವಿಂದ' ಹೆಸರಿನ ಅರ್ಥ. ಸೂರ್ಯನ ಮಂಡಲ ಜಡ. ಜಡವಾದರೂ ಅಂತಹ ಸೂರ್ಯ ಮಂಡಲ ಅಷ್ಟು ಬೆಳಕನ್ನು ಕೊಡುತ್ತಿರುವುದು - ಅಲ್ಲಿ ದೇವರು ಇರುವುದರಿಂದಾಗಿ.

**'ಧ್ಯೇಯಃ ಸದಾ ಸವಿತೃಮಂಡಲಮಧ್ಯವರ್ತೀ ನಾರಾಯಣಃ** - ಸೂರ್ಯಮಂಡಲದ ಮಧ್ಯದಲ್ಲಿ ನಾರಾಯಣನೆನಿಸಿ ಯಾವಾಗಲೂ ಇರುವವನನ್ನಾಗಿ ಧ್ಯಾನಿಸಬೇಕು.

**ಸರಸಿಜಾಸನಸನ್ನಿವಿಷ್ಟಃ** - ಪದ್ಮಾಸನ ಹಾಕಿ ಕುಳಿತಿರುವವನು.

**ಕೇಯೂರವಾನ್ ಮಕರಕುಂಡಲವಾನ್** -

ತೋಳ್ಬಳೆಗಳು, ಕಿವಿಗೆ ಮೊಸಳೆಯಾಕಾರದ ಕುಂಡಲಗಳು.

**ಕಿರೀಟೀ ಹಾರೀ ಹಿರಣ್ಮಯವಪುಃ** - ತಲೆಯಲ್ಲಿ ಕಿರೀಟ, ಕೊರಳಲ್ಲಿ ಹಾರ ಇವನ್ನೆಲ್ಲ ಧರಿಸಿಕೊಂಡು ಚಿನ್ನದ ಬಣ್ಣದ ನಾರಾಯಣ

**ಧೃತಶಂಖಚಕ್ರಃ** - ಶಂಖಚಕ್ರಧಾರಿಯಾಗಿ ಇರುವವನೆಂಬುದಾಗಿ ಚಿಂತಿಸಬೇಕು.

ಈ ರೀತಿಯಾಗಿ ಸೂರ್ಯನಾರಾಯಣನನ್ನು ಸೂರ್ಯ ಮಂಡಲದಲ್ಲಿ ಧ್ಯಾನ ಮಾಡಿದೆವೆಂದರೆ ದೈಹಿಕ ಹಾಗೂ ಮಾನಸಿಕ ಆರೋಗ್ಯ ಸಿದ್ಧಿಸುವುದು.

ಸೂರ್ಯ ಮಂಡಲವನ್ನು ತನ್ನ ಪ್ರತಿಮೆಯನ್ನಾಗಿ ಹೊಂದಿರುವವನು, ಅಂತಹ ಸೂರ್ಯಮಂಡಲದ ಮೂಲಕ ತನ್ನ ಪ್ರಕಾಶಿಸುವ ಸಾಮರ್ಥ್ಯವನ್ನು ತೋರುವವನು. ಹಾಗೂ ಸೂರ್ಯಮಂಡಲದಲ್ಲಿರುವ ತನ್ನನ್ನು ಉಪಾಸನೆ ಮಾಡುವವರಿಗೆ ಮಾನಸಿಕ ಹಾಗೂ ದೈಹಿಕ ಎಂಬ ಎರಡು ಬಗೆಯ ಆರೋಗ್ಯವನ್ನೂ ಹೊಂದಿಸುವವನೇ 'ಗೋವಿಂದ'.

**೫೪೬. ಸುಷೇಣಃ – ಒಳ್ಳೆಯ ಸೇನೆವುಳ್ಳವನು.**

**ವಿವರಣೆ :** ಸೇನೆಯೇ - ಷೇಣ ಎಂದಾಗಿದೆ. ಆದುದರಿಂದ ಒಳ್ಳೆಯ ಸೈನ್ಯವುಳ್ಳವನೇ ಸುಷೇಣ.

ಮಠದ ಸ್ವಾಮಿಗಳೂ ಹೊರಡುವಾಗ ಸೇನೆ ಇರುವುದು. ಆದರೆ ಎಲ್ಲಿಗೆ ಹೊರಡುವಾಗ ? ಭಿಕ್ಷೆಗೆ ಹೊರಡುವಾಗ. ಒಂದು ಮಾತು ಇದೆ - **'ಭೋಜನೇ ಶಿಷ್ಯಸಂತತಂ ಪ್ರಯಾಣೇ ನಾಸ್ತಿ ಕಶ್ಚನ ...'** - ಯಾರ ಮನೆಗಾದರೂ ಭಿಕ್ಷೆಗೆ ಹೊರಟೆವೆಂದರೆ ಎಲ್ಲ ಶಿಷ್ಯರು ತಾವು ಮುಂದೆ ತಾವು ಮುಂದೆ ಎಂದು ಬರುವರು. ಆದರೆ ಸಂಚಾರಕ್ಕೆ ಹೊರಟೆವೆಂದರೆ ಒಬ್ಬೊಬ್ಬರೇ ತಪ್ಪಿಸಿಕೊಳ್ಳಲು ಪ್ರಾರಂಭಿಸುವರು.

ಆದರೆ ದೇವರ ವಿಷಯದಲ್ಲಿ ಹೀಗಲ್ಲ. ದೇವರು ಹೊರಟ ಎಂದರೆ ಅವನ ಸೇನೆಯೂ ಹೊರಡಲು ಸಿದ್ಧವಾಗುವುದು. ಅವನ ಸೇನೆ ತತ್ತ್ವಾಭಿಮಾನಿ ದೇವತೆಗಳದ್ದು. ಅಂತಹ ತತ್ತ್ವಾಬಿಮಾನಿಗಳ ಸೇನೆಯನ್ನು ಕಟ್ಟಿಕೊಂಡು ಅವನು ವಿಶೇಷವಾಗಿ ನಮ್ಮೆಲ್ಲರ ಶರೀರಕ್ಕೆ ಬರುವನು. ಹಾಗೆಯೇ ಶರೀರದಿಂದ ಹೊರಡುವನು. ಆದುದರಿಂದ 'ಸುಷೇಣ' ನಾಮದಿಂದ ಭಗವಂತನನ್ನು ಉಪಾಸನೆ ಮಾಡಿದೆವೆಂದರೆ ಅವನು ತತ್ತ್ವಾಭಿಮಾನಿಗಳಿಂದ ಕೂಡಿಕೊಂಡು ಈ ಶರೀರದಲ್ಲಿ ಇರುವನು. ದೇವತೆಗಳು ಇರುವುದರಿಂದ ಎಲ್ಲ ಇಂದ್ರಿಯಗಳೂ ತಮ್ಮ ತಮ್ಮ ಕೆಲಸವನ್ನು ಚೆನ್ನಾಗಿ ನಿರ್ವಹಿಸುತ್ತಿರುತ್ತವೆ. ಬರೇ ಸೇನೆಯನ್ನೂ ಹೊಗಳಬಾರದು; ಬರೇ ಸೇನಾಧಿಪತಿಯನ್ನೂ ಹೊಗಳಬಾರದು. ಸೇನಾಸಹಿತನಾದ ಸೇನಾಧಿಪತಿಯನ್ನು ಹೊಗಳಬೇಕು. ಒಳ್ಳೆಯ ಸಿಬ್ಬಂದಿಗಳನ್ನು ಇಟ್ಟುಕೊಂಡು ಇರುವರೆಂದು ಸ್ವಾಮಿಗಳನ್ನು ಹೊಗಳಿದರೆ ಹೇಗೆ ಸಿಬ್ಬಂದಿಗಳನ್ನೂ ಸ್ವಾಮಿಗಳನ್ನೂ ಹೊಗಳಿದಂತಾಗುವುದೋ ಹಾಗೆ.

'ಸುಷೇಣ' ನಾಮ ಸೇನಾಧಿಪತಿಯನ್ನಾಗಿ ಭಗವಂತನನ್ನೂ, ಅವನ ಸೇನೆಯನ್ನಾಗಿ ತತ್ತ್ವಾಭಿಮಾನಿ ದೇವತೆಗಳನ್ನೂ ಹೊಗಳುತ್ತಿದೆ.

**೫೪೭. ಕನಕಾಂಗದೀ – * ಹೊಳೆಯುವ ಭುಜಕೀರ್ತಿ ಉಳ್ಳವನು.**

*** ಹೊಳೆಯುವ ಭುಜಬಲವುಳ್ಳವನು.**

**ವಿವರಣೆ :** ಕನಕ ಎಂದರೆ ಚಿನ್ನ. ಹೊಳೆಯುವ ಬಣ್ಣ ಎಂಬ ಅರ್ಥವೂ ಇದೆ. ಅಂಗದ ಎಂದರೆ ಭುಜಕೀರ್ತಿ. ತೋಳುಗಳಿಗೆ ಕಟ್ಟಿಕೊಳ್ಳುವ ಭೂಷಣ. ಹೊಳೆಯುವ ಬಣ್ಣದ ಭುಜಕೀರ್ತಿ ಉಳ್ಳವನೆಂಬುದು ಕನಕಾಂಗದೀ ಎಂಬ ನಾಮದ ಅರ್ಥ.

ಆದರೆ ಹೊಳೆಯುವ ಬಣ್ಣದ ಭುಜಕೀರ್ತಿ ಉಳ್ಳವನೆಂಬುದೂ ಒಂದು ಹೊಗಳಿಕೆಯೇ ? 'ಸ್ವಾಮಿ ! ನೀವು ಒಳ್ಳೆಯ ತುಳಸೀಮಣಿ ಹಾರ ಹಾಕಿಕೊಂಡಿದ್ದೀರಿ' ಎಂದು ಯಾರಾದರೂ ಹೊಗಳುವುದುಂಟೆ ? ಒಂದೊಮ್ಮೆ ಹಾಗೆ ಹೊಗಳಿದರೆ ಅದು ತುಳಸೀಮಣಿ ಹಾರದ ಹೊಗಳಿಕೆಯಾದೀತೇ ವಿನಹ ನಮ್ಮ ಹೊಗಳಿಕೆಯಾಗುವುದಿಲ್ಲ ತಾನೇ ?

ಹೊಳೆಯುವ ಭುಜಕೀರ್ತಿ - ಎಂದರೆ ಬಾಹುವಿನ ಆಭರಣವನ್ನಾಗಲೀ, ಅದನ್ನು ತೊಟ್ಟುಕೊಂಡವನನ್ನಾಗಲೀ ಹೊಗಳುವುದಲ್ಲ. ಬದಲಾಗಿ, ಉತ್ತಮವಾದ ವಿಚಾರವಂತಿಕೆಯನ್ನು ತಲೆಯ ಕೀರ್ತಿಯನ್ನಾಗಿಯೂ, ಒಳ್ಳೆಯ ಮಾತುಗಾರಿಕೆಯನ್ನು ಬಾಯಿಯ ಕೀರ್ತಿಯನ್ನಾಗಿಯೂ ಹೇಳುವಂತೆ ಬಾಹುಗಳ ಮೂಲಕ ದುಷ್ಟರನ್ನು ಬಡೆಯುವಿಕೆಯನ್ನು ಭುಜಕೀರ್ತಿಯನ್ನಾಗಿ ಇಲ್ಲಿ ಹೊಗಳಲಾಗುತ್ತಿದೆ.ಆದುದರಿಂದ 'ಕನಕಾಂಗದೀ' - ಎಂಬುದಕ್ಕೆ ಹೊಳೆಯುವ ಭುಜಪರಾಕ್ರಮವುಳ್ಳವನೆಂಬುದು ತಾತ್ಪರ್ಯ.

**೫೪೮. ಗುಹ್ಯಃ – ಪ್ರತಿಯೊಬ್ಬರ ಹೃದಯ ಗುಹೆಯಲ್ಲಿ ಇರಲಿಕ್ಕೆ ಯೋಗ್ಯನಾಗಿರುವವನು.**

ವಿವರಣೆ : ಗುಹೆಯಲ್ಲಿ ಇರಲಿಕ್ಕೆ ಯೋಗ್ಯನಾಗಿರುವವನೇ ಗುಹ್ಯ. ಯಾವುದೋ ಬೆಟ್ಟದ ಬುಡದ ಗುಹೆಯಲ್ಲಿ ಅಲ್ಲ ; ಮತ್ತೆ ನಮ್ಮ ನಿಮ್ಮ ಹೃದಯ ಗುಹೆಯಲ್ಲಿ ಇರಲಿಕ್ಕೆ ಯೋಗ್ಯ.

ನಮ್ಮೆಲ್ಲರ ಹೃದಯದಲ್ಲಿ ಒಂದು ನಿಷ್ಕಲ್ಮಶವಾದ ಪ್ರದೇಶ ಇದೆ. ಅದೇ ಹೃದಯಾಕಾಶ. ಆಕಾಶದಲ್ಲಿ ಎರಡು ವಿಧ. ಒಂದು ವ್ಯಾಕೃತಾಕಾಶ ಮತ್ತೊಂದು ಅವ್ಯಾಕೃತಾಕಾಶ. ಇವುಗಳಲ್ಲಿ ವ್ಯಾಕೃತಾಕಾಶ ಗಣಪತಿಗೆ ಸಂಬಂಧಪಡುವಂತಹದ್ದು. ಗಣಪತಿಯಲ್ಲಿ ಕೆಲವೊಮ್ಮೆ ದೋಷಗಳು ಕಾಣಿಸಬಹುದಾದ್ದರಿಂದ ಅವನ ಹಿಡಿತದಲ್ಲಿರುವ ವ್ಯಾಕೃತಾಕಾಶವೂ ದುಷ್ಟವಾಗಬಹುದು. ಅವ್ಯಾಕೃತಾಕಾಶವಾದರೂ ಲಕ್ಷ್ಮೀದೇವಿಯ ಹಿಡಿತದಲ್ಲಿರುವಂತಹದ್ದು. ಲಕ್ಷ್ಮೀದೇವಿ ಹೇಗೆ ಶುದ್ಧಳೋ ಅಂತೆಯೇ ಅವ್ಯಾಕೃತಾಕಾಶವೂ. ಅಂತಹ ಅವ್ಯಾಕೃತಾಕಾಶ ರೂಪದ ಹೃದಯಾಕಾಶದಲ್ಲಿ ನೆಲೆಸಿರುವ ಬಿಂಬರೂಪಿ ಪರಮಾತ್ಮನ ದರ್ಶನವನ್ನೇ ಸಾಕ್ಷಾತ್ಕಾರ ಎನ್ನಲಾಗುವುದು. ಆ ಸಾಕ್ಷಾತ್ಕಾರವೇ ಸಂಸಾರ ಬಂಧನದ ನಿವೃತ್ತಿಗೆ ಕಾರಣವಾಗುವಂತಹದ್ದು ಹೊರತು ಹೊರಗೆ ಇರುವ ರಾಮಕೃಷ್ಣಾದಿ ಭಗವದ್ರೂಪಗಳ ದರ್ಶನ ಸಂಸಾರ ನಿವೃತ್ತಿಗೆ ಕಾರಣವಾಗಲಾರದು. ಅದಕ್ಕಾಗಿಯೇ

ಭೀಷ್ಮರು ಕೃಷ್ಣನನ್ನು 'ಗುಹ್ಯ' - ಎಂದು ಉಪಾಸನೆ ನಡೆಸುತ್ತಿದ್ದಾರೆ. ಕೃಷ್ಣ ಹೊರಗೆ ಕುಳಿತುಕೊಂಡು ಅವರಿಗೆ ದರ್ಶನ ನೀಡುತ್ತಿದ್ದಾನೆ. ಆದರೆ ಇಷ್ಟೇ ಸಾಲದು, ಹೃದಯ ಗುಹೆಯೊಳಗೆ ಬಂದು ದರ್ಶನ ನೀಡುವಂತಾಗಬೇಕು. ಹಾಗಾದಾಗಲೇ ಭೀಷ್ಮರಿಗೆ ಮೋಕ್ಷ ದೊರಕಲು ಸಾಧ್ಯ. ಅದಕ್ಕಾಗಿ ಹೊರಗೆ ಕುಳಿತಿದ್ದು 'ಬಾಹ್ಯ' ನಾದ ಕೃಷ್ಣನನ್ನು 'ಗುಹ್ಯ'ನನ್ನಾಗಿ ಉಪಾಸನೆ ನಡೆಸುತ್ತಿದ್ದಾರೆ.

**೫೪೯. ಗಭೀರಃ – ತುಂಬ ಆಳದ ವ್ಯಕ್ತಿ.**

**ವಿವರಣೆ:** ಗಭೀರ ಎಂದರೆ ಆಳ. ದೇವರ ಬಗ್ಗೆ ಎಷ್ಟೇ ಅಗೆಯಲಿ ಇನ್ನೂ ಇನ್ನೂ ಒಳಗೆ ಹೋಗುವುದು. ಕೆಸರ ಗದ್ದೆಯಲ್ಲಿ ಹೇಗೋ ಹಾಗೆ. ದೇವರ ವಿಷಯದಲ್ಲಿ ಮಾತನಾಡಲು ತೊಡಗಿ ಎಷ್ಟೆಷ್ಟು ಮಾತನಾಡಿದರೂ ಮುಗಿಯುವುದಿಲ್ಲ. ಲೋಕದಲ್ಲಾದರೂ ಒಬ್ಬ ವ್ಯಕ್ತಿಯ ಬಗ್ಗೆ ಮಾತನಾಡಿ ಮಾತನಾಡಿ ಮುಗಿಸಿ ಬಿಡಬಹುದು. ಆದರೆ ದೇವರ ಬಗ್ಗೆ ಮಾತನಾಡಲು ತೊಡಗಿದರೆ ಮುಗಿಯವುದೇ ಇಲ್ಲ.

ಭೀಷ್ಮರು ಕೃಷ್ಣನಲ್ಲಿ ನಿವೇದಿಸಿ ಕೊಳ್ತಾರೆ - ನಾನು ನಿನ್ನ ಬಗ್ಗೆ ಹೇಳ್ತಾ ಹೇಳ್ತಾ ಸುಸ್ತಾಗಿ ನಿಲ್ಲಿಸಬೇಕೇ ವಿನಹ ನಿನ್ನಲ್ಲಿ ಮುಗಿಯಿತು ಎಂದು ನಿಲ್ಲಿಸುವಂತಿಲ್ಲ. ಇದೇ ಗಭೀರ ಶಬ್ದದ ಅರ್ಥ. ತುಂಬ ಆಳದ ವ್ಯಕ್ತಿಯೇ ಗಭೀರ.

**೫೫೦. ಗಹನಃ – ಸರಳವಾಗಿ ತಿಳಿಯಲು ಆಗದವನು.**

**ವಿವರಣೆ :** ಭಗವಂತನ ಬಗ್ಗೆ ಅಗಿದಷ್ಟು ಅಗಿದಷ್ಟು ಇದೆ ಎಂದಾದರೆ ಅಗೀತಾ ಇರುತ್ತೇನೆ ಎಂದರೆ - 'ಗಹನಃ' - ಅಷ್ಟು ಸರಳವಾಗಿಲ್ಲ, ಭಗವಂತನ ಬಗ್ಗೆ ತಿಳಿದುಕೊಳ್ಳುವುದು, ತಿಳಿಸುವುದು, ದೇವರನ್ನು ಅರ್ಥೈಸಿಕೊಳ್ಳುವುದು, ಸಾಕ್ಷಾತ್ಕರಿಸಿ ಕೊಳ್ಳುವುದು ಅಷ್ಟು ಸುಲಭದ್ದಲ್ಲ - 'ಗಹನಃ' ತುಂಬ ಗಹನವಾದ ವಿಚಾರ ಭಗವಂತನದ್ದು. ದಕ್ಕಿತೋ ಮತ್ತೆ ಸುಲಭ. ದಕ್ಕುವ ವರೆಗೆ ಬಹಳ ಕಷ್ಟ.

ಲೋಕದಲ್ಲೂ ಸುಲಭವಾಗಿ ತಿಳಿಯಲಾಗದ ವಿಚಾರವನ್ನು 'ಅದು ಗಹನವಾದ ವಿಚಾರ, ನಮಗೆ ಹೇಗೆ ಅರ್ಥವಾಗಬೇಕು' - ಎಂದು ವ್ಯವಹರಿಸುವಂತೆ ದೇವರ ವಿಚಾರವೂ ತುಂಬ ಗಹನ, ಗಂಭೀರ. ಆದುದರಿಂದಲೇ ಅವನನ್ನು 'ಗಹನ'- ಎಂದು ಸ್ತುತಿಸಲಾಗಿದೆ.

**೫೫೧. ಗುಪ್ತಃ – ಅಯೋಗ್ಯರಿಗೆ ಸರಿಯಾದ ಪರಿಚಯ ದೊರಕದಂತೆ ಅಡಗಿಸಿಡಲು ಯೋಗ್ಯನಾದವನು.**

ವಿವರಣೆ: ಹೀಗೆ ದೇವರು 'ಗುಹ್ಯ' ನಾಗಿರುವುದರಿಂದ, 'ಗಹನ' ನಾಗಿರುವುದರಿಂದ ಅವನು ಸಾರ್ವಜನಿಕ ಸಭೆ ಸಮಾರಂಭಗಳಲ್ಲಿ ತಿಳಿಸಿ ಕೊಡಲು, ಪರಿಚಯಿಸಿ ಕೊಡಲು ಯೋಗ್ಯನಾದವನಲ್ಲ. ಹಿರಿಯರು ಹೇಳಿರುವರು - ದೇವರ ಬಗ್ಗೆ ಬಹಿರಂಗವಾಗಿ ತಿಳಿಸಬಾರದು ಯಾಕೆಂದರೆ ಯೋಗ್ಯರೆದುರು ಮಾತ್ರ ತಿಳಿಸಲು ಯೋಗ್ಯನಾದವನು ಅವನು. ದೊಡ್ಡ ಸಭೆ ಸಮಾರಂಭಗಳಲ್ಲಿ ಅಯೋಗ್ಯರೇ ತುಂಬಿರುವರು. ಅಂತಹ ಸಂದರ್ಭದಲ್ಲಿ ಅವನನ್ನು ಆದಷ್ಟು ಬಚ್ಚಿಡಬೇಕು, ಅಡಗಿಸಬೇಕು. ಅವನ ಕುರಿತಾದ ಸೂಕ್ಷ್ಮ ಸೂಕ್ಷ್ಮ ವಿಚಾರಗಳನ್ನು ತಿಳಿಸಬಾರದು. ಭಗವದ್ವಿಷಯಕ ವಿದ್ಯೆಗೆ 'ರಹಸ್ಯವಿದ್ಯೆ' - ಎಂದೇ ಹೆಸರು. ಏಕಾಂತದಲ್ಲಿ ಯೋಗ್ಯರೆದುರು ಮಾತ್ರ ಅದು ವಿತರಣೆಗೆ ಯೋಗ್ಯವಾಗಿರುವುದರಿಂದಲೇ ಅದಕ್ಕೆ ಆ ಹೆಸರು ಬಂದಿದೆ.

ಹೀಗೆ 'ರಹಸ್ಯ ವಿದ್ಯೆ'ಗೆ ವಿಷಯನಾಗಿದ್ದು ಅತ್ಯಂತ ಗೋಪ್ಯನಾಗಿರುವವನು, ಅಯೋಗ್ಯರಿಗೆ ತಿಳಿಯದಂತೆ ಅಡಗಿಸಿಡಲು ಯೋಗ್ಯನಾದವನು 'ಗುಪ್ತ' ಎನಿಸುವ ಭಗವಂತ.

ಕೃಷ್ಣನಿಗೆ ಮಹಾಭಾರತ ಯುದ್ಧ ನಡೆಯುವಾಗ ಸುಮಾರು ಎಪ್ಪತ್ತು ವರ್ಷಗಳೂ ದಾಟಿವೆ. ಆದರೆ ಕೃಷ್ಣನನ್ನು ಯಾರು ಚೆನ್ನಾಗಿ ಪರಿಚಯಿಸಿ ಕೊಂಡಿರುವರು? ಯಾಕೆಂದರೆ ಯಾರೆದುರೂ ತನ್ನನ್ನು ಪೂರ್ಣವಾಗಿ ತೆರೆದು ಕೊಳ್ಳದವನು ಅವನು. ಅಂದರೆ ತನ್ನ ರಕ್ಷಣೆಯನ್ನು ತಾನೇ ಮಾಡುವಂತೆ ತನ್ನ ಅಮೂಲ್ಯ ತಿಳುವಳಿಕೆ ಅಯೋಗ್ಯರಿಗೆ ದೊರಕದಂತೆ ರಕ್ಷಿಸಿಕೊಳ್ಳುವನು.

ವಜ್ರ ಮುಂತಾದ ಅಮೂಲ್ಯ ವಸ್ತುಗಳನ್ನು ಎಲ್ಲರೆದುರು ತೋರಿಸದೆ ತುಂಬ ಧನಿಕರೆದುರು ಮಾತ್ರ ತೋರಿಸಿ ವ್ಯಾಪಾರ ನಡೆಸುವ ಪದ್ಧತಿ ತಾನೇ ? ಅದರಂತೆ ಭಗವಂತನೂ ಎಲ್ಲರೆದುರು ತೆರೆದುಕೊಳ್ಳಲು ಯೋಗ್ಯನೆನಿಸದೆ 'ಗುಪ್ತ'ನಾಗಿ ಯೋಗ್ಯ ಅಧಿಕಾರಗಳಿಗಷ್ಟೇ, ಅವರವರ ಯೋಗ್ಯತೆಯ ಪ್ರಮಾಣಕ್ಕನುಗುಣವಾಗಿ ತಿಳಿಸಿಕೊಡಲು, ಪರಿಚಯಿಸಿಕೊಡಲು ಯೋಗ್ಯನಾಗಿರುವವನು.

**೫೫೨. ಚಕ್ರಗದಾಧರಃ – * ಚಕ್ರ ಗದೆಗಳನ್ನು ಧರಿಸಿರುವವನು.**

*** ಅಧಮ ಜೀವರನ್ನು ಕತ್ತರಿಸಿ ಹಾಕುವವನು. ಮಧ್ಯಮ ಜೀವರನ್ನು ಗದರಿಸುವವನು. ಉತ್ತಮ ಜೀವರನ್ನು ಚೆನ್ನಾಗಿ ಧರಿಸಿರುವವನು.**

ವಿವರಣೆ: ಚಕ್ರ ಮತ್ತು ಗದೆಗಳನ್ನು ಧರಿಸಿರುವವನೆಂಬುದು ಒಂದು ಪ್ರಸಿದ್ಧಾರ್ಥ. ತ್ರಿವಿಧ ಜೀವರಿಗೆ ಅವರವರ ಯೋಗ್ಯತೆಗನುಗುಣವಾಗಿ ಭಗವಂತನ ನಡತೆಯನ್ನು ಈ ನಾಮ ತಿಳಿಸುತ್ತಿದೆ. ಚಕ್ರ - ಕರ್ತನಾತ್ ಚಕ್ರ - ಅಧಮ ಜೀವರನ್ನು ಕತ್ತರಿಸಿ

ಹಾಕುವವನು, ಗದಾ - ಗದನಾತ್ - ಮಧ್ಯಮ ಜೀವರನ್ನು ಗದರಿಸುವವನು ಆಧರಃ - ಉತ್ತಮ ಜೀವರನ್ನು ಚೆನ್ನಾಗಿ ಧಾರಣೆ ಮಾಡುವವನು. 'ಗದ ವ್ಯಕ್ತಾಯಾಂ ವಾಚಿ' - ಎಂಬ ಒಂದು ಕ್ರಿಯಾಪದ ಸಂಸ್ಕೃತದಲ್ಲಿ ಇದ್ದು ಅದರ ಮೂಲಕವೇ ಕನ್ನಡದಲ್ಲಿ ಗದರಿಸುವುದು, ಗದ್ದಲ ಇತ್ಯಾದಿ ಶಬ್ದಗಳು ಬಂದಿವೆ. ಆದ್ದರಿಂದ ಗದಾಶಬ್ದ ಗದರಿಸುವಿಕೆಯನ್ನು ತಿಳಿಸಬಲ್ಲದು.

**ವೇಧಾಃ ಸ್ವಾಂಗೋಽಜಿತಃ ಕೃಷ್ಣೋ ದೃಢಃ ಸಂಕರ್ಷಣೋಽಚ್ಯುತಃ |**
**ವರುಣೋ ವಾರುಣೋ ವೃಕ್ಷಃ ಪುಷ್ಕರಾಕ್ಷೋ ಮಹಾಮನಾಃ || ೫೯ ||**

**೫೫೩. ವೇಧಾಃ – ಸಮಸ್ತವನ್ನೂ ಮಾಡುವವನು.**

**ವಿವರಣೆ :** ವಿದಧಾತೀತಿ ವೇಧಾಃ – ಮಾಡುತ್ತಾನೆ. ಏನನ್ನು ಮಾಡುತ್ತಾನೆ ಎಂದು ತಿಳಿಸಲಿಲ್ಲ. ಆದುದರಿಂದ ಎಲ್ಲವನ್ನೂ ಅಂದರೆ ಜೀವೋತ್ತಮನಾದ ಚತುರ್ಮುಖನಿಂದ ಪ್ರಾರಂಭಿಸಿ, ಜೀವಾಧಮನಾದ ಕಲಿಯವರೆಗೆ ಎಲ್ಲರನ್ನೂ ಸೃಷ್ಟಿ ಮಾಡುತ್ತಾನೆ. ಜಡ ಜಗತ್ತನ್ನೂ ಸೃಷ್ಟಿ ಮಾಡುತ್ತಾನೆ.ಯಾರ್ಯಾರಿಗೆ ಏನೇನು ಯಾವ್ಯಾವಾಗ ಬೇಕೋ - ಅವನ್ನೆಲ್ಲ ವಿದಧಾತೀತಿ ವೇಧಾಃ - ಮಾಡುವವನು.

ಏನೋ ತಿಳಿದುಕೊಂಡೆ, ನನ್ನ ಜೊತೆಗಿದ್ದು ಮಾಡಿದವನು ನೀನೇ. ನನಗೆ ಸುಖವಾಯಿತು - ನನ್ನ ಜೊತೆಗೆ ಮಾಡಿದವನು ನೀನೇ. ನಾನೇನೋ ಕೆಲಸ ಮಾಡಿದೆ ನನ್ನ ಜೊತೆಗಿದ್ದು ಮಾಡಿದವನು ನೀನೇ. ಹೀಗೆ ಪ್ರತಿಯೊಂದು ಸಂದರ್ಭದಲ್ಲೂ ಮಾಡಿದವನು ಭಗವಂತನೇ ಎಂಬ ಅನುಸಂಧಾನವೇ 'ವೇಧಾಃ' ನಾಮದಿಂದ ಹೊರಡುವಂತಹದ್ದು.

ಭೀಷ್ಮರು ಮಲಗಿಕೊಂಡೇ ಪಕ್ಕದಲ್ಲೇ ಕುಳಿತಿರುವ ಶ್ರೀ ಕೃಷ್ಣನಲ್ಲಿ ತಾನು ವಸುವಾಗಿದ್ದಾಗ ಹಸುವನ್ನು ಕದ್ದದ್ದರಿಂದ ಪ್ರಾರಂಭಿಸಿ, ಇಲ್ಲಿಯವರೆಗಿನ ಪ್ರತಿಯೊಂದು ಕರ್ಮವನ್ನೂ 'ವೇಧಾಃ' - ಎಂಬ ನಾಮದ ಅನುಸಂಧಾನದ ಹಿನ್ನೆಲೆಯಲ್ಲಿ ಸಮರ್ಪಿಸುತ್ತಿದ್ದಾರೆ.

**೫೫೪. ಸ್ವಾಂಗಃ – * ತನ್ನ ಸ್ವರೂಪಾತ್ಮಕಗಳಾದ ಅಂಗಗಳನ್ನು ಹೊಂದಿರುವವನು.**
*** ಸ್ವತಂತ್ರಗಳಾದ, ತನ್ನ ಹಿಡಿತದಲ್ಲಿರುವ ಅಂಗಗಳನ್ನು ಹೊಂದಿರುವವನು.**

**ವಿವರಣೆ:** ಸ್ವ - ತಾನೇ ಅಂಗಃ - ತನ್ನ ಕೈಕಾಲು ಮುಂತಾದ ಅಂಗಗಳಾಗಿರುವವನು. ನಮ್ಮಲ್ಲಿ ನಾವು ಬೇರೆ ನಮ್ಮ ಅಂಗಾಂಗಳು ಬೇರೆ. ನಮ್ಮ ಕೈಕಾಲುಗಳನ್ನು ತುಂಡರಿಸಿ ಬೇರ್ಪಡಿಸಬಹುದು. ಕೈಕಾಲುಗಳನ್ನು ಕಡಿದರೂ ನಾವು ಬದುಕಬಹುದು. ಆದರೆ

ಭಗವಂತನಲ್ಲಿ ಅವನ ಕೈಕಾಲುಗಳನ್ನು ಅವನಿಗಿಂತ ಬೇರ್ಪಡಿಸುವ ಪ್ರಸಂಗವೇ ಇಲ್ಲ. ಯಾಕೆಂದರೆ ಅವನ ಕೈಕಾಲು ಮುಂತಾದ ಪ್ರತಿಯೊಂದು ಅಂಗವೂ ಅವನ ಸ್ವರೂಪಾತ್ಮಕ. ಆದುದರಿಂದಲೇ ಅವನ ಕಿವಿಯೂ ಮಾತನಾಡಬಲ್ಲದು, ಬಾಯಿಯೂ ಕೇಳಬಲ್ಲದು. ಹೊರತು ನಮ್ಮ ಅಂಗಗಳಂತೆ ಆಯಾ ಅಂಗ ಆಯಾ ಕೆಲಸವನ್ನಷ್ಟೇ ಮಾಡುವುದಲ್ಲ. ಭಗವಂತನ ಸ್ವರೂಪಕ್ಕೂ ಅವನ ಅಂಗಾಂಗಳಿಗೂ ಭೇದವನ್ನು, ಯಾವುದೇ ವ್ಯತ್ಯಾಸವನ್ನು ಕಾಣಬಾರದು.

ಕೃಷ್ಣಾವತಾರ ಎಂದರೇನು ? ಭಗವಂತ ತನ್ನ ಒಂದು ಕಪ್ಪು ಕೂದಲನ್ನು ವಸುದೇವನ ಗರ್ಭಕ್ಕೆ ಹಾಕಿದ. ವಸುದೇವನ ಗರ್ಭದಿಂದ ಆ ಕೂದಲು ದೇವಕಿಯ ಗರ್ಭಕ್ಕೆ ಬರುವುದು. ಅಲ್ಲಿಂದ ಭೂಮಿಗೆ ಬರುವುದು. ಅವನೇ ಕೃಷ್ಣ. ಅರ್ಜುನಾದಿಗಳಿಗೆ ವಿಶ್ವರೂಪವನ್ನು ತೋರಿಸಿದ ರೂಪ ಅದೇ. ಹಾಗಾರೆ ಭಗವಂತನ ಒಂದು ಕೂದಲು ಕೂಡಾ ವಿಶ್ವರೂಪ ಆಗಿದೆ.

ಇನ್ನೂ ಸ್ವರಸ್ಯ ಎಂದರೆ ಭಗವಂತನ ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ ರೂಪಗಳೇ ಅವನ ಕೈ, ಕಾಲು, ಮಧ್ಯದೇಹ, ತಲೆ ಇತ್ಯಾದಿ ಅಂಗಗಳಾಗಿ ಪರಿಗಣಿತಗಳಾಗಿರುವುದುಂಟು.

ಹೀಗೆ ಭಗವಂತನು ತಾನೇ ತನ್ನ ಬೇರೆ ಬೇರೆ ಅಂಗಗಳಾಗಿರುವುದರಿಂದ ಸ್ವಾಂಗ ಎನಿಸುವನು. ದುರ್ಯೋಧನ ಕೃಷ್ಣನ ನೆರವು ಕೇಳಲು ಅವನಲ್ಲಿಗೆ ಹೋದಾಗ ರಾಜನಾದ ಅವನ ಕಾಲಬುಡದಲ್ಲಿ ಕುಳಿತುಕೊಳ್ಳುವುದು ಸರಿಯಲ್ಲ ಎಂದು ಅವನ ತಲೆಯ ಸಮೀಪದಲ್ಲಿ ಕುಳಿತ. ಹೀಗೆ ಕೃಷ್ಣನ ತಲೆ, ಕಾಲುಗಳ ವಿಷಯದಲ್ಲಿ ಭೇದವನ್ನು, ವ್ಯತ್ಯಾಸವನ್ನು ಕಂಡದ್ದರಿಂದಲೇ ಐಹಿಕವಾಗಿಯೂ, ಪಾರತ್ರಿಕವಾಗಿಯೂ ಅವನು ಸೋಲುವಂತಾಯಿತು.

ಹಾಗೆಯೇ ಸ್ವತಂತ್ರಗಳಾದ ಅಂಗಗಳನ್ನು ಹೊಂದಿರುವುದರಿಂದಲೂ ಅವನು ಸ್ವಾಂಗ. ನಮ್ಮ ಅಂಗಗಳು ಪೂರ್ಣವಾಗಿ ನಮ್ಮ ಹಿಡಿತದಲ್ಲಿರುವುದೆಂದಿಲ್ಲ. ಆದರೆ ಭಗವಂತನ ಪ್ರತಿಯೊಂದು ಅಂಗವೂ ಪೂರ್ಣವಾಗಿ ಸ್ವಾಧೀನಗಳಾಗಿಯೇ ಇರುವುದರಿಂದಲೂ ಅವನು 'ಸ್ವಾಂಗ'

ನಮ್ಮ ಅಂಗಾಂಗಗಳು ನಮ್ಮ ಹಿಡಿತದಲ್ಲಿರಬೇಕೆಂದರೆ ನಾವು ಸ್ವಾಂಗ ನಾಮಕ ಭಗವಂತನ ಉಪಾಸನೆಯನ್ನು ಮಾಡೋಣ.

**೫೫೫. ಅಜಿತಃ – ಜೀವನದಲ್ಲಿ ಎಂದೂ ಸೋಲದವನು.**

ವಿವರಣೆ : ಭಗವಂತ 'ಸ್ವಾಂಗ' ನಾಗಿರುವುದರಿಂದಲೇ ಅಜಿತ - ಎಂದೂ ಸೋಲದವನು. ನಮ್ಮ ಅಂಗಾಂಗಳು ನಮ್ಮ ಹಿಡಿತದಿಂದ ತಪ್ಪಿದಾಗ ಜೀವನದಲ್ಲಿ ಸೋಲು ಆರಂಭವಾಗುವುದು. ಇನ್ನೊಬ್ಬನನ್ನು ಆಶ್ರಯಿಸಬೇಕಾಗುವುದು. 'ಅಪ್ಪ, ಇನ್ನೂ ಯಾಕೆ ಸತ್ತಿಲ್ಲಪ್ಪ!'- ಎಂದು ಮಗನಿಂದ ಅನಿಸಿಕೊಳ್ಳಬೇಕಾಗುವುದು. ಇಂತಹ ಪರಿಸ್ಥಿತಿ ಜೀವನದಲ್ಲಿ ಬರುವುದು ಯಾವಾಗ ? ನಮ್ಮ ಅಂಗಗಳು ನಮ್ಮ ಹಿಡಿತದಿಂದ ತಪ್ಪಿದಾಗ. ಆದುದರಿಂದ ನಮ್ಮ ಹಿಡಿತ, ನಮ್ಮ ಇಂದ್ರಿಯಗಳ ಹಿಡಿತ ನಮ್ಮಲ್ಲಿ ಇರುವುದೇ ಜೀವನದಲ್ಲಿ ಗೆಲ್ಲುವುದು.

ಭಗವಂತನಾದರೂ ಎಂದೂ ತನ್ನ ಇಂದ್ರಿಯಗಳ ಹಿಡಿತದಿಂದ ತಪ್ಪಿದವನಲ್ಲ. ಆದುದರಿಂದಲೇ ಅವನು ಎಂದೂ ಸೋತವನಲ್ಲ 'ಅಜಿತ'. ಭಗವಂತ ಸ್ವಾಂಗನಾಗಿರುವುದರಿಂದಲೇ 'ಅಜಿತ'. ಭಗವಂತನ ಅಂಗಗಳು ಅವನ ಅಧೀನದಲ್ಲಿಯೇ ಇರುವುದರಿಂದ ಅವನಿಗೆ ಜೀವನದಲ್ಲಿ ಎಂದೂ ಸೋಲು ಇಲ್ಲ.

ಜ್ಞಾನಿಗಳು ತಮ್ಮ ಜೀವನದಲ್ಲಿ ಯಾವುದಾದರೊಂದು ಸಮಸ್ಯೆ ಬಂದು ಅದರಿಂದಾಗಿ ತಾವು ಸೋಲುವ ಸ್ಥಿತಿ ಬಂದಾಗ ಭಗವಂತನನ್ನು 'ಅಜಿತ' - ಎಂದು ಉಪಾಸನೆ ನಡೆಸಿ, ಅದರ ಫಲವಾಗಿ ಆ ಸಮಸ್ಯೆಯಿಂದ ಗೆದ್ದಿರುವರು. ಆದ್ದರಿಂದ ಜೀವನದಲ್ಲಿ ಸೋಲದೆ ಇರಬೇಕೆಂದರೆ ಭಗವಂತನನ್ನು 'ಅಜಿತ '- ಎಂದು ಉಪಾಸನೆ ಮಾಡೋಣ.

**೫೫೬. ಕೃಷ್ಣಃ – ನೇಗಿಲಲ್ಲಿದ್ದುಕೊಂಡು ಭೂಮಿಯನ್ನು ಉಳುವವನು.**

ವಿವರಣೆ : ದೇವರೇ ತನ್ನನ್ನು ಯಾಕೆ ಕೃಷ್ಣ ಎಂದು ಕರೆಯುವರೆಂಬುದಕ್ಕೆ ಒಂದು ಕಾರಣವನ್ನು ತಿಳಿಸುವನು. -

**'ಕೃಷಾಮಿ ಪೃಥಿವೀಂ ಪಾರ್ಥ**
**ಭೂತ್ವಾ ಕಾರ್ಷ್ಣಾಯಸಃ ಹಲಃ |**
**ತಸ್ಮಾತ್ ಕೃಷ್ಣಂ ಮಾಂ ಪ್ರವದಂತಿ....'**

ನಾನು ಭೂಮಿಯನ್ನು ಉಳುವುದರಿಂದ ನನ್ನನ್ನು 'ಕೃಷ್ಣ' - ಎಂದು ಕರೆಯುವರು.

ರೈತನಾಗಿ ಉಳುವುದೋ ? ಅಲ್ಲ ;

ಎತ್ತಾಗಿ ಉಳುವುದೋ ? ಅಲ್ಲ.

ಮತ್ತೆ 'ಭೂತ್ವಾ ಕಾರ್ಷ್ಣಾಯಸಃ ಹಲಃ....' ಕಬ್ಬಿಣದ ನೇಗಿಲಾಗಿ

ಉಳುತ್ತೇನೆ. ಭೂಮಿಯ ಕೆಳಗಿನ ಮಣ್ಣನ್ನು ಮೇಲಕ್ಕೆ ಹಾಕುವ ಪ್ರಕ್ರಿಯೆಯೇ ಉಳುವುದು. ಅದನ್ನು ಮುಖ್ಯವಾಗಿ ನಡೆಸುವುದು - ನೇಗಿಲು. ಅಂತಹ ನೇಗಿಲಲ್ಲಿ ಇದ್ದುಕೊಂಡು ಅದಕ್ಕೆ ಉಳುವ ಸಾಮರ್ಥ್ಯ ಬರುವಂತೆ ಮಾಡಿ ಭೂಮಿಯ ಕೃಷಿಯನ್ನು ತಾನು ನಡೆಸುವುದರಿಂದ ತನಗೆ 'ಕೃಷ್ಣ' ಎಂಬ ಹೆಸರು ಬಂದಿದೆ ಎಂದು ದೇವರೇ ಹೇಳಿಕೊಳ್ಳುವನು.

ಆದುದರಿಂದ 'ಪೃಥಿವೀಂ ಹಲೋ ಭೂತ್ವಾ ಕೃಷತೀತಿ ಕೃಷ್ಣಃ' ಎಂದು ಹೇಳಿದಂತಾಗುವುದು.

ಈ ಮೂಲಕ ಕೃಷ್ಣ ಉಳುವವರಿಗೆ ನೀಡುವ ಸಂದೇಶ - ಉಳುವಾಗ ಎತ್ತುಗಳಿಗೆ ಆಯಾಸ ಪರಿಹಾರವಾಗಬೇಕೆಂದು ಗಟ್ಟಿಯಾಗಿ 'ಓ......' ಎಂದು ಹಾಡಲಾಗುವುದು. ಹಾಗೆ ಹಾಡುವಾಗ ನೇಗಿಲಿನಲ್ಲಿದ್ದುಕೊಂಡು ಉಳುವ 'ಕೃಷ್ಣ'ನ ಅನುಸಂಧಾನ ಇರಲಿ. ಇದರಿಂದ ಉಳುವ ಎತ್ತುಗಳಿಗೂ, ರೈತನಿಗೂ, ಗದ್ದೆಯ ದಣಿಗೂ ತೃಪ್ತಿ ದೊರಕುವಂತಾಗುವುದು. ಪ್ರತಿಯೊಂದು ಕಾರ್ಯದಲ್ಲೂ ದೇವರ ಅನುಸಂಧಾನ ಹೇಗೆ ಇರಬೇಕೆಂಬುದಕ್ಕೆ ಇದೊಂದು ಉತ್ತಮ ನಿದರ್ಶನ.

**೫೫೭. ದೃಢಃ – ಭಕ್ತರಲ್ಲಿ ದಾರ್ಢ್ಯವನ್ನು ತುಂಬುವವನು.**

**ವಿವರಣೆ: ದೃಢಯತಿ ಇತಿ ದೃಢಃ |** ತನ್ನ ಭಕ್ತರಲ್ಲಿ ದಾರ್ಢ್ಯವನ್ನು ತುಂಬುವವನು ದೇವರು. ಭಕ್ತರು ಯಾರಿಗೂ ಎಂದೂ ಹೆದರಂತೆ ಆತ್ಮವಿಶ್ವಾಸವನ್ನು ತುಂಬುವವನು. ಆದುದರಿಂದಲೇ ದೇವರ ಭಕ್ತರು ಯಾರಿಗೂ ಭಯಪಡುವ, ತಲೆಬಾಗುವ ಪ್ರಸಂಗವೇ ಇಲ್ಲ.

**೫೫೮. ಸಂಕರ್ಷಣಃ – ಪ್ರಲಯ ಕಾಲದಲ್ಲಿ ಎಲ್ಲರನ್ನೂ ತನ್ನೆಡೆಗೆ ಆಕರ್ಷಣೆ ಮಾಡುವವನು**

**ವಿವರಣೆ:** ಆಕರ್ಷಣೆ ಮಾಡುವವನೇ ಸಂಕರ್ಷಣ. ಪ್ರಲಯ ಕಾಲದಲ್ಲಿ ಎಲ್ಲರನ್ನೂ ಆಕರ್ಷಣೆ ಮಾಡುವನು.

ಯಮನೂ ನಮ್ಮ ಪ್ರಾಣವನ್ನು ಆಕರ್ಷಣೆ ಮಾಡುವನು. ಆದರೆ ಭಗವಂತನ ಆದೇಶಾನುಸಾರವಾಗಿ. ಆದುದರಿಂದ ಸ್ವತಂತ್ರವಾಗಿ, ವ್ಯಾಪಕವಾಗಿ ಆಕರ್ಷಣೆ ಮಾಡುವವನು ಸಂಕರ್ಷಣರೂಪಿ ಭಗವಂತನೇ.

**೫೫೯. ಅಚ್ಯುತಃ – ದೋಷದ ಲೇಪಕ್ಕೆ ಒಳಗಾಗದವನು.**

**ವಿವರಣೆ :** ಪ್ರಲಯ ಕಾಲದಲ್ಲಿ ಇಷ್ಟೊಂದು ದೊಡ್ಡ ಪ್ರಮಾಣದಲ್ಲಿ ಸಂಹಾರ

ನಡೆಸಿದರೂ ಭಗವಂತ 'ಅಚ್ಯುತ' - ದೋಷದ ಲೇಪ ಅವನಿಗೆ ಇಲ್ಲ.

'ಆಲದ ಎಲೆಯ ಮೇಲೆ ಶಿವನ ಲಿಂಗವ ನಿಲ್ಲಿಸುವರೇ ಶೋಭಾನೇ......' ಎಂದ ವಾದಿರಾಜರ ಪ್ರಕಾರ ಪ್ರಲಯ ಕಾಲದಲ್ಲಿ ಎಷ್ಟೆಷ್ಟೋ ಬ್ರಾಹ್ಮಣರನ್ನು ಋಷಿಗಳನ್ನು, ಮುನಿಗಳನ್ನು, ಮಹಾಬ್ರಾಹ್ಮಣ ಎನಿಸಿರುವ ಚತುರ್ಮುಖನನ್ನೂ ಸಂಹಾರ ಮಾಡುವ ಭಗವಂತನಿಗೆ ಬ್ರಹ್ಮಹತ್ಯಾದೋಷ ಬರುವುದಾದರೆ ಪ್ರಲಯ ಕಾಲದಲ್ಲಿ ಅವನು ಆ ದೋಷ ಪರಿಹಾರಕ್ಕಾಗಿ ಶಿವನ ಲಿಂಗವನ್ನು ಸ್ಥಾಪಿಸಬೇಕಿತ್ತು! ಜಾಗ ಇಲ್ಲ ಎನ್ನುವಂತಿಲ್ಲ. ಐವತ್ತು ಕೋಟಿ ಯೋಜನ ವಿಸ್ತಾರದ ಆಲದ ಎಲೆ ಆಗ ಇತ್ತು. ಈ ಮಗು ಏಳು ಕೋಟಿ ಯೋಜನ ವಿಸ್ತಾರವಿತ್ತಷ್ಟೇ. ಆದುದರಿಂದ ಲಿಂಗ ಪ್ರತಿಷ್ಠೆಗೆ ಅವಕಾಶ ಇದ್ದೇ ಇತ್ತು. ಹಾಗಾದರೂ ಲಿಂಗ ಪ್ರತಿಷ್ಠೆ ಮಾಡಿಲ್ಲ ಎಂದರೆ ಅವನು 'ಅಚ್ಯುತ ' - ಯಾವುದೇ ದೋಷ ಪ್ರಯುಕ್ತವಾದ ಚ್ಯುತಿ ಇಲ್ಲದವನು ಎಂದು ಸಿದ್ಧವಾಗವುದು. ಆದುದರಿಂದಲೇ ರಾಮಾವತಾರದಲ್ಲಿ ರಾವಣನನ್ನು ಕೊಂದದ್ದರಿಂದ 'ಬ್ರಹ್ಮಹತ್ಯೆ' ದೋಷ ರಾಮನಿಗೆ ಬಂತು, ಅದರ ಪರಿಹಾರಕ್ಕಾಗಿಯೇ ರಾಮೇಶ್ವರದಲ್ಲಿ ರಾಮ ಲಿಂಗಪ್ರತಿಷ್ಠೆ ಮಾಡಿರುವನೆಂಬ ವಿಚಾರ ಅತ್ಯಂತ ಅನುಚಿತ.

ಹೀಗೆ ಶ್ರೀ ವಾದಿರಾಜ ಸ್ವಾಮಿಗಳು ರಾಮಾವತಾರದ ಹಿನ್ನಲೆಯಲ್ಲಿ ದೇವರ ಅಚ್ಯುತತ್ವವನ್ನು ಸಮರ್ಥಿಸಿರುವರು.

**೫೬೦. ವರುಣಃ – * ಕತ್ತಲೆಯಿಂದ ಆವರಿಸುವವನು.**

*** ಜೀವರಿಗೆ ತನ್ನ ಸ್ವರೂಪ, ಅವರ ಸ್ವರೂಪ ಹಾಗೂ ವಸ್ತುಗಳ ನಿಜಸ್ವರೂಪ ತಿಳಿಯದಂತೆ ಆವರಿಸುವವನು.**

**ವಿವರಣೆ : ವೃಣೋತೀತಿ ವರುಣಃ|** ನಾವು ಜಲಾಭಿಮಾನಿಯನ್ನೂ ವರುಣ ಎಂದು ಕರೆಯುವೆವು ನೀರಿಗೆ ಸಂಬಂಧ ಪಟ್ಟಂತೆ ಜಲಾಭಿಮಾನಿ ದೇವತೆಗೆ ಆ ಹೆಸರು ಬಂದಿದೆ.. ನೀರು ಯಾಕೆ ವರುಣ ? ವೃಣೋತಿ ಆವೃಣೋತೀತಿ ವರುಣಃ ಆವರಣವೇ ವರುಣ. ಮಧ್ಯದಲ್ಲಿ ಜಂಬೂದ್ವೀಪ, ಸುತ್ತ ನೀರು ಇರುವುದರಿಂದ, ಜಂಬೂದ್ವೀಪವನ್ನು ಆವರಿಸುತ್ತಿದೆ ಎಂಬ ಅರ್ಥದಲ್ಲಿ ನೀರು ವರುಣ. 'ವೃಞ ಆವರಣೇ' - ಎಂಬ ಕ್ರಿಯಾಪದದಿಂದಲೇ ನಿಷ್ಪನ್ನವಾದ ಶಬ್ದ ವರುಣ ಎಂಬುದು. ಆದುದರಿಂದ 'ವರುಣಃ' - ಎಂಬುದಕ್ಕೆ ಆವರಿಸುವವನು ಎಂಬ ಅರ್ಥ. ಸೂರ್ಯ ಅಸ್ತಂಗತನಾದ ಕೂಡಲೇ ಕತ್ತಲೆಯಿಂದ ಆವರಿಸುವವನು ಭಗವಂತ. ಕತ್ತಲೆಗೆ ಆವರಿಸುವ ಸಾಮರ್ಥ್ಯ ಇಲ್ಲ. ಕತ್ತಲೆಯ ಒಳಗಿದ್ದು ಆವರಿಸುವವನು ಭಗವಂತನೇ.

ಸೂರ್ಯನಲ್ಲಿದ್ದ ಭಗವಂತನ ರೂಪ ಕತ್ತಲೆಯಲ್ಲಿ ಪ್ರವೇಶಿಸಿ ಕತ್ತಲೆ ಆವರಿಸುವಂತೆ ಮಾಡುವುದು. ಹೀಗೆ ಕತ್ತಲೆಯ ಮೂಲಕ ಎಲ್ಲವನ್ನೂ ಆವರಿಸುವವನಾದುದರಿಂದ ಭಗವಂತನಿಗೆ 'ವರುಣ' ಎಂಬ ಹೆಸರು. ಕಾಣಬೇಕಾದ ಸಂದರ್ಭದಲ್ಲಷ್ಟೇ ಕಂಡು ಬೇರೆ ಸಂದರ್ಭದಲ್ಲಿ ಕಾಣದಂತೆ ಮಾಡುವವನು.

ಕತ್ತಲಿನ ಮೂಲಕ ಮಾತ್ರವಲ್ಲ, ನಮ್ಮ ಪಾಲಿಗೆ ಆವರಕನಾಗಿ ನಿಂತು ನಮಗೆ ದೇವರು ಕಾಣಿಸದಂತೆ, ನಮ್ಮ ಸ್ವರೂಪ ತಿಳಿಯದಂತೆ ಹಾಗೂ ಜಗತ್ತಿನ ವಸ್ತುಗಳ ಸರಿಯಾದ ಪರಿಚಯ ದೊರಕುವಂತೆ ಮಾಡಿರುವನು. ಆದುದರಿಂದಲೂ ಅವನು ವರುಣ.

ತಾಯಿ ಕತ್ತಲ ಕೋಣೆಯಲ್ಲಿ ಅಡಗಿದಾಗ, ಮಗುವಿಗೆ ಅವಳನ್ನು ಕಾಣುವ ಕುತೂಹಲ ಅಧಿಕವಾಗಿ 'ಅಮ್ಮ ಅಮ್ಮ' - ಎಂದು ಕರೆಯುವುದು. ಅಂತೆಯೇ ಭಗವಂತನು ಕಾಣಿಸದಿದ್ದಾಗ ಅವನನ್ನು ಕಾಣುವ ಕುತೂಹಲ ಹೆಚ್ಚುವುದು. ಅದೇ ರೀತಿಯಾಗಿ ನಮ್ಮ ಸ್ವರೂಪವನ್ನೂ, ಜಗತ್ತಿನ ಪದಾರ್ಥಗಳ ನಿಜಸ್ವರೂಪವನ್ನೂ ಅಡಗಿಸಿಟ್ಟು ಅವುಗಳ ಬಗ್ಗೆಯೂ ತಿಳಿದುಕೊಳ್ಳುವ ಕುತೂಹಲ ಹೆಚ್ಚಾಗುವಂತೆ ಮಾಡಿರುವನು. ಭಗವಂತನು ನಮಗೆ ಆವರಕನಾಗಿರುವುದರಿಂದಲೇ ನಮಗೆ ನಮ್ಮ ಸ್ವರೂಪ ಯಾವುದೆಂಬುದು ತಿಳಿದಿಲ್ಲ.

**೫೬೧. ವಾರುಣಃ – ತೃಪ್ತಿ ಜನಕವಾದ ನೀರಿನ ಮೇಲೆ ಯಾವಾಗಲೂ ಪವಡಿಸಿರುವವನು.**

**ವಿವರಣೆ :** ವರುಣ ಸಂಬಂಧಿ ವಾರುಣ. ಇಲ್ಲಿ ವರುಣ ಎಂದರೇನು ? ನೀರು ಎಂದರ್ಥ. ನೀರಿನ ಅಭಿಮಾನಿ ದೇವತೆಗೆ ವರುಣ ಎಂಬ ಹೆಸರಿದೆ. ಅಭಿಮಾನಿಯ ಹೆಸರು ಅವನ ಅಭಿಮಾನಕ್ಕೆ ಪಾತ್ರವಾದ ಪದಾರ್ಥಕ್ಕೂ ಬರುವುದು. ಅಭಿಮಾನಕ್ಕೆ ಪಾತ್ರವಾದದ್ದರ ಹೆಸರು ಅಭಿಮಾನಿಗೂ ಬರುವುದುಂಟು. ಆದುದರಿಂದ ನೀರಿನ ಅಭಿಮಾನಿಗಿರುವ ವರುಣ ಹೆಸರು ನೀರಿಗೆ ಬರುವುದು ಸಹಜ.

ಆದುದರಿಂದ ವರುಣನ ಸಂಬಂಧಿ ಎಂಬ ಅರ್ಥದಲ್ಲಿ ಭಗವಂತ ವಾರುಣ. ಭಗವಂತನಿಗೆ ನೀರಿನ ಸಂಬಂಧವಾದರೂ ಯಾವುದು ? ಭಗವಂತ 'ಜಲಶಾಯಿ'- ಯಾವಾಗಲೂ ನೀರಿನ ಮೇಲೆ ಪವಡಿಸಿರುವವನು. ನೀರಾದರೂ ತರ್ಪಕ, ತೃಪ್ತಿ ಜನಕ. ತರ್ಪಕವಾದ ನೀರಿನ ಜೊತೆಗೆ ಇರುವವನು ಎಂದರೆ ಯಾವಾಗಲೂ ತೃಪ್ತಿಜನಕ ಎಂದು ಪರ್ಯವಸಿತಾರ್ಥ.

**೫೬೨. ವೃಕ್ಷಃ – ನಮಗೆ ಎಟಕದ ಕಲ್ಪನೆಗಳನ್ನು ನಾಶಪಡಿಸುವವನು.**

ವಿವರಣೆ: ವೃಕ್ಷತಿ - ಭಿನತ್ತಿ ಇತಿ - ಭೇದನ ಮಾಡುವವನು, ಹಿಂಸೆ ಮಾಡುವವನು ದೇವರು. ಆದುದರಿಂದ ಅವನು ವೃಕ್ಷ. ಮರವನ್ನು ನಾವು ವೃಕ್ಷ ಎಂದು ಕರೆಯುವೆವು. ಯಾಕೆ ? ಒಂದಲ್ಲ ಒಂದು ದಿನ, ಅದು ಕೊಡಲಿಯ ಏಟಿಗೆ ತಲೆ ಕೊಡಬೇಕು. ಅಂದರೆ ಭೇದನಕ್ಕೆ ಒಳಗಾಗಬೇಕು. ಆದ್ದರಿಂದ ವೃಕ್ಷ. ಭಗವಂತನಾದರೂ ಭೇದನ ಮಾಡುವ ಪ್ರಯುಕ್ತ ವೃಕ್ಷ.

'.....ಭಜತಾಂ ಕಲ್ಪವೃಕ್ಷಾಯ ನಮತಾಂ ಕಾಮಧೇನವೇ' - ಎಂದು ಶ್ರೀ ರಾಘವೇಂದ್ರ ಸ್ವಾಮಿಗಳನ್ನು ಕಾಮಧೇನು ಎಂದು ಕರೆದ ಮೇಲೆ ಪುನಃ 'ಕಲ್ಪವೃಕ್ಷ'- ಎಂದು ಕರೆದದ್ದಾದರೂ ಯಾಕೆ ? ನಮಗೆ ಎಟಕದ್ದರ ಕಲ್ಪನೆಗಳನ್ನು ಭೇದಿಸುವವರೆಂಬ ಅಭಿಪ್ರಾಯದಲ್ಲಿಯೇ ರಾಘವೇಂದ್ರ ಗುರುಗಳನ್ನು 'ಕಲ್ಪವೃಕ್ಷ' ಎನ್ನಲಾಗಿದೆ. ಭಗವಂತನೂ 'ವೃಕ್ಷ' ಎನಿಸುವುದು ನಮಗೆ ಎಟಕದ್ದನ್ನು ನಾವು ಕಲ್ಪಿಸಿಕೊಳ್ಳುವ ಪ್ರಯುಕ್ತ ದುಃಖ ಆಗದಂತೆ, ಅಂತಹ ಕಲ್ಪನೆಗಳನ್ನೇ ಭೇದಿಸುವವನು ಎಂಬ ಅರ್ಥದಲ್ಲಿ. ನಮ್ಮ ದುಃಖಕ್ಕೆ ಮುಖ್ಯ ಕಾರಣವೇ ಹಾಗಾಗಬೇಕು ಹೀಗಾಗಬೇಕು- ಎಂದೆಲ್ಲ ಮನಸ್ಸಿನಲ್ಲಿ ಕಲ್ಪಿಸಿಕೊಂಡು ಅದು ಈಡೇರದೆ ಇರುವುದು. ಹಾಗೆ ದುಃಖ ಬಾರದಿರಲಿ ಎಂಬ ದೃಷ್ಟಿಯಿಂದ ದೇವರು ನಮ್ಮ ಮನಸ್ಸಿನ ಕಲ್ಪನೆಗಳನ್ನೇ ನಾಶಮಾಡುವನು.

**೫೬೩. ಪುಷ್ಕರಾಕ್ಷಃ – ಹೊಸ ಚೈತನ್ಯವನ್ನುಂಟುಮಾಡುವ ನೋಟವುಳ್ಳವನು.**

ವಿವರಣೆ : ಪುಷ್ + ಕರ + ಅಕ್ಷಃ ಪುಷ್ಕರಾಕ್ಷಃ | ಅಕ್ಷ ಅಂದರೆ ನೋಟ. ಕೃಷ್ಣನ ನೋಟ ಒಂದು ಸಾಕು. ಅವನೊಮ್ಮೆ ನಮ್ಮನ್ನು ನೋಡಿದನೆಂದರೆ ನಮ್ಮಲ್ಲಿ ವಿದ್ಯುತ್‌ಸಂಚಾರ ಆದಂತಾಗುವುದು. ನಮ್ಮಲ್ಲಿ ಏನೋ ಒಂದು ಬಗೆಯ ಪುಷ್ಟಿ ಉಂಟಾಗುವುದು. ಪುಷ್ ಎಂದರೆ ಪುಷ್ಟಿ. ಕರ ಎಂದರೆ ಉಂಟು ಮಾಡುವಂತಹದ್ದು. ಅಕ್ಷ ಎಂದರೆ ನೋಟ.

'...... ಶ್ರೀರ್ಯತ್ಕಟಾಕ್ಷಬಲವತ್ಯಜಿತಂ ನಮಾಮಿ' - ಎಂದು ಶ್ರೀ ಮಧ್ವರು ಅಂತಾರೆ ಅಜಿತ, ನಿನಗೆ ನಮಸ್ಕಾರ. ನಿನ್ನ ಕಟಾಕ್ಷವನ್ನು, ಕಡೆಗಣ್ಣ ನೋಟವನ್ನು ಲಕ್ಷ್ಮೀದೇವಿಯ ಮೇಲೆ ಹಾಯಿಸಿದ್ದರಿಂದ ಆಕೆ ತುಂಬ 'ಬಲವತೀ' - ಸಾಮರ್ಥ್ಯ ಸಂಪನ್ನಳಾಗಿರುವಳು. ಎಷ್ಟು ಸಾಮರ್ಥ್ಯ ? 'ವಿಶ್ವ ಸ್ಥಿತಿ ಪ್ರಳಯಸರ್ಗ ಮಹಾವಿಭೂತಿ - ವೃತ್ತಿಪ್ರಕಾಶನಿಯಮಾವೃತಿಬಂಧಮೋಕ್ಷಾಃ' - ವಿಶ್ವದ ಸ್ಥಿತ್ಯಾದಿಗಳನ್ನೆಲ್ಲ ಅನಾಯಾಸವಾಗಿ ನಿರ್ವಹಿಸುವ ತಾಕತ್ತು ಲಕ್ಷ್ಮೀದೇವಿಗೆ ಬಂದದ್ದು ನಿನ್ನ ಕಟಾಕ್ಷಕ್ಕೆ

ಆಕೆ ಪಾತ್ರಳಾಗಿರುವುದರಿಂದ. ಲಕ್ಷ್ಮೀದೇವಿಯ ಮೇಲೆಯೇ ನಿನ್ನ ಕಟಾಕ್ಷ ಇಷ್ಟೊಂದು ಪ್ರಭಾವ ಬೀರುವುದೆಂದರೆ ನಮ್ಮ ಮೇಲೆ ಅದರ ಪ್ರಭಾವ ಬೀಳಲೇಬೇಕು ತಾನೇ ? ಭೀಷ್ಮರು ಕೃಷ್ಣನಲ್ಲಿ ನಿವೇದಿಸಿಕೊಳ್ಳುವರು ನಾನು ದುರ್ಯೋಧನನ ಸೇನೆಯಲ್ಲಿದ್ದು ನಿನ್ನ ಕಟಾಕ್ಷಕ್ಕೆ ಗುರಿಯಾಗಿದ್ದುದರಿಂದಲೇ ಮಹಾಭಾರತ ಯುದ್ಧದಲ್ಲಿ ಹತ್ತು ದಿನಗಳ ಕಾಲ ಯುದ್ಧ ಮಾಡುವ ಚೈತನ್ಯ ನನ್ನಲ್ಲಿ ಬಂದಿತ್ತು.

ನಮಗೆ ನೇರವಾಗಿ ದೇವರ ಕಟಾಕ್ಷಕ್ಕೆ ಪಾತ್ರವಾಗುವ ಸೌಭಾಗ್ಯ ದೊರಕದಿರಬಹುದು. ಆದರೆ ದೇವರ ಪ್ರತಿಮೆಯ ಕಟಾಕ್ಷಕ್ಕಾದರೂ ನಾವು ಪಾತ್ರರಾಗಿ ಹೊಸ ಚೈತನ್ಯವನ್ನು ಪಡೆಯೋಣ.

**೫೬೪. ಮಹಾಮನಾಃ – ಭಕ್ತರನ್ನು ಉದ್ಧಾರ ಮಾಡಬೇಕೆಂಬ ಭಾರೀ ದೊಡ್ಡ ಮನಸ್ಸು ಉಳ್ಳವನು.**

ವಿವರಣೆ : 'ಪುಷ್ಕರಾಕ್ಷ' ಎಂಬ ನಾಮದಿಂದ ತಿಳಿಸಿದಂತೆ ತನ್ನ ಕೃಪಾಕಟಾಕ್ಷವನ್ನು ನಮ್ಮ ಮೇಲೆ ಹರಿಸುವ ಮೂಲಕ ನಮ್ಮ ಉದ್ಧಾರ ನಡೆಸುವ ಭಾರೀ ದೊಡ್ಡಮನಸ್ಸು ಉಳ್ಳವನು ಎಂಬುದೇ 'ಮಹಾಮನಾಃ' ನಾಮದ ಅರ್ಥ.

ಏನಾದರೂ ಅಪರಾಧ ಮಾಡಿದಾಗ, ದೊಡ್ಡ ಮನಸ್ಸಿನಿಂದ ಅದನ್ನು ಕ್ಷಮಿಸಬೇಕು '' ಎಂದು ಕೇಳಿಕೊಳ್ಳಲಾಗುವುದು. ಇಂತಹ 'ದೊಡ್ಡ ಮನಸ್ಸು' ಉಳ್ಳವನೇ 'ಮಹಾಮನಾಃ' !

ದೊಡ್ಡ ಸ್ವಾಮಿಗಳು, ಆಚಾರ್ಯರು - ನಮ್ಮ ಮನೆಗೆ ಬರಬೇಕೆಂದು ತುಂಬ ಇಚ್ಛೆ ಇರುವುದು. ಆಗ 'ದೊಡ್ಡ ಮನಸ್ಸು' ಮಾಡಿ ನಮ್ಮ ಮನೆಗೆ ಬರಬೇಕೆಂದು ಬಿನ್ನವಿಸುವುದುಂಟು.

ಹೀಗೆ ಅಂತಹ ಅತಿಥಿಗಳಿಗೆ, ಅಭ್ಯಾಗತರಿಗೆ ನಮ್ಮ ಆತಿಥ್ಯವನ್ನು ಸ್ವೀಕರಿಸಬೇಕೆಂಬ 'ದೊಡ್ಡ ಮನಸ್ಸು' ಉಂಟಾಗಬೇಕೆಂದರೆ ನಮ್ಮ ಆತಿಥ್ಯದಲ್ಲಿ ಏನಾದರೂ ಲೋಪ ದೋಷ ಆದರೂ ಅದನ್ನು ಗಣನೆಗೆ ತಂದು ಕೊಳ್ಳದಂತೆ ಅವರಲ್ಲಿ 'ದೊಡ್ಡ ಮನಸ್ಸು' ಉಂಟಾಗಬೇಕೆಂದರೆ ನಾವು ಅವರಲ್ಲಿ 'ಮಹಾಮನಾಃ'- ಎಂಬ ಭಗವಂತನನ್ನು ಚಿಂತಿಸೋಣ. ಆ ಭಗವದ್ರೂಪದ ಅನುಗ್ರಹದಿಂದ ಅವರೂ ನಮ್ಮ ಬಗ್ಗೆ 'ಮಹಾಮನಸ್ಕ' ರಾಗುವರು.

**ಭಗವಾನ್ ಭಗಹಾऽऽನಂದೀ ವನಮಾಲೀ ಹಲಾಯುಧಃ**
**ಆದಿತ್ಯೋ ಜ್ಯೋತಿರಾದಿತ್ಯಃ ಸಹಿಷ್ಣುರ್ಗತಿಸತ್ತಮಃ || ೬೦ ||**

**೫೬೫. ಭಗವಾನ್ – * ಭಗ ಎನಿಸುವ ಆರುಗುಣಗಳನ್ನು ಪೂರ್ಣ ಪ್ರಮಾಣದಲ್ಲಿ ಹೊಂದಿರುವವನು.**

*** ಐಶ್ವರ್ಯಾದಿ ಗುಣಪೂರ್ಣನಾಗಿಯೇ ಅವತಾರ ರೂಪಗಳಲ್ಲಿ ಸಂಚರಿಸುತ್ತಿರುವವನು.**

ವಿವರಣೆ : ಭಗವಾನ್ ಎಂಬ ನಾಮವನ್ನು ನಾವು ಬಹಳ ಬಾರಿ ಕೇಳಿರುತ್ತೇವೆ. ಭಗ ಉಳ್ಳವನೇ ಭಗವಾನ್. ಆರು ರೀತಿಯ ಗುಣಗಳೇ ಭಗ ಎನಿಸಿವೆ. ಇವು ಪೂರ್ಣ ಪ್ರಮಾಣದಲ್ಲಿರುವ ದೇವರು ಮುಖ್ಯವಾಗಿ ಭಗವಾನ್. ಈ ಗುಣಗಳ ಪ್ರಮಾಣ ಕಡಿಮ್ಮೆ ಆಗುತ್ತ ಬಂದಂತೆ ಉಳಿದ ದೇವಾದಿಗಳು ಅಮುಖ್ಯವಾಗಿಯಷ್ಟೇ ಭಗವಾನ್ ಎನಿಸುವವರು.

ಇನ್ನೊಂದು ಅರ್ಥ - ವಾನ್ ಎಂದರೆ ಸಂಚಾರ ಮಾಡುವವನು. ವಾತೀತಿ ವಾನ್ | ವಾಯುಶಬ್ದವೂ ಈ ಕ್ರಿಯಾಪದದಿಂದಲೇ ನಿಷ್ಪನ್ನವಾದುದು. ಭಗ ಎಂದರೆ ಪೂರ್ಣನಾಗಿ. ಪೂರ್ಣನಾಗಿದ್ದುಕೊಂಡೇ ಸಂಚರಿಸುವವನೇ ಭಗವಾನ್. ದೇವರು ಮೂಲರೂಪದಲ್ಲಿ ಹೇಗೆ ಪೂರ್ಣನೋ ಹಾಗೆಯೇ ಅವತಾರಗಳಲ್ಲೂ ಪೂರ್ಣನೇ. ಮತ್ಸ್ಯ, ಕೂರ್ಮ ಮುಂತಾದ ಪಶುರೂಪದ ಅವತಾರಗಳಿರಬಹುದು. ರಾಮ, ಕೃಷ್ಣ ಮುಂತಾದ ಮಾನವರೂಪದ ಅವತಾರಗಳಿರಬಹುದು - ಈ ಎಲ್ಲ ರೂಪಗಳಲ್ಲೂ ದೇವರು ಪೂರ್ಣನೇ. 'ಪೂರ್ಣಮದಃ ಪೂರ್ಣಮಿದಂ.....' ಮೂಲರೂಪಿ ನಾರಾಯಣನಿಗೆ ಗೊತ್ತಿದೆ, ಕೃಷ್ಣನಿಗೆ ಗೊತ್ತಿಲ್ಲ - ಎನ್ನುವ ಪ್ರಸಂಗವೇ ಇಲ್ಲ. ಹೀಗಿದ್ದರೂ ಮೂಲರೂಪಕ್ಕೂ ಅವತಾರಗಳಿಗೂ ವ್ಯತ್ಯಾಸವನ್ನು ಕಂಡಲ್ಲಿ ಬೆಟ್ಟದ ಮೇಲಿನಿಂದ ನೀರು ಕೆಳಗೆ ಧುಮುಕುವಂತೆ ಕೆಳಗತಿಗೆ ಪತಿತನಾಗಬೇಕಾದೀತು! ಇಂದ್ರ ಅರ್ಜುನರಲ್ಲಿ ಸೂರ್ಯಕರ್ಣರಲ್ಲಿ ಹೀಗಿಲ್ಲ. ಇಂದ್ರನಿಗೆ ತಿಳಿದದ್ದೆಲ್ಲ ಅರ್ಜುನನಿಗೆ ತಿಳಿಯುವುದಿಲ್ಲ. ಸೂರ್ಯನಿಗೆ ಗೊತ್ತಿದ್ದದ್ದೆಲ್ಲ ಕರ್ಣನಿಗೆ ಗೊತ್ತಿರುವುದಿಲ್ಲ. ಆದರೆ ದೇವರ ರೂಪಗಳಲ್ಲಿ ಹೀಗಿಲ್ಲ. ಮೂಲ ರೂಪದಷ್ಟೇ ಅವತಾರ ರೂಪವೂ ಪೂರ್ಣ. ಇದನ್ನೇ 'ಭಗವಾನ್' - ಎಂಬ ನಾಮ ತಿಳಿಸುತ್ತಿದೆ. 'ಭಗ' - ಐಶ್ವರ್ಯಾದಿ ಗುಣರೂಪಿಯಾಗಿಯೇ ಅವತಾರ ರೂಪಗಳಲ್ಲೂ ಸಂಚರಿಸುತ್ತಿರುವವನೇ 'ಭಗವಾನ್'

**೫೬೬. ಭಗಹಾ – * ದೈತ್ಯರಲ್ಲಿ ಭಗ ಎನಿಸುವ ಗುಣಗಳು ಬಂದರೆ ಅವನ್ನು ನಾಶ ಮಾಡುವವನು.**

*** ಭಕ್ತರ ಗರ್ವವನ್ನು ನಾಶ ಪಡಿಸುವವನು.**

**ವಿವರಣೆ :** ಭಗ ಎನಿಸುವ ಗುಣಗಳು ದೈತ್ಯರಲ್ಲಿ ಬರುವ ಪ್ರಸಂಗ ಇದ್ದರೆ, ಅದನ್ನು ಹಂತಿ ನಾಶ ಪಡಿಸುತ್ತಾನೆ. ಆದುದರಿಂದ ದೇವರು 'ಭಗಹಾ'.

ಹಾಗೆಯೇ ಭಕ್ತರಲ್ಲಿ ಎಲ್ಲಾದರೂ ಈ ಗುಣಗಳ ಪ್ರಯುಕ್ತ ಗರ್ವ ಪಡುವ ಪ್ರಸಂಗ ಇದ್ದರೆ ಕೂಡಲೇ ಈ ಗುಣಗಳನ್ನು ನಾಶಪಡಿಸಿ ಅವರ ಗರ್ವವನ್ನು ಇಳಿಸುತ್ತಾನೆ. ದುರ್ಯೋಧನಾದಿ ಅಭಕ್ತರು ಗರ್ವ ಪಟ್ಟರೆ ಅದಕ್ಕೆ ತುಪ್ಪ ಸುರಿಸುವ ಭಗವಂತ ಭಕ್ತರಲ್ಲಿ ಗರ್ವ ಕಾಣಿಸಿಕೊಂಡರೆ ಕೂಡಲೇ ಹೊಡೆತ ಕೊಟ್ಟು ತುರ್ತು ಚಿಕಿತ್ಸೆ ಮಾಡುವನು. ಅದಕ್ಕಾಗಿಯೇ ಹಿರಿಯರು ಒಂದು ಮಾತು ಅಂದದ್ದುಂಟು- ಭಕ್ತರು ತಾವು ಜೀವನದಲ್ಲಿ ಕಷ್ಟ ಪಡುವಷ್ಟು ದುಷ್ಟರು ಕಷ್ಟ ಪಡುವುದಿಲ್ಲ - ಎಂದು. ಯಾಕೆ ? ಭಕ್ತರಿಗೆ ಅಹಂಕಾರ ಬರಬಾರದೆಂದು ಭಗವಂತ ಆಗಾಗ್ಗೆ ಏಟು ಕೊಡುತ್ತ ಇರುವನು. ಅಹಂಕಾರ ಪಟ್ಟನೋ ಭಕ್ತ ಸತ್ತ ಎಂದೇ ಅರ್ಥ. ಭಕ್ತ ಸಾಯುವುದನ್ನು ಭಗವಂತನಿಗೆ ನೋಡಲಿಕ್ಕೆ ಆಗುವುದಿಲ್ಲ. ಆದ್ದರಿಂದ ಭಕ್ತನಿಗೆ ಸಮಾಜದಲ್ಲಿ ಅವಮಾನ ಇತ್ಯಾದಿಗಳು ಆಗುವಂತೆ ಮಾಡಿ ಅವನು ಸಮಾಜದಲ್ಲಿ ಹಾರಾಡದಂತೆ ಮಾಡುವನು. ಆದ್ದರಿಂದ ಭ - ಭಕ್ತನ, ಗ - ಗರ್ವವನ್ನು ಹಂತಿ - ನಾಶ ಮಾಡುವವನು - ಭಗಹಾ.

**೫೬೭. ನಂದೀ – ನಮಸ್ಕರಿಸಿ ಕೊಳ್ಳಲು ಬೇಕಾದ ಯೋಗ್ಯತೆಯನ್ನು ಕೊಡುವ ಸ್ವಭಾವದವನು.**

**ವಿವರಣೆ :** ಒಂದು ಅಕ್ಷರ ಹೇಳಿದರೂ ಅದನ್ನು ಬಿಡಿಸಿಕೊಂಡು ಹೋಗುವ ಪ್ರವೃತ್ತಿ ಶಾಸ್ತ್ರದಲ್ಲಿ ಬಂದಿದೆ. ಅದಕ್ಕನುಗುಣವಾಗಿ -'ನಂ'- ಎಂದರೆ ನಮ್ಯತ್ವ - ನಮಿಸಿಕೊಳ್ಳಲು ಬೇಕಾಗುವ ಯೋಗ್ಯತೆ. ನಮ್ಮಲ್ಲಿ ನಿಮ್ಮಲ್ಲಿ ಏನಾದರೂ ಚಿಕ್ಕ ಪ್ರಮಾಣದಲ್ಲಾದರೂ ನಮ್ಯತ್ವ - ಇತರರಿಂದ ನಮಿಸಿಕೊಳ್ಳಲು ಬೇಕಾದ ಅರ್ಹತೆ ಇದ್ದರೆ ಅದನ್ನು ಕೊಟ್ಟವನು ದೇವರು - 'ನಂದೀ'. ನಮ್ಯತ್ವವನ್ನು ಕೊಡುವ ಸ್ವಭಾವದವನು 'ನಂದೀ' ಎನಿಸುವನು.

ರಾಜಾಂಗಣದಲ್ಲಿ ಉಪನ್ಯಾಸ ಮುಗಿಸಿಕೊಂಡು ಹೋಗುತ್ತಿದ್ದರೆ ಎಷ್ಟೋ ಮಂದಿ ನಮಸ್ಕರಿಸುವರು.. ಅದೇ ಚಿತ್ರಮಂದಿರಕ್ಕೆ ಹೋಗಿ ಬಂದೆ ಎಂದಾಗ ನಮಸ್ಕರಿಸುವುದಿಲ್ಲ. ನಿಮ್ಮ ಆಧ್ಯಾತ್ಮಿಕ ಪ್ರವೃತ್ತಿಯನ್ನು ಮೆಚ್ಚಿ ನಮಸ್ಕರಿಸುವರು.

ಹೀಗೆ ನಮಸ್ಕಾರಾರ್ಹತೆಯನ್ನು ಕೊಡುವವನು ಭಗವಂತ.

**೫೬೮. ವನಮಾಲೀ – * ತನ್ನ ಭಕ್ತರು ಒಂದೆಡೆ ಸೇರಿದಾಗ ಅಲ್ಲಿ ಶೋಭಿಸುವವನು.**

***        ಯಾವಾಗಲೂ ವನಮಾಲೆಯನ್ನು ಧರಿಸುವವನು.**

**ವಿವರಣೆ :** ಮಾಲೀ ಎಂದರೆ ಶೋಭಿಸುವ ಸ್ವಭಾವದವನು. ವನ ಎಂದರೆ ಕಾಡು. ಕಾಡಿಗಾದರೂ ವನ ಎಂಬ ಹೆಸರು ಯಾಕೆ ? ಒಂದೇ ಮರ ಇದ್ದರೆ ವನ ಆಗುವುದಿಲ್ಲ. ಒಟ್ಟಿಗೆ ಐವತ್ತು ಅರ್ವತ್ತು ಮರಗಳಿದ್ದರೆ ವನ ಎನಿಸುವುದು. ಹಾಗಾದರೆ ವನ ಎಂದರೆ ಒಟ್ಟಿಗೆ ಇರುವುದು. 'ವನ ಸಂಭಕ್ತೌ' - ಎಂಬ ಕ್ರಿಯಾಪದದಿಂದ ರೂಪುಗೊಂಡ 'ವನ' ಶಬ್ದಕ್ಕೆ ಒಟ್ಟಿಗೆ ಇರುವುದೆಂಬುದೇ ಮೂಲತಃ ಇರುವ ಅರ್ಥ. **'ಹಿತ್ವಾಽಽತ್ಮಪಾತಂ ಗೃಹಮಂಧಕೂಪಂ ವನಂ ಗತೋ ಯುದ್ಧರಿಮಾಶ್ರಯೇತ '** - ಎಂದು ಪ್ರಹ್ಲಾದ ತನ್ನ ಅಪ್ಪ ಹಿಣ್ಯಕಶಿಪುವಿನಲ್ಲಿ ಆತ್ಮಪಾತಕ್ಕೆ ಪ್ರಯೋಜಕವಾದ ಮನೆಯನ್ನು ಬಿಟ್ಟು 'ವನಕ್ಕೆ' ಹೋಗಬೇಕೆಂದು ತಿಳಿಸಿದ್ದು, ಆ 'ವನ' ತಿಳಿದವರೆಲ್ಲ ಒಟ್ಟಿಗಿರುವಂತಹದ್ದೇ.

**'.......ತನ್ನ ಕಿಂ ನೇತಿ ವಿದ್ವತ್ಸು ಮೀಮಾಂಸಿತಮ್'** - ಎಂದು ದ್ವಾದಶ ಸ್ತೋತ್ರದಲ್ಲಿ ತಿಳಿದವರೆಲ್ಲ ಒಟ್ಟು ಸೇರಿದಾಗ ದೇವರ ಕುರಿತು ಚರ್ಚೆ ನಡೆಯುವುದೆಂದು ತಿಳಿಸಲಾಗಿದೆ.

ವ್ಯಾಸತೀರ್ಥರು, ಪುರಂದರದಾಸರು, ವಾದಿರಾಜರು, ಕನಕದಾಸರು - ಒಟ್ಟು ಸೇರಿ ಏನೇನೋ ಚರ್ಚೆ ನಡೆಸುತ್ತ ಇದ್ದರಂತೆ. ದನಗಾಹಿ ಮಂದಿ ಎಲ್ಲ ಸುತ್ತುವರಿದು ಆಶ್ಚರ್ಯದಿಂದ ನೋಡುತ್ತಿದ್ದರು. ಅವರಿಗೆ ಇವರ ವ್ಯವಹಾರ ಅರ್ಥವಾಗುತ್ತಿರಲಿಲ್ಲ. ಆದರೆ ಅವರ ಮುಖಗಳಲ್ಲಿಯ ಪ್ರಸನ್ನತೆಯನ್ನು ಕಂಡೇ ಇವರೆಲ್ಲರಿಗೆ ಆನಂದವಾಗುತ್ತ ಇತ್ತಂತೆ-

**'ನಗುವರೋ ರೋದಿಸುವರೋ ನಾಟ್ಯವಾಡುವರೋ**
**ಪಾಂಡುರಂಗ ನಿನ್ನ ಕೊಂಡಾಡುವ ಮಂಗಳಾತ್ಮರ.....'**

**ಎಂದು ಜಗನ್ನಾಥದಾಸರು ಉದ್ಗರಿಸಿದ್ದಾರೆ.**

ಇವರೆಲ್ಲ ಒಂದೇ ಕಾಲಕ್ಕೆ ಬರುವ ಬದಲು ಬೇರೆ ಬೇರೆ ಕಾಲದಲ್ಲಿ ಬಂದಿದ್ದರೆ ನಮಗೂ ಅಂತಹ ಮಹಾತ್ಮರ ಸಂಪರ್ಕವಾಗುತ್ತಿತ್ತು ತಾನೇ ? - ಎಂದು ಕೆಲವರು ಕೇಳುವುದುಂಟು. ಆದರೆ ಅಂತಹವರಿಗೆ ನಮ್ಮ ಭಾಷೆ, ನಮ್ಮ ವ್ಯವಹಾರ ಅರ್ಥ ವಾಗುವುದಿಲ್ಲ, ನಮಗೆ ಅವರ ಭಾಷೆ, ಅವರ ವ್ಯವಹಾರ ಅರ್ಥವಾಗುವುದಿಲ್ಲ. ಅದಕ್ಕಾಗಿ ಅವರು ತಮ್ಮ ಭಾಷೆ, ವ್ಯವಹಾರಗಳನ್ನು ತಿಳಿದುಕೊಳ್ಳುವವರ ಜೊತೆಗೇ ಇರುವರು. ಹೀಗೆ ಭಗವಂತನು ತನ್ನನ್ನು ಅರಿತವರ ಮಧ್ಯದಲ್ಲಿ ಶೋಭಿಸುತ್ತಿರುವವನು. 'ವನಮಾಲೀ' - ತನ್ನ ಭಕ್ತರು ಒಟ್ಟಿಗೆ ಸೇರಿದಾಗ , ಅಲ್ಲಿ

ಶೋಭಿಸುವವನು.

ಯಾವಾಗಲೂ ವನಮಾಲೆಯನ್ನು ಧರಿಸುವವನೆಂಬ ಪ್ರಸಿದ್ಧವಾದ ಮತ್ತೊಂದು ಅರ್ಥ ಇದ್ದೇ ಇದೆ.

**೫೬೯. ಹಲಾಯುಧಃ – ನೇಗಿಲನ್ನು ಆಯುಧವನ್ನಾಗಿ ಹೊಂದಿರುವವನು.**

**ವಿವರಣೆ :** ಹಲ ಎಂಬ ಆಯುಧ ಉಳ್ಳವನೇ ಹಲಾಯುಧ. ಭಗವಂತನ ಚಕ್ರ, ಶಂಖ, ಗದಾ ಹಾಗೂ ಪದ್ಮ ಆಯುಧಗಳು ಪ್ರಸಿದ್ಧವಾದವು. ಅವನ್ನು ಈಗ ತೆಗೆದುಕೊಳ್ಳುವುದಿಲ್ಲ. ಕೊನೆಗೆ ಅವುಗಳ ಉಲ್ಲೇಖ ಬರುವುದು. ಈಗ 'ಹಲ' ಎಂಬ ಆಯುಧದ ಉಲ್ಲೇಖ.

ಹಲ ಎಂದರೆ ನೇಗಿಲು. ನೇಗಿಲಿನ ಕೆಲಸ ಏನು ? ಅಡಿಗೆ ಬಿದ್ದದ್ದನ್ನು ಮೇಲೆ ಹಾಕುವುದು ನೇಗಿಲಿನ ಕೆಲಸ. ಭೀಷ್ಮರು ಭಗವಂತನ ಕೈಯಲ್ಲಿ ಅಂತಹ ಹಲವನ್ನು ಚಿಂತಿಸುವುದಕ್ಕೆ ಕಾರಣ ಈಗಾಗಲೇ ಅಡಿಗೆ ಬಿದ್ದು ಮರೆತು ಹೋದ ನಾಮಗಳನ್ನು ಮೇಲಕ್ಕೆ ಹಾಕಿ ಅವುಗಳ ಸ್ಮರಣೆ ಬರುವಂತೆ ಭಗವಂತನು ಮಾಡಲೆಂದು.

ವಿದ್ಯಾರ್ಥಿ ಪರೀಕ್ಷೆಗಾಗಿ ಭಾರೀ ಭಾರೀ ಓದಿರುವನು. ಆದರೆ ಪರೀಕ್ಷಾ ಹಾಲಿಗೆ ಹೋದಾಗ ಓದಿದ ಯಾವುದೂ ನೆನಪಿಗೆ ಬರುವುದಿಲ್ಲ. ಅಂತಹ ಪ್ರಸಂಗಗಳಲ್ಲಿ ಬೇಕು ಭಗವಂತನ ಕೈಯಲ್ಲಿ ವಿರಾಜಿಸುವ ನೇಗಿಲಿನ ಅನುಸಂಧಾನ. ನೇಗಿಲನ್ನು ಧರಿಸಿದ ದೇವರನ್ನೇ ಚಿಂತಿಸೋಣ. ಆ ನೇಗಿಲಾದರೂ ಅಡಿಗೆ ಬಿದ್ದದ್ದನ್ನು ಮೇಲಕ್ಕೆ ಹಾಕುವ ಧರ್ಮವುಳ್ಳದ್ದೆಂಬ ಅನುಸಂಧಾನದಿಂದಾಗಿ ಮರೆತು ಅಡಿಗೆ ಬಿದ್ದ ವಿಷಯಗಳು ಮೇಲಕ್ಕೆ ಬಂದಾವು.

**೫೭೦. ಆದಿತ್ಯಃ – ಸೂರ್ಯನ ಮೂಲಕ ಎಲ್ಲರ ಆಯುಷ್ಯವನ್ನು ಹೀರುವವನು.**

**ವಿವರಣೆ :** ಆದತ್ತೇ ಇತಿ ಆದಿತ್ಯಃ - ಸ್ವೀಕರಿಸುವವನು ಎಂಬ ಕಾರಣದಿಂದ ಭಗವಂತನಿಗೆ ಆದಿತ್ಯ ಎಂಬ ಹೆಸರು.

ಸೂರ್ಯನಿಗೆ ಆದಿತ್ಯ ಎಂಬ ಹೆಸರಿದೆ. ಯಾಕಾಗಿ ? ನೀರನ್ನು ಸ್ವೀಕರಿಸುವನು ಎಂಬುದಕ್ಕಾಗಿ. ನೀರು ಎಲ್ಲಿದ್ದರೂ ಸೂರ್ಯ ಅದನ್ನು ಕಿರಣಗಳ ಮೂಲಕ ಹೀರುವನು - ಆದುದರಿಂದಲೇ ಅವನು ಆದಿತ್ಯ.

'ಜೀವನಂ ಭುವನಂ ವನಮ್' - ಎಂದು ನೀರಿಗೆ ಜೀವನ ಎಂದೇ ಹೆಸರಿದೆ. ಯಾಕೆಂದರೆ ಜೀವನ ನಡೆಸುವಲ್ಲಿ ನೀರಿಗೆ ತುಂಬ ಪ್ರಾಶಸ್ತ್ಯ ಇದೆ. ನೀರಿಲ್ಲದಿದ್ದರೆ

ಬದುಕುವುದಕ್ಕೆ ಸಾಧ್ಯವಿಲ್ಲ. ಜೀವ ಒಂದು ಶರೀರದಿಂದ ಮತ್ತೊಂದು ಶರೀರಕ್ಕೆ ಪಂಚ ಭೂತಗಳ ಜೊತೆಗೆ ಹೋಗುವುದಾದರೂ 'ಆಪಃ' - ಎಂಬ ಜಲವಾಚಕ ಶಬ್ದವನ್ನು ಉಲ್ಲೇಖಿಸಿಯೇ ತಿಳಿಸುವಷ್ಟು ನೀರಿಗೆ ಪ್ರಾಶಸ್ತ್ಯ ಕೊಡಲಾಗಿದೆ.

ಹೀಗೆ ಸೂರ್ಯ ಜೀವನ ಎನಿಸುವ ನೀರನ್ನೂ, ಜೀವನವನ್ನೂ ಅಂದರೆ ನಮ್ಮ ಆಯುಷ್ಯವನ್ನೂ ಹೀರುವನು. ಆದುದರಿಂದ ಆದಿತ್ಯ ಎನಿಸುವನು.

ಆದರೆ ಸೂರ್ಯನಿಗಾದರೂ ನಮ್ಮ ಆಯುಷ್ಯವನ್ನು ಹೀರುವ ಸಾಮರ್ಥ್ಯ ಹೇಗೆ ಬರುವುದು ? ದೇವರು ನಿಜವಾಗಿ ಆದಿತ್ಯನಾಗಿ ಅವನೊಳಗೆ ಇರುವುದರಿಂದ ಅವನು ನೀರನ್ನೂ, ನಮ್ಮೆಲ್ಲರ ಆಯುಷ್ಯವನ್ನೂ ಹೀರುತ್ತಿರುವನು. ಆದುದರಿಂದ ಮುಖ್ಯವಾಗಿ ನಮ್ಮ ಆಯುಷ್ಯವನ್ನು ಹೀರಿ ಆದಿತ್ಯ ಎನಿಸುವವನು ದೇವರೇ.

ಭೀಷ್ಮರು ಕೃಷ್ಣನಲ್ಲಿ ಬಿನ್ನವಿಸಿಕೊಳ್ಳುವರು ಕೃಷ್ಣ ನನ್ನ ಪಾಲಿಗೆ ಆದಿತ್ಯನಾಗಿ ಬಂದು ಎದುರಿನಲ್ಲಿ ಕುಳಿತಿರುವಿ. ಇನ್ನು ಕೆಲವೇ ದಿನಗಳಲ್ಲಿ ನನ್ನ ಆಯುಷ್ಯವನ್ನು ಪೂರ್ಣವಾಗಿ ಹೀರಿ ನನಗೆ 'ಆದಿತ್ಯ' ಎನಿಸುವಿ.

**೫೭೧. ಜ್ಯೋತಿರಾದಿತ್ಯಃ – ಪ್ರಕಾಶಿಸುವ ವಸ್ತುಗಳಲ್ಲೆಲ್ಲ ಮೊದಲಿಗನಾದ ಸೂರ್ಯನಿಂದ ಆನಂದ ಹಾಗೂ ತಿಳುವಳಿಕೆಯನ್ನು ಕೊಡಿಸುವವನು.**

**ವಿವರಣೆ:** ಪ್ರಕಾಶಿಸುವ ವಸ್ತು ಜ್ಯೋತಿ. ಸೂರ್ಯ, ಚಂದ್ರ, ನಕ್ಷತ್ರಗಳು, ಬೆಂಕಿ-ಮುಂತಾದವುಗಳೆಲ್ಲ ಜ್ಯೋತಿಗಳು. ಆದರೆ ಈ ಜ್ಯೋತಿಗಳಲ್ಲಿ ಶ್ರೇಷ್ಠವಾದ, ಮೊದಲಿನ ಜ್ಯೋತಿ ಸೂರ್ಯ. ಸೂರ್ಯ ಉದಯಿಸಿದನೆಂದರೆ ಉಳಿದವುಗಳ ಬೆಳಕು ಸೂರ್ಯನ ಬೆಳಕಿನಲ್ಲಿ ಮುಸುಕಾಗುವುದು. ಉಳಿದ ಬೆಳಕು ಇದೆಯೇ ಇಲ್ಲವೋ ಎಂದೇ ತಿಳಿಯುವುದಿಲ್ಲ. ಆದುದರಿಂದಲೇ ಕೆಲವೊಮ್ಮೆ ಸೂರ್ಯೋದಯ ಆದ ಮೇಲೂ ದಾರಿದೀಪವನ್ನು ಆರಿಸುವುದೇ ಇಲ್ಲ. ಅವು ಉರಿಯುತ್ತಿವೆ ಎಂಬುದೇ ಅವರಿಗೆ ತಿಳಿಯುವುದಿಲ್ಲ. ಸೂರ್ಯ ಇಲ್ಲದಿದ್ದಾಗ ಬೆಳಕಿಗಾಗಿ ಉಳಿದ ದೀಪಗಳು ಅವಶ್ಯವೆನಿಸಿದರೂ ಸೂರ್ಯ ಉದಯಿಸಿದ ಮೇಲೆ ಅವುಗಳ ಅವಶ್ಯಕತೆಯೇ ಇರುವುದಿಲ್ಲ. ಸೂರ್ಯ ಉದಯಿಸಿದ ಮೇಲೆಯೂ ದೀಪವನ್ನು ಹಚ್ಚಿಡಲಾಗಿದೆ ಎಂದರೆ ಅದು ಅರ್ಪಣಾದೃಷ್ಟಿಯಿಂದಲೇ ಹೊರತು ನಮಗೆ ಕಾಣಿಸ ಬೇಕೆಂಬುದಕ್ಕಾಗಿ ಅಲ್ಲ. ಆದುದರಿಂದಲೇ ಹರಿಕಥಾಮೃತ ಸಾರದಲ್ಲಿ 'ಹಗಲಲ್ಲಿ ಹಚ್ಚಿದ ನಂದಾದೀಪ'ದ ಪ್ರಸ್ತಾವ ಮಾಡಲಾಗಿದೆ.

ಅಂತೂ ಸೂರ್ಯ ಜ್ಯೋತಿಗಳಲೆಲ್ಲ ಮೊದಲಿಗ. ಅದುದರಿಂದಲೇ 'ಜ್ಯೋತಿರಾದಿ' - ಅಂತಹ ಸೂರ್ಯನಿಂದಾಗಿ ಸಮಾಜಕ್ಕೆ 'ತ್ಯ' ವನ್ನು ಕೊಡುವವನು

ದೇವರು. ತ್ಯ ಎನ್ನುವಲ್ಲಿ 'ತಿ' ಎಂದರೆ 'ತೀತ್ಯಾನಂದ ಸಮುದ್ದಿಷ್ಟಃ.....' ಆನಂದ. ಯ ಎಂದರೆ ತಿಳುವಳಿಕೆ. ಸೂರ್ಯನ ಉದಯದ ಮುಂಚೆ ಕತ್ತಲೆಯಿಂದಾಗಿ ಸರಿಯಾದ ತಿಳುವಳಿಕೆ ಇರುವುದಿಲ್ಲ. ಸೂರ್ಯೋದಯವಾಯಿತೆಂದರೆ ಸರಿಯಾದ ತಿಳುವಳಿಕೆ ಹಾಗೂ ಮನಸ್ಸಿಗೆ ಉಲ್ಲಾಸ, ಆನಂದ ದೊರಕುವುದು. ದೇವರು ಆಕಾಶದಲ್ಲಿ ತುಂಬ ಎತ್ತರದಲ್ಲಿಟ್ಟು ಅವನ ಮೂಲಕ ಬೆಳಕು, ಉಷ್ಣ ಮುಂತಾದವು ದೊರಕುವಂತೆ ಮಾಡಿ ತಿಳುವಳಿಕೆ ಹಾಗೂ ಆನಂದವನ್ನು ಕೊಡಿಸುವನು. ಆದುದರಿಂದ ಅವನು 'ಜ್ಯೋತಿರಾದಿತ್ಯ'. ಜ್ಯೋತಿರಾದಿ ಎನಿಸುವ ಸೂರ್ಯನಿಂದ 'ತ್ಯ' - ತಿ ಎನಿಸುವ ಆನಂದವೂ, ಯ ಎನಿಸುವ ತಿಳುವಳಿಕೆಯೂ ಜನರಿಗೆ ದೊರಕುವಂತೆ ಮಾಡುವನು.

**೫೭೨. ಸಹಿಷ್ಣುಃ – ವಿಲಕ್ಷಣವಾದ, ದೃಢವಾದ ಸಹನಾಗುಣವನ್ನು ಪಡೆದುಕೊಂಡವನು.**

**ವಿವರಣೆ :** ಸಹತೇ ಇತಿ ಸಹಿಷ್ಣುಃ ಸಹಿಸುವ ಸ್ವಭಾವವುಳ್ಳವನು. ಒಂದೇ ರೀತಿಯ ನಾಮಗಳಿಗೆ ಬೇರೆ ಬೇರೆ ಅರ್ಥಗಳಿವೆ. ಆದರೂ ಮೇಲ್ನೋಟದ ಅರ್ಥದಲ್ಲಿಯೇ ನಾವು ಪರಿಶೀಲಿಸಿದರೂ ಭೀಷ್ಮರು ಕೃಷ್ಣನ ಸಹನೆಯ ಗುಣವನ್ನು ಮತ್ತೆ ಮತ್ತೆ ಮೆಲುಕು ಹಾಕುತ್ತಿರುವುದು ಎದ್ದು ಕಾಣಿಸುವುದು. ಧರ್ಮರಾಜ ರಾಜ್ಯವನ್ನು ಬೇಡ ಬೇಡ ಎಂದು ಹೇಳುತ್ತಿದ್ದುದು, ಅರ್ಜುನ ಯುದ್ಧ ಮಾಡುವುದಿಲ್ಲ ಎಂದುದು, ದುರ್ಯೋಧನ ಹಿಯಾಳಿಸುವುದು, ಧೃತರಾಷ್ಟ್ರ ಮೂದಲಿಸುವುದು - ಇವೆಲ್ಲವನ್ನು ಸಹಿಸಿಕೊಂಡು ಯಾರ್‍ಯಾರನ್ನು ಹೇಗೆ ಹೇಗೆ ಕಟ್ಟಿಕೊಂಡು ಹೋಗಿ ತನ್ನ ಕೆಲಸವನ್ನು ನಿರ್ವಹಿಸುವ ತಾಳ್ಮೆಯ ಶಕ್ತಿಯನ್ನು 'ಕೃಷ್ಣ ನಿನಗೆ ಯಾವ ದೇವರು ಕೊಟ್ಟರಪ್ಪ !' - ಎಂದು ಉದ್ಗರಿಸುವರು ಭೀಷ್ಮರು. ಕೃಷ್ಣನಿಗೆ ಬೇರೆ ಯಾವ ದೇವರು ಕೊಡಬೇಕು ಕೃಷ್ಣದೇವರೇ ಕೊಡಬೇಕಷ್ಟೇ !!

ಹೀಗೆ ವಿಲಕ್ಷಣವಾದ, ದೃಢವಾದ ಸಹನಾಗುಣವನ್ನು ಪಡೆದುಕೊಂಡವನೇ 'ಸಹಿಷ್ಣು'.

**೫೭೩. ಗತಿಸತ್ತಮಃ – ತನ್ನ ತಿಳುವಳಿಕೆಯಿಂದ ಅತ್ಯಂತ ಉತ್ತಮ ಎನಿಸಿರುವವನು.**

**ವಿವರಣೆ:** ಗತಿ ಎಂದರೆ ತಿಳುವಳಿಕೆ. ದೇವರ ತಿಳುವಳಿಕೆಯೇ ನಿಜವಾದ ತಿಳುವಳಿಕೆ. ಹೇಗೆ ಗೀತೆ ಎಂದರೆ ಭಗವದ್ಗೀತೆಯೇ, ವ್ಯಾಸರು ಎಂದರೆ ವೇದವ್ಯಾಸರೇ ಅಂತೆಯೇ ಗತಿ, ಜ್ಞಾನ ಎಂದರೆ ಭಗವಂತನ ಬಗೆಗಿನ ಜ್ಞಾನ ಎಂದೇ ಅರ್ಥ. 'ವಿದ್ಯಾ ದದಾತಿ

ವಿನಯಂ.... ' - ಎಂದು ವಿದ್ಯೆ ವಿನಯಕ್ಕೆ ಕಾರಣ ಎಂದಿರುವುದು. ಆದರೆ ಈಗಿನ ಹೈಸ್ಕೂಲ್, ಕಾಲೇಜ್ ಕಲಿತ ವಿದ್ಯಾರ್ಥಿಗಳು ಉದ್ಧಟರಾಗಿರುತ್ತಾರೆ. ಇದರಿಂದ ಸ್ಪಷ್ಟ ಅವರು ಕಲಿಯುತ್ತಿರುವುದು ನಿಜವಾದ ವಿದ್ಯೆ ಅಲ್ಲ. ಅದು ನೈವೇದ್ಯಕ್ಕಾಗಿ ಇರುವ ಒಂದು ದಾರಿಯಷ್ಟೇ. ಆದ್ದರಿಂದ ಆ ವಿದ್ಯೆಯಿಂದ ಉಂಟಾದ ಜ್ಞಾನ ಜ್ಞಾನವೇ ಅಲ್ಲ, ಬದಲಾಗಿ ವೈದಿಕ ವಿದ್ಯೆಯಿಂದ ಉಂಟಾದ ಭಗವಂತನ ಜ್ಞಾನವೇ ನಿಜವಾದ ಜ್ಞಾನ.

ಇಂತಹ ಜ್ಞಾನದಿಂದಾಗಿಯೇ ಉತ್ತಮರೆನಿಸುವುದು. 'ಗತಿ'ಯಿಂದಾಗಿ 'ಸತ್' ಆಗುವುದು.

ಎಲ್ಲಿಗೆ ಹೋಗಿದ್ದೀರಿ ?

ರಾಜಾಂಗಣದಲ್ಲಿ ಉಪನ್ಯಾಸಕ್ಕೆ.

ನೀವು ಪುಣ್ಯಾತ್ಮರಪ್ಪ !

ಹೀಗೆ ರಾಜಾಂಗಣದ ಉಪನ್ಯಾಸದಲ್ಲಿ ಪಾಲ್ಗೊಳ್ಳುವಿಕೆ 'ಪುಣ್ಯಾತ್ಮ'ರು ಎಂಬ ಬಿರುದನ್ನು ತಂದು ಕೊಟ್ಟದ್ದಾದರೂ ಹೇಗೆ ? ಉಪನ್ಯಾಸದಲ್ಲಿ ಪಾಲ್ಗೊಂಡು ಭಗವಂತನ ಜ್ಞಾನವನ್ನು ಗಳಿಸಿಕೊಳ್ಳಲಾಗಿದೆ - ಎಂಬುದಕ್ಕಾಗಿ.

ಆದ್ದರಿಂದ ಭಗವಂತನ ಜ್ಞಾನ ಉತ್ತಮನೆನಿಸಲು ಪ್ರಯೋಜಕ. ಅಂತಹ ಜ್ಞಾನ ಎಷ್ಟೆಷ್ಟು ಅಧಿಕ ಅಧಿಕ ಇರುವುದೋ ಅಷ್ಟಷ್ಟು ಹೆಚ್ಚು ಉತ್ತಮ.

ನೀವೊಂದು ಪ್ರಶ್ನೆ ಕೇಳಿದಿರಿ.

ನಾನದಕ್ಕೆ ಉತ್ತರಿಸಿದೆ.

ನಿಮಗೆ ಪೂರ್ಣ ಸಮಾಧಾನ ಆಗಿಲ್ಲ. ಆದರೂ ನನಗೆ ಒಂದು ನಮಸ್ಕಾರ ಹಾಕಿದಿರಿ. ನಾನು ಇನ್ನೊಬ್ಬರಲ್ಲಿಗೆ ಕರೆದೊಯ್ದೆ.

ಅವರು ನಿಮಗೆ ಸಮಾಧಾನಕರವಾಗಿ ಉತ್ತರಿಸಿದರು. ಆಗ ನೀವು ಅವರಿಗೆ ಎರಡು ನಮಸ್ಕಾರಗಳನ್ನು ಹಾಕುವಿರಿ. ಯಾಕೆಂದರೆ ನನಗಿಂತಲೂ ಉತ್ತಮರು ಎಂದು.

ಹೀಗೆ ಭಗವಂತನ ತಿಳುವಳಿಕೆಯನ್ನು ಅತ್ಯಂತ ಅಧಿಕವಾಗಿ ಪಡೆದು ಕೊಂಡವನು ಭಗವಂತನೇ. 'ಶ್ರುತಿತತಿಗೆ ನಿಲುಕದ ಅಪ್ರತಿಮ' - ಯತೋ ವಾಚೋ ನಿವರ್ತಂತೇ' ವೇದಗಳೂ ಪೂರ್ಣವಾಗಿ ಅವನ ಬಗ್ಗೆ ಹೇಳಲಾದರೆ ಹಿಂಜರಿಯುವುವು.

ಒಬ್ಬ ವ್ಯಕ್ತಿಯ ಬಗ್ಗೆ ಅಭಿನಂದನಾ ಭಾಷಣಕ್ಕೆ ತೊಡಗಿದವನು ಅವನನ್ನು

ಪೂರ್ಣವಾಗಿ ಪರಿಚಯಿಸದೆ ಅಷ್ಟೇ ಹೇಳಿ ಮುಗಿಸಿದ ಎಂದರೆ 'ಕೈ ಚಪ್ಪಾಳೆ' ಬೀಳುವುದೇ ಇಲ್ಲ. 'ನನಗೆ ಇಷ್ಟೇ ಗೊತ್ತಿರುವುದು' - ಎಂದು ಹೇಳಿಯಾದರೂ ಕುಳಿತನೆಂದರೆ ಕೈ ಚಪ್ಪಾಳೆ ಬೀಳುವುದು.

ದೇವರ ಬಗ್ಗೆಯೂ ಹೇಳಿ, 'ದೇವರ ಬಗ್ಗೆ ನಮಗೆ ಪೂರ್ಣ ಗೊತ್ತಿಲ್ಲ' ಎಂದು ಹೇಳಿಯೇ ಕೈಚಪ್ಪಾಳೆ ಹೊಡೆಸಿಕೊಳ್ಳ ಬೇಕಾದ ಸ್ಥಿತಿ ನಮ್ಮೆಲ್ಲರದ್ದು. ಲಕ್ಷ್ಮೀದೇವಿಯ ಸ್ಥಿತಿಯೂ ಕೂಡಾ.

ದೇವರನ್ನು ಪೂರ್ಣವಾಗಿ ತಿಳಿದುಕೊಂಡವನೆಂದರೆ ಅವನು ಮಾತ್ರ. ಹೇಗೆ ನಮ್ಮನ್ನು ಇತರರು ತಿಳಿದಿರುವುದಕ್ಕಿಂತ ನಾವೇ ಹೆಚ್ಚು ತಿಳಿದಿರುವೆವೋ ಅಂತೆ ದೇವರನ್ನು ಪೂರ್ಣವಾಗಿ ತಿಳಿದವನೆಂದರೆ ಅವನು ಮಾತ್ರ. ಹೀಗೆ ತನ್ನನ್ನು ಪೂರ್ಣವಾಗಿ ತಿಳಿದವನಾದುದರಿಂದ ಅವನು 'ಗತಿಸತ್ತಮ' ತನ್ನ ಜ್ಞಾನದಿಂದ ಅತ್ಯಂತ ಉತ್ತಮ ಎನಿಸಿರುವವನು.

**ಸುಧನ್ವಾ ಖಂಡಪರಶುರ್ದಾರುಣೋ ದ್ರವಿಣಪ್ರದಃ |**
**ದಿವಃಸ್ಪೃಕ್ ಸರ್ವದೃಗ್ವ್ಯಾಸೋ ವಾಚಸ್ಪತಿರಯೋನಿಜಃ || ೬೧ ||**

**೫೭೪. ಸುಧನ್ವಾ – * ಒಳ್ಳೆಯ ಧನುಸ್ಸನ್ನು ಹೊಂದಿರುವವನು.**

*** ಆಧ್ಯಾತ್ಮಿಕ ಪರಿಭಾಷೆಯ ಪ್ರಕಾರ ಧನುಸ್ ಎನಿಸಿರುವ ಪ್ರಣವದಿಂದ ಪ್ರತಿಪಾದ್ಯನು.**

*** ಪ್ರಣವವನ್ನು ಚೆನ್ನಾಗಿ ಉಚ್ಚರಿಸುವವನು.**

ವಿವರಣೆ : ಒಳ್ಳೆಯ ಬಿಲ್ಲನ್ನು ಹೊಂದಿರುವವನೇ 'ಸುಧನ್ವಾ'. ಬಿಲ್ಲಿನಲ್ಲಿ ಒಳ್ಳೆಯತನವಾದರೂ ಏನು ? ಬಿಲ್ಲಿಗೆ ಬಾಣವನ್ನು ಜೋಡಿಸಲಾಯಿತೆಂದರೆ ಅದರಿಂದ ನಿರೀಕ್ಷಿತ ಫಲ ದೊರಕಿಯೇ ತೀರುವುದಾದರೆ ಅದು ಒಳ್ಳೆಯ ಬಿಲ್ಲು. 'ಪಾರ್ಥ ಏವ ಧನುರ್ಧರಃ' ಅರ್ಜುನನೇ ನಿಜವಾದ ಬಿಲ್ಗೋಜ ಎಂದು ನಾವು ಉದ್ಗರಿಸಿವುದುಂಟು. ಆದರೆ ಪಾರ್ಥ ಗಾಂಡೀವ ಧನುಸ್ಸಿನ ಮೂಲಕ ಏನನ್ನಾದರೂ ಸಾಧಿಸಿದ್ದರೆ ಅದು ಕೃಷ್ಣನ ಅನುಗ್ರಹದಿಂದಲೇ. ಆದುದರಿಂದಲೇ ಕೃಷ್ಣ ಅದರ್ಶನ ಹೊಂದಿದಾಕ್ಷಣ ಅರ್ಜುನನ ಗಾಂಡೀವ ಧನುಸ್ಸು ನಿಷ್ಕ್ರಿಯವಾಗಿತ್ತು. ಆದರೆ ಶ್ರೀಕೃಷ್ಣನ ಧನುಸ್ಸು ಎಂದೂ ನಿಷ್ಪ್ರಯೋಜಕ ಎನಿಸಿದ್ದಿಲ್ಲ. ಆದುದರಿಂದಲೇ ಕೃಷ್ಣನೇ ನಿಜವಾದ 'ಸುಧನ್ವಾ'.

ಆಧ್ಯಾತ್ಮಿಕ ಶಾಸ್ತ್ರದಲ್ಲಿ 'ಧನುಸ್' - ಎಂದರೆ ಪ್ರಣವ. 'ಪ್ರಣವೋ ಧನುಃ

ಶರೋ ಹ್ಯಾತ್ಮಾ.....' - ಎಂದು ಉಪನಿಷತ್ತು ಪ್ರಣವವನ್ನು ಧನುಸ್ಸನ್ನಾಗಿ ರೂಪಿಸಿದೆ. ಲಿಪಿಯಲ್ಲಿ ಓಂಕಾರವನ್ನು ಬರೆಯುವಾಗ ಅದು ಧನುಸ್ಸಿನ ಆಕಾರದಲ್ಲಿಯೇ ಇರುವುದು ಕೂಡಾ. ಅಂತಹ ಆಧ್ಯಾತ್ಮಿಕ ಕ್ಷೇತ್ರದ ಧನುಸ್ ಆದ ಓಂಕಾರದಿಂದ ಪ್ರತಿಪಾದ್ಯನಾಗಿರುವವನು ಹಾಗೂ ಓಂಕಾರವನ್ನು ಸ್ಪಷ್ಟವಾಗಿ ಉಚ್ಚರಿಸುವವನು ಭಗವಂತನಾದುದರಿಂದ ಅವನು 'ಸುಧನ್ವಾ'.

ಒಳ್ಳೆಯ ಧನುಸ್ಸನ್ನು ಹೊಂದಿರುವವನೆಂಬ ಅರ್ಥದ ಹಿನ್ನೆಲೆಯಲ್ಲಿ ಭಗವಂತನನ್ನು 'ಸುಧನ್ವಾ' - ಎಂದು ನಾವು ಉಪಾಸನೆ ನಡೆಸಿದೆವೆಂದರೆ ನಮಗೆ ಧನುಸ್ಸಿನ ಮೂಲಕ ರಕ್ಷಣೆ ನೀಡುವನು.

ಯದ್ಯಪಿ ಮಹಾಭಾರತಯುದ್ಧದಲ್ಲಿ ಕೃಷ್ಣ ಯಾವುದೇ ಆಯುಧವನ್ನು ಹಿಡಿದಿರಲಿಲ್ಲ. ಆದರೆ ಭೀಷ್ಮರು ಪ್ರಕೃತ ಕೃಷ್ಣನ ಕೈಯಲ್ಲಿ ಬೇರೆ ಬೇರೆ ಆಯುಧವನ್ನು ಚಿಂತಿಸುತ್ತಿದ್ದಾರೆ.

**೫೭೫. ಖಂಡಪರಶುಃ – * ತುಂಡಾದ ಕೊಡಲಿ ಉಳ್ಳವನು.**

*** ಶತ್ರುಗಳನ್ನು ಖಂಡಿಸುವ ಕೊಡಲಿ ಉಳ್ಳವನು.**

**ವಿವರಣೆ:** ಹಾಗಾದರೆ ಕೃಷ್ಣನಿಗೂ ಶತ್ರುಗಳನ್ನು ಸಂಹರಿಸಬೇಕೆಂದರೆ ಆಯುಧಗಳ ಅವಶ್ಯಕತೆ ಇದೆಯೇ ? - ಎಂಬ ಸಂದೇಹ ಉಂಟಾದಾಗ - 'ಖಂಡಪರಶುಃ' - ಎಂದು ಸ್ತುತಿಸಲಾಗುವುದು. ತುಂಡಾದ ಕೊಡಲಿ ಉಳ್ಳವನೆಂಬುದು ಅದರ ಅರ್ಥ. ಶತ್ರುಗಳನ್ನು ಸದೆಬಡಿಯಲು ಅವನ ಬಾಹುಬಲವೇ ಮುಖ್ಯ ಆಯುಧ ಎಂಬುದನ್ನು ಸೂಚಿಸುವುದಕ್ಕಾಗಿ 'ಖಂಡಪರಶುಃ' ತುಂಡಾದ ಕೊಡಲಿ ಉಳ್ಳವನು ಸ್ತುತಿಸಲಾಗಿದೆ. ಕೃಷ್ಣ ಭೀಷ್ಮರಲ್ಲಿಗೆ ಕಾದಾಡಲು ಹೋಗುವಾಗ ಅಲ್ಲೇ ಬಿದ್ದಿದ್ದ ಚಕ್ರವನ್ನು ಮೇಲೆತ್ತಿಟ್ಟು ಕೊಂಡಿದ್ದನು. ಅಂದರೆ ಅವನಿಗೆ ಆಯುಧಗಳು ನಿಮಿತ್ತ ಮಾತ್ರ. ನಮ್ಮ ಆಯುಷ್ಯವನ್ನು ಸ್ವೀಕರಿಸುವ ಪ್ರಯುಕ್ತವಷ್ಟೇ ಅದು ಆಯುಧವೆನಿಸುವುದು.

ಕೃಷ್ಣನ ಕೈಯಲ್ಲಿ ತುಂಡಾದ ಪರಶುವನ್ನು ಕೊಡುವ ಮೂಲಕ ಅವನ ನೈಜ ಸಾಮರ್ಥ್ಯವನ್ನು ಊಹಿಸಿಕೊಂಡಂತಾಗುವುದು. ಯಾವುದೇ ಆಯುಧದ ಆವಶ್ಯಕತೆ ಇಲ್ಲದೆಯೇ ದುಷ್ಟರನ್ನು ನಿಗ್ರಹಿಸುವವನೆಂಬುದಾಗಿ.

ಅಥವಾ ಖಂಡನೆಗೋಸ್ಕರ ಆಯುಧವನ್ನು ಹಿಡಿದವನು ಎಂಬುದು ಖಂಡಪರಶುನಾಮದ ಅರ್ಥ. ಭಗವಂತನ ಆಯುಧ ಧಾರಣೆಯ ಉದ್ದೇಶವೇ ಶತ್ರುಗಳ ಖಂಡನೆ, ನಿಗ್ರಹ. ದೇವರು ಕೈಯಲ್ಲಿ ಆಯುಧ ಹಿಡಿದನೋ ಯಾವುದೋ ಶತ್ರುವಿನ ನಿಗ್ರಹ ಆಯಿತೆಂದೇ ಅರ್ಥ. ಆದ್ದರಿಂದ ಶತ್ರುಗಳ ಖಂಡನೆಗೋಸ್ಕರ

ಪರಶುವನ್ನು ಧಾರಣೆ ಮಾಡಿದವನು ಖಂಡಪರಶು. 'ಪರಶು' ಪರಶುರಾಮನ ಆಯುಧ. ಪರಶುರಾಮ ಬ್ರಾಹ್ಮಣ. ಆದರೂ ತನ್ನ ಭಕ್ತರಿಗೆ ದುಷ್ಟರಿಂದ ಹಾನಿ ಆಗುವುದೆಂದಾಕ್ಷಣ ಆಯುಧವನ್ನು ಹಿಡಿದೇ ಬಿಟ್ಟ. ಭಗವಂತನ ಈ ಬಗೆಯ ನಿಲುವನ್ನು ಸೂಚಿಸಿಕೊಡುವುದಕ್ಕಾಗಿಯೇ 'ಖಂಡಪರಶುಃ' ಎಂದು ಪರಶು ಶಬ್ದವನ್ನೇ ಉಲ್ಲೇಖಿಸಲಾಗಿದೆ.

**೫೭೬. ದಾರುಣಃ – ದುಷ್ಟಶಿಕ್ಷಕನೂ ಶಿಷ್ಟರಿಗೆ ಆನಂದಪ್ರದನೂ ಆಗಿರುವವನು.**

**ವಿವರಣೆ :** ದಾರು+ನಃ ದಾರುಣಃ, ದಾರಯತಿ ಶತ್ರೂನ್ - ಶತ್ರುಗಳನ್ನು ಸೀಳಿ ಹಾಕುವನು. ಆಮೇಲೆ ನಃ - ನಯತಿ ಆನಂದಂ - ಸಂತೋಷವನ್ನು ಉಂಟುಮಾಡುವನು. ಶತ್ರುಗಳನ್ನು ಬಡೀತಾನೆ ; ಸಜ್ಜನರಿಗೆ ಆನಂದವನ್ನೂ ಕೊಡ್ತಾನೆ - ದಾರುಶ್ಚಾಸೌ ನಶ್ಚ ದಾರುಣಃ

ದಾರಯತೀತಿ ದಾರುಣಃ - ಎಂದು ನಿರ್ವಚನವನ್ನಿಟ್ಟುಕೊಂಡರೆ ಬರೇ ದುಷ್ಟಸಂಹಾರಕ ಎಂಬ ಅರ್ಥವಷ್ಟೇ ಹೊರಡುವುದು ; ಅದಕ್ಕಿಂತ ದುಷ್ಟಸಂಹಾರವನ್ನು ಭಗವಂತ ಯಾವ ಉದ್ದೇಶಕ್ಕಾಗಿ ನಡೆಸುವನೋ ಅದರ ಉದೇಶವೂ ಬರುವಂತೆ, ದಾರು+ಣಃ - ಎಂಬ ಪದಚ್ಛೇದವನ್ನಿಟ್ಟುಕೊಂಡು ದುಷ್ಟ ಶಿಕ್ಷಕನೂ, ಶಿಷ್ಟರಕ್ಷಕನೂ ಆಗಿರುವನೆಂದು ದಾರುಣ ನಾಮದಿಂದ ಅನುಸಂಧಾನ ನಡೆಸಬಹುದು.

**೫೭೭. ದ್ರವಿಣಪ್ರದಃ – ಜ್ಞಾನಸಂಪತ್ತನ್ನು ನೀಡುವವನು.**

**ವಿವರಣೆ:** ಹಿಂದಿನ ದಾರುಣ ನಾಮದ 'ನಃ' - ಎಂಬ ಅಕ್ಷರ ಭಗವಂತನು ಸಜ್ಜನರಿಗೆ ಸುಖವನ್ನು ನೀಡುವವನೆಂದು ಹೇಳಿದಾಗ, ಹೇಗೆ ಸುಖವನ್ನು ನೀಡುವನು ? - ಎಂದು ಪ್ರಶ್ನೆ ಉದಯಿಸಬಹುದಾಗಿದ್ದು ಅದಕ್ಕೆ ಸಮಾಧಾನ ರೂಪದಲ್ಲಿ ಮತ್ತೊಂದು ನಾಮ ಹೊರಟಿದೆ - 'ದ್ರವಿಣಪ್ರದಃ' - ಸಂಪತ್ತನ್ನು ನೀಡುವವನು.

ಯಾವ ಸಂಪತ್ತು? ಸಂಪತ್ತು - ಬಾಹ್ಯ ಹಾಗೂ ಆಂತರ ಎಂದು ಎರಡು ಪ್ರಭೇದಗಳಲ್ಲಿದೆ. ಭಗವಂತನು ತನ್ನ ಭಕ್ತರಿಗೆ ಬಾಹ್ಯ ಸಂಪತ್ತಿಗಿಂತಲೂ ಹೆಚ್ಚಾಗಿ ಆಂತರ ಸಂಪತ್ತನ್ನು ನೀಡುವನು. ಜ್ಞಾನವೇ ಆ ಆಂತರ ಸಂಪತ್ತು.

ಹೊರಗಿನ ಸಂಪತ್ತು ನಿಜವಾಗಿ ಸಂಪತ್ತಲ್ಲ ; ಬದಲಾಗಿ ಅದು ಆಪತ್ತು. ಬಾಹ್ಯಸಂಪತ್ತು ವಿಶೇಷವಾಗಿ ಇತ್ತೆಂದರೆ ಅದರ ರಕ್ಷಣೆಗಾಗಿ ನಿದ್ದೆ ಬಿಡಬೇಕಾದ ಪ್ರಸಂಗವೂ ಬರುವುದು. ಇಂತಹ ಸಂಪತ್ತು, ಸಂಪತ್ತು ಎನಿಸುವುದಾದರೂ ಹೇಗೆ? ಆದ್ದರಿಂದ ಜ್ಞಾನಸಂಪತ್ತೇ ನಿಜವಾದ ಸಂಪತ್ತು. ಅದನ್ನು ಭಕ್ತರಿಗೆ ಕೊಡುವುದರಿಂದ

ಭಗವಂತ 'ದ್ರವಿಣಪ್ರದ.'

ಭೀಷ್ಮರು ಕೃಷ್ಣನಲ್ಲಿ ಈ ನಾಮವನ್ನು ಹೀಗೆ ಅನುಸಂಧಾನ ಮಾಡುವರು - ದುರ್ಯೋಧನಾದಿಗಳನ್ನು ಸದೆಬಡಿದು, ಪಾಂಡವರಿಗೆ ಸುಖವನ್ನು ತಲುಪಿಸಿ ಕೊಟ್ಟು 'ದಾರುಣಃ' ಎನಿಸಿರುವ ಶ್ರೀಕೃಷ್ಣ ತನ್ನ ಮಹಿಮೆಗಳನ್ನು, ಲೀಲೆಗಳನ್ನು ಆಗಾಗ್ಗೆ ತೋರ್ಪಡಿಸುತ್ತ ಆಸುಪಾಸಿನವರಿಗೆಲ್ಲ ತನ್ನ ಹಿರಿಮೆಯ ತಿಳುವಳಿಕೆಯನ್ನು ಉಂಟು ಮಾಡಿ 'ದ್ರವಿಣಪ್ರದ' ಎನಿಸಿರುವನು.

**೫೭೮. ದಿವಃಸ್ಪೃಕ್ – 'ಅನಂತಾಸನ ವೈಕುಂಠ ಶ್ವೇತದ್ವೀಪ' ಎಂಬ ದ್ಯುಲೋಕಗಳಲ್ಲಿ ಯಾವಾಗಲೂ ವಿಶೇಷವಾಗಿ ಕಾಣಿಸಿಕೊಳ್ಳುವವನು.**

ವಿವರಣೆ: ದ್ಯುಲೋಕ ಎಂದರೆ ಸಾಮಾನ್ಯವಾಗಿ ಸ್ವರ್ಗ ಎಂದು ಭಾವಿಸಲಾಗುವುದು. ಆದರೆ ಸ್ವರ್ಗಕ್ಕಿಂತಲೂ ಮುಖ್ಯವಾಗಿ ದ್ಯುಲೋಕಗಳು, ಅನಂತಾಸನ, ವೈಕುಂಠ ಹಾಗೂ ಶ್ವೇತದ್ವೀಪ - ಈ ಮೂರು ಲೋಕಗಳು. ಇವುಗಳಲ್ಲಿ ಭಗವಂತನು ಅಮೃತ, ಅಭಯ ಹಾಗು ಕ್ಷೇಮ - ಎಂಬ ಮೂರು ರೂಪಗಳಿಂದ ಇರುವನು. ಶ್ವೇತದ್ವೀಪ ಕ್ಷೀರ ಸಾಗರದಲ್ಲಿ ಇರುವ ಲೋಕ. ಸಾಮಾನ್ಯವಾಗಿ ದೇವತೆಗಳು ತಮಗೆ ಏನಾದರೂ ಸಮಸ್ಯೆ ಬಂದರೆ ಶ್ವೇತದ್ವೀಪಕ್ಕೆ ಹೋಗಿ ಅಲ್ಲಿ ಕ್ಷೇಮನಾಮಕ ಭಗವಂತನ್ನು ಪ್ರಾರ್ಥಿಸುವರು. 'ಸ್ಥಿತಸ್ಯ ಪರಿಪಾಲನಮ್' - ಈಗಾಗಲೇ ಹೊಂದಿರುವುದನ್ನು ಭದ್ರವಾಗಿರುವಂತೆ ರಕ್ಷಿಸುವುದೇ ಕ್ಷೇಮ ಎನಿಸಿದ್ದು. ಅದನ್ನು ನಡೆಸಿಕೊಡುವ ಭಗವದ್ರೂಪ 'ಕ್ಷೇಮ' ಎನಿಸಿದೆ. ದೇವತೆಗಳ ಅಮೃತತತ್ವಕ್ಕೆ, ಅಭಯತ್ವಕ್ಕೆ ಏನಾದರೂ ಹಾನಿ ಬರುವ ಪ್ರಸಂಗ ಬಂದಲ್ಲಿ ಕ್ಷೇಮನಾಮಕ ಭಗವಂತ ಅದನ್ನು ಪರಿಹರಿಸಿ ಅವರ ಅಮೃತತತ್ವ ಹಾಗೂ ಅಭಯತ್ವ ಸ್ಥಿರವಾಗಿ ಇರುವಂತೆ ಸಂರಕ್ಷಿಸುವನು.

ಹೀಗೆ ದ್ಯು ಎನಿಸುವ ಅನಂತಾಸನ, ವೈಕುಂಠ ಹಾಗು ಶ್ವೇತದ್ವೀಪಗಳಲ್ಲಿ ಸ್ಪೃಕ್ - ಸ್ಪೃಶತಿ - ಸ್ಪರ್ಶನ, ದರ್ಶನಾದಿ ಸಂಬಂಧಗಳನ್ನು ವಿಶೇಷವಾಗಿ ಹೊಂದಿರುವವನು. ಭಗವಂತನು ಆ ಲೋಕಗಳಲ್ಲಿ ಯಾವಾಗಲೂ ಕಾಣಿಸಿಕೊಳ್ಳುವನು.

ದೇವರನ್ನು 'ದಿವಃಸ್ಪೃಕ್' - ಎಂದು ಉಪಾಸನೆ ಮಾಡಿದರೆ ನಮಗೆ ದೇವಾಲಯಗಳಲ್ಲಿ ಬೇಗ, ಹಾಗೂ ಚೆನ್ನಾಗಿ ದೇವರ ದರ್ಶನ ಆಗುವುದು. ಭೀಷ್ಮರು ಹಾಗೆ ಉಪಾಸನೆ ನಡೆಸಿದ್ದುದರಿಂದಲೇ ಕೃಷ್ಣ ಭೀಷ್ಮರಿರುವಲ್ಲಿಗೇ ಹೋಗಿ ಅವನಿಗೆ ದರ್ಶನ ನೀಡಿರುವನು.

**೫೭೯. ಸರ್ವದೃಕ್ – ಎಲ್ಲವನ್ನೂ, ಎಲ್ಲ ಕಾಲದಲ್ಲೂ, ಎಲ್ಲ ಕಡೆಯಲ್ಲೂ ನೋಡುವವನು.**

**ವಿವರಣೆ :** ನಮ್ಮ ಅಂತರ್ಯ ಏನು ಎನ್ನುವುದು ದೇವರಿಗೆ ಗೊತ್ತು. ನಾವು ಯಾವ ಮಟ್ಟದ ಉಪಾಸನೆ ನಡೆಸಲಿರುವೆವು - ಎಂಬುದೂ ಅವನಿಗೆ ಗೊತ್ತು. ಇದನ್ನೇ ಸರ್ವದೃಕ್ ನಾವು ಸೂಚಿಸುತ್ತಿದೆ.

ನಾವು ಒಳಗಿನಿಂದ ಹೇಗಿದ್ದೇವೆ - ಎಂಬುದನ್ನೆಲ್ಲ ದೇವರು ನೋಡುತ್ತಿರುತ್ತಾನೆ. ನಾವು ಮನಃಪೂರ್ವಕವಾಗಿ 'ದಿವಃಸ್ಪುಕ್' - ಎಂದು ಉಪಾಸನೆ ನಡೆಸುತ್ತಿದ್ದೇವೆಯೋ ಢಂಬಾಚಾರಕ್ಕಾಗಿ ದೇವಸ್ಥಾನಕ್ಕೆ ಬಂದಿದ್ದೇವೆಯೋ ? - ಎಂಬುದನ್ನು ದೇವರು ಚೆನ್ನಾಗಿ ಬಲ್ಲವನು. ಸರ್ವದೃಕ್ - ಸರ್ವಂ ಪಶ್ಯತಿ. ಎಲ್ಲವನ್ನೂ, ಎಲ್ಲ ಕಾಲದಲ್ಲೂ, ಎಲ್ಲ ಕಡೆಯಲ್ಲೂ ನೋಡುವವನೇ ಸರ್ವದೃಕ್. ಕೆಲವೊಮ್ಮೆ ನಮ್ಮ ಅನುಷ್ಠಾನದ ಬಗ್ಗೆ ನಮಗೆಯೇ ಗೊಂದಲ ಉಂಟಾಗುವುದು. ಇದು ಎಷ್ಟು ಪ್ರಾಮಾಣಿಕ ? ಎಂದು. ಆದರೆ ಆಚರಣೆಯ ಪ್ರಾಮಾಣಿಕತೆಯನ್ನು ಕಾಣುವವನು ಭಗವಂತ.

ಭೀಷ್ಮರ ಎದುರು ಬಂದು ಕೃಷ್ಣ ಕುಳಿತಿರುವನೆಂದರೆ ಅವರ ಆಚರಣೆಯ ಪ್ರಾಮಾಣಿಕತೆಯನ್ನು ಕಂಡಿರುವನೆಂದರ್ಥ.

**೫೮೦. ವ್ಯಾಸಃ – * ವಿಸ್ತೃತನಾಗಿ, ಎಲ್ಲೆಡೆ ಯಾವಾಗಲೂ ಇರುವವನು.**
*** ಯೋಗ್ಯತೆಗನುಗುಣವಾಗಿ ಸುಖದುಃಖಾದಿಗಳನ್ನು ವಿಭಜಿಸುವವನು.**

**ವಿವರಣೆ:** ವ್ಯಾಸ ಶಬ್ದಕ್ಕೆ ವಿಸ್ತಾರ ಎಂಬ ಅರ್ಥ. ಭಗವಂತ 'ಸರ್ವದೃಕ್' ಯಾಕೆ? ಅವನು 'ವ್ಯಾಸ' - ವಿಸ್ತೃತನಾಗಿ ಎಲ್ಲೆಡೆ ಇರುವವನು. ಆದ್ದರಿಂದ ಉಳಿದ ಯಾರ ಕಣ್ಣಿಗೆ ಬೇಕಾದರೂ ತಪ್ಪಿಸಿ ಮಾಡಬಹುದು. ಆದರೆ ಎಲ್ಲೆಡೆ ವಿಸ್ತೃತನಾಗಿರುವ ಭಗವಂತನ ಕಣ್ಣನ್ನು ತಪ್ಪಿಸಿ ಏನನ್ನೂ ಮಾಡಲಾಗದು.

ವಿ + ಆಸ - ವ್ಯಾಸ. ಆಸ ಎಂದರೆ ಇರುವವನು. ನಾವು ಕೂಡಾ ಇರುವವರು. ಆದರೆ ವಿಶೇಷವಾಗಿ ಅಂದರೆ ಎಲ್ಲ ದೇಶದಲ್ಲೂ, ಎಲ್ಲ ಕಾಲದಲ್ಲೂ ಇರುವವನು ದೇವರು. ಆದುದರಿಂದ ಅವನು ವ್ಯಾಸ.

ವಿಭಾಗ ಎಂಬ ಅರ್ಥದಲ್ಲೂ ವ್ಯಾಸ ಶಬ್ದದ ಬಳಕೆ ಇದೆ. ಆಯಾ ಜೀವರ ಯೋಗ್ಯತೆಯನ್ನರಿತು ಅದಕ್ಕೆ ಅನುಗುಣವಾಗಿ ಸುಖದುಃಖಾದಿಗಳನ್ನು ವಿಭಜಿಸುವುದರಿಂದಲೂ ಭಗವಂತ ವ್ಯಾಸ.

**೫೮೧. ವಾಚಸ್ಪತಿಃ – ಮಾತುಗಳಿಗೆ, ಶಬ್ದಗಳಿಗೆ ಅಧಿಪತಿ.**

**ವಿವರಣೆ :** ವಾಚಸ್ - ಎಂದರೆ ಮಾತುಗಳು ; ಪತಿಃ - ಒಡೆಯ. ಆದುದರಿಂದ ವಾಚಸ್ಪತಿ ಎಂದರೆ - ಮಾತುಗಳಿಗೆ, ಶಬ್ದಗಳಿಗೆ ಒಡೆಯ. ವೇದಗಳಿಗೆ ಒಡೆಯ. ಭೀಷ್ಮರ ಬಾಯಿಯಿಂದ ಇಷ್ಟೆಲ್ಲ ಮಾತುಗಳು ಹೊರಹೊಮ್ಮುತ್ತಿರುವುದನ್ನು ಕಂಡು ಯುಧಿಷ್ಠಿರಾದಿಗಳಿಗೆ ಆಶ್ಚರ್ಯ. ಕೃಷ್ಣ ಬಳಿಯಲ್ಲೇ ಸುಮ್ಮನೆ ಕುಳಿತಿರುವವನು. ಭೀಷ್ಮರು ಕೃಷ್ಣನ ಮುಖ ನೋಡಿ ಸ್ತುತಿಸುವರು. - 'ವಾಚಸ್ಪತಿಃ' ನನ್ನ ಬಾಯಿಯಿಂದ ಹೊರಹೊಮ್ಮುವ ಮಾತುಗಳಿಗೆಲ್ಲ ನೀನೇ ಒಡೆಯ. ನನ್ನಲ್ಲಿ ಇದ್ದುಕೊಂಡು ಇಷ್ಟೆಲ್ಲ ಮಾತುಗಳನ್ನು, ಸಹಸ್ರನಾಮವನ್ನೂ ನುಡಿಸಿದ್ದು ಕೃಷ್ಣನೇ. ಭೀಷ್ಮರಿಗೆ ಉಪದೇಶ ಪ್ರಯುಕ್ತ ಕೀರ್ತಿ ಬರಲಿ, ಪುಣ್ಯ ಬರಲಿ ಎಂಬ ಉದ್ದೇಶದಿಂದ ಭೀಷ್ಮರಲ್ಲಿ ಇದ್ದುಕೊಂಡು ನುಡಿಸಿದವನು ಕೃಷ್ಣನೇ.

**೫೮೨. ಅಯೋನಿಜಃ – ತಾಯಿಯ ಗರ್ಭದಿಂದ ಹೊರಹೊಮ್ಮುವವನಲ್ಲ.**

**ವಿವರಣೆ :** ಯೋನಿಜ ಅಲ್ಲ - ಅಯೋನಿಜ. ನಮ್ಮದ್ದೆಲ್ಲ ಸೃಷ್ಟಿಯ ಕ್ರಮ - ತಾಯಿಯ ಗರ್ಭದಿಂದಲೇ ಹೊರ ಬರುವವರು ನಾವು. ಆದರೆ ಭಗವಂತ ಹಾಗಲ್ಲ. ಯೋನಿಜ ಅಲ್ಲ. 'ಅಂಬುಧಿಯ ಉದಕದಲ್ಲಿ ಒಡೆದು ಮೂಡಿದ ಕೂರ್ಮ ಎಮ್ಮ ನರಹರಿಗೆ ಪಿತನಾರು ? ಆದರಿಂದ ಸ್ವಯಂಭುಗಳೆಲ್ಲ ಅವತಾರ - ಶೋಭಾನೆ' ವಾದಿರಾಜರು ಅಂತಾರೆ - ಸಮುದ್ರಮಥನ ಮಾಡಿದಾಗ ಮಂದರ ಪರ್ವತ ಸಮುದ್ರದ ನೀರಿನಲ್ಲಿ ಕುಸಿದಾಗ ಕೂರ್ಮನಾಗಿ ಬಂದು ಪರ್ವತವನ್ನು ಎತ್ತಿ ಹಿಡಿದ ತಾನೇ ? ಹಾಗೆ ಕೂರ್ಮನಾಗಿ ಕಾಣಿಸಿಕೊಂಡಾಗ ಯಾವ ತಾಯಿಯಿಂದ ಬಂದಿರುವ ? ಕೂರ್ಮ ಹೇಗೆ ಯಾವ ತಾಯಿಯ ಗರ್ಭದಿಂದಲೂ ಬಂದವನಲ್ಲವೋ ಹಾಗೆಯೇ ನರಹರಿ ಎಂದರೆ ನರಸಿಂಹನೂ. ಕಂಭದಿಂದ ಕಾಣಿಸಿಕೊಂಡ ನರಸಿಂಹ ಯಾವ ತಾಯಿಯಿಂದಲೂ ಬಂದವನಲ್ಲ.

ಹೀಗೆ ನಾವೆಲ್ಲ ಯೋನಿಜರಾದರೆ, ಭಗವಂತ ಯೋನಿಜ ಅಲ್ಲ - **ಯೋನಿಜಃ ನ ಭವತೀತಿ ಅಯೋನಿಜಃ**

ಭಗವಂತನನ್ನು 'ಅಯೋನಿಜ' - ಎಂಬ ಉಪಾಸನೆ ನಡೆಸಿದ ಫಲವಾಗಿ ಕ್ರಮೇಣ ಮುಕ್ತಿ ಹೊಂದಿ ನಾವೂ 'ಅಯೋನಿಜ'ರೆನಿಸಬಲ್ಲೆವು.

**ತ್ರಿಸಾಮಾ ಸಾಮಗಃ ಸಾಮ ನಿರ್ವಾಣಂ ಭೇಷಜಂ ಭಿಷಕ್ |**
**ಸಂನ್ಯಾಸಕೃಚ್ಛಮಃ ಶಾಂತೋ ನಿಷ್ಠಾ ಶಾಂತಿಃ ಪರಾಯಣಃ || ೬೨ ||**

**೫೮೩. ತ್ರಿಸಾಮಾ – ಮೂರು ವೇದಗಳಿಂದ ಮುಖ್ಯವಾಗಿ ತಿಳಿಯಲ್ಪಡುವವನು.**

**ವಿವರಣೆ :** ತ್ರಿ - ಮೂರು ವೇದಗಳು. ಋಕ್, ಯಜುಷ್, ಸಾಮ - ಎಂಬುದಾಗಿ ಮೂರು ವೇದಗಳು. ಈ ಮೂರು ವೇದಗಳಲ್ಲಿ ಬಂದಿರುವ ಮಂತ್ರಗಳೇ ಅಥರ್ವ ಎಂಬ ಋಷಿಯಿಂದ ಸಂಗ್ರಹಿಸಲ್ಪಟ್ಟು ಅಥರ್ವವೇದ ಎನಿಸಿದೆ. ಆದುದರಿಂದ ಅಥರ್ವವೇದ ಎಂದು ಪ್ರತ್ಯೇಕವಾಗಿ ಪರಿಗಣಿತವಾಗಿಲ್ಲ. ಹೀಗೆ ಋಗ್ವೇದ, ಯಜುರ್ವೇದ ಹಾಗೂ ಸಾಮವೇದ - ಎಂಬ ಮೂರು ವೇದಗಳಲ್ಲಿ ಸಾ - ಎಂದರೆ ಸಾರತ್ವೇನ - ಶ್ರೇಷ್ಠನಾಗಿ ಮಾ - ತಿಳಿಯಲ್ಪಡುವವನು ತ್ರಿಸಾಮಾ.

ಸಾಮಾನ್ಯವಾಗಿ ಋಗ್ವೇದ ದೇವರ ಬಗ್ಗೆ ಹೇಳುತ್ತಿದ್ದರೆ, ಯಜುರ್ವೇದ ಯಜ್ಞಯಾಗಾದಿಗಳ ಬಗ್ಗೆ ಹೇಳುತ್ತದೆ. ಸಾಮವೇದ ಗಾನ ರೂಪದಲ್ಲಿ ಇರುವುದು - ಎಂದು ಭಾವಿಸಲಾಗುವುದು. ಆದರೆ ಮೂರು ವೇದಗಳೂ ಸಾರರೂಪನಾದ ಭಗವಂತನನ್ನು ತಿಳಿಸುವವು. ವೇದದಲ್ಲಿ ಬರುವ ಇಂದ್ರಸೂಕ್ತ, ವರುಣಸೂಕ್ತ - ಇತ್ಯಾದಿಗಳಿಂದಲೂ ಮುಖ್ಯವಾಗಿ ಭಗವಂತನೇ ಪ್ರತಿಪಾದ್ಯ. ಇಂದ್ರಾದಿ ದೇವತೆಗಳು ಅಮುಖ್ಯವಾಗಿಯಷ್ಟೇ ಪ್ರತಿಪಾದ್ಯರು.

ಮನೆಯಲ್ಲಾಗಲೀ, ಸಮಾಜದಲ್ಲಾಗಲೀ ಎಲ್ಲರೂ ನಮ್ಮ ಕಡೆ ದೃಷ್ಟಿ ಹಾಯಿಸುವಂತಾಗಬೇಕೆಂದರೆ, ಗಮನ ಹರಿಸುವಂತಾಗಬೇಕೆಂದರೆ ಭಗವಂತನನ್ನು 'ತ್ರಿಸಾಮಾ' ನಾಮದ ಮೂಲಕ ಉಪಾಸನೆ ನಡೆಸಬೇಕು.

**೫೮೪. ಸಾಮಗಃ – * ಸಾಮಗಾನದಿಂದ ಸ್ತುತಿಸಲ್ಪಡುವವನು.**
*** ಎಲ್ಲೆಡೆ ಸಮಾನವಾಗಿರುವವನೆಂದು ಹೊಗಳಲ್ಪಡುವವನು.**

**ವಿವರಣೆ :** ನಾವು ಈಗ ಸಾಮುಕರು ಎಂದು ಕರೆಯುವೆವು. ನಿಜವಾಗಿ ಅವರು ಸಾಮುಗರೂ ಅಲ್ಲ, ಸಾಮುಕರೂ ಅಲ್ಲ. ಸಾಮಗರು. ಸಾಮಗಾನ ಮಾಡುವವರು ಎಂದು ಅರ್ಥ.

ರಾಗವು ತನ್ನ ಜೊತೆಗೆಯೇ ತಿಳುವಳಿಕೆ ನೀಡುವುದರಿಂದ ಸಾಮ ಎನಿಸಿದೆ. ಉಪನ್ಯಾಸ ಹಾಗು ಹಾಡುವಿಕೆಗಳನ್ನು ಏಕಕಾಲದಲ್ಲಿ ನಡೆಸಲಾಗುತ್ತಿದೆಎಂದು ಭಾವಿಸೋಣ. 'ಅಹಂ ಭಕ್ತಪರಾಧೀನಃ......' ಎಂಬ ಮಾತಿನ ಬಗ್ಗೆ ಒಂದೆಡೆ ಉಪನ್ಯಾಸ ನೀಡಲಾಗುತ್ತಿದೆ. ಮತ್ತೊಂದೆಡೆ 'ಆಡಿಸಿದಳೆಶೋದಾ......' - ಎಂದು ಹಾಡಲಾಗುತ್ತಿದೆ. **'ಯತೋ ವಾಚೋ ನಿವರ್ತಂತೇ........'** - ಎಂಬ ಮಾತಿನ ಬಗ್ಗೆ ಒಂದೆಡೆ ಉಪನ್ಯಾಸ ನೀಡಲಾಗುತ್ತಿದೆ. 'ಶ್ರುತಿತತಿಗೆ ನಿಲುಕದ ಅಪ್ರತಿಮ.......'

ಎಂದು ಮತ್ತೊಂದೆಡೆ ಹಾಡಲಾಗುತ್ತಿದೆ. ಆಗ ಉಪನ್ಯಾಸದಿಂದ ಕೆಲವು ಮಂದಿಗಷ್ಟೇ ತಿಳುವಳಿಕೆ ಬರುವುದಾದರೆ, ಹಾಡುಗಾರಿಕೆ ಎಲ್ಲರಿಗೂ ತಿಳುವಳಿಕೆಯನ್ನು ಉಂಟುಮಾಡುವುದು. ಹೀಗೆ ಅನ್ವರ್ಥಕವಾಗಿ ಕರೆಸಿಕೊಳ್ಳುವ 'ಸಾಮ'ದಿಂದ ಹಾಡಲ್ಪಡುವವನಾದುದರಿಂದ 'ಸಾಮ್ನಾ ಗೀಯತೇ ಇತಿ' - 'ಸಾಮಗ' ಎನಿಸಿರುವನು.

ಅಥವಾ ಪ್ರತಿಯೊಂದು ಅಧಿಷ್ಠಾನದಲ್ಲೂ ಸಮನಾಗಿ ಇರುವ ಭಗವಂತ ಸಾಮ. **'ವಿದ್ಯಾವಿನಯಸಂಪನ್ನೇ ಬ್ರಾಹ್ಮಣೇ ಗವಿ ಹಸ್ತಿನಿ | ಶುನಿ ಚೈವ ಶ್ವಪಾಕೇ ಚ ಪಂಡಿತಾಃ ಸಮದರ್ಶಿನಃ'** - ಎಂದು ಗೀತೆಯಲ್ಲಿ ಭಗವಂತನ ಈ ಗುಣವನ್ನೇ ಸಾರಲಾಗಿದೆ. ಕೆಲವು ಲೌಕಿಕ ಪಂಡಿತರು ಈ ಶ್ಲೋಕಕ್ಕೆ ಅಪಾರ್ಥ ಮಾಡಿದ್ದಿದೆ. ತಿಳಿದ ಬ್ರಾಹ್ಮಣ, ಗೋವು, ಆನೆ, ನಾಯಿ, ನಾಯಿ ಬೇಯಿಸಿ ತಿನ್ನುವವ ಇವರನ್ನೆಲ್ಲ ಸಮಾನರನ್ನಾಗಿ ಪಂಡಿತರು ಕಾಣುವರೆಂದು. ಇದು ವ್ಯಾಕರಣ ಜ್ಞಾನವಿಲ್ಲದೆ ಹೊರಡಿಸಿದ ಅರ್ಥ. ಗೀತೆಯ ಮಾತಿಗೆ ಆ ಅರ್ಥ ಎಂದಾಗಿದ್ದರೆ ಅದರಲ್ಲಿ ಬ್ರಾಹ್ಮಣೇ, ಗವಿ, ಶುನಿ ...... ಇತ್ಯಾದಿಯಾಗಿ ಸಪ್ತಮೀವಿಭಕ್ತಿಯ ಬದಲು ಬ್ರಾಹ್ಮಣಂ, ಗಾಂ, ಶುನಂ..... ಇತ್ಯಾದಿಯಾಗಿ ದ್ವಿತೀಯಾವಿಭಕ್ತಿ ಇರಬೇಕಿತ್ತು. ಸಪ್ತಮೀವಿಭಕ್ತಿ ಇರುವುದರಿಂದ ಬ್ರಾಹ್ಮಣಾದಿಗಳನ್ನು ಸಮಾನರನ್ನಾಗಿ ತಿಳಿದುಕೊಳ್ಳುವುದನ್ನು ಅಲ್ಲಿ ಹೇಳಲಾಗುತ್ತಿಲ್ಲ. ಬದಲಾಗಿ ಬ್ರಾಹ್ಮಣನಲ್ಲಿ, ಗೋವಿನಲ್ಲಿ, ಆನೆಯಲ್ಲಿ, ನಾಯಿಯಲ್ಲಿ, ನಾಯಿ ಬೇಯಿಸುವವನಲ್ಲಿ ಇರುವ ದೇವರು ಸಮಾನರು, ಅಂದರೆ ಗುಣಪೂರ್ಣನಾಗಿಯೇ, ದೋಷ ದೂರನಾಗಿಯೇ ಇರುವನು. ಹೊರತು ಆನೆಯಲ್ಲಿ ಇರುವ ದೇವರಿಗೆ ಹೆಚ್ಚು ಬಲ. ನಾಯಿಯಲ್ಲಿರುವ ದೇವರು ದುರ್ಬಲ ; ಬ್ರಾಹ್ಮಣನಲ್ಲಿರುವ ದೇವರು ಪವಿತ್ರ ; ನಾಯಿ ಬೇಯಿಸುವವನಲ್ಲಿರುವ ದೇವರು ಅಪವಿತ್ರ - ಹೀಗೆಲ್ಲ ವಿಷಮತೆ ದೇವರ ರೂಪಗಳಲ್ಲಿ ಇಲ್ಲ. ಲೌಕಿಕವಾಗಿ ವಿದ್ಯುತ್ತಿನ ದೃಷ್ಟಾಂತ ಕೊಡುವುದಾದರೆ ಜೀರೋ ಕ್ಯಾಂಡ್ಲ್ ಬಲ್ಬಿನಲ್ಲೂ , ನೂರು ಕ್ಯಾಂಡ್ಲು ಬಲ್ಬಿನಲ್ಲೂ - ಹರಿಯುವ ವಿದ್ಯುತ್ತಿನ ಗುಣ ಒಂದೇ, ಅದನ್ನು ಮುಟ್ಟಿದೆವೆಂದರೆ ನಮ್ಮನ್ನು ಸಾಯಿಸಿಯೇ ಬಿಡುವುದು ! ಅದರಂತೆಯೇ ಬೇರೆ ಬೇರೆ ಅಧಿಷ್ಠಾನಗಳಲ್ಲಿರುವ ಭಗವಂತನ ಗುಣಗಳು ಸಮಾನವಾದವು. ಭಗವಂತನ ಈ ಸಮತ್ವ ಗುಣವನ್ನೇ 'ಸಾಮ' - ಎಲ್ಲ ಕಡೆಗಳಲ್ಲೂ ಸಮವಾಗಿರುವವನೆಂದು ಗೀಯತೇ - ಸ್ತುತಿಸಲ್ಪಡುವವನೆಂದು 'ಸಾಮಗಃ' ಎಂದು ಸ್ತುತಿಸಲಾಗುವುದು. ವಿದುರ ಧೃತರಾಷ್ಟ್ರನಿಗೆ 'ಗಾಂಗಂ ಹ್ರದಮಿವ.....' ಗಂಗೆಯ ಮಡು ಎಲ್ಲಾ ಕಾಲದಲ್ಲೂ ಹೇಗೆ ಸಮವಾಗಿಯೇ ಇರುವುದೋ ಹಾಗೆ ಜೀವನದಲ್ಲಿ ಇರಬೇಕೆಂದು ತಿಳಿಸಿರುವನು. ತಂದೆ ತ್ರಿವಿಕ್ರಮನ ಗುಣ ಮಗಳಾದ ಗಂಗೆಯಲ್ಲಿ

ಹರಿದು ಬಂದಿರುವುದನ್ನು ದೃಷ್ಟಾಂತವಾಗಿ ತೋರಿಸಿಕೊಡುವನು.

**೫೮೫. ಸಾಮ – ಆಯಾ ವ್ಯಕ್ತಿಯನ್ನೇ ನೋಡುತ್ತಿರುವವನು.**

**ವಿವರಣೆ :** ಭಾವಚಿತ್ರವೊಂದನ್ನು ಹತ್ತು ಜನ ಕಾಣುತ್ತಿದ್ದರೆ, ಪ್ರತಿಯೊಬ್ಬರಿಗೂ ಅದು ತನ್ನನ್ನೇ ನೋಡುತ್ತಿರುವಂತೆ ಕಾಣಿಸುವುದು. 'ಸಃ ಮಾಂ ಪ್ರತಿ' 'ಸಃ ಮಾಂ ಪ್ರತಿ' - ಭಾವಚಿತ್ರದಲ್ಲಿರುವವನು ನನ್ನನ್ನೇ ನೋಡುತ್ತಿದ್ದಾನೆ ಎಂದು ಕಾಣಿಸುವುದು. ಆದರೆ ಜಡವಾದ ಆ ಚಿತ್ರ ಯಾರನ್ನೂ ನೋಡಲು ಸಾಧ್ಯವಿಲ್ಲ. ಆದರೂ ನೋಡುವವರಿಗೆ ಆ ಭಾವನೆ ಉಂಟಾಗಲು ಕಾರಣ - ಅಲ್ಲಿ ಭಗವಂತನ 'ಸಾಮ' ರೂಪ ಇದೆ. ಅದು ಆಯಾ ವ್ಯಕ್ತಿಯನ್ನು ಕಾಣುತ್ತಿರುವುದರಿಂದ ಭಾವಚಿತ್ರ ಆಯಾ ವ್ಯಕ್ತಿಯನ್ನೇ ಕಾಣುತ್ತಿರುವಂತೆ ಕಾಣಿಸುವುದು.

ಮನೆಯಲ್ಲಾಗಲೀ, ಸಮಾಜದಲ್ಲಾಗಲೀ, ನಮ್ಮ ನಮ್ಮ ಮನಸ್ಸಿನಲ್ಲೇ ಆಗಲೀ ಎಲ್ಲರೂ ನಮಗೆ ಅನುಕೂಲವಾಗಿ ನಮ್ಮನ್ನೇ ನೋಡುವಂತಾಗಬೇಕೆಂದರೆ ಭಗವಂತನನ್ನೂ 'ಸಾಮ' - ಎಂಬ ನಾಮದಿಂದ ಉಪಾಸನೆ ನಡೆಸಬೇಕು.

**೫೮೬. ನಿರ್ವಾಣಂ – ಪಾಂಚಭೌತಿಕ ಶರೀರದಿಂದ ದೂರನಾಗಿರುವವನು.**

**ವಿವರಣೆ :** ವಾಣ ಎಂದರೆ ಪಾಂಚಭೌತಿಕ ಶರೀರ. ಯಾಕೆ ? ವಾರ್ಥಂ ಅಣತಿ - ಜ್ಞಾನಕ್ಕಾಗಿ ಅಡ್ಡಾಡುವುದರಿಂದಾಗಿ ಈ ಶರೀರ ವಾಣ. ನಮಗೆಲ್ಲ ಇಂತಹ ಪಾಂಚಭೌತಿಕ ಶರೀರ ಇದ್ದರೆ, ಭಗವಂತ **'ನಿರ್ಗತಂ ವಾಣಂ ಯಸ್ಮಾತ್ ಸಃ'** ಪಾಂಚಭೌತಿಕ ಶರೀರದಿಂದ ನಿರ್ಗತನಾದವನು ; ರಹಿತನಾದವನು. ಅವನದ್ದು ಜ್ಞಾನಾನಂದಾತ್ಮಕ ಶರೀರವೇ ಹೊರತು ನಮ್ಮಂತಹ ನಾರುವ ಶರೀರ ಅವನಿಗಿಲ್ಲ.

ಪಾಂಚಭೌತಿಕವಾದ ನಮ್ಮ ಶರೀರ ನಾರುವಂತಹದ್ದು. ಬೇರೆಯವರಿಗೆ ಬಿಡಿ; ನಮಗೆಯೇ ನಮ್ಮ ಶರೀರ ವಾಸನೆ ಬರುವುದು. ಆದರೆ ರೂಢಿಯಾಗಿರುವುದರಿಂದ ಅದನ್ನು ಸಹಿಸಿಕೊಳ್ಳುವೆವಷ್ಟೇ. ಹೇಗೆ ಧೂಮಪಾನ ಮಾಡುವವನಿಗಾಗಲೀ, ಕಛೇರಿಯಲ್ಲಿ ಯಾವಾಗಲೂ ಅವನ ಸಮೀಪದಲ್ಲೇ ಇರುವವನಿಗಾಗಲೀ ಧೂಮಪಾನದ ಆ ವಾಸನೆಯನ್ನು ಮೂಸಿ ಮೂಸಿ ರೂಢಿಯಾಗಿರುವುದರಿಂದ ಅದು ದುರ್ವಾಸನೇ ಎನಿಸುವುದೇ ಇಲ್ಲ. ಹಾಗೆಯೇ ನಮ್ಮ ನಮ್ಮ ಶರೀರದ ದುರ್ವಾಸನೆಯನ್ನು ನಾವು ಸಹಿಸಿಕೊಳ್ಳುವೆವಷ್ಟೇ.

ಆದರೆ ಭಗವಂತನ ಶರೀರ ಜ್ಞಾನನಂದಾತ್ಮಕವಾಗಿದ್ದು ಹೀಗೆ ನಾರುವಂತಹದ್ದಲ್ಲ. ಆದ್ದರಿಂದಲೇ ಅವನು 'ನಿರ್ವಾಣಮ್'.

ಭಗವಂತನನ್ನು 'ನಿರ್ವಾಣಂ' - ಎಂದು ಉಪಾಸನೆ ಮಾಡಿದರೆ ನಾವೂ ಮುಂದೆ ಒಂದು ದಿನ 'ನಿರ್ವಾಣ'ರಾಗುವಂತೆ, ಅಂದರೆ ಪಾಂಚಭೌತಿಕ ಶರೀರವನ್ನು ಕಳಕೊಂಡು ಜ್ಞಾನಾನಂದ ಶರೀರವನ್ನು ಪಡೆದು ಮುಕ್ತರೆನಿಸುವಂತೆ ಅನುಗ್ರಹಿಸುವನು.

**೫೮೭. ಭೇಷಜಮ್ – ರೋಗಗಳನ್ನು ಹೆದರಿಸುವ ಔಷಧ.**

**೫೮೮. ಭಿಷಕ್ – ರೋಗಗಳನ್ನು ಹೆದರಿಸುವ ಔಷಧಪ್ರದ.**

**ವಿವರಣೆ :** ಭೀಷಯತೀತಿ ಭೇಷಜಮ್ - ಹೆದರಿಸುವುದು. ಭೀಷಯತೀತಿ ಭಿಷಕ್ ಹೆದರಿಸುವವನು. ಯಾರನ್ನು ? ಕಾಯಿಲೆಗಳನ್ನು. ಔಷಧಿಯನ್ನೂ, ಔಷಧಿ ಕೊಡುವವನನ್ನೂ ಕಂಡಾಕ್ಷಣ ಓಡುವುದು ಕಾಯಿಲೆ ತಾನೇ ? ಹೇಗೆ ತಪ್ತಮುದ್ರಾಧಾರಣೆ ಮಕ್ಕಳಿಗೆ ಮಾಡಿಸಿದಾಗ ಆ ಮಕ್ಕಳು ಮುದ್ರೆಯನ್ನೂ, ಮುದ್ರಾಧಾರಣೆ ಮಾಡಿಸಿದ ಸ್ವಾಮಿಗಳನ್ನೂ ಕಂಡು ಓಡುವರೋ ಹಾಗೆ.

ಮರ ಕಡಿಯುವುದು ಕೊಡಲಿಯೂ ಹೌದು ; ಕೊಡಲಿಯನ್ನು ಧರಿಸಿದವನೂ ಹೌದು. ಹಾಗೆಯೇ ರೋಗಗಳಿಗೆ ಭಯವನ್ನುಂಟು ಮಾಡುವಂತಹದ್ದು ಔಷಧವೂ ಹೌದು ; ಔಷಧ ಕೊಡುವವನೂ ಹೌದು. ನಮಗೆ ಇರುವ ದೊಡ್ಡ ಕಾಯಿಲೆ ಸಂಸಾರ. ಇದಕ್ಕೆ ಔಷಧ ಕೃಷ್ಣನೇ. ಔಷಧ ಕೊಡುವವನೂ ಕೃಷ್ಣನೇ.

**೫೮೯. ಸಂನ್ಯಾಸಕೃಚ್ಛಮಃ – ತಾನು ಮಾಡುವ ಸಂನ್ಯಾಸದ ನಿಯಮಗಳನ್ನು ತಿಳಿದು ಸಂತೋಷಪಡುವವನು.**

**ವಿವರಣೆ :** ಸಂನ್ಯಾಸಿಗಳು ನಮಗೆ ಪರಿಚಿತರು. ಕಾವಿ ಉಟ್ಟವರು ಸಂನ್ಯಾಸಿಗಳು ಎಂದು ನಾವು ಗುರುತಿಸುವೆವು. ಆದರೆ ಕಾವಿ ಉಟ್ಟವರೆಲ್ಲ ಸಂನ್ಯಾಸಿಗಳಾಗಬೇಕಿಲ್ಲ. ಮತ್ತೆ, ಯಾರು ತಮ್ಮ ಪ್ರತಿಯೊಂದು ಚಟುವಟಿಕೆಯನ್ನೂ ದೇವರಿಗೆ ಅರ್ಪಿಸುವರೋ ಅವರು ಸಂನ್ಯಾಸಿಗಳು. ಸಂ - ಚೆನ್ನಾಗಿ, ನ್ಯಾಸ - ಅರ್ಪಣೆ ಮಾಡುವುದು. ಯಾರಿಗೆ? ದೇವರಿಗೇ ಅರ್ಪಣೆ ಮಾಡುವುದು. ಸ್ವಾಮಿಗಳು ಬೇರೆ ದೇವತೆಗಳ ಪೂಜೆ ಮಾಡುವುದೆಂದಿಲ್ಲ. ಏನಿದ್ದರೂ ದೇವರ ಪರಿವಾರದವರನ್ನಾಗಿ ಇತರ ದೇವತೆಗಳನ್ನೋ ಗುರುಗಳನ್ನೋ ಪೂಜಿಸುವುದಷ್ಟೇ. ಇತರ ದೇವತೆಗಳ ದೇವಾಲಯಕ್ಕೆ ಹೋದರೂ ಅಲ್ಲಿ ಆಯಾ ದೇವಾಲಯದ ಅರ್ಚಕರೇ ಪೂಜಿಸಿ ಪ್ರಸಾದ ನೀಡುವರಷ್ಟೇ. ಲಕ್ಷ್ಮೀನಾರಾಯಣರನ್ನು, ವಾಯುದೇವರನ್ನು - ಹೀಗೆ ಹರಿಗುರುಗಳನ್ನಷ್ಟೇ ಸ್ವಾಮಿಗಳು ಪೂಜಿಸುವರು.

ನಾವು ಮಾಡುವ ಪ್ರತಿಯೊಂದು ಕರ್ಮವನ್ನೂ ಯಾರಿಗೆ ಅರ್ಪಣೆ

ಮಾಡಬೇಕು ? ಯಾರಿಗೆ ಅರ್ಪಣೆ ಮಾಡಿದರೆ ಅದನ್ನು ಉಪಯೋಗಿಸಿಕೊಳ್ಳುದಿಲ್ಲವೋ ಅವರಿಗೆ ಅರ್ಪಣೆ ಮಾಡಬೇಕು. ನಾವು ಮಾಡಿದ ಕರ್ಮವನ್ನು ದೇವರಿಗೆ ಅರ್ಪಣೆ ಮಾಡಿದರೆ ದೇವರು ಅದನ್ನು ತನ್ನ ಉಪಯೋಗಕ್ಕೆ ಸ್ವೀಕರಿಸುವುದಿಲ್ಲ. ಹಾಗೆಯೇ ಇಟ್ಟುಕೊಳ್ಳುವನು. ಇದರ ಬದಲಾಗಿ ಬೇರೆ ದೇವತೆಗಳಿಗೆ ಅರ್ಪಿಸಿದೆವೆಂದರೆ ಅವರು ಅದನ್ನು ತಮ್ಮ ಖರ್ಚಿಗೂ ಬೇಕೆಂದು ಸ್ವಲ್ಪ ಸ್ವಲ್ಪ ತೆಗೆಯುವರು. ಅದಕ್ಕಾಗಿ ಅಂದರು ಅದನ್ನು ಬೇರೆ ದೇವತೆಗಳಿಗೆ ಅರ್ಪಿಸಬೇಡ - ಎಂದು. ಗಣಹೋಮವನ್ನೇ ಮಾಡೋಣ ; ಆಶ್ಲೇಷಾ ಬಲಿಯನ್ನೇ ನಡೆಸೋಣ. ರುದ್ರಮಂದಿರದಲ್ಲಿ ಶತಾರುದ್ರಾಭಿಷೇಕವನ್ನೇ ನಡೆಸೋಣ. ಆದರೆ ಅದರ ಫಲವನ್ನು ಗಣಪತಿಗೋ, ನಾಗನಿಗೋ, ರುದ್ರನಿಗೋ ಅರ್ಪಿಸದಿರೋಣ. ಯಾಕೆಂದರೆ ಅವರಿಗೆ ಅರ್ಪಿಸಿದರೆ ಆ ಫಲವನ್ನು ಅವರೇ ಇಟ್ಟುಕೊಂಡಾರು ! ನಾವು ಒಂದು ಕರ್ಮ ಮಾಡಿದಾಗ ಅದರಲ್ಲಿ ಅನೇಕಾನೇಕ ದೇವತೆಗಳು ಪಾಲಗಾರರಿರುವರು. ಅವರೆಲ್ಲರಿಗೆ ಆ ಕರ್ಮದ ಫಲ ಒಂದೊಂದಂಶ ಸಂದಾಯವಾಗುವುದು. ಕರ್ಮಫಲದ ಒಂದಂಶವನ್ನೂ ಸ್ವೀಕರಿಸದವರು ನಾರಾಯಣ ಮತ್ತು ಲಕ್ಷ್ಮೀ ಮಾತ್ರ. ಆದ್ದರಿಂದ ನಮ್ಮ ಕರ್ಮ ಸುಭದ್ರವಾಗಿ ಇರಬೇಕೆಂದರೆ ನಾರಾಯಣನಲ್ಲೇ ಅರ್ಪಿಸಬೇಕು. ಭದ್ರತೆಯ ದೃಷ್ಟಿಯಿಂದ ನಮ್ಮ ಹಣವನ್ನು ರಾಷ್ಟ್ರೀಕೃತ ಧರಾಗಾರದಲ್ಲಿಯೇ ಇಡುವೆವು. ಹೊರತು ಖಾಸಗಿ ಧನ ಸಂಸ್ಥೆಗಳಲ್ಲಿ ಅಲ್ಲ, ಹೇಗೋ ಹಾಗೆಯೇ.

ಆದುದರಿಂದ ಕರ್ಮಗಳನ್ನು ದೇವರಿಗೆ ಅರ್ಪಿಸುವುದೇ 'ನ್ಯಾಸ'. ಈ ಬಗೆಯ ನ್ಯಾಸವನ್ನೊಳಗೊಂಡ 'ಸಂನ್ಯಾಸ'ದ ವಿಧಿನಿಯಮಗಳನ್ನು ಶಾಸ್ತ್ರದ ಮೂಲಕ ಪ್ರಸ್ತುತ ಪಡಿಸಿದವನೇ 'ಸಂನ್ಯಾಸಕೃತ್'. ಹೀಗೆ ಸಂನ್ಯಾಸದ ನಿಯಮಗಳನ್ನು ಮಾಡಿ ನೆಮ್ಮದಿಯಿಂದ ಇರುವವನೇ 'ಸಂನ್ಯಾಸಕೃಚ್ಛಮಃ' ಸಂನ್ಯಾಸಕೃತ್ ಹಾಗೂ ಶಮ ಎರಡು ಶಬ್ದಗಳು ಸೇರಿ 'ಸಂನ್ಯಾಸಕೃಚ್ಛಮ' - ಎಂದು ಒಂದು ನಾಮವಾಗಿ ರೂಪುಗೊಂಡಿದೆ. 'ಮಾ' ಎಂದರೆ ಜ್ಞಾನ ; 'ಶಂ' - ಎಂದರೆ ಸುಖ. ಆದುದರಿಂದ ಸಂನ್ಯಾಸಕೃಚ್ಛಮಃ - ಎಂಬುದಕ್ಕೆ ಸಂನ್ಯಾಸ ನಿಯಮಗಳನ್ನು ಮಾಡಿ, ಅದರಿಂದಾಗಿ ನೆಮ್ಮದಿಯಿಂದಿರುವವನೆಂಬ ಅರ್ಥ ಹೊರಡುವುದು.

ಸಂನ್ಯಾಸದ ನಿಯಮಗಳನ್ನು ತಿಳಿಯುವುದರಿಂದ ಅಳವಡಿಸಿಕೊಂಡಿರುವುದರಿಂದ ಉಳಿದವರಿಗೂ ನೆಮ್ಮದಿ. 'ಫಕೀರ್ ಕೋ ಫಿಕೀರ್ ನಹಿ' - ಎಂದಿರುವಂತೆ ಸಂನ್ಯಾಸಿಯಾದವನು ಯಾರ ಸಮಸ್ಯೆಗೂ, ತನ್ನ ಸಮಸ್ಯೆಗೂ ಸ್ಪಂದಿಸದೆ ಆರಾಮವಾಗಿರುವನು. ಇದು ಸಂನ್ಯಾಸಿಯ ಲಕ್ಷಣ ಹೊರತು

ತೀರ್ಥರದ್ದಲ್ಲ. ವೇದಾಂತ ಸಾಮ್ರಾಜ್ಯದ ಪಟ್ಟಾಬಿಷೇಕವೂ, ಸಂನ್ಯಾಸವೂ ಸೇರಿಕೊಂಡಾಗ ತೀರ್ಥ ಎನಿಸಲ್ಪಡುವರು. ತೀರ್ಥರಿಗೆ ಶಿಷ್ಯವರ್ಗ ಇದೆ. ಸಂನ್ಯಾಸಿಗೆ ಶಿಷ್ಯರೆಂದಿಲ್ಲ.

ಈ ರೀತಿಯಾಗಿ ಸಂನ್ಯಾಸದ ನಿಯಮಗಳನ್ನು ಮಾಡಿದ ಭಗವಂತ ಅದಕ್ಕಾಗಿ ಖುಷಿಪಟ್ಟ ಎನ್ನುವುದು 'ಸಂನ್ಯಾಸಕೃಚ್ಛಮಃ' ತಾನು ಮಾಡಿರುವ ಪ್ರತಿಯೊಂದು ನಿಯಮಗಳನ್ನೂ ತಿಳಿದು ಸಂತೋಷಪಡುವವನು ಭಗವಂತ. ಆದರೆ 'ಸಂನ್ಯಾಸ' ಉಳಿದೆಲ್ಲ ಆಶ್ರಮಗಳಿಗಿಂತ ಶ್ರೇಷ್ಠ ಎಂದಿರುವುದರಿಂದ 'ಸಂನ್ಯಾಸ'ವನ್ನು ವಿಶೇಷವಾಗಿ ಉಲ್ಲೇಖಿಸಲಾಗಿದೆಯಷ್ಟೇ.

ಭಗವಂತನನ್ನು 'ಸಂನ್ಯಾಸಕೃಚ್ಛಮಃ' - ಎಂದು ಉಪಾಸನೆ ಮಾಡುವುದರಿಂದ ನಮ್ಮ ಮೂಲಕವೂ ಸರಿಯಾದ ನಿಯಮಗಳು ರೂಪುಗೊಂಡು ಅದಕ್ಕಾಗಿ ತೃಪ್ತಿ ಪಡುವ ಪ್ರಸಂಗ ಒದಗಿ ಬರುವುದು. ಶ್ರೀ ವಾದಿರಾಜ ಸ್ವಾಮಿಗಳು ಉಡುಪಿ ಕೃಷ್ಣಮಠಕ್ಕೆ ಸಂಬಂಧಿಸಿದಂತೆ ರೂಪಿಸಿರುವ ಕಾನೂನು ಕಾಯಿದೆಗಳು ಆರ್‍ನೂರು ವರ್ಷಗಳಿಂದಲೂ ಚಾಚೂ ತಪ್ಪದೆ ಆಚರಿಸಲಾಗುತ್ತಿದೆ. ಒಮ್ಮೆ ಪರ್ಯಾಯಕಾಲದಲ್ಲಿ ಏನೋ ಸಮಸ್ಯೆ ಬಂದಿತ್ತಂತೆ. ಆದರೆ ಯಾರಿಂದ ಪರ್ಯಾಯ ಆಗಬೇಕೋ ಅವರಿಂದಲೇ ನಡೆಯುವಂತಾಯಿತಂತೆ. ಹೀಗೆ ಶ್ರೀಮಧ್ವರು, ಶ್ರೀವಾದಿರಾಜರು ಹಾಕಿರುವ ನಿಯಮಗಳು ನಿಯತವಾಗಿ ನಡೆಯುತ್ತ ಬಂದಿರುವುದಕ್ಕೆ 'ಸಂನ್ಯಾಸಕೃಚ್ಛಮಃ' - ಎಂಬ ನಾಮದ ಉಪಾಸನೆಯ ಶಕ್ತಿಯೇ ಕಾರಣ.

**೫೯೦. ಶಾಂತಃ – ಪರಾಕಾಷ್ಠೆಯ ಸುಖವುಳ್ಳವನು.**

**ವಿವರಣೆ :** 'ಸಂನ್ಯಾಸಕೃಚ್ಛಮಃ' - ಎಂಬ ನಾಮದಲ್ಲಿ ತಿಳಿಸಿದಂತೆ ಸಂನ್ಯಾಸದ ವಿಧಿನಿಯಮಗಳನ್ನು ತಿಳಿದಾಗ ನಮಗೂ ಸಂತೋಷವಾಗುವುದು ; ನಮಗಿಂತಲೂ ಹೆಚ್ಚು ಸಂತೋಷ ದೇವತೆಗಳಿಗೆ ಆಗುವುದು. ಇತರ ದೇವತೆಗಳಿಗಿಂತಲೂ ಹೆಚ್ಚು ಸಂತೋಷ ಚತುರ್ಮುಖನಿಗೆ ಆಗುವುದು, ಚತುರ್ಮುಖನಿಗಿಂತಲೂ ಹೆಚ್ಚು ಸಂತೋಷ ಲಕ್ಷ್ಮೀದೇವಿಗೆ ಆಗುವುದು. ಲಕ್ಷ್ಮೀದೇವಿಗಿಂತಲೂ ಅಧಿಕ ಸಂತೋಷ ದೇವರಿಗೆ ಆಗುವುದು. ಅದಕ್ಕಾಗಿಯೇ ಭಗವಂತ 'ಶಾಂತ' ಎನಿಸುವನು. ಶ ಎಂದರೆ ಸುಖ. ಅದರ ಪರಾಕಾಷ್ಠೆಯನ್ನು, ಕೊನೆಯ ಗಡುವನ್ನು ತಲುಪಿರುವುದರಿಂದ ದೇವರು 'ಶಾಂತ'. ಬೇರೆ ಯಾರಲ್ಲೂ ವಿಚಾರಿಸಿದರೂ ಚೆನ್ನಾಗಿದ್ದೇನೆ ಎನ್ನುವರು, ಜೊತೆಗೆ ಆದರೆ ಎಂದು ಸೇರಿಸಿ ಯಾವುದಾದರೊಂದು ಸಮಸ್ಯೆಯನ್ನು ಮುಂದಿಡುವರು. ಲಕ್ಷ್ಮೀದೇವಿಯಲ್ಲಿ ವಿಚಾರಿಸಿದರೂ 'ಚೆನ್ನಾಗಿದ್ದೇನೆ'- ಎಂದು ಹೇಳಿ, 'ಆದರೆ

ದೇವರನ್ನು ಪೂರ್ಣವಾಗಿ ಅರ್ಥ ಮಾಡಿಕೊಳ್ಳಲಾಗಲಿಲ್ಲ' - ಎಂಬುದೊಂದೇ ಕೊರತೆ ಎನ್ನುವಳು. ಆದರೆ ದೇವರಲ್ಲಿ ವಿಚಾರಿಸಿದರೆ 'ಚೆನ್ನಾಗಿದ್ದೇನೆ, ನೂರಕ್ಕೆ ನೂರು ಪಾಲು ಚೆನ್ನಾಗಿದ್ದೇನೆ' - ಎಂದು ಉದ್ಘೋಷಿಸುವನು. ನಾನು ಸ್ವತಂತ್ರನಾಗಿದ್ದೇನೆ; ಎಲ್ಲರೂ ನಾನು ಹೇಳುವಂತೆಯೇ ಕೇಳುವರು ; ನನಗೆ ಅಜ್ಞಾನವಿಲ್ಲ -; ದುಃಖವಿಲ್ಲ ; - ಆದ್ದರಿಂದ ನಾನು ಚೆನ್ನಾಗಿದ್ದೇನೆ - ಎನ್ನುವ ದೇವರು ಶಾಂತ. ಸುಖ ಯಾರ್‍ಯಾರಿಗೆ ಎಷ್ಟೆಷ್ಟು ಪ್ರಮಾಣದಲ್ಲಿದೆ ಎಂದು ನೋಡುತ್ತಾ ಹೋದರೆ, ಕಟ್ಟಕಡೆಯ ಅತ್ಯಂತ ಪರಿಪೂರ್ಣವಾದ ಸುಖ ಭಗವಂತನದ್ದಾದುದರಿಂದ ಅವನು 'ಶಾಂತ.' ಪರಾಕಾಷ್ಠೆಯ ಸುಖ ಉಳ್ಳವನು ; ಅದಕ್ಕಿಂತ ಹೆಚ್ಚಿನ ಸುಖವುಳ್ಳವರು ಇನ್ನೊಬ್ಬರಿಲ್ಲ.

**೫೯೧. ನಿಷ್ಠಾ – ಪ್ರತಿಯೊಂದು ವಿಷಯದಲ್ಲೂ ದಾರ್ಢ್ಯವುಳ್ಳವನು.**

**ವಿವರಣೆ :** ನಿಷ್ಠೆ ಎಂದರೆ ಸ್ಥಿರತೆ. ನಮಗೆ ಯಾಕೆ ಶಾಂತಿ ಇಲ್ಲ ? ಯಾವುದರಲ್ಲೂ ನಿಷ್ಠೆ, ದಾರ್ಢ್ಯ ಇಲ್ಲ. ನಿತರಾಂ ತಿಷ್ಠತೀತಿ ನಿಷ್ಠಾ. ಯಾವ ವ್ಯಕ್ತಿಗೆ ನಿಷ್ಠೆ ಇದೆಯೋ ಅವನಿಗೆ ಶಾಂತಿ ಇದೆ. ಭಗವಂತನಿಗೆ ಪ್ರತಿಯೊಂದು ವಿಷಯದಲ್ಲೂ ಇದು ಹೀಗೆಯೇ ಆಗಬೇಕು -; ಹೊರತು ಹಾಗಾಗಬಾರದು - ಎಂದು ನಿಷ್ಠೆ ಇರುವುದರಿಂದ ಶಾಂತಿ ಇದೆ.

ನಾವು ಕೂಡಾ ಭಗವಂತನನ್ನು 'ನಿಷ್ಠಾ' - ಎಂದು ಉಪಾಸನೆ ಮಾಡಿ ಅದರ ಫಲವಾಗಿ ಪ್ರತಿಯೊಂದು ವಿಷಯದಲ್ಲೂ ದಾರ್ಢ್ಯವನ್ನು ಪಡೆಯೋಣ. ಇದರಿಂದಾಗಿ ಶಾಂತರಾಗಿ ಬಾಳಬಲ್ಲೆವು.

**೫೯೨. ಶಾಂತಿಃ– ಲೌಕಿಕ ಸುಖಕ್ಕೆ ಕೊನೆಯನ್ನು ಕೊಡುವವನು.**

**ವಿವರಣೆ :** ನಮಗೆ ಸಂಸಾರದಲ್ಲಿ, ಸಂಸಾರದ ವ್ಯಕ್ತಿಗಳಲ್ಲಿ, ವಸ್ತುಗಳಲ್ಲಿ ನಿಷ್ಠೆ ಇರುವುದು. ಈ ನಿಷ್ಠೆಯನ್ನು ದೇವರಲ್ಲಿ ತಾಳಬೇಕು. ಶಾಸ್ತ್ರದಲ್ಲಿ ತಾಳಬೇಕು. ಆಗ ಭಗವಂತ ನಮ್ಮ ಪಾಲಿಗೆ 'ಶಾಂತಿ' - ಎನಿಸುವನು. ಅಂದರೆ ಸಂಸಾರಸುಖಕ್ಕೆ ಕೊನೆಯನ್ನು ನೀಡುವನು. 'ಶಾಂತ'- ಎಂಬಲ್ಲಿ ಅಂತಿಮವಾದ ಸುಖ ಎಂಬ ಅರ್ಥವಾದರೆ 'ಶಾಂತಿ'- ಎಂಬಲ್ಲಿ ಸಂಸಾರಸುಖದ ಕೊನೆಯನ್ನು ಮಾಡುವವನೆಂಬ ಅರ್ಥ.

**೫೯೩. ಪರಾಯಣಃ – ಶಾಶ್ವತವಾಗಿರುವ ಪ್ರಯುಕ್ತ ಶ್ರೇಷ್ಠವಾದ ಆಶ್ರಯವಾಗಿರುವವನು.**

**ವಿವರಣೆ :** ಪರಾಯಣಃ ಎಂದೂ ಆಗಬಹುದು, 'ಪರಾಯಣಮ್' - ಎಂದೂ

ಆಗಬಹುದು. 'ಶಾಂತಿ' ಎನಿಸುವ ಭಗವಂತ ಸಂಸಾರಸುಖದ ಕೊನೆ ಮಾಡುವನು. ಸಂಸಾರದ ಜಂಜಾಟವನ್ನು ತಪ್ಪಿಸಿ ಒಳ್ಳೆಯ ಸ್ಥಾನವನ್ನು ನೀಡುವನು. ಯಾವುದದು ಒಳ್ಳೆಯ ಸ್ಥಾನ ? ಭೀಷ್ಮರು ಸ್ತುತಿಸುವರು - ಕೃಷ್ಣ ನೀನೇ ಆ ಸ್ಥಾನ - ಪರಾಯಣಮ್ - ಶ್ರೇಷ್ಠವಾದ 'ಅಯನ' - ಆಶ್ರಯ. ಸ್ವರ್ಗಾದಿಗಳಿಗೆ ಹೋದಲ್ಲಿ ಒಂದಲ್ಲ ಒಂದು ದಿನ ಹಿಂತಿರುಗ ಬೇಕಾಗುವುದು. ಆದರೆ ದೇವರ ಬಳಿಗೆ ಹೋದವನು ಹಿಂದಕ್ಕೆ ಮರಳುವುದಿಲ್ಲ. **'ನ ಚ ಪುನರಾವರ್ತತೇ ನ ಚ ಪುನರಾವರ್ತತೇ'** ಉಳಿದ ದೇವತೆಗಳೂ ನಮ್ಮ ಬಳಿಗೆ ಬನ್ನಿ ಎನ್ನಬಹುದು. ಆದರೆ ನಮ್ಮ ಬಳಿಗೆ ಬಂದವನು ಮತ್ತೆ ಮರಳಬೇಕಾಗಿಲ್ಲ - ಎಂದೇನೂ ಯಾರೂ ಹೇಳುವುದಿಲ್ಲ. ಆದರೆ ದೇವರೊಬ್ಬನೇ ನನ್ನ ಬಳಿಗೆ ಬನ್ನಿ, ಮತ್ತೆ ಮರಳಬೇಕಾಗಿಲ್ಲ - ಎನ್ನುವನು. ಹೀಗೆ ಶಾಶ್ವತವಾದ ಆಶ್ರಯವಾಗಿದ್ದು, ಶ್ರೇಷ್ಠವಾದ ಆಸರೆಯಾಗಿರುವುದರಿಂದಲೇ ಭಗವಂತ ಪರಾಯಣಃ.

ಮರಣಕಾಲದಲ್ಲಿ ಭಗವಂತನ ಸ್ಮರಣೆ ಬರಲು ಪ್ರಯೋಜಕವಾಗಿ ಭಗವಂತನನ್ನು 'ಪರಾಯಣಃ' - ಎಂದು ಉಪಾಸನೆ ನಡೆಸಬೇಕು.

**ಶುಭಾಂಗಃ ಶಾಂತಿದಃ ಸ್ರಷ್ಟಾ ಕುಮುದಃ ಕುವಲೇಕ್ಷಣಃ |**
**ಗೋಹಿತೋ ಗೋಪತಿರ್ಗೋಪ್ತಾ ವೃಷಭಾಕ್ಷೋ ವೃಷಪ್ರಿಯಃ || ೬೩ ||**

**೫೯೪. ಶುಭಾಂಗಃ – ಒಳ್ಳೆಯ ಅವಯುವಗಳನ್ನು ಹೊಂದಿರುವವನು.**

**ವಿವರಣೆ : ಶುಭ** ಒಳ್ಳೆಯ **ಅಂಗ** ಅಂಗಗಳು, ಅವಯವಗಳು ಉಳ್ಳವನು. ಅವನ ಪ್ರತಿಯೊಂದು ಅಂಗವೂ ಒಳ್ಳೆಯದು. ಅವನ ಯಾವುದೇ ಅಂಗವನ್ನು ನೋಡುತ್ತಿದ್ದರೆ ಅಲ್ಲಿಂದ ಕಣ್ಣನ್ನು ಕೀಳಿಸಲಿಕ್ಕೇ ಆಗುವುದಿಲ್ಲ. ಅಷ್ಟೂ ಆಕರ್ಷಕವಾದವುಗಳು ಅವನ ಅಂಗಗಳು. ನಮ್ಮ ಕಣ್ಣು ಅವನ ಮುಖವನ್ನು ನೋಡಲಿಕ್ಕೆ ಪ್ರಾರಂಭಿಸಿದರೆ, ಬೇಡ, ಮುಖದಲ್ಲಿ ಅವನ ಕಣ್ಣನ್ನು ನೋಡುತ್ತಿದ್ದರೆ - ಅದನ್ನೇ ನೋಡುತ್ತಿರುವುದು. ಸಾಕು, ಇನ್ನು ದೇವರ ಕೈಯನ್ನು ನೋಡು - ಎಂದು ಯಾರಾದರೂ ಎಚ್ಚರಿಸಿದರೆ ಅವನ ಕೈಯನ್ನೇ ನೋಡುತ್ತಿರುವುದು. ಹೀಗೆ ಅವನ ಅಂಗಗಳನ್ನು ಬಿಡಿ ; ಆ ಅಂಗಗಳಿಗೆ ತೊಡಿಸಿದ ಆಭರಣಗಳಲ್ಲಿ ಒಂದೊಂದನ್ನು ನೋಡುತ್ತಿದ್ದರೆ ಅದನ್ನಷ್ಟೇ ನೋಡುತ್ತಿರಬೇಕೆನಿಸುವುದು. ವಜ್ರದ ಕಿರೀಟವನ್ನು ನೋಡುತ್ತಿದ್ದರೆ ಅದನ್ನೇ ನೋಡುತ್ತಿರುವುದು. ಕೆಲವರು ಜಿರಳೆ ಗಿರಳೆ ಹರಿದಾಡುತ್ತಿದ್ದರೆ ದೇವರನ್ನು ನೋಡುವ ಬದಲು, ಅದನ್ನೇ ನೋಡುತ್ತ ಅದು ಎಲ್ಲಿಗೆ ಹೋಗುವುದು ? ಏನು ಮಾಡುವುದು? ಎಂಬ ಕುತೂಹಲದಲ್ಲೇ ದೇವರ ದರ್ಶನವನ್ನು ಮುಗಿಸಿ ಬಿಡುವವರೂ ಇದ್ದಾರೆ!

ಅದು ಅವರ ಸ್ವರೂಪಯೋಗ್ಯತೆ !

ದೇವರ ಮೈಮೇಲಿರುವ ಜಡ ಆಭರಣಗಳನ್ನು ಕಾಣುವಾಗಲೇ ನಾವು ಮೈಮರೆಯುವೆವೆಂದರೆ, ಸಾಕ್ಷಾಲ್ಲಕ್ಷ್ಮೀದೇವಿಯೇ ಆಭರಣವಾಗಿ ದೇವರ ಮೈಮೇಲೆ ಮೆರೆಯುತ್ತಿರುವುದನ್ನು ಕಾಣುವಾಗ ಎಂತಹ ಆಕರ್ಷಣೆ ಇದ್ದೀತು ! ಅದನ್ನು ಅನುಭವಿಸಿಯೇ ತಿಳಿಯಬೇಕಷ್ಟೇ. ಪಾಯಸವನ್ನು ತಿಂದಾಗ ದೊರಕಬಹುದಾದ ಪರಿಚಯ ಅದು ಸಿಹಿ ಇದೆ ಎಂದು ನಾನು ಎಷ್ಟು ವರ್ಣನೆ ಮಾಡಿದರೂ ದೊರಕಲಾರದು ತಾನೇ ? ಭೀಷ್ಮರು ತಮ್ಮ ಮುಂದೆ ಕುಳಿತಿರುವ ಕೃಷ್ಣನನ್ನು ಸಾಕ್ಷಾತ್ತಾಗಿ ಕಾಣುತ್ತ 'ಶುಭಾಂಗಃ' - ಎಂದು ಅವನ ಅಂಗಗಳ ಶುಭತ್ವವನ್ನು ಅನುಭವಿಸುತ್ತಿರುವರು. ನಮಗೆ ಶಾಬ್ದಬೋಧಾತ್ಮಕ ಪರಿಚಯವಷ್ಟೇ ದೊರಕುವುದು.

ಅಂಗಗಳ ಶುಭತ್ವ, ಒಳ್ಳೆಯತನ ಎಂದರೆ ಬರೇ ನೋಡಲಿಕ್ಕೆ ಚೆಂದ ಕಾಣುವುದಷ್ಟೇ ಅಲ್ಲ ; ಮತ್ತೆ ಆಯಾ ಅವಯವಕ್ಕೆ ಸಂಬಂಧಿಸುವ ಆಯಾ ಚಟುವಟಿಕೆಯನ್ನು ಚೆನ್ನಾಗಿ ನಿರ್ವಹಿಸುವಿಕೆಯೂ ಆಯಾ ಅವಯವದ ಒಳ್ಳೆಯತನ. ಒಳ್ಳೆಯ ಮಾತುಗಳನ್ನು ಹೊರಡುವ ಬಾಯಿ ಒಳ್ಳೆಯ ಬಾಯಿ ; ಒಳ್ಳೆಯ ಸ್ಪರ್ಶವನ್ನು ನೀಡುವ ಕೈ ಒಳ್ಳೆಯ ಕೈ...... ಹೀಗೆಯೇ ಭಗವಂತನ ಪ್ರತಿಯೊಂದು ಅವಯವವೂ ತನ್ನ ತನ್ನ ಚಟುವಟಿಕೆಯನ್ನಷ್ಟೇ ಅಲ್ಲದೆ, ಉಳಿದ ಎಲ್ಲಾ ಅವಯವಗಳ ಚಟುವಟಿಕೆಗಳನ್ನೂ ಚೆನ್ನಾಗಿ ನಿರ್ವಹಿಸಬಲ್ಲವಾಗಿದ್ದು ಅತ್ಯಂತ ಶುಭಗಳಾದ ಅಂಗಗಳೆನಿಸಿವೆ. ಆದುದರಿಂದ ಅವನು ಶುಭಾಂಗ.

**೫೮೫. ಶಾಂತಿದಃ – * ಯೋಗ್ಯರಿಗೆ ಮನಸ್ಸಿನ ಸಮಾಧಾನವನ್ನು ನೀಡುವವನು.**

*** ಅಯೋಗ್ಯರ ಮನಸ್ಸಿನ ಸಮಾಧಾನವನ್ನು ಕದಡುವವನು.**

**ವಿವರಣೆ :** ಶಾಂತಿ ಎಂದರೆ ಸಮಾಧಾನ. ನೆಮ್ಮದಿ. ಯೋಗ್ಯರಿಗೆ ಇಂತಹ ಮಾನಸಿಕ ಸಮಾಧಾನವನ್ನು ಕೊಡುವನು - 'ಶಾಂತಿಂ ದದಾತೀತಿ ಶಾಂತಿದಃ' ಅಯೋಗ್ಯರು ಎಂದಾದರೆ ಅವರಿಗೆ ಮಾನಸಿಕ ಸಮಾಧಾನವನ್ನು ಹಾಳು ಮಾಡಿ ಗೊಂದಲವನ್ನೇ ಉಂಟು ಮಾಡುವನು - ಶಾಂತಿಂ ದ್ಯತಿ ಖಂಡಯತೀತಿ ಶಾಂತಿದಃ

ಪ್ರಾಮಾಣಿಕವಾಗಿ ದುಡಿಯುವವರಿಗೆ ಮಾನಸಿಕಶಾಂತಿಯನ್ನು ನೀಡುವನು. ಅಪ್ರಾಮಾಣಿಕವಾಗಿ ನಡೆದುಕೊಳ್ಳುವವರ ಮಾನಸಿಕ ಶಾಂತಿಯನ್ನು ಕದಡಿಸುವನು. ಒಬ್ಬನೇ ಕೃಷ್ಣ ದುರ್ಯೋಧನನಿಗೆ ಮಾನಸಿಕ ಸ್ತಿಮಿತವನ್ನು ತಪ್ಪಿಸಿದ, ಪಾಂಡವರಿಗೆ ಮಾನಸಿಕ ಶಾಂತಿಯನ್ನು ಕೊಟ್ಟ.

ಯಾರಾದರೂ ಕೀಟಲೆ ಮಾಡುವವರಿದ್ದರೆ ದೇವರನ್ನು 'ಶಾಂತಿದಃ' - ಎಂದು ಸ್ತುತಿಸೋಣ. ಅಂತಹವರ ಮಾನಸಿಕ ಸ್ಥಿತಿಯನ್ನು ಕದಡಿ ಅವರು ನಮ್ಮ ಸುದ್ದಿಗೆ ಬಾರದಂತೆ ಮಾಡುವನು. ನಮಗೆ ಮಾನಸಿಕ ನೆಮ್ಮದಿಯನ್ನು ನೀಡುವಂತೆ 'ಶಾಂತಿದಃ' ಎಂದೂ ಅವನನ್ನು ಉಪಾಸಿಸೋಣ.

**೫೯೬. ಸ್ರಷ್ಟಾ – ಜಗತ್ತನ್ನು ಸೃಷ್ಟಿ ಮಾಡುವವನು.**

**ವಿವರಣೆ :** 'ಸೃಜ ವಿಸರ್ಜನೇ' - ಎಂಬ ಕ್ರಿಯಾಪದದಿಂದ ರೂಪುಗೊಂಡ 'ಸ್ರಷ್ಟಾ' ನಾಮದ ಅರ್ಥ - ವಿಸರ್ಜಿಸುವವನು ಅಂದರೆ ಭಗವಂತನು ತನ್ನ ಉದರದಲ್ಲಿರುವ ಜಗತ್ತನ್ನು ಹೊರಹಾಕುವವನು.

ಹೇಗೆ ನಮ್ಮ ದೇಹದಿಂದ ತಿಂದ ಆಹಾರ ಕಶ್ಮಲವಾಗಿ ಹೊರಹೊಮ್ಮಿದಾಗ ಆ ಕಶ್ಮಲಕ್ಕೂ ನಮ್ಮ ದೇಹಕ್ಕೂ ತುಲನೆ ಇಲ್ಲವೋ ಹಾಗೆ ಭಗವಂತನ ಉದರದಿಂದ ಹೊರಹೊಮ್ಮುವ ಜಗತ್ತಿಗೂ ಭಗವಂತನಿಗೂ ಎಂದೂ ತುಲನೆ ಸಲ್ಲ. ಈ ಅಭಿಪ್ರಾಯವನ್ನು ಸೂಚಿಸುವುದಕ್ಕಾಗಿಯೇ ಹೊರ ಹಾಕುವುದೆಂಬ ಅರ್ಥದ 'ಸ್ರಷ್ಟಾ' - ಎಂಬ ಶಬ್ದವನ್ನೇ ಬಳಸಲಾಗಿದೆ. ಜಗತ್ತನ್ನು ಸೃಷ್ಟಿ ಮಾಡುವವನು ಎಂಬುದು ಇದರ ಸಾಮಾನ್ಯವಾದ ಅರ್ಥ.

**೫೯೭. ಕುಮುದಃ – ಭೂಮಿಯಲ್ಲಿರುವವರಿಗೆ ನೆಮ್ಮದಿಯನ್ನು ನೀಡುವವನು.**

**ವಿವರಣೆ :** ಕು - ಎಂದರೆ ಭೂಮಿ. ಮುದ - ಎಂದರೆ ಸಂತೋಷ ನೀಡುವವನು. ದೇವರು ಭೂಮಿಗೆ ಬರುವ ಉದ್ದೇಶವೇ ಭೂಮಿಗೆ ಸಂತೋಷವನ್ನುಂಟು ಮಾಡುವಂತಹದ್ದು. ಕು - ಭೂಮಿಯಲ್ಲಿರುವವರಿಗೆ ಮುತ್ - ಸಂತೋಷ ಯಾರಿಂದಲೋ ಅವನಿಗೆ ಕುಮುದ ಎಂಬ ಹೆಸರು.

**೫೯೮. ಕುವಲೇಶಯಃ – ಭೂಮಿಯಲ್ಲಿ, ಶರೀರದಲ್ಲಿ ಸಂಚರಿಸುತ್ತಿರುವ ಜೀವನಲ್ಲಿ ಆರಾಮವಾಗಿ ಶಯನ ಮಾಡಿರುವವನು.**

**ವಿವರಣೆ :** ಕುವಲೇ ಎಂದರೆ ಜೀವನಲ್ಲಿ ಶಯಃ - ಎಂದರೆ ಶಯನ ಮಾಡಿರುವವನು. ಕು - ಭೂಮಿಯಲ್ಲಿ ವಲತಿ - ಅಡ್ಡಾಡುತ್ತಿರುವವನು - ಎಂಬ ಅರ್ಥದಲ್ಲಿ ಜೀವ ಕುವಲ ಎನಿಸುವನು. ವಾಲುವುದು, ಮಾಲುವುದು - ಇವೆಲ್ಲ ವಲಧಾತುವಿನಿಂದಲೇ ರೂಪುಗೊಂಡವು.

ಕು ಎಂದರೆ ಭೂಮಿ ; ಶರೀರವೂ ಆಗಬಹುದು. ಜೀವನು ಭೂಮಿಯಲ್ಲಿ ಶರೀರದ ಮೂಲಕ ಅಡ್ಡಾಡುತ್ತಿರುತ್ತಾನೆ. ಶರೀರದಿಂದ ಶರೀರಕ್ಕೆ

ಅಡ್ಡಾಡುತ್ತಿರುತ್ತಾನೆ. ಒಂದು ಶರೀರವನ್ನು ಪ್ರವೇಶಿಸಿದ, ಅಲ್ಲಿ ಸ್ವಲ್ಪ ದಿನ ಇದ್ದ. ಬೇಸರ ಬಂತು. ಆತ್ಮಹತ್ಯೆ ಮಾಡಿಕೊಂಡ. ಮತ್ತೊಂದು ಶರೀರವನ್ನು ಪ್ರವೇಶಿಸಿದ. ಹೀಗೆ ಶರೀರದಿಂದ ಶರೀರಕ್ಕೆ ಸಂಚರಿಸುತ್ತ ಇರುವನು. ಹಾಗೆಯೇ ಭೂಮಿಯಲ್ಲೂ ಅಡ್ಡಾಡುತ್ತಿರುತ್ತಾನೆ. ಯಕ್ಷಗಾನಕ್ಕೆ ಹೋದಾಗ - ಒಮ್ಮೆ ಎದುರಿನಲ್ಲಿ ಬಂದು ಕೂತ. ಏನೋ ಬೇಸರ ಬಂತು. ಅಲ್ಲಿಂದ ಎದ್ದ. ಹಿಂದೆ ಹೋಗಿ ಕೂತ. ಹೀಗೆ ಆಟ ಮುಗಿಯುವವರೆಗೂ ಅಲ್ಲಿಂದ ಇಲ್ಲಿಗೆ, ಇಲ್ಲಿಂದ ಅಲ್ಲಿಗೆ ಅಡ್ಡಾಡುತ್ತಾ ಇರುವಂತೆ ಜೀವನದಲ್ಲೂ ಜೀವ ಅಡ್ಡಾಡುತ್ತಿರುವುದರಿಂದ ಅವನನ್ನು 'ಕುವಲ' ಎಂದೇ ಕರೆಯಲಾಗಿದೆ. ಹೀಗೆ ಜೀವ ಶರೀರದಿಂದ ಶರೀರಕ್ಕೆ, ಸ್ಥಳದಿಂದ ಸ್ಥಳಕ್ಕೆ ಅಡ್ಡಾಡುತ್ತಾ ಇದ್ದರೂ ಅವನಲ್ಲಿರುವ ದೇವರು ಮಾತ್ರ ಆರಾಮವಾಗಿ ಮಲಗಿರುವನು ಎಂದು ಸ್ತುತಿಸಲಾಗುವುದು - 'ಕುವಲೇಶಯಃ' - ಕುವಲೇ ಶೇತೇ ಇತಿ ಕುವಲೇಶಯಃ

ನಾವು ಸ್ಥಳದಿಂದ ಸ್ಥಳಕ್ಕೆ, ಶರೀರದಿಂದ ಶರೀರಕ್ಕೆ ಅಡ್ಡಾಡುತ್ತಿರುವಾಗ ದೇವರು ಮಾತ್ರ ನಮ್ಮಲ್ಲಿ ಆರಾಮವಾಗಿ ಶಯನ ಮಾಡಿಕೊಂಡಿರುವನು ಎಂಬ ಅನುಸಂಧಾನವನ್ನು 'ಕುವಲೇಶಯಃ' - ಎಂಬ ನಾಮದಿಂದ ತಂದುಕೊಳ್ಳಬೇಕು.

**೫೯. ಗೋಹಿತಃ – * ಚಲನಶೀಲರಿಗೆಲ್ಲ ಹಿತನಾಗಿರುವವನು.**
*** ಹಸುಗಳಿಗೆ ಹಿತನಾಗಿರುವವನು.**

**ವಿವರಣೆ:** ಹೋಗುವವರೆಲ್ಲ 'ಗೋ' ಎನಿಸುವರು. ಇಂಗ್ಲೀಷಿನಲ್ಲಿ ಹೋಗು ಎಂಬ ಅರ್ಥದಲ್ಲಿ 'go' - ಎಂದು ಬಂದದ್ದೂ ಸಂಸ್ಕೃತದ 'ಗೋ' ಶಬ್ದದಿಂದಲೇ. ನಾವೆಲ್ಲ ಒಂದೆಡೆಯಿಂದ ಮತ್ತೊಂದೆಡೆಗೆ ಹೋಗುತ್ತಾ ಇರುವವರು. ಉಪನ್ಯಾಸಕ್ಕಿಂತ ಮುಂಚೆ ಮನೆಯಲ್ಲಿದ್ದೆವು. ಅಲ್ಲಿಂದ 'ಗೋ' ಎನಿಸಿ ಇಲ್ಲಿಗೆ ಬಂದೆವು. ಇಲ್ಲಿ ಉಪನ್ಯಾಸ ಮುಗಿಯಿತೆಂದರೆ ಮತ್ತೆ ಇಲ್ಲಿಂದ 'ಗೋ' ಎನಿಸಿ ಮನೆಗೆ ಸೇರುವೆವು. ಹೀಗೆ ಯಾವಾಗಲೂ ಗಮನಶೀಲರಾಗಿರುವುದರಿಂದ, ಚಲನಶೀಲರಾಗಿರುವುದರಿಂದ ನಾವೆಲ್ಲ 'ಗೋ'. ನಮಗೆಲ್ಲ ಭಗವಂತ 'ಹಿತ'ನಾಗಿರುವವನು. 'ಪ್ರಿಯ' ಹಾಗೂ 'ಹಿತ' ಕೆಲವೊಮ್ಮೆ ಪರಸ್ಪರ ವಿರುದ್ಧಗಳಾಗಿರುವಂತೆ ಕಾಣಿಸುವುದು. ತಾತ್ಕಾಲಿಕ ಇಷ್ಟಕ್ಕೆ ಪ್ರಯೋಜಕವಾಗಿದ್ದು, ಕೊನೆಯಲ್ಲಿ ಅನಿಷ್ಟಸಾಧನವಾದರೂ ಅದು 'ಪ್ರಿಯ' ಎನಿಸುವುದು. ತಾತ್ಕಾಲಿಕವಾಗಿ ಅನಿಷ್ಟವೆನಿಸಿದ್ದರೂ, ಮುಂದೆ ಇಷ್ಟಸಾಧಕವಾಗುವಂತಿದ್ದರೆ ಅದು 'ಹಿತ' ಎನಿಸುವುದು. ಹೊಟ್ಟೆ ನೋವಿನಿಂದ ಬಳಲುತ್ತಿರುವ ಮಗುವಿಗೆ ತಾಯಿ ಸಕ್ಕರೆ

ಕೊಟ್ಟರೆ ಅದರ ಪಾಲಿಗೆ 'ಪ್ರಿಯ'ಳೆನಿಸಬಹುದು. ಆದರೆ 'ಹಿತ'ಳಾಗಲಾರಳು. ಸಕ್ಕರೆಯ ಬದಲು ಕಹಿ ಮದ್ದನ್ನು ನೀಡಿದಳೆಂದರೆ 'ಅಪ್ರಿಯ'ಳೆನಿಸಬಹುದಾದರೂ 'ಹಿತ' ಆಗಬಲ್ಲಳು. ದೇವರು ದುರ್ಯೋಧನಾದಿಗಳ ಪಾಲಿಗೆ 'ಪ್ರಿಯ' ಆಗಿದ್ದ ; ಆದರೆ 'ಹಿತ'ನಲ್ಲ. ಮೊದಮೊದಲು ದುಃಖವನ್ನು ಅನುಭವಿಸಿದ ಪಾಂಡವರ ಪಾಲಿಗೆ 'ಪ್ರಿಯ'ನಂತೆ ಕಾಣಿಸದಿದ್ದರೂ 'ಹಿತ'ನಾಗಿದ್ದ.

ಹೀಗೆ ಭಗವಂತ ಗೋ ಎನಿಸುವ ನಮ್ಮೆಲ್ಲರ ಪಾಲಿಗೆ ಕೆಲವೊಮ್ಮೆ ಅಪ್ರಿಯನಾಗುವನು. ಜೀವನದಲ್ಲಿ ತಾತ್ಕಾಲಿಕ ಅನಿಷ್ಟಗಳು ನಡೆದಾಗ ಆ ಪ್ರಯುಕ್ತ ಭಗವಂತ ಅಪ್ರಿಯ ಎನಿಸುವನು. ಆದರೆ ಕ್ರಮೇಣ ನಮ್ಮ ಇಷ್ಟಸಾಧಕನಾಗಿ ನಮ್ಮ ಪಾಲಿಗೆ 'ಹಿತ'ನಾಗುವನು. ಆದುದರಿಂದ ಅವನನ್ನು 'ಗೋಹಿತ' - ಎಂದು ಸ್ತುತಿಸಲಾಗುವುದು.

ಗೋ ಶಬ್ದಕ್ಕೆ ಹೀಗೆ ಯೌಗಿಕಾರ್ಥವನ್ನಿಟ್ಟುಕೊಂಡಾಗ ಸಂಚಾರ ಮಾಡುವ ಪ್ರತಿಯೊಬ್ಬರೂ ಗೋ ಎನಿಸಿದರೆ, ರೂಢಾರ್ಥವನ್ನಿಟ್ಟುಕೊಂಡಾಗ 'ಗೋ' ಎಂದರೆ ಹಸು. ಹಸುಗಳಿಗೆ ಭಗವಂತನು ಹಿತನಾಗಿರುವುದರಿಂದ 'ಗೋಹಿತ.'

ಭೀಷ್ಮರೇ ಯುಧಿಷ್ಠಿರನೆದುರು ಹಸುಗಳಲ್ಲಿರುವ ದೇವತೆಗಳನ್ನು ಹೀಗೆ ಉಲ್ಲೇಖಿಸುವರು -

**'ಲಲಾಟೇ ಗೋಃ ವೃಷಧ್ವಜಃ'** - ಗೋವಿನ ಹಣೆಯಲ್ಲಿ ರುದ್ರದೇವ.

**'ಕರ್ಣಯೋಃ ಅಶ್ವಿನೌ ದೇವೌ'**- ಗೋವಿನ ಕಿವಿಗಳಲ್ಲಿ ಅಶ್ವಿನಿ ದೇವತೆಗಳು.

**'ಚಕ್ಷುಷೋಃ ಶಶಿಭಾಸ್ಕರೌ'** - ಗೋವಿನ ಕಣ್ಣುಗಳಲ್ಲಿ ಚಂದ್ರಸೂರ್ಯರು.

**ದಂತೇಷು ಮರುತಃ ದೇವಾಃ** - ಗೋವಿನ ಹಲ್ಲುಗಳಲ್ಲಿ ನಲ್ವತ್ತೊಂಬತ್ತು ಮರುತ್ ದೇವತೆಗಳು

**ಜಿಹ್ವಾಯಾಂ ಚ ಸರಸ್ವತೀ** - ಗೋವಿನ ನಾಲಗೆಯಲ್ಲಿ ಸರಸ್ವತಿ.

**ಕಂಠೇ ಚ ವರುಣೋ ದೇವಃ** - ಗೋವಿನ ಕಂಠದಲ್ಲಿ ವರುಣ ದೇವ.

**ಹೃದಯೇ ಹವ್ಯವಾಹನಃ** - ಗೋವಿನ ಹೃದಯದಲ್ಲಿ ಅಗ್ನಿ.

**ಚತ್ವಾರಃ ಸಾಗರಾಃ ಗವಾಂ ಪಯೋಧರೇ** - ಗೋವಿನ ನಾಲ್ಕು ಕೆಚ್ಚಲುಗಳಲ್ಲಿ ನಾಲ್ಕು ಸಾಗರಗಳು.

**ಗೋಮೂತ್ರೇ ಜಾಹ್ನವೀ ಸ್ವಯಮ್** - ಗೋಮೂತ್ರದಲ್ಲಿ ಗಂಗೆ.

ಹೀಗೆ ಎಲ್ಲಾ ದೇವತೆಗಳು ಗೋವಿನ ಬೇರೆ ಬೇರೆ ಅಂಗವನ್ನು ಆಶ್ರಯಿಸಿದಾಗ, ಲಕ್ಷ್ಮೀದೇವಿ ಬಂದದ್ದು ಸ್ವಲ್ಪ ತಡವಾಯಿತು. ಗೋವಿನ ಯಾವ ಅಂಗದಲ್ಲೂ ಆಕೆಗೆ ಇರಲು ಅವಕಾಶ ಇರಲಿಲ್ಲ. ಬೇಕಾದರೆ 'ಸೆಗಣಿ' ಒಂದು

ಬಾಕಿ ಇದೆ. ಅದರಲ್ಲಿ ಇರು ಎನ್ನಲು - **'ದಷ್ಟಪುಷ್ಟಾ ಮಹಾಲಕ್ಷ್ಮೀಃ ಗೋಮಯೇ ಸಂಸ್ಥಿತಾ ಸದಾ'** ಸಂತುಷ್ಟಳಾಗಿಯೇ ಮಹಾಲಕ್ಷ್ಮೀ ತನ್ನ ನೆಲೆಗಾಗಿ ಗೋಮಯವನ್ನು ಆಯ್ಕೆ ಮಾಡಿದಳು. ಅದರಲ್ಲಿ ಯಾವುದೋ ಒಂದು ಗಳಿಗೆಯಲ್ಲಿ ಇರುವುದಲ್ಲ. ಮತ್ತೆ **'ಸಂಸ್ಥಿತಾ ಸದಾ'** - ಯಾವಾಗಲೂ ಚೆನ್ನಾಗಿ ಸನ್ನಿಹಿತಳಾಗಿರುವಳು.

ಆದ್ದರಿಂದ ಗೋಮಯ ಮನೆಯೊಳಗೆ ಇದೆ ಎಂದರೆ ಆ ಮನೆಯಲ್ಲಿ ಲಕ್ಷ್ಮಿಯ ಸನ್ನಿಧಾನ ಇದೆ ಎಂದರ್ಥ. 'ಅಲರ್ಜಿ' ಆಗುವುದೆಂದು ಗೋಮಯವನ್ನು ಮನೆಗೆ ತರುವುದನ್ನು ಬಿಟ್ಟಲ್ಲಿ, ಲಕ್ಷ್ಮಿ ಮನೆಯೊಳಗೆ ಬರುವ ಬದಲು ಲಕ್ಷ್ಮಿಯ ಅಕ್ಕ ಮನೆಯನ್ನು ಪ್ರವೇಶಿಸುವಳು. ಸಮುದ್ರ ಮಥನದ ಸಂದರ್ಭದಲ್ಲಿ ಲಕ್ಷ್ಮಿಗಿಂತ ಮುಂಚೆ ಕಲಿಯ ಪತ್ನಿ ಅಲಕ್ಷ್ಮಿ ಹುಟ್ಟಿಕೊಂಡಿದ್ದರಿಂದ ಅಲಕ್ಷ್ಮಿ ಅಕ್ಕ. ಲಕ್ಷ್ಮೀ ತಂಗಿ. ಲಕ್ಷ್ಮೀದೇವಿ ಯಾವಾಗಲೂ ನಾರಾಯಣನ ಜೊತೆಗೆ ಭಕ್ತಿಯಿಂದ, ಪ್ರೀತಿಯಿಂದ ಇರುವವಳು. ಅಂತಹ ಲಕ್ಷ್ಮೀ ಮನೆಯಲ್ಲಿದ್ದಳೆಂದರೆ ಮನೆಯಲ್ಲಿ ಸತಿಪತಿಯರು ಅನೋನ್ಯವಾಗಿರುವರು. ಅಲಕ್ಷ್ಮಿಯಾದರೂ ಕಲಿಯ ಜೊತೆಗೆ ಯಾವಾಗಲೂ ಹೊಂದಿಕೊಂಡು ಇದ್ದವಳಲ್ಲ. ಅಂತಹ ಅಲಕ್ಷ್ಮೀ ಮನೆಯೊಳಗೆ ಹೊಕ್ಕಳೆಂದರೆ ಮನೆ ತುಂಬ ಜಗಳ ; ಅಸಮಾಧಾನ - ಇತ್ಯಾದಿ ವಾತಾವರಣ ಹರಡುವುದು. ಆದುದರಿಂದ ಲಕ್ಷ್ಮಿಯ ಸನ್ನಿಧಾನಕ್ಕೆ ಪಾತ್ರವಾದ ಸಗಣಿಯನ್ನು ಮನೆಯಲ್ಲಿ ವಿನಿಯೋಗಿಸಿಕೊಳ್ಳೋಣ.

ಭಗವಂತ 'ಗೋಹಿತ' ಗೋವುಗಳಿಗೆ ಅತ್ಯಂತ ಇಷ್ಟಸಾಧಕ-ನಾಗಿರುವುದರಿಂದಲೇ ದೇವತೆಗಳೆಲ್ಲ ಅಂತಹ ಗೋವಿನ ಬೇರೆ ಬೇರೆ ಅಂಗವನ್ನು ಆಶ್ರಯಿಸಿರುವರು.

'ಗೋಹಿತ' ಎನಿಸಿರುವ ದೇವರನ್ನು ಹುಡುಕಬೇಕೆಂದರೆ, ಅಂತಹ ಗೋವುಗಳನ್ನು ಸೇವಿಸೋಣ. ಗೋ ಸಂರಕ್ಷಣೆ ಆಗದಿರುವುದರಿಂದಲೇ ದೇಶದಲ್ಲಿ ದುರ್ಭಿಕ್ಷೆ ಮುಂತಾದ ಅನಿಷ್ಟಗಳು ಸಂಭವಿಸುತ್ತಿದೆ. ಆದುದರಿಂದ ಗೋ ಸಂರಕ್ಷಣೆ ಮಾಡುವ ಮೂಲಕ 'ಗೋಹಿತ'ನ ಅನುಗ್ರಕ್ಕೆ ಪಾತ್ರರಾಗಿ ನಮ್ಮ, ಹಾಗೂ ದೇಶದ ಸಮಸ್ಯೆಗಳಿಂದ ದೂರರಾಗೋಣ.

**೬೦೦. ಗೋಪತಿಃ – ಇಂದ್ರಿಯಗಳಿಗೆ ಒಡೆಯ.**

ವಿವರಣೆ : ಶಾಸ್ತ್ರಕಾರರು ಗೋಶಬ್ದಕ್ಕೆ ಹತ್ತಾರು ಅರ್ಥಗಳನ್ನು ಹೇಳುವರು. ಅವುಗಳಲ್ಲಿ ಇಂದ್ರಿಯ ಎಂಬುದೂ ಒಂದರ್ಥ. ಯಾಕೆ ? ಇಂದ್ರಿಯಗಳು ಹೋಗುತ್ತ ಇರುವವು. ಕಣ್ಣು ಒಂದು ವಸ್ತುವನ್ನು ನೋಡುವುದು ; ಅದನ್ನು ಬಿಟ್ಟಿತು. ಇನ್ನೊಂದು

## ‘ಶ್ರೀ ಶ್ರೀಕರಾಯ ನಮಃ’ ‘ಶ್ರೀ ದ್ರವಿಣಪ್ರದಾಯ ನಮಃ’



‘ಆದಿತ್ಯಚಂದ್ರಾವಪಿ ಚಕ್ರಶಂಖೌ ಶಂಖಪ್ರಸೂನಾಖ್ಯನಿಧೀ ದಧಾನಃ | ಚಿಂತ್ಯಃ ಕರಾಭ್ಯಾಂ ವಸು ತರ್ಪಯಾನಃ ಸ್ವಾಂಕಸ್ಥಲಕ್ಷ್ಮೀರ್ಗರುಡಾಂಸಸಂಸ್ಥಃ’ ಎಂಬ ಧ್ಯಾನ ಶ್ಲೋಕದಲ್ಲಿ ತಿಳಿಸಿರುವಂತೆ ತನ್ನ ಆರು ಕೈಗಳಲ್ಲಿ ಸೂರ್ಯ ಚಂದ್ರ, ಶಂಖ, ಚಕ್ರ ಹಾಗೂ ಶಂಖ ಪ್ರಸೂನ ಎಂಬ ನಿಧಿಗಳು ಇವನ್ನೆಲ್ಲ ಧರಿಸಿಕೊಂಡು ತನ್ನ ಉಳಿದ ಎರಡು ಹಸ್ತಗಳಿಂದಲೂ ಸಂಪತ್ತನ್ನು ಸುರಿಯುತ್ತಿರುವ, ಲಕ್ಷ್ಮಿಯನ್ನು ತನ್ನ ತೊಡೆಯಲ್ಲಿ ಕುಳ್ಳಿರಿಸಿ ಕೊಂಡಿರುವ, ಗರುಡನ ಹೆಗಲ ಮೇಲೆ ಕುಳಿತಿರುವ ಶ್ರೀಕರ ರೂಪಿ ಪರಮಾತ್ಮನ ತಾದಾತ್ಮ್ಯವನ್ನು ಶ್ರೀಕರ ಅಲಂಕಾರದಲ್ಲಿರುವ ಉಡುಪಿ ಶ್ರೀಕೃಷ್ಣನಲ್ಲಿ ಭಾವಿಸುತ್ತ ವಿ.ಸ.ನಾಮದ ‘ಶ್ರೀಕರಃ’ ‘ದ್ರವಿಣಪ್ರದಃ’ ‘ವಸುಪ್ರದಃ’-ಮುಂತಾದ ಸಂಪತ್ತನ್ನು ಅನುಗ್ರಹಿಸುವ ಮಹಿಮೆಯ ಪ್ರಸ್ತಾವವುಳ್ಳ ನಾಮಗಳ ಅರ್ಥಾನುಸಂಧಾನ ನಡೆಸಬೇಕು.

‘ಶ್ರೀ ಶ್ರೀನಿವಾಸಾಯ ನಮಃ’ ‘ಶ್ರೀ ವಸುಪ್ರದಾಯ ನಮಃ’
‘ಶ್ರೀ ವಸುಮನಸೇ ನಮಃ’



ಶ್ರೀ ವಾದಿರಾಜ ಸ್ವಾಮಿಗಳು ಉಡುಪಿ ಶ್ರೀಕೃಷ್ಣನಿಗೆ ವಾರದ ಏಳುದಿನಗಳಲ್ಲೂ ತೊಡಿಸಲಾಗುವ ಬೇರೆ ಬೇರ ಅಲಂಕಾರವನ್ನು ‘ಬಣ್ಣಿಸಲಳವೆ.....’ ಎಂಬ ಹಾಡಿನಲ್ಲಿ ತಿಳಿಸುತ್ತ ಪ್ರತಿಶನಿವಾರದಂದು ‘ಸರ್ವಾಲಕಾರದಿಂ ಮೆರೆವ ವೇಂಕಟೇಶನ’ ರೂಪದ ಅಲಂಕಾರವನ್ನು ಸೂಚಿಸಿದ್ದು ಶ್ರಾವಣ ಮಾಸದ ಶನಿವಾರಗಳಲ್ಲಿ ಅಂತಹ ಅಲಂಕಾರದಲ್ಲಿ ಮೆರೆಯುತ್ತಿರುವ ಉಡುಪಿ ಶ್ರೀಕೃಷ್ಣನ ಪ್ರತೀಕದಲ್ಲಿ ‘ಶ್ರೀನಿವಾಸಃ’ ‘ವಸುಪ್ರದಃ’ ‘ವಸುಮನಾಃ’ - ಇತ್ಯಾದಿ ವೇಂಕಟೇಶನ ಮಹಿಮೆಗಳ, ಲೀಲೆಗಳ ಪ್ರಸ್ತಾವವುಳ್ಳ ವಿಷ್ಣುಸಹಸ್ರನಾಮಗಳಿಂದ ಅರ್ಥಾನುಸಂಧಾನ ನಡೆಸಬಹುದಾಗಿದೆ.

ವಸ್ತುವನ್ನು ಕಂಡಿತು...... ಹೀಗೆ ನೋಡುತ್ತ ಇರುವುದು. ಬಾಯಿ ಮಾತನಾಡುತ್ತ ಇರುವುದು. ಒಬ್ಬರ ಬಗ್ಗೆ ಮಾತನಾಡಿತು. ಅದು ಮುಗಿಯಿತೆಂದಾಗ ಮತ್ತೊಬ್ಬರ ಬಗ್ಗೆ, ಅದು ಆಯಿತೆಂದಾಗ ಇನ್ನೊಬ್ಬರ ಬಗ್ಗೆ - ಹೀಗೆ ಹೋಗುತ್ತ ಇರುವುದರಿಂದ ಬಾಯಿ, ಕಣ್ಣು ಮುಂತಾದ ಇಂದ್ರಿಯಗಳು 'ಗೋ' ಎನಿಸಿವೆ. ಅವುಗಳಿಗೆ ಒಡೆಯನಾದ ಭಗವಂತ ಗೋಪತಿ. ಎಲ್ಲ ಇಂದ್ರಿಯಗಳನ್ನು ತನ್ನ ಹಿಡಿತದಲ್ಲಿ ಇಟ್ಟುಕೊಂಡಿರುವವನು. ಹಿಡಿತದಲ್ಲಿಟ್ಟುಕೊಂಡಾಗಷ್ಟೇ ಒಡೆತನ ಸಿದ್ಧಿಸುವುದು.

ಆದುದರಿಂದ ಭಗವಂತನ್ನು ಗೋವುಗಳಿಗೆ, ಇಂದ್ರಿಯಗಳಿಗೆ ಪತಿಯನ್ನಾಗಿ ಇಟ್ಟುಕೊಂಡೆವೆಂದರೆ ಅವನ ಅನುಗ್ರಹದಿಂದ ಇಂದ್ರಿಯಗಳನ್ನು ನಮ್ಮ ಹಿಡಿತದಲ್ಲಿ ತಂದುಕೊಳ್ಳಬಹುದು.

**೬೦೧. ಗೋಪ್ತಾ – ಎಲ್ಲರ ಮುಂದೆ ತನ್ನನ್ನು ಪೂರ್ಣವಾಗಿ ತೆರೆದುಕೊಳ್ಳದವನು.**

ವಿವರಣೆ : ಮುಚ್ಚಿಕೊಂಡಿರುವವನು ಗೋಪ್ತಾ. ದೇವರು ತನ್ನನ್ನು ಸಂಪೂರ್ಣವಾಗಿ ತೆರೆದುಕೊಳ್ಳುವ ಪ್ರಸಂಗವೇ ಇಲ್ಲ. ಯಾರ ಮುಂದೆಯೂ ದೇವರು ತನ್ನನ್ನು ಪೂರ್ಣವಾಗಿ ಬಿಚ್ಚಿಕೊಳ್ಳುವುದಿಲ್ಲ. ಭೀಷ್ಮರು ಹೇಳ್ತಾರೆ - ಕೃಷ್ಣ ನಾನು ನಿನ್ನ ಅವತಾರಕ್ಕಿಂತ ಮುಂಚೆಯೇ ಹುಟ್ಟಿ ನಿನ್ನ ಬಗ್ಗೆ ಕೇಳಿದ್ದೆ. ನಿನ್ನ ಅವತಾರದ ಬಳಿಕ ನಿನ್ನನ್ನು ಕಣ್ಣಾರೆ ಕಂಡಿದ್ದೇನೆ. ಆದರೂ ನಿನ್ನನ್ನು ಪೂರ್ಣವಾಗಿ ಅರ್ಥ ಮಾಡಿಕೊಳ್ಳಲು ಆಗಲೇ ಇಲ್ಲ.

ಆದ್ದರಿಂದ ನಿನಗೊಂದು ಹೊಸ ಹೆಸರು - ಸದಾಕಾಲ ತನ್ನನ್ನು ಮುಚ್ಚಿಕೊಂಡಿರುವವನು 'ಗೋಪ್ತಾ' - ಸದಾಕಾಲ ತನ್ನನ್ನು ಬಚ್ಚಿಟ್ಟುಕೊಂಡಿರುವವನು. ಯಾರ ಮುಂದೆಯೂ ತನ್ನನ್ನು ಸಂಪೂರ್ಣವಾಗಿ ತೆರೆದುಕೊಳ್ಳುವವನಲ್ಲ.

ಆದುದರಿಂದಲೇ ವೇದಗಳು 'ಛಂದಾಂಸಿ' ಎನಿಸಿವೆ. 'ಛಾದಯಂತೀತಿ ಛಂದಾಂಸಿ' - ಮುಚ್ಚಿಡುವವುಗಳು ಎಂದೇ ಅರ್ಥ. ದೇವರು ವೇದಗಳ ಎದುರೂ ತನ್ನನ್ನು ಪೂರ್ಣವಾಗಿ ತೆರೆದುಕೊಳ್ಳುವುದಿಲ್ಲ. ತಾವು ದೇವರ ಬಗ್ಗೆ ಗ್ರಹಿಸಿದ್ದನ್ನೂ ವೇದಗಳು ಪೂರ್ಣವಾಗಿ ತಿಳಿಸುವುದಿಲ್ಲ. ನಾವು ದೇವರ ಬಗ್ಗೆ ವೇದಗಳಿಂದಲೇ ತಿಳಿದುಕೊಳ್ಳಬೇಕಾದದ್ದು. ಅಂತಹ ವೇದಗಳು ದೇವರನ್ನು ಪೂರ್ಣವಾಗಿ ತಿಳಿಸುವುದಿಲ್ಲ. ಹೀಗೆ ಭಗವಂತ ಎಲ್ಲರ ಮುಂದೆ ಚೆನ್ನಾಗಿ ತೆರೆದುಕೊಳ್ಳಲ್ಪಡದ ಪ್ರಯುಕ್ತ 'ಗೋಪ್ತಾ' ಎನಿಸುವನು. ಸದಾಕಾಲ ತನ್ನನ್ನು ಮುಚ್ಚಿಕೊಂಡು ತನ್ನ

ಬಗ್ಗೆ ಜನರಿಗೆ ಕುತೂಹಲ ಜಾಸ್ತಿ ಆಗುವಂತೆ ಮಾಡುವನು.

ಕುತೂಹಲ ಜಾಸ್ತಿ ಆಗಬೇಕೆಂದರೆ ಮುಚ್ಚಿಡಬೇಕು. ಅದರಬದಲು ಪೂರ್ಣವಾಗಿ ತೆರೆದುಕೊಂಡರೆ ‘ಇಷ್ಟೇನಾ !’ ಅನಿಸಿಬಿಡುವುದು. ಹಳ್ಳಿಯ ವೈದ್ಯರು ತಾವು ಮದ್ದಿಗೆ ಬಳಸುವ ಸಸ್ಯಗಳನ್ನು ಹೇಳದಿರುವುದು ಈ ಉದ್ದೇಶದಿಂದಲೇ. ಯಾವ ಸಸ್ಯ ಎಂದು ತಿಳಿಯದಿದ್ದರೆ ಆ ಮದ್ದಿನ ಬಗ್ಗೆ ಕುತೂಹಲ ಜಾಸ್ತಿ ಆಗುವುದು. ಕುತೂಹಲ ಜಾಸ್ತಿ ಆಯಿತೆಂದರೆ ಶ್ರದ್ಧೆ ಹೆಚ್ಚುವುದು. ಶ್ರದ್ಧೆ ಹೆಚ್ಚಿತೆಂದರೆ ಆ ಮದ್ದಿನಿಂದಾಗಿ ರೋಗದ ‘ಶ್ರಾದ್ಧ’ ಆಗುವುದು.

ಅದರಂತೆ ಭಗವಂತ ತನ್ನನ್ನು ಮುಚ್ಚಿಟ್ಟುಕೊಂಡನೆಂದರೆ ಅವನ ಬಗ್ಗೆ ಕುತೂಹಲ ಹೆಚ್ಚಾಗಿ ಶ್ರದ್ಧೆ ವೃದ್ಧಿ ಆಗುವುದು. ಈ ಉದ್ದೇಶದಿಂದಲೇ ತನ್ನನ್ನು ಬಚ್ಚಿಟ್ಟುಕೊಳ್ಳುವ ದೇವರು **‘ಗೋಪ್ತಾ.’**

**೬೦೨. ವೃಷಭಾಕ್ಷಃ – ಶ್ರೇಷ್ಠ ಇಂದ್ರಿಯಗಳನ್ನು ಹೊಂದಿರುವವನು.**

**ವಿವರಣೆ:** ವೃಷಭ - ಶ್ರೇಷ್ಠಗಳಾದ ಅಕ್ಷ - ಇಂದ್ರಿಯಗಳುಳ್ಳವನು. ನಾವು ಆದಷ್ಟು ಸುಲಭವಾದ ಹಾಗೂ ಜೀವನದಲ್ಲಿ ಅಳವಡಿಸಿಕೊಳ್ಳಲು ಅನುಕೂಲವಾಗುವ ಅರ್ಥವನ್ನೇ ತೆಗೆದುಕೊಳ್ಳೋಣ. ಪುರುಷರ್ಷಭ - ಮುಂತಾದ ಪ್ರಯೋಗಗಳಲ್ಲಿ ಶ್ರೇಷ್ಠ ಎಂಬ ಅರ್ಥದಲ್ಲಿಯೇ ವೃಷಭ ಶಬ್ದವನ್ನು ಪ್ರಯೋಗಿಸಲಾಗಿದೆ. ಶ್ರೇಷ್ಠಗಳಾದ, ಸೂಕ್ಷ್ಮಗಳಾದ ಇಂದ್ರಿಯಗಳು ಭಗವಂತನದ್ದು. ಅವು ಎಷ್ಟು ಸೂಕ್ಷ್ಮ ವಿಷಯವನ್ನೂ ಗ್ರಹಿಸಬಲ್ಲವು. ಒಂದು ವಿಷಯವನ್ನು ನೋಡಲು ತಿಳಿಸಿದರೆ ಅದನ್ನು ಆಳವಾಗಿ ನೋಡುವ ತಾಕತ್ತು ನಮ್ಮಲ್ಲಿ ಬರಬೇಕೆಂದರೆ ಭಗವಂತನನ್ನು ‘ವೃಷಭಾಕ್ಷ’ - ಎಂದು ಉಪಾಸನೆ ಮಾಡಬೇಕು.

ಇಂದ್ರಿಯಗಳಲ್ಲಿ ಶ್ರೇಷ್ಠತ್ವ ಎಂದರೆ ಆಯಾ ಇಂದ್ರಿಯ ತನ್ನ ತನ್ನ ಚಟುವಟಿಕೆಯನ್ನು ನಡೆಸುವಲ್ಲಿ ವ್ಯಾಪಕವಾಗಿ ತೊಡಗುವಂತಹದ್ದು. ಭಗವಂತನ ಇಂದ್ರಿಯವಾದರೂ ಯಾವುದೇ ವಿಷಯವನ್ನು ಸರ್ವತೋಮುಖವಾಗಿ ಪರಿಶೀಲಿಸುವುದರಿಂದ ಶ್ರೇಷ್ಠವೆನಿಸಿದೆ.ಆದುದರಿಂದಲೇ ಭಗವಂತ **‘ವೃಷಭಾಕ್ಷ’.**

**೬೦೩. ವೃಷಪ್ರಿಯಃ – ಅಭೀಷ್ಟಗಳನ್ನು ವರ್ಷಿಸುವ ಜ್ಞಾನವನ್ನು ಪ್ರೀತಿಸುವವನು.**

**ವಿವರಣೆ:** ವರ್ಷತೀತಿ ವೃಷಃ - ಅಭೀಷ್ಟಗಳನ್ನು ಸುರಿಸುವಂತಹದ್ದೇ ವೃಷ. ಯಾವುದು ಅಭಿಷ್ಟಗಳನ್ನು ಸುರಿಸುವುದು ? ಭಗವದ್ವಿಷಯಕ ಜ್ಞಾನ. **‘ಸರ್ವೇಽಪಿ ಪುರುಷಾರ್ಥಾಃ**

**ಸ್ಯುಜ್ಞಾನಾದೇವ ನ ಸಂಶಯಃ'** - ಎಂದಿರುವಂತೆ ಭಗವದ್ವಿಷಯಕ ಜ್ಞಾನದಿಂದ ಲೌಕಿಕ ಹಾಗೂ ಅಲೌಕಿಕಗಳಾದ ಎಲ್ಲಾ ಪುರುಷಾರ್ಥಗಳೂ ಸಿದ್ಧಿಸುವವು.

ಒಳ್ಳೆಯ ವಿದ್ವಾಂಸನನ್ನು ಜನ ಈಗಲೂ ಗೌರವಿಸುತ್ತಾರೆ. ಅವನಲ್ಲಿ ದೇವರ ಬಗ್ಗೆ, ಧರ್ಮದ ಬಗ್ಗೆ ಕೇಳಲು ಹವಣಿಸುತ್ತಾರೆ. ಅವನಿಗೆ ಏನನ್ನೂ ಕೊಡಲು ಸಿದ್ಧರಾಗುವರು. ಆದುದರಿಂದಲೇ ಒಳ್ಳೆಯ ವಿದ್ವಾಂಸ ಲೌಕಿಕರಿಗಿಂತ ಹೆಚ್ಚು ಸಂಪಾದಿಸುತ್ತಾನೆ. ಯಾಕೆ ? ಜ್ಞಾನದಿಂದಾಗಿ.

ಹೀಗೆ ಎಲ್ಲ ರೀತಿಯ ಅಭೀಷ್ಟಗಳನ್ನೂ ವರ್ಷಣೆ ಮಾಡುವುದರಿಂದ ಜ್ಞಾನವೇ ವೃಷ. ಅಂತಹ ಜ್ಞಾನಪ್ರಿಯನಾದುದರಿಂದ ಭಗವಂತ ವೃಷಪ್ರಿಯ. ಭಗವಂತನಿಗೆ ಜ್ಞಾನಿಗಳೆಂದರೆ ಎಲ್ಲಿಲ್ಲದ ಪ್ರೀತಿ. ಅದು ಯಾಕೆಂದರೆ ಅವರಲ್ಲಿ ಜ್ಞಾನ ಇದೆ ಎಂಬುದಕ್ಕಾಗಿ.

ಭೀಷ್ಮರು ಹೇಳ್ತಾರೆ - ಕೃಷ್ಣ ನನ್ನನ್ನು ನೀನು ಹುಡುಕಿಕೊಂಡು ಇಲ್ಲಿಯವರೆಗೆ ಬಂದದ್ದೂ ನನ್ನಲ್ಲಿ ಜ್ಞಾನ ಇದೆ; ಅದು ನಶಿಸದೆ, ಮುಂದುವರಿಯುವಂತಾಗಬೇಕೆಂದು. ಜ್ಞಾನವುಳ್ಳವನು ಶತ್ರುಪಕ್ಷದಲ್ಲಿದ್ದರೂ ಅವನಲ್ಲಿರುವ ಜ್ಞಾನಕ್ಕಾಗಿ ಭಗವಂತನು ಅವನನ್ನು ಪ್ರೀತಿಸುವನು.

**ಅನಿವೃತ್ತೀ ನಿವೃತ್ತಾತ್ಮಾ ಸಂಕ್ಷೇಪ್ತಾ ಕ್ಷೇಮಕೃಚ್ಛಿವಃ |**
**ಶ್ರೀವತ್ಸವಕ್ಷಾಃ ಶ್ರೀವಾಸಃ ಶ್ರೀಪತಿಃ ಶ್ರೀಮತಾಂ ವರಃ ||೬೪||**

**೬೦೪. ಅನಿವೃತ್ತೀ – ಎಂದೂ ತನ್ನ ಪದವಿಯಿಂದ ನಿವೃತ್ತಿಯನ್ನು ಹೊಂದದವನು.**

**ವಿವರಣೆ:** ಅನಿವರ್ತೀ ಎಂಬ ಮತ್ತೊಂದು ಪಾಠವೂ ಇದೆ. ನಿವೃತ್ತಿ ಇಲ್ಲದವನೇ ಅನಿವೃತ್ತೀ. ಜಾಗ ಖಾಲಿ ಮಾಡುವಿಕೆ ನಿವೃತ್ತಿ. ದೇವರು ಆ ಜಾಗದಲ್ಲಿ ಎಂದು ಕೂತಿದ್ದಾನೆ ಗೊತ್ತಿಲ್ಲ. ಎಷ್ಟು ಸಮಯ ಕುಳಿತುಕೊಳ್ಳುವನು ಗೊತ್ತಿಲ್ಲ. ಚತುರ್ಮುಖನನ್ನು ಆರಂಭಿಸಿ ಸಮಗ್ರ ಜೀವರಾಶಿಗೂ ನಿವೃತ್ತಿ ಉಂಟು. ಚತುರ್ಮುಖ ಆ ಸ್ಥಾನದಲ್ಲಿ ಕುಳಿತು ಐವತ್ತು ವರ್ಷಗಳಾಗಿವೆ. ಇನ್ನು ಐವತ್ತು ವರ್ಷಗಳು ಕಳೆದ ಬಳಿಕ ಚತುರ್ಮುಖನಿಗೆ ಆ ಸ್ಥಾನದಿಂದ ನಿವೃತ್ತಿ. ಆ ಸ್ಥಾನಕ್ಕೆ ಮತ್ತೊಬ್ಬ ಬರುವನು. ದೇವರ ಸ್ಥಾನಕ್ಕೆ ಎಂದೂ ನಿವೃತ್ತಿ ಇಲ್ಲ. ರುದ್ರಪದವಿ, ಶೇಷ ಪದವಿ, ಇಂದ್ರಪದವಿ - ಹೀಗೆ ಪ್ರತಿಯೊಂದು ಪದವಿಯವರಿಗೂ ನಿವೃತ್ತಿ ಇದೆ. ನಮಗೂ ನಿವೃತ್ತಿ ಇದೆ.

ಹಾಗಾದರೆ ನಿವೃತ್ತಿ ಇಲ್ಲದ ವ್ಯಕ್ತಿ ಎಂದರೆ ದೇವರೊಬ್ಬನೇ. 'ಗುಮಾಸ್ತ'

ಆಗಿದ್ದ ವ್ಯಕ್ತಿಯೊಬ್ಬ ಮುಂದುವರಿದು ಮುಂದುವರಿದು 'ಚೇರ್‌ಮೇನ್' ಪದವಿಯನ್ನು ಏರಬಹುದಾದಂತೆ ನಾವು ಕೂಡಾ ಸಾಧನೆ ಮಾಡಿ ಮಾಡಿ ಒಂದು ದಿನ ದೇವರ ಪದವಿಯನ್ನು ಯಾಕೆ ಏರಬಾರದು ? ಎಂಬ ಪ್ರಶ್ನೆಗೆ 'ಅನಿವೃತ್ತೀ' ನಾಮದಿಂದ ಸಮಾಧಾನಿಸಲಾಗುವುದು. ಗುಮಾಸ್ತನೊಬ್ಬನು ಸಾಧನೆ ಮಾಡಿ ಮಾಡಿ ಮುಂದುವರಿದರೂ ಚೇರ್‌ಮೇನ್ ಪದವಿಯಲ್ಲಿ ಕುಳಿತವನು ತನ್ನ ಪದವಿಯನ್ನು ಖಾಲಿ ಮಾಡದೆ ಆ ಸ್ಥಾನವನ್ನು ಏರುವಂತಿಲ್ಲ ತಾನೇ ? ಅದರಂತೆಯೇ ದೇವರಿಗೆ ಅವನ ಆ ಸ್ಥಾನದಿಂದ ನಿವೃತ್ತಿ ಇಲ್ಲದ ಕಾರಣ ಆ ಸ್ಥಾನವನ್ನು ಇನ್ನಾರೂ ಏರುವಂತಿಲ್ಲ. ಒಂದೇ ಕುರ್ಚಿಯಲ್ಲಿ ಇಬ್ಬರು ಕೂಡುವಂತಿಲ್ಲ. ಹಾಗೆಯೇ ಆ ಕುರ್ಚಿಯ ಬಳಿ ಮತ್ತೊಂದು ಕುರ್ಚಿಯನ್ನು ತಂದು ಹಾಕಿಕೊಳ್ಳುವಂತೆಯೂ ಇಲ್ಲ.

**೬೦೫. ನಿವೃತ್ತಾತ್ಮಾ – ಯಾರಿಗೆ ಮತ್ತೊಬ್ಬ ಒಡೆಯನಿಲ್ಲವೋ ಅಂತಹವನು.**

ವಿವರಣೆ : ದೇವರು ಯಾಕೆ 'ಅನಿವೃತ್ತೀ' - ನಿವೃತ್ತಿ ಇಲ್ಲದವನು ಅಂದರೆ 'ನಿವೃತ್ತಾತ್ಮಾ' ಆತ್ಮಾ ಎಂದರೆ ಒಡೆಯ. ಯಾರ ಪಾಲಿಗೆ 'ಹೋಗು ಮನೆಗೆ'- ಎಂದು ಕಳುಹಿಸಿಕೊಡುವ ಒಡೆಯ ಇಲ್ಲವೋ ಅಂತಹ ಪರಮಾತ್ಮನು 'ನಿವೃತ್ತಾತ್ಮಾ.' ಯಾರಿಗೆ ಮೇಲಧಿಕಾರಿಗಳು ಇರುವರೋ ಅವರಿಗಷ್ಟೇ ನಿವೃತ್ತಿ. ಆದುದರಿಂದಲೇ ತಾನೇ, ಸರಕಾರದ ಕಛೇರಿಯಲ್ಲಿ ದುಡಿಯುವವರಿಗೆಲ್ಲ ೫೮ ವರ್ಷ ವಯಸ್ಸಿಗೆ ನಿವೃತ್ತಿ ಇದ್ದರೂ ಮಂತ್ರಿಗಳಿಗೆ ಆ ವಯಸ್ಸಿಗೆ ನಿವೃತ್ತಿ ಇಲ್ಲ. ಒಂದು ಸರಕಾರ ಬಿದ್ದು ಹೋದರೂ ಮತ್ತೊಮ್ಮೆ ಚುನಾವಣೆಯಲ್ಲಿ ನಿಂತು ಪುನಃ ಶಾಸಕನಾಗಿ ಮೆರೆಯುತ್ತಾನೆ. ಯಾಕೆ ? ಮಂತ್ರಿಗಳಿಗೆ ಕೇಳುವವರಿಲ್ಲ.

ಭಗವಂತನಿಗೆ ಆತ್ಮಾ ಒಡೆಯ ನಿವೃತ್ತ - ಇಲ್ಲ. ಒಡೆಯನಿಂದ ರಹಿತನಾದವನು. ಭಗವಂತನನ್ನು ಹೇಳುವವರು ಕೇಳುವವರು ಯಾರೂ ಇಲ್ಲ. ಅವನಿಗಿಂತ ದೊಡ್ಡವನಾಗಿದ್ದು, ಅವನಿಗೆ ಒಡೆಯ ಎನಿಸುವವನೊಬ್ಬನು ಇಲ್ಲದೆ ಇರುವುದರಿಂದ ಅವನಿಗೆ ನಿವೃತ್ತಿ ಇಲ್ಲ.

**೬೦೬. ಸಂಕ್ಷೇಪ್ತಾ – ಚೆನ್ನಾಗಿ ಪ್ರೇರಿಸುವವನು.**

ವಿವರಣೆ : ಕ್ಷೇಪ್ತಾ ಶಬ್ದಕ್ಕೆ ಪ್ರೇರಕ ಎಂಬ ಅರ್ಥ. ಸಂಕ್ಷೇಪ್ತಾ ಎಂದರೆ ಚೆನ್ನಾಗಿ ಪ್ರೇರಕ.

ಇತರ ದೇವತೆಗಳೂ ನಮಗೆ ಪ್ರೇರಣೆ ಮಾಡುವರು. ಆದರೆ ಇತರ ದೇವತೆಗಳು ಹಾಗೆ ಪ್ರೇರಣೆ ಮಾಡಬೇಕೆಂದರೆ ಭಗವಂತ ಆ ದೇವತೆಗಳನ್ನು ಪ್ರೇರಣೆ ಮಾಡುವಂತೆ ಪ್ರೇರಿಸಬೇಕು. ಆದುದರಿಂದ ಅವನು ಚೆನ್ನಾಗಿ ಪ್ರೇರಿಸುವವನು.

ದೇವತೆಗಳಷ್ಟೇ ಪ್ರೇರಿಸುವವರಾಗಿದ್ದರೆ, ವಾಸುದೇವನ ಸಾಕ್ಷಾತ್ಕಾರ ಪಡಕೊಂಡ ಧ್ರುವ ತನ್ನ ಎದುರಿಗಿರುವ ವಾಸುದೇವನನ್ನು ಬಾಯ್ತುಂಬ ಹೊಗಳಬೇಕಿತ್ತು. ಅವನ ಬಾಯಿಯಲ್ಲಿ ವಾಗೀಂದ್ರಪ್ರೇರಕನಾಗಿ ಆಗ್ನಿ ಇದ್ದೇ ಇದ್ದ ಎಂದ ಮೇಲೆ ಅಗ್ನಿ ಧ್ರುವನ ವಾಗೀಂದ್ರಿಯವನ್ನು ಪ್ರೇರಿಸಿ ಅವನ ಬಾಯಿಯಿಂದ ಮಾತನ್ನು ಹೊರಡಿಸಬೇಕಿತ್ತು. ಆದರೆ ವಾಸುದೇವನು ಶಂಖವನ್ನು ಧ್ರುವನ ಕೆನ್ನೆಗೆ ಮುಟ್ಟಿಸಿ, ಅಗ್ನಿಯನ್ನು ಪ್ರೇರಿಸುವವರೆಗೆ ಅಗ್ನಿ ಧ್ರುವನ ವಾಗೀಂದ್ರಿಯವನ್ನು ಪ್ರೇರಿಸಿಲ್ಲ. ವಾಸುದೇವನ ಪ್ರೇರಣೆ ದೊರಕಿದಾಕ್ಷಣ 'ಯೋಽಂತಃ ಪ್ರವಿಶ್ಯ.....' ಇತ್ಯಾದಿಯಾಗಿ ವಾಗ್ಗಂಗೆ ಧುಮುಕುವಂತೆ ಅಗ್ನಿ ಪ್ರೇರಸಿದ. ಇದರಿಂದ ಸ್ಪಷ್ಟವಾಗುವ ಅಂಶ - ಇಂದ್ರಿಯಾಭಿಮಾನಿ ದೇವತೆಗಳೂ ತಮಗೆ ಹೃಷೀಕೇಶನ ಪ್ರೇರಣೆ ದೊರಕದೆ ತಾವು ಆಯಾ ಇಂದ್ರಿಯವನ್ನು ಪ್ರೇರಿಸುವುದಿಲ್ಲ.

ಭೀಷ್ಮರು ಮಹಾಭಾರತ ಯುದ್ಧದಲ್ಲಿ ಅಷ್ಟು ಕಾದಾಡಲು ಅವರ ಎದುರಿಗೇ ಇದ್ದ ಇಂದ್ರಾವತಾರಿ ಅರ್ಜುನ ಹಾಗೂ ಕೃಷ್ಣ ಇವರ ಪ್ರೇರಣೆ. ಇಂದ್ರ ಹಸ್ತಾಭಿಮಾನಿಯಾಗಿದ್ದು, ಅಂತಹ ದೇವೇಂದ್ರನೇ ಅರ್ಜುನನ ರೂಪದಲ್ಲಿ ಭೀಷ್ಮರ ಎದುರಿಗೇ ಕಾದಾಡುತ್ತಿದ್ದು ಅಸ್ತ್ರಶಸ್ತ್ರಗಳನ್ನು ಪ್ರಯೋಗಿಸಲು ಅವರ ಹಸ್ತಗಳನ್ನು ಪ್ರೇರಸುತ್ತಿದ್ದ. ಅವನು ಹಾಗೆ ಪ್ರೇರಸುವಂತೆ ಶ್ರೀಕೃಷ್ಣ ಪ್ರೇರಣೆ ನೀಡುತ್ತಿದ್ದ.

ಭೀಷ್ಮರು 'ಸಂಕ್ಷೇಪ್ತಾ' ನಾಮದಿಂದ ಕೃಷ್ಣನನ್ನು ಸ್ತುತಿಸುವಾಗ ಈ ಅಂಶವನ್ನು ಅನುಸಂಧಾನಕ್ಕೆ ತಂದುಕೊಳ್ಳದಿರಲಾರರು.

**೬೦೭. ಕ್ಷೇಮಕೃತ್ – ಸಿಕ್ಕಿದ್ದನ್ನು ಉಳಿಯುವಂತೆ ಮಾಡುವವನು.**

**ವಿವರಣೆ :** ಸ್ಥಿತಸ್ಯ ಪರಿಪಾಲನಂ - ಕ್ಷೇಮ ಎನಿಸಿದರೆ ಅದನ್ನು ಮಾಡುವವನು ಕ್ಷೇಮಕೃತ್. ಸಿಕ್ಕಿದ್ದನ್ನು ಪರಿರಕ್ಷಣೆ ಮಾಡುವುದೇ ಕ್ಷೇಮ. ನಮಗೆ ಸಿಕ್ಕಿದ್ದು ನಮ್ಮಲ್ಲೇ ಉಳಿಯುವಂತೆ ಮಾಡುವವನು ರುದ್ರ, ಗಣಪತಿ, ಇತ್ಯಾದಿ ಯಾವ ದೇವತೆಯೂ ಅಲ್ಲ ; ಮತ್ತೆ ದೇವರೇ.

ಭೀಷ್ಮರು ಸುಮಾರು ಐನ್ನೂರು ವರ್ಷಕಾಲ ಓದಿದವರು. ಓದಿದ್ದನ್ನು ತಮ್ಮ ಎಂಟುನೂರನೆಯ ವರ್ಷದ ಅವಧಿಯಲ್ಲಿ ಉಪದೇಶಿಸುವಂತೆ ಅದುವರೆಗೆ ಪರಿಪಾಲನೆ ಮಾಡಿದ ಕ್ಷೇಮಕೃತ್ - ಕೃಷ್ಣ.

**೬೦೮. ಶಿವಃ – ಮಂಗಳ, ಶುದ್ಧ.**

**ವಿವರಣೆ :** ಶಿವ ಎಂದರೆ ಮಂಗಳ. ರುದ್ರ ದೇವನ ವೇಷ ಭೂಷಣ, ಇರುವ ಸ್ಥಾನ ಇವೆಲ್ಲ ಅಶಿವ, ಅಮಂಗಳ, ಸ್ಮಶಾನವಾಸ. ಚರ್ಮಧಾರಣೆ ಇತ್ಯಾದಿ. ಆದರೂ

ರುದ್ರದೇವ 'ಶಿವ' ಎನಿಸಿರುವವನು, ಯಾಕೆ ? 'ಯಚ್ಛೌಚನಿಃಸೃತಸರಿತ್-ಪ್ರವರೋದಕೇನ ತೀರ್ಥೇನ ಮೂರ್ಧ್ನ್ಯಧಿಧೃತೇನ ಶಿವಃ ಶಿವೋಽಭೂತ್' ಭಾಗವತ ತಿಳಿಸುವಂತೆ ತ್ರಿವಿಕ್ರಮರೂಪಿ ಪರಮಾತ್ಮನ ಪಾದಪ್ರಕ್ಷಾಲನ ಜಲವಾಗಿ ಹರಿದು ಬಂದಿರುವ ಗಂಗೆಯನ್ನು ರುದ್ರದೇವ ತಲೆಯಲ್ಲಿ ಹೊತ್ತಿರುವುದರಿಂದ ಮಂಗಳನೆನಿಸಿ 'ಶಿವ' - ಎಂದು ಕರೆಸಿಕೊಳ್ಳುವನು.

ಹೀಗೆ ರುದ್ರನಷ್ಟೇ ಅಲ್ಲ, ಪ್ರತಿಯೊಂದು ಅಶಿವ, ಅಮಂಗಲ ಪದಾರ್ಥವೂ ಭಗವಂತನ ಸಂಪರ್ಕಕ್ಕೊಳಗಾಯಿತೆಂದರೆ ಅದು 'ಶಿವ' - ಮಂಗಳ ಎನಿಸುವುದು. ಹೊರಗಷ್ಟೇ ಅಲ್ಲ, ಒಳಗೂ ಶುದ್ಧ ಎನಿಸುವುದು.

ಯಾವುದಾದರೊಂದು ಧಾರ್ಮಿಕ ಕಾರ್ಯಕ್ರಮದಲ್ಲಿ ತೊಡಗಿದಾಗ ಏನೋ ಅಶುದ್ಧವಾಯಿತು. ಪುನಃ, ಶುದ್ಧಿ ಮಾಡಿಕೊಳ್ಳುವಷ್ಟು ಎಡೆ ಇಲ್ಲ. ಅಂತಹ ಪ್ರಸಂಗದಲ್ಲಿ ಶಿವನಾಮಕ ಭಗವಂತನ ಅನುಸಂಧಾನ ನಡೆಸೋಣ. ಇದರಿಂದಾಗಿ ಹೊರಗೂ ಒಳಗೂ ಶುದ್ಧರಾಗೋಣ.

**೬೦೯. ಶ್ರೀವತ್ಸವಕ್ಷಾಃ – ಶ್ರೀವತ್ಸ ಎಂಬ ಚಿಹ್ನೆಯನ್ನು ತನ್ನ ಎದೆಯಲ್ಲಿ ಧರಿಸಿರುವವನು.**

ವಿವರಣೆ: ವಕ್ಷಸ್ಥಳದಲ್ಲಿ, ಎದೆಯಲ್ಲಿ 'ಶ್ರೀವತ್ಸ' ಎಂಬ ಚಿಹ್ನೆ ಉಳ್ಳವನು. ಒಂದು ಕೋಶದಲ್ಲಿ 'ಶ್ರೀವತ್ಸ' ಚಿಹ್ನೆಯನ್ನು ಹೀಗೆ ಪರಿಚಯಿಸಿಕೊಡಲಾಗದೆ - ಸುಳಿಯಾಕಾರದಲ್ಲಿರುವ ಬಿಳಿ ರೋಮಗಳ ರಾಶಿಯೇ ಶ್ರೀವತ್ಸ ಎನಿಸುವುದು.

ವತ್ಸ ಎಂದು ಮಗುವನ್ನೂ ಕರುವನ್ನೂ ಕರೆಯುವೆವು. 'ವದತೀತಿ ವತ್ಸಃ' ಹೇಳುತ್ತದೆ ಎಂಬ ಅರ್ಥದಲ್ಲಿ ವತ್ಸ ಎಂಬ ರೂಪುಗೊಂಡಿದೆ. ಭಗವಂತನ ಎದೆಯಲ್ಲಿರುವ 'ಶ್ರೀವತ್ಸ' - ಭಗವಂತನ ಶ್ರೀಮಂತಿಕೆಯನ್ನು ಹೇಳುವುದರಿಂದಲೇ ಆ ಹೆಸರನ್ನು ಪಡೆದಿದೆ.

ಶ್ರೀ ಕೃಷ್ಣನ ರೋಮಗಳಿಂದ ತೋಳಗಳು ಹುಟ್ಟಿಕೊಂಡವು. ಆ ತೋಳಗಳಾದರೆ ಕೃಷ್ಣನದ್ದೇ ರೂಪಗಳು. ಇದು ಹೇಗೆ ತಿಳಿಯುವುದು ಎಂದರೆ ಅವೆಲ್ಲವುಗಳ ಎದೆಯಲ್ಲಿ ಶ್ರೀವತ್ಸ ಚಿಹ್ನೆ ಇತ್ತು ಎಂದು ನಿರೂಪಿಸಲಾಗಿದೆ. ಹಾಗಾದರೆ ತೋಳಗಳ ಎದೆಯಲ್ಲಿದ್ದ ಶ್ರೀವತ್ಸಚಿಹ್ನೆ ಆ ತೋಳಗಳ ಕೃಷ್ಣವ್ಯಕ್ತಿತ್ವದ ಶ್ರೀಮಂತಿಕೆಯನ್ನು ಸಾರುತ್ತಿದ್ದವು - ಎಂದಂತಾಗಿದೆ.

ಭಗವಂತನು ಶ್ರೀವತ್ಸ ಚಿಹ್ನೆಯನ್ನು ತನ್ನ ಎದೆಯಲ್ಲಿ ಧರಿಸುವನೆಂದರೆ,

ತನ್ನ ಶ್ರೀಮಂತಿಕೆಯನ್ನು, ಮಹತ್ತ್ವವನ್ನು ಸಾರುವ ಚಿಹ್ನೆಗೆ ತನ್ನ ಎದೆಯಲ್ಲಿ ಅವಕಾಶವನ್ನು ಕಲ್ಪಿಸಿ ಕೊಟ್ಟಿರುವನು - ಎಂದರ್ಥ.. ಇದರಿಂದ ಯಾರು ತನ್ನ ಮಹತ್ತ್ವವನ್ನು ಸಾರುವರೋ ಅವರಿಗೆ ಭಗವಂತ ತನ್ನ ಎದೆಯಲ್ಲಿ ಸ್ಥಾನವನ್ನು ನೀಡುವನು. ಎದೆಯಲ್ಲಿ ಸ್ಥಾನವನ್ನು ಕಲ್ಪಿಸುವುದೆಂದರೆ ಸ್ಮರಿಸಿಕೊಳ್ಳುವುದು ಎಂದರ್ಥ. ಆದ್ದರಿಂದ 'ಶ್ರೀವತ್ಸವಕ್ಷಾಃ'- ಎಂಬ ನಾಮದಿಂದ ಭಗವಂತನು ತನ್ನ ಮಹಿಮೆಯನ್ನು ಪ್ರತಿಪಾದಿಸುವವರನ್ನು ಪ್ರೀತಿಯಿಂದ ಸ್ಮರಿಸಿಕೊಳ್ಳುವನೆಂಬ ಅರ್ಥದ ಧ್ವನಿ ಹೊರಡುವುದು.

**೬೧೦. ಶ್ರೀವಾಸಃ – ಲಕ್ಷ್ಮಿಯನ್ನು ಪರಿಮಳವುಳ್ಳವಳನ್ನಾಗಿ ಮಾಡುವವನು.**

**ವಿವರಣೆ :** ಶ್ರಿಯಂ ವಾಸಯತಿ - ಲಕ್ಷ್ಮಿಯನ್ನು ಪರಿಮಳವುಳ್ಳವಳನ್ನಾಗಿ ಮಾಡುವವನು 'ಶ್ರೀವಾಸಃ'

ಹೇಗೆ ? **'ಲಕ್ಷ್ಮೀಭುಜಾಂತರಗತಃ'** - ಎಂದಿರುವಂತೆ ಲಕ್ಷ್ಮಿಯನ್ನು ಆಲಿಂಗಿಸುವ ಮೂಲಕ ತನ್ನ ಪ್ರಸಾದರೂಪವಾಗಿ ತನ್ನ ಪರಿಮಳದ ಸ್ವಲ್ಪಾಂಶ ಲಕ್ಷ್ಮಿಗೆ ಸಿದ್ಧಿಸುವಂತೆ ಮಾಡುವನು. ಭಗವಂತ ಲಕ್ಷ್ಮಿಯನ್ನು ಆಲಿಂಗಿಸುವುದು ತನಗಾಗಿ ಅಲ್ಲ. ಮತ್ತೆ ಲಕ್ಷ್ಮಿಗೆ ಪರಿಮಳವನ್ನು ಕೊಡುವುದಕ್ಕಾಗಿ. ಪತ್ನೀಪತಿಯರ ನಡುವೆ ಸಾಮರಸ್ಯ ಉಂಟಾಗಬೇಕೆಂದರೆ ಭಗವಂತನನ್ನು 'ಶ್ರೀವಾಸಃ' ಎಂದು ಉಪಾಸನೆ ಮಾಡಬೇಕು.

**೬೧೧. ಶ್ರೀಪತಿಃ – * ಲಕ್ಷ್ಮೀಪತಿ.**

*** ದ್ರೌಪದಿಯ ಗಂಡಂದಿರಾದ ಪಾಂಡವರಿಗೆ ಸರ್ವತೋಮುಖವಾದ ಅಭಿವೃದ್ಧಿಯನ್ನು ಕೊಟ್ಟವನು.**

**ವಿವರಣೆ :** ಶ್ರೀಪತಿ ಎಂದರೆ ಲಕ್ಷ್ಮೀಪತಿ ಎಂಬುದು ಒಂದು ಪ್ರಸಿದ್ಧಾರ್ಥ. ಮತ್ತೊಂದು ಅರ್ಥ - ದ್ರೌಪದೀಪತಿ.

ದ್ರೌಪದಿ ಶ್ರೀ ಎನಿಸುವಳು. ಯಾಕೆ ? 'ಶಂ ರೂಪಮಾಶ್ರಿತಾ ಯಸ್ಮಾತ್ ಶ್ರೀರಿತ್ಯೇವ ಕಥ್ಯತೇ' ಸುಖಸ್ವರೂಪಿಯಾದ ವಾಯುದೇವನನ್ನು ಯಾವಾಗಲೂ ಆಶ್ರಯಿಸುತ್ತಿರುವುದರಿಂದ ಭಾರತೀದೇವಿ ಶ್ರೀ. ಭಾರತಿಯ ಅವತಾರಳಾದ ದ್ರೌಪದಿಯೂ ಪ್ರಾಣದೇವನನ್ನೇ ಆಶ್ರಯಿಸಿರುವುದರಿಂದ ಶ್ರೀ ಎನಿಸುವಳು.. ಅಂತಹ ದ್ರೌಪದಿಯನ್ನು 'ಪಾಂತಿ ರಕ್ಷಂತೀತಿ ಶ್ರೀಪಾಃ' - ದ್ರೌಪದಿಯನ್ನು ರಕ್ಷಿಸುವ ಅವಳ ಗಂಡಂದಿರು, ಪಾಂಡವರು. ಭೂಪ ಎಂಬ ಶಬ್ದದಂತೆ ಶ್ರೀಪ ಶಬ್ದ. ಇಂತಹ

'ಶ್ರೀಪರ'ನ್ನು ತನೋತಿ ವಿಸ್ತಾರಯತೀತಿ - ಸಮಾಜದಲ್ಲಿ ಮರೆಯುವಂತೆ ಮಾಡಿರುವ ಶ್ರೀಕೃಷ್ಣ ಶ್ರೀಪತಿ.

ಪಾಂಡವರು ದೈಹಿಕವಾಗಿ ಬೆಳೆದರು, ಗುಣದ ರೀತಿಯಲ್ಲಿ ಬೆಳೆದರು. ತಮ್ಮ ಕೃತಿಯಿಂದಾಗಿ ಬೆಳೆದರು. ಎಷ್ಟು ರೀತಿಗಳಿಂದ ಬೆಳೆಯಲು ಸಾಧ್ಯವೋ ಅಷ್ಟೂ ರೀತಿಗಳಿಂದ ಪಾಂಡವರನ್ನು ಬೆಳೆಸಿರುವುದರಿಂದ ಶ್ರೀಕೃಷ್ಣ ಶ್ರೀಪತಿ.

ದ್ರೌಪದಿಯ ಗಂಡಂದಿರಾದ ಪಾಂಡವರಿಗೆ ಸರ್ವತೋಮುಖವಾದ ಅಭಿವೃದ್ಧಿಯನ್ನು ಕೊಟ್ಟವನೆಂಬುದೇ ಶ್ರೀಪತಿ ನಾಮದ ಅರ್ಥ.

ಪರಮಾತ್ಮನನ್ನು ಯಾವಾಗಲೂ ಆಶ್ರಯಿಸುತ್ತಿರುವುದರಿಂದ ಲಕ್ಷ್ಮೀದೇವಿ ಶ್ರೀ ಎನಿಸುವಳು. ವ್ಯಕ್ತಿಗಳ ಹೆಸರಿನ ಮುಂದೆ 'ಶ್ರೀ' ಎಂದು ಸೇರಿಸುವ ಹಿನ್ನೆಲೆಯೂ ಅವರು ದೇವರನ್ನು ಆಶ್ರಯಿಸಿರುವರೆಂದು ತಿಳಿಸಿಕೊಡುವುದು. ಸ್ವಾಮಿಗಳು ಉಳಿದವರಿಗಿಂತ ಹೆಚ್ಚಾಗಿ ದೇವರನ್ನು ಆಶ್ರಯಿಸಿರುವರೆಂದು ತಿಳಿಸುವುದಕ್ಕಾಗಿಯೇ 'ಶ್ರೀ ಶ್ರೀ' '೧೦೮ ಶ್ರೀ' ..... ಇತ್ಯಾದಿಯಾಗಿ ಅನೇಕ ಶ್ರೀಕಾರಗಳನ್ನು ಸೇರಿಸಲಾಗುವುದು.

**೬೧೨. ಶ್ರೀಮತಾಂವರಃ – ಶ್ರೀಶಬ್ದದಿಂದ ಏನೇನನ್ನು ಇಟ್ಟುಕೊಳ್ಳಲಾಗುವುದೋ ಅವನ್ನು ಹೊಂದಿರುವವರಲ್ಲೆಲ್ಲ ಶ್ರೇಷ್ಠನಾಗಿರುವವನು.**

**ವಿವರಣೆ :** 'ಶ್ರೀ' ಎಂದರೆ ಲೌಕಿಕ ಸಂಪತ್ತನ್ನು ಇಟ್ಟುಕೊಂಡರೆ, ಅದನ್ನು ಹೊಂದಿರುವವರನ್ನೆಲ್ಲ ಮೆಟ್ಟಿ ನಿಂತು ಅವರೆಲ್ಲರಿಗಿಂತ ಶ್ರೇಷ್ಠ ಎನಿಸಿರುವವನು.

'ಶ್ರೀ' ಎಂದರೆ ಕಾಂತಿ, ಶೋಭೆ ಎಂಬ ಅರ್ಥವನ್ನಿಟ್ಟುಕೊಂಡರೆ ಕಾಂತಿವುಳ್ಳ, ಶೋಭೆ ಉಳ್ಳ ವ್ಯಕ್ತಿಗಳನ್ನೆಲ್ಲ ಮೆಟ್ಟಿನಿಂತವನು.

ಶ್ರೀ ಎಂದರೆ ಇಂದ್ರಿಯ ಸಂಪತ್ತನ್ನು ಇಟ್ಟುಕೊಂಡರೆ, ಅಂತಹ ಇಂದ್ರಿಯ ಸಂಪತ್ತುಳ್ಳವರನ್ನೆಲ್ಲ ಮೆಟ್ಟಿ ನಿಂತವನು.

ಶ್ರೀ ಎಂದರೆ ವಿದ್ಯಾಸಂಪತ್ತನ್ನು ಇಟ್ಟುಕೊಂಡರೆ, ಅಂತಹ ವಿದ್ಯಾಸಂಪತ್ತನ್ನು ಹೊಂದಿರುವವರನ್ನೆಲ್ಲ ಮೆಟ್ಟಿ ನಿಂತಹವನು.

ಹೀಗೆ 'ಶ್ರೀ' ಶಬ್ದದಿಂದ ಏನೇನನ್ನು ಇಟ್ಟುಕೊಳ್ಳಲಾಗುವುದೋ ಅವನ್ನು ಹೊಂದಿರುವವರಿಗಿಂತೆಲ್ಲ ಶ್ರೇಷ್ಠನಾಗಿದ್ದು, ಅವರನ್ನು ಮೆಟ್ಟಿ ನಿಂತಿರುವವನು ಭಗವಂತ.

**ಶ್ರೀದಃ ಶ್ರೀಶಃ ಶ್ರೀನಿವಾಸಃ ಶ್ರೀನಿಧಿಃ ಶ್ರೀವಿಭಾವನಃ |**
**ಶ್ರೀಧರಃ ಶ್ರೀಕರಃ ಶ್ರೇಯಃ ಶ್ರೀಮಾಂಲ್ಲೋಕತ್ರಯಾಶ್ರಯಃ ||೬೫||**

**೬೧೩. ಶ್ರೀದಃ – ಶ್ರೀ ಎನಿಸುವ ಎಲ್ಲ ಬಗೆಯ ಸಂಪತ್ತುಗಳನ್ನು ಕೊಡುವವನು.**

ವಿವರಣೆ : ಶ್ರಿಯಂ ದದಾತೀತಿ ಶ್ರೀದಃ - ಸಂಪತ್ತನ್ನು ಕೊಡುವವನು. ಯಾವ ಸಂಪತ್ತನ್ನು ? ಯಾರ್ಯಾರಿಗೆ ಯಾವ ಯಾವ ಸಂಪತ್ತು ಬೇಕೋ, ಅದನ್ನು ಕೊಡುವವನು.

ಲೌಕಿಕ ಸಂಪತ್ತು ಬೇಕಾದರೆ ಅದನ್ನೂ ಕೊಡುವನು.
ಆಧ್ಯಾತ್ಮಿಕ ಸಂಪತ್ತು ಬೇಕಾದರೆ ಅದನ್ನೂ ಕೊಡುವನು.
ಕಾಂತಿರೂಪವಾದ ಸಂಪತ್ತು ಬೇಕಾದರೆ ಅದನ್ನೂ ನೀಡುವನು
ಇಂದ್ರಿಯ ಸಂಪತ್ತು ಬೇಕಾದರೆ ಅದನ್ನೂ ಕೊಡುವನು.

ಹೀಗೆ ಎಲ್ಲ ಬಗೆಯ ಸಂಪತ್ತುಗಳನ್ನೂ ಕೊಡುವುದರಿಂದ ಭಗವಂತ ಶ್ರೀದ.

**೬೧೪. ಶ್ರೀಶಃ – ಸಂಪತ್ತಿನ ಮೂಲಕ ಸುಖವನ್ನು ನೀಡುವವನು.**

ವಿವರಣೆ : ಭಗವಂತ ಸಂಪತ್ತನ್ನು ನೀಡಿದ. ಆ ಸಂಪತ್ತಿನ ಮೂಲಕ ಸುಖವೂ ದೊರಕುವಂತೆ ಮಾಡುವವನು ಶ್ರೀಶ. ಒಂದು ವೇಳೆ ಭಗವಂತನಿಂದಲ್ಲದೆ, ಬೇರೆ ದೇವತೆಗಳಿಂದ ಸಂಪತ್ತನ್ನು ಪಡೆದುಕೊಂಡಿದ್ದರೆ, ಅಂತಹ ಸಂಪತ್ತಿನ ಅಭಿಮಾನಿನಿ ಲಕ್ಷ್ಮೀದೇವಿ ತನ್ನ ಪತಿಗೆ ಹೇಳದೆ ಬಂದಿರುವವಳಾಗಿರುವುದರಿಂದ ಆದಷ್ಟು ಬೇಗ ಅಲ್ಲಿಂದ ಹೊರಟು ಹೋಗಬೇಕೆಂದು ಹವಣಿಸುತ್ತಿರುವಳು. ಆಕೆಯ ಮುಖದಲ್ಲಿ ಪ್ರಸನ್ನತೆಯೇ ಇರುವುದಿಲ್ಲ.

ಹಾಗಾದರೆ ನಮ್ಮ ಮನೆಗೆ ಬಂದ 'ಶ್ರೀ' ನಮ್ಮಲ್ಲಿ ಖಾಯಂ ಆಗಿ ಇರಬೇಕೆಂದರೆ ಆಕೆಯ ಗಂಡನೇ ಆಕೆಯನ್ನು ಕಳುಹಿಸಿಕೊಡಬೇಕು. ಅದುಬಿಟ್ಟು ಗಂಡನಿಗೆ ಹೇಳದೆ ಬೇರೆ ಯಾವುದೇ ದೇವತೆ ಕಳುಹಿಸಿಕೊಟ್ಟ ಸಂಪತ್ತಾದರೆ ಅದು ಯಾವಾಗ ಹೋಗುತ್ತೆ ಎಂದು ಹೇಳಲು ಬರುವುದಿಲ್ಲ. ಆದುದರಿಂದ ಮನೆಯಲ್ಲಿ ಸಂಪತ್ತು ಸ್ಥಿರವಾಗಿರಬೇಕೆಂದರೆ ಅದು ಭಗವಂತನಿಂದಲೇ ನೀಡಲ್ಪಡಬೇಕು.

ಮನೆಗೆ ಬಂದ ಸಂಪತ್ತು ನೆಮ್ಮದಿಯಿಂದ ಇರುವಂತೆ ಮಾಡುವವನು ಭಗವಂತ.

ದುರ್ಗೆ ಕಂಸನ ಮನೆಗೆ ಬಂದಂತೆ ಮನೆಗೆ ಸಂಪತ್ತು ಬರಬಾರದು. ಕಂಸನ

ಮನೆಗೆ ದುರ್ಗೆ ಬಂದಳೆಂಬುದೇನೋ ನಿಜ. ಆದರೆ ತಾನೂ ತೆಪ್ಪಗಿರಲಿಲ್ಲ. ಕಂಸನನ್ನೂ ತೆಪ್ಪಗಿರಲು ಬಿಡಲಿಲ್ಲ. ಕಂಸನ ಮನೆಗೆ ಬಂದಾಕ್ಷಣ ದುರ್ಗೆ ಬೊಬ್ಬೆ ಹಾಕಲು ಪ್ರಾರಂಭಿಸಿದಳು. ಕಂಸ ಓಡೋಡಿ ಬಂದ. ದುರ್ಗೆಯನ್ನು ನೆಲಕ್ಕೆ ಚಚ್ಚಿ ಬಿಡಬೇಕೆಂದು ತೊಡಗಿದ. ಅವನ ಕೈ ತಪ್ಪಿಸಿಕೊಂಡು ಹಾರಿ ಹೋದಳು ದುರ್ಗೆ. ಅಂತೂ ದುರ್ಗೆ ತಾನೂ ತೆಪ್ಪಗಿರಲಿಲ್ಲ. ಕಂಸನನ್ನೂ ಅಡ್ಡಾಡಿಸಿದಳು. ಭಯದಿಂದ ಗಲಾಟೆ ಮಾಡಿಕೊಂಡು ಬಂದ ಸಂಪತ್ತು ಹೀಗೆಯೇ. ಇದರ ಬದಲು 'ಶ್ರೀದ' - ಎನಿಸುವ ಭಗವಂತನಿಂದ ಬಂದ ಸಂಪತ್ತಾದರೆ ಅದು ಸುಖಕ್ಕೆ ಕಾರಣವಾಗುವುದು. ಯಾಕೆಂದರೆ '**ಶ್ರೀದ**'ನಾದ ಭಗವಂತ '**ಶ್ರೀಶ**'ನಾಗಿಯೂ ಅಂದರೆ ಅಂತಹ ಸಂಪತ್ತು ಸುಖಕ್ಕೆ ಕಾರಣವಾಗುವಂತೆಯೂ ಅನುಗ್ರಹಿಸುವನು.

**೬೧೫. ಶ್ರೀನಿವಾಸಃ – ಅಯೋಗ್ಯರ ಪಾಲಿಗೆ ಸಂಪತ್ತನ್ನು ಚೆನ್ನಾಗಿ ಆಚ್ಛಾದಿಸುವವನು.**

ವಿವರಣೆ: ಭಗವಂತ ಯಾರಿಗೆ 'ಶ್ರೀದ'ನಾಗುವನು ? ಯಾರಿಗೆ 'ಶ್ರೀಶ'ನಾಗುವನು? ಕೇಳಿದವರಿಗೆಲ್ಲ ಸಂಪತ್ತನ್ನು ಕೊಟ್ಟು, ಅವರಿಗೆ ಸುಖ ಕೊಡುವುದಿಲ್ಲ. ಕೆಲವು ಅಯೋಗ್ಯರ ಪಾಲಿಗೆ 'ಶ್ರೀನಿವಾಸ'ನೂ ಆಗುವನು.

ಏನು ಶ್ರೀನಿವಾಸ ಎಂದರೆ ?

ಶ್ರಿಯಂ ನಿತರಾಂ ವಾಸಯತಿ - ಆಚ್ಛಾದಯತೀತಿ ಶ್ರೀನಿವಾಸಃ |

ಸಂಪತ್ತನ್ನು ಚೆನ್ನಾಗಿ ಅಳಿಸಿಬಿಡುವವನು - ಶ್ರೀನಿವಾಸ.

ವಾಸಸ್ಥಳವಾದ ಮನೆ ಒಳಗಿರುವವರು ಹೊರಗಿನವರಿಗೆ ಕಾಣದಂತೆ ಆಚ್ಛಾದನೆ ಮಾಡುವುದರಿಂದಲೇ 'ವಾಸ' ಎನಿಸುವುದು. ಬಟ್ಟೆ ಒಳಗಿನ ಮೈಯನ್ನು ಕಾಣದಂತೆ ಮುಚ್ಚುವುದರಿಂದಲೇ 'ವಾಸ' ಎನಿಸಿದೆ.

ಹೀಗೆ ವಾಸಶಬ್ದಕ್ಕೆ ಆಚ್ಛಾದಿಸುವಂತಹದ್ದು ಎಂಬ ಅರ್ಥ ಇದೆ. ಭಗವಂತನೂ ದುರ್ಯೋಧನಾದಿ ದುಷ್ಟರಿಗೆ ಸಂಪತ್ತು ಅನುಭವಕ್ಕೆ ಬರದಂತೆ ಚೆನ್ನಾಗಿ ಅದನ್ನು ಮುಚ್ಚುವುದರಿಂದ ಶ್ರೀನಿವಾಸ ಎನಿಸುವನು.

ಯೋಗ್ಯರಿಗೆ, ಅಂದರೆ ಸಂಪತ್ತನ್ನು ಸದ್ವಿನಿಯೋಗ ಮಾಡುವವರಿಗೆ, ಹಾಗೂ ಅಲ್ಪ ಸಂಪತ್ತಿನಿಂದಲೂ ತೃಪ್ತರಾಗುವವರಿಗೆ ಸಂಪತ್ತನ್ನು ಕೊಟ್ಟು, ಅದರಿಂದ ಸುಖವನ್ನೂ ನೀಡಿ '**ಶ್ರೀದ, ಶ್ರೀಶ**' ಎನಿಸುವನು.

ಆದರೆ ಅಯೋಗ್ಯರಿಗೆ ಅಂದರೆ ಸಂಪತ್ತನ್ನು ಕೆಟ್ಟ ಉದ್ದೇಶಗಳಿಗಾಗಿ ಅಪವ್ಯಯ ಮಾಡುವವರಿಗೆ ಹಾಗೂ ಸಂಪತ್ತು ಎಷ್ಟು ಇದ್ದರೂ ತೃಪ್ತಿ ಪಡದೆ

ಮತ್ತೂ ಮತ್ತೂ ಸಂಪತ್ತು ಬೇಕೆಂದು ಬೇರೆಯವರ ಸಂಪತ್ತನ್ನು ಕಸಿದುಕೊಳ್ಳಲು ತೊಡಗುವವರ ಪಾಲಿಗೆ ಶ್ರೀನಿವಾಸ ಎನಿಸುವನು. ಸಂಪತ್ತನ್ನು ಚೆನ್ನಾಗಿ ಆಚ್ಛಾದನೆ ಮಾಡಿ ಅವರ ಅನುಭವಕ್ಕೆ, ತೃಪ್ತಿಗೆ ಆ ಸಂಪತ್ತು ದೊರಕದಂತೆ ಮಾಡುವನು.

**೬೧೬. ಶ್ರೀನಿಧಿಃ – * ಸಂಪತ್ತಿಗೆ ನಿಧಿಯಾಗಿ ಇರುವವನು.**

*** ಯೋಗ್ಯತೆವುಳ್ಳವರಲ್ಲಿ ಸಂಪತ್ತನ್ನು ಉಳಿಸುವವನು.**

**ವಿವರಣೆ:** ನಿಧಿ ಎಂದರೆ ಕೊಪ್ಪರಿಗೆ. ಸಂಪತ್ತನ್ನು ಪಡೆಯಲು ಯಾರು ಯೋಗ್ಯರೋ ಅವರಿಗಷ್ಟೇ ನಿಧಿ ದಕ್ಕುವುದು. ಅಯೋಗ್ಯರು ಆ ನಿಧಿಯ ಗಳಿಕೆಗಾಗಿ ಯತ್ನಿಸಿದರೂ ಅದು ಅವರಿಗೆ ಸಿಗುವುದೇ ಇಲ್ಲ.

ಭಗವಂತನು ಎಲ್ಲ ಬಗೆಯ ಸಂಪತ್ತುಗಳಿಗೂ ನಿಧಿಯಾಗಿ ಇರುವವನು. ಯೋಗ್ಯರಿಗೆ ಆಯಾ ಸಂಪತ್ತು ದೊರಕುವಂತೆ ಮಾಡುವನು. ಆದ್ದರಿಂದ ಅವನು ಶ್ರೀನಿಧಿ.

ಭೌತಿಕ ಸಂಪತ್ತನ್ನಾಗಲೀ, ಜ್ಞಾನಸಂಪತ್ತನ್ನಾಗಲಿ ಯೋಗ್ಯರಲ್ಲೇ ಇರುವಂತೆ ಚೆನ್ನಾಗಿ ಧಾರಣೆ ಮಾಡುವುದರಿಂದಲೂ ಭಗವಂತ ಶ್ರೀನಿಧಿ. ಎಲ್ಲರಿಗೂ ಸಂಪತ್ತನ್ನು ಕೊಟ್ಟರೂ ಅದು ಯೋಗ್ಯರಲ್ಲೇ ಉಳಿಯುವಂತೆ ಚೆನ್ನಾಗಿ ಧಾರಣೆ ಮಾಡುವನು.

ಮೊದಲು ದುರ್ಯೋಧನಾದಿಗಳಿಗೆ ಸಂಪತ್ತನ್ನು ಕೊಟ್ಟ. ಆದರೆ ಮತ್ತೆ ಅದನ್ನು ಕಿತ್ತುಕೊಂಡು ಪಾಂಡವರಿಗೆ ಕೊಟ್ಟು ಅವರಲ್ಲಿ ಸ್ಥಿರವಾಗಿ ನಿಲ್ಲುವಂತೆ ಚೆನ್ನಾಗಿ ಧಾರಣೆ ಮಾಡಿರುವನು.

ತ್ರಿಪುರಾಸುರರಿಗೆ ಮೊದಲು ಜ್ಞಾನಸಂಪತ್ತನ್ನು ಕೊಡುವನು. ಎಲ್ಲ ತ್ರಿಪುರಾಸುರರೂ ವಿಷ್ಣುಸರ್ವೋತ್ತಮತ್ವ ಜ್ಞಾನವನ್ನು ಪಡೆದು, ವಿಷ್ಣುವಿನ ಪ್ರೀತಿಗಾಗಿ ಏಕಾದಶೀ ವ್ರತಾಚರಣೆಯೇ ಮುಂತಾದ ಧಾರ್ಮಿಕ ಅನುಷ್ಠಾನದಲ್ಲಿ ತೊಡಗುವರು. ಕೂಡಲೇ ಅವರಿಂದ ಜ್ಞಾನಸಂಪತ್ತನ್ನು ಕಸಿದುಕೊಳ್ಳುವುದಕ್ಕಾಗಿ ಮಗುವಿನ ರೂಪದಲ್ಲಿ ಬುದ್ಧನಾಗಿ ಬಂದು ಆಪಾತತಃ ವೇದ ವಿರುದ್ಧ ಉಪದೇಶ ನೀಡಿದ. ಅಸುರರಿಗೆ ಅವನ ಉಪದೇಶದಲ್ಲಿ ನಂಬಿಕೆ ಬರಲಿಲ್ಲ. ಆಗ ಎಲ್ಲ ದೇವತೆಗಳು ತಮ್ಮ ತಮ್ಮ ಆಯುಧವನ್ನು ಆ ಮಗುವಿನ ಮೇಲೆ ಎಸೆಯಲು ಆಯುಧಗಳನ್ನೆಲ್ಲ ನುಂಗಿ ಹಾಕಿದ. ವಿಷ್ಣು ಪ್ರಯೋಗಿಸಿದ ಚಕ್ರಾಯುಧವನ್ನೂ ಕೆಳಗೆ ಆಸನವಾಗಿ ಹಾಕಿ ಅದರ ಮೇಲೆ ಕುಳಿತ. ಆಗ ಆ ಅಸುರರಿಗೆ ಬುದ್ಧನ ಮೇಲೆ, ಅವನ ಉಪದೇಶದ ಮೇಲೆ ವಿಶ್ವಾಸ ಉಂಟಾಗಿ ಅದಕ್ಕನುಗುಣವಾಗಿ ಏಕಾದಶೀವ್ರತಾದಿಗಳನ್ನೆಲ್ಲ ಬಿಟ್ಟರು.

ವಿಷ್ಣುಸರ್ವೋತ್ತಮತ್ವ ಜ್ಞಾನವನ್ನೂ ಬಿಟ್ಟರು.

ಈ ರೀತಿಯಾಗಿ ಭಗವಂತನು ಬುದ್ಧರೂಪದಿಂದ ತ್ರಿಪುರಾಸುರರ ಜ್ಞಾನಸಂಪತ್ತು ದೂರ ಆಗುವಂತೆ ಮಾಡಿರುವನು.

ಆದುದರಿಂದ ಯೋಗ್ಯರ ಸಂಪತ್ತನ್ನು ಚೆನ್ನಾಗಿ ಧಾರಣೆ ಮಾಡಿ, ಸಂರಕ್ಷಣೆ ಮಾಡಿ 'ಶ್ರೀನಿಧಿ'- ಎನಿಸುವನು.

**೬೧೭. ಶ್ರೀವಿಭಾವನಃ – ಜ್ಞಾನ ಸಂಪತ್ತಿನಿಂದ ಚೆನ್ನಾಗಿ ಮೆರೆಯುವ ಜ್ಞಾನಿಗಳಿಂದ ಚೆನ್ನಾಗಿ ಭಜಿಸಲ್ಪಡುವವನು.**

ವಿವರಣೆ: 'ಶ್ರೀವಿಭ' 'ಆವನ' - ಎರಡು ಶಬ್ದಗಳು ಸೇರಿ 'ಶ್ರೀವಿಭಾವನ '- ಎಂದು ರೂಪುಗೊಂಡಿದೆ. 'ಶ್ರೀವಿಭ'- ಎಂದರೆ ಜ್ಞಾನಸಂಪತ್ತನಿಂದ ಚೆನ್ನಾಗಿ ಶೋಭಿಸುವ ಜ್ಞಾನಿಗಳು. ಅವರಿಂದ 'ಆವನ' - ಚೆನ್ನಾಗಿ ವನನೀಯ, ಭಜನೀಯ - ಭಜಿಸಲು ಸೇವಿಸಲು ಯೋಗ್ಯನಾಗಿರುವವನು.

ಗೀತೆಯಲ್ಲಿ ತಿಳಿಸಿರುವಂತೆ ಭಗವಂತನನ್ನು ಆರ್ತರಾಗಿ, ದುಃಖಿಗಳಾಗಿ ಆ ದುಃಖದ ಪರಿಹಾರಕ್ಕಾಗಿ ಕೆಲವರು ಭಜಿಸುವರು. ಮತ್ತೆ ಕೆಲವರು 'ಜಿಜ್ಞಾಸು'ಗಳಾಗಿ ದೇವರು ಎಂದರೆ ಹೇಗಿದ್ದಾನೆ ? - ಎಂಬ ಕುತೂಹಲದಿಂದ ದೇವರನ್ನು ಭಜಿಸುವರು. ಇನ್ನು ಕೆಲವರು ಅರ್ಥಾರ್ಥಿಗಳಾಗಿ ಹಣಕ್ಕಾಗಿ ದೇವರನ್ನು ಭಜಿಸುವರು. ಹೀಗೆ ಬೇರೆ ಬೇರೆ ಉದ್ದೇಶಕ್ಕಾಗಿ ದೇವರನ್ನು ಭಜಿಸುವ ಈ ಮೂರು ವಿಧದ ಭಕ್ತರೂ ತಮ್ಮ ಉದ್ದೇಶ ಈಡೇರಿದಾಕ್ಷಣ ದೇವರ ಭಜನೆಯನ್ನು ನಿಲ್ಲಿಸಿ ಬಿಡುವರು. ಆದರೆ 'ಜ್ಞಾನಿ'ಯಾಗಿ, ದೇವರ ಹಿರಿಮೆ ಗರಿಮೆಯನ್ನು ಅರಿತು, ದೇವರು ಸಲ್ಲಿಸುತ್ತಿರುವ ಉಪಕಾರವನ್ನು ತಿಳಿದು ದೇವರನ್ನು ಭಜಿಸುವವರು ಯಾವಾಗಲೂ ದೇವರನ್ನು ಭಜಿಸುತ್ತಲೇ ಇರುವರು. ಜ್ಞಾನದಿಂದ ಮೋಕ್ಷ ಪಡೆದು ಸುಖಿಗಳಾದ ಮೇಲೂ ಭಗವಂತನನ್ನು ಚೆನ್ನಾಗಿ ಭಜಿಸುತ್ತಲೇ ಇರುವರು. ಆದುದರಿಂದ ಭಗವಂತ 'ಶ್ರೀವಿಭಾವನ '- 'ಶ್ರೀವಿಭ'ರೆನಿಸುವ ಜ್ಞಾನಿಗಳಿಂದ, ಜ್ಞಾನಸಂಪತ್ತಿನಿಂದ ಚೆನ್ನಾಗಿ ಮೆರೆಯುವ ಜ್ಞಾನಿಗಳಿಂದ 'ಆವನ' ಚೆನ್ನಾಗಿ ಭಜಿಸಲ್ಪಡುವವನು.

**೬೧೮. ಶ್ರೀಧರಃ – ಲಕ್ಷ್ಮಿಯ ಶ್ರೀರೂಪವನ್ನು ತನ್ನ ಎಡತೊಡೆಯಲ್ಲಿ ಧರಿಸಿಕೊಂಡಿರುವವನು.**

ವಿವರಣೆ : ಲಕ್ಷ್ಮಿಯ ಶ್ರೀ ಎಂಬ ರೂಪವನ್ನು ಧರಿಸಿಕೊಂಡವನು ಶ್ರೀಧರ. ಶ್ರೀ ರೂಪವನ್ನು ಭಗವಂತ ಎಲ್ಲಿ ಧರಿಸಿಕೊಂಡಿರುವನು ?

ದಾಸರು ಹೀಗೆ ಹಾಡಿರುವರು -

**'ಮರಳು ಮಾಡಿಕೊಂಡೆಯಲ್ಲೋ ಮಾಯಾದೇವಿ**

**ಇರುಳು ಹಗಲು ಏಕವಾಗಿ ಹರಿ ತನ್ನ ಬಿಡದಿಪ್ಪಂತೆ'**

ಭಗವಂತ ಹಗಲು ಇರುಳು ಅನ್ನದೆ ಯಾವಾಗಲೂ ಲಕ್ಷ್ಮೀದೇವಿಯಿಂದ ಕೂಡಿಕೊಂಡೇ ಇರುವಂತೆ ಅವನನ್ನು ಮರುಳು ಮಾಡಿರುವಳೆಂದು ಕಾಣಿಸುವುದು. ಅಲ್ಲ , ದೇವರಿಗೆ ಲಕ್ಷ್ಮಿಯ ಮರಳು ಅಲ್ಲ, ಬದಲಾಗಿ ಲಕ್ಷ್ಮೀದೇವಿಗೆ ದೇವರ ಮರಳು. ಆದುದರಿಂದ ದೇವರು ಆಕೆಯನ್ನು ಬಿಡದೆ ಧರಿಸಿರುವನು. ನಮ್ಮನ್ನು ದೇವರು ಯಾವಾಗಲೂ ಧರಿಸಿಕೊಂಡಿರಬೇಕೆಂದರೆ ನಾವು ದೇವರ ಹುಚ್ಚಿಗೆ ಒಳಗಾಗಬೇಕು. ಹೀಗೆ ದೇವರ ಮರಳಿಗೆ ಒಳಗಾದ ಮಾಯಾದೇವಿಯನ್ನು ಶ್ರೀ ಹರಿ ಹೇಗೆ ಧರಿಸಿರುವನು ?

**'ಎಡಕೆ ಶ್ರೀಯು ಬಲಕೆ ಭೂಮಿ ಎದುರಿನಲ್ಲಿ ದುರ್ಗಾದೇವಿ'** ಎಡಬದಿಯಲ್ಲಿ ಶ್ರೀರೂಪ. ಎಡಬದಿಯಲ್ಲಿ ಅಂದರೆ ಎಲ್ಲಿ ? ಭಗವಂತನ ದೇಹದ ಹೊರಗಿನಿಂದ ಎಡಬದಿಯಲ್ಲಿದ್ದರೂ 'ಎಡಕೆ ಶ್ರೀ' ಎನಿಸಬಹುದು. ಭಗವಂತನ ಎಡತೊಡೆಯಲ್ಲಿ ಕುಳಿತಿದ್ದರೂ 'ಎಡಕೆಶ್ರೀ' ಎನಿಸಬಹುದು. ಆದರೆ ಶ್ರೀ ಮಧ್ವರು ತಮ್ಮ ದ್ವಾದಶಸ್ತೋತ್ರದಲ್ಲಿ ಭಗವಂತನ ಎಡತೊಡೆಯಲ್ಲಿ ಶ್ರೀದೇವಿ ಇರುವುದನ್ನು ಕಂಡು ಸ್ತುತಿಸಿರುವರು-

'ಉದರಂ ಚಿಂತ್ಯಮೀಶಸ್ಯ ತನುತ್ವೇಽಪ್ಯಖಿಲಂಭರಮ್ |

ವಲಿತ್ರಯಾಂಕಿತಂ ನಿತ್ಯಮುಪಗೂಢಂ ಶ್ರಿಯೈಕಯಾ ||'

ಈ ಪದ್ಯದ ಕೊನೆಯ ಪಾದದಲ್ಲಿ ಶ್ರೀದೇವಿಯಿಂದ ಮಾತ್ರ ಭಗವಂತನ ಉದರ ಯಾವಾಗಲೂ ಆಲಿಂಗಿತವಾಗಿದೆ - ಎಂದು ವರ್ಣಿಸುವ ಮೂಲಕ ಶ್ರೀದೇವಿ ಭಗವಂತನ ಎಡ ತೊಡೆಯುಲ್ಲಿ ಕುಳಿತು ಅವನ ಉದರವನ್ನು ಆಲಿಂಗಿಸಿಕೊಂಡಿರವಳೆಂದು ಸಿದ್ಧಿಸುವುದು. 'ಭಾರ್ಯಾಭಾಗಃ ವಾಮ ಇತಿ ಪ್ರಸಿದ್ಧಃ'- ಎಂದಿರುವಂತೆ ಭಗವಂತನ ಭಾರ್ಯೆಯಾಗಿರುವ ಶ್ರೀದೇವಿ ಎಡತೊಡೆಯಲ್ಲಿ ಕುಳಿತುಕೊಳ್ಳುವುದೇ ಸಮುಚಿತ ತಾನೇ ?

ತತ್ತ್ವಪ್ರಕಾಶಿಕಾದಲ್ಲಿ ಶ್ರೀ ಎದೆಯಲ್ಲಿದ್ದಾಳೆಂದು ಹೇಳಲಾಗಿದೆ. ತತ್ತ್ವಪ್ರದೀಪದಲ್ಲಿ 'ಶ್ರೀ' ಎಡತೊಡೆಯಲ್ಲಿರುವಳೆಂದು ಪ್ರತಿಪಾದಿಸಿದ್ದಾರೆ. ಲಕ್ಷ್ಮೀದೇವಿಯ ಈ ಎರಡು ರೂಪಗಳಿಗೂ ಐಕ್ಯ ಎಂದಿಟ್ಟುಕೊಂಡರೆ ಈ ವಿರುದ್ಧ ಪ್ರತಿಪಾದನೆಯನ್ನು ಕೂಡಿಸಬಹುದು.

ಸತ್ವಗುಣಕ್ಕೆ ಅಭಿಮಾನಿನಿಯಾದ ಲಕ್ಷ್ಮಿಯ ಶ್ರೀರೂಪವನ್ನು ತನ್ನ ಎಡತೊಡೆಯಲ್ಲಿ ಕುಳ್ಳಿರಿಸಿಕೊಂಡು ಆಕೆಯಿಂದ ಆಲಿಂಗಿತನಾದವನು ಶ್ರೀಧರ.

ಭೀಷ್ಮರು ಬರೇ ಕೃಷ್ಣನನ್ನು ಚಿಂತನೆ ಮಾಡುವುದಿಲ್ಲ. ಲಕ್ಷ್ಮೀ ಸಹಿತನಾಗಿಯೇ ದೇವರನ್ನು ಚಿಂತಿಸಬೇಕು. - ಎಂದು ನಮಗೂ ಒಂದು ನಿಯಮ ಇದರಿಂದ ಸೂಚಿತವಾಗುವುದು.

ಒಂದು ಕಥೆ ಇದೆ. ಅದು ಎಷ್ಟು ಸತ್ಯವೋ ಗೊತ್ತಿಲ್ಲ. ಅಂತೂ ಅದರ ನೀತಿಯನ್ನು ತೆಗೆದುಕೊಳ್ಳಬೇಕು.

ಒಬ್ಬರು ಸ್ವಾಮಿಗಳು 'ಕೃಷ್ಣ' - ಎಂಬ ಅಂಕಿತವನ್ನಷ್ಟೇ ಇಟ್ಟುಕೊಂಡು ಹಾಡಿದರಂತೆ.

ದೇವರು ಅಂದನಂತೆ - 'ನೀನು ಸನ್ಯಾಸಿ ಇರಬಹುದು. ಆದರೆ ನಾನು ಸನ್ಯಾಸಿ ಅಲ್ಲ'. ಕೊನೆಗೆ ಅವರು 'ಶ್ರೀ' ಎಂದು ಸೇರಿಸಿಕೊಂಡರು. ಆದುದರಿಂದಲೇ ಅವರ ಅಂಕಿತ 'ಶ್ರೀಕೃಷ್ಣ' - ಎಂದು. ಆ ಸಂನ್ಯಾಸಿಗಳು ಮತ್ತಾರೂ ಅಲ್ಲ, ಶ್ರೀ ವ್ಯಾಸತೀರ್ಥರು. ಇದು ಭಕ್ತಭಗವಂತರ ನಡುವೆ ನಡೆದ ತಮಾಷೆ ಇರಬಹುದು. ಆದರೆ ನಮಗೆ ನೀತಿ ಲಕ್ಷ್ಮಿಯನ್ನು ಬಿಟ್ಟು ಬರೇ ನಾರಾಯಣನ ಉಪಾಸನೆ ಸಲ್ಲದೆಂದು.

ನಾರಾಯಣನ ಕೃಷ್ಣನೇ ಮುಂತಾದ ರೂಪಗಳನ್ನು, ಅವುಗಳಲ್ಲೂ ಬಾಲ್ಯದ ರೂಪವನ್ನು ನವಗ್ರಹ ಕಿಂಡಿಯಲ್ಲಿ ಮಂಡೆಯಿಟ್ಟು ಬಾಲಕೃಷ್ಣನನ್ನು ಕಾಣುವಾಗಲೂ ಎಡಬದಿಯಲ್ಲಿ, ಶ್ರೀಕೃಷ್ಣನ ಎಡತೊಡೆಯಲ್ಲಿ ಶ್ರೀರೂಪದ ಅನುಸಂಧಾನ ನಡೆಸುತ್ತ 'ಶ್ರೀಧರ'ನನ್ನಾಗಿಯೇ ಕಾಣಬೇಕು.

ಭೀಷ್ಮರಲ್ಲಿಗೆ ಕೃಷ್ಣನೊಬ್ಬನೇ ಹೋಗಿದ್ದು. ಅವನ ಯಾವ ಪತ್ನಿಯರೂ ಅವನ ಜೊತೆ ಇದ್ದಿರಲಿಲ್ಲ. ಆದರೂ ಭೀಷ್ಮರು ಕೃಷ್ಣನನ್ನು 'ಶ್ರೀಧರ'ನನ್ನಾಗಿಯೇ ಕಂಡು ಸ್ತುತಿಸಿರುವರು.

**೬೧೯. ಶ್ರೀಕರಃ – * ಕೈಗಳಲ್ಲಿ ಸಂಪತ್ತನ್ನು ತುಂಬಿಸಿಕೊಂಡಿರುವವನು.**

*** ತನ್ನ ಶ್ರೀಕರ ರೂಪವನ್ನು ಚಿಂತಿಸುವವರ ಕೈತುದಿಯಲ್ಲಿ ಸಂಪತ್ತನ್ನು ಉಂಟು ಮಾಡುವವನು.**

**ವಿವರಣೆ :** ಭಗವಂತನದ್ದು ಶ್ರೀಕರ ಎಂಬುದೊಂದು ರೂಪವೇ ಇದೆ. ಅದನ್ನು ಶ್ರೀಮಧ್ವರು ಹೀಗೆ ವರ್ಣಿಸಿರುವರು -

'ಆದಿತ್ಯಚಂದ್ರಾವಪಿ ಚಕ್ರಶಂಖೌ
ಶಂಖಪ್ರಸೂನಾಖ್ಯನಿಧೀ ದಧಾನಃ | '

ಎಂಟು ಕೈಗಳು ಆ ಶ್ರೀಕರರೂಪಕ್ಕೆ. ಇವುಗಳಲ್ಲಿ ಎರಡು ಕೈಗಳಿಂದ ಆದಿತ್ಯ ಚಂದ್ರರನ್ನೂ, ಮತ್ತೆರಡು ಕೈಗಳಿಂದ ಚಕ್ರಶಂಖಗಳನ್ನೂ, ಇನ್ನೆರಡು ಕೈಗಳಿಂದ ಶಂಖ ಹಾಗೂಪ್ರಸೂನ ಎಂಬ ಎರಡು ಬಗೆಯ ನಿಧಿಗಳನ್ನೂ ಧರಿಸಿರುವನು. ಉಳಿದ ಎರಡು ಕೈಗಳಿಂದ **'ಚಿಂತ್ಯಃ ಕರಾಭ್ಯಾಂ ವಸು ತರ್ಪಯನ್ನಃ....'** ಹಣವನ್ನು ಸುರಿಸುತ್ತಿದ್ದಾನೆ. ಯಾರು ತನ್ನ ಬಳಿಗೆ ಹಣ ಕೇಳಲು ಬರುವರೋ ಅವರಿಗೆ ಹಣ ಸುರಿಸುತ್ತಿರುವನು. ಆದರೆ ಇಷ್ಟರವರೆಗೂ ಯಾರೂ ಅವನಲ್ಲಿ ಹಣ ಕೇಳದಿದ್ದುದರಿಂದ ಹಣ ಕೈಯಲ್ಲಿ ಹಾಗೆಯೇ ಇದೆ. ಅವನ ಭಕ್ತರೇನೋ ಅವನ ಬಳಿಗೆ ಹೋಗುವರು. ಆದರೆ ಅವರೆಂದೂ ಅವನಲ್ಲಿ ಹಣವನ್ನು ಕೇಳುವುದಿಲ್ಲ. 'ನಮಗೆ ನೀನೇ ಬೇಕು, ಹಣ ಬೇಡ' ಎನ್ನುವರು. ಯಾರಿಗೆ ಹಣ ಬೇಕು ಎಂದಿರುವುದೋ ಅಂತಹವರು ದೇವರ ಬಳಿಗೆ ಹೋಗುವ ಬದಲು ಇತರ ದೇವತೆಗಳಲ್ಲಿಗೆ ಹೋದರೆ ಬೇಗನೆ ತುಷ್ಟರಾಗುವ ಅವರಿಂದ ಬೇಗನೇ ಸಂಪತ್ತನ್ನು ಪಡೆಯಬಹುದೆಂದು ಅವರಲ್ಲಿಗೇ ಹೋಗುವರು. ಹೀಗಾಗಿ ಶ್ರೀಕರ ರೂಪಿ ಪರಮಾತ್ಮನ ಬೊಗಸೆಯಲ್ಲಿ ತುಂಬಿರುವ ಹಣ ಖಾಲಿಯಾಗದೆ ಹಾಗೆಯೇ ಇದೆ.

**'ಸ್ವಾಂಕಸ್ಥಲಕ್ಷ್ಮೀರ್ಗರುಡಾಂಸಸಂಸ್ಥಃ'**

ತನ್ನ ಎಡತೊಡೆಯಲ್ಲಿ ಲಕ್ಷ್ಮಿಯನ್ನು ಕುಳ್ಳಿರಿಸಿಕೊಂಡಿರುವನು. ಗರುಡನ ಹೆಗಲ ಮೇಲೆ ಏರಿರುವನು.

ಶ್ರೀ ಮಧ್ವರು ಕೊಟ್ಟ ಶ್ರೀಕರನ ಚಿತ್ರಣ ಇದು.

ಶ್ರೀಕರ ರೂಪಿ ಪರಮಾತ್ಮ ತನ್ನ ಕೈಯಲ್ಲಿ ಸಂಪತ್ತನ್ನು ಧರಿಸಿಕೊಳ್ಳುವ ಮೂಲಕ ಪ್ರತಿಯೊಬ್ಬರ ಕೈಯಲ್ಲೂ ಸಂಪತ್ತು ತುಂಬಿಕೊಳ್ಳುವಂತೆ ಮಾಡಿರುವನು. ಬೆಳಿಗ್ಗೆ ಎದ್ದಾಕ್ಷಣ -'ಕರಾಗ್ರೇ ವಸತೇ ಲಕ್ಷ್ಮೀಃ......' - ಎಂದು ಪ್ರತಿಯೊಬ್ಬರ ಕೈಯ ತುದಿಯಲ್ಲಿ ಲಕ್ಷ್ಮೀದೇವಿ ಇರುವಳೆಂದು ಸ್ಮರಿಸಿಕೊಳ್ಳುವೆವು.

ಹೀಗೆ ಲಕ್ಷ್ಮೀದೇವಿಯ ಸನ್ನಿಧಾನವನ್ನು ಗುರುತಿಸಿಕೊಂಡು ನಮ್ಮ ಕೈಯ ತುದಿಯಿಂದ ಯಾರಿಗಾದರೂ ಏನನ್ನಾದರೂ ಕೊಟ್ಟೆವೆಂದರೆ ತೆಗೆದುಕೊಳ್ಳುವವರಲ್ಲಿ ನಾರಾಯಣನು ಸನ್ನಿಹಿತನಾಗಿ ಆ ಲಕ್ಷ್ಮಿಯನ್ನು ಸ್ವೀಕರಿಸುವನು. ಇದರಿಂದ ತೆಗೆದುಕೊಳ್ಳುವವನಿಗೆ ಸಮೃದ್ಧಿ ಆಗುವುದು. ಈ ರೀತಿಯಾಗಿ ಭಗವಂತನು ತನ್ನ ಕೈಯಲ್ಲಿ ಸಂಪತ್ತನ್ನು ಇಟ್ಟುಕೊಂಡು, ಅದರ ಚಿಂತನೆ, ಅನುಸಂಧಾನಗಳಿಂದ ಭಕ್ತರ

ಕೈ ತುದಿಯಲ್ಲಿ ಸಂಪತ್ತು ಬರುವಂತೆ ಸೃಷ್ಟಿ ಮಾಡುವುದರಿಂದ 'ಶ್ರೀಕರ' ಎನಿಸಿರುವವನು.

**೬೨೦. ಶ್ರೇಯಃ - ಮೋಕ್ಷವು ಪೂರ್ಣವಾಗಿ ಯಾರ ಹಿಡಿತದಲ್ಲಿದೆಯೋ ಅಂತಹವನು.**

ವಿವರಣೆ : 'ನಿನಗೆ ಶ್ರೇಯಸ್ಸಾಗಲಿ' ಎಂದು ಆಶೀರ್ವದಿಸುವುದಿದೆ. ಹಿರಣ್ಯಕಶಿಪು ಚತುರ್ಮುಖನನ್ನು ಕುರಿತು ತಪಸ್ಸು ಮಾಡಿ ಅವನಿಂದ 'ಲೋಕಸ್ಯ ಭವಾಯ ಶ್ರೇಯಸೇ ಭೂತ್ಯೈ ಕ್ಷೇಮಾಯ ವಿಜಯಾಯ ಚ' - ಈ ಐದನ್ನು ಕೊಟ್ಟುಬಿಡು ಎಂದು ಕೇಳಿದ್ದನಂತೆ.

ಲೋಕಕ್ಕೆ, ಭವ - ಸಮೃದ್ಧಿ, ಲೋಕಕ್ಕೆ ಶ್ರೇಯಸ್ಸು, ಲೋಕಕ್ಕೆ ಭೂತಿ, ಲೋಕಕ್ಕೆ ಕ್ಷೇಮ, ಲೋಕಕ್ಕೆ ವಿಜಯ - ಈ ಐದಕ್ಕಾಗಿ ನೀನು ಇರುವುದು ತಾನೇ ? ಆ ಐದನ್ನೂ ನನಗೆ ಕೊಟ್ಟು ಬಿಡು ಎಂದು ಹಿರಣ್ಯಕಶಿಪುವಿನ ಬೇಡಿಕೆ ಚತುರ್ಮುಖನಲ್ಲಿ.

ಇದರಲ್ಲಿ ಒಂದು ಬೇಡಿಕೆ 'ಶ್ರೇಯಸೇ' - ಶ್ರೇಯಸ್ಸು. ಎಂದರೆ ಬಿಡುಗಡೆ. ಆದುದರಿಂದ ಯಾರಾದರೂ ನಮಸ್ಕರಿಸಿದರೆ 'ಶ್ರೇಯಸ್ಸಾಗಲಿ' ಎಂದು ಆಶೀರ್ವದಿಸುವವರ ಆಶಯ ಯಾವ ಸಮಸ್ಯೆಯಿಂದ ನೀನು ಕಾಡಲ್ಪಡುತ್ತಿರುವಿಯೋ ಆ ಸಮಸ್ಯೆಯಿಂದ ನಿನಗೆ ಬಿಡುಗಡೆ ದೊರಕಲಿ ಎಂದು. ಒಂದು ವೇಳೆ ಇತರ ಯಾವುದೇ ಸಮಸ್ಯೆ ಇಲ್ಲದಿದ್ದರೆ 'ಸಂಸಾರದ ಜಂಜಾಟ'ದಿಂದ ಬಿಡುಗಡೆ ದೊರಕಲಿ.

ಶ್ರೇಯಸ್ಸು ಪೂರ್ಣವಾಗಿ ಭಗವಂತನ ಹಿಡಿತದಲ್ಲಿರುವುದರಿಂದ ಅವನನ್ನೇ 'ಶ್ರೇಯಸ್' - ಎಂದು ಕರೆಯಲಾಗಿದೆ. ಶ್ರೇಯಸ್ ಎಂದರೆ ದೇವರು, ದೇವರು ಎಂದರೆ 'ಶ್ರೇಯಸ್' - ಎನ್ನುವಷ್ಟು ಶ್ರೇಯಸ್ ದೇವರ ವಶದಲ್ಲಿದೆ.

ಉಳಿದವರು ಶ್ರೇಯಸ್ಸಿಗಾಗಿ ಹುಡಿಕಿಕೊಂಡು ಹೋಗಬೇಕಾದರೆ, ಭೀಷ್ಮರಲ್ಲಿಗೆ ಶ್ರೇಯಸ್ಸೇ ಹುಡುಕಿಕೊಂಡು ಬಂದಿದೆ. ಭೀಷ್ಮರು ತಮ್ಮ ಜೀವನದಲ್ಲಿ ಅಧಿಕಾರ ಸುಖಭೋಗ ಎಲ್ಲವನ್ನೂ ತ್ಯಜಿಸಿದವರು. ಅವರ ಈ ತ್ಯಾಗಕ್ಕೆ ಒಲಿದೇ ಎನ್ನುವಂತೆ ಕೃಷ್ಣನು ಶ್ರೇಯಸ್‌ರೂಪದಲ್ಲಿ ಭೀಷ್ಮರಲ್ಲಿಗೆ ಬಂದು ಅನುಗ್ರಹಿಸಿರುವನು.

**೬೨೧. ಶ್ರೀಮಾನ್ - ನಾಶವಿಲ್ಲದ ಸಾವಿರಾರು ಇಂದ್ರಿಯುಗಳನ್ನು ಹೊಂದಿರುವವನು.**

**ವಿವರಣೆ :** 'ಶ್ರೀ' - ಎಂದರೆ ಇಂದ್ರಿಯಗಳು. ಅಂತಹ ಇಂದ್ರಿಯಗಳುಳ್ಳವನೇ ಶ್ರೀಮಾನ್. ಭಗವಂತನು ಇಂದ್ರಿಯಗಳನ್ನು ಹೊಂದಿರುವವನೆಂದು 'ಶ್ರೀಮಾನ್' ನಾಮದ ಮೂಲಕ ಅನೇಕ ಬಾರಿ ಕಂಡಿದ್ದೇವೆ.

ನಮಗೂ ಇಂದ್ರಿಯಗಳಿವೆ. ಹೀಗಿರುವಾಗ ಭಗವಂತನನ್ನು ಇಂದ್ರಿಯಗಳುಳ್ಳವನೆಂದು ವಿಶೇಷವಾಗಿ ಹೊಗಳುವ ಔಚಿತ್ಯ ಏನು ? ನಮಗೆ ಕೆಲವೇ ಕೆಲವು ಇಂದ್ರಿಯಗಳು ಇವೆ. ಅವುಗಳೂ ಕೂಡಾ ಯಾವಾಗಲೂ ತಮ್ಮ ಕೆಲಸ ಮಾಡುತ್ತವೆ ಎಂಬ ನಿಯಮವಿಲ್ಲ. ವೃದ್ಧಾಪ್ಯ ಬಂದ ಮೇಲೆ, ಅಷ್ಟೆ ಅಲ್ಲ, ಅದಕ್ಕಿಂತ ಮುಂಚೆಯೂ ಎಷ್ಟೋ ಒಳ್ಳೆಯ ವಿಚಾರಗಳನ್ನು ಕಿವಿ ಕೇಳಿಸಿಕೊಳ್ಳುವುದೇ ಇಲ್ಲ. ಬೇಡದ ವಿಷಯಗಳನ್ನೇ ಕೇಳಿಸಿಕೊಳ್ಳುವುದು. ಹೀಗೆ ನಮ್ಮ ಇಂದ್ರಿಯಗಳು ಕಡಿಮೆ ಸಂಖ್ಯೆಯಲ್ಲಿ ಇರುವವು, ಕಡಿಮೆ ಸಾಮರ್ಥ್ಯವನ್ನು ಪಡೆದಿರುವವು.

ಆದರೆ ದೇವರ ಇಂದ್ರಿಯಗಳು ಹಾಗಲ್ಲ. ಅವನಿಗೆ ಸಾವಿರಾರು ಕಣ್ಣುಗಳು, ಸಾವಿರಾರು ಕೈಕಾಲುಗಳು. ಪುರುಷಸೂಕ್ತ ಅವನ ಕೈಕಾಲು ಮುಂತಾದ ಇಂದ್ರಿಯಗಳ ವೈಭವವನ್ನು ಸಾರುತ್ತಲೆ ಪ್ರಾರಂಭವಾಗುವುದು - **'ಸಹಸ್ರಶೀರ್ಷಾ ಪುರುಷಃ ಸಹಸ್ರಾಕ್ಷಃ ಸಹಸ್ರಪಾತ್.....'**. ಮುಂದೆಯೂ **'ಬ್ರಾಹ್ಮಣೋऽಸ್ಯ ಮುಖಮಾಸೀತ್.....'** ಇತ್ಯಾದಿಯಾಗಿ ಅವನ ಬಾಯಿ, ಬಾಹು ಇತ್ಯಾದಿಗಳಿಂದ ಬ್ರಾಹ್ಮಣಜಾತಿ, ಕ್ಷತ್ರಿಯ ಜಾತಿ ಇತ್ಯಾದಿಗಳ ಸೃಷ್ಟಿಯನ್ನು ಹೇಳುತ್ತ ಅವನ ಇಂದ್ರಿಯಗಳ ವೈಭವವನ್ನೇ ಪ್ರತಿಪಾದಿಸಲಾಗಿದೆ.

ಪುರುಷಸೂಕ್ತದಲ್ಲಿ ಸಾವಿರ ಕೈಕಾಲುಗಳನ್ನಷ್ಟೇ ಹೇಳಿರುವುದಿಲ್ಲ, ಮತ್ತೆ 'ಸಾವಿರದ' - ಅಂದರೆ ನಾಶಕ್ಕೊಳಗಾಗದ ಕೈಕಾಲುಗಳೆಲ್ಲ ಭಗವಂತನಿಗಿದೆ ಎಂದೂ ತಿಳಿಸಲಾಗಿದೆ.

ಹೀಗೆ ಸಾವಿರದ, ನಾಶಕ್ಕೊಳಗಾಗದ ಸಾವಿರಾರು ಇಂದ್ರಿಯಗಳನ್ನು ಹೊಂದಿರುವುದರಿಂದಲೇ ಭಗವಂತನು 'ಶ್ರೀಮಾನ್'.

ನಾವು ಭಗವಂತನನ್ನು 'ಶ್ರೀಮಾನ್' - ಎಂದು ಈ ಅರ್ಥದ ಹಿನ್ನೆಲೆಯಲ್ಲಿ ಉಪಾಸನೆ ಮಾಡಿದೆವೆಂದರೆ ಅದರಿಂದ ಪ್ರಸನ್ನನಾಗುವ ಭಗವಂತ ನಮಗೆ ದೃಢವಾದ ಇಂದ್ರಿಯಸಂಪತ್ತನ್ನು ಅನುಗ್ರಹಿಸುವನು. ವೃದ್ಧಾಪ್ಯದಲ್ಲಿ ಕಣ್ಣು, ಕಿವಿ ಮುಂತಾದ ಇಂದ್ರಿಯಗಳಿಂದ ವಂಚಿತರಾಗಿ ಪರಾವಲಂಬಿಗಳಾಗಿ ದೈನ್ಯದಿಂದ ಬದುಕುವ ಪರಿಸ್ಥಿತಿಯಿಂದ ಪಾರಾಗಬಹುದು.

**೬೨೨. ಲೋಕತ್ರಯಾಶ್ರಯಃ – * ಮೂರು ಲೋಕಗಳಿಗೆ ಆಶ್ರಯ.**

*** ಜನರಿಗೆ ರಕ್ಷಕನಾಗಿ ಶಕ್ತಿಯನ್ನು ತುಂಬುವವನು ಹಾಗೂ ಅದರಿಂದಾಗಿ ಸಂಚರಿಸುವವರಿಗೆ ಆಶ್ರಯನಾಗಿರುವವನು.**

ವಿವರಣೆ: ಲೋಕತ್ರಯ - ಮೂರು ಲೋಕಗಳಿಗೆ ಆಶ್ರಯಃ - ಆಶ್ರಯನಾಗಿರುವವನು ಎಂಬುದು ಪ್ರಸಿದ್ಧಾರ್ಥ.

ಇದರ ಜೊತೆಗೆ ಮತ್ತೊಂದು ಅರ್ಥ ಹೀಗಿದೆ - ಲೋಕತ್ರ + ಯಾಶ್ರಯಃ ಲೋಕತ್ರಯಾಶ್ರಯಃ 'ಲೋಕಸ್ತು ಭುವನೇ ಜನೇ....' ಎಂದಿರುವಂತೆ ಲೋಕಶಬ್ದಕ್ಕೆ ಭುವನ ಎಂಬ ಅರ್ಥವಿರುವಂತೆ ಜನರು ಎಂಬ ಅರ್ಥವೂ ಇದೆ. ಆದುದರಿಂದ 'ಲೋಕತ್ರ' - ಎಂದರೆ ಜನರನ್ನು ರಕ್ಷಣೆ ಮಾಡುವವನು. ಬೇರೆ ಬೇರೆ ಚಟುವಟಿಕೆಯನ್ನು ನಡೆಸಲು ಬೇಕಾದ ಶಾರೀರಿಕ ಶಕ್ತಿ, ಇಂದ್ರಿಯ ಸಾಮರ್ಥ್ಯ, ಮಾನಸಿಕಬಲ, ಬುದ್ಧಿಶಕ್ತಿ ಮುಂತಾದವುಗಳನ್ನು ತುಂಬಿ ಜನರನ್ನು ರಕ್ಷಿಸುವುದರಿಂದ ಭಗವಂತ ಲೋಕತ್ರ.

ಹೀಗೆ 'ಲೋಕತ್ರ' ಎನಿಸುವ ಭಗವಂತನಿಂದ ಅನುಗ್ರಹೀತರಾದವರು ಆಧ್ಯಾತ್ಮಿಕ, ಧಾರ್ಮಿಕ ಚಟುವಟಿಕೆಗಳಾದ ಪ್ರವಚನದಲ್ಲಿ ಪಾಲ್ಗೊಳ್ಳುವುದು, ದೇವಾಲಯಕ್ಕೆ ಹೋಗುವುದು ಮುಂತಾದ ಚಟುವಟಿಕೆಗಳಿಗಾಗಿ ಯ - ಯಾನ - ಪ್ರಯಾಣದಲ್ಲಿ ತಮ್ಮನ್ನು ತೊಡಗಿಸಿಕೊಂಡರೆಂದರೆ ಅವರಿಗೆ ಆಶ್ರಯನಾಗಿರುವವನು, ಬೆಂಗಾವಲಾಗಿ ರಕ್ಷಣೆ ನೀಡುವವನು 'ಯಾಶ್ರಯ'.

ತಂದೆ ತಾಯಿಯಂದಿರು ಮಕ್ಕಳಿಗೆ ರಕ್ಷಣೆ ನೀಡಿ, ಪೋಷಣೆ ಮಾಡಿ ಚಟುವಟಿಕೆಗಳಲ್ಲಿ ತೊಡಗಿಸಬಹುದು. ಆದರೆ ಹಾಗೆ ಚಟುವಟಿಕೆಗಳನ್ನು ನಡೆಸುತ್ತಿದ್ದಾಗ ಆ ಮಕ್ಕಳಿಗೆ ಏನಾದರೂ ಹೆಚ್ಚು ಕಡಿಮೆ ಆದರೆ ಅಲ್ಲಿ ತಂದೆ ತಾಯಿಯಂದಿರು ರಕ್ಷಕರಾಗಿ ಇರುವುದಿಲ್ಲ. ಆದರೆ ದೇವರು ಹಾಗಲ್ಲ. 'ಲೋಕತ್ರ'- ಎನಿಸಿ ಶಕ್ತಿ, ಸಾಮರ್ಥ್ಯಗಳನ್ನು ತುಂಬಿ ಜನರನ್ನು ರಕ್ಷಿಸುವುದಲ್ಲದೆ, ಅಂತಹ ರಕ್ಷಣೆಗೊಳಗಾಗಿ ಬೇರೆ ಬೇರೆ ಚಟುವಟಿಕೆಗಳಿಗಾಗಿ ಪ್ರಯಾಣ ನಡೆಸುವ ಅವರಿಗೆ ಆಶ್ರಯನಾಗಿ, 'ಯಾಶ್ರಯ' - ಎನಿಸಿಯೂ ಅನುಗ್ರಹಿಸುವನು.

ಭೀಷ್ಮರು ತಾವು ವೃದ್ಧರಾದರೂ ತರುಣರಂತೆ ಕಾದಾಡುವಲ್ಲಿ ಭಗವಂತ ತಮ್ಮ ಪಾಲಿಗೆ 'ಲೋಕತ್ರ' ನಾಗಿಯೂ 'ಯಾಶ್ರಯ'ನಾಗಿಯೂ ಅನುಗ್ರಹಿಸಿದ್ದನ್ನು ಶ್ರೀಕೃಷ್ಣನಲ್ಲಿ ಲೋಕತ್ರಯಾಶ್ರಯ ನಾಮದ ಮೂಲಕ ನಿವೇದಿಸಿಕೊಳ್ಳುತ್ತಿರುವರು.

**ಸ್ವಕ್ಷಃ ಸ್ವಂಗಃ ಶತಾನಂದೋ ನಂದಿರ್ಜ್ಯೋತಿರ್ಗಣೇಶ್ವರಃ |**
**ವಿಜಿತಾತ್ಮಾ ವಿಧೇಯಾತ್ಮಾ ಸತ್ಕೀರ್ತಿಶ್ಛಿನ್ನಸಂಶಯಃ ||೬೬||**

**೬೨೩. ಸ್ವಕ್ಷಃ – ತನಗಿಂತ ಇತರರಲ್ಲಿ ಸ್ವಾತಂತ್ರ್ಯ ಬರದಂತೆ ಅದನ್ನು ನಾಶಪಡಿಸುವವನು.**

**ವಿವರಣೆ :** ಸ್ವ ಎಂದರೆ ಸ್ವತ್ವವನ್ನು, ಸ್ವತಂತ್ರತ್ವವನ್ನು ಕ್ಷಪಯತಿ - ನಾಶಯತಿ ಇತಿ ಸ್ವಕ್ಷಃ. ಭಗವಂತನೊಬ್ಬನೇ ಸ್ವತಂತ್ರನಾಗಿದ್ದು, ಬೇರೆ ಯಾರಲ್ಲೂ ಸ್ವಾತಂತ್ರ್ಯ ಬರದಂತೆ ಭಗವಂತ ಅದನ್ನು ನಾಶಪಡಿಸುವನು.

ಆನಂದ, ಜ್ಞಾನ, ವ್ಯಾಪ್ತಿ, ಬಲ - ಇತ್ಯಾದಿ ಉಳಿದೆಲ್ಲ ಗುಣಗಳನ್ನು ಭಗವಂತ ಉಳಿದವರಿಗೂ ಅವರವರ ಯೋಗ್ಯತಾನುಗುಣವಾಗಿ ನೀಡುವನು. ಆದರೆ ಸ್ವಾತಂತ್ರ್ಯವನ್ನು ಮಾತ್ರ ಲಕ್ಷ್ಮೀದೇವಿಗೂ ನೀಡುವುದಿಲ್ಲ. ದಾಸಸಾಹಿತ್ಯದಲ್ಲಿ 'ದತ್ತಸ್ವಾತಂತ್ರ್ಯ' - ಎಂಬ ಶಬ್ದವೇನೋ ವ್ಯವಹಾರದಲ್ಲಿದೆ. ಆದರೆ ಭಗವಂತ ತನ್ನ ಸ್ವಾತಂತ್ರ್ಯದ ಒಂದು ಭಾಗವನ್ನೂಬೇರೆ ಯಾರಿಗೂ ನೀಡಿಲ್ಲ. ನೀಡುವುದಿಲ್ಲ. ಮೂರು ಕಾಲಗಳಲ್ಲೂ ಅವನೊಬ್ಬನೇ ಸ್ವತಂತ್ರ. ಯಾಕೆಂದರೆ ಉಳಿದ ಯಾರಲ್ಲೂ ಕಿಂಚಿತ್ತೂ ಸ್ವಾತಂತ್ರ್ಯ ಬರದಂತೆ ಅವನು ಅದನ್ನು ನಾಶಪಡಿಸುವನು.

ದುರ್ಯೋಧನ ಕೃಷ್ಣನನ್ನು ಮಣಿಸಿ ಬಿಡುವೆನೆಂದು ಹೊರಟಿದ್ದ. ಆದರೆ ಆ ನಿಟ್ಟಿನಲ್ಲಿ ಅವನ ಸ್ವಾತಂತ್ರ್ಯವನ್ನು ಕಸಿದುಕೊಂಡು ಕೃಷ್ಣನೇ ಅವನನ್ನು ಮಣಿಸಿದನು

1947ನೆಯ ಆಗಸ್ಟ್ 14ನೆಯಂದು ಅಮಾವಾಸ್ಯೆಯಾಗಿತ್ತೆಂದು ಕೆಲವರು ಹೇಳಿದರೆ, ಭರಣಿ ಕೃತ್ತಿಕಾ ನಕ್ಷತ್ರವಿತ್ತೆಂದು ಮತ್ತೆ ಕೆಲವರು ಹೇಳುವರು. ಎರಡೂ ಆಗಿದ್ದಿರಬಹುದು. ಆದುದರಿಂದಲೇ ಆ ದಿನದಂದು ನಮ್ಮ ದೇಶಕ್ಕೆ ರಾಜಕೀಯವಾದ ಸ್ವಾತಂತ್ರ್ಯವನ್ನು ದೊರಕಿಸಿಕೊಟ್ಟು, ಅಂತಹ ಸ್ವಾತಂತ್ರ್ಯದ ಮೂಲಕ ದೇಶವನ್ನು ಕ್ಷಪಯತಿ ನಾಶ ಮಾಡಿಸುತ್ತಿದ್ದಾನೆ 'ಸ್ವಕ್ಷ' ನಾಮಕ ಭಗವಂತ. ಅದಕ್ಕೆ ಕೃಷ್ಣ ಮತ್ತೆ ಭಾರತದಲ್ಲಿ ಅವತರಿಸಿ ಬಂದು,ಇದರ ಸ್ವಾತಂತ್ರ್ಯವನ್ನು ಕಸಿದುಕೊಂಡು 'ಸ್ವಕ್ಷ' ನಾಮಕನಾಗಿ ಅನುಗ್ರಹಿಸಬೇಕು.

**೬೨೪. ಸ್ವಂಗಃ – ಸ್ವತಂತ್ರನಾದ ತನ್ನನ್ನು ಉಳಿದವರಲ್ಲಿ ತಲುಪಿಸಿರುವವನು.**

**ವಿವರಣೆ :** 'ಸ್ವಕ್ಷ' - ಎನಿಸುವ ಭಗವಂತ ಉಳಿದೆಲ್ಲರ ಸ್ವತ್ವವನ್ನು, ಸ್ವಾತಂತ್ರ್ಯವನ್ನು ಕಸಿದುಕೊಳ್ಳುವನಾದರೂ ಅವರು ನಿಷ್ಕ್ರಿಯರಾಗಿ ಇರಲು ಬಿಡುವುದಿಲ್ಲ. ಸ್ವಂ -

ತನ್ನನ್ನು ಗಮಯತಿ - ಪ್ರಾಪಯತಿ - ಹೊಂದಿಸುವನು, ತಾನು ಅವರಲ್ಲಿ ಪ್ರವೇಶಿಸಿ ಅವರಿಂದ ಕ್ರಿಯೆಗಳು ನಡೆಯುವಂತೆ ಮಾಡುವನು. ತಟ್ಟಿರಾಯನಲ್ಲಿ ಸ್ವತಃ ಕ್ರಿಯೆ ಇಲ್ಲ. ಆದರೆ ಒಳಗೆ ಹೊಕ್ಕ ಪುರುಷನ ಚಲನೆಯಿಂದಾಗಿ ಅವನಲ್ಲೂ ಚಲನೆ ಬರುವುದು. ವಾಹನಕ್ಕೆ ಸ್ವತಃ ಚಲನೆ ಇಲ್ಲ. ಚಾಲಕನ ಚಲನೆಯಿಂದಾಗಿಯಷ್ಟೇ ಅದರಲ್ಲಿ ಚಲನೆ ಉಂಟಾಗುವುದು. ಅಂತೆಯೇ ಸ್ವತಂತ್ರನಾದ ಭಗವಂತನ ಪ್ರವೇಶದಿಂದಾಗಿ ಲಕ್ಷ್ಮಿಯೇ ಮುಂತಾದ ಪ್ರತಿಯೊಬ್ಬರಲ್ಲೂ ಚಟುವಟಿಕೆಗಳು ಉಂಟಾಗುವವು. ಮಕ್ಕಳಲ್ಲಿ ಹಣ ನೀಡಲಾಗುವುದು. ಆದರೆ ಅದನ್ನು ವೆಚ್ಚ ಮಾಡಲು ಸ್ವಾತಂತ್ರ್ಯ ನೀಡಲಾಗುವುದಿಲ್ಲ. ಏನು ಖರ್ಚು ಮಾಡುವುದಾದರೂ ಅವರು ಅದಕ್ಕೆ ಲೆಕ್ಕ ಕೊಡಬೇಕು ಎನ್ನುವೆವು. ಅಂತೆಯೇ ಭಗವಂತ ಜೀವರ ಸ್ವಾತಂತ್ರ್ಯವನ್ನು ತನ್ನಲ್ಲಿಟ್ಟುಕೊಂಡು ಅವರಿಂದ ಬೇರೆ ಬೇರೆ ಚಟುವಟಿಕೆಗಳನ್ನು ನಡೆಸುವನು. ಒಂದೊಮ್ಮೆ ಜೀವರಲ್ಲಿ ಅವರು ನಡೆಸುವ ಚಟುವಟಿಕೆಗಳ ಬಗ್ಗೆ ಸ್ವಾತಂತ್ರ್ಯ ಇತ್ತೆಂದರೆ ಅವುಗಳ ಸಾಧಕಬಾಧಕಗಳಿಗೆ ಅವರೇ ಹೊಣೆಗಾರರೆನಿಸುತ್ತಿದ್ದರು. ಹಾಗಾಗದಂತೆ ಭಗವಂತ ಅವರ ಸ್ವಾತಂತ್ರ್ಯವನ್ನು ತಾನು ಇಟ್ಟುಕೊಂಡಿರುವನು. ಇದರಿಂದಾಗಿ ಜೀವರ ಮೂಲಕ ನಡೆಯುವ ಒಳ್ಳೆಯ ಅಥವಾ ಕೆಟ್ಟ ಚಟುವಟಿಕೆಗಳ ಫಲಗಳಿಗೆ ಪೂರ್ಣವಾಗಿ ಅವರು ಪಾತ್ರರಾಗುವುದಿಲ್ಲ.

ಭಗವಂತನ ಈ ಬಗೆಯ ಸ್ವಂಗವ್ಯಕ್ತಿತ್ವವನ್ನು ಭೀಷ್ಮರು ಅನುಭವಿಸುತ್ತ ಅವನನ್ನು 'ಸ್ವಂಗ' ಎಂದು ಸ್ತುತಿಸುತ್ತಿರುವರು. ಯುಧಿಷ್ಠಿರಾದಿಗಳಿಗೆ ಧರ್ಮೋಪದೇಶ ಮಾಡಬೇಕೆಂದು ಕೃಷ್ಣ ತಿಳಿಸಿದಾಗ ಭೀಷ್ಮರು ತಮ್ಮಿಂದ ಸಾಧ್ಯವಾಗಲಾರದೆಂದು ತಿಳಿಸುವರು. ಆಗ ಕೃಷ್ಣ 'ಸ್ವಂಗ'ನಾಗಿ ಅಂದರೆ ತಾನು ಒಂದು ರೂಪದಿಂದ ಅವರಲ್ಲಿ ಪ್ರವೇಶಿಸಿ, ಆ ರೂಪದಿಂದಾಗಿ ಅವರ ಮೂಲಕ ಧರ್ಮೋಪದೇಶ ನಡೆಸಿರುವನು. ಶ್ರೀಕೃಷ್ಣನ ಈ ಬಗೆಯ ಚಮತ್ಕಾರವನ್ನು, ತಮ್ಮ ಬಗ್ಗೆ ಮಾಡಿದ ಅನುಗ್ರವನ್ನು ಅನುಭವಿಸುತ್ತ ಎದುರಿಗಿರುವ ಕೃಷ್ಣನನ್ನು 'ಸ್ವಂಗ'- ಎಂದು ಹೊಗಳುವರು ಭೀಷ್ಮರು.

**೭೨೫. ಶತಾನಂದಃ – ಪರಿಪೂರ್ಣವಾದ ಆನಂದ ಉಳ್ಳವನು.**

**ವಿವರಣೆ :** ಶತ ಎಂದರೆ ನೂರು ಎಂದರ್ಥ. ಹತ್ತು ಗುಣಿಸು ಹತ್ತು ನೂರು ಎನಿಸುವುದು. ಹತ್ತು ಪೂರ್ಣತೆಯನ್ನು ಸೂಚಿಸುವುದು. ಸೊನ್ನೆಯಿಂದ ಒಂಭತ್ತರವರೆಗೆ ಬೇರೆ ಬೇರೆ ಸಂಖ್ಯೆಯನ್ನು ಹೇಳುತ್ತ ಬಂದು ಹತ್ತು ಹಿಂದಿನದ್ದೇ ಒಂದು ಮತ್ತು ಸೊನ್ನೆ ಸೇರಿಸಿ ರೂಪುಗೊಂಡ ಸಂಖ್ಯೆಯಾಗಿದ್ದು ಪೂರ್ಣತ್ವವನ್ನು

ಸೂಚಿಸುವುದು. ಅಂತಹ ಹತ್ತು ಗುಣಿಸು ಹತ್ತು ಎಂದಾಗ ಪೂರ್ಣಪೂರ್ಣ ಎಂದಂತಾಗುವುದು. ಎರಡು ಬಾರಿ ಪಠಿಸಿದಾಗ ದಾರ್ಢ್ಯ ಸಿದ್ಧಿಸುವುದು. ಇದರಿಂದಾಗಿ ಪೂರ್ಣಪೂರ್ಣ ಎಂದರೆ ಸಂಪೂರ್ಣ. ಯಾವುದಕ್ಕಿಂತ ಅಧಿಕ ಪೂರ್ಣವಾದುದು ಮತ್ತೊಂದು ಇಲ್ಲವೋ ಅಷ್ಟೂ ಪರಿಪೂರ್ಣವಾದುದು ಎಂದು ಫಲಿಸುವುದು. ಹೀಗೆ ಶತಶಬ್ದ 'ದಶದಶ'ವನ್ನು ಸೂಚಿಸುವ ಮೂಲಕ ಪರಿಪೂರ್ಣ ಎಂಬ ಅರ್ಥವನ್ನು ಹೊರಡಿಸುವುದು. ಆದುದರಿಂದ 'ಶತಾನಂದ' - ಎಂದರೆ ಪರಿಪೂರ್ಣವಾದ ಆನಂದ ಉಳ್ಳವನು ಎಂದರ್ಥ. ಬರೇ ಆನಂದ ಅಲ್ಲದೆ, ಜ್ಞಾನ, ಸಾಮರ್ಥ್ಯ - ಇತ್ಯಾದಿಗಳೂ ಅವನಲ್ಲಿ 'ಶತ ' ಅಂದರೆ ದಶದಶ, ಪರಿಪೂರ್ಣವಾಗಿ ಇವೆ.

**೬೨೬. ನಂದಿಃ – ಬಂಧಕವಾದ ಅಹಂಕಾರ ಮಮಕಾರಕ್ಕೊಳಗಾದವರನ್ನು ಚೆನ್ನಾಗಿ ಖಂಡಿಸುವವನು.**

**ವಿವರಣೆ :** 'ನ' - ಎಂಬ ಅಕ್ಷರ ನಹ್ಯತೀತೀ 'ನಃ' - ಬಂಧಕ ಎಂಬ ಅರ್ಥದಲ್ಲಿ ರೂಪುಗೊಂಡದ್ದು. ಯಾವುದು ಬಂಧಕ ? ನಾನು ನನ್ನದು - ಅಹಂಕಾರ ಮಮಕಾರ ಇವುಗಲೇ ಬಂಧಕಗಳು. ಇಂತಹ ಬಂಧಕಗಳನ್ನು ದ್ಯತಿ -ಖಂಡಯತೀತಿ 'ನಂದಿಃ'- ಖಂಡಿಸುವವನು. ಯಾರು ಅಹಂಕಾರ ಮಮಕಾರಗಳಿಗೆ ಒಳಗಾಗುವರೋ ಅವರನ್ನು ದೇವರು ಖಂಡಿಸುವನು. ಅತಿಶಯವಾಗಿ ಖಂಡಿಸುವನು-ಎಂಬುದರ ಸೂಚನೆಗಾಗಿಯೇ ನಂದಃ ಆಗುವ ಬದಲು 'ತೃತೀಯೋಽತಿಶಯೇ'- ಎಂಬ ವೈದಿಕವ್ಯಾಕರಣದ ಸೂತ್ರಕ್ಕನುಗುಣವಾಗಿ ಅಕಾರದ ಬದಲು ಮೂರನೆಯ ಅಕ್ಷರವಾದ ಇಕಾರ ಬಂದು ನಂದಿಃ ಎಂದಾಗಿದೆ. ಬಂಧಕಗಳಾದ ಅಹಂಕಾರ ಮಮಕಾರಗಳಿಗೆ ಒಳಗಾದವರನ್ನು ಚೆನ್ನಾಗಿ ಖಂಡಿಸುವನು.

ಹೀಗೆ ಕೃಷ್ಣ 'ನಂದಿ' ಎನಿಸಿಯೇ ಅಹಂಕಾರಕ್ಕೊಳಗಾಗಿದ್ದ ದುರ್ಯೋಧನನನ್ನು ಚೆನ್ನಾಗಿ ಖಂಡಿಸಿರುವನು.

**೬೨೭. ಜ್ಯೋತಿರ್ಗಣೇಶ್ವರಃ – * ಸೂರ್ಯಚಂದ್ರ ಮುಂತಾದ ಪ್ರಕಾಶಕ ವಸ್ತುಗಳ ಸಮೂಹಕ್ಕೆ ಅಧಿಪತಿಯಾಗಿರುವವನು.**

*** ಇಂದ್ರಿಯಗಣಕ್ಕೆ ಒಡೆಯ.**

**ವಿವರಣೆ :** ಜ್ಯೋತಿಷ್ - ಬೆಳಕು, ಗಣ - ಅವುಗಳ ಸಮೂಹ, ಈಶ್ವರಃ - ಅದಕ್ಕೆ ಒಡೆಯ. ಸೂರ್ಯನ ಬೆಳಕೋ, ಚಂದ್ರನ ಬೆಳಕೋ, ಅಗ್ನಿಯ ಬೆಳಕೋ ಯಾವ ಬೆಳಕೇ ಆಗಲಿ, ಅವೆಲ್ಲ ಬೆಳಗುವುದು ಭಗವಂತನಿಂದ. ಭಗವಂತ ಅಲ್ಲಲ್ಲಿ

ಇದ್ದುಕೊಂಡು ಅವುಗಳಿಂದ ಬೆಳಕು ಹೊರಡುವಂತೆ ಮಾಡುವನು. ಆದುದರಿಂದ 'ಜ್ಯೋತಿರ್ಗಣೇಶ್ವರಃ.'

ಮತ್ತೊಂದು ಅರ್ಥವನ್ನು ನೋಡುವುದಾದರೆ, ಸೂರ್ಯ, ಚಂದ್ರ, ಬೆಂಕಿ ಮಾತ್ರ 'ಜ್ಯೋತಿ' ಅಲ್ಲ. ನಮ್ಮ ಎಲ್ಲ ಇಂದ್ರಿಯಗಳೂ ಜ್ಯೋತಿಗಳೇ. 'ತೈಜಸಾನೀಂದ್ರಿಯಾಣ್ಯಾಹುಃ' - ಎಂದು ಇಂದ್ರಿಯಗಳು ತೇಜಸ್ಸಿಗೆ ಸೇರಿದವುಗಳೆಂದು ತಿಳಿಸಲಾಗಿದೆ. ಇಂದ್ರಿಯಗಳಲ್ಲಿ ಕಣ್ಣು ತೈಜಸ ಎಂದು ಸ್ಪಷ್ಟ. ಪಶುಗಳ ಕಣ್ಣು ರಾತ್ರಿಯಲ್ಲೂ ಪದಾರ್ಥಗಳನ್ನು ಬೆಳಗಬಲ್ಲದು. ಆದುದರಿಂದಲೇ ಪಶುಗಳಿಗೆ ರಾತ್ರಿ ಅಡ್ಡಾಡಲು ನಮಗೆ ಹೇಗೋ ಹಾಗೆ ದೀಪದ ಅವಶ್ಯಕತೆ ಇರುವುದಿಲ್ಲ.

ಹೀಗೆ ಕಣ್ಣು ಹೇಗೋ ಹಾಗೆಯೇ ಎಲ್ಲ ಇಂದ್ರಿಯಗಳೂ ತೈಜಸಗಳಾಗಿದ್ದು 'ಜ್ಯೋತಿಷ್' - ಎನಿಸಿವೆ. ಅಂತಹ ಇಂದ್ರಿಯಗಳ ಸಮೂಹಕ್ಕೆ ಒಡೆಯನಾಗಿರುವವನೇ 'ಜ್ಯೋತಿರ್ಗಣೇಶ್ವರ.' ದೇವರು ಇಂದ್ರಿಯಗಣದಲ್ಲಿ ಬಂದು ಕುಳಿತನೆಂದರೆ ಆ ಇಂದ್ರಿಯಗಳು ತಮ್ಮ ತಮ್ಮ ಕೆಲಸವನ್ನು ನಡೆಸುವವು.

ನಾವು ಸಾಯುವವರೆಗೂ ನಮ್ಮ ಇಂದ್ರಿಯಗಳು ಕ್ರಿಯಾಶೀಲಗಳಾಗಿರಬೇಕೆಂದರೆ ಅವುಗಳಲ್ಲಿ ಭಗವಂತ ನೆಲೆಸಿರಬೇಕು. ಅದಕ್ಕಾಗಿ 'ಜ್ಯೋತಿರ್ಗಣೇಶ್ವರ'- ಎಂದು ಅವನ ಉಪಾಸನೆ ನಡೆಸಬೇಕು.

**೬೨೮. ವಿಜಿತಾತ್ಮಾ – ಭಕ್ತರ ಮುಂದೆ ಸೋಲುವ ಸ್ವರೂಪವುಳ್ಳವನು.**

ವಿವರಣೆ: ಗೆಲ್ಲಲ್ಪಟ್ಟ ಸ್ವರೂಪವುಳ್ಳವನು. ಕರ್ಮಣಿ ಪ್ರಯೋಗದಲ್ಲಿರುವ ಇದನ್ನು ತರ್ಜುಮೆ ಮಾಡುವುದಾದರೆ 'ಸೋತಿರುವ ಆತ್ಮನು.' 'ಸೋತ ಸ್ವರೂಪದವನೇ' ಎಂದು ದೇವರನ್ನು ಹೊಗಳುವುದು. ಭಗವಂತನ ಸಾವಿರನಾಮಗಳಲ್ಲಿ 'ಸೋತವನು'- ಎಂಬ ಅರ್ಥದ ಇದೂ ಒಂದು ಹೆಸರು.

ಯಾರ ಮುಂದೆ ? ಭಕ್ತರ ಮುಂದೆ. ಭಕ್ತರ ಮುಂದೆ ದೇವರು ಸೋತಿದ್ದಾನೆ. ಅಂಬರೀಷನ ಪ್ರಸಂಗದಲ್ಲಿ ದೂರ್ವಾಸರ ಎದುರು ದೇವರೇ ಒಪ್ಪಿಕೊಂಡಿರುವನು - **'ಅಹಂ ಭಕ್ತಪರಾಧೀನಃ......'** ನಾನು ಭಕ್ತರ ಅಧೀನ - ಎಂದು.

ಚಿತ್ರಕಾರನೊಬ್ಬ ಶ್ರೀಕೃಷ್ಣನ ಭಾವಚಿತ್ರವನ್ನು ಬಿಡಿಸಿ, ದ್ವಾರಕೆಗೆ ಕೃಷ್ಣನಲ್ಲಿಗೆ ಹೋಗಿ ತೋರಿಸಿದನಂತೆ. ಕೂಡಲೇ ತನ್ನ ರೂಪವನ್ನು ಬದಲಾಯಿಸಿಕೊಂಡ ಕೃಷ್ಣ ಈ ಚಿತ್ರ ತನ್ನದ್ದಲ್ಲ ಎಂದನಂತೆ. ಆ ರೂಪವನ್ನೇ ಚಿತ್ರಿಸಿ, ಕೃಷ್ಣನೆದುರು ಚಿತ್ರವನ್ನು ತೋರಿಸಲು ಕೃಷ್ಣ ಆ ರೂಪವನ್ನು ಬದಲಾಯಿಸಿಕೊಂಡು ಚಿತ್ರ ತನ್ನದ್ದಲ್ಲ ಎನ್ನುವನು.

ಹೀಗೆ ಚಿತ್ರಕಾರ ಕೃಷ್ಣನ ಬದಲಾದ ಬೇರೆ ಬೇರೆ ರೂಪವನ್ನೇ ಚಿತ್ರಿಸಿದರೂ ಪುನಃ ಪುನಃ ತನ್ನ ರೂಪವನ್ನು ಬದಲಾಯಿಸುತ್ತ ಆ ಚಿತ್ರ ತನ್ನದ್ದಲ್ಲ ಎಂದು ವಾದಿಸುತ್ತಿದ್ದ ಕೃಷ್ಣನ ಚಮತ್ಕಾರದೆದುರು ಸೋತ ಚಿತ್ರಕಾರ ತನ್ನ ಗುರುಗಳಲ್ಲಿ ಈ ಬಗ್ಗೆ ವಿಚಾರಿಸಿದಾಗ ಅವರೊಂದು ಉಪಾಯವನ್ನು ಸೂಚಿಸುವರು. 'ಕೃಷ್ಣನೆದುರು ಒಂದು ನಿಲುಗನ್ನಡಿಯನ್ನು ಇಡು. ಅದರಲ್ಲಿ ಕಾಣಿಸುವುದೇ ಕೃಷ್ಣನ ರೂಪ' - ಎಂದು ತಿಳಿಸು.

ಅದರಂತೆ ಆ ಶಿಷ್ಯನು ಮಾಡಲು ಗುರುಗಳ ಉಪಾಯದೆದುರು ಕೃಷ್ಣ ಸೋಲುವನು.

ಹೀಗೆ ದೇವರು, ಕೃಷ್ಣ ಜ್ಞಾನಿಗಳಾದ ಭಕ್ತರ ಎದುರು ಸೋಲುವನು.

ಇದಕ್ಕೆ ಭೀಷ್ಮರೇ ಜ್ವಲಂತ ಉದಾಹರಣೆ. ಭಕ್ತರಾದ ಭೀಷ್ಮರ ಪ್ರತಿಜ್ಞೆಯನ್ನು ಪೂರೈಸುವುದಕ್ಕಾಗಿ ಕೃಷ್ಣ ತನ್ನ ಪ್ರತಿಜ್ಞೆಯನ್ನೂ ದೂರ ಮಾಡಿ ಅವರೆದುರು ಸೋತಿದ್ದನು.

ನಾವೂ 'ವಿಜಿತಾತ್ಮಾ'- ಎಂಬ ನಾಮದಿಂದ ಸ್ತುತಿಸುತ್ತ ದೇವರಲ್ಲಿ ನಮ್ಮೆದುರು ಸೋಲುವಂತೆ ಕೇಳಿಕೊಳ್ಳಬೇಕು. ಆಗ ದೇವರು ಹೇಳುವನು - 'ನೀನು ನನ್ನ ಭಕ್ತನಾದರಷ್ಟೇ ನಾನು ನಿನ್ನ ಎದುರು ಸೋಲುವೆನು.'

ಆದುದರಿಂದ ಭಗವಂತ ನಮ್ಮೆದುರೂ ಸೋಲುವಂತೆ ಅಂದರೆ ನಾವು ಹೇಳುವಂತೆ ಅವನು ಕೇಳಬೇಕೆಂದರೆ ನಾವು ಅವನ ಭಕ್ತರಾಗಬೇಕು.

**೬೨೯. ವಿಧೇಯಾತ್ಮಾ – * ಜೀವರು ತಮ್ಮ ಹೃದಯದಲ್ಲಿ ಧರಿಸಿಕೊಳ್ಳಲು ಯೋಗ್ಯವಾದ ಸ್ವರೂಪವುಳ್ಳವನು.**

*** ವಿನೀತನಾಗಿರುವವನು.**

**ವಿವರಣೆ :** ವಿಧೇಯ - ಧಾರಣೆಗೆ ಯೋಗ್ಯವಾದ ಆತ್ಮಾ - ಸ್ವರೂಪವುಳ್ಳವನೇ ವಿಧೇಯಾತ್ಮಾ.

ದೇವರು ಎಲ್ಲೆಡೆ ವ್ಯಾಪ್ತ. ಭಾರೀ ದೊಡ್ಡ ವಸ್ತು. ಅಂತಹವನನ್ನು ಹೃದಯದಲ್ಲಿ ಧಾರಣೆ ಮಾಡಲು ಸಾಧ್ಯವಿದೆಯೇ ? ಆನೆಯನ್ನು ಮಾನದಲ್ಲಿ ಹಿಡಿಯಲಿಕ್ಕೆ ಸಾಧ್ಯವೇ ? ವಾದಿರಾಜ ಸ್ವಾಮಿಗಳು ಕೇಳಿರುವರು -

**'ಆನೆಯ ಮಾನದಲ್ಲಿ ಅಡಗಿಸಿದವರುಂಟೆ'**

ದೇವಕಿಯ ಗರ್ಭದಲ್ಲಿ ಕೃಷ್ಣ ಇದ್ದು ಅವನಿಗೆ 'ಗರ್ಭವಾಸ' ಉಂಟು ಅನ್ನುವರಲ್ಲಾ? ಇದು ಹೇಗೆ ಸಾಧ್ಯ ? ಕೃಷ್ಣನೋ ಆನೆಯ ಮಾನದವನು, ಆನೆಯ

ಗಾತ್ರದವನು. ದೇವಕಿಯ ಉದರ ಪುಟ್ಟವಾದದ್ದು. ಅದರಲ್ಲಿ ಕೃಷ್ಣ ಇರಲು ಸಾಧ್ಯವೋ ಎಂದು ವಾದಿರಾಜರು ತರ್ಕಿಸಿರುವರು.

ಹಾಗಾದರೆ ದೇವರು ಎಲ್ಲಡೆ ವ್ಯಾಪ್ತನಾದವನೆಂದ ಮೇಲೆ ಅವನನ್ನು ನಮ್ಮ ಹೃದಯದಲ್ಲಿ ಇಟ್ಟುಕೊಳ್ಳಲು ಅವಕಾಶ ಇದೆಯೇ ? ಎಂದರೆ 'ವಿಧೇಯಾತ್ಮಾ'- ಎಂಬ ನಾಮದಿಂದ ಸಮಾಧಾನಿಸಲಾಗುವುದು. ಭಗವಂತನದ್ದು ಎಷ್ಟೇ ದೊಡ್ಡ ರೂಪವೇ ಆಗಿದ್ದಿರಲಿ, ಭಕ್ತರು ಭಕ್ತಿಯಿಂದ ಭಗವಂತನನ್ನು ತಮ್ಮ ಹೃದಯದಲ್ಲಿ ಧರಿಸಿಕೊಳ್ಳಬೇಕೆಂದು ಸಂಕಲ್ಪಿಸಿ, ಬಯಸಿದರೆಂದರೆ ಅವರ ಪುಟ್ಟ ಹೃದಯದಲ್ಲಿ ಹಿಡಿಸುವಷ್ಟೇ ಚಿಕ್ಕದಾದ ರೂಪವನ್ನೂ ತಾಳುವವನು ಭಗವಂತ. ಆದುದರಿಂದ ಅವನು 'ವಿಧೇಯಾತ್ಮಾ' - ಧಾರಣೆಗೆ ಯೋಗ್ಯವಾದ ಸ್ವರೂಪವುಳ್ಳವನು.

**'ಹೃದ್ಯಪೇಕ್ಷಯಾ ತು ಮನುಷ್ಯಾಧಿಕಾರತ್ವಾತ್'** - ಎಂಬ ಬ್ರಹ್ಮಸೂತ್ರದಲ್ಲಿ ಸಿದ್ಧಾಂತಿಸಿರುವಂತೆ, **'ಅಂಗುಷ್ಠಮಾತ್ರಃ ಪುರುಷಃ ಮಧ್ಯ ಆತ್ಮನಿ ತಿಷ್ಠತಿ'**- ಎಂಬ ಉಪನಿಷತ್ತು ಸಾರುತ್ತಿರುವಂತೆ ಭಗವಂತನು ಆಯಾ ವ್ಯಕ್ತಿಯ ಹೃದಯದಲ್ಲಿ ಆಯಾ ವ್ಯಕ್ತಿಯ ಹೆಬ್ಬೆರಳಿನ ಆಕಾರದಲ್ಲಿ ಇರುವನು. ಬೇರೆ ಬೇರೆ ವ್ಯಕ್ತಿಯ ಹೆಬ್ಬೆರಳಿನ ಆಕಾರ ಬೇರೆ ಬೇರೆ ಆಗಿರುವುದರಿಂದ ಆಯಾ ಆಕಾರಕ್ಕನುಗುಣವಾಗಿಯೇ ಭಗವಂತನ ರೂಪದ ಆಕಾರವೂ ಇರುವುದು.

ಮತ್ತೊಂದು ಅರ್ಥ - ವಿನೀತನಾಗಿರುವವನು. ನಮ್ಮ ಮಕ್ಕಳು, ನಮ್ಮ ವಂಶದವರು ನಮ್ಮ ಶಿಷ್ಯರು, ನಮ್ಮ ನೆರೆಕರೆಯುವರು - ನಮಗೆ ವಿನೀತರಾಗಿರಬೇಕೆಂದರೆ ದೇವರನ್ನು 'ವಿಧೇಯಾತ್ಮಾ' - ವಿನೀತನಾದವನೆಂದು ಉಪಾಸನೆ ಮಾಡಬೇಕು.

ಕೃಷ್ಣ ಭೀಷ್ಮರಲ್ಲಿಗೆ ತಾನೇ ಬಂದು ಅವರೆದುರು ಕುಳಿತುಕೊಂಡು ಅವರ ಉಪದೇಶವನ್ನು ತಾನೂ ಕೇಳಬೇಕೆಂದರೆ ಎಷ್ಟು ವಿನೀತನಾಗಿರಬೇಡ ! ಹೀಗೆ ಭೀಷ್ಮರು ಕೃಷ್ಣನ ವಿನಯಗುಣವನ್ನು ಅನುಭವಿಸುತ್ತ 'ವಿಧೇಯಾತ್ಮಾ' - ಎಂದು ಸ್ತುತಿಸಿರುವರು.

**೬೩೦. ಸತ್ಕೀರ್ತಿಃ – ಕಳಂಕವಿಲ್ಲದ, ಜೀರ್ಣಿಸಿಕೊಳ್ಳಲು ಯೋಗ್ಯವಾದ ಕೀರ್ತಿ ಉಳ್ಳವನು.**

**ವಿವರಣೆ : 'ಅಕಳಂಕ ಚರಿತನೆ ಆದಿನಾರಾಯಣ ಭಕ್ತರಿಗೆ ಒಲಿದು ಬಾ, ಯಾದವ ನೀ ಬಾ ಯದುಕುಲ ನಂದನ'** - ಎಂದು ದಾಸರು ಹಾಡಿರುವಂತೆ ಭಗವಂತನದ್ದು

ಕಳಂಕರಹಿತವಾದ ಕೀರ್ತಿ.

ಅಷ್ಟೇ ಅಲ್ಲ, ಜೀರ್ಣಿಸಿಕೊಳ್ಳಲು ಯೋಗ್ಯವಾದ ಕೀರ್ತಿ ಅವನದ್ದು. ಕೆಲವೊಮ್ಮೆ ಕೆಲವು ವ್ಯಕ್ತಿಗಳನ್ನು ವೇದಿಕೆಯ ಮೇಲೆ ಏರಿಸಿ, ಅವರಿಗೇ ಸಂಕೋಚವಾಗುವಷ್ಟು ಅಭಿನಂದನ ಭಾಷಣ ಮಾಡುವುದುಂಟು. ಸಮ್ಮಾನಿಸಿಕೊಳ್ಳುವವನಿಗೆ ಯಾವಾಗ ಈ ಅಭಿನಂದನ ಭಾಷಣ ನಿಲ್ಲುವುದಪ್ಪ ಎಂದೆನಿಸುತ್ತಿರುತ್ತದೆ !

ಭಗವಂತನಿಗೆ ಹಾಗಲ್ಲ, ಯಾರು ಎಷ್ಟು ಹೊಗಳಿದರೂ ಜೀರ್ಣಿಸಿಕೊಳ್ಳುವಂತಹ ವ್ಯಕ್ತಿತ್ವ ಅವನದ್ದು. ಆದುದರಿಂದಲೂ ಅವನು 'ಸತ್ಕೀರ್ತಿ'- ಒಳ್ಳೆಯ ಕೀರ್ತಿ ಉಳ್ಳವನು. ಕೀರ್ತಿ ನಮ್ಮನ್ನು ಅರಸಿಕೊಂಡು ಬರಬೇಕು. ಅದಿಲ್ಲದಿದ್ದರೆ ನಾವೇ ಕೀರ್ತಿಯ ಹಿಂದೆ ಸಾಗಬೇಕಾಗುವುದು. ದೇವರು ನಮ್ಮಲ್ಲಿಗೆ ಬರುವಂತಾಗಬೇಕು, ಅದಾಗದಿದ್ದರೆ ನಾವೇ ಅವನನ್ನು ಹೇಗೆ ಅರಸಿಕೊಂಡು ಹೋಗುವೆವೋ ಹಾಗೆ. ಆದರೆ ಸ್ವಲ್ಪ ಪ್ರಮಾಣದಲ್ಲಿ ಕೀರ್ತಿಯ ಬಯಕೆ ಇರಬೇಕೇ ಹೊರತು 'ಕೀರ್ತಿ ಕಾಮುಕ' ಎನಿಸುವಷ್ಟು ಕೀರ್ತಿಯ ಹುಚ್ಚು ಇರಬಾರದು. ಹೀಗೆ ಒಳ್ಳೆಯ ಕೀರ್ತಿ ನಮಗೆ ಸಿದ್ಧಿಸಬೇಕೆಂದರೆ ಭಗವಂತನನ್ನು 'ಸತ್ಕೀರ್ತಿ' - ಎಂದು ಉಪಾಸನೆ ಮಾಡಬೇಕು.

**೬೩೧. ಛಿನ್ನಸಂಶಯಃ – ಎಂದೆಂದೂ ಯಾವುದೇ ವಿಷಯದಲ್ಲಿ ಸಂಶಯವನ್ನು ತಾಳದವನು.**

**ವಿವರಣೆ:** 'ಸತ್ಯಸಂಕಲ್ಪ' ನಾದ 'ಸತ್ಯಕಾಮ' ನಾದ ಭಗವಂತನ ಸಂಕಲ್ಪಕ್ಕೆ, ಬಯಕೆಗೆ ಅನುಗುಣವಾಗಿಯೇ ಎಲ್ಲವೂ ನಡೆಯುವುದರಿಂದ ಯಾವುದೇ ವಿಷಯದಲ್ಲಿ ಸಂಶಯವನ್ನು ತಾಳದವನು ಭಗವಂತ.

ನಾವಾದರೆ ಇರುವ ಸಂಶಯವನ್ನು ಗುರುಗಳ ಉಪದೇಶದಿಂದ ಪರಹರಿಸಿಕೊಂಡು 'ಛಿನ್ನಸಂಶಯ'ರು - ಪರಿಹರಿಸಲ್ಪಟ್ಟ ಸಂಶಯವುಳ್ಳವರು. ಭಗವಂತನಿಗಾದರೆ ಯಾವ ವಿಷಯದಲ್ಲೂ ಸಂಶಯ ಪಡುವ ಅವಕಾಶವೇ ಇಲ್ಲದೆ ಇರುವುದರಿಂದ ಸಂಶಯವನ್ನು ತಾಳದೆ ಇರುವುದರಿಂದಲೇ ಅವನು 'ಛಿನ್ನಸಂಶಯ'.

**'ಸಂಶಯಾತ್ಮಾ ವಿನಶ್ಯತಿ'** - ಯಾವುದೇ ವಿಷಯದಲ್ಲಿ ಸಂಶಯವನ್ನು ಔದಾಸೀನ್ಯದಿಂದಾಗಿಯೋ, ಸಂಕೋಚದಿಂದಾಗಿಯೋ ಮನಸ್ಸಿನಲ್ಲಿ ಹಾಗೆಯೇ ಇಟ್ಟುಕೊಳ್ಳುವುದೆಂದರೆ ವಿಷವನ್ನು ಒಳಗೆ ಇಟ್ಟುಕೊಂಡಂತೆ, ಆದುದರಿಂದ ವಿಷ ಕುಡಿದವನು ಸಾಯುವಂತೆ ಸಂಶಯಗ್ರಸ್ತನಾದವನೂ ತತ್ತ್ವವನ್ನು ಸರಿಯಾಗಿ

ತಿಳಿಯದೆ ವಿನಾಶ ಹೊಂದಬೇಕಾದೀತೆಂದು ಕೃಷ್ಣ ಎಚ್ಚರಿಸಿರುವನು. ಆದುದರಿಂದ ಗುರುಗಳಲ್ಲಿ ಪರಿಪ್ರಶ್ನೆ ಮಾಡಿ ಸಂಶಯವನ್ನು ಪರಿಹರಿಸಿ ಕೊಳ್ಳಬೇಕು. ಪರಿಪ್ರಶ್ನೆ ಎಂದರೆ ಮತ್ತೆ ಮತ್ತೆ ಪ್ರಶ್ನೆ. ಒಮ್ಮೆ ಸಮಾಧಾನ ಕೇಳಿದಾಕ್ಷಣ ಸಂಶಯ ಪರಿಹಾರವಾಗಿಲ್ಲ ಎಂದರೆ ಅಷ್ಟಕ್ಕೇ ಹಿಂಜರಿಯದೆ ಸಂಕೋಚವಿಲ್ಲದೆ ಪುನಃ ಪುನಃ ಪ್ರಶ್ನಿಸಬೇಕು. ಹಾಗೆ ಪ್ರಶ್ನಿಸಿದಾಗ ಗುರುವಾದವನು ತಾಳ್ಮೆಯಿಂದ ಜಿಜ್ಞಾಸುವಿನ ಪ್ರಶ್ನೆಯನ್ನು ಅರ್ಥೈಸಿಕೊಂಡು ಅದಕ್ಕೆ ಸರಿಯಾದ ಸಮಾಧಾನವನ್ನು ನೀಡಿ ಅವನ ಪ್ರಶ್ನೆಯನ್ನು ಪರಿಹರಿಸಿದರಷ್ಟೇ 'ಗುರು' - ಎಂದು ಕರೆಸಿಕೊಳ್ಳಲು ಯೋಗ್ಯನಾಗುವನು. ಯಾಕೆಂದರೆ 'ಗಿರತೀತಿ ಗುರುಃ' - ಎಂಬುದಾಗಿ ಶಿಷ್ಯನ, ಜಿಜ್ಞಾಸುವಿನ ಸಂಶಯಗಳನ್ನು, ಪ್ರಶ್ನೆಗಳನ್ನು ಸಮಾಧಾನ ನೀಡಿ ನುಂಗಿ ಹಾಕುವನು, ಪರಿಹರಿಸುವನು ಎಂಬ ಆಶಯದಲ್ಲಿಯೇ ಅವನು 'ಗುರು' ಎನಿಸುವುದು.

ಈ ರೀತಿಯಾಗಿ ನಾವು ಗುರುಗಳ ಮೂಲಕ ಯಾವುದೇ ವಿಷಯದಲ್ಲಿ 'ಛಿನ್ನಸಂಶಯ' ರಾಗಬೇಕೆಂದರೆ ಭಗವಂತನನ್ನು 'ಛಿನ್ನಸಂಶಯ' ನಾಮದಿಂದ ಉಪಾಸನೆ ನಡೆಸಬೇಕು.

**ಉದೀರ್ಣಃ ಸರ್ವತಶ್ಚಕ್ಷುರನೀಶಃ ಶಾಶ್ವತಃ ಸ್ಥಿರಃ |**
**ಭೂಶಯೋ ಭೂಷಣೋ ಭೂತಿರ್ವಿಶೋಕಃ ಶೋಕನಾಶನಃ ||೬೭||**

**೬೩೨. ಉದೀರ್ಣಃ – ಉತ್ಕೃಷ್ಟವಾದ ತಿಳುವಳಿಕೆಯಿಂದಾಗಿ ದೊಡ್ಡವನಾಗಿರುವವನು.**

**ವಿವರಣೆ :** ಉದೀರ್ಣಶಬ್ದಕ್ಕೆ ದೊಡ್ಡವ ಎಂಬ ಅರ್ಥ. ಆಚಾರ್ಯರು ದೇವರ ದೊಡ್ಡತನವನ್ನು ಹೇಳುವಾಗ ಅಲ್ಲಲ್ಲಿ 'ಉದೀರ್ಣ' ಶಬ್ದವನ್ನೇ ಬಳಸುವರು.

ದ್ವಾದಶಸ್ತೋತ್ರದಲ್ಲಿ 'ಉದೀರ್ಣಮಜರಂ ದಿವ್ಯಂ.....' ಎಂದು ಉದೀರ್ಣ ಶಬ್ದದಿಂದ ದೇವರ ದೊಡ್ಡಸ್ತಿಕೆಯನ್ನು ಸ್ತುತಿಸಿರುವರು. ಹಾಗೆಯೇ ಅಣುಭಾಷ್ಯದಲ್ಲಿ 'ನಾರಾಯಣ ಗುಣೈಸರ್ವೈರುದೀರ್ಣಂ.....' ಎಂದು ಸಕಲಗುಣಗಳ ಉತ್ಕರ್ಷವನ್ನು ಉದೀರ್ಣಶಬ್ದದಿಂದಲೇ ಸಾರಿರುವರು. ಉದೀರ್ಣಶಬ್ದ ಸಾರುವ ದೊಡ್ಡತನ ಯಾವುದರಿಂದ ? ವಯಸ್ಸಿನಿಂದ ಇರಬಹುದು, ಜ್ಞಾನದಿಂದ ಇರಬಹುದು, ಸಾಮರ್ಥ್ಯದಿಂದ ಇರಬಹುದು. ಈ ಜಿಜ್ಞಾಸೆಯ ಪರಿಹಾರಕ್ಕೆ 'ಉದೀರ್ಣ' ಶಬ್ದವನ್ನು ಒಡೆಯಬೇಕು. ಉತ್ - ಉತ್ಕೃಷ್ಟನಾಗಿರುವ ಈರ್ಣ - ತಿಳುವಳಿಕೆ ಉಳ್ಳವನು. ಹಾಗಾದರೆ 'ಉದೀರ್ಣ' ಎನಿಸಿರುವ ಭಗವಂತನ ದೊಡ್ಡತನ, ಉದೀರ್ಣಪ್ರಯುಕ್ತವಾಗಿ ಅಂದರೆ ಉತ್ಕೃಷ್ಟವಾದ ತಿಳುವಳಿಕೆಯಿಂದಾಗಿ.

ತಿಳಿದದ್ದನ್ನು ಮರೆಯಬಾರದು, ತಿಳುವಳಿಕೆಯಲ್ಲಿ ಅಜ್ಞಾನ, ವಿಪರೀತ ಜ್ಞಾನ, ಸಂಶಯಗಳು ಬೆರೆತಿರಬಾರದು. ಆಗಷ್ಟೇ ಆ ತಿಳುವಳಿಕೆ ಉತ್ಕೃಷ್ಟವೆನಿಸುವುದು. ಹೀಗೆ ಉತ್ಕೃಷ್ಟ ತಿಳುವಳಿಕೆಯಿಂದಾಗಿ ಭಗವಂತ ಉದೀರ್ಣ, ದೊಡ್ಡವನೆನಿಸಿರುವನು.

ನಮ್ಮಲ್ಲೂ ಐಶ್ವರ್ಯಕ್ಕಿಂತಲೂ ತಿಳುವಳಿಕೆಗೆ ಹೆಚ್ಚು ಪ್ರಾಶಸ್ತ್ಯ ತೋರಿಸುವ ಪರಿಪಾಠ ಇನ್ನೂ ಇದೆ. **'ವಿತ್ತಂ ಬಂಧುರ್ವಯಃ ಕರ್ಮ ವಿದ್ಯಾ ಚೈವ ಪಂಚಮೀ ಏತಾನಿ ಮಾನ್ಯಸ್ಥಾನಾನಿ ಗರೀಯೋ ಹ್ಯುತ್ತರೋತ್ತರಮ್'** - ಎಂಬ ಪ್ರಮಾಣದಲ್ಲಿಯೂ ವಿದ್ಯೆಗೆ ಐಶ್ವರ್ಯಾದಿಗಳಿಗಿಂತೆಲ್ಲ ಅಧಿಕ ಮಹತ್ತ್ವವನ್ನು ನೀಡಲಾಗಿದೆ.

ಅಂತೆಯೇ ಭಗವಂತನೂ ಉತ್ಕೃಷ್ಟ ತಿಳುವಳಿಕೆಯನ್ನು ಹೊಂದಿರುವುದರಿಂದಲೇ 'ಉದೀರ್ಣ' - ದೊಡ್ಡವನು ಎಂದೆನಿಸಿರುವನು.

**೬೩೩. ಸರ್ವತಶ್ಚಕ್ಷುಃ – * ಎಲ್ಲೆಡೆ ದೃಷ್ಟಿ ಉಳ್ಳವನು.**

*** ತನ್ನ ಎಲ್ಲ ಇಂದ್ರಿಯಗಳಲ್ಲೂ ನೋಡುವ ಸಾಮರ್ಥ್ಯ ಉಳ್ಳವನು.**

**ವಿವರಣೆ :** ಮಹಾಭಾರತ ಯುದ್ಧದಲ್ಲಿ ಶ್ರೀಕೃಷ್ಣ 'ಸರ್ವತಶ್ಚಕ್ಷುಃ' ಎನಿಸಿ ಹೇಗೆ ಅರ್ಜುನನಿಗೆ ಬರಬಹುದಾಗಿದ್ದ ಆಪತ್ತುಗಳನ್ನು ಪರಿಹರಿಸುತ್ತಿದ್ದ ಎಂಬುದನ್ನು ಅಲ್ಲಲ್ಲಿ ತೋರಿಸಿ ಕೊಡಲಾಗಿದೆ.

**'ಆ ನೋ ಭದ್ರಾ ಕ್ರತವೋ ಯಂತು ವಿಶ್ವತಃ'**- ಎಂದಿರುವಂತೆ ನಾವೂ 'ಸರ್ವತಶ್ಚಕ್ಷು' ಗಳಾಗಬೇಕು. ಅಂದರೆ ಹತ್ತು ದಿಕ್ಕುಗಳಿಂದಲೂ ಒಳ್ಳೆಯ ವಿಚಾರಗಳನ್ನು ಸ್ವೀಕರಿಸುತ್ತಿರಬೇಕು. ಭಗವಂತನನ್ನು 'ಸರ್ವತಶ್ಚಕ್ಷುಃ' - ಎಂದು ಉಪಾಸನೆ ಮಾಡುವುದರಿಂದ ಈ ಗುಣ ನಮ್ಮಲ್ಲಿ ಸಿದ್ಧಿಸಬಹುದು.

ಭಗವಂತ ಮತ್ತೊಂದು ಅರ್ಥದಲ್ಲೂ 'ಸರ್ವತಶ್ಚಕ್ಷುಃ'- ಅಂದರೆ ಅವನ ಕಣ್ಣು ಮಾತ್ರ ಕಾಣುವುದಲ್ಲ. ಕಿವಿಯೂ ಕಾಣಬಲ್ಲದು, ಕೈಯೂ ಕಾಣಬಲ್ಲದು. ಕಾಣುವ ಇಂದ್ರಿಯವನ್ನು 'ಚಕ್ಷುಃ' ಎಂದು ಕರೆಯುವುದರಿಂದ ಅವನು ತನ್ನ ಎಲ್ಲ ಇಂದ್ರಿಯಗಳಿಂದಲೂ ನೋಡುವುದರಿಂದ ಅವನ ಎಲ್ಲ ಇಂದ್ರಿಯಗಳೂ ಚಕ್ಷುಸ್ ಎಂದು ಕರೆಸಿಕೊಳ್ಳಲರ್ಹವಾದವು. ಆದುದರಿಂದ ಅವನು 'ಸರ್ವತಶ್ಚಕ್ಷುಃ'- ಯಾರ ಪ್ರತಿಯೊಂದು ಇಂದ್ರಿಯವೂ 'ಚಕ್ಷುಷ್' ಆಗಿದೆಯೋ ಅಂತಹವನು.

ಬರೇ 'ಚಕ್ಷುಷ್' ಎದೇ ಅಲ್ಲ, ಕೇಳುವುದು, ಮೂಸುವುದು ಇತ್ಯಾದಿ ಕಿವಿ, ಮೂಗು ಮುಂತಾದ ಇತರ ಇಂದ್ರಿಯಗಳ ಕೆಲಸಗಳನ್ನೂ, ಪ್ರತಿಯೊಂದು

ಇಂದ್ರಿಯವೂ ನಡೆಸುತ್ತಿದ್ದು ಅವನು ‘ಸರ್ವತಶ್ಚಕ್ಷುಃ’ ಎನಿಸಿರುವಂತೆ ‘ಸರ್ವತಃ ಘ್ರಾಣ’ ‘ಸರ್ವತಃ ಶ್ರೋತ್ರ’ - ಇತ್ಯಾದಿಯೂ ಆಗಿರುವನು.

ಕೆಲವು ವರ್ಷಗಳ ಹಿಂದೆ ಪತ್ರಿಕೆಯೊಂದರಲ್ಲಿ ‘ಕಂಕುಳ ಕಿವಿಯಿಂದ ಓದುವ ಸಹೋದರಿಯರು’ - ಎಂಬ ಶೀರ್ಷಿಕೆಯೊಂದಿಗೆ ಇಬ್ಬರು ಸಹೋದರಿಯರು ಪತ್ರಿಕೆಯನ್ನು ತಮ್ಮ ಕಂಕುಳಲ್ಲಿ ಇಟ್ಟುಕೊಂಡೇ ಕಣ್ಣು ಮುಚ್ಚಿಕೊಂಡು ಓದುತ್ತಿರುವರೆಂದು ವರದಿ ಪ್ರಕಟವಾಗಿತ್ತು.

ಹೀಗೆ ಇಂತಹ ಅಪರೂಪದ ವಿಚಿತ್ರ ಶಕ್ತಿ ಎಲ್ಲಾದರೂ ಕಾಣಸಬೇಕೆಂದಿದ್ದರೆ, ಅದು ಬಿಂಬದಲ್ಲಿ ಇದ್ದಿರಲೇಬೇಕು ತಾನೇ ? ಭಗವಂತನು ‘ಸರ್ವತಶ್ಚಕ್ಷುಃ’ ಆಗಿರುವುದರಿಂದಲೇ ಅದರ ಪ್ರತಿಫಲನ ರೂಪದಿಂದ ಆ ಸಹೋದರಿಯರು ತಮ್ಮ ಕಂಕುಳ ಮೂಲಕ ಓದುವ ಸಾಮರ್ಥ್ಯ ಪಡೆದುಕೊಂಡಿದ್ದರೆಂದು ಸ್ಪಷ್ಟ.

**೬೩೪. ಅನೀಶಃ – ಮುಖ್ಯಪ್ರಾಣನಿಗೂ ಒಡೆಯ.**

**ವಿವರಣೆ :** ಅನಿ + ಈಶಃ ಅನೀಶಃ | ಅನ ಎಂಬುದಕ್ಕೆ ಪ್ರ ಎಂಬ ಉಪಸರ್ಗವನ್ನು ಜೋಡಿಸಿದಾಗ ನಮಗೆ ಅದರ ಅರ್ಥ ಸ್ಪಷ್ಟವಾಗುವುದು - ಪ್ರಾಣ - ಅಂದರೆ ಚೇಷ್ಟೆ. ಸಾಯುವ ಸ್ಥಿತಿಯಲ್ಲಿರುವ ವ್ಯಕ್ತಿಯ ಬಗ್ಗೆ ‘ಪ್ರಾಣ ಇದೆಯಾ ನೋಡಿ’ ಎಂದು ವಿಚಾರಿಸುವೆವು. ಪ್ರಾಣ ಎಂದರೆ ಎದೆ ಕೆಳಗೆ ಮೇಲೆ ಹೋಗುವ ಚೇಷ್ಟೆ ಎಂದೇ ಅರ್ಥ. ಹೀಗೆ ‘ಅನ’ ಎನಿಸುವ ಚೇಷ್ಟೆ ವಿಶೇಷವಾಗಿ ಉಳ್ಳವ ‘ಅನೀ’ - ಮುಖ್ಯಪ್ರಾಣ. ಯಾಕೆಂದರೆ ಉಳಿದವರಲ್ಲೂ ಚೇಷ್ಟೆಯನ್ನು ತುಂಬುವವನು ಅವನು. ಅಂತಹ ‘ಅನೀ’ಗೂ ಈಶನಾದವನು, ಅವನಿಗೂ ಚೇಷ್ಟೆ ಕೊಟ್ಟು ತೊಡಗಿಸುವ ಸ್ವಾಮಿ ಭಗವಂತ.

ಭೀಮಸೇನ ಮಹಾಭಾರತಯುದ್ಧದಲ್ಲಿ ನೂರು ಮಂದಿ ಕೌರವರನ್ನೂ ಸದೆ ಬಡಿಯುವಷ್ಟು ಪರಾಕ್ರಮಿಯಾಗಿ ನಡೆದುಕೊಳ್ಳಲು ಶ್ರೀಕೃಷ್ಣನ ಪ್ರೇರಣೆಯೇ ಕಾರಣ.

ಆದುದರಿಂದ ಭಗವಂತ ‘ಅನೀಶ’ ಮುಖ್ಯಪ್ರಾಣನಿಗೂ ಒಡೆಯ.

**೬೩೫. ಶಾಶ್ವತಃ – ಯಾವಾಗಲೂ ಒಂದೇ ರೀತಿಯಾಗಿ ಇರುವವನು.**

**ವಿವರಣೆ :** ‘ಶಾಶ್ವತಸ್ಥಿರಃ’ - ಎಂದು ಎರಡು ಶಬ್ದಗಳನ್ನೂ ಸೇರಿಸಿ ಒಂದು ನಾಮವನ್ನಾಗಿಯೂ ವ್ಯಾಖ್ಯಾನಿಸುವುದುಂಟು. ಆದರೆ ಎರಡು ಶಬ್ದಗಳು ಬೇರೆ ಬೇರೆಯೇ ನಾಮ ಎಂದು ಪರಿಗಣಿಸುವುದರಲ್ಲೇ ಹೆಚ್ಚು ಸ್ವಾರಸ್ಯ ಇದೆ. ಆದುದರಿಂದ

'ಶಾಶ್ವತ ' - ಎಂಬ ನಾಮವನ್ನು ಈಗ ನೋಡೋಣ.

ಶಶ್ವತ್ ಏಕಪ್ರಕಾರನಾಗಿ ಅಂದರೆ ಯಾವಾಗಲೂ ಒಂದೇ ರೀತಿಯಾಗಿ ಇರುವವನೇ ಶಾಶ್ವತ.

ದೈಹಿಕವಾಗಿ, ವಾಚಿಕವಾಗಿ ಹಾಗೂ ಮಾನಸಿಕವಾಗಿ ಏರು ಪೇರು ಬರಬಹುದು. ಆದರೆ ದೇವರಲ್ಲಿ ಮೂರು ಬಗೆಯ ಏರುಪೇರುಗಳೂ ಇಲ್ಲ. ಸನಕಾದಿ ಋಷಿಗಳೂ ಶಾಶ್ವತರಾಗಿ ಇರುವರೆಂದು ಬಂದಿದೆ. ಭಗವಂತನನ್ನು ಶಾಶ್ವತನನ್ನಾಗಿ ಉಪಾಸನೆ ಮಾಡಿದ್ದರಿಂದಲೇ ಅವರಿಗೆ ಅಂತಹ ಶಾಶ್ವತತ್ವ ಬಂತು.

ನಮಗೆ ದೈಹಿಕವಾದ ಶಾಶ್ವತತ್ವ ಅಲ್ಲದಿದ್ದರೂ ಮಾನಸಿಕವಾಗಿಯಾದರೂ ಶಾಶ್ವತತ್ವವು, ಅಂದರೆ ಮಾನಸಿಕವಾಗಿ ಹೆಚ್ಚು ಏರುಪೇರಿಗೆ ಒಳಗಾಗದೆ ಸಮಚಿತ್ತರಾಗಿ ಇರುವ ಸ್ಥಿತಿ ಸಿದ್ಧಿಸಲು ಭಗವಂತನನ್ನು 'ಶಾಶ್ವತ' ಎಂದು ಉಪಾಸನೆ ಮಾಡಬೇಕು.

**೬೩೬. ಸ್ಥಿರಃ – ನಾಶಕ್ಕೆ ಒಳಗಾಗದವನು.**

**ವಿವರಣೆ:** ಹೀಗೆ ಭಗವಂತನು ಶಾಶ್ವತನಾಗಿರವುದರಿಂದಲೇ, ಅಂದರೆ ಯಾವಾಗಲೂ ಒಂದೇ ರೀತಿಯಾಗಿರುವುದರಿಂದಲೇ ಅವನು ಸ್ಥಿರ. ಚತುರ್ಮುಖ ಶಾಶ್ವತ ಅಲ್ಲ. ಆದುದರಿಂದಲೇ ಇನ್ನು ಐವತ್ತು ವರ್ಷಗಳ ಅನಂತರ ಚತುರ್ಮುಖ ಇಲ್ಲ.

ಹಾಗಾದರೆ ಸ್ಥಿರವಾಗಿರಬೇಕೆಂದರೆ ಶಾಶ್ವತನಾಗಿ ಇರಲು ರೂಢಿಸಿಕೊಳ್ಳಬೇಕು. ಮಾನಸಿಕ ಏರುಪೇರುಗಳಿಗೆ ಒಳಗಾಗದೆ 'ಸಮಚಿತ್ತ'ನಾಗಿದ್ದರೆ ನೂರುವರ್ಷಕಾಲ ಸ್ಥಿರನಾಗಿರಬಹುದು. **'ಮಿಥಿಲಾಯಾಂ ಪ್ರದೀಪ್ತಾಯಾಂ ನ ಮೇ ದಹ್ಯತಿ ಕಿಂಚನ'**- ಮಿಥಿಲಾಪಟ್ಟಣ ಸುಟ್ಟರೆ ನನ್ನದ್ದೇನೂ ಸುಟ್ಟಿಲ್ಲ - ಎಂದು ಉದ್ಘೋಷಿಸಿದ ಜನಕರಾಜನಂತೆ, ಮನೆಯ ಗೋಡೆ ಬಿದ್ದರೆ ಜಗಲಿಯಲ್ಲಿ ಮಲಗುವೆನು ಎನ್ನುವಷ್ಟು ನಿರ್ಲಿಪ್ತನಾಗಿ ಇದ್ದರೆ ಅಂತಹವನು ನೂರು ವರ್ಷ ಸ್ಥಿರನಾಗಿ ಇರಬಹುದು.

ಜೀವರಿಗೆ ಮೋಕ್ಷಾವಸ್ಥೆಯಲ್ಲಿ ಈ ಬಗೆಯ ಶಾಶ್ವತತ್ವವು ಸಿದ್ಧಿಸುವುದರಿಂದಲೇ ಅವರು 'ಸ್ಥಿರ'ರಾಗಿ ಇರುವರು.

**೬೩೭. ಭೂಶಯಃ – * ರಾಮಾವತಾರದಲ್ಲಿ ಭೂಮಿಯ ಮೇಲೆ ಮಲಗಿದವನು.**
*** ಪಾರ್ಥಿವ ಶರೀರಗಳಲ್ಲಿ ಮಲಗಿರುವವನು.**

**ವಿವರಣೆ :** ಭುವಿ ಶೇತೇ ಇತಿ ಭೂಶಯಃ, ಭೂಮಿಯ ಮೇಲೆ ಮಲಗಿದವನು. ಇದೇ ಕೃಷ್ಣ ರಾಮನಾಗಿ ಬಂದಿದ್ದಾಗ ಭೂಮಿಯ ಮೇಲೆ ದರ್ಭೆ ಹಾಸಿ

ಮೂರುದಿನಗಳ ಕಾಲ ನೆಲದ ಮೇಲೆ ಮಲಗಿದ್ದನು. ಸಮುದ್ರರಾಜ ಲಂಕೆಗೆ ಹೋಗಲು ಅವಕಾಶ ನೀಡಬೇಕೆಂದು. ಈಗಲೂ ರಾಮೇಶ್ವರದಲ್ಲಿ ಶ್ರೀ ರಾಮಚಂದ್ರ 'ಭೂಶಯ'ನಾಗಿದ್ದ ಸ್ಥಳವನ್ನು ತೋರಿಸುವರು. ಇದೊಂದು ರಾಮಾವತಾರಕ್ಕೆ ಸಂಬಂಧಿಸಿದ ಅರ್ಥ.

ಮತ್ತೊಂದು ಅರ್ಥ -'ಭೂ' - ಎಂದರೆ ನಮ್ಮ ನಿಮ್ಮ ಶರೀರ. ಯಾಕೆ ? ಇದು ಪಾರ್ಥಿವ ಶರೀರ. ದೇವತೆಗಳದ್ದು ತೈಜಸ ಶರೀರ. ಅದರಲ್ಲಿ ಮಣ್ಣು, ನೀರಿಗಿಂತ ತೇಜಸ್ಸು ಅಧಿಕ. ನಮ್ಮ ಶರೀರದಲ್ಲಿ ನೀರು, ಬೆಂಕಿಗಿಂತ ಪಾರ್ಥಿವಾಂಶ ಅಧಿಕವಾಗಿರುವುದರಿಂದ ಇದು 'ಪಾರ್ಥಿವ' - 'ಪೃಥಿವೀ'. ಆದುದರಿಂದಲೇ 'ಭೂ' ಭವತೀತಿ ಭೂಃ- ಇರುವಂತಹದ್ದು. ದೇವರು ಇದರಲ್ಲಿ ಇರುವುದರಿಂದ ಇದು 'ಭೂ' ಎನಿಸಿದೆ. ಇಂತಹ ಶರೀರದಲ್ಲಿ ಭಗವಂತನು ಶೇತೇ - ಆರಾಮವಾಗಿ ಇರುವುದರಿಂದ 'ಭೂಶಯ' ಎನಿಸುವನು.

ಭೀಷ್ಮರು ಎದುರಿಗಿರುವ ಕೃಷ್ಣನನ್ನು ಭೂಶಯ ನಾಮದಿಂದ ವಿಶೇಷವಾಗಿ ಉಪಾಸನೆ ಮಾಡುತ್ತಿದ್ದಾರೆ. ಕೃಷ್ಣನು ತಮ್ಮ ಶರೀರದಲ್ಲಿ ಇದ್ದುಕೊಂಡು 'ಭೂಶಯ' ಎನಿಸಿರುವುದರಿಂದಷ್ಟೇ ತಾವು ಹೀಗೆ ಉಪದೇಶ ನೀಡಲು ಸಮರ್ಥರಾಗಿರುವರು.

**೬೩೮. ಭೂಷಣಃ – * ಜಗತ್ತಿಗೆ ಆಭರಣದಂತೆ ಇರುವವನು.**

*** ಕೃಷ್ಣಾವತಾರದಲ್ಲಿ ಕೌರವರಿಂದ ಕಸಿದುಕೊಂಡು ಪಾಂಡವರಿಗೆ ಭೂದಾನ ಮಾಡಿದವನು.**

*** ಪರಶುರಾಮಾವತಾರದಲ್ಲಿ ದುಷ್ಟಕ್ಷತ್ರಿಯರಿಂದ ಕಸಿದುಕೊಂಡು ಬ್ರಾಹ್ಮಣರಿಗೆ ಭೂದಾನ ಮಾಡಿದವನು.**

*** ಶರೀರವೆಂಬ ಭೂವನ್ನು ದಾನಮಾಡುವವನು.**

**ವಿವರಣೆ:** ಭೂಷಣ ಎಂದಾಕ್ಷಣ ನಮಗೆ ಆಭರಣ ಎಂಬ ಅರ್ಥ ಹೊಳೆಯುವುದು. ಮತ್ತೊಂದು ಅರ್ಥ ಷಣ ಎಂದರೆ ದಾನ ಮಾಡಿದವನು. ಭೂ ಎಂದರೆ ಭೂಮಿ. ಆದುದರಿಂದ ಭೂಷಣ ಎಂದರೆ ಭೂಮಿಯನ್ನು ದಾನ ಮಾಡಿರುವವನು ಎಂಬ ಅರ್ಥ ಸಿದ್ಧಿಸುವುದು.

ಯಾವ ಭೂಮಿ ? ಈ ಶರೀರವೇ ಭೂಮಿ. ಶರೀರವನ್ನು ಕಳಕೊಂಡ ಮೇಲೆ ಮತ್ತೊಮ್ಮೆ ಹುಟ್ಟುವುದು ನಿಶ್ಚಿತ. ಆಗ ನಮಗೆ 'ಭೂಷಣ' ನಾಗಿ - ಒಳ್ಳೆಯ ಭೂಮಿ - ಒಳ್ಳೆಯ ಮಾನವ ಶರೀರ, ಅದರಲ್ಲೂ ಬ್ರಾಹ್ಮಣ ಶರೀರ, ಅದರಲ್ಲೂ

ವೈಷ್ಣವ ಶರೀರ, ಅದರಲ್ಲೂ ಮಾಧ್ವಶರೀರವನ್ನು ದಾನ ಮಾಡುವವನಾಗಿ ಅನುಗ್ರಹಿಸುವನು. ದೇಹ ಸಾಧನಾನುಷ್ಠಾನಕ್ಕೆ ಸಮರ್ಥವಾಗಿರುವವರೆಗೆ ದೇವರನ್ನು 'ಭೂಶಯ' - ಎಂದು ಉಪಾಸನೆ ಮಾಡಿ, ಇನ್ನೇನು ಶರೀರದಿಂದ ಯಾವುದೇ ಬಗೆಯ ಸಾಧನಾನುಷ್ಠಾನ ಸಾಧ್ಯವಿಲ್ಲ ಎಂದಾಗ ಭಗವಂತನನ್ನು 'ಭೂಷಣ'- ಒಳ್ಳೆಯ- ಅಂದರೆ ಸಾಧನಾನುಷ್ಠಾನಕ್ಕೆ ಅನುಕೂಲವಾಗುವ 'ಭೂ' ವನ್ನು ಶರೀರವನ್ನು ದಾನ ಮಾಡುವವನನ್ನಾಗಿ ಉಪಾಸನೆ ಮಾಡಬೇಕು.

ಕೃಷ್ಣಾವತಾರದಲ್ಲಿ ಕೌರವರಿಂದ ಕಿತ್ತುಕೊಂಡು ಪಾಂಡವರಿಗೆ ಭೂದಾನ ಮಾಡಿದವನು. ಪರಶುರಾಮಾವತಾರದಲ್ಲಿ ದುಷ್ಟ ಕ್ಷತ್ರಿಯರನ್ನೆಲ್ಲ ಸದೆಬಡೆದು ಅವರಿಂದ ಭೂಮಿಯನ್ನು ಕಸಿದುಕೊಂಡು ಅದನ್ನು ಬ್ರಾಹ್ಮಣರಿಗೆ ದಾನ ಮಾಡಿದವನು - ಇವೆಲ್ಲ 'ಭೂಷಣ' ನಾಮದಿಂದ ಅರ್ಥಗಳು ಹೊರಡುವವಾದರೂ ನಮಗೆ ಅನುಸಂಧಾನಕ್ಕೆ ಹೆಚ್ಚು ಉಪಯುಕ್ತವಾಗುವ ಅರ್ಥ - ಭೂ ಎನ್ನುವ ಶರೀರವನ್ನು ಷಣ - ದಾನ ಮಾಡುವವನು ಎಂಬುದು.

**೬೩೯. ಭೂತಿಃ – ಐಶ್ವರ್ಯ ಸ್ವರೂಪಿ.**

**ವಿವರಣೆ :** ಅಷ್ಟು ಭೂದಾನ ಮಾಡಲು ಬೇಕಾದ ಸಾಮರ್ಥ್ಯ ಅವನಲ್ಲಿ ಇದೆ ಎಂದು ಮುಂದಿನ ನಾಮದಲ್ಲಿ ಸೂಚಸಲಾಗಿದೆ - 'ಭೂತಿಃ' ಐಶ್ವರ್ಯ ಸ್ವರೂಪಿ. ನಾವೆಲ್ಲ ಐಶ್ವರ್ಯವುಳ್ಳವರಾದರೆ ಭಗವಂತ ಸ್ವಯಂ ಐಶ್ವರ್ಯವೇ ಆಗಿರುವನು.

ಸಂಪತ್ತು ಯಾವಾಗಲೂ ನಮ್ಮ ಜೊತೆಗೇ ಇರುವುದಿಲ್ಲ. ಕೆಲವೊಮ್ಮೆ ನಮ್ಮನ್ನು ಬಿಟ್ಟು ಹೋಗುವುದೂ ಇದೆ. ಆದ್ದರಿಂದ ನಾವು ಸಂಪತ್ತು ಉಳ್ಳವರೆನಿಸಿಕೊಳ್ಳುವೆವೇ ಹೊರತು ಸಂಪತ್ ಸ್ವರೂಪರೆನಿಸಿಕೊಳ್ಳುವುದಿಲ್ಲ. ದೇವರಾದರೂ ಯಾವಾಗಲೂ ಸಂಪತ್ತಿನಿಂದ ಕೂಡಿಕೊಂಡೇ ಇರುವುದರಿಂದ ಸಂಪತ್ತು ಎಂದೂ ಅವನನ್ನು ಬಿಟ್ಟು ಹೊಗದಿರುವುದರಿಂದ ಅವನು 'ಭೂತಿ'- ಐಶ್ವರ್ಯ ಎಂದೇ ಎನಿಸುವನು. ಹೇಗೆ ಬುದ್ಧಿಯ ಜೊತೆಗೇ ಯಾವಾಗಲೂ ಇರುವವರು 'ಬುದ್ಧಿ' ಎಂದೇ ಕರೆಸಿಕೊಳ್ಳಲ್ಪಡುವರೋ ಹಾಗೆ.

**'ಚೋರನೆನಿಸಿಕೊಳ್ಳಬೇಡವೋ ಲಕ್ಷ್ಮೀನಾರಾಯಣನೆಂಬ ಬಿರುದು ನಿನಗೆ ಯಾತಕೋ'** - ಎಂದು ದಾಸರು ಹಾಡಿರುವಂತೆ ದೇವರು ಕೃಷ್ಣಾವತಾರದಲ್ಲಿ ಹಾಲು ಬೆಣ್ಣೆ ಕದ್ದು ಚೋರನಾಗಿರುವನೆಂದು ಆರೋಪ ಇದೆ. ಆದರೆ ಯಾರಲ್ಲಿ ಪದಾರ್ಥ ಇರುವುದಿಲ್ಲವೋ ಅವರು ಕದಿಯಬೇಕಷ್ಟೇ. ಕೃಷ್ಣನಲ್ಲಾದರೂ ಯಾವುದರ ಕೊರತೆಯೂ ಇಲ್ಲದಿರುವುದರಿಂದ ಕದಿಯುವುದಾದರೂ ಯಾತಕ್ಕಾಗಿ?

‘ಲಕ್ಷ್ಮೀನಾರಾಯಣ’ ಎಂಬ ಬಿರುದು ಹೊತ್ತಿದ್ದಾನೆಂದ ಮೇಲೆ ಸಕಲಸಂಪತ್ತೂ ಅವನಲ್ಲಿ ಯಾವಾಗಲೂ ಇದೆ ಎಂದರ್ಥ. ಅಂತಹವನು ಕದಿಯುವುದಾದರೂ ಯಾತಕ್ಕಾಗಿ ? ಕದಿಯದಿದ್ದರೆ ‘ಚೋರ’ ಎನಿಸಿಕೊಳ್ಳುವುದಾದರೂ ಹೇಗೆ ? ಆದ್ದರಿಂದ ‘ಲಕ್ಷ್ಮೀನಾರಾಯಣ’ ಎನಿಸುವ ನೀನು ಚೋರನೆನಿಸುವುದು ಉಚಿತವಲ್ಲ- ಎಂದು ದಾಸರು ಸ್ತುತಿಸುವರು.

ಹೀಗೆ ದೇವರು ಭೂಮಿಯ ಸಂಪತ್ತು, ಜ್ಞಾನದ ಸಂಪತ್ತು, ಆನಂದದ ಸಂಪತ್ತು, ದೇಹದ ಸಂಪತ್ತು ಹೀಗೆ ಎಲ್ಲ ಸಂಪತ್ತುಗಳನ್ನೂ ಯಾವಾಗಲೂ ಹೊಂದಿದ್ದು ‘ಭೂತಿ’- ಎಂದೇ ಸ್ತುತನಾಗಿರುವುದರಿಂದ ಅಂತಹವನಲ್ಲಿ ಭೂ ರೂಪವಾದ ಸಾಧನಾನುಷ್ಠಾನಕ್ಕೆ ಯೋಗ್ಯವಾದ ಶರೀರವನ್ನು ದಾನವಾಗಿ ಬೇಡಿಕೊಂಡರೆ ‘ಭೂಷಣ’ ಎನಿಸಿ ಅಂತಹ ಶರೀರವನ್ನು ದಾನಮಾಡಬಲ್ಲನು.

**೬೪೦. ವಿಶೋಕಃ – ಯಾವುದರ ಬಗ್ಗೆಯೂ ಕೊರಗುವಿಕೆ ಇಲ್ಲದವನು.**

ವಿವರಣೆ : ಶೋಕವಿಲ್ಲದವನು ವಿಶೋಕ. ಶೋಕ ಎಂದರೆ ದುಃಖ, ಕೊರಗುವಿಕೆ. ದುಃಖಕ್ಕೊಳಗಾದವರು ತಮ್ಮೊಳಗೊಳಗೆಯೇ ಕೊರಗುತ್ತಿರುವರು. ಭಗವಂತನಾದರೂ ಎಂದೂ ಹೀಗೆ ಕೊರಗುವವನಲ್ಲ. ಯಾವ ದೃಷ್ಟಿಯಲ್ಲೂ, ಯಾವುದರ ಬಗ್ಗೆಯೂ ಕೊರಗುವಿಕೆ ದೇವರಲ್ಲಿ ಇಲ್ಲ.

ಶಿಶುಪಾಲ ದುರ್ಯೋಧನಾದಿಗಳು ಕೃಷ್ಣನನ್ನು ಎಷ್ಟೇ ಬೈದರೂ ಟೀಕಿಸಿದರೂ ಆ ಬಗ್ಗೆ ಸ್ವಲ್ಪವೂ ಕೊರಗದವನು ಕೃಷ್ಣ.

ಆಗಬೇಕಾದ, ನಡೆಯಬೇಕಾದ ಘಟನೆ ನಡೆದೇ ತೀರುವುದೆಂದ ಮೇಲೆ ಅದರ ಬಗ್ಗೆ ಕೊರಗುವುದರಲ್ಲಿ ಅರ್ಥವಿಲ್ಲ. ಹೀಗೆ ನಾವು ಕೊರಗದೆ ಬಾಳಬೇಕೆಂದರೆ ಭಗವಂತನನ್ನು ‘ವಿಶೋಕಃ’ - ಕೊರಗದವನು ಎಂದು ಉಪಾಸನೆ ಮಾಡಬೇಕು.

**೬೪೧. ಶೋಕನಾಶನಃ – ಶೋಕವನ್ನು ಪರಿಹರಿಸುವವನು.**

ವಿವರಣೆ: ಭಗವಂತನನ್ನು ‘ವಿಶೋಕಃ’ - ಎಂದು ಉಪಾಸನೆ ನಡೆಸಿದರೆ, ಅದರಿಂದ ಪ್ರಸನ್ನನಾಗುವ ಭಗವಂತ ನಮ್ಮನ್ನು ಹೇಗೆ ಅನುಗ್ರಹಿಸುವನೆಂಬುದನ್ನು ಮುಂದಿನ ನಾಮ ತಿಳಿಸುವುದು - ‘ಶೋಕನಾಶನಃ’. ನಮ್ಮ ಪಾಲಿಗೆ ಬರತಕ್ಕ ಶೋಕವನ್ನು, ಕೊರಗುವಿಕೆಯನ್ನು ಪರಿಹರಿಸುವವನು. ಕೆಲವೊಮ್ಮೆ ಶೋಕ ಬಂದ ಮೇಲೆ ಪರಿಹರಿಸಿದರೆ, ಮತ್ತೆ ಕೆಲವೊಮ್ಮೆ ಶೋಕ ಬರುವ ಮುಂಚೆಯೇ ಅದು ನಮ್ಮಲ್ಲಿಯವರೆಗೆ ಬರದಂತೆ ಮಾಡಿಯೂ ಪರಿಹರಿಸುವನು.

**ಅರ್ಚಿಷ್ಮಾನರ್ಚಿತಃ ಕುಂಭೋ ವಿಶುದ್ಧಾತ್ಮಾ ವಿಶೋಧನಃ |**
**ಅನಿರುದ್ಧೋಽಪ್ರತಿರಥಃ ಪ್ರದ್ಯುಮ್ನೋಽಮಿತವಿಕ್ರಮಃ || ೬೮ ||**

**೬೪೨. ಅರ್ಚಿಷ್ಮಾನ್ – * ಅಧಿಕ ಕಿರಣಗಳುಳ್ಳವನು.**
*** ಎಲ್ಲರಿಂದಲೂ ಪೂಜಿಸಿಕೊಳ್ಳಬೇಕಾದ ಗುಣಗಳುಳ್ಳವನು.**

**ವಿವರಣೆ :** 'ಅರ್ಚಿಃ' ಉಳ್ಳವನೇ ಅರ್ಚಿಷ್ಮಾನ್. ಅರ್ಚನೆಗೆ ಬೇಕಾದ ಗುಣಗಳೇ ಅರ್ಚಿಃ ಅರ್ಚನೆ ಎಂದರೆ ಪೂಜೆ, ಗೌರವ. ಗೌರವವನ್ನು ಅರ್ಪಿಸಿಕೊಳ್ಳಲು ಬೇಕಾದ ಗುಣವುಳ್ಳವನೇ ಅರ್ಚಿಷ್ಮಾನ್, ಅಂದರೆ ಪೂಜ್ಯನೇ ಅರ್ಚಿಷ್ಮಾನ್ ಎಂದಂತಾಗುವುದು. ಪೂಜಿಸಿಕೊಳ್ಳಲು ಬೇಕಾದ ಗುಣಗಳುಳ್ಳವನು ; ಆರಾಧಿಸಿಕೊಳ್ಳಲು ಬೇಕಾದ ಧರ್ಮಗಳು ಉಳ್ಳವನು - ಅರ್ಚಿಷ್ಮಾನ್

ಅರ್ಚಿಷ್ಮಾನ್ ನಾಮದಿಂದ ಥಟ್ಟನೆ ಹೊಳೆಯುವ ಅರ್ಥ ಕಿರಣಗಳುಳ್ಳವನು. ಸೂರ್ಯ ಕಿರಣಗಳುಳ್ಳವನಾದುದರಿಂದಲೇ 'ಅರ್ಚಿಷ್ಮಾನ್' ಎನಿಸುವನು. ಹೊಳೆಯುವ ಕಿರಣವನ್ನು ಕಂಡಾಕ್ಷಣ 'ಹೋ !' ಎಂದು ಉದ್ಗಾರ ಎತ್ತುವೆವು. ಈ ಉದ್ಗಾರ ಪೂಜ್ಯತ್ವದ ಸಂಕೇತವೂ ಆಗಬಲ್ಲದು.

ಆದುದರಿಂದ ಕಿರಣಗಳನ್ನು ಹೊಂದಿರುವುದರಿಂದಲೂ, ಪೂಜ್ಯನಾಗಿರುವುದರಿಂದಲೂ 'ಅರ್ಚಿಷ್ಮಾನ್' ಎನಿಸಿರುವ ಸೂರ್ಯನಿಗಿಂತಲೂ ಅಧಿಕ ಹೊಳೆಯುವ ಕಿರಣಗಳನ್ನು ಹೊಂದಿರುವವನೂ, ಸೂರ್ಯನಿಗಿಂತಲೂ ಅಧಿಕ ಪೂಜ್ಯನೂ ಆಗಿರುವ ಭಗವಂತ ಮುಖ್ಯವಾಗಿ 'ಅರ್ಚಿಷ್ಮಾನ್' ಎನಿಸಿರುವನು.

**೬೪೩. ಅರ್ಚಿತಃ – ಯಾವಾಗಲೂ ಎಲ್ಲರಿಂದಲೂ ಪೂಜಿಸಲ್ಪಡುವವನು.**

**ವಿವರಣೆ :** 'ಅರ್ಚಿಷ್ಮಾನ್' ಎನಿಸುವ ಭಗವಂತನು ಅರ್ಚಿಸಿಕೊಳ್ಳಲು ಬೇಕಾದ ಗುಣಗಳನ್ನು ಹೊಂದಿರುವುದರಿಂದಲೇ ಅರ್ಚಿತ, ಎಲ್ಲರಿಂದಲೂ ಪೂಜಿಸಲ್ಪಡುವವನು.

**'ಸ್ವರ್ಚಿತೋ ಬ್ರಹ್ಮರುದ್ರೇಂದ್ರಪೂರ್ವೈಃ ಸದಾ........'** - ಎಂಬುದಾಗಿ ದ್ವಾದಶ ಸ್ತೋತ್ರದಲ್ಲಿ ಶ್ರೀಮಧ್ವರು ಭಗವಂತನನ್ನು 'ಸ್ವರ್ಚಿತ' - ಎಂದು ಸ್ತುತಿಸಿರುವರು. ಚೆನ್ನಾಗಿ ಪೂಜಿಸಲ್ಪಡುವವನೇ ಸ್ವರ್ಚಿತ. ಚೆನ್ನಾಗಿ ಪೂಜಿಸಲ್ಪಡುವುದೆಂದರೆ ಹೇಗೆ ? ಬ್ರಹ್ಮ, ರುದ್ರಾದಿಗಳಿಗಿಂತೆಲ್ಲ ಚೆನ್ನಾಗಿ ಪೂಜಿಸಲ್ಪಡುವವನು. ಹೇಗೆ ಒಂದು ಮನೆಯಲ್ಲಿ ಅಣ್ಣನಿಗಿಂತ ಅಪ್ಪನಿಗೆ ಹೆಚ್ಚು ಗೌರವ ; ಅಪ್ಪನಿಗಿಂತ ಅಮ್ಮನಿಗೆ ಹೆಚ್ಚು ಗೌರವ - ನೀಡಲಾಗುವುದು ಅನುಭವ

ಸಿದ್ಧವಾದುದೋ ಹಾಗೆ ಭಗವಂತ ಬ್ರಹ್ಮರುದ್ರಾದಿ ಇತರ ದೇವತೆಗಳಿಗಿಂತ ಚೆನ್ನಾಗಿ ಪೂಜಿಸಲ್ಪಡುವುದೂ ಅನುಭವ ಸಿದ್ಧವಾದುದು.

ಅರ್ಚಿತ ಶಬ್ದ 'ಕ್ತ' ಎಂಬ ಪ್ರತ್ಯಯ ಬಂದು ನಿಷ್ಪನ್ನವಾದುದು. ಕ್ತಪ್ರತ್ಯಯ ಹೆಚ್ಚಾಗಿ ಭೂತಾರ್ಥದಲ್ಲಿ ವಿಧಿಸಲ್ಪಡುವುದಾದರೂ ದೇವರ ಬಗ್ಗೆ ಏನನ್ನಾದರೂ ಕ್ತಪ್ರತ್ಯಯಾಂತ ಶಬ್ದದಿಂದ ತಿಳಿಸುವಾಗ ಅಲ್ಲಿಯ ಕ್ತಪ್ರತ್ಯಯ ಸಾರ್ವಕಾಲಿಕ ಎನಿಸಿದ್ದು, ಅದರ ಸಮೀಪದ ಕ್ರಿಯೆಗೆ ಸರ್ವಕಾಲದ ಸಂಬಂಧವನ್ನು ತಿಳಿಸುವುದು.ಆದ್ದರಿಂದ 'ಅರ್ಚಿತ' - ಎಂಬುದಕ್ಕೆ ಹಿಂದೆ ಪೂಜಿಸಲ್ಪಟ್ಟವನು ಎಂಬ ಅರ್ಥದ ಬದಲು ಯಾವಾಗಲೂ ಪೂಜಿಸಲ್ಪಡುವವನು ಎಂಬ ಅರ್ಥ.

**೬೪೪. ಕುಂಭಃ – ಸಮುದ್ರಗಳಲ್ಲಿ, ದೇಹಗಳಲ್ಲಿ ನೀರನ್ನು ಧಾರಣೆ ಮಾಡುವವನು.**

**ವಿವರಣೆ :** ಮಡಿಕೆಯನ್ನು ಕುಂಭ ಎಂದು ಕರೆಯಲಾಗುವುದು. **'ಕುಂ ಬಿಭರ್ತೀತಿ ಕುಂಭಃ'** ಕು ಎಂದರೆ ಜಲ. ಅಂತಹ ಜಲವನ್ನು ಧಾರಣೆ ಮಾಡುವುದರಿಂದ ಮಡಿಕೆ ಕುಂಭ ಎನಿಸುವುದು. ಭಗವಂತನು ನೀರಿಗೆ ಧಾರಕನಾಗಿರುವುದರಿಂದ ಕುಂಭ ಎನಿಸುವನು. 'ಸಮುದ್ರಶಾಯಿ' ಎನಿಸಿರುವ ಭಗವಂತನಿಗೆ ಸಮುದ್ರದ ನೀರು ಆಶ್ರಯ ಎಂದು ನಾವು ಭಾವಿಸುವುದುಂಟು. ಆದರೆ ಸಮುದ್ರದ ನೀರಿಗೂ ಆಶ್ರಯ ಭಗವಂತನೇ. ಆದುದರಿಂದಲೇ ವೈಶಾಖ ಮಾಸದಲ್ಲಿ ಉಳಿದೆಲ್ಲ ಜಲಾಶಯಗಳ ನೀರು ಬತ್ತಿದರೂ ಸಮುದ್ರದಲ್ಲಿ ನೀರು ಹಾಗೆಯೇ ಇರುವುದು. 'ಕುಂಭ' ನಾಮಕ ಭಗವಂತ ಸಮುದ್ರದ ನೀರು ಬತ್ತದಂತೆ ನೋಡಿಕೊಂಡಿರುವನು.

ಹೀಗೆ ಸಮುದ್ರದ ನೀರಿಗಿಂತಲೂ ನಮ್ಮ ದೇಹದಲ್ಲೂ ನೀರಿನ ಅಂಶ ಬತ್ತಿ ಹೋಗದಂತೆ ದೇವರು ನೋಡಿಕೊಂಡಿರುವನು.

ದೇಹದಲ್ಲಿ ನೀರಿನ ಅಂಶ ಬತ್ತಿ ಹೋಗಬಾರದೆಂದು ಕೆಲವರು ಆಗಾಗ್ಗೆ ನೀರು ಕುಡಿಯುತ್ತಿರುತ್ತಾರೆ.

ಏಕಾದಶಿಯಂದು ಒಂದು ಬಿಂದು ನೀರನ್ನೂ ಕುಡಿಯದೇ ಇರುವುದೆಂದರೆ ಕೆಲವರಿಗೆ ತುಂಬ ಆಶ್ಚರ್ಯ ಸಂಗತಿಯಾಗಿ ಕಾಣಿಸುವುದು. ವಾಸ್ತವವಾಗಿ ದೇಹದ ಬೇಕು ಬೇಡಗಳನ್ನು ನಾವು ಇಟ್ಟುಕೊಂಡಂತೆ ಇರುವುದು. ಯಾವುದೋ ಊರಿಗೆ ಹೋದಾಗ ಅಲ್ಲಿ 'ಸ್ಟ್ರೈಕ್' ಇತ್ತೆಂದರೆ ಅನಿವಾರ್ಯವಾಗಿ ನಾವು ಉಪವಾಸವಿರುವುದಿಲ್ಲವೇ ? ಹಾಗೆಯೇ ಏಕಾದಶಿಯಂದು ಇಂದು ನೀರನ್ನೂ

ಕಂಕಣಬದ್ಧನಾಗಿ ದೀಕ್ಷೆತೊಟ್ಟು ಹದಿನೆಂಟು ದಿನಗಳವರೆಗೆ ನಡೆದ ಪ್ರತಿಯೊಂದು ಘಟನೆಗೂ ತಲೆಕೊಟ್ಟು ಪಾಂಡವರ ಶಿಬಿರದ ದಹನರೂಪವಾದ ಅವಭೃತವನ್ನು ನಡೆಸಿದ ಶ್ರೀಕೃಷ್ಣನೇ 'ಮಹಾಕ್ರತು.'

ದೇವಸ್ಥಾನದಲ್ಲಿ ಉತ್ಸವಕ್ಕೆ ಕಂಕಣ ತೊಟ್ಟ ತಂತ್ರಿಗಳೇ ಸತ್ತರೆ ಹೇಗೋ ಹಾಗೆ ಯುದ್ಧದ ಮಧ್ಯದಲ್ಲೇ ದುರ್ಯೋಧನ ಸತ್ತ. ಆದರೂ ಕೃಷ್ಣ ಮಹಾಭಾರತ ಕ್ರತುವನ್ನು ಮುಂದುವರಿಸಿದ್ದ.

**೬೮೪. ಮಹಾಯಜ್ವಾ– ಮಹಾಭಾರತ ಯುದ್ಧ ಎಂಬ ಯಜ್ಞದಲ್ಲಿ ಮಡಿದವರನ್ನೆಲ್ಲ ತನ್ನ ಆಹುತಿಯಾಗಿ ಸ್ವೀಕರಿಸಿದವನು.**

ವಿವರಣೆ : 'ಯಜ್ವಾ' - ಎಂದರೆ ಯಜ್ಞದಲ್ಲಿ ಆಹುತಿ ನೀಡುವವನು. ಈಗ ಪುರೋಹಿತರೇ ಆ ಕೆಲಸವನ್ನು ನಡೆಸುತ್ತಿರುವರು. ಆದರೆ ಪುರೋಹಿತರು ಮಂತ್ರ ಹೇಳಬೇಕು, ಯಜಮಾನ ಆಹುತಿಗಳನ್ನು ಹಾಕಿ 'ಯಜ್ವಾ' ಆಗಬೇಕು.

ಮಹಾಭಾರತ ಯುದ್ಧದಲ್ಲಿ ಸೇನಾಧಿಪತಿಗಳು, ಯೋಧರು, ಸೈನಿಕರು ಇವರೆಲ್ಲ ಕಾದಾಡಿ ತಮ್ಮ ತಮ್ಮ ಶತ್ರುಗಳನ್ನು ಕೊಂದಿದ್ದಿರಬಹುದು. ಆದರೆ ಅವರೆಲ್ಲರ ಆಹುತಿಯನ್ನು ಮೊದಲೇ ಸ್ವೀಕರಿಸಿದವನು ಶ್ರೀಕೃಷ್ಣ. ಅರ್ಜುನನಿಗೆ ದರ್ಶನ ನೀಡಿದ ವಿಶ್ವರೂಪದ ಬಾಯಿಯೊಳಗೆ ಭೀಷ್ಮಾದಿಗಳೆಲ್ಲ ಆಹುತಿಯಾಗಿ ಸೇರಿಸಿಕೊಳ್ಳುವುದನ್ನೂ ಕಾಣಲಾಗಿತ್ತು. ಕೃಷ್ಣನೆಂಬ ವೇದಿಕೆ, ಕೃಷ್ಣನ ಬಾಯಿಯೆಂಬ ಯಜ್ಞಕುಂಡ. ಕೃಷ್ಣನ ನಾಲಗೆಯೇ ಅಗ್ನಿಯ ಜ್ವಾಲೆ. ಮುಂದೆ ಹದಿನೆಂಟು ದಿನಗಳ ಯುದ್ಧದಲ್ಲಿ ಸಾಯಬೇಕಾದವರೆಲ್ಲ ಕೃಷ್ಣನ ನಾಲಗೆ ಎಂಬ ಅಗ್ನಿಜ್ವಾಲೆಯೊಳಗೆ ಸೇರಿಕೊಳ್ಳುವುದನ್ನು ಅರ್ಜುನ ಕಂಡಿದ್ದ.

ಆದುದರಿಂದಲೇ ಮಹಾಭಾರತ ಯುದ್ಧ ಎಂಬ ಯಜ್ಞದಲ್ಲಿ 'ಮಹಾಯಜ್ವಾ' ಶ್ರೀಕೃಷ್ಣ.

ದೇವರನ್ನು 'ಮಹಾಯಜ್ವಾ' ಎಂದು ಉಪಾಸನೆ ನಡೆಸಿದಲ್ಲಿ ದೊಡ್ಡ ದೊಡ್ಡ ಧಾರ್ಮಿಕ ಕಾರ್ಯಕ್ರಮಗಳು ನಮ್ಮ ಯಜಮಾನಿಕೆಯಲ್ಲಿ ನಡೆಯುವಂತೆ ಭಗವಂತನು ಅನುಗ್ರಹಿಸುವನು.

**೬೮೫. ಮಹಾಯಜ್ಞಃ– ಯಾರ ಸಂಕಲ್ಪಕ್ಕನುಗುಣವಾಗಿ ಯಜ್ಞಗಳು ಯಶಸ್ವಿಯಾಗಿ ನಡೆಯುವವೋ ಅಂತಹವನು.**

ವಿವರಣೆ : ದೀಕ್ಷೆಯಾಗಲೀ, ಅವಭೃತವಾಗಲೀ ಇಲ್ಲದೆ, ಅಲ್ಪಾವಧಿಯಲ್ಲೂ

ನಡೆಸಬಹುದಾದ ಯಜ್ಞ ಯಾರ ಮೂಲಕವೇ ನಡೆಯಲಿ ಅದು ದೇವರ ಸಂಕಲ್ಪಕ್ಕನುಗುಣವಾಗಿಯೇ ನಡೆಯುವುದು.

ಭೀಷ್ಮರಾಗಲೀ, ದ್ರೋಣರಾಗಲೀ ಮಹಾಭಾರತ ಯುದ್ಧಯಜ್ಞದ ಹದಿನೆಂಟು ದಿನಗಳಲ್ಲೂ ಪಾಲ್ಗೊಳ್ಳಲಿಲ್ಲ. ಕೆಲವು ದಿನಗಳಷ್ಟೇ ಪಾಲ್ಗೊಳ್ಳಬೇಕೆಂದು ಕೃಷ್ಣನ ಸಂಕಲ್ಪ ಇತ್ತು. ಆದುದರಿಂದ ಅಷ್ಟೇ ದಿನದ ಯಜ್ಞವನ್ನು ನಡೆಸಿದರಷ್ಟೇ.

ಜ್ಞಾನಯಜ್ಞದಲ್ಲಿ ಪಾಲ್ಗೊಂಡ ಒಬ್ಬ ವ್ಯಕ್ತಿ ಇಂದು ಹತ್ತು ನಿಮಿಷ ಕಾಲವಷ್ಟೇ ಪ್ರವಚನವನ್ನು ಕೇಳಿ ಮನೆಗೆ ಮರಳಿ ಹೋಗಬೇಕೆಂದು ನಿಶ್ಚಯಿಸಿರುತ್ತಾನೆ. ತನ್ನನ್ನು ಕರೆಯಲು ಬರುವವರಿಗೆ ತಾನು ಹತ್ತು ನಿಮಿಷಾವಧಿಯಲ್ಲಿಯೇ ಹಿಂತಿರುಗುವುದಾಗಿ ತಿಳಿಸಿರುವನು ಕೂಡಾ. ಅವನಿಗೆ ತನ್ನನ್ನು ಕರೆಯಲು ಅನುಕೂಲವಾಗಬೇಕು. ಸಭೆಯ ಮಧ್ಯದಿಂದ ಅರ್ಧದಲ್ಲಿ ಏಳುವುದು ಸರಿಯಾಗುವುದಿಲ್ಲ - ಎಂದು ರಾಜಾಂಗಣದ ದ್ವಾರದಲ್ಲಿಯೇ ಕುಳಿತಿರುತ್ತಾನೆ. ಕರೆಯಲಿಕ್ಕೆ ಬಂದವನು ಸರಿಯಾಗಿ ಹತ್ತು ನಿಮಿಷಕ್ಕೆ ಬರುತ್ತಾನೆ. ಆದರೆ ಅವನಿಗೆ ಇವನು ದ್ವಾರದಲ್ಲಿಯೇ ಕುಳಿತಿರಬಹುದೆಂಬ ಕಲ್ಪನೆ ಇಲ್ಲ. ಇವನು ಮಾಮೂಲಾಗಿ ಕುಳಿತುಕೊಳ್ಳುವ ಆಸನದ ಹತ್ತಿರವೇ ನೋಡುತ್ತಿರುತ್ತಾನೆ. ಎಷ್ಟು ಹುಡುಕಿದರೂ ಸಿಗುವುದಿಲ್ಲ. ಹೀಗೆ ಹುಡುಕಾಡಿ ಹುಡುಕಾಡಿ ಇಪ್ಪತ್ತು ನಿಮಿಷ ಕಳೆದ ಮೇಲೆ ಪಕ್ಕನೆ ದ್ವಾರದಲ್ಲಿಯೇ ಇವನು ಕುಳಿತಿರುವುದು ಕಾಣುವುದು. ಇದರಿಂದಾಗಿ ಇವನು ಹತ್ತೇ ನಿಮಿಷ ಉಪಾನ್ಯಾಸ ಕೇಳಬೇಕೆಂದು ಸಂಕಲ್ಪಿಸಿದ್ದರೂ ಶ್ರೀಕೃಷ್ಣ ಇವನನ್ನು ಇಪ್ಪತ್ತು ನಿಮಿಷ ಜ್ಞಾನಯಜ್ಞದಲ್ಲಿ ಪಾಲ್ಗೊಳ್ಳುವಂತೆ ಮಾಡಬೇಕೆಂದು ಸಂಕಲ್ಪಿಸಿದ್ದರಿಂದ ಶ್ರೀಕೃಷ್ಣನ ಸಂಕಲ್ಪಕ್ಕೆ ಅನುಗುಣವಾಗಿ ಇವನು ಇಪ್ಪತ್ತು ನಿಮಿಷ ಕಾಲ ಜ್ಞಾನಯಜ್ಞದಲ್ಲಿ ಪಾಲ್ಗೊಳ್ಳುವಂತಾಗುವುದು.

ಹೀಗೆ ಭಗವಂತನ ಸಂಕಲ್ಪಕ್ಕನುಗುಣವಾಗಿಯೇ ಪ್ರತಿಯೊಬ್ಬರ ಮೂಲಕವೂ ಜ್ಞಾನಯಜ್ಞ, ಜೀವನಯಜ್ಞ, ಭೋಜನಯಜ್ಞ, ದ್ರವ್ಯಯಜ್ಞ ಈ ರೀತಿಯಾಗಿ ಎಲ್ಲ ಬಗೆಯ ಯಜ್ಞಗಳೂ ನಡೆಯುವುದರಿಂದ ಅವನೇ 'ಮಹಾಯಜ್ಞಃ'.

**೬೮೬. ಮಹಾಹವಿಃ – ಎಲ್ಲರಿಂದಲೂ ಯಾವಾಗಲೂ ಆಮಂತ್ರಿಸಲ್ಪಡುವವನು.**

ವಿವರಣೆ : ಎಲ್ಲರಿಂದಲೂ ಸದಾ ಕಾಲ ಮುಖ್ಯವಾಗಿ ಆಮಂತ್ರಿಸಲ್ಪಡುವವನು. ಮಹಾಕ್ರತುತ್ವ, ಮಹಾಯಜಮಾನಿಕೆ, ಮಹಾಯಜ್ಞ- ಇಷ್ಟೆಲ್ಲ ಯಾರಲ್ಲಿ ಉಂಟೋ ಅವನೇ ನಾಳೆ ಸಮಾಜದಲ್ಲಿ 'ಮಹಾಹವಿ' ಆಗುವನು.

'ಹವಿಃ' - ಎಂದರೇನು? ಹೂಯತೇ ಇತಿ. ಆಮಂತ್ರಿಸಲ್ಪಡುವವನೇ ಹವಿಃ. ಹವಿಸ್ಸು ಕೂಡಾ ದೇವತೆಗಳಿಂದ ಆಮಂತ್ರಿಸಲ್ಪಡುವುದೆಂಬ ಅರ್ಥದಲ್ಲಿಯೇ 'ಹವಿ' ಎನಿಸಿದೆ. ದೇವತೆಗಳು ಯಾವುದನ್ನು ನಮ್ಮಿಂದ ನಿರೀಕ್ಷೆ ಮಾಡುವರೋ ಅದು ಹವಿಸ್. ಪ್ರಾಣಹೋದ ಮೇಲೆ ನಮ್ಮ ಶರೀರವನ್ನು ಅಗ್ನಿಯು ನಿರೀಕ್ಷೆ ಮಾಡುವನು. ಆದುದರಿಂದಲೇ ಹೆಣ ಅಗ್ನಿಗೆ ಹವಿಸ್ ಎನಿಸಿದೆ.

ಕೃಷ್ಣ ನಮ್ಮಲ್ಲಿಗೆ ಬರಬೇಕು. ಕೃಷ್ಣ ನಮ್ಮನ್ನು ಕಾಣಬೇಕು, ಕೃಷ್ಣ ನಮ್ಮ ಜೊತೆಗೆ ಮಾತನಾಡಬೇಕು ಹೀಗೆ ಕೃಷ್ಣ ಎಲ್ಲರಿಂದಲೂ ಯಾವಾಗಲೂ ಆಮಂತ್ರಿಸಲ್ಪಡುವುದರಿಂದ ಅವನು 'ಮಹಾಹವಿಃ'. ಅವನಲ್ಲಿ ಮಹಾಕ್ರತುತ್ವಾದಿ ಧರ್ಮಗಳಿರುವುದರಿಂದಲೇ ಅವನು ಎಲ್ಲರಿಂದ ಆಮಂತ್ರಿಸಲ್ಪಡುವವನಾಗಿ 'ಮಹಾಹವಿಃ' - ಎನಿಸಿರುವನು.

ನಾವು ಕೂಡಾ ಸಮಾಜದಲ್ಲಿ ಎಲ್ಲರಿಂದ ಆಮಂತ್ರಿಸಲ್ಪಡುವಂತೆ ಆಗಬೇಕೆಂದರೆ ಭಗವಂತನನ್ನು ಮಹಾಹವಿಃ ಎಂದು ಉಪಾಸನೆ ಮಾಡಬೇಕು.

**ಸ್ತವ್ಯಃ ಸ್ತವಪ್ರಿಯಃ ಸ್ತೋತ್ರಂ ಸ್ತುತಿಃ ಸ್ತೋತಾ ರಣಪ್ರಿಯಃ |**
**ಪೂರ್ಣಃ ಪೂರಯಿತಾ ಪುಣ್ಯಃ ಪುಣ್ಯಕೀರ್ತಿರನಾಮಯಃ || ||೭೩||**

**೬೮೭. ಸ್ತವ್ಯಃ – ಪ್ರತಿಯೊಂದು ಶಬ್ದದಿಂದಲೂ ಸ್ತುತಿಸಿಕೊಳ್ಳಲು ಬೇಕಾದ ಅರ್ಹತೆಯನ್ನೂ, ನಡೆಸುವ ಸ್ತುತಿಯನ್ನು ದಕ್ಕಿಸಿಕೊಳ್ಳಲು ಬೇಕಾದ ತಾಕತ್ತನ್ನೂ ಹೊಂದಿರುವವನು.**

ವಿವರಣೆ : ಯಾರನ್ನು ಹೊಗಳಬೇಕು ? ನಮ್ಮ ಹೊಗಳಿಕೆಯನ್ನು ದಕ್ಕಿಸಿಕೊಳ್ಳುವ ತಾಕತ್ತು ಯಾರಿಗುಂಟೋ ಅವರನ್ನು ಹೊಗಳಬೇಕು. ಅಂತಹವರನ್ನು 'ಸ್ತವ್ಯಃ'- ಎಂದು ಕರೆಯುವರು. ಹೊಗಳಿಸಿಕೊಳ್ಳಲಿಕ್ಕೆ ಯೋಗ್ಯನಾದವನು ಎಂಬುದು ಅದರ ಅರ್ಥ.

ಕೆಲವೊಮ್ಮೆ ಯಾವುದೋ ಕಟ್ಟಡಕ್ಕೆ ವ್ಯಕ್ತಿಯೊಬ್ಬನ ನೆರವು ಬೇಕೆಂದು ಸಮ್ಮಾನ ಸಭೆಯೊಂದನ್ನು ಏರ್ಪಡಿಸಿ, ಅದರಲ್ಲಿ ಅವನನ್ನು ಹೊಗಳುವುದುಂಟು. ಆದರೆ ನಮ್ಮ ಹೊಗಳಿಕೆಯನ್ನು ದಕ್ಕಿಸಿಕೊಳ್ಳುವ ತಾಕತ್ತು ಅವನಲ್ಲಿ ಇರುವುದಿಲ್ಲ. ದೇವರಲ್ಲಿ ಆದರೆ ಯಾವ ಶಬ್ದವನ್ನು ಬಳಸಿದರೂ ಅದರಿಂದ ಹೊಗಳಿಸಿಕೊಳ್ಳಲು ಬೇಕಾದ ಅರ್ಹತೆ ಇದೆ.

ಹೊಗಳುವ ಶಬ್ದಗಳಾದರೆ ಅವುಗಳಿಂದ ಸ್ತುತಿ ಎನಿಸಿದರೆ, ತೆಗಳುವ ಶಬ್ದಗಳಾದರೆ ಅವುಗಳಿಂದ ನಿಂದಾಸ್ತುತಿ ಎನಿಸುವುದು.

'ನೀನ್ಯಾಕೋ ನಿನ್ನ ಹಂಗ್ಯಾಕೋ ನಿನ್ನ ನಾಮದ ಬಲವೊಂದಿದ್ದರೆ ಸಾಕೋ'- ಎಂದು ನಿನ್ನ ಹಂಗು ನನಗೆ ಬೇಕಿಲ್ಲ ಎಂದರೂ ದೇವರಿಗೇನೂ ಬೇಸರವಿಲ್ಲ. ನಾನು ಮಾಡಬೇಕಾದ ಕೆಲಸವನ್ನು ನನ್ನ ನಾಮವೇ ಮಾಡುವುದಲ್ಲ - ಎಂದು ಅವನಿಗೆ ಸಂತೋಷವೇ ಆಗುವುದು.

ಕೃಷ್ಣ ತಾನು ಮಹಾಭಾರತಯುದ್ಧದಲ್ಲಿ ಯಾವುದೇ ಆಯುಧವನ್ನು ಹಿಡಿದು ಪಾಲ್ಗೊಳ್ಳುವುದಿಲ್ಲ ಎಂದು ಮಾಡಿದ್ದ ಪ್ರತಿಜ್ಞೆಯನ್ನು ಮುರಿದು ಆಯುಧವನ್ನು ಹಿಡಿಯುವಂತೆ ನಾನು ಮಾಡುವೆನು ಎಂದು ಭೀಷ್ಮರು ಮಾಡಿರುವ ಪ್ರತಿಜ್ಞೆಯಿಂದಲೂ ಕೃಷ್ಣ ಸ್ತವ್ಯನೇ. ಭಕ್ತರಿಗಾಗಿ ತನ್ನ ಪ್ರತಿಜ್ಞೆಯನ್ನು ಮುರಿಯಲು ಸಿದ್ಧನಾಗುವಷ್ಟು ಭಕ್ತವತ್ಸಲನಾಗಿರುವವನೆಂದು ಅವನ ಸ್ತುತಿಯೇ ನಡೆದಂತಾಗಿದೆ.

ಹೀಗೆ ಪ್ರತಿಯೊಂದು ಶಬ್ದದಿಂದಲೂ ಸ್ತುತಿಸಿಕೊಳ್ಳಲು, ಬೇಕಾದ ಅರ್ಹತೆಯನ್ನೂ, ನಡೆಸಿದ ಸ್ತುತಿಯನ್ನು ದಕ್ಕಿಸಿಕೊಳ್ಳಲು ಬೇಕಾದ ತಾಕತ್ತನ್ನೂ ಹೊಂದಿರುವುದರಿಂದ ದೇವರು ಸ್ತವ್ಯ ಎನಿಸುವನು.

ದೇವರನ್ನು 'ಸ್ತವ್ಯ' - ಎಂದು ಉಪಾಸನೆ ಮಾಡಿದಾಗ ನಮ್ಮ ಯೋಗ್ಯತೆಗನುಗುಣವಾಗಿ ಸ್ತುತಿಸಿಕೊಳ್ಳಲು ಬೇಕಾದ ಅರ್ಹತೆ ಸಿದ್ಧಿಸುವುದು.

**೬೮೮. ಸ್ತವಪ್ರಿಯಃ – ಭಕ್ತರ ಮೂಲಕ ನಡೆಯುವ ತನ್ನ ಹೊಗಳಿಕೆಯನ್ನು ಇಷ್ಟಪಡುವವನು.**

**ವಿವರಣೆ:** ಯಾರು ನನ್ನನ್ನು ಹೊಗಳುವರು ಎಂದು ನಿರೀಕ್ಷಿಸುತ್ತ ಭಕ್ತರ ಮೂಲಕ ನಡೆಯುವ ತನ್ನ ಸ್ತುತಿಯನ್ನು ಇಷ್ಟಪಡುವವನು. ಸ್ತವ ಎಂದರೆ ಸ್ತುತಿ. 'ಶ್ರುತಿತತಿಗಳಿಗಭಿಮಾನಿ ಲಕುಮೀಸ್ತುತಿಗಳಿಗೆ ಗೋಚರಿಸದವನು' - ಭಗವಂತನ ಸ್ತೋತ್ರಸಾಹಿತ್ಯ ಎಂದು ಎಷ್ಟೆಷ್ಟು ಇದೆಯೋ - ಶ್ರುತಿ, ಪುರಾಣ, ಇತಿಹಾಸ ಮುಂತಾದವುಗಳಿಗೆಲ್ಲ ಮುಖ್ಯಾಭಿಮಾನಿಯಾದ ಲಕ್ಷ್ಮೀದೇವಿ ನಡೆಸುವ ಸ್ತುತಿಗಳಿಗೂ ಪೂರ್ಣವಾಗಿ ಎಟಕದ ಭಗವಂತ 'ಪ್ರತಿದಿವಸ ತನ್ನಂಘ್ರಿಸೇವಾರತಮಹಾತ್ಮರು ಮಾಡುತಿಹ ಸಂಸ್ತುತಿಗೆ ವಶನಾಗುವನು........' ಯಾರೋ ಮೂಲೆಯಲ್ಲಿ ಕುಳಿತುಕೊಂಡು ಅಚ್ಯುತ, ಅನಂತ, ಗೋವಿಂದ ಎಂದು ತನ್ನನ್ನು ಸ್ತುತಿಸುತ್ತಿದ್ದರೆ ಅದಕ್ಕೂ ಸ್ಪಂದಿಸುವವನು.

ದೊಡ್ಡ ದೊಡ್ಡ ಸ್ತೋತ್ರ ಬರದಿದ್ದರೂ ಪರವಾಗಿಲ್ಲ ಅಚ್ಯುತ, ಅನಂತ, ಗೋವಿಂದ ಎಂದು ಭಕ್ತಿಪೂರ್ವಕವಾಗಿ ಗೊಣಗುತ್ತಿದ್ದರೂ ತನ್ನ ಆ ಬಗೆಯ ಸ್ತುತಿಗೂ ವಶನಾಗಿ ಹಿಗ್ಗುವ ಸ್ತವಪ್ರಿಯನಾಗಿರುವವನು ಅವನು.

ಭಕ್ತರ ಉದ್ಧಾರಕ್ಕಾಗಿ, ಶ್ರೇಯಸ್ಸಿಗಾಗಿ ತಾನು ಮಾಡುವ ಕೆಲಸಗಳನ್ನು ಕೃತಜ್ಞತಾಪೂರ್ವಕವಾಗಿ ಭಕ್ತರು ಉಲ್ಲೇಖಿಸಿದರೆಂದರೆ ಅಷ್ಟರಿಂದಲೇ ತೃಪ್ತಿಪಡುವಷ್ಟು ಉದಾರಿಯಾಗಿರುವವನು ಭಗವಂತ.

ಮನೆಯಲ್ಲಿ ಏನೋ ಮಾತಿಗೆ ಮಾತು ಬೆಳೆದು ಗಂಡ ಹೆಂಡರಲ್ಲಿ ಮಾತಿನ ಚಕಮಕಿ ನಡೆಯಿತು. ಅದು ಶಾಂತ ಆದ ಮೇಲೆ ಆ ಮಾತುಗಳನ್ನು 'ಶ್ರೀಕೃಷ್ಣಾರ್ಪಣಮಸ್ತು' ಎಂದು ಅರ್ಪಿಸಿದಲ್ಲಿ ಸ್ತವಪ್ರಿಯನಾದ ಭಗವಂತನು ಅದನ್ನು ತನ್ನ ಸ್ತುತಿಯನ್ನಾಗಿ ಸ್ವೀಕರಿಸಿಯಾನು. ಯಾಕೆಂದರೆ ಭಕ್ತರ ಮಾತಿಗೆ ಮರುಳಾಗುವವನು ಅವನು.

**೬೮೯. ಸ್ತೋತ್ರಂ – ಪ್ರತಿಯೊಂದು ಸ್ತೋತ್ರದಲ್ಲೂ ವಿರಾಜಮಾನನಾಗಿರುವವನು.**

ವಿವರಣೆ : ನಾವು ವೆಂಕಟೇಶ ಸ್ತೋತ್ರ, ಕೃಷ್ಣಾಷ್ಟೋತ್ತರ ಶತನಾಮಸ್ತೋತ್ರ, ವಿಷ್ಣುಸಹಸ್ರನಾಮ ಸ್ತೋತ್ರ ಎಂದೆಲ್ಲ ಕರೆದರೆ, ಭೀಷ್ಮರು ಕೃಷ್ಣನನ್ನು ನೀನೇ 'ಸ್ತೋತ್ರ' - ಎಂದು ಸ್ತುತಿಸಿರುವರು.

ಸ್ತೋತ್ + ರ - ಎಂದು ಪದವಿಭಾಗವನ್ನಿಟ್ಟುಕೊಂಡಾಗ ಭಗವಂತನೂ ಸ್ತೋತ್ರ ಎನಿಸುವನು. ಸ್ತೋತ್ - ಪ್ರತಿಯೊಂದು ಸ್ತೋತ್ರದಲ್ಲೂ ರ - ರಾಜತೇ ಶೋಭಿಸುತ್ತಿರುವವನು.

ಯಾರ ಮೂಲಕ ಯಾರದ್ದೇ ಸ್ತೋತ್ರ ನಡೆಯಲಿ, ಅದರಲ್ಲಿ ವಿರಾಜ ಮಾನನಾಗುವವನು ಭಗವಂತ. ಆದ್ದರಿಂದ ಶುದ್ಧವಾಗಿ ಸ್ತುತಿಸಿಕೊಳ್ಳುವವನು ಯಾರಾದರೂ ಇದ್ದರೆ ಅದು ಭಗವಂತ ಮಾತ್ರ.

ಉಳಿದವರ ಬಗ್ಗೆ ನಡೆಸುವ ಸ್ತೋತ್ರದಲ್ಲಿ ಬಹುಪಾಲು ಅವರ ಒಳಗಿರುವ ದೇವರಿಗೇ ಸೇರುವಂತಹದ್ದು. ಇದನ್ನು 'ಮಿಶ್ರಸ್ತುತಿ' ಎನ್ನುವರು.

ಹಿರಣ್ಯಕಶಿಪು ಚತುರ್ಮುಖನನ್ನು ಜಗತ್ತಿನ ಸೃಷ್ಟ್ಯಾದಿಗಳನ್ನು ನಡೆಸುವವನು ನೀನೇ ಎಂದು ಸ್ತುತಿಸುವನು. ಆದರೆ ಚತುರ್ಮುಖ ಹುಟ್ಟಿದ್ದೇ ಭಗವಂತನಿಂದ. ಆದ್ದರಿಂದ ಹಿರಣ್ಯಕಶಿಪು ಯಾರನ್ನು ಹೊಗಳಿದ್ದು ? ಚತುರ್ಮುಖನ ಒಳಗಿದ್ದ

ಭಗವಂತನನ್ನು. ಹಿರಣ್ಯಕಶಿಪುವಿನ ದೇಹದಲ್ಲಿ ಒಬ್ಬ ದೈತ್ಯನೂ ಮತ್ತೊಬ್ಬ ಜಯ ಎಂಬ ಭಕ್ತನೂ ಇದ್ದಾನೆ. ಚತುರ್ಮುಖನಲ್ಲೂ ಚತುರ್ಮುಖ ಜೀವನೂ, ಭಗವಂತನೂ ಇರುವನು. ಹಿರಣ್ಯಕಶಿಪು ದೈತ್ಯ ಚತುರ್ಮುಖನನ್ನು ಹೊಗಳಿದ. ಅವನೊಳಗಿನ ಜಯ ಚತುರ್ಮುಖನ ಒಳಗಿದ್ದ ಭಗವಂತನನ್ನು ಹೊಗಳಿದ.

ಹೀಗೆ ಯಾರನ್ನೇ ಹೊಗಳಲಿ ಅಲ್ಲಿ ಭಗವಂತ ಪ್ರಕಾಶಮಾನನಾಗಿ ಇರುವನು- 'ಸ್ತೋತ್‌ರ.'

ದಾನಿಗಳೊಬ್ಬರನ್ನು ತುಂಬ ದಾನ ಮಾಡಿದ್ದೀರೆಂದು ಹೊಗಳಿದರೆ, ಅವರು ಹಾಗೆ ದಾನ ಮಾಡಲು ಪ್ರೇರಿಸಿದ ಭಗವಂತನ ಸ್ತುತಿಯೇ ಮುಖ್ಯ. ಆದುದರಿಂದಲೇ ಸ್ವಲ್ಪ ವಿವೇಕಿಗಳಾದರೆ ದೇವರು ಸಂಪತ್ತು ಕೊಟ್ಟಿದ್ದಾರೆ. ದಾನ ಮಾಡಲು ಮನಸ್ಸನ್ನೂ ಕೊಟ್ಟಿದ್ದಾನೆ. ಆದ್ದರಿಂದ ದಾನ ಮಾಡಿರುವನಷ್ಟೇ ಎಂದು ಒಪ್ಪಿಕೊಳ್ಳುವರು. ಇದರ ಬದಲಾಗಿ ಸ್ವಲ್ಪ ಅಹಂಕಾರಿಗಳಾದರೆ 'ಹೌದು ಒಳ್ಳೆಯ ಕೆಲಸ ಮಾಡುತ್ತಿದ್ದೀರಿ, ಅದನ್ನು ಮೆಚ್ಚಿ ನಾನು ದಾನ ಮಾಡಿದ್ದೇನೆ' - ಎಂದು ದಾನದಲ್ಲಿ ತಮ್ಮದೇ ಪಾತ್ರ ಎನ್ನುವಂತೆ ಹೇಳಿಕೊಳ್ಳುವರು. ಲೋಕದಲ್ಲಿ ಯಾರನ್ನೇ ಹೊಗಳೋಣ - ಅಲ್ಲಿ ಮೊದಲು ಶೋಭಿಸುವವನು ಭಗವಂತ 'ಸ್ತೋತ್ - ರ'

ಭೀಷ್ಮರು ಒಪ್ಪಿಕೊಳ್ಳುವರು - ನಾನೆಲ್ಲಾದರೂ ಧೃತರಾಷ್ಟ್ರನನ್ನೋ ದುರ್ಯೋಧನನನ್ನೋ ಹೊಗಳಿದ್ದರೆ 'ಸ್ತೋತ್ - ರ' - ಅಲ್ಲಿ ಕೃಷ್ಣ ಮೊದಲು ಪ್ರಕಾಶಿಸುತ್ತಿದ್ದಿ.

ನಮಗೂ ಕಛೇರಿಯಲ್ಲಿ ಅಯೋಗ್ಯ ಅಧಿಕಾರಿಯನ್ನು ಅನಿವಾರ್ಯವಾಗಿ ಹೊಗಳಬೇಕಾದ ಪ್ರಸಂಗ ಬಂದರೆ 'ಸ್ತೋತ್ -ರ' ನಾಮ ಸಾರುತ್ತಿರುವಂತೆ ಭಗವಂತನ ಅನುಸಂಧಾನ ತಂದುಕೊಂಡು, ನನ್ನ ಹೊಗಳಿಕೆ ಆ ಅಧಿಕಾರಿಯ ಒಳಗಿರುವ ಭಗವಂತನಿಗೇ ತಲುಪಲಿ ಎಂಬ ಅನುಸಂಧಾನ ತಂದುಕೊಂಡರೆ ಏನೂ ದೋಷ ಬಾರದು. ಹಿರಣ್ಯಕಶಿಪು ಚತುರ್ಮುಖನನ್ನು ಹೊಗಳಿದಾಗ ಆ ಹೊಗಳಿಕೆಯ ಕೆಲವು ಅಂಶಗಳಾದರೂ ಚತುರ್ಮುಖನಲ್ಲಿ ಅನ್ವಯವಾಗುತ್ತಿತ್ತು. ಆದರೆ ಅಧಿಕಾರಿಯ ಬಗ್ಗೆ ಸಲ್ಲಿಸಲಾಗುವ ಹೊಗಳಿಕೆಯ ಒಂದಂಶವೂ ಅವನಲ್ಲಿ ಕೂಡುತ್ತಿಲ್ಲ ಎಂಬ ವಿಶ್ಲೇಷಣೆ ಇರಲಿ.

**೬೮೦. ಸ್ತುತಿಃ – ಪ್ರತಿಯೊಂದು ಕಾರ್ಯಕ್ರಮದ ಆರಂಭದಲ್ಲೂ ಪ್ರಸ್ತಾಪಿಸಲ್ಪಡುವವನು.**

ವಿವರಣೆ : ದೇವರು ಸ್ತುತಿ. ಸ್ತೂಯತೇ ಇತಿ ಸ್ತುತಿಃ, ಸ್ತೂಯತೇ ಎಂಬುದಕ್ಕೆ ಪ್ರ

ಎಂಬ ಉಪಸರ್ಗವನ್ನು ಸೇರಿಸಿ, ಪ್ರಸ್ತೂಯತೇ ಇತಿ ಪ್ರಸ್ತುತಿಃ.

ಪ್ರಸ್ತಾವನೆ - ಆರಂಭ.

ಯಾವ ದೇವತೆಯ ಹೆಸರಿನಲ್ಲಿ ಯಾವುದೇ ಕಾರ್ಯಕ್ರಮ ಇರಲಿ - ಅದು ಗಣಹೋಮವೂ ಆಗಿದ್ದಿರಬಹುದು, ದುರ್ಗಾ ನಮಸ್ಕಾರವೂ ಆಗಿದ್ದಿರಬಹುದು- ಹೀಗೆ ಯಾವ ಕಾರ್ಯಕ್ರಮವೇ ಆಗಿದ್ದಿರಲಿ ಅದು ದೇವರ ಪ್ರಸ್ತಾವನೆಯೊಂದಿಗೇ ಪ್ರಾರಂಭವಾಗುವುದು 'ಶ್ರೀಗುರುಭ್ಯೋ ನಮಃ ಹರಿಃ ಓಮ್'- ಎಂದು ಓಂಕಾರವಾಚ್ಯನಾದ ಭಗವಂತನ ಪ್ರಸ್ತಾವನೆಯೊಂದಿಗೇ ಪುರೋಹಿತರು ಪ್ರಾರಂಭಿಸುವರು. ಹೀಗೆ ಪ್ರತಿಯೊಂದು ಕಾರ್ಯಕ್ರಮವೂ ದೇವರ ಪ್ರಸ್ತಾವನೆಯೊಂದಿಗೇ ಪ್ರಾರಂಭವಾಗುವುದು.

ದೂರವಾಣಿಯಲ್ಲಿ ನಡೆಸಲಾಗುವ ಮಾತುಕತೆ ಕೂಡಾ ಈಗ 'ಓಂ'- ಎಂದು ಓಂಕಾರವಾಚ್ಯ ಶ್ರೀಹರಿಯ ಪ್ರಸ್ತಾವನೆಯೊಂದಿಗೇ ಪ್ರಾರಂಭವಾಗುವುದು.

ಆದುದರಿಂದ ಪ್ರತಿಯೊಂದು ಕಾರ್ಯಕ್ರಮದ ಆರಂಭದಲ್ಲೂ ಪ್ರಸ್ತಾಪಿಸಲ್ಪಡುವ ಪ್ರಯುಕ್ತ ಪ್ರಸ್ತೂಯತೇ - ಎಂಬ ಅರ್ಥದಲ್ಲಿ ಭಗವಂತ ಸ್ತುತಿ ಎನಿಸುವನು.

ವಿದುರನೀತಿಯಲ್ಲಿ 'ಏಕಃ ಅರ್ಥಾನ್ ನ ಚಿಂತಯೀತ.....'- ಎಂದು ಎಚ್ಚರಿಸಿರುವಂತೆ ಯಜಮಾನ ಮನೆಯ ಸಮಸ್ಯೆಯ ಬಗ್ಗೆ ತಾನೊಬ್ಬನೇ ಚಿಂತನೆ ನಡೆಸದೆ ಅದರಲ್ಲಿ ನಾವೂ ಸೇರಿಕೊಳ್ಳುವಂತೆ ಮಾಡಬೇಕೆಂದರೆ ಭಗವಂತನನ್ನು 'ಸ್ತುತಿಃ'- ಎಂಬ ನಾಮದಿಂದ ಪ್ರತಿಯೊಂದು ಕಾರ್ಯಕ್ರಮದ ಆರಂಭದಲ್ಲೂ ಪ್ರಸ್ತಾಪಿಸಲ್ಪಡುವವನೆಂದು ಉಪಾಸನೆ ಮಾಡಬೇಕು.

**೬೯೧. ಸ್ತೋತಾ – ಹೊಗಳುವವನು.**

**ವಿವರಣೆ :** ಹೇಳುವವನನ್ನು ಸ್ತೋತೃಶಬ್ದದಿಂದ ಕರೆಯಲಾಗುವುದು.

ಭೀಷ್ಮರು ಕೃಷ್ಣನನ್ನು ಕೇಳಿದರು - ಯಾರು ಹೇಳಬೇಕು ?

ಕೃಷ್ಣ ವಿಚಾರಿಸಿದ - ಯಾರನ್ನು ಕುರಿತು ?

ಭೀಷ್ಮರು - ನಿನ್ನನ್ನು ಕುರಿತು.

ಕೃಷ್ಣ - ಹಾಗಾದರೆ ನಾನೇ ಹೇಳ್ತೇನೆ. ಯಾಕೆಂದರೆ ನನ್ನ ಬಗೆಗೆ ನನಗೆ ತಿಳಿದಿರುವಷ್ಟು ಬೇರೆ ಯಾರಿಗೂ ತಿಳಿಯದ ಪ್ರಯುಕ್ತ ನಾನೇ ನನ್ನ ಬಗ್ಗೆ ಹೇಳುವುದು ಉಚಿತ ತಾನೇ ?

ಈಗ ಇಲ್ಲಿ ಹಾಗೇ ಆಗಿರುವುದು.

ಮಹಾಭಾರತ ಯುದ್ಧದಲ್ಲಿ ಪಾಂಡವರಿಗೆ ಜಯ ಲಭಿಸಿದ್ದರೂ ಯುಧಿಷ್ಠಿರ ಸಿಂಹಾಸನವನ್ನು ಏರಲು ಕೇಳುತ್ತಿಲ್ಲ. ಎಷ್ಟೆಷ್ಟು ಹೇಳಿದರೂ ಸಿಂಹಾಸನವನ್ನು ಏರಲು ಒಪ್ಪುತ್ತಿಲ್ಲ.

ಇದು ಈಗಿನ ರಾಜಕಾರಣಿಗಳ ಪ್ರವೃತ್ತಿಗೆ ತೀರಾ ವಿರುದ್ಧವಾದುದು. ಈಗಿನ ರಾಜಕಾರಣಿಗಳು ಅಧಿಕಾರದ ಕುರ್ಚಿಯಿಂದ ಇಳಿಯಲು ಕೇಳುವುದಿಲ್ಲ. ಎಳೆದು ಕೆಳಗೆ ಹಾಕಬೇಕಾದ ಪ್ರಸಂಗ.

ಒಮ್ಮೆ ದೇವೇಂದ್ರನಲ್ಲಿಗೆ ಒಬ್ಬ ಪುರೋಹಿತರು ಬಂದರಂತೆ. ದೇವೇಂದ್ರ ಬಾಗಿಲಿನವರೆಗೆ ಹೋಗಿ ಅವರನ್ನು ಸ್ವಾಗತಿಸಿ ಒಂದು ಆಸನದಲ್ಲಿ ಕುಳ್ಳಿರಿಸುವನು. ಮತ್ತೊಬ್ಬ ಜ್ಯೋತಿಷ್ಕ ಬಂದ, ಆಗಲೂ ಹಿದಿನಂತೆಯೇ ಮಾಡುವನು. ಇನ್ನೊಬ್ಬ ವೈದ್ಯ ಬಂದಾಗಲೂ ಹಾಗೆಯೇ ನಡೆದುಕೊಳ್ಳುವನು. ಮತ್ತೆ ಒಬ್ಬ ಭೂಮಿಯ ಮಂತ್ರಿ ದಾರಿ ತಪ್ಪಿ ಅಲ್ಲಿಗೆ ಬಂದ. ಆಗ ಮಾತ್ರ ದೇವೇಂದ್ರ ಬಾಗಿಲಿನವರೆಗೆ ಹೋಗದೆ ತನ್ನ ಆಸನದಲ್ಲಿಯೇ ಕುಳಿತುಕೊಂಡು ಆ ಮಂತ್ರಿಯನ್ನು ಬರಮಾಡಿಕೊಂಡು ಅವನಿಗೆ ಆಸನವನ್ನು ನೀಡುವನು. ಯಾಕೆ ಹೀಗೆ ಮಾಡಿದೆ ? ಬಾಗಿಲಿನವರೆಗೆ ಹೋಗಿ ಆ ಮಂತ್ರಿಗೆ ಯಾಕೆ ಸ್ವಾಗತ ನೀಡಲಿಲ್ಲ ? - ಎಂದು ವಿಚಾರಿಸಿದಾಗ ದೇವೇಂದ್ರ ಹೇಳ್ತಾನೆ - ನನಗೆ ಆ ಮಂತ್ರಿಯ ಸ್ವಭಾವ ಚೆನ್ನಾಗಿ ಗೊತ್ತು. ಒಂದೊಮ್ಮೆ ನನ್ನ ಆಸನದಿಂದ ಎದ್ದು ಹೋದೆ ಎಂದರೆ ಆ ಆಸನದಲ್ಲಿ ಬಂದು ಕುಳಿತು ಬಿಡುವನು. ಮತ್ತೆ ಏನು ಮಾಡಿದರೂ ಆಸನದಿಂದ ಇಳಿಯಲು ಕೇಳುವುದಿಲ್ಲ. ಅದಕ್ಕಾಗಿ ಹಾಗೆ ಮಾಡಿದೆ ಎಂದು.

ಹೀಗೆ ಈಗಿನ ರಾಜಕಾರಣಿಗಳ ಸ್ವಭಾವ ಅಧಿಕಾರದ ಕುರ್ಚಿಯಿಂದ ಕೆಳಗಿಳಿಯಲು ಒಪ್ಪದಿರುವಂತಹದ್ದಾದರೆ ಯುಧಿಷ್ಠಿರ ಇದಕ್ಕೆ ವಿಪರೀತವಾಗಿ ಅಧಿಕಾರದ ಆಸನವನ್ನು ಏರಲು ಒಪ್ಪಿಕೊಳ್ಳುವುದಿಲ್ಲ.

ಕೊನೆಗೆ ಕೃಷ್ಣನೇ ಯುಧಿಷ್ಠಿರನನ್ನು ಭೀಷ್ಮರಲ್ಲಿಗೆ ಕರೆದೊಯ್ದು, ಭೀಷ್ಮರ ಒಳಗೆ ಒಂದು ರೂಪದಿಂದ ಇದ್ದು ಕೊಂಡು ಯುಧಿಷ್ಠಿರಾದಿಗಳಿಗೆ ಉಪದೇಶಿಸಲು ಪ್ರಾರಂಭಿಸುವನು. ಹೀಗೆ ಕೃಷ್ಣ ಒಂದು ರೂಪದಿಂದ ಭೀಷ್ಮರ ಎದುರು ಕುಳಿತುಕೊಂಡು **'ಸ್ತವ್ಯ'**- ಭೀಷ್ಮರ ಮೂಲಕ ಹೊರಡುತ್ತಿರುವ ಸ್ತುತಿಗೆ ಪಾತ್ರನೆನಿಸಿದರೆ, ಮತ್ತೊಂದು ರೂಪದಿಂದ ಭೀಷ್ಮರ ಒಳಗೆ ಇದ್ದುಕೊಂಡು ತನ್ನನ್ನು ತಾನೇ ಸ್ತುತಿಸುತ್ತ **'ಸ್ತೋತಾ'** ಎನಿಸಿರುವನು.

ನಮ್ಮ ಮೂಲಕ ದೇವರ ಪೂಜೆ ಮುಂತಾದ ಧಾರ್ಮಿಕ, ಆಧ್ಯಾತ್ಮಿಕ ಕಾರ್ಯಗಳು ನಡೆಯುವಾಗ ಭಗವಂತನೇ ನಮ್ಮೊಳಗಿದ್ದು ನಡೆಸುವನೆಂಬ ಅನುಸಂಧಾನ ಬೇಕು.

**ನಾನೇ ಮಾಡುವೆನು ಎನ್ನುವವನು ಅಧಮನು**
**ಹೀನಕೆ ನಾನು ಒಳಿತಿಗೆ ಹರಿ ಎನ್ನುವವನು ಮಧ್ಯಮನು**
**ದ್ವಂದ್ವಕೆ ಶ್ರೀನಿವಾಸನೇ ಕರ್ತೃ ಎಂಬವನು ಸದಾ ಸುಖಿಸುವನು.**

ಕೆಟ್ಟದಕ್ಕೆ ನಾನು ಒಳ್ಳೆಯದ್ದನ್ನೆಲ್ಲ ಶ್ರೀಹರಿ ನಡೆಸುವನೆಂದಲ್ಲೂ, ಕೆಟ್ಟದ್ದಕ್ಕೆ ನಮ್ಮ ಸ್ವಾತಂತ್ರ್ಯವನ್ನು ಆರೋಪಿಸಿಕೊಂಡಂತಾಗುವುದು. ಆದ್ದರಿಂದ ಕೆಟ್ಟದ್ದೂ, ಒಳ್ಳೆಯದ್ದೂ ಈ ದ್ವಂದ್ವ ಶ್ರೀನಿವಾಸನಿಂದಲೇ ನಡೆಯುವುದೆಂದು ಅನುಸಂಧಾನ ನಡೆಸಬೇಕು.

**೬೯೨. ರಣಪ್ರಿಯಃ – ತನ್ನ ಬಗ್ಗೆ ಹೊರಟ ಸ್ತುತಿಯ ಶಬ್ದಗಳನ್ನು ಪ್ರೀತಿಸುವವನು.**

**ವಿವರಣೆ :** 'ಸ್ತವಪ್ರಿಯಃ' ಎಂದು ಹಿಂದೆ ಬಂತು. ಈಗ 'ರಣಪ್ರಿಯ' - ಎಂದು ತನ್ನ ಬಗ್ಗೆ ಹೊರಟ ಸ್ತುತಿಯ ಶಬ್ದಗಳನ್ನು ಪ್ರೀತಿಸುವವನು ಭಗವಂತ. 'ವೇದವನೋದಲು ಬೇಕು.....' ಇತ್ಯಾದಿಯಾಗಿ ವಾದಿರಾಜರು ತಿಳಿಸಿದಂತೆ ವೇದ ಇತ್ಯಾದಿಗಳ ಶಬ್ದವನ್ನು ಪಠಿಸುತ್ತ ಇರಬೇಕು. ಕೊನೆಗೆ 'ಅದರ ಅರ್ಥ ಹರಿ ಎಂಬ ಬೋಧ ಬೇಕು'- ಆ ಎಲ್ಲ ಶಬ್ದಗಳೂ ಶ್ರೀಹರಿಯನ್ನೇ ತಿಳಿಸುತ್ತಿವೆ ಎಂಬ ಅರಿವು ಇರಬೇಕು.

ಎಲ್ಲ ಶಬ್ದಗಳೂ ಭಗವಂತನನ್ನೇ ಹೇಳುತ್ತಿವೆ ಎಂಬ ಅನುಸಂಧಾನ ಪೂರ್ವಕವಾಗಿ ಯಾವ ಶಬ್ದವನ್ನು ಹೇಳಿದರೂ ಅದನ್ನು ಭಗವಂತನು ಪ್ರೀತಿಯಿಂದ ಕೇಳಿಸಿಕೊಳ್ಳುವನು.

**'ಬಾಲಕನ ಕಲಭಾಷೆ ಜನನಿಯು**
**ಕೇಳಿ ಸುಖ ಪಡುವಂತೆ ಲಕುಮೀ -**
**ಲೋಲ ಭಕ್ತರು ಮಾಡುತಿಹ ಸಂಸ್ತುತಿಗೆ ಹಿಗ್ಗುವನು'** ಎಂದು ಜಗನ್ನಾಥದಾಸರು ಭಗವಂತನ ರಣಪ್ರಿಯತ್ವವನ್ನು ಮಗುವಿನ ತೊದಲು ಮಾತಿಗೆ ಸಂತೋಷ ಪಡುವ ತಾಯಿಯ ದೃಷ್ಟಾಂತವನ್ನು ಕೊಟ್ಟು ಸಾರಿರುವರು.

ಒಬ್ಬ ತಾಯಿ ಮಗುವನ್ನು ಕರೆದುಕೊಂಡು ಊಟಕ್ಕೆ ಹೋಗಿದ್ದಳು. ಸಾರು

ಬಡಿಸುವವನು ಆ ಮಗುವಿನ ಎಲೆಗೆ ಸಾರು ಹಾಕುವುದನ್ನು ಮರೆತು ಮುಂದುವರಿಯುವನು. ಆಗ ಆ ಮಗು 'ಅಮ್ಮ ನನಗೆ ಸಾವು ಬಂದಿಲ್ಲ' ಎನ್ನುವುದು. ಮಗು ಮಾತನಾಡಿತೆಂದು ತಾಯಿಗೆ ಸಂತೋಷವೋ ಸಂತೋಷ ! ಪಕ್ಕದಲ್ಲಿ ಇದ್ದವರಲ್ಲೆಲ್ಲ ತನ್ನ ಮಗು ಮಾತನಾಡಿತೆಂದು ಹೇಳಿಕೊಳ್ಳುವಳು. ಮಗು ಸಾರು ಹೇಳುವ ಬದಲು 'ಸಾವು'- ಎಂದು ಕೆಟ್ಟ ಶಬ್ದವನ್ನು ಬಳಸಿದ್ದರೂ ಅದನ್ನು ಸಹಿಸಿಕೊಳ್ಳುವಳು. ಅಂತೆಯೇ ದೇವರೂ ಭಕ್ತರ ಬಾಯಿಯಿಂದ ತನ್ನ ಬಗ್ಗೆ ಎಂತಹ ಶಬ್ದ ಬಂದರೂ ಅದನ್ನು ಸಂತೋಷದಿಂದ ಕೇಳಿಸಿಕೊಳ್ಳುವನು.

ಆದರೆ ಅದೇ ತಾಯಿ ತನ್ನ ಆ ಮಗು ಐದು ವರ್ಷ ವಯಸ್ಸಿನ ಬಾಲಕನಾಗಿ ಬೆಳೆದಾಗ ಸಾರು ಬಂತು ಎನ್ನುವ ಬದಲು 'ಸಾವು ಬಂತು' - ಎಂದು ಹೇಳಿದರೆ ಮಗುವಿಗೆ ಹೊಡೆಯುವಳು. ಅಂತೆಯೇ ಏನೂ ಅರಿವಿಲ್ಲದ ವ್ಯಕ್ತಿಗಳು ಭಗವಂತನನ್ನು ಹೇಗೆ ಸ್ತುತಿಸಿದರೂ ಆ ಬಗ್ಗೆ ಸಂತೋಷ ಪಡುವ ಭಗವಂತ ಸ್ವಲ್ಪ ತಿಳಿದ ಭಕ್ತರು ತನ್ನ ಬಗ್ಗೆ ಆದಷ್ಟು ಒಳ್ಳೆಯ ಶಬ್ದಗಳನ್ನು ಪ್ರಯೋಗಿಸುವುದನ್ನೇ ಬಯಸುವನು. ಆದ್ದರಿಂದ ಭಗವಂತನನ್ನು ಸೂಕ್ತ, ಸ್ತೋತ್ರ, ಸ್ತುತಿ ಮುಂತಾದವುಗಳ ಒಳ್ಳೆಯ ಶಬ್ದಗಳಿಂದಲೇ ಸ್ತುತಿಸೋಣ. ನಮ್ಮ ಮೂಲಕ ಹೊರಡುವ ಅಂತಹ ರಣಗಳನ್ನು - ಶಬ್ದಗಳನ್ನು ಅವನು ವಿಶೇಷವಾಗಿ ಪ್ರೀತಿಸುವನು.

**೬೯೩. ಪೂರ್ಣಃ – ಎಲ್ಲ ಗುಣಗಳಿಂದ ತುಂಬಿರುವವನು, ಹಾಗೂ ತುಂಬಿರುವ ಪ್ರತಿಯೊಂದು ಗುಣವೂ ಯಾರಲ್ಲಿ ಪೂರ್ಣವಾಗಿದೆಯೋ ಅಂತಹವನು.**

ವಿವರಣೆ : ದೇವರು ತುಂಬಿರುವವನು. ಯಾವುದರಿಂದ ? ಗುಣ ಎಂದು ಯಾವುದ್ಯಾವುದು ಇದೆಯೋ ಆ ಎಲ್ಲ ಗುಣಗಳಿಂದಲೂ ಪೂರ್ಣನಾಗಿರುವವನು.

ನಮಗೆ ದೇವರು ಯಾಕೆ ಬೇಕು ? ದೇವರು ನಮಗೆ ಒಳ್ಳೆಯದನ್ನು ಮಾಡಬೇಕು, ಒಳ್ಳೆಯ ಸ್ಥಿತಿಯನ್ನು ಕೊಡಬೇಕು. ಅದಕ್ಕಾಗಿ ದೇವರನ್ನು ಎಲ್ಲ ಬಗೆಯ ಒಳ್ಳೆಯತನದಿಂದ ಕೂಡಿದವನನ್ನಾಗಿ ಸ್ತುತಿಸಬೇಕು.

ದೇವರು ಎಲ್ಲ ಗುಣಗಳಿಂದಲೂ ತುಂಬಿರುವವನು, ಮಾತ್ರವಲ್ಲ ಎಲ್ಲ ದೇಶಗಳಲ್ಲೂ ತುಂಬಿರುವವನು. ಅಂದರೆ ಎಲ್ಲೆಡೆ ಇರುವವನು. ಎಲ್ಲ ಕಾಲದಲ್ಲೂ ತುಂಭಿರುವವನು. ಅಂದರೆ ನಿತ್ಯನಾಗಿರುವವನು.

ದೇವರು ಎಲ್ಲ ಗುಣಗಳಿಂದ ತುಂಬಿರುವುದಷ್ಟೇ ಅಲ್ಲ, ಅವನಲ್ಲಿ ತುಂಬಿರುವ ಒಂದೊಂದು ಗುಣವೂ ಪೂರ್ಣವಾಗಿರುವುದು.

ನಮ್ಮಲ್ಲೂ ಜ್ಞಾನವಿದೆ, ಆನಂದವಿದೆ, ಶಕ್ತಿ ಇದೆ. ಆದರೆ ಎಲ್ಲ ಚೂರು ಪಾರು ಇರುವುದು. ದೇವರಲ್ಲಿ ಆದರೆ ಹೀಗಲ್ಲ. ಜ್ಞಾನ, ಆನಂದ, ಶಕ್ತಿ, ವ್ಯಾಪ್ತಿ, ಔದಾರ್ಯ ಹೀಗೆ ಪ್ರತಿಯೊಂದು ಗುಣವೂ ಪೂರ್ಣವಾಗಿದೆ.

ಕೆಲವರಿಗೆ ಬೇರ ಬೇರೆ ಭಾಷೆಗಳೆಲ್ಲ ತಿಳಿದಿರುತ್ತದೆ. ಆದರೆ ಎಲ್ಲವನ್ನೂ ಅರ್ಧಂಬರ್ಧ ತಿಳಿದಿರುವರು. ಹಾಗಾಗಬಾರದು. ಭಾಷೆಯನ್ನು ಪೂರ್ಣವಾಗಿ ತಿಳಿದಿರಬೇಕು. ಒಂದೇ ಭಾಷೆಯಲ್ಲಿ ಶುದ್ಧವಾಗಿ, ಅಂದರೆ ಬೇರೆ ಭಾಷೆಯ ಯಾವುದೇ ಶಬ್ದದ ಮಿಶ್ರಣ ಇಲ್ಲದಂತೆ ವ್ಯವಹರಿಸಬೇಕು. ಸಂಸ್ಕೃತ ಭಾಷೆಯಲ್ಲಷ್ಟೇ ಹೀಗೆ ವ್ಯವಹರಿಸಬಹುದು.

ಸಂಸ್ಕೃತ ಹೇಗೆ ಪೂರ್ಣ ಭಾಷೆಯೋ ಅಂತೆಯೇ ದೇವರು ಪ್ರತಿಯೊಂದು ಗುಣದಿಂದಲೂ ಪೂರ್ಣ, ಎಲ್ಲ ಕಾಲದಲ್ಲೂ ಪೂರ್ಣ ಎಲ್ಲ ದೇಶದಲ್ಲೂ ಪೂರ್ಣ.

**೬೯೪. ಪೂರಯಿತಾ – ನಮ್ಮ ಪ್ರಯತ್ನಕ್ಕೆ ಅನುಗುಣವಾಗಿ ನಮ್ಮನ್ನು ತುಂಬಿಸುವವನು.**

**ವಿವರಣೆ :** ಸ್ವಯಂ ಪೂರ್ಣನಾದ ದೇವರು ನಮ್ಮನ್ನೂ ಪೂರ್ಣಗೊಳಿಸುವನು. ಯೋಗ್ಯತೆ ಎಂಬ ಪಾತ್ರ ಇದೆ. ಅದನ್ನು ತುಂಬಿಸುವಂತೆ ಬೇಕಾದ ಸತ್ಕಾರ್ಯ ಮಾಡಬೇಕು. ಶ್ರವಣ, ಅಧ್ಯಯನಾದಿಗಳನ್ನು ಮಾಡಬೇಕು. ಆಗ ದೇವರು ನಮ್ಮನ್ನು ಜ್ಞಾನದಿಂದ, ಆನಂದದಿಂದ ಹಾಗೂ ಉಳಿದ ಗುಣಗಳಿಂದ ತುಂಬಿಸುವನು.

ಯೋಗ್ಯತೆಗನುಗುಣವಾಗಿ ಯತ್ನ ನಡೆಸಿದಲ್ಲಿ ಭಗವಂತನು ಅದಕ್ಕನುಗುಣವಾಗಿ ತುಂಬಿಸುವನು.

**೬೯೫. ಪುಣ್ಯಃ – ಒಳ್ಳೆಯ ಕೆಲಸದಲ್ಲಿ ತನ್ನನ್ನು ತೊಡಗಿಸಿಕೊಂಡವನು.**

**ವಿವರಣೆ:** ಪುಣ್ಯ ಎಂದರೇನು ? 'ಪುಣ್ಯ ಕ್ಷೇತ್ರಗಳು' - ಎಂದು ಕೇಳಿದ್ದೇವೆ. ಪುಣ್ಯ ಅಂದರೆ ಪಾಪ ಅಲ್ಲ - ಎಂದಷ್ಟೆ ನಮಗೆ ಗೊತ್ತಿರುವುದು. ಪುಣ್ಯ ಎಂಬುದು ಒಂದು ಧಾತುವಿನಿಂದ ನಿಷ್ಪನ್ನವಾದ ಶಬ್ದ 'ಪುಣೇ ಶುಭೇ ಕರ್ಮಣಿ' - ಪುಣತಿ - ಶುಭೇ ಕರ್ಮಣಿ ಪ್ರವರ್ತತೇ - ಶುಭಕರ್ಮದಲ್ಲಿ ತೊಡಗುವವನು - ಎಂಬ ಅರ್ಥ. ತುಳುವಿನಲ್ಲಿ ಹೆಣವನ್ನು ಪುಣ ಎನ್ನಲಾಗುವುದು. ಅದುವರೆಗೆ ಅಡ್ಡಾತಿಡ್ಡವಾಗಿ ಬದುಕುತ್ತಿದ್ದ ವ್ಯಕ್ತಿ ಯಮಲೋಕದ ಅಭಿಮುಖವಾಗಿ ಸಂಚರಿಸುವನು. ಈ ಬಗೆಯ ಶುಭಕರ್ಮದಲ್ಲಿ ತೊಡಗುವುದರಿಂದಲೇ ಇರಬಹುದು ಹೆಣ ತುಳುವಿನಲ್ಲಿ ಪುಣ ಎನಿಸುವುದು. 'ಪುಣ' ಧಾತುವಿನಿಂದಲೇ ನಿಷ್ಪನ್ನವಾದ ಶಬ್ದ ಪುಣ್ಯ. ಸದಾಕಾಲ

ತನ್ನನ್ನು ಒಳ್ಳೆಯ ಕೆಲಸದಲ್ಲಿಯೇ ತೊಡಗಿಸುವವನು ಪುಣ್ಯನು..

'ಏಷ ಹ್ಯೇವ ಸಾಧು ಕರ್ಮ ಕಾರಯತಿ' - ಎಂಬ ಪ್ರಮಾಣ ಸಾರುತ್ತಿರುವಂತೆ 'ಏಷಃ ಸಾಧು ಕರ್ಮ ಏವ ಕಾರಯತಿ' ದೇವರು ಒಳ್ಳೆಯ ಕರ್ಮವನ್ನೇ ಮಾಡಿಸುತ್ತಾನೆ. 'ಏಷ ಏವ ಸಾಧು ಕರ್ಮ ಕಾರಯತಿ'- ದೇವರೇ ಒಳ್ಳೆಯ ಕರ್ಮವನ್ನು ಮಾಡಿಸುವವನು. 'ಏಷಃ ಸಾಧು ಕರ್ಮ ಕಾರಯತಿ ಏವ '- ದೇವರು ಒಳ್ಳೆಯ ಕರ್ಮವನ್ನು ಮಾಡಿಸುತ್ತಾನೆಯೇ.

ಹೀಗೆ ದೇವರು ಒಳ್ಳೆಯ ಕೆಲಸವನ್ನೇ ಮಾಡಿಸುವುದರಿಂದಲೇ 'ಆಗುವುದೆಲ್ಲ ಒಳ್ಳೆಯದಕ್ಕಾಗಿಯೇ' - ಎಂದು ಬಂದದ್ದು.

ಭೀಷ್ಮರು ಕೃಷ್ಣನನ್ನು 'ಪುಣ್ಯಃ' - ಒಳ್ಳೆಯ ಕೆಲಸದಲ್ಲಿಯೇ ತನ್ನನ್ನು ತೊಡಗಿಸಿಕೊಂಡವನು ಎಂದು ಸ್ತುತಿಸುವರು.

ಕೃಷ್ಣ ಭೀಮಸೇನನ ಮೂಲಕ ದುರ್ಯೋಧನನ್ನು ಕೊಲ್ಲಿಸಿದ್ದೂ ಪುಣ್ಯಕರ್ಮವೇ. ಯಾಕೆಂದರೆ ಇದರಿಂದಾಗಿ ಸಮಾಜಕ್ಕೆ ಒಳ್ಳೆಯದಾಗುವುದು.

ಪಾಂಡವರನ್ನು ಕಾಡಿಗೆ ಕಳುಹಿಸಿದ್ದೂ ಪುಣ್ಯಕರ್ಮವೇ. ಯಾಕೆಂದರೆ ಅದರಿಂದಾಗಿ ಕಾಡಿನಲ್ಲಿದ್ದ ಮುನಿಗಳಿಗೆ ಪಾಂಡವರ ಸಂಪರ್ಕ ದೊರಕುವಂತಾಯಿತು.

ದ್ರೌಪದಿಯ ವಸ್ತ್ರಾಹರಣ ದುಶ್ಶ್ಯಾಸನನ ಮೂಲಕ ನಡೆಸಿದ್ದೂ ಪುಣ್ಯ ಕರ್ಮವೇ. ಯಾಕೆಂದರೆ ಇದರಿಂದಾಗಿ ದುಶ್ಶ್ಯಾಸನನನ್ನು ಕೊಲ್ಲುವುದಕ್ಕೆ ಸೂಕ್ತ ಕಾರಣವನ್ನು ಒದಗಿಸಿ ಕೊಟ್ಟಂತಾಯಿತು.

ಹೀಗೆ ಶ್ರೀ ಕೃಷ್ಣನ ಮೂಲಕ ನಡೆಯುವ ಪ್ರತಿಯೊಂದು ಕರ್ಮದ ವಿಷಯದಲ್ಲೂ ಶ್ರೀಕೃಷ್ಣ ಪುಣ್ಯ ಅಂದರೆ ಒಳ್ಳೆಯ ಕೆಲಸವನ್ನೇ ನಡೆಸಿರುವವನು.

**೭೯೬. ಪುಣ್ಯಕೀರ್ತಿಃ – * ಸದಾ ಒಳ್ಳೆಯ ಕೆಲಸದಲ್ಲಿಯೇ ತನ್ನನ್ನು ತೊಡಗಿಸಿಕೊಳ್ಳುವವನೆಂದು ಹೇಳಲ್ಪಡುವವನು.**

*** ಒಳ್ಳೆಯ ಕೆಲಸ ಮಾಡುವವರಿಂದಲೇ ಕೀರ್ತಿಸಲ್ಪಡುವವನು.**

**ವಿವರಣೆ :** ಪುಣ್ಯಶಬ್ದಕ್ಕೆ ಒಳ್ಳೆಯದನ್ನೇ ಮಾಡುವವನು ಎಂಬ ಅರ್ಥವನ್ನು ಕಂಡಿದ್ದೇವೆ. ಪುಣ್ಯ ಎನಿಸುವ ದೇವರು ಯಾವಾಗಲೂ ಒಳ್ಳೆಯ ಕೆಲಸದಲ್ಲಿಯೇ ತನ್ನನ್ನು ತೊಡಗಿಸಿಕೊಳ್ಳುವನು.

ಹೀಗೆ ಅವನು ಪುಣ್ಯ, ಆದರೆ ಅವನಿಂದ ನಾವು ಫಲ ಪಡೆಯಬೇಕೆಂದರೆ

ಅವನನ್ನು ಪುಣ್ಯ ಎಂದು ಕೀರ್ತಿಸುತ್ತಿರಬೇಕು - ಪುಣ್ಯಕೀರ್ತಿಃ, ಪುಣ್ಯ ಇತಿ ಕೀರ್ತ್ಯತೇ ಇತಿ ಪುಣ್ಯಕೀರ್ತಿಃ ಕೀರ್ತಿ ಶಬ್ದಕ್ಕೆ ಕೀರ್ತಿಸಲ್ಪಡುವವನು, ಹೇಳಲ್ಪಡುವವನು ಎಂಬುದು. ಕೀರ್ತಿಯು ಕೀರ್ತಿಶಬ್ದದಿಂದ ಹೇಳಲ್ಪಡುವುದು ಕೂಡಾ ಈ ಅರ್ಥದಲ್ಲಿಯೇ.

ಹಾಗೆಯೇ ಪುಣ್ಯ ಎಂದರೆ ಮುಖ್ಯವಾಗಿ ಭಗವಂತ ಎನಿಸಿದರೆ ಭಗವಂತನ ಬಳಿಕ ಅವನ ಪ್ರೇರಣೆಗೊಳಗಾಗಿ ಒಳ್ಳೆಯ ಕೆಲಸ ನಡೆಸತಕ್ಕ ನಾವು ಪುಣ್ಯರು. ಇಂತಹ ಪುಣ್ಯರಿಂದಲೇ ಕೀರ್ತಿಸಲ್ಪಡುವವನು ಪುಣ್ಯಕೀರ್ತಿ. ದೇವರನ್ನು ದುಷ್ಟರು ಕೀರ್ತಿಸುವುದಿಲ್ಲ. ದುಷ್ಟರು ಕೀರ್ತಿಸಿದರೂ ಅದನ್ನು ಕೇಳಬಾರದು. ದುರ್ಯೋಧನ ಕೃಷ್ಣನ ಬಗ್ಗೆ ಹೇಳಿದ್ದನ್ನು ಭೀಷ್ಮರು ಕೇಳಲಿಲ್ಲ.

ಆದುದರಿಂದ ಒಳ್ಳೆಯ ಕೆಲಸದಲ್ಲಿ ತಮ್ಮನ್ನು ತೊಡಗಿಸಿಕೊಂಡು ಪುಣ್ಯ ಎನಿಸುವವರಿಂದಲೇ ಕೀರ್ತಿಸಲ್ಪಡುವುದರಿಂದ ಭಗವಂತ ಪುಣ್ಯಕೀರ್ತಿ.

**೬೫೭ ಅನಾಮಯಃ - ಸಂಸಾರವೆಂಬ ಮಹಾವ್ಯಾಧಿಗೆ ವಿರೋಧಿಯಾಗಿರುವವನು.**

**ವಿವರಣೆ :** ಆಮಯ ಎಂದರೆ ರೋಗ. ದೇಹಕ್ಕೆ ಬರುವ ರೋಗಗಳು ಚಿಕ್ಕಪುಟ್ಟ ರೋಗಗಳು. ಯಾಕೆಂದರೆ ದೇಹ ಹೇಗೆ ಅಶಾಶ್ವತವಾದದ್ದೋ ಹಾಗೆ ದೇಹದ ರೋಗಗಳೂ ಅಶಾಶ್ವತವಾದವುಗಳು. ದೇಹದ ಜೊತೆಗೆಯೇ ಹೋಗುವವುಗಳು. ಹೀಗೆ ದೇಹದ ಜೊತೆಗೆಯೇ ಬಂದು, ದೇಹದ ಜೊತೆಗೆಯೇ ತೆರಳುವ ದೈಹಿಕ ರೋಗಗಳು ಅಮುಖ್ಯವಾದವು. ಆದುದರಿಂದ ಪ್ರಧಾನ ರೋಗ ಎಂದರೆ ಜೀವಕ್ಕೆ ಅಂಟಿದ ರೋಗ. ಅದು ಜೀವ ಸ್ವರೂಪದಂತೆಯೇ ಅನಾದಿಯಾಗಿದ್ದು ಜೀವನನ್ನು ಕಾಡಿಸುತ್ತ ಇರುವುದು. ಜೀವನು ಮೋಕ್ಷವನ್ನು ಪಡೆಯುವವರೆಗೂ ಅವನನ್ನು ಪೀಡಿಸುತ್ತ ಇರುವುದು. ಹೀಗೆ ಮುಖ್ಯವಾಗಿರುವ ಸಂಸಾರರೋಗವೇ ನಿಜವಾದ ರೋಗ ; ಆಮಯ.

ಅಂತಹ ಸಂಸಾರರೋಗಕ್ಕೆ ವಿರೋಧಿಯಾಗಿರುವುದರಿಂದ ಭಗವಂತ ಅನಾಮಯ ಎನಿಸುವನು. ಬ್ರಾಹ್ಮಣ ವಿರೋಧಿಯಾದವನನ್ನು ಹೇಗೆ ಅಬ್ರಾಹ್ಮಣ ಎಂದು ಕರೆಯಲಾಗುವುದೋ ಹಾಗೆ. ಸಂಸಾರಬಂಧನವನ್ನು ಪರಿಹರಿಸುವವನಾದುದರಿಂದಲೇ ದೇವರು ಸಂಸಾರರೋಗವಿರೋಧಿ ಎನಿಸುವನು. ಅಜ್ಞಾನ ವಿರೋಧಿಯಾದುದು ಜ್ಞಾನ ; ದೋಷ ವಿರೋಧಿಯಾದುದು ಗುಣ - ಎಂದು ಹೇಗೆ ವ್ಯವಹರಿಸಲಾಗುವುದೋ ಹಾಗೆ.

ಹೀಗೆ ಸಂಸಾರರೋಗಕ್ಕೆ ವಿರೋಧಿಯಾಗಿರುವುದರಿಂದ ಭಗವಂತ 'ಅನಾಮಯ'

**ಮನೋಜವಸ್ತೀರ್ಥಕರೋ ವಸುರೇತಾ ವಸುಪ್ರದಃ |**
**ವಸುಪ್ರದೋ ವಾಸುದೇವೋ ವಸುರ್ವಸುಮನಾ ಹವಿಃ || ||೭೪||**

**೬೯೮. ಮನೋಜವಃ – ಮನಸ್ಸಿನ ವೇಗದಂತೆ ಅತ್ಯಂತ ವೇಗ ಉಳ್ಳವನು.**

ವಿವರಣೆ : ಜವ ಎಂದರೆ ವೇಗ. ಮನಸಃ ಜವ ಇವ ಜವಃ ಯಸ್ಯ ಸಃ ಮನಸ್ಸಿನ ವೇಗದಂತೆ ವೇಗ ಉಳ್ಳವನು.

ಲೋಕದಲ್ಲಿ ವೇಗದ ಪರಿಮಾಣವನ್ನು ಬೇರೆ ಬೇರೆ ಪ್ರಾಣಿಗಳ, ವಸ್ತುಗಳ ವೇಗದ ದೃಷ್ಟಾಂತದಿಂದ ತಿಳಿಸುವ ಕ್ರಮ.

ಒಬ್ಬ ತುಂಬ ವೇಗವಾಗಿ ಸಾಗುತ್ತಿದ್ದಾನೆಂದರೆ ಅವನು ಕುದುರೆಯಂತೆ ಓಡುತ್ತಿದ್ದಾನೆ ಎನ್ನುವೆವು.

ಕುದುರೆಗಿಂತಲೂ ಹೆಚ್ಚು ವೇಗ ಇದ್ದಲ್ಲಿ, ಗಾಳಿಯಂತೆ ವೇಗವಾಗಿ ಸಾಗುತ್ತಾನೆ. ಎಂದು ವ್ಯವಹರಿಸಲಾಗುವುದು. ಯಾಕೆಂದರೆ ಜಡವಸ್ತುಗಳಲ್ಲಿ ಗಾಳಿಯಷ್ಟು ವೇಗ ಬೇರೆ ಯಾವ ವಸ್ತುವಿಗೂ ಇರಲಾರದು.

ವಾಯುವಿಗಿಂತಲೂ ಅಧಿಕ ವೇಗ ಉಳ್ಳದ್ದು ಮನಸ್ಸು. ನನ್ನ ಪ್ರವಚನವನ್ನು ಕೇಳುತ್ತ ಇರುವ ನಿಮ್ಮ ಮನಸ್ಸು ಈಗ ಇಲ್ಲಿದೆ. ಒಂದು ವೇಳೆ ನನ್ನ ಪ್ರವಚನದಲ್ಲಿ ಅಮೇರಿಕಾದೇಶದ್ದೋ, ಇಂಗ್ಲೇಂಡಿದ್ದೋ ಪ್ರಸ್ತಾವ ಬಂತೆಂದರೆ ನಿಮ್ಮ ಮನಸ್ಸು ಕೂಡಲೇ ಅಲ್ಲಿಗೇ ಓಡುತ್ತದೆ. ಯಾಕೆ, ಸ್ವರ್ಗಲೋಕದ್ದೋ ನರಕದ್ದೋ, ಮೋಕ್ಷದ್ದೋ ನಿರೂಪಣೆ ಬಂತೆಂದರೆ ಆ ಲೋಕಗಳಿಗೂ ಮನಸ್ಸು ಹಾಕಬಲ್ಲದು. ಹೀಗೆ ಮನಸ್ಸಿನ ವೇಗ ಇತರ ಎಲ್ಲ ವಸ್ತುಗಳ, ವ್ಯಕ್ತಿಗಳ ವೇಗಕ್ಕಿಂತಲೂ ಅಧಿಕವಾದುದು. ಆದುದರಿಂದ ದೇವರ ಅತ್ಯಂತವೇಗವನ್ನು ಆ ಮನಸ್ಸಿನ ವೇಗದ ದೃಷ್ಟಾಂತದಿಂದ ಸ್ತುತಿಸಲಾಗುವುದು.

ವಾಸ್ತವವಾಗಿ ದೇವರ ವೇಗ ಮನಸ್ಸಿನ ವೇಗವನ್ನೂ ಮೀರಿದುದು. ಅಚಿಂತ್ಯ ಶಕ್ತಿಯಿಂದಾಗಿ ಅವನಲ್ಲಿ ಅತ್ಯಂತ ವೇಗ ಇರುವುದು. ಆದರೆ ಅವನ ಆ ವೇಗದ ಆಧಿಕ್ಯವನ್ನು ತಿಳಿಸಲು ಬೇರೆ ಶಬ್ದಗಳೇ ಇಲ್ಲದಿರುವುದರಿಂದ, ನಮಗೆಲ್ಲ ಮನಸ್ಸಿನ ವೇಗವೇ ಅತ್ಯಧಿಕ ವೇಗ ಎಂದು ಪರಿಚಿತವಾಗಿರುವುದರಿಂದ ಅಂತಹ ಮನಸ್ಸಿನ

ವೇಗದ ದೃಷ್ಟಾಂತವನ್ನು ಕೊಟ್ಟು ‘ಮನೋಜವಃ’ - ಎಂದು ಸ್ತುತಿಸಲಾಗಿದೆ.

ಆದುದರಿಂದ ಮನಸ್ಸಿನ ವೇಗದಷ್ಟು ವೇಗ ಉಳ್ಳವನೆನ್ನುವುದಕ್ಕಿಂತಲೂ ಮನಸ್ಸಿನ ವೇಗಕ್ಕಿಂತಲೂ ಅಧಿಕ ವೇಗ ಉಳ್ಳವನೆಂಬುದೇ ಮನೋಜವಃನಾಮದಿಂದ ಧ್ವನಿಸುವ ಅರ್ಥ.

**೬೯. ತೀರ್ಥಕರಃ – * ಪಾಪಗಳಿಂದ ದಾಟಿಸುವ ಗಂಗಾದಿ ತೀರ್ಥಗಳನ್ನು ನಿರ್ಮಿಸಿರುವವನು.**

*** ಅಜ್ಞಾನ, ವಿಪರೀತ ಜ್ಞಾನಗಳಿಂದ ಪಾರು ಮಾಡಬಲ್ಲ ಶಾಸ್ತ್ರಗಳನ್ನು ರಚಿಸಿರುವವನು.**

ವಿವರಣೆ : ತೀರ್ಥ – ಎಂದರೆ ದಾಟಿಸುವಂತಹದ್ದು. ತೀರ್ಯತೇ ಅನೇನೇತಿ ತೀರ್ಥಮ್| ನಮ್ಮನ್ನು ಯಾವುದು ದಾಟಿಸುವುದು ? ಗಂಗಾದಿನದಿಗಳು ದಾಟಿಸುತ್ತವೆ. ಯಾವುದರಿಂದ ಪಾಪದಿಂದ. ಎಂತೆಂತಹ ಪಾಪಗಳನ್ನೆಸಗಿದರೂ ಆ ಪಾಪಗಳನ್ನೆಲ್ಲ ಗಂಗೆ, ಯಮುನೆ, ಗೋದಾವರಿ ಮುಂತಾದ ನದಿಗಳು ದಾಟಿಸುವುದು. ಆ ನದಿಗಳಲ್ಲಿ ಸ್ನಾನ, ಅವುಗಳ ನೀರಿನ ಪಾನ , - ಇವಲ್ಲದಿದ್ದರೆ, ಅವುಗಳ ಸ್ಮರಣೆಯೂ ಸಾಕು, ನಮ್ಮ ಪಾಪಗಳ ಪರಿಹಾರಕ್ಕೆ.

ಇಂತಹ ನದಿಗಳನ್ನು ನಿರ್ಮಿಸಿರುವವನು ಭಗವಂತ -

ತೀರ್ಥಾನಿ ಕರೋತೀತಿ ತೀರ್ಥಕರಃ |

ಗಂಗೆ ತ್ರಿವಿಕ್ರಮನ ಪಾದ ತೊಳೆದ ಜಲ ಎಂಬುದು ಪ್ರಸಿದ್ಧ.

ಬರೇ ಗಂಗೆ ಅಲ್ಲ, ಎಲ್ಲ ನದಿಗಲೂ ಭಗವಂತನ ಪಾದಪಂಕಜದಿಂದಲೇ ಹುಟ್ಟಿಕೊಂಡವು.

ಶ್ರೀರಾಜರಾಜೇಶ್ವರ ತೀರ್ಥರು ರಚಿಸಿರುವ ಮಂಗಲಾಷ್ಟಕದಲ್ಲಿ - ‘ಗಂಗಾ ಸಿಂಧು ಸರಸ್ವತೀ ಚ ಯಮುನಾ......’ ಎಂಬುದಾಗಿ ಪ್ರಸಿದ್ಧನದಿಗಳನ್ನೆಲ್ಲ ಉಲ್ಲೇಖಿಸಿ, **‘..... ಇತ್ಯಾದಯೋ ನದ್ಯಃ ಶ್ರೀ ಹರಿಪಾದಪಂಕಜಭವಾಃ ಕುರ್ವಂತು ನೋ ಮಂಗಲಮ್’** ಎಂಬುದಾಗಿ ಎಲ್ಲ ನದಿಗಳೂ ಶ್ರೀ ಹರಿಯ ಪಾದಕಮಲದಿಂದ ಪ್ರಾದುರ್ಭೂತಗಳಾದವು ಎಂದು ಸ್ತುತಿಸಲಾಗಿದೆ.

ಹೀಗೆ ನದಿಗಳನ್ನು ಭಗವಂತ ನಿರ್ಮಾಣ ಮಾಡಿರುವುದರಿಂದಲೇ ಬೃಹದಾರಣ್ಯಕೋಪನಿಷತ್ತು **‘ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ಪ್ರಾಚ್ಯೋऽನ್ಯಾ ನದ್ಯಃ ಸ್ಯಂದಂತೇ ಶ್ವೇತೇಭ್ಯಃ ಪರ್ವತೇಭ್ಯಃ......’** ಇತ್ಯಾದಿಯಾಗಿ ತಿಳಿಸುತ್ತಿರುವಂತೆ ಅಕ್ಷರ ಎನಿಸುವ ಭಗವಂತನ ಆದೇಶಕ್ಕನುಸಾರವಾಗಿಯೇ ಬೇರೆ

ಬೇರೆ ನದಿಗಳು ಪೂರ್ವ ಮುಂತಾದ ಬೇರ ಬೇರೆ ದಿಕ್ಕಿಗೆ ಹರಿಯುತ್ತವೆ - ಎಂದು ಸಾರಿದೆ.

ಈ ರೀತಿಯಾಗಿ ಭಕ್ತರ ಪಾಪಗಳ ತರಣಕ್ಕೆ - ದಾಟುವುದಕ್ಕೆ ಸಾಧನವಾಗಿ ಗಂಗಾದಿತೀರ್ಥಗಳನ್ನು ರಚಿಸಿರುವುದರಿಂದ ಭಗವಂತನು ತೀರ್ಥಕರ.

ಗಂಗಾನದಿಗಳು ಪಾಪಗಳಿಂದ ದಾಟಿಸುವುದರಿಂದಾಗಿ ತೀರ್ಥಗಳೆನಿಸಿದರೆ ಅಜ್ಞಾನ, ವಿಪರೀತ ಜ್ಞಾನಗಳಿಂದ ದಾಟಿಸುವುದರಿಂದ ತೀರ್ಥಗಳೆನಿಸುವವು ಶಾಸ್ತ್ರಗಳು. ತೀರ್ಯತೇ ಅಜ್ಞಾನಂ, ವಿಪರೀತಜ್ಞಾನಂ ಅನೇನೇತಿ ತೀರ್ಥಂ - ಶಾಸ್ತ್ರಮ್ | ವ್ಯಾಸರೂಪದಿಂದ ಅಂತಹ ಶಾಸ್ತ್ರಗಳನ್ನು ರಚಿಸಿರುವುದರಿಂದಲೂ ಭಗವಂತನು ತೀರ್ಥಕರ.

ಆದುದರಿಂದ ಭಕ್ತರನ್ನು ಪಾಪಗಳಿಂದ ಪಾರುಮಾಡಬಲ್ಲ ಗಂಗಾದಿತೀರ್ಥಗಳನ್ನೂ, ಅಜ್ಞಾನ, ವಿಪರೀತ ಜ್ಞಾನಗಳಿಂದ ಪಾರು ಮಾಡಬಲ್ಲ ಮಹಾಭಾರತಾದಿ ಶಾಸ್ತ್ರಗಳನ್ನೂ ರಚಿಸಿರುವುದರಿಂದ ಭಗವಂತ ತೀರ್ಥಕರ.

**೨೦೦. ವಸುರೇತಾಃ – ಸಂಪತ್ತು ರೂಪದ ಬ್ರಹ್ಮಾಂಡಕ್ಕೆ ಕಾರಣವಾದ ರೇತಸ್ಸು ಉಳ್ಳವನು.**

ವಿವರಣೆ : ವಸು ಎಂದರೆ ಸಂಪತ್ತು. ಯಾವುದು ಸಂಪತ್ತು ? ಯಾವುದು ಸುಖಕ್ಕೆ ಸಾಧನವಾಗುವುದೋ ಅದೇ ಸಂಪತ್ತು. ಮನೆ ಹೇಗೆ ನಮ್ಮ ಸುಖಕ್ಕೆ ಸಾಧನಾವಾಗಿರುವುದರಿಂದ ಸಂಪತ್ತು ಎಂದು ಪರಿಗಣಿಸಲ್ಪಡುವುದೋ ಹಾಗೆ ಮನೆ ಮುಂತಾದ ಉಳಿದೆಲ್ಲ ಸಂಪತ್ತುಗಳಿಗೆ ಆಧಾರವಾಗಿರುವ ಬ್ರಹ್ಮಾಂಡ ಮಹಾಸಂಪತ್ತು. ಬ್ರಹ್ಮಾಂಡ ಆಧಾರವಾಗಿ ಇಲ್ಲದಿದ್ದರೆ ನಾವಾಗಲೀ, ತತ್ತ್ವಾಭಿಮಾನಿ ದೇವತೆಗಳಾಗಲೀ ತಮ್ಮ ತಮ್ಮ ಸಾಧನೆಗಳನ್ನು ನಡೆಸಲು ಸಾಧ್ಯವೇ ಇಲ್ಲ ತಾನೇ? ಆದ್ದರಿಂದ ಬ್ರಹ್ಮಾಂಡ ನಮ್ಮೆಲ್ಲರ ಪಾಲಿಗೆ ಆಧಾರವಾಗಿದ್ದು ಮಹಾ ಸಂಪತ್ತು ಎನಿಸಿದೆ. ಅದು ಭಗವಂತನ ರೇತಸ್ಸಿನಿಂದ ಉಂಟಾಗುವಂತಹದ್ದು.

**'ಅಪ ಏವ ಸಸರ್ಜಾದೌ ತಾಸು ವೀರ್ಯಂ ಅವಾಸೃಜದ್ |**
**ತದಡಂ ಅಭವದ್ ಹೈಮಂ......'**

ಎಂದಿರುವಂತೆ ನೀರನ್ನು ಸೃಷ್ಟಿಸಿದ ಭಗವಂತ ಅಂತಹ ನೀರಿನಲ್ಲಿ ತನ್ನ ರೇತಸ್ಸನ್ನು ಇಡುವನು. ಅದರಿಂದ ಚಿನ್ನದ ಅಂಡ ಆಗಿರುವುದರಿಂದಲೂ ಅದು 'ವಸು' ಎನಿಸಬಹುದಾಗಿದೆ.

'ಶ್ರೀ ಅನಂತಾಯ ನಮಃ ' 'ಶ್ರೀ ಅನಂತಾತ್ಮನೇ ನಮಃ'
'ಶ್ರೀ ಊರ್ಜಿತಶಾಸನಾಯ ನಮಃ'



ಅನಂತ ಚತುರ್ದಶಿಯಂದು ಅನಂತ ಪದ್ಮನಾಭನ ಅಲಂಕಾರದಲ್ಲಿ ಮೆರೆಯುತ್ತಿರುವ ಉಡುಪಿ ಶ್ರೀಕೃಷ್ಣನ ಪ್ರತೀಕದಲ್ಲಿ ವಿ.ಸ.ನಾಮದ 'ಅನಂತಃ' 'ಅನಂತಾತ್ಮಾ' 'ಊರ್ಜಿತಶಾಸನಃ' - ಮುಂತಾದ ದೇವರ ಅನಂತತ್ವದ, ಶಾಸಕತ್ವದ ಪ್ರಸ್ತಾವವುಳ್ಳ ನಾಮುಗಳಿಂದ ಅರ್ಥಾನುಸಂಧಾನ ನಡೆಸಬಹುದಾಗಿದೆ.

'ಶ್ರೀ ದರ್ಪಘ್ನೇ ನಮಃ' 'ಶ್ರೀ ವಿಕ್ರಮಾಯ ನಮಃ'
'ಶ್ರೀ ದೇವಾಯ ನಮಃ'



ಶ್ರೀ ನರಸಿಂಹತೀರ್ಥವರದ ಕಾಲಿಯಮರ್ದನಕೃಷ್ಣ



ಶ್ರೀ ಜನಾರ್ದನ ತೀರ್ಥವರದ ಕಾಳಿಯಮರ್ದನ ಕೃಷ್ಣ

ಅದಮಾರು ಮಠದ ನರಸಿಂಹತೀರ್ಥರಿಗೂ, ಕೃಷ್ಣಾಪುರ ಮಠದ ಶ್ರೀಜನಾರ್ದನ ತೀರ್ಥರಿಗೂ ಶ್ರೀಮಧ್ವಗುರುಗಳು ಪೂಜಿಸಿ, ಅನುಗ್ರಹಿಸಿದ ಚತುರ್ಭುಜ ಹಾಗೂ ದ್ವಿಭುಜ ಕಾಳಿಯ ಮರ್ದನ ಕೃಷ್ಣನ ಪ್ರತೀಕಗಳಲ್ಲಿ ವಿ.ಸ.ನಾಮದ ಭಕ್ತರನ್ನು ಉದ್ಧಾರಕ್ಕಾಗಿ ದಂಡಿಸುವ ಹಾಗೂ ನರ್ತಿಸುವ ಲೀಲೆಯ ಪ್ರಸ್ತಾವವುಳ್ಳ 'ದರ್ಪಹಾ' 'ವಿಕ್ರಮಃ' 'ಮಹಾಮೂರ್ತಿಃ' 'ದೇವಃ' - ಮುಂತಾದ ನಾಮಗಳಿಂದ ಅರ್ಥಾನುಸಂಧಾನ ನಡೆಸಬಹುದಾಗಿದೆ.

ಹೀಗೆ ಸಂಪತ್ತಿನ ರೂಪದಲ್ಲಿದ್ದು ‘ವಸು’ ಎನಿಸುವ ಬ್ರಹ್ಮಾಂಡಕ್ಕೆ ಕಾರಣವಾಗಿರುವ ರೇತಸ್ಸು ಉಳ್ಳವನಾಗಿರುವುದರಿಂದಲೇ ಭಗವಂತನು - ವಸುರೇತಾಃ- ವಸು ಬ್ರಹ್ಮಾಂಡತ್ಮಕಂ ವಸು, ತತ್ಕಾರಣಂ ರೇತಃ ವೀರ್ಯಂ ಯಸ್ಯ ಸಃ - ಎನಿಸುವನು.

**೭೦೧. ವಸುಪ್ರದಃ – ಬ್ರಹ್ಮಾಂಡರೂಪವಾದ ಸಂಪತ್ತನ್ನು ಚೆನ್ನಾಗಿ ರಕ್ಷಿಸುವವನು.**

**ವಿವರಣೆ:** ಭಗವಂತ ಯಾವುದೇ ವಸ್ತುವನ್ನು ಸೃಷ್ಟಿ ಮಾಡಿದನೆಂದರೆ ಅದಕ್ಕೆ ಸೂಕ್ತ ರಕ್ಷಣೆಯನ್ನೂ ನೀಡುವನು. ಅಂತೆಯೇ ವಸುರೂಪವಾದ ಬ್ರಹ್ಮಾಂಡವನ್ನು ಸೃಷ್ಟಿ ಮಾಡುವುದಷ್ಟೇ ಅಲ್ಲದೆ, ಅದನ್ನು ಚೆನ್ನಾಗಿ ರಕ್ಷಿಸುವನು ಕೂಡಾ. ‘ವಸುಪ್ರದಃ’ ನಾಮ ಅವನ ಈ ಮಹಿಮೆಯನ್ನೇ ಸಾರುತ್ತಿದೆ. ವಸು ಎಂದರೆ ಹಿಂದಿನ ನಾಮದಲ್ಲಿ ನೋಡಿದಂತೆ ಸಂಪದ್ ರೂಪವಾದ ಬ್ರಹ್ಮಾಂಡ. ಅದನ್ನು ಚೆನ್ನಾಗಿ ಸಂರಕ್ಷಿಸುವವನು ಪ್ರಕರ್ಷೇಣ ದಯತೇ ಇತಿ (ದೇಙ್ ರಕ್ಷಣೇ) ವಸುಪ್ರದಃ.

**೭೦೨. ವಸುಪ್ರದಃ – ಪ್ರಲಯಕಾಲದಲ್ಲಿ ಬ್ರಹ್ಮಾಂಡವನ್ನು ಸಂಹರಿಸುವವನು.**

**ವಿವರಣೆ :** ಭಗವಂತನಿಗೆ ಒಂದೇ ನಾಮದ ರೂಪಗಳು ಎರಡು ಮೂರು ಇರುವುದರಿಂದ ವಿಷ್ಣುಸಹಸ್ರನಾಮದಲ್ಲಿ ಒಂದೇ ಬಗೆಯ ನಾಮ ಎರಡು ಮೂರು ಬಾರಿ ಪಠಿತವಾದದ್ದೂ ಇದೆ.

ಇಲ್ಲಿಯಂತೂ ‘ವಸುಪ್ರದ’- ಎಂಬ ಒಂದೇ ನಾಮ ಜೊತೆಗೇಯೇ ಎರಡು ಬಾರಿ ಪಠಿತವಾಗಿದೆ. ಭಗವಂತನ ಬೇರೆ ಬೇರೆ ರೂಪಗಳನ್ನು ತಿಳಿಸುವ ಅವುಗಳಿಗೆ ಬೇರೆ ಬೇರೆ ಅರ್ಥವನ್ನು ಹೇಳಬೇಕು.

ಹಿಂದೆ ‘ವಸುಪ್ರದ’ ಎಂಬ ನಾಮಕ್ಕೆ ಬ್ರಹ್ಮಾಂಡವನ್ನು ರಕ್ಷಿಸುವವನು ಎಂಬ ಅರ್ಥವನ್ನು ಕಂಡಿದ್ದೇವೆ. ಸೃಷ್ಟಿಸಿದ ಪದಾರ್ಥವನ್ನು ಸ್ಥಿತಿಕಾಲದಲ್ಲಿ ಸಂರಕ್ಷಿಸಿ, ಸಂಹಾರಕಾಲದಲ್ಲಿ ಅದನ್ನು ಸಂಹರಿಸುವುದೂ ಅವನ ಸ್ವಭಾವ. ಅದಕ್ಕೆ ಅನುಗುಣವಾಗಿ ಬ್ರಹ್ಮಾಂಡವನ್ನು ಸೃಷ್ಟಿಕಾಲದಲ್ಲಿ ಸೃಷ್ಟಿಸಿ, ಸ್ಥಿತಿಕಾಲದಲ್ಲಿ ಪಾಲಿಸಿ, ಸಂಹಾರಕಾಲದಲ್ಲಿ ಸಂಹರಿಸುವವನು ಭಗವಂತ. ‘ವಸುಪ್ರದ ’- ಎಂಬ ನಾಮ ಅವನ ಈ ಮಹಿಮೆಯನ್ನು ತಿಳಿಸುತ್ತಿದೆ - ವಸು ಬ್ರಹ್ಮಾಂಡಾತ್ಮಕಂ ಪ್ರಕರ್ಷೇಣ ದ್ಯತಿ ಖಂಡಯತೀತಿ ವಸುಪ್ರದಃ ಪ್ರಲಯಕಾಲದಲ್ಲಿ ಬ್ರಹ್ಮಾಂಡವನ್ನು ನಾಶಮಾಡುವವನು.

**೭೦೩. ವಾಸುದೇವಃ – ಬ್ರಹ್ಮಾಂಡದ ಹೊರಗೆ ಆಚ್ಛಾದಕನಾಗಿಯೂ ಒಳಗೆ ಬೆಳಕು ಚೆಲ್ಲುವವನಾಗಿಯೂ ಅದನ್ನು ರಕ್ಷಿಸುವವನು.**

**ವಿವರಣೆ:** ಮೊದಲಿನ 'ವಸುಪ್ರದ' ನಾಮ ಭಗವಂತ ಬ್ರಹ್ಮಾಂಡವನ್ನು ಸಂರಕ್ಷಿಸುವ ಮಹಿಮೆಯನ್ನು ತಿಳಿಸುವುದೆಂದು ಕಂಡಿದ್ದೇವೆ. ಭಗವಂತ ಹೇಗೆ ಬ್ರಹ್ಮಾಂಡವನ್ನು ಸಂರಕ್ಷಿಸುವನು?ಎಂಬುದರ ಬಗ್ಗೆ ಮುಂದಿನ 'ವಾಸುದೇವಃ' ನಾಮ ಬೆಳಕು ಚೆಲ್ಲುತ್ತಿದೆ.

ಬ್ರಹ್ಮಾಂಡಕ್ಕೆ ಹೊರಮೈಯಿಂದ ಆಚ್ಛಾದಕನಾಗಿದ್ದುಕೊಂಡು ಅದಕ್ಕೆ ರಕ್ಷಣೆ ನೀಡಿದರೆ, ಅದರ ಒಳಗೆ ಅದನ್ನು ಬೆಳಗಿಸುವ ಮೂಲಕ, ಅಂದರೆ ಅದರ ಬಗ್ಗೆ ದೇವತೆಗಳೇ ಮುಂತಾದ ಭಕ್ತರಿಗೆ ತಿಳುವಳಿಕೆಯ ಬೆಳಕನ್ನು ಚೆಲ್ಲುವ ಮೂಲಕ ಅದಕ್ಕೆ ರಕ್ಷಣೆ ನೀಡುವನು. ವಸ್ತೇ ಆಚ್ಛಾದಯತಿ ಇತಿ ವಸುಃ, ವಸು ಏವ ವಾಸುಃ| ದೇವಯತೀತಿ ದೇವಃ ವಾಸುದೇವಃ| ಹೀಗೆ ವಾಸು ಶಬ್ದವು ಬ್ರಹ್ಮಾಂಡವನ್ನು ಹೊರಗಿನಿಂದ ಆಚ್ಛಾದಿಸಿಕೊಂಡಿರುವವನೆಂಬುದನ್ನು ತಿಳಿಸಿದರೆ, ದೇವ ಶಬ್ದವು ಬ್ರಹ್ಮಾಂಡದ ಒಳಗೆ ಬೆಳಕು ಚೆಲ್ಲುವುದನ್ನು ತಿಳಿಸುವುದು. ಭಗವಂತನು ಬ್ರಹ್ಮಾಂಡವನ್ನು ರಕ್ಷಿಸುವ ಕ್ರಮ ಈ ಬಗೆಯದ್ದು. ಬ್ರಹ್ಮಾಂಡಕ್ಕೆ ಹೊರಗಿನಿಂದ ರಕ್ಷಣೆ ನೀಡದಿದ್ದರೆ ಅದು ಕುಸಿದು ಬಿದ್ದೀತು ! ಒಳಗಿನಿಂದ ಜ್ಞಾನದ ಬೆಳಕಿನ ರಕ್ಷಣೆ ನೀಡದಿದ್ದರೆ ಬ್ರಹ್ಮಾಂಡದೊಳಗೆ ಅಜ್ಞಾನ, ತಮಸ್ಸು ತುಂಬಿಕೊಂಡೀತು !

**೭೦೪. ವಸುಃ – ಜೀವೋತ್ತಮನಾದ ಚತುರ್ಮುಖನನ್ನು ಸೃಷ್ಟಿಸಿರುವವನು.**

**ವಿವರಣೆ :** ಬ್ರಹ್ಮಾಂಡವನ್ನು ಸೃಷ್ಟಿಸಿದ ಭಗವಂತನು ಅಂತಹ ಬ್ರಹ್ಮಾಂಡವೇ ಶರೀರವಾಗಿ ಉಳ್ಳ ಶ್ರೇಷ್ಠನಾದ ಚತುರ್ಮುಖನನ್ನು ಸೃಷ್ಟಿಸುವನು - ವಂ ವರಂ ಜೀವೇಷು ವರಂ ಚತುರ್ಮುಖಂ ಸೂತೇ ಇತಿ ವಸುಃ |

ಭಗವಂತನು ತನ್ನ ವಾಸುದೇವ ರೂಪದಿಂದ ಲಕ್ಷ್ಮೀ ದೇವಿಯ 'ಮಾಯಾ'- ಎಂಬ ರೂಪದ ಮಾಧ್ಯಮದಲ್ಲಿ ಚತುರ್ಮುಖನನ್ನು ಸೃಷ್ಟಿಸಿರುವನೆಂದು ಮಹಾಭಾರತ ತಾತ್ಪರ್ಯ ನಿರ್ಣಯದಲ್ಲಿ ತಿಳಿಸಲಾಗಿದೆ. '......... **ಭಗವಾನ್ ಸ ಏಕೋ ಮಾಯಾಂ ಶ್ರಿಯಂ ಸೃಷ್ಟಿವಿಧಿತ್ಸಯಾऽऽರ | ರೂಪೇಣ ಪೂರ್ವೇಣ ಸ ವಾಸುದೇವನಾಮ್ನಾ ವಿರಿಂಚಂ ಸುಷುವೇ ಚ ಸಾऽತಃ||** ವಾಸುದೇವ ಚತುರ್ಮುಖನನ್ನು ಸೃಷ್ಟಿಸುವಾಗಲೇ ಅವನು ಜೀವೋತ್ತಮನಾಗಿ ಮೆರೆಯುವಂತೆ, ಹಾಗೆ ಮೆರೆಯಲು ಬೇಕಾದ ಗುಣಗಳು ಸಿದ್ಧಿಸುವಂತೆ ಅನುಗ್ರಹಿಸಿರುವನು. ಆದುದರಿಂದಲೇ 'ವಸುಃ' ಎಂಬ ನಾಮದಿಂದ ಚತುರ್ಮುಖನನ್ನು 'ವರ' ನನ್ನಾಗಿಯೇ ಸೃಷ್ಟಿಸುವನು ಎಂದು

ಉಲ್ಲೇಖಿಸಲಾಗಿದೆ.

**೭೦೫. ವಸುಮನಾಃ – ಜನರ ಮನಸ್ಸು ದುಡ್ಡಿನಲ್ಲಿ ಮುಳುಗುವಂತೆ ಮಾಡಿರುವವನು.**

ವಿವರಣೆ : ವಸು ಎಂದರೆ ದುಡ್ಡು. ಅಂತಹ ದುಡ್ಡಿನಲ್ಲೇ ಹೆಚ್ಚಿನ ಜನರ ಮನಸ್ಸು ಮಗ್ನವಾಗುವಂತೆ ದುಡ್ಡಿಗೆ ಅಂತಹ ಆಕರ್ಷಣೆ ನೀಡಿರುವವನು ಭಗವಂತ. ಆದುದರಿಂದ ಅವನು 'ವಸುಮನಾಃ' - ವಸುನಿ ಮನಃ ಜನಾನಾಂ ಮನಃ ಯಸ್ಮಾತ್ ಸಃ - ಎಂಬ ನಿರ್ವಚನವನ್ನಿಟ್ಟುಕೊಂಡಾಗ ಅವನ ಪ್ರೇರಣೆಯಿಂದಾಗಿಯೇ ಜನರಿಗೆ ದುಡ್ಡಿನಲ್ಲಿ ಅಷ್ಟೊಂದು ವ್ಯಾಮೋಹ ಉಂಟಾಗಿದೆ. ಎಂಬ ಅಭಿಪ್ರಾಯದಲ್ಲಿ ಅವನು 'ವಸುಮನಾಃ' ಎನಿಸುವನು.

ಸಮಾಜದಲ್ಲಿ ದುಡ್ಡಿಗೆ ಎಷ್ಟೊಂದು ಮಹತ್ತ್ವ ಇದೆ ಎಂಬುದನ್ನು 'ದುಡ್ಡೇ ದೊಡ್ಡಪ್ಪ' - ಎಂಬ ಗಾದೆಯೇ ಸಾರುತ್ತಿದೆ. ಪ್ರತಿಯೊಂದು ಕ್ಷೇತ್ರದಲ್ಲೂ ದುಡ್ಡಿದ್ದೇ ಕಾರುಬಾರು. ದುಡ್ಡಿಗೆ ಇಷ್ಟೊಂದು ಆಕರ್ಷಣೆ ಯಾಕೆ ಬಂತು ? ಎಲ್ಲರ ಮನಸ್ಸೂ ದುಡ್ಡಿನಲ್ಲಿ ಮುಳುಗುವಂತೆ ಮಾಡಿರುವ 'ವಸುಮನಾಃ' - ಎನಿಸಿರುವ ಭಗವಂತನಿಂದಾಗಿ.

**೭೦೬. ಹವಿಃ – ಪೂಜೆ ಮುಂತಾದ ಸತ್ಕರ್ಮಗಳಲ್ಲಿ ಮೊದಲು ಆಹ್ವಾನಿಸಲ್ಪಡುವವನು.**

ವಿವರಣೆ : ಹೂಯತೇ - ಆಹೂಯತೇ - ಇತಿ ಹವಿಃ - ಪೂಜೆ ಯಜ್ಞ ಮುಂತಾದ ಎಲ್ಲ ಸತ್ಕರ್ಮಗಳ ಆದಿಯಲ್ಲೇ ದೇವರನ್ನು ಆಹ್ವಾನಿಸುತ್ತೇವೆ. ಯಾಕೆ ? ಅವನೇ ನಮ್ಮಲ್ಲೆಲ್ಲ ಇದ್ದುಕೊಂಡು ಆ ಕರ್ಮಗಳನ್ನು ನಿರ್ವಹಿಸಬೇಕು. ಹಾಗೆಯೇ ಆ ಕರ್ಮಗಳನ್ನು ಮುಖ್ಯವಾಗಿ ಸ್ವೀಕರಿಸಬೇಕಾದವನು ಅವನೇ. ಅದಕ್ಕೆ ಸರಿಯಾದ ಫಲವನ್ನು ಅವನೇ ನೀಡುವವನು. ಆದುದರಿಂದ **'ನಿಷುಸೀದ ಗಣಪತೇ ಗಣೇಷು.....'** ಇಂದ್ರಿಯಗಣಗಳಲ್ಲಿ ಸನ್ನಿಹಿತನಾಗು ಎಂದು ಇಂದ್ರಿಯಗಣಾಧಿಪತಿ ಹೃಷೀಕೇಶನನ್ನು ಪೂಜೆಯ ಪ್ರಾರಂಭದಲ್ಲಿ ಆಹ್ವಾನಿಸುವಂತೆ ಯಜ್ಞ ಮುಂತಾದ ಪ್ರತಿಯೊಂದು ಕರ್ಮದ ಆರಂಭದಲ್ಲೂ ಅವನನ್ನು ಆಹ್ವಾನಿಸಲಾಗುವುದು. ಆದುದರಿಂದ ಅವನು 'ಹವಿಃ'

**ಸದ್ಗತಿಃ ಸತ್ಕೃತಿಃ ಸತ್ತಾ ಸದ್ಭೂತಿಃ ಸತ್ಪರಾಯಣಃ |**
**ಶೂರಸೇನೋ ಯದುಶ್ರೇಷ್ಠಃ ಸನ್ನಿವಾಸಃ ಸುಯಾಮುನಃ ||೭೫||**

**೭೦೭. ಸದ್ಗತಿಃ- ನಿರ್ದುಷ್ಟವಾದ ಆಸರೆ.**

ವಿವರಣೆ: ಸತ್ ಅಂದರೆ ನಿರ್ದುಷ್ಟವಾದ, ಗತಿ ಅಂದರೆ ಆಶ್ರಯ ; ಆಸರೆ. ದೇವರು ಉತ್ತಮ ಆಸರೆಯಾಗಿರುವುದರಿಂದ 'ಸದ್ಗತಿ' ಎನಿಸುವನು.

ನಮಗೆ ನಮ್ಮ ನಮ್ಮ ಮನೆಯೂ ಆಸರೆಯಾಗಿರುವುದು, ಮನೆಯಲ್ಲಿರುವ ತಂದೆ ತಾಯಂದಿರೂ, ಉಳಿದ ಬಂಧು ಬಳಗದವರೂ ಆಸರೆಯಾಗಿರುವರು. ನಾವು ಕಲಿಯುವ ವಿದ್ಯಾಸಂಸ್ಥೆ, ದುಡಿಯುವ ಕಛೇರಿ - ಮುಂತಾದವೂ ಆಸರೆ ಆಗುವವು.

ಯಾಕೆ, ನಮ್ಮ ನಮ್ಮ ಶರೀರ ನಮಗೆ ಆಸರೆ. ಶರೀರವನ್ನು ಕಾರ್ಯಕಾರಿಯನ್ನಾಗಿಸುತ್ತಿರುವ ತತ್ತ್ವಾಭಿಮಾನಿ ದೇವತೆಗಳೂ ಆಸರೆ.

ಹೀಗೆ ಅನೇಕಾನೇಕ ಆಶ್ರಯಗಳನ್ನು ಹೊಂದಿರುವೆವಾದರೂ ಆ ಎಲ್ಲಾ ಆಶ್ರಯಗಳು ಶಾಶ್ವತವಾಗಿ ನಮ್ಮ ಜೊತೆಗೆ ಬರುವವುಗಳಲ್ಲ. ಒಂದಲ್ಲ ಒಂದು ದಿನ ನಮಗೆ ಕೈಕೊಟ್ಟು ನಮ್ಮಿಂದ ದೂರ ಹೋಗುವವು. ಅಂತೆಯೇ ಯಾವುದಾದರೊಂದು ಬಗೆಯ ಸ್ವಾರ್ಥಕ್ಕೊಳಗಾಗಿಯೇ ನಮಗೆ ಆಶ್ರಯವಾಗಿರುವವು. ಹಾಗೆಯೇ ಅವೆಲ್ಲ ನಮಗೆ ಆಶ್ರಯಗಳೆಂದರೆ ಯಾವುದೋ ಒಂದು ಅಂಶದಲ್ಲಿ ಮಾತ್ರ. ತಂದೆ ತಾಯಿ ರಕ್ಷಣೆಯ ಅಂಶದಲ್ಲಿ ; ತತ್ತ್ವಾಭಿಮಾನಿ ದೇವತೆಗಳು ಆಯಾ ಇಂದ್ರಿಯಗಳನ್ನು ಪ್ರೇರಿಸುವ ಅಂಶದಲ್ಲಿ, ಹೀಗೆ. ಅಂತೆಯೇ ಅವರೆಲ್ಲ ಅಸ್ವತಂತ್ರರು. ಭಗವಂತನ ಪ್ರೇರಣೆಗೊಳಗಾಗಿಯಷ್ಟೇ ಆಶ್ರಯರೆನಿಸಿರುವವರು.

ಈ ರೀತಿಯಾಗಿ ಉಳಿದೆಲ್ಲ ಆಶ್ರಯಗಳಲ್ಲಿ ತಾತ್ಕಾಲಿಕತ್ವ, ಏಕದೇಶ ಉಪಕಾರಕತ್ವ, ಅಸ್ವಾತಂತ್ರ್ಯ ಮುಂತಾದ ನ್ಯೂನತೆಗಳಿದ್ದರೆ ಇಂತಹ ಯಾವುದೇ ನ್ಯೂನತೆಗಳಿಗೆ, ದೋಷಗಳಿಗೆ ಒಳಗಾಗದೆ ಸ್ವತಂತ್ರನಾಗಿ, ಶಾಶ್ವತವಾಗಿ, ಸರ್ವತೋಮುಖವಾಗಿ ಹಾಗೂ ನಮ್ಮ ಬಗೆಗಿರುವ ವಾತ್ಸಲ್ಯಕಷ್ಟೇ ಒಳಗಾಗಿ ನಮಗೆ ಆಶ್ರಯನಾಗಿರುವವನು ಭಗವಂತ. ಆದುದರಿಂದ ಅವನು ಸದ್ಗತಿಃ - ಒಳ್ಳೆಯ ಆಶ್ರಯ. 'ಆಶ್ರಯ' ಎನಿಸುವುದರಲ್ಲಿ ಇರಬಹುದಾದ ಯಾವುದೇ ದೋಷಗಳಿಲ್ಲದ ಆಶ್ರಯ.

ಆದುದರಿಂದಲೇ ಶ್ರೀ ಮಧ್ವಗುರುಗಳು **'ಹರಿರೇವ ಪರೋ ಹರಿರೇವ ಗುರುಃ ಹರಿರೇವ ಜಗತ್‌ಪಿತೃಮಾತೃಗತಿಃ'** ಎಂಬುದಾಗಿ ಶ್ರೀಹರಿಯೇ ನಿಜವಾದ ಗುರು ಇತ್ಯಾದಿಯಾಗಿರುವಂತೆ ಗತಿಯೂ, ಆಶ್ರಯನೂ ಆಗಿರುವನೆಂದು ಘೋಷಿಸಿರುವರು.

ಈ ಅಭಿಪ್ರಾಯದಲ್ಲಿಯೇ ಭೀಷ್ಮರು ಸದ್ಗತಿಃ ಎಂದು ಸ್ತುತಿಸಿರುವರು.

**೭೦೮. ಸತ್ಕೃತಿಃ – ಒಳ್ಳೆಯ ಯತ್ನ ಉಳ್ಳವನು.**

ವಿವರಣೆ : ಕೃತಿ ಎಂದರೆ ಯತ್ನ. ಉತ್ತಮವಾದ ಯತ್ನವುಳ್ಳವನಾದುದರಿಂದ ಭಗವಂತನು 'ಸತ್ಕೃತಿ' ಎನಿಸುವನು.

ಭಗವಂತನ ಯತ್ನ - ಯಾವುದೇ ಬಗೆಯ ಪ್ರಯಾಸದಿಂದ ಕೂಡಿರುವುದಿಲ್ಲ. ಎಂದೆಂದೂ ನಿಷ್ಫಲವೆನಿಸುವುದೆಂದಿಲ್ಲ. ಯಾವ ಕಾರ್ಯದ ನಿರ್ವಹಣೆಗೆ ಎಷ್ಟು ಪ್ರಮಾಣದಲ್ಲಿ ಬೇಕೋ ಅಷ್ಟೇ ಪ್ರಮಾಣದಲ್ಲಿ ವಿನಿಯೋಗಿಸಲ್ಪಡುವುದು. ಆದುದರಿಂದಲೇ ಅದು ಒಳ್ಳೆಯ ಯತ್ನ ಎನಿಸಿದೆ.

ಅಂತಹ ಒಳ್ಳೆಯ ಯತ್ನ ಇರುವುದರಿಂದಲೇ ಭಗವಂತನು 'ಸತ್ಕೃತಿ' ಎನಿಸುವನು.

ಭಗವಂತನನ್ನು ಈ ಅರ್ಥದಲ್ಲಿ 'ಸತ್ಕೃತಿ' ಎಂದು ಉಪಾಸನೆ ಮಾಡಿದಲ್ಲಿ ನಮ್ಮ ಕೃತಿಗಳೂ, ಯತ್ನಗಳೂ ಸಫಲಗಳಾಗಿ 'ಸತ್'ಗಳೆನಿಸಬಲ್ಲವು.

ದೊಡ್ಡ ದೊಡ್ಡ ಧಾರ್ಮಿಕ ಅಥವಾ ಆಧ್ಯಾತ್ಮಿಕ ಸಾಧನೆಗಳಲ್ಲಿ ತೊಡಗುವ ಮುನ್ನ ಭಗವಂತನನ್ನು 'ಸಕೃತಿಃ'- ಎಂಬ ನಾಮದಿಂದ ಉಪಾಸನೆ ನಡೆಸೋಣ. ಇದರಿಂದ ಪ್ರಸನ್ನನಾಗುವ ಭಗವಂತನ ಅನುಗ್ರಹದಿಂದಾಗಿ ನಮ್ಮ ಆ ನಿಟ್ಟಿನ ಯತ್ನ ಸಾರ್ಥಕವಾಗಿ ಆ ಧಾರ್ಮಿಕ ಅಥವಾ ಆಧ್ಯಾತ್ಮಿಕ ಸಾಧನೆ ಯಶಸ್ವಿಯಾಗಬಲ್ಲದು.

**೭೦೯. ಸತ್ತಾ– ಸರ್ವದೋಷದೂರನಾಗಿ, ಸರ್ವಗುಣಸಂಪನ್ನನಾಗಿ ಇರುವವನು.**

ವಿವರಣೆ : 'ಸರ್ವದೋಷವಿನಿರ್ಮುಕ್ತಃ ಗುಣೈಸ್ಸರ್ವೈರ್ಯುಕ್ತಃ ಯತಃ ' - ಎಂಬ ಪ್ರಮಾಣ ಸಾರುತ್ತಿರುವಂತೆ ದೇವರಲ್ಲಿ ಯಾವ ದೋಷವೂ ಇಲ್ಲ ; ಸಕಲಗುಣಗಳಿಂದಲೂ ಪೂರ್ಣನಾಗಿರುವವನು ಅವನು. ಆದುದರಿಂದ ಅವನು 'ಸತ್ತಾ'- ಎಂದು ಕರೆಸಿಕೊಳ್ಳಲ್ಪಡುವನು. 'ಸತ್ತಾ' ಎಂದು ಆಕಾರಾಂತ ಶಬ್ದ. ಹೊರತು ಅಕಾರಾಂತವಾಗಿ ಹೇಳಬಾರದು.

'ಸಹಸ್ರನಾಮಾವಳಿ'ಯಲ್ಲಿ ವಿನಿಯೋಗಿಸುವಾಗ 'ಓಂ ಸತ್ತಾಯೈ ನಮಃ' 'ಶ್ರೀ ಸತ್ತಾಯೈ ನಮಃ'- ಎಂದು ಪಠಿಸಬೇಕು.

**೭೧೦. ಸದ್ಭೂತಿಃ – ಒಳ್ಳೆಯವನಾದ ಮುಖ್ಯಪ್ರಾಣನ ಪಾಲಿಗೆ ಶ್ರೇಷ್ಠ**

**ಸಂಪತ್ತಾಗಿ ಇರುವವನು.**

ವಿವರಣೆ : 'ಸದ್‌ಭೂತಿಃ' ಎಂಬ ಈ ನಾಮದಲ್ಲಿಯ ಸತ್‌ಶಬ್ದಕ್ಕೆ ಒಳ್ಳೆಯವನು ಎಂಬ ಅರ್ಥ. ಸಜ್ಜನ ಎಂಬಲ್ಲಿ ಈ ಅರ್ಥವನ್ನಿಟ್ಟುಕೊಂಡೇ ಸತ್ ಶಬ್ದವನ್ನು ಬಳಸಲಾಗಿದೆ. ಯಾರು ನಮ್ಮ ಹುಟ್ಟಿನಿಂದ ಪ್ರಾರಂಭಿಸಿ ಸಾಯುವವರೆಗೂ ನಮ್ಮ ಜೊತೆಗೇ ಇರುವರೋ ಅವರು ಸಜ್ಜನರು. ಕಣ್ಣು, ಕಿವಿ ಮುಂತಾದ ಉಳಿದ ಯಾವುದೇ ಇಂದ್ರಿಯ ನಮ್ಮ ಜೀವನದ ಮಧ್ಯದಲ್ಲಿ ಕೈಕೊಡುವುದಿದೆ. ಆದರೆ ಜೀವನವಿಡೀ ನಮ್ಮ ಜೊತೆಗೆ ಇರುವಂತಹದ್ದು ಉಸಿರಾಟ. ಕಣ್ಣು ಕಾಣಿಸುವುದಿಲ್ಲ. ಆದರೂ ಬದುಕಿದ್ದಾನೆ - ಎಂದು ಹೇಳುವಂತೆ ಉಸಿರಾಟ ನಿಂತಿದೆ ಆದರೂ ಬದುಕಿದ್ದಾನೆ - ಎಂದೇನೂ ಹೇಳುವ ಪ್ರಸಂಗವೇ ಇಲ್ಲ. ಹೀಗೆ ಜೀವನವಿಡೀ ನಮ್ಮ ಜೊತೆಗೆ ಇರುವ ಉಸಿರಾಟದ ದೇವತೆ ವಾಯುದೇವನೇ ಮುಖ್ಯವಾಗಿ ಸತ್ - ಒಳ್ಳೆಯವನು.

ಭೂತಿ ಎಂದರೆ ಐಶ್ವರ್ಯ. ಸಾಮಾನ್ಯವಾದ ಐಶ್ವರ್ಯವಲ್ಲ ; ಮಹಾ ಐಶ್ವರ್ಯ. '.....ಭೂತಿರ್ಮಹಾಲಕ್ಷ್ಮೀಃ' - ಎಂಬುದಾಗಿ ಸುಧಾಕಾರರು ಮಹಾಲಕ್ಷ್ಮಿಯೇ ಭೂತಿ ಎನಿಸುವಳೆಂದು ತಿಳಿಸಿರುವರು. 'ಸುಧಾಂತ ವೇದಾಂತ' 'ಬಾಧಾಂತ ತರ್ಕ' ಎಂದಿರುವಂತೆ 'ಗಜಾಂತ ಐಶ್ವರ್ಯ' ಎಂದರೆ ಆನೆಯನ್ನು ಸಾಕುವಷ್ಟು ಪ್ರಮಾಣದ ಐಶ್ವರ್ಯ - ದೊಡ್ಡ ಐಶ್ವರ್ಯ. ನಮ್ಮ ನಿಮ್ಮ ಪಾಲಿಗೆ ಇದು ಐಶ್ವರ್ಯ ಎನಿಸಿದರೆ ಮುಖ್ಯಪ್ರಾಣನ ಪಾಲಿಗೆ ದೇವರೇ ಐಶ್ವರ್ಯ. ಸದ್ ಎನಿಸುವ ಒಳ್ಳೆಯವನಾಗಿರುವ ಮುಖ್ಯಪ್ರಾಣನ ಪಾಲಿಗೆ 'ಭೂತಿಃ' ಐಶ್ವರ್ಯ ಎನಿಸಿರುವವನು ಭಗವಂತನು. ಮುಖ್ಯಪ್ರಾಣನು ತನ್ನ ಹನುಮದವತಾರದಲ್ಲಿ ತನಗೆ ಬೇರೆ ಏನೂ ಬೇಡ ; ನೀನೇ ಬೇಕು ಎಂದು ಶ್ರೀರಾಮಚಂದ್ರನಲ್ಲಿ ಬೇಡಿಕೊಂಡಿದ್ದರೆ, ಭೀಮಸೇನಾವತಾರದಲ್ಲಿ ಶ್ರೀಕೃಷ್ಣನನ್ನು, ಮಧ್ವಾವತಾರದಲ್ಲಿ ಶ್ರೀ ವೇದವ್ಯಾಸರನ್ನು ಬೇಡಿಕೊಂಡಿದ್ದನು. ಆದ್ದರಿಂದ 'ಸದ್‌ಭೂತಿ' - ದೇವರು.

ದೇವರನ್ನು ವಾಯುದೇವ 'ಭೂತಿ' ಎಂದು ಉಪಾಸನೆ ಮಾಡುವನೆಂದು ಭಗವಂತನನ್ನು 'ಸದ್ಭೂತಿ' - ಎಂದು ನಾವು ಉಪಾಸನೆ ನಡೆಸಿದೆವೆಂದರೆ ಒಂದಲ್ಲ ಒಂದು ದಿನ ನಮ್ಮ ಪಾಲಿಗೂ ಭಗವಂತನು ಭೂತಿಯಾಗಿ, ಐಶ್ವರ್ಯವಾಗಿ ಕಾಣಿಸಿಕೊಂಡಾನು.

'ಬೇಡಿದರೆ ಎನ್ನೊಡೆಯನ ಬೇಡುವೆ
ಹಾಡಿದರೆ ಎನ್ನೊಡೆಯನ ಹಾಡುವೆ
ಎನ್ನೊಡೆಯನಿಗೆ ಒಡಲ ತೋರುವೆ...
ಎನ್ನ ಬಡತನ ಬಿನ್ನಪ ಮಾಡುವೆ...'

ಎಂದೆಲ್ಲ ನಿವೇದಿಸಿಕೊಂಡು,

'ಶ್ರೀಕಾಂತ ಎನಗಿಷ್ಟು ದಯಮಾಡೋ ತಂದೆ.....' ಎಂಬುದಾಗಿ ದಾಸರು ಕೇಳಿಕೊಂಡಿರುವಂತೆ ಶ್ರೀಕಾಂತನೇ ನಮ್ಮ ಪಾಲಿಗೆ 'ಶ್ರೀ' ಎನಿಸಿ ಬೇಡಲ್ಪಡುವಂತಾಗುವುದು.

**೭೧೧. ಸತ್‌ಪರಾಯಣಃ – ಸಜ್ಜನರಿಗೆ ಶ್ರೇಷ್ಠವಾದ ಆಶ್ರಯ.**

**ವಿವರಣೆ :** ಈ ಶ್ಲೋಕದಲ್ಲಿ 'ಸದ್ಗತಿಃ' 'ಸತ್ಕೃತಿಃ' 'ಸದ್ಭೂತಿಃ' ಎಂದು 'ಸತ್' ಎಂಬ ಶಬ್ದ ಮತ್ತೆ ಮತ್ತೆ ಬಂದಿದೆ. 'ಸದ್ಭೂತಿ' - ಎಂಬಲ್ಲಿ ಸತ್ ಶಬ್ದದ ಅರ್ಥ ಮುಖ್ಯಪ್ರಾಣ ಎಂದು ಕಂಡಿದ್ದೇವೆ. 'ಸತ್‌ಪರಾಯಣ' ಎಂಬ ಈ ನಾಮದಲ್ಲಿ 'ಸತ್' ಶಬ್ದಕ್ಕೆ ನಮ್ಮನ್ನು ನಿಮ್ಮನ್ನು ಸೇರಿಸಿ 'ಸಜ್ಜನರು' ಎಂಬ ಅರ್ಥವನ್ನು ಇಟ್ಟುಕೊಳ್ಳೋಣ. 'ಸತ್' - ಎಂದರೆ ಒಳ್ಳೆಯವರು. ಯಾರು ಒಳ್ಳೆಯವರು ? ಒಳ್ಳೆಯವರನ್ನು ಹಿಡಿದವರೇ ಒಳ್ಳೆಯವರು. ಮುಖ್ಯಪ್ರಾಣರಂತಹ ಒಳ್ಳೆಯವರ ಕಾಲು ಹಿಡಿದವರೆಲ್ಲ ಒಳ್ಳೆಯವರು. ಅಂತಹವರಿಗೆ ಪರಮಾತ್ಮ ಪರಾಯಣ - ಪರ ಶ್ರೇಷ್ಠವಾದ ಅಯನ - ಆಶ್ರಯ. ಕೊನೆಯ ಆಶ್ರಯ ಎಂದರ್ಥ. ನಾವು ಗಣಪತಿಯ ಕಾಲು ಹಿಡಿಯುವೆವು ; ಗಣಪತಿ ಪಾರ್ವತಿಯ ಕಾಲನ್ನು, ಪಾರ್ವತಿ ರುದ್ರದೇವರ ಕಾಲನ್ನು, ರುದ್ರ ಭಾರತಿಯ ಕಾಲನ್ನು, ಭಾರತೀದೇವಿ ವಾಯುದೇವನ ಕಾಲನ್ನು, ವಾಯುದೇವ ಲಕ್ಷ್ಮೀದೇವಿಯ ಕಾಲನ್ನು, ಲಕ್ಷ್ಮೀದೇವಿ ನಾರಾಯಣನ ಕಾಲನ್ನು ಹಿಡಿಯುವಳು. ನಾರಾಯಣ ಮಾತ್ರ ಯಾರ ಕಾಲನ್ನೂ ಹಿಡಿಯುವುದಿಲ್ಲ. ಯಾಕೆಂದರೆ ಅವನಿಗೆ ಹಿಡಿಯಲಿಕ್ಕೆ ಬೇಕಾದ ಕಾಲು ಇಲ್ಲ. ಹೀಗೆ ಕಟ್ಟಕಡೆಯ ಆಶ್ರಯನಾಗಿರುವುದರಿಂದಲೇ ಅವನು 'ಪರಾಯಣ.'

ನಾವು ದೇವತೆಗಳ ಕಾಲನ್ನು ಹಿಡಿದರೆ, ದೇವತೆಗಳು ಅನ್ಯೋನ್ಯವಾಗಿ ತಮಗಿಂತ ಉತ್ತಮರಾದವರ ಕಾಲು ಹಿಡಿಯುತ್ತ, ಕೊನೆಗೆ ಹಿಡಿಯಲ್ಪಡುವ ಕಾಲು ಉಳ್ಳವನಾಗಿ ಪರಾಯಣ ಎನಿಸುವವನು ಭಗವಂತ. ಪರಂಪರಯಾ ನಮಗೆ ಆಶ್ರಯನಾಗಿರುವವನು. ಅವನು ಶ್ರೇಷ್ಠ ಆಶ್ರಯನಾಗಿರುವಂತೆ ಗಟ್ಟಿಯಾದ ಆಶ್ರಯನೂ ಆಗಿರುವನು. ನಾವು ಬ್ರಹ್ಮಾದಿ ದೇವತೆಗಳ ಕಾಲು ಹಿಡಿದೆವೆಂದರೆ, ಮಹಾಪ್ರಳಯ ಬಂತೆಂದರೆ ನಾವೂ, ನಾವು ಹಿಡಿದ ಕಾಲೂ ಕೊಚ್ಚಿಕೊಂಡು ಹೋಗಿಬಿಡುವುದು. ಹೀಗೆ ಯಾವ ಪ್ರಳಯದಲ್ಲೂ ಕೊಚ್ಚಿ ಹೋಗದೆ ಗಟ್ಟಿಯಾದ ಆಶ್ರಯ ದೇವರು.

ಪರಾಯಣ ಎನಿಸಿರುವ ಭಗವಂತನಿಗೆ ಸಂಬಂಧಿಸಿರುವುದರಿಂದಲೇ

'ಪಾರಾಯಣ' ಎನಿಸಿದ್ದಿರಬಹುದು. 'ನೀನೇ ಶ್ರೇಷ್ಠವಾದ, ಗಟ್ಟಿಯಾದ ಗತಿ' - ಎಂದು ನಂಬಿ ನಡೆಸುವಂತಹದ್ದೇ ಪಾರಾಯಣ.

**೭೧೨. ಶೂರಸೇನಃ – ಬೌದ್ಧಿಕ ಬಲದಿಂದ ಶೂರರೆನಿಸಿರುವವರು ಯಾವಾಗಲೂ ಸ್ವಾಮಿಯಿಂದ ಕೂಡಿರುವುದಾಗಿ ಭಾವಿಸುತ್ತಿರುವಂತೆ ಅನುಗ್ರಹಿಸು-ತ್ತಿರುವವನು.**

ವಿವರಣೆ : ಶೌರ್ಯವನ್ನು ಒಳಗೊಂಡವರು ಶೂರರು. ಶೌರ್ಯ ಎಂದರೆ ದೈಹಿಕ ಬಲ ಅಲ್ಲ ಮತ್ತೆ ಬೌದ್ಧಿಕ ಬಲ. ಯಾರು ಅಧ್ಯಯನದ ಮೂಲಕ ಬೌದ್ಧಿಕವಾಗಿ ಬೆಳೆದಿರುವರೋ ಅಂತಹವರೇ ಶೂರರು. ಅಂತಹವರು 'ಇನ' ನಾಗಿ ಸ್ವಾಮಿಯಾಗಿ ಭಗವಂತನಿಂದ ಕೂಡಿಕೊಂಡು ಇರುವಂತೆ ಮಾಡಿರುವವನು. ಸ + ಇನ - ಸೇನ. ಇನ ಎಂದರೆ ಸ್ವಾಮಿ. ಅಂತಹ ಸ್ವಾಮಿಯಿಂದ ಕೂಡಿರುವವರು ಸೇನರು.

ಯಾರು ಬುದ್ಧಿಯಿಂದ ಬಲಿಷ್ಠರಾಗಿರುವರೋ ಅವರು 'ಸೇನ'ರಾಗಿರುವರು - ತಾವು ಸ್ವಾಮಿಯಾದ ದೇವರಿಂದ ಕೂಡಿರುವವರು - ಎಂದು ತಿಳಿದಿರುವರೇ ಹೊರತು ತಾವೇ ಸ್ವಾಮಿಗಳೆಂದು ತಿಳಿಯುವುದಿಲ್ಲ. **'ಮಮ ಸ್ವಾಮೀ ಹರಿರ್ನಿತ್ಯಂ ಸರ್ವಸ್ಯ ಪತಿರೇವ ಚ'** ಶ್ರೀಹರಿಯೇ ನನ್ನ ಸ್ವಾಮಿ. ಅವನೇ ಎಲ್ಲರ ಸ್ವಾಮಿ - ಎಂದು ತಿಳಿದಿರುವರು.

ಕೆಲವರು ನಮ್ಮಲ್ಲಿಯೇ ಬಂದು 'ಸ್ವಾಮಿಗಳು' ಎಲ್ಲಿದ್ದಾರೆ ಎಂದು ಕೇಳುವುದುಂಟು. ಗೋಪಾಲದಾಸರಲ್ಲಿಗೇ ಹೋಗಿ ಒಬ್ಬ ಗೋಪಾಲದಾಸರ ಮನೆ ಎಲ್ಲಿ ಎಂದು ವಿಚಾರಿಸಿದಾಗ ಅವರು 'ನಾನೇ ಗೋಪಾಲದಾಸ' ಎನ್ನದೆ ತಮ್ಮ ಮನೆಯನ್ನು ತೋರಿಸಿದರಂತೆ. ಅದರಂತೆ ನಮ್ಮಲ್ಲಿ ಸ್ವಾಮಿಗಳೆಲ್ಲಿ ಎಂದಾಗ ಮೇಲೆ ಇದ್ದಾನೆಂದು ಪ್ರಾಮಾಣಿಕವಾಗಿ ತಿಳಿಸಿದೆವೆಂದರೆ ಅವರಿಗೆ ಸಿಟ್ಟು ಬಂದೀತು !

ಆದರೆ ನಿಜವಾಗಿ ನಮ್ಮ ಅಭಿವೃದ್ಧಿಗೆ ಕಾರಣವಾದ ಬುದ್ಧಿಯ ಬಲವನ್ನು ಪಡೆದು 'ಶೂರ' ಎನಿಸಿರುವವರು ಯಾವಾಗಲೂ 'ಸೇನ'ರಾಗಿಯೇ - ಇನನಿಂದ, ಸ್ವಾಮಿಯಾದ ಪರಮಾತ್ಮ ನನ್ನಲ್ಲಿದ್ದು ನನ್ನ ಬುದ್ಧಿಬಲವನ್ನು ಅಭಿವೃದ್ಧಿ ಪಡಿಸುತ್ತಿರುವನೆಂಬ ಚಿಂತನೆಯಿಂದ ಕೂಡಿಯೇ ಇರುವರು.

**೭೧೩. ಯದುಶ್ರೇಷ್ಠಃ–ಉತ್ತಮವಾದ ತಿಳುವಳಿಕೆಯನ್ನು ನೀಡುವವರಲ್ಲಿ ಶ್ರೇಷ್ಠನಾಗಿರುವವನು.**

ವಿವರಣೆ : ಯದುಶ್ರೇಷ್ಠ ಎಂಬುದಕ್ಕೆ ಯದುವಂಶದಲ್ಲಿ ಬಂದವರಲ್ಲಿ

ಶ್ರೇಷ್ಠನಾಗಿರುವವನೆಂಬುದು ಪ್ರಸಿದ್ಧ ಅರ್ಥ.

ನಮ್ಮ ಅನುಸಂಧಾನಕ್ಕೆ ಹೆಚ್ಚು ಉಪಯುಕ್ತವಾಗುವ ಅರ್ಥ ಯ+ದ+ಉ - ಶ್ರೇಷ್ಠ ಎಂಬುದಾಗಿ ಪದವಿಭಾಗ ಮಾಡಿದರೆ ದೊರಕಬಲ್ಲದು.

ಯ ಎಂದರೆ ಜ್ಞಾನ ; ತಿಳುವಳಿಕೆ.

'ಯ'ಕ್ಕೆ ಯಾನ - ಪ್ರಯಾಣ - ಎಂಬುದಾಗಿ ಆಚೆ ಈಚೆ ಸೇರಿಸಿಕೊಂಡಾಗ ಗಮನ ಎಂಬ ಅರ್ಥ ಸ್ಪಷ್ಟವಾಗಬಲ್ಲದು. ಹಿಟ್ಟು, ತುಪ್ಪ - ಇವನ್ನೆಲ್ಲ ಸೇರಿಸಿ ಹಂಚಿನ ಮೇಲೆ ಇಟ್ಟಾಗ - ಅವೆಲ್ಲವುಗಳಲ್ಲಿ ಕಾಣಿಸಿಕೊಳ್ಳುವ ಸಿಹಿ - ಅದು ಬೆಲ್ಲದ್ದೇ ಹೇಗೋ ಹಾಗೆ ಪ್ರಯಾಣ ಶಬ್ದದಿಂದ ಗಮನ ಎಂಬ ಅರ್ಥ ಹೊರಡಲು ಅದರಲ್ಲಿಯ 'ಯ' ಕಾರವೇ ಕಾರಣ.

ಹೀಗೆ 'ಯ' ಎಂದರೆ ಗಮನ - ಜ್ಞಾನ - ಉ ಎಂದರೆ ಉತ್ತಮವಾದ ದ ಎಂದರೆ ದಾನ ; ನೀಡುವವರು. ಆದುದರಿಂದ ಉತ್ತಮವಾದ ತಿಳುವಳಿಕೆಯನ್ನು ನೀಡುವವರು 'ಯದು'ಗಳು. ಅವರಲ್ಲೆಲ್ಲ ಶ್ರೇಷ್ಠನಾದವನು ಭಗವಂತ.

ವಾಯುದೇವರೇ ಮುಂತಾದವರೂ ಉತ್ತಮ ಜ್ಞಾನವನ್ನು ನೀಡುವವರಾಗಿದ್ದರೂ ದೇವರು ಅವರೆಲ್ಲರಿಗಿಂತ ಶ್ರೇಷ್ಠ.ಆದುದರಿಂದಲೇ ದೇವರಿಂದ ಜ್ಞಾನದ ದಾನ ಪಡೆದುಕೊಂಡ ಮೇಲೆ ಉಳಿದ ಯಾರಿಂದಲೂ ಜ್ಞಾನದ ದಾನ ಪಡೆದುಕೊಳ್ಳಬೇಕಾದ ಆವಶ್ಯಕತೆ ಇರುವುದಿಲ್ಲ. ಶ್ರೀಕೃಷ್ಣನಿಂದ ಅರ್ಜುನ ಗೀತೋಪದೇಶ ಪಡೆದುಕೊಂಡ ಮೇಲೆ ಮತ್ತೆ ಯಾರಲ್ಲೂ ಉಪದೇಶ ಪಡೆದುಕೊಳ್ಳಲು ತೊಡಗಲಿಲ್ಲ.

ಅಧ್ಯಾಪಕರು ಶಾಲೆಯಲ್ಲಿ ಪಾಠಕ್ಕೆ ಹೋಗುವ ಮುನ್ನ 'ಯದುಶ್ರೇಷ್ಠ ' - ಎಂಬ ಹೆಸರಿನಿಂದ ದೇವರ ಜ್ಞಾನದಾನದ ಮಹಿಮೆಯನ್ನು ಅನುಸಂಧಾನ ಮಾಡಿಕೊಂಡು ಹೋದರೆಂದರೆ ತಮ್ಮ ಕರ್ತವ್ಯವನ್ನು ನಿರ್ವಹಿಸುವಲ್ಲಿ ಯಶಸ್ವಿಗಳಾಗಬಲ್ಲರು.

**೭೧೪. ಸನ್ನಿವಾಸಃ–ಮುಖ್ಯಪ್ರಾಣನಲ್ಲಿ ಚೆನ್ನಾಗಿ ನೆಲೆಸಿರುವವನು.**

**ವಿವರಣೆ :** ಸತ್ ಮುಖ್ಯಪ್ರಾಣ ನಿ ಚೆನ್ನಾಗಿ ವಾಸಃ ಯಾರಿಗೆ ವಾಸಸ್ಥಾನ ಎನಿಸಿರುವನೋ ಅಂತಹವನು.

ಉಪನಿಷತ್ತುಗಳಲ್ಲಿ ಒಂದು ಕಡೆ ಬರುವುದು. ಒಮ್ಮೆ ದೇವತೆಗಳು ದೈತ್ಯರ ವಿರುದ್ಧ ಕಾದಾಡಿದರು. ದೇವತೆಗಳೇ ಸೋತರು. ದೈತ್ಯರನ್ನು ಗೆಲ್ಲಲು ಬೇಕಾದ

ಸಾಮರ್ಥ್ಯವನ್ನು ಗಳಿಸಿಕೊಳ್ಳಲು ದೇವರನ್ನು ಉಪಾಸನೆ ಮಾಡಲಾಗುವುದು. ಯಾವ ಪ್ರತಿಮೆಯಲ್ಲಿ ದೇವರ ಉಪಾಸನೆ ? ಯಾವ ಪ್ರತಿಮೆಯನನ್ನು ಬಳಸಿಕೊಂಡಾಗ ದೈತ್ಯರು ಆಕ್ರಮಣ ಮಾಡಿ ಆ ಪ್ರತಿಮೆಯನ್ನು ಹಾಳು ಮಾಡಲಾರರೋ ಅಂತಹ ಪ್ರತಿಮೆಯನ್ನೇ ಬಳಸಿಕೊಳ್ಳಬೇಕು. ಮನೋಭಿಮಾನಿ ರುದ್ರನನ್ನೋ, ಚಕ್ಷುರಭಿಮಾನಿ ಸೂರ್ಯನನ್ನೋ, ಹಸ್ತಾಭಿಮಾನಿ ಇಂದ್ರನನ್ನೋ ಪ್ರತಿಮೆಯಾಗಿ ಬಳಸಿಕೊಂಡಾಗ ದೈತ್ಯರು ಆಕ್ರಮಿಸಿ ಪ್ರತಿಮೆಯನ್ನು ಹಾಳು ಮಾಡಿದರು. ಆದರೆ ಮುಖ್ಯಪ್ರಾಣನನ್ನು ಪ್ರತಿಮೆಯನ್ನಾಗಿ ಬಳಸಿಕೊಂಡು ಅವನಲ್ಲಿ ದೇವರ ಉಪಾಸನೆ ನಡೆಸಿದಾಗ ಆಕ್ರಮಿಸಲು ಬಂದ ದೈತ್ಯರೇ ಬಂಡೆಗಲ್ಲಿಗೆ ಹೊಡೆದ ಮಣ್ಣಿನ ಹೆಂಟೆಯಂತೆ ಪುಡಿಪುಡಿಯಾದರು. ಇದರಿಂದಾಗಿ 'ಅಖಣಾಶ್ಮಸಮ' - ಎಂದು ಬಿರುದು ಪಡೆದಿರುವ ಮುಖ್ಯಪ್ರಾಣನೇ ದೇವರ ಉಪಾಸನೆಗೆ ಮುಖ್ಯ ಪ್ರತಿಮೆ. ಆದುದರಿಂದ ದೇವರ ಸನ್ನಿಧಾನ ಮುಖ್ಯಪ್ರಾಣನಲ್ಲಿ ವಿಶೇಷವಾಗಿ ಇದೆ. ಎಲ್ಲರಲ್ಲೂ ಪ್ರೇರಕರಾಗಿ ಇರುವ ದೇವರು ಮುಖ್ಯಪ್ರಾಣನಲ್ಲಿ ವಿಶೇಷವಾಗಿ ನೆಲೆಸಿರುವನು. ಹೀಗೆ ಸತ್ ಎನಿಸುವ ಮುಖ್ಯಪ್ರಾಣ - ನಿ - ನಿತರಾಂ ಚೆನ್ನಾಗಿ ವಾಸಃ ಭಗವಂತನಿಗೆ ವಾಸಸ್ಥಾನವಾಗಿರುವುದರಿಂದ ಭಗವಂತ 'ಸನ್ನಿವಾಸ' ಎನಿಸಿರುವನು.

**೭೧೫. ಸುಯಾಮುನಃ – ಒಳ್ಳೆಯ ವಿಚಾರವುಳ್ಳವನು.**

**ವಿವರಣೆ** : ಯಮುನ ಅಂದರೆ ಬುದ್ಧಿ. ಯಮಯತಿ ನಿಯಮಯತಿ ಇತಿ ಇಂದ್ರಿಯಗಳನ್ನು, ಮನಸ್ಸನ್ನು ನಿಯಮಿಸುವ ಬುದ್ಧಿ ಯಮುನ ಎನಿಸುವುದು. ಅಂತಹ 'ಯಮುನ'ಕ್ಕೆ – ಬುದ್ಧಿಗೆ ಸಂಬಂಧಿಸುವ ವಿಚಾರಗಳು ಯಾಮುನಗಳು. ಒಳ್ಳೆಯ ವಿಚಾರಗಳನ್ನು ಹೊಂದಿರುವುದರಿಂದ ಭಗವಂತ ಸುಯಾಮುನ.

ಭಗವಂತ ಯಾವುದೇ ವಿಚಾರ ಅನೇಕ ಉದ್ದೇಶಗಳನ್ನು, ಪ್ರಯೋಜನಗಳನ್ನು ಇಟ್ಟುಕೊಂಡು ಹೊರಡುವಂತಹದ್ದು. ಕೆಲವೊಮ್ಮೆ ಪ್ರಾರಂಭದಲ್ಲಿ ಅವನ ವಿಚಾರದ ಉದ್ದೇಶ ತಿಳಿಯುವುದಿಲ್ಲ. ಕೊನೆಯಲ್ಲಿ ಸ್ಪಷ್ಟವಾಗುವುದು.

ಕೃಷ್ಣ ಸಂಧಾನಕ್ಕೆ ಹೋದ ಪ್ರಸಂಗದಲ್ಲಿ ದುರ್ಯೋಧನಾದಿಗಳು ಅವನನ್ನು ಕಟ್ಟಲಿಕ್ಕೆ ತೊಡಗಿದರೂ ಸುಮ್ಮನಿದ್ದ. ಬದಲಾಗಿ ಅಲ್ಲಿಂದ ಹೊರಟು ಹೋಗಲಿಲ್ಲ. ಅವನ ಆ ವಿಚಾರದ ಉದ್ದೇಶ ನಮಗೆ ತಿಳಿಯುವುದಿಲ್ಲ. ಆದರೆ ಧೃತರಾಷ್ಟ್ರನಿಗೆ ಎಚ್ಚರಿಕೆ ನೀಡುವ ಉದ್ದೇಶದಿಂದ ಕೃಷ್ಣ ಹಾಗಿದ್ದ. ದುರ್ಯೋಧನಾದಿಗಲಿಗೆ ಎಚ್ಚರಿಕೆ ನೀಡಿ ಉಪಯೋಗವೇ ಇಲ್ಲ ಎಂದು ಅವನಿಗೆ ಸ್ಪಷ್ಟ ಇತ್ತು. ಮರದ ಬೇರಿಗೆ ನೀರೆರೆದರೆ ಆದರಿಂದ ಮರದ ಕೊಂಬೆ, ರೆಂಬೆ, ಎಲೆಗಳಿಗೂ ನೀರು ದೊರಕೀತೆಂದು

ಕೃಷ್ಣನ ಯೋಜನೆ. ಬೇರು ಕೂಡಾ ನೀರನ್ನು ಸ್ವೀಕರಿಸುವ ಸ್ಥಿತಿಯಲ್ಲಿಲ್ಲ ಎಂಬುದನ್ನು ಸ್ಪಷ್ಟಪಡಿಸಿದಂತಾಗಿದೆ.

ಕೌರವ ಪಾಂಡವ ಸಂಧಾನಕ್ಕಾಗಿ ಕೌರವರಲ್ಲಿಗೆ ತಾನೇ ಬಂದ ಅವನ ವಿಚಾರ ಸಂಧಾನ ಆಗದಂತೆ ನೋಡಿಕೊಳ್ಳಬೇಕೆಂಬುದೇ. ತನ್ನ ಬದಲಾಗಿ ಪಾಂಡವರಲ್ಲಿ ಯಾರನ್ನಾದರೂ ಕಳುಹಿಸಿದ್ದರೆ ಅವರು ಸಂಧಾನ ಮಾಡಿಕೊಂಡೇ ಬರುತ್ತಿದ್ದರು. ಹಾಗಾಬಾರದು ಎಂದೇ - ಕೃಷ್ಣ ತಾನೇ ಸಂಧಾನಕ್ಕಾಗಿ ತೆರಳಿದ್ದ.

ಹೀಗೆ ಕೃಷ್ಣನ ಪ್ರತಿಯೊಂದು ಪ್ರವೃತ್ತಿಯ ಹಿನ್ನೆಲೆಯಲ್ಲಿರುವ ಅವನ ವಿಚಾರಧಾರೆಯನ್ನು ಪರಿಶೀಲಿಸಿದೆವೆಂದರೆ ಅದು ಎಷ್ಟೊಂದು ಸಮುಚಿತವಾದುದೆಂದು ಸ್ಪಷ್ಟವಾಗಬಲ್ಲದು.

ಭಗವಂತನು ಈ ರೀತಿಯಾಗಿ ಭಕ್ತರ ಶ್ರೇಯಸ್ಸಿಗೆ ಅನುಕೂಲವಾಗುವಂತೆ ಉತ್ತಮ ವಿಚಾರಗಳನ್ನು ಹೊಂದಿರುವುದರಿಂದ ಸುಯಾಮುನ ಎನಿಸಿರುವನು.

**ಭೂತಾವಾಸೋ ವಾಸುದೇವಃ ಸರ್ವಾಸುನಿಲಯೋಽನಲಃ |**
**ದರ್ಪಹಾ ದರ್ಪದೋ ದೃಪ್ತೋ ದುರ್ಧರೋಽಥಾಪರಾಜಿತಃ ||೭೬||**

**೭೧೬. ಭೂತಾವಾಸಃ - ಸಮಸ್ತ ಪ್ರಾಣಿವರ್ಗಕ್ಕೂ ಸರಿಯಾದ ತಿಳುವಳಿಕೆಯನ್ನು ನೀಡುವವನು.**

ವಿವರಣೆ : ಭೂತ + ಆವಾಸ ಎಂದು ಪದಚ್ಛೇದ ಮಾಡುವುದುಂಟು. ಇದಕ್ಕಿಂತ ಬೇರೆ ಬಗೆಯಲ್ಲಿ ಹೀಗೆ ಪದಚ್ಛೇದ ಮಾಡಬಹುದಾಗಿದೆ. ಭೂತ + ಅ + ವಾ + ಆಸಃ ಭೂತವಾಸಃ ಭವಂತೀತಿ ಭೂತಾನಿ. ಇರುವವುಗಳೆಲ್ಲ ಭೂತ ಎನಿಸಿವೆ. 'ಏಕೋ ವಿಷ್ಣುರ್ಮಹದ್‌ಭೂತಂ ಪೃಥಗ್‌ಭೂತಾನ್ಯನೇಕಶಃ.......' ಎಂದಿರುವಂತೆ ವಿಷ್ಣು ಮಹಾಭೂತ. ಉಳಿದ ನಾವೆಲ್ಲ ಚಿಲ್ಲರೆ ಭೂತಗಳು. ಮಹಾಭೂತಕ್ಕೆ ಮುಖ್ಯಭೋಗ. ಅದರಿಂದ ಉಳಿದದ್ದು ಚಿಲ್ಲರೆ ಭೂತಗಳಿಗೆ ಹೇಗೋ ಹಾಗೆ ವಿಷ್ಣುವಿಗೆ ಮುಖ್ಯವಾಗಿ ಭೋಗ. ಅವನು ಸ್ವೀಕರಿಸಿ ಉಳಿದದ್ದು ನಮಗೆ.

ಹೀಗೆ ಭೂತ ಎನಿಸುವ ಎಲ್ಲ ವ್ಯಕ್ತಿಗಳಿಗೆ, ಪ್ರಾಣಿಗಳಿಗೆ ಅ - ಚೆನ್ನಾಗಿ, ವಾ - ತಿಳುವಳಿಕೆ ಆಸಃ - ಯಾರಿಂದ ಉಂಟಾಗುವುದೋ ಅಂತಹವನು. 'ಮತ್ತಃ ಸ್ಮೃತಿರ್ಜ್ಞಾನಮಪೋಹನಂ ಚ' - ಎಂದು ಗೀತಾಚಾರ್ಯ ತಿಳಿಸಿರುವಂತೆ ಎಲ್ಲರಿಗೆ ತಿಳುವಳಿಕೆಯನ್ನೂ, ವಿಸ್ಮರಣೆಯನ್ನೂ ನೀಡುವವನು ಅವನೇ.

ಭೀಷ್ಮರು ಕೃಷ್ಣನ ಈ ಮಹಿಮೆಯನ್ನು ಅನುಭವಿಸಿದ್ದಾರೆ. ಪಾಂಡವರ

ರಾಜಸೂಯ ಯಾಗದಲ್ಲಿ ಬ್ರಹ್ಮಾದಿಗಳೂ ಪಾಲ್ಗೊಂಡಿದ್ದರು. ಆದರೆ ಅವರ್‍ಯಾರಲ್ಲೂ ಕೇಳದೆ, ಭೀಷ್ಮರಲ್ಲಿಯೇ ಯಾರು ಅಗ್ರಪೂಜೆಗೆ ಅರ್ಹರೆಂದು ಯುಧಿಷ್ಠಿರ ಕೇಳಲು ಭೀಷ್ಮರು ಕೃಷ್ಣನಿಗೇ ಅಗ್ರಪೂಜೆ ಸಲ್ಲಬೇಕೆಂದು ಹೇಳಿದ್ದನ್ನು ಎಲ್ಲರೂ ಒಪ್ಪಿಕೊಳ್ಳಲು ಕಾರಣ ಭೂತವಾಸ ನಾಮಕನಾಗಿ ಭಗವಂತ ಭೀಷ್ಮರಲ್ಲಿ ಆ ಹೇಳಿಕೆಯನ್ನು ಹೇಳಿಸಿದ್ದ.

ನಮಗೂ ಸರಿಯಾದ ತಿಳುವಳಿಕೆಯನ್ನು ಭಗವಂತನು ಅನುಗ್ರಹಿಸುವಂತೆ 'ಭೂತಾವಾಸಃ' - ಎಂಬ ನಾಮದಿಂದ ಅರ್ಥಚಿಂತನೆ ನಡೆಸಬೇಕು.

**೭೧೭. ವಾಸುದೇವಃ – ಯೋಗ್ಯರಿಗೆ ಜ್ಞಾನವನ್ನು ಕೊಟ್ಟು ಅವರನ್ನು ಸಂತೋಷಪಡಿಸುವವನು.**

**ವಿವರಣೆ:** ವಾ+ಸು+ದೇವಃ - ಎಂದು ಪದವಿಭಾಗ ಮಾಡಿಕೊಳ್ಳಬೇಕು. ವಾ ಎಂದರೆ ಜ್ಞಾನ ಎಂದು ಕಂಡಿದ್ದೇವೆ. ಸು ಎಂದರೆ ಹಡೆಯುವಿಕೆ. ಸೂತಿಕಾಗೃಹ ಎಂಬುದು ಪ್ರಸಿದ್ಧ ಹಡೆಯುವುದೆಂದರೆ ಒಳಗಿದ್ದದ್ದನ್ನು ಹೊರಗೆ ಹಾಕುವುದಷ್ಟೇ ತಾನೇ ? ದೇವ ಎಂದರೆ ದೇವಯತಿ ಸಂತೋಷಯತೀತಿ ದೇವಃ – ಸಂತೋಷಗೊಳಿಸುವವನು.

ಯೋಗ್ಯರಿಗೆ ಸರಿಯಾದ ತಿಳುವಳಿಕೆಯನ್ನು ನೀಡಿ, ಅದನ್ನು ಪಡೆದುಕೊಂಡ ಅವರನ್ನು ಸಂತೋಷಪಡಿಸುವವನು. ಭಗವಂತ ಬಾಯಿ ತೆರೆದ ಎಂದರೆ ಉಪದೇಶ ನೀಡಿದ ಎಂದೇ ಅರ್ಥ. ಜ್ಞಾನವನ್ನು ವಿತರಿಸಿದ ಎಂದೇ ಅರ್ಥ. ಅರ್ಜುನನಿಗೆ ರಣಾಂಗಣದಲ್ಲೂ ಗೀತೋಪದೇಶ ನೀಡಿ ಅವನನ್ನು ಸಂತೋಷಪಡಿಸಿದವನು ಕೃಷ್ಣ.

ನಾವು ರಾಜಾಂಗಣಕ್ಕೆ ಬಂದು ಉಪನ್ಯಾಸದ ಮೂಲಕ ಜ್ಞಾನ ಪಡೆದು ಸಂತೋಷಪಟ್ಟೆವೆಂದರೆ ದೇವರು ನಮ್ಮ ಪಾಲಿಗೆ ವಾಸುದೇವ ಎಂದರ್ಥ. ಜ್ಞಾನ ನಮಗೆ ಸಂತೋಷ ನೀಡಿಲ್ಲ ಎಂದರೆ ದೇವರು ನಮ್ಮ ಪಾಲಿಗೆ ವಾಸುದೇವನಾಗಿಲ್ಲ ಎಂದು ತಿಳಿಯಬೇಕು.

ಏನೇನೋ ಸಮಸ್ಯೆಗಳಿರುವವು. ಉಪನ್ಯಾಸ ಕೇಳುವುದಕ್ಕಾಗಿ ರಾಜಾಂಗಣ ಪ್ರವೇಶಿಸಿದೆವೆಂದರೆ ಆ ಸಮಸ್ಯೆಗಳು ಅಲ್ಲಿಯೇ ನಿಲ್ಲುವವು. ಉಪನ್ಯಾಸ ಕೇಳುತ್ತಿರುವಾಗ ಆ ಎಲ್ಲ ಸಮಸ್ಯೆಗಳು ಮರೆತು ಹೋಗುವವು. ಹಾಗೆ ಮರೆಯುವುದೇ ಒಂದು ಬಗೆಯ ಸಂತೋಷ. ಉಪನ್ಯಾಸ ಮುಗಿದು ಪುನಃ ಮನೆಗೆ ಮರಳಿದೆವೆಂದರೆ ದಾರಿಯಲ್ಲೇ ಆ ಸಮಸ್ಯೆಗಳು ನಮ್ಮನ್ನು ಸೇರಿಕೊಳ್ಳುವವು.

ಹೀಗೆ ಸಮಸ್ಯೆಗಳಿಂದ ದೂರ ಸರಿದು ನೆಮ್ಮದಿ ಪಡೆಯುವಂತೆ ಮಾಡುವವನು

'ವಾಸುದೇವ'.

**೭೧೮. ಸರ್ವಾಸುನಿಲಯಃ – ಎಲ್ಲಾ ಪ್ರಾಣಿವರ್ಗಕ್ಕೆ ಚೆನ್ನಾಗಿ ಲಯವನ್ನು ನೀಡುವವನು.**

ವಿವರಣೆ : ಸರ್ವ+ಅಸು+ನಿ+ಲಯ - ಎಲ್ಲ ಅಸುಗಳಿಗೆ ಪ್ರಾಣಿಗಳಿಗೆ ನಿ - ಚೆನ್ನಾಗಿ ಲಯಃ - ನಾಶವನ್ನು ನೀಡುವವನು.

ಲಕ್ಷ್ಮೀದೇವಿಯಿಂದ ಪ್ರಾರಂಭಿಸಿ ಪ್ರತಿಯೊಬ್ಬರಿಗೂ ಒಂದಲ್ಲ ಒಂದು ಬಗೆಯ ನಾಶವನ್ನು ಭಗವಂತನು ನೀಡುವನು.

ಮಡಕೆ ಮುಂತಾದವು ತಮ್ಮ ಸ್ವರೂಪವನ್ನೇ ಕಳೆದುಕೊಳ್ಳುವವು. ಹಾಗೆ ಸ್ವರೂಪವನ್ನೇ ಕಳೆದುಕೊಳ್ಳುವ ನಾಶ ಅವುಗಳಿಗಷ್ಟೇ. ನಮಗೆಲ್ಲ ನಾಶ ಎಂದರೆ ಶರೀರದಿಂದ ದೂರವಾಗುವುದು. ಚತುರ್ಮುಖನಿಗೂ ದೇಹನಾಶ ರೂಪವಾದ ನಾಶ ಇದ್ದೇ ಇದೆ. ವಿರಜಾ ನದಿಯಲ್ಲಿ ಸ್ನಾನ ಮಾಡಿದಾಕ್ಷಣ ಚತುರ್ಮುಖ ತನ್ನ ಶರೀರವನ್ನು ಕಳೆದುಕೊಳ್ಳುವನು. ಲಕ್ಷ್ಮೀದೇವಿಗೆ ಈ ಯಾವ ನಾಶಗಳೂ ಇಲ್ಲ. ಆದರೆ ಎಲ್ಲರ ನಾಶ ಆದ ಮೇಲೆ ಭಗವಂತನ ಅತ್ಯಂತ ಸಮೀಪಕ್ಕೆ ತೆರಳುವುದೇ ಆಕೆಯ ಪಾಲಿಗೆ ನಾಶ. ಉಳಿದ ಕಾಲದಲ್ಲಿ ಅವಳು ಪರಮಾತ್ಮನ ಸಮೀಪದಲ್ಲೇ ಇರುವಳಾದರೂ ಅಷ್ಟೊಂದು ಸಮೀಪದಲ್ಲಿ ಇರುವುದಿಲ್ಲ. ಪ್ರಲಯಕಾಲದಲ್ಲಿ ಮಾತ್ರ ಭಗವಂತನ ಅತ್ಯಂತ ಸಮೀಪದಲ್ಲಿ ಇರುವಳು. ಲಕ್ಷ್ಮೀದೇವಿಯ ಈ ಬಗೆಯ ನಾಶದಂತೆಯೇ ಕೆಲವರಿಗೆ ಈಗಲೂ ದೇವಸ್ಥಾನಕ್ಕೆ ಹೋಗುವುದೆಂದರೆ ಸತ್ತಂತೆ ಕಾಣಿಸುವುದುಂಟು. ಆದುದರಿಂದಲೇ 'ನಾನೂ ಯಾಕೆ ದೇವಸ್ಥಾನಕ್ಕೆ ಬಂದು ಸಾಯಬೇಕು ;' ಎಂದು ಒತ್ತಾಯಿಸುತ್ತಿ ! - ಎಂದು ಗೋಗರೆಯುವುದುಂಟು. ಅಂದರೆ ದೇವಸ್ಥಾನಕ್ಕೆ ಹೋಗಿ ಅಲ್ಲಿ ದೇವರ ಸಾಮೀಪ್ಯವನ್ನು ಹೊಂದುವುದು ಅವರ ಪಾಲಿಗೆ ಲಯ !

ಹೀಗೆ ಲಕ್ಷ್ಮೀದೇವಿಯಿಂದ ಪ್ರಾರಂಭಿಸಿ ಪ್ರತಿಯೊಬ್ಬರಿಗೂ ಒಂದಲ್ಲ ಒಂದು ಬಗೆಯ ಲಯವನ್ನು, ನಾಶವನ್ನು ನೀಡುವುದರಿಂದ ಭಗವಂತನು 'ಸರ್ವಾಸುನಿಲಯ' ಎನಿಸುವನು.

**೭೧೯. ಅನಲಃ – * ವಾಯುದೇವನನ್ನು ಶೋಭಿಸುವಂತೆ ಮಾಡುವವನು.**

*** ಎಂದೂ ತನ್ನ ಚಟುವಟಿಕೆಗಳಲ್ಲಿ ಅಲಸನಾಗದವನು.**

ವಿವರಣೆ : ಅನಂ - ಮುಖ್ಯಪ್ರಾಣಂ ಲಸಯತಿ - ಶೋಭಯತೀತಿ ಅನಲಃ |

ವಾಯುದೇವನ ಧ್ಯಾನ ಶ್ಲೋಕದಲ್ಲಿ 'ಅಚ್ಯುತಾಂಕೇ ಸ್ವಾಸೀನಂ .......' ಎಂದಿರುವಂತೆ ಭಗವಂತನು ವಾಯುದೇವನನ್ನು ತನ್ನ ತೊಡೆಯಲ್ಲಿ ಕುಳ್ಳಿರಿಸಿ, ತನ್ನನ್ನು ಪೂಜಿಸಿದಾಗ ವಾಯುದೇವನಿಗೂ ಪೂಜೆ ದೊರಕುವಂತೆ ಮಾಡಿರುವವನು.

ಉಡುಪಿ ಕೃಷ್ಣನ ಪ್ರತಿಮೆಯ ಬಲಗೈಯಲ್ಲಿ ಕಡೆಗೋಲು ಇದೆ. ಅದು ತಾರತಮ್ಯದ ಆರೋಹಣ ಕ್ರಮದಲ್ಲಿ 'ಕಡೆಯ ಕೋಲಿನಂತೆ' ಇರುವ ಮುಖ್ಯಪ್ರಾಣನನ್ನು ಸಂಕೇತಿಸುತ್ತದೆ. 'ಭಾರ್ಯಾಭಾಗೋ ವಾಮಃ.....' ಎಂದಿರುವಂತೆ ಪತ್ನಿಯಾದ ಲಕ್ಷ್ಮೀದೇವಿಯ ಭಾಗ ಎಡವಾದುದರಿಂದ ಎಡಗೈಯಲ್ಲಿ ಲಕ್ಷ್ಮೀದೇವಿಯನ್ನು ಸಂಕೇತಿಸುವ ಹಗ್ಗವನ್ನು ಧರಿಸಿದೆ. ಮಧ್ಯದಲ್ಲಿ ಕೃಷ್ಣ. ಬರೇ ತನ್ನ ದರ್ಶನವನ್ನಷ್ಟೇ ಪಡೆದುಕೊಳ್ಳದೆ ತನ್ನ ಬಲಬದಿಯಲ್ಲಿ ವಾಯುದೇವನೂ, ಎಡಬದಿಯಲ್ಲಿ ಲಕ್ಷ್ಮೀದೇವಿಯೂ ಇರುವಳೆಂಬುದಾಗಿ ಅನುಸಂಧಾನ ಮಾಡಿಕೊಳ್ಳುತ್ತ ಲಕ್ಷ್ಮೀದೇವಿ ಹಾಗೂ ವಾಯುದೇವ ಸಹಿತನಾದ ತನ್ನನ್ನು ಕಾಣಬೇಕು ಎಂದು ಐದು ಸಾವಿರ ವರ್ಷಗಳ ಹಿಂದೆ ವಿಶ್ವಕರ್ಮನಿಂದ ತನ್ನ ಪ್ರತಿಮೆಯನ್ನು ನಿರ್ಮಿಸಿದಾಗ ಈ ಅನುಸಂಧಾನಕ್ಕೆ ಸ್ಫೂರ್ತಿ ದೊರಕುವಂತೆ ಮಾಡಲಾಗಿದೆ.

ಹೀಗೆ ಭಗವಂತನು ತನ್ನ ಜೊತೆಗೆ ವಾಯುದೇವನೂ ವಿರಾಜಿಸುವಂತೆ ಹೇಗೆ ಹೂವಿನ ಜೊತೆಗೆ ಹಗ್ಗ ದೇವರ ತಲೆಯನ್ನು ಏರಸಲ್ಪಡಿಸುವುದೋ ಹಾಗೆ ಮಾಡುವನು.

ಅನಲ ನಾಮಕ್ಕೆ ಮತ್ತೊಂದು ಅರ್ಥವನ್ನು ಅನುಸಂಧಾನ ಮಾಡಬಹುದು. ಅಲ ಅಲ್ಲದವನು ಅನಲ. ಅಲ ಎಂದರೆ ಅಲಸ. ಆಲಸ್ಯಕ್ಕೆ ಒಳಗಾದವನು. ದೇವರು ಎಂದೂ ಆಲಸ್ಯಕ್ಕೆ ಒಳಗಾಗದ ಪ್ರಯುಕ್ತ ಅನಲ ಎನಿಸುವನು. ಎಂಟುನೂರು ವರ್ಷಗಳಿಂದ ಉಡುಪಿ ಕೃಷ್ಣ ನಿಂತೇ ಇದ್ದಾನೆ. ಒಮ್ಮೆ ಆದರೂ ತನಗೆ ನಿಂತು ನಿಂತು ದಣಿವು ಆಯಿತೆಂದು ಅವನು ಕುಳಿತಿದ್ದಿದ್ದೆಯೇ ? ನಾವು ಬೇಕಾದರೆ ಕೆಲವು ಅಲಂಕಾರ ತೊಡಿಸಿ ಅವನನ್ನು ಕುಳ್ಳಿರಿಸಬೇಕೇ ಹೊರತು ಅವನಾಗಿ ಕುಳಿತದ್ದಿಲ್ಲ.

ಇದೇ ರೀತಿಯಾಗಿ ಭಗವಂತ ತನ್ನ ಭಕ್ತರ ಉದ್ಧಾರದ ವಿಷಯದಲ್ಲಿ ಎಂದೂ ಅಲಸನಾಗಿ ನಡೆದುಕೊಂಡದ್ದಿಲ್ಲ.

ನಾವು ನಮ್ಮ ಕರ್ತವ್ಯದಲ್ಲಿ ಅಲಸರಾಗಬಾರದೆಂದಿದ್ದರೆ ಭಗವಂತನನ್ನು ಅನಲ - ಅಲಸನಾಗದವನನ್ನಾಗಿ ಉಪಾಸನೆ ನಡೆಸಬೇಕು.

**೭೨೦. ದರ್ಪಹಾ – ಅಹಂಕಾರದಿಂದ ಕೂಡಿದ ವ್ಯಕ್ತಿಗಳು ನರಕಾದಿಗಳನ್ನು**

**ಹೊಂದಿ ದುಃಖಭಾಗಿಗಳಾಗುವಂತೆ ಮಾಡುವವನು.**

ವಿವರಣೆ : ದರ್ಪ ಎಂದರೆ ಅಹಂಕಾರ ಎಂಬ ಅರ್ಥ ಪ್ರಸಿದ್ಧವಾದುದು. ಆದರೆ ಇಲ್ಲಿ ಅಹಂಕಾರ ಉಳ್ಳವರು ಎಂದರ್ಥ. ಅಹಂಕಾರವು ದೈತ್ಯರ ಸ್ವಭಾವವಾಗಿರುವುದರಿಂದ ಅಹಂಕಾರವುಳ್ಳವರೆಂದರೆ ದೈತರು ; ಅಥವಾ ದೈತ್ಯರ ಆವೇಶವುಳ್ಳವರು. ಅಂತಹವರನ್ನು 'ಹಂತೀತಿ ಹಾ' - ಕೊಲ್ಲುವವನು, ಕೊಲ್ಲಿಸುವವನು ದರ್ಪಹಾ.

'ಅಹಂ' ಎಲ್ಲರಲ್ಲೂ ಇರಬೇಕಾದದ್ದೇ. 'ಅಹಂಪ್ರಜ್ಞೆ' ಇಲ್ಲದಿದ್ದರೆ 'ಘಟಕುಡ್ಯವತ್ ಸ್ಯಾತ್' - ಎಂದಿರುವಂತೆ ಅಚೇತನಗಳಾದ ಮಡಿಕೆಯಂತೆ, ಗೋಡೆಯಂತೆ ಆದಾರು ! ಆದರೆ ಆ 'ಅಹಂ' ಕಾರ ಆಗಬಾರದು. ತನ್ನಲ್ಲಿ ಇಲ್ಲದ ಗುಣ ಮಹಿಮೆಗಳನ್ನೂ ತನ್ನಲ್ಲಿ ಆರೋಪಿಸಿಕೊಂಡಾಗ 'ಅಹಂ'ಗೆ 'ಕಾರ' ಸೇರಿ 'ಅಹಂಕಾರ' ಆಗುವುದು. ಇಂತಹ ಅಹಂಕಾರ ದೈತ್ಯರ ಸ್ವಭಾವವಾದುದರಿಂದ ಅಂತಹ ಅಹಂಕಾರವುಳ್ಳ ದೈತ್ಯರನ್ನು ಭಗವಂತನು ಹಂತಿ - ಕೊಲ್ಲುವನು. ಭಗವಂತನು ಎಲ್ಲರನ್ನೂ ಕೊಲ್ಲುವನು. ಆದರೆ ದೈತ್ಯರನ್ನು ಕೊಲ್ಲುವುದೆಂದರೆ **'ಅಥ ದೈತ್ಯಹತಿಸ್ತಮಸಿ ಪಾತನಮ್'** ಎಂದಿರುವಂತೆ ಪ್ರಾಣ ತ್ಯಜಿಸಿದ ದೈತ್ಯರನ್ನು ನರಕಕ್ಕೋ, ತಮಸ್ಸಿಗೋ ಕರೆದೊಯ್ದು ಅಲ್ಲಿ ದುಃಖವನ್ನು ಅನುಭವಿಸುವಂತೆ ಮಾಡುವವನು ಭಗವಂತ. ಹನನ - ಕೊಲ್ಲುವುದಕ್ಕೇ ಕೊನೆಗೊಳ್ಳುವುದಿಲ್ಲ. ಕೊಲ್ಲಲ್ಪಟ್ಟ ವ್ಯಕ್ತಿಗಳಿಗೆ ದುಃಖವನ್ನು ಅನುಭವಿಸುವಂತೆ ಮಾಡಿದಾಗಲೇ ಹನನ ಕೊನೆಗೊಳ್ಳುವುದು. ಭಗವಂತ ಇದನ್ನು ಮಾಡುವನು. ದರ್ಪಕ್ಕೊಳಗಾದ ದುರ್ಯೋಧನನನ್ನು ಭೀಮಸೇನನ ಮೂಲಕ ಕೊಲ್ಲಿಸಿ, ಪ್ರಾಣ ತ್ಯಜಿಸಿದ ದುರ್ಯೋಧನನ್ನು ತಮಸ್ಸಿಗೆ ಕರೆದೊಯ್ದು ಅಲ್ಲಿ ಅವನು ದುಃಖವನ್ನು ಅನುಭವಿಸುವಂತೆ ಭಗವಂತನು ಮಾಡಿರುವನು.

ಆದುದರಿಂದ ಭಗವಂತನ 'ದರ್ಪಹಾ' ನಾಮದ ಅರ್ಥಚಿಂತನೆ ನಡೆಸುವಾಗ ಅಹಂಕಾರ ಪಟ್ಟರೆ ಭಗವಂತನಿಂದ ಎಂತಹ ದಂಡನೆಗೆ ಒಳಗಾಗಬೇಕಾದೀತೆಂಬುದನ್ನು ವಿಶ್ಲೇಷಿಸಿಕೊಂಡು ಅಹಂಕಾರ ತಾಳುವುದನ್ನು ನಿಲ್ಲಿಸಬೇಕು.

**೭೨೧. ದರ್ಪದಃ – ಹೃದಯಗುಹೆಯಲ್ಲಿ ಕಾಣಿಸಿಕೊಳ್ಳುವವನು.**

ವಿವರಣೆ : ದರ್ಪವುಳ್ಳ ದೈತ್ಯರನ್ನು ಸಂಹರಿಸಿ 'ದರ್ಪಹಾ' ಎನಿಸಿರುವ ಭಗವಂತನು ದೈತ್ಯರನ್ನು ಸಂಹರಿಸುವುದರ ಉದ್ದೇಶ - 'ದರ್‌ಪದಃ' ಭಕ್ತರ ಹೃದಯದಲ್ಲಿ ಕಾಣಿಸಿಕೊಳ್ಳುವಿಕೆ. 'ದರ್ಪ + ದಃ' - ಎಂದು ಪದವಿಭಾಗ ಮಾಡುವ ಬದಲು

ದರ್‌ಪದಃ ಎಂದು ಪದವಿಭಾಗ ಮಾಡಿಕೊಳ್ಳಬೇಕು. ದರ್ ಎಂದರೆ ದರ ಹೊಂಡ ಎಂಬ ಅರ್ಥ. ತುಳುವಿನಲ್ಲಿ ಹೊಂಡ ಎಂಬ ಅರ್ಥದಲ್ಲಿ ದರ ಎಂಬ ಶಬ್ದ ಉಳಿದುಕೊಂಡಿದೆ. ಹೃದಯದಲ್ಲಿಯ ಹೃದಯಾಕಾಶವೇ ಒಂದು ಹೊಂಡ. ಅದನ್ನು ಗರ್ತ ಎಂದೂ ಕರೆಯುವುದುಂಟು. ಅಂತಹ ದರದಲ್ಲಿ ಪದ್ಯತೇ ಅವಗಮ್ಯತೇ ಇತಿ ಕಾಣಿಸಿಕೊಳ್ಳುವುದರಿಂದ ಭಗವಂತ ದರಪದ, ದರಪದವೇ ದರ್ಪದ.

'ಮಲಗಿ ಪರಮಾದರದಿ ಪಾಡಲು' - ಎನ್ನುವ ದಾಸರ ಮಾತಿನ ಮತ್ತೊಂದು ಆಶಯ - ಮಲಗಿದಾಗ ಭಗವಂತನನ್ನು ಪರಮಾದರದಿ ಪಾಡಲು ಆಗುವುದು. ಅದೇ ಕುಲಿತುಕೊಂಡರೆ ಯಾರಾದರೂ ಬಂದು ಹರಟೆ ಹೊಡೆಯಲು ಪ್ರಾರಂಭಿಸುವರು. ಒಂದು ಕಡೆ ತೂಕಡಿಸುತ್ತ ಇದ್ದರೆ, ಅವರು ನಿದ್ರಿಸುತ್ತಿದ್ದಾರೆ, ಅವರಿಗೆ ತೊಂದರೆ ಕೊಡುವುದು ಬೇಡ ಎಂದು ನಮ್ಮ ಸುದ್ದಿಗೇ ಬರಲಾರರು. ಇದರಿಂದಾಗಿ ನಾವು ಚೆನ್ನಾಗಿ ಭಗವಂತನನ್ನು ಪಾಡಬಹುದಾಗುತ್ತದೆ.

ಭೀಷ್ಮರು ಹಿಂದೆ ಕುಳಿತು ಮಾಡುತ್ತಿದ್ದಾಗ ಆಗಾಗ್ಗೆ ದುರ್ಯೋಧನ ಬಂದು ತೊಂದರೆ ಕೊಡುತ್ತಿದ್ದ. ಆದರೆ ಈಗ ಮಲಗಿ ಯಾರ ತೊಂದರೆಯೂ ಇಲ್ಲದೆ ಪರಮಾದರದಿ ಪಾಡಬಹುದಾಗಿದೆ. ತಮ್ಮ ಹೃದಯದರದಲ್ಲಿ 'ಪದ'- ಕಾಣಿಸಿಕೊಳ್ಳುವಂತೆ ಮಾಡಬಹುದಾಗಿದೆ.

**೭೨೨. ದೃಪ್ತಃ –ತಾನು ತೃಪ್ತನಾಗಿರುವವನು ಹಾಗೂ ತನಗೆ ಹೃದಯದಲ್ಲಿ ಅವಕಾಶ ಮಾಡಿ ಕೊಟ್ಟ ಭಕ್ತನನ್ನು ತೃಪ್ತಿ ಪಡಿಸುತ್ತಿರುವವನು.**

**ವಿವರಣೆ :** ದೃಪ್ಯತಿ ಸಂತೋಷ ಪಡುತ್ತಿರುವವನು ದೃಪ್ತಃ. ಯಾಕೆ ಸಂತೋಷ ಪಡುತ್ತಿರುತ್ತಾನೆ ? 'ದರ್ಪದಃ' - ನಾಮದ ಚಿಂತನೆ ನಡೆಸುವಾಗ ಪರಿಶೀಲಿಸಿದಂತೆ ಹೃದಯ ಗುಹೆಯಲ್ಲಿ ನೆಲೆಸಿರುವವನು ಅವನು ಆದುದರಿಂದ ಅವನಿಗೆ ಎಲ್ಲಿಲ್ಲದ ಸಂತೋಷ. ಭಕ್ತಾನಾದವನು ತನ್ನ ಹೃದಯದಲ್ಲಿ ಅವಕಾಶ ಕೊಟ್ಟನೆಂದರೆ ದೇವರಿಗೆ ಅದರಿಂದ ಸಂತೋಷವೋ ಸಂತೋಷ ! ನಾವು ನಮ್ಮ ಹೃದಯದಲ್ಲಿ ಯಾರ್‍ಯಾರಿಗೋ ಕ್ಷುಲ್ಲಕ ವ್ಯಕ್ತಿಗಳಿಗೆ ಅವಕಾಶ ಕೊಡುವುದುಂಟು. ಅದರ ಬದಲು ಭಗವಂತನಿಗೆ ಅವಕಾಶ ನೀಡಿದವೆಂದರೆ ಅವನು ಅಲ್ಲಿ ಸಂತೋಷದಿಂದ ಇರುವನು.

ಹೀಗೆ ಪ್ರತಿಯೊಬ್ಬರ ಹೃದಯಾಕಾಶದಲ್ಲಿ ಸಂತೋಷದಿಂದ ಇರುವುದರಿಂದಷ್ಟೇ ಅವನು 'ದೃಪ್ತ' ಎನಿಸಿರುವುದಲ್ಲ. ಮತ್ತೆ ಅವನಿಗೆ ತಮ್ಮ ಹೃದಯದಲ್ಲಿ ಯಾರು ಅವಕಾಶ ಕೊಡುವರೋ ಅವರನ್ನೂ ತೃಪ್ತಿ ಪಡಿಸುವನು - ದರ್ಪಯತೀತಿ ದೃಪ್ತಃ.

ನಿಜವಾದ ಭಕ್ತ ತುಂಬ ಸುಖವನ್ನು ಅನುಭವಿಸುವುದು ದೇವರನ್ನು ತನ್ನ ಹೃದಯದಲ್ಲಿ ಕಾಣುವಾಗ. ಯದ್ಯಪಿ ದೇವರ ಜ್ಞಾನಾನಂದಾತ್ಮಕವಿಗ್ರಹ ಕಾಣಿಸುವುದಿಲ್ಲ. ಮತ್ತೆ ವಾಸನಾಮಯ ರೂಪವಷ್ಟೇ ಕಾಣಿಸುವುದು. ಆದರೂ ಆ ರೂಪದ ದರ್ಶನದಿಂದ ಭಕ್ತ ತುಂಬ ಆನಂದ ಪಡುವನು.

ಹೀಗೆ ಭಗವಂತನು ಸ್ವಯಂ ತೃಪ್ತನಾಗಿದ್ದು, ತನಗೆ ಹೃದಯದಲ್ಲಿ ಜಾಗಕೊಟ್ಟ ಭಕ್ತರನ್ನೂ ತೃಪ್ತಿಪಡಿಸುವುದರಿಂದ ದೃಪ್ಯತಿ, ದರ್ಪಯತಿ ಚೇತಿ ದೃಪ್ತಃ ಎಂಬುದಾಗಿ ದೃಪ್ತ - ಎನಿಸುವನು.

ಭೀಷ್ಮರು ಚತುರ್ಮುಖನ ಶಾಪಕ್ಕೊಳಗಾಗಿ ಎಂಟು ಮಂದಿ ಸಾಯುವಾಗ ಆಗುವ ವೇದನೆಯನ್ನು ಅನುಭವಿಸುತ್ತಿರುವರು. ಆದರೆ ಕೃಷ್ಣ, ಒಳಗೆ ತಾನು ತೃಪ್ತನಾಗಿದ್ದುಕೊಂಡು ಭೀಷ್ಮರನ್ನು ತೃಪ್ತಿಪಡಿಸುತ್ತಿರುವುದರಿಂದ ಭೀಷ್ಮರಿಗೆ ಆ ವೇದನೆ ಅನುಭವಕ್ಕೆ ಬರುವುದಿಲ್ಲ. ಹೊರಗಿನಿಂದ ಕೃಷ್ಣ ತೃಪ್ತನಾಗಿರುವುದರಿಂದ ತಮ್ಮ ಒಳಗಿನ ಕೃಷ್ಣನ ರೂಪವೂ ತೃಪ್ತವಾಗಿರಬೇಕು, ತಾನು ತೃಪ್ತನಾಗಿ ನನ್ನನ್ನೂ ತೃಪ್ತಿ ಪಡಿಸುತ್ತಿದ್ದಿರಬೇಕು ಎಂದು ದೃಪ್ತನಾಮದಿಂದ ಭೀಷ್ಮರು ತಮ್ಮ ಅನುಭವದ ಆಧಾರದಲ್ಲಿ ಅರ್ಥಚಿಂತನೆ ನಡೆಸುತ್ತಿರುವರು.

**೭೨೩. ದುರ್ಧರಃ – ಎಲ್ಲರ ದುಃಖವನ್ನು ತನ್ನ ಹಿಡಿತದಲ್ಲಿಟ್ಟು ಕೊಂಡಿರುವವನು.**

**ವಿವರಣೆ :** ದುಃ - ಅಂದರೆ ದುಃಖವನ್ನು ಧರಃ - ತನ್ನ ಹಿಡಿತದಲ್ಲಿ ಇಟ್ಟು ಕೊಂಡಿರುವವನು.

ಭಗವಂತನು ಎಲ್ಲರ ದುಃಖವನ್ನು ತನ್ನ ಹಿಡಿತದಲ್ಲಿ ಇಟ್ಟುಕೊಂಡಿರುವನು. ಆದುದರಿಂದಲೇ ಕೆಲವೊಮ್ಮೆ ತನ್ನ ತಾಯಿ ಸತ್ತಾಗಲೂ ದುಃಖ ಉಂಟಾಗುವುದಿಲ್ಲ. ಆದರೆ ಪಕ್ಕದ ಮನೆಯವರು ಸತ್ತಾಗಲೂ ದುಃಖಿಸದೆ ಇರಲು ಆಗುವುದೇ ಇಲ್ಲ. ಭೀಷ್ಮರು ತಮ್ಮ ಅನುಭವದ ಆಧಾರದಲ್ಲಿ ಸ್ತುತಿಸುವರು - ತಮಗೆ ಹರಿತಗಳಾದ ಬಾಣಗಳು ಚುಚ್ಚುತ್ತಿದ್ದರೂ ದುಃಖ ಆಗುತ್ತಿಲ್ಲ. ಯಾಕೆಂದರೆ ಭೀಷ್ಮರ ದುಃಖವನ್ನೂ ತನ್ನ ಹಿಡಿತದಲ್ಲಿಟ್ಟುಕೊಂಡಿರುವ ಭಗವಂತನು ಅವರಿಗೆ ದುಃಖ ಆಗದಂತೆ ನೋಡಿಕೊಳ್ಳುವುದರಿಂದ ದುಃಖ ಆಗುತ್ತಿಲ್ಲ.

ಹೀಗೆ ಭೀಷ್ಮರದ್ದಷ್ಟೇ ಅಲ್ಲ, ಪ್ರತಿಯೊಬ್ಬರ ದುಃಖವನ್ನೂ ತನ್ನ ಹಿಡಿತದಲ್ಲಿಟ್ಟುಕೊಂಡಿರುವುದರಿಂದ ಭಗವಂತನು ದುರ್ಧರ ಎನಿಸಿರುವನು.

**೭೨೪. ಅಪರಾಜಿತಃ – ಪಾಲನೆ ಇತ್ಯಾದಿ ಕ್ರಿಯಾ ಪ್ರಯುಕ್ತವಾಗದೆಯೇ ಶೋಭಿಸುವವನು.**

ವಿವರಣೆ : ‘ಅಥ’ - ಎಂಬುದೊಂದು ಅವ್ಯಯ. ಅನಂತರ ಎಂಬುದು ಅದರ ಅರ್ಥ. ‘ಅಪರಾಜಿತ’ ನಾಮಕ್ಕಿಂತ ಮುಂಚೆ ಅದು ಇದೆ.

ಅಪ + ರಾಜಿತ ಎಂದು ಪದವಿಭಾಗ ಮಾಡಿಕೊಳ್ಳೋಣ. ರಾಜಿತ ಎಂದರೆ ವಿರಾಜಿತ - ಪ್ರಕಾಶಿಸುವವನು. ಯಾವುದರಿಂದಾಗಿ ಪ್ರಕಾಶಿಸುವವನು. ?

ಕೆಲವರು ಪಾಲನೆ ಮುಂತಾದುವನ್ನು ಮಾಡಿ ಆ ಪ್ರಯುಕ್ತ ಶೋಭಿಸುವುದುಂಟು. ಆದರೆ ದೇವರು ಅಪ-ರಾಜಿತ-ತಾನು ಪಾಲನೆ ಮಾಡುವುದರಿಂದ ಶೋಭಿಸುವವನಲ್ಲ, ಮತ್ತೆ ಸ್ವಯಂಪ್ರಕಾಶ ತಾನಾಗಿಯೇ ಶೋಭಿಸುವನು. ಮಡಿಕೆಯನ್ನು ಬೆಳಗಲು ದೀಪಬೇಕು, ಆದರೆ ಅಂತಹ ದೀಪವನ್ನು ಬೆಳಗಲು ಮತ್ತೊಂದು ದೀಪದ ಅವಶ್ಯಕತೆ ಇಲ್ಲ. ಅಂತೆಯೇ ದೇವರು ಶೋಭಿಸುವುದಕ್ಕೆ ಪಾಲನೆ ಮುಂತಾದ ಯಾವ ಚಟುವಟಿಕೆಯೂ ಕಾರಣವಲ್ಲ. ಮತ್ತೆ ತಾನಾಗಿಯೇ ಶೋಭಿಸುವನು. ಆದುದರಿಂದಲೇ ಅಪ + ರಾಜಿತ ಎನಿಸುವನು.

**ವಿಶ್ವಮೂರ್ತಿರ್ಮಹಾಮೂರ್ತಿರ್ದೀಪ್ತಮೂರ್ತಿರಮೂರ್ತಿಮಾನ್ |**
**ಅನೇಕಮೂರ್ತಿರವ್ಯಕ್ತಃ ಶತಮೂರ್ತಿಃ ಶತಾನನಃ ||೭೭||**

**೭೨೫. ವಿಶ್ವಮೂರ್ತಿಃ – ವಿಶ್ವದ ಪ್ರತಿಯೊಂದು ವಸ್ತುವೂ ಯಾರ ಪ್ರತಿಮೆಯಾಗಿರುವುದೋ ಅಂತಹವನು.**

ವಿವರಣೆ : ವಿಶ್ವ - ಎಲ್ಲವೂ ಮೂರ್ತಿ - ಪ್ರತಿಮೆಗಳು ಯಾರಿಗೋ ಅಂತಹವನು ‘ವಿಶ್ವಮೂರ್ತಿ’

‘ಕಂಡಕಂಡಲ್ಲಿ ನಿನ್ನ ರೂಪ ಕಾಂಬರೋ
ಉಂಡು ಉಟ್ಟದ್ದೆಲ್ಲ ನಿನ್ನ ಯಜ್ಞ ಎಂಬರೋ’

- ಎಂದು ದಾಸರು ಪಾಂಡುರಂಗನಲ್ಲಿ ನಿವೇದಿಸಿಕೊಂಡಿರುವುದಿದೆ. ಜ್ಞಾನಿಗಳಿಗೆ ಎಲ್ಲೆಲ್ಲಿ ಕಂಡರೂ ದೇವರು ಕಾಣಿಸಿಕೊಳ್ಳುವನು. ನಮಗೆ ಹಾಗಿಲ್ಲ - ಸಾಲಿಗ್ರಾಮ, ಅಶ್ವತ್ಥ - ಮುಂತಾದ ವಿಭೂತಿರೂಪಗಳಲ್ಲಷ್ಟೇ ದೇವರು ಕಾಣಿಸುವನು.

ಆದರೆ ಜ್ಞಾನಿಯಾದವನೊಬ್ಬ ತೀರ್ಥಯಾತ್ರೆಗೆ ಹೋಗುವಾಗ ‘ದೇವರ ಪೆಟ್ಟಿಗೆ’ಯನ್ನು ಬಿಟ್ಟು ಹೋದನೆಂದರೆ ಅಲ್ಲಿ ತೀರ್ಥದ ಸಮೀಪದಲ್ಲಿರುವ

ತರಗೆಲೆಯನ್ನೂ ಪ್ರತಿಮೆಯನ್ನಾಗಿಟ್ಟುಕೊಂಡು ದೇವರ ಪೂಜೆ ನಡೆಸಬಲ್ಲ.

ಆದುದರಿಂದ ದೇವರ ಮೂರ್ತಿ ಇಲ್ಲ ಎಂದು ದೇವರ ಪೂಜೆಯನ್ನೇ ನಿಲ್ಲಿಸಬೇಕಾದ ಪ್ರಸಂಗವೇ ಇಲ್ಲ.

ವೈದಿಕ ಸಂಸ್ಕೃತಿಯಲ್ಲಿ ದೇವರ ಪೂಜೆ ನಡೆಸಲು ಹೀಗೆ ವಿಶಾಲವಾದ ಅವಕಾಶವನ್ನು ಕಲ್ಪಿಸಿಕೊಡಲಾಗಿದೆ. ಎಲ್ಲೂ ಯಾವ ದಿನದಲ್ಲೂ, ಯಾವ ವಸ್ತುವನ್ನೂ ಪ್ರತಿಮೆಯನ್ನಾಗಿ ಬಳಸಿಕೊಂಡು ದೇವರ ಪೂಜೆಯನ್ನು ಮಾಡಬಹುದು ಎಂಬುದಾಗಿ ಈ ಹಿನ್ನೆಲೆಯಲ್ಲೇ ಭೀಷ್ಮರು 'ವಿಶ್ವಮೂರ್ತಿಃ' - ಎಂದು ಭಗವಂತನನ್ನು ಸ್ತುತಿಸಿರುವರು.

**೭೨೯. ಮಹಾಮೂರ್ತಿಃ – ಮಹತ್ತತ್ವಕ್ಕೆ ಅಭಿಮಾನಿಗಳಾದ ವಾಯು ಬ್ರಹ್ಮರನ್ನು ಪ್ರತಿಮೆಯನ್ನಾಗಿ ಮಾಡಿಕೊಂಡವನು.**

**ವಿವರಣೆ :** ಮೊದಲು 'ವಿಶ್ವಮೂರ್ತಿಃ' - ಎಂಬ ನಾಮದಿಂದ ಸಾಮಾನ್ಯವಾಗಿ ಎಲ್ಲವನ್ನೂ ತನ್ನ ಪ್ರತಿಮೆಯನ್ನಾಗಿ ಮಾಡಿಕೊಂಡವನೆಂದು ಸ್ತುತಿಸಿ, ವಿಶೇಷವಾಗಿ ಮಹಾಮೂರ್ತಿಃ ವಾಯುಬ್ರಹ್ಮರನ್ನು ತನ್ನ ಪ್ರತಿಮೆಯನ್ನಾಗಿ ಮಾಡಿಕೊಂಡಿರುವನೆಂದು ಸ್ತುತಿಸಲಾಗುವುದು.

ವಿಶ್ವದ ಪ್ರತಿಯೊಂದರಲ್ಲೂ ದೇವರು ಇದ್ದಾನೆ ಸತ್ಯ. ಆದರೆ ಹಂದಿ, ನಾಯಿ ಕಾಗೆ ಮುಂತಾದವುಗಳಲ್ಲಿ ದೇವರನ್ನು ಕಂಡು ಅವುಗಳೆನ್ನೆಲ್ಲ ಪ್ರತಿಮೆಯನ್ನಾಗಿ ಬಳಸಿಕೊಳ್ಳುವ ಸಾಮರ್ಥ್ಯ ನಮ್ಮಲ್ಲಿ ಇಲ್ಲ.

ಅದಕ್ಕಾಗಿ 'ಮಹಾಮೂರ್ತಿ'- ಮಹತ್ತತ್ವಾಭಿಮಾನಿಗಳಾದ ಬ್ರಹ್ಮ ವಾಯುಗಳನ್ನು ಪ್ರತಿಮೆಯನ್ನಾಗಿ ಮಾಡಿಕೊಳ್ಳಬೇಕು. ಪ್ರತಿಮೆ ಕಲುಷಿತವಾಗಿದ್ದರೆ, ಪ್ರಸನ್ನತೆಯಿಂದ ಪೂಜೆ ನಡೆಸಲು ಸಾಧ್ಯವಾಗುವುದಿಲ್ಲ. ಅದಕ್ಕಾಗಿ ಪ್ರತಿಮೆ ಆದಷ್ಟು ಪರಿಷ್ಕೃತವಾಗಿ ಇರಬೇಕು.

ಉಪನಿಷತ್ತಿನಲ್ಲಿ ಬಂದ ಒಂದು ಕಥೆ ನಮಗೆ ಗೊತ್ತೇ ಇದೆ. ದೇವತೆಗಳು ರುದ್ರ, ಸೂರ್ಯ, ಚಂದ್ರ, ಇಂದ್ರ ಮುಂತಾದ ಪ್ರತಿಮೆಗಳಲ್ಲಿ ದೇವರನ್ನು ಪೂಜಿಸಲು ತೊಡಗಿದಾಗ ಅವರಿಗೆ ಸರಿಯಾಗಿ ಪೂಜೆ ಮಾಡಲು ಆಗಲಿಲ್ಲ. ಕೊನೆಗೆ ಮಹತ್ತತ್ವಾಭಿಮಾನಿ ವಾಯುದೇವರಲ್ಲಿ ಪೂಜಿಸಿದರು.

ಪ್ರತಿಮೆ ಆದಷ್ಟು ಪರಿಷ್ಕೃತವಾಗಿದ್ದರೆ ಪೂಜೆ ನಡೆಸಲು ಪ್ರಸನ್ನತೆ ಉಂಟಾಗುವುದು. ಅದಕ್ಕಾಗಿಯೇ ಶ್ರೀಮಧ್ವರು ತಾವೇ ಎರಕಹೊಯ್ದು ತಯಾರಿಸಿದ

ಒಂಭತ್ತು ಪ್ರತಿಮೆಗಳ ಮಾಧ್ಯಮದಲ್ಲಿಯೇ ಪೂಜಿಸಿ, ಬೇರೆ ಪ್ರತಿಮೆಗಳು ಬೇಡ ಎಂದು.

ಆಚಾರ್ಯರು ಅದಮಾರು ಮಠಕ್ಕೆ ಕೊಟ್ಟಿರುವ ಪ್ರತಿಮೆ ಕಾಳಿಯಮರ್ದನ ಶ್ರೀಕೃಷ್ಣನ ಪ್ರತಿಮೆ. ಅದು ಯಾರ್ಯಾರದ್ದೋ ಕೈಗೆ ಹೋಗದೆ ಎಂಟುನೂರು ವರ್ಷಗಳಲ್ಲಿ ಕೇವಲ ಮೂವತ್ತ ಮೂರು ಭಕ್ತರಿಂದಷ್ಟೇ ಪೂಜೆಗೊಂಡಿದೆ. ಅದರ ಮುಖ, ಅದರಲ್ಲಿ ಕಣ್ಣು, ಇತ್ಯಾದಿಗಳೆಲ್ಲ ಸ್ಪಷ್ಟವಾಗಿ ಮೂಡಿಬಂದಿದೆ. ಒಂಭತ್ತು ಮಂದಿ ಶಿಷ್ಯರಿಗೆ ಪ್ರತಿಮೆಗಳನ್ನು ಕೊಟ್ಟ ಆಚಾರ್ಯರು, ಆ ಒಂಭತ್ತು ಶಿಷ್ಯರು ತಮ್ಮ ತಮ್ಮ ಪ್ರತಿಮೆಗಳನ್ನು ಪೂಜಿಸಿ ಉಳಿದೆಲ್ಲರಿಗೆ ಶ್ರೇಯಸ್ಸಾಗುವಂತೆ ಅನುಗ್ರಹಿಸಲು ಸಂದೇಶಿಸಿರುವರು.

ಹೀಗೆ ಪ್ರತಿಮೆಯ ಗುಣಮಟ್ಟದ ಮೇಲೆ ಪೂಜೆಯ ಗುಣಮಟ್ಟ ಅವಲಂಬಿಸಿರುವುದರಿಂದ ದೇವತೆಗಳು ಮಹತ್ತತ್ವಕ್ಕೆ ಅಭಿಮಾನಿಗಳಾದ ಬ್ರಹ್ಮವಾಯುಗಳನ್ನೇ ಪ್ರತಿಮೆಗಳನ್ನಾಗಿ ಬಳಸಿಕೊಂಡಿರುವರು.

ನಮಗೆ ವಾಯುದೇವರನ್ನು ಪ್ರತಿಮೆಯನ್ನಾಗಿ ಬಳಸಿಕೊಳ್ಳಲಾಗದಿದ್ದರೂ ಅಂತಹ ವಾಯುದೇವರು, ಅವರ ಸಾಕ್ಷಾದವತಾರ ಮಧ್ವಾಚಾರ್ಯರು ಅನುಗ್ರಹಿಸಿರುವ ಮೂರ್ತಿಯ ಮಾಧ್ಯಮದಲ್ಲಿ ಪೂಜಿಸುತ್ತಿರುವೆವಷ್ಟೇ.

**೭೨೭. ದೀಪ್ತಮೂರ್ತಿಃ – ಲಕ್ಷ್ಮೀದೇವಿ ಪ್ರತಿಮೆಯಾಗಿ ಉಳ್ಳವನು.**

**ವಿವರಣೆ :** ಹೌದು, ನಾವು ವಾಯು ಬ್ರಹ್ಮರನ್ನು ಪ್ರತಿಮೆಯನ್ನಾಗಿ ಬಳಸಿಕೊಂಡು ಪೂಜಿಸೋಣ. ಆ ವಾಯುಬ್ರಹ್ಮರು ಯಾವ ಪ್ರತಿಮೆಯನ್ನು ಬಳಸಿಕೊಳ್ಳಬೇಕು ಎಂಬ ಸಂಶಯಕ್ಕೆ ಉತ್ತರರೂಪವಾಗಿ ಮುಂದಿನ ನಾಮ 'ದೀಪ್ತಮೂರ್ತಿಃ'.

ದೀಪ್ತ ಎಂದರೆ ದೀಪ, ಪ್ರಕಾಶ, ಕಾಂತಿ. ಇದಕ್ಕೆ ಅಭಿಮಾನಿನಿಯಾಗಿರುವ ಲಕ್ಷ್ಮೀದೇವಿಯೇ ದೀಪ್ತಳು. ಅಂತಹ ಲಕ್ಷ್ಮೀದೇವಿಯೇ ಮೂರ್ತಿಯಾಗಿ, ಪ್ರತಿಮೆಯಾಗಿ ಉಳ್ಳವನು ದೀಪ್ತಮೂರ್ತಿ. ವಾಯುದೇವ ಹಾಗೂ ಚತುರ್ಮುಖ ಲಕ್ಷ್ಮೀದೇವಿಯನ್ನು ಭಗವಂತನ ಪ್ರತಿಮೆಯನ್ನಾಗಿ ಇಟ್ಟುಕೊಳ್ಳುವರು.

'ವಿಶ್ವಮೂರ್ತಿಃ'- ಎಂಬುದಾಗಿ ಸಾಮಾನ್ಯ ಪ್ರತಿಮೆಯ ಉಲ್ಲೇಖ ಬಂದರೆ, 'ಮಹಾಮೂರ್ತಿಃ' - ಎಂಬುದಾಗಿ ಹಿಂದಿನದ್ದಕ್ಕಿಂತ ಸ್ವಲ್ಪ ಉತ್ತಮ ಪ್ರತಿಮೆಯ ಉಲ್ಲೇಖ ಬಂದಿದೆ. 'ದೀಪ್ತಮೂರ್ತಿಃ' ಎಂಬಲ್ಲಿ ಹಿಂದಿನದ್ದಕ್ಕಿಂತಲೂ ಅತ್ಯುತ್ತಮ ಪ್ರತಿಮೆಯ ಉಲ್ಲೇಖ ಬಂದಿದೆ. ಹೀಗೆ ಈ ನಾಮಗಳಲ್ಲಿ ಕ್ರಮವಾಗಿ ಭಗವಂತನ

ಪ್ರತಿಮೆಗಳ ಪ್ರಸ್ತಾವ ಬಂದಿರುವುದನ್ನು ಗಮನಿಸಬಹುದಾಗಿದೆ.

ದೇವರು ಉಳಿದೆಲ್ಲ ವಸ್ತುಗಳಿಗಿಂತಲೂ, ವ್ಯಕ್ತಿಗಳಿಗಿಂತಲೂ, ದೇವತೆಗಳಿಗಿಂತಲೂ ಲಕ್ಷ್ಮೀದೇವಿಯಲ್ಲಿ ವಿಶೇಷವಾಗಿ ಸನ್ನಿಹಿತನಾಗಿರುವುದರಿಂದ ಲಕ್ಷ್ಮೀದೇವಿ ಪರಮಾತ್ಮನ ಅತ್ಯುತ್ತಮ ಪ್ರತಿಮೆ ಎನಿಸಿರುವಳು.

ದೇವರ ಯಾವುದೇ ಪ್ರತಿಮೆಯಾದರೂ ಅದರಲ್ಲಿ ಲಕ್ಷ್ಮೀದೇವಿಯ ಸನ್ನಿಧಾನವೂ ಇದ್ದೇ ಇರುವುದು. ಪ್ರತಿಮೆಗಳಲ್ಲಿ ದೇವರ ಸನ್ನಿಧಾನವನ್ನು ಅನುಸಂಧಾನ ಮಾಡುವ ಕ್ರಮ ಹೀಗಿದೆ - ಅಂಗಡಿಯಿಂದ ಮತ್ಸ್ಯ, ಕೂರ್ಮ, ವರಾಹ ಇತ್ಯಾದಿ ಯಾವುದಾದರೊಂದು ಭಗವಂತನ ರೂಪಕ್ಕೆ ಸಂಬಂಧಿಸುವ ಪ್ರತಿಮೆಯನ್ನು ತಂದೆವು. ಅದನ್ನು ಹಿರಿಯರಲ್ಲಿ ಕೊಡುವೆವು. ಅವರು ಅದರಲ್ಲಿ ತತ್ತ್ವನ್ಯಾಸ, ಮಾತೃಕಾನ್ಯಾಸಾದಿಗಳನ್ನು ಮಾಡಿ, ಅಭಿಷೇಕ ಮಾಡಿ, ಪೂಜಿಸಿಕೊಡುವರು. ಆ ಪ್ರತಿಮೆಯಲ್ಲಿ ನೇರವಾಗಿ ಭಗವದ್ರೂಪವನ್ನು ಚಿಂತಿಸುವುದಲ್ಲ. ಮತ್ತೆ, ಆ ಪ್ರತಿಮೆಯ ಒಳಗೆ ವಾಯುದೇವ, ಅವನ ಒಳಗೆ ಲಕ್ಷ್ಮೀದೇವಿ, ಅವಳ ಒಳಗೆ ಲಕ್ಷ್ಮೀನಾರಾಯಣರು ಇರುವರೆಂದು ಚಿಂತಿಸಬೇಕು.

ಹೊರಗೆ ಕೋಟು, ಅದರೊಳಗೆ ಅಂಗಿ, ಅದರೊಳಗೆ ಬನಿಯಾನ್, ಅದರೊಳಗೆ ದೇಹ, ಅದರೊಳಗೆ ಜೀವ, ಅವನೊಳಗೆ ದೇವರು – ಹೀಗೆ ನಮ್ಮ ನಿಮ್ಮ ದೇಹದಲ್ಲಿ ಹೇಗೋ ಹಾಗೆ ಪ್ರತಿಯೊಂದು ಪ್ರತಿಮೆಯಲ್ಲೂ.

ಇನ್ನೊಂದು ನಮ್ಮೆಲ್ಲರ ಅನುಭವಕ್ಕೆ ಬರುವ ದೃಷ್ಟಾಂತವೆಂದರೆ ತೆಂಗಿನಕಾಯಿ. ತೆಂಗಿನ ಕಾಯಿಯ ಹೊರಗೆ ಸಿಪ್ಪೆ. ಅದರೊಳಗೆ ಗೆರಟೆ. ಅದರೊಳಗೆ ತಿರುಳು. ಅದರೊಳಗೆ ನೀರು. ಅದರಂತೆಯೇ ಜಡಪ್ರತಿಮೆ, ಅದರೊಳಗೆ ವಾಯುದೇವ, ಅದರೊಳಗೆ ಲಕ್ಷ್ಮೀದೇವಿ. ಅವಳೊಳಗೆ ಲಕ್ಷ್ಮೀನಾರಾಯಣರು. ಈ ಅನುಸಂಧಾನಕ್ಕೆ ಸೌಕರ್ಯವಾಗಲಿ ಎಂಬ ದೃಷ್ಟಿಯಿಂದಲೂ ದೇವರಿಗೆ ಸಮರ್ಪಿಸುವಾಗ ತೆಂಗಿನಕಾಯಿಗೇ ಹೆಚ್ಚು ಪ್ರಾಶಸ್ತ್ಯ ನೀಡಲಾಗುವುದು.

ವಿಷ್ಣುಸಹಸ್ರನಾಮದಲ್ಲಿ ಅನುಕ್ರಮವಾಗಿ ನಾಮಗಳು ಪಠಿತವಾಗಿರುವಂತೆ ನಾವು ಮೊದಲು ಎಲ್ಲೆಲ್ಲೋ ಇರುವ ಕೃಷ್ಣನ ಅಥವಾ ರಾಮನ ಪ್ರತಿಮೆಯನ್ನು ಬಳಸಿಕೊಳ್ಳುವೆವು. ಆಗ ಭಗವಂತನು ನಮ್ಮ ಪಾಲಿಗೆ ವಿಶ್ವಮೂರ್ತಿ ಎನಿಸುವನು. ಆ ಮೂರ್ತಿಯೊಳಗೆ ಮಹತ್ತತ್ತ್ವಕ್ಕೆ ಅಭಿಮಾನಿಯಾದ ವಾಯುದೇವನನ್ನು ಚಿಂತಿಸುವೆವು. ಆಗ ಭಗವಂತ ನಮ್ಮ ಪಾಲಿಗೆ **'ಮಹಾಮೂರ್ತಿ'** ಎನಿಸುವನು. ವಾಯುದೇವನಲ್ಲಿ ಪ್ರಕಾಶಕ್ಕೆ ಅಭಿಮಾನಿನಿಯಾದ ಲಕ್ಷ್ಮೀದೇವಿಯನ್ನು ಚಿಂತಿಸುವೆವು.

ಆಗ ಭಗವಂತ ನಮ್ಮ ಪಾಲಿಗೆ 'ದೀಪ್ತಮೂರ್ತಿ' ಆಗುವನು. ಲಕ್ಷ್ಮೀದೇವಿಯೊಳಗೆ ಕೃಷ್ಣನನ್ನೋ ರಾಮನನ್ನೋ ಚಿಂತಿಸುವೆವು.

ನಮಗೆ ದೇವರನ್ನು ನೇರವಾಗಿ ಕಾಣುವ, ಚಿಂತಿಸುವ ಸಾಮರ್ಥ್ಯ ಇಲ್ಲ. ದೇವರನ್ನು ಪ್ರಕಟಿಸುವವರು ಲಕ್ಷ್ಮೀದೇವಿಯಿಂದ ವಾಯುದೇವ ಪ್ರಕಟಿಸುವನು. ವಾಯುದೇವನಿಂದ ನಮ್ಮ ಹಿರಿಯರಾದ ತಂದೆ, ತಾಯಿಯಂದಿರೋ ಗುರುಗಳೋ ಪ್ರಕಟಿಸುವರು. ಆದ್ದರಿಂದ ನಾವು ಪ್ರತಿಮೆಯಲ್ಲಿ ದೇವರನ್ನು ಆ ಕ್ರಮದಲ್ಲಿಯೇ ಕಾಣಬೇಕು.

ನವಗ್ರಹಕಿಂಡಿಯ ಮೂಲಕ ಕೃಷ್ಣನನ್ನು ಕಾಣುವಾಗಲೂ ನೇರವಾಗಿ ಕೃಷ್ಣನನ್ನು ಚಿಂತಿಸದೆ ಮೊದಲು ನಮ್ಮ ಹಿರಿಯರಾದ ತಂದೆ ತಾಯಿಯಂದಿರೋ, ಗುರುಗಳೋ ಇವರು, ಅವರಲ್ಲಿ ವಾಯುದೇವ, ಅವನಲ್ಲಿ ಲಕ್ಷ್ಮೀದೇವಿ. ಅವಳಲ್ಲಿ ಶ್ರೀಕೃಷ್ಣ. ಹೀಗೆ ಕೃಷ್ಣನ ಅನುಗ್ರಹ ಲಕ್ಷ್ಮೀದೇವಿ, ವಾಯುದೇವ, ಹಾಗೂ ನಮ್ಮ ಗುರುಹಿರಿಯರು ಈ ರೀತಿಯಾಗಿ ಹರಿದು ಬರುವಂತೆ ಪ್ರತಿಮೆಯಲ್ಲಿ ದೇವರ ದರ್ಶನವನ್ನು ನಡೆಸಬೇಕು.

**೭೨೮. ಅಮೂರ್ತಿಮಾನ್ಃ – ಯಾವುದೇ ಪ್ರತಿಮೆಗೆ ಪೂರ್ಣವಾಗಿ ಸಿಲುಕದವನು.**

ವಿವರಣೆ: 'ವಿಶ್ವಮೂರ್ತಿ'- ಎಂಬ ನಾಮದಿಂದ ತಿಳಿಸಿದಂತೆ ಭಗವಂತನನ್ನು ಯಾವ ಪ್ರತಿಮೆಯಲ್ಲೂ ಹಿಡಿದಿಡಬಹುದೆಂದು ಭಾವಿಸಿದರೆ ಭೀಷ್ಮರು ಅನ್ನುವರು 'ಅಮೂರ್ತಿಮಾನ್.'

ಮೇಲುನೋಟಕ್ಕೆ ಪ್ರತಿಮೆಯೇ ಇಲ್ಲದವನು ಎಂದೇ ಅರ್ಥ. ಹಾಗಾದರೆ **'ವಿಶ್ವಮೂರ್ತಿಃ' 'ಮಹಾಮೂರ್ತಿಃ' 'ದೀಪ್ತಮೂರ್ತಿಃ'** ಎಂದೆಲ್ಲ ನಾಮಗಳಿಂದ ಅವನ ಬೇರೆ ಬೇರೆ ಪ್ರತಿಮೆಗಳನ್ನು ಹೇಳಿದೆಯಲ್ಲವೇ ? ಅಂದರೆ ಅವನು ನಮ್ಮ ಮೇಲಿನ ಅನುಗ್ರಹಬುದ್ಧಿಯಿಂದ ಅಲ್ಲಿ ಬಂದು ನೆಲೆಸುವನೆಂಬ ದೃಷ್ಟಿಯಿಂದಷ್ಟೇ ಅವನ್ನು ಪ್ರತಿಮೆಗಳೆಂದು ಪರಿಗಣಿಸಿದ್ದು, ನಿಜವಾಗಿ ಅವನಿಗೆ ಯಾವುದೂ ಪ್ರತಿಮೆ ಇರಲು ಸಾಧ್ಯವೇ ಇಲ್ಲ. ಯಾಕೆಂದರೆ ಯಾವ ಪ್ರತಿಮೆಗೂ ನಿಲುಕದ ವ್ಯಕ್ತಿತ್ವ ಅವನದು.

ಪ್ರತಿಮೆ ಎನ್ನುವುದು ಸಾಮಾನ್ಯವಾಗಿ ಮನೆಯಂತೆ. ನಾವು ಹಾಗೂ ನಮ್ಮ ಮನೆಯ ಸದಸ್ಯರು ಒಟ್ಟು ಸೇರಿ ಇರಲು ಎಷ್ಟು ಅವಕಾಶ ಬೇಕೋ ಅಷ್ಟು ದೊಡ್ಡ ಮನೆ ಬೇಕು ತಾನೇ ? ಅವಿಭಕ್ತಕುಟುಂಬ ಎಂದಾದರೆ ಹದಿನೈದು, ಇಪ್ಪತ್ತು ಕುಟುಂಬ

ಸದಸ್ಯರು ಒಟ್ಟು ಬದುಕುವಷ್ಟು ದೊಡ್ಡ ಮನೆ ಬೇಕು. ಹಿಂದೆ ಮನೆಯ ವೈಶಾಲ್ಯವನ್ನು ಅಳೆಯುವ ಪದ್ಧತಿಯೇ - ಒಂದೇ ಬಾರಿಗೆ ಇನ್ನೂರು ಎಲೆ ಹಾಕುವಷ್ಟು, ಐನೂರು ಎಲೆ ಹಾಕುವಷ್ಟು ದೊಡ್ಡ ಮನೆ... ಹೀಗಿತ್ತು.

ಅಂತೂ ಮನೆ ಎಂದರೆ ಹೇಗೆ ಅದರಲ್ಲಿ ಎಲ್ಲ ಮನೆಯ ಸದಸ್ಯರೂ ಸೇರಿಕೊಂಡು ಇರಲು ಅನುಕೂಲವಾಗಿದ್ದಿರಬೇಕೋ ಹಾಗೆ ಪ್ರತಿಮೆ ಭಗವಂತನ ಪೂರ್ಣ ವ್ಯಕ್ತಿತ್ವವನ್ನು ಸೆರೆಹಿಡಿಯುತ್ತಿರಬೇಕು. ಆದರೆ ಅಂತಹ ಪ್ರತಿಮೆ ಇಲ್ಲವೇ ಇಲ್ಲ.

ಸತ್ಯವ್ರತರಾಜನ ಬೊಗಸೆಯಲ್ಲಿ ಸೇರಿಕೊಂಡ ಮೀನು ತನಗೆ ಅಲ್ಲಿ ಅವಕಾಶ ಸಾಲದು ಎಂದಿತು. ಅಲ್ಲಿಂದ ಬೋಗಣಿಯಲ್ಲಿ ಹಾಕಿದಾಗ, ಅದೂ ಸಾಲದಾಯಿತು. ಅಲ್ಲಿಂದ ಬಾವಿ, ಕೆರೆ, ಸರೋವರ, ನದಿ ಇತ್ಯಾದಿಗಳ ಅವಕಾಶವೂ ಸಾಲದೆಂದಾಗ 'ಯಥಾಸ್ಥಾನಂ ಉದ್ವಾಸಯಾಮಿ' ಎಂದು ಸಮುದ್ರಕ್ಕೆ ಆ ಮತ್ಸ್ಯವನ್ನು ಬಿಡಲಾಯಿತು. ಅಂದರೆ ಸಮುದ್ರದ ಅವಕಾಶ ಮತ್ಸ್ಯಕ್ಕೆ ಸಾಕು ಎನಿಸಿತೆಂದಲ್ಲ, ಮತ್ತೆ, ಮತ್ಸ್ಯ ಭಕ್ತರ ಮೇಲಿನ ವಾತ್ಸಲ್ಯದಿಂದ ಸಮುದ್ರದಲ್ಲಿ ತಾನು ಹಿಡಿಸಿಕೊಳ್ಳುವಂತೆ ಮಾಡಿ ವಿಹರಿಸಿದನಷ್ಟೇ. ಅಂತೆಯೇ ಯಾವುದೇ ಪ್ರತಿಮೆ ತನಗೆ ಸಾಲದಾದರೂ ಭಕ್ತರ ಮೇಲಿನ ಕರುಣೆಯಿಂದ ತನಗೆ ಅದು ಸಾಕು ಎನಿಸುವಂತೆ ಮಾಡಿ ಅಲ್ಲಿ ಸನ್ನಿಹಿತನಾಗುವನು ಭಗವಂತ.

ಲಂಕೆಯಲ್ಲಿ ಕುಂಭಕರ್ಣನಿದ್ದಂತೆ ಪ್ರತಿಮೆಯಲ್ಲಿ ದೇವರಿರುವುದೆಂದು ಮತ್ತೊಂದು ದೃಷ್ಟಾಂತ ಕೊಡಬಹುದು. ಕುಂಭಕರ್ಣ, ಸತ್ತಾಗ ಅವನ ದೇಹದ ಗಾತ್ರವನ್ನು ಹೀಗೆ ತಿಳಿಸಲಾಗುವುದು - 'ಯೋಜನಾನಾಂ ತ್ರಿಲಕ್ಷಂ....' ಮೂರು ಲಕ್ಷ ಯೋಜನೆಗಳಷ್ಟು ದೊಡ್ಡ ದೇಹ ಎಂಬುದಾಗಿ. ಆದರೆ ಲಂಕೆ ಮಹಾ ಎಂದರೆ ಒಂದು ಲಕ್ಷ ಸುತ್ತಳತೆ ಉಳ್ಳದ್ದಾಗಿತ್ತು. ಅಂತಹ ಲಂಕೆಯಲ್ಲಿ ಕುಂಭಕರ್ಣ ಹೇಗಿದ್ದ? ತುಂಬ ಮುದುಡಿಕೊಂಡಿದ್ದಿರಬೇಕು. ಇಲ್ಲವೇ, ಶರೀರವನ್ನು ಸಣ್ಣದಾಗಿಸುವ ಯಾವುದೋ ವಿದ್ಯೆ ಅವನಲ್ಲಿದ್ದಿರಬಹುದು. ಅಂತಹ ರಾಕ್ಷಸನಿಗೇ ಆ ಬಗೆಯ ಸಾಮರ್ಥ್ಯವಿತ್ತೆಂದರೆ ನಮ್ಮ ಸ್ವಾಮಿಗೆ ಎಷ್ಟು ಚಿಕ್ಕ ಪ್ರತಿಮೆಯಲ್ಲೂ ಸನ್ನಿಧಾನ ಹೊಂದುವ ಸಾಮರ್ಥ್ಯ ಇರಲಾರದೇ? ಇದ್ದೇ ಇದೆ. ಅದಕ್ಕಾಗಿಯೇ ಭೀಷ್ಮರು ಅವನ ಬೇರೆ ಬೇರೆ ಪ್ರತಿಮೆಗಳನ್ನು ಉಲ್ಲೇಖ ಮಾಡಿ, ಅವೆಲ್ಲ ಅವನ ಪ್ರತಿಮೆಗಳೆನಿಸುವಲ್ಲಿ ಅವನ ಔದರ್ಯ ಕಾರಣವೇ ಹೊರತು ನಿಜವಾಗಿ ಅವನು ಯಾವುದೇ ಪ್ರತಿಮೆಗೆ ಸಿಲುಕದವನು 'ಅಮೂರ್ತಿಮಾನ್'- ಎಂದು ಸ್ತುತಿಸಿರುವರು.

**೭೨೯. ಅನೇಕಮೂರ್ತಿಃ – ಮುಖ್ಯಪ್ರಾಣನೇ ಮುಖ್ಯವಾದ ಪ್ರತಿಮೆ ಉಳ್ಳವನು.**

ವಿವರಣೆ: ದೇವರನ್ನು 'ವಿಶ್ವಮೂರ್ತಿಃ', 'ಮಹಾಮೂರ್ತಿಃ', 'ದೀಪ್ತಮೂರ್ತಿಃ' ಎಂಬ ನಾಮಗಳಿಂದ ಎಲ್ಲ ವಸ್ತುಗಳೂ ಪ್ರತಿಮೆಗಳಾಗಿ ಉಳ್ಳವನು, ಬ್ರಹ್ಮವಾಯುಗಳೇ ಪ್ರತಿಮೆಗಳಾಗಿ ಉಳ್ಳವನು, ಲಕ್ಷ್ಮೀದೇವಿ ಪ್ರತಿಮೆಯಾಗಿ ಉಳ್ಳವನು ಎಂದು ಸ್ತುತಿಸಿದಾಗ ನಮಗೆ 'ಹಾಗಾದರೆ ಯಾವ ಪ್ರತಿಮೆಯನ್ನು ಆಯ್ಕೆ ಮಾಡಬೇಕು ? ಎಂದು ಗೊಂದಲ ಉಂಟಾಗುವುದು ಸಹಜ. ಅದರ ಪರಿಹಾರಕ್ಕೆ ಭೀಷ್ಮರು ಸಮಾಧಾನಿಸುವರು - ಅನೇಕಮೂರ್ತಿಃ - ಅನ + ಏಕ + ಮೂರ್ತಿ ಅನೇಕಮೂರ್ತಿಃ ಅನ ಎಂದರೆ ಮುಖ್ಯಪ್ರಾಣ. ಏಕ ಎಂದರೆ ಮುಖ್ಯ ಹೊರತು ಒಂದು ಅಲ್ಲ. ಯಾಕೆಂದರೆ ಈಗಾಗಲೇ ಅನೇಕ ಪ್ರತಿಮೆಗಳನ್ನು ಉಲ್ಲೇಖಿಸಿರುವುದರಿಂದ ಏಕ ಪ್ರತಿಮೆ ಎಂಬುದು ಕೂಡಲಾರದು. ಮೂರ್ತಿಃ ಎಂದರೆ ಪ್ರತಿಮೆ. ಮುಖ್ಯಪ್ರಾಣ ಯಾರ ಮುಖ್ಯ ಪ್ರತಿಮೆಯಾಗಿರುವನೋ ಅಂತಹವನು ಅನೇಕಮೂರ್ತಿ.

ಇತರ ದೇವತೆಗಳೂ ಭಗವಂತನ ಪ್ರತಿಮೆಯಾಗಬಲ್ಲರು. ಆದರೆ ಅವರೊಳಗೂ ಮುಖ್ಯಪ್ರಾಣನ ಪ್ರತಿಮೆಯನ್ನು ಚಿಂತಿಸಿ, ಅಲ್ಲಿ ದೇವರನ್ನು ಅನುಸಂಧಾನ ಮಾಡಬೇಕೇ ಹೊರತು ನೇರವಾಗಿ ದೇವರನ್ನು ಚಿಂತಿಸಿದರೆ ಅದು ದೇವರಿಗೆ ತಲುಪುವುದೇ ಇಲ್ಲ.

**'ಕಂಡೇ ನಾ ಉಡುಪಿಯ ಕೃಷ್ಣನ....'** ಎಂಬ ಹಾಡಿನಲ್ಲಿ ಉಡುಪಿ ಕೃಷ್ಣನ ದರ್ಶನ ಹೇಗೆ ಮಾಡಬೇಕೆಂದು ದಾಸರು ಮಾರ್ಗದರ್ಶನ ನೀಡಿರುವರು. ಅದರಲ್ಲಿ ಗರುಡನ ದರ್ಶನ ಪಡೆದುಕೊಂಡ ಮೇಲೆ ಮುಖ್ಯಪ್ರಾಣನ ದರ್ಶನ ಪಡೆದು ಬಳಿಕ ಶ್ರೀಕೃಷ್ಣನ ಪ್ರತಿಮೆಯ ದರ್ಶನ ನಡೆಸಬೇಕೆಂದು ತಿಳಿಸಿರುವರು. ಶ್ರೀಕೃಷ್ಣನ ಪ್ರತಿಮೆಯಲ್ಲೂ ಮೊದಲು ಮುಖ್ಯಪ್ರಾಣ, ಅವನಲ್ಲಿ ರುಗ್ಮಿಣೀದೇವಿ, ಅವನಲ್ಲಿ ಶ್ರೀಕೃಷ್ಣನನ್ನು ಕಾಣಬೇಕು. ಹೀಗೆ ಶ್ರೀಕೃಷ್ಣನ ದರ್ಶನ ಪಡೆಯುವಾಗ ಮುಖ್ಯಪ್ರಾಣನ ದರ್ಶನವನ್ನು ಪಡೆಯುವುದನ್ನು ಮರೆತು ಬಿಡಬಾರದೆಂದೇ ಶ್ರೀ ವಾದಿರಾಜಸ್ವಾಮಿಗಳು ಉಡುಪಿ ಶ್ರೀಕೃಷ್ಣಮಠದಲ್ಲಿ ಮುಖ್ಯಪ್ರಾಣನ ಪ್ರತಿಮೆಯನ್ನು ಪ್ರತಿಷ್ಠಾಪಿಸಿರುವರು.

ಹೀಗೆ ಭಗವಂತನಿಗೆ ಮುಖ್ಯಪ್ರಾಣನ ಪ್ರತೀಕ ಮುಖ್ಯವಾಗಿರುವುದರಿಂದ 'ಅನೇಕಮೂರ್ತಿಃ'- ಮುಖ್ಯ ಪ್ರಾಣನನ್ನು ಮುಖ್ಯವಾಗಿ ಪ್ರತಿಮೆಯಾಗಿ

ಇಟ್ಟುಕೊಂಡಿರುವವನೆಂದು ಭಗವಂತನನ್ನು ಸ್ತುತಿಸಲಾಗಿದೆ.

**೭೩೦. ಅವ್ಯಕ್ತಃ – ನಮಗೆ ಋಷಿ ಬಂದಂತೆ ನಮಗೆ ಕಾಣಿಸಿಕೊಳ್ಳದವನು.**

ವಿವರಣೆ : ಬೇರೆ ಬೇರೆ ಪ್ರತಿಮೆಗಳ ಮೂಲಕ ಅವನ ಪೂಜೆ ನಡೆಸಬಹುದೆಂದಾಗ ಹಾಗಾದರೆ ಆ ಎಲ್ಲ ಪ್ರತಿಮೆಗಳಲ್ಲಿ ಭಗವಂತ ಕಾಣಿಸಿಕೊಳ್ಳುವನೆಂಬ ಭಾವನೆ ಉಂಟಾದರೆ, ಅದನ್ನು ಅಲ್ಲಗಳೆಯಲಾಗುವುದು 'ಅವ್ಯಕ್ತಃ' - ಕಾಣಿಸಿಕೊಳ್ಳದವನು. ವ್ಯಕ್ತ ಎಂದರೆ ಕಾಣಿಸಿಕೊಳ್ಳುವವನು. ಆದುದರಿಂದ - 'ಅವ್ಯಕ್ತ' - ಎಂಬುದಕ್ಕೆ ಕಾಣಿಸಿಕೊಳ್ಳದವನು ಎಂಬ ಅರ್ಥ.

ಎಷ್ಟು ಯತ್ನ ಪಟ್ಟರೂ ಅವನು ಕಾಣಿಸಿಕೊಳ್ಳುವುದಿಲ್ಲ. ಪ್ರತಿಮೆಯನ್ನು ಕಣ್ತುಂಬ ಕಂಡು ಕಣ್ಣು ಮುಚ್ಚಿಕೊಂಡಾಗ ಮನಸ್ಸಿನಲ್ಲಿ ದೇವರ ರೂಪ ಕಾಣುವುದು. ಆದರೆ ಅದೂ ಒಂದು ಮಾನಸಿಕ ಸಂಸ್ಕಾರದ ಪ್ರತಿಮೆಯೇ ಹೊರತು ಅದೇ ದೇವರಲ್ಲ. ಅಂದರೆ ಮನಸ್ಸಿನಲ್ಲೂ ಮನೆ ಕಾಣುವುದೇ ಹೊರತು ಮನಸ್ಸಿನ ಯಜಮಾನ ಕಾಣಿಸಿಕೊಳ್ಳಲಾರ.

ಹಾಗಾದರೆ ಪ್ರತಿಮೆಗಳಲ್ಲಿ ಅವನನ್ನು ಆರಾಧಿಸುವುದರಲ್ಲಿ ಏನೂ ಅರ್ಥವಿಲ್ಲವೇ ?

ಶಂಕರಾಚಾರ್ಯರು ತಮಗೆ ದೇವರು ಕಂಡಿಲ್ಲ ಎಂದರು. ರಾಮಾನುಜಾಚಾರ್ಯರು ದೇವರು ಯಾರಿಗೂ ಕಾಣಿಸುವುದೇ ಇಲ್ಲ ಎಂದರು. ಆದರೆ ಮಧ್ವಗುರುಗಳು ದೇವರು ಸುಲಭದಲ್ಲಿ ಕಾಣಿಸದಿದ್ದರೂ ಕಾಣಿಸುವುದೇ ಇಲ್ಲ ಎಂದಿಲ್ಲ. ತನಗೆ ಕಾಣಿಸಿಕೊಳ್ಳಬೇಕು ಎಂದು ಅವನಿಗೆ ಕಂಡರೆ ಆ ಭಕ್ತನೆದುರು ಅವನು ಕಾಣಿಸಿಕೊಳ್ಳುವನು. **'ಯಮೇವೈಷ ವೃಣುತೇ ತೇನ ಲಭ್ಯಃ ತಸ್ಯೈಷ ಆತ್ಮಾ ವಿವೃಣುತೇ ತನೂಂ ಸ್ವಾಮ್'** - ಎಂಬ ಉಪನಿಷತ್ತು ಯಾರ ಎದುರು ತನಗೆ ಕಾಣಿಸಿಕೊಳ್ಳಬೇಕೆಂದು ಅವನಿಗೆ ಅನಿಸುವುದೋ ಅವರೆದುರಷ್ಟೇ ಕಾಣಿಸಿಕೊಳ್ಳುವನು ಎಂದು ಸಾರುತ್ತಿದೆ. ಆ ಹಿನ್ನಲೆಯಲ್ಲೇ **'ಆತ್ಮಾವಾಽರೇ ದೃಷ್ಟವ್ಯಃ....'** ಪರಮಾತ್ಮನ ದರ್ಶನ ಪಡೆದುಕೊಳ್ಳಲು ಯತ್ನಿಸಬೇಕು ಎಂದು ಉಪನಿಷತ್ತು ಪ್ರತಿಪಾದಿಸುತ್ತಿದೆ. ಒಂದು ವೇಳೆ ರಾಮಾನುಜಾಚಾರ್ಯರು ಹೇಳಿದಂತೆ ದೇವರು ಎಂದೂ ಯಾರಿಗೂ ಏನು ಮಾಡಿದರೂ ಕಾಣಿಸುವುದೇ ಇಲ್ಲ ಎಂದಾದರೆ 'ಆತ್ಮಾ ವಾಽರೇ ದೃಷ್ಟವ್ಯಃ...' ಎಂಬ ಶ್ರುತಿಯ ಗತಿ ಏನು ?

ಆದುದರಿಂದ ಶ್ರೀಮಧ್ವರು ತನಗೆ ಕಾಣಿಸಿಕೊಳ್ಳಬೇಕೆಂದು ಕಾಣದೆ ಏನು ಮಾಡಿದರೂ ಕಾಣಿಸಿಕೊಳ್ಳದ ಭಗವಂತ ತನಗೆ ಕಾಣಿಸಿಕೊಳ್ಳಬೇಕೆಂದು

ಕಂಡಿತೆಂದರಷ್ಟೇ ಕಾಣಿಸಿಕೊಳ್ಳುವನು ಎಂದು ಪ್ರತಿಪಾದಿಸಿರುವರು. ಮಗುವಿಗೆ ತಾಯಿಯನ್ನು ಕಾಣಬೇಕೆಂದು ಕಂಡಾಕ್ಷಣ ತಾಯಿ ಕಾಣಿಸಿಕೊಳ್ಳಬೇಕಿಲ್ಲ. ತಾಯಿಗೇ ಕಾಣಬೇಕು ಮಗುವಿಗೆ ತಾನು ಕಾಣಿಸಿಕೊಳ್ಳಬೇಕೆಂದು. ಆಗಷ್ಟೇ ತಾಯಿಯ ದರ್ಶನ ಮಗುವಿಗೆ ದೊರಕುವುದು.

ಆದುದರಿಂದ 'ಅವ್ಯಕ್ತ' ನಾಮವು – ಭಗವಂತನು ಯಾರ್ಯಾರಿಗೋ ಎಲ್ಲೆಲ್ಲೋ ಯಾವ್ಯಾವಾಗಲೋ ಹೆಗ್ಗೇಗೋ ದರ್ಶನ ನೀಡುವುದಿಲ್ಲ, ಬದಲಾಗಿ ಯಾರು ತನ್ನನ್ನು ಭಕ್ತಿಯಿಂದ ಒಲಿಸಿಕೊಳ್ಳುವರೋ ಅವರೆದುರಷ್ಟೇ ತಾನು ಕಾಣಿಸಿಕೊಳ್ಳುವವನು ಎಂದು ತಿಳಿಸುತ್ತಿದೆ.

ಆದ್ದರಿಂದ ದೇವರನ್ನು ಕಾಣಬೇಕೆಂದರೆ ಭಕ್ತಿಯಿಂದ ಅವನನ್ನು ಒಲಿಸಿಕೊಳ್ಳಲು ಯತ್ನಿಸಬೇಕು ಎಂಬುದು ತಾತ್ಪರ್ಯ.

**೭೩೧. ಶತಮೂರ್ತಿಃ – ಸುಖ ಸ್ವರೂಪಿಯಾದ ವಾಯುದೇವನಲ್ಲಿ ವ್ಯಾಪಿಸಿರುವ ಮೂರ್ತಿ ಉಳ್ಳವನು.**

**ವಿವರಣೆ :** 'ವಿಶ್ವಮೂರ್ತಿಃ' ಎಂಬ ನಾಮದಿಂದ ಭಗವಂತನಿಗೆ ಎಲ್ಲವೂ ಪ್ರತಿಮೆಯಾಗಬಹುದೆಂದು ತಿಳಿಸಲಾಯಿತು. ಆದರೆ ಮುಖ್ಯವಾಗಿ ಭಗವಂತನ ಪ್ರತಿಮೆ ವಾಯುದೇವ ಎಂದು 'ಅನೇಕಮೂರ್ತಿ' - ಎಂಬ ನಾಮದಿಂದ ತಿಳಿಸಲಾಯಿತು. ಯಾಕೆ ವಾಯುದೇವನ ಪ್ರತಿಮೆಯೇ ಮುಖ್ಯ ಪ್ರತಿಮೆ ಎಂದರೆ 'ಶತಮೂರ್ತಿ' ನಾಮದಿಂದ ತಿಳಿಸಲಾಗುವುದು. ಶ ಎಂದರೆ ಸುಖ ಸ್ವರೂಪಿಯಾದ ವಾಯುದೇವ ಎಂದರ್ಥ. ಭಾರತೀದೇವಿಗೆ 'ಶ್ರೀ' - ಎಂಬ ಹೆಸರು ಯಾಕೆ ಬಂದಿದೆ ಎಂಬುದನ್ನು ತಿಳಿಸುತ್ತ **'ಶಂರೂಪಮಾಶ್ರಿತಾ ಯಸ್ಮಾತ್ ಶ್ರೀರಿತ್ಯೇವಾಭಿಧೀಯತೇ'** - ಎಂಬುದಾಗಿ ಸುಖರೂಪಿಯಾಗಿದ್ದು 'ಶಂ' ಎನಿಸಿರುವ ವಾಯುದೇವನನ್ನು ಯಾವಾಗಲೂ ಆಶ್ರಯಿಸಿರುವುದರಿಂದ ಭಾರತೀದೇವಿ ಶ್ರೀ ಎನಿಸುವಳು ಎಂದು ಹೇಳಲಾಗಿದೆ.

ಲಕ್ಷ್ಮೀದೇವಿ 'ಶ್ರಯತೇ ಇತಿ ಶ್ರೀಃ' ನಿತ್ಯ ಪರಮಾತ್ಮನನ್ನು ಆಶ್ರಯಿಸಿರುವುದರಿಂದ ಶ್ರೀ ಎನಿಸುವಳು.

ಹೀಗೆ ಶ್ರೀ ಎನಿಸುವ ಭಾರತೀದೇವಿಗೆ ಆಶ್ರಯನಾಗಿರುವ ಮುಖ್ಯಪ್ರಾಣ ಸುಖ ಸ್ವರೂಪಿಯಾಗಿರುವುದರಿಂದ 'ಶಂ' ಎನಿಸುವನು. ಅವನಲ್ಲಿ 'ತ' - ಎಂದರೆ 'ತತ' - ವ್ಯಾಪ್ತವಾದ ಮೂರ್ತಿ ಉಳ್ಳ ಭಗವಂತ ಶತಮೂರ್ತಿ. ದೇವರು ಎಲ್ಲ ಕಡೆ ಇರುವನು. ಆದರೆ ನಾವು ಎಲ್ಲಿ ಅವನನ್ನು ಉಪಾಸನೆ ಮಾಡಿದಾಗ ಆದಷ್ಟು

ಶೀಘ್ರವಾಗಿ ಹಾಗೂ ಆದಷ್ಟು ಅಧಿಕವಾಗಿ ಅನುಗ್ರಹೋನ್ಮುಖನಾಗುವನೋ ಅದು ಮುಖ್ಯ ಪ್ರತಿಮೆ ಎನಿಸುವುದು.

ವಿದ್ಯುತ್ ಎಲ್ಲಾ ತಂತಿಗಳಲ್ಲೂ ಹರಿಯುತ್ತಿರಬಹುದು. ಆದರೆ ಕೆಲವೆಡೆ ನಾವು ಮುಟ್ಟಿದರೆ ನಮ್ಮನ್ನು ತೆಗೆದು ಬಿಸಾಡಿ ಬಿಡುವುದು. ಮತ್ತೆ ಕೆಲವೆಡೆ ನಮ್ಮನ್ನು ಅಪ್ಪಿಕೊಂಡೇ ಬಿಡುವುದು. ಅಂತೆ ದೇವರೆಂಬ ವಿದ್ಯುತ್ ನಮ್ಮನ್ನು ಎಸೆಯುವಂತಾಗಬಾರದು ; ಬದಲಾಗಿ ನಮ್ಮನ್ನು ತಬ್ಬಿಕೊಳ್ಳುವಂತಾಗಬೇಕು. ಅದಕ್ಕೆ ವಾಯುದೇವನೆಂಬ ಪ್ರಬಲವಾದ ತಂತಿ ಬೇಕು. ಅದರಲ್ಲಿ ದೇವರ ಸನ್ನಿಧಾನ ಅಧಿಕವಾಗಿರುವುದರಿಂದ ಆ ತಂತಿಯ ಮೂಲಕ ದೇವರೆಂಬ ವಿದ್ಯುತ್ತನ್ನು ಸ್ಪರ್ಶಿಸಲು ತೊಡಗಿದೆವೆಂದರೆ ದೇವರ ತ್ಯಾಗಕ್ಕೆ ಗುರಿಯಾಗದೆ ದೇವರ ಸ್ವೀಕಾರಕ್ಕೆ ಪಾತ್ರರಾಗುವೆವು. ಅದಕ್ಕಾಗಿ ದೇವರೆಂಬ ವಿದ್ಯುತ್ತಿನ ಸಂಪರ್ಕಕ್ಕೆ ವಾಯುದೇವನೆಂಬ ತಂತಿಯನ್ನೇ ಬಳಸಿಕೊಳ್ಳಬೇಕು.

ನಾವು ದೇವರ ಉಪಾಸನೆ ಮಾಡುವುದು ಪ್ರಸನ್ನತೆಗಾಗಿ ತಾನೇ ? ನಿತ್ಯ ಪ್ರಸನ್ನವಾಗಿರುವ ಪ್ರತೀಕದಲ್ಲಿಯೇ ದೇವರ ಉಪಾಸನೆ ಮಾಡಿದೆವೆಂದರೆ ದೇವರಿಂದ ಸುಲಭವಾಗಿ ಪ್ರಸನ್ನತೆಯನ್ನು ಪಡೆದುಕೊಳ್ಳಬಹುದು. ಜೀವಕೋಟಿಯಲ್ಲೇ ಯಾವಾಗಲೂ ಪ್ರಸನ್ನನಾಗಿ ಇರುವವನು ವಾಯುದೇವ. ಬಲದೇವತೆಯಾದ ಅವನಿಗೆ ದೈತ್ಯರ ಭಯವಿಲ್ಲ ; ಆಧ್ಯಾತ್ಮಜ್ಞಾನನೇತ್ರ ಆದ ಅವನಿಗೆ ಅಜ್ಞಾನ, ವಿಪರೀತ ಜ್ಞಾನಗಳ ಹಾವಳಿ ಇಲ್ಲ. ಆದ್ದರಿಂದ ಯಾವಾಗಲೂ ಪ್ರಸನ್ನನಾಗಿ ಇರುವನು. ಅದಕ್ಕಾಗಿಯೇ ಅವನು 'ಶಂ' ಎನಿಸಿರುವನು. ಅಂತಹವನಲ್ಲಿ ವ್ಯಾಪ್ತನಾಗಿರುವ ಭಗವಂತನೂ ತನ್ನ ಪ್ರಸನ್ನತೆಯನ್ನು ವಿಶೇಷವಾಗಿ ಪ್ರಕಟಿಸುವನು. ಆದುದರಿಂದ 'ಶತಮೂರ್ತಿ' - ಸುಖಸ್ವರೂಪಿಯಾದ ವಾಯುದೇವನಲ್ಲಿ ವ್ಯಾಪಿಸಿರುವ ಮೂರ್ತಿ ಉಳ್ಳವನೆಂದು ಭಗವಂತನನ್ನು ವಾಯುದೇವನ ಪ್ರತಿಮೆಯಲ್ಲಿ ಆರಾಧಿಸುವ ಬಗ್ಗೆ ಭೀಷ್ಮರು ತುಂಬ ದಾರ್ಢ್ಯವನ್ನು ತೋರಿಸುತ್ತಿರುವರು.

**೭೩೨. ಶತಾನನಃ – * ಮುಖ್ಯಪ್ರಾಣ ಸರ್ವದಾ ಪ್ರಸನ್ನನಾಗಿರುವಂತೆ ಪ್ರೇರಿಸುವವನು.**

*** ಎಲ್ಲರ ಮುಖದಲ್ಲಿ ಬೇರೆ ಬೇರೆ ಭಾವಗಳನ್ನು ತಂದು ತೋರಿಸುವ ಮುಖ್ಯಪ್ರಾಣ ಪ್ರಸನ್ನತೆಯಿಂದ ವ್ಯಾಪ್ತನಾಗಿರುವಂತೆ ಅನುಗ್ರಹಿಸಿರುವವನು.**

ವಿವರಣೆ: ಶತಾನನ ಎಂಬುದಕ್ಕೆ ನೂರಾರು ಮುಖ ಉಳ್ಳವನೆಂಬುದು ಪ್ರಸಿದ್ಧವಾದ ಒಂದು ಅರ್ಥ ಇದೆ.

ಮತ್ತೊಂದು ಅರ್ಥ ಪ್ರಸಂಗಕ್ಕೆ ಅನುಗುಣವಾಗಿ ನೋಡುವುದಾದರೆ - ಶತ+ ಅನ + ನ - ಎಂದು ಮೂರು ಶಬ್ದಗಳನ್ನಾಗಿ ವಿಂಗಡಿಸಿಕೊಳ್ಳಬೇಕು.

'ಶತಮೂರ್ತಿ' ಎಂಬಲ್ಲಿ 'ಶ' ಶಬ್ದಕ್ಕೆ ಸುಖಸ್ವರೂಪಿ ಮುಖ್ಯಪ್ರಾಣ ಎಂಬ ಅರ್ಥವನ್ನು ನೋಡಿದ್ದೇವೆ. ಆದರೆ ಈಗ 'ಶ' ಎಂದರೆ ಸುಖ. ಅದರಿಂದ 'ತತ'ನಾದವನು, ವ್ಯಾಪ್ತನಾದವನು 'ಶತ' - ಅಂತಹ 'ಅನ' ಚೇಷ್ಟಕ - ಶತಾನ - ಮುಖ್ಯಪ್ರಾಣ. ಅವನಿಗೆ ಎಂದೂ ಭಯ ಇಲ್ಲದ ಪ್ರಯುಕ್ತ ದುಃಖವೇ ಇಲ್ಲ. ಸಾಮಾನ್ಯವಾಗಿ ಅಜ್ಞಾನವೇ ದುಃಖದ ಮೂಲಕ. ಒಬ್ಬ ಸೋಮಾರಿ ವಿದ್ಯಾರ್ಥಿ ನಡುಗುತ್ತ ಶಾಲೆಗೆ ಹೋಗುವನು. ಶಾಲೆಗೆ ಹೋದ ಮೇಲೆ ಅವನಿಗೆ ತಿಳಿಯುವುದು ಅಂದು ಕ್ಲಾಸ್ ಅಧ್ಯಾಪಕರು ಬರುವುದಿಲ್ಲ ಎಂದು. ಅಂದಿನ 'ಹೋಮ್‌ವರ್ಕ್' ಮಾಡಿಕೊಂಡು ಬರದಿದ್ದ ಅವನಿಗೆ ಅಧ್ಯಾಪಕರಿಂದ ಆ ಪ್ರಯುಕ್ತ ಪೆಟ್ಟು ತಿನ್ನಬೇಕಾಗುವುದೆಂಬ ಭಯ ದೂರವಾಗುವುದು. ಅದುವರೆಗೆ ಅಧ್ಯಾಪಕರು ಬರುವುದಿಲ್ಲಎಂಬ ಜ್ಞಾನವಿಲ್ಲದ್ದರಿಂದ ಅವನಿಗೆ ಭಯ ಇತ್ತು. ಆ ಜ್ಞಾನ ಬಂದ ಮೇಲೆ ಭಯ ಹೋಯಿತು. ಹೀಗೆ ಹೆಚ್ಚಿನ ಭಯಗಳು ಅಜ್ಞಾನಮೂಲಕವಾದವು. ವಾಯುದೇವನಿಗೆ ಲೋಕದ ವಿಷಯದಲ್ಲಿ ಅಜ್ಞಾನವಿಲ್ಲದಿರುವುದರಿಂದ ಭಯಕ್ಕೆ, ದುಃಖಕ್ಕೆ ಅವಕಾಶವೇ ಇಲ್ಲ. ಆದ್ದರಿಂದ ಅವನು ಯಾವಾಗಲೂ ಪ್ರಸನ್ನನಾಗಿಯೇ ಇರುವನು. ವಾಯುದೇವನಿಗೆ ಭಯಕ್ಕೆ, ದುಃಖಕ್ಕೆ ಕಾರಣವಾದ ಅಜ್ಞಾನವಿಲ್ಲದಂತೆ ಮಾಡಿ, ಆ ಪ್ರಯುಕ್ತ ಅವನು ಪ್ರಸನ್ನನಾಗಿ ಇರುವಂತೆ ಪ್ರೇರಿಸುವವನು ಭಗವಂತ. ಶತಾನನ ನಾಮ ಈ ಅಭಿಪ್ರಾಯವನ್ನು ತಿಳಿಸುವುದು.

'ಅನ' ಎಂದರೆ ಚಟುವಟಿಕೆಗಳು. ಅವುಗಳಿಗೆ ಸಂಬಂಧಿಸುವ ಭಯ, ಆನಂದ, ಶಾಂತಿ ಪ್ರಸನ್ನತೆ ಇತ್ಯಾದಿ ಭಾವಗಳು ಆನಗಳು. ಅವುಗಳನ್ನು 'ನಯತೀತಿ ನಃ' ಮುಖದ ಮೂಲಕ ತೋರಿಸಿಕೊಡುವ ವಾಯುದೇವ 'ಆನನ'. ಶೃಂಗಾರ, ಬೀಭತ್ಸ ಇತ್ಯಾದಿ ನವರಸಗಳೂ ನಮ್ಮ ಮುಖದಲ್ಲಿ ಕಾಣಿಸಿಕೊಳ್ಳುವವು. ಹಾಗೆ ಆ ರಸಗಳ ಅಭಿವ್ಯಕ್ತಿಯನ್ನು ತಂದು ಕೊಡುವವನು ಮುಖ್ಯಪ್ರಾಣ. ಒಳಗಿನಿಂದ ಆಯಾ ರಸಗಳಿಗೆ ಪೂರಕಗಳಾದ ಚಟುವಟಿಕೆಗಳನ್ನು ಮಾಡಿಸಿ, ಅವುಗಳಿಗೆ ಸಂಬಂಧಿಸುವ ರಸಗಳನ್ನು ಮುಖದಲ್ಲಿ ತಂದುಕೊಡುವನು. ಆದುದರಿಂದ 'ಆನನ' ಎನಿಸುವ ವಾಯುದೇವ 'ಶತ' - ಯಾವಾಗಲೂ ಸುಖದಿಂದ, ಪ್ರಸನ್ನತೆಯಿಂದ ವ್ಯಾಪಿಸಿರುವಂತೆ ಅನುಗ್ರಹಿಸಿರುವವನು ಭಗವಂತ. 'ಶಂ - ಸುಖಂ, ತೇನ ತತಃ ಶತಃ, ಶತಃ ಆನನಃ ಯಸ್ಮಾತ್ ಸಃ ಶತಾನನಃ' ಎಂಬ ನಿರ್ವಚನದ ಪ್ರಕಾರ ನಮ್ಮ

ಒಳಗೆ ಬೇರೆ ಬೇರೆ ಚಟುವಟಿಕೆಗಳನ್ನು ನಡೆಸಿ, ಅವುಗಳಿಗೆ ಸಂಬಂಧಿಸುವ ಬೇರೆ ಬೇರೆ ಭಾವಗಳನ್ನು ಮುಖದಲ್ಲಿ ತಂದು ತೋರಿಸುವ ಪ್ರಯುಕ್ತ 'ಆನನ' ಎನಿಸಿರುವ ವಾಯುದೇವ ಯಾವಾಗಲೂ ಪ್ರಸನ್ನತೆಯಿಂದ ವ್ಯಾಪ್ತನಾಗಿರುವಂತೆ ಅನುಗ್ರಹಿಸುವವನು ಭಗವಂತನೆಂಬ ಅರ್ಥ ಹೊರಡುವುದು.

**ಏಕೋ ನೈಕಃ ಸವಃ ಕಃ ಕಿಂ ಯತ್ ತತ್ ಪದಮನುತ್ತಮಮ್ |**
**ಲೋಕಬಂಧುರ್ಲೋಕನಾಥೋ ಮಾಧವೋ ಭಕ್ತವತ್ಸಲಃ||೭೮||**

**೭೩೩. ಏಕಃ – * ಎಲ್ಲರಿಗಿಂತ ಪ್ರಧಾನನಾಗಿರುವವನು.**

*** ಎಲ್ಲರಿಗಿಂತ ವಿಲಕ್ಷಣನಾಗಿರುವವನು.**

**ವಿವರಣೆ :** ಏಕ ಎಂದರೆ ಒಂದು ಎಂಬ ಅರ್ಥ ಇರುವಂತೆ, 'ಏಕೇ ಮುಖ್ಯಾನ್ಯ-ಕೇವಲಾಃ....' ಎಂದಿರುವಂತೆ ಮುಖ್ಯ, ಬೇರೆ ಹಾಗೂ ಕೇವಲ - ಎಂಬ ಅರ್ಥಗಳಿವೆ. ಈ ಎಲ್ಲ ಅರ್ಥಗಳಲ್ಲೂ ದೇವರು ಏಕ ಎನಿಸುವನು.

'ಈ ಗಂಡಸರಲ್ಲೆ ನೀನೊಬ್ಬ ಗಂಡಸು' - ಹೀಗೆ ನೀನೇ ಶ್ರೇಷ್ಠ ಗಂಡಸು ಎಂಬ ಅರ್ಥದಲ್ಲಿ 'ಒಬ್ಬ' ಎಂಬ ಶಬ್ದವನ್ನು ಹೇಗೆ ಪ್ರಯೋಗಿಸಲಾಗುವುದೋ ಹಾಗೆ ದೇವರೂ ಪ್ರಧಾನ, ಮುಖ್ಯ ಎಂಬ ಅರ್ಥದಲ್ಲಿ ಏಕ ಎಂದು ಶಾಸ್ತ್ರದಲ್ಲಿ ಸ್ತುತನಾಗಿರುವನು. ಮಹಾಭಾರತ ಯುದ್ಧದಲ್ಲಿ ಪಾಲ್ಗೊಂಡ ಹದಿನೆಂಟು ಅಕ್ಷೌಹಿಣೀಸೇನೆ ಒಂದೆಡೆ ಆದರೆ ಕೃಷ್ಣನೊಬ್ಬನೇ ಒಂದೆಡೆ. ಬರೇ ಹದಿನೆಂಟು ಅಕ್ಷೌಹಿಣೀ ಸೇನೆಯೇ ಯಾಕೆ ಸಮಸ್ತ ಜಗತ್ತು ಒಂದು ಕಡೆ, ಭಗವಂತ ಒಬ್ಬನೇ ಮತ್ತೊಂದೆಡೆ. ಹೀಗೆ ಪ್ರಧಾನನಾಗಿರುವುದರಿಂದ 'ಏಕ' ಎನಿಸಿರುವವನು ಭಗವಂತ.

ಹಾಗೆಯೇ ಬೇರೆ ಎಂಬ ಅರ್ಥದಲ್ಲೂ ಭಗವಂತ ಏಕ ಎನಿಸುವನು. ಜೀವರೆನಿಸಿರುವ, ಅಸ್ವತಂತ್ರರಾದ ನಾವೆಲ್ಲ ಒಂದು ಜಾತಿಯವರಾದರೆ, ಈಶ ಎನಿಸಿರುವ, ಸ್ವತಂತ್ರನಾದ ಭಗವಂತ ಮತ್ತೊಂದು ಜಾತಿಯವನು. ಬೇರೆ ಗುಂಪಿಗೆ ಸೇರಿದವನು. **'ಕಣ್ಣಲಿ ಕೃಷ್ಣಾಕೃತಿಯ ಕಾಣದೆ ಪರಹೆಣ್ಣು ಕಾಣುವ........'** ಎಂಬ ಹಾಡಿನಲ್ಲಿ 'ಪರಹೆಣ್ಣನ್ನು'- ಎಂದರೆ ಬೇರೆ ಹೆಣ್ಣನ್ನು ಎಂಬ ಅರ್ಥ ಅಲ್ಲ. ಯಾಕೆಂದರೆ ಉಳಿದೆಲ್ಲ ಹೆಣ್ಣುಗಳೂ ನಮ್ಮಂತೆಯೇ ಹುಟ್ಟಿ ಸಾಯುವವರು, ಪಾಂಚಭೌತಿಕ ದೇಹ ಉಳ್ಳವರು.... ಹೀಗೆ ಹೆಚ್ಚಿನ ಧರ್ಮಗಳಿಂದ ಅವರೆಲ್ಲ ನಮ್ಮವರೇ ಹೊರತು ಪರರೆನಿಸರು. ಹಾಗಾದರೆ ಪರಹೆಣ್ಣನ್ನು ಎಂದರೆ ಯಾರು ನಮ್ಮೆಲ್ಲರಿಗಿಂತ ವಿಲಕ್ಷಣನಾದ ಪರಮಾತ್ಮನೇ ಪರ. ಅವನಿಗೆ ಸೇರಿದ ಹೆಣ್ಣು ಎಂದರೆ ಲಕ್ಷ್ಮೀದೇವಿ. ಲಕ್ಷ್ಮೀನಾರಾಯಣರ ವಿಗ್ರಹದಲ್ಲಿ ನಾರಾಯಣನನ್ನು

ಕಾಣದೆ, ಬರೇ ಲಕ್ಷ್ಮೀದೇವಿಯನ್ನೇ ಹೆಚ್ಚಿನವರು ಕಾಣುವರು. ಯಾಕೆಂದರೆ ಆಕೆ ನಮ್ಮನ್ನು ಕಾಣಬೇಕು. ಆದರೆ ಆಕೆ ತನ್ನ ಗಂಡನನ್ನು ಕಾಣದೆ ಬರೆ ತನ್ನನ್ನು ಕಂಡರೆ ಅವರ ಕಡೆಗೆ ತಿರುಗಿಯೂ ನೋಡುವುದಿಲ್ಲ.

ಹೀಗೆ ಸರ್ವವಿಲಕ್ಷಣನಾಗಿದ್ದು 'ಪರ' ಎನಿಸಿರುವವನು ಭಗವಂತನಾದುದರಿಂದ ಅವನನ್ನು 'ಏಕ' ಎನ್ನಲಾಗಿದೆ.

**೭೩೪. ನೈಕಃ – ಜೀವರಿಂದ ಎಂದೂ ಒಂದೆ ಆಗದವನು.**

ವಿವರಣೆ: ಏಕಶಬ್ದದ ಪ್ರಧಾನ, ವಿಲಕ್ಷಣ ಎಂಬ ಅರ್ಥಗಳನ್ನಿಟ್ಟುಕೊಂಡು ದೇವರು ನಮ್ಮೆಲ್ಲರಿಗಿಂತ ಪ್ರಧಾನ, ವಿಲಕ್ಷಣ, ಎತ್ತರದಲ್ಲಿರುವನು - ಎಂದೆಲ್ಲ ಅರ್ಥೈಸಿಕೊಂಡರೆ 'ನೈಕಃ' ಶಬ್ದದ ಅರ್ಥ ಸ್ಪಷ್ಟವಾಗುವುದು. ದೇವರು ನಮ್ಮೆಲ್ಲರಿಗಿಂತ ಎತ್ತರದಲ್ಲಿದ್ದು, ನಮ್ಮೆಲ್ಲರಿಗಿಂತ ವಿಲಕ್ಷಣನಾಗಿರುವವ ನಾಗಿರುವುದರಿದ 'ನೈಕಃ' - ಎಂದೂ ನಮ್ಮಿಂದ ಅವನು ನ ಏಕೀಭವತಿ ನಾವೂ ಅವನೂ ಒಂದೇ ಆಗುವುದಿಲ್ಲ. ಎರಡು ಒಂದಾಗದು.... ಎಂದೂ, ಎಲ್ಲೂ ನಾವೂ ಅವನೂ ಒಂದಾಗುವುದಿಲ್ಲ. ಸಂಸಾರದಲ್ಲಿ ಬೇರೆ ಬೇರೆಯಾಗಿದ್ದರೂ ಮೋಕ್ಷದಲ್ಲಿ ಒಂದೇ ಆಗುವೆವೆಂಬುದೂ ಕೂಡದು.

ತುಂಬ ಪ್ರಯತ್ನ ಪಟ್ಟು ಒಬ್ಬ ಗುಮಾಸ್ತನೂ ಚೇರ್‌ಮೇನ್ ಆಗಬಹುದಾದಂತೆ, ಒಬ್ಬ ಸಾಮಾನ್ಯ ಪ್ರಜೆಯೂ ಪ್ರಧಾನಮಂತ್ರಿ ಆಗಬಹುದಾದಂತೆ ಜೀವನು ತುಂಬ ಯತ್ನಿಸಿ ಒಮ್ಮೆ ದೇವರ ಪದವಿಯನ್ನು ಯಾಕೆ ಏರಬಾರದು? ಏರಬಹುದು. ಯಾವಾಗ ? ಚೇರ್‌ಮೇನ್‌ನ ಪದವಿ ಖಾಲಿಯಾಗುವುದಾದರೆ, ಪ್ರಧಾನಿಯ ಪದವಿ ಖಾಲಿಯಾಗುವುದಾದರೆ. ಆದರೆ ದೇವರ ಪದವಿ ಚೇರ್‌ಮೇನ್‌ನ ಪದವಿಯಂತೆ, ಪ್ರಧಾನಮಂತ್ರಿಯ ಪದವಿಯಂತೆ ಖಾಲಿಯಾಗುವಂತಹದ್ದಲ್ಲ ವಾದುದರಿಂದ ಅಂದರೆ ದೇವರು ಯಾವಾಗಲೂ ದೇವರಾಗಿಯೇ ಇರುವುದರಿಂದ ಉಳಿದವರು ದೇವರಾಗುವುದಾದರೂ ಹೇಗೆ? ದೇವರ ಪದವಿಯನ್ನು ಏರುವುದಾದರೂ ಹೇಗೆ ? ಇಬ್ಬರು ದೇವರ ಪದವಿಯಲ್ಲಿ ಇರುವಂತಿಲ್ಲ ತಾನೇ ?

ಆದ್ದರಿಂದ ಜೀವರು ಎಂದೆಂದೂ ದೇವರಾಗುವುದಿಲ್ಲ ಎಂದು ದೇವರು 'ನೈಕಃ' - ಜೀವರಿಂದ ಏಕ ಎನಿಸುವವನಲ್ಲ.

ದೇವರ ಮಹತ್ತ್ವದ ಜ್ಞಾನಕ್ಕೆ ಈ ವಿಚಾರ ಪೂರಕವೆನಿಸುವುದು. ದೇವರು ನಮ್ಮ ನಿಮ್ಮಂತೆಯೇ ಎಂದಾಗ ಅವನಲ್ಲಿ ಮಹತ್ತ್ವ ಬುದ್ಧಿ ಬರಲಾರದು. ಬದಲಾಗಿ ಅವನು ನಮ್ಮೆಲ್ಲರಿಗಿಂತ ವಿಲಕ್ಷಣ ಎಂದಾಗ ಅವನ ಬಗ್ಗೆ ಮಹತ್ತ್ವಬುದ್ಧಿ

ಬರುವುದು.

ಮನೆಗೆ ಪುರೋಹಿತರು ಬರುವರೆಂದರೆ ಮನೆಯ ಯಜಮಾನ ಮನೆಯ ಕಸಕಡ್ಡಿಗಳನ್ನು ಸರಿಸಿ, ಸ್ವಚ್ಛಗೊಳಿಸುವನು. ಯಾಕೆ ? ಅವರು ಆಚಾರ ವಿಚಾರಗಳಲ್ಲಿ ತನಗಿಂತ ಎತ್ತರದಲ್ಲಿರುವವರು. ಅವರೆದುರು ತನ್ನ ಸಣ್ಣತನದ ಪ್ರದರ್ಶನ ಆಗಬಾರದೆಂದು. ಒಂದು ವೇಳೆ ಪುರೋಹಿತರು ಕೂಡಾ ಮನೆಯವರಂತೆಯೇ ಬೆಳಿಗ್ಗೆ ಎದ್ದು ತಿಂಡಿ ತೀರ್ಥವನ್ನೆಲ್ಲ ಮುಕ್ಕುವವರಾದರೆ ಅಂತಹ ಪುರೋಹಿತರ ವಿಷಯದಲ್ಲಿ ಯಜಮಾನನೇನೂ ಗೌರವಭಾವನೆಯಿಂದ ನಡೆದುಕೊಳ್ಳಲು ಯತ್ನಿಸುವುದಿಲ್ಲ ತಾನೇ ? ಹಾಗೆಯೇ ಸ್ವಾಮಿಗಳ ಬಗ್ಗೆ ಒಳ್ಳೆಯ ಭಾವನೆ ಬರಬೇಕೆಂದರೆ ಸ್ವಾಮಿಗಳು ಉಳಿದವರಂತೆ ಹಾಳುಹರಟೆ ಇತ್ಯಾದಿಗಳನ್ನು ನಡೆಸಬಾರದು. ಹೀಗೆ ಪುರೋಹಿತರಾಗಲೀ, ಸ್ವಾಮಿಗಳಾಗಲೀ ಗೌರವಭಾವನೆಗೆ ಪಾತ್ರರಾಗಬೇಕೆಂದರೆ ಅವರು ನಮ್ಮಂತೆ ಅಲ್ಲ, ನಮಗಿಂತ ವಿಲಕ್ಷಣರು ಎಂಬ ಭಾವನೆ ಇರಬೇಕು. ಅಂತೆಯೇ  ದೇವರು ದೊಡ್ಡವನೆಂಬ ಭಾವನೆ ಇಂಬೇಕು. ಅಂತೆಯೇ ದೇವರು ದೊಡ್ಡವನೆಂಬ ಭಾವನೆ ಬರಬೇಕೆಂದರೆ ಅವನು ನಮ್ಮಂತೆ ಅಲ್ಲ, ನಮ್ಮೆಲ್ಲರಿಗಿಂತ ವಿಲಕ್ಷಣನಾದವನು ಎಬ ಭಾವನೆ ಇರಬೇಕು. ಅದಕ್ಕಾಗಿಯೇ ಭೀಷ್ಮರು 'ಏಕಃ'- ಪ್ರಧಾನನಾದವನು ಎಂದು ದೇವರನ್ನು ಸ್ತುತಿಸಿದವರು, ಯಾಕೆ ಪ್ರಧಾನ ? ಎಂಬ ಪ್ರಶ್ನೆಗೆ ಉತ್ತರ ದೊರಕುವಂತೆ 'ನೈಕಃ' - ಅವನು ಎಂದೂ ಜೀವರಿಂದ ಒಂದಾಗಿರುವುದಿಲ್ಲ, ಜೀವರಿಗಿಂತೆಲ್ಲ ವಿಲಕ್ಷಣನಾಗಿರುವವನು - ಎಂದು ಸ್ತುತಿಸಿರುವರು.

**೭೩೫. ಸವಃ – * ಸಮಸ್ತ ಜಗತ್ತನ್ನು ಸೃಷ್ಟಿಮಾಡುವವನು.**

*** ಸೋಮರಸ ಯಾರಿಗಾಗಿ ಹಿಂಡಲ್ಪಡುವುದೋ ಅಂತಹವನು.**

**ವಿವರಣೆ :** 'ಸೂತೇ  ಜಗದಿತಿ ಸವಃ' ಸಮಸ್ತ ಜಗತ್ತನ್ನು ಹಡೆಯುವವನು. ಸೂತಿಕಾಗೃಹ ಎಂದಿರುವುದು. ಅಲ್ಲೂ ಸೂತಿಕಾಶಬ್ದ ಈ ಕ್ರಿಯಾಪದದಿಂದಲೇ ರೂಪುಗೊಂಡದ್ದು. ಸಮಸ್ತ ಜಗತ್ತನ್ನು ಸೃಷ್ಟಿಮಾಡಿರುವವನೇ ಸವಃ

ಮತ್ತೊಂದು ಅರ್ಥ ಸೋಮಯಾಗದಲ್ಲಿ ಸೋಮರಸ ಯಾರಿಗಾಗಿ ಹಿಂಡಲ್ಪಡುವುದೋ ಅಂತಹವನು ಸವಃ.

ಈಗ ಸೋಮಯಾಗ ವಿರಳ. ಸೋಮಲತೆಯೂ ದುರ್ಲಭ. ಸೋಮಲತೆಯ ಬದಲಾಗಿ ಅಮೃತಬಳ್ಳಿಯನ್ನು ಉಪಯೋಗಿಸಲಾಗುವುದು. 'ವಾಯವಾಯಾಹಿ ದರ್ಶತೇಮೇ ಸೋಮಾ ಅರಂಕೃತಾಃ' ಎಂಬ ಋಗ್ವೇದದ ಮಾತಿನಲ್ಲಿ

ಸೋಮಲತೆಯಿಂದ ಹಿಂಡಿ ಅಲಂಕರಿಸಲ್ಪಟ್ಟ ಸೋಮರಸವನ್ನು ಪಾನಮಾಡಲು 'ವಾಯೋ ಆ ಯಾಹಿ' - ಎಂದು ವಾಯು ಶಬ್ದದಿಂದ ದೇವರನ್ನು ಕರೆಯಲಾಗಿದೆ. ಗಾಳಿ ಹೇಗೆ ಬೇಗ ಬರುವುದೋ ಹಾಗೆ ಬರಬೇಕೆಂಬುದನ್ನು ಸೂಚಿಸುವುದಕ್ಕಾಗಿಯಷ್ಟೇ ಇಲ್ಲಿ ದೇವರನ್ನು ವಾಯುಶಬ್ದದಿಂದ ಕರೆಯಲಾಗಿದೆ ಹೊರತು ಇಲ್ಲಿ ವಾಯುವನ್ನು ಕರೆಯುತ್ತಿರುವುದಲ್ಲ.

ಹೀಗೆ ಸೋಮರಸವನ್ನು ಮುಖ್ಯವಾಗಿ ಭಗವಂತನೇ ಸ್ವೀಕರಿಸುವುದರಿಂದ ಅವನಿಗಾಗಿಯೇ ಸೋಮರಸ ಹಿಂಡಿಲ್ಪಟ್ಟದೆ. ಸೋಮರಸಾಧಿಕಾರಿಗಳೆಂದು ಅನೇಕ ದೇವತೆಗಳಿದ್ದರೂ ಅವರಲ್ಲೆಲ್ಲ ಪ್ರಧಾನ 'ಸವಃ' ಎನಿಸಿರುವ ಭಗವಂತನೇ.

**೭೩೬. ಕಃ – * ಯಾವಾಗಲೂ ವಿದ್ಯೆಗಳನ್ನು ಹೊರ ಸೂಸುತ್ತಿರುವವನು.**
*** ಹೊರ ಸೂಸಲ್ಪಟ್ಟ ಶಬ್ದಗಳಿಂದ ಪ್ರತಿಪಾದಿಸಲ್ಪಡುತ್ತಿರುವವನು.**

**ವಿವರಣೆ :** ಎರಡು ಮೂರು ಅಕ್ಷರಗಳನ್ನೊಳಗೊಂಡ ಬೇರೆ ಬೇರೆ ಶಬ್ದಗಳಿಂದ ಸ್ತುತಿಸುತ್ತಿರುವಂತೆ ಒಂದು ಅಕ್ಷರಾತ್ಮಕನಾಮದಿಂದಲೂ ಭಗವಂತನನ್ನು ಸ್ತುತಿಸಲಾಗುವುದು - 'ಕಃ' 'ಕಾಯತೀತಿ ಕಃ, ಕೀಯತೇ ಇತಿ ಕಃ' - 'ಕೈ ಶಬ್ದೇ' - ಎಂಬ ಧಾತುವಿನಿಂದ ನಿಷ್ಪನ್ನವಾಗಿರುವ ಕಃ ನಾಮವು ಯಾವಾಗಲೂ ಶಬ್ದ ಮಾಡುತ್ತಿರುವವನು ಎಂಬ ಅರ್ಥವನ್ನು ತಿಳಿಸಿದರೆ, 'ಕೀಯತೇ ಇತಿ ಕಃ' - ಎಂಬ ನಿರ್ವಚನವನ್ನಿಟ್ಟುಕೊಂಡು 'ಕಃ' ಎಂದು ಸಿದ್ಧಪಡಿಸಿದರೆ ಯಾವಾಗಲೂ ಪ್ರತಿಪಾದಿಸಲ್ಪಡುತ್ತಿರುವವನು, ಸ್ತುತಿಸಲ್ಪಡುತ್ತಿರುವವನು ಎಂಬ ಅರ್ಥವನ್ನು ತಿಳಿಸುವುದು.

ಶ್ರೀ ಮಧ್ವಗುರುಗಳು ತಂತ್ರಸಾರಸಂಗ್ರಹದಲ್ಲಿ ಹಯಗ್ರೀವನನ್ನು ಸ್ತುತಿಸುತ್ತ **'ನಸ್ತೋ ಮುಖಾದಪಿ ನಿರಂತರಮುದ್ಗಿರಂತಂ ವಿದ್ಯಾ ಅಶೇಷತಃ.....'**

ಎಲ್ಲ ವಿದ್ಯೆಗಳನ್ನೂ ತನ್ನ ಮೂಗಿನ ರಂಧ್ರಗಳಿಂದಲೂ, ಬಾಯಿಯಿಂದಲೂ ಹೊರಹೊಮ್ಮಿಸುತ್ತಿರುವವನು ಹಯಗ್ರೀವ ಎಂದು ನಿರೂಪಿಸಲಾಗಿದೆ.

ಅದಕ್ಕಾಗಿಯೇ ಹಯಗ್ರೀವ ತನ್ನ ಮುಖವನ್ನು ಕೆಳಗೆ ಹಾಕಿಕೊಂಡಿರುವುದು. ಮುಖ ಮೇಲೆ ಮಾಡಿದಲ್ಲಿ ಎದುರಿಗೆ ಇರುವವರನ್ನು ನೋಡಬೇಕಾಗುತ್ತದೆ. ಹಾಗೆ ನೋಡಿದಾಗ ಅವರೆಲ್ಲಾದರೂ ಮಾತನಾಡಲು ತೊಡಗಿದರೆಂದರೆ ವಿದ್ಯೆಯ ಉದ್ಗಿರಣ ಮಧ್ಯೆ ನಿಂತು ಹೋಗಬಹುದು. ಹಾಗಾಗಬಾರದೆಂದು ಕೆಳ ಮುಖ ಮಾಡಿಕೊಂಡು ಹೊರ ಸೂಸುತ್ತಿರುವನು. ಕೆಲವರು ಉಪನ್ಯಾಸದಲ್ಲಿ, ಪಾಠಪ್ರವಚನದಲ್ಲಿ ಎದುರಿಗಿರುವವರನ್ನು ಕಂಡಲ್ಲಿ ಮಾತುಗಾರಿಕೆಗೆ ತೊಂದರೆ ಬರುವುದೆಂದು ಮುಖ

ಕೆಳಗೆ ಹಾಕಿಕೊಳ್ಳುವುದುಂಟು. ಅಂತೆಯೇ ಹಯಗ್ರೀವನೂ.

ಹೀಗೆ ಹಯಗ್ರೀವನಿಂದ ಹೊರಸೂಸಲ್ಪಟ್ಟ ವಿದ್ಯೆಗಳಿಂದ, ಶಬ್ದಗಳಿಂದ 'ಕೀಯತೇ' - ಸ್ತೂಯತೇ - ಸ್ತುತಿಸಲ್ಪಡುವವನು, ಪ್ರತಿಪಾದಿಸಲ್ಪಡುವವನು ಭಗವಂತನಾದುದರಿಂದಲೂ ಅವನು 'ಕಃ' ಎನಿಸುವನು.

ಭಗವಂತನನ್ನು 'ಕಃ' ಎಂಬ ನಾಮದಿಂದ ಒಳ್ಳೆಯ ಶಬ್ದಗಳನ್ನು ನಿರಂತರ ಹೊರಸೂಸುತ್ತಿರುವವನು, ಹಾಗೂ ಆ ಎಲ್ಲ ಶಬ್ದಗಳಿಂದ ಪ್ರತಿಪಾದಿಸಲ್ಪಡುವವನು ಎಂದು ಉಪಾಸನೆ ನಡೆಸಿದೆವೆಂದರೆ, ಅದರಿಂದ ಪ್ರಸನ್ನನಾಗುವ ದೇವರು ನಮ್ಮಿಂದ ಇತರರ ಬಗ್ಗೆ ಒಳ್ಳೆಯ ಶಬ್ದಗಳನ್ನು ನುಡಿಸುವನು ಹಾಗೂ ನಾವು ಇತರರಿಂದ ಒಳ್ಳೆಯ ಶಬ್ದಗಳನ್ನು ಕೇಳಿಸಿಕೊಳ್ಳುವಂತೆ ಮಾಡುವನು.

**೭೩೭. ಕಿಮ್ – * ಯಾರ ಬಗ್ಗೆ 'ಕಿಮ್' - ಎಂದು ಕೇಳಲಾಗುವ ಪ್ರಶ್ನೆಗಳಿಗೆ ಉತ್ತರಿಸಿ ಕೊನೆಗಾಣಲಾಗದೋ ಅಂತಹವನು.**

ವಿವರಣೆ: ದೇವರಿಗೆ ಒಂದೊಂದು ಅಕ್ಷರದ ಹೆಸರುಗಳು 'ಕಃ' 'ಕಿಮ್' 'ಯತ್' 'ತತ್'.... ಇತ್ಯಾದಿಯಾಗಿ. ಸಂಸ್ಕೃತದಲ್ಲಿ ಏನು ಎಂದು ವಿಚಾರಿಸಲು 'ಕಿಮ್' ಎಂಬ ಶಬ್ದವನ್ನು ಬಳಸಲಾಗುವುದು.

ದೇವರನ್ನು ಪರಿಚಯಿಸಿಕೊಳ್ಳುವುದಕ್ಕಾಗಿ, ದೇವರ ಪ್ರಸ್ತಾವ ಬಂದಾಗ 'ಕಿಮ್' ಎಂದು ಪ್ರಶ್ನಿಸಿದರೆ 'ಸೃಷ್ಟಿಕರ್ತಾ' - ಎಂದು ಉತ್ತರಿಸಲಾಗುವುದು. ಪುನಃ 'ಕಿಮ್' ಎಂದು ವಿಚಾರಿಸಿದರೆ 'ರಕ್ಷಣಕರ್ತಾ' - ಎಂದು ಸಮಾಧಾನಿಸಲಾಗುವುದು. ಪುನಃ 'ಕಿಮ್' - ಎಂದು ಕೇಳಿದರೆ 'ಲಯಕರ್ತಾ' ಎಂದು ಉತ್ತರಿಸಲಾಗುವುದು. ಹೀಗೆಯೇ 'ಕಿಮ್' - ಎಂದು ಪ್ರಶ್ನೆಗಳ ಸರಮಾಲೆಯನ್ನೇ ಸುರಿವಿದರೂ ಕೊನೆಗೊಳ್ಳದಷ್ಟೂ ಉತ್ತರಗಳು ಹೇಳಲ್ಪಡುವವು. ಯಾಕೆಂದರೆ ದೇವರಲ್ಲಿ ಹೇಳಿ ಮುಗಿಸಲಾರದಷ್ಟು ಗುಣಧರ್ಮಗಳಿವೆ. ಆದುದರಿಂದ ಎಷ್ಟು ಬಾರಿ 'ಕಿಮ್'- ಎಂದು ಪ್ರಶ್ನಿಸಿದರೂ ಅದಕ್ಕೊಂದು ಉತ್ತರ ಉಂಟೇ ಉಂಟೆಂದು ಅವನ ವಿಷಯದಲ್ಲಿ 'ಕಿಮ್'- ಎಂದು ಪ್ರಶ್ನಿಸುವುದಕ್ಕೆ ಕೊನೆಯೇ ಇಲ್ಲ. ಆದುದರಿಂದ ಅವನನ್ನು 'ಕಿಮ್' ಎಂದೇ ಕರೆಯಲಾಗಿದೆ. ಯಾರ ಬಗ್ಗೆ 'ಕಿಮ್ ?'- 'ಕಿಮ್?'- ಎಂದು ಪ್ರಶ್ನಿಸುತ್ತ ಹೋದರೆ ಉತ್ತರಿಸಿ ಕೊನೆಗಾಣಲು ಸಾಧ್ಯವಿಲ್ಲವೋ ಅವನೇ 'ಕಿಮ್'.

ಬೇರೆ ಯಾರ ವಿಷಯದಲ್ಲೂ ಹೀಗಾಗುವುದಿಲ್ಲ. ಒಬ್ಬ ವ್ಯಕ್ತಿಯ ವಿಷಯದಲ್ಲಿ 'ಕಿಮ್' - ಎಂದಾಗ 'ಧನಾಗಾರದ ದೊಡ್ಡ ಅಧಿಕಾರಿ''- ಎನ್ನಲಾಗುವುದು. ಪುನಃ 'ಕಿಮ್' - ಎಂಬ ಪ್ರಶ್ನೆಗೆ ಅವನ ವಿಷಯದಲ್ಲಿ ಕೇಳಲು

ಅವಕಾಶವೇ ಇಲ್ಲ.

ಉಳಿದ ವ್ಯಕ್ತಿಗಳ, ದೇವತೆಗಳ ಬಗ್ಗೆ ಬಿಡಿ, ಲಕ್ಷ್ಮೀದೇವಿಯ ವಿಷಯದಲ್ಲೂ ಕಿಮ್ ಎಂಬ ಪ್ರಶ್ನೆಗಳನ್ನು ಕೇಳುತ್ತ ಹೋದರೆ ಒಂದು ದೊಡ್ಡ ಸಂಖ್ಯೆಯ ಪ್ರಶ್ನೆಗಳಾದ ಮೇಲೆ ಪುನಃ 'ಕಿಮ್'- ಎಂದು ಪ್ರಶ್ನಿಸಲು ಅವಕಾಶವಿಲ್ಲ. ಆದರೆ ಭಗವಂತನ ವಿಷಯದಲ್ಲಿ ಮಾತ್ರ ನಾವು ಎಷ್ಟು ಬಾರಿ 'ಕಿಮ್'- ಎಂದು ಪ್ರಶ್ನಿಸಿದರೂ ಉತ್ತರಗಳು ಇದ್ದೇ ಇದ್ದು ಇನ್ನು 'ಕಿಮ್' - ಎಂದು ಪ್ರಶ್ನಿಸುವುದಕ್ಕೆ ಅವಕಾಶವೇ ಇಲ್ಲ ಎಂದು ಆಗುವುದೇ ಇಲ್ಲ. ಯಾಕೆಂದರೆ ಅವನು ಅನಂತ ಗುಣಸಂಪನ್ನ.

**೭೩೮. ಯತ್ – ತನ್ನ ರೂಪಗಳ ಬಗ್ಗೆ 'ಅದೇ ಇದು' ಎಂದು ಗುರುತಿಸಿ ಕೊಳ್ಳಲ್ಪಡುವವನು.**

ವಿವರಣೆ: ಯತ್ ಮತ್ತು ತತ್ ಶಬ್ದಗಳ ಮೊದಲ ಹಾಗೂ ಕೊನೆಯ ಅಕ್ಷರಗಳು ಸೇರಿ ರೂಪುಗೊಂಡ ನಾಮ ಯತ್ ಎಂಬುದು. ನಮ್ಮಲ್ಲಿ ಹೆಸರುಗಳು ಮೊದಲ ಅಕ್ಷರಗಳನ್ನಷ್ಟೇ ಉಲ್ಲೇಖಿಸುವ ಪದ್ಧತಿ ಬಂದಿದೆ. 'ಕೃಷ್ಣರಾಜ' ಎಂದಿದ್ದರೆ ಕಿಟ್ಟಿ ಎಂದು ಕರೆಯುವುದು. ಆದರೆ ಕೊನೆಯ ಅಕ್ಷರವನ್ನು ಸೇರಿಸಿಕೊಳ್ಳುವ ಕ್ರಮ ಬಂದಿಲ್ಲ. 'ಯತ್' ಎಂಬ ನಾಮವಾದರೂ ಯತ್ ಶಬ್ದದ ಯಕಾರವನ್ನೂ ತತ್ ಶಬ್ದದ ತ್‌ಕಾರವನ್ನೂ ಸೇರಿಸಿಕೊಂಡು ಆದ ರೂಪ. ಯಾವುದು ಅದೋ ಅದೇ ಇದು ಎಂದು ಸಾಮಾನ್ಯಾರ್ಥದ 'ಯತ್' ಎಂಬ ನಾಮದಿಂದ ಭಗವಂತನ ರೂಪಗಳ ಐಕ್ಯ ಪ್ರತಿಪಾದ್ಯವಾಗುವುದು. ಒಳಗೆ ಯಾವ ಕೃಷ್ಣನ ರೂಪ ಇದೆಯೋ ಅದೇ ಹೊರಗೆ ಭೀಷ್ಮರೆದುರು ಕುಳಿತ ರೂಪ ಎಂಬುದಾಗಿ. ಕೃಷ್ಣಮಠದ ಕೃಷ್ಣನ ಪ್ರತಿಮೆಯಲ್ಲಿ ಯಾವ ದೇವರಿರುವರೋ ಅದೇ ದೇವರು ಅನಂತಾಸನ ದೇವಾಲಯದ ಪ್ರತಿಮೆಯಲ್ಲೂ ಇರುವರು. ಹೊರತು ಕೃಷ್ಣನ ಪ್ರತಿಮೆಯಲ್ಲಿ ಬೇರೆಯೇ ದೇವರು, ಅನಂತಾಸನನ ಪ್ರತಿಮೆಯಲ್ಲಿ ಬೇರೆಯೇ ದೇವರು ಎಂದು ಚಿಂತಿಸಬಾರದು. ಕೃಷ್ಣಮಠದಲ್ಲಿ ದೇವರನ್ನು ಕಾಣುವ ನಾವೂ ಅನಂತಾಸನ ದೇವಾಲಯದಲ್ಲಿ ದೇವರನ್ನು ಕಾಣುವ ನಾವೂ ಒಬ್ಬರೇ ಎಂದ ಮೇಲೆ ಆ ದೇವಾಲಯಗಳಲ್ಲಿ ಕಾಣಲ್ಪಡುವ ದೇವರು ಮಾತ್ರ ಹೇಗೆ ಬೇರೆ ಬೇರೆ ಆದಾನು ? ಆದುದರಿಂದ ಕೃಷ್ಣಮಠದಲ್ಲಿ 'ಯತ್' - ಯಾವ ಭಗವದ್ರೂಪ ಇದೆಯೋ ಅನಂತಾಸನ ದೇವಾಲಯದಲ್ಲಿ 'ತತ್' - ಅದೇ ಭಗವದ್ರೂಪ ಇದೆ ಎಂಬುದಾಗಿ ಯತ್ ತತ್ ಶಬ್ದಗಳನ್ನು ಸೇರಿಸಿ ರೂಪುಗೊಂಡ 'ಯತ್' ನಾಮದಿಂದ ಉಪಾಸನೆ ನಡೆಸಬೇಕು. ಹಾಗೆಯೇ ಭಗವಂತನ ಮೂಲರೂಪ ಹಾಗೂ ಕೃಷ್ಣ, ರಾಮ ಮುಂತಾದ ಅವತಾರ ರೂಪಗಳೂ, ಬೇರೆ ಬೇರೆ ವ್ಯಕ್ತಿಗಳಲ್ಲಿ ಅಂತರ್ಯಾಮಿಯಾಗಿರುವ

ಭಗವದ್ರೂಪಗಳೂ ಒಂದೇ, ಅಂತೆಯೇ ಆ ಭಗವದ್ರೂಪಗಳು ಪರಸ್ಪರವಾಗಿಯೂ ಒಂದೇ - ಎಂಬುದನ್ನು 'ಯತ್' ನಾಮದಿಂದ ಅನುಸಂಧಾನ ನಡೆಸಬೇಕು.

ಎಷ್ಟೋ ಬಾರಿ ನಮಗೆ ಹಿಂದೆ ಕಂಡ ವ್ಯಕ್ತಿಗಳು, ಹಿಂದೆ ತಿಳಿದ ವಿಚಾರಗಳು, ಹಿಂದೆ ಅನುಭವಿಸಿದ ಸಂಗತಿಗಳು ಮತ್ತೆ ಎದುರಾದಾಗ ಆ ವ್ಯಕ್ತಿಗಳೇ, ಆ ವಿಚಾರಗಳೇ, ಆ ಸಂಗತಿಗಳೇ ಎಂದು ಸ್ಮರಿಸಿಕೊಳ್ಳಲು ಆಗುವುದಿಲ್ಲ. ಸ್ಮರಿಸಿಕೊಳ್ಳಲಾಗದಂತೆ ವಿಸ್ಮರಣೆ ಆವರಿಸಿರುವುದು. ಈ ನ್ಯೂನತೆಯನ್ನು ಪರಿಹರಿಸಿಕೊಳ್ಳಬೇಕೆಂದರೆ ದೇವರನ್ನು ಯತ್ ತತ್ ಅವನೇ ಇವನು ಎಂಬ ಅರ್ಥದಲ್ಲಿ ಯತ್‌ನಾಮದಿಂದ ಉಪಾಸನೆ ನಡೆಸಬೇಕು.

**೭೩೯. ತತ್ – ಕಾಣಿಸಿಕೊಳ್ಳದೆ ಇರುವವನು.**

**ವಿವರಣೆ :** ದೇವರು ಅವ್ಯಕ್ತ ಸ್ವಭಾವದವನೆಂಬುದನ್ನು 'ಅವ್ಯಕ್ತ'ನಾಮದ ಅರ್ಥ ಚಿಂತನೆಯ ಸಂದರ್ಭದಲ್ಲಿ ನೋಡಿದೆವು. ಅವ್ಯಕ್ತ ಎಂದರೆ ಕಾಣಿಸದವನು ಎಂಬ ಅರ್ಥ. ನಮ್ಮ ಪಾಲಿಗೆ ದೇವರು ಎಂದೂ ಕಾಣಿಸದೆ ಇರುವುದರಿಂದ ಅವನನ್ನು 'ತತ್', 'ಅದು' ಎಂದೇ ಪರಾಮರ್ಶಿಸಬೇಕಾಗುವುದು.

ಮಧ್ವಗುರುಗಳಾದರೆ ದೇವರು ಯಾವಾಗಲೂ ಅವರಿಗೆ ಕಾಣಿಸಿಕೊಳ್ಳುವನಾದುದರಿಂದ ಅವನನ್ನು 'ನಮೋ ನಾರಾಯಣಾಯ ತೇ....' 'ನಿನಗೆ ನಮಸ್ಕಾರ ......' ಇತ್ಯಾದಿಯಾಗಿಯೇ ಉಲ್ಲೇಖಿಸುವರು. 'ನಮಸ್ತೇ' ಎಂಬ ಪ್ರಯೋಗ ಬಂದದ್ದೇ ಶ್ರೀ ಮಧ್ವಗುರುಗಳಿಂದ. ಈ ಮಾತಿನಲ್ಲಿ ನಿನಗೆ ನಮಸ್ಕಾರ ಎಂಬ ಎರಡೂ ಅಂಶಗಳೂ ಸೇರಿವೆ. ಇದನ್ನು ತಿಳಿಯದೆ ಕೆಲವರು 'ನಿನಗೆ ನಮಸ್ತೇ' - ಎಂದೂ ವ್ಯವಹರಿಸುವುದುಂಟು. ನಿನಗೆ ನಮಸ್ತೇ ಎಂದರೆ 'ನಿನಗೆ ನಮಸ್ಕಾರ ನಿನಗೆ'- ಎಂದಂತಾಗುವುದು !

ಶ್ರೀ ಮಧ್ವರಿಗೆ ದೇವರು ಕಾಣಿಸಿಕೊಳ್ಳುವನು, ಆದುದರಿಂದ ಅವರು ದೇವರನ್ನು ನೀನು ಎಂದು ಸಂಬೋಧಿಸುವರಾದರೂ ನಮಗೆ ದೇವರು ಕಾಣಿಸದ ಪ್ರಯುಕ್ತ ನಮ್ಮ ಪಾಲಿಗೆ ಅವನು 'ತತ್' - ಅವನು, ಅವ್ಯಕ್ತ ಸ್ವಭಾವದವನಾಗಿದ್ದು ತನಗೆ ಯಾರ ಎದುರು ಕಾಣಿಸಿಕೊಳ್ಳಬೇಕೆನಿಸುವುದೋ ಅವರಿಗಷ್ಟೇ ಕಾಣಿಸಿಕೊಳ್ಳುವವನು.

ಭೀಷ್ಮರು ತಮ್ಮ ಎದುರೇ ಕುಳಿತಿರುವ ಕೃಷ್ಣನನ್ನು ಕಾಣುತ್ತಲೇ 'ತತ್' ಎಂಬ ನಾಮದ ಮೂಲಕ ಅವನೇ ನೀನು - ಕಾಣಿಸದ ಸ್ವಭಾವದವನೇ ನನ್ನ ಮೇಲಿನ

ಅನುಗ್ರಹದಿಂದ ನನಗೆ ಕಾಣಿಸಿಕೊಳ್ಳುತ್ತಿರುವವನು - ಎಂದು ಸ್ತುತಿಸುತ್ತಿರುವರು.

**೭೪೦. ಪದಮ್ – ಪ್ರತಿಯೊಬ್ಬರೂ ತಲುಪಬೇಕಾದ ಗುರಿ.**

ವಿವರಣೆ : ಪದ್ಯತೇ ಗಮ್ಯತೇ ಇತಿ ಪದಮ್ - ಹೊಂದಲಿಕ್ಕೆ, ತಲುಪಲಿಕ್ಕೆ ಯೋಗ್ಯನಾದವನು 'ಪದಮ್'. ಪ್ರತಿಯೊಬ್ಬರೂ ತಲುಪಬೇಕಾದ ಗುರಿ ದೇವರು. ಪ್ರಳಯಕಾಲದಲ್ಲಿ ದೇವರ ಉದರವನ್ನು ಎಲ್ಲರೂ ಸೇರುವರು. ರುದ್ರ, ಚತುರ್ಮುಖಾದಿಗಳಾರೂ ಇರುವುದಿಲ್ಲ. 'ಎಲ್ಲ ಜಗವ ನುಂಗಿ ದಕ್ಕಿಸಿಕೊಳ್ಳುವಾಗೆ....' - ಎಂದಿರುವಂತೆ ಪ್ರಳಯಕಾಲದಲ್ಲಿ ಚತುರ್ಮುಖಾದಿಗಳನ್ನೆಲ್ಲ ಕಬಳಿಸುವ ಭಗವಂತ. ಉಳಿದೆಲ್ಲರೂ ಹೊಂದಬೇಕಾದ ಜಾಗ ಭಗವಂತ. ಸಜ್ಜನರಿಗೂ ಗುರಿ, ದುರ್ಜನರಿಗೂ ಗುರಿ. ಸಜ್ಜನರಿಗೆ ಅವನ ಒಲುಮೆಗೆ ಪಾತ್ರರಾಗಿ ಅವನ ಬಳಿಗೆ ಸೇರುವುದಕ್ಕಾಗಿ ಗುರಿ ಎನಿಸಿದರೆ, ದುರ್ಜನರಿಗೆ ದ್ವೇಷಿಸುವುದಕ್ಕಾಗಿ ಅವನು ಗುರಿ.

**೭೪೧. ಅನುತ್ತಮಮ್ – ಯಾರಿಗಿಂತ ಮತ್ತೊಬ್ಬ ಉತ್ತಮನಿಲ್ಲವೋ ಅಂತಹ ಸರ್ವೋತ್ತಮನಾಗಿರುವವನು.**

ವಿವರಣೆ : 'ಪದಮ್' ನಾಮದಿಂದ ಭಗವಂತನೇ ಎಲ್ಲರಿಗೂ ಗುರಿ ಎಂದು ನೋಡಿದೆವು. ಯಾಕೆ ಭಗವಂತನೇ ಗುರಿ ಎಂದರೆ - 'ಅನುತ್ತಮಮ್' ಅವನಿಗಿಂತ ಉತ್ತಮವಾದ ವ್ಯಕ್ತಿ ಮತ್ತೊಬ್ಬನಿಲ್ಲ. ಆದುದರಿಂದ ಅವನೇ ಪದ, ಅವನೇ ಎಲ್ಲರಿಂದಲೂ ಹೊಂದಬೇಕಾದವನು. ಒಂದು ವೇಳೆ ಅವನಿಗಿಂತಲೂ ಉತ್ತಮನಾದವನು ಮತ್ತೊಬ್ಬನಿದ್ದಿದ್ದರೆ ಅವನನ್ನೇ ಗುರಿಯನ್ನಾಗಿಟ್ಟುಕೊಂಡು ಅವನ ಕಾಲನ್ನೇ ಹಿಡಿಯಬಹುದಿತ್ತು. ಆದರೆ ಅವನಿಗಿಂತ ಉತ್ತಮ ಮತ್ತೊಬ್ಬನಿಲ್ಲದ ಪ್ರಯುಕ್ತ ಅವನನ್ನೇ ಗುರಿಯನ್ನಿಟ್ಟುಕೊಂಡು 'ಪದ' ಎಂಬ ನಾಮದಿಂದ ಸ್ತುತಿಸಬೇಕಾಗಿದೆ.

ಗಾಂಧೀಜಿಯವರು ರೈಲಿನಲ್ಲಿ ಮೂರನೆಯ ದರ್ಜೆಯಲ್ಲೇ ಕುಳಿತು ಪ್ರಯಾಣ ಮಾಡುತ್ತಿದ್ದರಂತೆ. ಒಬ್ಬ ಕೇಳಿದ. ಯಾಕೆ ನೀವು ಮೂರನೆಯ ದರ್ಜೆಯಲ್ಲೇ ಕುಳಿತುಕೊಳ್ಳುವಿರೆಂದು. ಅದಕ್ಕೆ ಅವರೆಂದರಂತೆ - ರೈಲಿನಲ್ಲಿ ನಾಲ್ಕನೆಯ ದರ್ಜೆ ಇಲ್ಲ. ಒಂದೊಮ್ಮೆ ನಾಲ್ಕನೆಯ ದರ್ಜೆ ಇದ್ದಿದ್ದರೆ ಅದರಲ್ಲೇ ಪ್ರಯಾಣಿಸುತ್ತಿದ್ದೆ - ಎಂದು.

ಹಾಗೆ ದೇವರಿಗಿಂತ ಉತ್ತಮ ಮತ್ತೊಬ್ಬನಿರುತ್ತಿದ್ದರೆ ಅವನೇ 'ಪದ'

ಎನಿಸುತ್ತಿದ್ದ. ಆದರೆ ದೇವರಿಗಿಂತ ಉತ್ತಮ ಮತ್ತೊಬ್ಬನಿಲ್ಲದ ಪ್ರಯುಕ್ತ ದೇವರೇ 'ಪದವ್' - ದೇವರೇ ಎಲ್ಲರೂ ತಲುಪಬೇಕಾದ ಗುರಿ ಎನಿಸಿರುವನು. 'ಅನುತ್ತಮಮ್' - ಎಂಬ ನಾಮದಿಂದ ಇದನ್ನೇ ಸ್ತುತಿಸಲಾಗಿದೆ.

**೭೪೨. ಲೋಕಬಂಧುಃ – * ಲೋಕಕ್ಕೆ ಬೇರೆ ಬೇರೆ ಬಂಧು ಆಗುವವನು.**

*** ಲೋಕವನ್ನು ಪ್ರೀತಿಬಲೆಯಿಂದ ಬಂಧಿಸುವವನು.**

ವಿವರಣೆ : ದೇವರು ನಮಗೆ **'ದ್ವಾ ಸುಪರ್ಣಾ ಸಯುಜಾ ಸಖಾಯಾ......'** ಎಂದಿರುವಂತೆ ಗೆಳೆಯನಾಗಿರುವವನು. ತಂದೆಯಾಗಿರುವವನು ; ತಾಯಿಯಾಗಿರುವವನು ; ಅಣ್ಣನಾಗಿರುವವನು - ಹೀಗೆ ಬೇರೆ ಬೇರೆ ಬಗೆಯ ಬಂಧು ಆಗಿರುವವನು. ವಾದಿರಾಜ ಸ್ವಾಮಿಗಳು ಹೇಳುವಂತೆ 'ಬಂಧಕತ್ವಾತ್ ಬಂಧುಃ ....' ಯಾರು ನಮಗೆ ಬಂಧಕರಾಗಿರುವರೋ ಅವರೇ ಬಂಧುಗಳು. ಯಾವುದಾದರೊಂದು ಸಮಾರಂಭವನ್ನು ಹಮ್ಮಿಕೊಂಡಾಗ ಜಾತಾಶೌಚದ, ಮೃತಾಶೌಚದ ಸುದ್ದಿಯನ್ನು ತಿಳಿಸಿ ಆ ಸಮಾರಂಭವನ್ನು ಮಾಡದಂತೆ ಬಂಧಿಸುವವರು ಮುಖ್ಯವಾಗಿ ಬಂಧುಗಳು.

ಭಗವಂತನಾದರೂ ಬೇರೆ ಬೇರೆ ಬಗೆಯ ಉಪಕಾರವನ್ನು ಸಲ್ಲಿಸುವುದರಿಂದ ಬಂಧು ಎನಿಸುವವನಲ್ಲದೆ, ಬಂಧಕನಾಗಿರುವುದರಿಂದಲೂ ಬಂಧು ಎನಿಸುವನು.

ಸಮಗ್ರ ಲೋಕವನ್ನೂ ಪ್ರೀತಿಯ ಬಲೆಯಿಂದ ಬಂಧಿಸುವವನು ಭಗವಂತ.

ಶ್ರೀ ವಾದಿರಾಜಸ್ವಾಮಿಗಳು ಶ್ರೀಕೃಷ್ಣನ ಮೂಲಕ ನಡೆದ ಬಕಾಸುರನ ಸಂಹಾರವನ್ನು ವರ್ಣಿಸುವಾಗ

**ಅನ್ಯೋನ್ಯಾಶ್ರಿತರಾಗರಜ್ಜುವಿತತೇ ಸಂಸೃತ್ಯಭೇದ್ಯದ್ರುಮೇ ಸಂಗೃಹ್ಯ ಪ್ರತಿಕಲ್ಪಮಬ್ಜಜಮುಖಾನ್ ಭುಂಕ್ತೇ ಸುಪರ್ಣಾನಿಹ** – ಎಂಬುದಾಗಿ ಶ್ರೀ ಕೃಷ್ಣನನ್ನು ಒಬ್ಬ ವ್ಯಾಧನನ್ನಾಗಿ ಚಿತ್ರಿಸುವರು. ವ್ಯಾಧ ಬಲೆ ಬೀಸುವಂತೆ ಭಗವಂತನು ಸಂಸಾರದಲ್ಲಿ ಅನ್ಯೋನ್ಯವಾಗಿ ತಾಳುವ ಅನುರಾಗ ಎಂಬ ಬಲೆಯನ್ನು ಬೀಸುವನು. ಆ ಬಲೆಗೆ ಬಲಿಯಾಗುವ ಬ್ರಹ್ಮಾದಿ ಜೀವರೆಂಬ ಪಕ್ಷಿಗಳನ್ನು ಕಬಳಿಸುವನು.

ಹೀಗೆ ದೇವರು ಅನ್ಯೋನ್ಯವಾಗಿ ತಾಳುವ ಅನುರಾಗ ಎಂಬ ಬಲೆಯನ್ನು ಬೀಸಿ ಸಂಸಾರದಲ್ಲಿ ಎಲ್ಲರನ್ನೂ ಅನ್ಯೋನ್ಯವಾಗಿ ಬಂಧಿಸಿರುವುದರಿಂದ 'ಲೋಕ ಬಂಧು' ಎನಿಸುವನು.

ಈ ಬಂಧನ ಪ್ರಾಥಮಿಕ ಹಂತದಲ್ಲಿ, ಅಂದರೆ ಮಕ್ಕಳು ಬೆಳವಣಿಗೆಗೆ ಬರುವವರೆಗೆ ತಂದೆ ತಾಯಂದಿರು ತಮ್ಮ ಮಕ್ಕಳ ಬಗ್ಗೆ ಅನುರಾಗಬಂಧನವನ್ನು

ತೊಡಿಸುವುದು ಹಾಗೆ ಬಂಧಿಸಿ ಅವರನ್ನು ಸನ್ಮಾರ್ಗದಲ್ಲಿ ಬೆಳೆಸುವ ಮೂಲಕ ಅವರ ಉದ್ಧಾರಕ್ಕೆ ಪ್ರಯೋಜಕವೆನಿಸುವುದು. ಆದರೆ ಬುದ್ಧಿ ಬಂದ ಮೇಲೂ ಇರುವ ಅನುರಾಗಬಂಧನ ವ್ಯಾಮೋಹ ಎನಿಸಿ ಮಾರಕವಾಗಬಲ್ಲದು. ಆದುದರಿಂದ ಪಶುಗಳಲ್ಲಿ ಇರುವಂತೆ ಮಕ್ಕಳ ಬೆಳವಣಿಗೆಗೆ ಪೂರಕವಾಗುವಂತೆ ಅವುಗಳು ಬೆಳೆಯುವವರೆಗಷ್ಟೇ ಪ್ರೀತಿ ಇರಬೇಕು. ಆದರೆ ದೊಡ್ಡದಾದ ಮೇಲೂ ಅನ್ಯೋನ್ಯವಾಗಿ ಬಂಧಿಸುವಷ್ಟು ಅಂದರೆ ಗಂಡನನ್ನು ಹೆಂಡತಿ ಬಿಡಲಾರದಂತೆ ತಂದೆತಾಯಿಯಂದಿರನ್ನು ಮಕ್ಕಳು ಬಿಡಲಾರದಂತೆ ಭಗವಂತನು ಬಂಧಕನಾಗಿ ಇರುವನು.

ಆದುದರಿಂದ ಅವನು 'ಲೋಕಬಂಧು.'

**೭೪೩. ಲೋಕನಾಥಃ – * ಲೋಕಕ್ಕೆ ಒಡೆಯ.**

*** ಜನರಿಂದ ಬೇಡಲ್ಪಡುವವನು.**

**ವಿವರಣೆ :** ಲೋಕಕ್ಕೆ ಒಡೆಯ ಎಂಬ ಸಾಮಾನ್ಯವಾದ ಅರ್ಥ. ಮತ್ತೊಂದು ಅರ್ಥ - ಲೋಕೈಃ ನಾಥ್ಯತೇ ಯಾಚ್ಯತೇ ಇತಿ - ಲೋಕದ ಜನರಿಂದ ಬೇಡಲ್ಪಡುವವನು ಲೋಕನಾಥ.

ಲೋಕಬಂಧು ಎನಿಸುವ ಭಗವಂತ ಬೀಸಿದ ಪ್ರೀತಿಯ ಬಲೆಗೆ ಸಿಲುಕಿ ಆ ಬಲೆಯ ಬಂಧನದೊಳಗಿರುವುದೇ ಸುಖ ಎಂದು ಭ್ರಮಿಸುವವರು ಕೆಲವರಾದರೆ, ಆ ಬಲೆಯ ಬಂಧನದಿಂದ ಹೊರ ಬಂದರಷ್ಟೇ ಇಲ್ಲಿಯೂ ಸುಖ, ಸತ್ತ ಮೇಲೂ ಶ್ರೇಯಸ್ಸು ಎಂದು ವಿವೇಚಿಸಿಕೊಂಡ ಮತ್ತೆ ಕೆಲವರು, ಆ ಬಲೆಯಿಂದ ಹೊರಬರಿಸುವಂತೆ ಬಲೆ ಬೀಸಿದ ಭಗವಂತನನ್ನೇ ಮೊರೆಯಿಡುವರು. ಹೀಗೆ ತಮ್ಮನ್ನು ಬಂಧನದಿಂದ ಪಾರು ಮಾಡುವಂತೆ, ಆಪತ್ತಿನಿಂದ ದೂರ ಮಾಡುವಂತೆ ಜನರಿಂದ ಬೇಡಲ್ಪಡುವವನೇ ಲೋಕನಾಥ.

ನಾಥ ಎಂದರೆ ಸ್ವಾಮಿ. ಒಡೆಯ ಎಂಬ ಅರ್ಥವೂ ಬೇಡಲ್ಪಡುವವನೆಂಬ ಹಿನ್ನೆಲೆಯಲ್ಲೇ ಹೊರಡಿರುವಂತಹದ್ದು. ನಮಗೆ ಯಾರೋ ಶ್ರೀಮಂತರಿಂದ ದೇಣಿಗೆ ಬೇಕಾಗಿದೆ ಎಂದರೆ ಅವರನ್ನು ಕರೆದು ವೇದಿಕೆಯಲ್ಲಿ 'ನೀನೇ ನಾಥ ನೀನೇ ಸ್ವಾಮಿ.....' ಎಂದೆಲ್ಲ ಹೊಗಳುವೆವು. ಯಾಕೆ ? ಅವನು ನಮಗೆ ಹಣ ಕೊಡಲಿ ಎಂದು. ಹಾಗಾದರೆ ಬೇಡುವ ಬೆನ್ನಲ್ಲೇ ನಾಥ ಎನಿಸುವ ಹೆಗ್ಗಳಿಕೆ ಇರುವಂತಹದ್ದು.

ದೇವರು ಲೋಕಕ್ಕೆ ಒಡೆಯನೂ ಆಗಿರುವನು ; ಅಲ್ಲದೆ ಬ್ರಹ್ಮಾದಿ

ದೇವತೆಗಳಿಂದಲೂ ಬೇಡಲ್ಪಡುವವನೂ ಆಗಿರುವನು. ಆದುದರಿಂದಲೇ 'ಲೋಕನಾಥ'

**೭೪೪. ಮಾಧವಃ – ದೇವರಿಗೆ ಸಂಬಂಧಿಸುವ ವಿದ್ಯೆಯನ್ನು ಧಾರಣೆ ಮಾಡಲು ಯೋಗ್ಯರಾದವರಿಗೆ ಅದನ್ನು ಒದಗಿಸಿ ಕೊಡುವವನು.**

**ವಿವರಣೆ : 'ಮಾ ವಿದ್ಯಾ ಹರೇಃ ಪ್ರೋಕ್ತಾ.....'** ಎಂದಿರುವಂತೆ ಶ್ರೀಹರಿಗೆ ಸಂಬಂಧಿಸುವ ವಿದ್ಯೆ ಮಾ ಎನಿಸಿದೆ. ಬೇರೆ ಯಾವುದ್ಯಾವುದೋ ವಿದ್ಯೆಗಳಿಗೆ ಆ ಹೆಸರು ಇಲ್ಲ.

ಅಂತಹ ವಿದ್ಯೆಯನ್ನು ಧರಿಸಲು ಯೋಗ್ಯರಾದವರು 'ಮಾಧ' ರೆನಸಿದರೆ, ಅವರಿಗೆ 'ವ'- ಆ ವಿದ್ಯೆಯನ್ನು 'ವಮನ' ಮಾಡುವವನು ; ಒದಗಿಸಿಕೊಡುವವನು ಮಾಧವ.

ದೇವರಿಗೆ ಸಂಬಂಧಿಸುವ ಆಧ್ಯಾತ್ಮಿಕ ವಿದ್ಯೆಯ ಧಾರಣೆಗೆ ಯಾರು ಯೋಗ್ಯರೋ ಅವರಿಗಷ್ಟೇ ವಿದ್ಯೆಯನ್ನು ತಲುಪಿಸಬೇಕು ; ಅಲ್ಲದೆ ಅವರಿಗೆ ಎಷ್ಟು ಯೋಗ್ಯತೆ ಇದೆಯೋ ಅಷ್ಟು ಪ್ರಮಾಣದಲ್ಲಷ್ಟೇ ವಿದ್ಯೆಯನ್ನು ಉಪದೇಶಿಸಬೇಕು. ಹಾಗೆಯೇ ಕೇಳುವವರಿಗೆ ಅರ್ಥವಾಗುವಂತೆ ಉಪದೇಶ ನಡೆಯಬೇಕು. ಇದಕ್ಕೆ ವಿಪರೀತವಾಗಿ ಹೇಳುವವರು ತಮ್ಮ ಪಾಂಡಿತ್ಯವನ್ನೆಲ್ಲ ಪ್ರದರ್ಶನ ಮಾಡಹೊರಟರೆಂದರೆ 'ಹೇಳುವವರಿಗೆ ಮರೆಯಲಿಲ್ಲ ; ಕೇಳುವವರಿಗೆ ಬರಲಿಲ್ಲ' - ಎಂಬಂತೆ ಆದೀತು !

ಹಾಗಾಗದಂತೆ ದೇವರು ಯೋಗ್ಯ ವ್ಯಕ್ತಿಗಳಿಂದ ಯೋಗ್ಯ ವ್ಯಕ್ತಿಗಳಿಗೆ ಉಪದೇಶ ಕೊಡಿಸುವನು. ಆದ್ದರಿಂದ ಅವನು **'ಮಾಧವ'**

**೭೪೫. ಭಕ್ತವತ್ಸಲಃ – ತನ್ನ ಭಕ್ತರನ್ನು 'ವತ್ಸ'ರನ್ನಾಗಿ ಪರಿಗಣಿಸಿ ಸ್ವೀಕರಿಸುವವನು.**

**ವಿವರಣೆ :** ಭಕ್ತ + ವತ್ಸ + ಲ - ಎಂಬ ಮೂರು ಶಬ್ದಗಳು ಸೇರಿ ರೂಪುಗೊಂಡ ನಾಮ ಭಕ್ತವತ್ಸಲ ಎಂಬುದು.

ತನ್ನ ಭಕ್ತರನ್ನು ವತ್ಸರನ್ನಾಗಿ - ಕರುಗಳನ್ನಾಗಿ ಲ - ಲಾತಿ ಸ್ವೀಕಾರ ಮಾಡುವವನು - ಭಕ್ತವತ್ಸಲ.

ಕರುಗಳಿಗೆ, ಮಕ್ಕಳಿಗೆ ವತ್ಸ ಎಂಬ ಹೆಸರು ಯಾಕೆ ? ವದತೀತಿ ವತ್ಸಃ - ಒಳ್ಳೆಯ ಆಹಾರ ಬೇಕು, ಶುದ್ಧವಾದ ಎದೆ ಹಾಲು ಬೇಕು ಎಂದು ಮಗು ಹೇಳುತ್ತದೆ.

ಆದುದರಿಂದ ವತ್ಸ ಎನಿಸಿದೆ. ಹಾಗಾದರೆ ಒಳ್ಳೆಯ ಆಹಾರ ಬೇಕು ಎಂದು ಕೇಳುವವರಷ್ಟೇ 'ವತ್ಸ' ಎನಿಸಿಕೊಳ್ಳಲು ಅರ್ಹರು. ಭಗವಂತನು ತನ್ನ ಭಕ್ತರನ್ನು 'ವತ್ಸ'ರನ್ನಾಗಿ ಪರಿಗಣಿಸುವನೆಂದರೆ ಅವರು ಒಳ್ಳೆಯ ಆಹಾರ ; ಒಳ್ಳೆಯ ತತ್ತ್ವಜ್ಞಾನ ರೂಪದ ಆಹಾರವನ್ನು ಕೇಳುವರೆಂದು ನಿರೀಕ್ಷಿಸುವನೆಂದರ್ಥ. ಅಂತಹವರನ್ನು ಲಾತಿ - ಸ್ವೀಕರಿಸುವವನು ಎಂದರೆ ಅವರಿಗೆ ಒಳ್ಳೆಯ ಚಿಂತನೆಯ ಆಹಾರವನ್ನು ಒದಗಿಸುವುದಾಗಿ ಒಪ್ಪಿಕೊಳ್ಳುವನು ಎಂದರ್ಥ. ಆದುದರಿಂದ ಭಕ್ತವತ್ಸಲ ಎಂಬ ನಾಮದಿಂದ ಭಗವಂತನು ತನ್ನ ಭಕ್ತರನ್ನು ಒಳ್ಳೆಯ ಆಹಾರವನ್ನು ಬಯಸುವವರನ್ನಾಗಿ, ಒಳ್ಳೆಯ ಚಿಂತನೆಯನ್ನು ಅಪೇಕ್ಷಿಸುವವರನ್ನಾಗಿ ಒಪ್ಪಿಕೊಳ್ಳುವನು - ಎಂಬ ಅರ್ಥ ಹೊರಡುವುದು.

**ಸುವರ್ಣವರ್ಣೋ ಹೇಮಾಂಗೋ ವರಾಂಗಶ್ಚಂದನಾಂಗದೀ |**
**ವೀರಹಾ ವಿಷಮಃ ಶೂನ್ಯೋ ಘೃತಾಶೀರಚಲಶ್ಚಲಃ ||೭೯||**

**೭೪೬. ಸುವರ್ಣವರ್ಣಃ – * ಚಿನ್ನದಂತೆ ಬಣ್ಣ ಉಳ್ಳವನು.**
*** ಒಳ್ಳೆಯ ವರ್ಣಗಳಾದ ಅಕಾರಾದಿಗಳಿಂದ ವರ್ಣಿಸಲ್ಪಡುವವನು.**

ವಿವರಣೆ: ಚಿನ್ನದಂತೆ ಬಣ್ಣವುಳ್ಳವನು ಎಂಬುದು ಸಾಮಾನ್ಯ ಅರ್ಥ. ಇದರ ಜೊತೆಗೆ ಸು + ವರ್ಣ + ವರ್ಣ - ಎಂಬ ಪದ ವಿಭಾಗ ಮಾಡಿ ಹೀಗೆ ಅರ್ಥವನ್ನು ಹೊರಡಿಸಬಹುದು - ಸು ಒಳ್ಳೆಯ ವರ್ಣ - ಅಕಾರದಿಂದ ಪ್ರಾರಂಭಿಸಿ ಕ್ಷಕಾರದವರೆಗಿನ ಐವತ್ತೊಂದು ಅಕ್ಷರಗಳು, ಇವುಗಳಿಂದ ವರ್ಣಃ ವರ್ಣಿಸಲ್ಪಡುವವನು, ಸ್ತುತಿಸಲ್ಪಡುವವನು.

ಅ ಎಂದರೆ ಅಜ ; ಹುಟ್ಟು ಇಲ್ಲದವನು ಆ ಎಂದರೆ ಆನಂದ, ಸುಖಸ್ವರೂಪಿ ಇ ಎಂದರೆ ಇಂದ್ರ, ಪರಮೈಶ್ವರ್ಯಶಾಲಿ - ಹೀಗೆ ಐವತ್ತೊಂದೂ ಅಕ್ಷರಗಳೂ ಭಗವಂತನ ಐವತ್ತೊಂದು ಗುಣಗಳನ್ನು ಹೇಳುತ್ತಿವೆ. ಆದುದರಿಂದ ಸುವರ್ಣ- ಒಳ್ಳೆಯ ಐವತ್ತೊಂದು ಅಕ್ಷರಗಳಿಂದ ವರ್ಣ - ವರ್ಣಿಸಲ್ಪಡುವವನು, ಸ್ತುತಿಸಲ್ಪಡುವವನು.

ದೇವರನ್ನು ಸ್ತುತಿಸಲು ಅನೇಕ ವರ್ಣಗಳನ್ನೊಳಗೊಂಡ ಶಬ್ದಗಳೇ ಆಗಿರಬೇಕಿಲ್ಲ. ಒಂದೊಂದೂ ವರ್ಣವೂ ಅವನನ್ನು ಸ್ತುತಿಸುವುದು.

ನವಗ್ರಹ ಕಿಂಡಿಯಲ್ಲಿ ಮಂಡೆ ಇಟ್ಟು - ಕೃಷ್ಣನ ಪ್ರತಿಮೆಯ ವೈಭವವನ್ನು ಕಂಡು 'ಆ' ಎಂದು ಉದ್ಗಾರ ಎತ್ತಿದರೂ ಸಾಕು. ಅವನನ್ನು 'ಆನಂದ' ಎಂದು

ಸ್ತುತಿಸಿದಂತಾಗುವುದು. ಇದರ ಫಲವೇ ಎಂಬಂತೆ ಅದುವರೆಗೆ ತಲೆ ತಿನ್ನುತ್ತಿದ್ದ ಸಾಂಸಾರಿಕ ಸಮಸ್ಯೆಗಳೆಲ್ಲ ಪರಿಹೃತಗಳಾದಂತೆ ಒಮ್ಮೆ ಮನಸ್ಸಿಗೆ ನೆಮ್ಮದಿ, ಶಾಂತಿ ದೊರಕುವುದು.

ಉಡುಪಿ ಕೃಷ್ಣನ ಪ್ರತಿಮೆಯನ್ನು ಜೀವೋತ್ತಮರಾದ ಶ್ರೀ ಮಧ್ವಗುರುಗಳು ಪ್ರತಿಷ್ಠಾಪಿಸಿರುವುದರಿಂದ ಅದಕ್ಕೆ ಅಷ್ಟೊಂದು ಮಹಿಮೆ. ಪ್ರತಿಷ್ಠೆ ಮಾಡುವಾಗಲೇ ಈ ಪ್ರತಿಮೆ ತನ್ನ ಮಹತ್ತ್ವವನ್ನು ಸಾರಿತ್ತು. ಮಧ್ವ ಸರೋವರದಲ್ಲಿ ಜಲಾಧಿವಾಸಕ್ಕೊಳಪಡಿಸಲಾಗಿದ್ದ ಆ ಪ್ರತಿಮೆಯನ್ನು ಶ್ರೀ ಮಧ್ವರ ಒಬ್ಬರಲ್ಲ ; ಇಬ್ಬರಲ್ಲ ಮೂವತ್ತು ಶಿಷ್ಯರು ಸೇರಿದರೂ ಎತ್ತಲಾಗಲಿಲ್ಲ. ಮತ್ತೆ ಶ್ರೀ ಮಧ್ವರೇ ಹೋಗಿ ಅನಾಯಾಸದಿಂದ ಎತ್ತಿಕೊಂಡು ಬಂದು ಪ್ರತಿಷ್ಠೆ ಮಾಡಿದರು. ಶಿಷ್ಯರ ಅರವತ್ತು ಕೈಗಳಿಂದ ಆಗದದ್ದು ಶ್ರೀ ಮಧ್ವರ ಎರಡು ಕೈಗಳಿಂದ ಆಗುವುದು.

ಹೀಗೆ ಉಡುಪಿ ಶ್ರೀಕೃಷ್ಣನ ಪ್ರತಿಮೆ ತುಂಬಾ ಮಹತ್ತ್ವೋಪೇತವಾಗಿರುವುದರಿಂದ ಅದನ್ನು ಕಂಡಾಕ್ಷಣ ನಮಗರಿವಿಲ್ಲದಂತೆಯೇ 'ಆ' ಎಂಬ ಉದ್ಗಾರ ಹೊರಡುವುದು ಸಹಜ. ಆ ಆವರ್ಣವು ಭಗವಂತನ ಆನಂದವನ್ನು ಸಾರುತ್ತಿದೆ ಎಂದು ವಿವೇಚಿಸಿಕೊಳ್ಳಬೇಕಷ್ಟೇ.

**೭೪೭. ಹೇಮಾಂಗಃ – ಎಲ್ಲವನ್ನೂ ಅರ್ಪಿಸಿದ ಸಂನ್ಯಾಸಿಗಳಲ್ಲಿ ಆಧ್ಯಾತ್ಮಿಕ ವಿದ್ಯೆಯನ್ನು ತುಂಬಿಸುವವನು.**

ವಿವರಣೆ : ಮೇಲ್ನೋಟಕ್ಕೆ 'ಸುವರ್ಣವರ್ಣಃ' 'ಹೇಮಾಂಗಃ' ಇವೆಲ್ಲ ಒಂದೇ ಅರ್ಥವನ್ನು ತಿಳಿಸುವ ನಾಮಗಳಂತಿವೆ. 'ಸುವರ್ಣವರ್ಣಃ' ಎಂಬುದಕ್ಕೆ ಚಿನ್ನದ ಬಣ್ಣದವನೆಂಬ ಅರ್ಥವಾದರೆ, 'ಹೇಮಾಂಗ' - ಚಿನ್ನದ ಅಂಗಗಳುಳ್ಳವನೆಂಬ ಅರ್ಥ. ಆದರೆ ಸ್ವಲ್ಪ ಆಳವಾಗಿ ಪರಿಶೀಲಿಸಿದೆವೆಂದರೆ ಹೊಸ ಅರ್ಥಗಳೂ ಹೊಳೆಯಬಲ್ಲವು.

ಹೇ + ಮಾಂ + ಗಃ ಎಂಬುದಾಗಿ ಮೂರು ಶಬ್ದಗಳ ಸಂಯೋಜನೆಯಿಂದ ರೂಪುಗೊಂಡ ನಾಮ 'ಹೇಮಾಂಗ' ಎಂಬುದೆಂದು ಇಟ್ಟುಕೊಂಡಾಗ ಸಂನ್ಯಾಸಿಗಳಲ್ಲಿ ಆಧ್ಯಾತ್ಮಿಕ ವಿದ್ಯೆಯನ್ನು ತಲುಪಿಸುವವನು ಎಂಬ ಅರ್ಥವೂ ಹೊರಡಬಲ್ಲದು.

ಹಂಸ ಶಬ್ದದ ಮೊದಲ ಶಬ್ದ ಹಕಾರ. ಹಂಸ ಶಬ್ದಕ್ಕೆ ಪರಮಹಂಸರು ಸಂನ್ಯಾಸಿಗಳು ಎಂಬ ಅರ್ಥ. ನ್ಯಾಸ ಎಂದರೆ ಬಿಡುವುದು. ಸಂನ್ಯಾಸ ಎಂದರೆ ಚೆನ್ನಾಗಿ ಬಿಡುವುದು. ಯಾವುದನ್ನು ಬಿಡುವುದು ? ಎಲ್ಲಿ ಬಿಡುವುದು ? **'ದಾರಾನ್ ಸುತಾನ್ ಪ್ರಿಯಾನ್ ಪ್ರಾಣಾನ್ ಯತ್ ಪರಸ್ಮೈ ನಿವೇದನಂ.....'** ಎಂದಿರುವಂತೆ ಕಟ್ಟಿಕೊಂಡ

ಪತ್ನಿ, ಪುತ್ರರು, ಪ್ರಾಣ ಇವರನ್ನೆಲ್ಲ ಬಿಡುವುದು. ಪರಮಾತ್ಮನಲ್ಲಿ ಬಿಡುವುದು. ಅಂದರೆ ಪರಮಾತ್ಮನಿಗೆ ಸೇರಿದವರೆಂದು ಅಳವಡಿಸಿಕೊಳ್ಳಬಹುದಾದ ಸಂನ್ಯಾಸ ಇದು. ಸಂನ್ಯಾಸಕ್ಕಾಗಿ ಸಂಸಾರವನ್ನು ಬಿಡಬೇಕಾಗಿಲ್ಲ. ಸಂಸಾರದಲ್ಲಿಯೇ ಇರಬೇಕಾದದ್ದು. ಸಂಸಾರದಲ್ಲಿ ಇರುವುದೇ ಹೊರತು ಜೀವರಲ್ಲಿ ಸಂಸಾರ ತುಂಬಿರುವಂತಾಗಬಾರದು. ದೋಣಿ ಇರುವುದೇ ನೀರಿನಲ್ಲಿ ಇರುವುದಕ್ಕಾಗಿ. ಆದರೆ ದೋಣಿ ನೀರಿನಲ್ಲಿ ಇರಬೇಕೇ ಹೊರತು ನೀರು ದೋಣಿಯಲ್ಲಿ ಸೇರಿಕೊಳ್ಳಬಾರದು ತಾನೇ ? ಆದ್ದರಿಂದ ಸಂನ್ಯಾಸ ಎನಿಸಬೇಕೆಂದರೆ ಸಂಸಾರದಿಂದ ದೂರ ಓಡಿಹೋಗಬೇಕಾದದ್ದಿಲ್ಲ. ಸಂಸಾರದಲ್ಲಿದ್ದುಕೊಂಡೇ ಪ್ರತಿಯೊಂದು ವರ್ಣವೂ ದೇವರ ಹೆಸರು, ಪ್ರತಿಯೊಂದು ಶಬ್ದವೂ ಅವನದ್ದೇ ನಾಮ, ಪ್ರತಿಯೊಂದು ಪದಾರ್ಥವೂ ಅವನ ಒಡೆತನಕ್ಕೇ ಸೇರಿದ್ದು ಎಂಬುದಾಗಿ ಎಲ್ಲ ಶಬ್ದಗಳನ್ನೂ, ಎಲ್ಲ ವಸ್ತುಗಳನ್ನೂ ಅವನಲ್ಲಿ 'ಸಂನ್ಯಾಸ' - ಸಮರ್ಪಣೆ ಮಾಡಲಾಯಿತೆಂದರೆ ಅವನು ಸಂನ್ಯಾಸಿ. ಅವನೇ ಹಂಸ. ಅಂತಹವನನ್ನು 'ಹ'ದಿಂದ ಉಲ್ಲೇಖಿಸಲಾಗಿದೆ, 'ಹೇ' - ಹಂಸ ಎನಿಸುವ ಸಂನ್ಯಾಸಿಯಲ್ಲಿ ಮಾಂ - ಆಧ್ಯಾತ್ಮಿಕ ವಿದ್ಯೆಯನ್ನು ಗಃ - ಗಮಯತಿ ಪ್ರಾಪಯತಿ, ತಲುಪಿಸುವವನು, ತುಂಬಿಸುವವನು 'ಹೇಮಾಂಗ.'

**೭೪೮. ವರಾಂಗಃ – ಜ್ಞಾನವುಳ್ಳವರಿಗೆ ಅಗ್ನಿಬೀಜದಿಂದ ಸಂಕೇತಿತಗಳಾಗುವ ಯಜ್ಞಯಾಗಾದಿ ಕರ್ಮಗಳನ್ನು ತಲುಪಿಸುವವನು.**

ವಿವರಣೆ: ಹಿಂದಿನ 'ಹೇಮಾಂಗ' ಎಂಬ ನಾಮದ ಚಿಂತನೆ ಮಾಡುವಾಗ ಭಗವಂತನು ಸಂನ್ಯಾಸಿಗಳಿಗೆ ಆಧ್ಯಾತ್ಮಿಕ ವಿದ್ಯೆಯನ್ನು ತುಂಬಿಸುವವನು ಎಂದು ನೋಡಿದ್ದೇವೆ. ಹೀಗೆ ಆಧ್ಯಾತ್ಮಿಕ ವಿದ್ಯೆಯಿಂದ ತುಂಬಿದ ಜ್ಞಾನಿಗಳಲ್ಲಿ ಕರ್ಮಾಚರಣೆಯನ್ನೂ ತುಂಬುವವನೆಂದು ಮುಂದಿನ 'ವರಾಂಗಃ'- ಎಂಬ ನಾಮದಿಂದ ತಿಳಿಸುವರು. ವ ಎಂದರೆ ಜ್ಞಾನವುಳ್ಳವರು. ಅಂತಹವರಿಗೆ ರಾಂ ಎಂಬುದು ಅಗ್ನಿ ಬೀಜವಾಗಿದ್ದು ಅಗ್ನಿ ಮಾಧ್ಯಮದ ಯಜ್ಞಯಾಗಾದಿ ಕರ್ಮಗಳನ್ನು ಸೂಚಿಸಿ ಕೊಡುವುದು. ಅಂತಹ ಕರ್ಮಗಳನ್ನು ಗಃ ಗಮಯತಿ, ಹೊಂದಿಸುವವನು 'ವರಾಂಗಃ'

ವಂ ಎಂಬುದು ಅಮೃತ ಬೀಜ ಎನಿಸಿರುವಂತೆ, ಯಂ ಎಂಬುದು ವಾಯುಬೀಜ ಎನಿಸಿರುವಂತೆ ರಂ ಎಂಬುದು ಅಗ್ನಿಬೀಜ. ಆದುದರಿಂದ ರಾಂ ಶಬ್ದ ಯಜ್ಞಯಾಗಾದಿ ಕರ್ಮಗಳನ್ನು ಸೂಚಿಸಿಕೊಡಬಲ್ಲದು.

ಜ್ಞಾನವನ್ನು ಪಡೆದುಕೊಂಡವರಿಗೂ ಕರ್ಮಗಳ ಆವಶ್ಯಕತೆಯನ್ನು ತಿಳಿಸಿ, ಅವರಿಂದ ಕರ್ಮಗಳನ್ನು ಮಾಡಿಸುವನು.

ಅಕ್ರೂರ ರಾಮಕೃಷ್ಣರನ್ನು ನಂದವ್ರಜದಿಂದ ಮಧುರೆಗೆ ಕರೆದೊಯ್ಯುವಾಗ ರಾಮಕೃಷ್ಣರು ರಥದಲ್ಲಿಯೇ ಇರುವುದನ್ನು ನೋಡುತ್ತಿದ್ದರೂ, ಅವನು ರಥ ನಿಲ್ಲಿಸಿ ಸ್ನಾನಾದಿ ಆಹ್ನೀಕಗಳನ್ನು ನಡೆಸಲು ತೆರಳುವನು. ಕೃಷ್ಣನೂ ಅದನ್ನೇನು ಬೇಡ ಎನ್ನುವುದಿಲ್ಲ. ಇದರಿಂದ ಸ್ಪಷ್ಟ - ತಿಳುವಳಿಕೆವುಳ್ಳವರೂ ಕರ್ಮಗಳನ್ನು ಮಾಡಲೇಬೇಕು. ಹಾಗೆ ಜ್ಞಾನಿಗಳೂ ಕರ್ಮಗಳನ್ನು ನಡೆಸುವಂತೆ ಅವರನ್ನು ಪ್ರೇರಿಸುವುದರಿಂದ ಭಗವಂತನು 'ವರಾಂಗ' ಎನಿಸುವನು.

**೭೪೯. ಚಂದನಾಂಗದೀ – ಆಯಾ ವ್ಯಕ್ತಿಗಳಿಗೆ ಸಂತೋಷವನ್ನುಂಟುಮಾಡುವ ಅವರವರ ಶರೀರವನ್ನು ಅವರವರ ಪ್ರಾರಬ್ಧ ಕರ್ಮ ಮುಗಿದಾಕ್ಷಣ ನಾಶ ಮಾಡುವವನು.**

ವಿವರಣೆ : ಚಂದನ + ಅಂಗ + ದೀ - ಮೂರು ಶಬ್ದಗಳು ಸೇರಿ 'ಚಂದನಾಂಗದೀ' - ಎಂಬ ನಾಮ ರೂಪುಗೊಂಡಿದೆ.

ಚಂದನ ಅಂದರೆ ಗಂಧ. ಗಂಧವಾದರೂ ಯಾಕೆ ಚಂದನ ಎನಿಸುವುದು ? ಚಂದಯತಿ ಆಹ್ಲಾದಯತೀತಿ ಚಂದನಃ - ಮನಸ್ಸಿಗೆ ಉತ್ಸಾಹವನ್ನು ಉಂಟು ಮಾಡುವುದರಿಂದ ಚಂದ, ಚಂದನ ಎಂದೆಲ್ಲ ಎನಿಸುವುದು. ಕನ್ನಡದ ಚೆಂದ ಶಬ್ದವೂ ಈ ಅರ್ಥದಲ್ಲೇ ಹುಟ್ಟಿಕೊಂಡಿದ್ದಿರಬಹುದು. ಚೆಂದವನ್ನು ಕಂಡ ಕೂಡಲೇ ಮನಸ್ಸು ಸಂತೋಷಪಡುವುದು. ಎಲ್ಲರಿಗೂ ಒಂದೇ ಬಗೆಯು ಚೆಂದ ಸಂತೋಷಪಡಿಸದಿರುವುದರಿಂದ ಬೇರೆ ಬೇರೆ ವ್ಯಕ್ತಿಗಳ ದೃಷ್ಟಿಯಲ್ಲಿ ಬೇರೆ ಬೇರೆಯೇ ಚಂದವಾಗಿರುತ್ತದೆ.

ಆದುದರಿಂದ ಚಂದನ ಎಂದರೆ ಸಂತೋಷವನ್ನುಂಟುಮಾಡುವಂತಹದ್ದು. ಅಂಗ ಎಂದರೆ ಶರೀರ. ಅಂಗ ಶಬ್ದಕ್ಕೆ ಅವಯವ ಎಂಬ ಅರ್ಥವಿರುವಂತೆ ಸಮಗ್ರ ಶರೀರ ಎಂಬ ಅರ್ಥವೂ ಇದೆ. ನಮ್ಮ ಸುಖಾನುಭವಕ್ಕೆ ಮುಖ್ಯ ಆಸರೆಯಾಗಿರುವಂತಹದ್ದೇ ಶರೀರ. 'ಭೋಗಾಯತನಂ ಶರೀರಂ' - ಎಂದೇ ನೈಯಾಯಿಕರು ಶರೀರವನ್ನು ಪರಿಚಯಿಸಿಕೊಡುವರು. ಮನುಷ್ಯರಿಗೆ ಅವರ ಶರೀರದಂತೆ, ಪಶುಪಕ್ಷಿಗಳಿಗೆ ಅವುಗಳ ಶರೀರವೂ ಸಂತೋಷವನ್ನುಂಟು ಮಾಡುವಂತಹದ್ದೇ. ನಾವು ನಮ್ಮ ಶರೀರವೇ ಶ್ರೇಷ್ಠ ಎನಿಸುವಂತೆ ಪಶುಪಕ್ಷಿಗಳೂ ತಮ್ಮ ಶರೀರವೇ ಶ್ರೇಷ್ಠ ಎಂದು ಭಾವಿಸುತ್ತಿರಬಹುದು.

ಭವಿಷ್ಯವನ್ನು ತಿಳಿಯಬಲ್ಲ ಗುರುಗಳೊಬ್ಬರು ತಮಗೆ ಮುಂದಿನ ಜನ್ಮ ಹಂದಿಯ ಜನ್ಮ ಬರುವುದೆಂಬುದನ್ನು ತಿಳಿದು ಆ ಹಂದಿಯಾಗಿ ತಾನು ಬಂದಾಗ

ಅದನ್ನು ಕೂಡಲೇ ಕೊಂದು ಹಾಕಬೇಕೆಂದು ತಿಳಿಸುವರು. ಆ ಹಂದಿಯ ಹಣೆಯಲ್ಲಿ ನಾಮ ಬರೆದಿರುವುದೆಂಬ ಸೂಕ್ಷ್ಮ ಪರಿಚಯವನ್ನೂ ನೀಡುವರು. ಹಾಗೆಯೇ ಆ ಗುರುಗಳು ಸತ್ತು, ಅವರ ಪ್ರಾರಬ್ಧಕರ್ಮಕ್ಕನುಗುಣವಾಗಿ ಅವರು ಹಂದಿಯಾಗಿ ಬರುವರು. ಶಿಷ್ಯರು ಆ ಹಂದಿಯನ್ನು ಕೊಲ್ಲಲು ತೊಡಗಿದಾಗ ಹಂದಿ ಹೇಳುವುದು ನಾನು ಈ ಶರೀರದಲ್ಲಿ ಆರಾಮವಾಗಿದ್ದೇನೆ. ಹೆಂಡತಿ, ಮಕ್ಕಳ ದೊಡ್ಡ ಪರಿವಾರವನ್ನು ಹೊಂದಿದ್ದೇನೆ. ನನ್ನನ್ನು ಕೊಲ್ಲಬೇಡ - ಎಂದು. ಅಂದರೆ ಆ ಹಂದಿ ಹಿಂದೆ ಮನುಷ್ಯ ಶರೀರವನ್ನು ಹೊಂದಿದ್ದಾಗ ಮುಂದೆ ಬರಲಿರುವ ಹಂದಿಯ ಶರೀರದ ಬಗ್ಗೆ ಅಸಹ್ಯದ ಭಾವನೆ ತಾಳಿದ್ದರೂ ಈಗ ಹಂದಿಯ ಶರೀರವನ್ನು ಹೊಂದಿದಾಗ ಈ ಶರೀರವೇ ಅದಕ್ಕೆ ಸಂತೋಷವನ್ನುಂಟುಮಾಡುವುದಾಗಿ ಕಂಡಿದೆ. ಅದಕ್ಕೇ ದಾಸರು ಅಂದದ್ದು **'ಬ್ರಹ್ಮಾಂಡವೆಲ್ಲ ಸುತ್ತಿ ಬರಲು ನಮ್ಮೂರೇ ವಾಸಿ......'** ನಮ್ಮೂರು ಎಂದರೆ ನಾವು ಹೊಂದಿರುವ ಶರೀರ.

ಹೀಗೆ ಪ್ರತಿಯೊಬ್ಬರಿಗೂ, ಪ್ರತಿಯೊಂದು ಪಶುಪಕ್ಷಿಗೂ 'ಚಂದನ' ಸಂತೋಷವನ್ನುಂಟು ಮಾಡುವ 'ಅಂಗ' ಶರೀರವನ್ನು 'ದಿ' - ದ್ಯತಿ - ಖಂಡಯತಿ- ನಾಶ ಮಾಡುವವನು - 'ಚಂದನಾಂಗದೀ'. ನಿರಾಧಾರವಾಗಿ ನಾಶ ಮಾಡುವುದಿಲ್ಲ. ಬದಲಾಗಿ, ಯಾವ ಯಾವ ಪ್ರಾರಬ್ಧಕರ್ಮಕ್ಕನುಗುಣವಾಗಿ ಆಯಾ ಜೀವರು ಆಯಾ ಶರೀರವನ್ನು ಹೊಂದಿರುವರೋ ಆ ಕರ್ಮ ನಾಶವಾಯಿತೆಂದರೆ ಕೂಡಲೇ ಆ ಕರ್ಮಪ್ರಯುಕ್ತವಾದ ಶರೀರವನ್ನೂ ನಾಶಪಡಿಸುವನು. ಶರೀರ ಎಷ್ಟೇ ದೃಢವಾಗಿ, ಗಟ್ಟಿಮುಟ್ಟಾಗಿ ಇದ್ದರೂ ಏನೋ ಅಪಘಾತ, ರೋಗ - ಮುಂತಾದ ನಿಮಿತ್ತಗಳನ್ನೊಡ್ಡಿ ಅದನ್ನು ನಾಶಪಡಿಸುವನು. ಆದ್ದರಿಂದ ಶರೀರ ದೃಢವಾಗಿದೆ ; ಇನ್ನು ಕೆಲವು ವರ್ಷಗಳ ಅನಂತರ ಸಾಧನಾನುಷ್ಠಾನ ನಡೆಸಿದರಾಯಿತೆಂದು ಭಾವಿಸದೆ ಶರೀರ ಎಷ್ಟೇ ದೃಢವಾಗಿದ್ದರೂ ಯಾವುದೇ ಕ್ಷಣದಲ್ಲಿ ಬಿದ್ದು ಹೋಗಬಹುದಾದ್ದರಿಂದ ಈಗಿಂದೀಗಲೇ ಸಾಧನಾನುಷ್ಠಾನದಲ್ಲಿ ತೊಡಗಬೇಕೆಂದು ತಾತ್ಪರ್ಯ. ಎಂಟುನೂರು ವರ್ಷಗಳ ಅವಧಿಯಲ್ಲಿ ಬೇರೆ ಬೇರೆ ಬಗೆಯ ಸಂತೋಷಕ್ಕೆ ಕಾರಣವಾಗಿದ್ದು 'ಚಂದನ' ಎನಿಸಿರುವ ತಮ್ಮ 'ಅಂಗ'ವನ್ನು ಇನ್ನು ಕೆಲವೇ ದಿನಗಳಲ್ಲಿ ತ್ಯಜಿಸಬೇಕಾಗಿದೆ ; ಹಾಗೆ ತ್ಯಜಿಸಲು ಬೇಕಾದ ವ್ಯವಸ್ಥೆಯನ್ನು ಭಗವಂತನು ಏರ್ಪಡಿಸುವನು ಎಂಬ ಅನುಸಂಧಾನದೊಂದಿಗೆ ಭೀಷ್ಮರು 'ಚಂದನಾಂಗದೀ' - ಎಂದು ಕೃಷ್ಣನನ್ನು ಸ್ತುತಿಸುತ್ತಿರುವರು.

**೭೫೦. ವೀರಹಾ – ಮುಖ್ಯಪ್ರಾಣನಿಗೆ ವಿರುದ್ಧವಾಗಿ ನಡೆದುಕೊಂಡವರು ನಿತ್ಯ ನರಕದಲ್ಲಿ ಬಿದ್ದು ಶಾಶ್ವತವಾಗಿ ದುಃಖವನ್ನು ಅನುಭವಿಸುವಂತೆ ಮಾಡುವವನು.**

‘ಶ್ರೀ ದೇವಕಿನಂದನಾಯ ನಮಃ’ ‘ಶ್ರೀ ನಂದನಾಯ ನಮಃ’



ಕೃಷ್ಣಾಷ್ಟಮಿಯ ಸಂದರ್ಭದಲ್ಲಿ ಮುದ್ದುಕೃಷ್ಣನ ಅಲಂಕಾರದಲ್ಲಿ ಮೆರೆಯುತ್ತಿರುವ ಉಡುಪಿ ಕೃಷ್ಣನ ಪ್ರತೀಕದಲ್ಲಿ ಭಕ್ತರನ್ನು ಸಂತೋಷಪಡಿಸುವುದಕ್ಕಾಗಿ ಶಿಶುವಿನಂತೆ ನಟಿಸುವುದಕ್ಕೂ ಸಿದ್ಧನಾಗುವ ದೇವರ ಲೀಲೆಯನ್ನು ವಿ.ಸ.ನಾಮದ ‘ದೇವಕಿನಂದನಃ’ ‘ನಂದನಃ’ - ಇತ್ಯಾದಿ ನಾಮಗಳಿಂದ ಅರ್ಥಾನುಸಂಧಾನ ನಡೆಸಬಹುದಾಗಿದೆ.

## ‘ಶ್ರೀ ಮಾನದಾಯ ನಮಃ ’ ‘ಶ್ರೀ ವಸವೇ ನಮಃ’



ವಿವಸ್ತ್ರರಾಗಿ ಮೀಯುತ್ತಿದ್ದ ಗೋಪಿಕಾಕನ್ಯೆಯರಿಗೆ ವಿವಸ್ತ್ರರಾಗಿ ಸ್ನಾನ ಮಾಡಬಾರದೆಂಬ ನಿಯಮವನ್ನು ತಿಳಿಸುವುದಕ್ಕಾಗಿ ಅವರ ವಸ್ತ್ರಾಪಹಾರ ನಡೆಸಿ, ಆ ಮೂಲಕ ಅವರ ಮಾನವನ್ನು ಒಮ್ಮೆ ದೂರ ಮಾಡಿ, ಬಳಿಕ ಅವರವರ ಉಡುಪನ್ನು ಅವರಿಗೆ ಕೊಟ್ಟು, ಆ ಉಡುಪಿನಿಂದ ಅವರ ಮಾನವನ್ನು ರಕ್ಷಿಸಿದ, ತನ್ನ ಈ ಪ್ರಕ್ರಿಯೆಯ ಮೂಲಕ ತಾನು ಒಲಿಯಬೇಕಾದರೆ ದೇಹಾಭಿಮಾನವನ್ನು ತ್ಯಜಿಸಬೇಕೆಂದು ಸಂಕೇತಿಸುವ ಈ ಲೀಲೆಯನ್ನು ಕೃಷ್ಣಾಷ್ಟಮಿಯ ಸಂದರ್ಭದಲ್ಲಿ ಗೋಪೀವಸ್ತ್ರಾಪಹಾರದ ಅಲಂಕಾರದಲ್ಲಿ ಮೆರೆಯುತ್ತಿರುವ ಉಡುಪಿ ಶ್ರೀಕೃಷ್ಣನ ಪ್ರತೀಕದಲ್ಲಿ ವಿ.ಸ.ನಾಮದ ‘ಮಾನದಃ’ ‘ವಸುಃ’ ‘ಪ್ರಜಾಗರಃ’ - ಮುಂತಾದ ತಿಳುವಳಿಕೆ, ಜಾಗೃತಿ ನೀಡುವ ಪ್ರಸ್ತಾವವುಳ್ಳ ನಾಮಗಳಿಂದ ಅನುಸಂಧಾನ ಮಾಡಬಹುದು.

ವಿವರಣೆ : ವೀರರನ್ನು ಕೊಲ್ಲುವವನೆಂಬ ಅರ್ಥ 'ವೀರಹಾ' ಶಬ್ದದಿಂದ ಮೇಲ್ನೋಟಕ್ಕೆ ತಿಳಿದು ಬರುವುದು ನಿಜ, ವೀರರನ್ನು ಕೊಲ್ಲುವವನು ವೀರಹಾ. ಯಾರು ವೀರರು ? ಪರಾಕ್ರಮಿಗಳು ಅಲ್ಲ ; ಆರಬ್ಧವಾದುದನ್ನು ಕೊನೆಗೊಳಿಸುವವರು ಅಲ್ಲ ; ಮತ್ತೆ ಮುಖ್ಯಪ್ರಾಣನಿಗೆ ವಿರುದ್ಧವಾಗಿ ಇರುವವರು.

ಈರ ಎಂದರೆ ವಾಯುದೇವ. ಎಲ್ಲರಲ್ಲಿ ಚಲನೆಯುನ್ನುಂಟು ಮಾಡುವುದರಿಂದ ವಾಯುದೇವ ಈರ ಎನಿಸುವನು. ಮರಗಿಡಗಳು ಅಲ್ಲಾಡಬೇಕೆಂದರೆ ಗಾಳಿಬೇಕು ತಾನೇ ? ಗಾಳಿ ಎಂದರೆ ವಾಯುದೇವ. ಹೀಗೆ ಈರ ಎನಿಸುವ ವಾಯುದೇವನಿಗೆ ವಿರುದ್ಧವಾದವರೆಲ್ಲ ಈರ + ವಿರುದ್ಧಾಃ - ವೀರರು. ವಾಯುದೇವನ ಆಂಜನೇಯ, ಭೀಮಸೇನ ಹಾಗೂ ಮಧ್ವ ಅವತಾರಗಳಿಗೆ ವಿರುದ್ಧರಾದವರೂ ವೀರರೇ. ಅವರನ್ನೆಲ್ಲ ಹಂತಿ - ಕೊಲ್ಲುವವನು ವೀರಹಾ. ಕೊಲ್ಲುವುದೆಂದರೆ ತಲೆ ಹಾರಿಸುವುದಷ್ಟೇ ಅಲ್ಲ. ಒಮ್ಮೆ ತಲೆ ಹಾರಿಸಿ,ಕೊಂದರೆ ಮತ್ತೆ ಅವರು ಹುಟ್ಟಿಕೊಳ್ಳುವರು. ಆದ್ದರಿಂದ ವೀರರೆನಿಸಿರುವ ವಾಯುದೇವನ ಶತ್ರುಗಳ ವಿರುದ್ಧ ಭಗವಂತನು ಎಸಗುವ ಕೊಲೆ ಎಂದರೆ **'ಅಥ ದೈತ್ಯಹತಿಸ್ತಮಸಿ ನಿಯಮೇನ ಸಂಸ್ಥಿತಿರೇವ'** ವಾಯುದೇವನ ಶತ್ರುಗಳಾದ ದೈತ್ಯರು ನಿತ್ಯನರಕದಲ್ಲಿ ಬೀಳುವಂತೆ ಮಾಡಿ, ಅಲ್ಲಿ ಅವರು ನಿತ್ಯ ದುಃಖವನ್ನು ಅನುಭವಿಸುವಂತೆ ಮಾಡುವುದು.

ಕೃಷ್ಣ ಪರಮಾತ್ಮ ಭೀಮನ ವಿರುದ್ಧರಾಗಿದ್ದ ದುರ್ಯೋಧನಾದಿಗಳನ್ನು ಕೊಂದದ್ದೆಂದರೆ, ಅವರು ನಿತ್ಯನರಕದಲ್ಲಿ ಬಿದ್ದು ನಿತ್ಯ ದುಃಖವನ್ನು ಅನುಭವಿಸುವಂತೆ ಮಾಡಿದುದೇ.

**೭೫೧. ವಿಷಮಃ – * ಜೀವರ ಸ್ವಭಾವಾದಿಗಳಿಗನುಗುಣವಾಗಿ ವೈಷಮ್ಯದಿಂದ ನಡೆದುಕೊಳ್ಳುವವನು**

*** ವಿಷವನ್ನು ಪರಿಹರಿಸುವವನು.**

ವಿವರಣೆ : ಜೀವರ ವಿಷಯದಲ್ಲಿ ವೈಷಮ್ಯ ಮಾಡುವವನು ವಿಷಮ.

ವೈಷಮ್ಯ ಮಾಡುವವನೆಂಬುದು ಹೊಗಳಿಕೆ ಎನಿಸುವುದೇ ?

ಹೌದು, ದೋಷ ಎನಿಸುವ ವೈಷಮ್ಯ ಇರುವಂತೆ ಗುಣ ಎನಿಸುವ ವೈಷಮ್ಯವೂ ಇದೆ. ಒಳ್ಳೆಯ ಕರ್ಮ ಮಾಡಿದವರಿಗಷ್ಟೇ ಒಳ್ಳೆಯ ಫಲ ; ಕೆಟ್ಟ ಕರ್ಮ ಮಾಡಿದವನಿಗೆ ಒಳ್ಳೆಯ ಫಲವನ್ನು ಕೊಡದೆ ಕೆಟ್ಟ ಫಲವನ್ನು ಕೊಡುವ

'ವೈಷಮ್ಯ' ಗುಣವೇ ಆಗುವುದು. ಇದಕ್ಕೆ ಬದಲಾಗಿ ಒಳ್ಳೆಯ ಕರ್ಮ ಮಾಡಿದವನಿಗೆ ಕೆಟ್ಟ ಫಲ, ಕೆಟ್ಟ ಕರ್ಮ ಮಾಡಿದವನಿಗೆ ಒಳ್ಳೆಯ ಫಲ ಕೊಡುವ ಮೂಲಕ ಮಾಡುವ ವೈಷಮ್ಯ ದೋಷ ಎನಿಸುವುದು. ಹಾಗೆಯೇ ಒಳ್ಳೆಯ ಕೆಲಸ ಮಾಡಿದವನಿಗೆ ಹೇಗೋ ಹಾಗೆ ಕೆಟ್ಟ ಕೆಲಸ ಮಾಡಿದವನಿಗೂ ಒಳ್ಳೆಯ ಫಲವನ್ನೇ ನೀಡುವುದೂ ವೈಷಮ್ಯ ಎನಿಸಿದ್ದು, ಇದೂ ದೋಷ ಎನಿಸುವುದು.

ಚೆನ್ನಾಗಿ ಓದಿದ ಹುಡುಗನನ್ನು ಉತ್ತೀರ್ಣನನ್ನಾಗಿಸುವುದೂ ಗುಣರೂಪದ ವೈಷಮ್ಯ ತಾನೇ? ಇದಕ್ಕೆ ಬದಲಾಗಿ ಓದಿದವನನ್ನು ಅನುತ್ತೀರ್ಣನನ್ನಾಗಿಸುವುದೂ, ಓದದವನನ್ನು ಉತ್ತೀರ್ಣನನ್ನಾಗಿಸುವುದೂ ದೋಷ ರೂಪದ ವೈಷಮ್ಯ.

ಭಗವಂತ ಆಯಾ ಜೀವರ ಸ್ವಭಾವವನ್ನು ಪರಿಶೀಲಿಸಿ ಒಳ್ಳೆಯ ಸ್ವಭಾವದವರಿಗೆ, ಆದುದರಿಂದಲೇ ಒಳ್ಳೆಯ ಕರ್ಮಗಳನ್ನು ನಡೆಸುವವರಿಗೆ ಒಳ್ಳೆಯ ಫಲವನ್ನೂ, ಕೆಟ್ಟ ಸ್ವಭಾವದ, ಆದುದರಿಂದಲೇ ಕೆಟ್ಟಕರ್ಮಗಳನ್ನೆಸಗುವವರಿಗೆ ಕೆಟ್ಟ ಫಲವನ್ನೂ ನೀಡುವನು. ಅವರವರ ಸ್ವಭಾವಕ್ಕನುಗುಣವಾದ, ಕ್ರಿಯೆಗನುಗುಣವಾದ ಪ್ರತಿಕ್ರಿಯೆ, ಪ್ರತಿಫಲ ನೀಡುವ ಈ ವೈಷಮ್ಯ ಗುಣ ಎನಿಸಿದೆ. ಆದ್ದರಿಂದಲೇ 'ವಿಷಮಃ' - ಗುಣ ರೂಪವಾದ ವೈಷಮ್ಯವನ್ನು ಮಾಡುವವನು ಎಂದು ಸ್ತುತಿಸಲಾಗಿದೆ.

ಒಳ್ಳೆಯ ಸ್ವಭಾವದ ಪಾಂಡವರಿಗೆ ಒಳ್ಳೆಯ ಫಲವನ್ನೂ, ಕೆಟ್ಟ ಸ್ವಭಾವದ ದುರ್ಯೋಧನಾದಿಗಳಿಗೆ ಕೆಟ್ಟ ಫಲವನ್ನೂ ನೀಡುವ ಮೂಲಕ ವಿಷಮನಾಗಿ ನಡೆದುಕೊಂಡ ಕೃಷ್ಣನನ್ನು ಭೀಷ್ಮರು 'ವಿಷಮಃ' - ಎಂದು ಸ್ತುತಿಸುತ್ತಿರುವರು.

ದೇವರ ಈ ವೈಷಮ್ಯವನ್ನು ಸುಲಭದಲ್ಲಿ ಒಪ್ಪಿಕೊಳ್ಳಲಾಗದವರು ಬೇಕಾದರೆ 'ವಿಷಮ' ನಾಮದಿಂದ ಮತ್ತೊಂದು ಅರ್ಥವನ್ನು ಅನುಸಂಧಾನ ಮಾಡಬಹುದು- ವಿಷಂ ಅಭಿಮಿಮೀತೇ ಹಿನಸ್ತಿ ಇತಿ ವಿಷಮಃ - ಮಾಧಾತುವಿಗೆ ಅಭಿಉಪಸರ್ಗವನ್ನು ಜೋಡಿಸಿದಾಗ ಹಿಂಸೆ ಎಂಬ ಅರ್ಥ ಹೊರಡುವುದು.

ಭಗವಂತನು ಕೃಷ್ಣಾವತಾರದಲ್ಲಿ ಪೂತನೆಯ ವಿಷವನ್ನು ನಾಶ ಮಾಡಿದ್ದಾನೆ.

ಸಮುದ್ರ ಮಥನದ ಸಂದರ್ಭದಲ್ಲಿ ಕಾಲಕೂಟ ವಿಷವನ್ನು ತನ್ನ ಪುತ್ರ ವಾಯುದೇವನ ಮೂಲಕ ನಾಶ ಮಾಡಿಸಿದ್ದಾನೆ.

ಶ್ರೀವಾದಿರಾಜ ಸ್ವಾಮಿಗಳಿಗೆ ಒಬ್ಬ ಕುಹಕಿ ವಿಷಮಿಶ್ರಿತ ಆಹಾರವನ್ನು ನೀಡಲು ಅವರು ಅದನ್ನು ತಮ್ಮ ಉಪಾಸ್ಯ ಹಯಗ್ರೀವನಿಗೆ ಸಮರ್ಪಿಸುವರು.

ಹಯಗ್ರೀವ ಆ ವಿಷಕೊಟ್ಟ ವ್ಯಕ್ತಿಯೇ ಅದನ್ನು ತಿನ್ನುವಂತೆ ಮಾಡಿ ಅವನ ನಾಶ ಆಗುವಂತೆ ಮಾಡಿರುವನು. ದೇವರಿಗೆ ವಿಷ ಕೊಟ್ಟರೆ ನಾವೇ ಅದರ ದುಷ್ಫಲವನ್ನು ಅನುಭವಿಸಬೇಕಾಗುವುದೆಂಬುದು ಇದರಿಂದ ಸ್ಪಷ್ಟ.

ಹೀಗೆ ಭಗವಂತನನ್ನು ವಿಷವನ್ನು ಪರಿಹರಿಸುವವನೆಂಬ ಅರ್ಥದಲ್ಲಿ ವಿಷಮ ನಾಮದಿಂದ ಉಪಾಸನೆ ಮಾಡಿದೆವೆಂದರೆ ಭಗವಂತನು ನಮ್ಮ ಪಾಲಿಗೆ ವಿಷಯ - ಪದಾರ್ಥಗಳಲ್ಲಿರುವ ವಿಷವನ್ನು ಪರಿಹರಿಸುವನು. ಮಾತಿನಲ್ಲೋ, ಮನಸ್ಸಿನಲ್ಲೋ, ಆಹಾರ ವಸ್ತುಗಳಲ್ಲೋ ಇರಬಹುದಾದ ವಿಷವನ್ನು ಪರಿಹರಿಸಿ ಅನುಗ್ರಹಿಸುವನು.

**೭೫೨. ಶೂನ್ಯಃ – * ಸೊನ್ನೆಯಂತೆ ಪರಿಪೂರ್ಣನಾಗಿರುವವನು.**

*** ಅಯೋಗ್ಯರ ಸುಖವನ್ನು ಕಮ್ಮಿ ಮಾಡುವವನು.**

ವಿವರಣೆ : ಶೂನ್ಯಶಬ್ದ ಮೇಲ್ನೋಟಕ್ಕೆ ಅಶುಭ ಧರ್ಮವನ್ನು ತಿಳಿಸುತ್ತಿರುವಂತೆ ಕಾಣಿಸುವುದು. ಆದರೆ ಶೂನ್ಯನಾಮದಿಂದ ಅತ್ಯಂತ ಪೂಜ್ಯನಾಗಿರುವವನು ; ಪರಿಪೂರ್ಣನಾದವನು ಎಂಬ ಅರ್ಥವನ್ನು ಹೀಗೆ ಹೊರಡಿಸಬಹುದಾಗಿದೆ -

ಸುವರ್ಣ ಸೋನಾ ಎನಿಸಿದೆ. 'ಸೋನಾ'ವೇ ಶೂನ್ಯ ಆಗಿದೆ. ಸುವರ್ಣ ಲೋಹಗಳಲ್ಲೆಲ್ಲಾ ಅತ್ಯಂತ ಮೌಲ್ಯವುಳ್ಳದ್ದು. ಅಂತಹ ಸುವರ್ಣಶಬ್ದದಿಂದ ಹೊರಟ ಶೂನ್ಯ ಶಬ್ದದಿಂದ ಪ್ರತಿಪಾದ್ಯನಾಗಿರುವವನೂ ಸುವರ್ಣದಂತೆ ಅತ್ಯಂತ ಮೌಲ್ಯದವನು ಅತಿ ಪೂಜ್ಯನು.

ಲೋಕದಲ್ಲಿ ಕೆಲಸವೊಂದನ್ನು ಪ್ರಾರಂಭಿಸಿದ ವ್ಯಕ್ತಿ ಪ್ರಾರಂಭಿಸಿದಲ್ಲಿಗೇ ಆ ಕೆಲಸವನ್ನು ತಂದು ಮುಗಿಸಿದನೆಂದರೆ ಅವನು ಪೂರ್ಣನೆಂದು ಪರಿಗಣಿಸಲ್ಪಡುವನು. ಇದಕ್ಕೆ ವಿಪರೀತವಾಗಿ ನಡೆದುಕೊಳ್ಳುವವನು ಅಂದರೆ ಎಲ್ಲಿಂದಲೋ ಪ್ರಾರಂಭಿಸಿ ಮತ್ತೆಲ್ಲೋ ಕೊನೆಗೊಳಿಸುವವನು ಅಪೂರ್ಣ. ಉದಾಹರಣೆಗೆ ಪ್ರವಚನಕಾರರೊಬ್ಬರು ಯಾವುದೋ ವಿಷಯವನ್ನು ಪ್ರಾರಂಭಿಸಿ ಅದರ ಸಮರ್ಥನೆಗಾಗಿ ಒಂದು ಉದಾಹರಣೆಯನ್ನು ವಿವರಿಸುತ್ತ, ಆಗ ನೆನಪಿಗೆ ಬಂದ ಮತ್ತೊಂದು ಉದಾಹರಣೆಯನ್ನು ಪ್ರತಿಪಾದಿಸುತ್ತಾ, ಅದರಿಂದಾಗಿ ಜ್ಞಾಪಕಕ್ಕೆ ಬಂದ ಇನ್ನೊಂದು ದೃಷ್ಟಾಂತವನ್ನು ವರ್ಣಿಸುತ್ತ ಕೊನೆಗೆ ತಾವು ಯಾವ ವಿಷಯವನ್ನು ಪ್ರಾರಂಭಿಸಿ, ಅದರ ಪ್ರತಿಪಾದನೆಗಾಗಿ ಉದಾಹರಣೆಗಳನ್ನು ಕೊಡುತ್ತ ಬಂದುದೆಂಬುದನ್ನೇ ವಿವೇಚಿಸಿಕೊಳ್ಳಲಾರದೆ 'ನಾಳೆ ಸೇರೋಣ' ಎಂದು ಅಲ್ಲಿಗೇ ನಿಲ್ಲಿಸಿದರೆಂದರೆ ಅವರು ಪೂರ್ಣ ಪ್ರವಚನಕಾರರೆನಿಸಲಾರರು ತಾನೇ ? ಇದಕ್ಕೆ ಬದಲಾಗಿ ಪ್ರಾರಂಭಿಸಿದ ಪ್ರಮೇಯಕ್ಕೆ ಸಂಬಂಧಿಸಿ ಯಾವುದ್ಯಾವುದೋ

ದೃಷ್ಟಾಂತಗಳನ್ನು ಕೊಟ್ಟು, ಎಲ್ಲೆಲ್ಲಿಗೋ ಸಾಗಿದರೂ ಕೊನೆಗೆ ಪ್ರಾರಂಭಿಸಿದ ಪ್ರಮೇಯಕ್ಕೇ ಪೂರಕವಾಗುವಂತೆ ಪ್ರವಚನವನ್ನು ಕೊನೆಗೊಳಿಸಿದರೆಂದರೆ ಅವರು ಪೂರ್ಣ ಪ್ರವಚನಕಾರರೆನಿಸಬಲ್ಲರು.

ಆದುದರಿಂದ ಪ್ರಾರಂಭಿಸಿದಲ್ಲಿಗೇ ತಂದು ಕೊನೆಗೊಳಿಸುವುದು ಪೂರ್ಣತೆಯ ಸಂಕೇತ. ಸಂಖ್ಯೆಗಳಲ್ಲಿ ಒಂದು, ಎರಡು ಮುಂತಾದ ಯಾವ ಸಂಖ್ಯೆಯನ್ನು ಬರೆಯುವಾಗಲೂ ಪ್ರಾರಂಭವಾಗುವುದು ಒಂದುಕಡೆಯಿಂದ ಆದರೆ, ಕೊನೆಗೊಳ್ಳುವುದು ಮತ್ತೊಂದು ಕಡೆಯಲ್ಲಿ. ಆದರೆ ಸೊನ್ನೆಯ ಲಿಪಿ ಮಾತ್ರ ಎಲ್ಲಿಂದ ಪ್ರಾರಂಭವಾಗುವುದೋ ಅಲ್ಲಿಗೇ ಕೊನೆಗೊಳ್ಳುವುದು. ಆದುದರಿಂದ ಅಂತಹ ಪರಿಪೂರ್ಣತೆಯ ಸಂಕೇತವೆನಿಸಿರುವ ಲಿಪಿಯನ್ನು ಹೊಂದಿರುವ ಸೊನ್ನೆಯ ಶೂನ್ಯ ಎಂಬ ಹೆಸರು ಕೂಡಾ ಭಗವಂತನ ಪರಿಪೂರ್ಣ ವ್ಯಕ್ತಿತ್ವವನ್ನು ಸೂಚಿಸಿಕೊಡಬಲ್ಲದು. ಆದುದರಿಂದ ಶೂನ್ಯ ಎನ್ನುವುದಕ್ಕೆ ಪರಿಪೂರ್ಣ ವ್ಯಕ್ತಿತ್ವದವನು ಎಂಬುದು ಅರ್ಥ.

ನಿರ್ವಚನದ ಮೂಲಕ ಶೂನ್ಯ ಶಬ್ದದಿಂದ ಹೊರಡಿಸಬಹುದಾದ ಮತ್ತೊಂದು ಅರ್ಥ - ಶಂ ಊನಂ ಕುರುತೇ ಇತಿ ಶೂನ್ಯಃ ಸುಖವನ್ನು ಅನುಭವಿಸಲು ಅಯೋಗ್ಯರಾಗಿರುವವರ ಪಾಲಿನ ಸುಖವನ್ನು ಕಮ್ಮಿ ಮಾಡುವವನು.

ದೇವರ ಆರಾಧನೆಯಲ್ಲಿ ತೊಡಗಿದಾಗ ಯಾರಾದರೂ ಅದಕ್ಕೆ ಅಡ್ಡಿ ಮಾಡಲು ತೊಡಗಿದರೆಂದರೆ ದೇವರನ್ನು 'ಶೂನ್ಯ' ಹೆಸರಿನಿಂದ ಉಪಾಸನೆ ನಡೆಸೋಣ. ಆ ವ್ಯಕ್ತಿಗಳು ಯಾವ ದುಡ್ಡಿನ ಬಲದಿಂದಲೋ, ಜನ ಬಲದಿಂದಲೋ, ಅಧಿಕಾರ ಬಲದಿಂದಲೋ ನಮಗೆ ಅಡ್ಡಿ ಮಾಡುವರೋ ಅಂತಹ ಬಲವನ್ನೇ ಅವರಿಂದ ಕಸಿದುಕೊಂಡು ಅವರು ನಮಗೆ ಮುಂದೆ ಅಡ್ಡಿ ಮಾಡದಂತೆ ಅನುಗ್ರಹಿಸುವನು.

**೭೫೩. ಘೃತಾಶೀಃ – ಭಕ್ತರು ಭಕ್ತಿಯಿಂದ ಕೊಡುವ ತುಪ್ಪವನ್ನು ಅಥವಾ ನೀರನ್ನು ಸ್ವೀಕಾರ ಮಾಡುವವನು.**

ವಿವರಣೆ: 'ಘೃ ಸ್ಯಂದನೇ' - ಎಂಬ ಕ್ರಿಯಾಪದದಿಂದ ನಿಷ್ಪನ್ನವಾಗಿರುವ ಘೃತಶಬ್ದ ಹರಿಯುವ ಪದಾರ್ಥವನ್ನು ತಿಳಿಸುವುದು. ನೀರು ಹರಿಯುವ ಪದಾರ್ಥವಾದುದರಿಂದ ಘೃತ ಎನಿಸಿದೆ. ತುಪ್ಪವೂ ಹರಿಯುವ ವಸ್ತುವಾಗಿರುವುದರಿಂದಲೇ ಘೃತ ಎನಿಸುವುದು.

ಹೀಗೆ ಘೃತ ಶಬ್ದಕ್ಕೆ ತುಪ್ಪ ಎಂಬ ಅರ್ಥದಂತೆ ನೀರು ಎಂಬ ಅರ್ಥ

ಇರುವುದಾದರೂ ತುಪ್ಪ ಎಂಬ ಅರ್ಥವೇ ಪ್ರಸಿದ್ಧವಾಗಿರುವುದಕ್ಕೆ ಕಾರಣ ತುಪ್ಪ ಹರಿಯುವುದಷ್ಟೇ ಅಲ್ಲದೆ, ಹರಿತವಾದ ಬುದ್ಧಿಗೂ ಕಾರಣವಾಗಿದೆ ಎಂಬುದು. ಘೃತದ ಭಕ್ಷಣದಿಂದ ಬುದ್ಧಿ ತೀಕ್ಷ್ಣವಾಗುವುದು. ಬ್ರಾಹ್ಮಣರಲ್ಲಿ ಹೆಚ್ಚಾಗಿ ಬುದ್ಧಿ ಹರಿತವಾಗಿರುವುದಕ್ಕೆ ಇದೂ ಒಂದು ಕಾರಣ. ಹಿಂದೆ ಋಷಿಗಳು ಯಜ್ಞಯಾಗಾದಿಗಳನ್ನು ಮಾಡಿ, ಹೋಮಿಸಿ ಉಳಿದ ತುಪ್ಪವನ್ನು ಪ್ರಸಾದವಾಗಿ ಸ್ವೀಕರಿಸುತ್ತಿದ್ದರು. ಆದರಿಂದಾಗಿ ಅವರ ಬುದ್ಧಿ ಹರಿತವಾಗಿತ್ತು. ಅವರ ವಂಶದಲ್ಲಿ ಬಂದಿರುವ ಮುಂದಿನ ಬ್ರಾಹ್ಮಣರ ಬುದ್ಧಿಯೂ ಹರಿತವಾಗುತ್ತ ಬಂದಿರುವುದು. ಹೀಗೆ ಬುದ್ಧಿ ಹರಿತವಾಗುವುದಕ್ಕೆ ಪ್ರಯೋಜಕವೆನಿಸಿರುವ ತುಪ್ಪ ಮುಖ್ಯವಾಗಿ ಘೃತ ಎನಿಸಿರುವುದಾದರೂ ಭಗವಂತನಿಗೆ ತುಪ್ಪಗಿಂತಲೂ ಅಧಿಕ ಪ್ರಿಯವಾದ ಘೃತ ಎಂದರೆ ನೀರು. ಆದುದರಿಂದ ದೇವರಿಗೆ ತುಪ್ಪವನ್ನು ಸಮರ್ಪಿಸಿದರೂ ನೀರನ್ನು ಸಮರ್ಪಿಸದೆ ಇರಬಾರದು. ತುಪ್ಪ ಇಲ್ಲದಿದ್ದರೆ ನೀರನ್ನು ಮಾತ್ರ ಸಮರ್ಪಿಸಿದರೂ ಸಾಕು. ಪಾತ್ರೆಯಲ್ಲೋ, ಲೋಟದಲ್ಲೋ ಪೂರ್ಣವಾಗಿ ತುಂಬಿಸಿ ಅರ್ಪಿಸಬೇಕು. ನಾವು ದಿನವಿಡೀ ಕುಡಿಯಲು ಬಳಸುವ ನೀರನ್ನು ದೇವರಿಗೆ ಅರ್ಪಿಸಬೇಕು. ಭಕ್ತಿಯಿಂದ ನಾವು ಅರ್ಪಿಸಿದೆವೆಂದರೆ ಅವನು ಅದನ್ನು ಸ್ವೀಕರಿಸುವನು - **'ಘೃತಂ ಅಶ್ನಾತೀತಿ ಘೃತಾಶೀಃ.'** ಹೀಗೆ ಅವನಿಂದ ಕುಡಿದು ಉಳಿದ ಜಲವನ್ನು ಅವನ ಪ್ರಸಾದವಾಗಿ ನಾವು ಕುಡಿಯಲು ಉಪಯೋಗಿಸಿಕೊಳ್ಳಬೇಕು.

**೭೫೪. ಅಚಲಃ – ತನ್ನ ಇಚ್ಛೆ, ಮಾತುಗಳಿಗೆ ಬದ್ಧನಾಗಿ ದೃಢವಾಗಿ ನಿಲ್ಲುವವನು.**

**೭೫೫. ಚಲಃ – ತನ್ನ ಭಕ್ತರ ಪಾಲಿಗೆ ಚೆನ್ನಾಗಿ ಸ್ಪಂದಿಸುವವನು.**

**ವಿವರಣೆ:** 'ಅಚಲಃ' ಮತ್ತು 'ಚಲಃ' - ಎಂಬ ಈ ಎರಡು ನಾಮಗಳು ಮೇಲ್ನೋಟಕ್ಕೆ ಪರಸ್ಪರವಾಗಿ ವಿರುದ್ಧಾರ್ಥವನ್ನು ಹೇಳುವವುಗಳಂತೆ ಕಾಣುವವು. ಆದರೆ ಬೇರೆ ಬೇರೆ ವ್ಯಕ್ತಿಗಳ ಬಗ್ಗೆ ಬೇರೆ ಬೇರೆ ರೀತಿಯಾಗಿ ನಡೆದುಕೊಳ್ಳುವ ದೇವರ ಸ್ವಭಾವದ ಎರಡು ಮುಖಗಳನ್ನು ಇವು ತಿಳಿಸುತ್ತಿವೆಯಷ್ಟೇ.

ಅಚಲ ಎಂದು ಪರ್ವತಕ್ಕೆ ಹೆಸರಿದೆ. ಪರ್ವತ ಯಾವುದೇ ಬಿರುಗಾಳಿಗೆ ಕಂಪಿಸದೆ, ವಾಲದೆ ಸೆಟೆದು ನಿಂತಿರುವುದರಿಂದ ಅಚಲ ಎನಿಸಿದೆ. ಭಗವಂತನೂ ತಾನು ತಾಳಿದ ಸಂಕಲ್ಪ, ಆಡಿದ ಮಾತು, ಕೈಗೊಂಡ ನಿರ್ಧಾರ - ಇವುಗಳಿಗೆ ಸ್ವಲ್ಪವೂ ವಿಪರೀತವಾಗಿ ನಡೆದುಕೊಳ್ಳದೆ, ಅವುಗಳಿಗೆ ಅನುಗುಣವಾಗಿಯೇ ನಡೆದುಕೊಳ್ಳುವವನು. ಹೀಗೆ ಸಂಕಲ್ಪ, ಮಾತು, ನಿರ್ಧಾರಗಳಿಂದ ಎಂದೂ

ಹಿಂಜರಿಯದೆ, ಅವುಗಳಿಗೆ ಅನುಗುಣವಾಗಿ ದೃಢವಾಗಿ ನಿಲ್ಲುವುದರಿಂದ ಭಗವಂತ ಅಚಲ.

ಕೌರವರ ಜೊತೆಗೆ ಪಾಂಡವರ ಸಂಧಾನ ಆಗಬಾರದೆಂದು ನಿರ್ಧರಿಸಿಕೊಂಡು ಹಸ್ತಿನಾಪುರಕ್ಕೆ ತೆರಳಿದ್ದ ಕೃಷ್ಣ ಕೊನೆಯವರೆಗೂ ಆ ನಿರ್ಧಾರದಿಂದ ಚಲನಾಗಿಯೇ ಇಲ್ಲ.

ಯಾವುದಾದರೊಬ್ಬ ವ್ಯಕ್ತಿಗೆ ಈ ಜನ್ಮದಲ್ಲಿ ಫಲ ಕೊಡುವುದಿಲ್ಲ ಎಂದು ನಿರ್ಧಾರ ಮಾಡಿದ್ದನೆಂದರೆ ಆ ವ್ಯಕ್ತಿ ಏನೇನು ಮಾಡಿದರೂ ಆ ಫಲವನ್ನು ಹೊಂದಲು ಸಾಧ್ಯವೇ ಆಗಲಾರದು.

ಹೀಗೆ ಬೆಟ್ಟದಂತೆ ಅಚಲನಾಗಿರುವ ಭಗವಂತನನ್ನು ಒಲಿಸಿಕೊಳ್ಳುವುದಾದರೂ ಹೇಗೆ ? ಎಂದು ನಿರಾಶೆ ತಾಳಲು ಅವಕಾಶವಿಲ್ಲ - ಯಾಕೆಂದರೆ ಅವನು 'ಅಚಲ ' ಎನಿಸಿರುವಂತೆ ಚಲನೂ ಹೌದು. ತನ್ನ ಇಚ್ಛೆ, ಮಾತು, ನಿರ್ಧಾರಗಳಿಗೆ ಚಾಚೂ ತಪ್ಪದೆ ದೃಢವಾಗಿ ನಿಲ್ಲುವ ಪ್ರಯುಕ್ತ 'ಅಚಲ' ಎನಿಸುವ ಅವನು ಭಕ್ತರ ಪಾಲಿಗೆ ಕರಗುವ, ಸ್ಪಂದಿಸುವ ಸ್ವಭಾವದವನಾಗಿದ್ದು ಚಲನೂ ಹೌದು. ಭಕ್ತರ ಪಾಲಿಗೆ ಚಲ. ತನ್ನ ಅಚಲವಾದ ನಿರ್ಧಾರವನ್ನೇ ಸಡಿಲಿಸಿ, ಅಥವಾ ಪೂರ್ಣವಾಗಿ ಕೈಬಿಟ್ಟು ನಡೆದುಕೊಳ್ಳುತ್ತಿರುವನೋ ಎಂಬಂತೆ ಭಕ್ತರ ಪಾಲಿಗೆ ಶೀಘ್ರವಾಗಿ ಸ್ಪಂದಿಸುವನು. ಅವರು ಹಿಂದಿನ ಜನ್ಮಗಳಲ್ಲಿ ಮಾಡಿರುವ ಸಾಧನೆಗಳನ್ನು ಪರಿಗಣಿಸಿ ಹಿಂದಿನ ಜನ್ಮಗಳಲ್ಲಿ ಪೂರ್ಣಗೊಳಿಸಲು ಆಗದೆ ಉಳಿದಿದ್ದ ಸಾಧನೆಯ ಸ್ವಲ್ಪಾಂಶವನ್ನಷ್ಟೇ ಈ ಜನ್ಮದಲ್ಲಿ ಪೂರೈಸಿದ್ದರಿಂದ ಅದಕ್ಕೆ ಅವನು ಸ್ಪಂದಿಸುವನಷ್ಟೇ. ಹೊರತು ಯಾವ ಭಕ್ತರಿಗೂ ಸಾಧನಾನುಷ್ಠಾನವಿಲ್ಲದೆ ಫಲ ನೀಡಲಾರ.

ಆದರೂ ಭಕ್ತರ ಅಲ್ಪ ಶ್ರಮಕ್ಕಷ್ಟೇ ಸ್ಪಂದಿಸುವಂತೆ ಮೃದುವಾಗಿ ನಡೆದುಕೊಳ್ಳುವುದರಿಂದ ಅವನು 'ಚಲ'ನೂ ಆಗಿರುವನು.

ಹೀಗೆ 'ಅಚಲ' 'ಚಲ' - ಎಂಬುದಾಗಿ ಒಟ್ಟೊಟ್ಟಿಗೆ ಪಠಿತಗಳಾದ ಎರಡು ನಾಮಗಳು ದುರ್ಯೋಧನಾದಿಗಳ ಪಾಲಿಗೆ 'ಅಚಲ'ವಾಗಿ ನಡೆದುಕೊಂಡಿರುವ ಅವನ ಸ್ವಭಾವದ ಒಂದು ಮುಖವನ್ನೂ, ಭೀಮಾದಿ ಭಕ್ತರ ಪಾಲಿಗೆ ಹಾಗೂ ಭೀಷ್ಮರ ಪಾಲಿಗೆ 'ಚಲ'ವಾಗಿ ಬಹಳ ಮೃದುವಾಗಿ ನಡೆದುಕೊಂಡಿರುವ - ಮತ್ತೊಂದು ಮುಖವನ್ನೂ ಪ್ರತಿಪಾದಿಸುತ್ತಿವೆ. 'ವಜ್ರಾದಪಿ ಕಠೋರಾಣಿ ಮೃದೂನಿ ಕುಸುಮಾದಪಿ.....' - ಎಂದಿರುವಂತೆ ಅಭಕ್ತರ ಬಗ್ಗೆ ವಜ್ರಕ್ಕಿಂತಲೂ

ಕಠೋರನಾಗಿರುವ ದೇವರು ಭಕ್ತರ ಪಾಲಿಗೆ ಪುಷ್ಪಕ್ಕಿಂತಲೂ ಮೃದು ಎನಿಸಿರುವುದನ್ನು ಸಾರುತ್ತಿವೆ.

**ಅಮಾನೀ ಮಾನದೋ ಮಾನ್ಯೋ ಲೋಕಸ್ವಾಮೀ ತ್ರಿಲೋಕಧೃಕ್ |**
**ಸುಮೇಧಾ ಮೇಧಜೋ ಧನ್ಯಃ ಸತ್ಯಮೇಧಾ ಧರಾಧರಃ ||೮೦||**

**೭೫೬. ಅಮಾನೀ – ಯೋಗ್ಯರಿಗೆ ಅಹಂಕಾರ ಪಡಲು ಬೇಕಾದ ಸಂಪತ್ತುಗಳನ್ನು ಕೊಟ್ಟೂ, ಅವುಗಳಿಂದ ಅವರಿಗೆ ಅಹಂಕಾರ ಬರದಂತೆ ಮಾಡುವವನು.**

ವಿವರಣೆ: ಮಾನ ಎಂದರೆ ದರ್ಪ ; ಅಹಂಕಾರ ; ಮದ. ಎಂಟು ಬಗೆಯ ಮದಗಳಿವೆ ಎಂದು ಕನಕದಾಸರು ಪದ್ಯವೊಂದರಲ್ಲಿ ಉಲ್ಲೇಖಿಸಿರುವರು - ಅನ್ನಮದ, ಅರ್ಥಮದ, ಅಖಿಲ ವೈಭವದ ಮದ, ಮುನ್ನ ಪ್ರಾಯದ ಮದ, ರೂಪ ಮದವು ತನ್ನ ಸತ್ವ ಮದ, ಭ್ರಾತೃ ಪರವಶವಾದ ಮದ, ಇಂತೆನಗೆ ಇದಿರಿಲ್ಲ ಎಂಬ ಮದ - ಹೀಗೆ ಒಟ್ಟು ಎಂಟು ಬಗೆಯ ಮದಗಳು. ಇಂತಹ ಮದಗಳನ್ನು ಮೊದಲು ಕಳೆದುಕೊಳ್ಳಬೇಕೆಂದು ಕನಕದಾಸರು 'ಇಷ್ಟು ದಿನ ಈ ವೈಕುಂಠ....' ಎಂಬ ಹಾಡಲ್ಲಿ ತಿಳಿಸಿರುವರು -

ಎಂಟು ಏಳನು ಕಳೆದುದರಿಂದೆ
ಬಂಟರೈವರ ತುಳಿದುದರಿಂದೆ
ಕಂಟಕನೊಬ್ಬನ ತರಿದುದರಿಂದೆ
ಬಂಟನಾಗಿ ಬಂದೆನೋ ಶ್ರೀರಂಗಶಾಯಿ

ಶ್ರೀರಂಗಶಾಯಿಯ ಬಂಟನಾಗಿ ಬರಬೇಕೆಂದರೆ ಮೊದಲು ಎಂಟನ್ನು ಕಳೆಯಬೇಕು. ಅಂದರೆ ಅನ್ನಮದವೇ ಮುಂತಾದ ಎಂಟು ಮದಗಳನ್ನು ದೂರ ಮಾಡಬೇಕು.

ಆ ಮೇಲೆ ಏಳನ್ನು ಕಳೆದುಕೊಳ್ಳಬೇಕು. ಎಲುಬು, ತ್ವಕ್ ಮುಂತಾದ ಏಳು ಧಾತುಗಳಿಂದ ಕೂಡಿದ ಶರೀರವನ್ನು ಕಳೆದುಕೊಳ್ಳಬೇಕು. ಅಂದರೆ ಶರೀರದ ಕುರಿತಾದ ಅಭಿಮಾನವನ್ನು ಕಳಕೊಂಡಾಗ ಶರೀರವನ್ನು ಕಳೆದುಕೊಂಡಂತೆಯೇ.

ಬಂಟರೈವರೆಂದರೆ ಕಣ್ಣು, ಕಿವಿ, ಬಾಯಿ, ಮೂಗು ಹಾಗೂ ತ್ವಗಿಂದ್ರಿಯ ಎಂಬ ಐದು ಜ್ಞಾನೇಂದ್ರಿಯಗಳು. ಇವರನ್ನು ತುಳಿಯಬೇಕು. ಅಂದರೆ

ನಿಗ್ರಹಿಸಬೇಕು. ಕಂಟಕನೊಬ್ಬನೆಂದರೆ ಮನಸ್ಸು. ಅದನ್ನು

ಹದಗೊಳಿಸಬೇಕು. ಹೀಗಾದಾಗ ಶ್ರೀರಂಗಶಾಯಿಯ ಬಂಟನಾಗಿ ಬರಬಹುದು.

ಅಹಂಕಾರ ಪಡುವುದಕ್ಕೆ , ಮದ ತಾಳುವುದಕ್ಕೆ ಕಾರಣವಾದವು ಅನ್ನ, ಅರ್ಥ ಮುಂತಾದವುಗಳು. ಯಾರಲ್ಲಿ ಆ ಅಷ್ಟು ಸಂಪತ್ತುಗಳಿವೆಯೋ ಅಂತಹವನಲ್ಲಿ ಅವುಗಳ ಜೊತೆಗೇ ಅಹಂಕಾರವೂ ಬರುವುದು ಸ್ವಾಭಾವಿಕ. ಹೀಗಿದ್ದರೂ ವ್ಯಕ್ತಿಗಳು ಒಳ್ಳೆಯವರೆಂದಾದರೆ ಭಗವಂತನು ಈ ಅಷ್ಟು ಐಶ್ವರ್ಯಗಳನ್ನು ಕೊಟ್ಟೂ, ಅವುಗಳ ಜೊತೆಗೆ ಅಹಂಕಾರ ಬರದಂತೆ ಅನುಗ್ರಹಿಸುವನು. ಭಗವಂತನೇ ವಾಮನ ರೂಪದಿಂದ ಚತುರ್ಮುಖನ ಎದುರು ಹೀಗೆ ಉದ್ಘೋಷಿಸಿರುವನು-

**ಜನ್ಮಕರ್ಮ ವಯೋರೂಪವಿದ್ಯೈಶ್ವರ್ಯಧನಾದಿಭಿಃ |**
**ಯದ್ಯಸ್ಯ ನ ಭವೇತ್ ಸ್ತಂಭಸ್ತತ್ರಾಯಂ ಮದನುಗ್ರಹಃ ||**

ಅಹಂಕಾರಕ್ಕೆ ಕಾರಣಗಳೆನಿಸುವ ಸತ್ಕುಲ ಪ್ರಸೂತತ್ವ, ಭಾರೀ ಸಾಧನೆಗಳು, ಯೌವನದ ವಯಸ್ಸು, ಆಕರ್ಷಕ ಸೌಂದರ್ಯ, ವಿದ್ಯೆ, ಅಧಿಕಾರ, ಸಂಪತ್ತು ಮುಂತಾದವುಗಳಿದ್ದೂ, ಅವುಗಳಿಂದಾಗಿ ಅಹಂಕಾರಕ್ಕೆ ಒಳಗಾಗುವುದಿಲ್ಲ ಎಂದರೆ ಅಲ್ಲಿ ನನ್ನ ಅನುಗ್ರಹ ಇದೆ ಎಂದೇ ಅರ್ಥ. ಅಂದರೆ ನನ್ನ ಅನುಗ್ರಹದ ಫಲವಾಗಿಯೇ ಅಹಂಕಾರ ಬಾರದಿರುವುದು.

ವಾಮನ ರೂಪಿ ಪರಮಾತ್ಮನ ಈ ಸಂದೇಶದ ಹಿನ್ನೆಲೆಯಲ್ಲಿ ಭೀಷ್ಮರು ಕೃಷ್ಣನ್ನು 'ಅಮಾನೀ'- ಎಂದು ಸ್ತುತಿಸುವರು.

ಮಾನಃ ಅಹಂಕಾರಃ ಅಸ್ಯಾಸ್ತೀತಿ ಮಾನೀ | ಸಂಪತ್ತು ಮುಂತಾದವುಗಳಿಂದ ಅಹಂಕಾರ ಪಡುವವನು ಮಾನೀ, ಮಾನೀ ನ ಭವತಿ ಯಸ್ಮಾತ್ ಯಸ್ಯಾನುಗ್ರಹಾತ್ ಸಃ ಅಮಾನೀ - ಯಾರ ಅನುಗ್ರಹದಿಂದಾಗಿ ಐಶ್ವರ್ಯಾದಿಗಳಿದ್ದರೂ ಆ ಪ್ರಯುಕ್ತ ಅಹಂಕಾರಗ್ರಸ್ತನಾಗುವುದಿಲ್ಲವೋ ಅಂತಹ ಪರಮಾತ್ಮ ಅಮಾನೀ ಎನಿಸುವನು.

ಭಗವಂತನನ್ನು 'ಅಮಾನೀ' - ಎಂದು ಈ ಅರ್ಥದಲ್ಲಿ ಉಪಾಸನೆ ನಡೆಸಿದೆವೆಂದರೆ ಅಹಂಕಾರ ಪಡುವುದಕ್ಕೆ ಬೇಕಾದ ಹಣ, ವಿದ್ಯೆ, ಅಧಿಕಾರ ಇತ್ಯಾದಿಗಳನ್ನು ಕೊಟ್ಟೂ ಆ ಪ್ರಯುಕ್ತ ಮಾನಿಗಳೆನಿಸದಂತೆ ಅಹಂಕಾರಗ್ರಸ್ತರಾಗದಂತೆ ಭಗವಂತನು ಅನುಗ್ರಹಿಸುವನು.

**೭೫೭. ಮಾನದಃ– ಸಮಾಜಕ್ಕೆ ಲಕ್ಷ್ಮೀದೇವಿಯನ್ನು ತಾಯಿಯನ್ನಾಗಿಯೂ, ಮುಖ್ಯಪ್ರಾಣನನ್ನು ಗುರುವನ್ನಾಗಿಯೂ ಕೊಟ್ಟಿರುವವನು.**

ವಿವರಣೆ : ಮಾ+ಅನ+ದ ಮೂರು ಶಬ್ದಗಳು ಸೇರಿ 'ಮಾನದ' ಎಂಬ ಹೆಸರು ರೂಪುಗೊಂಡಿದೆ. ಮಾ ಎಂಬುದಕ್ಕೆ ಸಂಸ್ಕೃತದಲ್ಲಾಗಲೀ, ಹಿಂದಿಯಲ್ಲಾಗಲೀ ತಾಯಿ

ಎಂದರ್ಥ. ಅನ ಎಂದರೆ ಚೇಷ್ಟೆ. ಚೇಷ್ಟೆಯನ್ನು ನಡೆಯುವ ಪ್ರಾಣದೇವ. ಈ ಇಬ್ಬರನ್ನು ಸಮಾಜಕ್ಕೆ ಕೊಟ್ಟ ಭಗವಂತ 'ಮಾನದ.' ಮಾನೌ ದದಾತೀತಿ ಮಾನದಃ ಯಾರು ತಾಯಿ ? ಸಂಸಾರವೆಂಬಂತ ಭಾಗ್ಯವಿರಲಿ ಎಂಬ ಹಾಡಿನಲ್ಲಿ ದಾಸರಾಯರು - 'ತಂದೆ ನೀನೇ ಕೃಷ್ಣ ತಾಯಿ ಇಂದಿರಾದೇವಿ....' ಎಂಬುದಾಗಿ ಲಕ್ಷ್ಮೀದೇವಿಯನ್ನು ತಾಯಿಯನ್ನಾಗಿ ಕರೆದಿರುವರು. ಅಂತಹ ಲಕ್ಷ್ಮೀದೇವಿಯನ್ನೂ, ಪ್ರಾಣದೇವನನ್ನೂ ಭಗವಂತ ಸಮಾಜಕ್ಕೆ ಕೊಟ್ಟಿರುವನು.

ಅವರಿಬ್ಬರನ್ನು ಹೇಗೆ, ಏನೂಂತ ಕೊಟ್ಟಿರುವನು ? ಲಕ್ಷ್ಮೀದೇವಿಯನ್ನು ತಾಯಿ ಎಂದು ಉಪಾಸನೆ ಮಾಡಬೇಕೆಂದೂ, ಮುಖ್ಯಪ್ರಾಣನನ್ನು ಗುರು ಎಂದು ಉಪಾಸನೆ ಮಾಡಬೇಕೆಂದೂ ಕೊಟ್ಟಿರುವನು. ಹೇಗೆ ಶಾಲೆಯಲ್ಲಿ ಮುಖ್ಯೋಪಾಧ್ಯಾಯರು ವ್ಯಕ್ತಿಯೊಬ್ಬನನ್ನು ಗುರುವನ್ನಾಗಿ ತರಗತಿಯೊಂದಕ್ಕೆ ನಿಯೋಜಿಸಿದರೆಂದರೆ ಆ ತರಗತಿಯ ವಿದ್ಯಾರ್ಥಿಗಳೆಲ್ಲ ಆ ವ್ಯಕ್ತಿಯನ್ನು ಗುರು ಎಂದು ಒಪ್ಪಿಕೊಳ್ಳಲೇ ಬೇಕೋ ಹಾಗೆ ದೇವರು ಮುಖ್ಯಪ್ರಾಣನನ್ನು ಗುರುವನ್ನಾಗಿ ಕೊಟ್ಟಿರುವನೆಂದ ಮೇಲೆ ಎಲ್ಲರೂ ಅವನನ್ನು ಗುರುವನ್ನಾಗಿ ಒಪ್ಪಿಕೊಳ್ಳಲೇಬೇಕು.

ಹೀಗೆ ತಾಯಿ ಹಾಗೂ ಗುರುಗಳನ್ನು ಕೊಟ್ಟ ಮೇಲೆ ಗುರುಗಳು ತಾಯಿಯ ಮೂಲಕ ತಂದೆಯನ್ನು ಸಮಾಜಕ್ಕೆ ಪರಿಚಯಿಸದೆ ಇರುವುದಿಲ್ಲ. ಆದುದರಿಂದ ದೇವರು ತನ್ನನ್ನು ಸಮಾಜಕ್ಕೆ ತಂದೆಯನ್ನಾಗಿ ಕೊಟ್ಟಿರುವೆನೆಂದು ಪ್ರತ್ಯೇಕವಾಗಿ ಹೇಳುವ ಆವಶ್ಯಕತೆ ಇಲ್ಲ.

**೭೫೮. ಮಾನ್ಯಃ – ಯಾರು ಮತ್ತೊಬ್ಬರಿಂದಾಗಿ ಚಟುವಟಿಕೆ ನಡೆಸಲು ಯೋಗ್ಯನಲ್ಲವೋ ಅಂತಹವನು.**

**ವಿವರಣೆ :** ಮಾ+ಅನ್ಯ ಮಾನ್ಯಃ ಅನಿತುಂ ಚೇಷ್ಟಿತುಂ ಯೋಗ್ಯಃ ಅನ್ಯಃ ಮಾ ಅನ್ಯಃ ಮಾನ್ಯಃ - ನಾವೆಲ್ಲ ಯಾವುದಾದರೊಂದು ಚಟುವಟಿಕೆ ನಡೆಸಬೇಕಾದರೂ ಮತ್ತೊಬ್ಬರ ಪ್ರೇರಣೆ, ಸ್ಫೂರ್ತಿ ಇರಬೇಕು. ನಾವಾಗಿಯೇ ಸ್ವತಂತ್ರವಾಗಿ, ಸ್ವೇಚ್ಛೆಯಿಂದ ಏನನ್ನೂ ಮಾಡುವುದೆಂದಿಲ್ಲ. ಆದುದರಿಂದಲೇ ನಾವೆಲ್ಲ 'ಅನ್ಯ'ರು. ಮತ್ತೊಬ್ಬರ ಪ್ರಭಾವ, ಪ್ರೇರಣೆಗೊಳಗಾಗಿ ಚಟುವಟಿಕೆ ನಡೆಸಲು ಯೋಗ್ಯರಾಗಿರುವವರು. ಭಗವಂತನಾದರೆ ಬೇರೆ ಯಾರ ಪ್ರೇರಣೆಗೂ ಒಳಗಾಗದೆ ಸ್ವತಂತ್ರನಾಗಿಯೇ ಸ್ವೇಚ್ಛೆಯಿಂದಲೇ ತನ್ನ ಪ್ರತಿಯೊಂದು ಚಟುವಟಿಕೆಯನ್ನೂ ನಡೆಸುವನು. ಆದುದರಿಂದ ಅವನು ನಮ್ಮಂತೆ ಅನ್ಯ - ಮತ್ತೊಬ್ಬರ ಪ್ರೇರಣೆಗೊಳಗಾಗಿ ಚಟುವಟಿಕೆ ನಡೆಸುವವನು ಅಲ್ಲ. ಆದುದರಿಂದ ಮಾನ್ಯ.

ಮಾನ್ಯತೆ ದೊರಕಬೇಕೆಂದರೆ ಸ್ವಂತಿಕೆ ಬೇಕು - ಎಂದು ಇದರಿಂದ ಸೂಚಿತ.

ವೇದಿಕೆಯಲ್ಲಿ ಕುಳಿತಿರುವ ಕೆಲವು ಮಹನೀಯರನ್ನು ‘ಮಾನ್ಯರೇ’ - ಎಂದು ಸಂಬೋಧಿಸುವುದು ಈ ಅರ್ಥದಲ್ಲಿಯೇ ಉಚಿತವೆನಿಸುವುದು. ಅವರು ಬೇರೆ ಯಾರಿಗೂ ಬೆಲೆ ಕೊಡದೆ ತಮಗೆ ಖುಷಿ ಬಂದಂತೆ ಬರ್ತಾರೆ ; ಹೋಗ್ತಾರೆ....... ಎಂಬುದಾಗಿ.

‘ಅಮಾನೀ ಮಾನದೋ ಮಾನ್ಯಃ’ - ಈ ಮೂರು ನಾಮಗಳು ಸೇರಿ ಸಮಾಜಕ್ಕೆ ಒಂದು ನೀತಿಯನ್ನು ಸೂಚಿಸುತ್ತಿವೆ. ಯಾರು ತಾನು ‘ಅಮಾನೀ’ ಆಗಿದ್ದು ಅಂದರೆ ತನಗೆ ಗೌರವ, ಸಮ್ಮಾನ ಬೇಕು ಎಂದು ಅಪೇಕ್ಷೆ ಪಡದೆ ‘ಮಾನದಃ’ ಉಳಿದವರಿಗೆ ಗೌರವವನ್ನು, ಸಮ್ಮಾನವನ್ನು ನೀಡುವನೋ ಅವನು ‘ಮಾನ್ಯಃ’ ಸಮಾಜದಲ್ಲಿ ಮಾನ್ಯತೆಗೆ, ಗೌರವಕ್ಕೆ ಪಾತ್ರನಾಗುವನು. ಅಂದರೆ ಸಮಾಜದಲ್ಲಿ ಮಾನ್ಯತೆಗೆ ಪಾತ್ರನಾಗಬೇಕೆಂದರೆ ತಾನು ಯಾವುದೇ ಬಗೆಯ ಸಮ್ಮಾನವನ್ನು, ಗೌರವವನ್ನು ಅಪೇಕ್ಷಿಸದೆ, ಉಳಿದ ಒಳ್ಳೆಯ ವ್ಯಕ್ತಿಗಳನ್ನು ಸಮ್ಮಾನಿಸುವ, ಗೌರವಿಸುವ ಪ್ರವೃತ್ತಿಯನ್ನು ಅಳವಡಿಸಿಕೊಂಡಿರಬೇಕು.

**೭೫೯. ಲೋಕಸ್ವಾಮೀ – ಲೋಕಕ್ಕೆ ಒಡೆಯ.**

ವಿವರಣೆ : ಯಾರು ‘ಮಾನ್ಯ’ ಆಗಿರುವನೋ ಅಂದರೆ ತಾನು ಮತ್ತೊಬ್ಬರ ಇಚ್ಛೆಯಂತೆ, ಪ್ರೇರಣೆಯಂತೆ ನಡೆದುಕೊಳ್ಳದೆ, ಸ್ವೇಚ್ಛಾನುಸಾರವಾಗಿಯೇ ನಡೆದುಕೊಳ್ಳುವನೋ ಅವನು ‘ಸ್ವಾಮೀ’ ಎನಿಸುವನು.

ಹೀಗಿರುವುದರಿಂದಲೇ ದೇವರು ಲೋಕಸ್ವಾಮೀ. ಲೋಕದಲ್ಲಿ ಯಾರು ಹೇಳಿದಂತೆಯೂ ತಾನು ನಡೆದುಕೊಳ್ಳುವುದಿಲ್ಲ, ಬದಲಾಗಿ, ಸಮಸ್ತಲೋಕ ಅವನು ಹೇಳಿದಂತೆ ನಡೆದುಕೊಳ್ಳುವುದು. ಆದುದರಿಂದ ದೇವರು ಲೋಕಸ್ವಾಮಿ. ನಾವು ಪರಂಪರೆಯಿಂದ ಬಂದದ್ದರಿಂದಷ್ಟೇ ‘ಸ್ವಾಮಿಗಳು’ ಎಂದೆನಿಸುವೆವು. ಆದರೆ ನಿಜವಾಗಿ ನಾವು ಸ್ವಾಮಿಗಳಾಗ ಬೇಕಾದರೆ ಮೊದಲು ನಮ್ಮ ಕಣ್ಣು, ಕಿವಿ, ಮನಸ್ಸು - ಮುಂತಾದ ಇಂದ್ರಿಯಗಳು ನಾವು ಹೇಳಿದಂತೆ ಕೇಳಬೇಕು. ಹಾಗೆಯೇ ನಮ್ಮ ಪರಿವಾರದವರು ನಾವು ಹೇಳಿದಂತೆ ಕೇಳಬೇಕು.

ಆದ್ದರಿಂದ ದೇವರೇ ಮುಖ್ಯವಾಗಿ ಸ್ವಾಮಿ, ಲೋಕಸ್ವಾಮೀ.

**೭೬೦. ತ್ರಿಲೋಕಧೃಕ್ – ಪ್ರತಿಯೊಬ್ಬರ ಶರೀರದಲ್ಲಿ ಬಲಗಣ್ಣು, ಮನಸ್ಸು ಹಾಗೂ ಹೃದಯಾಕಾಶ ಈ ಮೂರು ಆಶ್ರಯಗಳಲ್ಲಿದ್ದುಕೊಂಡು ಶರೀರವನ್ನು**

**ಧರಿಸಿರುವವನು.**

ವಿವರಣೆ : 'ಲೋಕಸ್ವಾಮಿ'- ನಾಮದಿಂದ ಸಮಗ್ರ ಲೋಕಕ್ಕೆ ಅಧಿಪತಿಯಾಗಿರುವನೆಂಬುದನ್ನು ಕಂಡಿದ್ದೇವೆ. ಆದ್ದರಿಂದ 'ತ್ರಿಲೋಕಧೃಕ್' - ಎಂಬ ನಾಮವನ್ನು ನಮ್ಮ ಪಿಂಡಾಂಡಕ್ಕೆ, ದೇಹಕ್ಕೆ ಸಂಬಂಧಿಸಿದಂತೆ ಅರ್ಥೈಸೋಣ. ನಮ್ಮ ಪ್ರತಿಯೊಬ್ಬರ ಶರೀರದಲ್ಲೂ ದೇವರು ಮೂರು ಜಾಗಗಳನ್ನು ಆಯ್ಕೆ ಮಾಡಿದ್ದಾನೆ.

**'ದಕ್ಷಿಣಾಕ್ಷಿಮುಖೇ ವಿಶ್ವಃ'** - ಎಂದಿರುವಂತೆ ಬಲಗಣ್ಣ ತುದಿಯಲ್ಲಿ ವಿಶ್ವನಾಮಕನಾಗಿ ಇರುವನು. **'ಮನಸ್ಯ್ಯಂತಸ್ತು ತೈಜಸಃ'** - ಮನಸ್ಸಿನ ಒಳಗೆ ತೈಜಸನಾಮಕ ಮತ್ತೊಂದು ರೂಪದಿಂದ ಇರುವನು. 'ಆಕಾಶೇಚ ಹೃದಿ ಪ್ರಾಜ್ಞಃ .....' ಹೃದಯದಲ್ಲಿ ಇರುವ ಆಕಾಶದಲ್ಲಿ ಪ್ರಾಜ್ಞನಾಮಕ ಇನ್ನೊಂದು ರೂಪದಿಂದ ಇರುವನು.

ಹೀಗೆ ಪ್ರತಿಯೊಬ್ಬರ ಶರೀರದಲ್ಲಿ ಬಲಗಣ್ಣು, ಮನಸ್ಸು, ಹಾಗೂ ಹೃದಯಾಕಾಶ ಎಂಬ ಮೂರು ಲೋಕಗಳನ್ನು, ಆಶ್ರಯಗಳನ್ನು ಧರಿಸಿರುವವನು ತ್ರಿಲೋಕಧೃಕ್.

ಭಗವಂತ ವಿಶ್ವನಾಮಕನಾಗಿ ಎಲ್ಲರ ಬಲಗಣ್ಣಿನಲ್ಲಿ ಇರುವನು. ಅಲ್ಲಿಯೇ ಜೀವನು ಇರುವನು. ಅಲ್ಲಿರುವ ಜೀವನಿಗೆ ವಿಶ್ವನು ವಿಶ್ವದ ಎಚ್ಚರವನ್ನು ನೀಡುತ್ತಿರುತ್ತಾನೆ. ಅಲ್ಲಿಂದ ಜೀವ ಮೆಲ್ಲನೆ ಹೊರಟು ಮನಸ್ಸಿನ ಕಡೆಗೆ ಸಾಗಿದನೆಂದರೆ ತೂಕಡಿಸಲು ಪ್ರಾರಂಭಿಸುವನು. ಉಪನ್ಯಾಸಕರು ಊಹಿಸುತ್ತಾರೆ. ವಿಶ್ವ ಜೀವನನ್ನು ಕರಕೊಂಡು ತೈಜಸನ ಬಳಿ ಸಾಗುತ್ತಿದ್ದಾನೆ. ಅಲ್ಲಿಗೆ ತಲುಪುವ ಮುಂಚೆ ಉಪನ್ಯಾಸ ಮುಗಿಸಿಬಿಡಬೇಕು. ಇಲ್ಲಾಂದ್ರೆ ಇಲ್ಲಿಯೇ ಗೊರಕೆ ಹೊಡೆಯಲು ಪ್ರಾರಂಭಿಸುವನು ಎಂದು. ಜೀವನು ವಿಶ್ವನ ಜೊತೆಗೆ ಕಣ್ಣಲ್ಲಿ ಇರುವುದರಿಂದಲೇ 'ಕಣ್ಣಿಗೆ ಕೈ ಹಾಕಿ ಮಾತನಾಡುವುದು' 'ಕಣ್ಣಲ್ಲಿ ಸ್ವಲ್ಪವೂ ರಕ್ತ ಇಲ್ಲವೇ ?' - ಮುಂತಾದ ವ್ಯವಹಾರಗಳು ಬಂದಿವೆ.

ಹೀಗೆ ಭಗವಂತನು ತನ್ನ ವಿಶ್ವ, ತೈಜಸ, ಪ್ರಾಜ್ಞ ರೂಪಗಳಿಂದ ಪ್ರತಿಯೊಬ್ಬರ ಶರೀರದ ಬಲಗಣ್ಣು, ಮನಸ್ಸು ಹಾಗೂ ಹೃದಯಾಕಾಶ ಈ ಮೂರನ್ನು ಆಶ್ರಯಿಸಿಕೊಂಡು ಎಚ್ಚರಿಕೆ, ಕನಸು, ನಿದ್ರೆ ಈ ಮೂರು ಅವಸ್ಥೆಗಳನ್ನು ನಿಯಂತ್ರಿಸುವ ಮೂಲಕ ಶರೀರವನ್ನು ಧರಿಸುತ್ತಿರುವನು. ಆದ್ದರಿಂದಲೇ 'ತ್ರಿಲೋಕಧೃಕ್'

**೭೬೧. ಸುಮೇಧಾಃ – ಬುದ್ಧಿಯಲ್ಲಿ ಒಳ್ಳೆಯ ಧಾರಣಾಸಾಮರ್ಥ್ಯವನ್ನು ಹೊಂದಿರುವವನು.**

ವಿವರಣೆ : ‘ಧೀರ್ಧಾರಣಾವತೀ ಮೇಧಾ.....’ ಎಂದಿರುವಂತೆ ತಿಳಿದದ್ದನ್ನು ಬುದ್ಧಿಯಲ್ಲಿ ಧಾರಣೆ ಮಾಡುವ ಸಾಮರ್ಥ್ಯ ಮೇಧಾ ಎನಿಸುವುದು. ಹೇಳಿದ್ದನ್ನು ಕೇಳಿ ಅರ್ಥ ಮಾಡಿಕೊಳ್ಳುವುದು ಒಂದು ಅಂಶವಾದರೆ, ಅರ್ಥ ಮಾಡಿಕೊಂಡದ್ದನ್ನು ಮರೆತು ಬಿಡದೆ ಬುದ್ಧಿಯಲ್ಲಿ ಧಾರಣೆ ಮಾಡಿಕೊಳ್ಳುವುದು ಮತ್ತೊಂದು ಅಂಶ.

ನೀವು ನಮ್ಮ ಉಪನ್ಯಾಸಗಳನ್ನು ಕೇಳಿ ಮರೆತು ಬಿಡಬಾರದು. ನಿಮ್ಮ ನಿಮ್ಮ ಬುದ್ಧಿಯಲ್ಲಿ ಆ ವಿಷಯಗಳನ್ನು ಧರಿಸಿಕೊಳ್ಳಬೇಕು. ಆ ಧಾರಣಾಸಾಮರ್ಥ್ಯವೇ ಮೇಧಾ ಎನಿಸುವುದು.

ಭಗವಂತನಲ್ಲಾದರೂ ಈ ಬಗೆಯ ಧಾರಣಾಸಾಮರ್ಥ್ಯ ಪರಿಪೂರ್ಣ ಪ್ರಮಾಣದಲ್ಲಿ ಇರುವುದರಿಂದ ಅವನು ‘ಸುಮೇಧಾಃ’ - ಒಳ್ಳೆಯ ಸಾಮರ್ಥ್ಯ ಉಳ್ಳವನು.

ಕರ್ಮ ಸಿದ್ಧಾಂತದ ಪ್ರಕಾರ ಹಿಂದಿನ ಯಾವುದ್ಯಾವುದೋ ಜನ್ಮದಲ್ಲಿ ಮಾಡಿದ ಪುಣ್ಯಕ್ಕೋ ಪಾಪಕ್ಕೋ ಮುಂದೆ ಐವತ್ತು ಅರವತ್ತು ಜನ್ಮಗಳ ಬಳಿಕ ಫಲ ದೊರಕಬೇಕೆಂದರೆ ಅಲ್ಲಿ ಕರ್ಮಾಧ್ಯಕ್ಷನಾದ ಭಗವಂತನ ‘ಮೇಧಾ’ದ ಪಾತ್ರವೇ ಪ್ರಮುಖ.

ರಸ್ತೆಯಲ್ಲಿ ಹೋಗುತ್ತಿರುವಾಗ ಇದ್ದಕ್ಕಿದ್ದಂತೆ ಒಂದು ವಾಹನ ಬಂದು ನಮ್ಮನ್ನು ಗುದ್ದುವುದು. ಸಾಕಷ್ಟು ಹಾನಿಗೊಳಗಾದ ನಾವು ‘ನಾನು ಈ ಜನ್ಮದಲ್ಲಿ ಯಾರಿಗೂ ಏನೂ ಹಾನಿ ಮಾಡಿಲ್ಲ. ಆದರೂ ಯಾಕೆ ಹೀಗೆ ಆಯಿತು ?’ ಎಂದು ಗೋಗರೆಯುವೆವು. ಆದರೆ ಐವತ್ತು ಅರವತ್ತು ಜನ್ಮಗಳ ಹಿಂದಿನ ಯಾವುದೋ ಒಂದು ಜನ್ಮದಲ್ಲಿ ನಾವು ಇನ್ನಾರಿಗೋ ಘಾಗೆ ಹೊಡೆದಿರುತ್ತೇವೆ. ನಮ್ಮ ಆ ಕರ್ಮವನ್ನು ನೆನಪಿನಲ್ಲಿಟ್ಟುಕೊಂಡು ಅದಕ್ಕೆ ಫಲರೂಪವಾಗಿ ಭಗವಂತ ಈ ಜನ್ಮದಲ್ಲಿ ನಮ್ಮನ್ನು ಅಪಘಾತಕ್ಕೆ ಒಳಪಡಿಸುತ್ತಾನೆ. ಅವನ ಮೇಧಾಸಾಮರ್ಥ್ಯದ ವೈಭವ ಹೀಗೆ ಒಬ್ಬಿಬ್ಬರದ್ದಲ್ಲ. ಅನಂತಾನಂತ ಜೀವರಾಶಿಗಳ ಕರ್ಮಗಳನ್ನು ನೆನಪಿನಲ್ಲಿಟ್ಟುಕೊಂಡು ಅವುಗಳಿಗೆ ಫಲ ಕೊಡುವವನು ಅವನು.

ಇಂತಹ ಮೇಧಾ ಶಕ್ತಿ ಉಳ್ಳದ್ದರಿಂದ ಭಗವಂತ ‘ಸುಮೇಧಾಃ’ ಎನಿಸುವನು.

ಭಗವಂತನನ್ನು ‘ಸುಮೇಧಾಃ’ - ಎಂಬ ನಾಮದಿಂದ ಉತ್ತಮವಾದ ಮೇಧಾ

ಶಕ್ತಿ ಉಳ್ಳವನನ್ನಾಗಿ ಉಪಾಸನೆ ಮಾಡಿದೆವೆಂದರೆ ನಮಗೂ ಕೇಳಿದ್ದನ್ನೆಲ್ಲ ನೆನಪಿನಲ್ಲಿಟ್ಟುಕೊಳ್ಳಲು ಬೇಕಾದ ಧಾರಣಾಶಕ್ತಿಯನ್ನು ಭಗವಂತನು ಅನುಗ್ರಹಿಸುವನು.

**೭೬೨. ಮೇಧಜಃ – ಯಜ್ಞಗಳಲ್ಲಿ ಕಾಣಿಸಿಕೊಳ್ಳುವವನು.**

**ವಿವರಣೆ:** ಅಗ್ನಿಕುಂಡದಲ್ಲಿ ನಡೆಸುವ ಅಗ್ನಿಮುಖದ ಆರಾಧನೆಯಷ್ಟೇ ಯಜ್ಞವಲ್ಲ. ದೇವರ ಪ್ರೀತಿಗಾಗಿ ನಡೆಸುವ ಪ್ರತಿಯೊಂದು ಚಟುವಟಿಕೆಯೂ ಯಜ್ಞ ಎನಿಸಬಲ್ಲದು. 'ಜ್ಞಾನಯಜ್ಞ' 'ಭೋಜನಯಜ್ಞ' ಹೀಗೆ ನಮ್ಮ ದೈನಂದಿನ ಪ್ರತಿಯೊಂದು ಚಟುವಟಿಕೆಯೂ ಯಜ್ಞ ಎನಿಸಬಲ್ಲದು.

ನಮಗೆ ಅಗ್ನಿಮುಖದ ಆರಾಧನೆಗೆ ಬೇಕಾದ ಮಾಹಿತಿ ಇಲ್ಲ ಎಂದರೆ ಪ್ರತಿನಿತ್ಯ ರಾಜಾಂಗಣದಲ್ಲಿ ನಡೆಯುವ 'ಜ್ಞಾನಯಜ್ಞ'ದಲ್ಲಿ ಪಾಲ್ಗೊಳ್ಳೋಣ. ನಮ್ಮ ಮನಸ್ಸಿನ ಅಗ್ನಿಕುಂಡದಲ್ಲಿ ಭಗವದ್ವಿಷಯಕ ವಿಚಾರಗಳನ್ನು ಶ್ರೋತ್ರೇಂದ್ರಿಯದ ಮೂಲಕ ಶ್ರವಣ ನಡೆಸಿ ಆಹುತಿ ನೀಡೋಣ. ಆಗ ಅಂತಹ ಯಜ್ಞದಿಂದಾಗಿ ಪ್ರಸನ್ನನಾಗುವ ಭಗವಂತ ನಮ್ಮ ಮನಸ್ಸಿನಲ್ಲಿ ಆವಿರ್ಭೂತನಾಗುವನು.

ಜ್ಞಾನಯಜ್ಞದಲ್ಲಿ ಪಾಲ್ಗೊಳ್ಳಲೂ ಅಧಿಕಾರವಿಲ್ಲ ಎಂದರೆ ಭೋಜನ ಯಜ್ಞದಲ್ಲಂತೂ ಪ್ರತಿಯೊಂದು ವರ್ಣದ, ಪ್ರತಿಯೊಂದು ಆಶ್ರಮದ ವ್ಯಕ್ತಿಗಳೂ ಪಾಲ್ಗೊಳ್ಳಬಹುದು.

**'ಅಹಂ ವೈಶ್ವಾನರೋ ಭೂತ್ವಾ ಪ್ರಾಣಿನಾಂ ದೇಹಮಾಶ್ರಿತಃ ||**
**ಪ್ರಾಣಾಪಾನಸಮಾಯುಕ್ತಃ ಪಚಾಮ್ಯನ್ನಂ ಚತುರ್ವಿಧಮ್'**

ಎಂಬುದಾಗಿ ಗೀತಾಚಾರ್ಯನು ಭೋಜನಯಜ್ಞದ ಬಗ್ಗೆ ತಾಳಬೇಕಾದ ಅನುಸಂಧಾನದ ವಿಷಯದಲ್ಲಿ ಬೆಳಕು ಚೆಲ್ಲಿರುವನು.

ದೇವರೇ ಪ್ರತಿಯೊಬ್ಬರ ಜಾಠರಾಗ್ನಿಯಲ್ಲಿ ವೈಶ್ವಾನರ ಎಂಬ ಹೆಸರಿನಿಂದ ಇರುವನು. ಪ್ರಾಣ ಮತ್ತು ಅಪಾನ ವಾಯುಗಳಿಂದ ಕೂಡಿಕೊಂಡು ಪ್ರಾಣಿಗಳು ತಿಂದದ್ದನ್ನೆಲ್ಲ ಆ ಜಾಠರಾಗ್ನಿಯ ಮೂಲಕ ಜೀರ್ಣಗೊಳಿಸುವನು. ತಿನ್ನುವ ಆಹಾರ-ಲಾಡು, ಹೋಳಿಗೆ ಮುಂತಾದ ಭಕ್ಷ್ಯ ರೂಪದಲ್ಲಿ, ಅನ್ನಸಾರು ಇತ್ಯಾದಿ 'ಭೋಜ್ಯ' ರೂಪದಲ್ಲಿ, ಚಟ್ನಿ, ಉಪ್ಪಿನಕಾಯಿ ಇತ್ಯಾದಿ 'ಲೇಹ್ಯ' ರೂಪದಲ್ಲಿ ಹಾಗು ನೀರು, ಮಜ್ಜಿಗೆ ಇತ್ಯಾದಿ ಪಾನೀಯ ರೂಪದಲ್ಲಿ ಹೀಗೆ ನಾಲ್ಕು ಪ್ರಕಾರಗಳಲ್ಲಿ ಇರುವುದು.

ಹೀಗೆ ಭಗವಂತನು ವೈಶ್ವಾನರರೂಪದಿಂದ ಇದ್ದುಕೊಂಡು ಪ್ರಾಣಾಪಾನರಿಂದ ಕೂಡಿಕೊಂಡು, ನಾಲ್ಕು ಬಗೆಯ ಆಹಾರವನ್ನು

ಪಚನಗೊಳಿಸುವವನೆಂಬ ಅನುಸಂಧಾನದಿಂದ ಭೋಜನ ನಡೆಸಿದರೆ ಅದು 'ಭೋಜನಯಜ್ಞ' ಎನಿಸುವುದು. ಅಲ್ಲಿ ಭಗವಂತ ಪ್ರಕಟನಾಗುವನು.

ಭೀಷ್ಮರು ಕ್ಷತ್ರಿಯರು. ಆದ್ದರಿಂದ ಯುದ್ಧಯಜ್ಞದ ಮೂಲಕ ದೇವರನ್ನು ಕಾಣಿಸಿಕೊಂಡಿರುವರು. ಅವರು ಹತ್ತು ದಿನಗಳಷ್ಟೇ ಯುದ್ಧ ನಡೆಸಿದ್ದರೂ ಅದು ಪೂರ್ಣ ಯಜ್ಞವೇ ನಡೆದಂತೆ. ಯಾಕೆಂದರೆ ಹತ್ತು ಪೂರ್ಣತೆಯ ಸಂಕೇತ. ನಮ್ಮಲ್ಲಿ ಕರೆಯೋಲೆಗಳಲ್ಲಿ 'ಹತ್ತುಸಮಸ್ತರು' ಎಂದು 'ಹತ್ತು' ಶಬ್ದವನ್ನು ಪೂರ್ಣ ಎಂಬ ಅರ್ಥದಲ್ಲಿ ತಾನೇ ಬಳಸುವುದು ? ಹೀಗೆ ಹತ್ತು ದಿನಗಳ ಪೂರ್ಣಯುದ್ಧ - ರೂಪಯಜ್ಞ ನಡೆಸಿ, ಅದರಿಂದ ತಮ್ಮ ಪಾಲಿಗೆ ದೇವರು ಪ್ರಕಟವಾಗುವಂತೆ ಮಾಡಿಕೊಂಡಿರುವವರು ಭೀಷ್ಮರು. ತಮ್ಮ ಈ ಅನುಭವದ ಹಿನ್ನೆಲೆಯಲ್ಲೇ ಭಗವಂತನನ್ನು 'ಮೇಧಜಃ' - ಎಂದು ಸ್ತುತಿಸುತ್ತಿರುವರು.

**೭೬೩. ಧನ್ಯಃ – ತಾನು ಅಪೇಕ್ಷಿಸಿದಂತೆ ನೆರವೇರಿದ ಕಾರ್ಯಗಳುಳ್ಳವನು.**

ವಿವರಣೆ : ನಾವು ಯೋಜಿಸಿದಂತೆ, ಅಪೇಕ್ಷಿಸಿದಂತೆ ಕಾರ್ಯಕ್ರಮವೊಂದು ನಡೆಯಿತೆಂದರೆ ಆ ಕಾರ್ಯದ ವಿಷಯದಲ್ಲಿ ನಾವು ಧನ್ಯರೆನಿಸುವೆವು. ಆದ್ದರಿಂದಲೇ ಪ್ರತಿಯೊಂದು ಕಾರ್ಯಕ್ರಮದ ಕೊನೆಯಲ್ಲಿ 'ಧನ್ಯವಾದ'ವನ್ನು, ಅಂದರೆ ನಾವು ಆ ಕಾರ್ಯಕ್ರಮದ ಬಗ್ಗೆ ಧನ್ಯರಾಗಿದ್ದೇವೆ ಎಂದು ಹೇಳುವ ಪ್ರಕ್ರಿಯೆಯನ್ನು ಅಳವಡಿಸಿಕೊಂಡಿರುವೆವು.

ವಾಸ್ತವವಾಗಿ ನಾವು ನಿರೀಕ್ಷಿಸಿದ ವ್ಯಕ್ತಿಗಳೆಲ್ಲ ಪಾಲ್ಗೊಂಡು, ಸಕಾಲದಲ್ಲಿ ಆ ಸಮಾರಂಭ ನಡೆದಿದ್ದರಷ್ಟೇ 'ಧನ್ಯವಾದ'ಕ್ಕೆ ಅವಕಾಶ. ಹೆಚ್ಚಿನ ಸಂದರ್ಭಗಳಲ್ಲಿ ಇದಕ್ಕೆ ವಿಪರೀತವಾಗಿಯೇ ನಡೆಯುವುದು. ಅಂದರೆ ನಾವು ಹೇಳಿದ ವ್ಯಕ್ತಿಗಳೆಲ್ಲ ಬಂದಿರುವುದಿಲ್ಲ. ಬಂದರೂ ಸಕಾಲಕ್ಕೆ ಬರುವುದಿಲ್ಲ. ಹೀಗೆ ನಾವು ನಿರೀಕ್ಷಿಸಿದಂತೆ, ಬಯಸಿದಂತೆ ಸಮಾರಂಭ ನಡೆಯದಿದ್ದರೂ ಧನ್ಯವಾದ ನಡೆಸದೆ ಇರುವುದಿಲ್ಲ.

ಆದರೆ ಈ ಅರ್ಥದಲ್ಲಿ 'ಧನ್ಯವಾದ' ನಡೆಸಲು ಪೂರ್ಣ ಅರ್ಹ ದೇವರು ಮಾತ್ರ. ಯಾಕೆಂದರೆ ಯಾವಾಗಲೂ ದೇವರು ಅಪೇಕ್ಷಿಸಿದಂತೆಯೇ ನಡೆಯುವುದು. ಸದ್ಯ ಕೃಷ್ಣನ ಅವತಾರದ ಸಂದರ್ಭದಿಂದ ಪ್ರಾರಂಭಿಸಿ, ಭೀಷ್ಮರು 'ಧನ್ಯಃ' ಎಂದು ಅವನನ್ನು ಸ್ತುತಿಸುತ್ತಿರುವವರೆಗೆ ಯಾರ್‍ಯಾರ ಮೂಲಕ ಏನೇನು ನಡೆಯಬೇಕೆಂದು ಅವನು ಅಪೇಕ್ಷಿಸಿದ್ದನೋ ಅದರಂತೆಯೇ ನಡೆದುಕೊಂಡು ಬಂದಿದೆ. ದೇವರು ತನ್ನ ವೇದವ್ಯಾಸ ರೂಪದಿಂದ ಆರ್‍ನೂರು ವರ್ಷಗಳ ಹಿಂದೆಯೇ ಮಹಾಭಾರತದ ಘಟನೆಗಳನ್ನೆಲ್ಲ ಬರೆದಿದ್ದು, ಅದಕ್ಕನುಗುಣವಾಗಿಯೇ ಎಲ್ಲವೂ ನಡೆದಿದೆ.

ಆದ್ದರಿಂದ ಈ ಅರ್ಥದಲ್ಲಿ ಭಗವಂತ 'ಧನ್ಯ' 'ಕೃತಕೃತ್ಯ.'

ಈ ಅರ್ಥದಲ್ಲಿ ಭಗವಂತನನ್ನು 'ಧನ್ಯ' - ಎಂದು ನಾವು ಉಪಾಸನೆ ನಡೆಸಿದೆವೆಂದರೆ ನಾವು ಯೋಜಿಸುವ, ಸಂಕಲ್ಪಿಸುವ, ಅಪೇಕ್ಷಿಸುವ ಕಾರ್ಯಕ್ರಮಗಳೂ ನೂರಕ್ಕೆ ನೂರು ಪಾಲು ಅಲ್ಲದಿದ್ದರೂ, ನೂರಕ್ಕೆ ಅರ್ವತ್ತು ಅಥವಾ ಎಪ್ಪತ್ತು ಪಾಲು ನಮ್ಮ ಸಂಕಲ್ಪ, ಅಪೇಕ್ಷೆಗಳಂತೆಯೇ ನಡೆದು ನಾವು ಧನ್ಯತಾಭಾವನೆಗೆ ಒಳಗಾಗುವಂತಾಗುವುದು.

**೭೬೪. ಸತ್ಯಮೇಧಾಃ – ಸತ್ಯವಾದ ನೆನಪಿನ ಶಕ್ತಿಯನ್ನು ಹೊಂದಿರುವವನು.**

ವಿವರಣೆ : ಭಗವಂತನನ್ನು 'ಸುಮೇಧಾಃ' ಒಳ್ಳೆಯ ಮೇಧಾಶಕ್ತಿ ಉಳ್ಳವನೆಂದು ಸ್ತುತಿಸಿದ್ದಾಯಿತು.

ಭಗವಂತನ ಮೇಧಾಶಕ್ತಿ ಯಾಕೆ ಶೋಭನವಾಗಿದೆ ? ಒಳ್ಳೆಯದ್ದಾಗಿದೆ ? ಅಂದರೆ 'ಸತ್ಯಮೇಧಾಃ' ಅವನ ಮೇಧಾ 'ಸತ್ಯ'ವಾದುದು. ಆದುದರಿಂದ ಅದು ಶೋಭನ. ಸತ್ಯ ಅಂದರೆ ಸುಳ್ಳು ಅಲ್ಲ ಎಂಬುದು ಪ್ರಸಿದ್ಧವಾದ ಅರ್ಥ. ಕೆಲವರು ದೇವರನ್ನು ನಿರ್ಗುಣ ಎಂದು ಕರೆದು, ಆದುದರಿಂದ ಅವನಲ್ಲಿ ಇರುವ ಗುಣಗಳೆಲ್ಲ 'ಮಿಥ್ಯಾ' - ಸುಳ್ಳು ಎನ್ನುವರು. ಅಂತಹ ಗುಣಗಳಲ್ಲಿ ಮೇಧಾವೂ ಒಂದಾಗಿರುವುದರಿಂದ ಅದೂ ಆ ವಾದದ ಪ್ರಕಾರ ಸುಳ್ಳು ಎಂದಾದೀತು. ಅದಕ್ಕಾಗಿ 'ಸತ್ಯಮೇಧಾಃ' ಎನ್ನಲಾಗಿದೆ. ಆ ವಾದವೇ ಅಶಾಸ್ತ್ರೀಯವಾಗಿರುವುದರಿಂದ ಅವನ ಕಲ್ಯಾಣಗುಣಗಳೆಲ್ಲ ಸತ್ಯಗಳಾಗಿರುವಂತೆ ಅವುಗಳಲ್ಲಿ ಒಂದಾದ ಮೇಧಾವೂ ಸತ್ಯ ; ದೇವರಂತೆಯೇ ಪಾರಮಾರ್ಥಿಕ ಸತ್ಯ.

ಹೀಗೆ ದೇವರ ಮೇಧಾವನ್ನು ಸತ್ಯ ಎಂದದ್ದರಿಂದ ಅಂತಹ ಮೇಧಾಗುಣ ಪ್ರಯುಕ್ತವಾಗಿ ಉಂಟಾದ ಜಗತ್ತು, ಹಾಗೂ ಅದರ ಗುಣಧರ್ಮಗಳೆಲ್ಲ ಸತ್ಯ ಎಂದಂತಾಗುವುದು. ಇದರಿಂದಾಗಿ ಜಗತ್‌ಸತ್ಯತ್ವವನ್ನೇ ಸಮರ್ಥಿಸಿದಂತಾಗುವುದು. ಅಂತಹ ಸತ್ಯವಾದ ಜಗತ್ತನ್ನು ನಿರ್ಮಿಸಿದನೆಂದು ದೇವರ ಮಹಿಮೆಯನ್ನು ಸಾರಿದಂತಾಗುವುದು.

ಭಗವಂತನನ್ನು 'ಸತ್ಯಮೇಧಾಃ' - ಎಂದು ಉಪಾಸನೆ ನಡೆಸಿದೆವೆಂದರೆ ನಮ್ಮ ಮೇಧಾಶಕ್ತಿ ಯಾವುದ್ಯಾವುದೋ ಲೌಕಿಕ ವಿಚಾರಗಳ ಬಗ್ಗೆ ತೊಡಗಿಸಲ್ಪಟ್ಟು ನಿರರ್ಥಕವೆನಿಸದೆ, ಆಧ್ಯಾತ್ಮಿಕ ವಿದ್ಯೆಯ ಬಗ್ಗೆ ಹರಿಸುವಂತಾಗಿ ಸಾರ್ಥಕವೆನಿಸಬಲ್ಲದು. ಆ ರೀತಿಯಾಗಿ ನಮ್ಮ ಮೇಧಾಶಕ್ತಿ ಸಾರ್ಥಕವೆನಿಸುವಂತೆ, ಸತ್ಯವೆನಿಸುವಂತೆ ಭಗವಂತನು ಅನುಗ್ರಹಿಸುವನು.

**೭೬೫. ಧರಾಧರಃ – * ಎಲ್ಲದಕ್ಕೂ ಧಾರಕವಾದ ಭೂಮಿಗೇ ಧಾರಕನನಾಗಿರುವವನು.**

*** ಪರ್ವತಗಳು ಭೂಮಿಗೆ ಧಾರಕಗಳಾಗುವಂತೆ ಪ್ರೇರಿಸಿರುವವನು.**

ವಿವರಣೆ : 'ಧರಾ' ಎಂದರೆ ಎಲ್ಲವನ್ನೂ ತನ್ನಲ್ಲಿ ಧರಿಸಿಕೊಂಡಿರುವ ಭೂದೇವಿ. ಆಕೆಯನ್ನೂ ಧರಿಸಿರುವ ಭಗವಂತ ಧರಾಧರ. ಭೂಮಿಯನ್ನು ಪರ್ವತಗಳು ಧರಿಸಿಕೊಂಡಿರುವವುಗಳೆಂದು ಪ್ರಸಿದ್ಧಿ. ಆದ್ದರಿಂದಲೇ ಪರ್ವತಗಳಿಗೆ 'ಭೂಧರ' ಎಂಬ ಹೆಸರು ಬಂದಿದೆ. ಹೀಗೆ ಭೂಧರಗಳೆನಿಸಿರುವ ಪರ್ವತಗಳು ಭೂಮಿಗೆ ಧಾರಕಗಳಾಗಿರುವಂತೆ ಮಾಡಿರುವವನೂ ಭಗವಂತನೇ. 'ಧರಾಂ ಆ ಸಮ್ಯಕ್ ಧರಂತಿ ಅಸ್ಮಾದಿತಿ ಧರಾಧರಃ' ಪರ್ವತಗಳು ಯಾರ ಪ್ರೇರಣೆಯಿಂದಾಗಿ, ಅನುಗ್ರಹದಿಂದಾಗಿ ಭೂಮಿಯನ್ನು ಚೆನ್ನಾಗಿ ಧಾರಣೆ ಮಾಡಿರುವವೋ ಅಂತಹ ಪರಮಾತ್ಮ ಧರಾಧರ. 'ಭೂಧರಾಣಾಮಹಂ ಸ್ಥೈರ್ಯಂ....'- ಎಂಬುದಾಗಿ ಭಗವದ್ಗೀತೆಯ ವಿಭೂತಿ ಯೋಗಾಧ್ಯಾಯದಲ್ಲಿ ಭಗವಂತನು ತನ್ನ ವಿಭೂತಿರೂಪದಿಂದ ಪರ್ವತಗಳಿಗೆ ಸ್ಥಿರತೆಯನ್ನು ನೀಡಿರುವುದಾಗಿ ಸಂದೇಶಿಸುವ ಮೂಲಕ ಹಾಗೆ ಅವುಗಳಿಗೆ ಸ್ಥೈರ್ಯ ನೀಡಿ ಅವು ಭೂಮಿಯ ಧಾರಕಗಳೆನಿಸುವಂತೆ ಅನುಗ್ರಹಿಸಿರುವೆನೆಂದು ಸೂಚಿಸಿರುವನು.

ಹೀಗೆ ಭಗವಂತನು ಭೂಮಿಯ ಧಾರಕನಾಗಿರುವುದರಿಂದಲೂ, ಭೂಮಿಯ ಧಾರಕಗಳೆಂದು ಪ್ರಸಿದ್ಧಿಗಳಾದ ಪರ್ವತಗಳ ಮೂಲಕ ಭೂಮಿಯ ಧಾರಣೆ ನಡೆಸಿರುವುದರಿಂದಲೂ 'ಧರಾಧರ' ಎನಿಸಿರುವನು.

**ತೇಜೋವೃಷೋ ದ್ಯುತಿಧರಃ ಸರ್ವಶಸ್ತ್ರಭೃತಾಂ ವರಃ |**
**ಪ್ರಗ್ರಹೋ ನಿಗ್ರಹೋ ವ್ಯಗ್ರೋ ನೈಕಶೃಂಗೋ ಗದಾಗ್ರಜಃ ||೮೧||**

**೭೬೬. ತೇಜೋವೃಷಃ – * ಸೂರ್ಯಚಂದ್ರಾದಿಗಳ ಮೂಲಕ ಬೆಳಕನ್ನು ಸುರಿಸುವವನು.**

*** ಸೂರ್ಯಾದಿಗಳಿಗೆ ಬೆಳಕನ್ನು ಸುರಿಸುವವನು.**

*** ಬೆಳಕಿನಲ್ಲಿ ತೇಜಃ ಎನಿಸಿರುವ ಲಕ್ಷ್ಮಿಯನ್ನು ಅಭಿಮಾನಿನಿಯನ್ನಾಗಿ ಪ್ರವೇಶಿಸುವಂತೆ ಮಾಡಿರುವವನು.**

ವಿವರಣೆ : ತೇಜಸ್ಸು ಎಂದರೆ ಬೆಳಕು. ಅಂತಹ ಬೆಳಕನ್ನು ಸುರಿಸುವವನು 'ತೇಜಃ ವರ್ಷತೀತಿ ತೇಜೋವೃಷಃ' ಭಗವಂತನು. ನಮಗೆ ಬೆಳಕು ಸೂರ್ಯ, ಚಂದ್ರ, ಅಗ್ನಿ

ಮುಂತಾದುವುಗಳಿಂದ ದೊರಕುವುದು. ಆದರೆ ಅವುಗಳಿಗೆ ಬೆಳಕು ಎಲ್ಲಿಂದ ಬರುವುದು ? ಗೀತಾಚಾರ್ಯ ಹೇಳುವನು -

**'ಯದಾದಿತ್ಯಗತಂ ತೇಜೋ ಜಗದ್ಭಾಸಯತೇಽಖಿಲಮ್ |**

**ಯಚ್ಚಂದ್ರಮಸಿ ಯಚ್ಚಾಗ್ನೌ ತತ್ತೇಜೋ ವಿದ್ಧಿ ಮಾಮಕಮ್'**

ಜಗತ್ತನ್ನು ಬೆಳಗುವ ಸೂರ್ಯನ ಬೆಳಕಾಗಲಿ, ಚಂದ್ರನ ಬೆಳಕಾಗಲಿ, ಅಗ್ನಿಯ ಬೆಳಕಾಗಲಿ - ಅದು ನನಗೆ ಸೇರಿದ್ದೆಂದು ತಿಳಿ.

ಹಾಗಾದರೆ ಭಗವಂತನೇ ತನ್ನ ಬೆಳಕನ್ನು ಸೂರ್ಯ, ಚಂದ್ರ, ಅಗ್ನಿಗಳ ಮೂಲಕ ನಮಗೆ ಸುರಿಸುವನೆಂದು ಸಿದ್ಧಿಸುವುದು. ಆದುದರಿಂದಲೇ ಸೂರ್ಯಾದಿಗಳಿಗೆ ತನ್ನ ತೇಜಸ್ಸನ್ನು ಸುರಿಸುವವನು - ಸೂರ್ಯಾದಿಷು ತೇಜಃ, ಸ್ವೀಯಂ ತೇಜಃ ವರ್ಷತೀತಿ ತೇಜೋವೃಷಃ ಎಂಬ ಅರ್ಥದಲ್ಲೂ ಭಗವಂತನು ತೇಜೋವೃಷ ಎನಿಸುವನು. ಇನ್ನೂ ಒಂದು ಸ್ವಾರಸ್ಯದ ಅರ್ಥ ಹೊರಡಬಲ್ಲದು. ತೇಜಃ ಅಂದರೆ ಲಕ್ಷ್ಮೀದೇವಿ. ಲಕ್ಷ್ಮೀದೇವಿ ಯಾಕೆ ತೇಜಃ ಎನಿಸುವಳು ? ತೇಜಸ್ಸಿಗೆ ಮುಖ್ಯ ಅಭಿಮಾನಿದೇವತೆ ಲಕ್ಷ್ಮೀದೇವಿ. ಆದುದರಿಂದ ಆಕೆಯ 'ಅಭಿಮಾನ'ಕ್ಕೆ ಮುಖ್ಯವಾಗಿ ಒಳಗಾಗಿರುವ ತೇಜಸ್ಸನ್ನು ತಿಳಿಸುವ ತೇಜಃಶಬ್ದದಿಂದ ಆಕೆ ಮುಖ್ಯವಾಗಿ ವಾಚ್ಯಳಾಗುವಳು.

ಅಲ್ಲದೆ, ತೇ+ಅಜಃ - ಎಂದು ಪದ ವಿಭಾಗ ಮಾಡಿಕೊಂಡು ವ್ಯಾಪ್ತನಾದ ಪರಮಾತ್ಮನಲ್ಲಿ ಯಾವಾಗಲೂ ಅಜಳಾಗಿಯೇ ಜನ್ಮರಹಿತಳಾಗಿಯೇ ಇರುವವಳೆಂಬ ಅರ್ಥದಲ್ಲಿ ಅವಳು ತೇಜಃ ಎನಿಸುವಳು. ಅಥವಾ ಅವನಿಂದಾಗಿ ಪರಾಧೀನ ವಿಶೇಷಾ-ವಾಪ್ತಿರೂಪದ ಜನ್ಮ ಪಡೆಯುವುದರಿಂದಾಗಿ ಲಕ್ಷ್ಮೀದೇವಿ ತೇಜಃ ಎನಿಸುವಳು.

ಮಧ್ವ ಗುರುಗಳು ಹೀಗೆ ತಿಳಿಸುವರು -

**'ಸೋಽಸೃಜತ್ ಪ್ರಥಮಂ ದೇವೀಂ ತೇಜಆಖ್ಯಾಂ ಶ್ರಿಯಂ ಸತೀಮ್ |**

**ತತ್ರ ಸ್ಥಿತೇನ ರೂಪೇಣ ಸಾಽಜೈವ ಹಿ ಯತಃ ಸದಾ |**

**ತೇಜ ಇತ್ಯುಚ್ಯತೇ ತಸ್ಮಾಜ್ಜನೇರ್ವಾ ತತ ಏವ ತು ||'**

ಹೀಗೆ 'ತೇಜ' ಎನಿಸಿರುವ ಲಕ್ಷ್ಮೀದೇವಿಯನ್ನು ತೇಜಸ್ಸಿನಲ್ಲಿ ಅಭಿಮಾನಿ ದೇವತೆಯನ್ನಾಗಿ ಸುರಿಸಿರುವವನು ; 'ತೇಜೋವೃಷಃ'

'ತೇಜೋಽಭಿಮಾನಿನೀ ಲಕ್ಷ್ಮೀಃ .....' - ಎಂದು 'ಬ್ರಹ್ಮಾಂಡ' ತಿಳಿಸುತ್ತಿರುವಂತೆ ತೇಜಸ್ಸಿಗೆ ಮುಖ್ಯಾಭಿಮಾನಿನಿ ಮಂಗಲದೇವತೆಯಾದ ಲಕ್ಷ್ಮೀದೇವಿ. ಇಂತಹ ಮಂಗಲದೇವತೆಯಾದ ಲಕ್ಷ್ಮಿಯು ಅಭಿಮಾನಿಯಾಗಿರುವುದರಿಂದಲೇ ಬೆಳಕು ಮಂಗಲ ಎಂದು ಪರಿಗಣಿತವಾಗಿರುವುದು.

ಹೀಗೆ ತೇಜಸ್ಸಿನಲ್ಲಿ ಅಭಿಮಾನಿನಿಯನ್ನಾಗಿ 'ತೇಜಃ' ಎನಿಸಿರುವ ಲಕ್ಷ್ಮೀದೇವಿಯನ್ನು ಸುರಿಸಿರುವುದರಿಂದ, ಪ್ರವೇಶ ಮಾಡುವಂತೆ ಮಾಡಿರುವುದರಿಂದ ಭಗವಂತ 'ತೇಜೋವೃಷ' ಎನಿಸುವನು.

**೭೬೭. ದ್ಯುತಿಧರಃ – * ಸೌಂದರ್ಯಧಾರಕ.**

*** ಸೌಂದರ್ಯಧಾರಕ ವ್ಯಕ್ತಿಗಳನ್ನು, ವಸ್ತುಗಳನ್ನು ಕಂಡು ಆನಂದಿಸುವಂತೆ ಮಾಡುವವನು.**

ವಿವರಣೆ : ದ್ಯುತಿ ಎಂದರೆ ಶೋಭೆ, ಸೌಂದರ್ಯ. ಸೌಂದರ್ಯವನ್ನು ಧಾರಣೆ ಮಾಡಿರುವ ಭಗವಂತ ದ್ಯುತಿಧರ.

ಕೃಷ್ಣ ಸಂಧಾನಕ್ಕಾಗಿ ಹಸ್ತಿನಾಪುರಕ್ಕೆ ತೆರಳುವಾಗ ಸುಮಾರು ಎಪ್ಪತ್ತು ವರ್ಷದವನು. ಆಗಲೂ ಅವನ ಸೌಂದರ್ಯವನ್ನು ಆಸ್ವಾದಿಸಲು ಆ ಪಟ್ಟಣದ ಕನ್ಯೆಯರು, ಹೆಂಗಸರು ಹಾತೊರೆಯುತ್ತಿದ್ದರೆಂದು ಮಹಾಭಾರತ ಉಲ್ಲೇಖಿಸಿದೆ. ಆಗಲೂ ಕೃಷ್ಣ 'ಸಾಕ್ಷಾನ್ಮನ್ಮಥಮನ್ಮಥ' ಎಲ್ಲರ ಮನಸ್ಸನ್ನು ತನ್ನ ಸೌಂದರ್ಯದಿಂದ ಮಥಿಸಿ 'ಮನ್ಮಥ' ಎನಿಸಿದ್ದ.

ಹೀಗೆ ಭಗವಂತನು ತಾನು 'ದ್ಯುತಿಧರ'ನಾಗಿರುವುದಲ್ಲದೆ, ಜಗತ್ತಿನಲ್ಲಿ ಹೆಣ್ಮಕ್ಕಳು, ಪುಷ್ಪ ಮುಂತಾದ ಕೆಲವೆಡೆ ದ್ಯುತಿಯನ್ನು ಇಟ್ಟಿರುವನು. ಅವರೆಲ್ಲ 'ದ್ಯುತಿಧ' - 'ದ್ಯುತಿಂ ದಧತೇ ಇತಿ' - ಸೌಂದರ್ಯಧಾರಕರಾಗುವಂತೆ ಮಾಡಿದ್ದಾನೆ. ಅಲ್ಲದೆ, ಅವರ ಆ ಸೌಂದರ್ಯವನ್ನು ಆಸ್ವಾದಿಸಿ ಉಳಿದವರು ರಮಿಸುವಂತೆ, ಸಂತೋಷ ಪಡುವಂತೆ ಮಾಡುವನು. 'ದ್ಯುತಿಧ್ಯೈಃ ರಮಯತೀತಿ' ದ್ಯುತಿಧರಃ- ಸೌಂದರ್ಯ ಒಂದೆಡೆ ಇರುವುದಾದರೆ, ಅದರಿಂದ ಸಂತೋಷ ಮತ್ತೊಬ್ಬರಿಗೆ ದೊರಕುವಂತೆ ಭಗವಂತನ ವ್ಯವಸ್ಥೆ.

ಕೆಲವರಿಗೆ ಸುಂದರ ವ್ಯಕ್ತಿಗಳನ್ನು, ವಸ್ತುಗಳನ್ನು ಕಂಡಾಗ ಮತ್ಸರ ಆಗುವುದುಂಟು. ಹಾಗಾಗದೆ ಅವರು ಆ ಸೌಂದರ್ಯವನ್ನು ಅನುಭವಿಸಿ ಆನಂದಪಡುವಂತಾಗಬೇಕು. ಭಗವಂತನನ್ನು 'ದ್ಯುತಿಧರ' ನಾಮದಿಂದ ಉಪಾಸನೆ ಮಾಡಿದರೆ ಸುಂದರ ವ್ಯಕ್ತಿಗಳನ್ನು, ಸುಂದರ ವಸ್ತುಗಳನ್ನು ಕಂಡು ಅವುಗಳ ಸೌಂದರ್ಯಕ್ಕಾಗಿ ಸಂತೋಷ ಪಡುವ ಗುಣ ಸಿದ್ಧಿಸುವುದು.

**೭೬೮. ಸರ್ವಶಸ್ತ್ರಭೃತಾಂ ವರಃ– * ಸಕಲ ಶಸ್ತ್ರಧಾರಿಗಳಲ್ಲೆಲ್ಲ ಶ್ರೇಷ್ಠ.**

*** ಸರ್ವಶಸ್ತ್ರಧಾರಕರಾದ ದುರ್ಯೋಧನಾದಿಗಳನ್ನೂ ನಾಶಕ್ಕಾಗಿ**

**ಸ್ವೀಕರಿಸಿದವನು.**

**ವಿವರಣೆ :** ಸಕಲ ಶಸ್ತ್ರಧಾರಿಗಳಲ್ಲೆಲ್ಲ ಶ್ರೇಷ್ಠನಾಗಿರುವವನೆಂಬ ಅರ್ಥ ಎದ್ದು ಕಾಣುವುದು. ವರ ಎಂಬುದಕ್ಕೆ ಸ್ವೀಕರಿಸುವವನು ಎಂದರ್ಥ - **ವೃಣೋತೀತಿ ವರಃ |** ವಧೂವರ ಎಂಬಲ್ಲಿ ವರಶಬ್ದ ವಧುವನ್ನು ಸ್ವೀಕರಿಸುವವನು ಎಂಬ ಅರ್ಥದಲ್ಲೇ ಬಂದಿರುವಂತಹದ್ದು. ಹಾಗೆ ಸ್ವೀಕರಿಸಿ ವಧುವನ್ನು ಸಾಯುವವರೆಗೆ ಜೊತೆಯಲ್ಲೇ ಇಟ್ಟುಕೊಂಡರಷ್ಟೇ ವರಶಬ್ದ ಅಂತಹವನಲ್ಲಿ ಅನ್ವರ್ಥಕವೆನಿಸುವುದು.

ಮಹಾಭಾರತ ಯುದ್ಧದಲ್ಲಿ ಭೀಷ್ಮಕರ್ಣಾದಿಗಳು ಬೇರೆ ಬೇರೆ ಆಯುಧಗಳನ್ನು ಧರಿಸಿಕೊಂಡು ಬರುತ್ತಿದ್ದರು. ಅವರ ಹಿಂದೆ ಏಳೆಂಟು ವಾಹನಗಳಲ್ಲಿ ಆಯುಧಗಳು ಸಾಗಿಸಲ್ಪಡುತ್ತಿದ್ದವು. ಕರ್ಣನಂತೂ ತನಗೆ ಪರಶುರಾಮ ಕೊಟ್ಟ ಆಯುಧಗಳನ್ನು ಬೇರೆ ಬೇರೆ ದಿನದಲ್ಲಿ ತರುತ್ತಿದ್ದ.

ಹೀಗೆ ಸರ್ವಶಸ್ತ್ರಧಾರಕರಾಗಿದ್ದ ಕೌರವರು ತಮ್ಮ ಆ ಶಸ್ತ್ರಗಳ ಬಲದಿಂದ ಪಾಂಡವರನ್ನು ದಾಸರನ್ನಾಗಿ ಸ್ವೀಕರಿಸಿ ಬಿಡಬಹುದೆಂದು ಭಾವಿಸಿದ್ದರು. ಆದರೆ ಶ್ರೀಕೃಷ್ಣಪರಮಾತ್ಮನೇ ಸರ್ವಶಸ್ತ್ರಧಾರಕರಾಗಿದ್ದ ದುರ್ಯೋಧನಾದಿಗಳನ್ನು ನಾಶಕ್ಕಾಗಿ ಸ್ವೀಕರಿಸಿದ್ದನು. ಆದುದರಿಂದ ಕೃಷ್ಣ 'ಸರ್ವಶಸ್ತ್ರಭೃತಾಂ ವರ' ಸರ್ವಶಸ್ತ್ರಧಾರಕರಾಗಿದ್ದ ದುರ್ಯೋಧನಾದಿಗಳ ಪಾಲಿಗೆ 'ವರ'ನಾಗಿ ಅಂದರೆ ನಾಶಕ್ಕಾಗಿ ಸ್ವೀಕಾರ ಮಾಡುವವನಾಗಿ ನಡೆದುಕೊಳ್ಳುವನು.

**೭೬೯. ಪ್ರಗ್ರಹಃ – ಆದಿತ್ಯಾದಿಗ್ರಹಗಳು ಅನಿಷ್ಟಸೂಚಕರಾಗಿ ಜನರು ಭಗವಂತನ ಬಗ್ಗೆ ಹೊರಳುವಂತೆ ಮಾಡುವ ಮಹತ್ತ್ವವನ್ನು ಹೊಂದುವಂತೆ ಮಾಡಿರುವವನು.**

**ವಿವರಣೆ :** ಗ್ರಹಗಳು ಪ್ರಸಿದ್ಧ. ನವಗ್ರಹಗಳು ಅವುಗಳಲ್ಲೂ ಶನಿಗ್ರಹವಂತೂ ಯಾರೂ ಮರೆಯಲಾರರು.

ಗ್ರಹಗಳಿಗೆ 'ಗ್ರಹ' - ಎಂಬ ಹೆಸರು ಬಂದಿರುವುದಾದರೂ ಯಾತಕ್ಕಾಗಿ ? ಗೃಹ್ಣಂತೀತಿ ಗ್ರಹಾಃ - ದೇವರ ಕಡೆಗೆ ಹೊರಳಿಸುವುದಕ್ಕಾಗಿ ವ್ಯಕ್ತಿಗಳನ್ನು ಸ್ವೀಕಾರ ಮಾಡುವುದರಿಂದ ಗ್ರಹಗಳೆನಿಸಿವೆ. ಗ್ರಹಗಳು ಮುಂದೆ ಸಂಭವಿಸಲಿರುವ ಬೇರೆ ಬೇರೆ ಅನಿಷ್ಟಗಳನ್ನು ಮೊದಲೇ ಸೂಚಿಸಿ ಆ ಅನಿಷ್ಟಗಳ ಪರಿಹಾರಕ್ಕಾಗಿ ದೇವರನ್ನು ಸ್ತುತಿಸುವಂತೆ ಮಾಡುವವು. ಜೀವನದಲ್ಲಿ ಬರತಕ್ಕ ತೊಂದರೆಗಳ ಪರಿಹಾರಕ್ಕೆ ದೇವರನ್ನು ನೆನೆಯಬೇಕೆಂದರೆ ಅದಕ್ಕೆ ಜನ ಬೆಲೆ ಕೊಡುವುದಿಲ್ಲ. ಜಾತಕ ನೋಡಿ 'ನಿನಗೆ ರಾಹುವಿನ ಪೀಡೆ, ಕೇತುವಿನ ತೊಂದರೆ, ಶನಿ ಕಾಟ - ಇದೆ ಎಂದೆಲ್ಲ ಹೇಳಿದರೆ

ಅದಕ್ಕೆ ಬೆದರಿ ಅದರ ಪರಿಹಾರಕ್ಕಾಗಿ ದೇವರ ಸ್ಮರಣೆ ಇತ್ಯಾದಿಗಳನ್ನು ನಡೆಸಲು ಒಪ್ಪಿಕೊಳ್ಳುವರು.

ಹೀಗೆ ದೇವರ ಸೇವೆಯಲ್ಲಿ ತೊಡಗಿಸಲು ಜನರನ್ನು ತಮ್ಮೆಡೆಗೆ ಸ್ವೀಕರಿಸುವ ಪ್ರಯುಕ್ತ 'ಗ್ರಹ' ಎನಿಸುವ ಗ್ರಹಗಳಿಗೆ ಇಂತಹ ದೇವರ ಬಗ್ಗೆ ಭಕ್ತಿ ಬರುವಂತೆ ಮಾಡುವ ಪ್ರಕರ್ಷ, ಮಹತ್ತ್ವ ಸಿದ್ಧಿಸುವಂತೆ ಮಾಡಿರುವವನು ಭಗವಂತ. 'ಪ್ರಕೃಷ್ಟಾಃ ಗ್ರಹಾಃ ಯಸ್ಮಾತ್ ಸಃ ಪ್ರಗ್ರಹಃ' **'ಸಕಲಗ್ರಹಬಲ ನೀನೇ ವಾರಿಜಾಕ್ಷ.....'** ಎಂದು ದಾಸರು ಸ್ತುತಿಸಿರುವಂತೆ ಸಕಲ ಗ್ರಹಗಳ ವಿಷಯದಲ್ಲೂ ಎಲ್ಲರೂ ಭಯಪಡುವಂತೆ ಹಾಗೂ ಭಯಪಟ್ಟು, ಅವರು ಅದರ ಪರಿಹಾರಕ್ಕಾಗಿ ಶ್ರೀಹರಿಯ ಸೇವೆಯಲ್ಲಿ ತೊಡಗುವಂತೆ ಮಾಡುವ ಬಲ ಸಕಲಗ್ರಹಗಳಿಗೆ ಸಿದ್ಧಿಸಿರುವಂತೆ ಮಾಡಿರುವವನು ಭಗವಂತ. ಭಗವಂತನು ಆಯಾ ಗ್ರಹದಲ್ಲಿ ಬೇರೆ ಬೇರೆ ರೂಪದಿಂದ ಇದ್ದುಕೊಂಡು ಅವುಗಳಿಗೆ ಕಾಲಸೂಚಕತ್ವಮಹಿಮೆ ಸಿದ್ಧಿಸುವಂತೆ ಮಾಡಿರುವನು.

ನವಗ್ರಹಗಳಲ್ಲೂ ಶನಿಗ್ರಹಕ್ಕೆ ಹರಿಗುರುಗಳೇ ದೇವತೆಗಳೆನಿಸಿದ್ದು ಶನಿಯ ಪೀಡೆಗೆ ಒಳಗಾದವರು ವಿಶೇಷವಾಗಿ ಹರಿಗುರುಗಳ ಸೇವೆಯನ್ನೇ ನಡೆಸುವಂತೆ ಮಾಡಿರುವನು. ಶನಿಗ್ರಹಕ್ಕೆ ತಾನೇ ದೇವತೆಯಾಗಿ ಇರುವನು. ಆದ್ದರಿಂದ ಶನಿ ಪೀಡೆಗೊಳಗಾದವರು ಅದರ ಪರಿಹಾರಕ್ಕೆ ವಿಷ್ಣುಸಹಸ್ರನಾಮ ಪಾರಾಯಣ ಹಾಗೂ ಪ್ರಾಣ ದೇವನ ಸ್ತುತಿ ಇವುಗಳನ್ನು ವಿಶೇಷವಾಗಿ ನಡೆಸಬೇಕಾದದ್ದು.

ಹೀಗೆ ಭಗವಂತನು ಗ್ರಹಗಳಿಗೆ ಅನಿಷ್ಟವನ್ನು ಸೂಚಿಸಿ ಕೊಡುವ ಮೂಲಕ ತನ್ನ ಬಗ್ಗೆ ಹೊರಳುವಂತೆ ಮಾಡುವ ಪ್ರಕರ್ಷವನ್ನು ತಂದು ಕೊಟ್ಟಿರುವುದರಿಂದ 'ಪ್ರಗ್ರಹ' ಎನಿಸಿರುವನು.

**೭೭೦. ನಿಗ್ರಹಃ – * ಪ್ರೇರಣೆಗಾಗಿ ಗ್ರಹಗಳನ್ನು ಸ್ವೀಕಾರ ಮಾಡಿದವನು.**

*** ದುಷ್ಟರನ್ನು ದಮನ ಮಾಡುವವನು.**

**ವಿವರಣೆ:** ನಯಂತಿ ಪ್ರಣಯಂತೀತಿ ನಾಃ - ಪ್ರೇರಕರು ಎಂದರ್ಥ. ಅತಿಶಯವಾಗಿ ಪ್ರೇರಕರಾಗಿರುವುದರಿಂದ ಇಕಾರ ಬಂದು 'ನಿ' ಎಂದಾಗಿದೆ. ಆದುದರಿಂದ 'ನಿ' ವಿಶೇಷವಾಗಿ ಪ್ರೇರಕರಾಗಿ 'ಗ್ರಹಾಃ' - ಗ್ರಹಗಳು ಯಸ್ಮಾತ್ ಯಾರ ಅನುಗ್ರಹದಿಂದಾಗಿ ಇರುವರೋ ಅಂತಹ ಪರಮಾತ್ಮ 'ನಿಗ್ರಹ'. ಅಂದರೆ ಪ್ರೇರಣೆಗಾಗಿ ಸೂರ್ಯಚಂದ್ರ ಮುಂತಾದ ಗ್ರಹಗಳನ್ನು ಸ್ವೀಕಾರ ಮಾಡಿರುವವನು ಎಂಬ ಅರ್ಥ.

ಭಗವಂತನು ಕಣ್ಣಿಗೆ ಕಾಣಿಸುವಂತೆ ಪ್ರೇರಿಸುವುದಿಲ್ಲ. ಹಾಗೆಯೇ ತಾನೇ ನೇರವಾಗಿಯೂ ಪ್ರೇರಿಸುವುದಿಲ್ಲ. ತತ್ತ್ವಾಭಿಮಾನಿ ದೇವತೆಗಳನ್ನು ಮಾಧ್ಯಮರನ್ನಾಗಿಟ್ಟುಕೊಂಡು ಅವರ ಮೂಲಕ ಪ್ರೇರಿಸುವನು. ಆ ತತ್ತ್ವಾಭಿಮಾನಿಗಳ ಗುಂಪಿನಲ್ಲಿ ಸೂರ್ಯಚಂದ್ರ ಮುಂತಾದ ಗ್ರಹಗಳೂ ಸೇರಿಕೊಂಡಿರುವರು.

ಆದ್ದರಿಂದ ಇತರ ತತ್ತ್ವಾಭಿಮಾನಿ ದೇವತೆಗಳಂತೆ ಸೂರ್ಯ, ಚಂದ್ರ ಮುಂತಾದ ಗ್ರಹಗಳ ಮೂಲಕವೂ ಪ್ರೇರಿಸುವನು.

ಇದು ಭಗವಂತನ ವೈಭವದ ಸಂಕೇತ. ಮನೆಯೊಂದರಲ್ಲಿ ಯಜಮಾನನೇ ಎಲ್ಲಾ ಕೆಲಸಗಳನ್ನು ಮಾಡದೆ ಆಳುಗಳ ಮೂಲಕ ಆ ಮನೆಯ ಪ್ರತಿಯೊಂದು ಚಟುವಟಿಕೆಯನ್ನೂ ನಡೆಸಿದನೆಂದರೆ ಅದು ಹೇಗೆ ಆ ಯಜಮಾನನ ಐಶ್ವರ್ಯದ ಸಂಕೇತವೋ ಹಾಗೆ.

‘ನಿಗ್ರಹ’ ಎಂಬುದಕ್ಕೆ ಮತ್ತೊಂದು ಪ್ರಸಿದ್ಧ ಅರ್ಥ ಇದ್ದೇ ಇದೆ. ‘ವಾಲಿ ನಿಗ್ರಹ’, ‘ಕಂಸ ನಿಗ್ರಹ’ ಮುಂತಾದ ಕಡೆಗಳಲ್ಲಿ ನಿಗ್ರಹ ಶಬ್ದ ಸಂಹಾರ ಎಂಬ ಅರ್ಥದಲ್ಲಿ ಬಳಸಲಾಗುವುದು.

‘ಇಂದ್ರಿಯನಿಗ್ರಹ’ - ಎಂಬಲ್ಲಿ ಇಂದ್ರಿಯಗಳನ್ನು ಹಿಡಿತದಲ್ಲಿ ಇಟ್ಟುಕೊಳ್ಳುವುದು ಎಂಬ ಅರ್ಥದಲ್ಲಿ ನಿಗ್ರಹ ಶಬ್ದದ ಪ್ರಯೋಗ ನಡೆದಿದೆ.

ಭಗವಂತನು ದುಷ್ಟರ ಸಂಹಾರ ನಡೆಸುವುದರಿಂದ ‘ನಿಗ್ರಹ’ - ನಿಗೃಹ್ಣಾತಿ ಸಂಹರತೀತಿ ನಿಗ್ರಹ ಎನಿಸಿರುವನು.

**೭೭೧. ವ್ಯಗ್ರಃ –ಯಾರಿಗಿಂತ ಎತ್ತರದಲ್ಲಿರುವವನು ಮತ್ತೊಬ್ಬನಿಲ್ಲವೋ ಅಂತಹವನು.**

**ವಿವರಣೆ :** ಲೋಕದಲ್ಲಿ ವ್ಯಗ್ರ ಶಬ್ದವನ್ನು ಅನ್ಯಮನಸ್ಕ ಎಂಬ ಅರ್ಥದಲ್ಲಿ ‘ತುಂಬ ವ್ಯಗ್ರನಾಗಿದ್ದಾನೆ’ - ಎಂದು ಬಳಸಲಾಗುವುದು. ಆದರೆ ಭಗವಂತ ಹಾಗೆ ವ್ಯಗ್ರನಲ್ಲ. ಮತ್ತೆ, ವಿಗತಃ ಅಗ್ರಃ ಯಸ್ಮಾತ್ ಸಃ ವ್ಯಗ್ರಃ ಯಾರಕ್ಕಿಂತ ಅಗ್ರನಾದವನು ಎತ್ತರದಲ್ಲಿರುವವನು ವಿಗತನಾಗಿರುವನೋ ತೊಲಗಿರುವನೋ ಅಂತಹವನು ವ್ಯಗ್ರ. ‘ವಿಗತ’ ಹೋಗಿರುವನು ಎಂದರೆ ಮೊದಲು ಇದ್ದ ಮತ್ತೆ ಹೋಗಿರುವನು ಎಂಬ ಅರ್ಥ ಇಲ್ಲ. ಮೂರು ಕಾಲಗಳಲ್ಲೂ ಇಲ್ಲ. ಹಿಂದೆಯೂ ಇರಲಿಲ್ಲ. ಈಗಲೂ ಇಲ್ಲ. ಮುಂದೆಯೂ ಇರುವುದಿಲ್ಲ. ಎಂದೇ ಅರ್ಥ ಆ ವಿಗತ ಶಬ್ದಕ್ಕೆ. ಹೀಗೆ

ಯಾರಕ್ಕಿಂತ ಅಗ್ರನಾಗಿರುವವನು, ಎತ್ತರದಲ್ಲಿರುವವನು ಮೂರು ಕಾಲಗಳಲ್ಲೂ ಇಲ್ಲವೋ ಅಂತಹವನೇ 'ವ್ಯಗ್ರ'. ಎಂದರೆ ಸರ್ವೋತ್ತಮನಾಗಿರುವವನು ಎಂಬ ಅರ್ಥ.

'ಅಗ್ರಪೂಜೆ' ಇತ್ಯಾದಿ ಕಡೆಗಳಲ್ಲಿ ಅಗ್ರ ಶಬ್ದವನ್ನು ಮೊದಲಿನ ಎಂಬ ಅರ್ಥದಲ್ಲಿ ಬಳಸಲಾಗಿದ್ದು ಇಲ್ಲೂ ಅಗ್ರ ಶಬ್ದಕ್ಕೆ ಅದೇ ಅರ್ಥ. 'ವಿ' ಎಂಬುದಕ್ಕೆ ವಿಶೇಷ ಎಂಬ ಅರ್ಥವೂ ಇದೆ. 'ವಿಗತ' ಎಂಬ ಅರ್ಥವೂ ಇದೆ. 'ವಿಜ್ಞಾನಿ' ಇತ್ಯಾದಿ ಕಡೆಗಳಲ್ಲಿ ವಿ ಶಬ್ದಕ್ಕೆ, ವಿಶೇಷ ಎಂಬ ಅರ್ಥ. 'ವಿಸ್ಮರಣೆ' ಇತ್ಯಾದಿ ಕಡೆಗಳಲ್ಲಿ ವಿ ಶಬ್ದಕ್ಕೆ ವಿಗತ ಎಂಬ ಅರ್ಥವೂ ಇದೆ. ಅದರಂತೆ ವ್ಯಗ್ರ ಎಂಬಲ್ಲಿ ವಿ ಶಬ್ದಕ್ಕೆ ವಿಗತ ಎಂಬುದೇ ಅರ್ಥ.

**೭೭೨. ನೈಕಶೃಂಗಃ –ಅನೇಕಾನೇಕ ಲಕ್ಷಣಗಳನ್ನು ಹೊಂದಿರುವವನು.**

**ವಿವರಣೆ :** ಶೃಂಗ ಶಬ್ದಕ್ಕೆ ಕೋಡು ಎಂಬ ಅರ್ಥವಿದೆ. ಆದರೆ ಇಲ್ಲಿ ಶೃಂಗ ಶಬ್ದ ಚಿಹ್ನೆ, ಲಕ್ಷಣ ಎಂಬ ಅರ್ಥದಲ್ಲಿ ಬಳಸಲ್ಪಟ್ಟಿದೆ. ನ +ಏಕಶೃಂಗಃ ನೈಕಶೃಂಗಃ ಒಂದೇ ಚಿಹ್ನೆ ಉಳ್ಳವನಲ್ಲ ; ಬದಲಾಗಿ ಅನೇಕಾನೇಕ ಚಿಹ್ನೆಗಳುಳ್ಳವನು. ಭಗವಂತನನ್ನು ಬಿಟ್ಟರೆ ಉಳಿದೆಲ್ಲ ವ.ಕ್ತಿಗಳಿಗೆ ಒಂದೊಂದು ಲಕ್ಷಣವಿರುವುದಷ್ಟೇ. 'ತೆಳ್ಳಗಿರುವ ವ್ಯಕ್ತಿ' 'ತುಂಬ ಮಾತನಾಡುವ ವ್ಯಕ್ತಿ' - ಹೀಗೆ ಒಂದೊಂದು ಲಕ್ಷಣದಿಂದಲೇ ಅವನ ಪರಿಚಯ ದೊರಕುವುದು.

ಆದರೆ ದೇವರಿಗೆ ಹಾಗಲ್ಲ. ಲಕ್ಷ್ಮೀಪತಿತ್ವ, ಸೃಷ್ಟಿಕರ್ತೃತ್ವ, ರಕ್ಷಕತ್ವ, ಸಂಹಾಕರತ್ವ - ಹೀಗೆ ಹೇಳುತ್ತ ಹೋದರೆ ಮುಗಿಸಲಾರದಷ್ಟು ಲಕ್ಷಣಗಳು ಭಗವಂತನಿಗಿದೆ. **'ನೈವೋದಾಪುರ್ಗೃಣಂತೋಽಂತಂ ಯದ್ಗುಣಾನಾಮಜಾದಯಃ'** ಬ್ರಹ್ಮಾದಿ ದೇವತೆಗಳೂ ಭಗವಂತನ ಗುಣಗಳನ್ನು ಲೆಕ್ಕಿಸುತ್ತ ಕೊನೆಯನ್ನು ಕಾಣಲಿಲ್ಲ ಎಂದು ಶ್ರೀ ಮಧ್ವ ಗುರುಗಳು ದ್ವಾದಶ ಸ್ತೋತ್ರದಲ್ಲಿ ಸ್ತುತಿಸಿರುವರು.

ದೇವರ ಜೊತೆಗೇ ಇರುವ ಲಕ್ಷ್ಮೀದೇವಿಯೂ ಕೂಡಾ **'ಬಗೆ ಬಗೆಯ ನೂತನವ ಕಾಣುತ......'** ಎಂದಿರುವಂತೆ ಭಗವಂತನಲ್ಲಿ ಹೊಸ ಹೊಸ ಗುಣಗಳನ್ನು ಕಾಣುತ್ತಲೇ ಇರುವಳು.

ಭಗವಂತನಿಗೆಯೇ ಎಲ್ಲ ಚಟುವಟಿಕೆಗಳನ್ನು ನಿರ್ವಹಿಸಲು ಬೇಕಾದ ಸಾಮರ್ಥ್ಯ ಇದ್ದರೂ ತತ್ತ್ವಾಭಿಮಾನಿ ದೇವತೆಗಳನ್ನು, ಗ್ರಹಗಳನ್ನು ಪ್ರೇರಕರನ್ನಾಗಿ ನಿಯೋಜಿಸಿ, ಅವರ ಮಾಧ್ಯಮದಲ್ಲಿ ಪ್ರೇರಣೆ ಮಾಡಿಸುವುದು ಒಂದು ಬಗೆಯ

ವೈಭವ ಎನಿಸಿದ್ದು ಅದನ್ನು 'ನಿಗ್ರಹ' ನಾಮ ತಿಳಿಸಿದರೆ 'ನೈಕಶೃಂಗ' ಎಂಬ ನಾಮವು ಅವನಲ್ಲಿ ಅನೇಕಾನೇಕ ಲಕ್ಷಣಗಳಿರುವುದನ್ನು ತಿಳಿಸಿ, ಆ ಪ್ರಯುಕ್ತ ಮತ್ತೊಂದು ಬಗೆಯ ವೈಭವವನ್ನು ಸಾರುತ್ತಿದೆ.

**೭೭೩. ಗದಾಗ್ರಜಃ –∗ ಕೃಷ್ಣಾವತಾರದಲ್ಲಿ ಗದನಿಗೆ ಅಣ್ಣನಾಗಿದ್ದವನು.**

**∗ ಸಂಸಾರ ರೋಗವನ್ನು ಕಬಳಿಸುವ ತಿಳುವಳಿಕೆಯನ್ನು ಉಂಟು ಮಾಡುವವನು.**

ವಿವರಣೆ : ಗದ ಎಂಬವನು ಕೃಷ್ಣನಿಗೆ ತಮ್ಮನಿದ್ದು ಅಂತಹವನ ಅಣ್ಣ ಗದಾಗ್ರಜ - ಎಂಬ ಅರ್ಥ ಇದ್ದೇ ಇದೆ.

ಮತ್ತೊಂದು ಹೊಸ ಅರ್ಥವನ್ನು ಹೀಗೆ ಚಿಂತನೆ ಮಾಡಬಹುದು - 'ಗದ' - ಎಂದರೆ ರೋಗ. ಯಾಕೆ ರೋಗಕ್ಕೆ ಗದ ಎಂಬ ಹೆಸರು ? ಗದಾತೀತಿ ಗದಃ ಹೇಳುತ್ತ ಇರುತ್ತದೆ. 'ನಾನು ಇದ್ದೇನೆ ನಾನು ಇದ್ದೇನೆ' ಎಂದು ಒಳಗಿನಿಂದ ಚುಚ್ಚುತ್ತ ಇರುತ್ತದೆ - ಎಂಬ ಅಭಿಪ್ರಾಯದಲ್ಲಿ ರೋಗವನ್ನು ಗದ ಎಂದು ಕರೆಯಲಾಗುವುದು.

ಎಲ್ಲರನ್ನೂ ಕಾಡುವ ರೋಗ ಯಾವುದು ? ಸಂಸಾರ ರೋಗ. ಇಂತಹ ಸಂಸಾರರೋಗವನ್ನು ಚೆನ್ನಾಗಿ ನುಂಗಿ ಹಾಕುವಂತಹದ್ದು 'ಗದಂ ಆ ಸಮ್ಯಕ್ ಗ್ರಸತೇ ಇತಿ' ಗದಾಗ್ರಮ್ - ತಿಳುವಳಿಕೆ. ಭಗವಂತನ ತಿಳುವಳಿಕೆ ಸಂಸಾರ ರೋಗವನ್ನು ದೂರ ಮಾಡುವುದು. ಅಂತಹ ತಿಳುವಳಿಕೆಯನ್ನು ನೀಡುವವನು - ಗದಾಗ್ರಂ ಜಾಯತೇ ಅಸ್ಮಾದಿತಿ ಗದಾಗ್ರಜಃ - ಭಗವಂತ. **'ವೈದ್ಯೋ ನಾರಾಯಣೋ ಹರಿಃ'** - ಎಂದಿರುವಂತೆ ಸಂಸಾರ ರೋಗಕ್ಕೆ ಔಷಧವಾದ ತಿಳುವಳಿಕೆಯನ್ನು ನೀಡುವ ವೈದ್ಯ ಭಗವಂತ.

ಮಹಾಭಾರತ ಯುದ್ಧದ ಆರಂಭದ ದಿನದಂದೇ ಶ್ರೀ ಕೃಷ್ಣ ಇಂತಹ ಮದ್ದಿನ ಅಂಗಡಿ ಇಟ್ಟಿದ್ದ. ಅದೇ ಭಗವದ್ಗೀತೆ ಮದ್ದು. ಅರ್ಜುನನ ರೋಗ ವಾಸಿಯಾದದ್ದೇ ಕೃಷ್ಣನ ಭಗವದ್ಗೀತೆ ಎಂಬ ಮದ್ದನಿಂದಲೇ.

ಔಷಧ ಹೇಗೆ ಒಳ್ಳೆಯ ಕೈಗುಣವುಳ್ಳ ವೈದ್ಯ ಮುಟ್ಟಿ ಕೊಡಲ್ಪಟ್ಟಾಗಲೇ ರೋಗಿಯ ರೋಗವನ್ನು ಪರಿಹರಿಸಲು ಸಮರ್ಥವೆನಿಸುವುದೋ ಹಾಗೆ ದೇವರ ಮೂಲಕ ಬಂದ ತಿಳುವಳಿಕೆಯೇ ಸಂಸಾರ ರೋಗದ ನಿರ್ಮೂಲನೆಗೆ ಸಮರ್ಥವಾಗುವುದು.

**ಚತುರ್ಮೂರ್ತಿಶ್ಚತುರ್ಬಾಹುಶ್ಚತುರ್ವ್ಯೂಹಶ್ಚತುರ್ಗತಿಃ |**
**ಚತುರಾತ್ಮಾ ಚತುರ್ಭಾವಶ್ಚತುರ್ವೇದವಿದೇಕಪಾತ್ ||೮೨||**

**೭೭೪. ಚತುರ್ಮೂರ್ತಿಃ – ಭಾವಿ ಚತುರ್ಮುಖ ಬ್ರಹ್ಮನನ್ನು ತನ್ನ ಮುಖ್ಯ ಪ್ರತಿಮೆಯನ್ನಾಗಿ ಇಟ್ಟುಕೊಂಡಿರುವವನು.**

ವಿವರಣೆ : 'ಚತುರವದನನ ರಾಣಿ.......'- ಎಂದು ಚತುರ್ಮುಖನನ್ನು, 'ಚತುರವದನ' ಎಂದೇ ಕರೆಯಲಾಗಿದೆ. 'ನಾಮನಿರ್ದೇಶೇ ನಾಮ್ಯೈಕನಿರ್ದೇಶಃ' ಎಂದು ಚತುರವದನ ಎನ್ನುವ ಬದಲು ಚತುರ ಎಂದೇ ಉಲ್ಲೇಖಿಸಲಾಗಿದೆ. ಚತುರ್ಮುಖನೂ ಭಗವಂತನಿಗೆ ಪೂರ್ಣ ಪ್ರಮಾಣದಲ್ಲಿ ಪ್ರತೀಕ ಎನಿಸಲಾರ. ಆದುದರಿಂದಲೇ ಚತುರಮೂರ್ತಿ ಎನ್ನದೆ ಚತುರಶಬ್ದದ ಕೊನೆಯ ಅಕ್ಷರವನ್ನು ಲೋಪಗೊಳಿಸಿ ಚತುರ್ಮೂರ್ತಿ ಎನ್ನಲಾಗಿದೆ.

ಚತುರ್ಮುಖಬ್ರಹ್ಮನಿಗೆ ಪೂಜೆ ಇಲ್ಲ. ಆದುದರಿಂದ ಭಾವಿ ಬ್ರಹ್ಮನನ್ನು ಮುಖ್ಯ ಪ್ರತಿಮೆಯನ್ನಾಗಿ ಇಟ್ಟುಕೊಂಡಿರುವವನು ಎಂದಿಟ್ಟುಕೊಳ್ಳಬೇಕು. ದೇವರು ಬೇಗ ಒಲಿಯಬೇಕೋ ಹಾಗಾದರೆ ಭಾವಿ ಬ್ರಹ್ಮನಾದ ವಾಯುದೇವನ ಆಂಜನೇಯ ರೂಪದ, ಭೀಮ ರೂಪದ ಇಲ್ಲವೇ ಮಧ್ವ ರೂಪದ ಪ್ರತಿಮೆಯನ್ನು ಇಟ್ಟುಕೊಳ್ಳಬೇಕು.

**೭೭೫. ಚತುರ್ಬಾಹುಃ –ಶತ್ರುಸೇನೆಯ ನಾಲ್ಕು ಅಂಗಗಳನ್ನು ನಾಶ ಪಡಿಸುವವನು.**

ವಿವರಣೆ : ಬಾಧತೇ ಇತಿ ಬಾಹುಃ - ಶತ್ರುಗಳಿಗೆ ಬಾಧೆಯನ್ನು, ಪೀಡೆಯನ್ನು ಉಂಟು ಮಾಡುವಂತಹದ್ದು ಬಾಹು.

ಕಾಲಾಳು, ಅಶ್ವ, ರಥ ಹಾಗೂ ಗಜ ಎಂಬುದಾಗಿ ನಾಲ್ಕು ಅಂಗಗಳನ್ನು ಒಳಗೊಂಡ ಸೇನೆ ಚತುರಂಗ ಸೇನೆ. ಶತ್ರುಗಳ ಇಂತಹ ಸೇನೆಯನ್ನು ಪೀಡಿಸುವ, ನಾಶ ಪಡಿಸುವ ಬಾಹುಗಳುಳ್ಳ ಪ್ರಯುಕ್ತ ಭಗವಂತ 'ಚತುರ್ಬಾಹುಃ'

'ಚತುರಬಾಹು' ಆಗಬೇಕಾಗಿದ್ದುದು ಕೊನೆಯ ಅಕ್ಷರ ಲೋಪ ಹೊಂದಿ 'ಚತುರ್ಬಾಹು' - ಎಂದು ಆಗಿರುವುದಕ್ಕೆ ಕಾರಣ ಶತ್ರುಗಳ ಚತುರಂಗ ಸೇನೆಯನ್ನು ನಾಶಗೈಯಲು ಭಗವಂತನ ಪೂರ್ಣಬಲದ ಪ್ರಯೋಗ ಬೇಕಿಲ್ಲ. ಸ್ವಲ್ಪ ಬಲದಿಂದಷ್ಟೇ ನಾಲ್ಕು ಬಗೆಯ ಸೇನೆಯನ್ನೂ ಪೀಡಿಸಬಲ್ಲ. ದೇವರಿಗೆ ಬೇಸರ ಇದ್ದರೆ ಅದಕ್ಕಾಗಿಯೇ. ತನ್ನ ಬಲವನ್ನು ಪೂರ್ಣವಾಗಿ ಬಳಸಲು ಅವಕಾಶವೇ ಇಲ್ಲ ತಾನೇ?

ಅವನ ಬಲದ ಒಂದಂಶದಿಂದಷ್ಟೇ ಎಂತಹ ಸೇನೆಯ ದಮನವೂ ಆಗಬಲ್ಲದು.

ಹೀಗೆ ಅವನ ಬಲದ ಪೂರ್ಣಪ್ರಯೋಗ ಎಲ್ಲೂ ನಡೆಯದ ಪ್ರಯುಕ್ತ ಅದನ್ನು ಸೂಚಿಸುವುದಕ್ಕಾಗಿಯೇ 'ಚತುರ್ಬಾಹು' - ಎಂದು ಅಕಾರದ ಲೋಪವನ್ನು ಮಾಡಲಾಗಿದೆ.

ಶ್ರೀಕೃಷ್ಣ ತನ್ನ ವಿಶ್ವರೂಪವನ್ನು ಉಪಸಂಹರಿಸಿದ ಬಳಿಕ **'.... ತೇನೈವ ರೂಪೇಣ ಚತುರ್ಭುಜೇನ......'** ಎಂದು ಕೃಷ್ಣ ಚತುರ್ಭುಜನಾಗಿ ಮಹಾಭಾರತ ಯುದ್ಧದಲ್ಲಿ ಪಾಲ್ಗೊಂಡಿದ್ದನೆಂದು ಉಲ್ಲೇಖ ಬರುವುದು. ಆದರೆ ಕೃಷ್ಣ ಎರಡು ಕೈಗಳನ್ನಷ್ಟೇ ಆಗ ಧರಿಸಿದ್ದ. ಹೀಗಿದ್ದರೂ ಅವನು 'ಚತುರ್ಭುಜ'ನಾಗಿದ್ದ. ಯಾಕೆಂದರೆ - ಚತುರ್ವಿಧಂ ಅನ್ನಂ - ಯುದ್ಧಸ್ಯ ಚತುರಂಗಂ ಭುಂಕ್ತೇ ಇತಿ - ಎಂಬ ವ್ಯುತ್ಪತ್ತಿಯನ್ನಿಟ್ಟುಕೊಂಡು ದುರ್ಯೋಧನನ ಸೇನೆಯ ಕಾಲಾಳು, ಕುದುರೆ, ಆನೆ ಹಾಗೂ ರಥ ಎಂಬ ನಾಲ್ಕು ಘಟಕಗಳನ್ನು ಅನ್ನವನ್ನಾಗಿ ಕಬಳಿಸಿದವನು - ಎಂಬ ಅರ್ಥದಲ್ಲಿ 'ಚತುರ್ಭುಜ' ಎನಿಸಿದ್ದ.

ಭೀಷ್ಮರು ತಾವು ಕೌರವ ಸೇನೆಯ ಅಧಿಪತಿಯಾಗಿದ್ದು ಆ ಸೇನೆಯ ಚತುರಂಗಗಳನ್ನು ಕರೆ ತಂದಾಗ ಕೃಷ್ಣ ಯುದ್ಧದಲ್ಲಿ ಅವನ್ನೆಲ್ಲ ನಾಶ ಮಾಡಿಸಿ 'ಚತುರ್ಬಾಹು' ಆಗಿ ಮೆರೆದದ್ದನ್ನು ಮೆಲುಕು ಹಾಕುತ್ತ 'ಚತುರ್ಬಾಹುಃ' ಎಂದು ಸ್ತುತಿಸಿರುವರು.

**೭೭೬. ಚತುರ್ವ್ಯೂಹಃ – * ನಾಲ್ಕು ರೂಪಗಳ ಗುಂಪು ಉಳ್ಳವನು.**

*** ನಾಲ್ಕು ವೇದಗಳಲ್ಲಿ, ಬ್ರಹ್ಮಸೂತ್ರದ ನಾಲ್ಕು ಅಧ್ಯಾಯಗಳಲ್ಲಿ ಯಾರ ಬಗ್ಗೆ ವಿಶಿಷ್ಟ ವಿಮರ್ಶೆ ನಡೆದಿದೆಯೋ ಅಂತಹವನು.**

ವಿವರಣೆ: ವ್ಯೂಹ ಎಂದರೆ ಗುಂಪು. ಗುಂಪು ಎರಡು ಮೂರು ಬಗೆಗಳಾಗಿ ಇರುವುದು. ಸಂತೆಯಲ್ಲೂ ಗುಂಪು ಇದೆ. ರಾಜಾಂಗಣದಲ್ಲೂ ಗುಂಪು ಇದೆ. ಮಹಾಭಾರತ ಯುದ್ಧದ ಅವಧಿಯಲ್ಲಿ ಕುರುಕ್ಷೇತ್ರದಲ್ಲೂ ಗುಂಪು ಇತ್ತು.

ಸಂತೆಯಲ್ಲಿ ಇರುವ ಗುಂಪು ಯದ್ವಾತದ್ವಾ ಇರುವಂತಹದ್ದು. ಅದನ್ನು ವ್ಯೂಹ ಎನ್ನಲಾಗುವುದಿಲ್ಲ. ರಾಜಾಂಗಣದಲ್ಲಿ ಪ್ರವಚನಕ್ಕಾಗಿ ಸೇರಿದ ಗುಂಪು - ವ್ಯವಸ್ಥಿತವಾಗಿ ಇದ್ದು ವ್ಯೂಹ ಎನಿಸಲು ಅರ್ಹವಾಗಿದೆ.

ಯುದ್ಧಾಂಗಣದಲ್ಲೂ ಚಕ್ರದ ಆಕಾರದಲ್ಲಿದ್ದ ಗುಂಪು 'ಚಕ್ರವ್ಯೂಹ' ಎಂದೂ ಬೇರೆ ಬೇರೆ ಆಕಾರಗಳಲ್ಲಿದ್ದ ಗುಂಪು 'ಪದ್ಮವ್ಯೂಹ' ಇತ್ಯಾದಿಯಾಗಿಯೂ

ವ್ಯವಹರಿಸಲ್ಪಡುವುದು.

ದೇವರು ಬ್ರಹ್ಮಾಂಡದಲ್ಲೂ, ಪಿಂಡಾಂಡದಲ್ಲೂ ಸೃಷ್ಟಿಯೇ ಮುಂತಾದ ಚಟುವಟಿಕೆಗಳನ್ನು ಪ್ರತ್ಯೇಕವಾಗಿ ನಡೆಸಲು ವಾಸುದೇವ, ಸಂರ್ಕಣ, ಪ್ರದ್ಯುಮ್ನ ಹಾಗೂ ಅನಿರುದ್ಧ- ಎಂಬ ನಾಲ್ಕು ರೂಪಗಳ ವ್ಯೂಹವನ್ನೂ, ವಿಶ್ವ ತೈಜಸ, ಪ್ರಾಜ್ಞ ಹಾಗೂ ತುರ್ಯ ಎಂಬ ನಾಲ್ಕು ರೂಪಗಳ ವ್ಯೂಹವನ್ನೂ, ಆತ್ಮ, ಅಂತರಾತ್ಮ, ಪರಮಾತ್ಮ ಹಾಗೂ ಜ್ಞಾನಾತ್ಮ ಎಂಬ ನಾಲ್ಕು ರೂಪಗಳ ವ್ಯೂಹವನ್ನೂ ಹೀಗೆ ಬೇರೆ ಬೇರೆ ಬಗೆಯ ನಾಲ್ಕು ರೂಪಗಳ ವ್ಯೂಹಗಳನ್ನು ಸ್ವೀಕರಿಸಿರುವುದರಿಂದ ಚತುರ್ವ್ಯೂಹ ಎನಿಸಿರುವನು.

ಆ ನಾಮಕ್ಕೆ ಇನ್ನೊಂದು ಬಗೆಯಿಂದ ಅರ್ಥಚಿಂತನೆ ನಡೆಸಬಹುದು - ವ್ಯೂಹ - ಎಂದರೆ ವಿ+ಊಹ ಸೇರಿ ಆದ ರೂಪ ಎಂದಿಟ್ಟುಕೊಳ್ಳಬೇಕು. 'ಊಹ ವಿತರ್ಕೇ' - ಎಂಬ ಕ್ರಿಯಾಪದದಿಂದ ನಿಷ್ಪನ್ನವಾದ ಊಹ ಶಬ್ದಕ್ಕೆ ವಿಮರ್ಶೆ ಎಂದರ್ಥ. ವಿಶಿಷ್ಟವಾದ ಊಹೆ, ವಿಮರ್ಶೆ ವ್ಯೂಹ ಎನಿಸಿದೆ. ನಾಲ್ಕು ವೇದಗಳಲ್ಲಿ ಯಾರ ಬಗ್ಗೆ ವಿಶಿಷ್ಟವಾದ ವಿಮರ್ಶೆ ಇದೆಯೋ ಅಂತಹವನು 'ಚತುರ್ವ್ಯೂಹ'. ಹಾಗೆಯೇ 'ಚತುರ್' ಶಬ್ದ ಬ್ರಹ್ಮಸೂತ್ರದ ನಾಲ್ಕು ಅಧ್ಯಾಯಗಳನ್ನು ತಿಳಿಸುವುದು. ನಾಲ್ಕು ಅಧ್ಯಾಯಗಳ ಬ್ರಹ್ಮಸೂತ್ರ ಭಗವಂತನ ಬಗ್ಗೆ ವಿಶಿಷ್ಟವಾದ ವಿಮರ್ಶೆಗಾಗಿಯೇ ಹೊರಟಿರುವಂತಹದ್ದು. ಆದ್ದರಿಂದ 'ಚತುರ್ಷು' - ಬ್ರಹ್ಮಸೂತ್ರದ ನಾಲ್ಕು ಅಧ್ಯಾಯಗಳಲ್ಲಿ ವ್ಯೂಹಃ - ವಿಶಿಷ್ಟವಾದ ವಿಮರ್ಶೆ ಯಾರ ಬಗ್ಗೆ ಇದೆಯೋ ಅಂತಹವನು 'ಚತುರ್ವ್ಯೂಹ'

ವೇದವ್ಯಾಸರು ಬ್ರಹ್ಮಸೂತ್ರದ ಮೊದಲ ಅಧ್ಯಾಯದಲ್ಲಿ ದೇವರ ಪರಿಚಯವನ್ನು ತಿಳಿಸಿದರು. ದೇವರ ವಿಷಯದಲ್ಲಿ ಪರಸ್ಪರವಾಗಿ ವಿರುದ್ಧ ಅಭಿಪ್ರಾಯ ಪಡುವ ಇಪ್ಪತ್ತೊಂದು ವಾದಿಗಳು ದೇವರ ವಿಷಯದಲ್ಲಿ ಮಾಡಿರುವ ತಪ್ಪು ಕಲ್ಪನೆಗಳನ್ನು ಎರಡನೇ ಅಧ್ಯಾಯದಲ್ಲಿ ನಿರಾಕರಿಸಿದರು. ಹಾಗಾದರೆ ಅಂತಹ ದೇವರನ್ನು ನಾನು ಹೇಗೆ ತಿಳಿಯಲಿ ? ಎಂದು ಜಿಜ್ಞಾಸುವಿಗೆ ಬರಬಹುದಾದ ಜಿಜ್ಞಾಸೆಯನ್ನು ಪರಿಹರಿಸಲು ಮೂರನೇ ಅಧ್ಯಾಯದಲ್ಲಿ ದೇವರನ್ನು ವೈರಾಗ್ಯ, ಭಕ್ತಿ, ಧ್ಯಾನ, ಜ್ಞಾನಗಳಿಂದ ತಿಳಿದುಕೊಳ್ಳಬಹುದೆಂದು ಪ್ರತಿಪಾದಿಸಿದರು. ದೇವರನ್ನು ತಿಳಿದದ್ದರಿಂದ ಏನು ಲಾಭ ? - ಎಂಬ ಜಿಜ್ಞಾಸೆಗೆ ನಾಲ್ಕನೇ-ಅಧ್ಯಾಯದಲ್ಲಿ ದೇವರ ತಿಳುವಳಿಕೆಗೆ ಫಲವಾಗಿ ಮೋಕ್ಷ ರೂಪವಾದ ಫಲವನ್ನು ತಿಳಿಸಿಕೊಟ್ಟಿರುವರು.

ಹೀಗೆ ಬ್ರಹ್ಮಸೂತ್ರಗಳ ನಾಲ್ಕು ಅಧ್ಯಾಯಗಳಲ್ಲಿ ದೇವರ ಬಗ್ಗೆ ವಿಮರ್ಶೆ

ನಡೆಸಲಾಗಿರುವುದರಿಂದ ಅಂತಹ ದೇವರನ್ನು 'ಚತುರ್ವ್ಯೂಹ' ಎಂದು ಕರೆಯಲಾಗಿದೆ.

**೭೭೭. ಚತುರ್ಗತಿಃ – ನಾಜೂಕಾದ ಆಶ್ರಯ.**

**ವಿವರಣೆ :** 'ನೀನೇ ಗತಿ....' - ಎಂದೆಲ್ಲ ವ್ಯವಹರಿಸಲಾಗುವುದು. ಇಲ್ಲಿ ಗತಿ ಎಂದರೆ ಆಶ್ರಯ ಎಂಬ ಅರ್ಥ. ಹಾಗೆಯೇ ಪ್ರಕೃತದಲ್ಲೂ ಭಗವಂತನು ಚತುರನಾದ ಗತಿ - ನಾಜೂಕಾದ ಆಶ್ರಯ - ಎಂಬ ಅರ್ಥದಲ್ಲಿ ಚತುರ್ಗತಿ ಎನಿಸಿರುವನು.

ಭಗವಂತ ಆಶ್ರಯ ಕೊಟ್ಟನೆಂದರೆ ಅವನ ವಿರುದ್ಧವಾಗಿ ಯಾರೂ ನಡೆದುಕೊಳ್ಳುವಂತಿಲ್ಲ. ಆದುದರಿಂದ ಅವನು 'ಚತುರಗತಿ'. ಸಂಸಾರಾವಸ್ಥೆಯಲ್ಲಷ್ಟೇ ಅಲ್ಲದೆ, ಮೋಕ್ಷಾವಸ್ಥೆಯಲ್ಲಿಯೂ ಅವನು 'ಗತಿ' - ಆಶ್ರಯನಾಗಿರುವುದರಿಂದ ಅವನು 'ಚತುರಗತಿ.'

ಒಂದು ಕಾಲದಲ್ಲಿ ದುರ್ಯೋಧನನ್ನು ತಮಗೆ 'ಗತಿ' ಆಶ್ರಯ ಎಂದು ಭಾವಿಸಿದ್ದ ಭೀಷ್ಮರು ಈಗ ತಮ್ಮೆದುರು ಕುಳಿತಿರುವ ಕೃಷ್ಣನನ್ನು ಸಂಬೋಧಿಸಿ - ನೀನೇ 'ಚತುರ್ಗತಿ' - ಎಂದು ಸ್ತುತಿಸುತ್ತಿರುವರು.

**೭೭೮. ಚತುರಾತ್ಮಾ – * ನಾಲ್ಕು ಬಗೆಯ ಮನಸ್ಸುಗಳನ್ನು ಒದಗಿಸಿ ಕೊಡುವನು.**

*** ಚುರುಕಾದ ಮನಸ್ಸನ್ನು ನೀಡುವವನು.**

**ವಿವರಣೆ :** ಆತ್ಮಾ ಎಂಬುದಕ್ಕೆ ದೇಹ, ಜೀವ, ಮನಸ್ಸು, ದೇವರು ಹೀಗೆ ಅನೇಕ ಅರ್ಥಗಳಿವೆ. 'ಆದತ್ತೇ ಇತಿ ಆತ್ಮಾ' - ಸ್ವೀಕರಿಸುವವನು ಎಂಬ ಅರ್ಥದಲ್ಲಿ ಆತ್ಮಾ ಎಂಬ ಶಬ್ದ ರೂಪುಗೊಂಡಿದೆ. ಶರೀರವು ಆಹಾರವನ್ನು ಸ್ವೀಕರಿಸುವುದರಿಂದ ಆತ್ಮಾ ಎನಿಸಿದೆ. ಮನಸ್ಸು ಕೂಡಾ ವಿಷಯ ಪದಾರ್ಥಗಳನ್ನು ಸ್ವೀಕರಿಸುವುದರಿಂದ ಆತ್ಮಾ ಎನಿಸಿದೆ. ಮನಸ್ಸಿನ ಸುಖ ದುಃಖಾದಿ ಧರ್ಮಗಳನ್ನು ತನ್ನದ್ದನ್ನಾಗಿ ಜೀವ ಸ್ವೀಕಾರ ಮಾಡುವುದರಿಂದ ಆತ್ಮಾ ಎನಿಸುವನು. ಸಮಸ್ತ ಜಗತ್ತಿಗೆ ಒಡೆಯನಾಗಿರುವ ಭಗವಂತನು ಜಗತ್ತಿನ ಪ್ರತಿಯೊಂದು ವಸ್ತುವನ್ನೂ ತನ್ನದ್ದನ್ನಾಗಿ ಸ್ವೀಕಾರ ಮಾಡುವುದರಿಂದ ಆತ್ಮಾ ಎನಿಸುವನು.

ನಾಲ್ಕು ಬಗೆಯ ಮನಸ್ಸುಗಳನ್ನು ಪ್ರತಿಯೊಬ್ಬರಿಗೂ ನೀಡುವುದರಿಂದ ದೇವರನ್ನು ಚತುರಾತ್ಮಾ ಎಂದು ಸ್ತುತಿಸಲಾಗಿದೆ.

ಬೇರ ಬೇರೆ ಕಾರ್ಯದ ಆಚರಣೆಗೆ ಸಂಬಂಧಿಸಿದಂತೆ ಮನಸ್ಸಿನ ಬೇರೆ

ಬೇರೆ ಭಾಗವನ್ನು ಬೇರೆ ಬೇರೆ ಹೆಸರಿನಿಂದ ಕರೆಯಲಾಗುವುದು.

ಹೋಗಬೇಕೋ ಬೇಡವೋ, ? ಮಾಡಬೇಕೋ, ಬೇಡವೋ - ಇತ್ಯಾದಿಯಾಗಿ ವಿಕಲ್ಪಾತ್ಮಕವಾಗಿ ಚಿಂತಿಸುವ ಮನಸ್ಸಿನ ಭಾಗವನ್ನು 'ಮನಃ' - ಎಂದು ಕರೆಯಲಾಗುವುದು.

'ನಾನು ಹೋಗಿಯೇ ತೀರುವೆನು' 'ಮಾಡಿಯೇ ತೀರುವೆನು'- ಇತ್ಯಾದಿಯಾಗಿ ನಿಶ್ಚಯಾತ್ಮಕವಾದ ಮನಸ್ಸಿನ ಭಾಗ 'ಬುದ್ಧಿ' ಎನಿಸುವುದು.

ಎಲ್ಲಾ ಚಟುವಟಿಕೆಗಳಿಗೆ 'ನಾನು' ಮತ್ತು 'ನನ್ನದು' - ಇವುಗಳನ್ನು ಹಚ್ಚುವ ಮನಸ್ಸಿನ ಭಾಗ 'ಅಹಂ' ಎನಿಸಿದೆ.

ಸ್ಮರಣೆಗೆ ಕಾರಣವಾದ ಮನಸ್ಸಿನ ಭಾಗವನ್ನು 'ಚಿತ್ತ' ಎಂದು ಕರೆಯಲಾಗುವುದು.

ಹೀಗೆ ಮನಸ್ಸು, ಬುದ್ಧಿ, ಅಹಂಕಾರ ಹಾಗೂ ಚಿತ್ತ ಎಂಬ ನಾಲ್ಕು ಬಗೆಯ ಮನಸ್ಸನ್ನು ನೀಡುವುದರಿದ ದೇವರು 'ಚತುರಾತ್ಮಾ' ಎನಿಸುವನು.

ಹಾಗೆಯೇ ಮನಸ್ಸಿನ ನಾಲ್ಕು ಪ್ರಭೇದಗಳನ್ನು ನೀಡಿ, ಚತುರವಾದ, ಚುರುಕಾದ ಮನಸ್ಸು ದೊರಕುವಂತೆ ಮಾಡುವವನು - ಚತುರ ಆತ್ಮಾ ಯಸ್ಮಾತ್ ಸಃ ಎಂಬ ನಿರ್ವಚನದ ಪ್ರಕಾರವೂ ಅವನು 'ಚತುರಾತ್ಮಾ'

**೭೭೯. ಚತುರ್ಭಾವಃ – ನಾಲ್ಕು ಬಗೆಯ ಭಕ್ತಿಯನ್ನು ಪಡೆಯುವವನು.**

ವಿವರಣೆ : ಭಾವ ಎಂದರೆ ಭಕ್ತಿ. ನಾಲ್ಕು ಬಗೆಯ ಭಕ್ತಿಯನ್ನು ಭಕ್ತಜನರಿಂದ ಪಡೆದುಕೊಳ್ಳುವುದರಿಂದ ದೇವರು 'ಚತುರ್ಭಾವ' ಎನಿಸುವನು.

**ಚತುರ್ವಿಧಾ ಭಜಂತೇ ಮಾಂ ಜನಾ ಸುಕೃತಿನೋಽರ್ಜುನ |**
**ಆರ್ತೋ ಜಿಜ್ಞಾಸುರರ್ಥಾರ್ಥೀ ಜ್ಞಾನೀ ಚ ಭರತರ್ಷಭ ||**

- ಎಂಬ ಗೀತಾಚಾರ್ಯನ ಮಾತಿನಲ್ಲಿ ನಾಲ್ಕು ಬಗೆಯ ಭಕ್ತರ ಉಲ್ಲೇಖ ಬಂದಿದೆ.

ರಾಜಾಂಗಣದಲ್ಲಿ ಎಷ್ಟು ಸಂಖ್ಯೆಯಲ್ಲಿ ಭಕ್ತರು ಸೇರಿದ್ದರೂ ಅವರನ್ನೆಲ್ಲ ನಾಲ್ಕು ವರ್ಗಗಳಲ್ಲಿ ವಿಂಗಡಿಸಬಹುದಾಗಿದೆ.

ಮೊದಲಿನ ಭಕ್ತರು ಆರ್ತರು. ಮನೆಯಲ್ಲಿ ತುಂಬ ಸಮಸ್ಯೆಗಳಿಗೆ ಒಳಗಾಗಿ ಆ ಸಮಸ್ಯೆಗಳ ಪರಿಹಾರಕ್ಕಾಗಿ ದೇವರ ಮೇಲೆ ಭಕ್ತಿ ಮಾಡುವವರು.

ದೇವರ ಬಗ್ಗೆ ಸ್ವಾಮಿಗಳು ಏನು ಹೇಳ್ತಾರೆ ಎಂದು ನೋಡಬೇಕು ಎಂದು ಕುತೂಹಲಕ್ಕೋಸ್ಕರ ದೇವರಲ್ಲಿ ಭಕ್ತಿ ತಾಳುವವರು 'ಜಿಜ್ಞಾಸು' ಭಕ್ತರು.

ಇನ್ನು ಕೆಲವರು ಅರ್ಥಾರ್ಥಿಗಳು. ದುಡ್ಡಿಗಾಗಿ ದೇವರನ್ನು ಭಜಿಸುವವರು.

ಹೀಗೆ ಬೇರೆ ಬೇರೆ ಕಾರಣಕ್ಕಾಗಿ ದೇವರನ್ನು ಭಜಿಸುವವರಾದರೂ ಇವರನ್ನು ಕೃಷ್ಣ 'ಸುಕೃತಿನಃ' - ಪುಣ್ಯಶಾಲಿಗಳು ಎಂಬ ವಿಶೇಷಣದಿಂದ ಅಭಿನಂದಿಸಿರುವನು.

ಆರ್ತರು ತಮ್ಮ ಸಮಸ್ಯೆಗಳ ಪರಿಹಾರಕ್ಕಾಗಿ ಎಲ್ಲೆಲ್ಲೋ ಹೋಗದೆ ದೇವರಲ್ಲೇ ಬೇಡುತ್ತಿದ್ದಾರೆ ಎಂದರೆ ಇದು ತುಂಬ ಪುಣ್ಯದ ಪರಿಣಾಮವಾದ ಪ್ರವೃತ್ತಿ.

ಹಾಗೆಯೇ ಅರ್ಥಾರ್ಥಿಗಳು ಹಣಕ್ಕಾಗಿ ಯಾರ್‍ಯಾರೋ ಧನಿಕನ ಬೆನ್ನು ಹತ್ತದೆ 'ಬೇಡಿದರೆ ಎನ್ನೊಡೆಯನ ಬೇಡುವೆ....' - ಎಂದು ದಾಸರು ಹಾಕಿಕೊಟ್ಟ ಮಾರ್ಗದರ್ಶನದಂತೆ ದೇವರನ್ನೇ ಭಜಿಸುವವರು ಹಾಗೆ ಭಜಿಸಲು ಅನೇಕ ಜನ್ಮಗಳಲ್ಲಿ ಪುಣ್ಯ ಮಾಡಿದ್ದಿರಬೇಕು.

ಅಂತೇಯೇ ಯಾವುದ್ಯಾವುದೋ ಭೌತಿಕ ವಸ್ತುಗಳ ಬಗ್ಗೆ, ಚಟುವಟಿಕೆಗಳ ಬಗ್ಗೆ ಜಿಜ್ಞಾಸೆಯನ್ನು ತೋರಿಸದೆ ದೇವರ ಬಗ್ಗೆಯ ಜಿಜ್ಞಾಸೆ ತಾಳಿದ್ದಾರೆಂದರೆ ಅಂತಹ 'ಜಿಜ್ಞಾಸು' ಭಕ್ತರೂ ಅನೇಕ ಜನ್ಮಗಳಲ್ಲಿ ಮಾಡಿದ ಪುಣ್ಯದ ಪ್ರಭಾವದಿಂದಾಗಿಯೇ ಹೀಗೆ ಪರಮಾತ್ಮನಲ್ಲಿ ಜಿಜ್ಞಾಸೆ ತೋರಿಸುತ್ತಿರುವರು.

ದೇವರ ಮಹಿಮೆಗಳ ಬಗ್ಗೆ, ದೇವರು ಅನುಗ್ರಹಿಸುತ್ತಿರುವ ಉಪಕಾರಗಳ ಬಗ್ಗೆ ತಿಳಿಯಾದ ತಿಳುವಳಿಕೆ ಪಡೆದು, ಕೃತಜ್ಞತಾಭಾವನೆಯಿಂದ ದೇವರಲ್ಲಿ ಭಕ್ತಿ ಮಾಡುವ 'ಜ್ಞಾನಿ ಭಕ್ತರು' ಹಿಂದೆ ನಿರ್ದೇಶಿಸಿದ ಮೂರು ಬಗೆಯ ಭಕ್ತರಿಗಿಂತಲೂ ವಿಲಕ್ಷಣರಾದವರು, ವಿಶಿಷ್ಟರಾದವರು. ಆರ್ತರಾದ ಭಕ್ತರಾಗಲೀ, ಅರ್ಥಾರ್ಥಿಗಳಾದ ಭಕ್ತರಾಗಲೀ ತಮ್ಮ ಸಮಸ್ಯೆಗಳು ಪರಿಹಾರವಾಯಿತೆಂದರೆ, ತಮಗೆ ಸಂಪತ್ತು ಬಂತೆಂದರೆ ಮತ್ತೆ ದೇವರನ್ನು ಭಜಿಸುವುದನ್ನು ಬಿಟ್ಟುಬಿಡಬಹುದು.

ಜ್ಞಾನಿ - ಭಕ್ತನಾಗಿರುವವನಂತೂ ಜ್ಞಾನಪೂರ್ವಕವಾಗಿ ಭಕ್ತಿ ಮಾಡುವುದರಿಂದ ಭಗವಂತನಲ್ಲಿಯ ಭಕ್ತಿಯನ್ನು ಎಂದೆಂದೂ ಉಪಸಂಹಾರ ಮಾಡಲಾರ. ಆದುದರಿಂದಲೇ ಈ ಬಗೆಯ ಭಕ್ತರನ್ನು ಶ್ರೀಕೃಷ್ಣ ತುಂಬ ಅಭಿನಂದಿಸಿರುವರು.

ಹೀಗೆ ನಾಲ್ಕು ಬಗೆಯ ಭಕ್ತರ ನಾಲ್ಕು ವಿಧದ ಭಕ್ತಿಯನ್ನು ಹೊಂದುವವನಾಗಿರುವುದರಿಂದ ಭಗವಂತ ಚತುರ್ಭಾವ ಎನಿಸುವನು.

**೭೮೦. ಚತುರ್ವೇದವಿದೇಕಪಾತ್ – ಜೊತೆಗೇ ಇದ್ದುಕೊಂಡು ಮುಖ್ಯರಕ್ಷಕನಾಗಿರುವವನೆಂದು ನಾಲ್ಕು ವೇದಗಳಿಂದ ತಿಳಿಯಲ್ಪಡುವವನು.**

ವಿವರಣೆ : ಕೆಲವರು 'ಚತುರ್ವೇದವಿತ್' 'ಏಕಪಾತ್' ಎಂಬುದಾಗಿ ಎರಡು ನಾಮಗಳನ್ನಾಗಿಟ್ಟು ಕೊಳ್ಳುವರು. ನಾವು ಒಂದೇ ನಾಮವನ್ನಾಗಿಟ್ಟುಕೊಂಡು ಅರ್ಥ ಚಿಂತನೆ ನಡೆಸೋಣ.

ಚತುರ್ವೇದವಿತ್ - ನಾಲ್ಕು ವೇದಗಳಿಂದ ತಿಳಿಯಲ್ಪಡುವವನು. ಏನೆಂದು ತಿಳಿಯಲ್ಪಡುವವನು ? 'ಏಕಪ' - ಏಕ ಎಂದರೆ ಮುಖ್ಯ. ಪ ಎಂದರೆ ರಕ್ಷಕ. ತಂದೆ ನಿಜವಾಗಿ ರಕ್ತಕನೆಂದರೆ 'ಪ' - ಎಂದೇ ಕರೆಯಲ್ಪಡಬೇಕು. ಸರಿಯಾದ ರಕ್ತಕನಲ್ಲದಿದ್ದರೆ 'ಅಪ' - ಎಂದೆನಿಸುವನಷ್ಟೇ.

ದೇವರು ಮುಖ್ಯ ರಕ್ತಕನಾಗಿರುವುದರಿಂದ ಏಕಪ ಎನಿಸುವನು. ಹೇಗೆ ಮುಖ್ಯ ರಕ್ಷಣೆ ಮಾಡ್ತಾನೆ ? - 'ಅತ್' - 'ಅತ ಸಾತತ್ಯಗಮನೇ' ಕ್ರಿಯಾರೂಪದಿಂದ ನಿಷ್ಪನ್ನವಾದ ಅತ್ ಶಬ್ದಕ್ಕೆ ಸತತವಾಗಿ, ಯಾವಾಗಲೂ ನಮ್ಮ ಜೊತೆಗೆ ಬರುವವನು ಎಂಬ ಅರ್ಥ.

ದೇವರು ಯಾವಾಗಲೂ ನಮ್ಮ ಜೊತೆಗೆ ಬರುವವನಾಗಿ 'ಅತ್' ಆಗಿ 'ಏಕಪ' ಮುಖ್ಯರಕ್ಷಕನಾಗಿರುವನು.

ಉಳಿದ ತಂದೆ, ತಾಯಿ, ಗುರು, ಹಿರಿಯರೆಲ್ಲ ನಮ್ಮ ರಕ್ಷಕರಿರಬಹುದು. ಆದರೆ ಕಾಲದೇಶಗಳಿಗೆ ಸೀಮಿತವಾದ ರಕ್ಷಣೆ ಅವರದ್ದು, ಆದರೆ ದೇವರು ಹಾಗಲ್ಲ. **'ಕಣ್ಣಿಗೆ ಎದೆಯಂದದಿ....'** ಎಂದು ತಿಳಿಸಿರುವಂತೆ ನಮ್ಮ ಜೊತೆಗೇ ಇದ್ದುಕೊಂಡು ನಮಗೆ ರಕ್ಷಕನಾಗಿರುವವನು. ಹಾಗೆ ಕಾಣಿಸಿಕೊಂಡು ನಮ್ಮ ಜೊತೆಗೇ ಇದ್ದರೆ ಕೆಲವೊಂದು ಪ್ರಸಂಗಗಳಲ್ಲಿ ನಮಗೆ ಅದೊಂದು ಶಿಕ್ಷೆಯಂತೆ ಕಾಣಬಹುದು. ಅದಕ್ಕಾಗಿ ಕಾಣಿಸಿಕೊಳ್ಳದೆಯೇ ನಮ್ಮ ಜೊತೆಗೆ ಇದ್ದುಕೊಂಡು ನಮಗೆ ಮುಖ್ಯರಕ್ಷಕನಾಗಿರುವನು.

ಚತುರ್ಮುಖನಿಗೆ ಸೃಷ್ಟಿಯ ಕಾರ್ಯವನ್ನೂ, ರುದ್ರನಿಗೆ ಸಂಹಾರಕಾರ್ಯವನ್ನೂ ನೀಡಿ, ತಾನು ರಕ್ಷಣೆಯ ಕಾರ್ಯವನ್ನು ತೆಗೆದುಕೊಂಡು ಅದನ್ನು ಈ ರೀತಿಯಾಗಿ ಎಲ್ಲರ ಜೊತೆಗೆಯೇ, ಅವರ ಒಳಗೆಯೇ ಇದ್ದುಕೊಂಡು ನಡೆಸುತ್ತಿರುವನು. ನಾಲ್ಕು ವೇದಗಳಲ್ಲೂ ಭಗವಂತನ ಈ ಬಗೆಯ ರಕ್ಷಣೆಯ ವೈಖರಿಯ ನಿರೂಪಣೆ ನಡೆದಿದೆ..

ಇದನ್ನೇ ಭೀಷ್ಮರು 'ಚತುರ್ವೇದವಿದೇಕಪಾತ್' ನಾಲ್ಕು ವೇದಗಳಲ್ಲೂ ಎಲ್ಲರ ಜೊತೆಗೇ ಇದ್ದುಕೊಂಡು ಎಲ್ಲರ ಪಾಲಿಗೆ ಮುಖ್ಯ ರಕ್ಷಕನಾಗಿರುವನೆಂದು ತಿಳಿಯಲ್ಪಟ್ಟಿರುವವನು ಎಂದು ಸ್ತುತಿಸಿರುವರು.

**ಸಮಾವರ್ತೋ ನಿವೃತ್ತಾತ್ಮಾ ದುರ್ಜಯೋ ದುರತಿಕ್ರಮಃ |**
**ದುರ್ಲಭೋ ದುರ್ಗಮೋ ದುರ್ಗೋ ದುರಾವಾಸೋ ದುರಾರಿಹಾ ||೮೩||**

**೭೮೧. ಸಮಾವರ್ತಃ – ಲಕ್ಷ್ಮೀ ಸಹಿತವಾಗಿಯೇ ಮತ್ತೆ ಮತ್ತೆ ಬರುವನು.**

ವಿವರಣೆ: ಮಾ ಅಂದರೆ ಲಕ್ಷ್ಮೀದೇವಿ. ಸಮಃ ಎಂದರೆ ಅಂತಹ ಲಕ್ಷ್ಮೀದೇವಿಯಿಂದ ಕೂಡಿಕೊಂಡೇ ಆವರ್ತಃ ಮತ್ತೆ ಮತ್ತೆ ಬರುವವನು.

ಭಗವಂತನ ಯಾವುದೇ ಅವತಾರವಿರಲಿ, ಅದು ಮತ್ಸ್ಯ, ಕೂರ್ಮ ಇತ್ಯಾದಿ ಪಶುಯೋನಿಗಳಲ್ಲಿಯ ಅವತಾರವೂ ಆಗಿದ್ದಿರಬಹುದು. ವೇದವ್ಯಾಸ, ವಾಮನ ಇತ್ಯಾದಿ ಬ್ರಹ್ಮಚಾರಿ ರೂಪದ ಅವತಾರವೂ ಆಗಿದ್ದಿರಬಹುದು ಸನತ್ಕುಮಾರ ಇತ್ಯಾದಿ ಸಂನ್ಯಾಸಿರೂಪದ ಅವತಾರವೂ ಆಗಿದ್ದಿರಬಹುದು. ಪ್ರತಿಯೊಂದು ಅವತರಾದಲ್ಲೂ ಲಕ್ಷ್ಮೀದೇವಿಯಿಂದ ಕೂಡಿಕೊಡೇ ಇರುವನು. ದಾಸರು ಹಾಸ್ಯ ಮಾಡಿದ್ದಿರಬಹುದು ಲಕ್ಷ್ಮೀದೇವಿಗೂ ಹೇಳಲು ಪುರುಸೊತ್ತಿಲ್ಲದೆ ಕೂಡಲೇ ಕೆಲವು ಅವತಾರಗಳಲ್ಲಿ ಅವತರಿಸಿರುವನು ಎಂದು. ಲೋಕಕ್ಕೆ ಅವನ ಜೊತೆಗೆ ಲಕ್ಷ್ಮೀದೇವಿ ಇದ್ದದ್ದು ಕಾಣಿಸದೆ ಇರಬಹುದು. ಆದರೆ ಲಕ್ಷ್ಮೀದೇವಿ ದೇವರ ಪ್ರತಿಯೊಂದು ಅವತರಾದಲ್ಲೂ ಅವನ ಜೊತೆಗೇ ಬಂದಿರುವಳು.

ಮತ್ತೆ ಮತ್ತೆ ಬರುವಿಕೆ ಆವರ್ತನ ಎಂದು ಉಲ್ಲೇಖಿಸಲ್ಪಡುವುದು. ಭಗವಂತನ ಇಂತಹ ಆವರ್ತನ ಲಕ್ಷ್ಮೀಸಹಿತವಾಗಿಯೇ ಇರುವುದರಿಂದ ಭಗವಂತ 'ಸಮಾವರ್ತ' ಎನಿಸಿರುವನು.

ಹೀಗೆ ಭೀಷ್ಮರು ದೇವರನ್ನು 'ಸಮಾವರ್ತಃ' - ಎಂಬ ನಾಮದಿಂದ ಲಕ್ಷ್ಮೀಸಹಿತನಾಗಿಯೇ ಬರುವನೆಂದು ಉಪಾಸನೆ ಮಾಡುವ ಮೂಲಕ ದೇವರನ್ನು ಯಾವಾಗಲೂ ಲಕ್ಷ್ಮೀಸಹಿತನನ್ನಾಗಿಯೇ ಉಪಾಸನೆ ಮಾಡಬೇಕೆಂದು ಸೂಚಿಸಿರುವರು. ಈ ಹಿನ್ನಲೆಯಲ್ಲೇ ಭಗವಂತನ ರಾಮಕೃಷ್ಣಾದಿ ನಾಮಗಳಿಗೆ 'ಶ್ರೀರಾಮಾಯ ನಮಃ' 'ಶ್ರೀ ಕೃಷ್ಣಾಯ ನಮಃ' - ಇತ್ಯಾದಿಯಾಗಿ ಶ್ರೀಕಾರವನ್ನು ಹಚ್ಚಿಯೇ ಅವುಗಳನ್ನು ಪಠಿಸುವ ಕ್ರಮ ಬಂದಿದೆ.. ಅಲ್ಲಿಯ ಶ್ರೀಕಾರ ಲಕ್ಷ್ಮೀದೇವಿಯನ್ನು ತಿಳಿಸಬಲ್ಲದು.

**೭೮೨. ನಿವೃತ್ತಾತ್ಮಾ – ಲೌಕಿಕ ಜೀವನದಿಂದ ನಿವೃತ್ತರಾದವರನ್ನು ತನ್ನವರನ್ನಾಗಿ ಸ್ವೀಕರಿಸುವವನು.**

ವಿವರಣೆ: ನಿವೃತ್ತಿ ಎಂದರೆ ಹಿಂದೆ ಸರಿಯುವಿಕೆ. ಉದ್ಯೋಗದಲ್ಲಿದ್ದು, ಅದರಿಂದ ಹಿಂದೆ ಸರಿದಾಗ 'ನಿವೃತ್ತ'ರಾದರು ಎಂದು ವ್ಯವಹರಿಸಲಾಗುವುದು.

ಯಾರು ಗೃಹಸ್ಥಾಶ್ರಮದಲ್ಲಿ ಇರುವಾಗ ಲೌಕಿಕ ಜೀವನದಲ್ಲಿ ಮುಳುಗಿದ್ದು, ಮುಂದೆ ವಾನಪ್ರಸ್ಥಾಶ್ರಮದಲ್ಲಿ ಲೌಕಿಕ ಜೀವನದಿಂದ ನಿವೃತ್ತರಾಗುವರು, ಅಂತಹವರನ್ನು ಪರಮಾತ್ಮನು 'ಆದತ್ತೇ ಇತಿ ನಿವೃತ್ತಾತ್ಮಾ' ಉದ್ಧಾರಕ್ಕಾಗಿ-ಸ್ವೀಕರಿಸುವನು.

ಶ್ರೀ ರಾಮಚಂದ್ರ ವನವಾಸಕ್ಕಾಗಿ ಹೊರಟಾಗ ಲಕ್ಷ್ಮಣನೂ ಶ್ರೀ ರಾಮಚಂದ್ರನ ಜೊತೆಗೆ ಸಾಗಲು ತೊಡಗುವನು. ಲಕ್ಷ್ಮಣನಿಗೂ ಆಗ ವಿವಾಹವಾಗಿತ್ತು. ಅವನ ಪತ್ನಿ ಅಲ್ಲೇ ಇದ್ದಳು. ಆದರೂ ಲಕ್ಷ್ಮಣ ಅವರಿಂದೆಲ್ಲ ನಿವೃತ್ತರಾಗಿದ್ದ. ಆದುದರಿಂದಲೇ ಶ್ರೀರಾಮ ನಿವೃತ್ತನಾದ ಲಕ್ಷ್ಮಣನನ್ನು ಆದತ್ತೇ ಇತಿ ಆತ್ಮಾ ತನ್ನ ಭಕ್ತನನ್ನಾಗಿ ಸ್ವೀಕರಿಸಿದನು. ಶ್ರೀ ರಾಮ ಲಕ್ಷ್ಮಣನಿಗೆ 'ಆತ್ಮಾ' ನಾಗಿ ದೊರೆಯುವನು.

**೭೮೩. ದುರ್ಜಯಃ – * ಯಾರಿಂದಲೂ ಜಯಿಸಲಿಕ್ಕೆ ಆಗದವನು.**

*** ಕೆಟ್ಟ ಜನ್ಮಗಳನ್ನು ಪರಿಹರಿಸುವವನು.**

ವಿವರಣೆ : ಯಾರಿಂದಲೂ ಜಯಿಸಲಿಕ್ಕೆ ಆಗದವನೆಂಬ ಪ್ರಸಿದ್ಧಾರ್ಥದ ಜೊತೆಗೆ ಹೀಗೊಂದು ಅರ್ಥವನ್ನು ಹೊರಡಿಸಬಹುದು. ದುರ್ಜ + ಯ -ದುರ್ಜ ಎಂದರೆ ಕೆಟ್ಟ ಜನ್ಮಗಳು. ಅವುಗಳನ್ನು ಯಾಪಯತಿ ದೂರೀಕರೋತೀತಿ ದುರ್ಜಯ.

'ಕೆಟ್ಟ ಜನ್ಮ' - ಎಂದು ವ್ಯವಹಾರದಲ್ಲಿ ಆಗಾಗ್ಗೆ ಉಲ್ಲೇಖಿಸುತ್ತಿರುತ್ತೇವೆ. ಯಾರು ಭಗವಂತನನ್ನು 'ಸಮಾವರ್ತ' ಎಂದು ಉಪಾಸನೆ ನಡೆಸುವರೋ ಅವರ ಪಾಲಿನ ಕೆಟ್ಟ ಜನ್ಮಗಳನ್ನೆಲ್ಲ ದೂರ ಮಾಡುವನು. ಕೆಟ್ಟ ಜನ್ಮಗಳಿಂದ ನಮ್ಮನ್ನು ಬಿಡುಗಡೆಗೊಳಿಸುವವನು.

**೭೮೪. ದುರತಿಕ್ರಮಃ – * ಯಾರಿಗೂ ಅತಿಕ್ರಮಿಸಲು ಆಗದವನು.**

*** ಭಕ್ತರು ತಮ್ಮ ಕೆಟ್ಟ ಆಸೆ ಆಕಾಂಕ್ಷೆಗಳನ್ನು ಅತಿಕ್ರಮಿಸುವಂತೆ ಮಾಡಿರುವವನು.**

ವಿವರಣೆ : ಯಾರಿಗೂ ಅತಿಕ್ರಮಿಸಲು ಆಗದವನು ಎಂಬ ಒಂದು ಪ್ರಸಿದ್ಧವಾದ

ಅರ್ಥ ಇದ್ದೇ ಇದೆ.

ಇದರ ಜೊತೆಗೆ ಮತ್ತೊಂದು ಅರ್ಥ - ದು + ರತಿ + ಕ್ರಮಃ - ತನ್ನ ಭಕ್ತರ ಕೆಟ್ಟ ಆಸೆ ಆಕಾಂಕ್ಷೆಗಳು - 'ದುರತಿ' ಅವುಗಳನ್ನು ಭಕ್ತರು ಮೀರುವಂತೆ ಮಾಡುವವನು.

'ನಿವೃತ್ತಾತ್ಮಾ' - ಎನಿಸಿರುವ ಭಗವಂತ ಲೌಕಿಕಜೀವನದಿಂದ ನಿವೃತ್ತರಾದ ಭಕ್ತರನ್ನು ಸ್ವೀಕರಿಸಿದ. 'ದುರ್ಜಯ' ಎನಿಸಿ ಅವರ ಕೆಟ್ಟ ಜನ್ಮಗಳನ್ನು ಪರಿಹರಿಸಿದ. ಅಂತಹ ಭಗವಂತನಲ್ಲಿ ಪ್ರಾರ್ಥಿಸಲಾಗುವುದು - 'ನೀನು ನನ್ನ ಪಾಲಿಗೆ ದುರತಿಕ್ರನಾಗು. ನನ್ನ ಕೆಟ್ಟ ಆಸೆ ಆಕಾಂಕ್ಷೆಗಳನ್ನು ನಾನು ಅತಿಕ್ರಮಿಸುವಂತೆ ಮಾಡು. ಹೇಗೆ ಭಗವಂತನ ಸರ್ವೋತ್ತಮತ್ವ ಧರ್ಮವು ಅವನಿಗಿಂತ ನೀಚರಾದವರು ಇದ್ದರಷ್ಟೇ ಅನ್ವರ್ಥಕವೆನಿಸುವುದೋ, ಕೆಳಗೆ ಕುಳಿತ ವ್ಯಕ್ತಿಗಳಿರುವಾಗಷ್ಟೇ 'ಮೇಲೆ ಕುಳಿತವರು ಸ್ವಾಮಿಗಳು' ಎಂಬ ಮಾತು ಅರ್ಥ ಪೂರ್ಣವಾಗುವುದೋ ಹಾಗೆ ನಮ್ಮ ನಿಮ್ಮಂತಹ ಭಕ್ತರಿದ್ದರಷ್ಟೇ ಭಗವಂತನ 'ದುರತಿಕ್ರಮ' - ಎಂಬ ನಾಮವು ಅರ್ಥಪೂರ್ಣವೆನಿಸಬಲ್ಲದು.

**೭೮೫. ದುರ್ಲಭಃ – * ದುಃಖವನ್ನು ಸ್ವೀಕರಿಸುವ ಜೀವರಿಂದ ಅಂತಹ ದುಃಖದ ಪರಿಹಾರಕ್ಕಾಗಿ ಉಪಾಸಿಸಲ್ಪಡುವವನು.**

**ವಿವರಣೆ :** ದುರ್ಲ - ಎಂದರೆ ಜೀವ. ದುಃಖವನ್ನು ಹೊಂದುವುದರಿಂದ ಜೀವ ದುರ್ಲ ಎನಿಸುವನು. ದುಃ - ಎಂದರೆ ದುಃಖ. ಅಂತಹ ದುಃಖವನ್ನು ಲಾತಿ ಆದತ್ತೇ ಇತಿ ದುರ್ಲಃ ಜೀವಃ. ಜೀವನೇನೂ ದುಃಖವನ್ನು ಸ್ವೀಕರಿಸುವುದಿಲ್ಲ. ಆದರೆ ದುಃ ಖಕ್ಕೆ ಕಾರಣಗಳಾದವನ್ನು ಸ್ವೀಕರಿಸುವನು. ದೂರವಾಣಿ, ದೂರದರ್ಶನ ಇವೆಲ್ಲ ಒಂದು ಮುಖದಿಂದ ಸುಖಸಾಧನ ಎಂದು ಕಂಡರೆ ಮತ್ತೊಂದು ಮುಖದಿಂದ ದುಃಖಕ್ಕೆ ಸಾಧನವಾದವು. ಅವುಗಳನ್ನು ಸ್ವೀಕಾರ ಮಾಡುವ ಮೂಲಕ ಜೀವನು ತನಗೆ ತಿಳಿಯದಂತೆಯೇ ದುಃಖವನ್ನು ಸ್ವೀಕರಿಸುತ್ತಿದ್ದಾನೆ.

ಹೀಗೆ ದುಃಖವನ್ನು ಸ್ವೀಕರಿಸುತ್ತಿರುವುದರಿಂದಲೇ ಅಂತಹ ದುಃಖದ, ಸಮಸ್ಯೆಗಳ ಪರಿಹಾರಕ್ಕಾಗಿ ಭಾಯತೇ ಉಪಾಸ್ಯತೇ ಇತಿ ದುರ್ಲಭ ದುಃಖವನ್ನು ಸ್ವೀಕರಿಸುವ ಜೀವರಿಂದ ಅಂತಹ ದುಃಖದ ಪರಿಹಾರಕ್ಕಾಗಿ ಉಪಾಸಿಸಲ್ಪಡುವವನು. 'ಭಾ ಉಪಾಸನೇ' ಎಂಬ ಕ್ರಿಯಾಪದದಿಂದ ಉಂಟಾದ ರೂಪ 'ಭ' ಎಂಬುದು.

ಜೀವ ದೇವರನ್ನು ಹಾಗೆಯೇ ಉಪಾಸನೆ ಮಾಡುವುದಿಲ್ಲ. ತನಗೆ ದುಃಖ ದುಮ್ಮಾನ ಒದಗಿತೆಂದರೆ, ಅದರಿಂದ ಪಾರಾಗಲು ಬೇರೆ ಯಾವುದೇ ಮಾರ್ಗ ಇಲ್ಲ

ಎಂದಾಗ ದೇವರನ್ನು ಉಪಾಸನೆ ಮಾಡುವನು. ಏನೂ ದುಃಖ ಇಲ್ಲದಾಗ ದೇವರನ್ನು ಉಪಾಸನೆ ಮಾಡಬೇಕು ಎಂದರೆ 'ಅಷ್ಟು ಉಪಾಸನೆ ಮಾಡಬೇಕಾ?' - ಎಂದು ಕೇಳುವವನು ದುಃಖಕ್ಕೊಳಗಾಗಿ ಅಂತಹ ದುಃಖದ ಪರಿಹಾರಕ್ಕಾಗಿ ದೇವರನ್ನು ಉಪಾಸನೆ ಮಾಡಬೇಕು ಎಂದಲ್ಲಿ 'ಅಷ್ಟೇ ಉಪಾಸನೆ ಸಾಕಾ?' - ಎಂದು ವಿಚಾರಿಸುವ ಮಟ್ಟಕ್ಕೆ ಬರುವನು. ದೇವರಿಗೆ ಗೊತ್ತು ಏನೂ ದುಃಖ, ಸಮಸ್ಯೆಗಳು ಇಲ್ಲದಿದ್ದರೆ ಜೀವರು ತನ್ನ ಉಪಾಸನೆ ನಡೆಸಲಾರರು ಎಂದು. ಅದಕ್ಕಾಗಿಯೇ ಅವರಿಗೆ ದುಃಖವನ್ನು ಒದಗಿಸುವನು. ಅದರ ಪರಿಹಾರಕ್ಕಾದರೂ ಜೀವರು ದೇವರ ಉಪಾಸನೆ ನಡೆಸುವರು.

ಈ ದೃಷ್ಟಿಯಿಂದಲೇ ಕುಂತಿ 'ವಿಪದಃ ಸಂತು ನಃ ಶಶ್ವತ್.......' ಎಂದು ತನ್ನ ಜೀವನದಲ್ಲಿ ಸಮಸ್ಯೆಗಳು ಮತ್ತೆ ಮತ್ತೆ ಬರುತ್ತಿರಲಿ ಎಂದು ಶ್ರೀಕೃಷ್ಣನಲ್ಲಿ ಪ್ರಾರ್ಥಿಸಿರುವಳು.

**೭೮೬. ದುರ್ಗಮಃ – ದುಃಖವನ್ನು ಅನುಭವಿಸುವ ಜೀವರಿಂದ ತಿಳಿಯಲ್ಪಡುವವನು.**

**ವಿವರಣೆ :** ದುಃಖವನ್ನು ಸ್ವೀಕಾರ ಮಾಡುವುದರಿಂದ 'ದುರ್ಲ' ಎನಿಸುವ ಜೀವ ಹಾಗೆ ಸ್ವೀಕರಿಸಿದ ದುಃಖವನ್ನು ಅನುಭವಿಸುವುದರಿಂದ 'ದುರ್ಗ' ಎನಿಸುವನು. **ದುಃಖಂ ಗಚ್ಛತಿ ಅವಗಚ್ಛತೀತಿ ದುರ್ಗಃ** ಅಂತಹ ಜೀವನಿಂದ **ಮೀಯತೇ ಜ್ಞಾಯತೇ ಇತಿ ದುರ್ಗಮಃ** - ಹಾಗೆ ದುಃಖವನ್ನು ಅನುಭವಿಸಿದ ಜೀವನಿಂದ ಮುಂದೆ ಚೆನ್ನಾಗಿ ತಿಳಿಯಲ್ಪಡುವವನು ಭಗವಂತ.

'ದುರ್ಲಭ ' - ಎನಿಸುವ ಭಗವಂತ ದುಃಖವನ್ನು ಹೊಂದಿದ ಜೀವರಿಂದ ಅಂತಹ ದುಃಖದ ಪರಿಹಾರಕ್ಕಾಗಿ ಉಪಾಸಿಸಲ್ಪಡುವವನು. ಅದರಿಂದಾಗಿ ದುಃಖ ಪರಿಹಾರವಾಯಿತೆಂದರೆ ಮತ್ತೆ ದೇವರನ್ನು ಬಿಟ್ಟು ಬಿಡುವುದೂ ಉಂಟು.

ಆದರೆ 'ದುರ್ಗ' - ಎನಿಸುವ ಮತ್ತೆ ಕೆಲವು ಜೀವರು ಬಂದ ದುಃಖವನ್ನು ಅನುಭವಿಸಿ, ಮುಂದೆ ದುಃಖ ಇರಲಿ ಬಿಡಲಿ ದೇವರನ್ನು ಚೆನ್ನಾಗಿ ತಿಳಿಯಲು ತೊಡಗುವರು. ಆ ಹಿನ್ನೆಲೆಯಲ್ಲಿ ದೇವರು 'ದುರ್ಗಮ' ಎನಿಸುವನು.

**೭೮೭. ದುರ್ಗಃ – ತುಂಬ ಯತ್ನಪಟ್ಟು ತಿಳಿದುಕೊಳ್ಳಲು ಯೋಗ್ಯನಾಗಿರುವವನು.**

**ವಿವರಣೆ :** 'ದುರ್ಗಮ' ಎನಿಸುವ ದೇವರನ್ನು ತಿಳಿದುಕೊಳ್ಳಲಾಯಿತು ಎಂದಾಗ

ಅವನು ತಪ್ಪಿಸಿಕೊಂಡು ಹೋಗುವನು. ಸುಲಭದಲ್ಲಿ ಸಿಗುವವನಲ್ಲ. ಇದನ್ನೇ 'ದುರ್ಗಃ' - ಎಂಬ ನಾಮ ಸಾರುತ್ತಿದೆ - 'ದುಃಖೇನ ಗಂತುಂ ಅವಗಂತುಂ ಯೋಗ್ಯಃ ದುರ್ಗಃ'

ದೇವರ ಒಂದು ಭಾವಚಿತ್ರದ ಅಥವಾ ಪ್ರತಿಮೆಯ ಎದುರು ಕುಳಿತು ಅದನ್ನು ಮನಸ್ಸಿನಲ್ಲಿ ಮೂಡಿಸಿಕೊಳ್ಳಬೇಕೆಂದು ಎಷ್ಟೆಷ್ಟು ಯತ್ನಿಸಿದರೂ ಒಂದು ಕ್ಷಣದಲ್ಲೇ ಆ ಭಾವಚಿತ್ರದ, ಪ್ರತಿಮೆಯ ರೂಪವೂ ಮಾಯವಾಗಿ ಬಿಡುವುದು. ಹೀಗಿರುವಾಗ ದೇವರ ಚಿದಾನಂದ ಸ್ವರೂಪ ಹೇಗೆ ತಾನೇ ಮನಸ್ಸಿನಲ್ಲಿ ಮೂಡೀತು ?

ನಾವು ಹೋಗಲಿಕ್ಕೆ ಅಶಕ್ಯವಾದ ಪ್ರದೇಶವನ್ನು 'ದುರ್ಗ' ಎಂದು ಕರೆಯುವುದುಂಟು. ಅಂತೆಯೇ ದೇವರನ್ನು ತಿಳಿದುಕೊಳ್ಳುವುದು ಕಷ್ಟಸಾಧ್ಯವಾಗಿರುವುದರಿಂದ ಅವನು 'ದುರ್ಗ' ಎನಿಸುವನು.

**'ಆವೃತ್ತಿರಸಕೃದುಪದೇಶಾತ್'** - ಎಂಬ ಬ್ರಹ್ಮಸೂತ್ರದಲ್ಲಿ ಶ್ರೀವೇದವ್ಯಾಸರು ದೇವರ ಬಗ್ಗೆ ಮತ್ತೆ ಮತ್ತೆ ಶ್ರವಣ, ಮನನಾದಿಗಳನ್ನು ಮಾಡುತ್ತಿದ್ದರಷ್ಟೇ ಅವನನ್ನು ತಿಳಿಯಲು ಸಾಧ್ಯ ಎಂದು ಸಿದ್ಧಾಂತಿಸಿರುವರು.

ಭಗವಂತ ಮನಸ್ಸಿನಿಂದ ಹೇಗೆ ತಪ್ಪಿಸಿಕೊಳ್ಳುವನೆಂಬುದಕ್ಕೆ ಭೀಷ್ಮರೇ ಜ್ವಲಂತ ನಿದರ್ಶನ. ಕೊನೆಯ ಕಾಲದ ವರೆಗೂ ತನ್ನೆದುರೇ ಕೂತಿದ್ದ ಕೃಷ್ಣನನ್ನು ಕಾಣುತ್ತ ಇದ್ದ ಭೀಷ್ಮರ ಕೊನೆಯ ಕಾಲದಲ್ಲಿ ಅವರ ಮನಸ್ಸಿನಿಂದ ಕೃಷ್ಣ ತಪ್ಪಿಸಿಕೊಂಡಿದ್ದ. ಅವರಿಗೆ ತಮ್ಮ ಮೂಲರೂಪವಷ್ಟೇ ಕಂಡಿದೆ.

ಹೀಗೆ ತುಂಬ ಪ್ರಯತ್ನ ಪಟ್ಟರಷ್ಟೇ ತಿಳಿಯಲ್ಪಡುವವನೆಂಬ ಅರ್ಥದಲ್ಲಿ ಭಗವಂತನನ್ನು ದುರ್ಗ ಎಂದು ಕರೆಯಲಾಗಿದೆ.

**೭೮೮. ದುರಾವಾಸಃ – ತನ್ನ ಬಗ್ಗೆ ಕೆಟ್ಟ ಶಬ್ದಗಳನ್ನು ಹೇಳುವವರನ್ನು ಚೆನ್ನಾಗಿ ನಾಶ ಗೈಯುವವನು.**

**ವಿವರಣೆ :** ದು+ರಾವ+ಆ+ಸಃ - ಈ ನಾಲ್ಕು ಶಬ್ದಗಳು ಸೇರಿ ದುರಾವಾಸಃ ಎಂಬ ನಾಮ ನಿಷ್ಪನ್ನವಾಗಿದೆ.

ರಾವ ಎಂದರೆ ಶಬ್ದ. ದುರಾವ ಎಂದರೆ ಕೆಟ್ಟ ಶಬ್ದ. ಯಾವುದು ಕೆಟ್ಟ ಶಬ್ದ? ಯಾವುದು ಒಳ್ಳೆಯ ಶಬ್ದ ? - ಎಂಬುದು ಆಯಾ ವ್ಯಕ್ತಿಯನ್ನು ಅವಲಂಬಿಸಿ ಇರತಕ್ಕದ್ದು. ಇಲ್ಲಿ ಹೇಳಲ್ಪಡುವ ಪ್ರವಚನ ಶಬ್ದಗಳೇ ಕೆಲವರ ಪಾಲಿಗೆ ಕೆಟ್ಟ ಶಬ್ದಗಳೆಸಬಹುದು. ಅದೇ ಕೆಳಮಟ್ಟದ ಜನರು ಜಗಳವಾಡುವಾಗ ಮಾತನಾಡುವ

ಮಾತಿನ ಶಬ್ದಗಳು ಅವರ ಪಾಲಿಗೆ ಒಳ್ಳೆಯ ಶಬ್ದಗಳೆನಿಸಬಹುದು.

ದೇವರ ಪಾಲಿಗೆ ಕೆಟ್ಟ ಶಬ್ದಗಳು ಯಾವುವು ? ದೇವರನ್ನು ಬೈಯುವ ಶಬ್ದಗಳೇ ಅವನ ಪಾಲಿಗೆ 'ದುರಾವ'ಗಳು. ದೇವರನ್ನು ಬೈಯುವುದೆಂದರೆ ನಾವು ನೀವು ಬೈದುಕೊಂಡಂತೆ ಬೈಗುಳದ ಶಬ್ದಗಳನ್ನು ಪ್ರಯೋಗಿಸಬೇಕಿಲ್ಲ. ಒಬ್ಬ ರಾಜನನ್ನು ಬೈಯ ಬೇಕೆಂದರೆ ಅವನ ಮನೆಯಲ್ಲಿ ಕೆಲಸ ಮಾಡುವ ಆಳುಗಳಲ್ಲಿ ಕೊನೆಯ ಆಳು ಎನಿಸಿರುವವನನ್ನು ಪರಾಮರ್ಶಿಸಿ, ಆ ಚಂಡಾಲನೇ ನೀನು ಎಂದರೆ ಸಾಕು. ರಾಜನಿಗೆ ಎಲ್ಲಿಲ್ಲದ ಸಿಟ್ಟು ಬರುವುದು. ಹಾಗೆಯೇ ದೇವರನ್ನು ನಮ್ಮ ನಿಮ್ಮ ಮಟ್ಟಕ್ಕೆ ಇಳಿಸಿ, 'ನಾನೇ ದೇವರು ; ದೇವರೇ ನಾನು' - ಎಂದು ಹೇಳಿದರೆ ದೇವರಿಗೆ ತುಂಬ ಅಸಮಾಧಾನವಾಗುವುದು. ಯಾಕೆಂದರೆ ನಾವು ಎಷ್ಟು ದೋಷದೂಷಿತರು ಎಂಬುದು ನಮಗೆ ಸ್ಪಷ್ಟ. ಅಂತಹ ದೋಷದೂಷಿತರಾದ ನಾವೇ ದೇವರೆಂದರೆ ನಮ್ಮಲ್ಲಿಯ ದೋಷಗಳನ್ನೆಲ್ಲ ಅವನಲ್ಲಿ ಆರೋಪಿಸಿದಂತಾಗುವುದು. ಹಾಗೆಯೇ ಗುಣಗಳ ಕೊರತೆಯೂ ನಮ್ಮಲ್ಲಿದ್ದು ಅದನ್ನೂ ಅವನಲ್ಲಿ ಆರೋಪಿಸಿದಂತಾಗುವುದು. ಆದುದರಿಂದ ಹೀಗೆ ಜೀವರ ಐಕ್ಯವನ್ನು ಹೇಳುವ ಶಬ್ದಗಳು 'ದುರಾವ'ಗಳು. ಕೆಟ್ಟ ಶಬ್ದಗಳು. ಆ ಶಬ್ದಗಳನ್ನು ಯಾರು ಹೇಳುವರೋ ಅಂತಹವರನ್ನು ಆ - ಚೆನ್ನಾಗಿ ಸಃ - ಕೊನೆಗೊಳಿಸುವವನು. 'ಷೋ ಅಂತಕರ್ಮಣಿ' - ಎಂಬ ಕ್ರಿಯಾಪದದಿಂದ ನಿಷ್ಪನ್ನವಾಗಿರುವ 'ಸಃ' - ಎಂಬ ಶಬ್ದವು ನಾಶ ಮಾಡುವವನು ಎಂಬ ಅರ್ಥವನ್ನು ನೀಡುವುದು.

ದೇವರು ತನ್ನ ಬಗ್ಗೆ ಆ ಬಗೆಯ ಕೆಟ್ಟ ಮಾತುಗಳನ್ನು ಹೇಳುವವರನ್ನು ಚೆನ್ನಾಗಿ ನಾಶಗೊಳಿಸುವನು. ಅಂದರೆ ನರಕ, ತಮಸ್ಸು - ಮುಂತಾದ ಕೆಟ್ಟಗತಿಗಳನ್ನು ಹೊಂದುವಂತೆ ಮಾಡುವನು. ಆದ್ದರಿಂದ ಅವನು 'ದುರಾವಾಸಃ' ಎನಿಸುವನು.

**೭೮೯. ದುರಾರಿಹಾ – ಕೆಟ್ಟ ಆಚಾರ ವಿಚಾರವುಳ್ಳವರು ನಿತ್ಯ ದುಃಖ ಅನುಭವಿಸುವಂತೆ ಮಾಡುವವನು.**

**ವಿವರಣೆ:** ದುರಾರಿ+ಹಾ - ದುರಾರಿಹಾ. ಆರ ಎಂದರೆ ಆಚಾರ ಹಾಗೂ ವಿಚಾರಗಳು. 'ಋ ಗತೌ' - ಎಂಬ ಕ್ರಿಯಾಪದದಿಂದ ನಿಷ್ಪನ್ನವಾದ ಆರ ಶಬ್ದ ಆಚಾರವನ್ನೂ ಹೇಳಬಲ್ಲದು ; ವಿಚಾರವನ್ನೂ ಹೇಳಬಲ್ಲದು. ಆದುದರಿಂದ ದುರಾರ - ಎಂದರೆ ಕೆಟ್ಟ ವಿಚಾರ, ಹಾಗೆಯೇ ಅದಕ್ಕೆ ಅನುಗುಣವಾದ ಕೆಟ್ಟ ನಡತೆ ; ಅಂತಹ ವಿಚಾರವನ್ನೂ ನಡತೆಯನ್ನೂ ಹೊಂದಿರುವವರೇ ದುರಾರಿಗಳು. ಆದುದರಿಂದ ದುರಾರಿಗಳೆಂದರೆ ವಿಚಾರದಲ್ಲೂ, ಆಚಾರದಲ್ಲೂ ಸರಿಯಿಲ್ಲದವರು. ಅಂತಹವರನ್ನು

ಹಂತಿ - ಕೊಲ್ಲುವವನು ದುರಾರಿಹಾ.

ಕೊಲ್ಲುವುದೆಂದರೆ ದೇಹನಾಶ ಮಾಡುವುದೆಂದಷ್ಟೇ ಅರ್ಥ ಅಲ್ಲ. ದೇವರು ಕೊಲ್ಲದಿದ್ದರೂ ಒಂದಲ್ಲ ಒಂದು ದಿನ ಅವರ ದೇಹ ಆ ರೀತಿಯಾಗಿ ನಾಶ ಹೊಂದಿಯೇ ತೀರುವುದು. ಆದುದರಿಂದ ದೇವರು ನಾಶ ಮಾಡುವುದು ಎಂದರೆ ಅವರು ನಿತ್ಯದುಃಖವನ್ನು ಅನುಭವಿಸುವಂತೆ ಅಂಧಂತಮಸ್ಸಿನಲ್ಲಿ ಬೀಳಿಸುವುದೆಂದೇ ಅರ್ಥ. ದೇವತೆಗಳನ್ನು ರಕ್ಷಿಸುವುದೆಂದರೆ ಅವರು ಮೋಕ್ಷವನ್ನು ತಲುಪಿ, ಅಲ್ಲಿ ನಿತ್ಯಸುಖವನ್ನು ಅನುಭವಿಸುವಂತೆ ಮಾಡುವುದೆಂದೇ ಅರ್ಥ. ನಾವು ವ್ಯವಹಾರದಲ್ಲೂ ಹೀಗೆ ಬಳಸುವುದುಂಟು. ಒಬ್ಬ ತುಂಬ ದುಃಖವನ್ನು ಕೊಡುತ್ತಿದ್ದರೆ 'ನನಗೆ ಹೀಗೆ ದುಃಖ ಕೊಟ್ಟು ನನ್ನನ್ನು ಯಾಕೆ ಕೊಲ್ಲುತ್ತಿರುವಿ' - ಎಂದು ದುಃಖ ಕೊಡುವುದೆಂಬ ಅರ್ಥದಲ್ಲಿ ಕೊಲ್ಲುವುದು ಎಂದು ಪ್ರಯೋಗಿಸಲಾಗಿದೆ.

ಹೀಗೆ ದೇವರು ಕೆಟ್ಟ ವಿಚಾರ ಹಾಗೂ ಆಚಾರವುಳ್ಳ ಕೆಟ್ಟ ವ್ಯಕ್ತಿಗಳನ್ನು ನಾಶ ಮಾಡುವುದೆಂದರೆ ಅವರನ್ನು ನರಕದಲ್ಲೋ ಅಂಧಂತಮಸ್ಸಿನಲ್ಲೋ ಬೀಳಿಸಿ ಅವರು ನಿತ್ಯ ದುಃಖವನ್ನು ಅನುಭವಿಸುವಂತೆ ಮಾಡುವನು ಎಂದೇ ಅರ್ಥ. ಆದ್ದರಿಂದ ಪರಮಾತ್ಮ 'ದುರಾರಿಹಾ' ಎನಿಸುವನು.

**ಶುಭಾಂಗೋ ಲೋಕಸಾರಂಗಃ ಸುತಂತುಸ್ತಂತುವರ್ಧನಃ**
**ಇಂದ್ರಕರ್ಮಾ ಮಹಾಕರ್ಮಾ ಕೃತಕರ್ಮಾ ಕೃತಾಗಮಃ ||೮೪||**

**೭೮೦. ಶುಭಾಂಗಃ – ಶುಭಗಳಾದ ತನ್ನ ರೂಪಗಳನ್ನೇ ಅಂಗಗಳಾಗಿ ಹೊಂದಿರುವವನು.**

ವಿವರಣೆ: ಭಗವಂತನು ತನ್ನ ನಾರಾಯಣ ರೂಪದಲ್ಲಿ ತನ್ನ ವಾಸುದೇವ, ಸಂಕರ್ಷಣ, ಪ್ರದ್ಯುಮ್ನ ಹಾಗೂ ಅನಿರುದ್ಧ ರೂಪಗಳೇ ಬೇರೆ ಬೇರೆ ಅಂಗವಾಗಿ ಇರುವವನು. 'ನವನಾರೀಕುಂಜರ' - ಎಂದು ಶಾಸ್ತ್ರದಲ್ಲಿ ಪ್ರಸಿದ್ಧವಾದ ವಿಚಾರ. ಒಂಭತ್ತು ಹೆಂಗಸರು ಸೇರಿ - ಆನೆಯ ಹೊಟ್ಟೆ, ಕಾಲು, ಸೊಂಡಿಲು, ಬಾಲ - ಇತ್ಯಾದಿ ಅವಯುವಗಳ ರೂಪದಲ್ಲಿದ್ದು ಆನೆಯ ಆಕಾರವನ್ನು ರೂಪಿಸಿದರೆ ಅದು ನವನಾರೀಕುಂಜರ ಎನಿಸುವುದು. ಅಂತೆಯೇ ಭಗವಂತನು ತನ್ನದ್ದೇ ರೂಪಗಳಿಂದ ತನ್ನ ಬೇರೆ ಬೇರೆ ಅವಯುವವಾಗಿ ಕಾಣಿಸಿಕೊಳ್ಳುವನು. ಭಗವಂತ ನಾರಾಯಣ ರೂಪದಲ್ಲಿ 'ದೇಹಮಧ್ಯಗಃ ವಾಸುದೇವಃ ಮಹೋನಾಮ....' ಎಂದಿರುವಂತೆ 'ಮಹಃ' - ಎಂಬ ವ್ಯಾಹೃತಿಯಿಂದ ಪ್ರತಿಪಾದ್ಯನಾದ ವಾಸುದೇವ ಹೃದಯ

ಎನಿಸುವನು. 'ಅನಿರುದ್ಧಃ ಶಿರೋ ನಾಮ ಭೂಃ' - 'ಭೂಃ' ವ್ಯಾಹೃತಿಯಿಂದ ಪ್ರತಿಪಾದ್ಯನಾಗಿರುವ ಅನಿರುದ್ಧನು ತಲೆ ಎನಿಸುವನು. 'ಭುವೋ ನಾಮ ಬಾಹೂ ಪ್ರದ್ಯುಮ್ನ ಈರಿತಃ' - ಭುವಃ ಎಂಬ ವ್ಯಾಹೃತಿಯಿಂದ ಪ್ರತಿಪಾದ್ಯನಾದ ಪ್ರದ್ಯುಮ್ನ ಬಾಹುಗಳೆನಿಸುವನು 'ಸ್ವಃ' ವ್ಯಾಹೃತಿಯಿಂದ ಪ್ರತಿಪಾದ್ಯನಾದ ಸಂಕರ್ಷಣ ಎರಡು ಪಾದಗಳೆನಿಸುವನು. ಹೀಗೆ ಭಗವಂತನ ನಾರಾಯಣ ರೂಪದಲ್ಲಿ ವಾಸುದೇವ, ಅನಿರುದ್ಧ, ಪ್ರದ್ಯುಮ್ನ, ಸಂಕರ್ಷಣ ರೂಪಗಳು ಬೇರೆ ಬೇರೆ ಅಂಗಗಳಾಗಿರುವುದನ್ನು ಚಿಂತನೆ ಮಾಡಬೇಕು. ನಾರಾಯಣನ ಪ್ರತಿಮೆಯಲ್ಲೋ, ಭಾವಚಿತ್ರದಲ್ಲೋ ಈ ರೀತಿಯ ಅನುಸಂಧಾನ ನಡೆಸಬೇಕು. ಬಹಳ ಕಷ್ಟಸಾಧ್ಯವಾದ ಚಿಂತನೆ ಇದು. ಆದುದರಿಂದಲೇ ಅವನನ್ನು 'ದುರ್ಗಃ' ಸುಲಭದಲ್ಲಿ ತಿಳಿದುಕೊಳ್ಳಲು ಆಗುವವನಲ್ಲ ಎಂದು ಸ್ತುತಿಸಿದ್ದು.

ಹೀಗೆ 'ಶುಭಾಂಗ' ನಾಮದಿಂದ ಅತ್ಯಂತ ಶುಭಗಳಾದ ವಾಸುದೇವಾದಿ ರೂಪಗಳೇ ಅಂಗಗಳಾಗಿ ಉಳ್ಳವನೆಂದು ಭಗವಂತನನ್ನು ಸ್ತುತಿಸಲಾಗಿದೆ.

**೭೯೧. ಲೋಕಸಾರಂಗಃ – ಲೋಕದಲ್ಲಿಯ ಸಾರ ಭಾಗವನ್ನು ಹೀರುವವನು.**

ವಿವರಣೆ : ಲೋಕದಲ್ಲಿಯ ಸಾರಭಾಗವನ್ನು ಗಚ್ಛತಿ - ಹೀರುವವನು - ಲೋಕಸಾರಂಗ. ಹೇಗೆ ಹಾಲಿನಲ್ಲಿಯ ಬೇಗನೆ ಜೀರ್ಣವಾಗದ ಕೆನೆಯ ಭಾಗವನ್ನು ತೆಗೆದು ಮಕ್ಕಳಿಗೆ ಜೀರ್ಣವಾಗುವಂತಹ ಹಾಲಿನ ಭಾಗವನ್ನಷ್ಟೇ ಅವುಗಳಿಗೆ ತಾಯಿಯಾದವಳು ನೀಡುವಳೋ ಹಾಗೆ ದೇವರು ಜೀವರಿಗೆ ಜೀರ್ಣಿಸಿಕೊಳ್ಳಲಾರದ ಸಾರಭಾಗವನ್ನು ತಾನೇ ಸ್ವೀಕರಿಸಿ, ಅವರಿಗೆ ಜೀರ್ಣಿಸಿಕೊಳ್ಳಲು ಆಗುವಂತಹ ಅಸಾರದ ಭಾಗವನ್ನಷ್ಟೇ ನೀಡುವನು.

**ಆತ್ಮಾಂತರಾತ್ಮೇತಿ ಹರಿಃ ಏಕ ಏವ ದ್ವಿಧಾ ಸ್ಥಿತಃ |**
**ನಿವಿಷ್ಟೋ ಹೃದಯೇ ನಿತ್ಯಂ ರಸಂ ಪಿಬತಿ ಕರ್ಮಜಮ್ ||**

ಎಂದಿರುವಂತೆ ರಸಭಾಗವನ್ನಷ್ಟೇ ತಾನು ಸ್ವೀಕರಿಸುವನು.

**'ಶುಭಂ ಪಿಬತ್ಯಸೌ ನಿತ್ಯಂ ನಾಶುಭಂ ಸ ಹರಿಃ ಪಿಬೇತ್ |**
**ಪೂರ್ಣಾನಂದಮಯಸ್ಯಾಸ್ಯ ಚೇಷ್ಟಾ ನ ಜ್ಞಾಯತೇ ಕ್ವಚಿತ್ ||'**

ಶುಭ ರಸವನ್ನಷ್ಟೇ ಸ್ವೀಕರಿಸುವನು. ಇದನ್ನೇ 'ಲೋಕಸಾರಂಗಃ' ಎಂಬಲ್ಲಿ 'ಲೋಕಸಾರಂ' ಶಬ್ದದಿಂದ ಸೂಚಿಸಿದ್ದು. ಆನಂದಪರಿಪೂರ್ಣನಾಗಿರುವುದರಿಂದ ಅವನಿಗೆ ಅದನ್ನು ಸ್ವೀಕಾರ ಮಾಡುವ ಆವಶ್ಯಕತೆ ಇಲ್ಲ. ಆದರೂ ಯಾಕೆ ಸ್ವೀಕಾರ ಮಾಡುವನು ? ಜೀವರಿಗೆ ಅದನ್ನು ಜೀರ್ಣಿಸಿಕೊಳ್ಳಲಿಕ್ಕೆ ಆಗುವುದಿಲ್ಲ ಎಂದು ಜೀವರ

ಮೇಲಿನ ಕರುಣೆಯಿಂದಷ್ಟೇ ಸಾರಭಾಗವನ್ನು ಅನುಭವಿಸುವನು. ಆದುದರಿಂದಲೇ 'ಲೋಕಸಾರಂಗ' ಎನಿಸಿರುವನು.

**೭೯೨. ಸುತಂತುಃ – ಒಳ್ಳೆಯ ಬಟ್ಟೆಯಂತಿರುವ ಶರೀರವನ್ನು ತೊಡಿಸುವವನು.**

**ವಿವರಣೆ :** ತಂತು ಎಂದರೆ ವಿಸ್ತಾರ ಮಾಡುವ ನೂಲು. ಬಟ್ಟೆ ಚಿಕ್ಕದಾಗಿದ್ದರೆ ತಂತು ಸೇರಿಸಿ ಅದನ್ನು ವಿಸ್ತಾರಗೊಳಿಸಬಹುದಾಗಿದೆ. ಆದುದರಿಂದ ಇಲ್ಲಿ ತಂತು - ಶಬ್ದ ವಿಸ್ತಾರಗೊಂಡ ನೂಲುವುಳ್ಳ ಬಟ್ಟೆಯನ್ನು ತಿಳಿಸುವುದು. ಸುತಂತುಃ - ಎಂದರೆ ಒಳ್ಳೆಯ ಬಟ್ಟೆಯ ರೂಪದಲ್ಲಿರುವ ಶರೀರವನ್ನು ಕೊಡುವವನು. **'ವಾಸಾಂಸಿ ಜೀರ್ಣಾನಿ ಯಥಾ ವಿಹಾಯ.....'** - ಎಂಬ ಮಾತಿನಲ್ಲಿ ಶರೀರಗಳಿಗೆ ಬಟ್ಟೆಯ ದೃಷ್ಟಾಂತವನ್ನೇ ನೀಡಲಾಗಿದೆ. ಆದುದರಿಂದ 'ಸುತಂತುಃ' - ಎಂದರೆ ಒಳ್ಳೆಯ ಶರೀರ ಎಂಬ ಬಟ್ಟೆಯನ್ನು ನೀಡಿರುವವನು ಎಂದರ್ಥ. ಬಟ್ಟೆ ಹಳತ್ತಾಗಿದ್ದರೆ ಅದನ್ನು ಬದಲಾಯಿಸುವನು. ಹಾಗೆಯೇ ಹೊಸ ಬಟ್ಟೆಯೇ ಆಗಿದ್ದರೂ ತುಂಬ ಕೊಳೆಯಾಗಿದ್ದರೆ ಅದನ್ನು ಬದಲಾಯಿಸುವಂತೆ ಕೆಲವೊಮ್ಮೆ ಗಟ್ಟಿಮುಟ್ಟಾದ ದೇಹವನ್ನೂ ಭಗವಂತ ಬದಲಾಯಿಸುವನು.

ಹೀಗೆ ಒಳ್ಳೆಯ ಶರೀರವೆಂಬ ಬಟ್ಟೆಯನ್ನು ತೊಡಿಸುವುದರಿಂದ 'ಸುತಂತು' ಎನಿಸುವನು.

**೭೯೩. ತಂತುವರ್ಧನಃ – ಶರೀರ ಎಂಬ ಬಟ್ಟೆಯನ್ನು ಬುದ್ಧಿ ಎಂಬ ಸುಗಂಧವನ್ನು ಹಚ್ಚಿಸಿ ಬೆಳೆಸುವವನು.**

**ವಿವರಣೆ :** 'ಸುತಂತು' - ಎಂಬ ನಾಮದಲ್ಲಿ ಸೂಚಿತವಾಗಿರುವಂತೆ ದೇವರು ಕೊಟ್ಟಿರುವ ಶರೀರವೆಂಬ ಬಟ್ಟೆಯನ್ನು ತೊಟ್ಟುಕೊಂಡು ಶಾಸ್ತ್ರ ಪ್ರಪಂಚದಲ್ಲಿ ಸಂಚಾರ ನಡೆಸಲಾಯಿತೆಂದರೆ ಮುಂದೆ ಭಗವಂತ 'ತಂತುವರ್ಧನ'ನಾಗಿ ಅನುಗ್ರಹಿಸುವನು. ವರ್ಧನ ಎಂದರೆ ಬೆಳೆಸುವುದು. ಬಟ್ಟೆಯನ್ನು ಬೆಳೆಸುವುದೆಂದರೆ ಉತ್ತಮವಾದ ಬಟ್ಟೆಯನ್ನು ಕೊಡುವನು ಎಂದರ್ಥ. ಶರೀರವೆಂಬ ಬಟ್ಟೆ ಕೊಟ್ಟಿರುವ ಭಗವಂತ ಆ ಬಟ್ಟೆಗೆ ಬುದ್ಧಿ ಎಂಬ ಪರಿಮಳವನ್ನೂ ಹಚ್ಚಿದ್ದ. ಭಗವಂತ ಪರಿಮಳ ಹಚ್ಚಿ ಕೊಟ್ಟಿರುವ ಬಟ್ಟೆ ಇದು - ಎಂಬ ಎಚ್ಚರಿಕೆಯಿಂದ ಈ ಬಟ್ಟೆಯನ್ನು ಚೆನ್ನಾಗಿ ಬಳಸಿಕೊಂಡೆವೆಂದರೆ ಮುಂದಿನ ಜನ್ಮದಲ್ಲಿ ಇನ್ನಷ್ಟು ಬುದ್ಧಿ ಎಂಬ ಪರಿಮಳವನ್ನು ಬೆರೆಸಿ ಶರೀರಬಟ್ಟೆಯನ್ನು ತೊಡಿಸುವನು. ಈ ಜನ್ಮದಲ್ಲಿ ಒಂದು ವಿಷಯ ಅರ್ಥ ಆಗಬೇಕೆಂದಿದ್ದರೆ ಹತ್ತು ಬಾರಿ ಹೇಳಬೇಕಾದರೆ, ಮುಂದಿನ ಜನ್ಮದಲ್ಲಿ ಐದು ಬಾರಿ ಹೇಳಿದಾಕ್ಷಣ ಅರ್ಥ ಆಗುವ ಸ್ಥಿತಿಗೆ ಬರುವೆವು.

ಹೀಗೆ ಭಗವಂತ ಶರೀರ - ಬಟ್ಟೆಗೆ ಬುದ್ಧಿ - ಪರಿಮಳವನ್ನು ಹೆಚ್ಚಿಸುವ ಮೂಲಕ ಅದನ್ನು ಬೆಳೆಸುವವನೆಂಬ ಆಶಯದಲ್ಲಿ 'ತಂತುವರ್ಧನ' - ಎಂದು ಸ್ತುತಿಸಲಾಗುವುದು.

**೭೯೪. ಇಂದ್ರಕರ್ಮಾ – ಇಂದ್ರನು ಬೇಕಾದದ್ದನ್ನು ಕೊಡುವಂತೆ ಅವನಲ್ಲಿ ಚಟುವಟಿಕೆಯನ್ನು ಉಂಟು ಮಾಡಿರುವವನು.**

ವಿವರಣೆ : ಕರ್ಮ - ಎಂದರೆ ಚಟುವಟಿಕೆ. ಇದಂ ರಾತೀತಿ ಇದನ್ನು ಕೊಡುವವನು ಇಂದ್ರ. ಇದನ್ನು ಎಂದರೆ ಭಕ್ತರು ಅಪೇಕ್ಷೆ ಪಟ್ಟದ್ದನ್ನು. ಮಳೆಯನ್ನೋ, ಬೆಳೆಯನ್ನೋ, ಮಕ್ಕಳನ್ನೋ - ನೀಡುವವನು ಇಂದ್ರ. ಇಂದ್ರ ಆ ರೀತಿಯಾಗಿ ಭಕ್ತರು ಬೇಡುವ ಮಳೆ, ಬೆಳೆ ಇತ್ಯಾದಿಗಳನ್ನು ಕೊಡುವಂತೆ ಅವನಲ್ಲಿ ಚಟುವಟಿಕೆ ತುಂಬುವವನು ಭಗವಂತ. ಭಗವಂತ ಪ್ರೇರಿಸದಿದ್ದರೆ, ಹಾಗೆಯೇ ಅವರಿಗೆ ಬೇಕಾದ ಸಂಪತ್ತನ್ನು ನೀಡದಿದ್ದರೆ ದೇವೇಂದ್ರ ಮಳೆ, ಬೆಳೆ ಇತ್ಯಾದಿಗಳನ್ನು ನೀಡಲು ಸಾಧ್ಯವಿಲ್ಲ. ಆದ್ದರಿಂದ ಭಗವಂತನ ಪ್ರೇರಣೆಗನುಗುಣವಾಗಿ ದೇವೇಂದ್ರ ಭಕ್ತರಿಗೆ ಬೇಕಾದ ಮಳೆ, ಬೆಳೆ ಇತ್ಯಾದಿಗಳನ್ನು ನೀಡುವನು.

ದೇವೇಂದ್ರ ದೇವತೆಗಳಲೆಲ್ಲ ಶ್ರೇಷ್ಠ ಎಂಬುದಕ್ಕಾಗಿಯಷ್ಟೇ ಅವನನ್ನು ಇಲ್ಲಿ ಉಲ್ಲೇಖಿಸಲಾಗಿದೆ. ಬರೇ ದೇವೇಂದ್ರ ಮಾತ್ರ ಅಲ್ಲ, ಅಗ್ನಿ, ಯಮ ಇತ್ಯಾದಿ ಉಳಿದ ದೇವತೆಗಳೂ ತಮ್ಮ ತಮ್ಮ ಅಧೀನದಲ್ಲಿ ಇರುತ್ತಾ ಆಯಾ ಇಂದ್ರಿಯಗಳನ್ನು ಪ್ರೇರಿಸಿ, ಆ ನಿಟ್ಟಿನ ಇಷ್ಟವನ್ನು ಪೂರೈಸಬೇಕೆಂದರೆ ಅವರಿಗೆ ಭಗವಂತನೇ ಚಟುವಟಿಕೆಯನ್ನು ನೀಡಬೇಕು. 'ಇಂದ್ರಕರ್ಮಾ' ನಾಮದಿಂದ ಈ ಅರ್ಥವೂ ಸೂಚಿತ. ಆದುದರಿಂದ ಇಂದ್ರನೇ ಮುಂತಾದ ದೇವತೆಗಳು ಭಕ್ತರು ಬೇಡುವ ಪದಾರ್ಥವನ್ನು ಒದಗಿಸಿಕೊಡುವಂತೆ ಅವರಲ್ಲಿ ಬೇಕಾದ ಚಟುವಟಿಕೆಯನ್ನು ನೀಡುವವನು ಎಂಬುದು 'ಇಂದ್ರಕರ್ಮಾ' ನಾಮದ ಅರ್ಥ.

**೭೯೫. ಮಹಾಕರ್ಮಾ – ವ್ಯಕ್ತಿಗಳಲ್ಲಿ ಆಧ್ಯಾತ್ಮಿಕ ಮಹತ್ತ್ವ ಬರಲು ಬೇಕಾದ ಕರ್ಮಗಳನ್ನು ನಿರ್ಮಿಸಿರುವವನು.**

ವಿವರಣೆ : ವ್ಯಕ್ತಿಗಳಲ್ಲಿ ಮಹತ್ತ್ವಕ್ಕೆ ಕಾರಣವಾದ ಕರ್ಮವನ್ನು ಮಾಡಿರುವವನೇ ಮಹಾಕರ್ಮಾ. ಕರ್ಮ ಎಂದರೆ ನಾನಾ ಜನರ ಶುಶ್ರೂಷೆ.

**'ನಾನಾಜನಸ್ಯ ಶುಶ್ರೂಷಾ ಕರ್ಮಾಖ್ಯಾ ಕರವನ್ಮಿತೇಃ'** - ಎಂಬುದಾಗಿ ನಾನಾ ಜನರ ಶುಶ್ರೂಷೆಯನ್ನು ಕರ್ಮ ಎಂದು ಗುರುತಿಸಲಾಗಿದೆ. ಇದನ್ನು ದೇವರೇ ಶಾಸ್ತ್ರದ

ಮೂಲಕ ವಿಧಿಸಿರುವಂತಹದ್ದು. ದೇವರ ಸಾಮ್ರಾಜ್ಯದ ಪ್ರಜೆಯಾಗಿದ್ದು ದೇವರ ನೀರು ಕುಡಿಯುತ್ತಿರುವುದರಿಂದ, ದೇವರ ಹೆಸರನ್ನು ಬಳಸಿಕೊಳ್ಳುತ್ತಿರುವುದರಿಂದ ಅದಕ್ಕೆ ಪ್ರತಿಯಾಗಿ ದೇವರಿಗೆ ಕಪ್ಪ ಕೊಡಬೇಕು. ತನಗೆ ಯಾವ ವಸ್ತುವೂ ಕಪ್ಪದ ರೂಪದಲ್ಲಿ ಬೇಡ. ಬದಲಾಗಿ ನಾನಾ ಜನರಿಗೆ ಶುಶ್ರೂಷೆಯ ರೂಪದಲ್ಲಿ ಕಪ್ಪವನ್ನು ನೀಡುವಂತಾಗಲಿ ಎಂದು ದೇವರು ಬಯಸುವನು. ಹೀಗೆ ನಾನಾ ಜನರಿಗೆ ಶುಶ್ರೂಷೆ ನಡೆಸುವಂತಹ ಕಪ್ಪವನ್ನಾದರೂ ದೇವರು ಯಾಕೆ ಬಯಸುತ್ತಾನೆ ? ತನಗಾಗಿ ಅಲ್ಲ. ಮತ್ತೆ 'ಯೋಗಾರ್ಥಿನಾ ತು ಸಾ ಕಾರ್ಯಾ.......' ಎಂದಿರುವಂತೆ ಯೋಗವು ತನ್ನಲ್ಲಿ ಸಿದ್ಧಿಸಬೇಕೆಂದರೆ ಈ ಬಗೆಯ ಕರ್ಮವನ್ನು ಮಾಡಲೇಬೇಕು. ಯೋಗ ಎಂದರೆ ಉಪಾಯ, ಆಧ್ಯಾತ್ಮಿಕ ಉಪಾಯ - ಇದರ ವಿಷಯದಲ್ಲಿ ಮಹತ್ತ್ವ ಸಿದ್ಧಿಸಬೇಕೆಂದರೆ ನಾನಾ ಜನರ ಶುಶ್ರೂಷಾ ರೂಪವಾದ ಕರ್ಮ ಬೇಕೇ ಬೇಕು. ಆದುದರಿಂದ ಯೋಗದ ವಿಷಯದಲ್ಲಿ ಮಹತ್ತ್ವದ ಸಿದ್ಧಿಗೆ ಕಾರಣವಾಗಿ ನಾನಾಜನರ ಶುಶ್ರೂಷಾ ರೂಪವಾದ ಕರ್ಮವನ್ನು ಪ್ರಸ್ತುತ ಪಡಿಸಿದ ಭಗವಂತ 'ಮಹಾಕರ್ಮಾ'

**೭೯೬. ಕೃತಕರ್ಮಾ – ಮಾಡಬೇಕಾದ ಕರ್ಮಗಳನ್ನೆಲ್ಲಾ ಮಾಡಿ ಮುಗಿಸಿರುವವನು.**

ವಿವರಣೆ : 'ಮಹಾಕರ್ಮಾ' ನಾಮದಿಂದ ನಾನಾ ಜನರ ಶುಶ್ರೂಷಾ ರೂಪವಾದ ಕರ್ಮ ಮಾಡಬೇಕೆಂಬ ಸೂಚನೆ ಬಂದಾಗ ಯಾರು ಮಾಡಬೇಕು ಎಂದು ಪ್ರಶ್ನೆ ಉಂಟಾಗುವುದು.

ಯಾರು 'ಕರ್ತವ್ಯ ಕರ್ಮ'ರೋ ಅವರು ಮಾಡಬೇಕು. ಅಂದರೆ ಮಾಡಬೇಕಾದ ಕರ್ಮಗಳು ಯಾರ ಪಾಲಿಗೆ ಇನ್ನೂ ಮಾಡಬೇಕಾಗಿ ಉಳಿದುಕೊಂಡಿವೆಯೋ ಅಂತಹವರು ಮಾಡಬೇಕು. ದೇವರಾದರೂ 'ಕೃತಕರ್ಮಾ' ಮಾಡಬೇಕಾದ ಕರ್ಮವನ್ನೆಲ್ಲ ಈಗಾಗಲೇ ಮಾಡಿ ಮುಗಿಸಿರುವವನು. ವಿಧಿನಿಷೇಧಗಳಿಗೆ ಬಾಹಿರನಾಗಿರುವ ಅವನು ಯಾವುದೇ ಕರ್ಮ ಮಾಡಬೇಕಾದದ್ದಿಲ್ಲ.

**'ನ ಮೇ ಪಾರ್ಥಾಸ್ತಿ ಕರ್ತವ್ಯಂ ತ್ರಿಷು ಲೋಕೇಷು ಕಿಂಚನ'** ಮೂರು ಲೋಕಗಳಲ್ಲೂ ಯಾವುದೇ ಕರ್ಮ ತನಗೆ ಕರ್ತವ್ಯ ಎನಿಸಿಲ್ಲ ಎಂದು ಗೀತಾಚಾರ್ಯ ಉದ್ಘೋಷಿಸಿರುವನು. ಆದರೂ ತಾನು ಕರ್ಮ ಮಾಡುವುದು ಉಳಿದವರಿಗೆ ಕರ್ಮ ಮಾಡಲು ಬೇಕಾದ ಸ್ಫೂರ್ತಿ, ಪ್ರೇರಣೆ ದೊರಕಿಸಿಕೊಡುವುದಕ್ಕಾಗಿಯಷ್ಟೇ.

ನಾವು ನಮ್ಮ ಕರ್ತವ್ಯಕರ್ಮಗಳನ್ನು ಆದಷ್ಟು ಬೇಗ ಬೇಗ ಮುಗಿಸಬೇಕೆಂದರೆ

ಭಗವಂತನನ್ನು 'ಕೃತಕರ್ಮಾ' - ಎಂದು ಉಪಾಸನೆ ಮಾಡಬೇಕು. 'ಇಂದಿನ ದಿನವೇ ಸುದಿನ ನಾಳೆಗೆ ಅದು ಕಠಿನ' ಎಂದಿರುವಂತೆ ನಾಳೆ ನಡೆಸಬೇಕಾದ ಕರ್ಮಗಳನ್ನು ಇಂದು ನಡೆಸುವುದೇ ಒಳ್ಳೆಯದು. ನಾಳೆ ನಡೆಸುವುದೆಂದರೆ ಅಷ್ಟರವರೆಗೆ ಬದುಕಿರುತ್ತೇವೆಂಬ ನಿಶ್ಚಯವೇ ಇಲ್ಲ ತಾನೇ ?

ಯಾರಿಗೋ ಕೊಟ್ಟ ಮಾತನ್ನು ಪೂರೈಸದೆ, ಉಳಿಸಿಕೊಳ್ಳುವ ಪ್ರಯುಕ್ತ ಅದನ್ನು ಈಡೇರಿಸುವುದಕ್ಕಾಗಿ ಪುನಃ ಹುಟ್ಟಿ ಬರಬೇಕಾಗುತ್ತದೆ. ಅದಾಗಬಾರದೆಂದಿದ್ದರೆ ನಾವೂ 'ಕೃತಕರ್ಮ'ನ ಅನುಗ್ರಹದಿಂದ 'ಕೃತಕರ್ಮ'ರಾಗಲು ಯತ್ನಿಸಬೇಕು.

**೭೯೭.ಕೃತಾಗಮಃ – ಸಂಸಾರ ವೃಕ್ಷಕ್ಕೆ ಕತ್ತರಿಯಂತೆ ಇರುವವನು.**

ವಿವರಣೆ : 'ಅಗಮು' ಎಂದರೆ ಚಲನೆ ಇಲ್ಲದದ್ದು. ಚಲನೆ ಇಲ್ಲದವು ಅನೇಕಗಳಿರುವುವಾದರೂ ಅವುಗಳಲ್ಲಿ ಮರವೂ ಒಂದು. ಆದ್ದರಿಂದ ಪ್ರಕೃತ 'ಅಗಮ' ಎಂದರೆ ಚಲಿಸದ ಮರ ಎಂದಿಟ್ಟುಕೊಳ್ಳೋಣ. ಕೃತ ಎಂದರೆ ಕತ್ತರಿ. ಕೃಂತತೀತಿ ಕೃತ. ಕೃಂತನ ಮಾಡುವಂತಹ ಕತ್ತರಿ ಕೃತ. ಆದುದರಿಂದ ಮರಕ್ಕೆ ಕತ್ತರಿಯಂತೆ ಇರುವವನೇ ಕೃತಾಗಮ. ಯಾವ ಮರ ? ಸಂಸಾರ ಎಂಬ ಮರ. ಸಂಸಾರ ಮರವನ್ನು ಅಸಂಗ ಶಸ್ತ್ರದಿಂದ ತುಂಡರಿಸಬಹುದೆಂದು 'ಅಸಂಗಶಸ್ತ್ರೇಣ ದೃಢೇನ ಛಿತ್ವಾ....' - ಎಂದು ಗೀತಾಚಾರ್ಯ ಹೇಳಿದ್ದಿದೆ. ಆದುದರಿಂದ ಸಂಸಾರ ಮರಕ್ಕೆ ಕತ್ತರಿಯಂತೆ ಇರುವವನು ಭಗವಂತ. ಯಾರ ಸಂಸಾರಕ್ಕೆ ? ಯಾರು 'ಕೃತಕರ್ಮ'ರೋ ಅಂತಹವರ ಸಂಸಾರಕ್ಕೆ ಅಂದರೆ ತಮ್ಮ ಕರ್ತವ್ಯಗಳನ್ನೆಲ್ಲ ಯಾರು ಪೂರೈಸಿರುವರೋ ಅಂತಹವರ ಸಂಸಾರಕ್ಕೆ, ಸಂಸಾರ ಬಂಧನಕ್ಕೆ ಭಗವಂತ ಕತ್ತರಿಯಂತೆ ಇರುವನು. ಶಾಸ್ತ್ರದ ಶ್ರವಣ, ಮನನ, ಧ್ಯಾನ, ಸಾಕ್ಷಾತ್ಕಾರ ಇವನ್ನೆಲ್ಲ ಪೂರೈಸಿರುವವರು 'ಕೃತಕರ್ಮ'ರು. ಅವರ ಪಾಲಿಗಷ್ಟೇ ಭಗವಂತ 'ಕೃತಾಗಮ' - ಸಂಸಾರವೃಕ್ಷವನ್ನು ಛೇದಿಸುವವನಾಗುವನು.

**ಉದ್ಭವಃ ಸುಂದರಃ ಸುಂದೋ ರತ್ನನಾಭಃ ಸುಲೋಚನಃ |**
**ಅರ್ಕೋ ವಾಜಸನಃ ಶೃಂಗೀ ಜಯಂತಃ ಸರ್ವವಿಜ್ಜಯೀ ||೮೫||**

**೭೯೮.ಉದ್ಭವಃ – ಮೊದಲೇ ಇದ್ದರೂ ಪ್ರಾರ್ಥನೆಯ ಬಳಿಕವಷ್ಟೇ ಕಾಣಿಸಿಕೊಳ್ಳುವವನು.**

ವಿವರಣೆ: ಕೆಲವು ದೇವಸ್ಥಾನದ ಪ್ರತಿಮೆಗಳು, ಲಿಂಗಗಳು 'ಉದ್ಭವ'ವಾದವು ಎಂದು

ವ್ಯವಹರಿಸಲಾಗುವುದು. ತುಲಾ ಸಂಕ್ರಮಣದಂದು ತಲಾ ಕಾವೇರಿಯ ತೀರ್ಥದ ಉದ್ಭವ ಇಷ್ಟು ಗಂಟೆಗೆ ನಡೆಯುದೆಂದೂ ಹೇಳಲಾಗುವುದು.

ಈ ವ್ಯವಹಾರಗಳಲ್ಲೆಲ್ಲ 'ಉದ್ಭವ' - ಎಂದರೆ ಮೊದಲೇ ಇದ್ದರೂ ಆಯಾ ಸಂದರ್ಭಗಳಲ್ಲಿ ಕಾಣಿಸಿಕೊಂಡದ್ದು - ಎಂಬ ಅರ್ಥ. ಹೀಗೆ ದೇವರು ಉದ್ಭವನಾಗುವವನು. ಯಾವುದಾದರೊಂದು ವ್ಯಕ್ತಿಯ ಮೂಲಕ ಕಾಣಿಸಿಕೊಳ್ಳುವವನು. ವ್ಯಕ್ತಿಯೇ ಆಗಬೇಕಿಲ್ಲ. ಕಂಭದ ಮೂಲಕವೂ ಉದ್ಭವನಾಗುವನು. ನರಸಿಂಹನಾಗಿ ಉದ್ಭವನಾಗಲು ಹಿರಣ್ಯಕಶಿಪು ಪ್ರಾರ್ಥಿಸಿದ್ದೇ ಹೊರತು ಪ್ರಹ್ಲಾದ ಅಲ್ಲ. ಪ್ರಹ್ಲಾದ ದೇವರನ್ನು ಕಂಡವ. ಅವನಲ್ಲಿ ಹಿರಣ್ಯಕಶಿಪು ಪ್ರಾರ್ಥಿಸಿದ - ನಿನ್ನ ದೇವರು ಎಲ್ಲ ಕಡೆ ಇರುವುದಾದರೆ ಈ ಕಂಭದಲ್ಲೂ ಇರುವನೋ ? ಹಾಗಾದರೆ ಕಾಣಿಸುವಂತೆ ಮಾಡು - ಎಂದು. ಹೀಗೆ ಪ್ರಹ್ಲಾದನಲ್ಲಿ ಹಿರಣ್ಯಕಶಿಪು ಸಲ್ಲಿಸಿದ ಪ್ರಾರ್ಥನೆಗೆ ಸ್ಪಂದಿಸಿದ ದೇವರು ನರಸಿಂಹನಾಗಿ 'ಉದ್ಭವ' ಹೊಂದಿದ.

ನರಸಿಂಹ ಆ ಕಂಭದಲ್ಲಿ ಮೊದಲೂ ಇದ್ದ. ಆದರೆ ಕಾಣಿಸಿಕೊಳ್ಳುತ್ತಿರಲಿಲ್ಲ. ಹಿರಣ್ಯಕಶಿಪು ಪ್ರಹ್ಲಾದನಲ್ಲಿ ಸಲ್ಲಿಸಿದ ಪ್ರಾರ್ಥನೆಯ ಬಳಿಕವಷ್ಟೇ ಕಾಣಿಸಿಕೊಂಡ. ಆದ್ದರಿಂದ ನರಸಿಂಹನ 'ಉದ್ಭವ' ಎನಿಸಿದೆ.

ನಮ್ಮದು ಹುಟ್ಟು ಹೊರತು ಉದ್ಭವ ಅಲ್ಲ. ನಾವು ತಾಯಿಯ ಹೊಟ್ಟೆಯಲ್ಲೇ ಮೊದಲೇ ಇರುವುದಿಲ್ಲ. ಒಂಭತ್ತು ತಿಂಗಳ ಮುಂಚೆ ನಾವು ತಂದೆಯ ಹೊಟ್ಟೆಯಲ್ಲಿರುವೆವಷ್ಟೇ. ತಾಯಿಯ ಹೊಟ್ಟೆಯ ವಿಳಾಸಕ್ಕೆ ಪತ್ರ ಬರೆದರೆ ಅದು ನಮಗೆ ತಲುಪಲಾರದು. ಹಾಗಾದರೆ ತಂದೆಯ ಹೊಟ್ಟೆಯ ವಿಳಾಸಕ್ಕೆ ಪತ್ರ ಬರೆಯೋಣ ಎಂದರೆ ಅಲ್ಲೂ ವಸುದೇವನ ಲೆಕ್ಕಚಾರದ ಪ್ರಕಾರ ಮೂರು ತಿಂಗಳಷ್ಟೇ ಇರುವುದು. ಅದಕ್ಕಿಂತ ಮುಂಚೆ ಧಾನ್ಯ. ಅದಕ್ಕಿಂತ ಮುಂಚೆ ಮಳೆ, ಮೋಡ, ಸ್ವರ್ಗ ಅಥವಾ ನರಕ ಹೀಗೆ ಸಂಚರಿಸುತ್ತಾ ಇರುವವರು ನಾವು. ಹೀಗೆ ತಾಯಿಯ ಗರ್ಭದಲ್ಲಿ ಮೊದಲಿನಿಂದಲೂ ಇದ್ದು, ಹತ್ತು ತಿಂಗಳಾದಾಕ್ಷಣ ಕಾಣಿಸಿಕೊಳ್ಳುವವರಲ್ಲದ ಪ್ರಯುಕ್ತ ನಾವು ಹುಟ್ಟುವವರೇ ಹೊರತು ಉದ್ಭವಿಸುವವರಲ್ಲ. ನಮಗಿಂತ ವಿಲಕ್ಷಣನಾದ ದೇವರು ಮಾತ್ರ ಉದ್ಭವಿಸುವವನು.

ದೇವರ ಈ 'ಉದ್ಭವ' ನಾಮದ ಒಂದು ಧರ್ಮ - ಇದ್ದೂ ಕಾಣಿಸಿಕೊಳ್ಳದಿರುವುದು. ವೃದ್ಧರಾದ ತಾಯಿತಂದೆಯರು ಮನೆಯಲ್ಲಿ ಇದ್ದರೂ ಮಕ್ಕಳಿಗೆ ಸ್ವಚ್ಛಂದವಾಗಿ ನಡೆದುಕೊಳ್ಳಲು ಅಡ್ಡಿಯಾಗದಂತೆ ಇರದಂತಿರಬೇಕು.

ಕಳ್ಳನೊಬ್ಬನು ಕಳ್ಳತನ ಮಾಡುವುದನ್ನು ಸಾಬೀತು ಪಡಿಸಲು ಅವನ ಸಮೀಪದಲ್ಲೇ ನಾವಿದ್ದರೂ ನಾವಿರುವೆವೆಂಬುದು ಅವನಿಗೆ ತಿಳಿಯಬಾರದು. ಆ ರೀತಿಯಾಗಿ ನಾವು ಇರುವಂತಾಗಬೇಕು.

ವಿಶೇಷವಾಗಿ ಗುಪ್ತಚರ ದಳದವರಿಗೆ ಅಪರಾಧಿಗಳನ್ನು 'ರೆಡ್‌ಹ್ಯಾಂಡ್' ಹಿಡಿಯಲು ಅವರ ಸಮೀಪದಲ್ಲೇ ಇದ್ದರೂ ಇರದಂತೆ ಇರುವಂತಾಗಬೇಕು.

ಇದಕ್ಕೆಲ್ಲ ದೇವರನ್ನು 'ಉದ್ಭವ' ಎಂದು ಉಪಾಸನೆ ನಡೆಸಬೇಕು.

**೭೯೯.ಸುಂದರಃ – ಒಮ್ಮೆ ಕಾಣಿಸಿಕೊಳ್ಳುತ್ತಿದ್ದು, ಮತ್ತೆ ಕಾಣಿಸದೆ, ಆ ಬಳಿಕ ಕಾಣಿಸಿಕೊಳ್ಳುವವನು.**

ವಿವರಣೆ : ಸೌಂದರ್ಯ ಉಳ್ಳವನು ಸುಂದರ ಎನಿಸುವನು. ರಾಮಾಯಣದಲ್ಲಿ 'ಸುಂದರಕಾಂಡ' ಎಂದೇ ಒಂದು ಕಾಂಡ ಇದೆ. ಯಾಕೆ ಉಳಿದ ಕಾಂಡಗಳು ಸುಂದರಗಳಾಗಿಲ್ಲವೇ ? ಅಯೋಧ್ಯಾ ಕಾಂಡದಲ್ಲಿ ಕೈಕೇಯಿಯ ಅರ್ಭಟ ಅಧಿಕವಾಗಿರುವುದರಿಂದ ಅದನ್ನು ನಾವು ಸುಂದರ ಎಂದು ವರ್ಣಿಸಲಾರೆವಾದರೂ ಉಳಿದವುಗಳು ಸುಂದರಗಳೇ ಆಗಿವೆ ತಾನೇ ?

ಆದರೂ ನಿರ್ದಿಷ್ಟವಾದ ಆ ಕಾಂಡವೇ ಸುಂದರ ಎನಿಸಲು ಹೀಗೊಂದು ಕಾರಣವನ್ನು ತಿಳಿಸುವರು. ಆ ಕಾಂಡದಲ್ಲಿ ರಾಮನ ಸೌಂದರ್ಯದ ವರ್ಣನೆ ಅತ್ಯಧಿಕವಾಗಿ ನಡೆದಿದೆ. ನಿಜವಾಗಿ ಯಾರು ರಾಮನನ್ನು ತಿಳಿದಿರುವನೋ ಅಂತಹ ಆಂಜನೇಯನ ಮೂಲಕವೇ ನಡೆಡಿದೆ. ಯಾರಿಗೆ ಆಂಜನೇಯ ತಿಳಿದದ್ದಕ್ಕಿಂತಲೂ ಅಧಿಕವಾಗಿ ಶ್ರೀರಾಮನ ಸೌಂದರ್ಯದ ಬಗ್ಗೆ ತಿಳುವಳಿಕೆ ಇದೆಯೋ ಅಂತಹ ಸೀತೆಯ ಮುಂದೆಯೇ ಆಂಜನೇಯ ಶ್ರೀರಾಮನ ಗುಣಗಾನ ನಡೆಸಿ, ಕಲ್ಯಾಣ ಗುಣಗಳಿಗೆ ಸಂಬಂಧಿಸಿದ್ದ ಸೌಂದರ್ಯವನ್ನು ವರ್ಣಿಸಿದ್ದ. ಸೀತೆಗೆ ಅದೆಲ್ಲ ಗೊತ್ತಿದ್ದರಿಂದ ಆಕೆ ಅದನ್ನು ಒಪ್ಪಿಕೊಂಡಿದ್ದಳು. ಒಂದು ವೇಳೆ ಗೊತ್ತಿಲ್ಲದವರ ಎದುರು ಹೀಗೆ ಗುಣಗಾನ ನಡೆಸಿದರೆ ಅದು ಪೂರ್ಣವಾಗಿ ಪ್ರಾಮಾಣಿಕ ಎಂದು ನಂಬಲಾಗುವುದಿಲ್ಲ. ಆದರೆ ರಾಮನ ಗುಣಗಳನ್ನು ಸಾಕಷ್ಟು ಬಲ್ಲ ಸೀತೆಯ ಎದುರೇ ಗುಣಗಾನ ನಡೆಸಿ, ಆಕೆಯ ಒಪ್ಪಿಗೆಯನ್ನು ಆಂಜನೇಯ ಪಡೆದುಕೊಂಡಿದ್ದ.

ಹೀಗೆ ಶ್ರೀರಾಮಚಂದ್ರನ ಗುಣಗಳಿಗೆ ಸಂಬಂಧಿಸಿದ ಸೌಂದರ್ಯದ ವರ್ಣನೆ ಮುಖ್ಯಾಧಿಕಾರಿಯಾದ ಆಂಜನೇಯನ ಮೂಲಕ ಸೀತಾದೇವಿಯ ಸಮಕ್ಷಮದಲ್ಲಿ ನಡೆದ ಸಂಗತಿ ಈ ಕಾಂಡದಲ್ಲಿ ಇರುವುದರಿಂದ ಇದು ಅನ್ವರ್ಥಕವಾಗಿ 'ಸುಂದರಕಾಂಡ' ಎನಿಸಿದೆ.

‘ಶ್ರೀ ಮಹಾವರಾಹಾಯ ನಮಃ’ ‘ಶ್ರೀ ಮಹೀಧರಾಯ ನಮಃ’
‘ಶ್ರೀ ಯಜ್ಞಸಾಧನಾಯ ನಮಃ’



ಉಡುಪಿ ಸೋದೆಮಠದ ಶ್ರೀ ವಿಷ್ಣುತೀರ್ಥರಿಗೆ ಶ್ರೀಮಧ್ವರು ಪೂಜಿಸಿ, ಅನುಗ್ರಹಿಸಿದ ಭೂವರಾಹನ ಪ್ರತೀಕದಲ್ಲಿ ವಿ.ಸ.ನಾಮದ ಭೂಮಿಯ ಧಾರಣೆ ಹಾಗೂ ಯಜ್ಞದ ನಿರ್ವಹಣೆ ಇವುಗಳ ಪ್ರಸ್ತಾವವುಳ್ಳ ‘ಮಹಾವರಾಹಃ’ ‘ಮಹೀಧರಃ’ ‘ಯಜ್ಞಸಾಧನಃ’ - ಮುಂತಾದ ನಾಮಗಳ ಅರ್ಥಾನುಸಂಧಾನ ನಡೆಸಬಹುದಾಗಿದೆ.

‘ಶ್ರೀ ಭಿಷಜೇನಮಃ ’ ‘ಶ್ರೀ ಅಮೃತಪಾಯ ನಮಃ’



ಶ್ರೀ ಮಧ್ವರು ತಂತ್ರಸಾರಸಂಗ್ರಹದಲ್ಲಿ ‘ಚಂದ್ರೌಘಕಾಂತಿಂ......’ ಇತ್ಯಾದಿಯಾಗಿ ವರ್ಣಿಸಿರುವಂತೆ ಚಂದ್ರಮಂಡಲದಲ್ಲಿ ಅಮೃತಕಲಶವನ್ನು ಧರಿಸಿಕೊಂಡು ಇರುವ ಧನ್ವಂತರಿಯ ತಾದಾತ್ಮ್ಯವನ್ನು ಉಡುಪಿ ಶ್ರೀಕೃಷ್ಣನಲ್ಲಿ ಚಿಂತಿಸುತ್ತ ವಿ.ಸ.ನಾಮದ ‘ಭಿಷಕ್’ ‘ವೈದ್ಯಃ’ ‘ಅಮೃತಪಃ’ ಮುಂತಾದ ಆರೋಗ್ಯಕ್ಕೆ, ಅಮೃತವರ್ಷಣೆಗೆ ಸಂಬಂಧಿಸುವ ಪ್ರಸ್ತಾವುಳ್ಳ ನಾಮಗಳ ಅರ್ಥಾನುಸಂಧಾನ ನಡೆಸಬಹುದಾಗಿದೆ.

ಇದಲ್ಲದೆ, ಇದು 'ಸುಂದರಕಾಂಡ' ಎನಿಸಲು ಮತ್ತೊಂದು ಕಾರಣವೂ ಇದೆ -

**'ನಷ್ಟದ್ರವ್ಯಸ್ಯ ಲಾಭೋ ಹಿ ಸುಂದರಃ ಪರಿಕೀರ್ತಿತಃ'**

ಕಳೆದುಹೋದ ವಸ್ತು ಪುನಃ ದೊರಕಿತೆಂದರೆ ಆ ಲಾಭ ಸುಂದರ ಎನಿಸುವುದು. ಸೀತಾದೇವಿ ಕಳೆದು ಹೋಗಿದ್ದಳು - ಲೋಕದ ದೃಷ್ಟಿಯಿಂದ. ಶ್ರೀರಾಮಚಂದ್ರ ಸೀತಾದೇವಿಯ ಅನ್ವೇಷಣೆಗೆ ಆಂಜನೇಯನನ್ನು ಕಳುಹಿಸಿದ್ದ. ಆಂಜನೇಯ ಲಂಕೆಯ ಅಶೋಕ ವನದಲ್ಲಿ ಸೀತೆಯನ್ನು ಕಂಡ. ಕಳೆದು ಹೋಗಿದ್ದ ಸೀತೆಯ ದರ್ಶನ ಆಯಿತು. ಇದರಿಂದ ಕಳೆದು ಹೋದ ವಸ್ತು ಮತ್ತೆ ಲಾಭವಾದಂತಾಯಿತು. ಈ ಘಟನೆಯನ್ನು ಮುಖ್ಯವಾಗಿ ತಿಳಿಸುವ ಕಾಂಡವೇ ಸುಂದರಕಾಂಡ.

ನಮ್ಮೆಲ್ಲರ ಪಾಲಿಗೂ ದೇವರು ಸುಂದರ. ತಾಯಿಯ ಗರ್ಭದಲ್ಲಿರುವಾಗ ಜೀವ ಗರ್ಭವಾಸ ದುಃಖದಿಂದ ಬಿಡುಗಡೆ ಹೊಂದಲು ದೇವರಲ್ಲಿ ಪ್ರಾರ್ಥಿಸುತ್ತಿರುವನು. ಅಂದರೆ ಆಗ ಅವನಿಗೆ ದೇವರ ದರ್ಶನವಾಗುತ್ತಿರುತ್ತದೆ. ಪರೀಕ್ಷಿತ ತಾಯಿಯ ಗರ್ಭದಲ್ಲಿರುವಾಗಲೇ ದೇವರನ್ನು ಕಂಡು ಉಳಿದ ಜೀವರು ಗರ್ಭದಲ್ಲಿರುವಾಗ ದೇವರ ದರ್ಶನ ಪಡೆಯುವುದಕ್ಕೆ ಪೀಠಿಕೆ ಹಾಕಿರುವನು. ಹೀಗೆ ತಾಯಿಯ ಗರ್ಭದಲ್ಲಿ ಅವನ ಲಾಭ ಆಯಿತೆಂದು ಅವನು ಆ ವ್ಯಕ್ತಿಯ ಪಾಲಿಗೆ ಸುಂದರ ಎನಿಸುವನು.

ಜೀವನದಲ್ಲಿ ದೇವರನ್ನು ನೆನಪಿಸುತ್ತ, ಮರೆಯುತ್ತ, ನೆನಪಿಸುತ್ತ, ಸ್ಮರಿಸುತ್ತ ಇರುವ ನಮಗೆ ಪ್ರಾಣೋತ್ಕ್ರಮಣದ ಕಾಲದಲ್ಲಿ 'ದೇವರು' ಕಾಣಿಸಿಕೊಳ್ಳುವಂತಾಗಬೇಕು. ನಮ್ಮ ಪಾಲಿಗೆ 'ಸುಂದರ'ನಾಗಿ ಅನುಗ್ರಹಿಸಬೇಕು.

ಭೀಷ್ಮರಿಗೆ ಮಹಾಭಾರತ ಯುದ್ಧದ ಪ್ರಾರಂಭದ ಹತ್ತು ದಿನಗಳ ಕಾಲ ಪ್ರತಿನಿತ್ಯ ಕಾಣುತ್ತಿದ್ದ ಕೃಷ್ಣ. ಮತ್ತೆ ಎಂಟು ದಿನಗಳ ಕಾಲ ಭೀಷ್ಮರಿಗೆ ಕೃಷ್ಣ ಕಂಡದ್ದೇ ಇಲ್ಲ. ಭೀಷ್ಮರ ಪಾಲಿಗೆ 'ನಷ್ಟದ್ರವ್ಯ'ನಾದ. ಮಹಾಭಾರತ ಯುದ್ಧ ಮುಗಿದು ಯುಧಿಷ್ಠಿರನಿಗೆ ಮಹಾಭಾರತ ಯುದ್ಧದ ಧಾರ್ಮಿಕತೆಯ ಬಗ್ಗೆ ಸಂಶಯ ಸುಳಿಯಿತೆಂದಾಗ ಪುನಃ ಕೃಷ್ಣ ಕಾಣಿಸಿಕೊಂಡಿರುವನು. ಅಂತಹ ಕೃಷ್ಣನನ್ನು ಎದುರಿಗೆ ಕುಳ್ಳಿರಿಸಿಕೊಂಡು ತಮ್ಮ ಪಾಲಿಗೆ ಕೃಷ್ಣ ಹೇಗೆ 'ಸುಂದರ'ನಾಗಿರುವನೆಂದು ಮೆಲುಕು ಹಾಕುತ್ತ 'ಸುಂದರ'- ಎಂದು ಸ್ತುತಿಸುತ್ತಿರುವರು ಭೀಷ್ಮರು.

**೮೦೦. ಸುಂದಃ – ಕಾರುಣ್ಯದಿಂದ ಚೆನ್ನಾಗಿ ಒದ್ದೆ ಮಾಡುವವನು.**

**ವಿವರಣೆ :** 'ಸು' - ಸುಷ್ಠು - ಚೆನ್ನಾಗಿ ; 'ಉಂದೀ ಕ್ಲೇದನೇ' ಕ್ರಿಯಾಪದದಿಂದ

ರೂಪುಗೊಂಡ ಉಂದ ಶಬ್ದವು ಕ್ಲೇದನ - ಒದ್ದೆ ಮಾಡುವವನು ಎಂಬ ಅರ್ಥವನ್ನು ಕೊಡುವುದು. ನಮಗೆ ಒದ್ದೆ ಮಾಡುವುದೆಂದಾಗ ನೀರಿನ ನೆನಪೇ ಬರುವುದು. ನೀರಿನಿಂದ ಬಟ್ಟೆಯನ್ನು ಒದ್ದೆ ಮಾಡುವುದು - ಎಂದು.

ಇನ್ನು ಸ್ವಲ್ಪ ತಿಮ್ಮಾಂಡಿಗಳಾಗಿದ್ದರೆ, ಹೋಳಿಗೆಯನ್ನು ತುಪ್ಪದಿಂದ ಒದ್ದೆ ಮಾಡುವುದೆಂದು ನೆನಪಿಗೆ ಬರುವುದು.

ಆದರೆ ದೇವರು ಒದ್ದೆ ಮಾಡುವುದು ತನ್ನ ಕಾರುಣ್ಯರಸದಿಂದ. ಕಾರುಣ್ಯವನ್ನು ಸುರಿಸು..... ಇತ್ಯಾದಿ ವ್ಯವಹಾರ ಕಾರುಣ್ಯ ದ್ರವಪದಾರ್ಥದಂತೆ ಪರಿಗಣಿತವಾಗಿದೆ ಎಂದು ಸಾಧಿಸುವುದು. ಭಕ್ತರನ್ನು ತನ್ನ ಕಾರುಣ್ಯದಿಂದ ಚೆನ್ನಾಗಿ ಒದ್ದೆ ಮಾಡುವ ದೇವರು 'ಸುಂದ' ಎನಿಸುವನು.

ಭೀಷ್ಮರು ಕೃಷ್ಣನ ಈ ಗುಣವನ್ನೂ ಅನುಭವಿಸಿರುವರು. ಅದರ ಹಿನ್ನೆಲೆಯಲ್ಲೇ ಕೃಷ್ಣನನ್ನೂ 'ಸುಂದ' - ಎಂದು ಸ್ತುತಿಸುತ್ತಿರುವರು.

**೮೦೧. ರತ್ನನಾಭಃ – * ನವರತ್ನಗಳನ್ನು ತನ್ನ ಹೊಕ್ಕುಳಲ್ಲಿ ಹೊಂದಿರುವವನು**
**    * ಸುಖವನ್ನು ನೀಡುವ ಹೊಕ್ಕುಳು ಉಳ್ಳವನು.**

ವಿವರಣೆ: ನಾಭಿ ಎಂದರೆ ಹೊಕ್ಕಳು. ನವರತ್ನಗಳು ಪ್ರಸಿದ್ಧ. ಅಂತಹ ನವರತ್ನಗಳು ದೇವರ ಹೊಕ್ಕುಳಲ್ಲಿ ಇವೆ. ಆದ್ದರಿಂದ ಅವನು ರತ್ನನಾಭ.

ಇದಕ್ಕಿಂತಲೂ ಮತ್ತೊಂದು ಸ್ವರಸವಾದ ಅರ್ಥ - ರತ್+ನ - ರತ್ನ, ರತ್ ಎಂದರೆ ರತಿ, ರಮಣ, ಸುಖ. ಅಂತಹ ಸುಖವನ್ನು ನೀಡುವಂತಹದ್ದೇ 'ರತ್ನ'. ಸುಖವನ್ನು ನೀಡುವ ಪ್ರಯುಕ್ತ ರತ್ನ ಎನಿಸುವ ನಾಭಿ ಉಳ್ಳವನೇ ರತ್ನನಾಭ.

ಮೂವತ್ತೆರಡು ಶಾರೀರಿಕ ಲಕ್ಷಣಗಳಿವೆ. ಈಗ ಆ ಲಕ್ಷಣಗಳು ಕಾಣಲು ವಿರಳ. ಆದರೂ ಕೆಲವನ್ನು ಕಾಣಬಹುದು. ಕಾಲ ಗಂಟಿನವರೆಗೆ ಚಾಚಿರುವ ಬಾಹುಗಳನ್ನು ಹೊಂದಿರುವಿಕೆ - ಅಜಾನುಬಾಹು. ನಮ್ಮ ಗುರುಗಳ ಗುರುಗಳ ಗುರುಗಳು - ವಿಬುಧ ಪ್ರಿಯ ತೀರ್ಥರು ಆಜಾನುಬಾಹುಗಳಾಗಿದ್ದರೆಂದು ಪ್ರಸಿದ್ಧಿ. ಕಿವಿಗಳು ಹೆಗಲ ವರೆಗೆ ಚಾಚಿರುವುದು, ಕಣ್ಣುಗಳು ಕಿವಿಗಳವರೆಗೆ ಚಾಚಿರುವುದು - ಇವೆಲ್ಲ ಕೆಲವು ಲಕ್ಷಣಗಳು. ಯಕ್ಷಗಾನದವರು ಕಣ್ಣುಗಳನ್ನು ಕಿವಿಯವರೆಗೆ ದೀರ್ಘಗಳನ್ನಾಗಿಸುವುದೇ ಮುಂತಾದ ಕೆಲವು ಲಕ್ಷಣಗಳನ್ನು ಕಾಣಿಸುವರು.

ಈ ಮೂವತ್ತೆರಡು ಲಕ್ಷಣಗಳಲ್ಲಿ ಒಂದು - ಹೊಟ್ಟೆ ತೆಳ್ಳಗಾಗಿದ್ದಿರಬೇಕು. ಅದರ ಹೊಕ್ಕಳು ಒಳಮುಖವಾಗಿದ್ದು ಆದಷ್ಟು ಆಳವಾಗಿದ್ದಿರಬೇಕು. ಬದಲಾಗಿ

ಹೊಟ್ಟೆ ದೊಡ್ಡದಾಗಿದ್ದು ಅದರಲ್ಲಿ ಹೊಕ್ಕಳು ಹೊರಗೆ ಚಾಚಿಕೊಂಡು ಇದ್ದಿರಬಾರದು.

ದೇವರ ಹೊಟ್ಟೆಯೂ ತೆಳು. ಅದರಲ್ಲಿ ಹೊಕ್ಕಳು ಒಳಮುಖವಾಗಿ ಆಳವಾಗಿದೆ. ಅದರಿಂದಲೇ ಕಮಲ ಹೊರಹೊಮ್ಮಬೇಕೆಂದರೆ ಅದು ಎಷ್ಟು ಆಳ ಇರುವುದೆಂದು ಊಹಿಸಿಕೊಳ್ಳಬಹುದು.

ಹೀಗೆ ಹೊಕ್ಕಳು ತುಂಬ ಆಳಇರುವಿಕೆ ಶ್ರೀಮಂತಿಕೆಯ ಹಾಗೂ ದಾನ ಮಾಡುವ ಲಕ್ಷಣವಂತೆ. ಆದುದರಿಂದ ದೇವರು ಆಳದ ಹೊಕ್ಕಳನ್ನು ಹೊಂದಿದ್ದು ಬೇರೆ ಯಾರಲ್ಲೂ ಇಲ್ಲದಷ್ಟು ಸಂಪತ್ತನ್ನು ಹೊಂದಿರುವನು. ಅದನ್ನು ಎಲ್ಲರಿಗೆ ದಾನ ಮಾಡುವನು ಕೂಡಾ. ಆದ್ದರಿಂದ ಅವನು 'ರತ್ನನಾಭ'. ನಮಗೆ ಶ್ರೀಮಂತಿಕೆ ನೀಡಿ ಅದರಿಂದ ದಾನ ಮಾಡಿ ಸುಖ ನೀಡುವ ಹೊಕ್ಕುಳು ಉಳ್ಳವನು.

ನಾವು ಭಗವಂತನ ಕಣ್ಣು, ಕೈ, ಕಾಲು ಎಲ್ಲಾ ಉಪಾಸನೆ ಮಾಡುವೆವು. ಆದರೆ ಹೊಕ್ಕಳನ್ನು ಉಪಾಸನೆ ಮಾಡಬೇಕೆಂದರೆ ಪ್ರತಿಮೆಗಳಲ್ಲಿ ಹೊಕ್ಕಳು ಕಾಣಿಸದು. ಆದುದರಿಂದ ಒಳಗಣ್ಣಿನಿಂದ ದೇವರ ಉದರದಲ್ಲಿ ಹೊಕ್ಕಳನ್ನು ಕಂಡು, ಅದರ ಉಪಾಸನೆ ನಡೆಸಬೇಕು. ಇದರಿಂದ ಪ್ರಸನ್ನನಾಗುವ ಭಗವಂತ ನಮಗೆ ಸುಖ ನೀಡುವನು.

**೮೦೨. ಸುಲೋಚನಃ – * ಒಳ್ಳೆಯ ಕಣ್ಣು ಉಳ್ಳವನು.**
*** ಒಳ್ಳೆಯ ಆಲೋಚನೆ ಉಳ್ಳವನು**

**ವಿವರಣೆ :** ಲೋಚನ ಎನ್ನುವುದಕ್ಕೆ ಕಣ್ಣು ಎಂಬ ಅರ್ಥ ಪ್ರಸಿದ್ಧ. ಆದುದರಿಂದ ದೇವರು ಒಳ್ಳೆಯ ಕಣ್ಣು ಉಳ್ಳವನಾದುದರಿಂದ 'ಸುಲೋಚನ' ಎನಿಸುವನು. ಹೊರಗಣ್ಣಿಗೆ ಕಾಣದಿರುವುದನ್ನು ಕಾಣಲು ಮತ್ತೊಂದು ಲೋಚನ ಇದೆ. ಅದೇ ಆಲೋಚನ. ನೀವೇನೋ ಪ್ರಶ್ನೆ ಕೇಳಿದಿರಿ. ಗೊತ್ತಿದ್ದರೆ ಥಟ್ಟನೆ ಉತ್ತರ ಕೊಡುವೆ. ಸ್ವಲ್ಪ ಗಂಭೀರವಾದ ಪ್ರಶ್ನೆ ಎಂದರೆ ನಾನು ಹೊರ ಲೋಚನವನ್ನು ಮುಚ್ಚಿ ಒಳಗಣ್ಣು ತೆರೆಯುವುದಕ್ಕಾಗಿ ಆಲೋಚನೆಯಲ್ಲಿ ತೊಡಗುವೆನು. ಆಲೋಚನದಿಂದ ಒಳಗಣ್ಣನ್ನು ತೆರೆಯುವುದಕ್ಕಾಗಿಯೇ ಹೊರಗಿನ ಲೋಚನವನ್ನು ಒಮ್ಮೆ ಮುಚ್ಚಲಾಗುವುದು.

ಹೀಗೆ ಹೊರಗಿನ ಲೋಚನಕ್ಕೆ ಎಟಕದ್ದನ್ನು ಕಾಣಲು ಆಲೋಚನವನ್ನು ಬಳಸಿಕೊಳ್ಳಲಾಗುವುದು. ದೇವರು ಯಾವಾಗಲೂ ಆಲೋಚನದಿಂದಲೇ ಎಲ್ಲ ವ್ಯಕ್ತಿಗಳನ್ನೂ ವಸ್ತುಗಳನ್ನೂ ಕಾಣುವವನು. ನಾವಾದರೆ ಹೊರಗಿನ ಲೋಚನದಿಂದ

ಕಂಡು ಬೆಳ್ಳಗಿದ್ದಾನೆಂದರೆ ವ್ಯಕ್ತಿ ಒಳ್ಳೆಯವನು. ಅವನ ಮನಸ್ಸು ಎಷ್ಟು ಕರ್ರಗಿದೆ ಎಂದು ನೋಡುವುದಿಲ್ಲ. ಹಾಗೆಯೇ ಒಬ್ಬ ಭರ್ಜರಿ ವೇಷ ಭೂಷ ತೊಟ್ಟುಕೊಂಡಿದ್ದಾನೆಂದರೆ ಅವನು ಒಳಗಿನಿಂದ ಎಷ್ಟೇ ದುಷ್ಟನಾಗಿದ್ದರೂ ತುಂಬ ಒಳ್ಳೆಯವನೆಂದೇ ನಿರ್ಣಯಿಸಿ ಬಿಡುವೆವು.

ಆದರೆ ದೇವರು ‘ಆಲೋಚನ’ ದಿಂದಲೇ ನೋಡಿ ಎಲ್ಲ ವ್ಯಕ್ತಿಗಳ ಒಳ ವ್ಯಕ್ತಿತ್ವದಿಂದ ಅವರ ಒಳ್ಳೆಯತನವನ್ನೋ ಕೆಟ್ಟತನವನ್ನೋ ಅಳೆಯುವನು. ಹೀಗೆ ಅವನು ‘ಆಲೋಚನ’ ರೂಪವಾದ ಒಳ್ಳೆಯ ಲೋಚನ ಉಳ್ಳವನಾಗಿರುವುದರಿಂದ ಸುಲೋಚನ ಎನಿಸುವನು.

ದೇವರನ್ನು ‘ಸುಲೋಚನ’ - ಎಂಬ ನಾಮದಿಂದ ಉಪಾಸನೆ ನಡೆಸಿದೆವೆಂದರೆ ನಮಗೆ ಒಳ್ಳೆಯ ಆಲೋಚನಾಸಾಮರ್ಥ್ಯ ಸಿದ್ಧಿಸುವುದು.

**೮೦೩. ಅರ್ಕಃ – ಎಲ್ಲರಿಂದಲೂ ಪೂಜ್ಯನಾಗಿರುವವನು.**

**ವಿವರಣೆ :** ಸೂರ್ಯನಿಗೆ ಅರ್ಕ ಎಂಬ ಹೆಸರಿದೆ. ಸೂರ್ಯ ಯಾಕೆ ಅರ್ಕ ? ಅರ್ಚ್ಯತೇ ಸರ್ವೈರಿತಿ ಅರ್ಕಃ ಎಲ್ಲರಿಂದಲೂ ಪೂಜಿಸಲ್ಪಡುವವನೆಂಬ ದೃಷ್ಟಿಯಿಂದ ಸೂರ್ಯ ಅರ್ಕ ಎನಿಸುವನು.

ಪ್ರತಿಯೊಬ್ಬ ಮತದವರಿಗೂ ಸೂರ್ಯ ಬೇಕು. ಮುಸಲ್ಮಾನರೂ ಕ್ರಿಶ್ಚಿಯನ್ನರೂ ಸೂರ್ಯನನ್ನು ಆರಾಧಿಸುವರು.

ಉತ್ತರ ಭಾರತದ ಸಂಚಾರದಲ್ಲಿದ್ದಾಗ ಶ್ರೀಮಧ್ವರು ಒಬ್ಬ ತುರುಷ್ಕರಾಜನ ಎದುರು ‘ಯೋಽಸೌ ದೇವೋ ವಿಶ್ವದೀಪಪ್ರದೀಪಃ ಕುರ್ವನ್ಃ ಸರ್ವಂ ತತ್ಪರಾನುಗ್ರಹೇಣ’ - ನಾನೂ ನೀನೂ ಪೂಜಿಸುವ ‘ಸೂರ್ಯನ’ ಅನುಗ್ರಹದಿಂದಲೇ ನಾವು ಬಂದಿರುವೆವು’ - ಎಂದು ಉತ್ತರಿಸುವ ಮೂಲಕ ತುರುಷ್ಕರಾಜನೂ ಸೂರ್ಯನ ಆರಾಧಕ ಎಂದು ತಿಳಿಸಿರುವರು.

ಚಂದ್ರನನ್ನೋ ನಕ್ಷತ್ರಗಳನ್ನೋ ಅವರು ಉಪಾಸನೆ ಮಾಡುವರಾದರೂ ಚಂದ್ರ ನಕ್ಷತ್ರಾದಿಗಳು ಸೂರ್ಯನ ಬೆಳಕನ್ನೇ ಹೊತ್ತು ತಂದವರಾಗಿರುವುದರಿಂದ ಮೂಲತಃ ಸೂರ್ಯನ ಉಪಾಸನೆಯನ್ನೇ ನಡೆಸಿದಂತಾಗುವುದು.

ಪಶು ಪಕ್ಷಿಗಳೂ ಕೂಡಾ ಸೂರ್ಯೋದಯವಾಗಲೇ ಎದ್ದು ತಮ್ಮ ಚಟುವಟಿಕೆಗಳಲ್ಲಿ ತೊಡಗುವವು. ಸೂರ್ಯಾಸ್ತಮಾನಕ್ಕೇ ತಮ್ಮ ಗೂಡಿಗೆ ಬಂದು ಸೇರುವವು. ಆ ಮೂಲಕ ಸೂರ್ಯನಿಗೆ ಗೌರವ ಸಲ್ಲಿಸುವವು.

ಹೀಗೆ ಸೂರ್ಯ ಎಲ್ಲರಿಂದ ಪೂಜ್ಯನಾಗಿರುವುದರಿಂದಲೇ ಅರ್ಕ ಎನಿಸುವನು. ಸೂರ್ಯನಿಗಿಂತಲೂ ಮುಖ್ಯವಾಗಿ ಎಲ್ಲರಿಂದ ಪೂಜ್ಯನಾಗಿದ್ದು ಅರ್ಕ ಎನಿಸುವವನು ಸೂರ್ಯನಿಗೂ ಅರ್ಕತ್ವವನ್ನು ಕೊಟ್ಟವನು ಭಗವಂತ. ಆದುದರಿಂದ ಅವನೇ ಮುಖ್ಯವಾಗಿ ಅರ್ಕ ಎನಿಸುವನು.

**೮೦೪. ವಾಜಸನಃ – ಹೊಟ್ಟೆಗೆ ಹಾಗೂ ಬುದ್ಧಿಗೆ ಅನ್ನವನ್ನು ನೀಡುವವನು.**

**ವಿವರಣೆ :** ವಾಜ ಎಂದರೆ ಅನ್ನ. ಸನೋತಿ ದದಾತಿ - 'ಷಣು ದಾನೇ' - ಅನ್ನವನ್ನು ಕೊಡುವವನು ವಾಜಸನ.

'ವಾಜಂ ಅನ್ನಂ ಉದಾಹೃತಂ....' - ಎಂದು ಶಾಸ್ತ್ರಕಾರರು ಅನ್ನಕ್ಕೆ ವಾಜ ಎಂಬ ಹೆಸರು ಎಂದರು. ಯಾಕೆ ಅನ್ನ ವಾಜ ಎನಿಸುವುದು ? 'ವಜತಿ ಯೇನ ಇತಿ ವಾಜಮ್' - ಚಲನೆಗೆ ಯಾವುದು ಕಾರಣವಾಗುವುದೋ ಅದು ವಾಜ ಎನಿಸುವುದು. ಅನ್ನವು ಚಲನೆಗೆ ಕಾರಣವಾದುದರಿಂದ ಅನ್ನ 'ವಾಜ' ಎನಿಸುವುದು. ಕುದುರೆಗೆ 'ವಾಜೀ' - ಎಂಬ ಹೆಸರು ಕೂಡಾ ಕುದುರೆ ಚೆನ್ನಾಗಿ ಚಲನೆ ಉಳ್ಳದ್ದೆಂಬ ದೃಷ್ಟಿಯಿಂದಲೇ ಬಂದದ್ದು.

ಭಗವಂತನು ಅನ್ನವನ್ನು ಕೊಡುವವನಾದುದರಿಂದ ವಾಜಸನ ಎನಿಸುವನು. ಬರೇ ಹೊಟ್ಟೆಯ ಅನ್ನ ಮಾತ್ರವಲ್ಲ ; ಬುದ್ಧಿಯ ಅನ್ನವನ್ನೂ ಅವನು ನೀಡುವನು.

ಬ್ರಾಹ್ಮಣರಿಗೆ ಜ್ಞಾನದ ಅನ್ನ, ಕ್ಷತ್ರಿಯರಿಗೆ ಬಾಹುಬಲದ ಅನ್ನ, ವೈಶ್ಯರಿಗೆ ವಾಣಿಜ್ಯದ ಅನ್ನ ; ಶೂದ್ರರಿಗೆ ಶುಶ್ರೂಷೆಯ ಅನ್ನ - ಹೀಗೆ ಬೇರೆ ಬೇರೆ ಬಗೆಯ ಅನ್ನವನ್ನು ಭಗವಂತ ನೀಡುವನು. ಆದುದರಿಂದಲೇ ದಾಸರು 'ಆಗಲೂ ಕಾಯಬೇಕು ಈಗಲೂ ಕಾಯಬೇಕು ನಾಗಶಯನ.......' - ಎಂದು ದೇವರಲ್ಲಿ ಪ್ರಾರ್ಥಿಸಿರುವರು. ಆಗಲೂ ಅಂದರೆ ಕೈಕಾಲು ಗಟ್ಟಿ ಇರುವಾಗಲೂ ಅಂತಹ ಕೈಕಾಲುಗಳನ್ನು ಬಳಸಿ ದುರ್ಮಾರ್ಗದತ್ತ ಸಂಚರಿಸಿದಂತೆ ಕಾಯಬೇಕು. ಈಗಲೂ ಅಂದರೆ ಕೈಕಾಲುಗಳಲ್ಲಿ ಸಾಮರ್ಥ್ಯ ಕಡಿಮೆ ಆದಾಗಲೂ ಸಂಚಾರಕ್ಕೆ ಬೇಕಾದ ಸಾಮರ್ಥ್ಯಕೊಟ್ಟು ರಕ್ಷಿಸಬೇಕು - ಎಂಬುದಾಗಿ ಎರಡೂ ಬಗೆಯ ಅನ್ನವೂ ಭಗವಂತನಿಂದಲೇ ನೀಡಲ್ಪಡುವುದರಿಂದಾಗಿ ಅವನಿಂದಲೇ ಎರಡು ಪರಿಸ್ಥಿತಿಗಳಲ್ಲೂ ರಕ್ಷಣೆ ದೊರಕಬೇಕು.

**೮೦೫. ಶೃಂಗೀ – ಉತ್ಕರ್ಷವುಳ್ಳವನು.**

**ವಿವರಣೆ :** ಶೃಂಗ ಎಂದರೆ ಕೋಡು. ಕೋಡು ಉತ್ಕರ್ಷಕ್ಕೆ, ಮಹತ್ತ್ವಕ್ಕೆ

ಸಂಕೇತವಾಗಿರುವುದರಿಂದ ಶೃಂಗಶಬ್ದ ಉತ್ಕರ್ಷವನ್ನು ತಿಳಿಸುವುದು. ಆದುದರಿಂದ ಶೃಂಗೀ ಅಂದರೆ ಉತ್ಕರ್ಷವುಳ್ಳವನೆಂಬ ಅರ್ಥ.

ಪ್ರಾಣಿಗಳಲ್ಲಿ ಶೃಂಗಕ್ಕೆ ಉಳಿದೆಲ್ಲ ಅಂಗಗಳಿಗಿಂತ ಎರಡು ವೈಶಿಷ್ಟ್ಯಗಳು. ಒಂದು, ಶೃಂಗ ಇತರರನ್ನು ಹಾಯುವುದಕ್ಕೆ ಉಪಯುಕ್ತ. ಮತ್ತೊಂದು ಶೃಂಗದ ಹುಟ್ಟುವಿನಲ್ಲೇ ಇರುವ ವೈಶಿಷ್ಟ್ಯ - ಶೃಂಗ ಶರೀರದ ತಲೆಯ ಪಕ್ಕದ ಭಾಗವನ್ನು ಸೀಳಿಕೊಂಡು ಬರುವಂತಹದ್ದು. ತುಂಬ ಜನ ಸಂದಣಿ ಇದ್ದಾಗ - ಅದರಲ್ಲಿ ಸೀಳಿಕೊಂಡು ಬರುವ ರಾಷ್ಟ್ರಪತಿಯೋ, ಮುಖ್ಯಮಂತ್ರಿಯೋ ಇವರು ಶ್ರೇಷ್ಠವೆನಿಸುವರು. ಯಾರಿಂದಲಾದರೂ ದೊಡ್ಡ ಸಾಧನೆ ನಡೆಸಲ್ಪಟ್ಟರೆ ಅವನಿಗೆ ಕೋಡು ಬಂತು ಎಂದು ನಾವು ಹೇಳುವುದುಂಟು. ಹೀಗೆ ಶೃಂಗ - ಕೋಡು ಉತ್ಕರ್ಷಕ್ಕೆ, ಮಹತ್ತ್ವಕ್ಕೆ ದ್ಯೋತಕವಾಗಿದ್ದು ಅಂತಹ ಉತ್ಕರ್ಷ ಇರುವುದರಿಂದ ಭಗವಂತನು 'ಶೃಂಗೀ' ಎನಿಸುವನು.

**೮೦೬. ಜಯಂತಃ – ಜವನ ಬಾಧೆಯನ್ನು, ಜರಾವನ್ನು ಹಾಗೂ ಜನನವನ್ನು ನಿಯಂತ್ರಿಸುವವನು.**

ವಿವರಣೆ : ಜ+ಯಂತಃ ಎಂದು ವಿಭಾಗ ಮಾಡಿ ಉಂಟಾದ ನಾಮ 'ಜಯಂತಃ' ಎಂಬುದು.

ಜ ಎಂದರೆ ಜವ.

ಜ ಎಂದರೆ ಜರಾ

ಜ ಎಂದರೆ ಜನನ

ಹೀಗೆ ಜ ಎನಿಸುವ ಜವ, ಜರಾ ಹಾಗೂ ಜನನಗಳನ್ನು ನಿಯಂತ್ರಿಸುವವನಾದುದರಿಂದ ಭಗವಂತ 'ಜಯಂತಃ' ಎನಿಸುವನು.

ವ್ಯಾಕರಣದ ಪ್ರಕಾರ 'ಯಂತಾ' ಎಂದು ಶಬ್ದ ಆಗಬೇಕು. ಆದರೆ ನಮಗೆ ಶಬ್ದಕ್ಕಿಂತ ಅರ್ಥದಲ್ಲಿ ಹೆಚ್ಚು ತಾತ್ಪರ್ಯವಾದುದರಿಂದ 'ಜಯಂತಃ' ನಾಮವನ್ನು ಜ ಮತ್ತು ಯಂತಾ ಶಬ್ದಗಳು ಸೇರಿ ರೂಪುಗೊಂಡದ್ದೆಂದು ಇಟ್ಟುಕೊಳ್ಳೋಣ. ಅಥವಾ ಯಂತಾ ಶಬ್ದದ ಸಂಬೋಧನೆ ಎಂದಿಟ್ಟುಕೊಂಡಾಗ 'ಜಯಂತಃ' - ಎಂಬ ರೂಪ ಆಗಬಹುದು. ಉಳಿದ ನಾಮಗಳೆಲ್ಲ ಪ್ರಥಮಾ ವಿಭಕ್ತಿಯಲ್ಲಿ ಇರುವವಾದರೂ ಈ ನಾಮ ಸಂಬೋಧನೆಯ ರೂಪದಲ್ಲಿದೆ. ಭೀಷ್ಮರು ಎದುರಿಗಿರುವ ಕೃಷ್ಣನನ್ನು 'ಹೇ ಜಯಂತಃ - ನನ್ನ ಜರಾವನ್ನು, ವೃದ್ಧಾಪ್ಯವನ್ನು ನಿಯಂತ್ರಿಸಿರುವವನೇ' - ಎಂದು ಸಂಬೋಧಿಸುವರೆಂದು ಇಟ್ಟುಕೊಳ್ಳಬಹುದು.

ಜವ ಎಂದರೆ ಯಮ. 'ಜೀವಕೆ ಜವನ ಬಾಧೆಯ ಬಿಡಿಸಲು ನಾರಾಯಣನ ನೆನೆ......' - ಎಂದು ಶ್ರೀ ವಾದಿರಾಜ ಸ್ವಾಮಿಗಳು ಯಮನನ್ನು 'ಜವ' ನಾಮದಿಂದ ಉಲ್ಲೇಖಿಸಿರುವರು. ಯಮ ಅಕಾಲದಲ್ಲಿ ನಮ್ಮ ಮೇಲೆ ಆಕ್ರಮಣ ಮಾಡದಂತೆ ನಿಯಂತ್ರಿಸುವವನು ಭಗವಂತ.ಹಾಗೆಯೇ ಅಕಾಲದಲ್ಲಿ ವೃದ್ಧಾಪ್ಯ ಬರದಂತೆ ನಿಯಂತ್ರಿಸುವವನೂ ಭಗವಂತ. ಭೀಷ್ಮರು ಎಂಟು ನೂರು ವರ್ಷದ ವೃದ್ಧರಾಗಿದ್ದರೂ 'ವೃದ್ಧೋಽಪಿ ತರುಣಾಯತೇ' ಎಂದು ಶ್ರೀಮಧ್ವರು ನಿರೂಪಿಸಿರುವಂತೆ ಯುವಕರಂತೆ ಕಾದಾಡುತ್ತಿದ್ದರು. ವೃದ್ಧಾಪ್ಯವನ್ನು ಕಡೆಗಣಿಸಿ ಹಾಗೆ ಯುದ್ಧ ನಡೆಸುವಂತೆ ಪ್ರೇರಿಸಿದವನು 'ಜಯಂತ' ಎನಿಸುವ ಭಗವಂತ.

ನಾವು ಕೂಡಾ ದೇಹಕ್ಕೆ ವೃದ್ಧಾಪ್ಯ ಬಂದರೂ ಹುಮ್ಮನಸ್ಸಿನಿಂದ ಕರ್ತವ್ಯವನ್ನು ನಿರ್ವಹಿಸಲು ಜಯಂತ ನಮ್ಮ ಜರಾವನ್ನು ನಿಯಂತ್ರಿಸುವನು.

ಇದೇ ರೀತಿಯಾಗಿ ಜವ - ಯಮ ಅಕಾಲದಲ್ಲೆಲ್ಲ ಬಂದು ಆಕ್ರಮಣ ಮಾಡದಂತೆ 'ಯಮ ಯಮ'ನಾದ 'ಜಯಂತ' ಅನುಗ್ರಹಿಸಬೇಕು.

ಅಂತೇಯೇ ಎಲ್ಲೆಲ್ಲೋ ಜನ್ಮ ಪಡೆಯದೆ ಒಳ್ಳೆಯ ಕುಟುಂಬದಲ್ಲಿ ಒಳ್ಳೆಯ ತಂದೆ ತಾಯಿಯಂದಿರಲ್ಲಿ ಜನ್ಮ ತಾಳುವಂತೆ ನಿಯಂತ್ರಿಸುವವನು ಭಗವಂತ.

ಈ ರೀತಿಯಾಗಿ ಭಗವಂತನನ್ನು ಜರಾವನ್ನು ತಪ್ಪಿಸಲು, ಜವನ ಬಾಧವನ್ನು ಕುಗ್ಗಿಸಲು, ಜನನವನ್ನು ನಿಯಂತ್ರಿಸಲು ಜಯಂತ ಎಂದು ಉಪಾಸನೆ ಮಾಡಬೇಕು.

ಪುರಂದರದಾಸರು 'ಯಂತಾ' ಪುರಂದರ ವಿಠಲನ ಅಂತ್ಯಕಾಲದಲ್ಲಿ ನೆನೆಯಿರೆ.... ಎಂದು ದೇವರನ್ನು ಯಂತಾ ಎಂದು ಕರೆದಿರುವರು.. ಅದರ ಅರ್ಥ ತಿಳಿಯದೆ ಕೆಲವರು ಯಂತೋ ಎಂದು ಬದಲಾಯಿಸಿಕೊಂಡದ್ದಿದೆ.

**೮೦೭. ಸರ್ವವಿಜ್ಜಯೀ – ಎಲ್ಲವನ್ನೂ ತಿಳಿದು ಜಯಪರಾಜಯಗಳನ್ನು ಕೊಡುವವನು.**

**ವಿವರಣೆ :** ಸರ್ವವಿಜ್ಜಯೀ ಎಂಬ ನಾಮವನ್ನು ಕೆಲವರು ಎರಡು ನಾಮಗಳನ್ನಾಗಿ ಪರಿಗಣಿಸುವುದುಂಟು. ಆದರೆ ನಾವು ಒಂದು ವೇದ ಋಕ್ಕಿಗೆ ಅನುಗುಣವಾಗಿ ಒಂದೇ ನಾಮವನ್ನಾಗಿ ಇಟ್ಟುಕೊಳ್ಳೋಣ.

ಎಲ್ಲವನ್ನೂ ತಿಳಿದಿದ್ದು, ಜಯವನ್ನು ನೀಡುವವನೇ 'ಸರ್ವವಿಜ್ಜಯೀ.' ಯಾರಿಗೆ ಯಾವಾಗ ಜಯ ಕೊಡಬೇಕೆಂಬುದನ್ನು ದೇವರು ಚೆನ್ನಾಗಿ ತಿಳಿದಿರುವನು.

ಮಹಾಭಾರತ ಯುದ್ಧದಲ್ಲಿ ಪಾಂಡವರಿಗೆ ಹದಿನೆಂಟು ದಿನಗಳಲ್ಲೂ ಜಯ

ದೊರಕಲಿಲ್ಲ. ಎರಡು ದಿನಗಳಲ್ಲಿ ಅಪಜಯ ಆಗಿದೆ. ಯಾರು ತಮ್ಮ ಸೇನೆಯನ್ನು ಮೊದಲು ರಣಾಂಗಣದಿಂದ ಹಿಂದಕ್ಕೆ ತೆಗೆದುಕೊಳ್ಳುವರೋ ಅವರು ಸೋತರು ಎಂದು ಅರ್ಥ. ಮಹಾಭಾರತದ ಮೊದಲ ದಿನದಂದು ಯುಧಿಷ್ಠಿರ 'ಸಾಕಪ್ಪ ಯುದ್ಧ!' ಎಂದು ತನ್ನ ಸೇನೆಯನ್ನು ಮೊದಲು ಹಿಂದೆ ತೆಗೆದುಕೊಂಡಿದ್ದ. ಹೀಗೆ ಪಾಂಡವರ ಪಾಲಿಗೆ ಮೊದಲ ದಿನದಂದು ಪರಾಜಯ ಕೊಟ್ಟಿದ್ದು ಕೊನೆಯ ಹದಿನೆಂಟನೆಯ ದಿನದಂದು ಪಾಂಡವರಿಗೆ ಜಯ ದೊರಕಿಸಬೇಕೆಂದು. ಆದ್ದರಿಂದ ದೇವರಿಗೆ ಎಲ್ಲ ಗೊತ್ತು - 'ಸರ್ವವಿತ್'. ಯಾರ್‍ಯಾರಿಗೆ ಯಾವಾಗ ಯಾವಾಗ ಜಯ ಕೊಡಬೇಕೆಂದು.ಮೊದಲ ದಿನದಂದು ಪರಾಜಯಕ್ಕೆ ಒಳಗಾದರೂ ಯುಧಿಷ್ಠಿರ ಮರುದಿನ ಪುನಃ ಯುದ್ಧಕ್ಕೆ ಸಿದ್ಧನಾದ. ಯಾಕೆಂದರೆ ಮೊದಲ ದಿನ ಕೃಷ್ಣ ಕೊಟ್ಟ ಪರಾಜಯ. ಅವನು ತಿಳಿದು ಕೊಟ್ಟ ಪರಾಜಯ ಆದುದರಿಂದ, ಮುಂದೆ ಅದು ಜಯಕ್ಕೆ ಪ್ರಯೋಜಕ ಎಂದು ಭಾವಿಸಿ ಯುಧಿಷ್ಠಿರ ಮರುದಿನ ಸಿದ್ಧನಾಗಿದ್ದ.

ಪಾಂಡವರು ಸೋತ ಮತ್ತೊಂದು ದಿನ ಭೀಷ್ಮ ಉರುಳಿದ ಮೊದಲ ದಿನದಂದು. ದೀಪ ಆರುವ ಮುಂಚೆ ತುಂಬ ಬೆಳಗುವಂತೆ ಅಂದು ದುರ್ಯೋಧನನಿಂದ ಆಕ್ಷಿಪ್ತರಾಗಿದ್ದ ಭೀಷ್ಮರು ಭಾರೀ ಕಾದಾಡಿದ್ದರು. ಇದರಿಂದಾಗಿ ಪಾಂಡವರು ಅಂದು ಸೋಲಬೇಕಾಯಿತು. ಆದುದರಿಂದಲೇ ಅಂದು ರಾತ್ರಿ ಭೀಷ್ಮರಲ್ಲಿಗೆ ಹೋಗಿ 'ಅಜ್ಜ ನೀವು ಹೇಗೆ ಸಾಯುವುದು' ?' ಎಂದು ವಿಚಾರಿಸಿದರು. ಪ್ರಾಯಶಃ ಮಹಾಭಾರತದ ಆ ಘಟನೆಯ ಅನಂತರವೇ ಲೋಕದಲ್ಲಿ ರೂಢಿ ಬಂದಿದ್ದಿರಬಹುದು ಮೊಮ್ಮಕ್ಕಳು ಅಜ್ಜನಲ್ಲಿ ಹೋಗಿ 'ಅಜ್ಜ ಯಾವಾಗ ಸಾಯುವಿ'? ಎಂದು ವಿಚಾರಿಸುವ ಪದ್ಧತಿ. ಪಾಂಡವರು 'ಹೇಗೆ ಸಾಯುವಿ' ಎಂದು ವಿಚಾರಿಸಿದ್ದರೆ, ಈಗಿನ ಮೊಮ್ಮಕ್ಕಳು 'ಯಾವಾಗ ಸಾಯುವಿ' ಎಂದು ವಿಚಾರಿಸುವರು. ತಮ್ಮ ತಂದೆ ತಾಯಿಯಂದಿರ ಪ್ರೇಣೆಗೆ ಒಳಗಾಗಿಯೇ ಹಾಗೆ ವಿಚಾರಿಸುವರು.

ಹೀಗೆ ಪಾಂಡವರು ಎರಡು ಬಾರಿ ಪರಾಜಯ ಹೊಂದಿದ್ದರೂ ಆ ಬಗ್ಗೆ ಕಂಗೆಟ್ಟಿಲ್ಲ. ಯಾಕೆಂದರೆ ಅದು ಕೃಷ್ಣ ತಿಳಿದು ಕೊಟ್ಟ ಪರಾಜಯ. ಒಂದು ವೇಳೆ ತಿಳಿಯದೆ ಕೊಟ್ಟ ಪರಾಜಯ ಆಗಿದ್ದರೆ ಮುಂದೆ ಜಯ ದೊರಕುವುದೋ ಇಲ್ಲವೋ ಎಂಬ ಸಂದೇಹಕ್ಕೆ ಅವಕಾಶವಿದೆ. ಆದರೆ 'ಸರ್ವವಿಜ್ಞಯೀ' - ಎನಿಸಿರುವ ಕೃಷ್ಣ ತಿಳಿದು ಕೊಟ್ಟ ಪರಾಜಯ ಅದಾಗಿದ್ದುದರಿಂದ ಅದರಿಂದ ಮುಂದೆ ಒಳಿತಾಗದೆ ಇರುವುದಿಲ್ಲ ಎಂಬ ವಿಶ್ವಾಸ ಅವರಿಗಿತ್ತು.

ನಮ್ಮ ಜೀವನದಲ್ಲೂ ಯಾವುದೇ ಕ್ಷೇತ್ರದಲ್ಲಿ ಅಪಜಯ ಒದಗಿ ಬಂದಾಗ, ಆ ಬಗ್ಗೆ ನಿರಾಶರಾಗದೆ 'ಸರ್ವವಿಜ್ಞಯೀ' ಎನಿಸುವ ಪರಮಾತ್ಮನ ಪಾತ್ರವನ್ನು ವಿವೇಚಿಸಿಕೊಂಡು ಅಂತಹ ಪರಮಾತ್ಮ ಮುಂದೆ ಜಯ ಕೊಡದಿರಲಾರ ಎಂಬ ವಿಶ್ವಾಸ ತಾಳಿ ಮುಂದುವರಿಯಬೇಕು.

**ಸುವರ್ಣಬಿಂದುರಕ್ಷೋಭ್ಯಃ ಸರ್ವವಾಗೀಶ್ವರೇಶ್ವರಃ |**
**ಮಹಾಹ್ರದೋ ಮಹಾಗರ್ತೋ ಮಹಾಭೂತೋ ಮಹಾನಿಧಿಃ ||೮೬||**

**೮೦೮. ಸುವರ್ಣಬಿಂದುಃ – ಅನಂತ ವೇದ ರಾಶಿಯೂ ಯಾರ ಬಗ್ಗೆ ಬಿಂದುವಿನಂತೆ, ಹನಿಯಂತೆ ಇರುವುದೋ ಅಂತಹವನು.**

**ವಿವರಣೆ :** ಸುವರ್ಣ ಎಂದರೆ ಒಳ್ಳೆಯ ಅಕ್ಷರಗಳುಳ್ಳ ವೇದಗಳು. ವೇದದ ವರ್ಣಗಳು ಯಾಕೆ ಒಳ್ಳೆಯವು ? ಎಂದೆಂದೂ ಬದಲಾಗದವುಗಳಾಗಿರುವುದರಿಂದ ಅವು ಸುವರ್ಣಗಳು. ಚತುರ್ಮುಖನ ಮನೆ ಮುಳುಗಿ ಹೋದರೂ ವೇದಗಳು ಬದಲಾಗುವುದಿಲ್ಲ. ಮಹಾಭಾರತ, ಪುರಾಣ - ಇತ್ಯಾದಿಗಳು ಬದಲಾಗುವವು. ವೇದದ ಮಾತುಗಳು ಮಾತ್ರ ಹಾಗೆಯೇ ಇರುವವು. **'ಅಗ್ನಿಮೀಳೇ ಪುರೋಹಿತಂ....'**- ಎನ್ನುವ ಮಾತು ಎಂದೂ **'ವಹ್ನಿಮೀಳೇ ಪುರೋಹಿತಂ.....'** ಎಂದು ಬದಲಾಗದು. ಹೀಗೆ ಸುವರ್ಣಗಳಾದ ವೇದಗಳು, ಅನಂತಗಳೆನಿಸಿದ್ದರೂ ದೇವರ ಮುಂದೆ ಬಿಂದು ಮಾತ್ರ, ಹನಿಮಾತ್ರ.

**'ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ....'** ಎಂದಿರುವಂತೆ ವೇದಗಳೆಲ್ಲ ದೇವರನ್ನು ಹೊಗಳಿದವು, ಹೊಗಳಿದವು. ಅಷ್ಟೆಲ್ಲ ಹೊಗಳಿದರೂ ನಿರ್ವಿಕಾರನಾಗಿ ಕುಳಿತ ದೇವರನ್ನು ಕಂಡು ವೇದಾಭಿಮಾನಿಗಳೆಲ್ಲ 'ಬರ್ತೇವೆ'- ಎಂದು ಹೊರಡಲು ತೊಡಗಿದರು. ಯಾಕೆಂದರೆ ಎಷ್ಟೆಷ್ಟು ಹೊಗಳಿದರೂ ಅವನ ಹನಿಮಾತ್ರ ಹೊಗಳಿದಂತಾಗುವುದೇ ಹೊರತು ಅದಕ್ಕಿಂತ ಹೆಚ್ಚು ಹೊಗಳಲು ಸಾಧ್ಯವೇ ಇಲ್ಲ. ಅವನ ಅನಂತವ್ಯಕ್ತಿತ್ವದ ಹನಿಯೂ ಹೊಗಳಲ್ಪಡಲಾರದು, ಆದರೂ ಅದಕ್ಕಿಂತ ಚಿಕ್ಕ ಪರಿಮಾಣ ಹೇಳಲಾಗುವುದಿಲ್ಲ ಎನ್ನುವುದಕ್ಕಾಗಿಯಷ್ಟೇ ಹನಿ - ಬಿಂದು ಎಂದು ಉಲ್ಲೇಖಿಸಲಾಗಿದೆ.

ಆದರೆ ನಾವು ಎಷ್ಟೇ ಹೊಗಳಿದರೂ ಅದಕ್ಕೆ ಸ್ಪಂದಿಸುವ, ಹಿಗ್ಗುವ ಔದರ್ಯ ಅವನದ್ದು. ಅವನನ್ನು ಸ್ತುತಿಸುವ ನಮಗೆ ಎಚ್ಚರ ಇರಬೇಕು - ನಮ್ಮ ಸ್ತುತಿ, ಅವನ ಅನಂತ ವ್ಯಕ್ತಿತ್ವದ ಎದುರು ಬಿಂದು ಮಾತ್ರ ಎಂದು.

**೮೦೯. ಅಕ್ಷೋಭ್ಯಃ – ಯಾವುದೇ ಬಗೆಯ ಕ್ಷೋಭೆಗೆ ಒಳಗಾಗದವನು.**

**ವಿವರಣೆ :** ಕೃಷ್ಣನು ಯುದ್ಧ ಇಲ್ಲ ಎನ್ನುವಾಗ ಹೇಗೋ ಹಾಗೆಯೇ ಯುದ್ಧ ಪ್ರಾರಂಭವಾಯಿತು ಎಂದಾಗಲೂ ನಿರ್ವಿಕಾರನಾಗಿಯೇ ಇದ್ದ. 'ನಿನ್ನ ವಂಶವೆಲ್ಲ ಪರಸ್ಪರ ಹೊಡೆದಾಡಿಕೊಂಡು ನಾಶವಾಗಲಿ' - ಎಂದು ಗಾಧಾರಿ ಶಾಪಕೊಟ್ಟರೆ ನಗುತ್ತ ಅದನ್ನು ಸ್ವೀಕರಿಸಿದನೇ ಹೊರತು ಸ್ವಲ್ಪವೂ ವಿಕಾರಕ್ಕೆ ಒಳಗಾಗಲಿಲ್ಲ. ವಿಕಾರಕ್ಕೆ ಒಳಗಾಗಿದ್ದರೆ ಗಾಂಧಾರಿಯೇ. ಯಾಕೆಂದರೆ, ಇಷ್ಟು ಶಾಪಕೊಟ್ಟರೂ ಕೃಷ್ಣ ನಗುತ್ತನೇ ಇರುವ ತಾನೇ?- ಎಂದು.

ಹೀಗೆ ಭಗವಂತನು ಸುಖದ ಅಥವಾ ದುಃಖದ ಯಾವುದೇ ಸ್ಥಿತಿಯಲ್ಲಿ ಮಾನಸಿಕ ಸ್ತಿಮಿತತ್ವವನ್ನು ಕಳೆದುಕೊಳ್ಳದವನು. 'ಸುಖದುಃಖೇ ಸಮೇ ಕೃತ್ವಾ ಲಾಭಾಲಾಭೌ ಜಯಾಜಯೌ.....' ಎಂದು ಉಪದೇಶಿಸಿದಂತೆ ಅಕ್ಷರಶಃ ನಡೆದುಕೊಳ್ಳುವವನು. ವಿಷ್ಣುಸಹಸ್ರನಾಮದಲ್ಲಿ ಬೇರೆ ಯಾವ ನಾಮದ ಉಪಾಸನೆಯನ್ನು ಬಿಟ್ಟರೂ ಈ ನಾಮದ ಮೂಲಕ ಉಪಾಸನೆಯನ್ನಂತೂ ಮಾಡಲೇ ಬೇಕು. ಸುಖ, ಜಯ, ಮಾನ ಇತ್ಯಾದಿಗಳ ಪ್ರಸಂಗಗಳಲ್ಲಿ ಭಾರೀ ಹಿಗ್ಗುವುದೂ, ದುಃಖ, ಅಪಜಯ, ಅಪಮಾನ ಇತ್ಯಾದಿಗಳ ಪ್ರಸಂಗಗಳಲ್ಲಿ ಭಾರೀ ಕುಗ್ಗುವುದೂ ಇಲ್ಲದೆ, ಆದಷ್ಟು ಸಮಚಿತ್ತರಾಗಿ ನಡೆದುಕೊಳ್ಳಬಹುದಾಗಿದೆ.

**೮೧೦. ಸರ್ವವಾಗೀಶ್ವರೇಶ್ವರಃ – ಸರ್ವಜ್ಞಳಾದ ಸರಸ್ವತಿಗೆ ಒಡೆಯನಾದ ಚತುರ್ಮುಖನಿಗೂ ಒಡೆಯನಾಗಿರುವವನು.**

**ವಿವರಣೆ :** ಸರ್ವ + ವಾಕ್ + ಈಶ್ವರ + ಈಶ್ವರ - ಎಂಬ ನಾಲ್ಕು ಶಬ್ದಗಳು ಸೇರಿ ಸರ್ವವಾಗೀಶ್ವರೇಶ್ವರಃ ಎಂದು ರೂಪುಗೊಂಡಿದೆ. ಸರತೀತಿ ಸರ್ವಾ - 'ಸೃ ಗತೌ' ಕ್ರಿಯಾಪದದಿಂದ ನಿಷ್ಪನ್ನವಾದ ಸರ್ವಾಶಬ್ದಕ್ಕೆ ಸರ್ವಜ್ಞಳು, ಎಲ್ಲವನ್ನೂ ಬಲ್ಲವಳು ಎಂದರ್ಥ. ವಾಕ್ ಎಂದರೆ ವಾಙ್ಮಯಕ್ಕೆ ಅಭಿಮಾನಿನಿಯಾದ ಸರಸ್ವತಿ. ಸರಸ್ವತಿ ಸರ್ವಜ್ಞಳು. ಅಂತಹವಳಿಗೂ ಈಶ್ವರನಾದವನು, ಒಡೆಯನಾದವನು ಚತುರ್ಮುಖ. ಅವನಿಗೂ ಒಡೆಯ ಪರಮಾತ್ಮ ಸರ್ವವಾಗೀಶ್ವರೇಶ್ವರ.

ಸರಸ್ವತಿ ಸರ್ವಜ್ಞಳು, ಎಲ್ಲವನ್ನೂ ಬಲ್ಲವಳು. ಈ ವಸ್ತುವನ್ನು ಪುಸ್ತಕ ಎಂದು ತಿಳಿದಿರುವಳು. ಚತುರ್ಮುಖ ಅವಳಿಗೂ ಈಶ್ವರ ಎನಿಸಿ, ಅವಳಿಗಿಂತಲೂ ಅಧಿಕ ಬಲ್ಲವನು. ಅವನು ಈ ಪುಸ್ತಕವನ್ನು ಪುಸ್ತಕ ಎಂದಷ್ಟೇ ಅಲ್ಲದೆ, 'ಸಂಸ್ಕೃತ ಪುಸ್ತಕ'- ಎಂದು ತಿಳಿದಿರುವನು. ದೇವರು ಪುಸ್ತಕ, ಸಂಸ್ಕೃತ ಪುಸ್ತಕ ಎಂದಷ್ಟೇ ಅಲ್ಲದೆ 'ಮಹಾಭಾರತ ತಾತ್ಪರ್ಯ ನಿರ್ಣಯ' - ಎಂದು ತಿಳಿದಿರುವನು. ಅದಕ್ಕಿಂತ

ಹೆಚ್ಚಾಗಿ ತಿಳಿಯಲಿಕ್ಕೆ ಇಲ್ಲವೇ ಇಲ್ಲ.ಆದುದರಿಂದ ಅವನನ್ನು ಭಾಗವತದಲ್ಲಿ 'ಅಭಿಜ್ಞ'- ಎಂದು ಕರೆದದ್ದುಂಟು. 'ಸರ್ವಜ್ಞ' - ಎಂದರೆ ಸರ್ವವನ್ನೂ ತಿಳಿದಿರುವವನೆಂಬ ಅರ್ಥವಷ್ಟೇ ಹೊರಡುವುದು. ಅಭಿಜ್ಞ ಎಂದರೆ ಅಭಿತಃ ಜಾನಾತಿ ಸರ್ವತೋಮುಖವಾಗಿ ತಿಳಿದಿರುವವನು ಎಂಬ ಅರ್ಥ. ಆದುದರಿಂದಲೇ ಅವನು ಸರ್ವವಾಗೀಶ್ವರೇಶ್ವರ.

**೮೧೧. ಮಹಾಹ್ರದಃ – ಭಾರೀ ಹರ್ಷವನ್ನು ಹೊಂದಿರುವವನು.**

ವಿವರಣೆ : ಹ್ರದಶಬ್ದ 'ಹ್ರದೀ ಹರ್ಷೇ' ಕ್ರಿಯಾಪದದಿಂದ ನಿಷ್ಪನ್ನವಾದುದು ಆದುದರಿಂದಲೇ ಹರ್ಷ ಎಂಬ ಅರ್ಥವನ್ನು ನೀಡಬಲ್ಲದು. ಯದ್ಯಪಿ ಸಂಸ್ಕೃತದಲ್ಲಿ 'ಹ್ರದ' ಎಂದರೆ ಸರೋವರ. ಆದರೆ ಸರೋವರಕ್ಕಾದರೂ ಯಾಕೆ ಹ್ರದ ಎಂಬ ಹೆಸರು ಬಂದಿದೆ ? ಅದನ್ನು ನೋಡಿದರೆಯೇ ಹರ್ಷ ಉಂಟಾಗುವುದು. ನೀರಿನಿಂದ ಬತ್ತಿದ ಸರೋವರ ಅಲ್ಲ. ಬದಲಾಗಿ, ನೀರಿನಿಂದ ತುಂಬಿದ ಸರೋವರ. ತರ್ಪಕತ್ವ ಅಂದರೆ ತೃಪ್ತಿಯನ್ನು ಉಂಟುಮಾಡುವಂತಹದ್ದು ನೀರಿನ ಅಸಾಧಾರಣಗುಣ. ಮೂರ್ಛೆ ತಪ್ಪಿದಾಗ ಪುನಃ ಎಚ್ಚರಿಕೆಗಾಗಿ ನೀರು ಸಿಂಪಡಿಸುವುದು, ನೀರು ಕುಡಿಸುವುದು ತಾನೇ ? ನಿದ್ದೆಯಿಂದ ಎದ್ದು, ನಿದ್ದೆಯ ಮಂಪರನ್ನು ಹೋಗಿಸಿ ಉತ್ಸಾಹ ತುಂಬಿಸಿ ಕೊಳ್ಳುವುದಕ್ಕಾಗಿ ನೀರನ್ನೇ ಸಿಂಪಡಿಸಿಕೊಳ್ಳುವೆವು. ಹೀಗೆ ನೀರು ತೃಪ್ತಿ ಜನಕ, ಉತ್ಸಾಹ ಪೂರಕ, ಹರ್ಷದಾಯಕ ಎಂಬುದು ನಮಗೆ ಅನುಭವ ಸಿದ್ಧ ವಿಚಾರ. ಇಂತಹ ನೀರಿನಿಂದ ತುಂಬಿದ್ದು, ಹರ್ಷಜನಕವಾಗಿರುವುದರಿಂದಲೇ ಸರೋವರ ಹ್ರದ ಎನಿಸಿದೆ. ಆದುದರಿಂದ ಹ್ರದಶಬ್ದ ಮೂಲತಃ ಹರ್ಷವನ್ನು ತಿಳಿಸುವುದು. ಭಾರೀ ಹರ್ಷಕ್ಕೆ ಒಳಗಾಗಿರುವುದರಿಂದ ದೇವರು 'ಮಹಾಹ್ರದ' ಎನಿಸಿರುವನು.

ದೇವರು ಒಂದು ಕ್ಷಣವೂ ಕೂತುಕೊಳ್ಳದೆ ಭಾರೀ ಭಾರೀ ಕಾರುಭಾರು ನಡೆಸುತ್ತಿರುವುದೇ ಅವನು ಎಷ್ಟೊಂದು - ಮಹಾಹ್ರದ ಅತಿಶಯಹರ್ಷಸಂಪನ್ನ- ಎಂಬುದಕ್ಕೆ ಜ್ಞಾಪಕವಾಗಬಲ್ಲದು. ಸ್ವತಃ ಪರಿಪೂರ್ಣನಾಗಿದ್ದು ತೆಪ್ಪಗೆ ಕುಳಿತಿರಬಹುದಾದರೂ ಜಗತ್‌ಸೃಷ್ಟಿಯೇ ಮುಂತಾದ ದೊಡ್ಡ ದೊಡ್ಡ ಚಟುವಟಿಕೆಗಳಲ್ಲಿ ಅವನು ತೊಡಗಿರುವುದಕ್ಕೆ ಅವನ ಹರ್ಷಾತಿಶಯವೇ ಕಾರಣ.

ಕೆಲವೊಮ್ಮೆ ದುಃಖಾತಿಶಯದಿಂದ ಚಟುವಟಿಕೆಗಳು ಹೊರಡುವವು, ಮತ್ತೆ ಕೆಲವೊಮ್ಮೆ ಸುಖಾತಿಶಯದಿಂದ. ಚುನಾವಣೆಯಲ್ಲಿ ಸೋತ ವ್ಯಕ್ತಿ ಹೇಗೆ ನಡೆದುಕೊಳ್ಳುವನೆಂದು ಪರಿಶೀಲಿಸಿದರೆ ಸ್ಪಷ್ಟವಾಗುವುದು ದುಃಖಾತಿಶಯದ

ಚಟುವಟಿಕೆಗಳು ಹೇಗಿರುವವೆಂದು. ದೇವರಲ್ಲಂತೂ ದುಃಖಾತಿಶಯದಿಂದ ಚಟುವಟಿಕೆ ಉಂಟಾಗಲು ಸಾಧ್ಯವಿಲ್ಲ. ಯಾಕೆಂದರೆ ಅವನಿಗೆ ದುಃಖದ ಸ್ಪರ್ಶವೇ ಇಲ್ಲ. ಸ್ವತಂತ್ರನಾಗಿದ್ದು ಉಳಿದವರ ದುಃಖವನ್ನು ವ್ಯವಸ್ಥೆಗೊಳಿಸುವ ಅವನಲ್ಲಿ ದುಃಖದ ಸ್ಪರ್ಶವಾದರೂ ಹೇಗೆ ? ಆದ್ದರಿಂದ ಅವನ ಪ್ರತಿಯೊಂದು ಚಟುವಟಿಕೆಯೂ ಸುಖಾತಿಶಯದಿಂದ ಉಂಟಾಗುವಂತಹದ್ದೆಂದು ಒಪ್ಪಿಕೊಳ್ಳಲೇ ಬೇಕು. ಆದ್ದರಿಂದ ಜಗತ್ ಸೃಷ್ಟಿಯೇ ಮುಂತಾದ ದೊಡ್ಡ ದೊಡ್ಡ ಚಟುವಟಿಕೆಗಳನ್ನು ನಡೆಸುತ್ತಿರುವ ಅವನು ಎಷ್ಟೊಂದು 'ಮಹಾಹ್ರದ ' ಆಗಿರಬೇಡ.?

ಯಾವ ಘಟನೆ ಸಂಭವಿಸಿದರೂ ಅದಕ್ಕಾಗಿ ಸ್ವಲ್ಪವೂ ದುಃಖ ಪಡುವ ಜಾಯಮಾನ ದೇವರದ್ದಲ್ಲ. ಕೃಷ್ಣ ತನ್ನ ಪ್ರೀತಿಯ ತಂಗಿ ಸುಭದ್ರೆಯ ಮಗ ಅಭಿಮನ್ಯು ಸತ್ತಾಗಲೂ ಭಾರೀ ಖುಷಿಯಿಂದ ಕೂಡಿದ್ದನೇ ಹೊರತು ದುಃಖದ ಲವಲೇಶವೂ ಇದ್ದಿರಲಿಲ್ಲ. ಆದ್ದರಿಂದ ಭೀಷ್ಮರು ಕೃಷ್ಣನನ್ನು 'ಮಹಾಹ್ರದಃ' ಎಂದು ಹೊಗಳುತ್ತಿರುವರು.

**೮೧೨. ಮಹಾಗರ್ತಃ – ಪ್ರತಿಯೊಬ್ಬರ ಹೃದಯದಲ್ಲಿರುವ ಆಕಾಶದಲ್ಲಿ ಮನೆ ಮಾಡಿ ಇರುವವನು.**

ವಿವರಣೆ: ಗರ್ತ ಎಂದರೆ ಹೊಂಡ. ಈ ಶಬ್ದದ ಪ್ರಭಾವ ತುಳುವಿನಲ್ಲೂ ಬಂದಿದೆ 'ನೆಲನ್ ಗರಿಪುನಿ......' ಇತ್ಯಾದಿಯಾಗಿ. ಹೊಂಡ ಕೆಳಮುಖವಾಗಿದ್ದರೆ ಗರ್ತ ಎನಿಸಿದರೆ, ನೇರವಾಗಿದ್ದರೆ ಗುಹಾ ಎನಿಸುವುದು. ಹೃದಯಗುಹೆ ಎಂಬ ವ್ಯವಹಾರವೂ ಇದೆ.

**'ಋತಂ ಪಿಬಂತೌ ಸುಕೃತಸ್ಯ ಲೋಕೇ ಗುಹಾಂ ಪ್ರವಿಷ್ಟೌ.....'**- ಎಂಬುದಾಗಿ ಭಗವಂತನು ಆತ್ಮ ಹಾಗೂ ಅಂತರಾತ್ಮ ರೂಪಗಳಿಂದ ಹೃದಯ ಗುಹೆಯನ್ನು ಪ್ರವೇಶಿಸಿರುವನೆಂದು ಹೇಳಲಾಗಿದೆ. **'ಸ್ತುತಿ ಶ್ರುತಂ ಗರ್ತಸದಂ ಯುವಾನಂ....'**- ಎಂಬುದಾಗಿ ಹೃದಯಾಕಾಶ ಎಂಬ ಗರ್ತದಲ್ಲಿ, ಹೊಂಡದಲ್ಲಿ ಇರುವ ನರಸಿಂಹನನ್ನು ಸ್ತುತಿಸಲು ರುದ್ರನಿಗೆ ತಿಳಿಸಲಾಗಿದೆ.

ಯಾರಿಗೂ ಕಾಣಿಸಿಕೊಳ್ಳದಂತೆ ದೇವರು ಎಲ್ಲರ ಹೃದಯಾಕಾಶದಲ್ಲಿ ಅಡಗಿ ಕುಳಿತಿರುವನು. ಆದುದರಿಂದಲೇ ಮಹಾಗರ್ತಃ ಎನಿಸಿರುವನು.

**೮೧೩. ಮಹಾಭೂತಃ – ಸ್ವತಂತ್ರವಾಗಿ ಇರುವವನು.**

ವಿವರಣೆ : ನಾವು ಭೂತಶಬ್ದವನ್ನು ಹಿಂದಿನ ಕಾಲಕ್ಕೆ ಸಂಬಂಧಿಸಿದ್ದು ಎಂಬ

ಅರ್ಥದಲ್ಲಿ ಬಳಸುವೆವು. ಮತ್ತೆ ಕೆಲವೊಮ್ಮೆ ಒಂದು ವರ್ಗದ ಜೀವರಾಶಿಯನ್ನು ಭೂತಗಳು ಎಂದು ಕರೆಯುವೆವು. ಆದರೆ ದೇವರು ಭೂತ ಎನಿಸುವುದು 'ಭವತೀತಿ ಭೂತಃ' - ಎಂಬ ನಿರ್ವಚನವನ್ನಿಟ್ಟುಕೊಂಡು ಅಸ್ತಿತ್ವ ಉಳ್ಳವನು ಎಂಬ ಅರ್ಥದಲ್ಲಿ. ಇರುವ ಪ್ರತಿಯೊಂದು ವಸ್ತುವಿನಲ್ಲೂ, ನಮ್ಮಲ್ಲೂ ಅಸ್ತಿತ್ವ ಇದ್ದೇ ಇದೆ. ಆದುದರಿಂದಲೇ ನಾವೆಲ್ಲ ಭೂತ ಎನಿಸುವೆವು. ಆದರೆ ಭಗವಂತ 'ಮಹಾಭೂತ'- ಯಾಕೆಂದರೆ ಅವನು ಸ್ವತಂತ್ರವಾದ ಅಸ್ತಿತ್ವ ಉಳ್ಳವನು. ಬೇರೆ ಯಾರಲ್ಲೂ ಸ್ವತಂತ್ರವಾದ ಅಸ್ತಿತ್ವ ಇಲ್ಲದ ಪ್ರಯುಕ್ತ ಅವನೊಬ್ಬನೇ ಮಹಾಭೂತ.

ಈ ಅಭಿಪ್ರಾಯದಲ್ಲಿ ಭಗವಂತನನ್ನು 'ಮಹಾಭೂತ' ನಾಮದಿಂದ ಉಪಾಸನೆ ನಡೆಸಿದೆವೆಂದರೆ ನಮಗೆ ಪೂರ್ಣವಾದ ಸ್ವಾತಂತ್ರ್ಯ ದೊರಕದಾದರೂ ನಮ್ಮ ಮನೆ, ಶಿಷ್ಯವರ್ಗ, ಸಮಾಜ ಇಲ್ಲಾದರೂ ಸ್ವಲ್ಪ ಮಟ್ಟದ ಸ್ವಾತಂತ್ರ್ಯ ಸಿದ್ಧಿಸೀತು. ಅಂದರೆ ನಾವು ಹೇಳಿದಂತೆ ಅವರು ಕೇಳತಕ್ಕ ಪ್ರಸಂಗ ಒದಗಿಬಂದೀತು.

ಪಾಂಡವರ ರಾಜಸೂಯ ಯಾಗದಲ್ಲಿ ಯುಧಿಷ್ಠಿರ ಅಗ್ರಪೂಜೆ ಯಾರಿಗೆ ಸಲ್ಲಬೇಕೆಂದು ಭೀಷ್ಮರಲ್ಲಿ ವಿಚಾರಿಸಲು ಅವರು ಕೃಷ್ಣನಿಗೇ ಅಗ್ರಪೂಜೆ ಸಲ್ಲಬೇಕೆಂದು ಹೇಳಿದ್ದನ್ನು ಆ ಸಭೆಯಲ್ಲಿ ಇರುವವರೆಲ್ಲ ಒಪ್ಪಿಕೊಳ್ಳುವಂತೆ ಆದುದು ಭಗವಂತನನ್ನು 'ಮಹಾಭೂತಃ' - ಎಂದು ಉಪಾಸನೆ ನಡೆಸಿದುದರ ಫಲ.

**೮೧೪. ಮಹಾನಿಧಿಃ – ವ್ಯಕ್ತಿಗಳು ಮಹಾತ್ಮರೆನಿಸುವಂತೆ ಅವರಲ್ಲಿ ವಿಶೇಷವಾಗಿ ಇರುವವನು.**

**ವಿವರಣೆ :** ನಿತರಾಂ ಧೀಯತೇ ಇತಿ 'ನಿಧಿಃ' ಎಂದರೆ ಚೆನ್ನಾಗಿ ಇರುವವನು. ಸಮುದ್ರ 'ಉದಧಿ' ಎನಿಸುವುದು ಯಾವಾಗಲೂ ಅದರಲ್ಲಿ ನೀರು ನೆಲೆಸಿರುವುದೆಂದು.

ಭಗವಂತ ಯಾರಲ್ಲಿ ಚೆನ್ನಾಗಿ ನೆಲೆಸಿರುವನು ? ಮಹಾತ್ಮರಾದ ಬ್ರಹ್ಮಾದಿದೇವತೆಗಳಲ್ಲಿ. ಆದುದರಿಂದ ಅವನು 'ಮಹಾನಿಧಿಃ' ಮಹಾತ್ಮರೆಂದರೆ ಪೂಜ್ಯರಾಗಿರುವವರೆಂದರ್ಥ. 'ಮಹಃ ಪೂಜಾಯಾಂ' - ಎಂಬ ಕ್ರಿಯಾಪದದಿಂದಲೇ ನಿಷ್ಪನ್ನವಾಗುವ ಶಬ್ದ ಅದು. ದೇವರು ಮಹಾತ್ಮರಲ್ಲಿ ಚೆನ್ನಾಗಿ ಇರುವನೆಂದರೆ, ದೇವರು ಚೆನ್ನಾಗಿ ಇರುವುದರಿಂದಲೇ ಅವರು ಮಹಾತ್ಮರೆನಿಸಿರುವರೆಂಬ ತಾತ್ಪರ್ಯ.

ರಥಕ್ಕೆ ಕೈ ಮುಗಿಯುವುದು ಯಾತಕ್ಕಾಗಿ ? ಅದರಲ್ಲಿ ದೇವರು ವಿರಾಜಿಸುತ್ತಿದ್ದಾನೆ ಎಂದು ತಾನೇ ? ದೇವರನ್ನು ರಥದಿಂದ ಇಳಿಸಿ, ಗರ್ಭಗುಡಿಗೆ ಕೊಂಡೊಯ್ಯಲಾಯಿತೆಂದರೆ ಮತ್ತೆ ರಥಕ್ಕೆ ವಂದಿಸುವುದು ಇಲ್ಲ ತಾನೇ ? ನಮಗೆ,

ನಿಮಗೆ ಯಾರಾದರೂ ಗೌರವ ಸಲ್ಲಿಸುವುದಾದರೆ ನಮ್ಮಲ್ಲಿ ದೇವರು ಇರುವರೆಂಬ ದೃಷ್ಟಿಯಿಂದಲೇ. ನಾವು ನಿಮ್ಮೆಲ್ಲರಿಗಿಂತ ಸ್ವಲ್ಪ ಹೆಚ್ಚಾಗಿ ದೇವರ ಒಡನಾಟದಲ್ಲಿ ಇರುವೆವು. ಆದ್ದರಿಂದ ದೇವರು ಹೆಚ್ಚು ಸನ್ನಿಹಿತನಾಗಿರಬಹುದೆಂದು ನಮ್ಮನ್ನು ಸ್ವಲ್ಪ ಹೆಚ್ಚಾಗಿ ಗೌರವಿಸುವಿರಿ.

ಲೌಕಿಕ ವೃತ್ತಿಯಲ್ಲಿದ್ದರೂ ಕಚ್ಚೆ, ಅಕ್ಷತೆ ಅಂಗಾರಕ ಇತ್ಯಾದಿಯಾಗಿ ವೈದಿಕ ವೇಷ ಕೊಟ್ಟಿದ್ದರೆ, ಅಂತಹವರಲ್ಲಿ ದೇವರು ವಿಶೇಷವಾಗಿ ಸನ್ನಿಹಿತನಾಗಿರುವನೆಂದೇ ಅವರಿಗೆ ಹೆಚ್ಚು ಗೌರವ ಸಲ್ಲಿಸಲಾಗುವುದು.

ಹೀಗೆ ಗೌರವಾರ್ಹ ವ್ಯಕ್ತಿಗಳು ಗೌರವಾರ್ಹರಾಗುವಂತೆ, ಪೂಜ್ಯರಾಗುವಂತೆ ಅವರಲ್ಲಿ ವಿಶೇಷವಾಗಿ ಇರುವುದರಿಂದಲೇ ಭಗವಂತನು 'ಮಹಾನಿಧಿಃ'- ಎನಿಸುವನು.

**ಕುಮುದಃ ಕುಂದರಃ ಕುಂದಃ ಪರ್ಜನ್ಯಃ ಪಾವನೋಽನಿಲಃ |**
**ಅಮೃತಾಂಶೋಽಮೃತವಪುಃ ಸರ್ವಜ್ಞಃ ಸರ್ವತೋಮುಖಃ ||೮೭||**

**೮೧೫. ಕುಮುದಃ – ತನ್ನನ್ನು ಸ್ತುತಿಸುವವರಿಗೆ ವಿಷಯ ವಸ್ತುಗಳ ಆನಂದವನ್ನು ನೀಡುವವನು.**

ವಿವರಣೆ : ಸಂಸ್ಕೃತ ಸಾಹಿತ್ಯದಲ್ಲಿ ಕುಮುದ ಶಬ್ದ ಕಮಲ ಎಂಬ ಅರ್ಥವನ್ನು ತಿಳಿಸಿಕೊಡುವುದು. 'ಕು' ನೀರಿನಲ್ಲಿ ಮೋದತೇ ಸಂತೋಷ ಪಡುವುದು - ಎಂಬ ಅಭಿಪ್ರಾಯದಲ್ಲಿ. ಕಮಲ ನೀರಿನಲ್ಲಿ ಇರುವಾಗ ತುಂಬ ಚೆಂದವಾಗಿರುವುದು. ನೀರಿನಿಂದ ಮೇಲಕ್ಕೆ ತೆಗೆದೆವೆಂದರೆ ನಮ್ಮ ಮುಖದಂತೆ ಆಗಿಬಿಡುವುದು. ಆದುದರಿಂದ ಮುಖಕ್ಕೆ ಕಮಲದ ಹೋಲಿಕೆ ಕೊಡುವಾಗ ನೀರಿನಿಂದ ಮೇಲೆ ತೆಗೆದ ಕಮಲವನ್ನಿಟ್ಟುಕೊಳ್ಳುವುದು ಉಚಿತ.

ದೇವರನ್ನು 'ಕುಮುದ' - ಎಂದು ಕರೆದಿರುವುದು - ಕು+ಮು+ದ - ಎಂಬ ಮೂರು ಅಕ್ಷರಗಳ ಜೋಡಣೆಯಿಂದ ನಿಷ್ಪನ್ನವಾದ ನಾಮ ಎಂದಿಟ್ಟುಕೊಂಡು. 'ಕು ಶಬ್ದೇ' - ಎಂಬ ಕ್ರಿಯಾಪದದಿಂದ ರೂಪುಗೊಂಡ 'ಕು' ಶಬ್ದವು ಸ್ತುತಿಸುವವರು ಎಂಬ ಅರ್ಥವನ್ನು ನೀಡುವುದು. 'ಮುತ್ ನಾಮ ವಿಷಯೋತ್ಥಂ ಸುಖಮ್' - ಎಂದಿರುವಂತೆ ವಿಷಯ ವಸ್ತುಗಳ ಭೋಗದಿಂದ ಉಂಟಾಗುವ ಸುಖ 'ಮುತ್' ಎನಿಸುವುದು. ಸಂತೋಷ, ಪ್ರಮೋದ, ಮೋದ, ಆನಂದ ಇತ್ಯಾದಿ ಶಬ್ದಗಳು ಮೇಲ್ನೋಟಕ್ಕೆ ಸಂತೋಷ ಎಂಬ ಅರ್ಥವನ್ನೇ ಹೇಳುವವಾದರೂ ಬೇರೆ ಬೇರೆ

ಬಗೆಯ ಸಂತೋಷವನ್ನು ಬೇರೆ ಬೇರೆ ಶಬ್ದ ತಿಳಿಸುವುದು. ವಿಷಯಪದಾರ್ಥಗಳ ಅನುಭವದಿಂದ ಉಂಟಾಗುವ ಆನಂದ 'ಮುತ್' ಎನಿಸುವುದು. ಕುಮುದ ನಾಮದಲ್ಲಿ 'ಮು' - ಎಂದರೆ ಮುತ್, ವಿಷಯ ಪದಾರ್ಥದ ಅನುಭವದಿಂದ ಉಂಟಾಗುವ ಆನಂದ ಎಂದರ್ಥ. ಅದನ್ನು ಕೊಡುವವನು ಎಂಬುದು ಕುಮುದ ನಾಮದ ದಕಾರವು ತಿಳಿಸುವುದು.

ಎಷ್ಟೋ ಮಂದಿಗಳ ಪಾಲಿಗೆ ವಿಷಯ ಪದಾರ್ಥಗಳು ಸಾಕಷ್ಟು ಇದ್ದರೂ ಅವುಗಳಿಂದ ಆನಂದವನ್ನು ಅನುಭವಿಸುವ ಯೋಗ ಅವರಿಗೆ ಇರುವುದಿಲ್ಲ. ತಿನ್ನಬಾರದು ; ನೋಡಬಾರದು ; ಕೇಳಬಾರದು, ಮೂಸಬಾರದು, ಮುಟ್ಟಬಾರದು - ಎಂದೆಲ್ಲ ವೈದ್ಯರು ಎಚ್ಚರಿಸಿರುವರು !

ವಿಷಯ ಪದಾರ್ಥಗಳು ಇವೆ ಎಂದಾಕ್ಷಣ ಅವನ್ನು ಮಿತಿಮೀರಿ ಸೇವಿಸುವುದಲ್ಲ. ಅಡುಗೆ ಚೆನ್ನಾಗಿದೆ ಎಂದು ಹೊಟ್ಟೆಯಲ್ಲಿ ಹಿಡಿಸುವುದಕ್ಕಿಂತಲೂ ಹೆಚ್ಚು ತಿಂದು ಮತ್ತೆ ಮನೆಗೆ ಹೋಗಿ ಅಡುಗೆಯವನನ್ನೂ, ಯಜಮಾನನನ್ನೂ ಬೈಯಲಿಕ್ಕೆ ಪ್ರಾರಂಭಿಸಿದರೆ ಹೇಗಾದೀತು ? ಯಜಮಾನನಲ್ಲಿ ಅಡುಗೆಯವನು ಯಾಕೆ ಅಷ್ಟೊಂದು ಚೆನ್ನಾಗಿ ಅಡುಗೆ ಮಾಡಿದ ? ಎಂದು ಆಕ್ಷೇಪಿಸಿದರೆ ಯಜಮಾನ ಉತ್ತರಿಸುತ್ತಾನೆ - ಒಳ್ಳೆಯದಾಗಿ ಅಡುಗೆ ಮಾಡುವುದು ಅವನ ಕರ್ತವ್ಯ. ಅದನ್ನು ಅವನು ಚೆನ್ನಾಗಿ ನಿರ್ವಹಿಸಿದ್ದಾನೆ. ಆ ಅಡುಗೆಯನ್ನು ನಿನ್ನ ಹೊಟ್ಟೆಯ ಅವಕಾಶವನ್ನು ಗುರುತಿಸುಕೊಂಡು ಸೇವಿಸುವುದು ನಿನ್ನ ಹೊಣೆಗಾರಿಕೆ ತಾನೇ ? ಈ ನಿನ್ನ ಹೊಣೆಗಾರಿಕೆಯನ್ನು ಅರಿಯದೆ ಅಡುಗೆಯವನನ್ನು ಬೈಯುವುದು ಎಷ್ಟು ಉಚಿತ?

ಪ್ರಹ್ಲಾದ ನರಸಿಂಹನನ್ನು ಕೇಳಿದ - ವಿಷಯ ಪದಾರ್ಥಗಳನ್ನು ಕಾಣಲೇಬಾರದೆಂದಿದ್ದರೆ ಅವುಗಳಲ್ಲಿ ಸೌಂದರ್ಯವನ್ನು ಇಟ್ಟಿರುವುದೇಕೆ ? ಹೆಣ್ಣಿನಲ್ಲಿ ಸೌಂದರ್ಯ ಇಟ್ಟು ಅವಳನ್ನು ನೋಡಬೇಡ ಎನ್ನುವುದೇಕೆ ? ಪುಷ್ಪದಲ್ಲಿ ಸೌಗಂಧವನ್ನಿಟ್ಟು ಅದನ್ನು ಮೂಸಬೇಡ ಎನ್ನಬೇಕೇಕೆ ? ಅದಕ್ಕೆ ನರಸಿಂಹ ಸಮಾಧಾನಿಸಿದ - ಸಂಸಾರದಲ್ಲಿ ಸ್ವಲ್ಪವಾದರೂ ಸುಖವನ್ನು ಅನುಭವಿಸಿ ಬದುಕುವಂತಾಗಲೆಂದು ವಿಷಯ ವಸ್ತುಗಳಲ್ಲಿ ಸೌಂದರ್ಯವನ್ನಿಟ್ಟಿರುವುದು. ಆದರೆ ಅದನ್ನು ಎಷ್ಟು ಬೇಕೋ ಅಷ್ಟನ್ನು ಮಾತ್ರ ಸೇವಿಸಿ ಬದುಕಬೇಕಾದದ್ದು ಹೊರತು ಅದರಲ್ಲೇ ಮುಳುಗುವಂತಾಗಬಾರದು.

ಹೀಗೆ ದೇವರು ತನ್ನನ್ನು ಸ್ತೋತ್ರ ಮಾಡುವ ಭಕ್ತರಿಗೆ ಅವರ ಸಾಧನಾನುಷ್ಠಾನಕ್ಕೆ ಚ್ಯುತಿ ಬರದಷ್ಟು ವಿಷಯ ಪದಾರ್ಥಗಳಿಂದ ಆನಂದವನ್ನು

ನೀಡುವವನಾಗಿ 'ಕುಮುದಃ' ಎನಿಸಿರುವನು.

**೮೧೬. ಕುಂದರಃ – * ತನ್ನ ಸ್ತುತಿರೂಪದ ಶಬ್ದವನ್ನು ಹೊರಡಿಸುವ ಶಂಖ ಉಳ್ಳವನು.**

*** ಭಯಂಕರ ಶಬ್ದವನ್ನು ಹೊರಡಿಸಿದ ಶಂಖ ಉಳ್ಳವನು.**

**ವಿವರಣೆ :** ಭೀಷ್ಮರು ಎಲ್ಲಾ ಪುರಾಣಗಳನ್ನು, ಇತಿಹಾಸಗಳನ್ನು ಪರಾಮರ್ಶಿಸಿ ಅಲ್ಲೆಲ್ಲ ಪ್ರಸ್ತುತಗಳಾದ ಭಗವಂತನ ಮಹಿಮೆಗಳಿಗೆ, ಗುಣಗಳಿಗೆ ಸಂಬಂಧಿಸುವಂತೆ ನಾಮಗಳಿಂದ ಸ್ತುತಿಸುವರು.

'ಕುಮುದಃ' - ಎಂಬ ನಾಮದಿಂದ ಸ್ತುತಿಸುವವರಿಗೆ ಆನಂದವನ್ನು ನೀಡುವ ಭಗವಂತನ ಮಹಿಮೆ ಪ್ರಸ್ತುತವಾದಾಗ ಹಾಗೆ ಭಗವಂತನಿಂದ ಆನಂದ ಪಡೆದ ಧ್ರುವನ ನೆನಪು ಬರುವುದು. ಧ್ರುವ ತನ್ನ ಎದುರು ನಿಂತಿದ್ದ ವಾಸುದೇವನನ್ನು ಬಾಯ್ತುಂಬ ಸ್ತುತಿಸಿ, ಅದರ ಫಲವಾಗಿಯೇ ಅವನ ಅನುಗ್ರಹದಿಂದ ಆನಂದವನ್ನು ಪಡೆದವನು. ಆದರೆ ಧ್ರುವ ಹಾಗೆ ಭಗವಂತನನ್ನು ಸ್ತುತಿಸುವಂತೆ ಮಾಡುವಿಕೆಯಲ್ಲೂ ಭಗವಂತನದ್ದೇ ಪಾತ್ರ. ವಾಸುದೇವ ರೂಪಿ ಪರಮಾತ್ಮನನ್ನು ತನ್ನೆದುರು ಕಂಡಾಕ್ಷಣ ಧ್ರುವನಿಗೆ ಆನಂದಾತಿಶಯದಿಂದಾಗಿ ಮಾತೇ ಹೊರಡುವುದಿಲ್ಲ. ನಮಗೆ ರಾತ್ರಿ ಕಳ್ಳನನ್ನು ಕಂಡಾಗ ಭಯದಿಂದಾಗಿ ಹೇಗೆ ಮಾತೇ ಹೊರಡುವುದಿಲ್ಲವೋ ಹಾಗೆ. ಕೂಡಲೇ ವಾಸುದೇವ ತನ್ನ ಪಾಂಚಜನ್ಯಶಂಖವನ್ನು ಧ್ರುವನ ಕಪೋಲಗಳಿಗೆ ಮುಟ್ಟಿಸುವನು. ತಕ್ಷಣ ಧ್ರುವನ ಬಾಯಿಯಿಂದ **'ಯೋಽಂತಃ ಪ್ರವಿಶ್ಯ ಮಮ ವಾಚಮಿಮಾಂ ಪ್ರಸುಪ್ತಾಂ ಸಂಜೀವಯತಿ....'** ಇತ್ಯಾದಿಯಾಗಿ ವಾಗ್ಗಂಗೆ ಪ್ರವಹಿಸಲು ಪ್ರಾರಂಭಿಸಿದಳು.

ಧ್ರುವನ ಮೇಲೆ ಅನುಗ್ರಹಿಸಿದ ವಾಸುದೇವರೂಪಿ ಪರಮಾತ್ಮನ ಈ ಮಹಿಮೆಯನ್ನೇ ಭೀಷ್ಮರು 'ಕುಂದರಃ' ನಾಮದಿಂದ ಸ್ತುತಿಸಿರುವರು. ಕುಂ - ತನ್ನ ಸ್ತುತ್ಯಾತ್ಮವಾದ ಶಬ್ದವನ್ನು ಹೊರಡಿಸುವ ದರಃ - ಶಂಖ ಉಳ್ಳವನು.

ಮಹಾಭಾರತ ಯುದ್ಧದಲ್ಲಿ ಹದಿನಾಲ್ಕನೆಯ ದಿನದಂದು ಕೃತವರ್ಮ ಕಾದಾಡುತ್ತಿದ್ದಾಗ ಕೃಷ್ಣ ಪಾಂಚಜನ್ಯ ಶಂಖವನ್ನು ಊದುವನು. ಆಗ ಹೊರಟ ಶಂಖನಾದದ ವೈಭವವನ್ನು ಮಧ್ವಗುರುಗಳು ಹೀಗೆ ವರ್ಣಿಸಿರುವರು. **'ತದಾ ಹರಿಃ ಪಾಂಚಜನ್ಯಂ ಸುಘೋಷಮಾಪೂರಯಾಮಾಸ ಜಯೇಽಭಿಯುದ್ಧ್ಯತಿ | ಕರ್ಣಾದಿಭಿರ್ದ್ರೌಣಿಮುಖ್ಯೈರಿಪೂಣಾಂ ಬಲಪ್ರಹಾಣಾಯ ಪರಃ ಪರೇಭ್ಯಃ||** ಅರ್ಜುನ ಕರ್ಣ, ಅಶ್ವತ್ಥಾಮಾಚಾರ್ಯ ಮುಂತಾದವರ ಜೊತೆಗೆ ಕಾದಾಡುತ್ತಿರಲು ಕೌರವರ

ಬಲ ಕುಸಿದು ಹೋಗುವಂತೆ ಶ್ರೀಕೃಷ್ಣ ಪಾಂಚಜನ್ಯ ಶಂಖವನ್ನು ಒಳ್ಳೆಯ ಘೋಷದಿಂದ ತುಂಬಿಸುವನು.

**ಸ ಪಾಂಚಜನ್ಯೋಚ್ಯುತವಕ್ತ್ರವಾಯುನಾ ಭೃಶಂ**
**ಸುಪೂರ್ಣೋದರನಿಃಸೃತಧ್ವನಿಃ |**
**ಜಗದ್ವಿರಿಂಚೇಶಸುರೇಂದ್ರಪೂರ್ವಕಂ**
**ಪ್ರಕಂಪಯಾಮಾಸ ಯುಗಾತ್ಯಯೇ ಯಥಾ ||**

ಶ್ರೀಕೃಷ್ಣನ ಬಾಯಿಯಿಂದ ಹೊರಟ ಗಾಳಿಯಿಂದ ಪಾಂಚಜನ್ಯಶಂಖದ ಉದರ ಪೂರ್ಣವಾಗಿ ತುಂಬಿದುದರಿಂದಾಗಿ ಹೊರಹೊಮ್ಮಿದ ಶಂಖದ ಧ್ವನಿ ಪ್ರಲಯ ಕಾಲದಲ್ಲಿ ಹೇಗೋ ಹಾಗೆ ಚತುರ್ಮುಖಾದಿ ದೇವತೆಗಳೂ ಒಮ್ಮೆ ಕಂಪಿಸುವಂತೆ ಮಾಡಿತ್ತು.

ಅನಿರೀಕ್ಷಿತವಾಗಿ ಸದ್ದನ್ನು ಕೇಳಿದಾಗ ಒಮ್ಮೆಲೇ ನಡುಕ ಉಂಟಾಗುವುದು. ಪ್ರವಚನ ಕೇಳುತ್ತಿದ್ದಾಗ ಇದ್ದಕ್ಕಿದ್ದಂತೆ ಬೆಡಿಯ ಸದ್ದು ಕೇಳಿದರೆ ಹೇಗೋ ಹಾಗೆ. ಹೀಗೆ ಕೌರವಸೈನಿಕರನ್ನಷ್ಟೇ ಅಲ್ಲದೆ, ಚತುರ್ಮುಖಾದಿಗಳನ್ನೂ ಕಂಪಿಸುವಷ್ಟು ಭಯಂಕರವಾದ ಸದ್ದು ಹೊರಡಿಸುವ ಶಂಖ ಶ್ರೀಕೃಷ್ಣನದ್ದು ಎಂಬುದನ್ನೂ 'ಕುಂದರ'ನಾಮವು ತಿಳಿಸಬಲ್ಲದು. ಕುಂ ಎಂದರೆ ಚತುರ್ಮುಖಾದಿಗಳಿಗೂ ದಿಗಿಲನ್ನುಂಟು ಮಾಡುವ ಸದ್ದನ್ನು ಹೊರಡಿಸಲು ಶಂಖ ಉಳ್ಳವನು ಕುಂದರ.

ಭೀಷ್ಮರು ಕೃಷ್ಣನ ಶಂಖದ ಸದ್ದಿನ ಭಯಂಕರತೆಯನ್ನು ಮೆಲುಕು ಹಾಕುತ್ತ 'ಕುಂದರ' - ಎಂದು ಸ್ತುತಿಸುತ್ತಿರುವರು.

**೮೧೭. ಕುಂದಃ – ಅಪಶಬ್ದಗಳು ಬಾರದಂತೆ ಪರಿಹರಿಸುವವನು.**

**ವಿವರಣೆ:** ಕುಂ - ಕುತ್ಸಿತಗಳಾದ ಅಪಶಬ್ದವನ್ನು ದ್ಯತಿ - ಖಂಡಯತಿ ಪರಿಹರತೀತಿ ಕುಂದಃ - ಅಪಶಬ್ದಗಳು ಬಾರದಂತೆ ಪರಿಹರಿಸುವವನು.

ಭಾಷೆಯು ಭಾವನೆಗಳ ಸಂಹನಕ್ಕೆ ಮಾಧ್ಯಮವಾಗಿರುವುದರಿಂದ ಭಾವನೆಗಳನ್ನು ಇತರರು ತಿಳಿದರೆ ಸಾಕು ಭಾಷೆ ಹೇಗಿದ್ದರೇನಂತೆ ಎಂದು ಕೆಲವರು ವಾದಿಸುವುದುಂಟು. ಆದರೆ ಈ ವಾದ ಸಂಸ್ಕೃತ ಭಾಷೆಗೆ ಒಗ್ಗುವುದಿಲ್ಲ. 'ನಾಪಭಾಷಿತಂ ವೈ'- ಅಪಭಾಷೆ, ಅಪಶಬ್ದಗಳು ನಮ್ಮ ಬಾಯಿಯಿಂದ ಬರದಿರಲಿ - ಎಂದು ವಾಗಭಿಮಾನಿ ದೇವತೆಗಳಲ್ಲಿ ಪ್ರಾರ್ಥಿಸಿಕೊಳ್ಳುವುದಿದೆ. ಕನ್ನಡದಲ್ಲಿ 'ಶಾಲೆ' ಹೋಗಿ 'ಸಾಲೆ' ಎಂದು ಉಚ್ಚರಿಸಲ್ಪಡುವುದಿದೆ. ಹೀಗೆಯೇ ಕೆಲವು ವರ್ಣಗಳೇ ಉಚ್ಚಾರಣೆಯಿಂದ ತಪ್ಪಿ ಹೋಗುವ ಸಂಭವವಿದೆ. ತಮಿಳಿನಲ್ಲಿ ಶಕಾರದ ಸ್ಥಾನದಲ್ಲಿ

ಸಕಾರವನ್ನೇ ಉಚ್ಚರಿಸುತ್ತ ಶಕಾರವೇ ಮಾಯವಾಗಿದೆ. ಮಹಾಪ್ರಾಣದ ಬದಲು ಅಲ್ಪಪ್ರಾಣವನ್ನೇ ಉಚ್ಚರಿಸುತ್ತ ಮಹಾಪ್ರಾಣವೇ ಇಲ್ಲ - ಎಂದಾಗಿದೆ. ಅದರಂತೆ ಸಂಸ್ಕೃತದಲ್ಲಿ ಅಲ್ಪಪ್ರಾಣ, ಮಹಾಪ್ರಾಣ - ಇವುಗಳ ವ್ಯತ್ಯಾಸ, ಶಕಾರ ಸಕಾರಗಳ ವ್ಯತ್ಯಾಸ ಅರ್ಥದಲ್ಲಿ ತುಂಬ ವಿರೋಧವನ್ನುಂಟು ಮಾಡುವುದರಿಂದ ತುಂಬ ಎಚ್ಚರಿಕೆ ವಹಿಸಬೇಕಾಗುವುದು.

ಇಂದು ಗುರುವಾರ ; ಆದುದರಿಂದ ನಾನು 'ಫಲಾಹಾರ' ಎನ್ನುವ ಬದಲು 'ಪಲಾಹಾರ' ಎಂದರೆ ಹಣ್ಣು ಹಂಪಲುಗಳ ಬದಲು ಮಾಂಸದ ಮುದ್ದೆ ಸುರಿಯಲ್ಪಡುವುದು. ಯಾಕೆಂದರೆ ಸಂಸ್ಕೃತದಲ್ಲಿ ಫಲ ಎಂದರೆ ಹಣ್ಣು ; ಪಲ ಎಂದರೆ ಮಾಂಸ !

ಒಮ್ಮೆ ಎಂಬ ಅರ್ಥದ 'ಸಕೃತ್' ಶಬ್ದದಲ್ಲಿ ಸಕಾರದ ಸ್ಥಾನದಲ್ಲಿ ಶಕಾರವನ್ನು ಬಳಸಿದರೆ 'ಮಲ' - ಎಂಬ ಅರ್ಥ ಹೊರಡೀತು ! ಯಾಕೆಂದರೆ ಸಂಸ್ಕೃತದಲ್ಲಿ ಶಕೃತ್ ಎಂದರೆ ಮಲ !

ಹೀಗೆ ತುಂಬ ಅನರ್ಥಗಳನ್ನು ಹೊರಡಿಸುವ, ವಿರುದ್ಧಾರ್ಥವುಳ್ಳ ಶಬ್ದಗಳ ಪ್ರಯೋಗ ಆಗಬಾರದಾದುರಿಂದ ಅಲ್ಪಪ್ರಾಣ, ಮಹಾಪ್ರಾಣಗಳಲ್ಲಿ ವ್ಯತ್ಯಾಸ ಆಗಬಾರದು ; ಶಕಾರ ಸಕಾರಗಳಲ್ಲಿ ಬದಲಾವಣೆ ಆಗಬಾರದು.

ಹೀಗೆ ಅಪಶಬ್ದಗಳ ಬಳಕೆ ಆಗಬಾರದೆಂದು ದೇವರನ್ನು ಕುಂದಃ ಕುತ್ಸಿತಗಳಾದ ಅಪಶಬ್ದಗಳನ್ನು ಖಂಡಿಸಿ, ಒಳ್ಳೆಯ ಶಬ್ದಗಳ ಪ್ರಯೋಗವೇ ನಡೆಯುವಂತೆ ಅನುಗ್ರಹಿಸುವವನು ಎಂದು ಉಪಾಸನೆ ನಡೆಸಬೇಕು.

ಶ್ರೀಕೃಷ್ಣನ ಬಾಯಿಯಿಂದ ಒಂದೂ ಅಪಶಬ್ದ ಹೊರಹೊಮ್ಮಿರಲಿಲ್ಲ. ಅಶ್ವತ್ಥಾಮನು ಬದುಕಿದ್ದಾಗಲೇ ಯುಧಿಷ್ಠಿರನ ಬಾಯಿಯಿಂದ ಹೇಳಿಸಿದ 'ಅಶ್ವತ್ಥಾಮಾ ಹತಃ' - ಎಂಬ ಶಬ್ದಗಳೂ ದ್ರೋಣಾಚಾರ್ಯರ ವ್ಯಕ್ತಿತ್ವಕ್ಕೆ ಒಗ್ಗದ ಹತ್ಯಾಕಾಂಡಕ್ಕೆ ತಡೆ ಒಡ್ಡುವ ಮೂಲಕ ಸುಶಬ್ದಗಳೇ ಆಗಿವೆ.

**೮೧೪. ಪರ್ಜನ್ಯಃ – ತಿಳಿದವರಿಂದ ಪ್ರಕಟಗೊಳ್ಳುವವನು**

**ವಿವರಣೆ :** ಪರ + ಜನ್ಯ ಶಬ್ದಗಳು ಸೇರಿ ಪರ್ಜನ್ಯ ಎಂದು ರೂಪುಗೊಳ್ಳುವುದು. ಪರ ಎಂದರೆ ಶ್ರೇಷ್ಠರು ವೃದ್ಧರು. ವೃದ್ಧರು ಎಂದರೆ ತಲೆಬೆಳ್ಳಗಾದವರಲ್ಲ. **'ನ ತೇ ವೃದ್ಧಾಃ ಯೇ ನ ವದಂತಿ ಧರ್ಮಮ್'** - ಎಂಬುದಾಗಿ ದ್ರೌಪದಿ ಯಾರು ಧರ್ಮವನ್ನು ಹೇಳುವುದಿಲ್ಲವೋ, ತಿಳಿದಿರುವುದಿಲ್ಲವೋ ಅಂತಹವರು ವೃದ್ಧರೇ ಅಲ್ಲ - ಎಂದು

ಘೋಷಿಸುವ ಮೂಲಕ ವೃದ್ಧರೆನಿಸಬೇಕಾದರೆ ಅವರು ಧರ್ಮದ ಬಗ್ಗೆ ದೇವರ ಬಗ್ಗೆ ತಿಳಿದಿದ್ದಿರಬೇಕೆಂದು ಸೂಚಿಸಿರುವಳು.

ಆದ್ದರಿಂದ 'ಪರ್ಜನ್ಯ' - ಎಂಬಲ್ಲಿಯ ಪರಶಬ್ದಕ್ಕೆ ಧರ್ಮದ ಬಗ್ಗೆ, ದೇವರ ಬಗ್ಗೆ ತಿಳಿದಿರುವವರು ಎಂಬ ಅರ್ಥ ಸಿದ್ಧಿಸುವುದು. ಅಂತಹವರಿಂದ 'ಜನ್ಯ' ಆಗುವವನು ಭಗವಂತ. ಜನ್ಯ ಎಂದರೆ ಹುಟ್ಟುವವನು. ದೇವರ ಪಾಲಿಗೆ ಹುಟ್ಟುವುದೆಂದರೆ ಕಾಣಿಸಿಕೊಳ್ಳುವುದು ಎಂದೇ ಅರ್ಥ. ಆದುದರಿಂದಲೇ **'ಯಸ್ತಾ ವಿಜಾನಾತ್ ಸಃ ಪಿತುಷ್ಪಿತಾ ಸತ್'** - ಎಂಬುದಾಗಿ ಭಗವಂತನನ್ನು ಚೆನ್ನಾಗಿ ಅರಿತು, ಉಳಿದ ಯೋಗ್ಯರಿಗೆ ಪರಮಾತ್ಮನನ್ನು ತಿಳಿಸಿಕೊಡುವ ಚತುರ್ಮುಖನನ್ನು ಜಗಜ್ಜನಕನಾದ ದೇವರ ತಂದೆ ಎಂದು ಋಗ್ವೇದ ಕರೆದಿದೆ.

ಆದುದರಿಂದ ಚತುರ್ಮುಖನೇ ಮುಂತಾದ, ದೇವರನ್ನು ಚೆನ್ನಾಗಿ ಬಲ್ಲವರಿಂದ ಜನ್ಯನಾಗುವವನು - ಸಮಾಜದ ಎದುರು ಆವಿಷ್ಕಾರಗೊಳ್ಳುವವನು ; ಪ್ರಕಟಗೊಳ್ಳುವವನು ಪರಮಾತ್ಮನಾದುದರಿಂದ ಅವನು 'ಪರ್ಜನ್ಯ' ಎನಿಸುವನು.

**೮೧೯. ಪಾವನಃ – ನಾವು ಅರ್ಪಿಸಿದ ಕರ್ಮದ ರಸವನ್ನು ಸ್ವೀಕರಿಸಿ ನಮ್ಮನ್ನು ರಕ್ಷಿಸುವವನು.**

ವಿವರಣೆ: ಪ + ಅವನ ಶಬ್ದಗಳು ಸೇರಿ ಪಾವನ ಎಂದಾಗಿದೆ. ಪ ಎಂದರೆ ಪಿಬತೀತಿ ಪಃ - **'ಆತ್ಮಾಂತರಾತ್ಮೇತಿ ಹರಿಃ ಏಕ ಏವ ದ್ವಿಧಾ ಸ್ಥಿತಃ | ನಿವಿಷ್ಟೋ ಹೃದಯೇ ನಿತ್ಯಂ ರಸಂ ಪಿಬತಿ ಕರ್ಮಜಮ್........ ಶುಭಂ ಪಿಬತ್ಯ ಸೌ ನಿತ್ಯಂ ನಾಶುಭಂ ಸಃ ಹರಿಃ ಪಿಬೇತ್'** - ಎಂದು ತಿಳಿಸಿರುವಂತೆ ನಾವು ಸಮರ್ಪಿಸಿದ ಕರ್ಮಗಳ ರಸಭಾಗವನ್ನು ಸ್ವೀಕರಿಸುವವನು ಭಗವಂತ. ಆದುದರಿಂದ ಅವನು 'ಪ.' ಹೀಗೆ ಕರ್ಮರಸವನ್ನು ಸ್ವೀಕರಿಸಿ ಅದಕ್ಕೆ ಪ್ರತಿಯಾಗಿ ಅವತೀತಿ - ಅವನಃ -ರಕ್ಷಣೆ ಮಾಡುವನು. ಆದುದರಿಂದ ಅವನ.

ಈ ರೀತಿಯಾಗಿ ಭಗವಂತನು ನಾವು ಅರ್ಪಿಸುವ ಕರ್ಮದ ರಸವನ್ನು ಸ್ವೀಕರಿಸುವನು ಹಾಗೂ ನಮ್ಮನ್ನು ರಕ್ಷಿಸುವನು. ಆದುದರಿಂದಲೇ 'ಪಾವನ' ಎನಿಸುವನು.

**೮೨೦. ಅನಿಲಃ –ತಾನು ಸ್ವತಂತ್ರವಾಗಿ ಚಟುವಟಿಕೆಗಳನ್ನು ನಡೆಸುವವನಾಗಿದ್ದು, ಇನ್ನೊಬ್ಬರು ಚಟುವಟಿಕೆಗೆ ಒಳಗಾಗುವಂತೆ ಮಾಡುವವನು.**

**ವಿವರಣೆ:** ಅನ + ಇಲ ಶಬ್ದಗಳು ಸೇರಿ ಅನಿಲ ಎಂಬ ನಾಮ ರೂಪುಗೊಳ್ಳುವುದು.

ಅನಿತಿ ಸ್ವಯಂ ಚೇಷ್ಟತೇ ತಾನಾಗಿಯೇ ತನ್ನ ಎಲ್ಲ ಚಟುವಟಿಕೆಗಳನ್ನು ನಡೆಸುವವನೆಂಬ ಅರ್ಥದಲ್ಲಿ ಭಗವಂತ ಅನ. ಉಳಿದ ಲಕ್ಷ್ಮೀ ಮುಂತಾದವರೆಲ್ಲ ಅಸ್ವತಂತ್ರರಾಗಿರುವುದರಿಂದ ಅವರೆಲ್ಲರನ್ನು 'ಏಲಯತಿ' ಚಟುವಟಿಕೆಗೆ ಒಳಪಡಿಸುವವನೆಂಬ ಅರ್ಥದಲ್ಲಿ 'ಇಲ' ಎನಿಸುವನು. **'ತೇನ ವಿನಾ ತೃಣಮಪಿ ನ ಚಲತಿ'** - ಎಂದಿರುವಂತೆ ಭಗವಂತನ ಪ್ರೇರಣೆ ಇಲ್ಲದೆ ಒಂದು ಹುಲ್ಲುಕಡ್ಡಿ ಕೂಡಾ ಅಲುಗಾಡಲಾರದು. ನಮ್ಮ ಕಣ್ಣು ರೆಪ್ಪೆ ಅಲ್ಲಾಡಬೇಕಾದರೂ ದೇವರು ಅಲ್ಲಿದ್ದು ಅದನ್ನು ಅಲ್ಲಾಡಿಸಬೇಕು. ಇಲ್ಲದಿದ್ದರೆ ಅದು ಅಲ್ಲಾಡದು.

ಆದರೆ ದೇವರ ಯಾವ ಚಟುವಟಿಕೆಯನ್ನೂ ಬೇರೆ ಯಾರೂ ಪ್ರೇರಿಸದೆ ತಾನೇ ನಿರ್ವಹಿಸುವನು. ಒಂದು ವೇಳೆ ದೇವರೇ ತನ್ನ ಚಟುವಟಿಕೆಯನ್ನು ತಾನೇ ನಡೆಸುವನೆಂದು ಒಪ್ಪಿಕೊಳ್ಳದೆ ಅವನ ಚಟುವಟಿಕೆಯನ್ನೂ ಮತ್ತೊಬ್ಬ ಪ್ರೇರಿಸುವನೆಂದು ಒಪ್ಪಿಕೊಂಡಲ್ಲಿ ನಮ್ಮಲ್ಲಿ ದೇವರ ಪ್ರೇರಣೆಯಿಂದ ಚಟುವಟಿಕೆ ನಡೆಯುವುದೆಂದು ಕೂಡಲಾರದು. ಯಾಕೆಂದರೆ ಕೆಳಗಿನವರ ಚಟುವಟಿಕೆಗಳನ್ನು ಮೇಲಿನವರು ಪ್ರೇರಿಸುವರೆಂದು ಹೇಳುತ್ತ ದೇವರಲ್ಲಿಯವರೆಗೂ ಹೋಗಿ ಅವನ ಚಟುವಟಿಕೆಗಳನ್ನೂ ಮತ್ತೊಬ್ಬ ಪ್ರೇರಿಸುವನು - ಎಂದು ಮುಂದುವರಿದರೆ, ಚಟುವಟಿಕೆಗಳನ್ನು ಪ್ರೇರಿಸುವವರ ಪರಂಪರೆಗೆ ಒಂದೆಡೆ ನಿಲುಗಡೆ ಇಲ್ಲದೆ ಚಟುವಟಿಕೆಗಳನ್ನು ಪ್ರೇರಿಸುವವರನ್ನು ಒಪ್ಪುತ್ತ ಹೋದಲ್ಲಿ ಚಟುವಟಿಕೆಗಳನ್ನು ಪ್ರೇರಿಸುವ ಕೊನೆಯವನೊಬ್ಬ ಇಲ್ಲದ ಪ್ರಯುಕ್ತ ಅವನಿಲ್ಲದೆ, ಅವನಿಗಿಂತ ಮೊದಲಿನವನಿಲ್ಲ - ಹೀಗೆ ಮೊದಲ ಪ್ರೇರಕನೇ ಇಲ್ಲ - ಎಂದು 'ಮೂಲಕ್ಷತಿ' - ಎಂಬ ಪಾರಿಭಾಷಿಕ ದೋಷವು ಸಂಭವಿಸೀತು ಅದಕ್ಕಾಗಿ ಚಟುವಟಿಕೆಗಳನ್ನು ಪ್ರೇರಿಸುವವರನ್ನು ದೇವರ ವರೆಗೆ ಕೊಂಡೊಯ್ದು ದೇವರು ಸ್ವತಂತ್ರನಾಗಿಯೇ ತನ್ನ ಚಟುವಟಿಕೆಗಳನ್ನು ನಿರ್ವಹಿಸುವನು. ಅವನಿಗೆ ಮತ್ತೊಬ್ಬ ಪ್ರೇರಕರು ಇಲ್ಲ ಎಂದು ಒಪ್ಪಬೇಕು. ಹೀಗೆ ಭಗವಂತ ತನ್ನ ಚಟುವಟಿಕೆಗಳನ್ನು ತಾನೇ ಸ್ವತಂತ್ರವಾಗಿ ನಡೆಸುವುದರಿಂದ 'ಅನ' ಎನಿಸುವನು. ಉಳಿದವರನ್ನೆಲ್ಲ ಬೇರೆ ಬೇರೆ ಚಟುವಟಿಕೆಗಳಲ್ಲಿ ತೊಡಗಿಸುವುದರಿಂದ 'ಇಲ' ಎನಿಸುವನು. ಆದುದರಿಂದ ತಾನು ಸ್ವತಂತ್ರವಾಗಿ ತನ್ನ ಚಟುವಟಿಕೆಗಳನ್ನು ನಡೆಸುತ್ತ, ಉಳಿದವರು ಚಟುವಟಿಕೆಗಳಲ್ಲಿ ತೊಡಗುವಂತೆ ಮಾಡುವುದರಿಂದ 'ಅನಿಲ' ಎನಿಸುವನು.

**೮೨೧. ಅಮೃತಾಂಶಃ – ನಾಶಕ್ಕೊಳಗಾಗದ ಅವತಾರಗಳುಳ್ಳವನು.**

**ವಿವರಣೆ:** ಮೃತ ಎಂದರೆ ನಾಶಕ್ಕೊಳಗಾಗುವ, ಅಮೃತ ಎಂದರೆ ನಾಶಕ್ಕೊಳಗಾಗದ,

ಅಂಶಃ ಅವತಾರಗಳು ಉಳ್ಳವನು. ಯಾರ ಅವತಾರಗಳಲ್ಲಿ ಯಾವೊಂದು ಅವತಾರವೂ ನಾಶಕ್ಕೊಳಗಾಗುವುದಿಲ್ಲವೋ ಅವನೇ ಅಮೃತಾಂಶ.

ಭಗವಂತನ ಯಾವುದೇ ಅವತಾರಕ್ಕೆ ಹೊಸ ದೇಹವನ್ನು ಹೊಂದುವ ಜನ್ಮವೂ ಇಲ್ಲ ; ಅಂತಹ ಪಾಂಚಭೌತಿಕ ದೇಹವನ್ನು ಕಳೆದುಕೊಳ್ಳುವ ಮರಣವೂ ಇಲ್ಲ.

ಭಗವಂತನ ಪರಶುರಾಮಾವತಾರ ಇನ್ನೂ ಇದೆ - ಎಂದು ಪ್ರತೀತಿ ಇದೆ. ನಮಗೆ ಕಾಣಿಸುವುದಿಲ್ಲ ಅಷ್ಟೇ.

ರಾಮಾವತಾರದಲ್ಲಿ ಅದೇ ರೂಪದಿಂದ ಮೋಕ್ಷ ಯೋಗ್ಯರನ್ನೆಲ್ಲ ಕರೆದೊಯ್ದು ಮೂಲರೂಪದೊಡನೆ ಸೇರಿಕೊಳ್ಳುವನು.

ಮತ್ಸ್ಯ, ಕೂರ್ಮ - ಮುಂತಾದ ಅವತಾರಗಳೆಲ್ಲ ಪಶುವರ್ಗಕ್ಕೆ ಸೇರಿದವು. ಆದುದರಿಂದ ಭಗವಂತ ಕೃಷ್ಣಾವತಾರದಲ್ಲಿ ಮಾತ್ರ ದೇಹತ್ಯಾಗದ ನಟನೆಯನ್ನೂ ನಡೆಸಿರುವನು. ಕೃಷ್ಣಾವತಾರದಲ್ಲಿ ಮನುಷ್ಯರಂತೆಯೇ ಬಾಲ್ಯ, ಯೌವನಾದಿಗಳನ್ನು ತೋರಿಸಿದ್ದರಿಂದ, ಮನುಷ್ಯರಂತೆಯೇ ಸಾವಿನ ನಟನೆಯನ್ನೂ ನಡೆಸಬೇಕೆಂದು ನಿರ್ಧರಿಸಿದ್ದ.

ಯಾದವರು ಪ್ರಭಾಸದಲ್ಲಿ ಪರಸ್ಪರ ಹೊಡೆದಾಡಿಕೊಂಡು ಸಾಯುವರು. ಬಲರಾಮ ಯೋಗದಿಂದ ದೇಹತ್ಯಾಗ ನಡೆಸುವನು. ಇದರಿಂದ ಭಾರೀ ಬೇಸರಕ್ಕೆ ಒಳಗಾದವನಂತೆ ಕೃಷ್ಣ ಅಶ್ವತ್ಥ ಮರದ ಅಡಿಯಲ್ಲಿ ಕುಳಿತುಕೊಳ್ಳುವನು. ತನ್ನ ಪಾದವನ್ನು ಮೇಲ್ಮುಖವಾಗಿಸಿಕೊಂಡು ಕುಳಿತುಕೊಳ್ಳುವನು. ಕೆಂಪಗಾದ ಆ ಪಾದ ಹಕ್ಕಿಯಂತೆ ಕಾಣುವುದು. ಜರಾ ಎಂಬ ವ್ಯಾಧ ಕೃಷ್ಣನ ಪಾದವನ್ನು ಯಾವುದೋ ಪಕ್ಷಿ ಎಂದು ಭ್ರಮಿಸಿ ಬಾಣವನ್ನು ಪ್ರಯೋಗಿಸುವನು. ಕೂಡಲೇ ಕೃಷ್ಣ ತನ್ನ ಜ್ಞಾನನಂದಾತ್ಮಕವಾದ ಶರೀರದಂತೆಯೇ ಇರುವ ಪಾಂಚಭೌತಿಕ ಶರೀರವನ್ನು ಸೃಷ್ಟಿಸುವನು. ಜರಾನ ಬಾಣಕ್ಕೆ ಬಲಿಯಾದ ಹೆಣದಂತೆ ಆ ಶರೀರ ಅಲ್ಲಿ ಬಿದ್ದಿರುವುದು. ಅರ್ಜುನನಿಗೆ ಹೇಳಿ ಕಳುಹಿಸಲಾಗುವುದು. ಕೂಡಲೇ ಬಂದ ಅರ್ಜುನ ಆ ಶರೀರಕ್ಕೆ ಶವಸಂಸ್ಕಾರ ಮಾಡುವನು. ಆದರೆ ಭೀಷ್ಮರಲ್ಲಿ ಚತುರ್ಮುಖನ ಆವೇಶವಿರುವುದರಿಂದ, ಕೃಷ್ಣನ ರೂಪ ನೆಲೆಸಿರುವುದರಿಂದ - ಮುಂದೆ ನಡೆಯಲಿರುವ ಆ ಘಟನೆಯ ಬಗ್ಗೆ ಎಚ್ಚರಿಕೆ ನೀಡುವರು - 'ಅಮೃತಾಂಶಃ' - ಭಗವಂತನ ಯಾವುದೇ ಅಂಶ - ಅಂದರೆ ಅವತಾರ ಹೇಗೆ ಅಮೃತ ಅಂದರೆ ಸಾವಿಲ್ಲದದ್ದೋ ಅಂತೆಯೇ ಕೃಷ್ಣಾವತಾರವೂ ಅಮೃತವೇ. ಅವನ ಜ್ಞಾನಾನಂದಾತ್ಮಕವಾದ ಶರೀರಕ್ಕೆ ಎಂದೂ

ಸಾವಿಲ್ಲ. ಆದ್ದರಿಂದ ದೇವರು ಪ್ರತಿಯೊಂದು ಅವತಾರದ ವಿಷಯದಲ್ಲೂ 'ಅಮೃತಾಂಶಃ' ಸಾವಿಗೆ ಒಳಗಾಗದ ಅವತಾರಗಳುಳ್ಳವನು.

**೮೨೨. ಅಮೃತವಪುಃ – ಅಮೃತವನ್ನು ಅಮೃತವನ್ನಾಗಿ ಮಾಡಲು ಬೇಕಾದ ಮೋಹಿನ್ಯಾದಿ ಶರೀರಗಳನ್ನು ಸ್ವೀಕರಿಸಿದವನು.**

ವಿವರಣೆ: 'ಅಮೃತಾಂಶಃ' ನಾಮದಿಂದ ಭಗವಂತನ ಅವತಾರಗಳಿಗೆ ಮರಣವಿಲ್ಲ ಎಂದು ಕಂಡಿದ್ದೇವೆ. ಅದನ್ನು ಸಮರ್ಥಿಸುವಂತೆ ಇರುವ ಮುಂದಿನ ನಾಮ 'ಅಮೃತವಪುಃ' ಅಮೃತ ಎಂದರೆ ದೇವತೆಗಳ ಅಸಾಧಾರಣವಾದ ಆಹಾರ. ಅದಕ್ಕೆ ಮರಣ ದೊರಕದಂತೆ ಮಾಡುವುದಕ್ಕಾಗಿಯೇ ಕೂರ್ಮ, ಅಜಿತ, ಧನ್ವಂತರಿ, ಮೋಹಿನೀ - ರೂಪಗಳನ್ನು ಧರಿಸಿರುವವನು ಭಗವಂತನೆಂದ ಮೇಲೆ ಅಂತಹವನಿಗೆ ಮರಣ ಇದ್ದೀತೇ ?

ಅಮೃತ ಎಂದರೆ ಮರಣ ಇಲ್ಲದಂತೆ ಮಾಡುವ ಆಹಾರವೆಂದೇ ಅರ್ಥ. ಹೇಗೆ ನಮ್ಮ ಆಹಾರ ಕಾಯಿಲೆ, ಮರಣಗಳಿಗೆ ಕಾರಣವಾಗಿಯೇ ಇರುವುದೋ ಹಾಗೆ ದೇವತೆಗಳ ಆ ಆಹಾರ 'ಅಮೃತ' ಮರಣವನ್ನು ದೂರ ಮಾಡುವುದು.

ಅಂತಹ ಅಮೃತವು ಸಮುದ್ರಮಥನದ ಪ್ರಸಂಗದಲ್ಲಿ ಪ್ರಾದುರ್ಭವಿಸಿ ದೇವತೆಗಳ ಪಾಲಾಗುವಂತೆ ಮಾಡುವಲ್ಲಿ ಅಜಿತ, ಕೂರ್ಮ, ಧನ್ವಂತರಿ ಹಾಗೂ ಮೋಹಿನೀ - ಈ ನಾಲ್ಕು ಭಗವದ್ರೂಪಗಳ ಪಾತ್ರವಿದೆ. ಅಜಿತ ಸಮುದ್ರ ಮಥನದಲ್ಲಿ ದೇವಾದಿಗಳನ್ನು ತೊಡಗಿಸದೇ ಇದ್ದಲ್ಲಿ ಅಮೃತದ ಪ್ರಾದುರ್ಭಾವವೇ ಆಗುತ್ತಿದ್ದಿಲ್ಲ. ಸಮುದ್ರಮಥನ ಪ್ರಾರಂಭವಾದ ಮೇಲೆ ಮಂದರ ಪರ್ವತ ನೀರಿನಲ್ಲಿ ಕುಸಿದು ಹೋಗಿಬಿಟ್ಟಿದ್ದರೂ ಮಥನ ಮುಂದುವರೆಯುತ್ತಿದ್ದಿಲ್ಲ. ಅಮೃತ ದೊರಕುತ್ತಿದ್ದಿಲ್ಲ.

ಸಮುದ್ರ ಮಥನ ನಡೆದಾಗ ಅಮೃತ ಕಲಶವನ್ನು ತಂದವನು ಧನ್ವಂತರಿ ರೂಪಿ ಪರಮಾತ್ಮ ತಾನೇ ?

ಧನ್ವಂತರಿಯ ಕೈಯಿಂದ ಅಮೃತ ಕಲಶವನ್ನು ಕಸಿದುಕೊಂಡ ದೈತ್ಯರು ಒಂದು ವೇಳೆ ಅಮೃತವನ್ನು ಕುಡಿದು ಬಿಟ್ಟಿದ್ದರೆ ಅಮೃತದ ಅಮೃತತ್ವವೇ ಕೆಟ್ಟು ಹೋಗುತ್ತಿತ್ತು. ಅದರ ನಿಜವಾದ ಪ್ರಯೋಜನ ಯಾವ ದೇವತೆಗಳಿಗೆ ದೊರಕಬೇಕಿತ್ತೋ ಅವರಿಗೆ ದೊರಕದೆ ಹೋಗುತ್ತಿತ್ತು. ಹಾಗಾದರೆ ಅಮೃತ ವಾಸ್ತವವಾಗಿ ಯಾರಿಗೆ ದೊರಕಬೇಕೋ ಅಂತಹ ದೇವತೆಗಳಿಗೇ ದೊರಕಿ ಅವರೇ ಅದರ ಪ್ರಯೋಜನವನ್ನು ಪಡೆದುಕೊಳ್ಳುವಂತಾಗಿ, ಅದರ ಅಮೃತತ್ವ ಸಾರ್ಥಕವೆನಿಸುವಂತೆ ಮಾಡಲು ಬೇಕಾದ ಮೋಹಿನ್ಯಾದಿ ರೂಪಗಳುಳ್ಳ ಭಗವಂತ

'ಅಮೃತವಪುಃ' ಎನಿಸುವನು.

**೮೨೩. ಸರ್ವಜ್ಞಃ – * ಎಲ್ಲವನ್ನೂ ಬಲ್ಲವನು.**

*** ಎಲ್ಲ ಜೀವರಿಗೆ ಸೃಷ್ಟಿಯಿಂದ ಆರಂಭಿಸಿ, ಮೋಕ್ಷದವರೆಗೆ ಎಲ್ಲವೂ ಯಾರಿಂದ ಉಂಟಾಗುವುದೋ ಅಂತಹವನು.**

ವಿವರಣೆ : ಸರ್ವಜ್ಞ ಎಂಬುದಕ್ಕೆ ಮೇಲ್ನೋಟದ ಅರ್ಥ ಎಲ್ಲವನ್ನೂ ತಿಳಿದಿರುವವನು.

ಮತ್ತೊಂದು ಅರ್ಥ ಹೀಗಿದೆ - ಜ್ಞ ಎಂದರೆ ಜೀವರು. ಜೀವರಿಗೆ ಯಾಕೆ ಜ್ಞ ಎಂಬ ಹೆಸರು ? ಎಲ್ಲವನ್ನೂ ತಿಳಿದುಕೊಳ್ಳಬೇಕೆಂಬ ಕುತೂಹಲವುಳ್ಳವರಾದುದರಿಂದ ಜೀವರು 'ಜ್ಞ' ಎನಿಸುವರು. ಪರಮಾತ್ಮನಿಗೆ ತಿಳಿದುಕೊಳ್ಳಬೇಕೆಂಬ ಕುತೂಹಲ ಇಲ್ಲ ಯಾಕೆ ? ಎಲ್ಲವನ್ನೂ ಚೆನ್ನಾಗಿ ತಿಳಿದವನಿಗೆ ಪುನಃ ತಿಳಿಯಬೇಕೆಂಬ ಕುತೂಹಲವಾದರೂ ಯಾಕೆ ?

ಆದ್ದರಿಂದ ತಿಳಿಯಬೇಕೆಂಬ ಕುತೂಹಲಕ್ಕೆ ಒಳಗಾದ ಜೀವರಷ್ಟೇ ಜ್ಞ ಎನಿಸುವರು. ಸರ್ವ ಎಂದರೆ ಎಲ್ಲ. ಎಲ್ಲ ಜೀವರೂ ಯಾರಿಂದಲೋ ಅಂತಹವನು ಸರ್ವಜ್ಞ. ಎಲ್ಲ ಜೀವರು ಯಾರಿಂದ - ಎಂದರೇನು ? ಯಾರಿಂದ ಸೃಷ್ಟಿಗೊಳಗಾಗುವರೋ , ಯಾರಿಂದ ಜ್ಞಾನಕ್ಕೊಳಗಾಗುವರೋ, ಯಾರಿಂದ ಅಜ್ಞಾನಕ್ಕೊಳಗಾಗುವರೋ, ಯಾರಿಂದ ಸಂಸಾರ ಬಂಧನಕ್ಕೊಳಗಾಗುವರೋ, ಯಾರಿಂದ ಬಿಡುಗಡೆಗೆ ಒಳಗಾಗುವರೋ - ಹೀಗೆ ಸರ್ವ ಜೀವರಿಗೂ ಸೃಷ್ಟಿಯಿಂದ ಪ್ರಾರಂಭಿಸಿ ಮುಕ್ತಿಯವರೆಗೆ ಪ್ರತಿಯೊಂದೂ ಯಾರಿಂದ ನಡೆಯುವುದೋ ಅಂತಹ ಪರಮಾತ್ಮ 'ಸರ್ವಜ್ಞ'

**೮೨೪. ಸರ್ವತೋಮುಖಃ – * ಎಲ್ಲೆಡೆ ಹಬ್ಬಿರುವ ಮುಖವುಳ್ಳವನು.**

*** ಸರ್ವತೋಮುಖವಾದ ಅಭಿವೃದ್ಧಿ ಉಳ್ಳವನು.**

ವಿವರಣೆ : **'ವಿಶ್ವತಶ್ಚಕ್ಷುರುತ ವಿಶ್ವತೋಮುಖೋ ವಿಶ್ವತೋಬಾಹುರುತ ವಿಶ್ವತಸ್ಪಾತ್'** - ಎಂಬ ಶ್ರುತಿ ಸಾರುತ್ತಿರುವಂತೆ ಭಗವಂತನ ಮುಖ ಎಲ್ಲೆಡೆ ಹಬ್ಬಿರುವುದರಿಂದ ಅವನು 'ಸರ್ವತೋಮುಖ'.

ಇದಲ್ಲದೆ, ಗ್ರಾಮವು ಸರ್ವತೋಮುಖವಾದ ಅಭಿವೃದ್ಧಿಯನ್ನು ಹೊಂದಿದೆ ಎಂದು ವ್ಯವಹರಿಸುವಂತೆ ಭಗವಂತನೂ ಕೂಡಾ ಸರ್ವತೋಮುಖವಾದ ಅಭಿವೃದ್ಧಿ ಉಳ್ಳವನು. ಅಂದರೆ ಅವನಲ್ಲಿ ಯಾವುದನ್ನು ಕೇಳಿದರೂ ಇಲ್ಲ - ಎಂದಿಲ್ಲ. ಜ್ಞಾನ,

ಭಕ್ತಿ, ಆನಂದ ಇತ್ಯಾದಿ ಕಲ್ಯಾಣಗುಣಗಳನ್ನು ಕೇಳಿದಂತೆ, ಅಜ್ಞಾನ, ವಿಪರೀತ ಜ್ಞಾನ, ದುಃಖ, ಅಸೂಯೆ ಇತ್ಯಾದಿ ದೋಷಗಳನ್ನು ಕೇಳಿದರೂ ಅವು ತನ್ನಲ್ಲಿ ಇಲ್ಲ ಎನ್ನುವುದಿಲ್ಲ. ಮತ್ತೊಬ್ಬರನ್ನು ಕರೆದು ಅವರಲ್ಲಿರುವ ಅಜ್ಞಾನಾದಿಗಳನ್ನು ಇವರಿಗೆ ನೀಡುವನು. ದುರ್ಯೋಧನ ತನಗೆ ಪಾಂಡವರ ಬಗ್ಗೆ ಹೊಟ್ಟೆಕಿಚ್ಚು ಬೇಕೆಂದರೆ ದುಃಶಾಸನನನ್ನು ಕರೆದು ಅವನಲ್ಲಿದ್ದ ಹೊಟ್ಟೆಕಿಚ್ಚನ್ನು ದುರ್ಯೋಧನನಿಗೆ ನೀಡುವನು. ಹೀಗೆ ಯಾವುದನ್ನು ಕೇಳಿದರೂ ದೇವರಲ್ಲಿ ಇಲ್ಲವೆಂದಿಲ್ಲ. ಆದುದರಿಂದಲೇ ಅವನು ಸರ್ವತೋಮುಖದ ಅಭಿವೃದ್ಧಿ ಉಳ್ಳವನು.

ಭೀಷ್ಮರು ಶ್ರೀ ಕೃಷ್ಣನಲ್ಲಿ ಸರ್ವತೋಮುಖ ಅಭಿವೃದ್ಧಿಯನ್ನು ಕಂಡು ಅನುಭವಿಸಿದವರು.

**ಸುಲಭಃ ಸುವ್ರತಃ ಸಿದ್ಧಃ ಶತ್ರುಜಿಚ್ಛತ್ರುತಾಪನಃ |**
**ನ್ಯಗ್ರೋಧೋದುಂಬರೋಽಶ್ವತ್ಥಶ್ಚಾಣೂರಾಂಧ್ರನಿಷೂದನಃ ||೮೮||**

**೮೨೫. ಸುಲಭಃ – ಸುಖ ಸ್ವರೂಪಿಗಳಾದ ಸಜ್ಜನರಿಗಷ್ಟೇ ಲಭ್ಯ ನಾಗಿರುವವನು.**

ವಿವರಣೆ : ಸುಲಭನಾಮದ ಅರ್ಥ ಸುಲಭ. ಯಾರು ಸು - ಅಂದರೆ ಒಳಗೆ ಸುಖವುಳ್ಳವರೋ ಅವರಿಗೆ ಲಭ್ಯನಾಗಿರುವುದರಿಂದ ದೇವರು ಸುಲಭ. ದೇವರು ಹೊರಗಿನ ಆಚರಣೆ ವೇಷ ಭೂಷಣಾದಿಗಳಿಗೆ ಮಾರು ಹೋಗುವವನಲ್ಲ. ಮತ್ತೆ ಆಂತರಿಕವಾಗಿ ಸು-ಸುಷ್ಠು ಚೆನ್ನಾಗಿ, ಸು - ಶೋಭನರಾಗಿರಬೇಕು. ಸು-ಸುಖಸ್ವರೂಪಿಗಳಾಗಿರಬೇಕು. ಅವರಿಗಷ್ಟೇ ದೇವರು ಲಭ್ಯನಾಗಿರುವುದರಿಂದ 'ಸುಲಭ' ಎನಿಸುವನು. ಹೊರತು ಹರಿಕಥಾಮೃತಸಾರದಲ್ಲಿ 'ಸುಲಭನೋ ಹರಿ ತನ್ನವರನು ಅರೆ ಗಳಿಗೆ ಬಿಟ್ಟಗಲನು......' ಎಂದು ತಿಳಿಸಿರುವಂತೆ ಎಲ್ಲರಿಗೆ ಸುಲಭ ಎಂಬ ಅಭಿಪ್ರಾಯವಲ್ಲ. ಆ ಪದ್ಯದಲ್ಲೂ ತನ್ನವರಿಗಷ್ಟೇ ಅವನು ಸುಲಭ ಎಂದೇ ಹೇಳಿರುವುದು.

ದೇವರು ಎಲ್ಲರ ಪಾಲಿಗೂ ಸುಲಭನೆಂದಾದರೆ ದುರ್ಯೋಧನನಿಗೆ ದೇವರು ಯಾಕೆ ಸಿಕ್ಕಿಲ್ಲ ? ದುರ್ಯೋಧನನಿಗೆ ಕಟ್ಟಲು ದೇವರು ಸಿಕ್ಕಿಲ್ಲ ಆದರೆ ಅದೇ ಯಶೋದೆ ಕಟ್ಟಲು ಸಿಕ್ಕಿದ. ಯಾಕೆಂದರೆ ಒಳಗಿನಿಂದ ದುರ್ಯೋದನ ಸು ಅಲ್ಲ, ಯಶೋದೆಯಾದರೂ 'ಸು' - ಸುಖಸ್ವರೂಪಳು.

ಆದುದರಿಂದ ಸುಖಸ್ವರೂಪಿಗಳಾದ ಸಜ್ಜನರಿಗಷ್ಟೇ ಲಭ್ಯನಾಗಿರುವುದರಿಂದ ದೇವರು 'ಸುಲಭ.'

**೮೨೬. ಸುವ್ರತಃ – ಭಕ್ತರ ಮಾತನ್ನು ಉಳಿಸುವುದಕ್ಕಾಗಿ ತನ್ನ ಮಾತನ್ನು ನಡೆಸದೆ ಬಿಡುವ ಒಳ್ಳೆಯ ವ್ರತವನ್ನು ಅಳವಡಿಸಿಕೊಂಡಿರುವವನು.**

ವಿವರಣೆ : ಒಳ್ಳೆಯ ವ್ರತ ಉಳ್ಳವನೇ ಸುವ್ರತ. ಭಗವಂತ ಅಳವಡಿಸಿ ಕೊಂಡಿರುವ ಒಳ್ಳೆಯ ವ್ರತವಾದರೂ ಯಾವುದು ? ತನ್ನ ಮಾತನ್ನು ನಡೆಸದೆ ಬಿಡುವುದೇ ದೇವರ ಒಳ್ಳೆಯ ವ್ರತ. ನಮ್ಮ ಮಾತಿನಂತೆ ನಡೆದುಕೊಳ್ಳುವುದೇ ನಮ್ಮ ಸುವ್ರತ ಆದರೆ ದೇವರ ಸುವ್ರತ ನಮ್ಮ ವ್ರತಕ್ಕಿಂತ ವಿಲಕ್ಷಣವಾದುದು. ಅದೇ, ತನ್ನ ಮಾತಿನಂತೆ ನಡೆದು ಕೊಳ್ಳದೆ ಇರುವುದು. ಅದು ಯಾರಿಗಾಗಿ ? ಭಕ್ತರಿಗಾಗಿ, ಭಕ್ತರ ಮಾತನ್ನು ಉಳಿಸುವುದಕ್ಕಾಗಿ ತನ್ನ ಮಾತನ್ನು ನಡೆಸದೆ ಇರುವುದೇ ಭಗವಂತ ಅಳವಡಿಸಿಕೊಂಡಿರುವ ಸುವ್ರತ. ಭಗವಂತನ ಈ ಬಗೆಯ ಸುವ್ರತತ್ವವನ್ನು ಭೀಷ್ಮರು ಅನುಭವಿಸಿದ್ದಾರೆ. ಕೃಷ್ಣ ಮಹಾಭಾರತ ಯುದ್ಧದಲ್ಲಿ ತಾನು ನಿರಾಯುಧನಾಗಿ ಪಾಲ್ಗೊಳ್ಳುವುದಾಗಿ ಪ್ರತಿಜ್ಞೆಗೈದಿದ್ದ. ಭೀಷ್ಮರಾದರೂ ತಮ್ಮ ಗುಂಪಿನಲ್ಲಿ ಶ್ರೀಕೃಷ್ಣ ಮಹಾಭಾರತ ಯುದ್ಧದಲ್ಲಿ ಆಯುಧವನ್ನು ಹಿಡಿಸಿಯೇ ತೀರುವೆನೆಂದು ಪ್ರತಿಜ್ಞೆ ಮಾಡಿದ್ದರು ಭಕ್ತರಾಗಿದ್ದ ಭೀಷ್ಮರ ಈ ಪ್ರತಿಜ್ಞೆಯನ್ನು ಉಳಿಸುವುದಕ್ಕಾಗಿ ನಿರಾಯುಧನಾಗಿ ಪಾಲ್ಗೊಳ್ಳುವ ತನ್ನ ಮಾತನ್ನು ನಡೆಸದೆ ಬಿಡುವ ವ್ರತವನ್ನು ಪಾಲಿಸಿದ. ಇದು ಭಕ್ತವತ್ಸಲ್ಯದಿಂದ ಅವನು ನಡೆಸಿದ 'ಸುವ್ರತ'.

ಕೆಲವೊಮ್ಮೆ ದೇವತೆಗಳು, ಋಷಿಗಳು ವರಗಳನ್ನು ಕೊಟ್ಟು ಬಿಡುವರು, ಆದರೆ ಆ ವರವನ್ನು ಪಡೆದುಕೊಂಡವನಿಗೆ ಅದನ್ನು ಅನುಭವಿಸುವ ಯೋಗ್ಯತೆ ಇರುವುದಿಲ್ಲ. ಆದರೂ ದೇವರ ಮೇಲಿನ ನಂಬಿಕೆಯಿಂದ ಅಂದರೆ ಭಕ್ತರ ಮಾತನ್ನು ಉಳಿಸುವುದಕ್ಕಾಗಿ ತನ್ನ ಮಾತನ್ನೂ, ತನ್ನ ಸಂಕಲ್ಪಕ್ಕನುಗುಣವಾಗಿರುವ ಕರ್ಮಸಿದ್ಧಾಂತದ ನಿಯಮಗಳನ್ನೂ ಸಡಿಲಿಸುವನೆಂಬ ದೇವರ ವ್ರತದಲ್ಲಿ ವಿಶ್ವಾಸವಿಟ್ಟು ಅವರು ನಿಶ್ಚಿಂತರಾಗಿರುವರು. 'ಸುವ್ರತ'ನಾದ ದೇವರು ಭಕ್ತರ ಮಾತನ್ನು ಉಳಿಸುವುದಕ್ಕಾಗಿ ತಾನು ಕೈಗೊಂಡ ವ್ರತಕ್ಕನುಗುಣವಾಗಿ ಏನನ್ನಾದರೂ ಮಾಡಿ ಭಕ್ತರ ಮಾತನ್ನು ಸತ್ಯಗೊಳಿಸುವನು.

ಭಗವಂತನನ್ನು ಈ ಅಭಿಪ್ರಾಯದಲ್ಲಿ 'ಸುವ್ರತ' - ಎಂದು ಉಪಾಸನೆ ಮಾಡಿದೆವೆಂದರೆ ಸ್ವಭಾವಕ್ಕೆ ವಿರುದ್ಧವಾಗಿ ಕೊಟ್ಟಿದ್ದರೂ ನಮ್ಮ ಆಶೀರ್ವಾದ ಸತ್ಯವಾಗುವಂತೆ ಭಗವಂತನು ಅನುಗ್ರಹಿಸುವನು.

**೮೨೭. ಸಿದ್ಧಃ – ಪಡೆಯ ಬೇಕಾದದ್ದನ್ನೆಲ್ಲ ಪಡೆದಿರುವವನು.**

**ವಿವರಣೆ :** ಸಾಧಕರಲ್ಲಿ ಎರಡು ಪ್ರಕಾರಗಳು, ಸಿದ್ಧರು ಹಾಗೂ ಸಾಧ್ಯರು. ಸಾಧನೆಯನ್ನೆಲ್ಲ ಮಾಡಿ ಪೂರೈಸಿದವರು ಸಿದ್ಧರೆನಿಸಿದರೆ, ಇನ್ನೂ ಸಾಧನ ನಡೆಸುತ್ತ ಇರುವವರು ಸಾಧ್ಯರು.

ಮನುಷ್ಯ ಐವತ್ತು ವರ್ಷ ವಯಸ್ಸಿನ ಮೊದಲೇ ಆದಷ್ಟು ಸಾಧನೆದಗಳನ್ನೆಲ್ಲ ಪೂರೈಸಿ, ದೇವರು ಮನೆ ಖಾಲಿ ಮಾಡಲು ಯಾವಾಗ ಹೇಳಿದರೂ ಅದಕ್ಕೆ 'ಸಿದ್ಧ'ನಾಗಿರಬೇಕು.

ದೇವರು ಸರ್ವದಾ ಸಿದ್ಧ. ಪಡೆದುಕೊಳ್ಳಬೇಕಾದದ್ದನ್ನೆಲ್ಲ ಪಡೆದುಕೊಂಡಿರುವನು.

ಶ್ರೀ ಕೃಷ್ಣ ಭಗವದ್ಗೀತೆಯಲ್ಲಿ ತನ್ನ 'ಸಿದ್ಧ' ಸ್ವರೂಪದ ಬಗ್ಗೆ ಹೀಗೆ ಸಂದೇಶ ನೀಡಿರುವನು -

**'ನ ಮೇ ಪಾರ್ಥಾಸ್ತಿ ಕರ್ತವ್ಯಂ**
**ತ್ರಿಷು ಲೋಕೇಷು ಕಿಂಚನ |**
**ನಾನಾವಾಪ್ತಮವಾಪ್ತವ್ಯಂ.......'**

ಅರ್ಜುನ, ನಾನು ಯಾವುದನ್ನೂ ಹೊದಬೇಕಾದದ್ದಿಲ್ಲ. ಯಾಕೆಂದರೆ ಈಗಾಗಲೇ ಎಲ್ಲವನ್ನೂ ಹೊಂದಿರುವೆ. ಯಾವುದನ್ನೂ ಮಾಡಬೇಕಾದದ್ದೂ ಇಲ್ಲ.

ಅರ್ಜುನ ಕೇಳಿದ - ಹಾಗಾದರೆ ಸಂಧ್ಯಾವಂದನೆ ಯಾಕೆ ಮಾಡುವಿ ? ಕೃಷ್ಣ ಅಂದ ನಾನು ಮಾಡದಿದ್ದರೆ ನೀನೂ ಮಾಡುವುದಿಲ್ಲ. ನನ್ನನ್ನು ನೋಡಿಯಾದರೂ ನೀನು ಮಾಡಬೇಕು ಎಂಬುದಕ್ಕಾಗಿಯಷ್ಟೇ ನಾನು ಜಪಾದಿಗಳನ್ನು ಮಾಡುತ್ತಿರುವೆ. ಎಂಭತ್ತು ವರ್ಷ ದಾಟಿದ ಮೇಲೆ ಏಕಾದಶಿಯಂದು ಶುದ್ಧ ಉಪವಾಸ ಮಾಡಬೇಕಾದದ್ದಿಲ್ಲ - ಎಂದಿದ್ದರೂ ಕೆಲವು ಮುದುಕರು ಉಪವಾಸ ಮಾಡದಿರುವುದಿಲ್ಲ. ಯಾಕೆಂದರೆ ತನ್ನನ್ನು ನೋಡಿ ಮನೆಯ ಉಳಿದವರೂ ಉಪವಾಸವನ್ನು ಬಿಡದೆ ಇರಲಿ ಎಂದು. ಹೇಗೋ ಹಾಗೆ ಭಗವಂತ ಉಳಿದವರಿಗೆ ಸ್ಫೂರ್ತಿ ನೀಡುವುದಕ್ಕಾಗಿಯಷ್ಟೇ ಕರ್ಮಗಳನ್ನು ನಡೆಸುವನು.

ಆದ್ದರಿಂದ ದೇವರು 'ಸಿದ್ಧ' - ಪ್ರತಿಯೊಂದರಿಂದಲೂ ಪರಿಪೂರ್ಣನಾಗಿರುವ ಅವನು ಯಾವುದನ್ನೂ ಹೊಸತಾಗಿ ಪಡೆಯಬೇಕಾದದ್ದಿಲ್ಲ.

**೮೨೮. ಶತ್ರುಜಿತ್ – ತನ್ನ ಭಕ್ತರು ತಮ್ಮ ಒಳಗಿನ ಹಾಗೂ ಹೊರಗಿನ ಶತ್ರುಗಳನ್ನು ಗೆಲ್ಲುವಂತೆ ಮಾಡುವವನು.**

**ವಿವರಣೆ :** ತಾನು ಸರ್ವದಾ 'ಸಿದ್ಧ' ಎನಿಸಿರುವ ದೇವರು ತನ್ನ ಭಕ್ತರನ್ನೂ 'ಸಿದ್ಧ'ರನ್ನಾಗಿಸುವುದಕ್ಕಾಗಿ ಮೊದಲು 'ಶತ್ರುಜಿತ್' ಆಗಿ ಅನುಗ್ರಹಿಸುವನು. ಶತ್ರುಗಳು ಎರಡು ಪ್ರಕಾರಗಳಲ್ಲಿರುವರು - ಕಾಮಕ್ರೋಧಾದಿ ದೋಷಗಳು ಒಳಗಿನ ಶತ್ರುಗಳು. ಅವುಗಳನ್ನು ನಿಯಂತ್ರಿಸುವ ಅಸುರೀ ಶಕ್ತಿಗಳು ಹೊರಗಿನ ಶತ್ರುಗಳು. ಭಗವಂತ ತನ್ನ ಭಕ್ತರನ್ನು ಕಾಡುತ್ತಿರುವ ಈ ಎರಡು ಬಗೆಯ ಶತ್ರುಗಳನ್ನೂ ಅವರು ನಿಗ್ರಹಿಸಿ, ಗೆಲ್ಲುವಂತೆ ಅವರಿಗೆ ಬೇಕಾದ ಮಾನಸಿಕ ಧೈರ್ಯವನ್ನೂ, ಶಾರೀರಿಕ ಬಲವನ್ನೂ ನೀಡುವನು.

ಹೀಗೆ ಶತ್ರುಗಳನ್ನು ಗೆಲ್ಲುವ ತನ್ನ ಭಕ್ತರು ಕ್ರಮೇಣ 'ಸಿದ್ಧ'ರೆನಿಸುವಂತೆ ಪ್ರೇರಿಸುವನು.

**೭೫೯. ಶತ್ರುತಾಪನಃ – ಮೃತನಾದ ಶತ್ರುವಿನ ಶತ್ರುತ್ವಭಾವವನ್ನು ಪರಿಹರಿಸುವವನು.**

**ವಿವರಣೆ :** ಶತ್ರುತಾ+ಅಪನಃ - ಎಂಬ ಎರಡು ಶಬ್ದಗಳು ಸೇರಿ 'ಶತ್ರುತಾಪನಃ' ಎಂಬ ನಾಮ ರೂಪುಗೊಂಡಿದೆ.

'ಶತ್ರುಜಿತ್' ಎನಿಸುವ ಭಗವಂತನು ತನ್ನ ಭಕ್ತರು ತಮ್ಮ ಶತ್ರುಗಳನ್ನು ಗೆಲ್ಲುವಂತೆ ಮಾಡುವನು. ಹೀಗೆ ಶತ್ರುಗಳನ್ನು ಗೆದ್ದ ಮೇಲೂ, ಅವರನ್ನು ಸಂಹರಿಸಿದ ಮೇಲೂ ಅವರ ಕುರಿತಾದ ಶತ್ರುತ್ವ ಭಾವನೆ, ದ್ವೇಷ - ಮುಂದುವರಿಯುತ್ತಿರುತ್ತದೆ; ಅವನ ಮನೆಯುವರ ಮೇಲೂ, ವಂಶದವರ ಮೇಲೂ ಹರಿಯುತ್ತಿರುತ್ತದೆ. ಹಾಗಾಗಬಾರದು. ಶತ್ರು ಸತ್ತು ಹೋದ ಎಂದರೆ ಅವನ ಕುರಿತಾದ ಶತ್ರುತ್ವವನ್ನು ಅಲ್ಲಿಗೇ ಕೊನೆಗೊಳಿಸುವಂತಾಗಬೇಕು. ಇಲ್ಲದಿದ್ದರೆ ಆ ಶತ್ರುತ್ವದ ಭಾವನೆಯಿಂದಾಗಿ ಜೀವನವಿಡೀ ಅಶಾಂತಿ ಕದಡಿ ಬಿಡುವುದು. ಹೀಗಾಗದಂತೆ ಭಗವಂತ ಶತ್ರುಗಳ ಶತ್ರುತ್ವವನ್ನು ಅಪನಃ - ಅಪನಯತಿ - ದೂರ ಮಾಡುತ್ತಾನೆ. ಏನೋ ಪ್ರಾರಬ್ಧ ಕರ್ಮಕ್ಕನುಗುಣವಾಗಿ ಇದುವರೆಗೆ ಅವನ ವಿರುದ್ಧವಾಗಿ ಶತ್ರುತ್ವವನ್ನು ತಾಳಿದ್ದಾಯಿತು. ಇನ್ನು ಅವನು ಸತ್ತ ಎಂದ ಮೇಲೆ ಆ ಪ್ರಾರಬ್ಧಕರ್ಮ ಇಲ್ಲಿಗೇ ಮುಗಿಯಿತು. ಇನ್ನು ಅವನ ಕುರಿತಾಗಿದ್ದ ಶತ್ರುತ್ವವನ್ನು ಅವನ ಮನೆಯವರಲ್ಲಿ, ವಂಶದವರಲ್ಲಿ ಮುಂದುವರಿಸುವುದರಲ್ಲಿ ಅರ್ಥವಿಲ್ಲ - ಎಂಬ ವಿವೇಚನೆ ಮಾಡುವಂತೆ ಮಾಡಿ, ಶತ್ರುವಿನ ಶತ್ರುತ್ವ ದೂರ ಆಗುವಂತೆ ಮಾಡುವುದರಿಂದ ಭಗವಂತನು 'ಶತ್ರುತಾಪನ' ಎನಿಸಸುವನು.

**೮೩೦. ನ್ಯಗ್ರೋಧಃ – * ಆಲದ ಮರದಂತೆ ಎಲ್ಲರಿಗೆ ಆಶ್ರಯನಾಗಿರುವವನು.**
*** ತನ್ನ ಭಕ್ತರು ಅಧೋಗತಿಗೆ ಹೋಗದಂತೆ ತಡೆಯುವವನು.**

ವಿವರಣೆ: 'ನ್ಯಗ್ರೋಧ' 'ಉದಂಬರ' 'ಅಶ್ವತ್ಥ' ಎಂಬುದಾಗಿ ಮೂರು ಮರಗಳ ಹೆಸರುಗಳು. ಅವು ಮೂಲತಃ ಭಗವಂತನ ಹೆಸರುಗಳಾಗಿದ್ದು, ಭಗವಂತ ಅವುಗಳನ್ನು ಮರಗಳಿಗೆ ನೀಡಿರುವಂತಹದ್ದು.

'ನ್ಯಗ್ರೋಧ' - ಆಲದ ಮರದ ಹೆಸರು. ಆಲದ ಮರದ ಧರ್ಮ ಮುಖ್ಯವಾಗಿ ಭಗವಂತನಲ್ಲಿ ಇರುವುದರಿಂದ ಅವನು ಮುಖ್ಯವಾಗಿ 'ನ್ಯಗ್ರೋಧ'.

ಆಲದ ಮರದ ವೈಶಿಷ್ಟ್ಯವನ್ನು ನೀವು ನೋಡಿದ್ದಿರಬಹುದು. ಉಳಿದ ಮರಗಳು ತಮ್ಮ ಒಂದೊಂದು ಕಾಂಡದೊಂದಿಗೆ ಕೊನೆಗೊಳ್ಳುವವುಗಳಾದರೆ, ಆಲದ ಮರದಲ್ಲಿ ಬೀಳಲುಗಳು ಜೋಲುತ್ತ, ನೆಲಕ್ಕೆ ತಲುಪಿ ಅಲ್ಲಿ ಪುನಃ ಮರ ಬೆಳೆಯುವುದು. ಹೀಗೆಯೇ ಬೇರೆ ಬೇರೆ ಮರದ ಸೇರ್ಪಡೆಯಿಂದ ಮೂಲವಾದ ಮರ ವಿಶಾಲವಾಗುತ್ತ ಹೋಗುವುದು. ತಮಿಳ್ನಾಡಿನಲ್ಲಿ ಒಂದು ಆಲದ ಮರ ಹತ್ತು ಸಾವಿರ ಮಂದಿಗಳು ಅದರ ಕೆಳಗೆ ಕುಳಿತುಕೊಳ್ಳಬಹುದಾದಷ್ಟು ವಿಶಾಲವಾಗಿ ಹರಡಿತ್ತಂತೆ. ಹೀಗೆ ವಿಶಾಲವಾಗಿ ಹರಡಿ ಆದಷ್ಟು ಹೆಚ್ಚಿನ ಪಶುಪಕ್ಷಿಗಳಿಗೆ ಆಶ್ರಯ ಕೊಡುವುದು ನ್ಯಗ್ರೋಧ ಮರದ ಧರ್ಮ. ನ್ಯಗ್ರೋಧಕ್ಕೆ ಈ ಧರ್ಮ ಬಂದಿರುವುದು ಮುಖ್ಯವಾಗಿ ನ್ಯಗ್ರೋಧ ಎನಿಸಿರುವ ಭಗವಂತನಿಂದ. ಸಮಸ್ತ ಚರಾಚರಗಳಿಗೆ ಆಶ್ರಯನಾಗಿರುವ ಅವನಲ್ಲಿ ಯಾರಿಗೂ ಆಶ್ರಯ ಇಲ್ಲವೆಂದಿಲ್ಲ.

ಹೀಗೆ ನ್ಯಗ್ರೋಧ ನಾಮವು ಭಗವಂತನ ಸರ್ವಾಶ್ರಯತ್ವ ಧರ್ಮವನ್ನು ಸೂಚ್ಯವಾಗಿ ತಿಳಿಸಿದರೆ, ಯೋಗದಿಂದ, ಅವಯವ ಶಕ್ತಿಯಿಂದ ಅವನ ಉದ್ಧಾರದ ಮಹಿಮೆಯನ್ನು ತಿಳಿಸುವುದು.

ನ್ಯಕ್+ರೋಧ - ನ್ಯಕ್ - ಕೆಳಗೆ ಬೀಳುವವನನ್ನು ರುಣದ್ಧಿ - ತಡೆಯುವವನು ನ್ಯಗ್ರೋಧ. ದೇವರು ತನ್ನೆಡೆಗೆ ಯಾರೇ ಬಂದರೂ ಅವರನ್ನು ಮೇಲಕ್ಕೆತ್ತುವನು ; ಉದ್ಧಾರ ಮಾಡುವನು. ಶ್ರೀ ವಾದಿರಾಜ ಸ್ವಾಮಿಗಳು ರುಗ್ಮಿಣೀಶವಿಜಯದಲ್ಲಿ ತಿಳಿಸದಂತೆ ತೃಣಾವರ್ತ ರಾಕ್ಷಸ ಬಾಲಕೃಷ್ಣನಲ್ಲಿಗೆ ಬಂದಾಗ ಕೃಷ್ಣ ತನ್ನ ಸ್ವಭಾವಕ್ಕನುಗುಣವಾಗಿ ಅವನ ಉದ್ಧಾರ ನಡೆಸುವನು. ಅಂದರೆ ಮೇಲಕ್ಕೆ ಎಸೆಯುವನು. ಆದರೆ ಅಸುರನಾದ ತೃಣಾವರ್ತನ ಸ್ವಭಾವ ಕೆಳಗೆ ಬೀಳುವುದು. ಆದುದರಿಂದ ಅವನು ತನ್ನ ಸ್ವಭಾವಕ್ಕನುಗುಣವಾಗಿ ಕೆಳಗೆ ಬಿದ್ದು ಸಾಯುವನು.

ಹೀಗೆ ಭಗವಂತನು ತನ್ನ ಭಕ್ತರು ಕೆಳಗೆ ಹೋಗದಂತೆ ತಡೆಯುವನು -

'ನ್ಯಕ್ ರುಣದ್ಧಿ' - ಹಾಗೆಯೇ ಉದ್ಧಾರ ಮಾಡುವನು. ಆದ್ದರಿಂದ 'ನ್ಯಗ್ರೋಧ' ಎನಿಸುವನು.

**೮೩೧. ಉದುಂಬರಃ – ಉತ್ಕೃಷ್ಟ ವಸ್ತುಗಳನ್ನು ಉತ್ಕೃಷ್ಟವಾಗಿ ದಾನ ಮಾಡುವವರನ್ನು ಸಮೃದ್ಧರನ್ನಾಗಿಸುವವನು.**

**ವಿವರಣೆ :** ಉದ + ಉ - ಉದು. ಉ ಎಂದರೆ ಉತ್ಕೃಷ್ಟವಾದ ವಸ್ತುಗಳನ್ನು ದ - ದದಾತಿ - ನೀಡುವವನು. ಉತ್ಕೃಷ್ಟ ವಸ್ತುಗಳನ್ನು ನೀಡುವವನೂ ಒಳ್ಳೆಯ ಭಾವನೆಯಿಂದ ನೀಡಬೇಕಾದದ್ದಿಲ್ಲ. ಗೋದಾನದಲ್ಲಿ ತೊಡಗಿದವನೊಬ್ಬ ಹಿರಿಯರ ಅಣತಿ ಪ್ರಕಾರ 'ಆಕಳು ದಾನ ಮಾಡಬೇಕಲ್ಲ !' - ಎಂದು ಮನಸ್ಸಿಲ್ಲದ ಮನಸ್ಸಿನಿಂದ ದಾನ ಸ್ವೀಕರಿಸುವವನನ್ನು ಕಡೆಗಣಿಸುತ್ತ ನೀಡಬಹುದು. ಹಾಗಾಗಬಾರದು. ಉತ್ಕೃಷ್ಟ ವಸ್ತುವನ್ನು ಉತ್ಕೃಷ್ಟವಾಗಿಯೇ ದಾನ ಮಾಡಬೇಕು. ಹಾಗೆ ದಾನ ಮಾಡುವವನು 'ಉದು' ಎನಿಸುವನು. ಉದ - ಎಂದರೆ ಉತ್ಕೃಷ್ಟ ವಸ್ತುಗಳನ್ನು ದಾನ ಮಾಡುವವನು. ದಕಾರದ ಅನಂತರ ಇರುವ 'ಉಕಾರ' ದಾನ ಮಾಡುವಿಕೆಯಲ್ಲಿಯ ಉತ್ಕೃಷ್ಟತೆಯನ್ನು ತಿಳಿಸುವುದು. ಆದ್ದರಿಂದ ಉತ್ಕೃಷ್ಟವಾದ ವಸ್ತುಗಳನ್ನು ಉತ್ಕೃಷ್ಟವಾಗಿ ದಾನ ಮಾಡುವವನು 'ಉದು' ಎನಿಸುವನು. ಅಂತಹವನನ್ನೂ ಸಮೃದ್ಧನನ್ನಾಗಿ ಮಾಡುವ ಭಗವಂತ 'ಉದುಂಬರ' 'ಬೃಹಿ ವೃದ್ಧೌ' - ಎಂಬ ಕ್ರಿಯಾಪದದಿಂದ ರೂಪುಗೊಂಡ ಬರ ಶಬ್ದವು ವೃದ್ಧಿಯನ್ನು ತಿಳಿಸುವುದು.

ಒಳ್ಳೆಯ ವಸ್ತುಗಳನ್ನು ಚೆನ್ನಾಗಿ ದಾನ ಮಾಡುವ ವ್ಯಕ್ತಿಗಳಿಗೆ ಭಗವಂತನು ಇಲ್ಲಿಯೂ ಸಮೃದ್ಧಿಯನ್ನು ನೀಡುವನು ; ಮೋಕ್ಷಾವಸ್ಥೆಯಲ್ಲೂ ಅವರು ತಮ್ಮ ಆನಂದವನ್ನು ಪೂರ್ಣವಾಗಿ ಅನುಭವಿಸುವಂತೆ ಮಾಡುವನು. ಆದುದರಿಂದ ಭಗವಂತ 'ಉದುಂಬರ'.

**೮೩೨. ಅಶ್ವತ್ಥಃ – * ಅಶ್ವತ್ಥ ವೃಕ್ಷದಲ್ಲಿ ಕುದುರೆಯ ಆಕಾರದಲ್ಲಿ ಇರುವವನು.**
*** ತಿಮ್ಮಾಂಡಿಗಳಲ್ಲಿ, ವಿಷಯಲಂಪಟರಲ್ಲಿ ಸನ್ನಿಹಿತನಾಗದವನು.**

**ವಿವರಣೆ :** ಅಶ್ವತ್ಥಃ ಮರದ ಹೆಸರು ಮುಖ್ಯವಾಗಿ ಭಗವಂತನಿಗೆ ಸೇರಿದುದು. 'ಅಶ್ವತ್ಥಃ ಸರ್ವವೃಕ್ಷಾಣಾಂ....' - ಎಂದು ಗೀತಾಚಾರ್ಯನು ತಾನು ಅಶ್ವತ್ಥ ವೃಕ್ಷದಲ್ಲಿ ಅಶ್ವತ್ಥ ಎಂಬ ವಿಭೂತಿ ರೂಪದಿಂದ ಇರುವುದಾಗಿ ತಿಳಿಸಿರುವನು. ಆ ವಿಭೂತಿ ರೂಪಕ್ಕೆ ಯಾಕೆ ಅಶ್ವತ್ಥ ಎಂಬ ಹೆಸರು ? ಅದು ಕುದುರೆಯಂತೆ ಇದೆ - ಅಶ್ವವತ್ ತಿಷ್ಠತಿ - ಆದುದರಿಂದ ಅಶ್ವತ್ಥ. ಅಶ್ವತ್ಥ ವೃಕ್ಷದಲ್ಲಿ ಭಗವಂತನು ಕುದುರೆಯ ಆಕಾರದಲ್ಲಿ ಇರುವನು. ಆದುದರಿಂದಲೇ ಅದರಲ್ಲಿ 'ಅಗ್ನಿ' ವಿಶೇಷವಾಗಿ

ಸನ್ನಿಹಿತವಾಗಿದೆ.

ಅಶ್ವತ್ಥ ಎಂಬ ನಾಮದಿಂದ ಮತ್ತೊಂದು ಅರ್ಥ ಹೊರಡಿಸಬಹುದು. ಅಶು+ಅತ್ಥ - ಅಶ್ವತ್ಥ. 'ಅಶು ಭೋಜನೇ' - ಎಂಬ ಕ್ರಿಯಾಪದದಿಂದ ರೂಪುಗೊಂಡ ಅಶು ಶಬ್ದಕ್ಕೆ ತಿಮ್ಮಾಂಡಿಗಳು ಎಂಬ ಅರ್ಥ. 'ಆಹಾರ ನಿದ್ರಾಭಯ ಮೈಥುನಾನಿ ಸಾಮಾನ್ಯಮೇತತ್ ಶ್ವಭಿರ್ನರಾಣಾಂ.....' (ಪಶುಭಿರ್ನರಾಣಾಂ ....... ಅಲ್ಲ) ಎಂದಿರುವಂತೆ ನಾಯಿಗಳಂತೆ ಆಹಾರಾದಿ ನಾಲ್ಕು ಚಟುವಟಿಕೆಗಳಲ್ಲಿಯೇ ಬಿದ್ದಿರುವ, ವಿಷಯ ಲಂಪಟರು - ಅಶುಗಳು. ಅಂತಹವರಲ್ಲಿ ನ ತಿಷ್ಠತೀತಿ ಅಶ್ವತ್ಥಃ ಭಗವಂತನ ಸನ್ನಿಧಾನ ಇಲ್ಲ - 'ಅಶ್ವತ್ಥ'. ವಿಷಯಲಂಪಟರಲ್ಲಿ ಯಾರ ಸನ್ನಿಧಾನ ಇಲ್ಲವೋ ಅಂತಹವನು.

**೮೩೩. ಚಾಣೂರಾಂಧ್ರನಿಷೂದನಃ – ಚಾಣೂರನೇ ಮುಂತಾದ ಭಗವಂತನ ಬಗ್ಗೆ ಕುರುಡರಾದವರ ಸುಖವನ್ನು ನಾಶಗೈಯುವವನು.**

ವಿವರಣೆ: ಅಂಧ ಎಂದರೆ ಕುರುಡರು. ಹೊರಗಿನ ಕಣ್ಣು ಇಲ್ಲದವರಲ್ಲ. ಹೊರಗಿನ ಕಣ್ಣುಗಳಿದ್ದೂ, ಒಳಕಣ್ಣು ಇಲ್ಲದ ಪ್ರಯುಕ್ತ ದೇವರನ್ನು ಕಾಣದವರು ಅಂಧರು ; ಕುರುಡರು.

ದೇವರನ್ನು ಕಾಣದವರೇ ಕುರುಡರು.
ದೇವರನ್ನು ಪಾಡದವರೇ ಮೂಕರು
ದೇವರನ್ನು ಕೇಳದವರೇ ಕಿವುಡರು
ದೇವರಲ್ಲಿಗೆ ಹೋಗದವರೇ ಹೆಳವರು.

ಎಂದೆಲ್ಲ ಶಾಸ್ತ್ರದಲ್ಲಿ ತಿಳಿಸಲಾಗಿದೆ.

**'ಆವ ರೋಗವು ಎನಗೆ ದೇವ ಧನ್ವಂತ್ರಿ.....'** - ಎಂಬ ಹಾಡಿನಲ್ಲಿ 'ಹರಿಮೂರ್ತಿಗಳು ಕಾಣಿಸವು ಎನ್ನ ಕಂಗಳಿಗೆ' - ಎಂದು ದೇವರನ್ನು ಕಾಣದಿರುವುದನ್ನೇ ಕುರುಡುತನವನ್ನಾಗಿ ಹೇಳಲಾಗಿದೆ.

ಇಂತಹ 'ಅಂಧ'ರ, ರ - ಎಂದರೆ ರತಿ, ರಮಣ, ಸುಖ. ಅಂಧರ - ಅಂಧ್ರ. ಅದನ್ನು ನಿಷೂದಯತೀತಿ ನಿಷೂದನಃ ಪೂರ್ಣವಾಗಿ ನಾಶಗೈಯುವವನು.

ಯಾವ ಅಂಧರು ? 'ಚಾಣೂರಾಂಧ್ರ' ಚಾಣೂರನೇ ಮುಂತಾದ ಪೂತನೆಯಿಂದ ಪ್ರಾರಂಭಿಸಿ, ಶಕಟಾಸುರ, ತೃಣಾವರ್ತ - ಮುಂತಾದವರೆಲ್ಲ ಭಗವಂತನ ಬಗ್ಗೆ ಅಂಧರಾದವರು. ಅವರ ಸುಖವನ್ನು ನಾಶಪಡಿಸುವುದರಿಂದ ಭಗವಂತ 'ಚಾಣೂರಾಂಧ್ರ ನಿಷೂದನಃ'

**ಸಹಸ್ರಾರ್ಚಿಃ ಸಪ್ತಜಿಹ್ವಃ ಸಪ್ತೈಧಾಃ ಸಪ್ತವಾಹನಃ |**
**ಅಮೂರ್ತಿರನಘೋಽಚಿಂತ್ಯೋ ಭಯಕೃದ್‌ಭಯನಾಶನಃ ||೮೯||**

**೮೩೪. ಸಹಸ್ರಾರ್ಚಿಃ – ತಿಳುವಳಿಕೆಗಾಗಿ ಸಮೂಹ ಸೇರಿದವರಿಂದ ಪೂಜಿಸಲ್ಪಡುವವನು.**

**ವಿವರಣೆ :** ಸಹ+ಸ್ರ+ಅರ್ಚಿಃ - ಎಂಬ ಮೂರು ಶಬ್ದಗಳು ಸೇರಿ 'ಸಹಸ್ರಾರ್ಚಿಃ' ಎಂದಾಗಿದೆ. 'ಸಹ' ಎಂದರೆ ಅರ್ಥ ಗೊತ್ತು 'ನೀವು ಬರುವಾಗ ಅವನನ್ನೂ ಸಹ ಕರೆತನ್ನಿ' ಮುಂತಾದ ಮಾತುಗಳಲ್ಲಿ ಕೂಡಿಕೊಂಡು ಎಂಬ ಅರ್ಥದಲ್ಲಿ ಸಹ ಶಬ್ದವನ್ನು ಬಳಸಲಾಗುವುದು. ಇಲ್ಲೂ ಸಹ ಶಬ್ದಕ್ಕೆ ಅದೇ ಅರ್ಥ. ಸಹ - ಒಟ್ಟಿಗೆ, ಸ್ರ - 'ಸೃ ಗತೌ' ಕ್ರಿಯಾಪದದಿಂದ ರೂಪುಗೊಂಡ 'ಸ್ರ' ಶಬ್ದ ತಿಳುವಳಿಕೆ ಎಂಬ ಅರ್ಥವನ್ನು ನೀಡುವುದು. ಆದ್ದರಿಂದ ಭಗವಂತನ ತಿಳುವಳಿಕೆಗಾಗಿ ಒಟ್ಟು ಸೇರಿದವರು ಸಹಸ್ರ. ಅಂತಹವರಿಂದ ಚೆನ್ನಾಗಿ ಅರ್ಚಿಸಲ್ಪಡುವವನು ; ಪೂಜಿಸಲ್ಪಡುವವನು 'ಸಹಸ್ರಾರ್ಚಿಃ'

ಒಬ್ಬನೇ ಮಂಗಳಾರತಿ ಎತ್ತಿ ಮಾಡುವ ಪೂಜೆ ಒಂದು ಬಗೆಯದ್ದಾದರೆ ಹತ್ತಾರು ಜನ ಸೇರಿ ಭಗವಂತನ ಬಗ್ಗೆ ಚಿಂತನೆ ನಡೆಸುವುದು ಮತ್ತೊಂದು ಬಗೆಯ ಮುಖ್ಯಪೂಜೆ.

**'ಹಿತ್ವಾಽಽತ್ಮಪಾತಂ ಗೃಹಮಂಧಕೂಪಂ**
**ವನಂ ಗತೋ ಯುದ್ಧರಿಮಾಶ್ರಯೇತ'**

ಪ್ರಹ್ಲಾದ ತನ್ನ ತಂದೆ ಹಿರಣ್ಯಕಶಿಪುಗೆ ಮನೆಯನ್ನು ಬಿಟ್ಟು 'ವನ'ವನ್ನು ಆಶ್ರಯಿಸಲು ತಿಳಿಸುವನು. ಅಲ್ಲಿ ವನ ಎಂದರೆ ಕಾಡು ಅಲ್ಲ. ಮತ್ತೆ 'ವನ ಸಂಭಕ್ತೌ' ಕ್ರಿಯಾಪದದಿಂದ ನಿಷ್ಪನ್ನವಾದ ವನಶಬ್ದಕ್ಕೆ ಸಜ್ಜನಸಮುದಾಯ ಎಂದೇ ಅರ್ಥ. ಸಜ್ಜನರ ಸಮೂಹವನ್ನು ಸೇರಿ ಅಲ್ಲಿ ಶ್ರೀಹರಿಯ ಚಿಂತನೆ ನಡೆಸಬೇಕು. ಅದೇ ಅವನ ಪೂಜೆ.

ಏಕ ವ್ಯಕ್ತಿಯ ಪೂಜೆಗಿಂತ ಈ ಸಾಮೂಹಿಕ ಪೂಜೆಯೇ ಶ್ರೇಷ್ಠ. ಇದರಲ್ಲಿ ಶ್ರೋತೃಗಳೂ, ವಕ್ತೃಗಳೂ ಸೇರಿ ಪೂಜೆ ನಡೆಯುವುದು. ಶ್ರೋತೃಗಳಿಗಿಂತ ವಕ್ತೃಗಳ ಪೂಜೆಯೇ ಶ್ರೇಷ್ಠ. ಯಾಕೆಂದರೆ ವಕ್ತೃಗಳು ತಾವು ಪ್ರವಚನ ನಡೆಸುವ ಅವಧಿಯಲ್ಲಿ ಪೂರ್ಣವಾಗಿ ಇಲ್ಲಿಯೇ ಮನಸ್ಸನ್ನು ಇಟ್ಟಿದ್ದಿರಬೇಕು. ಇಲ್ಲದಿದ್ದರೆ 'ಕೀಚಕ ದ್ರೌಪದಿಯನ್ನು ಬೇಡಿದನು' - ಎನ್ನುವ ಬದಲು 'ದ್ರೌಪದಿ ಕೀಚಕನನ್ನು ಬೇಡಿದನು'

ಎನ್ನುವ ಮಾತು ಹೊರಹೊಮ್ಮೀತು ! ಶ್ರೋತೃಗಳ ಮನಸ್ಸಾದರೂ ಇಲ್ಲಿಯೇ ಇರಬೇಕಾದಿದ್ದಿಲ್ಲ. ಆದ್ದರಿಂದ ವಕ್ತೃಗಳ ಪೂಜೆಯೇ ಶ್ರೇಷ್ಠ. ಅಂತೂ ವಕ್ತೃಗಳೂ, ಶ್ರೋತೃಗಳೂ ಭಗವಂತನ ತಿಳುವಳಿಕೆಗಾಗಿ ಸೇರಿದ್ದು ಅವರಿಂದ ಅರ್ಚಿಸಲ್ಪಡುವವನೇ 'ಸಹಸ್ರಾರ್ಚಿಃ'

**೮೩೫. ಸಪ್ತಜಿಹ್ವಃ – ತಿಳಿದವರನ್ನೇ ನಾಲಗೆಯನ್ನಾಗಿ ಮಾಡಿಕೊಂಡಿರುವವನು.**

**ವಿವರಣೆ :** ಸಪ್ತ ಎಂದರೆ ಏಳು ಎಂಬ ಅರ್ಥ ಪ್ರಸಿದ್ಧ. ಆದರೆ ಇಲ್ಲಿ ಸಪ್ತ ಎಂದರೆ 'ಪ್ತ'ಗಳಿಂದ ಕೂಡಿದವರು ಎಂಬ ಅರ್ಥ. ಸಂಸ್ಕೃತದಲ್ಲಿ 'ಪ್ತ' ಎಂದರೆ ಜಟೆ. 'ಅಪಿ ಸಪ್ತತಯಾ ವಿರಾಜಿತಾನ್.......' ಎಂಬುದಾಗಿ ಮಧ್ವವಿಜಯದಲ್ಲಿ ಬದರಿಯ ಋಷಿಗಳನ್ನು ವರ್ಣಿಸುವಾಗ ಜಟೆಯಿಂದ ಕೂಡಿದವರೆಂಬುದನ್ನು 'ಸಪ್ತತಯಾ ವಿರಾಜಿತಾನ್.....' - ಎಂಬ ಶಬ್ದಗಳಿಂದ ತಿಳಿಸಲಾಗಿದೆ.

ಆದುದರಿಂದ ಜಟೆಗಳಿಂದ ಕೂಡಿದ ಋಷಿಗಳು ; ಜ್ಞಾನಿಗಳು ಜಿಹ್ವೆಯಾಗಿ, ನಾಲಗೆಯಾಗಿ ಉಳ್ಳವನೇ 'ಸಪ್ತಜಿಹ್ವ'.

ಅಗ್ನಿಯಲ್ಲಿ ಆಹುತಿಯಾಗಿ ಕೊಟ್ಟದ್ದನ್ನು ಸ್ವೀಕರಿಸುವ ಭಗವಂತನಿಗೆ ಅಗ್ನಿ ಅಂದರೆ ಅಗ್ನಿಯ ಜ್ವಾಲೆ ನಾಲಗೆಯಂತೆ ಎಂಬುದು ಪ್ರಸಿದ್ಧ. ಅಗ್ನಿಯಂತೆಯೇ ಜ್ಞಾನಿಗಳೂ ಭಗವಂತನಿಗೆ ನಾಲಗೆಯಂತೆ. ಜ್ಞಾನಿಗಳಿಗೆ ಕೊಟ್ಟರೂ ಅವರಲ್ಲಿ ವಿಶೇಷವಾಗಿ ಸನ್ನಿಹಿತನಾಗಿರುವ ದೇವರು ಅದನ್ನು ಸ್ವೀಕರಿಸುವನು.

ಅಗ್ನಿಯ ಮಾಧ್ಯಮದಲ್ಲಿ ಕೊಟ್ಟರೆ ಅದು ಸಂತೋಷದಿಂದ ಸ್ವೀಕರಿಸಲ್ಪಟ್ಟಿತೋ ಇಲ್ಲವೋ ತಿಳಿಯುವುದಿಲ್ಲ. ಆದರೆ ಜ್ಞಾನಿಗಳ ಮಾಧ್ಯಮದಲ್ಲಿ ಕೊಟ್ಟಾಗ, ಜ್ಞಾನಿಗಳು ಅದಕ್ಕೆ ಸ್ಪಂದಿಸುವುದರಿಂದ ಅದನ್ನು ಸ್ವೀಕರಿಸಿ ತೃಪ್ತಿ ಪಡುವುದನ್ನು ಕಾಣಬಹುದಾಗಿದೆ. ಆದುದರಿಂದ ಅಗ್ನಿಮಾಧ್ಯಮಗಿಂತಲೂ ಜ್ಞಾನಿಮಾಧ್ಯಮವೇ ಶ್ರೇಷ್ಠ.

ಅದಕ್ಕಾಗಿಯೇ ಭೀಷ್ಮರು ಸ್ತುತಿಸುವರು - ನೀನು ಬರೇ 'ಅಗ್ನಿಜಿಹ್ವ' ಅಲ್ಲ, ಮತ್ತೆ 'ಸಪ್ತಜಿಹ್ವ' ಜ್ಞಾನಿಗಳನ್ನು ನಿನ್ನ ನಾಲಗೆಯನ್ನಾಗಿ ಮಾಡಿಕೊಂಡಿರುವವನು.

**೮೩೬. ಸಪ್ತೈಧಾಃ – ಏಳು ಬಗೆಯ ಇಂದ್ರಿಯಗಳಿಂದ ಉಂಟಾಗುವ ಏಳು ಬಗೆಯ ಜ್ಞಾನಾಗ್ನಿಗಳಿಗೆ ಬೇಕಾದ ಏಳು ಬಗೆಯ ಕಟ್ಟಿಗೆಗಳನ್ನು ಒದಗಿಸಿ ಕೊಡುವವನು.**

**ವಿವರಣೆ :** ಸಪ್ತ ಎಂದರೆ ಏಳು. ಏಧಾಂಸಿ ಎಂದರೆ ಕಟ್ಟಿಗೆ. ಅಗ್ನಿಃ ಏಧತೇ ಏಭಿರಿತಿ

ಅಗ್ನಿಯನ್ನು ಹೆಚ್ಚಿಸುವ ಪ್ರಯುಕ್ತ ಕಟ್ಟಿಗೆ ‘ಏಧಃ’ ಎನಿಸಿದೆ. ‘ಯಥೈಧಾಂಸಿ ಸಮಿದ್ಧೋಽಗ್ನಿಃ..........’ ಎಂಬಲ್ಲಿ ಕಟ್ಟಿಗೆಯನ್ನು ‘ಏಧಃ’ ಶಬ್ದದಿಂದಲೇ ಉಲ್ಲೇಖಿಸಲಾಗಿದೆ. ಏಳು ಬಗೆಯ ಬೆಂಕಿಗಳಿಗೆ ಏಳು ಬಗೆಯ ಕಟ್ಟಿಗೆಗಳನ್ನು ಒದಗಿಸಿ ಕೊಡುವವನೇ - ‘ಸಪ್ತೈಧಾಃ’

ಏಳು ಬಗೆಯ ಬೆಂಕಿಗಳಾದರೂ ಯಾವುವು ?

ಅವುಗಳಿಗೆ ಬೇಕಾದ ಏಳು ಬಗೆಯ ಕಟ್ಟಿಗೆಗಳಾದರೂ ಯಾವುವು ?

ಕಣ್ಣು, ಕಿವಿ,ಮೂಗು, ಬಾಯಿ, ತ್ವಗಿಂದ್ರಿಯ, ಮನಸ್ಸು ಹಾಗೂ ಬುದ್ಧಿ - ಈ ಏಳು ಇಂದ್ರಿಯಗಳಿಂದ ಉಂಟಾಗುವ ರೂಪ ಜ್ಞಾನ, ಶಬ್ದ ಜ್ಞಾನ. ಗಂಧಜ್ಞಾನ, ರಸಜ್ಞಾನ, ಸ್ಪರ್ಶಜ್ಞಾನ, ಸಂಶಯ ಹಾಗೂ ನಿಶ್ಚಯ ಈ ಏಳು ಬಗೆಯ ಜ್ಞಾನಗಳೇ ಏಳು ಬಗೆಯ ಬೆಂಕಿಗಳು.

ಇವುಗಳಿಗೆ ಕಟ್ಟಿಗೆ ಎನಿಸುವವೂ ಏಳು ವಿಧಗಳಾಗಿವೆ. ರೂಪ, ಶಬ್ದ, ಗಂಧ, ರಸ, ಸ್ಪರ್ಶ, ಸಂಶಯ ಹಾಗೂ ನಿಶ್ಚಯಗಳ ವಿಷಯಗಳು ಇವೇ ಏಳು ಬಗೆಯ ಬೆಂಕಿ ಉರಿಯಲು ಬೇಕಾದ ಏಳು ವಿಧದ ಕಟ್ಟಿಗೆ.

ಈ ಏಳು ಬಗೆಯ ಕಟ್ಟಿಗೆಯನ್ನು ಸೃಷ್ಟಿ ಮಾಡಿ, ಕಣ್ಣಿನಿಂದ ರೂಪದ ಜ್ಞಾನವೂ, ಕಿವಿಯಿಂದ ಶಬ್ದದ ಜ್ಞಾನವೂ, ಬಾಯಿಯಿಂದ ರಸಜ್ಞಾನವೂ, ಮೂಗಿನಿಂದ ಗಂಧ ಜ್ಞಾನವೂ, ತ್ವಗಿಂದ್ರಿಯದಿಂದ ಸ್ಪರ್ಶ ಜ್ಞಾನವೂ, ಮನಸ್ಸಿನಿಂದ ಸಂಶಯವೂ, ಬುದ್ಧಿಯಿಂದ ನಿಶ್ಚಯವೂ ಬರುವಂತೆ ಮಾಡಿರುವವನು ಭಗವಂತನೇ. ಆದುದರಿಂದ ಅವನೇ ‘ಸಪ್ತೈಧಾಃ’ - ರೂಪ, ಸ್ಪರ್ಶ ಇತ್ಯಾದಿ ಏಳು ಬಗೆಯ ಕಟ್ಟಿಗೆಗಳನ್ನು ಏಳು ಬಗೆಯ ಬೆಂಕಿಗೆ ಒದಗಿಸಿಕೊಡುವವನು.

**೮೩೭. ಸಪ್ತವಾಹನಃ – ಋಗ್ವೇದಾದಿ ಏಳು ಗಾಡಿಗಳಿಂದ ಒಯ್ಯಲ್ಪಡುವವನು.**

ವಿವರಣೆ : ಸಪ್ತ ಏಳು. ವಾಹ - ವಾಹನಗಳು. ನ - ವಾಹನಗಳಿಂದ ಒಯ್ಯಲ್ಪಡುವವನು.

ಏಳು ವಾಹನಗಳು ಯಾವುವು ?

ಅವುಗಳನ್ನು ಒಯ್ಯುವ ಚಾಲಕ ಯಾರು ?

ಅವುಗಳಿಂದ ಒಯ್ಯಲ್ಪಡುವವನು ಯಾರು ?

ಎಲ್ಲಿಗೆ ಒಯ್ಯಲ್ಪಡುವುದು ?

ಕೃಷ್ಣ ಕೇಳಿದ ಪ್ರಶ್ನೆಗಳಿಗೆ ಭೀಷ್ಮರು ಉತ್ತರಿಸುತ್ತಾರೆ - ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವವೇದ, ಮೂಲ ರಾಮಾಯಣ, ಮಹಾಭಾರತ

ಹಾಗೂ ಪಂಚರಾತ್ರ - ಈ ಏಳು ವಿದ್ಯೆಗಳೇ ಏಳು ವಾಹನಗಳು.

ಗುರುವೇ ಆ ವಾಹನಗಳನ್ನು ಒಯ್ಯುವ ಚಾಲಕ.

ಆ ವಾಹನಗಳಲ್ಲಿ ಕುಳಿತವನೇ ಅವುಗಳಿಂದ ಒಯ್ಯಲ್ಪಡುವವನು.

ಭೀಷ್ಮರು ಕೃಷ್ಣನಲ್ಲಿ ಹೇಳ್ತಾರೆ - ಆ ಏಳೂ ವಾಹನಗಳಲ್ಲಿ ಕುಳಿತವನು ನೀನೇ. ಆದ್ದರಿಂದ ಕೊಂಡೊಯ್ಯಲ್ಪಡುವವನೂ ನೀನೇ. ಒಬ್ಬ ಮಾಲಿಕನಿಗೆ ಏಳು ಕಾರುಗಳಿತ್ತೆಂದರೆ ಅವನು ಏಳು ವಾಹನಗಳಲ್ಲೂ ಏಕ ಕಾಲದಲ್ಲಿ ಕುಳಿತುಕೊಳ್ಳಲಾರ. ಯಾವುದಾದರೊಂದು ವಾಹನದಲ್ಲೂ ಅದರ ಯಾವುದೋ ಒಂದು ಆಸನದಲ್ಲಷ್ಟೇ ಕುಳಿತುಕೊಳ್ಳಬಲ್ಲ. ಆದರೆ ದೇವರು ಏಳೂ ವಾಹನಗಳಲ್ಲಿ ಏಕ ಕಾಲದಲ್ಲಿ ಕುಳಿತುಕೊಳ್ಳುವನು. ಆ ಏಳು ವಾಹನಗಳಲ್ಲೂ ಎಲ್ಲೆಡೆ ಕುಳಿತುಕೊಳ್ಳುವನೇ ಹೊರತು ಒಂದೆಡೆ ಅಲ್ಲ. ಋಗ್ವೇದಾದಿಗಳಲ್ಲಿ ದೇವರು ಹಾಗೆ ಕುಳಿತಿರುವುದರಿಂದಲೇ ಋಗ್ವೇದಾದಿಗಳು ವಾಹನಗಳೆನಿಸಿವೆ. ನಮ್ಮ ಶರೀರದಲ್ಲಿ ನಾವು ಕುಳಿತಿರುವುದರಿಂದ ಶರೀರವು ಹೇಗೆ ರಥ ಎನಿಸುವುದೋ ಹಾಗೆ. ಹೀಗೆ ಏಳು ರಥಗಳಲ್ಲೂ ಕುಳಿತು ಗುರುಗಳ ಮೂಲಕ ಭಗವಂತನು ಶಿಷ್ಯನಲ್ಲಿಗೆ ಕೊಂಡೊಯ್ಯಲ್ಪಡುವನು. ಸ್ವಲ್ಪ ದೂರದ ಶಾಲೆಯಾದರೂ ಅಲ್ಲಿಗೆ ಹೋಗಲು ಹೇಗೆ ಈಗಿನ ಮಕ್ಕಳಿಗೆ ವಾಹನ ಬೇಕೇ ಬೇಕೋ ಹಾಗೆ ದೇವರು ಸ್ವಲ್ಪ ದೂರದಲ್ಲೇ ಇರುವ ಶಿಷ್ಯನೆಡೆಗೆ ಸಾಗಬೇಕೆಂದರೂ 'ಸಪ್ತವಾಹ'ಗಳು ಬೇಕೇ ಬೇಕು. **'.......ವೇದಾ ಹ್ಯೇವೈನಂ ವೇದಯಂತಿ'** ಭಗವಂತನ ತಿಳುವಳಿಕೆಗೆ ವೇದಗಳು ಬೇಕೇ ಬೇಕು. ಗುರುಗಳು ವೇದಾದಿ ಏಳು ವಿದ್ಯೆಗಳ ಮೂಲಕವೇ ಶಿಷ್ಯನಿಗೆ ದೇವರ ಸರಿಯಾದ ಪರಿಚಯವನ್ನು ನೀಡಲು ಸಾಧ್ಯ ಎಂಬುದೇ 'ಸಪ್ತವಾಹನ' ನಾಮದ ಆಂತರ್ಯ.

**೮೩೮. ಅಮೂರ್ತಿಃ – ದೋಷರಹಿತವಾದ ಆನಂದ ಉಳ್ಳವನು.**

**ವಿವರಣೆ :** ಮೂರ ಅಂದರೆ ದೋಷ., 'ಮೂರಿ ಬರ್ಪುಂಡು' - ಎಂದು ಶೂದ್ರ ತುಳುವಿನಲ್ಲಿ ದುರ್ವಾಸನೆ ಎಂಬ ಅರ್ಥದಲ್ಲಿ ಮೂರಿ ಶಬ್ದವನ್ನು ಪ್ರಯೋಗಿಸಲಾಗುವುದು. ಆದುದರಿಂದ ಮೂರ ಎಂದರೆ ದುರ್ವಾಸನೆ, ದೋಷ. ಅಮೂರ ಎಂದರೆ ದೋಷರಹಿತವಾದ ತಿ - ಎಂದರೆ ಸುಖ. 'ಆನಂದಂ ತೀತಿ ವೈ ವದೇತ್' - ಅಮೂರವಾದ ದೋಷ ದೂರವಾದ ತಿ, - ಆನಂದ ಉಳ್ಳವನೇ 'ಅಮೂರ್ತಿ'.

ಆನಂದದ ದೋಷಗಳಾದರೂ ಮೂರು-

* ಆನಂದದಲ್ಲಿ ದುಃಖ ಸೇರಿಕೊಂಡಿರುವುದು ಒಂದು ಬಗೆಯ ದೋಷ.

* ಆದಿ ಹಾಗೂ ಅಂತ್ಯವನ್ನು ಹೊಂದಿರುವುದು ಆನಂದದ ಮತ್ತೊಂದು ಬಗೆಯ ದೋಷ.
* ತನಗಿಂತಲೂ ಅತಿಶಯವಾದ ಮತ್ತೊಂದು ಆನಂದ ಇದೆ ಎಂಬುದು ಆನಂದದ ಇನ್ನೊಂದು ಬಗೆಯ ದೋಷ.

ಭಗವಂತನ ಆನಂದದಲ್ಲಿ ಈ ಮೂರು ಬಗೆಯ ದೋಷಗಳೂ ಇಲ್ಲ. ಭಗವಂತನ ಆನಂದ ದುಃಖದ ಲವಲೇಶಕ್ಕೂ ಒಳಗಾಗದದ್ದು. ಅಪರಿಮಿತವಾದ ಭಗವಂತನ ಆನಂದಕ್ಕೆ ಆದಿಯೂ ಇಲ್ಲ ಅಂತ್ಯವೂ ಇಲ್ಲ. ಸರ್ವಾತಿಶಯಿತವಾದ ಭಗವಂತನ ಆನಂದ ಅತ್ಯಂತ ಎತ್ತರದಲ್ಲಿದ್ದು ಅದನ್ನು ಮೀರುವ ಮತ್ತೊಂದು ಆನಂದ ಇಲ್ಲವೇ ಇಲ್ಲ. 'ಕಾಂತ' - ಎಂದೇ ಅದಕ್ಕಾಗಿ ಕರೆಸಿಕೊಳ್ಳಲ್ಪಡುವವನು ಅವನು.

ಹೀಗೆ ಮೂರು ದೋಷಗಳಿಂದಲೂ ದೂರವಾದ ಆನಂದವನ್ನು ಹೊಂದಿರುವುದರಿಂದಲೇ ಭಗವಂತ 'ಅಮೂರ್ತಿ'.

**೭೩೯. ಅನಘಃ – ಯಾವುದೇ ಬಗೆಯ ಪಾಪದಿಂದ ದೂರನಾಗಿರುವವನು.**

**ವಿವರಣೆ :** 'ಅಮೂರ್ತಿ' - ಎಂಬ ನಾಮದಿಂದ ಭಗವಂತನ ಸುಖದಲ್ಲಿ ದುಃಖದ ಮಿಶ್ರಣ ಇಲ್ಲ ; ಆದಿ ಅಂತ್ಯ ಇಲ್ಲ ಹಾಗೂ ಅದಕ್ಕಿಂತ ಉತ್ತಮ ಆನಂದ ಮತ್ತೊಂದಿಲ್ಲ ಎಂದು ಸ್ತುತಿಸಲಾಯಿತು. ಭಗವಂತನ ಸುಖ ಈ ರೀತಿ ಆಗಲು ಕಾರಣ ಏನು ? ಅವನು 'ಅನಘ' ಯಾವುದೇ ಬಗೆಯ ಪಾಪ ಇಲ್ಲದವನು. ಆದುದರಿಂದ ನಿರ್ದುಷ್ಟವಾದ ಆನಂದವನ್ನು ಪಡೆದಿರುವವನು. ನಮ್ಮ ಸುಖದಲ್ಲಿ ದುಃಖದ ಮಿಶ್ರಣ, ಆದಿ, ಅಂತ್ಯ - ಗಳಿವೆ. ನಮಗಿಂತ ಉತ್ತಮ ಸುಖ ಮತ್ತೊಬ್ಬರಲ್ಲಿ ಇರುವುದು. ಆದುದರಿಂದಲೇ ನಮ್ಮ ಸುಖ ದುಃಖಮಿಶ್ರಿತ. ನನಗಿಂತ ಹೆಚ್ಚು ಸುಖ ಅವನಲ್ಲಿದೆ ಎಂದು ! - ಹೀಗೆ ನಮ್ಮ ಸುಖದಲ್ಲಿ ದೋಷಗಲು ಕಾಣಿಸಲು ಕಾರಣ ನಾವು ಅಘವುಳ್ಳವರು - ಪಾಪಾವುಳ್ಳವರು. ಆ ಪಾಪಕ್ಕನುಗುಣವಾಗಿ ನಮ್ಮ ಸುಖದಲ್ಲಿ ನ್ಯೂನತೆ ಆಕ್ರಮಿಸುವುದು.

ಆದುದರಿಂದ ಆದಷ್ಟು ಶುದ್ಧ ಸುಖ ಪಡೆಯಬೇಕೆಂದರೆ ನಾವು ಆದಷ್ಟು ನಿಷ್ಪಾಪಿಗಳಾಗಲು ಯತ್ನಿಸಬೇಕು - ಎಂಬುದು ಅನಘನಾಮದ ಸೂಚನೆ.

**೭೪೦. ಅಚಿಂತ್ಯಃ– ಚಿಂತನೆಗೂ ಪೂರ್ಣವಾಗಿ ಎಟಕದವನು.**

**ವಿವರಣೆ :** ಭಗವಂತನ ಬಗ್ಗೆ ಮಾತಿನಿಂದ ಪೂರ್ಣವಾಗಿ ತಿಳಿಸಲಾಗುವುದಿಲ್ಲ ಅಷ್ಟೇ

ಅಲ್ಲ ; ಮನಸ್ಸಿನಿಂದಲೂ ಪೂರ್ಣವಾಗಿ ಚಿಂತಿಸಲು ಆಗುವುದಿಲ್ಲ. ಅಚಿಂತ್ಯಃ - ಚಿಂತಯಿತುಂ ಯೋಗ್ಯಃ ಚಿಂತ್ಯಃ, ನ ಚಿಂತ್ಯಃ ಅಚಿಂತ್ಯಃ **'ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ'** - ಎಂಬ ಉಪನಿಷತ್ತು ಘೋಷಿಸುತ್ತಿರುವಂತೆ ಭಗವಂತನನ್ನು ತಿಳಿಸಲು ಹೊರಟ ಮಾತಿನಂತೆ ಅವನನ್ನು ಚಿಂತಿಸಲು ಹೊರಟ ಮನಸ್ಸೂ ಕುರುಡ ಆನೆಯನ್ನು ಪರಿಚಯಿಸಿಕೊಂಡಂತೆ ದೇವರ ಯಾವುದೋ ಒಂದಂಶವನ್ನಷ್ಟೇ ಚಿಂತಿಸಿ ಹೊರಹೊಮ್ಮುವುದು.

ಗಂಡನ ಪೂರ್ಣ ಗುಟ್ಟು ಹೆಂಡತಿಗೇ ಗೊತ್ತಾಗಲಿಲ್ಲವಂತೆ ; ಹೀಗಿರುವಾಗ ಮಕ್ಕಳಿಗೆ ಅಪ್ಪನ ಗುಟ್ಟು ಹೇಗೆ ತಿಳಿದೀತು ! **'ಬಗೆ ಬಗೆಯ ನೂತನವ ಕಾಣುತ ಮಿಗೆ ಹರ್ಷದಿಂ ಪೊಗಳುತಿಹಳು'** - ಎಂದು ಸ್ತುತಳಾಗಿರುವ ಲಕ್ಷ್ಮೀದೇವಿ ತನ್ನ ಗಂಡನಲ್ಲಿ ಬಗೆ ಬಗೆಯ ನೂತನವ ಕಾಣಬೇಕೆಂದರೆ ಅದಕ್ಕಿಂತ ಮುಂಚೆ ಗಂಡನನ್ನು ಆ ನೂತನನಿಂದ ಕೂಡಿದವನನ್ನಾಗಿ ಕಂಡಿಲ್ಲ ಎಂದು ತಾನೇ ಅರ್ಥ ?

**೮೪೧. ಭಯಕೃದ್ ಭಯನಾಶನಃ – ಭಯವನ್ನು ಪರಿಹರಿಸುವವರ ಭಯವನ್ನು ನಾಶಪಡಿಸುವವನು.**

**ವಿವರಣೆ:** ಕೆಲವರು 'ಭಯಕೃತ್' 'ಭಯನಾಶನಃ' - ಎಂದು ಎರಡು ನಾಮಗಳನ್ನಾಗಿ ಇಟ್ಟುಕೊಳ್ಳುವರು. ನಾವು ಎರಡು ಶಬ್ದಗಳೂ ಸೇರಿ 'ಭಯಕೃದ್‌ಭಯನಾಶನಃ'- ಎಂದು ಒಂದು ನಾಮವಾಗಿ ರೂಪುಗೊಂಡಿದೆ ಎಂದಿಟ್ಟುಕೊಳ್ಳೋಣ.

ಯಾರಿಗೋ 'ಭಯಕೃತ್', ಮತ್ತ್ಯಾರಿಗೋ 'ಭಯನಾಶನ' ಎನ್ನುವ ಅರ್ಥಕ್ಕಿಂತ, ಭಯಕೃತ್ - ಒಬ್ಬರ ಭಯವನ್ನು ನಾಶ ಪಡಿಸುವವರ, ಭಯನಾಶನಃ - ಮತ್ತ್ಯಾರದ್ದೋ ಭಯವನ್ನು ನಾಶ ಮಾಡುವನು. ಭಯಂ ಕೃತಂತೀತಿ ಭಯಕೃತ್, ಭಯವನ್ನು ನಾಶಪಡಿಸುವವರ ಭಯವನ್ನು ನಾಶ ಪಡಿಸುವವನು 'ಭಯನಾಶನಃ'

ಒಬ್ಬರ ಭಯವನ್ನು ನಾಶ ಮಾಡಿದರೆ ದೇವರು ಅವರ ಭಯವನ್ನು ಪರಿಹರಿಸುವನು. ಅಂದರೆ ಇನ್ನೊಬ್ಬರ ಭಯವನ್ನು ಪರಿಹರಿಸಿದರೆ ನಮ್ಮ ಭಯ ದೂರವಾಗುವುದು. ಪಾಂಡವರ ಭಯವನ್ನು ಬೀಷ್ಮರು ಪರಿಹರಿಸಿದ್ದರು. ಆದ್ದರಿಂದಲೇ ಕೃಷ್ಣ ಭೀಷ್ಮರಲ್ಲಿಗೆ ಬಂದು ಅವರ ಭಯವನ್ನು ಪರಿಹರಿಸಿರುವನು.

ಭಯದಿಂದ ಪಾರಾಗಲು 'ಭಯಕೃತ್ ಭಯನಾಶನಃ'- ಎಂಬ ಸಹಸ್ರನಾಮದ ಮೂಲಕ ಉಪಾಸನೆ ನಡೆಸಬೇಕು.

**ಅಣುರ್ಬೃಹತ್ ಕೃಶಸ್ಥೂಲೋ ಗುಣಭೃನ್ನಿರ್ಗುಣೋ ಮಹಾನ್ |**
**ಅಧೃತಃ ಸ್ವಧೃತಃ ಸ್ವಾಸ್ಯಃ ಪ್ರಾಗ್ವಂಶೋ ವಂಶವರ್ಧನಃ ||೯೦||**

**೮೪೨. ಅಣುರ್ಬೃಹತ್ – ಅತ್ಯಂತ ಚಿಕ್ಕವನೂ, ಅತ್ಯಂತ ದೊಡ್ಡವನೂ ಆಗಿರುವವನು.**

ವಿವರಣೆ : 'ಅಣುಃ' 'ಬೃಹತ್' 'ಕೃಶಃ' 'ಸ್ಥೂಲಃ' 'ಗುಣಭೃತ್' 'ನಿರ್ಗುಣ' - ಎಂಬುದಾಗಿ ಕೆಲವರು ಇವನ್ನೆಲ್ಲ ಬೇರೆ ಬೇರೆ ನಾಮವಾಗಿ ಪರಿಗಣಿಸುವರು. ಆದರೆ ಬೃಹತೀಸಹಸ್ರಕ್ಕೆ ಅನುಗುಣವಾಗಿ 'ಅಣುರ್ಬೃಹತ್' ಎಂಬುದೂ, 'ಕೃಶಸ್ಥೂಲ' ಎಂಬುದೂ 'ಗುಣಭೃನ್ನಿರ್ಗುಣ' - ಎಂಬುದೂ ಎರಡೆರಡು ಶಬ್ದಗಳು ಸೇರಿ ಒಂದೊಂದು ನಾಮ ಎಂದಿಟ್ಟುಕೊಂಡು ಪರಿಶೀಲಿಸೋಣ. ಪರಸ್ಪರವಾಗಿ ವಿರುದ್ಧ ಧರ್ಮ ಗಳನ್ನು ಹೇಳುವಂತೆ ಕಾಣುವ ನಾಮಗಳು ಇವು.

ಅಣುರ್ಬೃಹತ್ - ಅಣುಃ ಅಂದರೆ ಚಿಕ್ಕದ್ದು, ಬೃಹತ್ ಅಂದರೆ ದೊಡ್ಡದು.

ದೇವರು ಚಿಕ್ಕವನೂ ಹೌದು, ದೊಡ್ಡವನೂ ಹೌದು

ಯಾವಾಗ ಚಿಕ್ಕವ ? ಯಾವಾಗ ದೊಡ್ಡವ ?

ದೇವರು ಯಾವಾಗ ಚಿಕ್ಕವನೋ ಆವಾಗಲೇ ದೊಡ್ಡವ, ಯಾವಾಗ ದೊಡ್ಡವನೋ ಆವಾಗಲೇ ಚಿಕ್ಕವ. ಅತ್ಯಂತ ಚಿಕ್ಕ ವಸ್ತು ಎನಿಸಿರುವ ಪರಮಾಣುವಿನಲ್ಲಿ ಭಗವಂತ ಅತ್ಯಂತ ಅಣುರೂಪದಲ್ಲಿ ಇರುವನು. ಆವಾಗಲೇ ಅತ್ಯಂತ ದೊಡ್ಡ ವಸ್ತು ಎನಿಸಿರುವ ಆಕಾಶವನ್ನು ವ್ಯಾಪಿಸಿರುವ ಅತ್ಯಂತ ಬೃಹದ್ರೂಪದಿಂದಲೂ ಇರುವನು. ಅವನಲ್ಲಿರುವ ಐಶ್ವರ್ಯದಿಂದಾಗಿ, ಪ್ರಭುತ್ವದಿಂದಾಗಿ ವಿರೋಧಕ್ಕೆ ಅವಕಾಶ ಇಲ್ಲ.

**೮೪೩. ಕೃಶಸ್ಥೂಲಃ – ತೆಳ್ಳಗಾಗಿರುವವನೂ, ದಪ್ಪಗಾಗಿರುವವನೂ.**

ವಿವರಣೆ: ಕೃಶ - ಎಂದರೆ ತೆಳ್ಳಗಾಗರುವವನು, ಸ್ಥೂಲ-ಎಂದರೆ ದಪ್ಪಗಾಗಿರುವವನು. ಕಾರ್ಶ್ಯ ಹಾಗೂ ಸ್ಥೌಲ್ಯ ಒಬ್ಬನೇ ವ್ಯಕ್ತಿಯಲ್ಲಿ ಏಕಕಾಲದಲ್ಲಿ ಕೂಡುವಂತಿಲ್ಲ. ಅವನು ಕೃಶನಾಗಿದ್ದರೆ ಸ್ಥೂಲನಾಗಿರುವುದಿಲ್ಲ, ಸ್ಥೂಲನಾಗಿದ್ದರೆ ಕೃಶನಾಗಿರುವುದಿಲ್ಲ. ಆದರೆ ದೇವರು ಅತ್ಯಂತ ಕೃಶನೂ ಹೌದು, ಅತ್ಯಂತ ಸ್ಥೂಲನೂ ಹೌದು. ಅಚಿಂತ್ಯ ಸಾಮರ್ಥ್ಯದಿಂದಾಗಿ ಈ ಎರಡು ವಿರುದ್ಧ ಧರ್ಮಗಳೂ ಏಕಕಾಲದಲ್ಲಿಯೇ ಅವನಲ್ಲಿ ಮೇಳೈಸಿವೆ.

**೮೪೪. ಗುಣಭೃನ್ನಿಗುಣಃ – ವಿಲಕ್ಷಣಗಳಾದ ಗುಣಗಳುಳ್ಳವನು, ನಮ್ಮಲ್ಲಿರುವ ಪ್ರಾಕೃತ ಗುಣಗಳಿಂದ ದೂರನಾಗಿರುವವನು.**

**ವಿವರಣೆ :** ಏಕಕಾಲದಲ್ಲಿಯೇ ಭಗವಂತನು ‘ಗುಣಭೃತ್’ ಗುಣಗಳನ್ನು ಹೊಂದಿರುವವನೂ ಆಗಿರುವನು, ‘ನಿರ್ಗುಣ’ ಗುಣಗಳನ್ನು ಕಳೆದು ಕೊಂಡಿರುವವನೂ ಆಗಿರುವನು. ನಾವು ಬಾಲ್ಯದಲ್ಲಿ ಗುಣಗಳಿಲ್ಲದವರಾಗಿರುವೆವು, ದೊಡ್ಡವರಾದ ಮೇಲೆ ಗುಣಸಂಪನ್ನರಾಗುವೆವು. ದೇವರು ಹಾಗಲ್ಲ. ಏಕಕಾಲದಲ್ಲಿಯೇ ‘ಗುಣಭೃತ್’ ವೂ ‘ನಿರ್ಗುಣ’ನೂ ಆಗಿರುವನು.

ಇದು ಹೇಗೆ ಸಾಧ್ಯ ?

ಗುಣಭೃತ್ ಎಂದರೆ ವಿಲಕ್ಷಣಗಳಾದ, ಅವನ ಸ್ವರೂಪಾತ್ಮಕಗಳಾದ ಜ್ಞಾನ, ಆನಂದ, ಔದಾರ್ಯ ಇತ್ಯಾದಿ ಕಲ್ಯಾಣಗುಣಗಳನ್ನು ಹೊಂದಿರುವವನು. ನಿರ್ಗುಣ ಎಂದರೆ ನಮ್ಮ ನಿಮ್ಮಲ್ಲಿ ಇರುವ ಪ್ರಾಕೃತಗಳಾದ ನಶ್ವರಗಳಾದ ಗುಣಗಳಿಲ್ಲದವನು.

ನಮ್ಮಲ್ಲೂ ಜ್ಞಾನ, ಆನಂದ, ಔದರ್ಯ ಮುಂತಾದ ಗುಣಗಳಿವೆ. ಆದರೆ ಅಲ್ಪ, ನಶ್ವರ, ಹಾಗೂ ಜಡಗಳು. ಇಂತಹ ಗುಣಗಳು ಭಗವಂತನಲ್ಲಿ ಇಲ್ಲದಿರುವುದರಿಂದ ಅವನು ‘ನಿರ್ಗುಣ’.

ಮೊದಲು ‘ಗುಣಭೃತ್’ ನಾಮವನ್ನು ಪಠಿಸುವ ಮೂಲಕ ಅವನಲ್ಲಿ ಕಲ್ಯಾಣಗುಣಗಳಿವೆ ಎಂಬುದನ್ನು ಮರೆಯದೆ ಅವನಲ್ಲಿ ‘ನಿರ್ಗುಣತ್ವ’ವನ್ನು ಕೂಡಿಸಬೇಕೆಂದು ಸೂಚಿಸಲಾಗಿದೆ.

**೮೪೫. ಮಹಾನ್ – ಲೋಕದಲ್ಲಿ ಪರಸ್ಪರ ವಿರುದ್ಧಗಳಾಗಿ ಇರುವ ಧರ್ಮಗಳ ವಿರೋಧವನ್ನು ತನ್ನಲ್ಲಿ ಪರಿಹರಿಸುವ ಮಹತ್ತ್ವ ಉಳ್ಳವನು.**

**ವಿವರಣೆ :** ಹೀಗೆ ಭಗವಂತನಲ್ಲಿ ಪರಸ್ಪರ ವಿರುದ್ಧಗಳಾಗಿರುವ ಧರ್ಮಗಳು ಏಕಕಾಲದಲ್ಲಿ ನೆಲೆಸಲು ಹೇಗೆ ಸಾಧ್ಯ ? - ಎಂಬ ಸಂದೇಹಕ್ಕೆ ಸಮಾಧಾನ ನೀಡುವುದು - ಮಹಾನ್ - ಋಷಿಗಳ ಆಶ್ರಮಗಳಲ್ಲಿ ಪರಸ್ಪರ ವಿರುದ್ಧಗಳಾದ ಹುಲಿ - ಹಸು - ಇತ್ಯಾದಿಗಳು ಸ್ನೇಹದಿಂದ ಒಟ್ಟಾಗಿ ಇರುವವು ಹೇಗೋ ಹಾಗೆ. ಅಲ್ಲಿ ತಪಸ್ಸು ನಡೆಸುವ ಋಷಿಗಳ ಮಹತ್ತ್ವದಿಂದಾಗಿ ಅವುಗಳ ವಿರೋಧ ಪರಿಹಾರ ಆದಂತೆ ಭಗವಂತನ ಮಹತ್ತ್ವದಿಂದಾಗಿ ಅವನಲ್ಲಿ ಅಣುತ್ವ, ಬೃಹತ್ತ್ವ, ಕೃಶತ್ವ ಸ್ಥೂಲತ್ವ, ಗುಣಭೃತ್ತ್ವ- ನಿರ್ಗುಣತ್ವ - ಇವು ನೆಲೆಸಿವೆ. ಅಂತಹ ಮಹತ್ತ್ವವನ್ನೇ ಸಾರುತ್ತಿದೆ - ‘ಮಹಾನ್.’

**೮೪೬. ಅಧೃತಃ – ಯಾರಿಗೆ ಮತ್ತೊಬ್ಬ ಆಧಾರನಾಗಿರುವವನು ಇಲ್ಲವೋ ಅಂತಹವನು.**

**ವಿವರಣೆ:** ಧೃತ ಎಂದರೆ ಧರಿಸಲ್ಪಟ್ಟವನು. ನ ಧೃತಃ ಅಧೃತಃ - ಧರಿಸಲ್ಪಟ್ಟವನಲ್ಲ. ಯಾಕೆಂದರೆ ಅವನನ್ನು ಧರಿಸುವವರು ಮತ್ತೊಬ್ಬರಿಲ್ಲ. ಬ್ರಹ್ಮಾಂಡವನ್ನು ಶೇಷ ಧಾರಣೆ ಮಾಡಿದ್ದಾನೆ. ಅಂತಹ ಶೇಷ ವಾಯುಕೂರ್ಮನಿಂದ ಧರಿಸಲ್ಪಟ್ಟಿದ್ದಾನೆ. ವಾಯುಕೂರ್ಮ ಕೂರ್ಮರೂಪಿ ಪರಮಾತ್ಮನಿಂದ ಧರಿಸಲ್ಪಟ್ಟಿದ್ದಾನೆ. ಅಂತಹ ವಿಷ್ಣುಕೂರ್ಮನಿಗೆ ಮತ್ತೊಬ್ಬ ಆಧಾರ ಇಲ್ಲ. ಯಾಕೆಂದರೆ ಯಾರಿಂದಲೂ ಧರಿಸಿಕೊಳ್ಳಲು ಆಗದಷ್ಟು ದೊಡ್ಡವನಾಗಿರುವವನು ಅವನು. ದ್ರೋಣಾಚಾರ್ಯರು ತಮಗೆ ಹಸುವೊಂದು ಬೇಕೆಂದು ಪರಶುರಾಮನಲ್ಲಿ ಹೋದಾಗ, ಪರಶುರಾಮ ಕೊಡಲು ಸಿದ್ಧನಾದ ಮೂರು ವಸ್ತುಗಳಲ್ಲಿ ಒಂದು ತಾನು. ನನ್ನನ್ನೇ ಬೇಕಾದರೆ ನಿನಗೆ ಕೊಡುವೆನೆಂದು ಪರಶುರಾಮ ಹೇಳಿದಾಗ **'ಸಾಮ್ಯಂ ತವೇಚ್ಛನ್ ಪ್ರತಿಯಾತ್ಯಧೋ ಹಿ.....'** ನಿನ್ನನ್ನು ಕರೆದೊಯ್ದು ನಿನಗೆ ಆಧಾರ, ಒಡೆಯ ಎಂದು ಇಚ್ಛಿಸುವವನು ಅಂಧಂತಮಸ್ಸಿನಲ್ಲಿ ಬೀಳುವನು ಎಂದು ದ್ರೋಣರು ಹೇಳಿದ ಈ ಮಾತಿನಿಂದ ಸ್ಪಷ್ಟವಾಗುವುದು. ದೇವರಿಗೆ ಯಾರೂ ಆಧಾರ ಎನಿಸಲಾರರು. ಸರ್ವೋತ್ತಮನಾದ ದೇವರಿಗೂ ಒಬ್ಬ ಆಧಾರ ಇದ್ದಾನೆಂದರೆ ದೇವರ ಸರ್ವೋತ್ತಮತ್ವವಾದರೂ ಹೇಗೆ ಕೂಡೀತು ? ಆಶ್ರಿತಕ್ಕಿಂತ ಆಶ್ರಯದಾತೃ ಉತ್ತಮವೆಂಬುದು ಸ್ಪಷ್ಟ ತಾನೇ ?

**'ಮತ್‌ಸ್ಥಾನಿ ಸರ್ವಭೂತಾನಿ ನ ಚಾಹಂ ತೇಷ್ವವಸ್ಥಿತಃ' 'ಭೂತಭೃನ್ನ ಚ ಭೂತಸ್ಥಃ........'** - ಮುಂತಾದ ಮಾತುಗಳಲ್ಲಿ ಗೀತಾಚಾರ್ಯ ತನಗೆ ಯಾರೂ ಆಶ್ರಯದಾತರಿಲ್ಲ ಎಂದು ಉದ್‌ಘೋಷಿಸಿರುವನು.

ನಮ್ಮ ಜೀವನದಲ್ಲಿ ಎರಡು ಸಂಗತಿಗಳು ಅತ್ಯಂತ ಮುಖ್ಯ. 'ಅನಾಯಾಸೇನ ಮರಣಂ' ಹಾಗೂ 'ವಿನಾ ದೈನ್ಯೇನ ಜೀವನಮ್' ದೈನ್ಯ ಇಲ್ಲದೆ, ಇನ್ನೊಬ್ಬರ ಎದುರು ನನಗೆ ಸ್ವಲ್ಪ ಆಶ್ರಯ ಕೊಡಿ ಎಂದು ಬೇಡಿಕೊಳ್ಳದೆ ಬದುಕಬೇಕೆಂದಿದ್ದರೆ, ಭಗವಂತನನ್ನು 'ಅಧೃತ' ಯಾರ ಎದುರೂ ನನಗೊಂದಿಷ್ಟು ಆಶ್ರಯ ಕೊಡಿ - ಎಂದು ಕೇಳಿಕೊಳ್ಳುವ ಪರಿಸ್ಥಿತಿಗೆ ಒಳಗಾಗದವನೆಂದು ಉಪಾಸನೆ ಮಾಡಬೇಕು.

**೮೪೭. ಸ್ವಧೃತಃ – * ಭಕ್ತರಿಂದ ತಮ್ಮ ಯೋಗ್ಯತಾನುಸಾರವಾಗಿ ಧರಿಸಲ್ಪಡುವವನು.**

*** ಭಕ್ತರಿಂದಲೂ ಚೆನ್ನಾಗಿ, ಪೂರ್ಣವಾಗಿ ಧರಿಸಲ್ಪಡದವನು.**

**ವಿವರಣೆ:** 'ಅಧೃತಃ'- ಎಂಬ ನಾಮದಿಂದ ಭಗವಂತನನ್ನು ಧರಿಸುವವರಿಲ್ಲ ಎಂದು ಸ್ತುತಿಸಿದಾಗ, ಹಾಗಾದರೆ ಅವನನ್ನು ಧರಿಸುವವರು ಯಾರೂ ಇಲ್ಲವೇ ? ಎಂದು ಉಂಟಾಗಬಹುದಾದ ಸಂದೇಶವನ್ನು ಮುಂದಿನ ನಾಮದಿಂದ ಪರಿಹರಿಸಲಾಗುವುದು 'ಸ್ವಧೃತಃ' ಸ್ವ ಎಂದರೆ ಸ್ವಕೀಯರು ; ತನ್ನವರು, ತನ್ನ ಭಕ್ತರು. ಇವರಿಂದ ಧರಿಸಲ್ಪಡುವವನು ಭಗವಂತ. ಅಂದರೆ ಭಕ್ತರು ದೇವರಿಗೆ ಆಶ್ರಯರಾಗುವರು.

ಒಮ್ಮೆ ಯಾರಿಗಿಂತ ಯಾರು ದೊಡ್ಡವರು - ಎಂಬ ವಿಚಾರ ನಡೆದು ಭೂಮಿ ದೊಡ್ಡದು, ಭೂಮಿಗಿಂತ ಪರ್ವತ, ಪರ್ವತಕ್ಕಿಂತ ವಾಯು, ವಾಯುವಿಗಿಂತ ನೀರು..... ಹೀಗೆಲ್ಲ ಹೇಳುತ್ತ ಬಂದು ಅಂತಹ ನೀರಿಗಿಂತಲೂ ದೊಡ್ಡವ ದೇವರು ಎಂದು ಘೋಷಿಸಲಾಯಿತು. ಆಗ ದೇವರು ಹೇಳ್ತಾನಂತೆ ನನಗಿಂತಲೂ ಒಬ್ಬ ದೊಡ್ಡವನಿದ್ದಾನೆ, ಅದು ಯಾರು ? ನನ್ನ ಭಕ್ತ. ಯಾಕೆಂದರೆ ನನ್ನ ಭಕ್ತ ನನಗೆ ಆಧಾರನಾಗಿದ್ದಾನೆ. ನನ್ನ ಭಕ್ತರು ತಮ್ಮ ತಮ್ಮ ಯೋಗ್ಯತಾನುಸಾರವಾಗಿ ನನ್ನನ್ನು ಹೊತ್ತಿರುವರು. ಎಲ್ಲಿ ? ತಮ್ಮ ತಮ್ಮ ಹೃದಯದಲ್ಲಿ. ಆದರೆ ಪೂರ್ಣವಾಗಿ ಅಲ್ಲ. ತಮಗೆ ಎಷ್ಟು ಯೋಗ್ಯತೆ ಇದೆಯೋ ಅದಕ್ಕನುಗುಣವಾಗಿ. ಚಿಕ್ಕ ಮನೆಗೆ ಅತಿಥಿಯೊಬ್ಬ ಬಂದನೆಂದರೆ ಅವನಿಗೆ ಪೂರ್ಣವಾಗಿ ಆಶ್ರಯ ನೀಡಲಾಗದಿದ್ದರೂ ಆ ಮನೆಯವನ ಯೋಗ್ಯತಾನುಗುಣವಾಗಿ ಹೇಗೆ ಆಶ್ರಯ ನೀಡಲಾಗುವುದೋ ಹಾಗೆ.

**೮೪೮. ಸ್ವಾಸ್ಯಃ – ಸ್ವಂತ ಬಾಯಿ ಉಳ್ಳವನು. (ಕೊಟ್ಟ ಮಾತಿಗನು-ಗುಣವಾಗಿಯೇ ನಡೆದುಕೊಳ್ಳುವವನು)**

**ವಿವರಣೆ :** ಆಸ್ಯ ಎಂದರೆ ಬಾಯಿ. ಅಸ್ಯತ್ ಗ್ರಾಸಃ ಅತ್ರೇತಿ ಆಸ್ಯಂ- ತುತ್ತು ಎಲ್ಲಿಗೆ ಎಸೆಯಲ್ಪಡುವುದೋ ಅದು ಆಸ್ಯ. 'ಅಸು ಕ್ಷೇಪಣೇ'- ಎಂಬ ಕ್ರಿಯಾಪದದಿಂದ 'ನಿರಾಸ' ಇತ್ಯಾದಿ ಶಬ್ದಗಳಂತೆ 'ಆಸ್ಯ' ಶಬ್ದವೂ ನಿಷ್ಪನ್ನವಾಗಿದೆ.

'ಸ್ವ' - ಎಂದರೆ ಸ್ವಂತವಾದ, ಆಸ್ಯ - ಬಾಯಿ ಉಳ್ಳವನೇ ಸ್ವಾಸ್ಯ. ಯಾಕೆ ನಮಗೆ ಸ್ವಂತ ಬಾಯಿ ಇಲ್ಲವೇ ? ಇಲ್ಲ. ದೇವರನ್ನು ಬಿಟ್ಟು ಬೇರೆ ಯಾರಿಗೂ ಸ್ವಂತ ಬಾಯಿ ಇಲ್ಲ ಎಂದೇ ಹೇಳಬೇಕಾಗುತ್ತದೆ. ಯಾಕೆಂದರೆ ಯಾರಿಗಾದರೂ ಸ್ವಂತ ಬಾಯಿ ಇದೆ ಎಂದಾದರೆ ಎಂದೂ ತಾವು ಕೊಟ್ಟ ಮಾತನ್ನು ಮೀರುವ ಪರಿಸ್ಥಿತಿ ಬರಬಾರದು. ಆದರೆ ಹಾಗಿಲ್ಲ. ಎಷ್ಟೋ ಬಾರಿ ಮನೆಗೆ ಬರ್ತೇವೆ - ಎಂದು ಒಪ್ಪಿಕೊಂಡು ಮರುದಿನ 'ಬರಲಿಕ್ಕಾಗುವುದಿಲ್ಲ'- ಎಂದು ಹೇಳಬೇಕಾದ ಪರಿಸ್ಥಿತಿ ಬರುವುದು. 'ಯಾವ ಬಾಯಿಯಿಂದ ಬರುವುದಿಲ್ಲ ಎಂದು ಹೇಳ್ತೀರಿ ? ನಿನ್ನೆ

ಅಷ್ಟೊಂದು ಖಡಾಖಡಿಯಾಗಿ ಬರ್ತೇನೆ ಎಂದು ಒಪ್ಪಿಕೊಂಡವರು!' ಎಂದು ಹೇಳಿಸಿಕೊಳ್ಳಬೇಕಾದ ಪರಿಸ್ಥಿತಿ ಹೆಚ್ಚಿನವರ ಪಾಲಿಗೆ ಬರುವುದು.

ಆದುದರಿಂದ ಇಂತಹ ಪರಿಸ್ಥಿತಿಗೆ ಒಳಗಾಗದವನೆಂದರೆ ದೇವರೊಬ್ಬನೇ. ಅವನು ತಾನು ಕೊಟ್ಟ ಮಾತಿಗೆ ಅನುಗುಣವಾಗಿಯೇ ನಡೆಯುವವನು. ಆದ್ದರಿಂದಲೇ 'ಸತ್ಯವಾಕ್' - ಎಂದು ಬಿರುದನ್ನು ಪಡೆದವನು. ಭಕ್ತರ ಮಾತಿಗನುಗುಣವಾಗಿ ನಡೆದುಕೊಳ್ಳುವೆನೆಂಬುದು ದೇವರು ಕೊಟ್ಟ ಅಂತಹ ಒಂದು ಮಾತು. ಅದನ್ನು ನಡೆಸುವುದಕ್ಕಾಗಿಯೇ ತಾನು ಮಹಾಭಾರತಯುದ್ಧದಲ್ಲಿ ನಿರಾಯುಧನಾಗಿ ಭಾಗವಹಿಸುವುದೆಂದು ಪ್ರತಿಜ್ಞೆಗೈದಿದ್ದರೂ, ತನ್ನ ಪ್ರತಿಜ್ಞೆಯನ್ನು ಉಳಿಸುವುದಕ್ಕಾಗಿ ಆಯುಧವನ್ನು ಹಿಡಿದ ಕೃಷ್ಣ ಹೇಗೆ ತಮ್ಮ ಬಗ್ಗೆ 'ಸ್ವಂತ ಬಾಯಿ' ಉಳ್ಳವನಾಗಿರುವನೆಂದು ಮೆಲುಕು ಹಾಕುತ್ತಾ ಭೀಷ್ಮರು ಕೃಷ್ಣನನ್ನು 'ಸ್ವಾಸ್ಯ'- ಎಂದು ಸ್ತುತಿಸುವರು.

'ಸ್ವಾಸ್ಯ'- ಎಂಬ ನಾಮಕ್ಕೆ ಸ್ವಂತ ಬಾಯಿ ಉಳ್ಳವನೆಂಬುದು ಅಕ್ಷರಿಕಾರ್ಥವಾದರೆ ತನ್ನ ಮಾತಿಗೆ ಅನುಗುಣವಾಗಿಯೇ ನಡೆದುಕೊಳ್ಳುವವ ನೆಂಬುದು ತಾತ್ಪರ್ಯಾರ್ಥ. ಈ ಅಭಿಪ್ರಾಯದಲ್ಲಿ ದೇವರನ್ನು 'ಸ್ವಾಸ್ಯಃ'- ಎಂದು ಉಪಾಸನೆ ಮಾಡಿದೆವೆಂದರೆ ನಾವು ಕೂಡಾ ಆದಷ್ಟು ಕೊಟ್ಟ ಮಾತಿಗೆ ಅನುಗುಣವಾಗಿಯೇ ನಡೆದುಕೊಳ್ಳಲು ಅನುಕೂಲವಾಗುವುದು.

**೮೪೯. ಪ್ರಾಗ್ವಂಶಃ – ಸಮಸ್ಯೆಗಳಿಗೆ ಮೊತ್ತಮೊದಲು ಸ್ಪಂದಿಸಿ, ನಮ್ಮ ಇಚ್ಛೆಗನುಗುಣವಾಗಿ ನಡೆದುಕೊಳ್ಳುವವನು.**

**ವಿವರಣೆ :** 'ಇವರು ನಮ್ಮ ವಂಶದವರು' 'ಇದು ನಮ್ಮ ವಂಶ....' ಎಂದೆಲ್ಲ ವ್ಯವಹಾರದಲ್ಲಿ ವಂಶ ಶಬ್ದವನ್ನು ವ್ಯಾಪಕವಾಗಿ ಬಳಸುವೆವು. ಆದರೆ ವಂಶ ಎಂದರೇನು ? 'ವಶ ಕಾಂತೌ' - ಎಂಬ ಕ್ರಿಯಾಪದದಿಂದ ಹುಟ್ಟಿಕೊಂಡ ವಂಶ ಶಬ್ದಕ್ಕೆ, ನಮ್ಮ ಇಚ್ಛೆಗೆ, ಅಪೇಕ್ಷೆಗೆ ಅನುಗುಣವಾಗಿ ನಡೆದುಕೊಳ್ಳುವವರ ಗುಂಪು ಎಂಬ ಅರ್ಥ. ಆದುದರಿಂದಲೇ ನಮ್ಮ ಇಚ್ಛೆಗೆ ಒಳಪಡುವವರನ್ನು 'ಅವನೇನು ನನ್ನ ಅಣ್ಣ !' 'ಅವನೇನು ನನ್ನ ತಮ್ಮ !' - ಎಂಬುದಾಗಿ ಅಣ್ಣ, ತಮ್ಮ ಎಂದು ಕರೆಯುವುದಕ್ಕೇ ಸಿದ್ಧರಾಗುವುದಿಲ್ಲ. ಇದಕ್ಕೆ ವಿಪರೀತವಾಗಿ ನಿಜವಾಗಿ ವಂಶಕ್ಕೆ ಸೇರಿದವರಲ್ಲದಿದ್ದರೂ ನಮ್ಮ ಇಚ್ಛೆಗನುಗುಣವಾಗಿ ನಡೆದುಕೊಳ್ಳುವವರಾದರೆ ಅವರು ನಮ್ಮ ವಂಶದವರಂತೆ ಇರುವರು - ಎಂದು ಒಪ್ಪಿಕೊಳ್ಳುವೆವು. ಆದ್ದರಿಂದ ನಮ್ಮ ಇಚ್ಛೆಗೆ, ಅಪೇಕ್ಷೆಗೆ ಅನುಗುಣವಾಗಿ ನಡೆದುಕೊಳ್ಳುವವರೇ ನಮ್ಮ

ವಂಶದವರು.

ನಿಜವಾಗಿ ನಾವು ಈಗ ಯಾರನ್ನು ವಂಶದವರೆಂದು ಪರಿಗಣಿಸುವೆವೋ ಅವರು ನಮ್ಮ ಪಾಲಿಗೆ ಬಂಧುಗಳು. ಅಂದರೆ ಶ್ರೀ ವಾದಿರಾಜ ಸ್ವಾಮಿಗಳು ನಿರೂಪಿಸಿರುವಂತೆ ನಮಗೆ ಬಂಧಕರಾಗಿರುವುದರಿಂದಲೇ ಅವರು ನಮ್ಮ ಬಂಧುಗಳು.

ಹಾಗಾದರೆ ನಿಜವಾಗಿ ನಮ್ಮ ವಂಶದವನೆಂದರೆ ದೇವರು. ಅವನು ನಮ್ಮ ಜೀವನದಲ್ಲಿ ಬರುವ ಸಮಸ್ಯೆಗಳಿಗೆ ಮೊತ್ತಮೊದಲು ಸ್ಪಂದಿಸುವವನು. ಆದುದರಿಂದಲೇ ನಮ್ಮ ರಕ್ತದಲ್ಲಿ ಆ ಭಾವನೆ ಹರಿದು ಬಂದಿದೆ. ಏನಾದರೂ ಸಮಸ್ಯೆ ಬಂದಾಕ್ಷಣ ನಮ್ಮ ಬೇರೆ ಯಾವುದೇ ವಂಶದವರನ್ನು ಸ್ಮರಿಸದೆ 'ಅಯ್ಯೋ! ದೇವರೆ' - ಎಂದು ದೇವರನ್ನು ಸ್ಮರಿಸಿಕೊಳ್ಳುವೆವು. ಆದುದರಿಂದ ಭಗವಂತ 'ಪ್ರಾಗ್ವಂಶ' - 'ಪ್ರಾಕ್' - ಎಂದರೆ ಮೊತ್ತ ಮೊದಲಿನ ವಂಶ ಎಂದರೆ ನಮ್ಮ ಸಮಸ್ಯೆಗಳಿಗೆ ಸ್ಪಂದಿಸಿ ನಮ್ಮ ಅಪೇಕ್ಷೆಗೆ ತಕ್ಕಂತೆ ನಡೆದುಕೊಳ್ಳುವವನು.

ಕೃಷ್ಣ ಪಾಂಡವರ ಸಮಸ್ಯೆಗಳಿಗೆಲ್ಲ ಸ್ಪಂದಿಸುತ್ತ ಹೇಗೆ ಅವರ ವಂಶದವನಂತೆ ಅನುಗ್ರಹಿಸುತ್ತಿದ್ದ ಎಂಬುದನ್ನು ಮೆಲುಕು ಹಾಕುತ್ತ ಭೀಷ್ಮರು 'ಪ್ರಾಗ್ವಂಶಃ' - ಎಂದು ಸ್ತುತಿಸುತ್ತಿರುವರು.

**೮೫೦. ವಂಶವರ್ಧನಃ – ನಮ್ಮ ಸಮಸ್ಯೆಗಳಿಗೆ ಸ್ಪಂದಿಸುವ ವ್ಯಕ್ತಿಗಳು ಸೇರಿಕೊಳ್ಳುವಂತೆ ಮಾಡುವುದರ ಮೂಲಕ ನಮ್ಮ ವಂಶವನ್ನು ಬೆಳೆಸುವವನು.**

**ವಿವರಣೆ :** 'ಪ್ರಾಗ್ವಂಶಃ ಎಂಬ ನಾಮದಲ್ಲಿ ಪ್ರಸ್ತುತವಾದಂತೆ ಭಗವಂತ ನಮ್ಮ ಸಮಸ್ಯೆಗಳಿಗೆ ಮೊದಲು ಸ್ಪಂದಿಸುವವನೆಂದು ಉಪಾಸನೆ ನಡೆಸಿದೆವೆಂದರೆ ಅದರಿಂದ ಪ್ರಸನ್ನನಾಗುವ ಭಗವಂತ, ಆ ರೀತಿಯಾಗಿ ನಮ್ಮ ಸಮಸ್ಯೆಗಳಿಗೆ ಸ್ಪಂದಿಸುವ ವಂಶವನ್ನು ಬೆಳೆಸುವನು ; ಅಭಿವೃದ್ಧಿಪಡಿಸುವನು.

ನಮ್ಮ ವಂಶದವರು ಎಂದು ನಾವು ತಂದೆ, ತಾಯಿ, ಮಕ್ಕಳು, ಹೆಂಡತಿ, ಗಂಡ - ಹೀಗೆಲ್ಲ ಯಾರ್ಯಾರನ್ನು ಪರಿಗಣಿಸುವೆವೋ ಅವರೆಲ್ಲ ಪೂರ್ಣ ಸ್ವಾರ್ಥಿಗಳಾಗದೆ ನಮ್ಮ ಸಮಸ್ಯೆಗಳಿಗೂ ಸ್ಪಂದಿಸುವಂತೆ ಭಗವಂತ ಅವರನ್ನು ಪ್ರೇರಿಸುವನು. ಆ ಗುಣವುಳ್ಳ ಸದಸ್ಯರ ಸಂಖ್ಯೆ ಹೆಚ್ಚಾಗುವಂತೆ ಮಾಡಿ ನಮ್ಮ ಪಾಲಿಗೆ 'ವಂಶವರ್ಧನ'ನಾಗುವನು.

ವಿಷ್ಣು ಸಹಸ್ರನಾಮದ ಈ ಎಲ್ಲ ನಾಮಗಳಿಗೆ ಬೇರೆ ಬೇರೆ ಆಧ್ಯಾತ್ಮಿಕಾರ್ಥಗಳು ಇವೆ. ಆದರೆ ಆ ಅರ್ಥಗಳ ಚಿಂತನೆ ನಡೆಸಲು

## ‘ಶ್ರೀ ಅನಲಾಯ ನಮಃ’



ಶ್ರೀ ವಿಶ್ವಪ್ರಿಯತೀರ್ಥರು ಅನಲನಾಮದ ಪ್ರವಚನದಲ್ಲಿ ಉಡುಪಿ ಶ್ರೀಕೃಷ್ಣನ ಕಡೆಗೋಲು ಮುಖ್ಯಪ್ರಾಣನನ್ನೂ, ನೇಣು ಲಕ್ಷ್ಮೀದೇವಿಯನ್ನೂ ಸಂಕೇತಿಸುವುದೆಂದು ಪ್ರತಿಪಾದಿಸಿದ್ದು, ಆ ಹಿನ್ನೆಲೆಯಲ್ಲಿ ಅನಲನಾಮದಿಂದ ಲಕ್ಷ್ಮೀದೇವಿಯಿಂದ ಹಾಗೂ ಮುಖ್ಯಪ್ರಾಣನಿಂದ ಸಹಿತನಾದ ಶ್ರೀಕೃಷ್ಣನ ಅನುಸಂಧಾನ ಮಾಡಬೇಕು. ಹಾಗೆಯೇ ಲಕ್ಷ್ಮೀದೇವಿಯ ಅಥವಾ ಮುಖ್ಯಪ್ರಾಣನ ಪ್ರಸ್ತಾವವುಳ್ಳ ವಿ.ಸ.ನಾಮಗಳ ಅರ್ಥಾನುಸಂಧಾನ ಈ ದೃಶ್ಯದಿಂದ ನಡೆಸಬಹುದಾಗಿದೆ.

## ‘ಶ್ರೀ ಪುರಾತನಾಯ ನಮಃ’



‘ನವದ್ವಾರೇ ಪುರೇ ದೇಹೀ.....’ ಇತ್ಯಾದಿಯಾಗಿ ಒಂಭತ್ತು ದ್ವಾರಗಳನ್ನೊಳಗೊಂಡ ನಮ್ಮ ಶರೀರದಲ್ಲಿ ದೇವರ ದರ್ಶನ ಹೇಗೆ ನಡೆಸಬೇಕೆಂಬುದಕ್ಕೆ ‘ಪ್ರಾತ್ಯಕ್ಷಿಕೆ’ಯಂತೆ ಇರುವ ಉಡುಪಿ ಶ್ರೀ ಕೃಷ್ಣನ ದರ್ಶನಕ್ಕಿರುವ ಒಂಭತ್ತು ದ್ವಾರಗಳನ್ನೊಳಗೊಂಡ ನವಗ್ರಹಕಿಂಡಿ.

ವಿ.ಸ.ನಾಮದ ‘ಪುರಾತನ’ ಮುಂತಾದ ನಾಮಗಳ ಅರ್ಥಾನುಸಂಧಾನಕ್ಕೆ ಇದರಿಂದ ಪುಷ್ಟಿ ಪಡೆಯಬಹುದಾಗಿದೆ.

ತೊಡಗಬೇಕೆಂದರೆ ನಮ್ಮ ಸುತ್ತಮುತ್ತ ಹಬ್ಬಿರುವ ಸಮಸ್ಯೆಗಳ ಪರಿಹಾರ ಆಗಬೇಕು ತಾನೇ ? ಅದಕ್ಕಾಗಿ ಅಂತಹ ಸಮಸ್ಯೆಗಳ ಪರಿಹಾರಕ್ಕೆ ಸಂಬಂಧಿಸಿದಂತೆಯೇ ವಿಷ್ಣುಸಹಸ್ರನಾಮಗಳ ಅರ್ಥ ಚಿಂತನೆಯನ್ನು ಮೊದಲು ನಡೆಸೋಣ.

**ಭಾರಭೃತ್ ಕಥಿತೋ ಯೋಗೀ ಯೋಗೀಶಃ ಸರ್ವಕಾಮದಃ |**
**ಆಶ್ರಮಃ ಶ್ರಮಣಃ ಕ್ಷಾಮಃ ಸುಪರ್ಣೋ ವಾಯುವಾಹನಃ ||೯೧||**

**೮೫೧. ಭಾರಭೃತ್ – ತಾನು ಸುಖಪೂರ್ಣನಾಗಿ ಮೆರೆಯುತ್ತ, ಉಳಿದವರ ದುಃಖವನ್ನು ಪರಿಹರಿಸುವುದಕ್ಕಾಗಿ ಧಾರಣೆ ಮಾಡುವವನು.**

**ವಿವರಣೆ :** ಬ್ರಹ್ಮಾಂಡದ ಭಾರವನ್ನು ಕೂರ್ಮ ರೂಪದಿಂದ ಧರಿಸಿರುವವನು - ಎಂಬ ಒಂದು ಪ್ರಸಿದ್ಧವಾದ ಅರ್ಥ ಇದ್ದೇ ಇದೆ.

ನಮ್ಮ ನಿಮ್ಮ ಸಮಸ್ಯೆಗೆ ಪರಿಹಾರ ದೊರಕುವಂತೆ ಉಪಾಸನೆಗೆ ಸಂಬಂಧಪಡುವ ಮತ್ತೊಂದು ಅರ್ಥ - ಭ + ಆರಭೃತ್, ಸವರ್ಣದೀರ್ಘ ಸಂಧಿ ಆಗಿ ಭಾರಭೃತ್ ಎಂದಾಗುವುದು.

ಭಾತೀತಿ ಭಃ - ಮೆರೆಯುತ್ತಿದ್ದಾನೆ. ಹೇಗೆ ? ಸ್ವಯಂ ಆನಂದ ಪರಿಪೂರ್ಣನಾಗಿ ಮೆರೆಯುತ್ತಿದ್ದಾನೆ. ಯಾವಾಗಲೂ ಮುಖದಲ್ಲಿ ಮೆರೆಯುವಿಕೆಯ ಛಾಯೆ ಕಾಣಿಸಿಕೊಳ್ಳಬೇಕೆಂದರೆ ಒಳಗೆ ಆನಂದ ತುಂಬಿರಬೇಕು. ಭಗವಂತನಾದರೂ ಯಾವಾಗಲೂ ಆನಂದದಿಂದ ತುಂಬಿರುವುದರಿಂದಾಗಿ ಪ್ರಕಾಶಿಸುತ್ತಾ ಇರುತ್ತಾನೆ.

ಇಷ್ಟೇ ಅಲ್ಲ ; 'ಅರಭೃತ್' - ನಮ್ಮೆಲ್ಲರ ದುಃಖವನ್ನೂ ಧಾರಣೆ ಮಾಡುವನು. ರಂ ಎಂದರೆ ಸುಖ ಅದಕ್ಕೆ ವಿರುದ್ಧವಾದ ದುಃಖ ಅರ. ಅಂತಹ ಅರಂ ಬಿಭರ್ತೀತಿ ಅರಭೃತ್ - ದುಃಖವನ್ನು ಪರಿಹಾರಕ್ಕಾಗಿ ಸ್ವೀಕಾರ ಮಾಡಿ ಹೊತ್ತುಕೊಳ್ಳುವನು.

ಬೇರೆ ಬೇರೆ ಬಗೆಯ ದುಃಖಕ್ಕೆ, ದುಃಖಕ್ಕೆ ಕಾರಣಗಳಾದ ಸಮಸ್ಯೆಗಳಿಗೆ ಬಲಿಯಾಗಿ ಅದರ ಪರಿಹಾರಕ್ಕಾಗಿ ನಾವು ದೇವರಲ್ಲಿ ದುಂಬಾಲು ಬಿದ್ದರೆ, ದೇವರು ಆ ದುಃಖವನ್ನು, ಸಮಸ್ಯೆಗಳನ್ನು ಪರಿಹಾರಕ್ಕಾಗಿ ಸ್ವೀಕರಿಸುವನು. ಪರಿಹರಿಸುವನು ಕೂಡಾ. ನಮ್ಮ ದುಃಖವನ್ನಾಗಲೀ ಸಮಸ್ಯೆಗಳನ್ನಾಗಲೀ ಸ್ವೀಕರಿಸಿದರೆ, ಅವನಲ್ಲಿ ದುಃಖ, ಸಮಸ್ಯೆಗಳ ಲೇಪ ಏನೂ ಆಗದು. ಯಾಕೆಂದರೆ ಅವನು 'ಭ' ಸುಖಪೂರ್ಣನಾಗಿ ವಿರಾಜಿಸುತ್ತಿರುವವನು.

ದೇವರ ಬದಲು ಇತರ ವ್ಯಕ್ತಿಗಳ ಎದುರು ನಾವು ಹೋಗಿ ನಮ್ಮ

ದುಃಖವನ್ನು ತೋಡಿಕೊಂಡೆವೆಂದರೆ, ಸಮಸ್ಯೆಗಳನ್ನು ಹೇಳಿಕೊಂಡೆವೆಂದರೆ ನಮ್ಮ ಸರದಿ ಮುಗಿದಾಕ್ಷಣ 'ಸರಿ ನಿಮ್ಮದೆಲ್ಲ ಆಯ್ತಾ ?' ಇನ್ನು ನನ್ನದು ಕೇಳಿ ಎಂದು ನಮ್ಮ ದುಃಖ ಸಮಸ್ಯೆಗಳಿಗಿಂತಲೂ ಎರಡುಪಟ್ಟು ತಮ್ಮ ದುಃಖ ಸಮಸ್ಯೆಗಳನ್ನೆಲ್ಲ ತೊಡಿಕೊಳ್ಳುವರು. ನಮಗೆ ಅನಿಸಬೇಕು 'ಯಾಕಪ್ಪಾ ಇವರಲ್ಲಿಗೆ ಬಂದೆ !' - ಎಂದು. ಹಾಗೆಯೇ ಒಂದು ವೇಳೆ ನಮ್ಮ ಸಮಸ್ಯೆಗಳನ್ನು ಪರಿಹರಿಸುವುದಾಗಿ ಸ್ವೀಕರಿಸಿದರೆಂದರೆ ಅವರಲ್ಲಿ ತಮ್ಮ ಸಮಸ್ಯೆಗಳು ಮತ್ತಷ್ಟು ಅಧಿಕವಾಗುವವು. ಆದರೆ ಭಗವಂತನಲ್ಲಿ ಈ ಸ್ಥಿತಿಗೆ ಅವಕಾಶವಿಲ್ಲ. ಯಾಕೆಂದರೆ ಅವನು 'ಭ' ಯಾವಾಗಲೂ ಸುಖಪೂರ್ಣನಾಗಿ ಪ್ರಕಾಶಿಸುತ್ತ ಇರುವವನು.

ಹೀಗೆ 'ಭಾರಭೃತ್' ನಾಮವು ನಮ್ಮ ದುಃಖವನ್ನೂ, ಸಮಸ್ಯೆಗಳನ್ನೂ ಪರಿಹರಿಸುವುದಕ್ಕಾಗಿ ಧಾರಣೆ ಮಾಡಿದರೂ ಭಗವಂತನು ಆನಂದ ಪರಿಪೂರ್ಣನಾಗಿ ಪ್ರಕಾಶಿಸುತ್ತ ಇರುವನು - ಎಂಬ ಅರ್ಥವನ್ನು ಹೊರಡಿಸುವುದು.

ವಿಶೇಷವಾಗಿ ಸಮಾಜ ಸೇವಕರು ಈ ಅರ್ಥದ ಹಿನ್ನೆಲೆಯಲ್ಲಿ 'ಭಾರಭೃತ್' ನಾಮದ ಮೂಲಕ ಉಪಾಸನೆ ನಡೆಸಬೇಕು. ತಮಗೆ ಎಷ್ಟೇ ಸಮಸ್ಯೆಗಳು, ದುಃಖವು ಇದ್ದರೂ ಅವನ್ನೆಲ್ಲ ನುಂಗಿಕೊಂಡು ನಗುನಗುತ್ತ ಉಳಿದವರ ದುಃಖದ ಸಮಸ್ಯೆಗಳ ಪರಿಹಾರದ ಬಗ್ಗೆ ಸ್ಪಂದಿಸಬೇಕು. 'ಭಾರಭೃತ್' ನಾಮಕನ ಉಪಾಸನೆಯಿಂದ ಈ ಗುಣ ಸಿದ್ಧಿಸಬಲ್ಲದು.

**೮೫೨. ಕಥಿತಃ – ಶುದ್ಧವಾದ ಅನ್ನವನ್ನು ಸ್ವೀಕರಿಸುವವನು.**

**ವಿವರಣೆ :** ಕ+ಥಿ+ಇತಃ - ಈ ಮೂರು ಶಬ್ದಗಳು ಸೇರಿ ಕಥಿತಃ ಎಂದು ರೂಪುಗೊಂಡಿದೆ. ಕ ಎಂದರೆ ಚತುರ್ಮುಖ. ಥ ಎಂದರೆ ಅನ್ನ. ಇತ ಎಂದರೆ ಹೊಂದಿರುವವನು. ಚತುರ್ಮುಖನನ್ನು ಅನ್ನವನ್ನಾಗಿ ಹೊಂದಿರುವವನೇ 'ಕಥಿತಃ'

ಬೇರೆ ಬೇರೆ ಕಲ್ಪದಲ್ಲಿ ಮುಕ್ತರಾದ ಚತುರ್ಮುಖರು ಮುಕ್ತಿಯಲ್ಲಿ ಒಬ್ಬ ಋಗ್ವೇದವನ್ನೂ, ಮತ್ತೊಬ್ಬ ಯಜುರ್ವೇದವನ್ನೂ ಹೀಗೆಲ್ಲ ಪಾರಾಯಣ ನಡೆಸುತ್ತಾ ಇರುವರು. ಅವರೆಲ್ಲ **'ಅಹಮನ್ನಮಹಮನ್ನಮಹಮನ್ನಂ'** ನಾನು ಭಗವಂತನ ಅನ್ನವಾಗಿದ್ದೇನೆ. ನಾನು ದೇವರ ಆಹಾರವಾಗಿದ್ದೇನೆ. ದೇವರ ಅನ್ನ ನಾನು ಎಂಬುದಾಗಿ ಮೂರು ಬಾರಿ ಘೋಷಿಸುವ ಮೂಲಕ ಈ ವಿಷಯದಲ್ಲಿ ತಮ್ಮ ಸಂತೋಷಾಶಯವನ್ನು ಸೂಚಿಸಿರುವರು.

**'ಶುಭಂ ಪಿಬತ್ಯಸೌ ನಿತ್ಯಂ ನಾಶುಭಂ ಸ ಹರಿಃ ಪಿಬೇತ್....'** ಎಂದಿರುವಂತೆ ಭಗವಂತ ಚತುರ್ಮುಖನೇ ಮುಂತಾದ ಉತ್ತಮ ವ್ಯಕ್ತಿಗಳನ್ನು ಕಬಳಿಸುವವನು. ಕೃಷ್ಣನ ವಿಶ್ವರೂಪದೊಳಗೆ ಭೀಷ್ಮ, ದ್ರೋಣಾದಿಗಳು ಸಾಗುವುದನ್ನು ಅರ್ಜುನ ಕಂಡಿದ್ದಾನೆ. ಆದುದರಿಂದಲೇ ಕೃಷ್ಣ ಹೇಳ್ತಾನೆ - 'ಅವರೆಲ್ಲ ಈಗಾಗಲೇ ಸತ್ತಾಗಿದೆ. ಈಗ ಕಾಣಿಸುವುದು ಅವರ ಹೆಣ ಮಾತ್ರ. ಆದುದರಿಂದ ಯಾವುದೇ ಸಂಕೋಚ ಇಲ್ಲದೆ ಅವರ ಮೇಲೆ ಬಾಣ ಹೂಡು' ಎಂದು.

ನಾವು ದೇವರ ಎದುರು ನೈವೇದ್ಯವನ್ನು ಇಟ್ಟು ಅದರ ಸಾರಭಾಗವನ್ನು ಸ್ವೀಕರಿಸಿ, ಉಳಿದ ಜಿಗುಟನ್ನು ಮಾತ್ರ ನಮಗೆ ಅನುಗ್ರಹಿಸಲು ಕೇಳಿಕೊಳ್ಳಬೇಕು. ಹೇಗೆ ಹಸುವಿನ ಹಸಿ ಹಾಲಿನಲ್ಲಿಯ ಕೆನೆಯನ್ನು ತೆಗೆದು ಜೀರ್ಣಕ್ಕೆ ಬರುವ ಭಾಗವನ್ನಷ್ಟೇ ಚಿಕ್ಕಮಕ್ಕಳಿಗೆ ನೀಡಲಾಗುವುದೋ ಹಾಗೆ. 'ಯಃ ಸಾರಭಾಗಮನುಭೂಯ ಶಿಷ್ಟಂ ಪ್ರಯಚ್ಛತಿ ಜೀವೇಭ್ಯಃ.......' - ಎಂದಿರುವಂತೆ ನಮಗೆ ಜೀರ್ಣಕ್ಕೆ ಬಾರದ ಸಾರಭಾಗವನ್ನು ಭಗವಂತನು ಸ್ವೀಕರಿಸಿ, ಉಳಿದ ಜಿಗುಟನ್ನಷ್ಟೇ ನಮಗೆ ನೀಡುವನು. 'ಶುಭಂ ಪಿಬತ್ಯಸೌ ನಿತ್ಯಂ........'

ಕ ಎಂದರೆ ಚತುರ್ಮುಖ. ಚತುರ್ಮುಖ ಶುದ್ಧವಾದ ಆಹಾರಕ್ಕೆ ಸಂಕೇತ. ಆದುದರಿಂದ ಶುದ್ಧವಾದ ಆಹಾರವನ್ನು, ಅನ್ನವನ್ನು ಸ್ವೀಕರಿಸುವವನು - ಕಥಿತ ಎಂದು ಭೀಷ್ಮರು ಕಥನ ಮಾಡುತ್ತಿದ್ದಾರೆ.

ಈ ಅರ್ಥದ ಹಿನ್ನೆಲೆಯಲ್ಲಿ ಭಗವಂತನನ್ನು 'ಕಥಿತ'- ಎಂದು ಉಪಾಸನೆ ಮಾಡಿದರೆ ನಮಗೂ ಶುದ್ಧವಾದ ಆಹಾರ ದೊರಕಬಲ್ಲದು.

**೮೫೩. ಯೋಗೀ – ತಿಳುವಳಿಕೆಪೂರ್ವಕವಾಗಿ ಚಟುವಟಿಕೆಗಳನ್ನು ನಡೆಸುವವನು.**

**ವಿವರಣೆ :** ಯಃ - ತಿಳಿದವನು ; ಗಃ - ಚಲಿಸುವವನು, ಇಂತಹ ತಿಳಿದು ಚಲನೆ ಉಳ್ಳವನೇ 'ಯೋಗೀ'. ಬರೇ ಚಲನೆಯಲ್ಲ ಯಾವುದೇ ಚಟುವಟಿಕೆ ತಿಳಿದು ಮಾಡಬೇಕಾದದ್ದು. ಆದುದರಿಂದಲೇ ತಾನೇ 'ತಿಳಿದು ಮಾಡು' - ಎಂಬ ನಾಲ್ನುಡಿ ಬಂದದ್ದು. ಏನು ಮಾಡುವುದಾದರೂ ಆ ಚಟುವಟಿಕೆಯ ಹಿನ್ನೆಲೆಯಾಗಿ ತಿಳುವಳಿಕೆ ಇರಬೇಕು. ಇದರ ಬದಲಾಗಿ, ಎಲ್ಲಿಗೆ ಹೋಗುತ್ತಿ ? ಗೊತ್ತಿಲ್ಲ. ರಾಜಾಂಗಣದಲ್ಲಿ ಏನು ನಡೆಯುತ್ತದೆ ? ಗೊತ್ತಿಲ್ಲ. ರಾಜಾಂಗಣದಲ್ಲಿ ಪ್ರವಚನ ಎಷ್ಟು ಹೊತ್ತು ನಡೆಯಿತು ? ಗೊತ್ತಿಲ್ಲ. ನಿದ್ದೆ ಮಾಡಿದ್ದೀಯಾ ? ಗೊತ್ತಿಲ್ಲ. ತನಗೆ ಯಾವಾಗ ನಿದ್ದೆ ಬಂತು ಯಾವಾಗ ಎಚ್ಚರ ಆಯಿತು ಎಂಬುದೂ ಗೊತ್ತಿಲ್ಲ - ಹೀಗೆ ಯಾವುದೂ

ಗೊತ್ತಿಲ್ಲ ಎನ್ನುವಂತಹ ಸ್ಥಿತಿ ಬರಬಾರದು.

ದೇವರು ಯಾವುದು ಮಾಡುವುದಾದರೂ ತಿಳಿದೇ ಮಾಡುವವನು. ನಿದ್ದೆ ಮಾಡುವಾಗಲೂ ತಿಳುವಳಿಕೆ ಇದ್ದೇ ಇರುವುದು. ಆದುದರಿಂದಲೇ ಅವನ ನಿದ್ದೆ 'ಯೋಗನಿದ್ದೆ' ಎನಿಸಿದೆ. ತಿಳುವಳಿಕೆಯಿಂದ ಕೂಡಿಕೊಂಡೇ ನಡೆಸಲಾಗುವ ನಿದ್ದೆ ಅದಾದುದರಿಂದ ತಾನೇ ಅದು 'ಯೋಗನಿದ್ದೆ' ಎನಿಸುವುದು

ಈ ರೀತಿಯಾಗಿ ಭಗವಂತನು ತಿಳಿದೇ ಸಂಚರಿಸುತ್ತಾನೆ ; ತಿಳಿದೇ ಉಳಿದೆಲ್ಲ ಚಟುವಟಿಕೆಗಳನ್ನೂ ನಡೆಸುವವನಾದುದರಿಂದ 'ಯೋಗೀ' ಎನಿಸುವನು.

ಭಗವಂತನನ್ನು ಈ ಅರ್ಥದ ಹಿನ್ನೆಲೆಯಲ್ಲೇ 'ಯೋಗೀ'- ಎಂದು ಉಪಾಸನೆ ನಡೆಸುವ ಫಲವಾಗಿ ನಮ್ಮ ಹೆಚ್ಚಿನ ಚಟುವಟಿಕೆಗಳನ್ನು ಆದಷ್ಟು ತಿಳಿದು ಮಾಡುವ ಪ್ರವೃತ್ತಿ ನಮ್ಮದಾಗುವುದು.

**೮೫೪. ಯೋಗೀಶಃ – ತಿಳಿದು ಚಟುವಟಿಕೆ ನಡೆಸಿ ಯೋಗೀ ಎನಿಸುವ ಬ್ರಹ್ಮಾದಿಗಳಿಗೆಲ್ಲ ತಿಳಿವಳಿಕೆ ನೀಡಿ ಈಶ ಎನಿಸಿರುವವನು.**

ವಿವರಣೆ: ಭಗವಂತ ಬರೇ 'ಯೋಗೀ' ಅಲ್ಲ ; 'ಯೋಗೀಶ'ನೂ ಕೂಡ. ಬ್ರಹ್ಮಾದಿ ದೇವತೆಗಳೆಲ್ಲ ತಿಳಿದೇ ಬೇರೆ ಬೇರೆ ಚಟುವಟಿಕೆಗಳನ್ನು ನಡೆಸುವವರಾದುದರಿಂದ 'ಯೋಗಿ'ಗಳೆನಿಸುವರು. ನಾವು ಕೂಡಾ ಎಲ್ಲ ಚಟುವಟಿಕೆಗಳನ್ನಲ್ಲದಿದ್ದರೂ, ಕೆಲವು ಚಟುವಟಿಕೆಗಳನ್ನಾದರೂ ತಿಳಿದು ಮಾಡುವೆವು ತಾನೇ ? ಆದ್ದರಿಂದ ನಾವೂ ಸ್ವಲ್ಪ ಮಟ್ಟಿಗೆ ಯೋಗಿಗಳು. ಹೀಗೆ ಯೋಗಿಗಳೆಂದು ಯಾರ್‍ಯಾರು ಇರುವರೋ ಅವರೆಲ್ಲರಿಗೆ ತಿಳಿದು ಮಾಡಲು ಬೇಕಾದ ತಿಳುವಳಿಕೆಯನ್ನು ನೀಡುವ ಪ್ರಯುಕ್ತ ಭಗವಂತ ಯೋಗೀಶ. ಭಗವಂತ ತಾನು ಪ್ರತಿಯೊಂದು ಚಟುವಟಿಕೆಯನ್ನೂ ತಿಳಿದು ಮಾಡುವ ಪ್ರಯುಕ್ತ 'ಯೋಗೀ' ಎನಿಸುವನಲ್ಲದೆ, ಉಳಿದ ಬ್ರಹ್ಮಾದಿಗಳೂ ತಿಳಿದು ಚಟುವಟಿಕೆಗಳನ್ನು ನಡೆಸುವಂತೆ ಮಾಡುವ ಪ್ರಯುಕ್ತ 'ಯೋಗೀಶ' ಎಂದೂ ಎನಿಸುವನು.

ದೇವರನ್ನು ಈ ಅರ್ಥವನ್ನಿಟ್ಟುಕೊಂಡು 'ಯೋಗೀಶ'- ಎಂದು ಸ್ತುತಿಸಿದಲ್ಲಿ ನಾವು ಆದಷ್ಟು ತಿಳಿದು ಚಟುವಟಿಕೆ ನಡೆಸಲು ಪ್ರೇರಿಸುವನು.

**೮೫೫. ಸರ್ವಕಾಮದಃ – * ಎಲ್ಲ ಕಾಮನೆಗಳನ್ನು ನೀಡುವವನು.**

*** ಎಲ್ಲ ಬಗೆಯ ಸುಖವನ್ನು ಹೊಂದಿದ್ದರೂ ಅಹಂಕಾರಕ್ಕೆ ಒಳಗಾಗದವನು.**

**ವಿವರಣೆ :** ಎಲ್ಲ ಕಾಮನೆಗಳನ್ನು ನೀಡುವವನೆಂಬ ಒಂದು ಪ್ರಸಿದ್ಧಾರ್ಥ ಇದ್ದೇ ಇದೆ.

ಇದರ ಜೊತೆಗೆ ಮತ್ತೊಂದು ಅರ್ಥ - ಸರ್ವಕ + ಅಮದ ಎಂದು ಪದವಿಭಾಗ ಮಾಡಿ ಪಡೆಯಬಹುದಾಗಿದೆ.

ಕ ಎಂದರೆ ಸುಖ. ಎಲ್ಲ ಬಗೆಯ ಸುಖವುಳ್ಳವನಾದುದರಿಂದ ಭಗವಂತ 'ಸರ್ವಕ'. ಕೇಳುವುದರಿಂದ, ಮುಟ್ಟುವುದರಿಂದ, ನೋಡುವುದರಿಂದ, ಮೂಸುವುದರಿಂದ, ತಿನ್ನುವುದರಿಂದ, ಹೋಗುವುದರಿಂದ, ಬರುವುದರಿಂದ - ಹೀಗೆ ಎಲ್ಲಾ ಬಗೆಯ ಸುಖವನ್ನೂ ಅನುಭವಿಸುವವನು ದೇವರು. ಅವನಿಗೆ ಯಾವುದರಿಂದಲೂ ದುಃಖ ಎಂಬುದೇ ಇಲ್ಲ. ನಮಗಾದರೆ ಕೆಲವೊಮ್ಮೆ ಕೇಳುವುದರಿಂದ ಸುಖವೂ ಆಗಬಹುದು, ದುಃಖವೂ ಆಗಬಹುದು. ನಾನು ಪ್ರವಚನವನ್ನು ಇನ್ನೂ ಹತ್ತು ನಿಮಿಷ ಮುಂದುವರೆಸಿದೆನೆಂದರೆ ನಿಮಗೆ ಆ ಪ್ರವಚನವನ್ನು ಕೇಳುವುದರಿಂದ ದುಃಖ ಆಗಲಿಕ್ಕೆ ಪ್ರಾರಂಭವಾಗುವುದು ತಾನೇ ? ಹೀಗೆಯೇ ಮುಟ್ಟುವುದರಿಂದ, ನೋಡುವುದರಿಂದ, ಕೇಳುವುದರಿಂದ ಹೀಗೆಲ್ಲ ಸುಖಕ್ಕೆ ಸಾಧನಗಳಾದವುಗಳಿಂದ ದುಃಖವೂ ಉಂಟಾಗಬಹುದು. ಆದರೆ ದೇವರಿಗೆ ಮಾತ್ರ ಹಾಗೆ ಇಲ್ಲವೇ ಇಲ್ಲ. ಪ್ರತಿಯೊಂದರಿಂದಲೂ ಸುಖವೇ. ಆದುದರಿಂದ ಅವನು 'ಸರ್ವಕ'.

ಆದರೆ ಹೀಗೆ ಸುಖ ಬಂದಾಕ್ಷಣ ಮದ, ಅಹಂಕಾರ ನೆತ್ತಿಗೇರುವುದು ಸಹಜ. ಸ್ವಲ್ಪ ಸುಖ ಬಂತೋ 'ರಾತ್ರಿ ಕೊಡೆ ಬಿಡಿಸಿಕೊಂಡು ಹೋಗುವಷ್ಟು ಅಹಂಕಾರಕ್ಕೆ' ಒಳಗಾಗುವ ಸಾಧ್ಯತೆ ಇದೆ. ಆದರೆ ದೇವರಲ್ಲಿ ಮಾತ್ರ ಹೀಗೆ ಇಲ್ಲವೇ ಇಲ್ಲ. ಅವನು 'ಅಮದ' - ಎಂದೂ ಯಾವುದೇ ಬಗೆಯ ಮದಕ್ಕೆ ಒಳಗಾಗದವನು. **'ಅವ್ವ ಲಕುಮೀರಮಣ ಇವಗಿಲ್ಲ ಗರುವ'** - ಎಂದು ದಾಸರು ಹಾಡಿರುವಂತೆ ಗರುವದ ಲವಲೇಶವೂ ಭಗವಂತನಿಗಿಲ್ಲ. ಗರುವ ಪಡುವುದಕ್ಕೆ ಬೇಕಾದ ಸುಖಸಮೃದ್ಧಿ ಇದ್ದರೂ ಸ್ವಲ್ಪವೂ ಗರ್ವ ಇಲ್ಲ. ಆದುದರಿಂದ ಅವನು ಸರ್ವಕ ಹಾಗೂ ಅಮದ ಸರ್ವಕಾಮದ.

ಈ ಅರ್ಥದ ಆಧಾರದಲ್ಲಿ ದೇವರನ್ನು 'ಸರ್ವಕಾಮದ' - ಎಂದು ಉಪಾಸನೆ ನಡೆಸಿದಲ್ಲಿ ನಮ್ಮ ಯೋಗ್ಯತೆಗನುಗುಣವಾಗಿ ಸುಖ ನೀಡುವನಲ್ಲದೆ, ಅದರಿಂದಾಗಿ ಮದ ಬಾರದಂತೆಯೂ ಅನುಗ್ರಹಿಸುವನು.

**೭೫೭. ಆಶ್ರಮಃ – ಚೆನ್ನಾಗಿ ತಪಸ್ಸನ್ನು, ಸತ್ಕಾರ್ಯಗಳನ್ನು ನಡೆಸುವಂತೆ ಅನುಗ್ರಹಿಸುವವನು.**

ವಿವರಣೆ : ಆ ಸಮ್ಯಕ್ ಶ್ರಮ್ಯಂತಿ ತಪಂತಿ ಅಸ್ಮಾತ್ ಇತಿ ಆಶ್ರಮಃ ಋಷಿಗಳು ಯಾರ ಅನುಗ್ರಹದಿಂದಾಗಿ ಚೆನ್ನಾಗಿ ತಪಸ್ಸನ್ನು ನಡೆಸುವರೋ ಅಂತಹವನು. 'ರಮಂತೇ ಯೋಗಿನಃ ಅಸ್ಮಾದಿತಿ' ಯೋಗಿಗಳು ಯಾರಿಂದಾಗಿ ಚೆನ್ನಾಗಿ ಸುಖಪಡುವರೋ ಅವನನ್ನು ರಾಮ ಎಂದು ಹೇಗೆ ಕರೆಯಲಾಗುವುದೋ ಹಾಗೆ ತಪಸ್ವಿಗಳಿಗೆ ತಪಸ್ಸನ್ನು ಆಚರಿಸಲು ಅನುಕೂಲತೆಯನ್ನು ಒದಗಿಸಿ ಕೊಡುವುದರಿಂದ ಭಗವಂತ ಆಶ್ರಮ ಎನಿಸುವನು.

ತಪಸ್ಸು ಎಂದರೆ ಮೂಗಿಗೆ ಕೈಹಿಡಿದು ಕುಳಿತು ಕೊಳ್ಳುವುದೆಂದೇ ಆಗಬೇಕಿಲ್ಲ. ಭಗವಂತನ ಪ್ರೀತಿಗಾಗಿ 'ಇಷ್ಟು ದಿನಗಳಲ್ಲಿ ಇಷ್ಟು ಅಧ್ಯಯನ ನಡೆಸುವೆನು' 'ಇಂತಹ ವ್ರತಗಳನ್ನು ಪಾಲಿಸುವೆನು' 'ಇಷ್ಟು ಬತ್ತಿಗಳನ್ನು ಮಾಡಿ ಅರ್ಪಿಸುವೆನು' 'ಇಷ್ಟು ಪುಷ್ಪಗಳನ್ನು ಅರ್ಪಿಸುವೆನು' - ಹೀಗೆ ಯಾವ ಸತ್ಕಾರ್ಯವೂ ತಪಸ್ಸು ಎನಿಸಬಲ್ಲದು. ಅದು ಯಶಸ್ವಿಯಾಗಿ ನಡೆಯಬೇಕೆಂದರೆ ಭಗವಂತನನ್ನು 'ಆಶ್ರಮಃ' - ಎಂದು ಉಪಾಸನೆ ಮಾಡಬೇಕು.

ಏಕಾದಶೀವ್ರತ ಏನೂ ವಿಘ್ನ ಇಲ್ಲದೆ ಚೆನ್ನಾಗಿ ನಡೆಯುವಂತಾಗಬೇಕೆಂದರೆ ದಶಮಿಯಂದು ಭಗವಂತನನ್ನು 'ಆಶ್ರಮ' ಎಂದು ಉಪಾಸನೆ ನಡೆಸಬೇಕು.

ಭೀಷ್ಮರು ಭಗವಂತನ್ನು 'ಆಶ್ರಮ' ಎಂದು ಉಪಾಸನೆ ನಡೆಸಿದ್ದರ ಫಲವಾಗಿಯೇ ಹತ್ತು ದಿನಗಳ ಕಾಲ ಯುದ್ಧ ನಡೆಸಿ ಅದನ್ನು ಭಗವಂತನಿಗೆ ಅರ್ಪಿಸುವಂತಾಯಿತು.

**೭೫೭. ಶ್ರಮಣಃ – ಒಳ್ಳೆಯ ಕಾರ್ಯಗಳನ್ನು ನಡೆಸುವಾಗ ಸಂಭವಿಸುವ ಶ್ರಮವನ್ನು ದೂರ ಮಾಡುವವನು.**

ವಿವರಣೆ : 'ಆಶ್ರಮ' ನಾಮದಿಂದ ಸೂಚಿತವಾಗಿರುವಂತೆ ಭಗವದನುಗ್ರಹದಿಂದ ಒಳ್ಳೆಯ ಕಾರ್ಯಗಳಲ್ಲಿ ತೊಡಗಿದಾಗ ಏನಾದರೂ 'ಶ್ರಮ' ಸಂಭವಿಸಿದರೆ ಅದನ್ನೂ ದೂರ ಮಾಡುವವನು ಶ್ರಮಣಃ - ಶ್ರಮಂ ನಯತಿ ಅಪನಯತೀತಿ ಶ್ರಮನಃ, ನಕಾರಕ್ಕೆ ಣಕಾರ ಬಂದು ಶ್ರಮಣಃ ಎಂದಾಗಿದೆ.

ದೈಹಿಕ ಶ್ರಮ, ಮಾನಸಿಕ ಶ್ರಮ ಎಂಬುದಾಗಿ ಶ್ರಮ ಎರಡು ಪ್ರಭೇದದಲ್ಲಿದೆ. ಒಳ್ಳೆಯ ಕಾರ್ಯಗಳಲ್ಲಿ ತೊಡಗುವಾಗ 'ಸಾಕಪ್ಪ' - ಎಂದು ಇದ್ದಕ್ಕಿದ್ದಂತೆ ವೈರಾಗ್ಯ

ಬರುವುದುಂಟು. ಅಂತಹ ಮಾನಸಿಕ ಶ್ರಮವನ್ನೆಲ್ಲ ದೂರ ಮಾಡಿ ಭಗವಂತ ಒಳ್ಳೆಯ ಕಾರ್ಯಗಳನ್ನು ನಡೆಸಲು ಸ್ಫೂರ್ತಿಯನ್ನು, ಉತ್ಸಾಹವನ್ನು ತುಂಬುವನು.

ಏಕಾದಶೀವ್ರತವೇ ಮುಂತಾದ ಶ್ರಮಸಾಧ್ಯ ಸಾಧನೆಗಳಲ್ಲಿ ತೊಡಗುವಾಗ ಭಗವಂತನನ್ನು 'ಶ್ರಮಣ' ನಾಮದಿಂದ ಉಪಾಸನೆ ಮಾಡುತ್ತಿರಬೇಕು. ಏನೂ ಶ್ರಮ ಇಲ್ಲದೆ, ಅನಾಯಾಸವಾಗಿ ನಮ್ಮಿಂದ ಆ ಸಾಧನೆಗಳನ್ನು ಭಗವಂತ ನಡೆಸುವನು.

ಎಂಟು ನೂರು ವರ್ಷ ವಯಸ್ಸಿನ ಮುದುಕ ಭೀಷ್ಮರು **'ವೃದ್ಧೋಽಪಿ ತರುಣಾಯತೇ'** - ಎಂದು ಮಧ್ವರಿಂದಲೂ ಹೊಗಳಿಸಿಕೊಳ್ಳುವಷ್ಟು ಅನಾಯಾಸವಾಗಿ ಯುದ್ಧ ನಡೆಸಬೇಕೆಂದರೆ 'ಶ್ರಮಣ' ನಾಮಕನ ವಿಶೇಷ ಅನುಗ್ರಹ ಕಾರಣ ಎಂಬುದು ಸ್ಪಷ್ಟ.

**೮೫೮. ಕ್ಷಾಮಃ – ಶ್ರಮ ಪ್ರಯುಕ್ತ ನಾಶ ರಹಿತನಾದವನು.**

**ವಿವರಣೆ:** ಕ್ಷ + ಆ + ಮ - ಈ ಮೂರು ಶಬ್ದಗಳು ಸೇರಿ 'ಕ್ಷಾಮಃ'- ಎಂಬ ನಾಮ ರೂಪುಗೊಂಡಿದೆ.

ಕ್ಷ ಎಂದರೆ ಕ್ಷಯ. ಆ - ಚೆನ್ನಾಗಿ ಮ -ಇಲ್ಲದವನು. ನಾಶವನ್ನು ಚೆನ್ನಾಗಿ ಕಳೆದುಕೊಂಡವನು. ಯಾವ ನಾಶ ? ಶ್ರಮ ಪ್ರಯುಕ್ತವಾದ ನಾಶ. ಶ್ರಮ ಆಯಿತೆಂದರೆ ಯಾವ ಕಾರ್ಯವನ್ನೂ ನಡೆಸಲಾಗದೆ ಸತ್ತಂತೆಯೇ. ಇನ್ನೊಬ್ಬರ ಶ್ರಮವನ್ನು ದೂರ ಮಾಡಿ ಶ್ರಮಣ ಎನಿಸಿರುವ ಭಗವಂತನಿಗೆ ಸ್ವಲ್ಪವೂ ಶ್ರಮ ಇಲ್ಲ. ಆದುದರಿಂದಲೇ ಶ್ರಮ ಪ್ರಯುಕ್ತವಾದ ನಾಶವೂ ಇಲ್ಲ.

ನಾವು ನಿದ್ರಿಸುವಾಗ ಕಣ್ಣಿಗೆ ಎಣ್ಣೆ ಹಾಕಿ ಕೊಂಡಿರುವವನಂತೆ ರಕ್ಷಿಸುತ್ತಿರುತ್ತಾನೆ. ಅಷ್ಟಾದರೂ ಅವನಿಗೆ ಸ್ವಲ್ಪವೂ ಶ್ರಮ ಇಲ್ಲ. ನಮಗೆ ಒಂದು ದಿನ ನಿದ್ದೆ ಬಿಟ್ಟರೂ ಮರುದಿನ ಪೂರ್ತಿ ಬಳಲಿಕೆ ಬಾಧಿಸುತ್ತಿರುತ್ತದೆ. ಯಾಕೆ, ಹತ್ತು ಗಂಟೆಗೆ ಮಲಗುವವರು ಹನ್ನೊಂದು ಗಂಟೆಗೆ ಮಲಗಿದರೆಂದರೆ ಅದರಿಂದಾಗಿ ಮರುದಿನ ಪೂರ್ತಿ ಆಕಳಿಕೆ, ತೂಕಡಿಕೆ ನಡೆಸುತ್ತಿರುತ್ತಾರೆ. ಆದರೆ ದೇವರು **'ಯದಸುಪ್ತಿಗತೋಽಪಿ ಹರಿಃ ಸುಖವಾನ್ ಸುಖರೂಪಿಣಮಾಹುರತೋ ನಿಗಮಾಃ'** - ಎಂದು ಶ್ರೀ ಮಧ್ವರು ತಿಳಿಸಿರುವಂತೆ ನಿದ್ದೆಯೇ ಇಲ್ಲದಿದ್ದರೂ ಏನೂ ಶ್ರಮವಿಲ್ಲದೆ ಸುಖಿಯಾಗಿಯೇ ಇರುವನು.

ಹೀಗೆ ಸ್ವಲ್ಪವೂ ಶ್ರಮವಿಲ್ಲದವನಾಗಿ, ಶ್ರಮ ಪ್ರಯುಕ್ತವಾದ ನಾಶದಿಂದಲೂ ದೂರನಾಗಿರುವನೆಂದು 'ಕ್ಷಾಮ' - ಎಂದು ಸ್ತುತನಾಗಿರುವನು.

**೮೫೯. ಸುಪರ್ಣಃ – ಒಳ್ಳೆಯ ವೇದಗಳೆಂಬ ಮನೆ ಉಳ್ಳವನು.**

**ವಿವರಣೆ :** ಪರ್ಣ ಎಂದರೆ ಎಲೆ. ಯಾಕೆ ಎಲೆ ಪರ್ಣ ಎನಿಸುವುದು ? ಪ್ರೀಣಯತಿ - ತೃಪ್ತಿ ಪಡಿಸುವುದು - ಪರ್ಣ. ಬಿಸಿಲಿನ ಬೇಗೆಗೆ ಬಳಲಿ ಬಂದವನನ್ನು ನೆರಳು ನೀಡಿ ತೃಪ್ತಿ ಪಡಿಸುವಂತಹವುಗಳು ಮರದ ಎಲೆಗಳು. ಹೊರತು ಮರವಾಗಲೀ, ಗೆಲ್ಲಾಗಲೀ ಅಲ್ಲ. ಹೀಗೆ ತೃಪ್ತಿ ಪಡಿಸುವ ಪ್ರಯುಕ್ತ ಎಲೆ ಪರ್ಣ ಎನಿಸುವುದು.

ಭಗವಂತನು ಒಳ್ಳೆಯ ಪರ್ಣ. ಅಂದರೆ ಎಲೆಗಳನ್ನು ಹೊಂದಿರುವವನು. ಯಾವ ಎಲೆಗಳು ?

**'ಛಂದಾಂಸಿ ಯಸ್ಯ ಪರ್ಣಾನಿ.....'** - ಎಂದು ಗೀತೆಯಲ್ಲಿ ತಿಳಿಸಿದಂತೆ ವೇದಗಳೇ ಎಲೆಗಳು. ಈ ಎಲೆಗಳು ಎಂದೆಂದೂ ನಾಶ ಹೊಂದದವು. ಚತುರ್ಮುಖನ ಲೋಕಗಳಿಗೆ ನಾಶವಾದರೂ ಆ ವೇದಗಳೆಂಬ ಪರ್ಣಗಳಿಗೆ ನಾಶವಿಲ್ಲ. ಆದುದರಿಂದಲೇ ಅವು ಸುಪರ್ಣಗಳು ಒಳ್ಳೆಯ ಎಲೆಗಳು. ಅವುಗಳಲ್ಲಿ ಭಗವಂತ ನೆಲೆಸಿದ್ದಾನೆ. ಮುಖ್ಯ ಪ್ರತಿಪಾದ್ಯನಾಗಿ ಸೇರಿಕೊಂಡಿರುವವನು. ಆದುದರಿಂದ ಆ ಎಲೆಗಳೇ ಅವನ ಭದ್ರವಾದ ಮನೆ. ಮನೆ ಚೆನ್ನಾಗಿದ್ದರೆ ಅಲ್ಲಿ ಚೆನ್ನಾಗಿ ವಿಶ್ರಾಂತಿ ಪಡೆಯಬಹುದು ತಾನೇ ? ದೇವರಿಗೂ ವೇದವೆಂಬ ಒಳ್ಳೆಯ ಮನೆ ಇರುವುದರಿಂದ ಏನೂ ಶ್ರಮ ಇಲ್ಲ ಎಂದು 'ಕ್ಷಾಮ' ಎನಿಸುವನು.

ಹೀಗೆ ಕ್ಷಾಮ ನಾಮದಲ್ಲಿ ಸೂಚಿತವಾದ ಭಗವಂತನಿಗೆ ಶ್ರಮವಿಲ್ಲ ಎಂಬ ವಿಚಾರಕ್ಕೆ ಪೂರಕವಾಗಿ 'ಸುಪರ್ಣಃ' - ಎಂಬ ನಾಮವು ವೇದವೆಂಬ ಮನೆಯಲ್ಲಿ ಇರುವವನು ಅವನೆಂದು ಪ್ರತಿಪಾದಿಸುತ್ತಿದೆ.

**೮೬೦. ವಾಯುವಾಹನಃ – * ಚತುರ್ಮುಖನ ರೂಪದಲ್ಲಿರುವ ವಾಯುದೇವನನ್ನು ತನ್ನ ನಾಭಿಕಮಲದಲ್ಲಿ ಹೊತ್ತಿರುವವನು.**

*** ಭೀಮಸೇನನನ್ನು ಮಹಾಭಾರತ ಯುದ್ಧದಲ್ಲಿ ಧರಿಸಿರುವವನು.**

**ವಿವರಣೆ :** ಹಿಂದೊಮ್ಮೆ 'ವಾಯುವಾಹನಃ' - ಎಂಬ ನಾಮ ಬಂದಿದೆ. ಅದಕ್ಕೆ ವಾಯುದೇವನೇ ವಾಹನನಾಗಿ ಉಳ್ಳವನೆಂಬ ಅರ್ಥವನ್ನು ಕಂಡಿದ್ದೆವು. ಈಗ ಮತ್ತೊಂದು ಅರ್ಥ - ವಾಯುಂ ವಹತೀತಿ ವಾಯುವಾಹನಃ ವಾಯುದೇವನನ್ನು ಹೊತ್ತುಕೊಳ್ಳುವವನು ಎಂದು.

ದೇವರು ಯಾವಾಗ ವಾಯುದೇವನನ್ನು ಹೊತ್ತುಕೊಳ್ಳುವನು? ಮಹಾಪ್ರಳಯದಲ್ಲಿ ವಾಯುದೇವ ಮೊದಲು ಲಕ್ಷ್ಮೀದೇವಿಯ ಹೊಟ್ಟೆಯೊಳಗೆ

ಹೊಕ್ಕುವನು. ಅಲ್ಲಿ ಅವನ ದೇಹವನ್ನು ನಾಶಗೈದು ಅವನ ಚೇತನವನ್ನು ಮಾತ್ರ ಲಕ್ಷ್ಮೀದೇವಿ ದೇವರ ಉದರದೊಳಗೆ ಕಳುಹಿಸುವಳು. ಅಲ್ಲಿ ವಾಯುದೇವನಿಗೆ ಚತುರ್ಮುಖನ ರೂಪ ತೊಡಿಸಿ ಭಗವಂತ ಸೃಷ್ಟಿಯ ಪ್ರಾರಂಭದಲ್ಲಿ ತನ್ನ ನಾಭಿಕಮಲದಲ್ಲಿ ಅವನನ್ನು ಹೊತ್ತುಕೊಳ್ಳುವನು. ಹೀಗೆ ತನ್ನ ನಾಭಿಕಮಲದಲ್ಲಿ ಚತುರ್ಮುಖನ ರೂಪ ತೊಟ್ಟ ವಾಯುದೇವನನ್ನು ಹೊತ್ತಿರುವ ಪ್ರಯುಕ್ತ ಭಗವಂತ ವಾಯುವಾಹನ ಎನಿಸುವನು.

ಅನಂತಶಯನದಲ್ಲಿ ಭಗವಂತ ಮಲಗಿಯೇ ಇದ್ದಾನೆ. ವಾದಿರಾಜಸ್ವಾಮಿಗಳು. ಕಾದರು, ಕಾದರು ಎದ್ದೇ ಇಲ್ಲ.

ಯಾಕೆ ಏಳಲಿಲ್ಲ ? ಎಂದು ವಿಚಾರಿಸುವರು.

ನಿನ್ನ ಹೊಕ್ಕುಳ ಕಮಲದಲ್ಲಿ ಬರೇ ಐವತ್ತು ವರ್ಷದ ಒಂದು ಕೂಸು ಇದೆ. ಕೂಡಲೇ ಎದ್ದು ಬಿಟ್ಟರೆ ಅದೆಲ್ಲಾದರೂ ಬಿದ್ದು ಬಿಟ್ಟೀತು ! - ಹಾಗಗಬಾರದೆಂದು ಮಲಗಿಯೇ ಇರುವಿಯಾ ? - ಎಂದು ಅನಂತಶಯನನಲ್ಲಿ ಕೇಳಿದ್ದಾರೆ.

ಈ ರೀತಿಯಾಗಿ ಸೃಷ್ಟಿಯ ಆರಂಭದಲ್ಲಿ ಚತುರ್ಮುಖನ ರೂಪ ತೊಟ್ಟ ವಾಯುದೇವನನ್ನು ಹೊತ್ತದ್ದರಿಂದ ಭಗವಂತ ವಾಯುವಾಹನ. ಹಾಗೆಯೇ ಕೃಷ್ಣ ಮಹಾಭಾರತ ಯುದ್ಧದಲ್ಲಿ ಭೀಮಸೇನರೂಪದ ವಾಯುವನ್ನು ವಿಶೇಷ ರಕ್ಷಣೆ ಮಾಡುತ್ತಿದ್ದದರಿಂದಲೂ 'ವಾಯುವಾಹನ' - ಎನಿಸಿರುವನು.

**ಧನುರ್ಧರೋ ಧನುರ್ವೇದೋ ದಂಡೋ ದಮಯಿತಾ ದಮಃ |**
**ಅಪರಾಜಿತಃ ಸರ್ವಸಹೋನಿಯಂತಾ ನಿಯಮೋ ಯಮಃ ||೯೨||**

**೮೬೧. ಧನುರ್ಧರಃ – * ಬಿಲ್ಲನ್ನು ಧರಿಸಿರುವವನು.**

***  ಓಂಕಾರದಿಂದ ವಾಚ್ಯನಾಗಿರುವವನು.**

ವಿವರಣೆ: 'ಧನುರ್ಧರಃ' - ಎಂಬುದಕ್ಕೆ ಧನುಸ್ಸನ್ನು, ಬಿಲ್ಲನ್ನು ಧರಿಸಿರುವವನೆಂಬ ಪ್ರಸಿದ್ಧಾರ್ಥ ಇದ್ದೇ ಇದೆ.

ಇದರ ಜೊತೆಗೆ ಮತ್ತೊಂದು ಅರ್ಥ - 'ಪ್ರಣವೋ ಧನುಃ.....' ಎಂದು ಉಪನಿಷತ್ತು ತಿಳಿಸಿರುವಂತೆ ಧನುಃ ಎಂದರೆ ಪ್ರಣವ, ಓಂಕಾರ. ಅದನ್ನು ಧಾರಣೆ ಮಾಡಿರುವವನೇ ಧನುರ್ಧರ. ಪ್ರಣವವನ್ನು ಧಾರಣೆ ಮಾಡುವುದೆಂದರೇನು? ಪ್ರಣವದಿಂದ ಪ್ರತಿಪಾದ್ಯನಾಗಿರುವುದು. ಓಂಕಾರ ಪ್ರತಿಪಾದ್ಯನಾಗಿರುವವನು ಭಗವಂತ ಮಾತ್ರ. ಆದುದರಿಂದ ಪ್ರಣವ ರೂಪವಾದ ಧನುಸ್ಸನ್ನು ಧಾರಣೆ ಮಾಡಲು

ಬೇಕಾದ ಪೂರ್ಣ ಅರ್ಹತೆ ಹೊಂದಿರುವವನು. ಅಂದರೆ ಓಂಕಾರದಿಂದ ಪೂರ್ಣವಾಗಿ ಪ್ರತಿಪಾದ್ಯನಾಗಿರುವವನು.

ನಮ್ಮಲ್ಲಿ ಹೆಸರಿಗೂ ಆಯಾ ವ್ಯಕ್ತಿಯಲ್ಲಿರುವ ಗುಣಧರ್ಮಗಳಿಗೂ ಸಂಬಂಧ ಇರುವುದಿಲ್ಲ. ಎದೆ ಸೀಳಿದರೆ ಎರಡು ಅಕ್ಷರಗಳೂ ಸಿಗದ ವ್ಯಕ್ತಿಗೂ ವೇದವ್ಯಾಸ ಎಂದು ಹೆಸರಿಡುವುದಿದೆ. ಮಹಾ ಕಟುಕನಿಗೂ 'ದಯಾನಿಧಿ' - ಎಂಬ ಹೆಸರಿಡುವುದಿದೆ.

ನಮ್ಮಲ್ಲಿ ಅತ್ಯಂತ ಎತ್ತರದ ಹೆಸರುಗಳನ್ನೂ, ಅತ್ಯಂತ ಕೆಳಮಟ್ಟದ ಹೆಸರುಗಳನ್ನೂ ಇಡುವ ಕ್ರಮ ಇಲ್ಲ. ಆದುದರಿಂದಲೇ 'ಓಂ' ಹೆಸರನ್ನು ಇಡುವುದಿಲ್ಲ. ಅತ್ಯಂತ ಕೆಳ ಮಟ್ಟದ 'ರಾವಣ' 'ಕುಂಭಕರ್ಣ' - ಇತ್ಯಾದಿ ಹೆಸರನ್ನು ಇಡುವ ಕ್ರಮ ಇಲ್ಲ. ಸರಕಾರದವರು ಅಂತಹ ಪ್ರಶಸ್ತಿಯನ್ನೋ, ಬಿರುದನ್ನೋ ಕೊಡುವ ಕ್ರಮವೂ ಬಂದಿಲ್ಲ.

ಹೀಗೆ ಓಂಕಾರದಿಂದ ವಾಚ್ಯನಾಗಿರುವವನು ಭಗವಂತನೊಬ್ಬನೇ ಆಗಿರುವುದರಿಂದ ಅವನೇ 'ಧನುರ್ಧರ.'

**೮೬೨. ಧನುರ್ವೇದಃ – * ಓಂಕಾರದ ಅರ್ಥವನ್ನು ತಿಳಿದು ಕೊಂಡವನು.**

*** ಓಂಕಾರದ ಅರ್ಥವನ್ನು ತಿಳಿಸಿಕೊಡುವವನು.**

ವಿವರಣೆ : ಹೆಸರು ಇಟ್ಟುಕೊಳ್ಳುವುದು ಮುಖ್ಯವಲ್ಲ, ಅದರ ಅರ್ಥವನ್ನು ತಿಳಿದುಕೊಂಡು ಆದಷ್ಟು ಆ ಅರ್ಥಕ್ಕೆ ಅನುಗುಣವಾಗಿ ಬದುಕಲಿಕ್ಕೆ ಯತ್ನ ಪಡಬೇಕು. ಅದಕ್ಕಾಗಿಯೇ ಮಕ್ಕಳಿಗೆ ವಿಶಿಷ್ಟಗಳಾದ ಹೆಸರುಗಳನ್ನೇ ಇಡುವುದು. ಆ ಹೆಸರುಗಳ ಅರ್ಥವನ್ನು ತಿಳಿದು ಅದಕ್ಕೆ ಅನುಗುಣವಾಗಿ ತಮ್ಮ ವ್ಯಕ್ತಿತ್ವವನ್ನು ರೂಪಿಸಿಕೊಳ್ಳಲಿ ಎಂದು. ಈ ಉದ್ದೇಶ ಇಲ್ಲದಿದ್ದರೆ ಒಂದು, ಎರಡು, ಮೂರು ಇತ್ಯಾದಿಯಾಗಿ ಸಂಖ್ಯಾವಾಚಕ ಶಬ್ದಗಳನ್ನೇ ಮಕ್ಕಳ ಹೆಸರನ್ನಾಗಿ ಇಡಬಹುದು ತಾನೇ ? ಶಾಲೆಯಲ್ಲಿ ಹೇಗೋ ಹಾಗೆ ಸಂಖ್ಯಾವಾಚಕ ಶಬ್ದಗಳಿಂದಲೂ ಕರೆಯಬಹುದು ತಾನೇ ?

ದೇವರಿಗೆ ಇಟ್ಟ ಹೆಸರು ಓಂಕಾರ. ಯಾರು ಇಟ್ಟ ಹೆಸರು? ವೇದಗಳು ಅನಾದಿಯಾಗಿ ದೇವರಿಗೆ ಇಟ್ಟ ಹೆಸರು. ದೇವರಾದರೂ ತನ್ನ ಓಂಕಾರ ಎಂಬ ಹೆಸರಿನ ಅರ್ಥವನ್ನು ಅರಿತು ಅದಕ್ಕನುಗುಣವಾಗಿ ತನ್ನ ಜೀವನವನ್ನು ರೂಪಿಸಿರುವನು. ಅ+ಉ+ಮ - ಗಳು ಸೇರಿ ಓಂ ಎಂದಾಗಿದೆ. ಅ ಎಂದರೆ ಅಜ, ಉ ಎಂದರೆ ಉತ್ತಮ, ಮ ಎಂದರೆ ಜ್ಞಾನರೂಪಿ. ಭಗವಂತ ಓಂಕಾರದ ಈ ಅರ್ಥಗಳನ್ನು

ಅರಿತು ತಾನು ಅಜನಾಗಿ, ಸರ್ವೋತ್ತಮನಾಗಿ, ಜ್ಞಾನರೂಪಿಯಾಗಿ ಮೆರೆಯುತ್ತಿದ್ದಾನೆ. ಆದುದರಿಂದ ಅವನು 'ಧನುರ್ವೇದ.' ತನಗಿಟ್ಟ ಹೆಸರಾದ ಓಂಕಾರದ ಅರ್ಥವನ್ನು ಬಲ್ಲವನಾಗಿರುವನು.

ಇಷ್ಟೇ ಅಲ್ಲ, ಧನುಃ ವೇದಯತೀತಿ ಧನುರ್ವೇದಃ - ಉಳಿದ ಯೋಗ್ಯ ಅಧಿಕಾರಿಗಳಿಗೆ ಓಂಕಾರದ ಬಗ್ಗೆ ಉಪದೇಶವನ್ನೂ ನೀಡುವನು. ಹೀಗೆ ಓಂಕಾರವನ್ನು ತಿಳಿಸಿಕೊಡುವನು.

ಹೀಗೆ ತನ್ನ ಅಸಾಧಾರಣ ನಾಮ ಎನಿಸಿರುವ ಓಂಕಾರವನ್ನು ತಾನು ತಿಳಿದವನಾಗಿ ನಮಗೆಲ್ಲರಿಗೂ ಸಂದೇಶವನ್ನು ಸೂಚಿಸುವನು - ನಿಮ್ಮ ನಿಮ್ಮ ನಾಮದ ಅರ್ಥವನ್ನು ತಿಳಿದು ಆ ಅರ್ಥಕ್ಕೆ ಆದಷ್ಟು ಅನುಗುಣವಾಗಿ ಬದುಕಲು ಯತ್ನಿಸಿ.

**೮೭೩. ದಂಡಃ – ಶಿಕ್ಷೆ ಕೊಡುವವನು.**

**ವಿವರಣೆ:** ನಮ್ಮಲ್ಲಿ ಅತ್ಯಂತ ಅಪ್ರಯೋಜಕ ವಸ್ತುವನ್ನೋ ವ್ಯಕ್ತಿಯನ್ನೋ ಬರೇ 'ದಂಡ!'- ಎಂದು ಕರೆಯುವುದಿದೆ.

ಆದರೆ ದೇವರು ಆ ಅರ್ಥದಲ್ಲಿ ದಂಡ ಅಲ್ಲ. ಮತ್ತೆ ದಂಡಯತಿ ಶಿಕ್ಷಯತೀತಿ ದಂಡ, ಶಿಕ್ಷೆ ಕೊಡುವವನು ದಂಡ.

ಭಗವಂತ ಬರೇ ದುರ್ಜನರಿಗಷ್ಟೇ ಅಲ್ಲ ಸಜ್ಜನರಿಗೂ ಶಿಕ್ಷೆ ಕೊಡುವವನು. ಯಾಕೆ ?

**'ಅಸತಾಂ ಚ ಸತಾಂ ಚೈವ ಹರಿರೇವಾನುಶಾಸಕಃ'** - ಎಂದು ಹಿರಿಯರು ತಿಳಿಸಿರುವಂತೆ ಅಸಜ್ಜನರಿಗೂ, ಸಜ್ಜನರಿಗೂ ಅವನು ಅನುಶಾಸಕ. ಸಜ್ಜನರು ತಮ್ಮ ನಡತೆಯನ್ನು ಸರಿಪಡಿಸಿಕೊಂಡು ಉದ್ಧಾರ ಆಗಲಿ - ಎಂಬ ದೃಷ್ಟಿಯಿಂದ, ದುರ್ಜನರಾದರೂ ತಮಗೆ ದಂಡನೆ ನೀಡಿದ ಬಗ್ಗೆ ಇನ್ನಷ್ಟು ದ್ವೇಷ ಮಾಡಿ ದುರ್ಗತಿಯನ್ನು ಹೊಂದಲಿ - ಎಂಬ ದೃಷ್ಟಿಯಿಂದ. ಮತ್ತೆ ಕೆಲವರು ಹೇಳುವುದುಂಟು 'ನಮಗೆ ದೇವರೂ ಬೇಡ, ದಿಂಡರೂ ಬೇಡ, ನಾವು ತೆಪ್ಪಗಿರುತ್ತೇವೆ'- ಎಂದು. ಅದೂ ಸರಿಯಲ್ಲ. ದೇವರು ಅವನಿಗೆ ಒಳ್ಳೆಯ ಮಾತು, ಕೈಕಾಲು ಮುಂತಾದ ಇಂದ್ರಿಯಗಳನ್ನು ದೇಹವನ್ನು ಕೊಟ್ಟದ್ದು ಯಾಕೆ ? ಸುಮ್ಮನಿರುವುದಕ್ಕೆ ಅಲ್ಲ ತಾನೇ ? ದೇವರ ಸೇವೆ, ಚಿಂತನೆ ಇತ್ಯಾದಿಗಳನ್ನು ಮಾಡುವುದಕ್ಕಾಗಿಯೇ. ಹೀಗಿದ್ದರೂ ದೇಹವನ್ನು, ಇಂದ್ರಿಯಗಳನ್ನು ದೇವರ ಸೇವೆಗೆ

ಬಳಸಿಕೊಳ್ಳಲಿಲ್ಲ ಎಂದರೆ ದೇವರು ಅಂತಹವರಿಗೂ ಶಿಕ್ಷೆ ಕೊಡ್ತಾನೆ. ಮುಂದಿನ ಜನ್ಮದಲ್ಲಿ ಅಂತಹವರನ್ನು ಕುರುಡರನ್ನಾಗಿ, ಹೆಳವರನ್ನಾಗಿ, ಕಿವುಡರನ್ನಾಗಿ ಮಾಡುತ್ತಾನೆ. ಇದೇ ದೇವರು ಅವರಿಗೆ ತಮ್ಮ ಇಂದ್ರಿಯಾದಿಗಳನ್ನು ಸದುಪಯೋಗ ಪಡೆದುಕೊಳ್ಳದ್ದಕ್ಕೆ ಕೊಡುವ ಶಿಕ್ಷೆ.

**೮೬೪. ದಮಯಿತಾ – ಇಂದ್ರಿಯಗಳನ್ನು ಹಿಡಿತದಲ್ಲಿ ಬರುವಂತೆ ಮಾಡುವವನು.**

ವಿವರಣೆ : ಕೆಲವೊಮ್ಮೆ ನಮ್ಮದೇ ಗಾಡಿಯಾದರೂ ಅದನ್ನು ನಮಗೆ ಬೇಕಾದಂತೆ ದುಡಿಸಿಕೊಳ್ಳಲಿಕ್ಕೆ ಆಗುವುದಿಲ್ಲ ಎಂದಾದಾಗ ಮತ್ತೊಬ್ಬ ಪರಿಣತನನ್ನು ಕರೆದು ಅವನ ಮೂಲಕ ಅದು ನಮ್ಮ ಹಿಡಿತದಲ್ಲಿ ಬರುವಂತೆ ಮಾಡುವುದುಂಟು.

ಅದೇ ರೀತಿಯಾಗಿ ನಮ್ಮದೇ ಇಂದ್ರಿಯಗಳು. ಆದರೆ ನಮ್ಮ ಹಿಡಿತದಲ್ಲಿ ಇಲ್ಲ. ಅದಕ್ಕಾಗಿ ‘ಹೃಷೀಕೇಶ’ - ಎನಿಸುವ ದೇವರನ್ನು ಭಿನ್ನವಿಸಿಕೊಳ್ಳಬೇಕು. ನೀನು ನನ್ನ ಇಂದ್ರಿಯಗಳಲ್ಲಿದ್ದು, ಆ ಇಂದ್ರಿಯಾಶ್ವಗಳ ಲಗಾಮು ನನ್ನ ಕೈಯಲ್ಲಿ ತಂದು ಕೊಡು ಎಂದು. ದೇವರು ಹಾಗೆ ಮಾಡುವನು. ಅದಕ್ಕಾಗಿಯೇ ಅವನನ್ನು ದಮಯಿತಾ ಎಂದು ಕರೆಯಲಾಗುವುದು. ಇಂದ್ರಿಯಗಳ ದಮನವನ್ನು ಮಾಡಿಸಿ ಕೊಡುವನು. ಸಾಧಕರ ಹಿಡಿತಕ್ಕೆ ಅವರ ಇಂದ್ರಿಯಗಳು ಸಿಗುವಂತೆ ಮಾಡುವನು.

‘ದೇವವ್ರತ ’- ಎಂದು ಹೆಸರನ್ನು ಹೊತ್ತಿದ್ದ ಭೀಷ್ಮರು ದೇವತೆಗಳಿಂದ ‘ಭೀಷ್ಮ’ - ಎಂಬ ಬಿರುದು ಪಡೆದದ್ದೇ ತಂದೆ ಶಂತನುವಿಗಾಗಿ ಕೈಗೊಂಡ ಬ್ರಹ್ಮಚರ್ಯ ಮುಂತಾದ ಪ್ರತಿಜ್ಞೆಗಳಿಗಾಗಿ. ಅಂತಹ ಪ್ರತಿಜ್ಞೆಗಳನ್ನು ಈಡೇರಿಸುವುದಕ್ಕಾಗಿ ಇಂದ್ರಿಯಗಳ ಹಿಡಿತವನ್ನು ಸಾಧಿಸುವಂತೆ ಮಾಡಿರುವವನು ಭಗವಂತ. ಭೀಷ್ಮರು ತಮ್ಮ ಬಗ್ಗೆ ಮಾಡಿದ ಭಗವಂತನ ಈ ಬಗೆಯ ಅನುಗ್ರಹವನ್ನು ಮೆಲುಕು ಹಾಕುತ್ತ ‘ದಮಯಿತಾ’- ಎಂದು ಸ್ತುತಿಸಿರುವರು.

**೮೬೫. ದಮಃ – ಚತುರ್ಮುಖನ ಮೂಲಕ ದೇವತೆಗಳು, ದೈತ್ಯರು ಹಾಗೂ ಮಾನವರು ಇವರಿಗೆ ದಕಾರದ ಮರ್ಮವನ್ನು ತಿಳಿಸಿಕೊಟ್ಟಿರುವವನು.**

ವಿವರಣೆ: ದ + ಮಃ - ಎಂಬ ಎರಡು ಅಕ್ಷರಗಳು ಸೇರಿ ‘ದಮ’ - ಎಂಬ ನಾಮ ರೂಪುಗೊಳ್ಳುವುದು. ದ ಎಂದರೆ ದಕಾರದ, ಮ ಎಂದರೆ ಮರ್ಮವನ್ನು , ರಹಸ್ಯವನ್ನು ತಿಳಿಸಿರುವವನು ಎಂದರ್ಥ.

ಇದರ ಹಿನ್ನಲೆಯ ಕಥೆ ಉಪನಿಷತ್ತಿನಲ್ಲಿ ಪ್ರಸ್ತಾಪಿಸಲ್ಪಟ್ಟಿದೆ.

ಒಮ್ಮೆ ದೇವರ ಅಣತಿಯ ಮೇರೆಗೆ ಚತುರ್ಮುಖ ದೇವತೆಗಳನ್ನು, ದೈತ್ಯರನ್ನು ಹಾಗೂ ಮಾನವರನ್ನು ಕರೆಯುವನು. ನಿಮಗೆ ಪಾಠ ಹೇಳ್ತೇನೆ ಎಂದು ತಿಳಿಸಿ 'ದ' 'ದ' 'ದ' - ಎಂದು ಉಪದೇಶಿಸುವನು.

ಅವರಿಗೆ ಯಾರಿಗೂ ರಹಸ್ಯ ತಿಳಿದಿಲ್ಲ. ಕೊನೆಗೆ ಚತುರ್ಮುಖನೇ ಅದನ್ನು ವಿವರಿಸಬೇಕಾಯಿತು.

ದೇವತೆಗಳಲ್ಲಿ ಸಾಕಷ್ಟು ಸಂಪತ್ತು ಇದೆ. ಸಮುದ್ರ ಮಥನದ ಸಂದರ್ಭದಲ್ಲಿ ಐರಾವತ, ಉಚ್ಚೈಃಶ್ರವಸ್, ಅಪ್ಸರ ಸ್ತ್ರೀಯರು ಹೀಗೆ ಬೇರೆ ಬೇರೆ ಬಗೆಯ ಸಂಪತ್ತನ್ನು ದೇವರು ದೇವತೆಗಳಿಗೆ ತಲುಪಿಸಿರುವನು. ಸಂಪತ್ತು ಇದೆ ಎಂದು ಮಿತಿ ಮೀರಿ ಅದನ್ನು ಅನುಭವಿಸುವುದಲ್ಲ. ಅಡುಗೆ ಚೆನ್ನಾಗಿದೆ ಎಂದು ಹೊಟ್ಟೆ ಬಿರಿಯುವಷ್ಟು ಊಟ ಮಾಡುವುದಲ್ಲ. ಆದುದರಿಂದ ಅಧಿಕ ಸಂಪತ್ತನ್ನು, ಸುಖ ಸೌಲಭ್ಯವನ್ನು ಪಡೆದಿರುವ ದೇವತೆಗಳು ದಮವನ್ನು, ಇಂದ್ರಿಯನಿಗ್ರಹವನ್ನು ಅಳವಡಿಸಿಕೊಳ್ಳಬೇಕು.

ಇದು ಚತುರ್ಮುಖ ದೇವತೆಗಳಿಗೆ ವಿವರಿಸಿದ ದಕಾರದ ಮರ್ಮ.

ಕೂಡಲೇ ದೈತ್ಯರು ಬಂದರು ನಮಗೆ ಯಾವ ಉಪದೇಶ ? ಎಂದು. ಚತುರ್ಮುಖ ಹೇಳ್ತಾನೆ, ಅವಸರ ಮಾಡಬೇಡಿ. ಸ್ವಲ್ಪ ದಯೆ ತೋರಿ. ನಿಮಗೂ ತಿಳಿಸ್ತೇನೆ ದಕಾರದ ಮರ್ಮವನ್ನು.

ನೀವು ಯಾವಾಗಲೂ ಕಡಿದು ಬಡಿದು ಬದುಕುತ್ತಿರುವವರು. ಸಿಕ್ಕವರನ್ನೆಲ್ಲ ಕಡಿಯುವವರು, ಸಿಕ್ಕಿದ್ದನ್ನೆಲ್ಲ ಕಸಿದುಕೊಳ್ಳುವವರು. ಹೀಗಾಗಬಾರದು. ಉಳಿದವರ ಮೇಲೆ ಸ್ವಲ್ಪ 'ದಯೆ'ಯನ್ನು ತೋರಿಸಿ. ನಿಮ್ಮ ಕಡಿಯುವ, ಬಡಿಯುವ ಪ್ರವೃತ್ತಿಯನ್ನು ಕಡಿಮೆ ಮಾಡಿ.

ಇದು ದೈತ್ಯರಿಗೆ ಕೊಟ್ಟ ದಕಾರದ ಮರ್ಮ.

ಮನುಷ್ಯರು ಔದಾಸೀನ್ಯ ಸ್ವಭಾವದವರು. ಚತುರ್ಮುಖನೇ ಅವರನ್ನು ತನ್ನಲ್ಲಿಗೆ ಕರೆದು 'ನೀವು ದಾನ ಮಾಡಿ' - ಶ್ರದ್ಧೆಯಿಂದ, ತಿಳುವಳಿಕೆಯೊಂದಿಗೆ ದಾನ ಮಾಡಬೇಕು. ಒಂದು ವೇಳೆ ಅದಾಗದಿದ್ದರೆ ಅಶ್ರದ್ಧೆಯಿಂದಾದರೂ ಭೀತಿಗೊಳಗಾಗಿಯಾದರೂ, ಪ್ರತಿಷ್ಠೆಗಾಗಿಯಾದರೂ ದಾನ ಮಾಡಿ.

ಇದು ಮನುಷ್ಯರಿಗೆ ತಿಳಿಹೇಳಿದ ದಕಾರದ ಮರ್ಮ.

ಈ ರೀತಿಯಾಗಿ ಭಗವಂತನು ಚತುರ್ಮುಖನ ಮೂಲಕ ದೇವತೆಗಳಿಗೆ,

ದೈತ್ಯರಿಗೆ ಹಾಗೂ ಮನುಷ್ಯರಿಗೆ ಅವರವರ ಸ್ವಭಾವಕ್ಕೆ ಒಗ್ಗುವಂತೆ ದಮ, ದಯ, ದಾನ ಎಂಬ ದಕಾರ ಮರ್ಮಗಳನ್ನು ತಿಳಿಸಿಕೊಟ್ಟಿರುವುದರಿಂದ 'ದಮ' ಎನಿಸುವನು.

**೮೬೬. ಅಪರಾಜಿತಃ – ಭಕ್ತರ ಮುಂದೆ ಸೋಲು ಒಪ್ಪಿಕೊಳ್ಳುವವನು.**

ವಿವರಣೆ : ಅಪರ +ಆ+ಜಿತಃ- ಎಂಬ ಮೂರು ಶಬ್ದಗಳು ಸೇರಿ 'ಅಪರಾಜಿತಃ' ಎಂದಾಗುವುದು.

'ತತ್ಪರ' - ಮುಂತಾದೆಡೆ ಪರಶಬ್ದಕ್ಕೆ ಅದರಲ್ಲಿ ಆಸಕ್ತನಾಗಿರುವವನು. ಎಂಬ ಅರ್ಥ. ಹಾಗಾದರೆ 'ಅಪರ'- ಎಂಬಲ್ಲೂ ಅ ಎನಿಸುವ ಭಗವಂತನ ಪರವಾದವರು, ಆಸಕ್ತರಾದವರು ಅಪರರು, ಭಗವದ್ ಭಕ್ತರು. ಅಂತಹವರಿಂದ ಆ ಸ್ವಲ್ಪ ಪ್ರಮಾಮದಲ್ಲಿ ಜಿತಃ ಸೋಲಲ್ಪಟ್ಟವನಂತೆ ಇರುವವನು. ಅಂದರೆ ಭಕ್ತರ ಮುಂದೆ ಸೋಲನ್ನು ಒಪ್ಪಿಕೊಳ್ಳುವವನು. ಭೀಷ್ಮರು ಅಂತಾರೆ- ಕೃಷ್ಣ, ನಿನ್ನ ಈ ಮಹಿಮೆಗೆ ನಾನೇ ಸಾಕ್ಷಿ. ಭೀಷ್ಮರು ಲಗ್ನ ಆಗುವುದಿಲ್ಲ - ಎಂದು ಪ್ರತಿಜ್ಞೆ ಗೈದಿದ್ದರು. ಅಂಬೆ ಹೋಗಿ ಭೀಷ್ಮರ ಗುರುಗಳಾದ ಪರಶುರಾಮನಲ್ಲಿ ಈ ಬಗ್ಗೆ ದೂರಿಡುವಳು. ಪರಶುರಾಮ ಖಂಡಿತಾ ಭೀಷ್ಮರ ಜೊತೆಗೆ ಮದುವೆ ಮಾಡಿಸುವೆನೆಂದು ಅಂಬೆಗೆ ಮಾತು ಕೊಟ್ಟರು. ಭೀಷ್ಮರನ್ನು ಕರೆದು ಮದುವೆ ಮಾಡಿ ಕೊಳ್ಳಲು ಆದೇಶಿಸುವರು. ಭೀಷ್ಮ ಒಪ್ಪುವುದಿಲ್ಲ. ಈ ವಿಷಯದಲ್ಲಿ ಗುರುಶಿಷ್ಯರಿಬ್ಬರೊಳಗೆ ಯುಧ್ಧವೇ ನಡೆಯುವುದು. ಭೀಷ್ಮರ ತಾನು ಮದುವೆಯಾಗುವುದಿಲ್ಲ ಎಂಬ ಪ್ರತಿಜ್ಞೆಯನ್ನು ಉಳಿಸುವುದಕ್ಕಾಗಿ ಪರಶುರಾಮ ಸೋತವನಂತೆ ನಟಿಸುವರು. ಅಂಬೆಯಲ್ಲಿ ತಿಳಿಸುವರು - 'ಮುಂದಿನ ಜನ್ಮದಲ್ಲಿ ನಿಮ್ಮಿಬ್ಬರನ್ನೂ ಜೋಡಿಸುವೆ' ಎಂದು.

ಹೀಗೆ 'ಅಪರರಾದ ಭೀಷ್ಮರಿಂದ ಪರಶುರಾಮ ರೂಪಿ ಪರಮಾತ್ಮ ಸ್ವಲ್ಪ ಸೋತಂತೆ ನಟಿಸಿ 'ಆ ಜಿತಃ' ಆಗಿರುವನು. ಆದುದರಿಂದ ಭಗವಂತ 'ಅಪರಾಜಿತ' ಎನಿಸುವನು.

ಅಪರಾಜಿತ ಎಂಬುದು ಮೇಲ್ನೋಟಕ್ಕೆ ದೇವರನ್ನು ನಿಂದಿಸುವಂತಿರುವ ನಾಮ. ಆದರೆ ಅವನ ಭಕ್ತವಾತ್ಸಲ್ಯವನ್ನು ಸಾರುವ ಮೂಲಕ 'ನಿಂದಾಸ್ತುತಿ' ಎನಿಸುವುದು

**೮೬೭. ಸರ್ವಸಹೋನಿಯಂತಾ – ಎಲ್ಲರ ಸಹನೆಯನ್ನು ನಿಯಮನ ಮಾಡುವವನು.**

ವಿವರಣೆ : ಕೆಲವರು 'ಸರ್ವಸಹಃ' 'ನಿಯಂತಾ'- ಎಂದು ಬೇರೆ ಬೇರೆ ನಾಮವಾಗಿ

ಪರಿಗಣಿಸುವರು. ಆದರೆ ಬೃಹತೀಸಹಸ್ರದ ಮಂತ್ರಕ್ಕನುಗುಣವಾಗಿ ನಾವು ಒಂದೇ ನಾಮವನ್ನಾಗಿ ಇಟ್ಟುಕೊಳ್ಳೋಣ. ಸಹ ಎಂದರೆ ಸಹನಾಶಕ್ತಿ. ಅದನ್ನು ನಿಯಮಿಸುವವನು ಭಗವಂತ. ಎಲ್ಲರ ಸಹನೆಯನ್ನೂ ನಿಯಮಿಸುವವನು. ಆದುದರಿಂದ 'ಸರ್ವಸಹ ನಿಯಂತಾ' ಪಾಂಡವರಿಗೆ ಜೀವನದಲ್ಲಿ ಹೆಜ್ಜೆ ಹೆಜ್ಜೆಗೆ ಕಷ್ಟ ಒದಗಿ ಬಂದರೂ ಅವನ್ನೆಲ್ಲ ಸಹಿಸಿಕೊಳ್ಳುವಂತೆ ನಿಯಮಿಸಿದವನು. ಭೀಮಸೇನ ಎದುರೇ ದುರ್ಯೋಧನಾದಿಗಳು ದ್ರೌಪದಿಯ ವಸ್ತ್ರಾಹರಣದ ದುಷ್ಕೃತ್ಯದಲ್ಲಿ ತೊಡಗಲು ಆ ಕ್ಷಣದಲ್ಲೇ ದುರ್ಯೋಧನಾದಿಗಳನ್ನು ಮುಗಿಸಿ ಬಿಡದೆ ಭೀಮಸೇನ ಅದನ್ನು ಸಹಿಸಿಕೊಳ್ಳುವಂತೆ ಭಗವಂತ ಪ್ರೇರಿಸಿರುವನು. ಹೀಗೆ ಎಲ್ಲರ ಸಹನೆಯನ್ನು ನಿಯಂತ್ರಿಸುತ್ತ 'ಸರ್ವಸಹೋನಿಯತಾ' ಎನಿಸಿರುವ ಭಗವಂತನಲ್ಲಿ ನಮಗೂ ಸಹನಾಕಟ್ಟೆ ಒಡೆಯದಂತೆ ಸಹಿಸಿಕೊಳ್ಳುವ ಸಾಮರ್ಥ್ಯವನ್ನು ನೀಡುವಂತೆ ಪ್ರಾರ್ಥಿಸಿಕೊಳ್ಳಬೇಕು.

**೮೬೮. ನಿಯಮಃ - ನಮ್ಮನ್ನೆಲ್ಲ ಕೊಂಡೊಯ್ಯುವ ಮುಖ್ಯ ಪ್ರಾಣನ ಪಾಲಿಗೂ ನಿಯಾಮಕನಾಗಿರುವವನು.**

**ವಿವರಣೆ :** ನಿ + ಯ + ಮ - ಮೂರು ಶಬ್ದಗಳು ಸೇರಿ 'ನಿಯಮಃ' ಎಂಬ ನಾಮ ರೂಪುಗೊಳ್ಳುವುದು.

ನಯತೀತಿ ನಃ, ಕೊಂಡೊಯ್ಯುವವನು ಎಂಬುದು ನಕಾರದ ಅರ್ಥ. ಚೆನ್ನಾಗಿ ಕೊಂಡೊಯ್ಯುವವನು ಎಂಬ ಅರ್ಥದಲ್ಲಿ ನಕಾರ ಹೋಗಿ 'ನಿ' ಎಂದಾಗುವುದು.

**'ಸ ಏನಾನ್ ಬ್ರಹ್ಮ ಗಮಯತಿ'** - ಎಂದಿರುವಂತೆ ದೇವರ ಬಳಿಗೆ ನಮ್ಮನ್ನು ಕೊಂಡೊಯ್ಯುವ ವಾಯುದೇವನೇ 'ನಿ.'

ವಾಯುದೇವ ದೇವರಲ್ಲಿಗೆ ನಮ್ಮನ್ನು ಕೊಂಡೊಯ್ದು ತಾನು ದೂರದಲ್ಲಿ ನಿಲ್ಲುವನು. ದೇವರ ಜೊತೆಗೇ ಬಂದು ನಿಲ್ಲುವುದಿಲ್ಲ. ವಾಯುದೇವನೇ ಹೀಗೆ ದೇವರ ಜೊತೆಗೆ ನಿಲ್ಲಲು ಹಿಂಜರಿಯುತ್ತಾನೆಂದ ಮೇಲೆ ಕನಕದಾಸರನ್ನು ಕೃಷ್ಣನ ಜೊತೆಗೆ ನಿಲ್ಲಿಸಬಹುದೇ ? ಉಡುಪಿ ಶ್ರೀ ಕೃಷ್ಣ ಮಠದಲ್ಲಿಯೇ ಪ್ರಾಣದೇವರನ್ನು ಕೃಷ್ಣನ ಸಮೀಪದಲ್ಲಿ ನಿಲ್ಲಿಸಿ, ಕೃಷ್ಣನಿಗೂ ಪ್ರಾಣದೇವನಿಗೂ ಜೊತೆಯಾಗಿ ಪ್ರದಕ್ಷಿಣೆ ಬರುವಂತೆ ವ್ಯವಸ್ಥೆ ಮಾಡಬೇಕೆಂದು ಹಿಂದೆ ಒಬ್ಬ ಸ್ವಾಮಿಗಳು ತೊಡಗಿದ್ದರು. ಆದರೆ ಬೆಳಿಗ್ಗೆ ಹತ್ತುವರೆಗೆ ಮುಖ್ಯಪ್ರಾಣ ದೇವರ ಪ್ರತಿಮೆಯನ್ನು ಕದಲಿಸಬೇಕೆಂದರೆ ಅಂದು ಹತ್ತು ಗಂಟೆಗೆ ಉಪ್ಪರಿಗೆಯ ಮೆಟ್ಟಲಿನಿಂದ ಕಾಲು ಜಾರಿ ಬಿದ್ದರು. ಬಿದ್ದವರು ಏಳಲೇ ಇಲ್ಲ. ಆ ಸ್ವಾಮಿಗಳನ್ನು ಕಂಡವರು ಈಗಲೂ ಇದ್ದಿರಬಹುದು. ಅಂದರೆ

ಕೃಷ್ಣನ ಸಮೀಪಕ್ಕೆ ತರುವುದನ್ನೇ ಮುಖ್ಯಪ್ರಾಣ ಇಷ್ಟ ಪಡುವುದಿಲ್ಲ ಎಂದ ಮೇಲೆ ಒಟ್ಟೊಟ್ಟಿಗೆ ಇಡಲು ಸಾಧ್ಯವೇ ? ಮುಖ್ಯ ಪ್ರಾಣನನ್ನೇ ಜೊತೆಗೆ ಇಡಲಾಗುವುದಿಲ್ಲ ಎಂದ ಮೇಲೆ ಕನಕದಾಸರನ್ನು ಜೊತೆಗೆ ಇಡಬೇಕೆಂಬುದು ಎಷ್ಟೊಂದು ಅರ್ಥಶೂನ್ಯ ವಾದ !

ಹೀಗೆ ದೇವರಲ್ಲಿಗೆ ನಮ್ಮನ್ನು ಕೊಂಡೊಯ್ದು ತಾನು ದೂರದಲ್ಲಿ ನಿಲ್ಲುವ ವಾಯುದೇವ 'ನಿ' ಎನಿಸಿದರೆ, ಅವನಿಗೂ 'ಯಮ' ನಾಗಿರುವವನು ಭಗವಂತ. ಪಾಂಡವರು ಮಹಾಪ್ರಸ್ಥಾನ ನಡೆಸಿದಾಗ ನಕುಲ, ಸಹದೇವ, ಅರ್ಜುನ, ದ್ರೌಪದಿ-ಇವರದ್ದೆಲ್ಲ ದೇಹ ಬಿದ್ದಂತೆ ಭೀಮಸೇನನ ದೇಹವೂ ಬಿದ್ದಿತು. ಹೀಗೆ ಭೀಮಸೇನನ ದೇಹವೂ ಬೀಳುವಂತೆ ಮಾಡಿ ಅವನ ಪಾಲಿಗೆ 'ಯಮ' ನಾಗಿರುವವನು ಭಗವಂತ.

'ಯಮನೆಲ್ಲೋ ಕಾಣೆನೆಂದು ಹೇಳಬೇಡ, ಯಮನೇ ರಾಮನೆಂದು ಸಂದೇಹ ಬೇಡ'

ಯಮ ಯಾರು ? ರಾಮನೇ ಯಮ. ರಾಮ ಯಾರಿಗೆ ಯಮ ? ಮುಖ್ಯ ಪ್ರಾಣನಿಗೆ.

ಆದುದರಿಂದ ನಮ್ಮನ್ನೆಲ್ಲ ಹಿಡಿತದಲ್ಲಿಟ್ಟುಕೊಂಡಿರುವ ಮುಖ್ಯ ಪ್ರಾಣನನ್ನೂ ಹಿಡಿತದಲ್ಲಿಟ್ಟುಕೊಂಡಿರುವವನು 'ನಿಯಮ' ಎನಿಸಿರುವ ಭಗವಂತ.

**೮೬೯. ಯಮಃ – ಮುಖ್ಯಪ್ರಾಣನಿಗೆ ಶರೀರವನ್ನು ಕೊಡುವವನು.**

**ವಿವರಣೆ:** 'ನಿಯಮಃ' - ಎಂಬ ನಾಮದಲ್ಲಿ ಮುಖ್ಯ ಪ್ರಾಣನನ್ನು ನಿಯಮಿಸುವವನು ಭಗವಂತನೆಂದು ಕಂಡಿದ್ದೇವೆ. ಮುಖ್ಯಪ್ರಾಣನನ್ನು ಹೇಗೆ ನಿಯಮಿಸುವನು? 'ಯಮ'ನಾಗಿ. ಯ + ಮ - ಎರಡು ಅಕ್ಷರಗಳು ಸೇರಿ ಯಮ ಎಂದಾಗಿದೆ. ಯ- ಎಂದರೆ ಮುಖ್ಯ ಪ್ರಾಣ. ಅವನಿಗೆ ಮ - ಎಂದರೆ ಮಾತಿ, ನಿರ್ಮಾತಿ ಶರೀರಮಿತಿ ಮಃ ಶರೀರವನ್ನು ನಿರ್ಮಾಣ ಮಾಡಿಕೊಡುವ ಮೂಲಕ ಅವನನ್ನು ನಿಯಂತ್ರಿಸುವವನು. ನಮಗೂ ಭಗವಂತ ಶರೀರವನ್ನು ನಿರ್ಮಾಣ ಮಾಡುವನು. ತಂದೆಯ ಮೂಲಕ ತಾಯಿಯ ಉದರವನ್ನು ಪ್ರವೇಶಿಸಿದ ಜೀವನಿಗೆ ಅಲ್ಲಿದ್ದುಕೊಂಡು ಭಗವಂತ ಶರೀರವನ್ನು ನಿರ್ಮಿಸುವನು. ಅಂದರೆ ನಮಗೆ ಶರೀರವನ್ನು ನಿರ್ಮಿಸುವುದು ತಂದೆ, ತಾಯಿಗಳ ದ್ವಾರಾ. ಆದರೆ ಮುಖ್ಯಪ್ರಾಣನ ಶರೀರವನ್ನು ನಿರ್ಮಿಸುವುದು ನೇರವಾಗಿ. ಪ್ರಳಯಕಾಲದಲ್ಲಿ ಮುಖ್ಯಪ್ರಾಣ ಲಕ್ಷ್ಮಿಯ ಶರೀರವನ್ನು ಪ್ರವೇಶಿಸುವನು. ಲಕ್ಷ್ಮೀದೇವಿ ಮುಖ್ಯಪ್ರಾಣನ ಪಾಂಚಭೌತಿಕ ಶರೀರವನ್ನು ಬೀಳಿಸಿ, ಮುಖ್ಯಪ್ರಾಣನ ಸ್ವರೂಪವನ್ನು ಪರಮಾತ್ಮನಿಗೆ ಕೊಡುವಳು.

ತನ್ನ ಉದರದೊಳಗಿದ್ದ ಮುಖ್ಯಪ್ರಾಣನಿಗೆ ಪರಮಾತ್ಮನು ನಾಲ್ಕು ತಲೆಗಳುಳ್ಳ ಚತುರ್ಮುಖನ ರೂಪವನ್ನು ತೊಡಗಿಸಿ ತನ್ನ ನಾಭಿಕಮಲದಲ್ಲಿ ಹೊರಹೊಮ್ಮಿಸುವನು. ಹೀಗೆ ಮುಖ್ಯಪ್ರಾಣನಿಗೆ ಉಳಿದೆಲ್ಲರಿಗಿಂತ ವಿಲಕ್ಷಣವಾಗಿ ಶರೀರವನ್ನು ತೊಡಿಸುವುದರಿಂದ ಅದನ್ನೇ 'ಯಮ'ನಾಮದಿಂದ ಅನುಸಂಧಾನ ಮಾಡಬಹುದಾಗಿದೆ.

**ಸತ್ತ್ವವಾನ್ ಸಾತ್ತ್ವಿಕಃ ಸತ್ಯಃ ಸತ್ಯಧರ್ಮಪರಾಯಣಃ |**
**ಅಭಿಪ್ರಾಯಃ ಪ್ರಿಯಾರ್ಹೋಽರ್ಹಃಪ್ರಿಯಕೃತ್ ಪ್ರೀತಿವರ್ಧನಃ ||೯೩||**

**೮೭೦. ಸತ್ತ್ವವಾನ್ – ಮರೆಯುವಿಕೆಯಿಲ್ಲದ ತಿಳುವಳಿಕೆ ಉಳ್ಳವನು.**

ವಿವರಣೆ: ಸತ್ತ್ವ ಎಂದರೆ ಜ್ಞಾನ, ತಿಳುವಳಿಕೆ. 'ಆಹಾರಶುದ್ಧೌ ಸತ್ತ್ವಶುದ್ಧಿಃ.....' ಎಂಬಲ್ಲಿ ಆಹಾರಶುದ್ಧಿಯಿಂದ ಉಂಟಾಗುವ ಸತ್ತ್ವಶುದ್ಧಿ ಎಂದರೆ ಜ್ಞಾನಶುದ್ಧಿ ಎಂದೇ ಅರ್ಥ. ಭಗವಂತನು ಪರಿಪೂರ್ಣವಾದ ತಿಳುವಳಿಕೆ ಉಳ್ಳವನಾದುದರಿಂದ 'ಸತ್ತ್ವವಾನ್' ಎನಿಸುವನು. ಅವನ ತಿಳುವಳಿಕೆಯಲ್ಲಿ ಯಾವುದೇ ಬಗೆಯ ನ್ಯೂನತೆ ಇಲ್ಲ. ಇದಕ್ಕೆ ವಿಪರೀತವಾಗಿ ಉಳಿದೆಲ್ಲರ ತಿಳುವಳಿಕೆಯಲ್ಲಿ ಯಾವುದಾದರೊಂದು ಬಗೆಯ ನ್ಯೂನತೆಯಾದರೂ ಇದ್ದೇ ಇರುವುದು.

ಅಲ್ಲದೆ, ಇವತ್ತು ನಮಗೆ ತಿಳುವಳಿಕೆ ಬಂದರೂ ನಾಳೆ ಅದು ಹಾಗೆಯೇ ಇರುವುದೆಂದು ಹೇಳಲಾಗುವುದಿಲ್ಲ. ಇಂದು ಪಡಕೊಂಡ ತಿಳುವಳಿಕೆಯನ್ನು ಪೂರ್ಣವಾಗಿ ಕಳಕೊಂಡು ಝುಳ ಝುಳವಾಗಿ 'ಫ್ರೆಶ್ಶಾ'ಗಿ ಬಂದು ನಾಳೆ ಪ್ರವಚನದಲ್ಲಿ ಭಾಗವಹಿಸುವೆವು. ಹೀಗೆ ಸಂಪಾದಿಸಿದ ತಿಳುವಳಿಕೆಯನ್ನು ಕಳೆಕೊಳ್ಳುತ್ತಿದ್ದರೆ ಅಂತಹವನನ್ನು ತಿಳುವಳಿಕೆ ಉಳ್ಳವನೆಂದು ಪರಿಗಣಿಸಲಾಗುವುದಿಲ್ಲ. ಹಣ ಸಂಪಾದನೆ ಮಾಡುತ್ತ, ಕಳೆದುಕೊಳ್ಳುತ್ತಿರುವವನು ಹೇಗೆ ಧನಿಕ ಎನಿಸುವುದಿಲ್ಲವೋ ಹಾಗೆ.

ದೇವರಾದರೂ ಪೂರ್ಣ ಪ್ರಮಾಣದ ತಿಳುವಳಿಕೆ ಉಳ್ಳವನು, ಹಾಗೆಯೇ ಮರೆವು ಇಲ್ಲದ ತಿಳುವಳಿಕೆ ಉಳ್ಳವನು. ಆದುದರಿಂದ ಸತ್ತ್ವವಾನ್ ಎನಿಸುವನು.

**೮೭೧. ಸಾತ್ತ್ವಿಕಃ – ಪ್ರತಿಯೊಂದು ವಿಷಯದಲ್ಲೂ ಯೋಗ್ಯನಾಗಿರುವವನು.**

ವಿವರಣೆ : ನಮ್ಮ ವ್ಯವಹಾರಗಳಲ್ಲಿ ವ್ಯಾಪಕವಾಗಿ ಚಾಲ್ತಿಯಲ್ಲಿರುವ ಶಬ್ದ 'ಸಾತ್ತ್ವಿಕ' ಎಂಬುದು. ಪ್ರತಿಯೊಂದು ವಿಷಯದಲ್ಲೂ ಯೋಗ್ಯನಾದ ವ್ಯಕ್ತಿಯನ್ನು ಸಾತ್ತ್ವಿಕ ಎಂದು ಕರೆಯುವೆವು. 'ಅವನು ಸಾತ್ತ್ವಿಕ ಇದ್ದಾನೆ, ಅವನ ಮನೆಗೆ ಹೋಗೋಣ' 'ಅವನು ಸಾತ್ತ್ವಿಕ, ಅವನಿಗೆ ನಮ್ಮ ಮಗಳನ್ನು ಕೊಡೋಣ.'

‘ಅವನು ಸಾತ್ತ್ವಿಕ ಇದ್ದಾನೆ, ಅವನನ್ನು ಮನೆಗೆ ಕರೆಯೋಣ.....’ ಹೀಗೆ ಹೋಗುವುದಕ್ಕೆ, ಕೊಡುವುದಕ್ಕೆ, ತೆಗೆದುಕೊಳ್ಳುವುದಕ್ಕೆ, ಮಾತನಾಡುವುದಕ್ಕೆ. ಪ್ರತಿಯೊಂದಕ್ಕೂ ಯೋಗ್ಯನಾದವನು ಸಾತ್ತ್ವಿಕ ಎನಿಸುವನು.

ದೇವರಾದರೂ ನೋಡಲು, ಭಜಿಸಲು, ಸ್ತುತಿಸಲು, ಧ್ಯಾನಿಸಲು ಸಾಕ್ಷಾತ್ಕರಿಸಿಕೊಳ್ಳಲು ಹೀಗೆ ಪ್ರತಿಯೊಂದಕ್ಕೂ ಅತ್ಯಂತ ಯೋಗ್ಯನಾಗಿರುವುದರಿಂದ ಭೀಷ್ಮರು ದೇವರನ್ನು ‘ಸಾತ್ತ್ವಿಕ’ ಎಂದು ಕರೆದಿರುವರು. ಯಾವುದಾದರೊಂದು ವಿಷಯವನ್ನು ಮಾತ್ರ ಉಲ್ಲೇಖಿಸದೆ, ಸಾಮಾನ್ಯವಾಗಿ ‘ಸಾತ್ತ್ವಿಕ’ ಎಂದು ಸ್ತುತಿಸಿರುವುದರಿಂದ ಪ್ರತಿಯೊಂದು ವಿಷಯದಲ್ಲೂ ಯೋಗ್ಯನಾಗಿರುವವನು ಎಂಬ ಅರ್ಥ ಹೊರಡುವುದು.

**೮೭೨. ಸತ್ಯಃ – ಎಲ್ಲ ಕಡೆ ಇದ್ದುಕೊಂಡು ಎಲ್ಲರ ಮೂಲಕ ಯತ್ನ ಮಾಡಿಸುವವನು.**

**ವಿವರಣೆ :** ಸತ್ + ಯ - ಎರಡು ಶಬ್ದಗಳು ಸೇರಿ ‘ಸತ್ಯ’ ಎಂದಾಗುವುದು. ಅಸ್ತೀತಿ ಸತ್ - ಎಲ್ಲ ಕಡೆ, ಎಲ್ಲರಲ್ಲಿ ಯಾವಾಗಲೂ ಇರುವವನು ಸತ್. ಅಸ್ತಿ ಎಂಬುದಕ್ಕೆ ಇರುವವನು ಎಂಬುದು ಸಾಮಾನ್ಯ ಅರ್ಥವಾದರೆ, ಎಲ್ಲೆಡೆ, ಎಲ್ಲರಲ್ಲಿ, ಯಾವಾಗಲೂ ಇರುವವನೆಂಬುದು ಅಸಾಧಾರಣವಾದ, ಅಸಾಮಾನ್ಯವಾದ ಅರ್ಥ.

‘ಯ’ ಎಂಬುದಕ್ಕೆ ಯತ್ನ ಮಾಡಿಸುವವನು ಎಂಬ ಅರ್ಥ.

ಆದುದರಿಂದ ಎಲ್ಲೆಡೆ, ಎಲ್ಲರಲ್ಲಿ, ಯಾವಾಗಲೂ ಇರುವವನಾಗಿ ಯತ್ನವನ್ನು ಮಾಡಿಸುವವನೇ ‘ಸತ್ಯ.’

ನಾವೂ ಇನ್ನೊಬ್ಬರಿಂದ ಯತ್ನ ಮಾಡಿಸುವೆವು. ಆದರೆ ಅವರು ಅಲ್ಲಿ ಇರುವರು, ನಾವು ಮತ್ತೊಂದು ಕಡೆ ಕುಳಿತಿರುವೆವು. ಅಲ್ಲದೆ ತಂದೆ ತಾಯಿಯಂದಿರು ತಮ್ಮ ಮಗುವಿನಿಂದ ಮನೆಯಲ್ಲಿ ಯತ್ನ ಮಾಡಿಸುವರು. ಆದರೆ ಶಾಲೆಗೆ ಅವರು ಹೋಗುವುದಿಲ್ಲ. ಶಾಲೆಯಲ್ಲಿ ಅಧ್ಯಾಪಕರು ಆ ಮಗುವಿಗೆ ಯತ್ನ ಮಾಡಿಸುವರು.

ದೇವರಾದರೆ ಹಾಗಲ್ಲ. ಎಲ್ಲ ಕಾಲದಲ್ಲಿ, ಎಲ್ಲ ದೇಶದಲ್ಲಿ ಎಲ್ಲರಿಂದಲೂ ಎಲ್ಲರೊಳಗಿದ್ದುಕೊಂಡೇ ಯತ್ನ ಮಾಡಿಸುವನು. ಆದ್ದರಿಂದಲೇ ಅವನು ‘ಸತ್ಯ’ ಎನಿಸುವನು.

**೮೭೩. ಸತ್ಯಧರ್ಮಪರಾಯಣಃ – ಸತ್ಯನಿಷ್ಠೆ, ಧರ್ಮಾಚರಣೆ ಇವುಗಳಿಗೆ ಪುಣ್ಯದ ಶ್ರೇಷ್ಠ ಲಾಭವನ್ನು ಹೊಂದಿಸುವವನು.**

**ವಿವರಣೆ :** ಸತ್ಯ + ಧರ್ಮ + ಪರ + ಆಯ + ನ - ಹೀಗೆ ಐದು ಶಬ್ದಗಳು ಸೇರಿ ಆದ ನಾಮ ಸತ್ಯಧರ್ಮಪರಾಯಣ. ನಕಾರದ ಸ್ಥಾನಕ್ಕೆ, ಣಕಾರವು ಬರುವುದು.

ಸತ್ಯ ಎಂದರೆ ಸತ್ಯನಿಷ್ಠೆಯಿಂದ, ಧರ್ಮ ಎಂದರೆ ಧರ್ಮಾಚರಣೆಯಿಂದ ಪರ - ಶ್ರೇಷ್ಠವಾದ, ಆಯ ಎಂದರೆ ಲಾಭ, ಯಾವುದರ ಲಾಭ ? ಪುಣ್ಯದ ಲಾಭ ಇದನ್ನು ನಯತೀತಿ ನಃ ತಲುಪಿಸಿಕೊಡುವವನು. ಸತ್ಯ ಮಾತನ್ನಾಡುವುದಕ್ಕೆ, ಧರ್ಮಾಚರಣೆ ನಡೆಸುವುದಕ್ಕೆ ಶ್ರೇಷ್ಠಲಾಭವಾದ ಪುಣ್ಯವನ್ನು ದೊರಕಿಸಿಕೊಡುವವನೇ ಭಗವಂತ.

ಪರೀಕ್ಷಿತ್ ಉತ್ತರೆಯ ಗರ್ಭದಲ್ಲಿಯೇ ಮೃತನಾದಾಗ, ಅವನನ್ನು ಬದುಕಿಸಲು ಕೃಷ್ಣ ಪ್ರತಿಜ್ಞೆ ಮಾಡುವುದಿದೆ - ' ಧರ್ಮ ಮತ್ತು ಸತ್ಯ ತನ್ನಲ್ಲಿ ಪ್ರತಿಷ್ಠಿತಗಳಾಗಿದ್ದಲ್ಲಿ ಅದರ ಪ್ರಭಾವದಿಂದಾಗಿ ಮೃತನಾದ ಮಗು ಬದುಕುವಂತಾಗಬೇಕು' - ಎಂದು. ಕೂಡಲೇ ಪರೀಕ್ಷಿತ ಬದುಕುವನು.

ಹೀಗೆ ಸತ್ಯ ಮತ್ತು ಧರ್ಮದ ಬಗ್ಗೆ ಸಾಕಷ್ಟು ಒಲವು ತೋರಿಸಿದವನು ಭಗವಂತ.

ಸತ್ಯನಿಷ್ಠೆಯಾಗಲೀ, ಧರ್ಮಾಚರಣೆಯಾಗಲೀ ಜಡಗಳಾಗಿ ರುವುದರಿಂದ ಅವು ಸ್ವಯಂ ಪುಣ್ಯವನ್ನು ನೀಡಲಾರವು. ಆದುದರಿಂದ ಆ ಮೌಲ್ಯಗಳನ್ನು ಪ್ರೀತಿಸುವ ಭಗವಂತನೇ ಅವುಗಳಿಗೆ ಪುಣ್ಯವನ್ನು ಒದಗಿಸಿ ಕೊಡುವನು.

**೮೭೪. ಅಭಿಪ್ರಾಯಃ – ಪ್ರತಿಯೊಂದು ಚಟುವಟಿಕೆಯ ಸಾರ.**

**ವಿವರಣೆ :** 'ನಿಮ್ಮ ಮಾತಿನ ಒಟ್ಟು ಅಭಿಪ್ರಾಯ ಏನು'? ಇತ್ಯಾದಿಯಾಗಿ ಅಭಿಪ್ರಾಯ ಶಬ್ದವನ್ನು ಆಗಾಗ್ಗೆ ಬಳಸುತ್ತಿರುತ್ತೇವೆ. ಅಲ್ಲೆಲ್ಲ ಅಭಿಪ್ರಾಯ ಎಂದರೆ ಸಾರ.

ಭಗವಂತನಾದರೂ ಎಲ್ಲ ವೇದಗಳ ಸಾರ, ಎಲ್ಲ ಪುರಾಣಗಳ ಸಾರ, ಎಲ್ಲ ಇತಿಹಾಸಗಳ ಸಾರ, ಎಲ್ಲ ಚಟುವಟಿಕೆಗಳ ಸಾರ. ಆದುದರಿಂದ ಅವನನ್ನು 'ಅಭಿಪ್ರಾಯ' ಎಂದೇ ಕರೆಯಲಾಗಿದೆ.

ಅಭಿ + ಪ್ರ + ಆಯ - ಎಂದು ಪದವಿಭಾಗ ಮಾಡಿದರೂ ಈ ಅರ್ಥವೇ ಹೊರಡುವುದು. ಎಲ್ಲೆಡೆ ಚೆನ್ನಾಗಿ ಲಾಭ - ಪುಸ್ತಕವೊಂದನ್ನು ಓದಿದಾಗ ಅದರ ಲಾಭ ಭಗವಂತನ ಅರಿವು. ಆದ್ದರಿಂದ ಭಗವಂತನೇ ಅಭಿಪ್ರಾಯ.

ಭೋಜನ ನಡೆಸುವೆವು. ಯಾಕಾಗಿ ? ಅದರಿಂದಾಗಿ ಲವಲವಿಕೆ ಪಡೆದು

ಭಗವಂತನ ಚಿಂತನೆ ನಡೆಸಬೇಕು - ಎಂದು ಆದ್ದರಿಂದ ಭೋಜನದ ಲಾಭ, ಅಭಿಪ್ರಾಯ - ಭಗವಂತ.

ಹೀಗೆ ಆಧ್ಯಾತ್ಮಿಕ ಸಾಧಕನೊಬ್ಬನ ಸಮಗ್ರ ಜೀವನದ ಅಭಿಪ್ರಾಯ ಅಂದರೆ ಸಾರ ಭಗವಂತ.

ಭೀಷ್ಮರು ತಾವು ಎಂಟು ನೂರು ವರ್ಷ ಕಾಲ ಜೀವನ ನಡೆಸಿದುದರ ಅಭಿಪ್ರಾಯ ಭಗವಂತ. ಅಂದರೆ ಅವನಿಗಾಗಿಯೇ ಜೀವನ ನಡೆಸಿದ್ದು. ಹತ್ತು ದಿನಗಳ ಕಾಲ ಯುದ್ಧ ಮಾಡಿದುದರ ಅಭಿಪ್ರಾಯವೂ ದೇವರೇ. ದ್ರೋಣಾಚಾರ್ಯರು ಬ್ರಾಹ್ಮಣರಾಗಿದ್ದರೂ ಬಿಲ್ಲು ಬಾಣ ಹಿಡಿದುದರ ಅಭಿಪ್ರಾಯವೂ ದೇವರೇ.

ಹೀಗೆ ಎಲ್ಲ ಚಟುವಟಿಕೆಗಳ ಸಾರ ಎಂಬ ಅಭಿಪ್ರಾಯದಲ್ಲಿ ಭಗವಂತ 'ಅಭಿಪ್ರಾಯ' ಎನಿಸುವನು.

**೮೭೫. ಪ್ರಿಯಾರ್ಹಃ – ನಮಗೆ ಪ್ರಿಯವಾದವುಗಳನ್ನೆಲ್ಲ ಅರ್ಪಿಸಲು ಯೋಗ್ಯನಾದವನು.**

**ವಿವರಣೆ :** ದೇವರಿಗೆ ಏನೇನನ್ನು ಅರ್ಪಿಸಬೇಕು ? ನಮಗೆ ಜೀವನದಲ್ಲಿ ಯಾವುದ್ಯಾವುದು ಪ್ರಿಯ ಆಗಿದೆಯೋ ಅವೆಲ್ಲವನ್ನು ಅರ್ಪಿಸಬೇಕು.

**ಇಷ್ಟಂ ದತ್ತಂ ಹುತಂ ಜಪ್ತಂ ಪೂರ್ತಂ ಯಚ್ಚಾತ್ಮನಃ ಪ್ರಿಯಮ್ |**
**ದಾರಾನ್ ಸುತಾನ್ ಪ್ರಿಯಾನ್ ಪ್ರಾಣಾನ್ ಯತ್ ಪರಸ್ಮೈ ನಿವೇದಯೇತ್ ||**

ಏನು ಸಾರ್ವಜನಿಕ ಸೇವೆಯನ್ನು ನಡೆಸುತ್ತೇವೆಯೋ, ದಾನ ಮಾಡುತ್ತೇವೆಯೋ, ಹೋಮಿಸುತ್ತೇವೆಯೋ, ಜಪ ಮಾಡುವೆವೋ, ಮನೆಯಲ್ಲಿ ಪತ್ನಿ, ಪುತ್ರರನ್ನೆಲ್ಲ ಪ್ರೀತಿಸುವೆವೋ, ನಮ್ಮ ಪ್ರಾಣವನ್ನು ಪ್ರೀತಿಸುವೆವೋ ಅವೆಲ್ಲವನ್ನು ಭಗವಂತನಿಗೆ ಅರ್ಪಿಸಬೇಕು. ಹೊರತು ನಮಗೆ ಅಪ್ರಿಯವಾದದ್ದನ್ನು, ನಮಗೆ ಬೇಡವಾದದ್ದನ್ನು ದೇವರಿಗೆ ಅರ್ಪಿಸುವುದಲ್ಲ. ಹೇಗೆ ನಮ್ಮ ನಮ್ಮ ಉಪಯೋಗಕ್ಕೆ ಬರದ ತೆಂಗಿನ ಕಾಯಿಗಳನ್ನೇ ಪೌರೋಹಿತ್ಯ ತೆಂಗಿನಕಾಯಿಗಳೆಂದು ಪರಿಗಣಿಸಿ ಶಾಂತಿಕರ್ಮ ಮುಂತಾದವುಗಳಿಗೆ ಬಳಸಲಾಗುವುದೋ ಹಾಗೆ ನಮಗೆ ಅಪ್ರಿಯವಾದದ್ದನ್ನು, ಬೇಡವಾದದ್ದನ್ನು ದೇವರಿಗೆ ಅರ್ಪಿಸಬಾರದು.

ಇದಕ್ಕೆ ಬದಲಾಗಿ ನಮಗೆ ಜೀವನದಲ್ಲಿ ಏನೇನು ಪ್ರಿಯಗಳಿವೆಯೋ ಅವೆಲ್ಲವನ್ನೂ, ಅವನಿಗೆ ಅರ್ಪಿಸಬೇಕು. ಯಾಕೆಂದರೆ ಭಗವಂತ ಪ್ರಿಯ ಎನಿಸಿ, ಅವುಗಳಲ್ಲಿರುವುದರಿಂದ ಅವು ನಮ್ಮ ಪಾಲಿಗೆ ಪ್ರಿಯಗಳಾಗುವವು. 'ನ ವಾ ಅರೇ

**ಪತ್ಯುಃ ಕಾಮಾಯ ಪತಿಃ ಪ್ರಿಯೋ ಭವತಿ.....'** ಇತ್ಯಾದಿಯಾಗಿ ಉಪನಿಷತ್ತಿನಲ್ಲಿ ತಿಳಿಸಿರುವಂತೆ ಗಂಡ ತನ್ನ ಹೆಂಡತಿಗೆ ಪ್ರಿಯ ಎನಿಸುವುದು, ಹೆಂಡತಿ ಗಂಡನಿಗೆ ಪ್ರಿಯಳೆನಿಸುವುದು ಅವರವರ ಇಚ್ಛೆಯಿಂದ ಅಲ್ಲ. ಮತ್ತೆ **'ಆತ್ಮನಸ್ತು ಕಾಮಾಯ ಪತಿಃ ಪ್ರಿಯೋ ಭವತಿ'** ಪರಮಾತ್ಮನ ಇಚ್ಛೆಗನುಗುಣವಾಗಿ ಪತಿ ಪತ್ನಿಗೆ ಪ್ರಿಯನಾಗುವನು, ಪತ್ನಿ ಪತಿಗೆ ಪ್ರಿಯಳಾಗುವಳು. ಹೀಗೆ ಮನೆಯ ಸದಸ್ಯರೆಲ್ಲ ಪರಸ್ಪರ ಪ್ರಿಯರಾಗುವುದೇ ಭಗವಂತ ತನ್ನ ಇಚ್ಛೆಗನುಗುಣವಾಗಿ ಪ್ರಿಯ ಎನಿಸಿ ಅವರಲ್ಲಿ ಇರುವುದರಿಂದ. ಹೀಗೆ ನಮ್ಮ ಪಾಲಿಗೆ ನಮ್ಮ ಬಂಧುಗಳಾದವರು, ಸ್ನೇಹಿತರು ಪ್ರಿಯರೆನಿಸುವಂತೆ ಪ್ರಿಯನಾಗಿ ಅನುಗ್ರಹಿಸುತ್ತಿರುವ ಭಗವಂತನಿಗೆ ಅವೆಲ್ಲವನ್ನು ಅರ್ಪಿಸಬೇಕು.

ಈ ಅಭಿಪ್ರಾಯದಲ್ಲಿ ಭೀಷ್ಮರು ಕೃಷ್ಣನನ್ನು 'ಪ್ರಿಯಾರ್ಹ' - ಎಂದು ಸ್ತುತಿಸಿರುವರು.

ಈ ದಿನಗಳಲ್ಲಿ ಹೆಚ್ಚಿನ ಮನೆಗಳಲ್ಲಿ ಗಂಡಹೆಂಡಂದಿರ ನಡುವೆ, ತಂದೆ ತಾಯಿ ಮಕ್ಕಳ ನಡುವೆ, ಅಣ್ಣ ತಮ್ಮಂದಿರ ನಡುವೆ ವಿರಸ ಅಧಿಕವಾಗಿ ಕಾಣಿಸುತ್ತಿದ್ದು ಅದರ ಪರಿಹಾರವಾಗಿ ಒಬ್ಬರನ್ನೊಬ್ಬರು ಪ್ರೀತಿಸುವಂತಾಗಬೇಕೆಂದರೆ 'ಪ್ರಿಯಾರ್ಹ'ನಾಮದಿಂದ ಭಗವಂತನ ಉಪಾಸನೆಯನ್ನು ನಡೆಸಬೇಕು. ಇದರಿಂದ ಪ್ರಸನ್ನನಾಗುವ ಭಗವಂತ 'ಪ್ರಿಯ'ನಾಗಿ ಅವರಲ್ಲಿ ಇದ್ದುಕೊಂಡು ಪರಸ್ಪರವಾಗಿ ಪ್ರಿಯರೆನಿಸುವಂತೆ ಮಾಡುವನು.

**೮೭೬. ಅರ್ಹಪ್ರಿಯಕೃತ್ – ಮೋಕ್ಷಾರ್ಹರಿಗೆ ಮೋಕ್ಷಸಾಧನೆಗೆ ತೊಡಕು ಮಾಡುವ ಸಾಂಸಾರಿಕ ಪ್ರಿಯಗಳನ್ನು ಛೇದಿಸುವವನು.**

**ವಿವರಣೆ :** ಅರ್ಹ -ಅಂದರೆ ಯೋಗ್ಯರು. ಯಾವುದಕ್ಕೆ ಯೋಗ್ಯರು? ಮೋಕ್ಷಕ್ಕೆ ಯೋಗ್ಯರು. ಅವರಿಗೆ ಸಂಸಾರದಲ್ಲಿ ಏನೇನು ಪ್ರಿಯವಾದವುಗಳಿವೆ ಹೆಂಡತಿ, ಮಕ್ಕಳು, ಮನೆ, ಆಸ್ತಿ, ದುಡ್ಡು ಇವೆಲ್ಲ ಬಂಧಕವಾದವು. ಹೀಗೆ ಸಂಸಾರ ಬಂಧನದಲ್ಲಿ ಅಂಟಿಕೊಳ್ಳುವುದಕ್ಕೆ ಪ್ರಯೋಜಕಗಳಾದ ಪ್ರಿಯಗಳನ್ನು ಕೃತ್ ಕೃಂತತೀತಿ ಕೃತ್ ಕತ್ತರಿ ಹಾಕುವವನು, ತುಂಡರಿಸುವವನು. ಅದರ ಲೇಪ ಆಗದಂತೆ ಮಾಡುವವನು 'ಅರ್ಹಪ್ರಿಯಕೃತ್.'

ಪಾಂಡವರಿಗೆ ಕೃಷ್ಣ ಬಾಲ್ಯದಿಂದಲೂ ಇದನ್ನೇ ಮಾಡುತ್ತ ಬಂದ. ಪಾಂಡವರು ಅರಣ್ಯದಲ್ಲಿಯೇ ಹುಟ್ಟುವಂತೆ ಮಾಡಿದ. ಪಾಂಡವರ ಕ್ಷೇತ್ರ ಶುದ್ಧಿಗಾಗಿ ಅವರ ತಂದೆತಾಯಿಯಂದಿರಿಗೇ, ಪಾಂಡು ಹಾಗೂ ಅವರ ಪತ್ನಿಯರಿಗೇ ಸಂಬಂಧ ಇಲ್ಲದಂತೆ

ಮಾಡಿದ.

ಹೀಗೆ ಭಗವಂತ ಅರ್ಹರಾದವರಿಗೆ, ಮೋಕ್ಷಾರ್ಹರಾದವರಿಗೆ ಪ್ರಿಯವೆನಿಸುವ ಸಂಸಾರ ಬಂಧನ ಪ್ರಯೋಜಕರನ್ನು ಭೇದಿಸುತ್ತ ‘ಅರ್ಹಪ್ರಿಯಕೃತ್’ ಎನಿಸುವನು.

**೮೭೭. ಪ್ರೀತಿವರ್ಧನಃ – ಮೋಕ್ಷಾರ್ಹರಿಗೆ ತನ್ನಲ್ಲಿ ಪ್ರೀತಿ ಹೆಚ್ಚುವಂತೆ ಮಾಡುವವನು.**

**ವಿವರಣೆ :** ‘ಅರ್ಹಪ್ರಿಯಕೃತ್’ ಎನಿಸುವ ಭಗವಂತ ಮೋಕ್ಷಾರ್ಹರಿಗೆ ಪ್ರಿಯಗಳೆನಿಸುವ ಸಾಂಸಾರಿಕ ವಸ್ತುಗಳನ್ನು ಭೇದಿಸಿ, ಅವರ ಅದುವರೆಗೆ ಆ ಸಾಂಸಾರಿಕ ವಸ್ತುಗಳಲ್ಲಿದ್ದ ಪ್ರೀತಿಯನ್ನು ತನ್ನಲ್ಲಿ ತೋರಿಸುವಂತೆ ಮಾಡುವನು, ಬರೇ ತನ್ನಲ್ಲಿ ಪ್ರೀತಿ ಬರುವಂತೆ ಮಾಡುವುದಷ್ಟೇ ಅಲ್ಲದೆ, ಅದನ್ನು ದಿನದಿನಕ್ಕೆ ಹೆಚ್ಚಾಗುವಂತೆ ಮಾಡುವನು ಕೂಡಾ.

ದೇವರಲ್ಲೂ ಪ್ರೀತಿ, ಸಂಸಾರದಲ್ಲೂ ಪ್ರೀತಿ ಎಂದರೆ ಆಗದು. ಅದು ಎರಡು ದೋಣಿಗಳಲ್ಲಿ ಕಾಲಿಟ್ಟಂತೆ. ಒಂದೋ ದುರ್ಯೋಧನನಂತೆ ದೇವರಿಗಿಂತ ಬೇರೆದ್ದನ್ನು ಕೇಳಿಕೊಳ್ಳಬೇಕು. ಇಲ್ಲವೇ, ಪಾಂಡವರಂತೆ ದೇವರನ್ನು ಕೇಳಿಕೊಳ್ಳಬೇಕು. ಭಗವಂತ ಯಾರ್ಯಾರು ಯಾವುದ್ಯಾವುದನ್ನು ಬೇಡುವರೋ ಅದನ್ನು ಕೊಡುವನು.

ಮೋಕ್ಷಾರ್ಹರು ತಮಗೆ ಸಾಂಸಾರಿಕ ವಸ್ತುಗಳು ಸಾಕು ಎಂದಾಗ ಅವರಿಗೆ ತನ್ನಲ್ಲಿ ಪ್ರೀತಿ ಉಂಟಾಗುವಂತೆ ಮಾಡುವನು. ಉಂಟಾದ ಪ್ರೀತಿ ಕ್ಷಣ ಕ್ಷಣಕ್ಕೆ ಅಭಿವೃದ್ಧಿ ಹೊಂದುವಂತೆಯೂ ಮಾಡುವನು.

ಸಂಸಾರದಲ್ಲಿರುವ ಪ್ರೀತಿ ಕಡಿಮೆಯಾಗುತ್ತ ಹೋಗುವುದು. ಯಾಕೆಂದರೆ ಸಾಂಸಾರಿಕ ಪದಾರ್ಥಗಳೆಲ್ಲ ಒಂದೇ ಬಗೆಯವುಗಳಾಗಿದ್ದು. ಮತ್ತೆ ಮತ್ತೆ ಅವುಗಳನ್ನು ಅನುಭವಿಸಿದಾಗ ಅವುಗಳಲ್ಲಿಯ ಪ್ರೀತಿಯ ಪ್ರಮಾಣ ಇಳಿಯುತ್ತ ಬರುತ್ತಿರುತ್ತದೆ.

ಆದರೆ ಭಗವಂತನಲ್ಲಿ ಹಾಗಲ್ಲ. ‘ಬಗೆ ಬಗೆಯ ನೂತನವ ಕಾಣುತ’- ಎಂದಿರುವಂತೆ ಭಗವಂತನ ವ್ಯಕ್ತಿತ್ವ ಕ್ಷಣ ಕ್ಷಣಕ್ಕೆ ನೂತನವಾಗಿ ಪರಿಣಮಿಸುತ್ತ ಇರುವುದು. ಆದ್ದರಿಂದ ನೋಡಿದಷ್ಟು, ಸವಿದಷ್ಟು ಸಾಕು ಎನಿಸಲಾರದು.

ಹೀಗೆ ಭಗವಂತನು ಮೋಕ್ಷಾರ್ಹರಿಗೆ ತನ್ನಲ್ಲಿ ಪ್ರೀತಿಯುಂಟಾಗುವಂತೆ ಮಾಡುವುದಷ್ಟೇ ಅಲ್ಲದೆ, ಕ್ಷಣ ಕ್ಷಣಕ್ಕೆ ಅದು ವೃದ್ಧಿಯಾಗುವಂತೆಯೂ ಮಾಡುವನು. ಆದ್ದರಿಂದಲೇ ಭೀಷ್ಮರು ಪ್ರೀತಿವರ್ಧನಃ ಎಂದು ಸ್ತುತಿಸುವರು.

**ವಿಹಾಯಸಗತಿರ್ಜ್ಯೋತಿಃ ಸುರುಚಿರ್ಹುತಭುಗ್ ವಿಭುಃ |**
**ರವಿರ್ವಿರೋಚನಃ ಸೂರ್ಯಃ ಸವಿತಾ ರವಿಲೋಚನಃ ||೯೪||**

**೮೭೮. ವಿಹಾಯಸಗತಿಃ – ಅಡ್ಡಾದಿಡ್ಡಿ ಸಂಚಾರ ಮಾಡದೆ ನೇರವಾಗಿ ಸಂಚಾರ ಮಾಡುವವನು.**

**ವಿವರಣೆ :** ಸಂಸ್ಕೃತದಲ್ಲಿ ಗಗನಕ್ಕೆ ವಿಹಾಯಸ ಎಂಬ ಹೆಸರು. ಆಕಾಶ ಯಾಕೆ ವಿಹಾಯಸ ಎನಿಸುವುದು? ವಿಶೇಷೇಣ ಹಾಪಯತಿ ಗಮಯತೀತಿ ವಿಹಾಯಸಮ್ ಎಂಬುದಾಗಿ ವಿಶೇಷವಾದ ಸಂಚಾರಕ್ಕೆ ಪ್ರಯೋಜಕವಾದುದರಿಂದ ಗಗನ ವಿಹಾಯಸ ಎನಿಸಿದೆ.

ಭೂಮಿಯಲ್ಲಿ ಸಂಚಾರ ಮಾಡುವಾಗ ಎದುರಲ್ಲಿ ಮನೆಯೋ, ಮರವೋ ಸಿಕ್ಕಿತೆಂದರೆ ಅಡ್ಡಾತಿಡ್ಡಿಯಾಗಿ ಸಂಚರಿಸಬೇಕಾಗುವುದು. ರಸ್ತೆಯ ಎದುರಿನಲ್ಲಿ ಮಂದಿರ ಬಂತೆಂದರೆ ಅದನ್ನು ಬೇಕಾದರೂ ಕಿತ್ತು ಎಸೆಯಬಹುದು, ಮಸೀದಿ ಬಂತೆಂದರೆ ಆ ಮಾರ್ಗದ ದಿಕ್ಕನ್ನೇ ಬದಲಾಯಿಸಬೇಕಾಗುವುದು. ಹೀಗೆ ಭೂಮಿಯಲ್ಲಿ ಅಡ್ಡಾತಿಡ್ಡಿ ಸಂಚಾರ ಅನಿವಾರ್ಯ. ಉತ್ತರ ದಿಕ್ಕಿನಲ್ಲಿರುವ ಬಾಂಬೆಗೆ ವಾಹನದಿಂದ ಹೊರಟರೆ ಕೆಲವು ಕಡೆ ನಮ್ಮ ಮಾರ್ಗ ದಕ್ಷಿಣಾಭಿಮುಖವಾಗಿಯೂ ಇರಬಹುದು. ಆದರೆ ಆಕಾಶದಲ್ಲಿ ಹಾಗಲ್ಲ. ಯಾವ ದಿಕ್ಕಿಗೆ ಸಾಗಬೇಕೋ ಅದೇ ದಿಕ್ಕಿನಲ್ಲಿ ನೇರವಾಗಿ ಸಂಚರಿಸಬಹುದಾಗಿದೆ. ಹೀಗೆ ಗಗನ ತನ್ನಲ್ಲಿ ಅಡ್ಡಾತಿಡ್ಡಿಯಾಗಿ ಸಂಚರಿಸದೆ ನೇರವಾಗಿ ಸಂಚರಿಸಲು ಅನುಕೂಲತೆಯನ್ನು ಒದಗಿಸುವುದು. ಉತ್ತರದಿಕ್ಕಿನಲ್ಲಿರುವ ಬಾಂಬೆಗೆ ಆಕಾಶ ಮಾರ್ಗವಾಗಿ ಸಾಗುವುದಾದರೆ ಉತ್ತರಾಭಿಮುಖವಾಗಿಯೇ ಸಾಗುವುದು. ಈ ರೀತಿಯಾಗಿ ನೇರವಾಗಿ ಸಾಗುವುದಕ್ಕೆ ಸೌಕರ್ಯವನ್ನು ಒದಗಿಸಿಕೊಡುವುದರಿಂದ ಈ ಬಗೆಯ ವಿಶೇಷ ಸಂಚಾರಕ್ಕೆ ಪ್ರಯೋಜಕವಾಗಿದೆ ಎಂಬ ದೃಷ್ಟಿಯಿಂದಲೇ ಆಕಾಶ ವಿಹಾಯಸ ಎನಿಸಿದೆ. ಇಂತಹ ವಿಹಾಯಸದಲ್ಲಿ ಗತಿ ಅಂದರೆ ಗಮನ, ಸಂಚಾರ ಉಳ್ಳವನು ವಿಹಾಯಸಗತಿ ಭಗವಂತ. ಗರುಡನೇ ಅವನ ವಾಹನನಾಗಿದ್ದು ಅಂತಹ ಗರುಡನ ಮೂಲಕ ಸಂಚರಿಸುವ ಅವನು ಗರುಡವಾಹನನಾಗಿ ಆಕಾಶದಲ್ಲಿ ಸಂಚರಿಸುವನು. ಹಂಸವಾಹನನಾದ ಚತುರ್ಮುಖ ನೀರಿನಲ್ಲಿ, ವೃಷಭವಾಹನನಾದ ರುದ್ರದೇವ ಭೂಮಿಯ ಮೇಲೆ ಸಂಚಾರ ಮಾಡಿದರೆ ಗರುಡವಾಹನನಾದ ಭಗವಂತ ಆಕಾಶದಲ್ಲಿ ಸಂಚರಿಸುತ್ತ ವಿಹಾಯಸಗತಿ ಎನಿಸಿರುವನು.

ವಿಮಾನದ ಮೂಲಕ ಸಂಚರಿಸುವವರೆಲ್ಲ ಆಕಾಶದಲ್ಲಿಯೇ ಸಚರಿಸುವವರು.

ಆದುದರಿಂದ ಆಕಾಶದಲ್ಲಿ ಸಂಚರಿಸುವುದೇನೂ ಹೆಗ್ಗಳಿಕೆಯ ಸಂಗತಿ ಆಗದು. ಆದ್ದರಿಂದ 'ವಿಹಾಯಸಗತಿ' ಎಂದರೆ ಅಡ್ಡಾತಿಡ್ಡಿಯಾಗಿ ಸಂಚರಿಸದೆ ನೇರವಾಗಿ ಸಂಚರಿಸುವವನು ಎಂಬುದು ತಾತ್ಪರ್ಯಾರ್ಥ. ನೇರ ನಡೆ, ನೇರನುಡಿ ಉಳ್ಳವನು. ಜೀವನದಲ್ಲಿ ನಾವೂ ನೇರವಾದ ಸಂಚಾರ ಉಳ್ಳವರಾಗಬೇಕೆಂದರೆ ದೇವರನ್ನು 'ವಿಹಾಯಸಗತಿಃ' ಎಂಬ ನಾಮದಿಂದ ಉಪಾಸನೆ ನಡೆಸೋಣ.

**೮೭೯. ಜ್ಯೋತಿಃ – ಬುದ್ಧಿಯನ್ನು ಬೆಳಗಿಸುವವನು.**

**ವಿವರಣೆ :** ಜ್ಯೋತಿ ಎಂದರೆ ಬೆಳಕು. ದೇವರು ಬೆಳಕು. ನಮ್ಮ ಬುದ್ಧಿಯನ್ನು ಬೆಳಗಿಸುವವನು ಯಾರು ? ಎಂದು ಶಿಷ್ಯರು ಯಾಜ್ಞವಲ್ಕ್ಯರಲ್ಲಿ ವಿಚಾರಿಸುವರು. ಹಗಲಿನಲ್ಲೋ ರಾತ್ರಿಯಲ್ಲೋ - ಎಂದು ವಿಚಾರಿಸಿ, ಹಗಲಿನಲ್ಲಾದರೆ ಸೂರ್ಯ ಎಂದರು ಯಾಜ್ಞವಲ್ಕ್ಯರು. 'ಸೂರ್ಯೇ ಅಸ್ತಿಮಿತೇ.....' ಸೂರ್ಯನು ಅಸ್ತಮಾನವನ್ನು ಹೊಂದಿದ ಮೇಲೆ ಬೆಳಗುವವರು ಯಾರು ? 'ಚಂದ್ರಮಾಃ' ಅಂದರು. 'ಚಂದ್ರಮಸಿ ಅಸ್ತಮಿತೇ - ಚಂದ್ರನೂ ಮುಳುಗಿದಾಗ ಯಾರು ? 'ಅಗ್ನಿಃ' ಅಂದರು. 'ಶಾಂತೇ ಅಗ್ನೌ...' ಅಗ್ನಿಯೂ ಆರಿದಾಗ - ಯಾರು ? 'ವಾಗೇವಾಸ್ಯ ಜ್ಯೋತಿಃ...' - ಮಾತು ನಮ್ಮ ಬುದ್ಧಿಯನ್ನು ಬೆಳಗಿಸುವಂತಹದ್ದು ಅಂದರು.

ಸೂರ್ಯ, ಚಂದ್ರ ಹಾಗೂ ಅಗ್ನಿಗಳಲ್ಲಿ ಉಪಾಸನೆ ನಡೆಸಿದರೆ ನಮ್ಮ ವಾಕ್ ಬುದ್ಧಿಯನ್ನು ಚೆನ್ನಾಗಿ ಬೆಳಗಿಸುವುದು. ಬುದ್ಧಿ ಬೆಳಕಿಗೆ ಬರುವುದೇ ವಾಕಿನ ಮೂಲಕ.

ಆದರೆ ಕೆಲವರಲ್ಲಿ 'ವಾಕ್' ಅಧಿಕವಾಗಿ ಕೆಲವರ ಮನಸ್ಸನ್ನು ನೋಯಿಸುವುದಕ್ಕೂ ಅದರ ಬಳಕೆಯಾಗುವುದು. ಆಗ ದೇವರು ಅವರ ವಾಗಿಂದ್ರಿಯವನ್ನು ಸ್ತಬ್ಧಗೊಳಿಸುವನು. ಆದುದರಿಂದ ಮಾತಿನ ಮೂಲಕ ಬುದ್ಧಿ ಬೆಳಕಿಗೆ ಬರುವುದಿಲ್ಲ. ಆಗ ಬೇರ ಬೇರೆ ಕೃತಿಯ ಮೂಲಕ ಬುದ್ಧಿ ಬೆಳಕಿಗೆ ಬರುವಂತೆ ಭಗವಂತ ಮಾಡ್ತಾನೆ. ಆದುದರಿಂದ ಅವನೇ ಜ್ಯೋತಿ ಎನಿಸ್ತಾನೆ. ಕೈಯಿಲ್ಲದ ವ್ಯಕ್ತಿಯಿಂದ ಕಾಲುಗಳ ಮೂಲಕವೇ ಬರಿಸ್ತಾನೆ ; ಕಾಲುಗಳಿಂದಲೇ ಸುತ್ತಿಗೆ ಉಳಿ ಹಿಡಿಸಿ ಕೆಲಸ ಮಾಡಿಸ್ತಾನೆ..... ಇವೆಲ್ಲ ಭಗವಂತನೇ ಜ್ಯೋತಿಯಾಗಿ ಬೆಳಗಿಸಲ್ಪಡುವವು.

ಸೂರ್ಯ, ಚಂದ್ರ, ಅಗ್ನಿ, ವಾಕ್ - ಈ ಯಾವ ಜ್ಯೋತಿಯೂ ಇಲ್ಲವಾದಾಗ ಹಾಗೂ ಇವೆಲ್ಲ ಇದ್ದಾಗಲೂ ಅವುಗಳ ಮೂಲಕ ಬೆಳಕನ್ನು ಹೊರಡಿಸಿ ನಿಜವಾಗಿ ಜ್ಯೋತಿ ಎನಿಸುವವನು ಭಗವಂತ.

ಭೀಷ್ಮರು ತಮ್ಮ ಪಾಲಿಗೆ ಕೃಷ್ಣ ಹೇಗೆ ಜ್ಯೋತಿಯಾಗಿ ಅನುಗ್ರಹಿಸಿರುವನೆಂಬುದನ್ನು ಮೆಲುಕು ಹಾಕುತ್ತಿರುವರು. ಕರ್ಣಾದಿಗಳೆಲ್ಲ ಬೆನ್ನು ಹಾಕಿ ಹೊರಟು ಹೋದಾಗ ಕೃಷ್ಣ ಭೀಷ್ಮರ ಪಾಲಿಗೆ ಜ್ಯೋತಿಯಾಗಿ, ಅವರ ಎಂಟು ನೂರು ವರ್ಷಗಳ ದೀರ್ಘಾವಧಿಯ ಅಧ್ಯಯನದ ವಿಚಾರಗಳನ್ನೆಲ್ಲ ಹೊರಹೊಮ್ಮಿಸಿದ. ಮುದುಕರಿಗೆ ಬುದ್ಧಿ ನೆಟ್ಟಗಿರುವುದಿಲ್ಲ - ಎಂಬ ಮಾತನ್ನು ಭೀಷ್ಮರ ವಿಷಯದಲ್ಲಿ ಸುಳ್ಳಾಗಿಸಿದ.

ನಮಗೂ ಭಗವಂತ ಬುದ್ಧಿಯನ್ನು ಬೆಳಗುವವನಾಗಿ ಅನುಗ್ರಹಿಸ ಬೇಕೆಂದರೆ 'ಜ್ಯೋತಿಃ' - ಎಂದು ಅವನ ಉಪಾಸನೆ ನಡೆಸಬೇಕು. ಇದರಿಂದ ವೃದ್ಧಾಪ್ಯದಲ್ಲೂ ದೇವರು ಜ್ಯೋತಿಯಾಗಿ ನಮಗೆ ಅನುಗ್ರಹಿಸುತ್ತಿರುವುದರಿಂದ ಜ್ಞಾನವನ್ನು ಕಳೆದುಕೊಳ್ಳುವ ಪರಿಸ್ಥಿತಿ ಒದಗಿ ಬರುವುದಿಲ್ಲ.

**೮೮೦. ಸುರುಚಿಃ – ಆಪತ್ತು ಉಳ್ಳವರಿಗೆಲ್ಲ ಒಳ್ಳೆಯ ರುಚಿ ಎನಿಸಿರುವವನು.**

**ವಿವರಣೆ :** ರುಚಿ ಎಂದರೆ ಕಾಂತಿ ಎಂಬ ಅರ್ಥವೂ ಇದೆ. ಆದರೆ ಅದು ಬೇಡ, ರುಚಿ ಎಂದರೆ ರುಚಿ ಎಂಬಾರ್ಥವನ್ನೇ ಇಟ್ಟುಕೊಳ್ಳೋಣ. ಭಗವಂತ ಎಲ್ಲರ ಪಾಲಿಗೆ 'ಸುರುಚಿ' ಆಗಿರುವವನು. ಕೆಲವರಿಗೆ ಭೋಜನ ರುಚಿ, ಮತ್ತೆ ಕೆಲವರಿಗೆ ಸಂಗೀತ ರುಚಿ, ಇನ್ನು ಕೆಲವರಿಗೆ ಭರತನಾಟ್ಯ ರುಚಿ. ಹೀಗೆ ಬೇರೆ ಬೇರೆ ಬಗೆಯ ರುಚಿ ಉಳ್ಳವರಿಗೆಲ್ಲ ಭಗವಂತ ರುಚಿ ಎನಿಸಬೇಕೆಂದರೆ ಅವನ ಬದುಕಿನಲ್ಲಿ ಏನಾದರೂ ಕಷ್ಟ, ಸಮಸ್ಯೆ ಬಂದೊದಗಿತೆಂದರೆ ಕ್ರಮೇಣ ಭಗವಂತ ರುಚಿ ಎನಿಸಲು ಪ್ರಾರಂಭಿಸುವನು. ಆಪತ್ತು ಎಲ್ಲರಿಗೂ ಒಂದಲ್ಲ ಒಂದು ರೀತಿಯಿಂದ ಬಂದೊದಗುವುದು. ಅದರ ಪರಿಹಾರಕ್ಕಾಗಿ ಭಗವಂತನನ್ನು ರುಚಿಯನ್ನಾಗಿಸಿಕೊಳ್ಳುವರು. ಆದ್ದರಿಂದ ಎಲ್ಲರಿಗೂ ಭಗವಂತ 'ಸುರುಚಿ' ಎನಿಸುವನು. ದೇವರನ್ನು 'ಸುರುಚಿ' ನಾಮದಿಂದ ಉಪಾಸನೆ ಮಾಡಿದರೆ ನಾವು ಕೂಡಾ ಸಮಾಜದಲ್ಲಿ 'ಸುರುಚಿ'ಗಳೆನಿಸಬಲ್ಲೆವು.

**೮೮೧. ಹುತಭುಕ್ – * ಅಗ್ನಿಯ ಮೂಲಕ ಹೊಮಿಸಿದ್ದನ್ನು ಸ್ವೀಕರಿಸುವವನು.**
*** ಇಂದ್ರಿಯಗಳೆಂಬ ಅಗ್ನಿಕುಂಡಗಳಲ್ಲಿ ಹೋಮಿಸಿದ ರೂಪಜ್ಞಾನಾದಿಗಳನ್ನು ಸ್ವೀಕರಿಸುವವನು.**

**ವಿವರಣೆ :** ಅಗ್ನಿಯ ಮೂಲಕ ಏನನ್ನು ಅರ್ಪಿಸಿದರೂ 'ಹುತಂ ಭುಂಕ್ತೇ ಇತಿ ಹುತಭುಕ್' ಸ್ವೀಕಾರ ಮಾಡುವನು.

ಬರೇ ಅಗ್ನಿಯಲ್ಲಷ್ಟೇ ಅಲ್ಲ, ನಮ್ಮ ಇಂದ್ರಿಯಗಳಲ್ಲೂ ಹೋಮಿಸಬಹುದಾಗಿದೆ.

**'ಮನಃಷಷ್ಠಾಣೀಂದ್ರಿಯಾಣಿ ಪ್ರಕೃತಿಸ್ಥಾನಿ ಕರ್ಷತಿ'** ಎಂದು ಭಗವದ್ಗೀತೆಯಲ್ಲಿ ಸಂದೇಶಿಸಿರುವಂತೆ ನಮ್ಮ ಚಕ್ಷುರಾದಿ ಇಂದ್ರಿಯಗಳು ಆಯಾ ವಿಷಯಪದಾರ್ಥದ ಆಕರ್ಷಣೆಗೆ ಒಳಗಾಗುವಂತೆ ಮಾಡುವವನು ಭಗವಂತ. ಕಣ್ಣಿನ ಮೂಲಕ ರೂಪಗಳನ್ನು ಕಂಡೆವೆಂದರೆ, ಆ ರೂಪಜ್ಞಾನವನ್ನು ಕಣ್ಣು ಎಂಬ ಅಗ್ನಿಕುಂಡದಲ್ಲಿ ಹೋಮಿಸಿದೆವೆಂದರ್ಥ. ಒಂದೊಂದು ಇಂದ್ರಿಯವೂ ಒಂದೊಂದು ಅಗ್ನಿಕುಂಡ. ಅದರಲ್ಲಿ ರೂಪಜ್ಞಾನ, ರಸಜ್ಞಾನ, ಗಂಧ ಜ್ಞಾನ, ಶಬ್ದಜ್ಞಾನ, ಸ್ಪರ್ಶಜ್ಞಾನ ಇವನ್ನೆಲ್ಲ ಹೋಮಿಸಬೇಕು. ಅದರ ಸಾರಭಾಗವನ್ನು ಭಗವಂತ ಸ್ವೀಕರಿಸುವನು. ಆದುದರಿಂದ ಅವನು 'ಹುತಭುಕ್'. ವಿಷಯ ಪದಾರ್ಥಗಳ ಭೋಗದ ಲೇಪ ತಟ್ಟಬಾರದೆಂದಿದ್ದರೆ ಭಗವಂತನನ್ನು 'ಹುತಭುಕ್' - ಎಂದು ಉಪಾಸನೆ ನಡೆಸಬೇಕು. ಇಂದ್ರಿಯಗಳ ಮೂಲಕ ಅನುಭವಿಸಲಾಗುವ ವಿಷಯಪದಾರ್ಥಗಳ ಸಾರಭಾಗ ಅವನಿಗೇ ಸಂದಾಯವಾಗುವುದೆಂಬುದನ್ನು ಅನುಸಂಧಾನ ಮಾಡಬೇಕು.

**೮೮೨. ವಿಭುಃ – ನಾನಾರೂಪಗಳನ್ನು ತಾಳುವವನು.**

**ವಿವರಣೆ :** ವಿ - ನಾನಾರೂಪಗಳುಳ್ಳವನಾಗಿ ಭುಃ - ಭವತೀತಿ ಆಗುವವನು. ನಾನಾರೂಪಗಳನ್ನು ತಾಳುವವನು. 'ಹುತಭುಕ್' ಎಂಬ ನಾಮದಲ್ಲಿ ಸೂಚಿಸಿದಂತೆ ನಾವು ಏಕಕಾಲದಲ್ಲಿ ಐದು ಇಂದ್ರಿಯಕುಂಡಗಳಲ್ಲೂ ಹೋಮಿಸಲು ಪ್ರಾರಂಭಿಸಿದೆವೆಂದರೆ ಅವನ್ನು ಏಕಕಾಲದಲ್ಲಿ ಸ್ವೀಕರಿಸಲು ಅಷ್ಟು ರೂಪಗಳನ್ನು ತಾಳಿ ಅಷ್ಟು ಇಂದ್ರಿಯಗಳಲ್ಲೂ ಇರುವನು. ಇದು ಭಕ್ತರ ಮೇಲೆ ಭಗವಂತ ತಾಳುವ ಅನುಕಂಪ.

ಏಕಕಾಲದಲ್ಲಿ ಐದು ಇಂದ್ರಿಯಗಳಿಂದಲೂ ಅನುಭವಿಸುವುದು ಅಸಂಭಾವಿತ ಎನ್ನಬೇಕಿಲ್ಲ. ಶಾಸ್ತ್ರಕಾರರು ಇದಕ್ಕೆ 'ದೀರ್ಘಶಷ್ಕುಲೀಭಕ್ಷಣ' ವನ್ನು ದೃಷ್ಟಾಂತವಾಗಿ ತೋರಿಸಿರುವರು. ಒಂದು ಉದ್ದದ ಚಕ್ಕುಲಿಯನ್ನು ತಿನ್ನುತ್ತಿದ್ದಾನೆಂದರೆ ಅದರ ರಸಜ್ಞಾನವನ್ನು ನಾಲಿಗೆಯಿಂದಲೂ, ಅದರ ರೂಪ ಜ್ಞಾನವನ್ನು ಚಕ್ಷುರಿಂದ್ರಿಯದಿಂದಲೂ, ಅದರ ಸ್ಪರ್ಶ ಜ್ಞಾನವನ್ನು ತ್ವಗೀಂದ್ರಿಯದಿಂದಲೂ, ಅದರ ಗಂಧದ ಜ್ಞಾನವನ್ನು ಘ್ರಾಣೇಂದ್ರಿಯದಿಂದಲೂ ಏಕಕಾಲದಲ್ಲಿ ಅನುಭವಿಸುವನು.

ಹೀಗೆ ಐದು ಇಂದ್ರಿಯಗಳಿಂದಲೂ ಏಕಕಾಲದಲ್ಲಿ ಹೋಮಿಸಿದ ಹವಿಸ್ಸನ್ನು ಸ್ವೀಕರಿಸುವುದಕ್ಕಾಗಿ ಭಗವಂತನು ‘ವಿಭು’ ಎನಿಸಿ ವಿವಿಧ ರೂಪಗಳುಳ್ಳವನಾಗುವನು.

**೮೮೩. ರವಿಃ – ಇಂಪಾದ ಶಬ್ದಗಳಿಂದ ತಿಳಿಯಲ್ಪಡುವವನು.**

**ವಿವರಣೆ :** ರವ + ಇಃ - ರವಿ, ರವಗಳಿಂದ, ಶಬ್ದಗಳಿಂದ ತಿಳಿಯಲ್ಪಡುವವನು.

ರವ ಎಂದರೆ ಶಬ್ದಗಳು ‘ಕಲರವ’ - ಎಂದೇ ಪಕ್ಷಿಗಳ ಸದ್ದು ಕರೆಯಲ್ಪಡುವನು. ಅವು ಧ್ವನ್ಯಾತ್ಮಕ ಶಬ್ದಗಳಾದುದರಿಂದ ‘ಕಲರವ’ ಎನಿಸುವುದು. ಇಂಪಾದ ಧ್ವನಿಯೇ ಕಲರವ. ಇಲ್ಲಿ ಪ್ರವಚನ ನಡೆಯುತ್ತಿರುವಾಗ ಹೊರಗಿನಿಂದ ಸದ್ದು ಕೇಳಿಸುವುದು ತಾನೇ ? ಅದು ‘ಕಿರಿಕಿರಿ’ ಹೊರತು ಕಲರವ ಅಲ್ಲ.

ರವಗಳಿಂದ, ಶಬ್ದಗಳಿಂದ ಈಯತೇ - ತಿಳಿಯಲ್ಪಡುವವನಾದುದರಿಂದ ದೇವರು ರವಿ. ಇಂಪಾದ ಶಬ್ದಗಳಿಂದಲೇ ತಿಳಿಯಲ್ಪಡುವವನು. ವೇದದ ಶಬ್ದಗಳೇ, ವೈದಿಕ ಶಬ್ದಗಳೇ ಇಂಪಾದಶಬ್ದಗಳು. ಅವುಗಳಷ್ಟೇ ದೇವರನ್ನು ತಿಳಿಸುವವು. ಇಂದ್ರಿಯಗಳಿಗೆ ಎಟಕದ, ಅನುಮಾನಕ್ಕೆ ಗೋಚರಿಸದ ಅವನನ್ನು ಶಬ್ದಗಳಷ್ಟೇ ತಿಳಿಸಬೇಕು. ಆದುದರಿಂದಲೇ ಅವನು ರವಿ.

ಸೂರ್ಯನೂ ರವಿ ಎನಿಸುವುದು ಈ ಕಾರಣಕ್ಕಾಗಿಯೇ. ಬೆಳಿಗ್ಗೆ ಏಳುವಾಗ ಸೂರ್ಯೋದಯ ಆಯಿತೋ ಇಲ್ಲವೋ ಎಂದು ಕಣ್ಣು ತೆರೆದು ಗಡಿಯಾರ ನೋಡಲು ನಮಗೆ ಔದಾಸೀನ್ಯ. ಎಲ್ಲಾದರೂ ನಿದ್ದೆ ಹೊರಟು ಹೋಗುತ್ತೋ ಎಂದು. ಹೊರಗಿನಿಂದ ಹಕ್ಕಿಗಳ ‘ಕಲರವ’ ಕೇಳಿಸಿತೆಂದರೆ ಸೂರ್ಯೋದಯ ಆಯಿತೆಂದು ನಿರ್ಧರಿಸಿ ಹಾಸಿಗೆಯಿಂದ ಏಳ್ತೇವೆ. ಹಾಗಾದರೆ ಉದಯವಾಗುತ್ತಿರುವ ಸೂರ್ಯ ತಿಳಿಯಲ್ಪಡುವುದು ಹಕ್ಕಿಗಳ ‘ಕಲರವ’ ಸದ್ದುಗಳಿಂದ ಎಂದು ಈ ರೀತಿಯಾಗಿ ಶಬ್ದಗಳಿಂದ ತಿಳಿಯಲ್ಪಡುವುದರಿಂದಲೇ ‘ರವಿ.’

**೮೮೪. ವಿರೋಚನಃ – ತನ್ನ ವಿಶಿಷ್ಟವಾದ ಕಾಂತಿಯುನ್ನು ಎಂದೂ ಕಳೆದುಕೊಳ್ಳದವನು.**

**ವಿವರಣೆ :** ವಿರೋಚ + ನಃ - ವಿರೋಚನಃ, ಗಗನದಲ್ಲಿರುವ ಸೂರ್ಯನಿಗೂ ಪರಮಾತ್ಮನಿಗೂ ‘ರವಿ’ ಎಂಬ ಶಬ್ದವಾಚ್ಯತ್ವ ಇವುದಾದರೂ ಸೂರ್ಯ ಮತ್ತು ಪರಮಾತ್ಮರಲ್ಲಿ ತುಂಬ ವೈಲಕ್ಷಣ್ಯ ಇದೆ. ಗಗನದಲ್ಲಿರುವ ಸೂರ್ಯ ಗ್ರಹಣಕಾಲದಲ್ಲಿ ‘ವಿರೋಚ’ನಾಗಿ ಬಿಡುವನು. ಅಂದರೆ ರೋಚವನ್ನು ಕಾಂತಿಯನ್ನು ಕಳೆದುಕೊಂಡವನಾಗುವನು. ವಿಸ್ಮರಣೆ ಇತ್ಯಾದಿಗಳಲ್ಲಿ ಹೇಗೋ ಹಾಗೆ ವಿರೋಚನ

ಎಂಬಲ್ಲಿಯೂ ವಿ ಉಪಸರ್ಗಕ್ಕೆ 'ವಿಗತ' ಕಳಕೊಂಡ ಎಂಬ ಅರ್ಥ.

ಹೀಗೆ ಸೂರ್ಯ ವಿರೋಚನಾಗುವವನಾದರೂ ದೇವರು ಎಂದೆಂದೂ 'ವಿರೋಚ' - ಕಾಂತಿ ಕಳೆದುಕೊಂಡವನಾಗುವುದಿಲ್ಲ. ಇದನ್ನೇ 'ವಿರೋಚ + ನ' ಎಂದೆಂದೂ ತನ್ನ ಕಾಂತಿಯನ್ನು ಕಳೆದುಕೊಳ್ಳದವನು. ವಿರೋಚಃ ನ ಭವತೀತಿ ವಿರೋಚನಃ

ಪಾಂಡವರು ಸತ್ತರು ಎಂಬ ಸುಳ್ಳು ಸುದ್ದಿ ಬಂತು ಆಗಲೂ ಕೃಷ್ಣ ವಿರೋಚನ, ಹೋಗತಕ್ಕ ಕಾಂತಿ ಉಳ್ಳವನಲ್ಲ. 'ಯಾದವರೆಲ್ಲ ಪರಸ್ಪರ ಹೊಡೆದಾಡಿಕೊಂಡು ಸಾಯಲಿ' ಎಂದು ಗಾಂಧಾರಿ ಶಾಪಕೊಟ್ಟಳು. 'ಯಾದವರನ್ನು ಹೇಗೆ ಕಳುಹಿಸಬೇಕೆಂದು ಯೋಚಿಸ್ತಾ ಇದ್ದೆ. ಒಳ್ಳೆಯ ಉಪಾಯ ತೋರಿಸಿದ್ದಿ' - ಎಂದು ಆಗಲೂ ನಗುತ್ತಿದ್ದನೇ ಹೊರತು ತನ್ನ 'ರೋಚ'ವನ್ನು ಕಳೆದುಕೊಂಡಿಲ್ಲ.

ಅಭಿಮನ್ಯುವಿನ ಸತ್ತ ಸುದ್ದಿ ಕೇಳಿದಾಗಲೂ ಅವನು ರೋಚವನ್ನು ಕಳಕೊಂಡಿಲ್ಲ.

ಹೀಗೆ ಕೃಷ್ಣ ಎಂದೆಂದೂ ತನ್ನ ರೋಚವನ್ನು ಕಳಕೊಳ್ಳದಿರುವಿಕೆಯನ್ನು ಭೀಷ್ಮರು ಮೆಲುಕುಹಾಕುತ್ತ 'ವಿರೋಚನ' - ಎಂದು ಸ್ತುತಿಸುತ್ತಿರುವರು.

**೮೮೫. ಸೂರ್ಯಃ – ತಿಳಿದವರಿಂದ ಹೊಂದಲ್ಪಡುವವನು.**

**ವಿವರಣೆ :** ಸೂರಿ + ಯಃ - ಸೂರ್ಯಃ, ಸೂರಿಗಳು ಎಂದರೆ ತಿಳಿದವರು. ಯಃ ಎಂದರೆ ಪ್ರಾಪ್ಯ, ಹೊಂದಲು ಯೋಗ್ಯನಾಗಿರುವವನು. ತಿಳಿದವರಿಂದಷ್ಟೇ ಹೊದಲು ಯೋಗ್ಯನಾಗಿರುವುದರಿಂದ ಭಗವಂತ ಸೂರ್ಯ.

**'ತದ್ ವಿಷ್ಣೋಃ ಪರಮಂ ಪದಂ ಸದಾ ಪಶ್ಯಂತಿ ಸೂರಯಃ'**- ಶ್ರೀ ವಿಷ್ಣುವಿನ ಶ್ರೇಷ್ಠವಾದ ಸ್ವರೂಪವನ್ನು ಸೂರಿಗಳಷ್ಟೇ ಯಾವಾಗಲೂ ಕಾಣುತ್ತಿರುವರೆಂದು ವಿಷ್ಣುಸೂಕ್ತ ಸಾರುತ್ತಿದೆ.

ಹೀಗೆ ಸೂರಿಗಳಿಂದಲೇ ದರ್ಶನಕ್ಕೆ ಯೋಗ್ಯನೆನಿಸಿರುವ ವಿಷ್ಣು ಅಂತಹ ಸೂರಿಗಳಿಂದಲೇ ಹೊಂದಲು ಯೋಗ್ಯನಾಗಿರುವನು. ಸೂರಿಗಳಲ್ಲದವರು ಅಂದರೆ ಅವನನ್ನು ಚೆನ್ನಾಗಿ ತಿಳಿಯದವರು ಅವನನ್ನು ಹೊಂದಲಾರರು.

ನಾವು ಕಾಣುತ್ತಿರುವ ಸೂರ್ಯನೂ 'ಸೂರ್ಯ' ಎನಿಸಿರುವುದು ಈ ಕಾರಣಕ್ಕಾಗಿಯೇ, ಸರಿಯಾಗಿ ತಿಳಿದವರಷ್ಟೇ ಅವನ ಉಪಯೋಗವನ್ನು ಪಡೆದುಕೊಳ್ಳ ಬಲ್ಲರು.

**೮೮೬. ಸವಿತಾ – * ಸುಖ ಪ್ರಸವವಾಗುವಂತೆ ಮಾಡುವವನು.**

*** ಒಳಗಿನ ವಿಚಾರಗಳನ್ನು ಚೆನ್ನಾಗಿ ಹೊರ ಹೊಮ್ಮಿಸುವಂತೆ ಮಾಡುವವನು.**

ವಿವರಣೆ: ಈ ಸಾಲಿನ ನಾಮಗಳೆಲ್ಲ ಸೂರ್ಯನಿಗೆ ಸಂಬಂಧ ಪಟ್ಟಂತೆ ಕಾಣಿಸುವವು. 'ರವಿಃ' 'ವಿರೋಚನಃ' 'ಸೂರ್ಯಃ' 'ಸವಿತಾ'....

ಸೂರ್ಯನು ಮಳೆ, ಬೆಳಕು, ಉಷ್ಣ ಇವುಗಳಿಗೆಲ್ಲ ಪ್ರಯೋಜಕನಾಗಿದ್ದು ಪರೋಕ್ಷವಾಗಿ ಸೃಷ್ಟಿಗೆ ನಿಮಿತ್ತನಾಗಿರುವುದರಿಂದ ಸವಿತಾ ಎನಿಸುವನು.

ಆದರೆ ಅವನ ಒಳಗಿನ ಸವಿತೃನಾರಾಯಣ ಸೂರ್ಯನಿಗಿಂತಲೂ ಮುಖ್ಯವಾಗಿ 'ಸವಿತಾ'. ಯಾಕೆಂದರೆ ಸಾವಯತೀತಿ ಸವಿತಾ - ಗರ್ಭದ ಮಗು ಹೊರಗೆ ಬರುವಂತೆ ಮಾಡುವವನು. 'ಷೂಜ್ ಪ್ರಾಣಿಪ್ರಸವೇ' - ಎಂಬ ಕ್ರಿಯಾಪದದಿಂದ ನಿಷ್ಪನ್ನವಾಗಿರುವ 'ಸವಿತಾ' ಶಬ್ದವು ಸುಖಪ್ರಸವ ಆಗಲು ಕಾರಣನಾಗಿರುವವನು ಭಗವಂತನೆಂದು ತಿಳಿಸುವುದು. ಮಾನವರಿಗೆ ಸೇರಿದ ಗರ್ಭಿಣಿ ಸ್ತ್ರೀಯರಷ್ಟೇ ಅಲ್ಲ. ಪಶುಪಕ್ಷಿಗಳಿಗೆ ಸೇರಿದ ಗರ್ಭಿಣಿಯರೂ ಸುಖವಾಗಿ ಹಡೆಯುವಂತೆ ಮಾಡುವುದರಿಂದ ಭಗವಂತನು ಸವಿತಾ ಎನಿಸುವನು.

ಸ್ತ್ರೀಯರು ಪರಮಾತ್ಮನನ್ನು ಈ ಆಶಯದಲ್ಲಿ 'ಸವಿತಾ' - ಎಂದು ಉಪಾಸನೆ ನಡೆಸಿದರೆ, ಗಂಡಸರು ತಮ್ಮಲ್ಲಿರುವ ವಿಚಾರಗಳನ್ನು ಇನ್ನೊಬ್ಬರ ಮುಂದೆ ಚೆನ್ನಾಗಿ ಹೊರಹಾಕುವುದಕ್ಕೆ ಕಾರಣನಾಗಿರುವವನು ಎಂಬ ಆಶಯದಲ್ಲಿ ದೇವರನ್ನು 'ಸವಿತಾ' - ಎಂದು ಉಪಾಸನೆ ನಡೆಸಬೇಕು.

ಎಷ್ಟೋ ವ್ಯಕ್ತಿಗಳಿಗೆ ಏನಾದರೂ ವಿಚಾರವನ್ನು ತಿಳಿಸಬೇಕೆಂದಾಗ ಕೆಮ್ಮು, 'ಅದು', 'ಇದು' - ಇತ್ಯಾದಿ ಅನಪೇಕ್ಷಿತ ಶಬ್ದಗಳ ಪ್ರಯೋಗ ಇತ್ಯಾದಿಗಳು ಕಾಣಿಸಿಕೊಳ್ಳುವವು. ಇದು ಶಬ್ದದಾರಿದ್ರ್ಯ ಪ್ರಯುಕ್ತವಾಗಿ. ಈ ದೌರ್ಬಲ್ಯ ದೂರವಾಗಿ ನಮ್ಮಲ್ಲಿಯ ವಿಚಾರಗಳನ್ನು ಸ್ಪಷ್ಟವಾಗಿ, ಅನಾಯಾಸವಾಗಿ ಪ್ರಸ್ತುತ ಪಡಿಸಲು ಅನುಕೂಲವಾಗಬೇಕಾದರೆ ದೇವರನ್ನು 'ಸವಿತಾ' ಎಂದು ಉಪಾಸನೆ ನಡೆಸೋಣ

**೮೮೭. ರವಿಲೋಚನಃ – * ರಮಣ ನೀಡುವ ವಿಶಿಷ್ಟವಾದ ಕಣ್ಣು ಉಳ್ಳವನು.**

*** ರಮಣ ನೀಡುವ ವಿಶಿಷ್ಟವಾದ ಕಣ್ಣನ್ನು ಎಲ್ಲರಿಗೆ ನೀಡಿರುವವನು.**

ವಿವರಣೆ: ರ + ವಿ + ಲೋಚನಃ - ರ ಎಂದರೆ ರಮಣ ಸುಖ, ಅದನ್ನು ಕೊಡುವ

ವಿ ವಿಶಿಷ್ಟವಾದ ಲೋಚನಃ ಕಣ್ಣು ಉಳ್ಳವನು. ರಮಣವನ್ನು ಕೊಡುವ ಅಂದರೆ ನೆಮ್ಮದಿಯನ್ನು ಕೊಡುವ.

**'ಈ ಮುದ್ದುಕೃಷ್ಣನ ಈಕ್ಷಣದ ಸುಖವೇ ಸಾಕು**
**ಶ್ರೀ ಮಧ್ವಮುನಿಯ ಮನದೈವ ಕೃಷ್ಣನ'**

ಉಡುಪಿ ಕೃಷ್ಣನ ಲೋಚನದಿಂದ ದೊರಕುವ ನೆಮ್ಮದಿಯನ್ನು ತಿಳಿಸ ಹೊರಟ ಈ ಹಾಡಿನಲ್ಲಿ 'ಈಕ್ಷಣದ' - ಎಂಬ ಶಬ್ದ ಎರಡು ಅರ್ಥಗಳಲ್ಲಿ ತೆರೆದುಕೊಳ್ಳುವುದು.

ಒಂದು ಅರ್ಥ - ಈ + ಕ್ಷಣ - ಉಡುಪಿ ಕೃಷ್ಣನ ದರ್ಶನ ಪಡೆದಾ ಕ್ಷಣ. ಅದು ಒಂದೇ ಕ್ಷಣ. ಯಾಕೆಂದರೆ ಮುಂದಿನ ಕ್ಷಣದಲ್ಲಿ ಹಿಂದಿನವರು ದಬ್ಬುತ್ತಾರೆ. ಕೃಷ್ಣನೆದುರು ಬಂದಾಗ ಏನೇನೋ ಯೋಚಿಸದೆ ಮಠದ ಹೆಬ್ಬಾಗಿಲಿನಿಂದ ಬರುವಾಗಲೇ ದರ್ಶನಕ್ಕೆ ಸಿದ್ಧರಾಗಿರಬೇಕು. ತುಂಬ 'ಎಲರ್ಟ್' ಆಗಿರಬೇಕೆಂದು ಹಾಗೆ ದಬ್ಬುವುದು.ತಿರುಪತಿಯಲ್ಲಿ ಹಾಗೆ ದಬ್ಬಿಸಿಕೊಂಡು ರೂಢಿ ಇರುವುದರಿಂದ ಇಲ್ಲಿ ಯಾರೂ ಅದನ್ನು ಆಕ್ಷೇಪಿಸುವುದಿಲ್ಲ !

ಈ ಹಿನ್ನಲೆಯಲ್ಲಿ 'ಈ ಮುದ್ದುಕೃಷ್ಣನ ಈ ಕ್ಷಣದ ಸುಖವೇ ಸಾಕು' ಎಂದು ಒಂದು ಕ್ಷಣದ ಸುಖವೇ ಸಾಕು ಎಂದು ಮಾತು ಹೊರಟದ್ದು.

ಇನ್ನೊಂದು ಅರ್ಥ ಉಡುಪಿ ಕೃಷ್ಣನ ಈಕ್ಷಣದ ಸುಖ ದರ್ಶನದ ಸುಖ, ನೋಡುವಿಕೆಯ ಸುಖ. ಇದೇ ಜೀವನವನ್ನು ಧನ್ಯವನ್ನಾಗಿ ಮಾಡುವುದು.

ಭೀಷ್ಮರು ಹತ್ತು ದಿನ ಯುದ್ದ ಮಾಡುವಾಗ ಕೃಷ್ಣನನ್ನು ಕಾಣುತ್ತ ಇದ್ದರು ಈಗ ಮತ್ತೆ ಕೃಷ್ಣನ ದರ್ಶನ ದೊರಕಿದೆ. ಎದುರೇ ಕೃಷ್ಣ ಕೂತಿದ್ದಾನೆ. ಮೈತುಂಬ ಬಾಣಗಳು ಚುಚ್ಚಿಕೊಂಡಿವೆ, ಎಂಟು ಮರಣಗಳ ದುಃಖದ ಅನುಭವ. ಅದರ ಮಧ್ಯದಲ್ಲೂ 'ಈ ಮುದ್ದುಕೃಷ್ಣನ ಈಕ್ಷಣದ ಸುಖವೇ ಸಾಕು !' ಎಂದು ಉದ್ಗರಿಸಬಹುದಾದಂತೆ ಕೃಷ್ಣನನ್ನು ನೋಡುತ್ತ ಅವನ ದರ್ಶನದ ಸುಖವನ್ನು ಅನುಭವಿಸುತ್ತಿದ್ದಾರೆ. ಭೀಷ್ಮರ ಆ ಅನುಭವವನ್ನೂ ಸೆರೆಹಿಡಿಯುವಂತೆ ವಾದಿರಾಜ ಸ್ವಾಮಿಗಳು 'ಈ ಮುದ್ದುಕೃಷ್ಣನ ಈಕ್ಷಣದ ಸುಖವೇ ಸಾಕು' ಎಂದು ಸ್ತುತಿಸಿರುವರು.

ಕೃಷ್ಣನ ಈಕ್ಷಣಕ್ಕೆ, ದರ್ಶನಕ್ಕೆ ಅಷ್ಟೊಂದು ಸುಖಪ್ರದತ್ವ ಬರಲು ಕಾರಣ - ಅವನ ಕಣ್ಣುಗಳು. ಅವು 'ರ' - ರಮಣ ಕೊಡುವವು. ಸುಖಪ್ರದವಾದವು. 'ಏಷ ವಾಮನಿಃ ಏಷ ಭಾಮನಿಃ......' - ಎಂದು ತಿಳಿಸಿರುವಂತೆ ನಮ್ಮ ಮುಖದಲ್ಲೂ

ಕಣ್ಣು ವಿಶಿಷ್ಟ ಸ್ಥಾನವನ್ನು ಪಡೆಯಲು, ಮುಖಕ್ಕೆ ಸೌಂದರ್ಯವನ್ನು ಉಂಟು ಮಾಡಲು ಕಾರಣನಾದವನು ವಾಮನರೂಪಿ ಪರಮಾತ್ಮನು. ಸುಂದರನಾಗಿರುವುದರಿಂದಲೇ 'ವಾಮನ' ಎನಿಸಿರುವ ಅವನು ಕಣ್ಣಲ್ಲಿ ನೆಲೆಸಿರುವುದರಿಂದಲೇ ಕಣ್ಣು ಸುಂದರ ಎನಿಸುವುದು. ಅದರಿಂದಾಗಿ ಮುಖಕ್ಕೂ ಸೌಂದರ್ಯ ಸಿದ್ಧಿಸುವುದು. ಆದುದರಿಂದ ದೇವರು ತಾನು ಉಳಿದವರಿಗೆ ರಮಣವನ್ನು ನೀಡುವ ವಿಶಿಷ್ಟವಾದ ಲೋಚನವನ್ನು ಹೊಂದಿರುವುದರಿಂದಷ್ಟೇ ಅಲ್ಲ, ಉಳಿದವರಿಗೂ ರಮಣ ನೀಡುವ ವಿಶಿಷ್ಟವಾದ ಲೋಚನವನ್ನು ನೀಡುವುದರಿಂದಲೂ ರಮಯತೀತಿ ರಂ, ತಾದೃಶಂ ವಿಶಿಷ್ಟಂ ಲೋಚನಂ ಯಸ್ಮಾತ್ ಸಃ ಎಂಬ ನಿರ್ವಚನದ ಪ್ರಕಾರ 'ರವಿಲೋಚನ' ಎನಿಸುವನು.

**ಅನಂತೋ ಹುತಭುಗ್‌ಭೋಕ್ತಾ ಸುಖದೋ ನೈಕಜೋಽಗ್ರಜಃ |**
**ಅನಿರ್ವಿಣ್ಣಃ ಸದಾಮರ್ಷೀ ಲೋಕಾಧಿಷ್ಠಾನಮದ್ಭುತಮ್ ||೯೫||**

**೮೮೮. ಅನಂತಃ – * ಕೊನೆಯಿಲ್ಲದವನು.**

*** ಮುಖ್ಯಪ್ರಾಣನು ಯಾವಾಗಲೂ ಯಾರ ಸಮೀಪದಲ್ಲೇ ಇರುವನೋ ಅಂತಹವನು.**

ವಿವರಣೆ : ಕೊನೆಯಿಲ್ಲದವನು ಎಂಬ ಒಂದು ಪ್ರಸಿದ್ಧ ಅರ್ಥ ಅನಂತ ನಾಮಕ್ಕೆ ಇದ್ದೇ ಇದೆ.

ಇದರ ಜೊತೆಗೆ ಮತ್ತೊಂದು ಅನುಸಂಧಾನಕ್ಕೆ ಉಪಯುಕ್ತವಾಗುವ ಅರ್ಥ- ಅನ + ಅಂತ - ಅನ ಎನಿಸಿರುವ ಮುಖ್ಯಪ್ರಾಣನು ಯಾರ ಸಮೀಪದಲ್ಲೇ ಇರುವನೋ ಅಂತಹವನು ಅನಂತ.

**'...... ಅಚ್ಯುತಾಂಕೇ ಸ್ವಾಸೀನಮಸ್ಯ ನುತಿನಿತ್ಯವಚಃಪ್ರವೃತ್ತಿಮ್'** - ಎಂದು ಹಿರಿಯರು ತಿಳಿಸಿರುವಂತೆ ವಾಯುದೇವ ಯಾವಾಗಲೂ ದೇವರ ತೊಡೆಯಲ್ಲಿ ಕುಳಿತು ಅವನ ಸ್ತುತಿಗೈಯುತ್ತಿರುವನು. ಮುಖ್ಯಪ್ರಾಣನನ್ನು ಬಿಟ್ಟು ದೇವರಿಲ್ಲ, ದೇವರನ್ನು ಬಿಟ್ಟು ಮುಖ್ಯಪ್ರಾಣ ಇಲ್ಲ. ಆದ್ದರಿಂದ ಮುಖ್ಯಪ್ರಾಣನನ್ನು ಕಾಣುವಾಗ ದೇವರ ತೊಡೆಯಲ್ಲಿ ಕುಳಿತಂತೆ ಅನುಸಂಧಾನ ನಡೆಸಬೇಕು. ದೇವರ ಪ್ರತೀಕವನ್ನು ಕಾಣುವಾಗ, ಅವನ ತೊಡೆಯಲ್ಲಿ ಮುಖ್ಯಪ್ರಾಣ ಕುಳಿತುಕೊಂಡು ಸ್ತುತಿಸುತ್ತಿರುವುದನ್ನು ಚಿಂತಿಸಬೇಕು.

ಹೀಗೆ 'ಅನ' - ಎನಿಸಿರುವ ಮುಖ್ಯಪ್ರಾಣನು ದೇವರ 'ಅಂತ'ದಲ್ಲೇ

ಸಮೀಪದಲ್ಲೇ ಇರುವುದರಿಂದ ದೇವರು 'ಅನಂತ' ಎನಿಸುವನು.

ಅನ + ಅಂತ ಎಂದಾದಾಗ 'ಅನಾಂತ' - ಎಂದಾಗಬೇಕಿತ್ತು. ಆದರೆ ಮುಖ್ಯಪ್ರಾಣನಿಗಿಂತಲೂ ಹೆಚ್ಚು ಹತ್ತಿರದಲ್ಲಿರುವವಳು ಲಕ್ಷ್ಮೀದೇವಿ. ಯಾಕೆಂದರೆ ಅವಳು ದೇವರ ಎದೆಯಲ್ಲೇ ಇರುವಳು. ಮುಖ್ಯಪ್ರಾಣ ಲಕ್ಷ್ಮೀದೇವಿಯಷ್ಟು ದೇವರ ಹತ್ತಿರದಲ್ಲಿ ಇಲ್ಲ. ಈ ನ್ಯೂನತೆಯನ್ನು 'ಅನ' - ಎಂಬಲ್ಲಿಯ ಕೊನೆಯ ಅಕ್ಷರವನ್ನು ಲೋಪ ಮಾಡಿಸುವ ಮೂಲಕ ಸೂಚಿಸಲಾಗಿದೆ.

ವಾಯುದೇವ ದೇವರ ಸಮೀಪದಲ್ಲೇ ಇರುವನೆಂದು 'ಅನಂತ' ನಾಮದಿಂದ ಉಪಾಸನೆ ನಡೆಸಿದರೆ ಅದರಿಂದ ಪ್ರಸನ್ನನಾಗುವ ಭಗವಂತ ನಮಗೆ ಯಾವಾಗಲೂ ವಾಯುದೇವನ ಸಾಮೀಪ್ಯವನ್ನು ನೀಡುವನು. ವಾಯುದೇವನ ಸಾಮೀಪ್ಯ ಎಂದರೆ ಉಸಿರಾಟ. ಪೂರ್ಣ ಆಯುಷ್ಯ ಬಾಳುವಂತೆ, ಉಸಿರಾಡುತ್ತಿರುವಂತೆ ಅನುಗ್ರಹಿಸುವನು.

**೮೮೯. ಹುತಭುಗ್‌ಭೋಕ್ತಾ – ಯಜ್ಞಗಳಲ್ಲಿ ನೀಡಲಾಗುವ ಆಹುತಿಗಳನ್ನು ಸ್ವೀಕರಿಸುವ ದೇವತೆಗಳನ್ನು ಪ್ರಳಯದಲ್ಲಿ ಕಬಳಿಸುವವನು.**

**ವಿವರಣೆ:** 'ಹುತಭುಕ್' - ಎಂಬ ನಾಮದ ಅರ್ಥಚಿಂತನೆ ನಡೆಸಿದ್ದೆವು. ಹುತಭುಕ್ ಮತ್ತು ಭೋಕ್ತಾ ಎಂಬ ಎರಡು ಶಬ್ದಗಳನ್ನು ಸೇರಿಸಿ ರೂಪುಗೊಂಡ ನಾಮ 'ಹುತಭುಗ್‌ಭೋಕ್ತಾ' - ಎಂಬುದು.

ಯಜ್ಞಗಳಲ್ಲಿ 'ಇಂದ್ರಾಯ ಸ್ವಾಹಾ' 'ವರುಣಾಯ ಸ್ವಾಹಾ.......' ಇತ್ಯಾದಿಯಾಗಿ ಬೇರೆ ಬೇರೆ ದೇವತೆಗಳಿಗೆ ಆಹುತಿಗಳನ್ನು ನೀಡುವೆವು. ದೇವತೆಗಳು ಆ ಆಹುತಿಗಳನ್ನು ಸ್ವೀಕಾರ ಮಾಡುವರು. ಆದುದರಿಂದ ಹುತಭುಕ್, ಹೋಮಿಸಿದ್ದನ್ನು ಸ್ವೀಕರಿಸುವವರು ಇಂದ್ರಾದಿ ದೇವತೆಗಳು. ಅವರನ್ನೂ ಪ್ರಳಯಕಾಲದಲ್ಲಿ ಕಬಳಿಸುವ ಭಗವಂತ 'ಹುತ ಭುಗ್‌ಭೋಕ್ತಾ' ಕಬಳಿಸುವುದೆಂದರೆ ದೇವತೆಗಳಿಗೆ ಬೇರೆ ಬೇರೆ ಗತಿಯನ್ನು ನೀಡುವುದು.

ಪ್ರಳಯಕಾಲದಲ್ಲಿ ಭಗವಂತ ಹೇಗೆ ಕಬಳಿಸುವನೆಂಬುದನ್ನು ಹದಿನೆಂಟು ದಿನಗಳ ಮಹಾಯುದ್ಧದಲ್ಲಿ ಶ್ರೀ ಕೃಷ್ಣ ತೋರಿಸಿಕೊಟ್ಟಿರುವನು. ಅರ್ಜುನನಿಗೆ ತೋರಿಸಲಾದ ವಿಶ್ವರೂಪದಲ್ಲಿ ಭೀಷ್ಮದ್ರೋಣಾದಿಗಳೆಲ್ಲ ಆ ವಿಶ್ವರೂಪದ ಬಾಯಿಯೊಳಗೆ ಹೋಗುತ್ತಿರುವುದನ್ನು ಅರ್ಜುನನೂ, ಭೀಷ್ಮಾದಿಗಳೂ ಕಂಡಿರುವರು. ಆದುದರಿಂದ ಭಗವಂತನು ತಾನು ಪ್ರಳಯದಲ್ಲಿ ಹೇಗೆ

ಕಬಳಿಸುವೆನೆಂಬುದಕ್ಕೆ ತೋರಿಸಲಾದ ಚಿಕ್ಕ ದೃಷ್ಟಾಂತವೇ ಹದಿನೆಂಟು ದಿವಸಗಳ ಮಹಾಭಾರತ ಯುದ್ಧ.

**೪೯೦. ಸುಖದಃ – ಸಜ್ಜನರಿಗೆ ನೆಮ್ಮದಿಯನ್ನು ನೀಡುವವನು.**

**ವಿವರಣೆ:** 'ಹುತಭುಗ್ ಭೋಕ್ತಾ' - ಎಂಬ ನಾಮದಲ್ಲಿ ಪ್ರಸ್ತುತವಾದಂತೆ ಯಾರು ದೇವತೆಗಳಿಗೆ ಆಹುತಿಯನ್ನು ನೀಡುವರೋ ಅಂತಹ ಸಜ್ಜನರಿಗೆ 'ಸುಖದಃ'- ಸುಖವನ್ನು, ನೆಮ್ಮದಿಯನ್ನು ನೀಡುವವನು.

ಭಗವಂತನು ಸಮಸ್ಯೆಗಳನ್ನು ಪರಿಹರಿಸುವ ಮೂಲಕ ಹಾಗೂ ಸಮಸ್ಯೆಗಳನ್ನು ಕೊಡುವ ಮೂಲಕ ಸುಖವನ್ನು ನೀಡುವವನು. ಸಜ್ಜನರ ಸಮಸ್ಯೆಗಳನ್ನು ಪರಿಹರಿಸಿ ಅವರಿಗೆ 'ಸುಖದ' ನಾದರೆ ಅಂತಹ ಸಜ್ಜನರಿಗೆ ತೊಂದರೆ ಕೊಡತಕ್ಕ ದುರ್ಜನರಿಗೆ ಸಮಸ್ಯೆಗಳನ್ನು ಸೃಷ್ಟಿ ಮಾಡಿ, ಆ ಮೂಲಕ ಅವರು ಸಜ್ಜನರಿಗೆ ಉಪದ್ರವ ಮಾಡದಂತೆ ವ್ಯವಸ್ಥೆಗೊಳಿಸಿ ಸಜ್ಜನರಿಗೆ 'ಸುಖದ 'ನಾಗುವುದೂ ಉಂಟು. ಇದನ್ನೇ ಶ್ರೀ ವಾದಿರಾಜತೀರ್ಥರು ಹಯಗ್ರೀವನ ಸ್ತುತಿಯಲ್ಲಿ **'... ಕ್ಷಿತ್ಯಾಮತ್ಯಲ್ಪಭೃತ್ಯೇಷ್ವಪಿ ಕುಜನಕೃತೌದ್ಧತ್ಯಭೂತ್ಯಾಜಕಾಯ'** ಎಂಬ ಮಾತಿನಿಂದ ಸಾರಿರುವರು. ಹಯಗ್ರೀವ ತನ್ನ ಚಿಕ್ಕಪುಟ್ಟ ಭಕ್ತರ ಕುರಿತೂ ಯಾರಾದರೂ ಉದ್ಧಟತನ ತೋರಿಸಿದರೆಂದರೆ ಅಂತಹವರು ಭೂಮಿಯಿಂದಲೇ ತೊಲಗುವಂತೆ ದಂಡಿಸುವನು. ಇದು ಅವನು ತನ್ನ ಭಕ್ತರಿಗೆ 'ಸುಖದ'ನಾಗಿ ಮಾಡುವ ಅನುಗ್ರಹ.

**೪೯೧. ನೈಕಜಃ – ಕೆಟ್ಟವಾತಾವರಣದ ಕಲಿಯುಗದಲ್ಲಿ ಅವತರಿಸದಿರುವವನು.**

**ವಿವರಣೆ:** ನ + ಏಕ + ಜಃ - ನೈಕಜಃ, ಏಕಜ ಎಂದರೆ ಒಂದರಲ್ಲಿ ಹುಟ್ಟುವನು ನ ಅಲ್ಲ, ಆದುದರಿಂದ ನೈಕಜ.

ಯಾವುದು ಒಂದರಲ್ಲಿ ?

ಕೃತ, ತ್ರೇತಾ, ದ್ವಾಪರ ಹಾಗೂ ಕಲಿಯುಗ ಎಂಬುದಾಗಿ ನಾಲ್ಕು ಯುಗಗಳಲ್ಲಿ ಭಗವಂತನು ಮೊದಲ ಮೂರು ಯುಗಗಳಲ್ಲಷ್ಟೇ ಅವತಾರ ತಾಳುವುದು. ಆದುದರಿಂದಲೇ ಅವನಿಗೆ 'ತ್ರಿಯುಗ' ಎಂದೇ ಹೆಸರು ಬಂದಿದೆ. ಕಲಿಯುಗದಲ್ಲಿ ಅವನು ಅವತಾರ ತಾಳುವುದಿಲ್ಲ. ಯಾಕೆಂದರೆ ಕಲಿಯುಗದ ವಾತಾವರಣ ಕೆಟ್ಟ ವಾತಾವರಣವಾದುದರಿಂದ ಭಗವಂತ ಆ ಯುಗದಲ್ಲಿ ಅವತಾರ ತಾಳುವುದಿಲ್ಲ.

ಬದಲಾಗಿ ತನ್ನ ಭಕ್ತರಾದ ಮಧ್ವಾಚಾರ್ಯರು, ಟೀಕಾಚಾರ್ಯರು, ವ್ಯಾಸತೀರ್ಥರು, ವಾದಿರರಾಜ ತೀರ್ಥರೇ ಮುಂತಾದವರನ್ನೂ, ಪುರಂದರದಾಸರು,

ವಿಜಯದಾಸರು, ಕನಕದಾಸರು ಮುಂತಾದವರನ್ನೂ ಭೂಮಿಗೆ ಕಳುಹಿಸುವನು. ಅಂತಹವರು ಶಾಸ್ತ್ರಕೃತಿಗಳು ಹಾಗೂ ಹಾಡುಗಳು ಇವುಗಳ ರೂಪದಲ್ಲಿ ಇಂದೂ ಇರುವರು.

ಈ ಅರ್ಥದ ಹಿನ್ನಲೆಯಲ್ಲಿ ಭಗವಂತನನ್ನು 'ನೈಕಜ' ಕಲಿಯುಗದ ವಾತಾವರಣ ಕೆಟ್ಟದು ಎಂಬುದಾಗಿ ಆ ಯುಗದಲ್ಲಿ ಅವತರಿಸದವನು ಎಂದು ಉಪಾಸನೆ ನಡೆಸಿದಲ್ಲಿ ನಮಗೂ ದುರ್ಜನರು, ಅಧಾರ್ಮಿಕರು ತುಂಬಿರುವ ಸಮಾರಂಭದಲ್ಲಿ ಪಾಲ್ಗೊಳ್ಳಬೇಕಾದ ಅನಿವಾರ್ಯತೆಯನ್ನು ತಪ್ಪಿಸಿ ಅಂತಹ ಸಮಾರಂಭಗಳಲ್ಲಿ ಪಾಲ್ಗೊಳ್ಳದಂತೆ ಮಾಡುವನು. ಏನೋ ದ್ವಾದಶಿಯಂದು ಕಾರ್ಯಕ್ರಮ. ಹಿಂದಿನ ದಿನವಾದ ಏಕಾದಶಿಯಂದೇ ಅಲ್ಲಿಗೆ ಹೋಗಬೇಕಾದ ಪ್ರಸಂಗ. ಆ ಮನೆಯಲ್ಲಿ ಏಕಾದಶೀ ವಾತಾವರಣವೇ ಇಲ್ಲ - ಎಂದು ಗೊತ್ತು. ಅಂತಹ ಮನೆಗೆ ಹೇಗೆ ಹೋಗುವುದಪ್ಪಾ ! - ಎಂದು ಚಡಪಡಿಸುತ್ತ, ಅದರಿಂದ ಪಾರುಮಾಡಲು ದೇವರನ್ನು 'ನೈಕಜಃ' - ಎಂದು ಉಪಾಸನೆ ಮಾಡುತ್ತಿದ್ದರೆ ಕೂಡಲೇ ಅಲ್ಲಿಂದ ಸುದ್ದಿ ಬರುವುದು ಆ ಕಾರ್ಯಕ್ರಮ ರದ್ದಾಗಿದೆ, ಹೀಗೆ ಭಗವಂತ ತನ್ನ ಭಕ್ತರಿಗೆ ಸಾಧನಾನುಷ್ಠಾನಕ್ಕೆ ಅನುಕೂಲವಾದ ವಾತಾವರಣದಲ್ಲಿ ಪಾಲ್ಗೊಳ್ಳಬೇಕಾದ ದುಃಸ್ಥಿತಿಯನ್ನು ಏನಾದರೂ ಮಾಡಿ ತಪ್ಪಿಸಿ ಅನುಗ್ರಹಿಸುವನು.

**೮೯೨. ಅಗ್ರಜಃ – ಪ್ರತಿಯೊಬ್ಬರ ದೇಹದಲ್ಲಿ ಜೀವರಿಗಿಂತ ಮೊದಲು ಕಾಣಿಸಿಕೊಳ್ಳುವವನು.**

**ವಿವರಣೆ :** ಅಗ್ರಜ ಎಂಬುದಕ್ಕೆ ಅಣ್ಣ ಎಂಬ ಅರ್ಥ. ಯಾಕೆ ಅಣ್ಣ ಅಗ್ರಜ ಎನಿಸುವನು? 'ಅಗ್ರೇ ಜಾಯತೇ ಇತಿ' - ಮೊದಲು ಹುಟ್ಟುವವನು ಎಂಬ ಅರ್ಥದಲ್ಲಿ 'ಅಗ್ರಜ' ಎನಿಸುವನು. ಈ ಅರ್ಥದಲ್ಲಿಯೇ ದೇವರೂ ನಮ್ಮ ನಿಮ್ಮೆಲ್ಲರಿಗೆ ಅಗ್ರಜ. ನಮ್ಮ ನಿಮ್ಮರಿಗಿಂತ ಮೊದಲೇ ಹುಟ್ಟಿ ನಮ್ಮ ಜೊತೆಗೆ ಬರುವವನು ದೇವರು. ನಮ್ಮ ದೇಹದಲ್ಲಿ ನಾವು ಹುಟ್ಟುವ ಮೊದಲೇ ದೇವರು ಕಾಣಿಸಿಕೊಳ್ಳುವನು. ನಾವು ತಂದೆಯ ಶರೀರವನ್ನು ಪ್ರವೇಶಿಸುವಾಗ ಅಲ್ಲೂ ನಮ್ಮ ಜೊತೆಗೆ ಇರುವನು. ಅಲ್ಲಿಂದ ತಾಯಿಯ ಶರೀರವನ್ನು ಪ್ರವೇಶಿಸುವಾಗ ಆಗಲೂ ನಮ್ಮ ಜೊತೆಗೆ ಬರುವನು. ಅಲ್ಲಿ ನಿಷ್ಪನ್ನವಾಗುವ ಶರೀರದಲ್ಲಿ ನಮ್ಮ ಜೊತೆಗೆ ಇರುವನು. ನಮಗೆ ಸಂಸಾರ ಬಂಧನದ ಅಸಾರತೆಯ ಬಗ್ಗೆ ಎಚ್ಚರ ನೀಡುತ್ತಿರುತ್ತಾನೆ. ತಾಯಿಯ ಶರೀರದಿಂದ ಹೊರ ಬರುವಾಗಲೂ ನಮ್ಮ ಜೊತೆಗೆಯೇ ಇರುವನು. ನಮ್ಮ ಎದುರಿಗಿದ್ದು ನಮ್ಮನ್ನು ಕರೆದುಕೊಂಡು ಸಾಗುವನು. ಆದುದರಿಂದ 'ಅಗ್ರಜ' ಎನಿಸಿರುವನು.

ಶಾಸ್ತ್ರವನ್ನು ಹೇಗೆ ಪ್ರವೇಶಿಸುವುದು - ಎಂದು ತಿಳಿಯದಿದ್ದಾಗ ಭಗವಂತನನ್ನು 'ಅಗ್ರಜ' - ಎಂದು ಉಪಾಸನೆ ಮಾಡಿದಲ್ಲಿ ಅವನು ನಮ್ಮ ಎದುರಿಗಿದ್ದು ನಮ್ಮನ್ನು ಕರೆದೊಯ್ಯುವನು. ಗಣಿತ ವಿದ್ಯೆಯಲ್ಲಿ ಹೇಗೆ ಮಗ್ಗಿ ಕಲಿಯುವ ಮೂಲಕ ಪ್ರವೇಶಿಸುವುದೋ ಹಾಗೆ ಸಂಸ್ಕೃತ ವಿದ್ಯೆಯಲ್ಲಿ ರಾಮಶಬ್ದವನ್ನು ಕಂಠ ಮಾಡುವ ಮೂಲಕ ಪ್ರವೇಸಿಸಬೇಕು.

ಹೀಗೆ ಪ್ರವೇಶಿಸುವುದಕ್ಕೆ ಬೇಕಾದ ಮಾರ್ಗದರ್ಶನ 'ಅಗ್ರಜ' ನಾಮಕ ಭಗವಂತನಿಂದ ದೊರಕಬಲ್ಲದು.

**೮೯೩. ಅನಿರ್ವಿಣ್ಣಃ – ತನ್ನ ಯಾವುದೇ ಪ್ರವೃತ್ತಿಯಿಂದ ವೈಯಕ್ತಿಕ ಲಾಭವನ್ನು ಪಡೆಯದವನು.**

**ವಿವರಣೆ:** ನಿರ್ವೇದ ಎಂದರೆ ಲಾಭ. **'ಪಾಂಡಿತ್ಯಂ ನಿರ್ವಿದ್ಯ ಬಾಲ್ಯೇನ ತಿಷ್ಠಾಸೇತ್'** - ಎಂಬ ಉಪನಿಷತ್ತಿನ ಮಾತಿನಲ್ಲಿ ಪಾಂಡಿತ್ಯವನ್ನು ಹೊಂದಿ ಎಂಬ ಅರ್ಥದಲ್ಲಿ ನಿರ್ವೇದ ಶಬ್ದವನ್ನು ಬಳಸಲಾಗಿದೆ.

ಆದುದರಿಂದ ನಿರ್ವಿಣ್ಣ ಎಂಬುದಕ್ಕೆ ಲಾಭವನ್ನು ಪಡೆಯುವವನು ಎಂಬ ಅರ್ಥ. ಅನಿರ್ವಿಣ್ಣ ಎಂದರೆ ಯಾವುದೇ ಲಾಭ ಇಲ್ಲದವನು ಎಂಬ ಅರ್ಥ. ನಾವು ಯಾವುದೇ ಪ್ರವೃತ್ತಿಯಲ್ಲಿ ತೊಡಗಲಿ 'ಏನು ಲಾಭ ? - ಎಂಬ ಪ್ರಶ್ನೆ ಬಂದೇ ಬರುತ್ತದೆ. ಇನ್ನೊಬ್ಬರು ಏನನ್ನಾದರೂ ಮಾಡ ತೊಡಗಿದರೆಂದರೂ ನಾವು ಕೇಳುವೆವು ನಿನಗೆ ಅದರಿಂದ ಏನು ಲಾಭ ? ಎಂದು.

ಆದರೆ ತನ್ನ ಯಾವುದೇ ಪ್ರವೃತ್ತಿಗೆ 'ಲಾಭ' ದ ಉದ್ದೇಶವೇ ಇಲ್ಲದವನು ದೇವರು. ಆದುದರಿಂದ ಅವನು 'ಅನಿರ್ವಿಣ್ಣ'. ಒಂದಲ್ಲ ಒಂದು ಲಾಭಕ್ಕೆ ಒಳಗಾಗುವವನು 'ನಿರ್ವಿಣ್ಣ' ಎನಿಸುವನಾದರೆ ಯಾವುದೇ ಬಗೆಯ ಲಾಭಕ್ಕೆ ಒಳಗಾಗದ ದೇವರು 'ಅನಿರ್ವಿಣ್ಣ'.

ನೆರೆಯಲ್ಲಿ ಒಬ್ಬ ಕೊಚ್ಚಿಕೊಂಡು ಹೋಗುತ್ತಿದ್ದಾನಂತೆ. ಅವನು ಯಾಕೆ ಹಾಗೆ ಹೋಗುತ್ತಿದ್ದಾನೆ? ಎದುರಿನಲ್ಲಿ ಒಂದು ಮರದ ತುಂಡು ತೇಲುತ್ತಿದೆ. ಅದನ್ನು ಹಿಡಿಯುವುದಕ್ಕಾಗಿ ಅದರ ಹಿಂದೆಯೇ ಸಾಗುತ್ತಿದ್ದಾನೆ ಎಂದು ಅಪಹಾಸ ಮಾಡುವಷ್ಟೂ ನಮ್ಮ ನಿಮ್ಮೆಲ್ಲರ ಪ್ರವೃತ್ತಿ ಒಂದಿಲ್ಲ ಒಂದು ಲಾಭದ ಹಿನ್ನೆಲೆಯಲ್ಲೇ ಹೊರಟಿರುತ್ತದೆ.

ಆದರೆ ಸ್ವಯಂ ಪರಿಪೂರ್ಣನಾದ ಭಗವಂತನ ಯಾವುದೇ ಪ್ರವೃತ್ತಿ

ಸ್ವಲಾಭಕ್ಕಾಗಿ ಹೊರಟಿರುವುದಿಲ್ಲ. ಹಾಗಾದರೆ ಯಾಕೆ ಸೃಷ್ಟಿ ಮುಂತಾದ ಪ್ರವೃತ್ತಿಯಲ್ಲಿ ತೊಡಗುವನು ? ಎಂದರೆ

**'ದೇವಸ್ಯೈಷ ಸ್ವಭಾವೋಽಯಂ ಆಪ್ತಕಾಮಸ್ಯ ಕಾ ಸ್ಪೃಹಾ'**

- ಹೀಗೆ ಬೇರೆ ಬೇರೆ ಪ್ರವೃತ್ತಿ ನಡೆಸುವುದು ಅವನ ಸ್ವಭಾವ ಹೊರತು ಯಾವುದೇ ಲಾಭದ ಉದ್ದೇಶ ಇಲ್ಲ. ಯಾಕೆಂದರೆ ಈಗಾಗಲೇ ಎಲ್ಲದರ ಲಾಭ ಪಡೆದು ಕೊಂಡಿರುವ ಅವನಿಗೆ ಯಾವ ವಸ್ತುವಿನ ಲಾಭದ ಆಸೆ ಹೇಗೆ ತಾನೇ ಇದ್ದೀತು! - ಎಂದು ಉಪನಿಷತ್ತು ಉದ್ಗಾರ ಎತ್ತುವುದು.

ಭಕ್ತರ ಉದ್ಧಾರ ನಡೆಸಬೇಕೆಂಬ ಪರಕೀಯ ಲಾಭದ ಉದ್ದೇಶ ಇರುವುದಾದರೂ ಯಾವುದೇ ಸ್ವಕೀಯ ಲಾಭದ ಉದ್ದೇಶ ಇಲ್ಲ.

ಭಗವಂತನ ಈ 'ಅನಿರ್ವಿಣ್ಣ' ನಾಮದ ಉಪಾಸನೆಯಿಂದ ನಮಗೆ ನಿಷ್ಕಾಮಕರ್ಮಾಚರಣೆಯ ಸ್ಫೂರ್ತಿ ಸಿದ್ಧಿಸಬಲ್ಲದು. ಪೂಜೆ, ಸಂಧ್ಯಾವಂದನೆ ಇತ್ಯಾದಿ ಪ್ರತಿಯೊಂದು ಕರ್ಮಕ್ಕೂ ಲೌಕಿಕ ಪ್ರಯೋಜನದ ಲಾಭದ ದೃಷ್ಟಿಯನ್ನಿಟ್ಟುಕೊಳ್ಳದೆ ದೇವರು ಸಂತುಷ್ಟನಾಗಲಿ ಎಂಬ ಉದಾತ್ತ ದೃಷ್ಟಿಯಿಂದ ಕರ್ಮಗಳನ್ನು ಆಚರಿಸುವ ಮನೋಭಾವ ಉಂಟಾಗಬಲ್ಲದು.

೮೯೪. ಸದಾಮರ್ಷೀ – **ಒಳ್ಳೆಯವರು ಎಸಗುವ ಅಪರಾಧಗಳನ್ನು ಸಹಿಸಿಕೊಳ್ಳುವವನು, ಕೆಟ್ಟವರು ಮಾಡಿದ ಒಳ್ಳೆಯ ಕೆಲಸಗಳನ್ನೂ ಗಣನೆಗೆ ತೆಗೆದುಕೊಳ್ಳದವನು.**

ವಿವರಣೆ : 'ಸದಾ + ಮರ್ಷೀ' ಎಂಬುದಾಗಿಯೂ 'ಸದಾ + ಅಮರ್ಷೀ' - ಎಂಬುದಾಗಿಯೂ ಪದವಿಭಾಗ ಮಾಡಬಹುದಾಗಿದೆ.

ಒಳ್ಳೆಯವರು, ಅಂದರೆ ದೇವರ ಭಕ್ತರು ಏನೇ ಅಪರಾಧವನ್ನೆಸಗಿದರೂ ಅದನ್ನು ಪರಮಾತ್ಮ ಸಹಿಸಿಕೊಳ್ಳುವನು. ನನ್ನ ಭಕ್ತ ಒಳ್ಳೆಯವನು. ಆಸುರೀಶಕ್ತಿಗಳ ಆಕ್ರಮಣಕ್ಕೆ ಒಳಗಾಗಿ ಈ ಅಪರಾಧವನ್ನೆಸಗಿದ್ದಾನೆಂದು ಅವನನ್ನು ಕ್ಷಮಿಸಿ ಬಿಡುವನು. ಹೀಗೆ ಭಕ್ತರ ವಿಷಯದಲ್ಲಿ ಸದಾ - ಯಾವಾಗಲೂ ಮರ್ಷೀ -ಮೃಷತೇ ಸಹಿಸಿಕೊಳ್ಳುವವನು.

ಆದರೆ ಕೆಟ್ಟವರು, ತನ್ನ ಅಭಕ್ತರು ಕೆರೆ ತೋಡಿಸುವುದು, ಮರಗಿಡಗಳನ್ನು ಬೆಳೆಸುವುದು ಮುಂತಾದ ಒಳ್ಳೆಯ ಕೆಲಸಗಳನ್ನು ನಡೆಸಿದರೂ ಅವುಗಳನ್ನು 'ಅಂತಹವನಿಂದ ಒಳ್ಳೆಯ ಕೆಲಸ ನಡೆಯಿತು' - ಎಂದು ಪರಿಗಣಿಸುವುದೇ ಇಲ್ಲ.

ಸ್ವೀಕಾರ ಮಾಡುವುದೇ ಇಲ್ಲ 'ಸದಾ - ಯಾವಾಗಲೂ ಅಮರ್ಷೀ - ಅಂತಹವರ ಕರ್ಮಗಳನ್ನು ಕಡೆಗಣಿಸುವನೇ ಹೊರತು ಪುರಸ್ಕರಿಸುವುದಿಲ್ಲ.

ದುರ್ಯೋಧನ ಕೊನೆಯ ಕಾಲದಲ್ಲಿ 'ನಾನು ಬಾವಿ ತೋಡಿಸುವುದೆ ಮುಂತಾದ ಸಾಮಾಜಿಕ ಕಾರ್ಯಗಳ್ನು ಮಾಡಿರುವೆ, ಯಜ್ಞಯಾಗಾದಿಗಳನ್ನು ನಡೆಸಿರುವೆ..... ಹಾಗೆ ಹೀಗೆ ಎಂದು ಹೇಳಿಕೊಳ್ಳುವನು. ನಾವು ಮಾಡಿದ್ದನ್ನು ನಾವೇ ಹೇಳಿಕೊಳ್ಳಬೇಕಾದ ಪ್ರಸಂಗ ಬರಬಾರದು ! ಆದರೆ ದುರ್ಯೋಧನನಿಗೆ ಅಂತಹ ಪ್ರಸಂಗ ಬಂದಿತ್ತು. ಆದರೆ ಕೃಷ್ಣ ದುರ್ಯೋಧನನ ಆ ಯಾವ ಕರ್ಮವನ್ನೂ ಒಳ್ಳೆಯಕೆಲಸವೆಂದು ಸ್ವೀಕರಿಸಲೇ ಸಿದ್ಧನಾಗಲಿಲ್ಲ. **'ನಾನಾಜನಸ್ಯ ಶುಶ್ರೂಷಾ ಕರ್ಮಾಖ್ಯಾ ಕರವನ್ಮಿತೇಃ .... '** - ಎಂದು ಜನರ ಸೇವೆಯನ್ನು ದೇವರಿಗೆ ಸಂದಾಯ ಮಾಡಬೇಕಾದ ಕಪ್ಪದಂತೆ ನಡೆಸಬೇಕೆಂದು ವಿಧಿಸಿದ್ದರೂ, ದುರ್ಯೋಧನ ನಡೆಸಿದ್ದ ಅಂತಹ 'ಜನರ ಸೇವೆ'ಯನ್ನು ಕೃಷ್ಣ ಸ್ವೀಕರಿಸಲೇ ಇಲ್ಲ. ಆದ್ದರಿಂದ ದೇವರು ಭಕ್ತರ ಬಗ್ಗೆ ಯಾವಾಗಲೂ ಸಹಿಸುವವನಾಗಿ 'ಸದಾಮರ್ಷೀ' ಎನಿಸಿದ್ದರೆ ಅಭಕ್ತರ ಬಗ್ಗೆ ಯಾವಾಗಲೂ ಸಹಿಸಿಕೊಳ್ಳದವನಾಗಿ 'ಸದಾಮರ್ಷೀ' ಎನಿಸಿರುವನು.

**೮೯೫. ಲೋಕಾಧಿಷ್ಠಾನಂ ಅದ್ಭುತಮ್ – ಆಶ್ಚರ್ಯಕರವಾಗಿ ಸಮಸ್ತ ಲೋಕಕ್ಕೆ ಆಶ್ರಯ.**

**ವಿವರಣೆ:** ಅಧಿಷ್ಠಾನಂ ಎಂದರೆ ಆಶ್ರಯ. ಪುಸ್ತಕಕ್ಕೆ ಮೇಜು ಅಧಿಷ್ಠಾನ. ಮೇಜಿಗೆ ನೆಲ ಅಧಿಷ್ಠಾನ. ನನ್ನ ಶರೀರಕ್ಕೆ ಈ ಕುರ್ಚಿ ಅಧಿಷ್ಠಾನ. ನನಗೆ ಈ ಶರೀರ ಅಧಿಷ್ಠಾನ. ಹೀಗೆ ಆಶ್ರಯವನ್ನು ಅಧಿಷ್ಠಾನ ಎಂದು ಕರೆಯಲಾಗುವುದು. ಒಂದು ಮತ್ತೊಂದಕ್ಕೆ ಅಧಿಷ್ಠಾನ ಎನಿಸುತ್ತ ಹೋದರೆ ಸಮಸ್ತಲೋಕಕ್ಕೆ ಆಧಾರನಾಗಿರುವ ಭಗವಂತ 'ಲೋಕಾಧಿಷ್ಠಾನಮ್' ಎನಿಸುವನು.

ಭಗವಂತ ಲೋಕಕ್ಕೆ ಹೇಗೆ ಅಧಿಷ್ಠಾನನಾಗಿರುವನೆಂಬುದನ್ನು ಮಣಿ ಹಾಗೂ ಹಗ್ಗದ ದೃಷ್ಟಾಂತ ಕೊಟ್ಟು ಗೀತಾಚಾರ್ಯ ತಿಳಿಸಿರುವನು. **'ಮಯಿ ಸರ್ವಮಿದಂ ಪ್ರೋತಂ ಸೂತ್ರೇ ಮಣಿಗಣಾ ಇವ'** ಹಗ್ಗದಲ್ಲಿ ಪೋಣಿಸಲ್ಪಟ್ಟ ಮಣಿಗಳಂತೆ ಎಲ್ಲವೂ ಓತಪ್ರೋತವಾಗಿ ನನ್ನಲ್ಲಿ ಆಶ್ರಿತವಾಗಿದೆ. ಚೆನ್ನಾಗಿ ಪೋಣಿಸಲ್ಪಟ್ಟ ಮಣಿಗಳ ಮಾಲೆಯಲ್ಲಿ ಮಣಿಗಳಷ್ಟೇ ಕಾಣಿಸುವವು. ಆ ಮಣಿಗಳನ್ನು ವ್ಯವಸ್ಥಿತವಾಗಿ ಧರಿಸುವ ಹಗ್ಗ ಕಾಣಿಸುವುದೇ ಇಲ್ಲ. ಅದರಂತೆ ಲೋಕವಷ್ಟೇ ಕಾಣಿಸುವುದು, ಲೋಕಕ್ಕೆ ಅಧಿಷ್ಠಾನನಾದ ದೇವರು ಕಾಣಿಸುವುದಿಲ್ಲ. ಈ ಸಾಧರ್ಮ್ಯವನ್ನಿಟ್ಟಿಕೊಂಡು ಮಣಿ ಹಾಗೂ ಹಗ್ಗಗಳ ದೃಷ್ಟಾಂತವನ್ನು ನೀಡಲಾಗಿದೆ. ಇದರ ಬದಲು ಹೂ ಮತ್ತು

ಹಗ್ಗದ ದೃಷ್ಟಾಂತ ಕೊಟ್ಟಿದ್ದರೆ, ಹಗ್ಗದಲ್ಲಿ ಹೂಗಳನ್ನು ನೆಯ್ದು, ಹಾರ ಮಾಡಿ ದೇವರಿಗೆ ಸಮರ್ಪಿಸಬೇಕೆನ್ನುವಾಗ ಆ ಹಾರದಲ್ಲಿ ಹಗ್ಗ ಮಾತ್ರ ಕಂಡು ಹೂಗಳೆಲ್ಲ ಚೆಲ್ಲಿ ಹೋಗುವ ಪ್ರಸಂಗಗಳೂ ಇರುವವು. ಆದುದರಿಂದ ಹೂವಿನ ಹಾರದ ದೃಷ್ಟಾಂತ ಕೊಟ್ಟರೆ ಲೋಕದ ಬದಲು ಹಗ್ಗದಂತೆ ದೇವರಷ್ಟೇ ಕಾಣಿಸಿ ಕೊಳ್ಳುವರೆಂದು ವಿಪರೀತವಾದ ಹೇಳಿಕೆ ಆದೀತೆಂದು ಹೂವಿನ ಮಾಲೆಯನ್ನು ಬಿಟ್ಟು ಮಣಿ ಮಾಲೆಯನ್ನು ದೃಷ್ಟಾಂತವಾಗಿ ನೀಡಿರುವನು. ಭಗವಂತ ಕಾಣಿಸಿದಂತೆ ಒಳಗೆ ಇದ್ದುಕೊಂಡು ಆಧಾರನೆನಿಸುವನು.

ಒಬ್ಬ ಯಜಮಾನ ಹೊರಗಿನಿಂದ ಊಟ ಹಾಕಿ ಬಾಹ್ಯವಾಗಿ ನಮಗೆ ಆಧಾರನೆನಿಸಬಹುದು, ಅದನ್ನು ನಾವು ಸ್ವೀಕರಿಸಬಹುದು. ಆದರೆ **'ಅಹಂ ವೈಶ್ವಾನರೋ ಭೂತ್ವಾ ಪ್ರಾಣಿನಾಂ ದೇಹಮಾಶ್ರಿತಃ ಪ್ರಾಣಾಪಾನಸಮಾಯುಕ್ತಃ ಪಚಾಮ್ಯನ್ನಂ ಚತುರ್ವಿಧಮ್'** - ಎಂದಿರುವ ದೇವರು ವೈಶ್ವಾನರನಾಗಿ ನಮ್ಮೊಳಗೆ ಇದ್ದುಕೊಂಡು ತಿಂದದ್ದನ್ನು ಪಚನ ಆಗುವಂತೆ ಮಾಡದ ಹೊರತು ಯಜಮಾನ ಹಾಕಿದ ಊಟ ನಾವು ಬದುಕಲು ಆಧಾರ ಆಗದು.

ಹೀಗೆ ಹೊರಗಿನಿಂದ ಕೆಲವರು ನಮಗೆ ಆಧಾರ ಆಗಿರುವಂತೆ ಕಂಡರೂ ಒಳಗೆ ದೇವರು ಆಧಾರ ಎನಿಸದೆ ಹೊರಗಿನ ಆಧಾರ ಉಪಯೋಗಕ್ಕೆ ಬರಲಾರದು.

ಆದ್ದರಿಂದ 'ಲೋಕಾಧಿಷ್ಠಾನಮ್' - ಲೋಕಕ್ಕೆ ಆಧಾರ ಎಂದು ಮುಖ್ಯವಾಗಿ ಸ್ತುತ್ಯನಾಗುವವನು ಭಗವಂತ. ಹೀಗೆ ಲೋಕಕ್ಕೆ ಕಾಣಿಸಿಕೊಳ್ಳದೆಯೇ ಅದಕ್ಕೆ ಆಧಾರನಾಗಿರುವುದರಿಂದಲೇ ನೀನು 'ಅದ್ಭುತ'. ಯಾರಿಗೂ ಕಾಣಿಸಿಕೊಳ್ಳದೆಯೇ ಎಲ್ಲರಿಗೂ ಆಧಾರನಾಗಿರುವುದೇ ದೊಡ್ಡ ಅದ್ಭುತ. ಏನೂ ಕೆಲಸ ಮಾಡದೆಯೇ, ಯಾರಿಗೂ ಆಶ್ರಯರಾಗದೆಯೇ ತಾವು ಎಲ್ಲರಿಗೆ ಕಾಣಿಸಿಕೊಳ್ಳುವವರಾಗಬೇಕೆಂದು ಹಂಬಲಿಸುತ್ತಿರುವಾಗ ನೀನು ಎಲ್ಲರಿಗೂ ಆಶ್ರಯನಾದರೂ ಯಾರಿಗೂ ಕಾಣಿಸದಂತೆ ಇರುವುದು ಅದ್ಭುತ. ಆದುದರಿಂದಲೇ 'ಲೋಕಾಧಿಷ್ಠಾನಮದ್ಭುತಮ್.'

ಈ ನಾಮದಿಂದ ನಮಗೆ ಸೂಚಿತವಾಗುವ ಸಂದೇಶ - ನಾವು ಕೂಡಾ ಎಲ್ಲರೆದುರು ಕಾಣಿಸಿಕೊಳ್ಳುವಂತಾಗಬೇಕೆಂಬ ಚಾಪಲ್ಯಕ್ಕೆ ಒಳಗಾಗದೆ, 'ದೇವರು ಪ್ರೀತನಾಗಬೇಕು' - ಎಂಬ ಉದ್ದೇಶದಿಂದಷ್ಟೇ ಲೋಕದ ಸೇವೆ ಮಾಡುತ್ತ ನಮ್ಮ ಯೋಗ್ಯತಾನುಸಾರವಾಗಿ ಲೋಕಕ್ಕೆ ಆಶ್ರಯರಾಗಬೇಕು.

**ಸನಾತ್‌ಸನಾತನತಮಃ ಕಪಿಲಃ ಕಪಿರವ್ಯಯಃ |**

**ಸ್ವಸ್ತಿದಃ ಸ್ವಸ್ತಿಕೃತ್ ಸ್ವಸ್ತಿ ಸ್ವಸ್ತಿಭುಕ್ ಸ್ವಸ್ತಿದಕ್ಷಿಣಃ ||೯೬||**

**೮೯೬. ಸನಾತ್ ಸನಾತನತಮಃ – ದೇವರನ್ನು ಅಲ್ಲಗಳೆಯುವವರನ್ನು ಕಬಳಿಸುವವನು ಹಾಗೂ ಎಲ್ಲರಿಗಿಂತ ಅಧಿಕವಾದ ನಿತ್ಯತ್ವವನ್ನು ಹೊಂದಿರುವವನು.**

**ವಿವರಣೆ :** ಸನಾತ್ ಹಾಗೂ ಸನಾತನತಮ ಎಂಬುದಾಗಿ ಎರಡು ನಾಮಗಳೆಂದು ಕೆಲವರು ಪರಗಣಿಸುವರು. ಆದರೆ ನಾವು ಒಂದೇ ನಾಮವನ್ನಾಗಿ ಇಟ್ಟುಕೊಳ್ಳೋಣ.

ಸನಾತ್ - 'ಸಃ' ನ + ಆತ್ - ಎಂಬ ಮೂರು ಶಬ್ದಗಳು ಸೇರಿ 'ಸನಾತ್' ಆಗಿದೆ. ಸಃ - ಆ ದೇವರು ನ ಇಲ್ಲ ಎಂದು ಯಾರು ಹೇಳುವರೋ ಅವರನ್ನು ಆತ್ ಅತ್ತೀತಿ ಆತ್ ಕಬಳಿಸುವನು. ತನ್ನನ್ನು ಇಲ್ಲ ಎನ್ನುವವರನ್ನು ದೇವರು ನಾಶಗೈಯುವನು.

ದೇವರು ಯಾವಾಗಲೂ ಕಣ್ಣಿಗೆ ಕಾಣಿಸದವನಾದ ಪ್ರಯುಕ್ತ ದೇವರನ್ನು 'ಅವನು' ಎಂದೇ ವ್ಯವಹರಿಸುವುದು. ಆದುದರಿಂದ ಅವನು 'ಸಃ' - ಎಂದೇ ನಿರ್ದೇಶಿಸಲು ಯೋಗ್ಯನಾಗಿರುವವನು. ನಾನೇ ದೇವರು, ನನಗಿಂತ ಬೇರೆ ದೇವರೇ ಇಲ್ಲ. ಹಿರಣ್ಯ ಕಶಿಪು ಪ್ರಹ್ಲಾದನ ಎದುರು-**'ಕೋSಸೌ ಮದನ್ಯೋ ಜಗದೀಶ್ವರಃ'** ನನಗಿಂತ ಬೇರೆಯಾದ ಜಗದೀಶ್ವರ ಎಲ್ಲಿರುವನೆಂದು ವಾದಿಸಿದಲ್ಲಿ ದೇವರು ನರಸಿಂಹನಾಗಿ ಬಂದು ಹಿರಣ್ಯಕಸಿಪುವನ್ನು ಕಬಳಿಸಿದಂತೆ ಅಂತಹ ವ್ಯಕ್ತಿಗಳನ್ನು ಭಗವಂತ ನಾಶ ಮಾಡುವನು. ಆದುದರಿಂದ 'ಸನಾತ್' ಎನಿಸುವನು.

ದೇವರನ್ನೇ ಇಲ್ಲ ಎನ್ನುವವರನ್ನು ದೇವರೇ ಇಲ್ಲ ಎಂದು ಮಾಡುವನು. ಇದಕ್ಕೆ ವಿಪರೀತವಾಗಿ ದೇವರನ್ನು ಇದ್ದಾರೆಂದು ಸಮರ್ಥಿಸುವವರನ್ನು ದೇವರು ಇರುವಂತೆ ಮಾಡುವನು. ಅವರು ಸತ್ತ ಮೇಲೂ ಕೀರ್ತಿಯ ಮೂಲಕ ಅವರ ಅಸ್ತಿತ್ವವನ್ನು ಸ್ಥಿರಗೊಳಿಸುವು. ನಮ್ಮಲ್ಲಿ ಎಷ್ಟೋ ವಿದ್ವಾಂಸರು ಆಗಿ ಹೋಗಿದ್ದರೂ ಈಗಲೂ ಅವರನ್ನು ಸ್ಮರಿಸುತ್ತಿರುತ್ತೇವೆ. ಯಾಕೆ ? ಭಗವಂತ ಅವರು ಜೀವಿಸುತ್ತಿದ್ದಾಗ ತನ್ನನ್ನು ಪ್ರತಿಪಾದಿಸಿದವರೆಂದು ಅವರನ್ನು ಇನ್ನೂ ಎಲ್ಲರ ನೆನಪಿನಲ್ಲಿ ಇರುವಂತೆ ಮಾಡಿರುವನು. ಹೀಗೆ ಸನಾತ್ ಎನಿಸುವ ಭಗವಂತ ತನ್ನ ಅಸ್ತಿತ್ವವನ್ನೇ ಅಲ್ಲಗಳೆಯ ತೊಡಗುವವರ ಅಸ್ತಿತ್ವವನ್ನೇ ತೆಗೆದು ಬಿಡುವನೆಂದಾಗ, ಅವರನ್ನು ಕಬಳಿಸುವ ದೇವರನ್ನೇ ಕಬಳಿಸುವ ಮತ್ತೊಬ್ಬ ಬರಬಹುದು ಎಂದು ಯಾರಾದರೂ ಕೇಳಬಹುದು. ಅದಕ್ಕೆ ಸಮಾಧಾನಕರವಾಗಿ 'ಸನಾತನತಮಃ' ಎನ್ನಲಾಗುವುದು.

ದೇವರನ್ನು ಕಬಳಿಸುವವರೇ ಇಲ್ಲ. ಯಾಕೆಂದರೆ ಅವನು ಸನಾತನ. ಸದಾತನ ಅಂದರೂ 'ಸನಾತನ' ಅಂದರೂ ಒಂದೆ. ಯಾವಾಗಲೂ ಇರುವವನು. ಲಕ್ಷ್ಮೀದೇವಿಯೂ ಪರಮಾತ್ಮನಂತೆಯೇ 'ಸನಾತನ'ಳು. ಆದರೆ 'ಲಕ್ಷ್ಮೀದೇವಿ ಸನಾತನಳಾಗಲಿ ಎಂದು ದೇವರು ಬಯಸಿದ್ದರಿಂದಷ್ಟೇ ಲಕ್ಷ್ಮೀದೇವಿ ಸನಾತನಳಾಗಿರುವಳು. ಅಂದರೆ ಆಕೆಯ ನಿತ್ಯತ್ವ ಭಗವಂತನ ಸಂಕಲ್ಪಕ್ಕೆ ಅಧೀನವಾದದ್ದು. ಒಂದೊಮ್ಮೆ ದೇವರು ಲಕ್ಷ್ಮೀದೇವಿ ನಾಶವಾಗಲಿ ಎಂದು ಬಯಸಿದರೆ ಆಕೆಯೂ ಅನಿತ್ಯಳಾದಳು ! ಆದರೆ ದೇವರು ಎಂದೂ ಹಾಗೆ ಹುಚ್ಚುಹುಚ್ಚಾಗಿ ಬಯಸುವುದಿಲ್ಲ.

ಆದರೆ ದೇವರು ಮಾತ್ರ ಯಾರ ಸಂಕಲ್ಪಕ್ಕೆ ಅನುಗುಣವಾಗಿ ಸನಾತನ ಎನಿಸಿರುವವನಲ್ಲ. ತನ್ನ ಇಚ್ಛೆಗನುಗುಣವಾಗಿಯೇ ತಾನು ನಿತ್ಯನಾಗಿರುವವು. ಆದುದರಿಂದ ಅವನು ಹೆಚ್ಚಿನ ಸನಾತನತ್ವವನ್ನು ಹೊಂದಿರುವನು. ಆಂಗ್ಲಭಾಷೆಯಲ್ಲಿ 'Superlative digree' - ಎಂದು ವ್ಯವಹರಿಸಲಾಗುವಂತೆ 'ಸನಾತನತಮ' ಎನಿಸುವನು. ಎಲ್ಲರಿಗಿಂತ ಅತ್ಯಂತ ಅಧಿಕವಾಗಿ ನಿತ್ಯನಾಗಿರುವವನು- ಎಂದು.

ಹೀಗೆ 'ಸನಾತ್‌ಸನಾತನತಮಃ' ಎಂಬ ನಾಮವು ಭಗವಂತನ ಮುಖ್ಯವಾದ ನಿತ್ಯತ್ವವನ್ನು ಸಾರುವುದರ ಜೊತೆಗೆ ಅಂತಹ ಭಗವಂತನನ್ನು ಅಲ್ಲಗಳೆಯುವವರ ವಿರುದ್ಧ ಎಚ್ಚರಿಸುತ್ತಿದೆ.

**೮೯೭. ಕಪಿಲಃ – ಶಾಸ್ತ್ರವಿಹಿತಗಳಾದ ಕೆಲಸಗಳನ್ನು ಸಕಾಲದಲ್ಲಿ ಪೂರೈಸುವಲ್ಲಿ ಸದಾಕ್ರಿಯಾಶೀಲರಾಗಿರುವವರನ್ನು ಅನುಗ್ರಹ ದೃಷ್ಟಿಯಿಂದ ಸ್ವೀಕರಿಸುವವನು.**

**ವಿವರಣೆ :** ಕಪಿ + ಲಃ - ಕಪಿಲ, ಕಪಿ ಎಂದರೆ ಗೊತ್ತು ಮಂಗ ಎಂದು. ಆದರೆ ಮಂಗ ಯಾಕೆ ಕಪಿ ಎನಿಸುವುದು ? 'ಕಪಿ ಸಂಚಲನೇ |' - ಎಂಬ ಧಾತುವಿನಿಂದ ರೂಪುಗೊಂಡ ಕಪಿ ಶಬ್ದವು ಒಂದು ಕ್ಷಣಕಾಲವೂ ಸುಮ್ಮನಿರದೆ ಏನಾದರೂ ಮಾಡುತ್ತ ಇರುವ ಸ್ವಭಾವವನ್ನು ತಿಳಿಸುವುದು. ಕೋತಿ ಯಾವಾಗಲೂ ಏನನ್ನಾದರೂ ಮಾಡುತ್ತ ಇರುವುದೆಂದೇ ಕಪಿ ಎನಿಸುವುದು. ಕಪಿಗಳಲ್ಲೂ ಮುಖ್ಯ ಕಪಿ ಹನುಮಂತ. ಸೀತಾನ್ವೇಷಣೆಯಲ್ಲಿ ತೊಡಗಿದ್ದ ಅಂಗದಾದಿ ಕಪಿಗಳೆಲ್ಲ ವಿಂಧ್ಯಗಿರಿಯ ಮಯನಿರ್ಮಿತ ಗುಹೆಯೊಳಗೆ ಹೊಕ್ಕಾಗ ಅಲ್ಲೇ ಇದ್ದು ಬಿಡುವ ಯೋಚನೆ ಮಾಡ್ತಾರೆ.

ತಾರ ಆ ನಿಟ್ಟಿನಲ್ಲಿ ಬೆಂಕಿ ಹಚ್ಚುವನು.

ಅಂಗದ ಅದಕ್ಕೆ ತುಪ್ಪ ಸುರಿಯುವನು.

ಉಳಿದ ಕಪಿಗಳೆಲ್ಲ ಗಾಳಿ ಹಾಕುವರು

ಆದರೆ ಹನುಮಂತ ಮಾತ್ರ **'ಸಾಧ್ಯಂ ನ ಚೈತತ್.......'** ಇದು ಸಾಧ್ಯವೇ ಇಲ್ಲ ಘೋಷಿಸಿ, **'ಪ್ರಶಾಸ್ಯ ಸನ್ಮಾರ್ಗಗತಾನ್ ಕರೋಮಿ....'** ಬಲಾತ್ಕರಿಸಿಯಾದರೂ ನಿಮ್ಮನ್ನೆಲ್ಲ ಕರ್ತವ್ಯೋನ್ಮುಖರನ್ನಾಗಿಸುವೆನು ಎಂದು ಗರ್ಜಿಸುವ ಮೂಲಕ ತಾರನು ಹಚ್ಚಿದ ಆ ಯೋಚನೆ ಎಂಬ ಬೆಂಕಿಗೆ ನೀರು ಹಾಕಿ ಆರಿಸಿ ಬಿಡುವನು.

ಆದುದರಿಂದ ಮುಖ್ಯವಾದ ಕಪಿ ಎಂದರೆ ಯಾವಾಗಲೂ ರಾಮ ಸೇವೆಯಲ್ಲೇ ಮಗ್ನನಾಗಿದ್ದ, ಉಳಿದವರನ್ನೂ ಅದರಲ್ಲಿ ತೊಡಗಿಸುತ್ತಿದ್ದ ಹನೂಮಂತ. ಆದುದರಿಂದಲೇ ಶ್ರೀರಾಮಚಂದ್ರ ಹನೂಮಂತನನ್ನು ಆಲಂಗಿಸಿ, ಅವನನ್ನು ಹಾರ್ದಿಕವಾಗಿ ಸ್ವೀಕರಿಸುವ ಮೂಲಕ ಅವನ ಪಾಲಿಗೆ ಕಪಿಲ ಎನಿಸಿರುವನು. ರಾಮಚಂದ್ರ ಉಳಿದ ಯಾರನ್ನೂ ಆಲಿಂಗಿಸಿಕೊಂಡದ್ದಿಲ್ಲ.

ನಾವು ಕೂಡ ಶ್ರುತಿಸ್ಮೃತಿಗಳು ನಮಗೆ ವಿಧಿಸಿರುವ ಕಾರ್ಯಗಳನ್ನು ನಡೆಸುವುದರಲ್ಲಿ ಸರ್ವದಾ ಕ್ರಿಯಾಶೀಲರಾಗಿದ್ದಿರಬೇಕು. ಆಗ ದೇವರು ನಮ್ಮನ್ನು ಅನುಗ್ರಹದಿಂದ ಸ್ವೀಕರಿಸಿ ನಮ್ಮ ಪಾಲಿಗೂ ಕಪಿಲ ಎನಿಸುವನು.

ಅಂದರೆ ದೇವರು ನಮ್ಮ ಬಗ್ಗೆ ಅನುಗ್ರಹೋನ್ಮುಖನಾಗಬೇಕಿದ್ದರೆ ನಾವು ಶ್ರುತಿಸ್ಮೃತಿಗಳಲ್ಲಿ ಅವನ ಆದೇಶವಾಗಿ ಇರುವ ಕಾರ್ಯಗಳನ್ನು ನಡೆಸುವುದರಲ್ಲಿ ಸರ್ವದಾ ನಿರತರಾಗಿರಬೇಕು. ಆಂಜನೇಯನ ಕಪಿತ್ವವನ್ನು ನಾವೂ ಅಳವಡಿಸಿಕೊಂಡಾಗ ರಾಮಚಂದ್ರ ನಮ್ಮನ್ನು ಸ್ವೀಕರಿಸಿ ಅನುಗ್ರಹಿಸಬಲ್ಲನು. ಇದೇ ಕಪಿಲ ನಾಮದ ಆಂತರ್ಯ.

**೮೫೮. ಕಪಿಃ – ಯಾವ ಯಾವ ವ್ಯಕ್ತಿಯ ವಿಷಯದಲ್ಲಿ ಯಾವ ಯಾವ ಚೇಷ್ಟೆಯನ್ನು ನಡೆಸಬೇಕೋ ಅವೆಲ್ಲವನ್ನೂ ನಡೆಸುತ್ತಿರುವವನು.**

**ವಿವರಣೆ :** ಭಗವಂತ ಅನ್ನುವನು - ನಾನು 'ಕಪಿ' ಆಗಿದ್ದೇನೆ ; ನೀನೂ 'ಕಪಿ' ಆಗಿದ್ದಿ ಎಂದರೆ ನಿನ್ನನ್ನು ಸ್ವೀಕರಿಸಿ ನಿನ್ನ ಪಾಲಿಗೆ ನಾನು 'ಕಪಿಲ' ಆಗಬಲ್ಲೆನು.

ಭಗವಂತನು ಯಾವ ಯಾವ ವ್ಯಕ್ತಿಯ ವಿಷಯದಲ್ಲಿ ಯಾವ ಯಾವ ಚೇಷ್ಟೆಯನ್ನು ನಡೆಸಬೇಕೋ ಅದನ್ನು ಚಾಚೂ ತಪ್ಪದೆ ನಡೆಸುವುದರಿಂದ 'ಕಪಿ' ಎನಿಸುವನು. ಚತುರ್ಮುಖನಿಗೆ ಈಗ ಐವತ್ತು ವರ್ಷಗಳಾದವು. ಇನ್ನು ಐವತ್ತು ವರ್ಷಗಳಾದಾಗ ಅವನ ಸ್ಥಾನದಲ್ಲಿ ಮತ್ತೊಬ್ಬನನ್ನು ಕುಳ್ಳಿರಿಸುವುದೇ ಮುಂತಾದ ಚೇಷ್ಟೆಗಳನ್ನು ನಡೆಸುತ್ತ ಇರುವನು.

ಹೀಗೆ ಭಗವಂತ 'ಕಪಿ' ಆಗಿರುವುದನ್ನು ವಿವೇಚಿಸಿಕೊಂಡು ಅದರ ಸ್ಫೂರ್ತಿಯಿಂದ ನಾವೂ ಕಪಿಗಳಾಗಬೇಕು.

**೮೯೯. ಅವ್ಯಯಃ – ತಾನು ನಾಶ ಹೊಂದದೆ ಇನ್ನೊಬ್ಬರಿಗೆ ನಾಶವನ್ನು ತಪ್ಪಿಸುವವನು.**

**ವಿವರಣೆ :** ತಾನು 'ಕಪಿ' ಎನಿಸಿರುವ ಭಗವಂತನು ತನ್ನಂತೆ ಕ್ರಿಯಾಶೀಲರಾಗಿ 'ಕಪಿ'ಗಳೆನಿಸುವವರನ್ನು ಸ್ವೀಕಾರ ಮಾಡಿ ಅವರ ಪಾಲಿಗೆ ಕಪಿಲನಾಗುವನು ; ಅಷ್ಟೆ ಅಲ್ಲ ; ಅವರನ್ನು ಅವ್ಯಯರನ್ನಾಗಿಸುವನು. ತಾನು ಯಾವಾಗಲೂ ಶಾಶ್ವತನಾಗಿದ್ದು ತನ್ನ ಆದೇಶಾನುಸಾರವಾಗಿ ಕ್ರಿಯಾಶೀಲರಾಗಿ 'ಕಪಿ'ಗಳೆನಿಸುವವರಿಗೆ ಶಾಶ್ವತ ಪದವಿಯನ್ನು ಕೊಟ್ಟು ಅವರು ಮತ್ತೆ ಎಂದೂ ವ್ಯಯಕ್ಕೆ, ನಾಶಕ್ಕೆ ಒಳಗಾಗದಂತೆ ಮಾಡುವನು.

ಭಗವಂತನ ಈ ಬಗೆಯ ಅನುಗ್ರಹಕ್ಕೆ ಭೀಷ್ಮರೇ ಉತ್ತಮ ನಿದರ್ಶನರು.

ಭೀಷ್ಮರು ತಮಗೆ ವಹಿಸಿಕೊಟ್ಟ ಕೆಲಸವನ್ನು ಹತ್ತುದಿನ ಹೋರಾಡಿ ಚೆನ್ನಾಗಿ ನಿರ್ವಹಿಸಿದರು. ಯಾರ್ಯಾರನ್ನು ಉರುಳಿಸಬೇಕೆಂದು ದೇವರು ಸಂಕಲ್ಪಿಸಿದ್ದರೋ ಅವರನ್ನೆಲ್ಲಾ ಉರುಳಿಸಿದ್ದರು. ಕೊನೆಗೆ ಅವನ ಸಂಕಲ್ಪಕ್ಕನುಗುಣವಾಗಿ ತಾವೂ ಉರುಳಿ ಶರಪಂಜರದಲ್ಲಿ ಪವಡಿಸಿದರು. ದೇವರು ಕೊಟ್ಟ ಆ ನಿಟ್ಟಿನ ಶಾಪವನ್ನೂ ಅವನ ಪ್ರಸಾದವೆಂದು ಸ್ವೀಕರಿಸಿದರು. ಈ ಬಗೆಯಲ್ಲಿ ಅವರು 'ಕಪಿ'ಗಳಾಗಿದ್ದುದ್ದನ್ನು ಕಂಡ ಕೃಷ್ಣ ಅವರು ಪವಡಿಸಿದ್ದಲ್ಲಿಗೇ ಬಂದು, ಅವರನ್ನು ಸ್ವೀಕರಿಸಿದ. ಅವರ ಪಾಲಿಗೆ 'ಕಪಿಲ'ನಾದ. ಹಾಗೆಯೇ ಅವರನ್ನು ಅವ್ಯಯಗೊಳಿಸಿದ. ಭೀಷ್ಮರು ತಮ್ಮ ಮೂಲರೂಪಕ್ಕೇ ಸೇರಿದರೂ ಅವರು ಇಂದು ಕೂಡಾ ನಮ್ಮ ನಿಮ್ಮೆಲ್ಲರ ಮನಸ್ಸಿನಲ್ಲಿ ಶಾಶ್ವತವಾಗಿ ನೆಲೆವೂರುವಂತೆ ಮಾಡಿರುವನು.

**೯೦೦. ಸ್ವಸ್ತಿದಃ –ಎಲ್ಲ ಬಗೆಯ ನಿರಂತರ ಮಂಗಲವನ್ನು ನೀಡುವವನು.**

**ವಿವರಣೆ : 'ಸ್ವಸ್ತಿದಃ ಸ್ವಸ್ತಿಕೃತ್ ಸ್ವಸ್ತಿ ಸ್ವಸ್ತಿಭುಕ್ ಸ್ವಸ್ತಿದಕ್ಷಿಣಃ'** - ಎಂಬುದಾಗಿ ಐದು ಸ್ವಸ್ತಿಘಟಿತನಾಮಗಳನ್ನು ಜೊತೆಗೆಯೇ ಪಠಿಸುವ ಮೂಲಕ ಭೀಷ್ಮರು 'ಸ್ವಸ್ತಿವಾಚನ' ನಡೆಸಿರುವರು.

ಶಾಲೆಗಳಲ್ಲಿ ವರದಿವಾಚನದಂತೆ 'ಸ್ವಸ್ತಿವಾಚನ' ಎಂಬ ಒಂದು ಕಾರ್ಯಕ್ರಮ ಇರುತ್ತದೆ. ಶಾಲೆಯ ಹಿತೈಷಿಯಾದ, ಹಳೆಯ ವಿದ್ಯಾರ್ಥಿಯೊಬ್ಬ ಆ ಶಾಲೆಗೆ ಸ್ವಸ್ತಿ ಆಗಲಿ ಎಂದು ಹಾರೈಸುವನು. ಸ್ವಸ್ತಿ ಎಂದರೆ ನಿರಂತರ ಶ್ರೇಯಸ್ಸು,

'ಶ್ರೀ ಸರ್ವವಾಗೀಶ್ವರೇಶ್ವರಾಯ' 'ಶ್ರೀ ವಾಚಸ್ಪತಯೇ ನಮಃ'



'ಅಥ ಖಲ್ವಿಯಂ ದೈವೀ ವೀಣಾ ಭವತಿ....' ಇತ್ಯಾದಿಯಾಗಿ ಐತರೇಯೋಪನಿಷತ್ತು ಪ್ರಸ್ತುತ ಪಡಿಸಿರುವ, ಶ್ರೀ ಮಧ್ವರಿಂದ '..... ಸರ್ವವಾಗೀಶ್ವರೋ ವಿಷ್ಣುಃ ಸ್ತ್ರೀರೂಪೋ ಮಾಂ ಸುವಾದಯೇತ್.....' ಇತ್ಯಾದಿಯಾಗಿ ಪ್ರತಿಯೊಬ್ಬರ ವಾಗೀಂದ್ರಿಯದಲ್ಲಿ ಇದ್ದುಕೊಂಡು ವೀಣಾರೂಪದಲ್ಲಿರುವ ಈ ದೇಹದಿಂದ ಒಳ್ಳೆಯ ಮಾತನ್ನು ಹೊರಡಿಸುವ ಸ್ತ್ರೀರೂಪದ ಸರ್ವವಾಗೀಶ್ವರ ಎಂದು ವರ್ಣಿತನಾಗಿರುವ ವಿಷ್ಣುವಿನ ರೂಪದ ತಾದಾತ್ಮ್ಯವನ್ನು ನವರಾತ್ರಿಯ ಸಂದರ್ಭದಲ್ಲಿ ತೊಡಿಸಲಾಗುವ ವೀಣಾಪಾಣಿ ಸರಸ್ವತಿಯ ಅಲಂಕಾರದ ಉಡುಪಿ ಶ್ರೀ ಕೃಷ್ಣನಲ್ಲಿ ಚಿಂತಿಸುತ್ತ, ವಿ.ಸ.ನಾಮದ 'ಸರ್ವವಾಗೀಶ್ವರೇಶ್ವರಃ' 'ವಾಚಸ್ಪತಿಃ' ನಾಮದ ಅರ್ಥಾನುಸಂಧಾನ ನಡೆಸಬಹುದು.

## ‘ಶ್ರೀ ಶ್ರೀಶಾಯ ನಮಃ’ ‘ಶ್ರೀ ಲಕ್ಷ್ಮೀವತೇ ನಮಃ’



‘ಸ್ವರತ’ ನಾದ ಭಗವಂತ ಲಕ್ಷ್ಮಿಯ ಜೊತೆಗೆ ಕ್ರೀಡಿಸುವಾಗ ಲಕ್ಷ್ಮಿಯಲ್ಲಿ ಅದೇ ರೂಪದಿಂದ ಇರುವ ತನ್ನ ಸ್ತ್ರೀರೂಪದ ಜೊತೆಗೆಯೇ ಕ್ರೀಡಿಸುವನು **‘ರಮಯಾ ರಮಮಾಣೋಽಪಿ ತತ್ಸ್ಥೇನೈವ ಸ್ತ್ರಿಯಾತ್ಮನಾ ರಮತೇ...’** - ಎಂದು ಶ್ರೀಮಧ್ವರು ಐತರೇಯ ಭಾಷ್ಯದಲ್ಲಿ ತಿಳಿಸಿದ್ದು, ಅಂತಹ ಲಕ್ಷ್ಮೀದೇವಿಯ ಅಂತರ್ಯಾಮಿಯಾದ ಭಗವಂತನ ಸ್ತ್ರೀರೂಪದ ಅಲಂಕಾರದಲ್ಲಿ ಉಡುಪಿ ಶ್ರೀಕೃಷ್ಣ ಪ್ರತಿ ಶುಕ್ರವಾರದಂದು ಮೆರೆಯುತ್ತಿರುವನು.

**ವಿ.ಸ.ನಾಮದ ಲಕ್ಷ್ಮೀದೇವಿಯ ಪ್ರಸ್ತಾವವುಳ್ಳ ‘ಶ್ರೀಶಃ’ ‘ಲಕ್ಷ್ಮೀವಾನ್’ ಮುಂತಾದ ನಾಮಗಳಿಂದ ಲಕ್ಷ್ಮಿಯ ಅಂತರ್ಯಾಮಿಯಾಗಿ ನಡೆಸುವ ಭಗವಂತನ ಲೀಲೆಗಳನ್ನು, ಮಹಿಮೆಗಳನ್ನು ಅರ್ಥಾನುಸಂಧಾನ ನಡೆಸಬಹುದಾಗಿದೆ.**

ನಿರಂತರ ಅಭಿವೃದ್ಧಿ, ನಿರಂತರ ಮಂಗಳ. ಆ ಶಾಲೆಗೂ, ಶಾಲೆಯ ವಿದ್ಯಾರ್ಥಿಗಳಿಗೂ ಈ ಬಗೆಯ ಸ್ವಸ್ತಿ ಆಗಲೆಂದು ಹಾರೈಸಲಾಗುವುದು ಸ್ವಸ್ತಿವಾಚನದಲ್ಲಿ.

ಹೀಗೆ ಸ್ವಸ್ತಿ ಎಂದರೆ ನಿರಂತರ ಮಂಗಳ, ನಿರಂತರ ಸುಖ, ನಿರಂತರ ನೆಮ್ಮದಿ, ನಿರಂತರ ಅಭಿವೃದ್ಧಿ - ಈ ರೀತಿಯಾಗಿ ನಿರಂತರತೆಯ ಪೂರ್ವಕವಾಗಿ ಮಂಗಳ, ಸುಖ, ಅಭಿವೃದ್ಧಿ ಇವೆಲ್ಲ ಸ್ವಸ್ತಿ ಎನಿಸುವವು. ನಿರಂತರ ಮಂಗಳ ಸ್ವಸ್ತಿ. ಮಾಂಗಲ್ಯ ಒಬ್ಬೊಬ್ಬರ ಪಾಲಿಗೆ ಒಂದೊಂದು ಬಗೆಯದ್ದು. ಮನೆಯ ಯಜಮಾನನಿಗೆ ವಿಧುರನಾಗದೆ ಬಾಳುವುದು ಮಾಂಗಲ್ಯ ಎನಿಸಿದರೆ, ಯಜಮಾನಿನಿಗೆ ವಿಧವೆಯಾಗದೆ ಬಾಳುವುದು ಮಾಂಗಲ್ಯ ; ಮನೆಯ ಸದಸ್ಯರೆಲ್ಲ ಒಬ್ಬರಿಗೊಬ್ಬರು ಹೊಂದಿಕೊಂಡು ಬಾಳುವುದೇ ಮಾಂಗಲ್ಯ. ಹೀಗೆ ಬೇರೆ ಬೇರೆ ರೀತಿಯ ಮಾಂಗಲ್ಯವಿರುವುದರಿಂದ ಅವನ್ನೆಲ್ಲ 'ಸ್ವಸ್ತಿ' ಶಬ್ದದಿಂದ ಸಂಗ್ರಹಿಸಿ, ಮನೆಗೆ ಸ್ವಸ್ತಿ ಆಗಲಿ ಎಂದು ಹರಸಿದರೆ ಎಲ್ಲ ಬಗೆಯ ಮಾಂಗಲ್ಯವನ್ನೂ ಹರಸಿದಂತಾಗುವುದು. ಇದರ ಬದಲಾಗಿ ಒಂದೊಂದೇ ಬಗೆಯ ಮಾಂಗಲ್ಯವನ್ನು ಉಲ್ಲೇಖಿಸುತ್ತ ಹೋದಲ್ಲಿ ಯಾವುದಾದರೊಂದು ರೀತಿಯ ಮಾಂಗಲ್ಯ ಹೇಳದೆ ಬಿಟ್ಟು ಹೋಗುವ ಸಾಧ್ಯತೆ ಇದೆ. ಅದಕ್ಕಾಗಿ ಸ್ವಸ್ತಿಶಬ್ದದಿಂದ ಅವನ್ನೆಲ್ಲ ಕ್ರೋಢೀಕರಿಸುವುದು ಉಚಿತ.

ಭಗವಂತ ಭಕ್ತರ ಪಾಲಿಗೆ 'ಸ್ವಸ್ತಿದ' - ಸ್ವಸ್ತಿ ದದಾತೀತಿ ಎಲ್ಲ ಬಗೆಯ ಮಾಂಗಲ್ಯವನ್ನೂ ನೀಡುವನು. **'ಮಂಗಲಾನಾಂ ಚ ಮಂಗಲಮ್'** - ಎನಿಸಿರುವ ಅವನಿಂದ ಎಲ್ಲ ಬಗೆಯ ಮಾಂಗಲ್ಯವೂ ಸಿದ್ಧಿಸುವುದು..

**೯೦೧. ಸ್ವಸ್ತಿಕೃತ್ – ಅಯೋಗ್ಯರ ಮಂಗಳವನ್ನು ನಾಶ ಪಡಿಸುವವನು.**

**ವಿವರಣೆ :** ತನ್ನನ್ನು ನಂಬಿದವರಿಗೆ 'ಸ್ವಸ್ತಿದಃ' ನಾಗಿರುವ ಭಗವಂತ ಅಯೋಗ್ಯರ ಪಾಲಿಗೆ 'ಸ್ವಸ್ತಿಕೃತ್'. ಸ್ವಸ್ತಿ ಕೃಂತತೀತಿ ಸ್ವಸ್ತಿಕೃತ್. ಆರಂಭದಲ್ಲಿ ಅವರಿಗೆ ಮಂಗಲ ದೊರಕಿಸಿದಂತೆ ಮಾಡಿ ಮತ್ತೆ ಅವರಿಂದ ಎಲ್ಲ ಬಗೆಯ ಮಾಂಗಲ್ಯವನ್ನೂ ಕಿತ್ತುಕೊಳ್ಳುವನು.

ಪಾಂಡವರ ಪಾಲಿಗೆ 'ಸ್ವಸ್ತಿದಃ'ನಾಗಿದ್ದ ಕೃಷ್ಣ ಕೌರವರ ಪಾಲಿಗೆ 'ಸ್ವಸ್ತಿಕೃತ್' ಆಗಿರುವನು.

**೯೦೨. ಸ್ವಸ್ತಿ – ಮಂಗಳ ಸ್ವರೂಪಿ.**

**ವಿವರಣೆ :** ಯೋಗ್ಯರಿಗೆ ಮಂಗಳವನ್ನು ಕೊಡುವ ಅಯೋಗ್ಯರ ಮಂಗಳವನ್ನು ಕಸಿದುಕೊಳ್ಳುವ ಧರ್ಮ ದೇವರಲ್ಲಿ ಯಾಕೆ ಇದೆ ಎಂದರೆ ಅವನು 'ಸ್ವಸ್ತಿ'

ಯಾವಾಗಲೂ ಎಲ್ಲೆಡೆಯೂ ಮಂಗಳ ಸ್ವರೂಪಿ.

**'ಮಂಗಳಂ ಭಗವಾನ್ ವಿಷ್ಣುಃ ಮಂಗಳಂ ಮಧುಸೂದನಃ |**
**ಮಂಗಳಂ ಪುಂಡರೀಕಾಕ್ಷಃ ಮಂಗಳಂ ಗರುಡಧ್ವಜಃ'**

ಎಂದು ಸ್ತುತಿಸುವಂತೆ ಭಗವಂತನದ್ದು ಮಂಗಳಮಯ ವ್ಯಕ್ತಿತ್ವ. ವಿಷ್ಣು, ಮಧುಸೂದನ, ಪುಂಡರೀಕಾಕ್ಷ, ಗರುಡಧ್ವಜ - ಎಂದರೆ ಒಬ್ಬನೇ ಆದರೂ ಬೇರೆ ಬೇರೆ ಹೆಸರಿನಿಂದ ಉಲ್ಲೇಖಿಸಿ ಅವನ ಮಂಗಲಸ್ವರೂಪವನ್ನು ಅವನಲ್ಲಿ ಸ್ತುತಿಸಿದಲ್ಲಿ ಅವನಲ್ಲಿಯ ಪೂರ್ಣವಾದ ಮಂಗಳಮಯ ವ್ಯಕ್ತಿತ್ವ ಸ್ಪಷ್ಟವಾಗಬಲ್ಲದು.

ವಿಘ್ನರಾಜ ಎನಿಸುವ ಗಣಪತಿ ಹೇಗೆ ಯೋಗ್ಯರ ವಿಘ್ನಗಳನ್ನು ಪರಿಹರಿಸುವನು. ಅಯೋಗ್ಯರ ಪಾಲಿಗೆ ವಿಘ್ನಗಳನ್ನು ನೀಡುವನು. ಹಾಗೆ 'ಸ್ವಸ್ತಿ' ಎನಿಸುವ ಭಗವಂತನು ಯೋಗ್ಯರ ಪಾಲಿಗೆ 'ಸ್ವಸ್ತಿದಃ' ಆಗಿರುವನು. ಅಯೋಗ್ಯರ ಪಾಲಿಗೆ 'ಸ್ವಸ್ತಿಕೃತ್' ಕೂಡಾ ಆಗಿರುವನು.

**೯೦೩. ಸ್ವಸ್ತಿಭುಕ್ – ಭಕ್ತರಿಗೆ ಕೊಟ್ಟ ಸ್ವಸ್ತಿಯನ್ನು ಪಾಲಿಸುವವನು.**

**ವಿವರಣೆ:** ಭುಕ್ ಎಂದರೆ ತಿನ್ನುವವನು ಎಂಬಂತೆ ಪಾಲಿಸುವವನು ಎಂಬ ಅರ್ಥವೂ ಇದೆ. 'ಭುಜ ಪಾಲನಾಭ್ಯವಹಾರಯೋಃ' - ಎಂದೇ ಧಾತುಪಾಠ. ಆದುದರಿಂದ ಸ್ವಸ್ತಿಭುಕ್ ಎಂದರೆ ಸ್ವಸ್ತಿ ಭುನಕ್ತಿ ಪಾಲಯತೀತಿ ಸ್ವಸ್ತಿಭುಕ್. ಸಜ್ಜನರ ಪಾಲಿಗೆ 'ಸ್ವಸ್ತಿದಃ' ಎನಿಸಿ, ಕೊಟ್ಟ 'ಸ್ವಸ್ತಿ'ಯನ್ನು, ಮಂಗಳವನ್ನು ಪಾಲಿಸುವವನೂ ಅವನು - ಎಂಬುದನ್ನು 'ಸ್ವಸ್ತಿಭುಕ್' ನಾಮ ಸಾರುತ್ತಿದೆ. ಕೊಟ್ಟ ಸ್ವಸ್ತಿ - ಮಂಗಳ ಅಲ್ಲಿಗೆ ಅಳಿದು ಹೋಗದೆ ಉಳಿಯುವಂತೆ ಭಗವಂತನು ರಕ್ಷಿಸುವನು. ಸೃಷ್ಟಿಸುವುದು ದೊಡ್ಡದಲ್ಲ ; ಸೃಷ್ಟಿಸಿದುದನ್ನು ಪಾಲಿಸುವುದು ಮುಖ್ಯ. ಮನೆ ಕಟ್ಟುವುದು ದೊಡ್ಡದಲ್ಲ ; ಕಟ್ಟಿದ ಮನೆಯನ್ನು ಚೆನ್ನಾಗಿ ಕಾಪಾಡಿಕೊಂಡು ಬರುವುದು ಮುಖ್ಯ. ಮಕ್ಕಳನ್ನು ಹುಟ್ಟಿಸುವುದು ದೊಡ್ಡದಲ್ಲ ; ಹುಟ್ಟಿಸಿದ ಮಕ್ಕಳನ್ನು ಚೆನ್ನಾಗಿ ಬೆಳೆಸುವುದು ಮುಖ್ಯ. ಸಂಘಸಂಸ್ಥೆಗಳನ್ನು ಹುಟ್ಟು ಹಾಕುವುದು ದೊಡ್ಡದಲ್ಲ. ಹುಟ್ಟು ಹಾಕಿದ ಸಂಘ ಸಂಸ್ಥೆಗಳನ್ನು ನಡೆಸಿಕೊಂಡು ಹೋಗುವುದು ಮುಖ್ಯ. ಅದಕ್ಕಾಗಿಯೇ ಭಗವಂತ ಸೃಷ್ಟಿ ಮಾಡುವುದಕ್ಕೆ ಚತುರ್ಮುಖನಿಗೂ, ಸಂಹಾರ ಮಾಡುವುದಕ್ಕೆ ರುದ್ರನಿಗೂ ತಿಳಿಸಿ, ಪಾಲನೆಯ ಹೊಣೆಗಾರಿಕೆಯನ್ನು ತಾನೇ ಇಟ್ಟುಕೊಂಡ. ಅದು ಅವರಿಂದ ಸಾಧ್ಯವಾಗದು ಎಂದು.

ಹಾಗೆಯೇ ತನ್ನ ಭಕ್ತರಿಗೆ 'ಸ್ವಸ್ತಿ'ಯನ್ನು ಕೊಡುವುದು ಮುಖ್ಯವಲ್ಲ, ಕೊಟ್ಟ ಸ್ವಸ್ತಿ ಅಳಿಯದಂತೆ ನೋಡಿಕೊಳ್ಳುವುದು ಮುಖ್ಯ. ಇದನ್ನೇ 'ಸ್ವಸ್ತಿ ಭುಕ್' ನಾಮ

ಸಾರುತ್ತಿದೆ.

**೯೦೪. ಸ್ವಸ್ತಿದಕ್ಷಿಣಃ – ತನ್ನ ದೇಹದ ಎಡಭಾಗದಲ್ಲಿರುವ ದಕ್ಷಿಣಾ ಎಂಬ ಲಕ್ಷ್ಮೀದೇವಿಯ ರೂಪಕ್ಕೆ ಸದಾ ಕಾಲ ಸ್ವಸ್ತಿಯನ್ನು ಅನುಗ್ರಹಿಸಿರುವವನು.**

ವಿವರಣೆ: ಲಕ್ಷ್ಮೀದೇವಿಯ ಮೂರು ರೂಪಗಳಿವೆ. ವೇದಾಭಿಮಾನಿನಿಯಾದ ಒಂದು ರೂಪ. ಈ ರೂಪದಿಂದ ಸ್ವಲ್ಪ ದೂರದಲ್ಲಿದ್ದುಕೊಂಡು ಲಕ್ಷ್ಮೀದೇವಿ ದೇವರನ್ನು ಸ್ತುತಿಸುತ್ತಿರುವಳು. ಮತ್ತೊಂದು ದೇವರ ತೊಡೆಯಲ್ಲಿ ಕುಳಿತಿರುವ ರೂಪ. ಇನ್ನೊಂದು ದೇವರ ದೇಹದ ಅರ್ಧಭಾಗದಲ್ಲಿಯೇ ನೆಲೆಸಿರುವ ರೂಪ. **'ಭಾರ್ಯಾಭಾಗಃ ವಾಮ ಇತಿ ಪ್ರಸಿದ್ಧಃ'** ಎಂದಿರುವಂತೆ ದೇವರ ದೇಹದ ಎಡ ಭಾಗದಲ್ಲಿ ಆ ರೂಪ ಇದೆ. ಆದುದರಿಂದ ಅವಳ ಬಲ ಭಾಗದಲ್ಲಿ ದೇವರು ಇದ್ದಂತಾಗುವುದು. ಈ ದೃಷ್ಟಿಯಿಂದಲೇ 'ದಕ್ಷೇ ಇನಃ ಯಸ್ಯಾಃ ಸಾ' ಯಾರ ಬಲಭಾಗದಲ್ಲಿ ಅವಳ ಸ್ವಾಮಿ ಇರುವನೋ ಅಂತಹವಳು ಎಂಬ ಅಭಿಪ್ರಾಯದಲ್ಲಿ 'ದಕ್ಷಿಣಾ' ಎನಿಸಿರುವಳು. ಲಕ್ಷ್ಮೀದೇವಿಯ ರೂಪಗಳಲ್ಲಿ ಪರಸ್ಪರವಾಗಿ ತಾರತಮ್ಯ ಇಲ್ಲವಾದರೂ ದೇವರ ದೇಹದ ಅರ್ಧ ಭಾಗದಲ್ಲಿಯೇ ನೆಲೆಸಿರುವ ಈ ದಕ್ಷಿಣಾ ಎಂಬ ಲಕ್ಷ್ಮಿಯ ರೂಪಕ್ಕೆ ಭಗವಂತನು ಅಧಿಕ ಸುಖವನ್ನು ನೀಡುವನು. 'ಅರ್ಧನಾರೀಶ್ವರ' - ಎಂದಿರುವಂತೆ ಅರ್ಧನಾರೀನಾರಾಯಣ ಎನಿಸುವ ಭಗವಂತ ತನ್ನ ಎಡಭಾಗದಲ್ಲಿರುವ 'ದಕ್ಷಿಣಾ' ಯಾವಾಗಲೂ 'ಸ್ವಸ್ತಿ'ಯಾಗಿರುವಂತೆ, ನಿರಂತರ ಮಂಗಳಮಯಳಾಗಿರುವಂತೆ, ನಿರಂತರ ಸುಖಮಯಳಾಗಿರುವಂತೆ, ನಿರಂತರ ಅಭಿವೃದ್ಧಿಮಯಳಾಗಿರುವಂತೆ ಅನುಗ್ರಹಿಸುವನು. ಆದುದರಿಂದ 'ಸ್ವಸ್ತಿದಕ್ಷಿಣಃ' ಎನಿಸುವನು. ದಕ್ಷಿಣಾ ಎನಿಸುವ ಲಕ್ಷ್ಮಿಯ ರೂಪವು ಯಾರಿಂದಾಗಿ 'ಸ್ವಸ್ತಿ' ಆಗಿದೆಯೋ ಅಂತಹವನು ಎಂಬುದಾಗಿ.

ಹೆಣ್ಮಕ್ಕಳು ಭಗವಂತನ ಈ ರೂಪವನ್ನು ವಿಶೇಷವಾಗಿ ಉಪಾಸನೆ ಮಾಡಬೇಕು. ದಕ್ಷಿಣಾ ದೇವಿಯನ್ನು ತನ್ನ ಶರೀರದ ಅರ್ಧ ಭಾಗವಾಗುವಂತೆಯೇ ಮಾಡಿಕೊಂಡು ಅವಳಿಗೆ ಸ್ವಸ್ತಿಯನ್ನು ಅನುಗ್ರಹಿಸುವ ಭಗವಂತ ತಮಗೂ ಅನುಗ್ರಹಿಸುವಂತಾಗಬೇಕೆಂದು ಪ್ರಾರ್ಥಿಸಿದಲ್ಲಿ ಅದಕ್ಕೆ ಸ್ಪಂದಿಸುವ ಅವನಿಂದ ಹೆಣ್ಮಕ್ಕಳಿಗೆ 'ಸ್ವಸ್ತಿ' - ಮಂಗಳ ಅನುಗ್ರಹಿಸಲ್ಪಡುವುದು.

**ಅರೌದ್ರಃ ಕುಂಡಲೀ ಚಕ್ರೀ ವಿಕ್ರಮ್ಯೂರ್ಜಿತಶಾಸನಃ |**
**ಶಬ್ದಾತಿಗಃ ಶಬ್ದಸಹಃ ಶಿಶಿರಃ ಶರ್ವರೀಕರಃ ||೯೭||**

**೬೦೫. ಅರೌದ್ರಃ – ಮೇಲ್ನೋಟಕ್ಕೆ ಶತ್ರುವಿನಂತೆ ಇರುವವನ ವಿಷಯದಲ್ಲಿ ಕರಗುವವನು.**

**ವಿವರಣೆ :** ಅರೌ+ದ್ರಃ ಅರೌದ್ರಃ, ಅರಿ ಎಂದರೆ ಶತ್ರು ಎಂಬ ಅರ್ಥ. ಅದರ ಸಪ್ತಮೀ ವಿಭಕ್ತಿಯ ರೂಪ 'ಅರೌ' ಎಂಬುದು. ಶತ್ರುವಿನ ವಿಷಯದಲ್ಲಿ ಎಂಬ ಅರ್ಥ. 'ದ್ರ' ಎಂದರೆ ದ್ರವಣ, ಕರಗುವಿಕೆ ಉಳ್ಳವನು ಎಂದರ್ಥ. ಆದುದರಿಂದ ಶತ್ರುವಿನ ವಿಷಯದಲ್ಲಿ ಕರಗುವವನೇ 'ಅರೌದ್ರ.'

ಕೃಷ್ಣನಿಗೆ ಯಾರು ಶತ್ರು ? ಎದುರಿಗಿರುವ ಭೀಷ್ಮರೇ ಶತ್ರುಗಳು. ಯಾಕೆ ಶತ್ರುಗಳು ? ಕೃಷ್ಣನಿಗೆ ಶತ್ರುವಿನಂತೆ ಇದ್ದ ದುರ್ಯೋಧನನ ಪಕ್ಷಕ್ಕೆ ಸೇರಿದವರಾದ್ದರಿಂದ, 'ಶತ್ರುವಿನ ಮಿತ್ರನೂ ಶತ್ರುವೇ' - ಎಂಬ ನೀತಿಗನುಗುಣವಾಗಿ ಭೀಷ್ಮರು ಕೃಷ್ಣನಿಗೆ ಶತ್ರುಗಳು. ದುರ್ಯೋಧನ ಭೀಷ್ಮರನ್ನು ನಂಬಿಕೊಂಡೇ ಕೃಷ್ಣನ ಭಕ್ತರಾಗಿದ್ದ ಪಾಂಡವರ ವಿರುದ್ಧವಾಗಿ ಯುದ್ಧ ಹೂಡಿದ್ದೆಂದ ಮೇಲೆ ಪರೋಕ್ಷವಾಗಿ ಭೀಷ್ಮರೂ ಶತ್ರುಗಳೇ.

ಆದರೆ ಕೃಷ್ಣ ಅಂತಹ ಶತ್ರುವಿನ ವಿಷಯದಲ್ಲೂ ವಾತ್ಸಲ್ಯದಿಂದ ಕರಗುವನು. ಯಾಕೆ ಕರಗಿದ ? ಭೀಷ್ಮರು ಹೊರಗಿನಿಂದ ಶತ್ರುಗಳಾಗಿದ್ದರೂ ಒಳಗಿನಿಂದ ಭಕ್ತರಾಗಿರುವರು - ಎಂಬುದನ್ನು ಕೃಷ್ಣ ಗುರುತಿಸಿಕೊಂಡಿರುವನು. ಅವನು ಒಳಗಿನ ಭಾವನೆಗೆ ಹೆಚ್ಚು ಪ್ರಾಶಸ್ತ್ಯ ನೀಡುವವನು. ನಾವಾದರೆ ಇದಕ್ಕೆ ವಿಪರೀತವಾಗಿ ನಡೆದುಕೊಳ್ಳುವವರು. ಒಬ್ಬನು ಒಳಗಿನಿಂದ ನಮ್ಮ ಮಿತ್ರನೇ ಆಗಿರುವನೆಂದು ಗೊತ್ತಿದ್ದರೂ ಹೊರಗಿನಿಂದ ಏನಾದರೂ ನಮ್ಮ ವಿರುದ್ಧ ಹೇಳಿ ಬಿಟ್ಟನೆಂದರೆ ಅದನ್ನೇ ಗಟ್ಟಿಯಾಗಿ ಹಿಡಿದುಕೊಂಡು ಆ ಬಗ್ಗೆ ದ್ವೇಷ ಸಾಧಿಸುವವರು ನಾವು. ದೇವರು ಹೀಗಲ್ಲ. ಹೊರಗಿನಿಂದ ಶತ್ರುವಿನಂತೆ ನಡೆದುಕೊಂಡರೂ ಒಳಗಿನಿಂದ ಒಳ್ಳೆಯ ಭಾವನೆ ತಾಳಿದ್ದರೆ ಅದಕ್ಕೆ ಸ್ಪಂದಿಸುವವನು ಅವನು.

ಭೀಷ್ಮರು ಹೊರಗೆ ಶತ್ರುಪಕ್ಷೀಯಯಾಗಿದ್ದು ಶತ್ರುವಿನಂತೆ ಇದ್ದರೂ ಒಳಗಿನಿಂದ ಭಕ್ತರಾಗಿರುವರೆಂಬುದನ್ನು ಗುರುತಿಸಿಕೊಂಡ ಕೃಷ್ಣ ಅವರ ವಿಷಯದಲ್ಲಿ ಕರಗಿರುವನು.

ಆದುದರಿಂದಲೇ ಅವರು ಇರುವಲ್ಲಿಗೇ ಬಂದಿರುವನು. 'ಅರೌ' ಶತ್ರುಗಳಂತೆ ಇದ್ದ ಭೀಷ್ಮರ ವಿಷಯದಲ್ಲಿ 'ದ್ರ' ಬಂದಿರುವವನು. 'ದ್ರುಗತೌ'. ಹಾಗೆಯೇ ಯುದ್ಧ ಮಾಡುತ್ತಿದ್ದಾಗ ಭೀಷ್ಮರ ಮಾತನ್ನು ಉಳಿಸುವುದಕ್ಕಾಗಿ ಅವರ ಸಮೀಪಕ್ಕೆ ಹೋಗಿರುವವನು.

ಭೀಷ್ಮರು ಮಾತ್ರವಲ್ಲ ನಾವು ಕೂಡ ಮೇಲ್ನೋಟಕ್ಕೆ ದೇವರ ಶತ್ರುಗಳಂತೆ ಇರುವವರು. ಅವನ ಕರ್ಮಸಿದ್ಧಾಂತದ, ಪ್ರಾಕೃತಿಕವಾದ ವ್ಯವಸ್ಥೆಗಳನ್ನೆಲ್ಲ ಟೀಕಿಸುತ್ತಾ ಅವನಿಗೆ ಶತ್ರುಗಳಂತೆ ಇರುವವರು. ಆದರೆ ದಯಾಮಯನಾದ ದೇವರು ನಮ್ಮ ಈ ಹೊರಗಿನ ವ್ಯಕ್ತಿತ್ವವನ್ನು ಪರಿಗಣಿಸದೆ, ಒಳಗೆ ನಾವು ತನ್ನ ಭಕ್ತರಾಗಿರುವೆವೆಂಬುದನ್ನು ಗುರುತಿಸಿಕೊಂಡು ನಮಗಾಗಿ ಕರಗುವನು ; ಸ್ಪಂದಿಸುವನು. ಭಗವಂತ ನಮ್ಮ ಮೇಲೆ ಸುರಿಸುತ್ತಿರುವ ಈ ಅನುಗ್ರಹವನ್ನು ನಾವು 'ಅರೌದ್ರ' ನಾಮದ ಮೂಲಕ ಅನುಸಂಧಾನ ಮಾಡಬೇಕು.

**೯೦೬. ಕುಂಡಲೀ – * ಮೊಸಳೆಯಾಕಾರದ ಸುಂದರವಾದ ಕಿವಿಯ ಆಭರಣ ಉಳ್ಳವನು.**

*** ಗಂಡ ಜೀವಿಸಿದ್ದಾಗಲೇ ಅನ್ಯ ಪುರುಷರಿಂದ ಹುಟ್ಟಿದ ಪ್ರಯುಕ್ತ 'ಕುಂಡ'ರೆನಿಸಿದ್ದರೂ ಪಾಂಡವರನ್ನು ತನ್ನ ಭಕ್ತರನ್ನಾಗಿ ಪರಿಗಣಿಸಿರುವವನು.**

ವಿವರಣೆ: ಕಿವಿಯ ಆಭರಣಕ್ಕೆ ಕುಂಡಲ ಎಂದು ಹೆಸರು 'ಕುಡಿ ರಕ್ಷಣೇ' - ಎಂದು ಧಾತುವಿನಿಂದ ನಿಷ್ಪನ್ನವಾಗಿರುವ 'ಕುಂಡಲ' ಶರೀರದ ರಕ್ಷಣೆಯ ಉದ್ದೇಶದಿಂದ ಧರಿಸಲ್ಪಡುವಂತಹದ್ದು. ಆದ್ದರಿಂದಲೇ ಕಿವಿ ಚುಚ್ಚಿ ಕುಂಡಲವನ್ನು ಧರಿಸುವಂತಹದ್ದು ನಮ್ಮಲ್ಲಿ ಒಂದು ಸಂಸ್ಕಾರವಾಗಿ ಪರಿಗಣಿಸಲ್ಪಟ್ಟಿದೆ.

**'ಧ್ಯೇಯಃ ಸದಾ ಸವಿತೃಮಂಡಲಮಧ್ಯವರ್ತೀ... ಮಕರಕುಂಡಲವಾನ್....'** ಎಂದು ಗಾಯತ್ರೀ ಮಂತ್ರದ ಧ್ಯಾನದಲ್ಲಿ ಸ್ತುತಿಸಲ್ಪಟ್ಟಿರುವಂತೆ ಭಗವಂತನು ಮೊಸಳೆಯಾಕಾರದ ಕುಂಡಲವನ್ನು ಧರಿಸಿರುವವನು.

ಇದಕ್ಕಿಂತ ಮತ್ತೊಂದು ಸ್ವರಸವಾದ ಅರ್ಥ - ಕುಂಡಾನಪಿ ಲಾತೀತಿ ಕುಂಡಲೀ - ಕುಂಡರಾದ ಪಾಂಡವರನ್ನೂ ತನ್ನವರನ್ನಾಗಿ ಸ್ವೀಕರಿಸಿರುವವನು.

ಅವ್ಯವಸ್ಥಿತವಾಗಿ ಹುಟ್ಟು ಪಡೆದವರಲ್ಲಿ ಕುಂಡರು, ಗೋಲಕರು - ಎಂದು ಎರಡು ಪ್ರಭೇದಗಳು. ಗಂಡ ಸತ್ತ ಮೇಲೆ ವ್ಯಕ್ತಿಯಿಂದ ಹುಟ್ಟು ಪಡೆದವರು 'ಗೋಲಕ'ರೆನಿಸಿದರೆ, ಗಂಡ ಬದುಕಿರುವಾಗಲೇ ಬೇರೆ ವ್ಯಕ್ತಿಯಿಂದ ಹುಟ್ಟಿಕೊಂಡವರು ಕುಂಡರೆನಿಸುವರು. ಧೃತರಾಷ್ಟ್ರ, ಪಾಂಡು, ವಿದುರ ಇವರು ಅಂಬಿಕೆ, ಅಂಬಾಲಿಕೆ ಅವರ ದಾಸಿಯರಿಂದ ತಮ್ಮ ಗಂಡ ಸತ್ತ ಮೇಲೆ ಪಡೆದ ಮಕ್ಕಳಾದುದರಿಂದ ಗೋಲಕರೆನಿಸುವರು. ಯುಧಿಷ್ಠಿರಾದಿಗಳು ಪಾಂಡು ಬದುಕಿರುವಾಗಲೇ ಯಮಾದಿ ದೇವತೆಗಳಿಂದ ಕುಂತಿಯ ಮೂಲಕ

ಹುಟ್ಟಿದವರಾದುದರಿಂದ ಕುಂಡರೆನಿಸುವರು.

ಹೀಗೆ ಕುಂಡರೆನಿಸಿರುವ ಪಾಂಡವರು ಅವ್ಯವಸ್ಥಿತ ಜನ್ಮ ಪ್ರಯುಕ್ತವಾಗಿ ಹೇಯರೆನಿಸಿದರೂ ಒಳಗಿನ ಭಕ್ತಿಯಿಂದಾಗಿ ಭಗವಂತನಿಂದ ಸ್ವೀಕೃತರಾಗಿರುವರು. ಸಾಮಾಜಿಕ ದೃಷ್ಟಿಯಿಂದ ಹೇಯವೆನಿಸಿದರೂ ಭಗವಂತ ಅವರಲ್ಲಿಯ ಭಕ್ತಿಗೆ ಪ್ರಾಶಸ್ತ್ಯ ಕೊಟ್ಟು ಅವರನ್ನು ತನ್ನವರನ್ನಾಗಿ ಪರಿಗಣಿಸಿರುವನು. ಆದುದರಿಂದ ಅವನು 'ಕುಂಡಲೀ.'

ಭಗವಂತನ ಭಕ್ತವಾತ್ಸಲ್ಯದ ಮೇಲೆ ಬೆಳಕು ಚೆಲ್ಲುವ ಈ 'ಕುಂಡಲೀ' - ಎಂಬ ನಾಮವು ನಾವು ಭಗವಂತನಿಂದ ತನ್ನವರೆಂದು ಪರಿಗಣಿಸಲ್ಪಡಬೇಕೆಂದರೆ ವಿಶೇಷವಾಗಿ ಭಕ್ತಿಯನ್ನು ಅಳವಡಿಸಿಕೊಳ್ಳಬೇಕೆಂದು ಸೂಚಿಸಿ ಕೊಡುವುದು.

**೯೦೭. ಚಕ್ರೀ – ಜಗಚ್ಚಕ್ರ, ಸಂಸಾರಚಕ್ರ, ಜೀವನಚಕ್ರ ಇವನ್ನು ತನ್ನ ಹಿಡಿತದಲ್ಲಿ ಇಟ್ಟುಕೊಂಡಿರುವವನು.**

ವಿವರಣೆ: ಚಕ್ರ ಎಂದರೆ ಜಗಚ್ಚಕ್ರ. ಜಗತ್ತು ಯಾಕೆ ಚಕ್ರ ? ಚಕ್ರವಾದರೂ ಯಾಕೆ ಚಕ್ರ ಎನಿಸುವುದು ? ಚಂಕ್ರಮಣಾತ್ ಚಕ್ರಂ...... ಎಂದಿರುವಂತೆ ಉರುಳುತ್ತ ಮುಂದುವರಿಯುವುದರಿಂದ ಚಕ್ರ ಎನಿಸುವುದು. ಚಕ್ರದ ಈ ಉರುಳುವ ಸ್ವಭಾವ ಜಗತ್ತಿಗೂ ಇದೆ. ಆದುದರಿಂದ ಜಗತ್ತೂ ಚಕ್ರ ಎನಿಸುವುದು. ಒಬ್ಬ ಹುಟ್ಟಿದ ಅವ ದೊಡ್ಡವನಾದ. ಅವನಿಗೊಬ್ಬ ಮಗ ಹುಟ್ಟಿದ. ಅವ ದೊಡ್ಡವನಾದ. ಆಗ ಅವನ ಅಪ್ಪ ಸತ್ತು, ತನ್ನ ಮಗನ ಮಗನಾಗಿ, ಅಂದರೆ ಮೊಮ್ಮಗನಾಗಿ ಹುಟ್ಟಿದ. ಹೀಗೆ ಹುಟ್ಟು ಸಾವುಗಳ ಚಕ್ರ ಉರುಳುತ್ತಿರುತ್ತದೆ. ಮಧ್ವವಿಜಯದಲ್ಲಿ ಇಂತಹ ಒಂದು ಪ್ರಸಂಗವನ್ನು ದಾಖಲೆ ಮಾಡಿದ್ದಾರೆ. ಶ್ರೀಮಧ್ವರು ಶಿಶುವಾಗಿದ್ದಾಗ ಅವರಿಗೆ ಹಾಲು ಕುಡಿಯಲು ಅನುಕೂಲವಾಗಲೆಂದು ನಡಿಲ್ಲಾಯರಿಗೆ ಗೋದಾನ ಮಾಡಿದ ಮೂಡಿಲ್ಲಾಯರು ತನ್ನ ಮಗನ ಮಗನಾಗಿ, ಅಂದರೆ ಮೊಮ್ಮಗನಾಗಿ ಹುಟ್ಟಿ ಮುಂದೆ ಶ್ರೀಮಧ್ವರಿಂದ ಆಧ್ಯಾತ್ಮ ವಿದ್ಯೆಯ ಉಪದೇಶ ಪಡೆದರು ಎಂಬುದಾಗಿ. ಹೀಗೆ ಹುಟ್ಟು ಸಾವುಗಳ ಸುಳಿಯಲ್ಲಿ ಉರುಳುತ್ತಿರುವುದರಿಂದ ಜಗತ್ತು ಸಂಸಾರಚಕ್ರ ಎನಿಸುವುದು.

ಜಗತ್ತನ್ನು ಬಿಟ್ಟು ಬಿಡೋಣ, ನಮ್ಮ ಮನೆಯ ಸದಸ್ಯರನ್ನೊಳಗೊಂಡ ಸಂಸಾರವನ್ನೂ ಬಿಟ್ಟು ಬಿಡೋಣ. ಬರೇ ನಮಗೆ ಸಂಬಂಧಿಸುವ ಸಂಸಾರವನ್ನಷ್ಟೇ ಇಟ್ಟುಕೊಂಡರೂ ನಾವು ಹುಟ್ಟುತ್ತೇವೆ ; ಬೆಳೆಯುತ್ತೇವೆ ; ಮುದುಕರಾಗುತ್ತೇವೆ ; ಒಂದು ದಿನ ಸಾಯ್ತೇವೆ ; ಮತ್ತೆ ಎಲ್ಲೋ ಹುಟ್ತೇವೆ.... ಹೀಗೆ ನಮ್ಮ ವೈಯುಕ್ತಿಕ

ಜೀವನದ ಚಕ್ರವನ್ನೂ ಚುಕ್ಕಾಣಿ ಹಿಡಿದು ಉರುಳಿಸುತ್ತಿರುವವನು ಭಗವಂತನಾದುದರಿಂದ ಆ ಹಿನ್ನೆಲೆಯಲ್ಲೇ ಅವನನ್ನು 'ಚಕ್ರೀ' - ಎಂದು ಉಪಾಸನೆ ನಡೆಸಬೇಕು.

**೯೦೮. ವಿಕ್ರಮೀ – * ತ್ರಿವಿಕ್ರಮಾವತಾರದಲ್ಲಿ ದೊಡ್ಡ ಹೆಜ್ಜೆಗಳನ್ನು ಹೊಂದಿರುವವನು.**

*** ಇಟ್ಟ ಹೆಜ್ಜೆಯನ್ನು ಹಿಂದೆ ಸರಿಸದಂತೆ ಮುಂದುವರಿಯುವ ವೈಶಿಷ್ಟ್ಯದಿಂದ ಕೂಡಿದ ಹೆಜ್ಜೆ ಉಳ್ಳವನು.**

ವಿವರಣೆ : ಕ್ರಮ ಎಂದರೆ ಹೆಜ್ಜೆ. ವಿಶಿಷ್ಟವಾದ ಹೆಜ್ಜೆ ಉಳ್ಳವನು ವಿಕ್ರಮೀ. ತ್ರಿವಿಕ್ರಮಾವಾತಾರದಲ್ಲಿಯ ಹೆಜ್ಜೆಗಳು ದೊಡ್ಡ ಹೆಜ್ಜೆಗಳಾಗಿದ್ದು ವಿಶಿಷ್ಟಗಳಾಗಿದ್ದವೆಂದು ಸ್ತುತಿಸುವುದುಂಟು.

ರಾಮಾವತಾರದ, ಕೃಷ್ಣಾವತಾರದ ಪುಟ್ಟ ಪುಟ್ಟ ಹೆಜ್ಜೆಗಳನ್ನೇ ನಾವು ಇಟ್ಟುಕೊಳ್ಳೋಣ. ಈ ಹೆಜ್ಜೆಗಳಲ್ಲೂ ಒಂದು ವೈಶಿಷ್ಟ್ಯ ಇದೆ. ಮುಂದೆ ಇಟ್ಟ ಹೆಜ್ಜೆ ಹಿಂದೆ ಸರಿಸದಿರುವಂತಹದ್ದೇ ಆ ವೈಶಿಷ್ಟ್ಯ. ಭಗವಂತ ಹೀಗಾಗಬೇಕು. ಎಂದು ಯಾವುದೇ ಕಾರ್ಯದ ವಿಷಯದಲ್ಲಿ ಒಂದು ಹೆಜ್ಜೆ ಇಟ್ಟನೋ, ಮತ್ತೆ ಎಂದೆಂದಿಗೂ ಅದನ್ನು ಹಿಂದಕ್ಕೆ ಸರಿಸುವ ಪ್ರಸಂಗವೇ ಇಲ್ಲ. ಇದು 'ಸತ್ಯಸಂಕಲ್ಪ' 'ಸತ್ಯಕಾಮ' ಎನಿಸಿರುವ ದೇವರ ವಿಷಯದಲ್ಲಿ ಮಾತ್ರ ಸಂಭವಿಸುವುದು. ನಾವು ಎಷ್ಟೋ ಬಾರಿ ಮುಂದೆ ಇಟ್ಟ ಹೆಜ್ಜೆಯನ್ನು ಹಿಂತೆಗೆದುಕೊಳ್ಳ ಬೇಕಾಗುವುದು.

ನಾಳೆ ಬ್ರಾಹ್ಮಣರನ್ನು ಮನೆಗೆ ಬರಲು ಆಹ್ವಾನಿಸಿದ್ದೇನೆ. ಅವರೆಲ್ಲರಿಗೆ ದಾನ, ದಕ್ಷಿಣೆ ನೀಡಬೇಕು ಎಂದು ಹೆಂಡತಿ ಮಕ್ಕಳಲ್ಲಿ ತಿಳಿಸಿದ ವ್ಯಕ್ತಿ ಮರುದಿನ ಬೆಳಿಗ್ಗೆ ಇಂದು ಅದು ಬೇಡ ; ಮುಂದೆ ಎಂದಾದರೂ ಮಾಡೋಣ ಎಂದು ಇಟ್ಟ ಹೆಜ್ಜೆಯನ್ನು ಇದ್ದಕ್ಕಿದ್ದಂತೆ ಹಿಂತೆಗೆದುಕೊಳ್ಳುವುದುಂಟು.

ಹೀಗೆ ನಾವು ಎಷ್ಟೋ ಬಾರಿ ಹೆಜ್ಜೆ ತಪ್ಪಿ ಕುಣಿಯುವುದುಂಟು. ಅದನ್ನು ನೋಡಿ ಕೆಲವರು ಕೈ ಚಪ್ಪಾಳೆ ಹೊಡೆಯುವುದುಂಟು. ಇನ್ನು ಕೆಲವೊಮ್ಮೆ ಹೆಜ್ಜೆ ತಪ್ಪಿ ಜಾರಿ ಬೀಳುವುದೂ ಉಂಟು.

ಇವೆಲ್ಲ ನಮ್ಮ ನಿಮ್ಮೆಲ್ಲರ ಪಾಲಿಗೆ ಆದರೆ ದೇವರ ಪಾಲಿಗೆ ಹೀಗೆ ಎಂದೂ ನಡೆಯದು. ಅವನು ಒಮ್ಮೆ ಇಟ್ಟ ಹೆಜ್ಜೆಯನ್ನು ಹಿಂದಿಡುವ ಪ್ರಸಂಗವೇ ಇಲ್ಲ. ಹಿಂದಿಡುವುದು ಬಿಡಿ ; ಸ್ವಲ್ಪ ಸಡಿಲಿಸುವ ಪ್ರಸಂಗವೂ ಇಲ್ಲ. ಹೀಗೆ ವಿಶಿಷ್ಟವಾದ

ಹೆಜ್ಜೆ ಉಳ್ಳವನಾದುದರಿಂದಲೇ ಅವನು 'ವಿಕ್ರಮೀ' ಎನಿಸಿರುವನು.

ಇಟ್ಟ ಹೆಜ್ಜೆಯನ್ನು ಹಿಂಜರಿಸುವುದಿಲ್ಲ - ಎಂದರೆ ಕೈಗೊಂಡ ತೀರ್ಮಾನವನ್ನು ಬದಲಾಯಿಸುವುದಿಲ್ಲ ; ಕೊಟ್ಟ ಮಾತನ್ನು ಹಿಂತೆಗೆದುಕೊಳ್ಳುವುದಿಲ್ಲ - ಎಂದರ್ಥ.

ಈ ಅಭಿಪ್ರಾಯದ ಹಿನ್ನೆಲೆಯಲ್ಲಿ ದೇವರನ್ನು 'ವಿಕ್ರಮೀ' - ಎಂದು ಉಪಾಸನೆ ಮಾಡಿದೆವೆಂದರೆ ನಾವೂ ಆದಷ್ಟು ಇಟ್ಟ ಹೆಜ್ಜೆಯನ್ನು ಹಿಂದಕ್ಕೆ ಸರಿಸಿದಂತೆ, ಕೊಟ್ಟ ಮಾತನ್ನು ಮುರಿಯದಂತೆ, ಕೈಗೊಂಡ ತೀರ್ಮಾನವನ್ನು ಬದಲಾಯಿಸದಂತೆ ಮುಂದುವರಿಯುವಂತಾಗುವುದು.

**೮೦೯. ಊರ್ಜಿತಶಾಸನಃ – ತಿದ್ದುಪಡಿಗೆ ಹಾಗೂ ರಿಯಾಯಿತಿಗೆ ಎಡೆ ಇಲ್ಲದ, ಶ್ರೇಷ್ಠಗಳೆನಿಸಿರುವ ಆದೇಶಗಳುಳ್ಳವನು.**

ವಿವರಣೆ : ಭಗವಂತ ತಾನು ನಡೆದುಕೊಂಡು ಲೋಕಕ್ಕೆ ಕೆಲವು ಆದರ್ಶಗಳನ್ನು ತೋರಿಸುತ್ತಾನೆ. ಹಾಗೆಯೇ ಲೋಕಕ್ಕೆ 'ಹಾಗೆ ನಡೆದುಕೊಳ್ಳಬೇಕು' 'ಹೀಗೆ ನಡೆದುಕೊಳ್ಳಬಾರದು' ಎಂದೆಲ್ಲ ಅಪ್ಪಣೆ ನೀಡುತ್ತಾನೆ. ಊರ್ಜಿತ - ಎಂದರೆ ಶ್ರೇಷ್ಠ. ಶಾಸನ ಎಂದರೆ ಅಪ್ಪಣೆ. 'ಶ್ರುತಿಸ್ಮೃತೀ ಹರೇರಾಜ್ಞೇ......' - ಎಂದಿರುವಂತೆ ದೇವರು ಶ್ರುತಿಸ್ಮೃತಿಗಳ ಮೂಲಕ ನಾವೆಲ್ಲ ಹೇಗೆ ಹೇಗೆ ನಡೆದುಕೊಳ್ಳಬೇಕೆಂಬುದರ ಬಗ್ಗೆ ಅಪ್ಪಣೆ ಕೊಡಿಸುವನು. ಅದು ಊರ್ಜಿತ ; ಶ್ರೇಷ್ಠ. ಯಾಕೆಂದರೆ ಹತ್ತಾರು ಬಾರಿ ಯೋಚಿಸಿ ಪ್ರಸ್ತುತಪಡಿಸಲಾದ ಅದರಲ್ಲಿ ಎಂದೂ ತಿದ್ದುಪಡಿಗೆ ಅವಕಾಶವೇ ಇಲ್ಲ. ಕಾನೂನಿನಲ್ಲಿ, ಕಾಯಿದೆಯಲ್ಲಿ ಆಗಾಗ್ಗೆ ತಿದ್ದುಪಡಿ ಆಗುತ್ತ ಇರುವುದಕ್ಕೆ ಕಾರಣ ಅದನ್ನು ರಚಿಸುವಲ್ಲಿ ದೂರಾಲೋಚನೆ ಇಲ್ಲದಿರುವಂತಹದ್ದು. ಆದರೆ ಸಮಗ್ರ ದೇಶದ, ಸಮಗ್ರ ಕಾಲದ ಜನಾಂಗದ ಹಿತದೃಷ್ಟಿಯನ್ನು ಇಟ್ಟುಕೊಂಡು ಪರಿಪೂರ್ಣ ದೃಷ್ಟಿಕೋನದಿಂದ ದೇವರು ರೂಪಿಸಿರುವ ಕಾಯಿದೆ ಕಾನೂನುಗಳಲ್ಲಿ ಎಂದೂ, ಯಾವ ಅಂಶದಲ್ಲೂ ತಿದ್ದುಪಡಿಗೆ ಎಡೆಯೇ ಇರದು.

ಆದುದರಿಂದಲೇ ದೇವರ ಆ ಶಾಸನದಲ್ಲಿ ಯಾರಿಗೂ ಯಾವ ಬಗೆಯ ರಿಯಾಯಿತಿಗೂ ಅವಕಾಶ ಇರದು.

ನಾನು ತುಂಬಾ ಶ್ರವಣ ನಡೆಸಿದ್ದೇನೆ. ಮನನ ಮಾಡಿದ್ದೇನೆ. ಆದರೆ ಧ್ಯಾನ ಮಾಡಲಿಕ್ಕೆ ನನ್ನ ಮನಸ್ಸು ಕೇಳುತ್ತಿಲ್ಲ. ಆದ್ದರಿಂದ ಆ ಅಂಶದಲ್ಲಿ ನನಗೆ ರಿಯಾಯಿತಿ ನೀಡಿ ನಿನ್ನ ಸಾಕ್ಷಾತ್ಕಾರವನ್ನು ಒದಗಿಸಿ ಕೊಡಬೇಕು. ಎಂದು ಯಾರಾದರೂ ದೇವರಲ್ಲಿ ಬೇಡಿದರೆ ಅದಕ್ಕೆ ದೇವರಿಂದ ಎಂದೆಂದೂ ರಿಯಾಯಿತಿ ದೊರಕದು. ಅಂದರೆ ಧ್ಯಾನ ಇಲ್ಲದೆಯೇ ಅವನಿಗೆ ಸಾಕ್ಷಾತ್ಕಾರ ಸಿಗದು.

ಹೀಗೆ ಶ್ರುತಿಸ್ಮೃತಿಗಳ ಮೂಲಕ ಹೊರಡಿಸಲಾದ ಭಗವಂತನ ಶಾಸನಗಳಲ್ಲಿ ಎಂದೆಂದೂ ಸ್ವಲ್ಪವೂ ಬದಲಾವಣೆ ಇರದ ಪ್ರಯುಕ್ತ ಹಾಗೂ ಯಾರಿಗೂ ಯಾವ ಅಂಶದಲ್ಲೂ ರಿಯಾಯಿತಿ ದೊರಕದ ಪ್ರಯುಕ್ತ ಅವು ಶ್ರೇಷ್ಠಗಳಾದ ಶಾಸನಗಳೆನಿಸಿರುವುದರಿಂದ ಭಗವಂತ 'ಊರ್ಜಿತಶಾಸನ' ಎಂದು ಸ್ತುತಿಸಲ್ಪಡುವನು.

**೯೧೦. ಶಬ್ದಾತಿಗಃ – ಶಬ್ದಗಳಿಗೆ ಪೂರ್ಣವಾಗಿ ಎಟಕದವನು.**

**ವಿವರಣೆ:** ನಾವು ದೇವರನ್ನು ಹೊಗಳಲಿಕ್ಕೆ ಎಷ್ಟೆಷ್ಟು ಶಬ್ದಗಳನ್ನು ಬಳಸಿದರೂ ಆ ಎಲ್ಲ ಶಬ್ದಗಳಿಂದ ಹೊಗಳಿಸಿಕೊಳ್ಳಲು ಆಗದಷ್ಟು ಗುಣ ಮಹಿಮೆಗಳು ಅವನಲ್ಲಿ ಇವೆ. ಹೊಗಳಿಕೆಯ ಶಬ್ದಗಳನ್ನೆಲ್ಲ ಮೀರುವಷ್ಟು ಗುಣ ಮಹಿಮೆಗಳನ್ನು ಹೊಂದಿರುವವನು ಅವನು. ಕೃಷ್ಣ ಎಂಬ ಶಬ್ದ ಬೇರೆ ಬೇರೆ ಅರ್ಥದಲ್ಲಿ ತೆರೆದುಕೊಂಡರೂ ಇನ್ನೂ ಹೇಳಿ ಮುಗಿಸಲಾಗದಷ್ಟು ಎತ್ತರದವನು ಅವನು. ಬರೇ ಕೃಷ್ಣ ಶಬ್ದಅಲ್ಲ ; ಭೂಮಂಡಲದಲ್ಲಿ ಎಷ್ಟೆಷ್ಟು ಶಬ್ದಗಳಿವೆಯೋ ಆ ಎಲ್ಲಾ ಶಬ್ದಗಳು ಬೇರೆ ಬೇರೆ ಅರ್ಥಗಳ ಹಿನ್ನೆಲೆಯಲ್ಲಿ ಅವನನ್ನು ಹೊಗಳುತ್ತಿದ್ದರೂ ಪೂರ್ಣವಾಗಿ ಆ ಹೊಗಳಿಕೆಗೆ ಪಾತ್ರನಾಗದವನು ಅವನು. ಶಬ್ದಗಳನ್ನೆಲ್ಲ ಮೀರಿ ನಿಂತವನು. ಅಂದರೆ ಪೂರ್ಣವಾಗಿ ಶಬ್ದಗಳಿಗೆ ಎಟಕದವನು.

**'ಶ್ರುತಿತತಿಗಳಿಗಭಿಮಾನಿಲಕ್ಷ್ಮೀಸ್ತುತಿಗಳಿಗೆ ಗೋಚರಿಸದ......'**

ಎಂದು ದಾಸರು ಭಗವಂತನ ಶಬ್ದಾತಿಗತ್ವವನ್ನು ಸ್ಪಷ್ಟಪಡಿಸಿರುವರು. **'ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ'** - ಎಂಬ ಉಪನಿಷತ್ತಿನ ಘೋಷಣೆಯಲ್ಲಿ ಮಾತುಗಳೆಲ್ಲ ಭಗವಂತನನ್ನು ಹೊಗಳಿ ಹೊಗಳಿ ಎಷ್ಟು ಹೊಗಳಿದರೂ ಮತ್ತಷ್ಟು, ಇನ್ನಷ್ಟು ಹೊಗಳಿಸಿಕೊಳ್ಳಲು ಬೇಕಾದ ಗುಣ ಮಹಿಮೆಗಳು ಉಳಿದಿರುವುದನ್ನು ಕಂಡು ಸೋತು ಹಿಂದೆ ಸರಿಯುತ್ತಿವೆ ಎಂದು ಅವನ ಶಬ್ದಾತಿಗತ್ವವನ್ನು ವಿವರಿಸುತ್ತಿದೆ. ಭೀಷ್ಮರು ಎದುರಿಗಿರುವ ಕೃಷ್ಣನನ್ನು ಇಷ್ಟೆಲ್ಲ ನಾಮಗಳಿಂದ ಹೊಗಳುತ್ತ ಬಂದರು. ಆದರೂ ತಮ್ಮ ಹೊಗಳಿಕೆ ಏನೂ ಸಾಲದು ಅಷ್ಟೂ ಎತ್ತರದವನು ಶ್ರೀಕೃಷ್ಣ ಎಂದು 'ಶಬ್ದಾತಿಗಃ' - ಎಂಬ ನಾಮದ ಮೂಲಕ ಸಾರುತ್ತ ತಮ್ಮ 'ಅಹಂಕಾರ ಖಂಡನೆ' ಮಾಡಿಕೊಳ್ಳುತ್ತಿರುವರು.

**೯೧೧. ಶಬ್ದಸಹಃ – * ಭಕ್ತರು ಮಾಡಿದ ಹೊಗಳಿಕೆಯ ಶಬ್ದಗಳನ್ನು ಮೀರಿ ಇರುವವನಾದರೂ ಆ ಶಬ್ದಗಳಿಗೆ ಸ್ಪಂದಿಸುವವನು.**

*** ಮಂತ್ರಗಳ ಜೊತೆಗೆ ಹೊರಡಿಸುವ ಅಪಶಬ್ದಗಳನ್ನು ಸಹಿಸಿಕೊಳ್ಳುವವನು.**

**ವಿವರಣೆ :** 'ಶಬ್ದಾತಿಗಃ'- ಎಂಬ ನಾಮದಲ್ಲಿ ಸೂಚಿತವಾಗಿರುವಂತೆ ಭಗವಂತ ನಮ್ಮ ಹೊಗಳಿಕೆಯ ಎಲ್ಲ ಶಬ್ದಗಳನ್ನೂ ಮೀರಿ ನಿಂತವನಾದರೆ, ಹೊಗಳಿಕೆಯಿಂದ ಅವನನ್ನು ಸಂತೋಷ ಪಡಿಸಲು ಸಾಧ್ಯವೇ ಇಲ್ಲ ; ಯಾಕೆಂದರೆ ಅವನ ಕೆಲಸಗಳಿಗೆ ಅನುಗುಣವಾದ ಹೊಗಳಿಕೆಯ ಶಬ್ದಗಳಿಲ್ಲ ಎಂದರೆ ಅವನು ಅದರಿಂದ ತೃಪ್ತಿ ಪಡಲಾರ. ಲೋಕದಲ್ಲಿ ಒಬ್ಬ ವ್ಯಕ್ತಿಯ ಅಭಿನಂದನೆಯ ಸಮಾರಂಭದಲ್ಲಿ ಅಭಿನಂದನ ಭಾಷಣಕ್ಕೆ ತೊಡಗಿದವನೊಬ್ಬ ಆ ವ್ಯಕ್ತಿ ಮಾಡಿದ ಕೆಲಸಗಳನ್ನೆಲ್ಲ ಹೇಳದೆ ಅವನ ಬಗ್ಗೆ ಕೆಲವು ಮಾತುಗಳನ್ನಷ್ಟೇ ಹೇಳಿದನೆಂದರೆ ಅಭಿನಂದಿಸಿಕೊಳ್ಳಬೇಕಾದ ವ್ಯಕ್ತಿಗೂ, ಅವನ ಅಭಿನಂದನೆಯ ವ್ಯವಸ್ಥೆ ನಡೆಸಿದವರಿಗೂ ತೃಪ್ತಿ ಆಗುವುದಿಲ್ಲ. ಅವರು ಅಭಿನಂದನ ಭಾಷಣವನ್ನು ಸಹಿಸುವುದಿಲ್ಲ. ಅದರಂತೆ ದೇವರ ಕಾರ್ಯಗಳನ್ನು ಪೂರ್ಣವಾಗಿ ಶಬ್ದಗಳಿಂದ ಹೇಳಿ ಮುಗಿಸಲಾಗದಿದ್ದರೆ ಶಬ್ದಗಳಿಂದ ಅವನನ್ನು ಸಂತೋಷ ಪಡಿಸುವುದಾದರೂ ಹೇಗೆ ? - ಎಂಬ ಸಂದೇಹ ಬಂದರೆ ಭೀಷ್ಮರು ಅದಕ್ಕೆ ಸಮಾಧಾನ ನೀಡುವರು- 'ಶಬ್ದಸಹಃ' ದೇವರು ಲೌಕಿಕ ವ್ಯಕ್ತಿಗಳಂತೆ ಅಲ್ಲ. ತನ್ನ ಬಗ್ಗೆ ಎಷ್ಟು ಕಡಿಮೆ ಶಬ್ದಗಳಿಂದ ಹೊಗಳಿದರೂ ಅದಕ್ಕೆ ಹಿಗ್ಗುವ ಸ್ವಭಾವ ಅವನದ್ದು. ಕೃಷ್ಣ ಕೃಷ್ಣ ಕೃಷ್ಣ ಎಂದು ಮೂರು ಬಾರಿ ಹೇಳಿದರೆ ... - ಅಷ್ಟರಿಂದಲೇ ತುಂಬ ಸಂತೋಷಪಟ್ಟು ಅವನ ಕಷ್ಟಗಳನ್ನೆಲ್ಲ ಪರಿಹರಿಸುವ ಔದಾರ್ಯ ದೇವರದ್ದು.

**'ಬಾಲಕನ ಕಲಭಾಷೆ ಜನನಿಯು**

**ಕೇಳಿ ಸುಖಪಡುವಂತೆ ಲಕುಮೀ -**

ಲೋಲ ಭಕುತರು ಮಾಡುತಿಹ ಸಂಸ್ತುತಿಗೆ ಹಿಗ್ಗುವನು'. ಎಂದು ದಾಸರು ಸ್ತುತಿಸಿರುವಂತೆ ಭಕ್ತರು ತನ್ನನ್ನು ಎಷ್ಟು ಶಬ್ದಗಳಿಂದ ಸ್ತುತಿಸುವರು ಎಂಬುದನ್ನು ನೋಡದೆ, ಎಷ್ಟು ಭಕ್ತಿಯಿಂದ ಸ್ತುತಿಸುವರು ಎಂಬುದನ್ನಷ್ಟೇ ಪರಿಗಣಿಸಿ ಸ್ತುತಿಯ ಹಿನ್ನೆಲೆಯ ಭಕ್ತಭಾವಕ್ಕೆ ಪ್ರಾಶಸ್ತ್ಯ ಕೊಟ್ಟು ಹಿಗ್ಗುವ ಔದಾರ್ಯ ಭಗವಂತನದ್ದು. ಇದನ್ನೇ 'ಶಬ್ದಸಹಃ'- ಎಂಬ ನಾಮ ಸಾರುತ್ತಿದೆ. ಭಕ್ತರು ಎಷ್ಟೇ ಕಡಿಮ್ಮೆ ಶಬ್ದಗಳಿಂದಲೇ ತನ್ನನ್ನು ಸ್ತುತಿಸಿದರೂ ಆ ಶಬ್ದಗಳ ಹಿನ್ನೆಲೆಯಲ್ಲಿರುವ ಭಕ್ತಿಗೆ ಒಲಿದು ಅವರ ಹೊಗಳಿಕೆಯ ಆ ಶಬ್ದಗಳನ್ನು ಸಹಿಸಿಕೊಳ್ಳುವನು. ಅಂದರೆ ಆ ಶಬ್ದಗಳಿಗೆ ಸಂತೋಷಪಟ್ಟು ಅದಕ್ಕಾಗಿ ಅನುಗ್ರಹಿಸುವನು.

ಇನ್ನೊದು ಅರ್ಥ ನಮ್ಮ ವ್ಯವಹಾರಕ್ಕೆ ಸಂಬಂಧಿಸಿ ನಾವು ಪೂಜೆ ಮಾಡುತ್ತ ಇರುವೆವು. ಏನೋ ಹೆಂಡ್ತಿ ಮಕ್ಕಳ ಮೇಲೆ ಸಿಟ್ಟು ಬಂತೆಂದರೆ ಪೂಜೆಯ ಮಂತ್ರಗಳ ಜೊತೆಗೆ ಹೆಂಡ್ತಿ ಮಕ್ಕಳನ್ನು ಬೈಯುತ್ತಲೂ ಇರುವೆವು. ವಾಸ್ತವವಾಗಿ ಪೂಜೆಯ

ಸಂದರ್ಭದಲ್ಲಿ ‘ನಾಪಭಾಷಿತಂ ವ್ಯೆ’ - ಎಂದು ವಿಧಿ ಎಚ್ಚರಿಸಿರುವಂತೆ ಬೈಗುಳದ ಕೆಟ್ಟ ಮಾತು ಬಾಯಿಯಿಂದ ಬರಬಾರದು. ಆದರೂ ಬೈಗುಳ ಮಾತುಗಳು ಮಿತಿ ಮೀರಿ ಬರುತ್ತಿವೆ ಎಂದರೆ ಭಕ್ತವತ್ಸಲನಾದ ಭಗವಂತ ಆ ಮಾತುಗಳನ್ನು ಸಹಿಸಿಕೊಳ್ಳುವನು. ಏನೋ ಅಸುರೀಶಕ್ತಿಗಳ ಆಕ್ರಮಣದಿಂದಾಗಿ ಕ್ರೋಧಾವೇಶಕ್ಕೊಳಗಾಗಿರುವುದರಿಂದ ಹೀಗೆ ಅಪಶಬ್ದಗಳು ಬರುತ್ತಿವೆ ಎಂದು ಭಗವಂತ ಅವುಗಳನ್ನು ಗಣನೆಗೆ ತೆಗೆದುಕೊಳ್ಳದೆ ತನ್ನ ಸ್ತುತಿರೂಪದಲ್ಲಿರುವ ಮಂತ್ರಗಳನ್ನಷ್ಟೇ ಕೇಳಿಸಿಕೊಂಡು ಅವುಗಳಿಗಾಗಿ ಸಂತೋಷ ಪಡುವನು.

ಭಗವಂತನ ಭಕ್ತವಾತ್ಸಲ್ಯದ ಪರಿಣಾಮವಾಗಿ ಅವನಲ್ಲಿ ಮೂಡಿರುವ ಈ ಬಗೆಯ ‘ಶಬ್ದಸಹತ್ವ’ ಗುಣವನ್ನು ಉಪಾಸನೆ ಮಾಡಿದಲ್ಲಿ ನಮಗೆ ಹೊರಗಿನಿಂದ ಎಷ್ಟು ಶಬ್ದಗಳು ಕೇಳಿಸುತ್ತಿದ್ದರೂ ಮಾನಸಿಕ ಏಕಾಗ್ರತೆಗೆ ಭಂಗ ಬಾರದಂತೆ ಜಪ, ಧ್ಯಾನಾದಿಗಳನ್ನು ನಡೆಸಲು ಬೇಕಾದ ಸಾಮರ್ಥ್ಯ ಸಿದ್ಧಿಸುವುದು.

**೯೧೨. ಶಿಶಿರಃ – ಭಕ್ತರ ಕರೆಗೆ ಓಗೊಟ್ಟು ಓಡೋಡಿ ಬರುವವನು.**

**ವಿವರಣೆ :** ಮಾಘ ಮತ್ತು ಫಾಲ್ಗುನ ಮಾಸಗಳಿಂದ ಕೂಡಿದ ಋತುವಿಗೆ **ಶಿಶಿರ** ಋತು ಎಂದು ಹೆಸರು. ಸಾಮಾನ್ಯವಾಗಿ ಫೆಬ್ರುವರಿ ಮತ್ತು ಮಾರ್ಚ್ ತಿಂಗಳುಗಳ ಅವಧಿ. ಈ ಋತುವಿಗೆ ಶಿಶಿರ ಎಂಬ ಹೆಸರು ಯಾಕೆ ಬಂತು ? ಶಶಂತಿ ಜನಾಃ ಅತ್ರೇತಿ ಶಿಶಿರಃ - ಜನರು ಈ ಋತುವಿನಲ್ಲಿ ವಿಶೇಷವಾಗಿ ಓಡಾಡುತ್ತಿರುತ್ತಾರೆ. ಚಳಿ, ಮಳೆಗಳ ಹಾವಳಿ ಇಲ್ಲದೆ ಓಡಾಡಲು ಅನುಕೂಲವಾದ ಕಾಲವಾದುದರಿಂದ ಈ ಅವಧಿಯಲ್ಲಿ ಜನರ ಓಡಾಟ ಹೆಚ್ಚು. ಆದುದರಿಂದ ಈ ಋತು ಅನ್ವರ್ಥವಾಗಿ ಶಿಶಿರ ಎನಿಸುವುದು.

ಭಗವಂತನಾದರೂ ಭಕ್ತರ ಕರೆಗೆ ಓಗೊಟ್ಟು ಓಡಿ ಬರುವವನಾದುದರಿಂದ ಶಿಶಿರ ಎನಿಸುವನು. ಭಕ್ತರು ಎಷ್ಟು ಕಾಳಜಿಯಿಂದ ತನ್ನನ್ನು ಪ್ರಾರ್ಥಿಸುವರೋ ಅಷ್ಟೇ ಕಾಳಜಿಯಿಂದ ಅದಕ್ಕೆ ಸ್ಪಂದಿಸುವನು. ಗಜೇಂದ್ರ ಕರೆದಾಗ ಓಡಿ ಬಂದ. ಧ್ರುವ ಮೊರೆಯಿಟ್ಟಾಗ ಕೂಡಲೇ ಸ್ಪಂದಿಸಿದ. ಪ್ರಹ್ಲಾದ ಬೇಡಿಕೊಂಡಾಗ ಯಾವ ರೂಪ ಎಂದಿಲ್ಲದೆ, ಅಂದರೆ ಪೂರ್ಣ ಮನುಷ್ಯನೂ ಅಲ್ಲ; ಪೂರ್ಣ ಸಿಂಹನೂ ಅಲ್ಲ ಅಂತಹ ವಿಚಿತ್ರ ರೂಪ ತೊಟ್ಟು ಓಡೋಡಿ ಬಂದ. ಹೀಗೆ ಭಕ್ತರ ಪ್ರಾರ್ಥನೆಯ ಕಾಳಜಿಗೆ ಅನುಗುಣವಾದ ಕಾಳಜಿಯ ಪ್ರತಿಕ್ರಿಯೆ ಭಗವಂತನದ್ದು.

ಭೀಷ್ಮರು ತಮ್ಮ ಜೀವನದ ಘಟನೆಯನ್ನೂ ಮೆಲುಕು ಹಾಕುವರು. ನನ್ನ ಮಾತನ್ನು ಉಳಿಸುವುದಕ್ಕಾಗಿ ಆಚೀಚೆ ನೋಡದೆ ತಾನು ಮಹಾಭಾರತ ಯುದ್ಧದಲ್ಲಿ

ನಿರಾಯುಧನಾಗಿ ಪಾಲ್ಗೊಳ್ಳುವೆನೆಂದು ಪ್ರತಿಜ್ಞೆ ಮಾಡಿದ್ದರ ವಿರುದ್ಧವಾಗಿ ನಡೆದುಕೊಂಡರೆ ಯಾರು ಆಕ್ಷೇಪಿಸುವರೋ ಎಂಬುದರ ಬಗ್ಗೆ ಏನೂ ಯೋಚಿಸದೆ ನನ್ನನ್ನೇ ಕಾಣುತ್ತ ನನ್ನೆಡೆಗೆ ಚಕ್ರಧಾರಿಯಾಗಿ ಧಾವಿಸಿ ಬಂದಿದ್ದ. ನಾನು ಪ್ರತಿಜ್ಞೆ ಮಾಡುವಾಗ ಕೃಷ್ಣನನ್ನೇ ದೃಷ್ಟಿಯಲ್ಲಿ ಇಟ್ಟುಕೊಂಡಿದ್ದೆ. ಕೃಷ್ಣನೂ ನನ್ನನ್ನೇ ದೃಷ್ಟಿಯಲ್ಲಿಟ್ಟುಕೊಂಡು ನನ್ನ ಮಾತನ್ನು ಈಡೇರಿಸುವುದರಲ್ಲಿ ಮುಳುಗಿದ್ದ.

ಹೀಗೆ ಭಕ್ತರು ತನ್ನ ಬಗ್ಗೆ ತಾಳುವ ಕಾಳಜಿಗೆ ಅನುಗುಣವಾದ ಕಾಳಜಿಯಿಂದ ಸ್ಪಂದಿಸುವವನು 'ಶಿಶಿರ'

**೯೧೩. ಶರ್ವರೀಕರಃ – * ರಾತ್ರಿಯನ್ನು ಉಂಟು ಮಾಡುವವನು.**

*** ಸ್ತ್ರೀಯಿಂದ ಪುರುಷನಿಗೆ ಪುರುಷನಿಂದ ಸ್ತ್ರೀಗೆ ಸುಖ ದೊರಕುವಂತೆ ಮಾಡುವವನು.**

**ವಿವರಣೆ :** ಶರ್ವರೀ ಎಂದರೆ ರಾತ್ರಿ. ಸೂರ್ಯನನ್ನು ಮುಳುಗುವಂತೆ ಮಾಡಿ ರಾತ್ರಿಯನ್ನು ಉಂಟು ಮಾಡುವವನೆಂಬುದು 'ಶರ್ವರೀಕರಃ' - ಎಂಬ ನಾಮದ ಒಂದು ಪ್ರಸಿದ್ಧಾರ್ಥ.

ಇದರ ಜೊತೆಗೆ ಮತ್ತೊಂದು ಅರ್ಥ - ಶರ್ವರೀ ಎಂದರೆ ಹೆಣ್ಣು. ಶರ್ವರ್ಯಾ - ಅಂತಹ ಹೆಣ್ಣಿನಿಂದ ಗಂಡುವಿಗೆ ಕಂ - ಸುಖಂ ರಾತಿ - ಕೊಡುವವನು. ಹೆಣ್ಣಿನಿಂದ ಗಂಡಿಗೆ ಸುಖ ದೊರಕುವಂತೆ ಮಾಡುವವನು.

ಶರ್ವರೀ ಎಂಬ ಹೆಸರು ಯಾಕೆ ಸ್ತ್ರೀಗೆ ? ರಾತ್ರಿಯಾದರೂ ಯಾಕೆ ಶರ್ವರೀ ಎನಿಸುವುದು ? 'ಶೃ ಹಿಂಸಾಯಾಮ್'- ಎಂಬ ಕ್ರಿಯಾಪದದಿಂದ ನಿಷ್ಪನ್ನವಾಗುವ ಶರ್ವರೀ ಶಬ್ದವು ಮನುಷ್ಯನ ಚಟುವಟಿಕೆಗಳನ್ನೆಲ್ಲ ಸ್ತಬ್ಧಗೊಳಿಸುವ ರಾತ್ರಿಯ ಧರ್ಮವನ್ನು ತಿಳಿಸುವುದು. ಹಗಲು ತುಂಬ ಓಡಾಡಿಕೊಂಡಿರುವವರು ರಾತ್ರಿ ಆಯಿತೆಂದರೆ ತಮ್ಮ ಓಡಾಟ, ಚಟುವಟಿಕೆಗಳನ್ನೆಲ್ಲ ನಿಲ್ಲಿಸಿ ವಿಶ್ರಾಂತಿ ತೆಗೆದುಕೊಳ್ಳುವರು. ಇದಕ್ಕೆ ಪ್ರಯೋಜಕವಾಗಿರುವುದರಿಂದಲೇ ರಾತ್ರಿ ಶರ್ವರೀ ಎನಿಸಿದೆ.

ಸ್ತ್ರೀಯೂ ಹಾಗೆಯೇ. ಅದುವರೆಗೆ ತನಗಿಷ್ಟ ಬಂದಂತೆ ನಡೆದುಕೊಳ್ಳುತ್ತಿದ್ದ ಗಂಡು ಸ್ತ್ರೀಯ ಜೊತೆಗೆ ವಿವಾಹ ಆದನೆಂದರೆ ತನ್ನ ಸ್ವಚ್ಛಂದದ ಚಟುವಟಿಕೆಗಳನ್ನೆಲ್ಲ ಸ್ಥಗಿತಗೊಳಿಸುವನು. ಎಷ್ಟೋ ಗಂಡುಗಳ ಬದುಕಿನಲ್ಲಿ ಇಂತಹ ತಿರುವು ಸಂಭವಿಸುವುದು.

ಪೂರಾ ಲೌಕಿಕವಾಗಿ ನೋಡುವುದಾದರೆ ಮದುವೆಯಾಗುವವರೆಗೆ ತನ್ನ ಬಟ್ಟೆ ಒಗೆಯುವುದೇ ಮುಂತಾದ ಚಟುವಟಿಕೆಗಳನ್ನೆಲ್ಲ ತಾನೇ ನಡೆಸುತ್ತಿದ್ದ ಗಂಡುವಿನ ಆ ಎಲ್ಲಾ ಚಟುವಟಿಗಳನ್ನು ಮದುವೆಯಾದ ಮೇಲೆ ಹೆಂಡತಿ ನಡೆಸುವಳಾದುದರಿಂದ ಅವನ ಆ ಚಟುವಟಿಕೆಗಳೆಲ್ಲ ಸ್ಥಗಿತಗೊಳ್ಳುವುದು. ಇದಕ್ಕೆ ಪ್ರಯೋಜಕಳಾಗಿರುವುದರಿಂದ ಸ್ತ್ರೀ 'ಶರ್ವರೀ' ಎನಿಸುವಳು.

ಹೀಗೆ ಶರ್ವರೀ ಎನಿಸುವ ಸ್ತ್ರೀಯಿಂದ ಪುರುಷನಿಗೆ ಸುಖ ದೊರಕುವಂತೆ ಮಾಡುವುದರಿಂದ ಭಗವಂತ 'ಶರ್ವರೀಕರ'. ಪುರುಷ ಶಬ್ದ ಗಂಡಸರನ್ನು ತಿಳಿಸುವಂತೆ ಸ್ತ್ರೀಯರನ್ನೂ ಹೇಗೆ ತಿಳಿಸುವುದೋ ಹಾಗೆಯೇ ಶರ್ವರೀಶಬ್ದ ಸ್ತ್ರೀಯರ ಚಟುವಟಿಕೆಗಳನ್ನು ಸ್ಥಗಿತಗೊಳಿಸುವುದರಿಂದ ಗಂಡಸರನ್ನೂ ತಿಳಿಸಬಲ್ಲದು. ಆದ್ದರಿಂದ 'ಶರ್ವರೀಕರ' ನಾಮವು ಸ್ತ್ರೀ ಪುರುಷನಿಂದ, ಪುರುಷ ಸ್ತ್ರೀಯಿಂದ ಸುಖ ಪಡೆದು ಸತಿಪತಿಯರು ಅನ್ಯೋನ್ಯತೆಯಿಂದ ಸಂತೋಷವಾಗಿ ಇರುವಂತೆ ಮಾಡುವವನೆಂಬ ಅರ್ಥವನ್ನು ಹೊರಡಿಸಬಲ್ಲದು.

**ಅಕ್ರೂರಃ ಪೇಶಲೋ ದಕ್ಷೋ ದಕ್ಷಿಣಃ ಕ್ಷಮಿಣಾಂ ವರಃ |**
**ವಿದ್ವತ್ತಮೋ ವೀತಭಯಃ ಪುಣ್ಯಶ್ರವಣಕೀರ್ತನಃ ||೯೮||**

**೯೧೪. ಅಕ್ರೂರಃ – ಕ್ರೂರನಾಗಿ ನಡೆದುಕೊಳ್ಳದವನು.**

**ವಿವರಣೆ :** ಕ್ರೂರ ಎಂದರೆ ಹಿಂಸಾತ್ಮಕವಾಗಿ ನಡೆದುಕೊಳ್ಳುವವನು. ಭಗವಂತ ಎಂದೂ ಆ ರೀತಿಯಾಗಿ ಅಂದರೆ ಹಿಂಸಾತ್ಮಕವಾಗಿ ನಡೆದುಕೊಳ್ಳುವವನಲ್ಲ. ಆದುದರಿಂದ ಅಕ್ರೂರ.

ಭೀಷ್ಮರು ತಮ್ಮ ಅನುಭವದ ಹಿನ್ನೆಲೆಯಲ್ಲಿ ಹೀಗೆ ಮೆಲುಕು ಹಾಕುವರು- ಕೃಷ್ಣ ತನ್ನನ್ನು ಬಂಧಿಸಲು ಯತ್ನಿಸಿದ್ದ ದುರ್ಯೋಧನಾದಿಗಳ ವಿರುದ್ಧವಾಗಿ ಎಷ್ಟು ಕ್ರೌರ್ಯದಿಂದಲೂ ನಡೆದುಕೊಳ್ಳಬಹುದಿತ್ತು. ಆದರೆ ಕೃಷ್ಣ ಸಮಾಧಾನದಿಂದಲೇ, ಅಕ್ರೂರನಾಗಿಯೇ ನಡೆದುಕೊಂಡಿದ್ದ.

ಭೀಷ್ಮರು ದುರ್ಯೋಧನನ ಪಕ್ಷದವರೆಂದು ಅವರ ವಿರುದ್ಧವಾಗಿಯೂ ತುಂಬ ಕ್ರೂರನಾಗಿ ವರ್ತಿಸಬಹುದಿತ್ತು. ಆದರೆ ಭೀಷ್ಮರ ಆಂತರ್ಯವನ್ನು ಗುರುತಿಸಿ ಅವರ ಜೊತೆಗೆ ಅಕ್ರೂರನಾಗಿಯೇ ನಡೆದುಕೊಂಡಿದ್ದ.

**೯೧೫. ಪೇಶಲಃ – ಸುಂದರನಾಗಿರುವವನು.**

**ವಿವರಣೆ:** ಪೇಶಲ ಎಂದರೆ ಸುಂದರ. ಕೃಷ್ಣನಿಗೆ ವಿಷ್ಣುಸಸಹಸ್ರನಾಮದ ಉಪದೇಶ

ನಡೆಯುತ್ತಿರುವ ಸಂದರ್ಭದಲ್ಲಿ ಎಪ್ಪತ್ತಕ್ಕಿಂತಲೂ ಅಧಿಕ ವಯಸ್ಸಾಗಿದೆ. ಆಗಲೂ ಭೀಷ್ಮರು ಕೃಷ್ಣನನ್ನು ನೋಡುತ್ತ 'ಪೇಶಲಃ' ಸುಂದರನಾಗಿರುವವನು ಎಂದು ಸ್ತುತಿಸುತ್ತಿರುವರು.

ಪೇಶಲ ಶಬ್ದಕ್ಕೆ ದಕ್ಷ, ಸಮರ್ಥ ಎಂಬ ಮತ್ತೊಂದು ಅರ್ಥ ಇದೆ. ಅದನ್ನು ಮುಂದೆ ಬರು ದಕ್ಷನಾಮದ ಅರ್ಥಚಿಂತನೆ ನಡೆಸುವಾಗ ನೋಡೋಣ.

**೯೧೬. ದಕ್ಷಃ – * ಅತಿಸಮರ್ಥನಾಗಿರುವವನು.**

*** ಮತ್ಸ್ಯಾವತಾರಾದಿಗಳಲ್ಲಿ ಶೀಘ್ರವಾದ ಬೆಳವಣಿಗೆಯನ್ನು ಪಡೆದಿರುವವನು.**

**ವಿವರಣೆ :** ಸಮರ್ಥ ಎಂಬ ಅರ್ಥದಲ್ಲಿ ದಕ್ಷ ಶಬ್ದ ಪ್ರಸಿದ್ಧ . ಕರ್ತುಂ ಅಕರ್ತುಂ ಅನ್ಯಥಾಕರ್ತುಂ ಚ ಸಮರ್ಥನಾಗಿರುವ ಅಂದರೆ ಯಾವುದನ್ನು ಬೇಕಾದರೂ ಮಾಡಲು, ಉಳಿದವರ ದೃಷ್ಟಿಯಲ್ಲಿ ಮಾಡಲೇಬೇಕಾದದ್ದನ್ನು ಮಾಡದೆ ಇರುವುದಕ್ಕೂ, ಲೋಕದ ದೃಷ್ಟಿಯಿಂದ ಒಂದು ರೀತಿಯಿಂದ ಮಾಡಬೇಕಾದದ್ದನ್ನು ಮತ್ತೊಂದು ರೀತಿಯಿಂದ ಮಾಡುವುದಕ್ಕೂ ಸಮರ್ಥನಾಗಿರುವುದರಿಂದ ದೇವರು ಸಮರ್ಥ ಎಂಬ ಅರ್ಥದಲ್ಲಿ ಅತಿಮುಖ್ಯವಾಗಿ ದಕ್ಷ ಎನಿಸಲು ಅರ್ಹರಾಗಿರುವವನು.

ಇದರ ಜೊತೆಗೆ ಮತ್ತೊಂದು ಅರ್ಥವನ್ನೂ ಚಿಂತನೆ ಮಾಡಬಹುದು. 'ದಕ್ಷ ಶೈಘ್ರ್ಯಾರ್ಥೇ' - ಎಂಬ ಕ್ರಿಯಾಪದದಿಂದ ನಿಷ್ಪನ್ನವಾದ ದಕ್ಷಶಬ್ದ ಶೀಘ್ರವಾಗಿ, ಬೇಗವಾಗಿ ಬೆಳವಣಿಗೆ ಹೊಂದುವವನೆಂಬ ಅರ್ಥವನ್ನೂ ಹೊರಡಿಸಬಲ್ಲದು.

ಭಗವಂತ ಮತ್ಸ್ಯಾವತಾರದಲ್ಲಿ ಸತ್ಯವ್ರತ ಕಾಣುತ್ತಿದ್ದಂತೆಯೇ ಶೀಘ್ರವಾಗಿ ಬೆಳೆದವನು.

ವಾಮನಾವತಾರದಲ್ಲಿ ಬಲಿ ಕಾಣುತ್ತಿದ್ದಂತೆಯೇ ತ್ರಿವಿಕ್ರಮನಾಗಿ ಕೂಡಲೇ ಬೆಳೆದವನು.

ಕೃಷ್ಣಾವತಾರದಲ್ಲೂ ಅರ್ಜುನ ಕಾಣುತ್ತಿದ್ದಂತೆಯೇ ವಿಶ್ವರೂಪಿಯಾಗಿ ಬೆಳೆದವನು.

ಹೀಗೆ ಶೀಘ್ರವಾದ ಬೆಳವಣಿಗೆ ಉಳ್ಳವನಾಗಿರುವುದರಿಂದಲೂ ಭಗವಂತ ದಕ್ಷ ಎನಿಸುವನು.

ಈ ಅರ್ಥಾನುಸಂಧಾನದ ಹಿನ್ನೆಲೆಯಲ್ಲಿ ಭಗವಂತನನ್ನು ದಕ್ಷನಾಮದಿಂದ ಉಪಾಸನೆ ನಡೆಸಿದರೆ ಶೀಘ್ರವಾಗಿ ದೈಹಿಕವಾಗಿಯೂ ಬೌದ್ಧಿಕವಾಗಿಯೂ ಹೀಗೆ

ಎರಡು ಬಗೆಯ ಬೆಳವಣಿಗೆಯನ್ನೂ ಪಡೆದುಕೊಳ್ಳಬಹುದು. ಶ್ರೀಕೃಷ್ಣನ ಪುತ್ರ ಪ್ರದ್ಯುಮ್ನ ತನ್ನ ಪತ್ನಿ ರತಿಯ ರಸಾಯನಾದಿ ಉಪಚಾರಗಳಿಂದಾಗಿ ನಾಲ್ಕು ತಿಂಗಳಿನವನು ಇಪ್ಪತ್ನಾಲ್ಕು ವರ್ಷ ವಯಸ್ಸಿನವನಂತೆ ಹೇಗೆ ಶೀಘ್ರವಾಗಿ ಬೆಳೆದನೋ ಹಾಗೆ ಶೀಘ್ರ ಬೆಳವಣಿಗೆಯನ್ನು ಹೊಂದಬಹುದಾಗಿದೆ.

**೯೧೭. ದಕ್ಷಿಣಃ – ಪ್ರತಿಯೊಬ್ಬರ ಬಲಭಾಗದಲ್ಲಿದ್ದು ಬಲಪ್ರದನಾಗಿರುವವನು.**

**ವಿವರಣೆ :** ದಕ್ಷಿಣ ದಿಕ್ಕಿಗೆ ದಕ್ಷಿಣಾ ಎಂಬ ಹೆಸರಿದೆ. ಬಲಕೈಯನ್ನು ದಕ್ಷಿಣಹಸ್ತ ಎಂದೂ, ಎಡಹಸ್ತವನ್ನು ವಾಮಹಸ್ತ ಎಂದೂ ಕರೆಯುವುದಿದೆ. ಹಾಗಾದರೆ ಬಲಪಾರ್ಶ್ವ ದಕ್ಷಿಣ ಎನಿಸುವುದು. ಯಾಕೆ ಬಲ ಬದಿಗೆ ದಕ್ಷಿಣ ಎಂಬ ಹೆಸರು ? ಸಾಮಾನ್ಯವಾಗಿ ಯಾವುದೇ ಧಾರ್ಮಿಕ ಕಾರ್ಯಕ್ರಮ ನಡೆಸುವಾಗ ಪೂರ್ವಾಭಿಮುಖವಾಗಿ ಕುಳಿತುಕೊಳ್ಳಬೇಕಾದುದು. ಅದು ಆಗದಿದ್ದರಷ್ಟೇ ಉತ್ತರಾಭಿಮುಖವಾಗಿ. ಪೂರ್ವಾಭಿಮುಖವಾಗಿ ಕುಳಿತುಕೊಂಡಾಗ ಬಲಭಾಗ ದಕ್ಷಿಣ ದಿಕ್ಕಿಗೆ ಅಭಿಮುಖವಾಗುವುದು. ಆದುದರಿಂದ ಬಲಭಾಗ ದಕ್ಷಿಣ ಎಂದೇ ವ್ಯವಹರಿಸಲ್ಪಡುವುದು.

ಯಾವಾಗಲೂ ದೊಡ್ಡವರ ಬದಿ ಬಲಬದಿ. ಆದುದರಿಂದ ಪತ್ನಿಯಾದವಳು ಪತಿಯ ಎಡಬಾಗದಲ್ಲಿ ಕುಳಿತುಕೊಳ್ಳಬೇಕು ಎಂದು ಬಂದಿರುವಂತಹದ್ದು. ಬರೇ ಪತ್ನಿ ಅಲ್ಲ, ಪ್ರತಿಯೊಬ್ಬ ಕಿರಿಯರೂ ಹಿರಿಯರ ಎಡದ ಬದಿಯಲ್ಲಿದ್ದು ದೊಡ್ಡವರು ತಮಗಿಂತ ಬಲಮಗ್ಗುಲಲ್ಲಿ ಇರುವಂತೆ ಕುಳಿತುಕೊಳ್ಳಬೇಕು. ಆದುದರಿಂದ ಎಲ್ಲರಿಗಿಂತ ಹಿರಿಯನಾಗಿರುವ ದೇವರಿಗೆ ಯಾವಾಗಲೂ ಉಳಿದೆಲ್ಲ ದೇವತೆಗಳಿಗಿಂತ, ನಮಗಿಂತ ಬಲಮಗ್ಗುಲನ್ನೇ ನೀಡಬೇಕಾದದ್ದು. ಆದ್ದರಿಂದ ಬಲಬದಿಯನ್ನು ತಿಳಿಸುವ ದಕ್ಷಿಣ ಶಬ್ದದಿಂದಲೇ ಕರೆಸಿಕೊಳ್ಳಲ್ಪಡುವವನು. ಹೀಗೆ ಎಲ್ಲರ ಬಲಬದಿಯಲ್ಲೇ ಕುಳ್ಳಿರಿಸಿಕೊಳ್ಳಲು ಅರ್ಹನಾಗಿರುವುದರಿಂದ ಭಗವಂತ ದಕ್ಷಿಣ ಎನಿಸುವನು.

ಪರಿವಾರ ಸಹಿತವಾಗಿ ದೇವರ ಚಿಂತನೆ ನಡೆಸುವಾಗ ದೇವರನ್ನು ಬಲಮಗ್ಗುಲಲ್ಲೂ, ಉಳಿದ ಪರಿವಾರದ ದೇವತೆಗಳನ್ನು ಎಡಮಗ್ಗುಲಲಲ್ಲೂ ಧ್ಯಾನಿಸಬೇಕು.

ನಾವು ದೇವರನ್ನು ಒಳಗೆ ಹೇಗೋ ಹಾಗೆ ಹೊರಗೂ ಕರೆದುಕೊಂಡೇ ಹೋಗಬೇಕು.

'ಅಗ್ರತಃ ಪೃಷ್ಠತಶ್ಚೈವ ಪಾರ್ಶ್ವತಶ್ಚ ಮಹಾಬಲೌ
ಆಕರ್ಣಪೂರ್ಣಧನ್ವಾನೌ ರಕ್ಷೇತಾಂ ರಾಮಲಕ್ಷ್ಮಣೌ' ಎಂದಿರುವಂತೆ ರಾಮಲಕ್ಷ್ಮಣರು ಬಿಲ್ಲನ್ನು ಹಿಡಿದುಕೊಂಡು ನಮ್ಮ ಎದುರು, ಹಿಂದೆ, ಹಾಗೂ ಅಕಡೆ ಈ ಕಡೆ ರಕ್ಷಣೆ ನೀಡುತ್ತಿರುವರು ಎಂಬ ಅನುಸಂಧಾನವನ್ನು ತಂದುಕೊಳ್ಳಬೇಕು.

ಈ ಪ್ರಾರ್ಥನೆಯ ಹಿನ್ನೆಲೆಯಲ್ಲಿ ಒಂದು ಕಥೆಯೇ ಇದೆ. ಒಬ್ಬ ಧನಿಕ ಅಂಗಡಿಯಿಂದ ದುಡ್ಡಿನ ಚೀಲ ಹಿಡಿದುಕೊಂಡು ಹೊರಡುತ್ತಿದ್ದನಂತೆ. ಅಂಗಡಿಯಿಂದ ಒಬ್ಬನೇ ಹೊರಟಿದ್ದಾನೆ. ದಾರಿಯಲ್ಲಿ ಅವನನ್ನು ಆಕ್ರಮಿಸಬೇಕು ಎಂದು ಒಬ್ಬ ಕಳ್ಳ ಹಿಂಬಾಲಿಸುವನು. ಆದರೆ ಅಂಗಡಿಯಿಂದ ಒಬ್ಬನಾಗಿ ಹೊರಟ ಆ ಧನಿಕನ ನಾಲ್ಕು ಪಾರ್ಶ್ವಗಳಲ್ಲೂ ಯಾರೋ ಇರುವುದು ಕಳ್ಳನಿಗೆ ಕಾಣಿಸುವುದು. ಧನಿಕ ಮನೆಗೆ ತಲುಪುವವರೆಗೂ ಅವನ ಜೊತೆಗೆ ಇದ್ದು, ಅವನು ಮನೆಗೆ ತಲುಪಿದನೆಂದಾಗ ಮತ್ತೆ ಅವರು ಕಾಣಿಸುವುದಿಲ್ಲ. ಈ ಆಶ್ಚರ್ಯವನ್ನು ಕಂಡು ಕಳ್ಳ ಒಂದು ದಿನ ಆ ಧನಿಕನಲ್ಲಿ ಈ ಬಗ್ಗೆ ವಿಚಾರಿಸಿಯೇ ಬಿಡುವನು - ನೀವು ಅಂಗಡಿಯಿಂದ ಹೊರಟಾಕ್ಷಣ ನಿಮ್ಮ ಜೊತೆಗೆ ಇಬ್ಬರು ಬರುವರು. ನೀವು ಮನೆಯನ್ನು ತಲುಪುವವರೆಗೂ ನಿಮ್ಮ ಜೊತೆಗಿದ್ದು ಮತ್ತೆ ಹೊರಟು ಹೋಗವರು. ಅವರು ಯಾರು ? - ಎಂದು.

ಅವನು ಕೇಳಿದಾಕ್ಷಣ ಆ ಧನಿಕ ಹಣದ ಚೀಲವನ್ನು ಎಸೆದು ಆ ಕಳ್ಳನ ಕಾಲಿಗೆ ಅಡ್ಡ ಬೀಳುವನಂತೆ. ನಾನು ಪ್ರತಿನಿತ್ಯ ಹೊರಡುವಾಗ 'ಅಗ್ರತಃ ಪೃಷ್ಠತಶ್ಚೈವ....' ಎಂದು ನಡೆಸುವ ಪ್ರಾರ್ಥನೆಗೆ ಸ್ಪಂದಿಸಿ ರಾಮಲಕ್ಷ್ಮಣರು ನನ್ನ ಜೊತೆಗೇ ಬಂದು ನನಗೆ ರಕ್ಷಣೆ ನೀಡುವರು. ಅವರನ್ನು ಕಾಣುವ ಸೌಭಾಗ್ಯ ನನ್ನ ಪಾಲಿಗೆ ದೊರಕಲಿಲ್ಲ. ಆದರೆ ನಿನಗೆ ದೊರಕಿತು. ಆದ್ದರಿಂದ ರಾಮಲಕ್ಷ್ಮಣರನ್ನು ಕಂಡ ನೀನು ಧನ್ಯ ಎಂದು ಉದ್ಗರಿಸುವರಂತೆ. ಆ ಧನಿಕ ಮತ್ತಾರೂ ಅಲ್ಲ ಯಾದಪ್ಪಯ್ಯ. ಅವರೇ ಮುಂದೆ ಯಾದವಾರ್ಯರೆಂದು ಟಿಪ್ಪಣಿಕಾರರಾಗಿ ಮೆರೆದವರು.

ಹೀಗೆ ರಾಮಲಕ್ಷ್ಮಣರು ಆ ಧನಿಕನ ಜೊತೆಗೆ ಮಾತ್ರವಲ್ಲ, ನಾವೂ ಭಕ್ತಿಯಿಂದ ಆ ಶ್ಲೋಕವನ್ನು ಪಠಿಸಿ ಪ್ರಾರ್ಥಿಸಿದೆವೆಂದರೆ ನಮಗೂ ರಕ್ಷಕರಾಗಿ ನಮ್ಮ ಜೊತೆಗೇ ಬರುವರು. ಆಗ ನಮ್ಮ ಅನುಸಂಧಾನ - ರಾಮಲಕ್ಷ್ಮಣರಲ್ಲಿ ರಾಮ ಬಲಮಗ್ಗುಲಲ್ಲಿ ಇರುವನೆಂದು ಇರಬೇಕು.

ಹೀಗೆ ಭಗವಂತ ಭಕ್ತರ ಬಲವುಗ್ಗುಲಲ್ಲಿದ್ದುಕೊಂಡು ಅವರಿಗೆ ಬಲಪ್ರದನಾಗಿರುವುದರಿಂದ 'ದಕ್ಷಿಣ' ಎನಿಸುವನು.

**೯೧೮. ಕ್ಷಮಿಣಾಂ ವರಃ – ತಾಳ್ಮೆ ಉಳ್ಳವರಲ್ಲೆಲ್ಲ ಶ್ರೇಷ್ಠನಾಗಿರುವವನು.**

**ವಿವರಣೆ:** ಕ್ಷಮಿಣಾಂ ಅಂದರೆ ಕ್ಷಮೆವುಳ್ಳವರಲ್ಲಿ ವರ ಅಂದರೆ ಶ್ರೇಷ್ಠನಾಗಿರುವವನು. ಬಲವುಳ್ಳವರು ಸಾಮಾನ್ಯವಾಗಿ ತಮ್ಮ ಬಲದ ಪ್ರದರ್ಶನವನ್ನು ಉಳಿದವರಲ್ಲಿ ಮಾಡುವುದಿದೆ. ಆದರೆ ದೇವರು ಎಷ್ಟೇ ಬಲಿಷ್ಠನಾದರೂ ತಾಳುವನೇ ಹೊರತು ಬಲ ಪ್ರದರ್ಶನಕ್ಕೆ ತೊಡಗುವುದಿಲ್ಲ. ಭಾರೀ ಕ್ಷಮೆಯನ್ನು , ಸಹನೆಯನ್ನು ಹೊಂದಿರುವವನು ಭಗವಂತನು. ಆದುದರಿಂದಲೇ ನಾವು ದೇವರಲ್ಲಿ ನಮಗೆ ಕ್ಷಮೆ ನೀಡೆಂದು ಪ್ರಾರ್ಥಿಸುವೆವು.

ವೇದವ್ಯಾಸರ ಬ್ರಹ್ಮಸೂತ್ರಗಳನ್ನು ತಪ್ಪಾಗಿ ಭ್ರಮಿಸಿದ ಒಬ್ಬರು ತಾವು ತಪ್ಪಾಗಿ ತಿಳಿದುಕೊಂಡ ಅರ್ಥವನ್ನೇ ಬ್ರಹ್ಮಸೂತ್ರಗಳ ನಿಜವಾದ ಅರ್ಥ ಎಂದು ಬರೆದೇ ಬಿಟ್ಟರಂತೆ. ದೇವರು ದೊಡ್ಡವನೆಂಬ ಪ್ರಮೇಯವನ್ನು ಕೇಂದ್ರೀಕರಿಸಿ ವೇದವ್ಯಾಸರು ಸೂತ್ರಗಳನ್ನು ರಚಿಸಿದ್ದಾರೆ. ಜೀವನೇ ಬ್ರಹ್ಮ ಎಂಬ ಭ್ರಾಂತಿ ಉಂಟಾಗುವಂತೆ ಅವರು ಸೂತ್ರಗಳನ್ನು ತಪ್ಪಾಗಿ ವ್ಯಾಖ್ಯಾನಿಸಿದ್ದರು. ಸಂಸ್ಕೃತದ ಉಪನ್ಯಾಸದಲ್ಲಿ ನಾನು ಒಂದು ವಿಚಾರವನ್ನು ಹೇಳಿದ್ದು, ಅದನ್ನು ತರ್ಜುಮೆ ಮಾಡುವ ವ್ಯಕ್ತಿ ಅದಕ್ಕೆ ವಿರುದ್ಧವಾದ ವಿಚಾರವನ್ನು ತಿಳಿಸಿದನೆಂದರೆ ನನ್ನ ತಾಳ್ಮೆ ಪೂರಾ ಕೆಟ್ಟು ಹೋಗಿ ಅವನ ವಿರುದ್ಧ ಎಷ್ಟು ಆಕ್ರೋಶ ತಾಳಿದರೂ ಆಶ್ಚರ್ಯವಿಲ್ಲ ತಾನೇ. ? ಹೀಗಿರುವಾಗ ಬ್ರಹ್ಮಸೂತ್ರಗಳಿಗೆ ಶ್ರೀವ್ಯಾಸರ ಅಭಿಪ್ರಾಯಕ್ಕೆ ವಿರುದ್ಧವಾಗಿ ವ್ಯಾಖ್ಯಾನಿಸಿದಲ್ಲಿ ಅವರಿಗೆ ಎಷ್ಟು ಸಿಟ್ಟು ಬರಬೇಕಿತ್ತು ! ಆದರೆ ವ್ಯಾಸರಿಗೆ ಸ್ವಲ್ಪವೂ ಸಿಟ್ಟು ಬರಲಿಲ್ಲ. 'ಅಯ್ಯೋ ಪಾಪವೇ!' - ಎಂದು ಆ ವ್ಯಕ್ತಿಯ ಬಗ್ಗೆ ಅನುಕಂಪೆ ಉಂಟಾಯಿತಂತೆ !

ಹಿರಿಯರು ಹೇಳ್ತಾರೆ - **'ತಂ ತತ್‌ಕ್ಷಣಾದ್ಯೋ ನ ದಿಧಕ್ಷತಿ ಸ್ಮ ಸ ವ್ಯಾಸರೂಪೋ ಭಗವಾನ್ ಕ್ಷಮಾಬ್ಧಿಃ '**

ಹೀಗೆ ತನ್ನ ಅಭಿಪ್ರಾಯಕ್ಕೆ ವಿರುದ್ಧವಾದ ಅರ್ಥವನ್ನು ಹೇರುತ್ತಿರುವ ಆ ವ್ಯಕ್ತಿಯನ್ನು ಆ ಕ್ಷಣದಲ್ಲಿಯೇ ಸುಟ್ಟು ಹಾಕುವಷ್ಟೂ ಶಿಕ್ಷೆ ನೀಡಬೇಕಿತ್ತು ! ಆದರೆ ಶ್ರೀವೇದವ್ಯಾಸರು 'ಅಯ್ಯೋ ಪಾಪ!' ಎಂದು ಅವನ ಬಗ್ಗೆ ಅನುಕಂಪವನ್ನಷ್ಟೇ ತೋರಿದರು. ಯಾಕೆಂದರೆ ಅವರು ಕ್ಷಮಾಸಮುದ್ರರು ತಾನೇ ?

ಭೀಮಸೇನನೂ ತಾಳ್ಮೆ ಉಳ್ಳವನು. ತನ್ನ ಎದುರೇ ದ್ರೌಪದಿಗೆ ಅವಮಾನ

ಎಸಗುತ್ತಿದ್ದಾಗ ದುರ್ಯೋಧನನನ್ನು ಚಚ್ಚಿ ಬಿಡ್ತೇನೆ ಎಂದು ಭೀಮಸೇನ ಎದ್ದ. ಆದರೆ ಕೂಡಲೇ ಭಗವಂತನ ತಾಳ್ಮೆಯ ಉಪದೇಶ ನೆನಪಿಗೆ ಬಂತು. ಕುಳಿತು ಬಿಟ್ಟ. ಹಾಗಾದರೆ ಭೀಮಸೇನನಿಗೂ ತಾಳ್ಮೆಯ ಸ್ಫೂರ್ತಿ ನೀಡಿದ, 'ಕ್ಷಮಿಣಾಂ ವರ' ಭಗವಂತ.

'ತಾಳುವಿಕೆಗಿಂತನ್ಯ ತಪವು ಇಲ್ಲ' - ಎಂದು ಶ್ರೀ ವಾದಿರಾಜರು ತಾಳ್ಮೆಯನ್ನು ತಪಸ್ಸೆಂದು ಪರಿಗಣಿಸಿರುವರು. ತಾಳ್ಮೆಯಲ್ಲಿ ಒಂದೇ ಒಂದು ದೋಷ. ತನಗೆ ಒಂದು ಬಾರಿಸಿದವನ ಬಗ್ಗೆ ತಾಳ್ಮೆಯಿಂದ ಸುಮ್ಮನೆ ಇದ್ದು ಬಿಟ್ಟರೆ ಅವನಿಗೆ ಹಿಂತಿರುಗಿಸಲು ತಾಕತ್ತು ಇರಲಿಲ್ಲ - 'ಅಶಕ್ತಂ ಮನ್ಯತೇ ಜನಃ' - ಎಂದು ತಾಳ್ಮೆವುಳ್ಳವನನ್ನು ಅಶಕ್ತನನ್ನಾಗಿ ತಿಳಿದು ಬಿಡುವರೆಂಬುದೊಂದೇ ದೋಷ. ಇದೊಂದನ್ನು ಬಿಟ್ಟರೆ ಕ್ಷಮೆ ಶ್ರೇಷ್ಠ ಗುಣ. ಅದನ್ನು ಉಳಿದೆಲ್ಲರಿಗಿಂತ ಅಧಿಕ ಪ್ರಮಾಣದಲ್ಲಿ ಹೊಂದಿದ್ದು, ಉಳಿದವರಿಗೂ ಕ್ಷಮೆಯ ಪಾಠ ತಿಳಿಸುವ ಭಗವಂತ 'ಕ್ಷಮಿಣಾಂ ವರ.'

ಭೀಷ್ಮರು ಎದುರಿಗಿರುವ ಕೃಷ್ಣ ತನ್ನ ಬಗ್ಗೆ ಸುರಿಸುತ್ತಿರುವ ಕ್ಷಮೆಯ ಸವಿಯನ್ನು ಹೀಗೆ ಸವಿಯುತ್ತಿದ್ದಾರೆ - ಕೃಷ್ಣ ನೀನು ಅರ್ಜುನನ ಸಾರಥಿಯಾಗಿದ್ದರೂ ನಿನ್ನ ಮೇಲೂ ನಾನು ಬಾಣಗಳನ್ನು ಪ್ರಯೋಗಿಸಿದ್ದೆ. ನನ್ನ ಬಾಣಗಳು ಚುಚ್ಚಿ ನಿನ್ನ ಶರೀರದಿಂದ ರಕ್ತ ಸೋರುತ್ತಿತ್ತು ! ಆದರೂ ಅದೆಲ್ಲವನ್ನು ಸಹಿಸಿಕೊಂಡು 'ಹತಶತ್ರುಪಕ್ಷಗಃ' - ನಾಶಹೊಂದಿದ ಶತ್ರು ಪಕ್ಷದಲ್ಲಿ ಉಳಿದುಕೊಂಡವ ಎಂಬ ದೃಷ್ಟಿಯಿಂದ ನನ್ನ ಬಳಿಗೆ ಪಾಂಡವರನ್ನು ಕರೆದುಕೊಂಡು ಬಂದು ನನ್ನಿಂದ ಉಪದೇಶ ಹೊರಡಿಸಿದ್ದಿ. ನಿನ್ನ ಕ್ಷಮೆಗೆ ಇದಕ್ಕಿಂತ ಬೇರೆ ನಿದರ್ಶನದ ಅವಶ್ಯಕತೆ ಇದೆಯೇ !

**೮೧೯. ವಿದ್ವತ್ತಮಃ – ಬೇರೆ ಯಾರೂ ತಿಳಿದಿರದಷ್ಟು, ತಿಳಿದಿರದಂತೆ ಎಲ್ಲವನ್ನೂ ಚೆನ್ನಾಗಿ ತಿಳಿದವನು.**

ವಿವರಣೆ : ವಿದ್ವಾನ್ ಎಂದರೆ ತಿಳಿದವನು. ಅತಿಶಯೇನ ವಿದ್ವಾನ್ - ಚೆನ್ನಾಗಿ ತಿಳಿದವನೆಂದರೆ 'ವಿದ್ವತ್ತಮಃ'

ತಿಳುವಿಕೆಯಲ್ಲಿ ಚೆನ್ನಾಗಿ ಅಂದರೆ ಏನು ? ಬೇರೆ ಯಾರೂ ತಿಳಿದಿರದಷ್ಟು ತಿಳಿದಿರುವುದು. ಹಾಗೆಯೇ ಬೇರೆ ಯಾರೂ ತಿಳಿದಿರದಂತೆ ತಿಳಿಯುವಿಕೆ.

ದೇವರ ತಿಳುವಳಿಕೆ ಈ ಎರಡು ಅಂಶಗಳನ್ನೂ ಒಳಗೊಂಡದ್ದು. ಅವನು ಬೇರೆ ಯಾರೂ ತಿಳಿಯದಷ್ಟು ತಿಳಿದಿರುವನು. ಹಾಗೆ ತಿಳಿದದ್ದನ್ನೂ ಕೂಲಂಕಷವಾಗಿ, ಸರ್ವತೋಮುಖವಾಗಿ ತಿಳಿದಿರುವುದರಿಂದ ಬೇರೆ ಯಾರೂ ತಿಳಿದಿರದಂತೆಯೂ

ಅವನು ತಿಳಿದಿರುವನು.

ಹೀಗೆ ಭಗವಂತನ ತಿಳುವಳಿಕೆ ಎರಡು ಬಗೆಯ ಅತಿಶಯವನ್ನೂ ಹೊಂದಿರುವುದರಿಂದ ಅವನು ಬರೇ ವಿದ್ವಾನ್ ಅಲ್ಲ, ಮತ್ತೆ 'ವಿದ್ವತ್ತಮ'

**೬೨೦. ವೀತಭಯಃ – * ಭಯದಿಂದ ದೂರನಾಗಿರುವವನು.**

*** ವಿಶೇಷವಾಗಿ ಪರಮಾತ್ಮನನ್ನು ಹೊಂದಿದವರ ಭಯವನ್ನು ಪರಿಹರಿಸುವವನು.**

**ವಿವರಣೆ :** 'ವೀತಂ ಭಯಂ ಯಸ್ಮಾತ್ ಸಃ ವೀರಭಯಃ - ಎಂಬ ನಿರ್ವಚನದ ಪ್ರಕಾರ ಭಯವನ್ನು ಕಳೆದುಕೊಂಡಿರುವವನು ಎಂಬ ಒಂದು ಪ್ರಸಿದ್ಧಾರ್ಥ ಇದ್ದೇ ಇದೆ.

ಇದರ ಜೊತೆಗೆ ಮತ್ತೊಂದು ಹೀಗೆ ಅರ್ಥ ಹೇಳ ಬಹುದು - ವಿ + ಇತ+ ಭ + ಯ - ಎಂದು ಪದವಿಭಾಗ ಮಾಡಿ ನಿಷ್ಪನ್ನವಾದ ಶಬ್ದ ಎಂದು ಇಟ್ಟುಕೊಳ್ಳ ಬೇಕು. ವಿ ಎಂದರೆ ವಿಶೇಷವಾಗಿ ಇತ ಎಂದರೆ ಹೊಂದಿದವರು. ಯಾರನ್ನು? ಪರಮಾತ್ಮನನ್ನು. ಪರಮಾತ್ಮನನ್ನು ವಿಶೇಷವಾಗಿ ಹೊಂದುವುದೆಂದರೆ ಮುಕ್ತಿಯಲ್ಲೇ. ಆದ್ದರಿಂದ 'ವೀತ' ರು ಎಂದರೆ ಮುಕ್ತರು. ಅಂತಹವರ 'ಭ'- ಭಯವನ್ನು ಯ - ಪರಿಹರಿಸುವವನು. ಮೋಕ್ಷಕ್ಕೆ ಹೋಗುವುದನ್ನು ಯಾಕೆ ವೀತ - ವಿಶೇಷವಾಗಿ ಹೋಗುವುದೆಂದು ಪರಿಗಣಿಸಲ್ಪಟ್ಟಿದೆ ? ಬೇರೆ ಎಲ್ಲಿಗೆ ಹೋದರೂ ಒಂದಲ್ಲ ಒಂದು ದಿನ ಮರಳಿ ಬರಲೇಬೇಕು. ಸತ್ಯಲೋಕಕ್ಕೆ ಹೋದರೂ ಹಿಂತಿರುಗಲೇ ಬೇಕು. ಆದುದರಿಂದ ಹಿಂತಿರುಗದಂತೆ ಹೋಗುವುದೆಂದರೆ ಮೋಕ್ಷಕ್ಕೆ ಹೋಗುವುದು ಮಾತ್ರ. **'ನ ಚ ಪುನರಾವರ್ತತೇ' - 'ಯದ್ಗತ್ವಾ ನ ನಿವರ್ತಂತೇ ತದ್ಧಾಮ ಪರಮಂ ಮಮ'** - ಎಂದು ಗೀತಾಚಾರ್ಯ ತನ್ನ ಲೋಕಕ್ಕೆ ಹೋದವರು ಮರಳಿ ಬರಬೇಕಾಗಿಲ್ಲ ಎಂದು ತಿಳಿಸಿರುವನು. ಆದ್ದರಿಂದ ಅಂತಹ ಮರಳಿ ಬರಬೇಕಾಗಿರದ ಮೋಕ್ಷವನ್ನು ಹೊಂದುವವರಷ್ಟೇ ವೀತರು, ವಿಶೇಷವಾಗಿ ಹೊಂದಿರುವವರು ಎಂದು ಹೇಳಲ್ಪಡುವರು.

ಚೆನ್ನಾಗಿ ಊಟ ಮಾಡಿದ್ದೀರಾ ? ಚೆನ್ನಾಗಿ ನಿದ್ದೆ ಮಾಡಿದ್ದೀರಾ ? ಎಂದೆಲ್ಲ ಕೇಳುವಂತೆ 'ಚೆನ್ನಾಗಿ ಸತ್ತರೋ?' - ಎಂದೂ ಪ್ರಶ್ನೆ ಕೇಳಬೇಕಾಗಿದೆ. ಸತ್ತ ಮೇಲೆ ಚೆನ್ನಾಗಿ ಏನು ಬಂತು ? ಎಂಬ ಸಂದೇಹ ಬರಬಹುದು. ಆದರೆ ಚೆನ್ನಾಗಿ ಸಾಯುವುದೆಂದರೆ ಮತ್ತೆ ಹುಟ್ಟದಂತೆ ಸಾಯುವುದೆಂದರ್ಥ. ಮತ್ತೆ ಹುಟ್ಟದಂತೆ ಸಾಯುವುದೆಂದರೆ ಮೋಕ್ಷವನ್ನು ಪಡೆಯುವಂತೆ ಸಾಯುವುದೆಂದರ್ಥ. ಹೀಗೆ

ಸಾಯಬೇಕೆಂದರೆ ದೇವರನ್ನು ಸ್ಮರಿಸುತ್ತ ಸಾಯಬೇಕು.

ಹೀಗೆ ಸತ್ತವರೇ 'ವೀತ'ರೆನಿಸಿಕೊಳ್ಳುವರು. ಅಂತಹವರಿಗೆ ಭಯಕ್ಕೆ ಅವಕಾಶವೇ ಇಲ್ಲ. ಸಂಸಾರಾವಸ್ಥೆಯಲ್ಲಿ ನಮಗೆ ಹೆಜ್ಜೆ ಹೆಜ್ಜೆಗೆ ಭಯ. ಯಾಕೆಂದರೆ ಭಗವಂತನ ಸಂಕಲ್ಪ ನಮಗೆ ತಿಳಿಯದಿದ್ದುದರಿಂದ ನಮ್ಮ ಸಂಕಲ್ಪ, ಇಚ್ಛೆ ಅವನ ಸಂಕಲ್ಪಕ್ಕೆ, ಇಚ್ಛೆಗೆ ವಿರುದ್ಧವಾದದ್ದಾಗಿ ಈಡೇರದೆ ಹೋಗುವುದೋ ? - ಎಂದು. ಆದರೆ ಮೋಕ್ಷದಲ್ಲಿ ಅವನ ಸಂಕಲ್ಪವನ್ನೂ, ಇಚ್ಛೆಯನ್ನೂ ಅರಿತು ಅದಕ್ಕೆ ಅನುಗುಣವಾಗಿ ಸಂಕಲ್ಪಿಸುವುದರಿಂದ, ಬಯಸುವುದರಿಂದ ಸಂಕಲ್ಪಾದಿಗಳು ಈಡೇರದೆ ಇರುವುದಕ್ಕೆ ಅವಕಾಶವೇ ಇಲ್ಲ.

ಹೀಗೆ ಭಗವಂತ ತನ್ನನ್ನು ಚೆನ್ನಾಗಿ ಹೊಂದಿ ಮುಕ್ತರೆನಿಸಿದವರಿಗೆ ಜನನ, ಮರಣ, ವೃದ್ಧಾಪ್ಯಾದಿಗಳ ಭಯವಷ್ಟೇ ಅಲ್ಲದೆ, ಸ್ವೇಚ್ಛಾನುಗುಣವಾಗಿ ನಡೆದುಕೊಳ್ಳುವುದೇ ಮುಂತಾದ್ದಕ್ಕೆ ಸಂಬಂಧಿಸುವ ಭಯವೂ ಇಲ್ಲದಂತೆ ಮಾಡುವನು. ಆದ್ದರಿಂದ ಅವನು 'ವೀತಭಯ' ಎನಿಸುವನು. ಮುಕ್ತರಾಗಿ ಭಗವಂತನನ್ನು ಹೊಂದಿರುವರಷ್ಟೇ ಅಲ್ಲದೆ, ಮಾನಸಿಕವಾಗಿ, ಬೌದ್ಧಿಕವಾಗಿ ತಮ್ಮ ಹೃದಯದಲ್ಲಿ ದೇವರನ್ನು ಹೊಂದಿದ್ದು ವೀತ ಎನಿಸುವವರ ಭಯವನ್ನೂ ಭಗವಂತನು ಪರಿಹರಿಸುವನು.

**೯೨೧. ಪುಣ್ಯಶ್ರವಣಕೀರ್ತನಃ – * ಪಾವಿತ್ರ್ಯವನ್ನೂ, ಶುದ್ಧಿಯನ್ನೂ ನೀಡುವ ಶ್ರವಣ ಹಾಗೂ ಕೀರ್ತನಗಳುಳ್ಳವನು.**

*** ಪಾಪಪರಿಹಾರಕ, ಪುಣ್ಯಪ್ರದ ಶ್ರವಣ ಕೀರ್ತನೆಗಳುಳ್ಳವನು.**

**ವಿವರಣೆ:** ಭಗವಂತನಲ್ಲಿ ಭಕ್ತಿಯನ್ನು ಹೆಚ್ಚಿಸಿಕೊಳ್ಳಲು ಒಂಭತ್ತು ಮೆಟ್ಟಲುಗಳಿವೆ **'ಶ್ರವಣಂ ಕೀರ್ತನಂ ವಿಷ್ಣೋಃ ಸ್ಮರಣಂ.......'** ಇತ್ಯಾದಿಯಾಗಿ. ಅವುಗಳಲ್ಲಿ ಪ್ರಾರಂಭದ ಎರಡು ಮೆಟ್ಟಲುಗಳೇ ಶ್ರವಣ ಹಾಗೂ ಕೀರ್ತನ.

ದೇವರ ಬಗ್ಗೆ ಏನೂ ಅರಿಯದವನು ದೇವರ ಪ್ರಪಂಚಕ್ಕೆ ಪ್ರವೇಶಿಸಬೇಕೆಂದರೆ ಮೊದಲು ಅವನ ಬಗ್ಗೆ ಶ್ರವಣ ನಡೆಸಿ ಅವನ ಮಾಹಿತಿಯನ್ನು ಸಂಪಾದಿಸಿಕೊಳ್ಳಬೇಕು. ದೇವರನ್ನು ಯಾರು ಸರಿಯಾಗಿ ತಿಳಿದಿರುವರೋ ಅವರಿಂದಲೇ ಕೇಳಬೇಕು. ಇದಕ್ಕೆ ವಿಪರೀತವಾಗಿ ಯಾರಿಗೆ ದೇವರ ಸರಿಯಾದ ತಿಳುವಳಿಕೆ ಇಲ್ಲವೋ ಅವರಲ್ಲಿ ದೇವರ ಬಗ್ಗೆ ವಿಚಾರಿಸಿದೆವೆಂದರೆ ಅವರು ದೇವರ ಬಗ್ಗೆ ನೀಡುವ ತಪ್ಪು ಮಾಹಿತಿಗಳನ್ನೇ ಒಪ್ಪಿಕೊಳ್ಳುವ ಅಪಾಯ ಇದೆ. ದಾರಿಯನ್ನು ತಿಳಿಯದ ವ್ಯಕ್ತಿಯೊಬ್ಬನಲ್ಲಿ ದಾರಿಯ ಬಗ್ಗೆ ವಿಚಾರಿಸಿದಲ್ಲಿ ಅವನು ನಿರ್ದೇಶಿಸಿದ

ತಪ್ಪು ದಾರಿಯಲ್ಲೇ ಸಾಗಬೇಕಾದ ಪ್ರಸಂಗ ಹೇಗೆ ಒದಗುವುದೋ ಹಾಗೆ.

ಆದ್ದರಿಂದ ಸರಿಯಾಗಿ ದೇವರನ್ನು ತಿಳಿದವರಿಂದಲೇ ದೇವರ ಬಗ್ಗೆ ಶ್ರವಣ ನಡೆಸಬೇಕು.

ಹೀಗೆ ತಾವು ದೇವರ ಬಗ್ಗೆ ಶ್ರವಣ ನಡೆಸಿದ್ದನ್ನು ಮತ್ತೊಬ್ಬರಿಗೆ ತಿಳಿಸಬೇಕು. ಇದೇ ಎರಡನೆಯ ಮೆಟ್ಟಲು - ಕೀರ್ತನ. ನಾವು ಕೇಳುವಾಗಲೇ ಅದನ್ನು ಇನ್ನೊಬ್ಬರಿಗೆ ಹೇಳಬೇಕು ಎಂಬ ಮಾನಸಿಕ ಸಿದ್ಧತೆಗೊಳಗಾಗಿಯೇ ಶ್ರವಣ ನಡೆಸಿದೆವೆಂದರಷ್ಟೇ ಕೇಳಿದ್ದನ್ನು ಇನ್ನೊಬ್ಬರಿಗೆ ತಿಳಿಸಲು, ಕೀರ್ತನ ಮಾಡಲು ಸಮರ್ಥರಾಗುವೆವು. ಹೀಗಿಲ್ಲದಿದ್ದರೆ, ಅವರು ಏನು ಹೇಳಿದರು ? 'ಏನೋ ತುಂಬ ಹೇಳಿದರಪ್ಪ !'- ಎಂದಷ್ಟೇ ಉದ್ಗಾರ ತೆಗೆದು ಸುಮ್ಮನಾಗಬೇಕಾಗುವ ಪ್ರಸಂಗ ಬರುವುದು. ಹೀಗಾಗಬಾರದು. ಮೊದಲೇ ಮಾನಸಿಕ ಸಿದ್ಧತೆಯನ್ನು ಪಡೆದುಕೊಂಡು ಕೇಳಿದ್ದನ್ನು ಸಹೃದಯರಲ್ಲಿ ಹೇಳುವವರಾಗಬೇಕು.

ಈ ಬಗೆಯ ದೇವರ ಕುರಿತಾದ ಶ್ರವಣ ಹಾಗೂ ಕೀರ್ತನ ಪಾವಿತ್ರ್ಯವನ್ನು, ಶುದ್ಧಿಯನ್ನು ಉಂಟುಮಾಡಬಲ್ಲವುಗಳು. ಆದುದರಿಂದಲೇ ಎಷ್ಟೋ ವ್ಯಕ್ತಿಗಳು ಇನ್ನೊಬ್ಬರ ಜೊತೆಗೆ ಗೆಳೆತನ ಮಾಡಬೇಕೆಂದಾಗ ಅವರು ಕೇಳುವ, ಹೇಳುವ ವಿಚಾರಗಳನ್ನೆಲ್ಲ ಪರಿಗಣಿಸುವರು. ದೂರದರ್ಶನದಲ್ಲಿ ಯಾವ ವಿಚಾರಗಳಿಗೆ ಪ್ರಾಶಸ್ತ್ಯವನ್ನು ನೀಡಲಾಗುವದೆಂದು ನೋಡಿಕೊಂಡು ವ್ಯಕ್ತಿಯ ಅಭಿರುಚಿಯನ್ನು ಸ್ವಭಾವವನ್ನು ಹೇಗೆ ಗುರುತಿಸಲಾಗುವುದೋ ಹಾಗೆ.

ಹೀಗೆ ಭಗವಂತನಿಗೆ ಸಂಬಂಧಿಸುವ ಶ್ರವಣ ಹಾಗೂ ಕೀರ್ತನೆ ಪಾವಿತ್ರ್ಯಪ್ರದವಾಗಿರುವುದರಿಂದ 'ಪುಣ್ಯ' ಆಗಿರುವುದಲ್ಲದೆ, ಪಾಪ ಪರಿಹಾರಕವಾಗಿದ್ದು, ಪುಣ್ಯ ಪ್ರದವಾಗಿರುವುದರಿಂದಲೂ 'ಪುಣ್ಯ' ಎನಿಸಬಲ್ಲದು.

**ಉತ್ತಾರಣೋ ದುಷ್ಕೃತಿಹಾ ಪುಣ್ಯೋ ದುಃಸ್ವಪ್ನನಾಶನಃ |**
**ವೀರಹಾ ರಕ್ಷಣಃ ಸಂತೋ ಜೀವನಃ ಪರ್ಯವಸ್ಥಿತಃ ||೯೯||**

**೯೨೨. ಉತ್ತಾರಣಃ – ಎತ್ತರಕ್ಕೆ ದಾಟಿಸುವವನು.**

**ವಿವರಣೆ:** ಹಿಂದಿನ 'ಪುಣ್ಯ ಶ್ರವಣಕೀರ್ತನಃ' - ಎಂಬ ನಾಮದಲ್ಲಿ ಸೂಚಿತವಾದಂತೆ ದೇವರ ಶ್ರವಣ ಹಾಗೂ ಕೀರ್ತನ ನಡೆಸುವವನ ಮನಸ್ಸು ಪವಿತ್ರವಾಗುವುದು, ಮನಸ್ಸು ಪವಿತ್ರವಾಯಿತೆಂದರೆ ಅದರಲ್ಲಿ ಎತ್ತರದ ವಿಚಾರಗಳು ತುಂಬುವವು. ಹೀಗೆ ಯಾರು ತನ್ನ ಮನಸ್ಸಿನಲ್ಲಿ ಎತ್ತರದ ವಿಚಾರಗಳನ್ನು ತುಂಬಿಸಿಕೊಳ್ಳುವನೋ

ಅವನನ್ನು ದೇವರು ಎತ್ತರಕ್ಕೆ ದಾಟಿಸುವನು ಎಂದು ಸ್ತುತಿಸಲಾಗುವುದು - 'ಉತ್ತಾರಣಃ'

ತಾರಣ ಎಂದರೆ ದಾಟಿಸುವುದು. ಮೂರು ರೀತಿಯಾಗಿ ದಾಟಿಸಬಹುದು. ಎತ್ತರಕ್ಕೂ ದಾಟಿಸಬಹುದು. ಸಮಾನಾಂತರವಾಗಿಯೂ ದಾಟಿಸಬಹುದು. ಕೆಳಗೂ ದಾಟಿಸಬಹುದು.

ಕೆಳಮುಖವಾಗಿ ದಾಟುವುದು ನಮ್ಮ ಸ್ವಭಾವ. ಆದರೆ ದೇವರು ಎತ್ತರದ ವಿಚಾರವುಳ್ಳವನನ್ನು ಎತ್ತರಕ್ಕೇ ದಾಟಿಸುವನು. ಸಂಸ್ಕೃತದ ಉತ್ತರವೇ ಕನ್ನಡದ ಎತ್ತರ. ಆದ್ದರಿಂದ ಉತ್ತಾರಣ ಎಂದರೂ ಎತ್ತರಕ್ಕೆ ತಾರಣ ಎಂದರೂ ಒಂದೇ ಅರ್ಥ.

ಆದ್ದರಿಂದ 'ಪುಣ್ಯಶ್ರವಣಕೀರ್ತನ' ಎನಿಸಿರುವ ದೇವರು ತನ್ನ ಶ್ರವಣ ಕೀರ್ತನಗಳಿಂದ ಪುಣ್ಯರೆನಿಸಿದವರಿಗೆ 'ಉತ್ತಾರಣ'ನಾಗಿ ಅವರನ್ನು ಎತ್ತರಕ್ಕೆ ದಾಟಿಸುವನು.

**೯೨೩. ದುಷ್ಕೃತಿಹಾ – ಒಳ್ಳೆಯ ಯೋಗ್ಯತೆಯ ವ್ಯಕ್ತಿಗಳಲ್ಲಿ ಕೆಟ್ಟ ಶಕ್ತಿಗಳ ಸಂಪರ್ಕದಿಂದಾಗಿ ಕಾಣಿಸಿಕೊಳ್ಳುವ ಕೆಟ್ಟತನವನ್ನು ಪರಿಹರಿಸುವವನು.**

ವಿವರಣೆ : ದುಷ್ಕೃತಿ ಎಂದರೆ ಕೆಟ್ಟತನ. ಅದನ್ನು ಪರಿಹರಿಸುವವನು ದುಷ್ಕೃತಿಹಾ ದುರ್ಯೋಧನಾದಿಗಳೂ ಕೆಟ್ಟತನವನ್ನು ಎಸಗುವರು. ಭೀಷ್ಮಾದಿಗಳೂ ಕೆಟ್ಟತನವನ್ನು ತೋರುವರು. ಕೆಟ್ಟ ಸ್ವಭಾವವನ್ನು ಹೊಂದಿರುವ ದುರ್ಯೋಧನಾದಿಗಳು ಸ್ವಾಭಾವಿಕವಾಗಿಯೇ ಕೆಟ್ಟತನವನ್ನು ತೋರುವರು. ದೇವರು ಅಂತಹವರ ಕೆಟ್ಟತನವನ್ನು ಪರಿಹರಿಸುವುದಿಲ್ಲ. ಬದಲಾಗಿ, ಯಾರು ಒಳ್ಳೆಯ ಸ್ವಭಾವವನ್ನು ಹೊಂದಿದ್ದು, ಕೆಟ್ಟ ವಾತಾವರಣದಿಂದಾಗಿ,ಕೆಟ್ಟ ಪರಿಸರದಿಂದಾಗಿ ಕೆಟ್ಟ ಶಕ್ತಿಗಳ ಸಂಪರ್ಕದಿಂದ ಕೆಟ್ಟತನ ತೋರುವರೋ ಅಂತಹವರ ಕೆಟ್ಟತನವನ್ನು ಪರಿಹರಿಸುವನು. ಆದ್ದರಿಂದ ಅಂತಹವರ ಪಾಲಿಗಷ್ಟೇ 'ದುಷ್ಕೃತಿಹಾ' ಎನಿಸುವನು. ಸ್ವಾಭಾವಿಕವಾಗಿ ಒಳ್ಳೆಯವರೆನಿಸಿದವರ ಕೆಟ್ಟತನಕ್ಕೆ ಪ್ರಯೋಜಕವಾದ ಕೆಟ್ಟ ಶಕ್ತಿಗಳ ಸಂಪರ್ಕವನ್ನು ದೂರ ಮಾಡುವನು. **'ಕ್ಷಿತ್ಯಾಮತ್ಯಲ್ಪಭೃತ್ಯೇಷ್ವಪಿ ಕುಜನಕೃತೌದ್ಧತ್ಯ-ಭೂತ್ಯಾಜಕಾಯ'** - ಎಂದು ವಾದಿರಾಜಸ್ವಾಮಿಗಳು ಹಯಗ್ರೀವನನ್ನು ಈ ಆಶಯದಿಂದಲೇ ಸ್ತುತಿಸಿರುವರು. ತನ್ನ ಭಕ್ತರ ವಿಷಯದಲ್ಲಿ ಉದ್ಧಟತನವನ್ನು ಎಸಗಿ ಅವರನ್ನು ದಾರಿ ತಪ್ಪಿಸಲು ತೊಡಗುವ ಕುಜನರನ್ನು ಸದೆಬಡಿದು ದೂರಸರಿಸುವವನು ಹಯಗ್ರೀವ ಎಂಬುದಾಗಿ.

ಹೀಗೆ 'ದುಷ್ಕೃತಿಹಾ' ಎಂಬ ನಾಮದಲ್ಲಿ ಸಾಮಾನ್ಯವಾಗಿ ಎಲ್ಲರ 'ದುಷ್ಕೃತಿಯನ್ನು, ದುಷ್ಟತನವನ್ನು ಪರಿಹರಿಸುವವನೆಂದು ಹೇಳಲಾಗುವುದಾದರೂ ಭಗವಂತನದ್ದು ಚರಂಡಿಗೆ ಬಿದ್ದು ಕೊಳೆ ಮಾಡಿಕೊಂಡ ಬಿಳಿ ನಾಯಿಗಳ ಕೊಳೆಯನ್ನು ತೊಳೆಯುವ ಪ್ರಕ್ರಿಯೆಯೇ ಹೊರತು ಕರಿನಾಯಿಗಳನ್ನು ಬಿಳಿ ಮಾಡುವ ಸಾಹಸ ಅಲ್ಲ. ಆದ್ದರಿಂದ ಅವನು ಭೀಷ್ಮ, ದ್ರೋಣ, ಕೃಪಾಚಾರ್ಯ, ಅಶ್ವತ್ಥಾಮಾಚಾರ್ಯ, ಕರ್ಣ ಇವರೆಲ್ಲರ ಪಾಲಿಗಷ್ಟೇ 'ದುಷ್ಕೃತಿಹಾ'

ಭೀಷ್ಮರು ಕಪಟದ್ಯೂತ ಸಭೆಯಲ್ಲಿ ಶೋಷಣೆಗೆ ಒಳಗಾಗಿದ್ದ ದ್ರೌಪದಿ ತನ್ನ ಬಗ್ಗೆ ಹೀಗೆ ನಡೆದುಕೊಳ್ಳುತ್ತಿರುವುದು ಧರ್ಮವೇ ಎಂದು ತನ್ನಲ್ಲಿ ವಿಚಾರಿಸದಾಗ ತಾವು ಹಾರಿಕೆಯ ಉತ್ತರ ಕೊಟ್ಟು ಎಸಗಿದ್ದ 'ದುಷ್ಕೃತಿ'ಯ ಬಗ್ಗೆ ಪಶ್ಚಾತ್ತಾಪಡುತ್ತ, ಅದನ್ನೂ ಕ್ಷಮಿಸಿರಬಹುದಾದ ಕೃಷ್ಣ ಪ್ರಾಯಶಃ ಅಂತಹ ತನ್ನ 'ದುಷ್ಕೃತಿ'ಗಳ ಪರಿಹಾರಕ್ಕಾಗಿಯೇ ಹೀಗೆ ವಿಷ್ಣುಸಹಸ್ರನಾಮಗಳನ್ನು ಹೇಳಿಸಿ, ತಾನು ಲಾಲಿಸುತ್ತಿದ್ದಾನೆ ಎಂಬ ಅನುಸಂಧಾನದಿಂದ ಕೃಷ್ಣನನ್ನು ಸ್ತುತಿಸುತ್ತಿರುವರು 'ದುಷ್ಕೃತಿಹಾ'

**೯೨೪. ಪುಣ್ಯಃ – ಸ್ವಾಭಾವಿಕವಾಗಿ ಪವಿತ್ರನಾಗಿರುವವನು.**

**ವಿವರಣೆ :** ಪುಣ್ಯ ಎಂದರೆ ಪವಿತ್ರ. ದೇವರು ಪವಿತ್ರ. ಲೋಕದಲ್ಲಿ ಅನೇಕ ಪವಿತ್ರ ಪದಾರ್ಥಗಳು ಇವೆ. ತುಲಸೀ, ದರ್ಭೆ, ಗೋಮಯ, ಗೋಪೀಚಂದನ, ನೀರು, ಬೆಂಕಿ ಇವೆಲ್ಲ ಪವಿತ್ರಗಳೇ. ಆದರೆ ಇವು ಸ್ವಾಭಾವಿಕವಾಗಿ ಪವಿತ್ರಗಳಲ್ಲ. ಪವಿತ್ರನಾಮಕ ಭಗವಂತ ಅವುಗಳಲ್ಲಿ ಇರುವುದರಿಂದ ಅವು ಪವಿತ್ರ ಎನಿಸಿವೆಯಷ್ಟೇ. ಇದನ್ನೇ **'ಪವಿತ್ರಾಣಾಂ ಪವಿತ್ರಂ.....'** - ಪವಿತ್ರ ವಸ್ತುಗಳಿಗೂ ಪಾವಿತ್ರ್ಯಪ್ರದನೆಂದು ಸ್ತುತಿಸಲಾಗಿದೆ. ದೇವರಾದರೆ ಸ್ವಾಭಾವಿಕವಾಗಿ ಪವಿತ್ರನಾಗಿದ್ದು ಮತ್ತೊಂದರ ಸಂಪರ್ಕದಿಂದಾಗಿ ಪವಿತ್ರನೆನಿಸಬೇಕಾದವನಲ್ಲ. ಕತ್ತಲೆಯಲ್ಲಿದ್ದ ಮಡಿಕೆ ಕಾಣಿಸಬೇಕಾದರೆ ದೀಪ ಬೇಕು. ಆದರೆ ದೀಪ ಕಾಣಿಸಬೇಕಾದರೆ ಮತ್ತೊಂದು ದೀಪ ಬೇಕಾಗಿಲ್ಲ. ಒಂದು ದೀಪವೇ ತನ್ನನ್ನೂ ಉಳಿದ ವಸ್ತುಗಳನ್ನೂ ಬೆಳಗಿಸುತ್ತದೆ. ಅದರಂತೆ ಭಗವಂತ ಸ್ವತಃ ಪವಿತ್ರನಾಗಿದ್ದು ಉಳಿದ ವಸ್ತುಗಳಿಗೂ ಪಾವಿತ್ರ್ಯವನ್ನು ನೀಡುವನು. ಒಬ್ಬನಿಗೆ ಜಾತಾಶೌಚವೋ, ಮೃತಾಶೌಚವೋ ಇತ್ತು. ಅದನ್ನು ಮರೆತು ದೇವಸ್ಥಾನದೊಳಗೆ ಹೋಗಿದ್ದಾನೆ. ದೇವರ ಎದುರು ನಿತ್ತಾಗ ತನಗೆ ಮೈಲಿಗೆ ಇದೆ ಎಂಬ ನೆನಪು ಬಂತು. ಕೂಡಲೇ **'.....ಯಃ ಸ್ಮರೇತ್ ಪುಂಡರೀಕಾಕ್ಷಂ ಸ ಬಾಹ್ಯಾಭ್ಯಂತರಶುಚಿಃ'**- ಎಂದಿರುವಂತೆ ಪುಂಡರೀಕಾಕ್ಷನ ಸ್ಮರಣೆ ಮಾಡಿದನೆಂದರೆ

ಪುಂಡರೀಕಾಕ್ಷನ ನಾಮಸ್ಮರಣೆಯೇ ಅವನನ್ನು ಪವಿತ್ರಗೊಳಿಸುವುದು. ಯಾರ ನಾಮಸ್ಮರಣೆಗೇ ಇಷ್ಟೊಂದು ಪಾವಿತ್ರ್ಯ ಇದೆ ಎಂದರೆ ಅವನು ಸ್ವತಃ ಎಷ್ಟು ಪವಿತ್ರನಾಗಿರಬೇಡ !

ಭೀಷ್ಮರು ಪರಮಪವಿತ್ರವಾದ ವಿಷ್ಣುಸಹಸ್ರನಾಮವನ್ನು ಪಠಿಸುತ್ತಿರುವುದು ರಣಾಂಗಣದ ಮೂಲೆಯಲ್ಲಿ ಶರಪಂಜರದಲ್ಲಿ ಪವಡಿಸಿಕೊಂಡು, ಯಾವ ರಣಾಂಗಣದಲ್ಲಿ ಸಾವಿರಾರು ಕೊಲೆಗಳು ಎಸಗಲ್ಪಟ್ಟಿವೆಯೋ ಅಲ್ಲಿ. ಆದರೂ ಅಪಾವಿತ್ರ್ಯದ ಭಾವನೆ ಅವರನ್ನು ಕಾಡುತ್ತಿಲ್ಲ. ಯಾಕೆಂದರೆ ಎದುರಿಗೇ 'ಪವಿತ್ರಾಣಾಂ ಪವಿತ್ರಂ....' ಎನಿಸುವ ಕೃಷ್ಣ ಕುಳಿತಿರುವನು.

**೯೨೫. ದುಃಸಪ್ನನಾಶನಃ – ಕೆಟ್ಟಸ್ವಪ್ನಗಳು ಬೀಳದಂತೆ ಮಾಡುವವನು.**

ವಿವರಣೆ : ರಾತ್ರಿ ಯಾರ್‍ಯಾರು ಸ್ವಪ್ನವನ್ನು ಕಾಣುವರೋ ಅವರೆಲ್ಲ ದೇವರನ್ನು ಒಪ್ಪಿಕೊಳ್ಳಲೇಬೇಕು. ನಮಗೆ ಸ್ವಪ್ನ ಬೀಳುವುದೇ ಇಲ್ಲ ಎಂದು ಯಾರೂ ಹೇಳುವಂತಿಲ್ಲ. ರಾತ್ರಿ ಮಲಗಿ ಗಾಢ ನಿದ್ರೆಗೊಳಗಾಗುವರೆಂದರೆ ಅಂತಹ ನಿದ್ರಾವಸ್ಥೆಗೆ ಒಳಗಾಗುವ ಮುಂಚೆ ಒಮ್ಮೆ ಹಾಗೂ ನಿದ್ರಾವಸ್ಥೆಯಿಂದ ಹೊರಬರುವಾಗ ಮತ್ತೊಮ್ಮೆ ಸ್ವಪ್ನವನ್ನು ಕಂಡಿರಲೇಬೇಕು. ಬಲಗಣ್ಣ ತುದಿಯಲ್ಲಿದ್ದುಕೊಂಡು ಎಚ್ಚರದ ಅವಸ್ಥೆಯನ್ನು ಕಾಣುತ್ತಿರುವ ಜೀವ ಹೃದಯದತ್ತ ಸಾಗಿ ಹೃದಯದಲ್ಲಿ ನಿದ್ರಾವಸ್ಥೆಯನ್ನು ಅನುಭವಿಸಬೇಕೆಂದರೆ ಮಧ್ಯದಲ್ಲಿ ಸ್ವಪ್ನಾವಸ್ಥೆಯನ್ನು ಕಾಣುವ ಕಂಠದೇಶಕ್ಕೆ ಬರಲೇ ಬೇಕು ತಾನೇ ? ಹಾಗೆಯೇ ಹೃದಯದಲ್ಲಿದ್ದುಕೊಂಡು ನಿದ್ರಾವಸ್ಥೆಯನ್ನು ಅನುಭವಿಸುತ್ತಿರುವ ಅವನು ಅಲ್ಲಿಂದ ಬಲಗಣ್ಣಿನತ್ತ ಸಾಗಿ ಅಲ್ಲಿ ಎಚ್ಚರದ ಅವಸ್ಥೆಗೊಳಗಾಬೇಕೆಂದರೆ ಮಧ್ಯದಲ್ಲಿ ಕಂಠದೇಶಕ್ಕೆ ಬರಲೇಬೇಕು, ಆಗ ಅಲ್ಲಿ ತೈಜಸನಾಮಕ ಭಗವಂತನಿಂದ ಸ್ವಪ್ನವನ್ನು ಕಾಣಲೇಬೇಕು. ಹೀಗೆ ನಿದ್ರೆಯ ಪ್ರಾರಂಭದಲ್ಲೂ, ಕೊನೆಯಲ್ಲೂ ಸ್ವಪ್ನವನ್ನು ಕಂಡಿರಲೇಬೇಕು.

ಹಾಗಾದರೆ ನಮಗೆ ಯಾಕೆ ಅದರ ನೆನಪು ಇಲ್ಲ ? ಎಚ್ಚರದ ಸ್ಥಿತಿಯಲ್ಲೇ ಈಗ ಕಂಡದ್ದನ್ನು ಇನ್ನೊಂದು ಗಳಿಗೆಯಲ್ಲಿ ಮರೆತು ಬಿಡುವ ನಮಗೆ ಆ ನಿದ್ರೆಯ ಮಂಪರು ಸ್ಥಿತಿಯಲ್ಲಿ ಕಂಡ ಸ್ವಪ್ನ ಮರೆತು ಹೋಗುವುದೇನೂ ಅಸಂಭಾವಿತ ಅಲ್ಲ.

ಹೀಗೆ ಪ್ರತಿಯೊಬ್ಬರೂ ನಿಯತವಾಗಿ ಕಾಣುವ ಸ್ವಪ್ನವನ್ನು ಕೊಡುವವರು ಯಾರು ? ಭೌತಿಕ ವಿಜ್ಞಾನಿಗಳಿಗೆ ಉತ್ತರಿಸಲಾದ ಪ್ರಶ್ನೆ ಇದು. ಪಂಚಾಂಗವನ್ನು ನೋಡಿ ಯಾವ ಯಾವ ವಸ್ತುವಿನ ಸ್ವಪ್ನ ಕಂಡರೆ ಒಳ್ಳೆಯದಾಗುವುದೆಂದು ತಿಳಿದುಕೊಂಡು ಅಂತಹ ವಸ್ತುಗಳದ್ದೇ ಸ್ವಪ್ನ ಬೀಳುವಂತೆ ಎಷ್ಟು ಯತ್ನಿಸಿದರೂ

ಆ ಸ್ವಪ್ನವನ್ನು ಕಾಣಲಾರೆವು ಎಂದ ಮೇಲೆ ಸ್ವಪ್ನ ಕಾಣುವುದರಲ್ಲಿ ನಾವು ತೀರಾ ಅಸ್ವತಂತ್ರರೆಂಬುದು ಸ್ಪಷ್ಟ.

ಹಾಗಾದರೆ ಯಾರು ಸ್ವಪ್ನವನ್ನು ತೋರಿಸುವವನು ? ಉಪನಿಷತ್ತು ಉತ್ತರಿಸುತ್ತದೆ -

**'ನ ತತ್ರ ರಥಾಃ ರಥಯೋಗಾಃ ನ ಪಂಥಾನಃ.....'**

ಹಾಸಿಗೆಯ ಮೇಲೆ ಮಲಗುವೆವು. ಆಗ ಅಲ್ಲಿ ರಥವಾಗಲೀ ಕುದುರೆಗಳಾಗಲೀ ಮಾರ್ಗವಾಗಲೀ ಯಾವುದೂ ಇಲ್ಲ. ಮಲಗಿ ಸ್ವಪ್ನಲೋಕಕ್ಕೆ ಪ್ರವೇಶಿಸಿದ್ದೇ ತಡ, ರಥ ಕುದುರೆಗಳು ಮಾರ್ಗ ಇವೆಲ್ಲವುಗಳ ಸೃಷ್ಟಿ ನಡೆಯುತ್ತದೆ. ರಥದಲ್ಲಿ ಕುಳಿತು ಸಂಚರಿಸುವೆವು ಕೂಡಾ. ರಥ ಗಟಾರಕ್ಕೆ ಬಿತ್ತು ಎಂದಾಗ ಎಚ್ಚೆತ್ತುಕೊಳ್ಳುವೆವು. ಹಾಸಿಗೆಯ ಮೇಲೆ ಮಲಗಿರುತ್ತೇವೆ. ರಥ, ಕುದುರೆ, ಮಾರ್ಗ ಯಾವುದೂ ಇಲ್ಲ.

ಹೀಗೆ ಸ್ವಪ್ನಲೋಕದಲ್ಲಿ ಬೇರೆ ಬೇರೆ ವಸ್ತುಗಳನ್ನು ಸೃಷ್ಟಿಸಿ, ಅವುಗಳನ್ನು ನಮಗೆ ತೋರಿಸಿ, ಕೊನೆಗೆ ಅವುಗಳನ್ನು ನಾಶಮಾಡುವವನು ಭಗವಂತ ಎಂದು ಉಪನಿಷತ್ತು ಸಾರಿರುವುದನ್ನು ಶ್ರೀ ವೇದವ್ಯಾಸರು **'ಸಂಧ್ಯೇ ಸೃಷ್ಟಿರಾಹ ಹಿ'** - ಎಂಬ ಬ್ರಹ್ಮಸೂತ್ರದಲ್ಲಿ ಸಿದ್ಧಾಂತಿಸಿರುವರು.

ಹೀಗೆ ಸ್ವಾಪ್ನಪದಾರ್ಥಗಳನ್ನು ಸೃಷ್ಟಿಸಿ, ನಮಗೆ ತೋರಿಸುವ ಭಗವಂತನಲ್ಲಿ ಪ್ರಾರ್ಥಿಸಿಕೊಳ್ಳಬೇಕು - ನಮ್ಮ ಪಾಲಿಗೆ 'ದುಃಸ್ವಪ್ನನಾಶನ '- ಎನಿಸಿ ನಮಗೆ ಕೆಟ್ಟ ಸ್ವಪ್ನಗಳು ಕಾಣಿಸದಂತೆ ಮಾಡು. ಕೆಟ್ಟ ಸ್ವಪ್ನಗಳನ್ನು ತೋರಿಸಬೇಡ.

ಪ್ರತಿನಿತ್ಯ ರಾತ್ರಿ ಮಲಗುವ ಮುಂಚೆ ದುಃಸ್ವಪ್ನನಾಶನ ಎಂಬ ನಾಮದ ಮೂಲಕ ದುಃಸ್ವಪ್ನಗಳನ್ನು ಪರಿಹರಿಸುವ ಅವನ ಮಹಿಮೆಯನ್ನು ಅನುಸಂಧಾನ ಮಾಡಿದರೆ ದುಃಸ್ವಪ್ನಕ್ಕೆ ಒಳಗಾಗುವ ದುಃಸ್ಥಿತಿಯನ್ನು ಕಡಿಮೆ ಮಾಡಿಕೊಳ್ಳಬಹುದು.

**೯೨೬. ವೀರಹಾ – ಗರುಡನೇ ಮುಂತಾದರನ್ನೂ, ಮುಖ್ಯಪ್ರಾಣನೇ ಮುಂತಾದವರನ್ನೂ ಕಬಳಿಸುವವನು.**

**ವಿವರಣೆ :** ವಿ + ಈರ + ಹಾ - ವೀರಹಾ. ವಿ ಎಂದರೆ ಗರುಡ. ಈರ ಎಂದರೆ ಮುಖ್ಯಪ್ರಾಣ. ಅಸ್ವತಂತ್ರಚೇತನರಲ್ಲಿ ಎರಡು ಗುಂಪು. ದೇವರ ಬಗ್ಗೆ ಎಂದೂ ತಪ್ಪು ಭಾವನೆಗೆ ಒಳಗಾಗದೆ ಅವನಿಗೆ ವಿರುದ್ಧವಾಗಿ ಎಂದೂ ನಡೆದುಕೊಳ್ಳದ ಗುಂಪು ಒಂದು. 'ಪರಶುಕ್ಲತ್ರಯ'- ಎನಿಸುವ ಈ ಗುಂಪಿನಲ್ಲಿ ವಾಯುದೇವ ಅವನ

ಪತ್ನಿ ಭಾರತೀ, ಚತುರ್ಮುಖ, ಅವನ ಪತ್ನಿ ಸರಸ್ವತಿ ಹಾಗೂ ಲಕ್ಷ್ಮೀದೇವಿ ಹೀಗೆ ಈ ಐದುಮಂದಿಗಳು ಸೇರಿರುವರು.

ಈ ಗುಂಪಿನವರನ್ನು ಬಿಟ್ಟರೆ ಉಳಿದ ಚೇತನರಲ್ಲಿ ಶೇಷ, ಗರುಡ, ರುದ್ರನೇ ಮುಂತಾದವರೆಲ್ಲ ಎಲ್ಲಾದರೂ ಒಮ್ಮೊಮ್ಮೆ ದೇವರ ಬಗ್ಗೆ ತಪ್ಪು ಕಲ್ಪನೆಗೆ ಒಳಗಾಗಿ ಅವನ ವಿರುದ್ಧವಾಗಿಯೂ ನಡೆದುಕೊಳ್ಳುವುದುಂಟು. ಇಂತಹ ಚೇತನರದ್ದು ಮತ್ತೊಂದು ಗುಂಪು.

ಗರುಡನನ್ನು ತಿಳಿಸುವ 'ವಿ' ಶಬ್ದ ಗರುಡನನ್ನು ಒಳಗೊಂಡ ಆ ಮತ್ತೊಂದು ಗುಂಪಿನವರನ್ನೆಲ್ಲ ಸೂಚಿಸಿಕೊಟ್ಟರೆ, ವಾಯುದೇವನನ್ನು ತಿಳಿಸುವ 'ಈರ' ಶಬ್ದ ವಾಯುದೇವನನ್ನು ಒಳಗೊಂಡ 'ಪರಶುಕ್ಲತ್ರಯ'ದ ಗುಂಪಿನವರನ್ನೆಲ್ಲ ಸೂಚಿಸಿ ಕೊಡುವುದು. ಆದುದರಿಂದ 'ವೀರಹಾ'- ಎಂಬಲ್ಲಿಯು ವೀರ ಶಬ್ದಕ್ಕೆ 'ಪರಶುಕ್ಲತ್ರಯ' ದ ಗುಂಪಿಗೆ ಸೇರಿದ, ಮತ್ತೊಂದು ಗುಂಪಿಗೆ ಸೇರಿದ ಎಲ್ಲರೂ ಅರ್ಥ. ಅವರನ್ನೆಲ್ಲ ಪ್ರಳಯಕಾಲದಲ್ಲಿ ಕಬಳಿಸುವುದರಿಂದ ಭಗವಂತ ವೀರಹಾ ಎನಿಸುವನು.

ನಾಟಕದಲ್ಲಿ ಚೆನ್ನಾಗಿ ವೇಷ ಧಾರಣೆ ಮಾಡಿದ್ದಾನೆ, ಚೆನ್ನಾಗಿ ಮಾತನಾಡುತ್ತಿದ್ದಾನೆ. ಆದರೂ ಗೊತ್ತುಪಡಿಸಿದ ಕಾಲಾವಧಿಯಲ್ಲಷ್ಟೇ ಅವನು ಕುಣಿಯಬೇಕೇ ಹೊರತು ಸ್ವಲ್ಪ ಹೆಚ್ಚು ಮಾತನಾಡಲು ತೊಡಗಿದ ಎಂದರೆ ಹಿಂದಿನಿಂದ ಭಾಗವತರು ಘಂಟೆ ಬಾರಿಸಲು ಪ್ರಾರಂಭಿಸುವರು.

ಹಾಗೆಯೇ 'ಪರಶುಕ್ಲತ್ರಯ' ಗುಂಪಿಗೆ ಸೇರಿದ. ಚತುರ್ಮುಖಾದಿಗಳೇ ಆಗಿರಲಿ ಅವರವರ ಸಾಧನಾನುಷ್ಠಾನದ ಅವಧಿ ಮುಗಿಯಿತೆಂದರೆ ಏನೂ ಸಂಕೋಚವಿಲ್ಲದೆ ಅವರನ್ನೂ ಕಬಳಿಸಿಯೇ ಬಿಡುವನು.

ಕೃಷ್ಣನೇ ಮುಂದೆ ತಾನು ಅದೃಶ್ಯನಾದಾಕ್ಷಣ ತನ್ನ ಜೊತೆಗೆ ಭೀಮನನ್ನೂ ಕರೆದೊಯ್ಯುವನು.

ಹೀಗೆ ಸಾಧನಾನುಷ್ಠಾನದ ಅವಧಿ ಮುಗಿಯಲು ಪ್ರತಿಯೊಬ್ಬರನ್ನೂ ಮುಗಿಸುವ ಭಗವಂತನ ಮಹಿಮೆಯನ್ನು 'ವೀರಹಾ' ನಾಮದಿಂದ ಉಪಾಸನೆ ನಡೆಸಿದಲ್ಲಿ ಏನೂ ಸಾಧನಾನುಷ್ಠಾನ ನಡೆಸಲೂ ಆಗದ ಸ್ಥಿತಿಯಲ್ಲಿದ್ದುಕೊಂಡು ಮರಣಕ್ಕೂ ಒಳಗಾಗದೆ ನರಳುತ್ತಿರುವ ವ್ಯಕ್ತಿಗಳ ದುಃಸ್ಥಿತಿಯು ಪರಿಹಾರವಾಗಬಹುದು. ಅಂತಹ ಸ್ಥಿತಿಯಲ್ಲಿ ಪವಮಾನ ಹೋಮ ನಡೆಸಿದರೆ ಒಂದೋ ಆ ವ್ಯಕ್ತಿ ಆರೋಗ್ಯವಂತನಾಗುವನು, ಇಲ್ಲವೇ ಮರಣಕ್ಕೆ ಒಳಗಾಗಿ

ಬಿಡುವನು ಹೇಗೋ  ಹಾಗೆ ವೀರಹಾ ನಾಮದ ಉಪಾಸನೆಯೂ ಆ ರೀತಿಯ ಫಲವನ್ನು ನೀಡಬಲ್ಲದು.

**೯೨೭. ರಕ್ಷಣಃ – * ರಕ್ಷಿಸುವವನು.**

***    ರಕ್ಷಣೆಗಾಗಿ ಕ್ಷಣಗಣನೆ ಮಾಡುತ್ತಿರುವವನು.**

ವಿವರಣೆ :  ರಕ್ಷಣ ಶಬ್ದಕ್ಕೆ ರಕ್ಷಣೆ ಮಾಡುವವನು ಎಂಬ ಅರ್ಥ. ರಕ್ಷಣೆಯಲ್ಲಿ ಪೂರ್ಣವಾಗಿ ತನ್ನನ್ನು ತೊಡಗಿಸಿಕೊಂಡಿದ್ದಾನೆಂದು ಸೂಚಿಸುವುದಕ್ಕಾಗಿ 'ರಕ್ಷಕ' ಎನ್ನದೆ ರಕ್ಷಣೆ ಕ್ರಿಯೆಯನ್ನು ತಿಳಿಸುವ 'ರಕ್ಷಣ' ಶಬ್ದದಿಂದಲೇ  ಅವನನ್ನು ಸ್ತುತಿಸಲಾಗಿದೆ.

ಅಲ್ಲದೆ, 'ರಕ್ಷಣ' ಶಬ್ದವನ್ನು ರ + ಕ್ಷಣ - ಎಂದು ವಿಭಾಗ ಮಾಡಿ ಅರ್ಥೈಸಿಕೊಂಡರೆ ರ ಎಂದರೆ ರಕ್ಷಣೆಗಾಗಿ ಕ್ಷಣ ಎಂದರೆ ಕ್ಷಣಗಣನೆ ಮಾಡುವವನು, ಕಾಲವನ್ನು ನಿರೀಕ್ಷಿಸುತ್ತ ಇರುವವನು. **'ಕಣ್ಣಿಗೆ ಎವೆಯಂದದಿ.....'**- ಎಂದು ದಾಸರು ಸ್ತುತಿಸಿರುವಂತೆ ಕಣ್ಣಿಗೆ ರೆಪ್ಪೆ  ಕಾಣಿಸುವುದಿಲ್ಲ, ಆದರೂ ಕಣ್ಣಿಗೆ ಏನಾದರೂ ಕಸ ಬೀಳುತ್ತೆ ಎಂದಾಗ ಕೂಡಲೇ ರೆಪ್ಪೆ ಮುಚ್ಚಲ್ಪಟ್ಟು ಆ ಕಸ ಕಣ್ಣಿಗೆ ಬೀಳದಂತೆ ಕಣ್ಣನ್ನು ರಕ್ಷಿಸುವುದು. ಹಾಗೆಯೇ ದೇವರು ನಮಗೆ ಎಲ್ಲಿ ಹಾನಿ ಆಗುವುದೋ ಎಂದು ಕ್ಷಣ ಗಣನೆ ಮಾಡುತ್ತ ಅಂತಹ ಅಪಾಯದ ಸ್ಥಿತಿ ಬಂತೆಂದೂಕ್ಷಣ ರಕ್ಷಣೆಗಾಗಿ ಒದಗಿ ಬರುವನು.

ಭಾಗವತದಲ್ಲಿ ಬಾಲಕವೇಷದಲ್ಲಿ ಬರುವ ಯಮದೇವ ಹೀಗೆ ಹೇಳುವುದುಂಟು - **'ಪಥಿ ಚ್ಯುತಂ ತಿಷ್ಠತಿ  ದಿಷ್ಟರಕ್ಷಿತಂ ಗೃಹೇ ಸ್ಥಿತಂ ತದ್ವಿಹತಂ ವಿನಶ್ಯತಿ.'**

ದಾರಿಯ ಮಧ್ಯದಲ್ಲಿ ಬಿದ್ದಿದ್ದರೂ ದೇವರ ರಕ್ಷಣೆಗೆ ಒಳಗಾಗಿದ್ದರೆ ಸುರಕ್ಷಿತವಾಗಿರುತ್ತದೆ. ಅದೇ ದೇವರ ರಕ್ಷಣೆಯಿಂದ ವಂಚಿತವಾಗಿದ್ದದ್ದು. ಮನೆಯೊಳಗಿದ್ದರೂ  ಇದ್ದಕ್ಕಿಂದ್ದಂತೆ ಮಾಯವಾಗಿ ಬಿಡುವುದು. !

'ಹಿಟ್‌ಲಿಸ್ಟಿ' ನಲ್ಲಿದೆ ಉಡುಪಿ ಕೃಷ್ಣ ಮಠ. ಅಲ್ಲಿಯ ಉಪನ್ಯಾಸಕ್ಕೆ ಬಂದರೆ ಎಲ್ಲಾದರೂ ಬಾಂಬು ಹಾಕಿ ಬಿಟ್ಟರೆ ಸಾಯಬೇಕಾದೀತೆಂದು ಭಯಪಟ್ಟು ಮನೆಯಲ್ಲಿಯೇ ಕುಳಿತ ವ್ಯಕ್ತಿ ಸಿಡಿಲು ಬಡಿದು ಯಾಕೆ ಸಾಯಬಾರದು ? ಮನೆಯ ಗೋಡೆ ಕುಸಿದು ಯಾಕೆ ಸಾಯಬಾರದು !

ಈ ಬಗೆಯಲ್ಲಿ ಭಗವಂತನ ರಕ್ಷಣೆಯ ವೈಖರಿಯನ್ನು ಮೆಲುಕು ಹಾಕುತ್ತ

'ರಕ್ಷಣಃ' - ಎಂದು ಸ್ತುತಿಸಬೇಕು.

**೬೨೮. ಸಂತಃ – ಭಕ್ತರ ರಕ್ಷಣೆಗಾಗಿ ಎಲ್ಲೆಡೆ ವ್ಯಾಪಿಸಿರುವವನು.**

ವಿವರಣೆ : 'ರಕ್ಷಣ' ನಾಮದಿಂದ ಸೂಚಿತವಾಗಿರುವಂತೆ ಭಗವಂತನು ನಮಗೆ ಎಲ್ಲೆಡೆ ರಕ್ಷಣೆ ನೀಡುವುದಕ್ಕಾಗಿಯೇ 'ಸಂತ'ನಾಗಿರುವನು. ಸಮ್ಯಕ್ ತತನಾಗಿರುವವನೇ, ಚೆನ್ನಾಗಿ ಎಲ್ಲೆಡೆ ವ್ಯಾಪಿಸಿಕೊಂಡಿರುವವನೇ 'ಸಂತ'.

'ಸಾಧುಸಂತರು' - ಎಂದು ಸಾಧುಗಳನ್ನು ಸಂತರು ಎಂದು ಕರೆಯುವ ಹಿನ್ನೆಲೆಯೂ ಇದೇ ಇದ್ದಿರಬಹುದು. ಅವರು ಒಂದು ಕಡೆ ನೆಲೆವೂರುವುದೆಂದು ಇಲ್ಲ. ಸಜ್ಜನರಿಗೆ ಭಗವಂತನ ಸಂದೇಶಗಳನ್ನು ತಲುಪಿಸುತ್ತ ಎಲ್ಲೆಡೆ ಸಂಚರಿಸುತ್ತ ಇರುವರು. ಹೀಗೆ ಎಲ್ಲೆಡೆ ಸಂಚಾರದ ಮೂಲಕ ವ್ಯಾಪಿಸಿಕೊಂಡಿರುವುದರಿಂದಲೇ ಸಾಧುಗಳೂ ಸಂತರೆನಿಸಿರಬಹುದು.

ಭಗವಂತನಂತೂ ಆ ಅರ್ಥದಲ್ಲಿಯೇ 'ಸಂತ'. ಭಕ್ತರ ರಕ್ಷಣೆಗಾಗಿ ಕ್ಷಣಗಣನೆ ಮಾಡುತ್ತಿರುವ ಅವನು 'ತನ್ನವರನರೆ ಘಳಿಗೆ ಬಿಟ್ಟಗಲನು....' ಎಂದು ಸ್ತುತನಾಗಿರುವಂತೆ ಭಕ್ತರ ಜೊತೆಗೆಯೇ ಇರುವನೆಂದರೆ ಭಕ್ತರು ಹೋಗುವಲ್ಲೆಲ್ಲ ಹೋಗುವನೆಂದರ್ಥ. ಆದುದರಿಂದ 'ಸಂತತ' ಆಗಿರಲೇಬೇಕು ತಾನೇ ? ನಮ್ಮ ಮಕ್ಕಳು ಶಾಲೆಗೆ ಹೊರಟಾಗ ಅವುಗಳಿಗೆ ಜಾಗ್ರತೆಯಾಗಿ ಹೋಗಲು ಎಚ್ಚರಿಸುವೆವು. ಆದರೆ ಅವುಗಳ ರಕ್ಷಣೆಗಾಗಿ ನಾವೇನೂ ಹೋಗುವುದಿಲ್ಲ. ಆದರೆ ಹಿಂದಿನವರೊಂದು ಮಾತು ಹೇಳುತ್ತಿದ್ದರು 'ದೇವರು ರಕ್ಷಣೆ ನೀಡಲಿ' - ಎಂದು.

ಹೀಗೆ 'ರಕ್ಷಣ' ಎನಿಸಿರುವ ಭಗವಂತ ತನ್ನವರನ್ನು ರಕ್ಷಿಸುವುದಕ್ಕಾಗಿ ಅವರು ಎಲ್ಲೆಲ್ಲಿಗೆ ಅಡ್ಡಾಡುವರೋ ಅವರ ಜೊತೆಗೆಯೇ ಅಲ್ಲೆಲ್ಲ 'ಸಂತತ'ನಾಗಿ ಸಾಗುತ್ತ 'ಸಂತ' ಎನಿಸುವನು.

**೬೨೯. ಜೀವನಃ – ಜೀವರಿಗಿಂತ ವಿಲಕ್ಷಣನಾಗಿರುವವನು.**

ವಿವರಣೆ : ಹೀಗೆ ನಮ್ಮ ರಕ್ಷಣೆಯಲ್ಲಿ ತೊಡಗಿ ನಮ್ಮ ಜೊತೆಯಲ್ಲೇ ಇರುವ 'ದೇವರು' - ಅಂದರೆ ಯಾರು ? ಎಂಬ ಪ್ರಶ್ನೆ ಬಂದರೆ ಅದಕ್ಕೆ ಸಮಾಧಾನ - 'ಜೀವನಃ'

ಇಂದ್ರಿಯಗಳಿಗೆ ಗೋಚರಿಸದ ದೇವರನ್ನು ಕೈಬೆಟ್ಟು ಮಾಡಿ ತೋರಿಸಿ ಕೊಡಲಾಗದು, ಅಪ್ರಾಕೃತನಾದ ಅವನನ್ನು ನಮಗೆ ಕಾಣಿಸುವ ಯಾವುದೇ ಗುಣಧರ್ಮದಿಂದಲೂ ಗುರುತಿಸಿ ಕೊಡಲಾಗದು. ಮತ್ತೆ ಅವನನ್ನು ನಿಷೇಧ

ಮುಖದಿಂದಷ್ಟೇ ಪರಿಚಯಿಸಿ ಕೊಡಬೇಕಾದದ್ದು. ಅದೇ 'ಜೀವನಃ' ಎಂದು. ಜೀವ+ ನಃ - ಜೀವನಃ ನಮಗೆ ಕಾಣಿಸುವ ಜೀವನಲ್ಲ, ಜೀವನಿಗಿಂತ ವಿಲಕ್ಷಣನಾಗಿರುವವನು.

ನಾನೇ ದೇವರು - ಎಂಬ ವಾದದ ಹಿನ್ನಲೆಯಲ್ಲಿ 'ನಾನು ದೇವರಲ್ಲ'- ನಾನು ಎನಿಸುವ ಜೀವ ದೇವರಲ್ಲ.

'ನಾನೇ ಅವನು ಅವನೇ ನಾನು' - ಎನ್ನುವ ವಾದಕ್ಕೆ ಅವಕಾಶವಿಲ್ಲ. ನಕಾರಗಳ ಮಾಲೆಯನ್ನು ಉಚ್ಚರಿಸಿಯೇ ಅವನನ್ನು ಪರಿಚಯಿಸಿಕೊಡಬೇಕೆಂಬ ಚಾಪಲ್ಯ ಇದ್ದರೆ 'ನಾನೇ ಅವನು, ಅವನೇ ನಾನು' ಎನ್ನುವ ಬದಲು 'ನಾನು ನಾನೇ ಅವನು ಅವನೇ' ಎಂದಷ್ಟೇ ಹೇಳಬಹುದು. ಇದು 'ಜೀವ -ನಃ' - ಎಂಬ ನಾಮದ ಆಂತರ್ಯ.

ಜೀವನನಾಮಕ್ಕೆ ಇನ್ನೂ ಅನೇಕ ಅರ್ಥಗಳನ್ನು ಹೇಳಬಹುದು.

ಭೀಷ್ಮರಲ್ಲಿ ಎಂಟು ವಸುಗಳ ಎಂಟು ಮುಖಗಳು, ಚತುರ್ಮುಖನ ಆವೇಶದ ಮತ್ತೊಂದುಮುಖ ಹಾಗೂ ಶ್ರೀಕೃಷ್ಣನ ಆವೇಶದ ಇನ್ನೊಂದು ಮುಖ - ಹೀಗೆ ಒಟ್ಟು ಹತ್ತು ಮುಖಗಳು ಸೇರಿಕೊಂಡಿವೆ.ಆದುದರಿಂದ ವಿಷ್ಣುಸಹಸ್ರನಾಮದ ಒಂದೊಂದು ನಾಮಕ್ಕೂ ಕನಿಷ್ಠ ಹತ್ತತ್ತು ಅರ್ಥಗಳನ್ನು ಹೇಳಬಹುದು. ಆದರೆ ಭೀಷ್ಮರ ದ್ಯುನಾಮ ವಸುವಿನ ಒಂದು ಮುಖವನ್ನಷ್ಟೇ ಇಟ್ಟುಕೊಂಡು ಒಂದು ಅರ್ಥವನ್ನೇ ಚಿಂತಿಸೋಣ.

**೯೩೦. ಪಯುವಸ್ಥಿತಃ – ರಕ್ಷಣೆಗಾಗಿ ಸುತ್ತಲೂ ಅನೇಕ ರೂಪಗಳಿಂದ ಇರುವವನು.**

**ವಿವರಣೆ :** ಪರಿ + ಅವಸ್ಥಿತಃ ಪರ್ಯವಸ್ಥಿತಃ. ಪರಿ ಎಂದರೆ ಪರಿತಃ ಸುತ್ತಲೂ ಅವಸ್ಥಿತಃ ಇರುವವನು.

ಹಿಂದೆ 'ರಕ್ಷಣಃ' 'ಸಂತ' - ಎಂಬುದಾಗಿ ಎಲ್ಲೆಡೆ ವ್ಯಾಪಿಸಿ ರಕ್ಷಿಸುತ್ತಿರುವವನೆಂದು ಪ್ರಸ್ತುತವಾಗಿತ್ತು. ರಕ್ಷಣೆಗಾಗಿ ಇರುವ ಅವನ ಸ್ಥಿತಿಯ ಮತ್ತೊಂದು ಬಗೆಯ ವೈಭವವನ್ನು ಪರ್ಯವಸ್ಥಿತ ನಾಮ ಸಾರುತ್ತಿದೆ. ರಕ್ಷಿಸಬೇಕಾದ ವ್ಯಕ್ತಿಯ, ವಸ್ತುವಿನ ಸುತ್ತಲೂ ಇರುವವನು. ಒಂದೇ ರೂಪದಿಂದ ಇರುವನೆಂದೂ ಹೇಳಲಾಗದು. 'ಅಗ್ರತಃ ಪಾರ್ಶ್ವತಶ್ಚೈವ.....' ಎಂಬ ಶ್ಲೋಕದಲ್ಲಿ ತಿಳಿಸಿರುವಂತೆ ಶ್ರೀ ರಾಮ ಲಕ್ಷ್ಮಣರು ಹಿಂದೆ ಮುಂದೆ, ಎಡ ಬಲ ಭಾಗಗಳಲ್ಲಿದ್ದು ರಕ್ಷಿಸುವಂತೆ ಸುತ್ತ ಅನೇಕ ರೂಪಗಳಿಂದ ಇದ್ದುಕೊಂಡೂ ರಕ್ಷಿಸುವುದಿದೆ.

ಭೀಷ್ಮರಿಗೆ 'ಪರ್ಯವಸ್ಥಿತ' ನಾಮದಿಂದ ಸುತ್ತ ಅನೇಕ ರೂಪಗಳಿಂದ ಇದ್ದು ರಕ್ಷಿಸುವ ಭಗವಂತನ ಲೀಲೆಯನ್ನು ಅನುಸಂಧಾನ ಮಾಡುವಾಗ ಪಾಂಡವರ ಶಿಬಿರವನ್ನು ರಕ್ಷಿಸುತ್ತಿದ್ದ ಕೃಷ್ಣನ ರಕ್ಷಣೆಯ ವೈಖರಿ ಕಣ್ಣೆದುರು ಸುಳಿಯದಿರದು. ಅವರು ಅದನ್ನು ಕಣ್ಣಾರೆ ಕಾಣದಿದ್ದರೂ ಯಾರಿಂದಾದರೂ ಕೇಳದಿರುವ ಸಾಧ್ಯತೆ ಇಲ್ಲ. ಉಪಪಾಂಡವರ ತಲೆ ಕಡಿದು ತನಗೆ ತೋರಿಸಬೇಕೆಂಬ ದುರ್ಯೋಧನನ ಕೊನೆಯ ಆಸೆಯನ್ನು ಪೂರೈಸುವುದಕ್ಕಾಗಿ ಪಾಂಡವರ ಶಿಬಿರದತ್ತ ಸಾಗಿದ ಅಶ್ವತ್ಥಾಮಾಚಾರ್ಯರು ಶಿಬಿರವನ್ನು ಪ್ರವೇಶಿಸಬೇಕು ಎಂದಾಗ ಶಿಬಿರದ ದ್ವಾರದಲ್ಲಿ ರುದ್ರದೇವರ ಉಗ್ರರೂಪವನ್ನು ಕಾಣುವರು. ಅಷ್ಟೇ ಅಲ್ಲ '.... ಪರೀತಂ ವಾಸುದೇವೇನ ಬಹುಕೋಟಿಸ್ವರೂಪಿಣಾ ' - ಕೃಷ್ಣನ ಬಹುಕೋಟಿರೂಪಗಳು ಆ ರುದ್ರರೂಪದ ಸುತ್ತ ಇದ್ದು ರಕ್ಷಣೆ ನೀಡುತ್ತಿದ್ದವು.

ಆದ್ದರಿಂದ ಭಕ್ತರ ರಕ್ಷಣೆಗಾಗಿ ಎಲ್ಲೆಡೆ ಇರುವ ಭಗವಂತ ಒಂದೇ ರೂಪದಿಂದ ಇರುವನೆಂದೇನೂ ಹೇಳಲಾಗದು. ಹತ್ತಾರು ರೂಪಗಳಿಂದಲೂ ಸುತ್ತುವರಿದು ರಕ್ಷಣೆ ನೀಡುತ್ತಿರಬಹುದು. 'ಪರ್ಯವಸ್ಥಿತ' ನಾಮದಿಂದ ಅವನ ಈ ಬಗೆಯ ಲೀಲೆಯನ್ನು ಅನುಸಂಧಾನ ಮಾಡಬಹುದು.

**ಅನಂತರೂಪೋಽನಂತಶ್ರೀರ್ಜಿತಮನ್ಯುರ್ಭಯಾಪಹಃ |**
**ಚತುರಸ್ರೋ ಗಭೀರಾತ್ಮಾ ವಿದಿಶೋ ವ್ಯಾದಿಶೋ ದಿಶಃ ||೧೦೦||**

**೯೩೧. ಅನಂತರೂಪಃ – ಅನಂತ ಜೀವರ ಬಿಂಬರೂಪದಲ್ಲಿ ಅನಂತ ರೂಪಗಳನ್ನು ಹೊತ್ತಿರುವವನು.**

**ವಿವರಣೆ:** ಜೀವರು ಅನಂತ ಸಂಖ್ಯೆಯಲ್ಲಿ ಇರುವರು. ಅಂತಹ ಅನಂತ ಜೀವರಲ್ಲಿ ಒಬ್ಬೊಬ್ಬರಿಗೂ ಭಗವಂತ ಬೇರೆ ಬೇರೆಯೇ ಬಿಂಬ ರೂಪದಿಂದ ಇರುವನು. ಆದುದರಿಂದ ಜೀವರು ಅನಂತರಾಗಿರುವಂತೆ, ಅವರಿಗೆ ಬಿಂಬರೂಪಗಳಾಗಿರುವ ಭಗವಂತನ ರೂಪಗಳೂ ಅನಂತ.

ಒಂದು ಮನೆಯಲ್ಲಿ ಹತ್ತಾರು ಮಕ್ಕಳು ಇದ್ದರೆ ಅವರಿಗೆ ತಂದೆ ಒಬ್ಬನೇ ತಾಯಿ ಒಬ್ಬಳೇ. ಎಲ್ಲರ ರಕ್ಷಣೆಯನ್ನೂ ಅವರಿಬ್ಬರೇ ಮಾಡುವರು. ರಕ್ಷಣೆ ಮಾಡುತ್ತಾರೋ ಬಿಡುತ್ತಾರೋ ಬೇರೆ ವಿಷಯ. ಅಂತೂ ರಕ್ಷಣೆ ಮಾಡುವುದಾದರೂ ಎಲ್ಲ ಮಕ್ಕಳನ್ನೂ ಇಬ್ಬರೇ ರಕ್ಷಣೆ ಮಾಡುವವರು. ಆದರೆ ಭಗವಂತ ಹಾಗಲ್ಲ. ಅನಂತ ಜೀವರನ್ನೂ ತನ್ನ ಒಂದೇ ರೂಪದಿಂದ ರಕ್ಷಿಸುವ ಸಾಮರ್ಥ್ಯವಿದ್ದರೂ

ಒಬ್ಬೊಬ್ಬರ ಪಾಲಿಗೆ ಒಂದೊಂದು ಬಿಂಬರೂಪವನ್ನು ತಾಳಿ ಬೇರೆ ಬೇರೆ ಜೀವರನ್ನು ಬೇರೆ ಬೇರೆ ರೂಪದಿಂದಲೇ ರಕ್ಷಿಸುತ್ತಿದ್ದಾನೆ. ಆದ್ದರಿಂದ ರಕ್ಷಣೆಯ ವಿಷಯದಲ್ಲಿ ಒಬ್ಬ ಜೀವ ಮತ್ತೊಬ್ಬನ ಜೊತೆ ಜಗಳಾಡಬೇಕಾದ ಪ್ರಸಂಗವೇ ಇಲ್ಲ.

ಹೀಗೆ ಅನಂತ ಜೀವರ ಬಿಂಬರೂಪವಾಗಿ ಅನಂತರೂಪಗಳನ್ನು ತಾಳಿರುವವನೆಂಬ ಅರ್ಥದ ಜೊತೆಗೆ 'ಅನಂತರೂಪ' ನಾಮಕ್ಕೆ ಮತ್ತೊಂದು ಅರ್ಥವನ್ನೂ ನೋಡಬಹುದು. ಅನಂ - ತರೂ - ಪ - ಎಂದು ಮೂರು ಶಬ್ದಗಳ ಸಂಯೋಜನೆಯಿಂದ ರೂಪುಗೊಂಡ ನಾಮ ಅನಂತರೂಪ ಎಂದಿಟ್ಟು ಕೊಳ್ಳಬೇಕು.

ಅನಂ ಎಂದರೆ ಮುಖ್ಯಪ್ರಾಣನನ್ನು ತರು ಎಂದರೆ ದಾಟಿಸುವವನು, ಮರಕ್ಕೆ ತರು ಎಂಬ ಹೆಸರು ಅದರಿಂದ ನಿರ್ಮಿತವಾಗುವ ದೋಣಿಯಿಂದ ನಮ್ಮನ್ನು ಅದು ದಾಟಿಸುವುದೆಂಬ ದೃಷ್ಟಿಯಿಂದಲೇ .

ಹಾಗಾದರೆ 'ಅನಂತರು' - ಎಂಬುದಕ್ಕೆ ಮುಖ್ಯ ಪ್ರಾಣನನ್ನು ದಾಟಿಸುವವನು ಎಂಬ ಅರ್ಥ ಆಗುವುದು. ಪ್ರಳಯ ಕಾಲದಲ್ಲಿ ಮುಖ್ಯಪ್ರಾಣನನ್ನು ಕಬಳಿಸಿ ಅವನಿಗೆ ಚತುರ್ಮುಖನ ಪದವಿಯ ಮುಂಬಡ್ತಿಯನ್ನು ಕೊಡುವವನು. ಮುಖ್ಯಪ್ರಾಣನ ರೂಪದಿಂದ ಭಗವಂತನ ಉದರವನ್ನು ಹೊಕ್ಕವನು ಚತುರ್ಮುಖನ ರೂಪ ಧರಿಸಿ ಹೊರಟಿರುವನು. ಇದನ್ನೇ ಮುಖ್ಯಪ್ರಾಣನನ್ನು ದಾಟಿಸುವವನು ಎಂದು ಹೇಳಲಾಗಿದೆ. ಮುಖ್ಯಪ್ರಾಣನ ಈ ತರಣ ಉಳಿದವರ ಸಂಸಾರತರಣಕ್ಕಿಂತ ವಿಶಿಷ್ಟವಾಗಿರುವುದನ್ನು ಸೂಚಿಸುವುದಕ್ಕಾಗಿಯೇ 'ತರೂ' ದೀರ್ಘವನ್ನು ಪ್ರಯೋಗಿಸಲಾಗಿದೆ. ಚತುರ್ಮುಖನ ರೂಪ ಹೊತ್ತ ಮುಖ್ಯಪ್ರಾಣನನ್ನು ಹೊಕ್ಕಳ ಕಮಲದಲ್ಲಿ ಕುಳ್ಳಿರಿಸಿ ಪಾಲಿಸುವನು. ಆದುದರಿಂದ 'ಅನಂತರೂಪ ' - ಅನಂ ತಾರಯತಿ ಪಾಲಯತಿ ಚ ಇತಿ ಅನಂತರೂಪ ಎನಿಸುವನು. ಅನಂತಶಯನದಲ್ಲಿ ಪವಡಿಸಿರುವ ಅನಂತ ಪದ್ಮನಾಭ ಶ್ರೀವಾದಿರಾಜ ತೀರ್ಥರೊಂದಿಗೆ ತಮಾಷೆಯಿಂದ ಸಂಭಾಷಣೆ ನಡೆಸಿರುವನು. ಹೊಕ್ಕುಳ ಕಮಲದಲ್ಲಿಯ ಪುಟ್ಟ ಮಗು ಕೆಳಗುರುಳ ಬಾರದೆದು ಪದ್ಮನಾಭ ಹಾಗೆಯೇ ಮಲಗಿರುವೆನೆಂದು. ನಾವು ಕೂಡಾ ವಾದಿರಾಜರಂತೆ ಭಕ್ತಿಯಿಂದ ಅಲ್ಲಿಗೆ ಹೋದಲ್ಲಿ ಪದ್ಮನಾಭ ಸಲುಗೆಯಿಂದ ಮಾತನಾಡಿಸಿಯಾನು! ಇಲ್ಲದಿದ್ದರೆ ಗಂಭೀರವಾಗಿ ಮಲಗಿಕೊಂಡಿರುವನಷ್ಟೇ.

ಅನಂ - ತರೂ - ಪ - ವಾಯುದೇವನನ್ನು ಬ್ರಹ್ಮಪದವಿಗೆ ದಾಟಿಸಿ ರಕ್ಷಣೆ ನೀಡಿರುವುದನ್ನು ತಿಳಿಸುತ್ತಿರುವಂತೆ ಭಗವಂತ ನಮ್ಮ ಪಾಲಿಗೂ ತಾರಕನಾಗಿ ಒಂದು ಜನ್ಮದಿಂದ ಮತ್ತೊಂದು ಉತ್ತಮ ಜನ್ಮಕ್ಕೆ ದಾಟಿಸುವನು. ಒಮ್ಮೆ ವೈಷ್ಣವ ಜನ್ಮ

ಕೊಟ್ಟಿದ್ದರೆ, ಮುಂದೆ ವೈಷ್ಣವ ಜನ್ಮದಲ್ಲೂ ಸಾಧನಾನುಷ್ಠಾನಕ್ಕೆ ಮತ್ತಷ್ಟು ಸೌಲಭ್ಯ ದೊರಕುವಂತೆ ಮತ್ತಷ್ಟು ಎತ್ತರದ ಜನ್ಮ. ಹೀಗೆ ನಮ್ಮನ್ನೂ ಎತ್ತರಕ್ಕೆ ದಾಟಿಸುತ್ತ ಅಲ್ಲಿ ಹೆಚ್ಚೆಚ್ಚು ಸಾಧನಾನುಷ್ಠಾನ ಮಾಡುವಂತೆ ಪಾಲಿಸುವವನೆಂಬ ಅರ್ಥವನ್ನೂ ಸೂಚಿಸಿಕೊಡಬಲ್ಲದು.

**೯೩೨. ಅನಂತಶ್ರೀಃ – ಮುಖ್ಯಪ್ರಾಣನನ್ನು ಆ ರೀತಿಯಾಗಿ ರೂಪಿಸಲು ಬೇಕಾದ ಸಾಮರ್ಥ್ಯ ಉಳ್ಳವನು.**

ವಿವರಣೆ : ಅನಂ - ತರೂ - ಪ - ಎಂಬ ನಾಮದಿಂದ ಮುಖ್ಯಪ್ರಾಣನನ್ನು ಚತುರ್ಮುಖನ ಪದವಿಗೆ ದಾಟಿಸಿ, ಅಲ್ಲಿ ರಕ್ಷಣೆ ನೀಡುವವನೆಂದಾಗ, ಮುಖ್ಯಪ್ರಾಣನಂತಹ ಜೀವೋತ್ತಮನನ್ನು ಹಾಗೆ ದಾಟಿಸಲು ಬೇಕಾದ ಸಾಮರ್ಥ್ಯ ದೇವರಲ್ಲಿ ಇದೆಯೇ ಎಂಬ ಸಂದೇಹ ಬಂದಾಗ 'ಅನಂತಶ್ರೀಃ' ಎಂದು ಸ್ತುತಿಸಲಾಗುವುದು.

ಅನಂ - ತ - ಶ್ರೀಃ - ಮುಖ್ಯಪ್ರಾಣನನ್ನೂ ತನೋತಿ ರೂಪಿಸುವಂತಹ ಶ್ರೀಃ ಸಾಮರ್ಥ್ಯ ಉಳ್ಳವನು.

'ಆಭಾಸಕೋಽಸ್ಯ ಪವನಃ.....' ಎಂದಿರುವಂತೆ ವಾಯುದೇವ ಭಗವಂತನ ಪ್ರತಿಬಿಂಬನಾಗಿರುವುದರಿಂದ ಬಿಂಬನೆನಿಸಿರುವ ಭಗವಂತನಿಂದ ಅವನ ವ್ಯಕ್ತಿತ್ವ ರೂಪಿತವಾಗುವುದೆಂದು ಸಿದ್ಧವಾಗುವುದು.

ರೈವತಕಪರ್ವತದಲ್ಲಿ ಭೀಷ್ಮರು ಕಣ್ಣಾರೆ ಕಂಡ ದೃಶ್ಯ. ಕುಂತಿಯ ಪ್ರಾರ್ಥನೆಯ ಮೇರೆಗೆ ಕೃಷ್ಣ ಭೀಷ್ಮಾದಿಗಳ ವಿರುದ್ಧ ಕಾದಾಡುವನು. ಭೀಮ ಕೃಷ್ಣನ ವಿರುದ್ಧ ಕಾದಾಡುವುದಿಲ್ಲ ಎಂದು ವ್ರತ ತೊಟ್ಟವ. ಆದರೂ ಕೃಷ್ಣನ ಆದೇಶಾನುಸಾರ ಕೃಷ್ಣನ ಎದುರು ಕಾದಾಡಲು ಮನಸ್ಸಿಲ್ಲದೆ ಅವನ ರಥದ ಚಕ್ರವನ್ನು ಗಟ್ಟಿಯಾಗಿ ಹಿಡಿಯುವನು. ಕೃಷ್ಣ ಭೀಮನನ್ನು ತೆಗೆದು ಬಿಸಾಡುವನು.

ಕೃಷ್ಣನ ಈ ಲೀಲೆಯನ್ನು ಮೆಲುಕುಹಾಕುತ್ತ ಭೀಷ್ಮರು 'ಅನಂ-ತ-ಶ್ರೀಃ'- ಎಂದು ಸ್ತುತಿಸುವರು.

**೯೩೩. ಜಿತಮನ್ಯುಃ – ದೇಶ, ಕಾಲ, ವ್ಯಕ್ತಿ ಇವುಗಳನ್ನೆಲ್ಲ ಪರಿಶೀಲಿಸಿ ಬೇಕಾದಷ್ಟೇ ಪ್ರಮಾಣದಲ್ಲಿ ಬೇಕಾದ ಕಾಲದಲ್ಲೇ, ಬೇಕಾದ ವ್ಯಕ್ತಿಯ ಮೇಲೇಯೇ ಸಿಟ್ಟು ಮಾಡುವವನು.**

ವಿವರಣೆ : ಭಗವಂತನಿಗೆ 'ಅನಂತಶ್ರೀಃ' - ಎಂದಿರುವಂತೆ ವಾಯುದೇವನನ್ನೂ

ರೂಪಿಸುವಷ್ಟು ತಾಕತ್ತು ಇದೆ ಎಂದರೆ ಅದರ ಜೊತೆಗೆ ಅಹಂಕಾರ, ಕ್ರೋಧಾದಿಗಳೂ ಇವೆಯೋ ಎಂದರೆ 'ಜಿತಮನ್ಯುಃ' - ಸಿಟ್ಟನ್ನು ತನ್ನ ಹಿಡಿತದಲ್ಲಿಟ್ಟುಕೊಂಡಿರುವವನು.

ಯಾರ್‍ಯಾರದ್ದೋ ಸಿಟ್ಟನ್ನು ಯಾರ್‍ಯಾರ ಮೇಲೋ ತೋರಿಸುವುದುಂಟು. ಕಛೇರಿಯಲ್ಲಿ ಮೇಲಧಿಕಾರಿಯ ಬಗ್ಗೆ ತಾಳಿದ್ದ ಸಿಟ್ಟನ್ನು ಮನೆಯಲ್ಲಿ ಹೆಂಡ್ತಿ ಮಕ್ಕಳ ಮೇಲೆ ಕಾರುವುದುಂಟು. ಹಾಗೆ ಮಾಡಬಾರದು. ಎಷ್ಟು ಪ್ರಮಾಣದಲ್ಲಿ, ಯಾರ ಮೇಲೆ, ಯಾವಾಗ, ಯಾಕಾಗಿ ಎಂಬುದನ್ನೆಲ್ಲ ವಿಶ್ಲೇಷಿಸಿಕೊಂಡು ಸಿಟ್ಟು ತೋರಿಸಬೇಕು. ಆಗ ಸಿಟ್ಟನ್ನು ಹಿಡಿತದಲ್ಲಿಟ್ಟುಕೊಂಡಂತಾಗುವುದು. ನಾನು ನನ್ನ ಪ್ರವಚನ ಮುಗಿದಾಕ್ಷಣ ಒಬ್ಬ ಶಿಷ್ಯನನ್ನು ಇಲ್ಲಿಗೆ ಬರಲು ತಿಳಿಸಿದ್ದೆ. ಆದರೆ ಅವನು ಐದು ನಿಮಿಷ ತಡವಾಗಿ ಬಂದ. ಇಲ್ಲೇ ಅವನ ಮೇಲೆ ಕೋಪ ತೋರಿಸುವುದಲ್ಲ. ಬದಲಾಗಿ ಎದ್ದು ನೇರವಾಗಿ ತೆರಳಬೇಕು. ಅಷ್ಟರಿಂದಲೇ ಅವನ ಮೇಲೆ ಸಿಟ್ಟಿನ ಪ್ರದರ್ಶನ ನಡೆದಂತಾಗುವುದು.

ಯದ್ಯಪಿ ಕೃಷ್ಣ ಕಂಸನ ಸಂಹಾರಕ್ಕಾಗಿಯೇ ಅವತರಿಸಿದವನು. ಆದರೆ ಅವತರಿಸಿದ ಕ್ಷಣದಿಂದಲೇ ಅವನ ಮೇಲೆ ಸಿಟ್ಟನ್ನು ತೋರಿಸಿಲ್ಲ. ಕಂಸನ ಪಾಪದ ಕೊಡ ತುಂಬಿದ ಮೇಲಷ್ಟೇ ಸಿಟ್ಟು ತೋರಿಸಿದ.

ಹೀಗೆ ಭಗವಂತ ಸಿಟ್ಟನ್ನು ತನ್ನ ಹಿಡಿತದಲ್ಲಿಟ್ಟುಕೊಂಡು ಯಾರ ಮೇಲೆ, ಎಷ್ಟು ಪ್ರಮಾಣದಲ್ಲಿ ಯಾವಾಗ ಎಂಬುದನ್ನೆಲ್ಲ ವಿವೇಚಿಸಿಕೊಂಡು ಸಿಟ್ಟಿನ ಪ್ರದರ್ಶನ ಮಾಡುತ್ತಿದ್ದುದರಿಂದ 'ಜಿತಮನ್ಯುಃ' ಎನಿಸಿರುವನು.

**೯೩೪. ಭಯಾಪಹಃ – ಸಾತ್ತ್ವಿಕ ಸ್ವಭಾವದವರು ತಮಗೆ ವಿಹಿತವಾಗಿರುವ ಕರ್ತವ್ಯವನ್ನು ಚೆನ್ನಾಗಿ ನಿರ್ವಹಿಸದ ಪ್ರಯುಕ್ತ ತಾಳುವ ಭಯವನ್ನು ಪರಿಹರಿಸುವವನು.**

ವಿವರಣೆ : 'ಜಿತಮನ್ಯುಃ' ಎನಿಸುವ ಭಗವಂತನು ಕಾಲದೇಶಗಳನ್ನು ಪರಿಶೀಲಿಸಿ ಸಿಟ್ಟನ್ನು ತಾಳುವವನಾದುದರಿಂದ ಸಾತ್ವಿಕಸ್ವಭಾವದವರು ತಮ್ಮ ಕರ್ತವ್ಯದಲ್ಲಿಯ ನ್ಯೂನತೆಗಾಗಿ ಭಯಪಡುವ ಅವಶ್ಯಕತೆ ಇಲ್ಲ. ಯಾಕೆಂದರೆ 'ಜಿತಮನ್ಯು' ಎನಿಸಿರುವ ಭಗವಂತ ಆ ಕರ್ತವ್ಯನ್ಯೂನತೆಗಾಗಿ ಕ್ರೋಧ ತಾಳಲಾರ.

ಹೀಗೆ ತನ್ನ ಜಿತಮನ್ಯುತ್ವ ಸ್ವಭಾವದಿಂದಾಗಿ ಸಾತ್ವಿಕಸ್ವಭಾವದವರ ಭಯವನ್ನು ಪರಿಹರಿಸುವವನು ಭಯಂ ಅಪಹಂತೀತಿ ಭಯಾಪಹಃ

ಆದರೆ ತಾಮಸಸ್ವಭಾವದವರ ಭಯವನ್ನೇನೂ ಪರಿಹರಿಸಲಾರ. ಕಂಸ ಕೃಷ್ಣನ

ಅವತಾರದ ಕ್ಷಣದಿಂದ ಪ್ರಾರಂಭಿಸಿ ಕೃಷ್ಣನ ಬಗ್ಗೆ ಭಯವನ್ನು ತಾಳ್ತಾ ಇದ್ದ. ಅವನ ಭಯವನ್ನೇನೂ ಕೃಷ್ಣ ಪರಿಹರಿಸಿಲ್ಲ.

**೯೩೫. ಚತುರಸ್ರಃ – ಚಚ್ಚೌಕದ ನಾಲ್ಕು ಪಾರ್ಶ್ವಗಳೂ ಸಮಾನವಾಗಿರುವಂತೆ ಎಲ್ಲ ದೇಶದಲ್ಲಿ ಎಲ್ಲ ಕಾಲದಲ್ಲಿ ಸಮಾನವಾಗಿ ಹರಡಿರುವವನು.**

ವಿವರಣೆ: ಚಚ್ಚೌಕ ಚತುರಸ್ರ ಎನಿಸುವುದು. ಉದ್ದ ಹಾಗೂ ಅಗಲ ಹೆಚ್ಚು ಕಡಿಮೆ ಇರದೆ ನಾಲ್ಕು ಕೋನಗಳೂ ಸಮಾನಗಳಾಗಿದ್ದರೆ ಅದು ಚಚ್ಚೌಕ ಎನಿಸುವುದು. ಭಗವಂತನ ವ್ಯಾಪ್ತಿ ಚಚ್ಚೌಕದಂತೆ ಎಲ್ಲೆಡೆ ಎಲ್ಲ ಕಾಲದಲ್ಲಿ ಸಮಾನವಾದುದು. ಹೊರತು ಯಾವುದೋ ದೇಶದಲ್ಲೋ ಯಾವುದೋ ಕಾಲದಲ್ಲೋ ವ್ಯಾಪ್ತಿ ಹೆಚ್ಚು ಅಥವಾ ಕಡಿಮೆ ಎಂದಿಲ್ಲ.

ನಾವು ಕೀರ್ತಿಯಿಂದಷ್ಟೇ ಹರಡಿರುವವರು. ಭಗವಂತನಾದರೂ ಕೀರ್ತಿಯಿಂದಲೂ, ದೈಹಿಕವಾಗಿಯೂ ವ್ಯಾಪಿಸಿರುವವನು. **‘ಮಯಾ ತತಮಿದಂ ಸರ್ವಂ ಜಗದವ್ಯಕ್ತಮೂರ್ತಿನಾ’** ಎಲ್ಲೆಡೆ ವ್ಯಾಪಿಸಿರುವೆನೆಂದು ಗೀತಾಚಾರ್ಯ ಸಾರಿರುವನು.

**೯೩೬. ಗಭೀರಾತ್ಮಾ – ಇಷ್ಟೇ ಎಂದು ಹೇಳಲಾಗದಷ್ಟು ಆಳವಾದ ಸ್ವರೂಪದವನು.**

ವಿವರಣೆ : ಗಭೀರ - ಎಂದರೆ ಆಳ. ಆತ್ಮಾ - ಎಂದರೆ ಸ್ವರೂಪ. ಆಳವಾದ ಸ್ವರೂಪ ಉಳ್ಳವನೇ ಗಭೀರಾತ್ಮಾ. ಎಷ್ಟು ಆಳ ? ಎಷ್ಟು ಆಳ ಎಂದು ಹೇಳಲಿಕ್ಕೆ ಬಾರದಷ್ಟೂ ಆಳ. ಆದುದರಿಂದಲೇ ಎಷ್ಟು ಆಳ ಎಂದು ತಿಳಿಸದೆ ಬರೇ ಆಳವಾದ - ಗಭೀರ - ಎಂದಷ್ಟೇ ಹೇಳಲಾಗಿದೆ. ಆಳವುಂಟು ಹೇಳಿ, ಎಷ್ಟು ಆಳ ಎಂದು ಹೇಳದಿದ್ದರೆ ಎಷ್ಟು ಎಂದು ಹೇಳಲಾಗದಷ್ಟು ಆಳ ಎಂದೇ ಅರ್ಥ. ಭಗವಂತನ ಸ್ವರೂಪ ಇಷ್ಟೇ ಆಳ ಎಂದು ಹೇಳಲಾಗದು. ಅಗಿದಷ್ಟು ಆಳ. ಅಡಿಯ ನೆಲ ಸಿಗುವುದೇ ಇಲ್ಲ. ವಿಚಾರ ಮಾಡಿದಷ್ಟು ಮಾಡಿದಷ್ಟು ಮುಗಿಯಲಾರದಷ್ಟು ಗುಣಧರ್ಮಗಳು. ಆದುದರಿಂದ ಅವನು ‘ಗಭೀರಾತ್ಮಾ.’

**೯೩೭. ವಿದಿಶಃ – ತಾಮಸ ಜೀವರು ತನ್ನಲ್ಲಿ ಕೇಳಿದ್ದಕ್ಕೆ ವಿರುದ್ಧವಾಗಿಯೇ ನೀಡುವವನು.**

ವಿವರಣೆ : ‘ದಿಶ ಅತಿಸರ್ಜನೇ’ - ಎಂಬ ಕ್ರಿಯಾಪದದಿಂದ ನಿಷ್ಪನ್ನವಾಗಿರುವ ‘ದಿಶ’ ಶಬ್ದವು ಕೊಡುವವನು ಎಂಬ ಅರ್ಥವನ್ನು ನೀಡುವುದು. ‘ವಿ’ ಎಂದರೆ

ವಿರುದ್ಧವಾದದ್ದು. ಆದ್ದರಿಂದ ವಿರುದ್ಧವಾದದ್ದನ್ನೇ ನೀಡುವವನು 'ವಿದಿಶಃ.'

ದೈತ್ಯರು ದೇವರಲ್ಲಿ ಏನು ಕೇಳಿದರೂ ಅವರು ಕೇಳಿದ್ದಕ್ಕೆ ವಿರುದ್ಧವಾದದ್ದನ್ನೇ ನೀಡುವವನು ಭಗವಂತ. ಅವರು ತಾವು ಸಾಯಬಾರದು ಎಂದು ಕೇಳಿದರೆ ಅವರಿಗೆ ಸಾವನ್ನು ನೀಡುವನು. ತಮಗೆ ಸಂಪತ್ತು ಬೇಕೆಂದು ಕೇಳಿದರೆ ಅವರಿಗೆ ದಾರಿದ್ರ್ಯವನ್ನು ನೀಡುವನು. ಹೀಗೆ ಅವರು ಕೇಳಿದ್ದಕ್ಕಿಂತ ವಿರುದ್ಧವಾದದ್ದನ್ನೇ ನೀಡುವನು. ಯಾಕೆ ? ಅವರಿಗೆ ತನ್ನ ಬಗ್ಗೆ ಒಳ್ಳೆಯ ಭಾವನೆ ಬರಬಾರದು ಬದಲಾಗಿ, ತನ್ನ ಬಗ್ಗೆ ದ್ವೇಷ, ಸಿಟ್ಟು ಬರುವಂತಾಗಬೇಕು. ಅವರು ದೇವರ ಬಗ್ಗೆ ದ್ವೇಷ, ಕ್ರೋಧಗಳನ್ನು ತಾಳಿದರೆಂದರೇನೇ ಅವರಿಗೆ ಯೋಗ್ಯವಾದ ಗತಿ ದೊರಕಬಲ್ಲದು. ತಾವು ಏನು ಕೇಳಿದರೂ ಅದಕ್ಕೆ ವಿರುದ್ಧವಾಗಿಯೇ ದೇವರು ಕೊಡುತ್ತಾನೆಂದರೆ ಅವರಿಗೆ ಅವನ ಬಗ್ಗೆ ಸಿಟ್ಟು, ದ್ವೇಷ ಮೂಡುವುದು ಸಹಜ. ನಾವು ಪ್ರಾರ್ಥಿಸಿದ್ದನ್ನು ದೇವರು ಕೊಟ್ಟಿಲ್ಲ ಎಂದರೆ ನಮಗೆ ಹೇಗೆ ದೇವರ ಮೇಲೆ ಸಿಟ್ಟು ಬರುವುದೋ ಹಾಗೆ.

ಈ ರೀತಿಯಾಗಿ ದೇವರು ತಾಮಸಜೀವರಿಗೆ ಅವರು ಕೇಳಿದ್ದಕ್ಕಿಂತ ವಿರುದ್ಧವಾದದ್ದನ್ನೇ ನೀಡುವವನೆಂದು 'ವಿದಿಶಃ' ಎಂದೆನಿಸಿರುವನು.

**೯೩೮. ವ್ಯಾದಿಶಃ – ಸಾತ್ವಿಕ ಜೀವರಿಗೆ ತುಂಬ ಹಾಗೂ ತಾನೇ ಹಿಂದಕ್ಕೆ ತೆಗೆದುಕೊಳ್ಳದಂತೆ ಚೆನ್ನಾಗಿ ಕೊಡುವವನು.**

**ವಿವರಣೆ :** ತಾಮಸ ಜೀವರ ಬಗ್ಗೆ 'ವಿದಿಶಃ' ನಾಗಿ ನಡೆದುಕೊಳ್ಳುವ ಭಗವಂತ ಸಾತ್ವಿಕ ಜೀವರ ಬಗ್ಗೆ 'ವ್ಯಾದಿಶಃ' ಆಗಿರುವನು. ವಿ + ಆ + ದಿಶಃ - ವ್ಯಾದಿಶಃ| ವಿ ಎಂದರೆ ತುಂಬ, ಅವರು ಕೇಳಿದ್ದಕ್ಕಿಂತಲೂ ಅಧಿಕ ಪ್ರಮಾಣದಲ್ಲಿ ಆ ಎಂದರೆ ಚೆನ್ನಾಗಿ ಅವರಿಂದ ತಾನೇ ಹಿಂದಕ್ಕೆ ತೆಗೆದುಕೊಳ್ಳದಂತೆ ಹಾಗೂ ಬೇರೆ ಯಾರೂ ಅವರಿಂದ ಕಸಿದುಕೊಳ್ಳದಂತೆ ದಿಶಃ ಕೊಡುವವನು. ಭಗವಂತ ತನ್ನ ಭಕ್ತರಾದ ಸಾತ್ವಿಕ ಜೀವರಿಗೆ ತುಂಬ ಹಾಗೂ ಚೆನ್ನಾಗಿ ಕೊಡುವನು. ಅವರು ಕೇಳಿದಷ್ಟೇ ಅಲ್ಲದೆ, ಅದಕ್ಕಿಂತಲೂ ಹೆಚ್ಚು, ತಾನು ಅವರಿಗೆ ಕೊಟ್ಟಿದ್ದನ್ನು ತಾನು ಹಿಂದಕ್ಕೆ ತೆಗೆದುಕೊಳ್ಳದಂತೆ ಮತ್ತು ಬೇರೆ ಯಾರೂ ಅದನ್ನು ಕಸಿದುಕೊಳ್ಳದಂತೆ ಚೆನ್ನಾಗಿ ಕೊಡುವನು. ಆದುದರಿಂದಲೇ ಭಗವಂತ ಸಾತ್ವಿಕ ಜೀವರನ್ನು ಕುರಿತು 'ವ್ಯಾದಿಶಃ' ಎನಿಸುವನು. ಇದರಿಂದಾಗಿ ಸಾತ್ವಿಕರು ದೇವರ ಬಗ್ಗೆ ತುಂಬ ಭಕ್ತಿ ತಾಳಿ ಅದರ ಫಲವಾಗಿ ಸದ್ಗತಿಯನ್ನು ಹೊಂದುವಂತಾಗಬೇಕು.

**೯೩೯. ದಿಶಃ – ನಿತ್ಯ ಸಂಸಾರಿಗಳ ಪಾಲಿಗೆ ನಿಯತವಾಗಿ ವಿರುದ್ಧವಾದದನ್ನೇ**

**ಅಥವಾ ಒಳ್ಳೆಯದನ್ನೇ ನೀಡದೆ ಕೆಲವೊಮ್ಮೆ ವಿರುದ್ಧವಾದದ್ದನ್ನು, ಮತ್ತೆ ಕೆಲವೊಮ್ಮೆ ಒಳ್ಳೆಯದನ್ನು ನೀಡುವವನು.**

**ವಿವರಣೆ :** ದೈತರ ಪಾಲಿಗೆ ವಿರುದ್ಧವಾದದ್ದನ್ನು ನೀಡಿ 'ವಿದಿಶಃ' ಎನಿಸಿರುವ, ಸಾತ್ವಿಕರ ಪಾಲಿಗೆ ಚೆನ್ನಾಗಿ ತುಂಬ ಕೊಡುವ ಮೂಲಕ 'ವ್ಯಾದಿಶಃ' ಎನಿಸಿರುವ ಭಗವಂತ ನಿತ್ಯಸಂಸಾರಿಗಳ ಪಾಲಿಗೆ 'ದಿಶಃ' - ಅಂದರೆ ಕೊಡುವವನು ಎಂದಷ್ಟೇ.

ವಿರುದ್ಧವಾದದನ್ನು ಕೊಡುವನೋ ? ಕೊಡಲೂ ಬಹುದು ಕೊಡದಿರಲೂ ಬಹುದು. ಸಾತ್ವಿಕರಿಗೆ ನೀಡಿದಂತೆ ತುಂಬ, ಹಿಂದಕ್ಕೆ ತೆಗೆದುಕೊಳ್ಳದಂತೆ ಕೊಡುವನೋ? ಇಂತಹದ್ದನ್ನೂ ಕೊಡಲೂ ಬಹುದು, ಕೊಡದಿರಲೂ ಬಹುದು. ಈ ರೀತಿಯಾಗಿ ಔದಾಸೀನ್ಯಸ್ವಭಾವದ ರಾಜಸಜೀವರ ಬಗ್ಗೆ ಭಗವಂತನೂ ಒಂದು ರೀತಿಯಿಂದ ಉದಾಸೀನನಾಗಿಯೇ ನಡೆದುಕೊಳ್ಳುವನು. ಅಂದರೆ ಅವರಿಗೆ ವಿರುದ್ಧವಾದದನ್ನು ಕೊಡುವನು ಎನ್ನಲೂ ಬರದು. ಯಾಕೆಂದರೆ ಕೆಲವೊಮ್ಮೆ ಅವರಿಗೆ ವಿರುದ್ಧವಾದದನ್ನು ಕೊಡುವುದಿಲ್ಲ. ಅವರಿಗೆ ವಿರುದ್ಧವಾದುದನ್ನು ಕೊಡುವುದಿಲ್ಲ ಎನ್ನಲೂಬಹುದು. ಯಾಕೆಂದರೆ ಕೆಲವೊಮ್ಮೆ ಅವರಿಗೆ ವಿರುದ್ಧವಾದುದನ್ನು ಕೊಡುವನು. ಹೀಗೆಯೇ ಅವರಿಗೆ ತುಂಬ, ಚೆನ್ನಾಗಿ ಕೊಡುವನು ಎಂದೂ ಹೇಳಲು ಬಾರದಂತೆ, ಕೊಡುವುದಿಲ್ಲ ಎಂದೂ ಹೇಳಲು ಬಾರದಂತೆ ಕೆಲವೊಮ್ಮೆ ಕೊಡುತ್ತಾನೆ. ಕೆಲವೊಮ್ಮೆ ಕೊಡುವುದಿಲ್ಲ ಹೀಗೆ ನಡೆದುಕೊಳ್ಳುವನು. ಯಾಕೆಂದರೆ ನಿತ್ಯ ಸಂಸಾರಿಗಳಿಗೆ ತನ್ನ ಬಗ್ಗೆ ಪೂರ್ಣ ದ್ವೇಷವಾಗಲೀ, ಪೂರ್ಣ ಭಕ್ತಿಯಾಗಲೀ ಉಂಟಾಗದೆ ದ್ವೇಷ ಭಕ್ತಿಗಳ ಮಿಶ್ರಣ ಉಂಟಾಗಬೇಕು. ಇದರಿಂದಾಗಿ ಅವರು ಸಂಸಾರದಲ್ಲಿಯೇ ಅಲೆಯುತ್ತಿರುವಂತಾಗಬೇಕು.

**ಅನಾದಿರ್ಭೂರ್ಭುವೋಲಕ್ಷ್ಮೀಃ ಸುವೀರೋ ರುಚಿರಾಂಗದಃ |**
**ಜನನೋ ಜನಜನ್ಮಾದಿರ್ಭೀಮೋ ಭೀಮಪರಾಕ್ರಮಃ ||೧೦೧||**

**೯೪೦. ಅನಾದಿಃ – ಆದಿ ಇಲ್ಲದವನು.**

**ವಿವರಣೆ:** ಅನಾದಿನಾಮದ ಅರ್ಥ ಸ್ಪಷ್ಟ - ಆದಿ, ಆರಂಭ ಇಲ್ಲದವನು. ಎಂದಿನಿಂದ ದೇವರು ಇದ್ದಾನೆ ?- ಎಂಬ ಪ್ರಶ್ನೆಗೆ 'ಗೊತ್ತಿಲ್ಲ' ಎಂಬ ಉತ್ತರವೇ ಸಮುಚಿತವಾದುದು. ಯಾಕೆಂದರೆ ಯಾವುದೋ ಒಂದು ಕಾಲದಲ್ಲಿ ದೇವರು ಹುಟ್ಟಿಕೊಂಡವನಲ್ಲ.

ಭೀಷ್ಮರು ಕೃಷ್ಣನಲ್ಲಿ ತಿಳಿಸುವರು - ಕೃಷ್ಣ, ಯದ್ಯಪಿ ನೀನು ನನಗಿಂತ

ಮತ್ತೆ ಕಾಣಿಸಿಕೊಂಡವನು. ಯುಧಿಷ್ಠಿರನಿಗಿಂತಲೂ, ಭೀಮಸೇನನಿಗಿಂತಲೂ ಮತ್ತೆ ಕಾಣಿಸಿಕೊಂಡವನು. ಆದರೆ ಆಗ ಕಾಣಿಸಿಕೊಂಡಿ ಎಂದಾಕ್ಷಣ ಆಗಲೇ ನೀನು ಹುಟ್ಟಿದವನೇನೂ ಅಲ್ಲ. ಯಾವಾಗಲೂ ನೀನು ಇದ್ದವನು, ಇರುವವನು. ಆದುದರಿಂದಲೇ ಅನಾದಿ.

**೯೪೧. ಭೂರ್ಭುವೋ ಲಕ್ಷ್ಮೀಃ – ಪೂರ್ಣವಾಗಿದ್ದುಕೊಂಡು ಜಗತ್ತನ್ನು ಸೃಷ್ಟಿ ಮಾಡುವಿಕೆಯೇ ಲಕ್ಷಣವಾಗಿ ಉಳ್ಳವನು.**

ವಿವರಣೆ: ಕೆಲವರು 'ಭೂರ್ಭುವಃ' 'ಲಕ್ಷ್ಮೀಃ' ಎಂಬುದಾಗಿ ಬೇರೆ ಬೇರೆ ನಾಮವಾಗಿ ಇಟ್ಟುಕೊಂಡು ವ್ಯಾಖ್ಯಾನಿಸುವರು. ಆದರೆ ಬೃಹತೀಸಹಸ್ರದ ವೈದಿಕ ಮಂತ್ರಕ್ಕೆ ಅನುಗುಣವಾಗಿ ಭೂರ್ಭುವೋಲಕ್ಷ್ಮೀಃ ಎಂದು ಒಂದೇ ನಾಮವಾಗಿ ಇಟ್ಟುಕೊಳ್ಳೋಣ.

'ಭೂ ಬಹೌ ' - ಎಂಬ ಕ್ರಿಯಾಪದದಿಂದ ನಿಷ್ಪನ್ನವಾದುದು 'ಭೂಃ' ಶಬ್ದ. 'ಬಹುಃ ಪೂರ್ಣತಾಯಾಮ್'- ಎಂದು ಪೂರ್ಣತ್ವಾರ್ಥದಲ್ಲಿ ಇರುವುದರಿಂದ 'ಭವತೀತಿ ಭೂಃ'- ಎಂದು ಇಟ್ಟುಕೊಂಡಾಗ ಗುಣಪೂರ್ಣನಾದವನು ಎಂಬ ಅರ್ಥ ಹೊರಡುವುದು.

ಭಾವನಾತ್ ಭುವಃ, ಭಾವನ ಎಂದರೆ ಉತ್ಪಾದನ. ಇಡೀ ಜಗತ್ತನ್ನು ಭಗವಂತ ಸೃಷ್ಟಿಮಾಡುವವನಾದುದರಿಂದ 'ಭುವಃ' ಎನಿಸುವನು.

'ಲಕ್ಷ್ಮೀ' - ಎಂದರೆ ಲಕ್ಷ್ಮ ಉಳ್ಳವನು. 'ಚಿಹ್ನಂ ಲಕ್ಷ್ಮ ಚ ಲಕ್ಷಣಮ್' ಎಂದಿರುವಂತೆ ಲಕ್ಷ್ಮ ಎಂದರೆ ಲಕ್ಷಣ. ಲಕ್ಷಣವುಳ್ಳವನು ಲಕ್ಷ್ಮೀ ಗುಣಪೂರ್ಣನಾಗಿದ್ದು ಜಗತ್‌ಸೃಷ್ಟಿ ನಡೆಸುವುದೆ ಲಕ್ಷಣವಾಗಿ ಉಳ್ಳವನು ಭೂರ್ಭುವೋಲಕ್ಷ್ಮೀಃ |

ಭಗವಂತನನ್ನು ಬಿಟ್ಟರೆ ಬೇರೆ ಯಾರೂ ಅವನಂತೆ ಗುಣಪೂರ್ಣರಾಗಿ ಇರುವವರಿಲ್ಲದ ಪ್ರಯುಕ್ತ ಭಗವಂತನ ಲಕ್ಷಣವಾಗಿ ಹೇಳಿದ ಗುಣಪೂರ್ಣತ್ವ ಅಸಂಭಾವಿತ ಎನಿಸಲಾರದು. ಯಾಕೆಂದರೆ ಬೇರೆ ಯಾರೂ ಮಾಡದ ಜಗತ್‌ಸೃಷ್ಟಿಯ ಕಾರ್ಯವನ್ನು ನಡೆಸುತ್ತಿರುವುದರಿಂದ ಅವನು ಗುಣಪೂರ್ಣ ಎನಿಸಬಹುದೆಂದು 'ಭೂರ್ಭುವೋಲಕ್ಷ್ಮೀಃ' - ಎಂದು ಸ್ತುತಿಸಲಾಗುವುದು.

**೯೪೨. ಸುವೀರಃ – ವ್ಯಕ್ತಿಯನ್ನು ವೀರನನ್ನಾಗಿ ಮಾಡಲು ಬೇಕಾದ ಸಾಮರ್ಥ್ಯ ಉಳ್ಳವನು.**

ವಿವರಣೆ : ಆರಬ್ಧಾಂತಗಾಮಿ - ಪ್ರಾರಂಭಿಸಿದ ಕೆಲಸವನ್ನು ಕೊನೆಗೊಳಿಸುವವನು ವೀರ. ಬಲಶಾಲಿಗಳೆಲ್ಲ ವೀರರೆನಿಸಬೇಕಿಲ್ಲ. ಅಂದರೆ ನಿರ್ವಹಿಸಿದ ಕೆಲಸವನ್ನು ಪೂರ್ಣಗೊಳಿಸಬೇಕಿಲ್ಲ ತಾನೇ ? ಆದ್ದರಿಂದ ವೀರ್ಯ ಬೇರೆ, ಬಲ ಬೇರೆ.

ಭೀಮಸೇನಾದಿಗಳು ವೀರರು. ದೇವರು ವಹಿಸಿಕೊಟ್ಟ ಕೆಲಸವನ್ನು ಯಶಸ್ವಿಯಾಗಿ ಪೂರ್ಣಗೊಳಿಸಿರುವರು. ಆದರೆ ಭೀಮಸೇನನೇ ಮುಂತಾದವರನ್ನು ವೀರರನ್ನಾಗಿ ಮಾಡಿದ ಭಗವಂತ 'ಸುವೀರ.' 'ಶೋಭನಾಃ ವೀರಾಃ ಯಸ್ಮಾತ್ ಸಃ ಸುವೀರಃ'

ಭೀಷ್ಮರು ಕೃಷ್ಣನಲ್ಲಿ ನಿವೇದಿಸಿಕೊಳ್ಳುವರು - ಕೃಷ್ಣ ನೀನು ಮಹಾಭಾರತ ಯುದ್ಧದಲ್ಲಿ ಹತ್ತು ದಿನಗಳ ಕಾಲ ಮಾತ್ರ ಕೌರವ ಸೇನೆಯ ಸೇನಾಧಿಪತ್ಯವನ್ನು ವಹಿಸಿಕೊಂಡು ಯುದ್ಧ ನಡೆಸಲು ತಿಳಿಸಿದ್ದಿ. ಅದಕ್ಕೆ ಅನುಗುಣವಾಗಿ ಹತ್ತುದಿನ ಕಾಲ ಯುದ್ಧ ಮಾಡಿ ನಾನು 'ವೀರ' ಎನಿಸಿರುವೆ. ಆದರೆ ನಾನು 'ವೀರ' ಆದರೆ, ನನ್ನನ್ನು ಹಾಗೆ ವೀರನಾಗುವಂತೆ ಮಾಡಿರುವ ನೀನು 'ಸುವೀರ.'

**೯೪೩. ರುಚಿರಾಂಗದಃ – * ಒಳ್ಳೆಯ ಬಾಹುಭೂಷಣ ಉಳ್ಳವನು.**

*** ಒಳ್ಳೆಯ ಅಂಗಗಳನ್ನು ನೀಡುವವನು.**

ವಿವರಣೆ: ಅಂಗದ ಎಂದರೆ ಬಾಹುಭೂಷಣ. ಒಳ್ಳೆಯ ಬಾಹುಭೂಷಣ ಉಳ್ಳವನೇ 'ರುಚಿರಾಂಗದಃ.' ಮತ್ತೊಂದು ಅರ್ಥ ರುಚಿರಾಣಿ ಚ ತಾನಿ ಅಂಗಾನಿ ರುಚಿರಾಂಗಾನಿ, ರುಚಿರಾಂಗಾನಿ ದದಾತೀತಿ ರುಚಿರಾಂಗದಃ ಒಳ್ಳೆಯ ಅಂಗಗಳನ್ನು ನೀಡುವವನು. ಅಂಗಗಳಲ್ಲಿ ಒಳ್ಳೆಯವುಗಳೆಂದರೆ ಶಾಸ್ತ್ರದಲ್ಲಿ ಯಾವ ಅಂಗ ಯಾವ ಕರ್ತವ್ಯವನ್ನು ನಿರ್ವಹಿಸಬೇಕೆಂದು ಹೇಳಲಾಗಿದೆಯೋ ಅಂತಹ ಕರ್ತವ್ಯವನ್ನೇ ನಿರ್ವಹಿಸುವ, ಅದಕ್ಕಿಂತ ಬೇರೆ ಕರ್ಮಗಳಲ್ಲಿ ಆಸಕ್ತಗಳಾಗದ ಅಂಗಗಳೇ ರುಚಿರಾಂಗಗಳು. ಅಂತಹ ಅಂಗಗಳನ್ನು ನೀಡುವುದರಿಂದ ಭಗವಂತ 'ರುಚಿರಾಂಗದ.' **'ತ್ವಷ್ಟಾ ರೂಪಾಣಿ ಪಿಂಶತು'** - ಎಂಬ ಮಂತ್ರದಲ್ಲಿ ಹಾರೈಸುವಂತೆ ಗರ್ಭದಲ್ಲಿ ಮಗುವಿನ ರೂಪವನ್ನು ಕೆತ್ತುವ ಬಡಗಿ ಸಂಕರ್ಷಣ ರೂಪಿ ಪರಮಾತ್ಮ. ತಾಯಿಯ ಗರ್ಭದಲ್ಲಿರುವ ನಮಗೆ ಒಳ್ಳೆಯ ಅಂಗಗಳನ್ನು ಕೆತ್ತಿ, ಕೊಟ್ಟು 'ರುಚಿರಾಂಗದ' ಎನಿಸುವವನು ಸಂಕರ್ಷಣ.

ಗರ್ಭಾಧಾನ ಆದ ಮೇಲೆ ಸಂಕರ್ಷಣವನ್ನು ವಿಶೇಷವಾಗಿ ಚಿಂತನೆ ನಡೆಸುತ್ತಿದ್ದರೆ ಗರ್ಭದ ಒಳಗೆ ಬೆಳೆಯುತ್ತಿರುವ ಮಗುವಿಗೆ ಒಳ್ಳೆಯ ಅಂಗಗಳನ್ನು ಕೆತ್ತಿ ಕೊಡುವ ಮೂಲಕ 'ರುಚಿರಾಂಗದ' ಎನಿಸಿ ಅನುಗ್ರಹಿಸುವನು.

**೯೪೪. ಜನನಃ – * ಜೀವರನ್ನು ಹುಟ್ಟಿಸುವವನು**

*** ಹುಟ್ಟುವ ಜೀವರಿಗಿಂತ ವಿಲಕ್ಷಣನಾಗಿರುವವನು.**

**ವಿವರಣೆ :** ಜನಯುತೀತಿ ಜನನಃ ಎಂಬ ನಿರ್ವಚನವನ್ನಿಟ್ಟುಕೊಂಡಾಗ ಹುಟ್ಟಿಸುವವನು, ಸೃಷ್ಟಿ ಮಾಡುವವನು ಎಂಬ ಒಂದು ಅರ್ಥ ಹೊರಡುವುದು.

ಮತ್ತೊಂದು ಅರ್ಥವನ್ನು ಹೀಗೆ ಚಿಂತಿಸಬಹುದು - ಜನ + ನಃ ಜನನಃ, ಭಗವಂತ 'ಜನ' ಅಲ್ಲ. ಹಿಂದೆ 'ಜೀವನಃ' ಎಂಬ ನಾಮದಿಂದ 'ಜೀವ + ನ' - ಜೀವನಿಗಿಂತ ವಿಲಕ್ಷಣನಾದವನು - ಎಂಬ ಅರ್ಥವನ್ನು ಹೊರಡಿಸಿದಂತೆ 'ಜನನಃ' ಶಬ್ದದಿಂದಲೂ ಅದಕ್ಕನುಗುಣವಾದ ಅರ್ಥವನ್ನು ಹೊರಡಿಸಬಹುದು. 'ನ' ಎಂಬುದು ಅವ್ಯಯವಾಗಿರುವುದರಿಂದ 'ಜೀವನಃ' 'ಜನನಃ' - ಎಂಬಲ್ಲಿಯ ವಿಸರ್ಗವನ್ನು ಕೂಡಿಸುವುದು ಸ್ವಲ್ಪ ಕಷ್ಟಸಾಧ್ಯ. ಆದರೂ ಈ ಅರ್ಥವನ್ನು ಹೊರಡಿಸಬಹುದು.

ಜೀವರೆಲ್ಲ 'ಜನ' ಎನಿಸುವರು. ಯಾಕೆಂದರೆ ಹುಟ್ಟುವ ಪ್ರಯುಕ್ತ. ಜಾಯಂತೇ ಇತಿ ಜನಾಃ, ಭಗವಂತನಾದರೂ ಹಾಗೆ 'ಜನ' ಎನಿಸುವ ಜೀವರಿಗಿಂತ ವಿಲಕ್ಷಣನಾಗಿರುವುದರಿಂದ ಜನನ. ಅಂದರೆ ಹುಟ್ಟು ಇಲ್ಲದವನು. ಹುಟ್ಟು ಇದೆ ಎಂದರೆ ಮತ್ತೊಬ್ಬರ ಹಿಡಿತದಲ್ಲಿ ಇದ್ದಂತೆಯೇ. ಸ್ವತಂತ್ರನಾದ ಭಗವಂತ ಯಾರ ಹಿಡಿತದಲ್ಲೂ ಇಲ್ಲದ ಪ್ರಯುಕ್ತ ಹುಟ್ಟನ್ನು ಹೊಂದಿಲ್ಲ. ಹುಟ್ಟು ಇಲ್ಲದ ಪ್ರಯುಕ್ತ 'ಜನ' 'ನ' - ಎಂದು 'ಜನನಃ' ಎನಿಸುವನು.

**೯೪೫. ಜನಜನ್ಮಾದಿಃ – ಜೀವರ ಜನನಾದಿಗಳಿಗೆ ಕಾರಣನಾಗಿರುವವನು.**

**ವಿವರಣೆ :** ಸ್ವಯಂ 'ಜನನ' - ಹುಟ್ಟು ಇಲ್ಲದ ಪ್ರಯುಕ್ತ 'ಜನ' ಅಲ್ಲ ಎನಿಸುವ ಭಗವಂತ, ಹುಟ್ಟುವ ಪ್ರಯುಕ್ತ 'ಜನ' ಎನಿಸುವ ಜೀವರ ಜನ್ಮಕ್ಕೆ ಆದಿಯಾಗಿ, ಕಾರಣನಾಗಿ 'ಜನಜನ್ಮಾದಿ' ಎನಿಸುವನು. ತಾನು ಎಂದೆಂದೂ ಹುಟ್ಟುವುದಿಲ್ಲ. ಆದರೆ ಜೀವರು ಎಂದೆಂದೂ ಹುಟ್ಟದೆ ಇರಲು ಬಿಡುವುದಿಲ್ಲ. ತಾನು ಎಂದೂ ಸಾಯುವುದಿಲ್ಲ. ಜೀವರು ಎಂದೂ ಸಾಯದೆ ಇರಲು ಬಿಡುವುದಿಲ್ಲ. ಹೀಗೆ ಜನರ, ಜೀವರ ಜನ್ಮ ಮರಣಗಳಿಗೆ ಆದಿ ಅಂದರೆ ಕಾರಣನಾಗಿರುವವನೇ 'ಜನಜನ್ಮಾದಿ'.

**'ವಿಷ್ಣುರ್ಯೋನಿಂ ಕಲ್ಪಯತು ತ್ವಷ್ಟಾ ರೂಪಾಣಿ ಪಿಂಶತು |**
**ಆ ಸಿಂಚತು ಪ್ರಜಾಪತಿಃ ಧಾತಾ ಗರ್ಭಂ ದಧಾತು ತೇ' -**

ಎಂದು ಗರ್ಭಾಧಾನ ಸಂಸ್ಕಾರದ ಮಂತ್ರದಲ್ಲಿ ಉಲ್ಲೇಖಗೊಂಡಿರುವಂತೆ ಭಗವಂತನು ವಾಸುದೇವ, ಸಂಕರ್ಷಣ, ಪ್ರದ್ಯುಮ್ನ ಹಾಗೂ ಅನಿರುದ್ಧ ಎಂಬ ತನ್ನ

ಈ ನಾಲ್ಕು ರೂಪಗಳಿಂದ ತಾಯಿಯ ಗರ್ಭದಲ್ಲಿ ಮಗು ಬೆಳೆಯುವಂತೆ ಮಾಡುವನು. ಆದುದರಿಂದ ಈ ಚತೂರೂಪೀ ಭಗವಂತನೇ ‘ಜನಜನ್ಮಾದಿ.’

**೯೪೬. ಭೀಮಃ – ಸಮಗ್ರ ತಿಳುವಳಿಕೆ ಉಳ್ಳವನು.**

**ವಿವರಣೆ:** ಭೀಮ ಎಂಬ ಹೆಸರನ್ನು ಕೇಳಿದಾಕ್ಷಣ ನಮಗೆ ಮಹಾಭಾರತ ಭೀಮಸೇನನ ನೆನಪು ಬರುವುದು. ಅವನಿಗಾದರೂ ಯಾಕೆ ಭೀಮ ಎಂಬ ಹೆಸರು ಬಂತು ? ಭೃತಾಃ ಮಾಃ ಯೇನ ಸಃ ಯಾರಲ್ಲಿ ಎಲ್ಲ ವಿದ್ಯೆಗಳೂ ಸೇರಿಕೊಂಡಿವೆಯೋ ಅಂತಹವನು, ಎಲ್ಲದರ ತಿಳುವಳಿಕೆ ಉಳ್ಳವನು ಭೀಮ.

ದೇವರು ಕೂಡಾ ಈ ಅರ್ಥದಲ್ಲಿಯೇ ‘ಭೀಮ’ ಎನಿಸುವನು. ಪೂರ್ಣವಾದ ತಿಳುವಳಿಕೆ ಉಳ್ಳವನು ಭೀಮ.

ಹಿಂದಿನ ‘ರುಚಿರಾಂಗದಃ’ ‘ಜನಜನ್ಮಾದಿಃ’ ನಾಮಗಳಲ್ಲಿ ಭಗವಂತ ಸಂಕರ್ಷಣಾದಿರೂಗಳಿಂದ ಗರ್ಭದಲ್ಲಿರುವಾಗಲೇ ಮಗುವಿಗೆ ಅಂಗಗಳನ್ನು, ಸೌಂದರ್ಯವನ್ನೆಲ್ಲ ನೀಡುವನೆಂಬ ಪ್ರಸ್ತಾವ ಬಂತು. ಗರ್ಭಾಧಾನದಿಂದ ಪ್ರಾರಂಭಿಸಿ, ಸಾಯುವವರೆಗೂ ಆಯಾ ಜೀವನ ಕರ್ಮಕ್ಕನುಗುಣವಾಗಿ ಅವನ ಅಂಗಾಂಗಳ ರಚನೆ, ಅವನ ದೇಹಸೌಷ್ಠವ, ಸೌಂದರ್ಯ ಇತ್ಯಾದಿಗಳೆಲ್ಲ ರೂಪುಗೊಳ್ಳುವವು. ಆಯಾ ಜೀವನ ಕರ್ಮವನ್ನು ‘ಭೀಮ’ ಎನಿಸುವ ಭಗವಂತ ಚೆನ್ನಾಗಿ ತಿಳಿದಿರುವವನಾಗಿರುವನು. ಎಂದೂ ಸ್ವಲ್ಪವೂ ಅದರಲ್ಲಿ ಯಾವುದೇ ಅವ್ಯವಸ್ಥೆ ಆಗಲಾರದು. ಆಯಾ ಜೀವನ ಕರ್ಮದ ಫಲ ಆಯಾ ಜೀವನಿಗೇ ದೊರಕುವಂತೆ ಸರಿಯಾಗಿ ವ್ಯವಸ್ಥೆ ಮಾಡುವನು. ಇದಕ್ಕೆ ಬೇಕಾದ ಪೂರ್ಣ ತಿಳುವಳಿಕೆ ಭಗವಂತನಲ್ಲಿ ಇರುವುದು. ಅವನ ‘ಭೀಮ’ ಎಂಬ ನಾಮ ಅವನ ಈ ನಿಟ್ಟಿನ ಪೂರ್ಣ ತಿಳುವಳಿಕೆಯನ್ನು ಸಾರುತ್ತಿರುವುದು.

**೯೪೭. ಭೀಮಪರಾಕ್ರಮಃ – ಭೀಮಸೇನನ ವಿರುದ್ಧರಾಗಿದ್ದ ದುರ್ಯೋಧನಾದಿಗಳ ಮೇಲೆ ಆಕ್ರಮಣ ನಡೆಸಿದ್ದವನು.**

**ವಿವರಣೆ:** ಈ ನಾಮದಲ್ಲಿ ಭೀಮ ಎಂದರೆ ಭೀಮಸೇನನನ್ನೇ ಇಟ್ಟು ಕೊಳ್ಳೋಣ. ಭೀಮ ಪರರು ಎಂದರೆ ಭೀಮನಿಗೆ ವಿರುದ್ಧರಾದವರು ಎಂಬ ಅರ್ಥ. ‘ಪರದ್ರವ್ಯಾಣಿ ಲೋಷ್ಟವತ್’- ಎಂಬ ಮಾತಿನಲ್ಲಿ ಪರರ ದ್ರವ್ಯಗಳನ್ನು ಮಣ್ಣಿನ ಹೆಂಟೆಯಂತೆ ಕಾಣಬೇಕೆಂದು ಹೇಳಲಾಗಿದ್ದು, ಇಲ್ಲಿ ಪರರು ಎಂದರೆ ಬೇರೆಯವರು ಎಂಬ ಅರ್ಥದಲ್ಲಿ ಬಳಸಲಾಗಿದೆ. ಹಾಗೆಯೇ ಭೀಮಪರರು ಎಂದರೆ ಭೀಮನಿಗಿಂತ

ಬೇರೆಯಾದವರು ದುರ್ಯೋಧನಾದಿಗಳು, ಅವರ ಮೇಲೆ ಆಕ್ರಮಣ ಮಾಡುವವನೇ 'ಭೀಮಪರಾಕ್ರಮ.' ಭೀಮಸೇನನ ವಿರುದ್ಧವಾಗಿ ನಡೆದುಕೊಳ್ಳುವ ದುರ್ಯೋಧನಾದಿಗಳ ಮೇಲೆ ಭೀಮನೇ ಆಕ್ರಮಣ ಮಾಡಬೇಕಿಲ್ಲ. ಭೀಮ ಆಕ್ರಮಿಸುವುದಕ್ಕೆ ತೊಡಗುವ ಮುಂಚೆ ಕೃಷ್ಣನೇ ಎದ್ದು ಆ ಕೆಲಸ ಮಾಡ್ತಾನೆ.

ಭೀಮನಂತೆ ಯಾರು ಜ್ಞಾನಿಗಳಾಗಿರುವರು, ಭಗವದ್‌ಭಕ್ತರಾಗಿರುವರು, ಅವರ ವಿರುದ್ಧವಾಗಿ ಯಾರಾದರೂ ನಡೆದುಕೊಂಡರೆ ದೇವರೇ ಅಂತಹವರನ್ನು ಆಕ್ರಮಿಸುವನು. ಸೋಲಿಸುವನು.

ಮಹಾಭಾರತ ಯುದ್ಧದಲ್ಲಿ ಕೃಷ್ಣ ಅರ್ಜುನನ ರಥವನ್ನು ಕೌರವ ಸೇನೆಯ ಎದುರು ಕೊಂಡೊಯ್ದು ನಿಲ್ಲಿಸುವನು. **'ಸೇನಯೋರುಭಯೋರ್ಮಧ್ಯೇ ರಥಂ ಸ್ಥಾಪಯ ಮೇಽಚ್ಯುತ'** ಪಾಂಡವಕೌರವ ಸೇನೆಗಳ ಮಧ್ಯೇ ತನ್ನ ರಥವನ್ನು ನಿಲ್ಲಿಸಲು ಕೇಳಿಕೊಂಡದ್ದೇನೂ ನಿಜ. ಆದರೆ ಕೃಷ್ಣನಿಗೆ ತಾನು ಕೌರವಸೇನೆಯ ಎದುರು ಹೋಗಬೇಕಿತ್ತು. ಅದಕ್ಕಾಗಿ ಅರ್ಜುನನಿಂದ ಹಾಗೆ ಹೇಳಿಸಿ, ಅವನ ರಥವನ್ನು ಕೌರವ ಸೇನೆಯ ಮುಂದೆ ನಿಲ್ಲಿಸಿದ. ಇದರಿಂದಾಗಿ ರಥಿಕನಾಗಿದ್ದ ಅರ್ಜುನ ಆ ಸೇನೆಯ ಎದುರು ನಿಂತಂತೆ ಆಗಿಲ್ಲ, ಅರ್ಜುನನ ರಥವೂ ಅಲ್ಲ, ರಥದಲ್ಲಿ ಸಾರಥಿಯಾಗಿ ಎದುರು ಕುಳಿತಿದ್ದ ಕೃಷ್ಣ ಕೌರವರ ಸೇನೆಯ ಎದುರು ಇದ್ದಂತಾಗಿತ್ತು. ಇದನ್ನು ಕಣ್ಣಾರೆ ಕಂಡಿದ್ದ ಭೀಷ್ಮರು 'ಭೀಮಪರಾಕ್ರಮಃ' - ಭೀಮನ ಶತ್ರುಗಳಾಗಿದ್ದ ದುರ್ಯೋಧನಾದಿಗಳ ವಿರುದ್ಧ ಆಕ್ರಮಣ ನಡೆಸಲು ಪಾಂಡವ ಸೇನೆಯಲ್ಲಿ ಎಲ್ಲರಿಗಿಂತ ಎದುರು ನಿಂತಿದ್ದವನೆಂದು ಸ್ತುತಿಸುತ್ತಿರುವರು.

**ಆಧಾರನಿಲಯೋ ಧಾತಾ ಪುಷ್ಪಹಾಸಃ ಪ್ರಜಾಗರಃ |**
**ಊರ್ಧ್ವಗಃ ಸತ್ಪಥಾಚಾರಃ ಪ್ರಾಣದಃ ಪ್ರಣವಃ ಪಣಃ ||೧೦೨||**

**೯೪೮. ಆಧಾರನಿಲಯಃ – ಆಶ್ರಯಗಳಿಗೆಲ್ಲ ಮೂಲಾಶ್ರಯ ಆಗಿರುವವನು.**

**ವಿವರಣೆ :** ಆಧಾರ ಎಂದರೆ ಆಶ್ರಯ. ಯಾವ ಆಶ್ರಯವು ಇನ್ನೊಂದಕ್ಕೆ ಆಶ್ರಯವಾಗಿದ್ದು ಮತ್ತೊಂದರಲ್ಲಿ ಆಶ್ರಿತವಾಗಿರುತ್ತೋ ಅದು ಆಧಾರ ಎನಿಸುವುದು. ಯಾವುದು ಮತ್ತೊಂದನ್ನು ಆಶ್ರಯಿಸದೆ ಇನ್ನೊಂದಕ್ಕೆ ಆಶ್ರಯವಾಗಿರುವುದೋ ಅದು 'ನಿಲಯ' ಎನಿಸುವುದು

ನಾನು ಕುರ್ಚಿಯಲ್ಲಿ ಕುಳಿತಿದ್ದೇನೆ ಎಂದರೆ ಕುರ್ಚಿ ನನಗೆ ಆಧಾರ. ಆ ಕುರ್ಚಿಗೆ ವೇದಿಕೆ ಆಧಾರ. ವೇದಿಕೆಗೂ ಆಧಾರ ಭೂಮಿ. ಭೂಮಿಗೆ ಆಧಾರ ಶೇಷ;

ಶೇಷನಿಗೆ ಆಧಾರ ವಾಯುದೇವ. ಅಂತಹ ವಾಯುದೇವನಿಗೂ ಆಶ್ರಯನಾಗಿರುವ ಭಗವಂತ ವಾಯುದೇವನಿಗೆ, ಬರೇ ಆಧಾರ ಅಲ್ಲ ; ಮತ್ತೆ 'ನಿಲಯ' ಆಗಿರುವನು. ಯಾಕೆಂದರೆ ಭಗವಂತ ತನ್ನನ್ನು ಆಶ್ರಯಿಸಿಕೊಂಡಿರುವ ವಾಯುದೇವನೇ ಮುಂತಾದವರಿಗೆಲ್ಲ ಆಶ್ರಯನಾಗಿದ್ದು, ಅವನು ಮಾತ್ರ ಯಾರನ್ನೂ ಆಶ್ರಯಿಸಿಕೊಂಡಿಲ್ಲ. ಆದುದರಿಂದ 'ಆಧಾರನಿಲಯ' ಎನಿಸುವನು.

ಭೀಷ್ಮರು ಪಾಂಡವರಿಗೆ, ಕೌರವರಿಗೆಲ್ಲ ಆಧಾರರಾಗಿದ್ದರಷ್ಟೇ. ಅಂತಹ ಭೀಷ್ಮರಿಗೂ ನಿಲಯ ಎನಿಸಿದ್ದವನು ಕೃಷ್ಣ. ಆದುದರಿಂದ ಭೀಷ್ಮರು ಅವನನ್ನು 'ಆಧಾರನಿಲಯ'- ಎಂದು ಸ್ತುತಿಸಿರುವರು.

**೯೪೯. ಧಾತಾ – ಅನಿರುದ್ಧ ರೂಪದಿಂದ ಸ್ತ್ರೀಯರ ಗರ್ಭವನ್ನು ಧಾರಣೆ ಮಾಡುವವನು**

ವಿವರಣೆ: ಧಾರಣೆ ಮಾಡುವವನೇ ಧಾತಾ. ಸ್ತ್ರೀಯರ ಗರ್ಭವನ್ನು ಧಾರಣೆ ಮಾಡುವ ಅನಿರುದ್ಧ ರೂಪಿ ಪರಮಾತ್ಮ ಧಾತಾ ಎನಿಸುವನು. ಸಾಮಾನ್ಯವಾಗಿ ಹೊಟ್ಟೆಯೊಳಗೆ ಸೇರಿದ್ದು ಒಂದೋ ಜೀರ್ಣವಾಗಿ ಹೋಗುತ್ತದೆ. ಇಲ್ಲವೇ ತಿರಸ್ಕೃತವಾಗಿ ಮಲ ರೂಪದಿಂದ ಹೊರಗೆ ಚೆಲ್ಲಲ್ಪಡುತ್ತದೆ. ಆದರೆ ಪುರುಷನ ಮೂಲಕ ಸ್ತ್ರೀಯ ಶರೀರಕ್ಕೆ ಸೇರಿಕೊಂಡ ರೇತಸ್ಸು ಜೀರ್ಣವೂ ಆಗದೆ, ತಿರಸ್ಕೃತವೂ ಆಗದೆ, ಶಿಶುವಿನ ನಿರ್ಮಾಣಕ್ಕೆ ಮೂಲದ್ರವ್ಯವೆನಿಸುವಂತೆ ಉಪಯುಕ್ತವಾಗುವುದು. ಈ ಬಗೆಯ ಧಾರಣೆ ಅನಿರುದ್ಧನಿಂದ ಆಗುವುದು.

**'ಧಾತಾ ಗರ್ಭಂ ದಧಾತು ತೇ.....'** - ಎಂದು ಉಪನಿಷತ್ತಿನಲ್ಲಿ ಉಲ್ಲೇಖಗೊಂಡಿರುವ ಒಂದು ಮಂತ್ರ. ಗರ್ಭಾಧಾನ ಸಂಸ್ಕಾರದಲ್ಲಿ ಗಂಡ ಹೆಂಡತಿಯಲ್ಲಿ ತಿಳಿಸುವ ಮಾತು. ನಾನು ಒಂದು ಅಮೂಲ್ಯ ವಸ್ತುವನ್ನು ನಿನ್ನ ಗರ್ಭದಲ್ಲಿಟ್ಟಿದ್ದೇನೆ. ಅದನ್ನು ಜೋಪಾನವಾಗಿ ರಕ್ಷಣೆ ಮಾಡುವವನು ಅನಿರುದ್ಧ ರೂಪಿ ಪರಮಾತ್ಮ. ಗರ್ಭವನ್ನು ರಕ್ಷಣೆ ಮಾಡಿ ಧಾರಣೆ ಮಾಡುವುದರಿಂದಲೇ ಅವನಿಗೆ 'ಧಾತಾ' - ಎಂಬ ಹೆಸರು. ಅನಿರುದ್ಧ ಧಾರಣೆ ಮಾಡಿದರೆ **'ತ್ವಷ್ಟಾ ರೂಪಾಣಿ ಪಿಂಶತು'** - ಎಂದು ಹಾರೈಸುವಂತೆ ಸಂಕರ್ಷಣ ರೂಪಿ ಪರಮಾತ್ಮ ಬಡಗಿಯಾಗಿ ಆ ಗರ್ಭವನ್ನು ಕೆತ್ತಿ ಕೆತ್ತಿ ಅದಕ್ಕೆ ಶಿಶುವಿನ ರೂಪವನ್ನು ಕೊಡುವವನು.

**೯೫೦. ಪುಷ್ಪಹಾಸಃ – ಪುಷ್ಪದಂತೆ ಮನಃ ಪ್ರಸನ್ನತೆಯನ್ನು ನೀಡಿ ಪೋಷಿಸುವ ಮೂಲಕ ಪಾಲಿಸುವ ನಗು ಉಳ್ಳವನು.**

'ಶ್ರೀ ಪುಷ್ಪಹಾಸಾಯ ನಮಃ' 'ಶ್ರೀ ಪ್ರಸನ್ನಾತ್ಮನೇ ನಮಃ'



'ಸಿದ್ಧಿ ವಿಘ್ನಮುಖದೋಷಭೇಷಜ - ಮೋಕ್ಷಪ್ರಾಪ್ತಿಗೆ ಬರುವ ವಿಘ್ನಗಳ ಪರಿಹಾರಕನಾಗಿ, ಮೋಕ್ಷ ಸುಖದ ಸವಿಯನ್ನು ಭಕ್ತರಿಗೆ ಉಣಿಸಲು ಸಿದ್ಧನಾಗಿರುವ ಉಡುಪಿ ಶ್ರೀಕೃಷ್ಣ 'ಮಂದಹಾಸಮೃದುಸುಂದರಾನನಂ....' - ಎಂದು ನಾರಾಯಣ ಪಂಡಿತರು ಸಾರಿರುವಂತೆ ಮುಗುಳ್ನಗೆ ಬೀರುತ್ತ ತನ್ನ ಆನಂದಪರಿಪೂರ್ಣತ್ವದ ವ್ಯಕ್ತಿತ್ವವನ್ನು ಸಾರುತ್ತಿರುವನು. ವಿ.ಸ.ನಾಮದ 'ಪುಷ್ಪಹಾಸಃ' 'ಪ್ರಸನ್ನಾತ್ಮಾ' 'ಆನಂದಃ' ಮುಂತಾದ ದೇವರ ಆನಂದಪ್ರದತ್ವ ಗುಣದ ಪ್ರಸ್ತಾವವುಳ್ಳ ದೇವರ ಆನಂದಪ್ರದತ್ವ ಗುಣದ ಪ್ರಸ್ತಾವವುಳ್ಳ ನಾಮಗಳಿಂದ ಇದನ್ನು ಅನುಸಂಧಾನ ಮಾಡಬಹುದಾಗಿದೆ.

## ‘ಶ್ರೀವಿಕರ್ತ್ರೇ ನಮಃ’ ‘ಶ್ರೀಸ್ಥಾನದಾಯ ನಮಃ’ ‘ಶ್ರೀಮಾನದಾಯ ನಮಃ’ ‘ಶ್ರೀನ್ಯಾಯಾಯ ನಮಃ’



‘ಯಮೇವೈಷ ವೃಣುತೇ ತೇನ ಲಭ್ಯ -

ಸ್ತಸ್ಯೈಷ ಆತ್ಮಾ ವಿವೃಣುತೇ ತನೂಂ ಸ್ವಾಮ್’ - ತಾನು ಯಾರನ್ನು ಭಕ್ತರನ್ನಾಗಿ ಸ್ವೀಕರಿಸುವನೋ ಅಂತಹವರ ಎದುರಷ್ಟೇ ತನ್ನನ್ನು ತೆರೆದುಕೊಳ್ಳುವವನೆಂದು ಉಪನಿಷತ್ತಿನ ಸಂದೇಶ ಸಾರುತ್ತಿರುವ ದೇವರ ಸ್ವಭಾವಕ್ಕೆ ಪ್ರಾತ್ಯಕ್ಷಿಕೆಯಂತೆ ಮೊದಲು ಭಂಡಾರಕೇರಿ ಮಠಕ್ಕಷ್ಟೇ ಅಧಿಪತಿಗಳಾಗಿದ್ದ ಶ್ರೀ ಶ್ರೀ ವಿದ್ಯಾಮಾನ್ಯತೀರ್ಥರನ್ನು ಪಲಿಮಾರು ಮಠಾಧೀಶರನ್ನಾಗಿಸಿ ಅವರಿಂದ ಪೂಜಿಸಿಕೊಂಡ, ಎರಡು ಪರ್ಯಾಯಗಳ ಸೇವೆಯನ್ನೂ, ಚಿನ್ನದರಥಾದಿಗಳ ಕೊಡುಗೆಯನ್ನೂ ಸ್ವೀಕರಿಸಿ ಅನುಗ್ರಹಿಸಿದ ಉಡುಪಿ ಶ್ರೀ ಕೃಷ್ಣನ ಚಮತ್ಕಾರವನ್ನು, ಲೀಲೆಯನ್ನು ವಿ.ಸ.ನಾಮದ ‘ವಿಕರ್ತಾ’ ‘ಸ್ಥಾನದಃ’ ‘ಮಾನದಃ’ ‘ನ್ಯಾಯಃ’ - ಮುಂತಾದ ನಾಮಗಳಿಂದ ಯೋಗ್ಯವ್ಯಕ್ತಿಗಳಿಗೆ ಯೋಗ್ಯವಾದ ಸ್ಥಾನಮಾನಗಳನ್ನು ಒದಗಿಸುವಲ್ಲಿ ಕಾಣದ ಕೈಯಾಗಿ ಅನುಗ್ರಹಿಸುದಕ್ಕೆ ಪೂರಕವಾಗಿ ಚಿಂತಿಸಬಹುದು.

ವಿವರಣೆ : ಹಾಸ ಎಂದರೆ ನಗು. ನಮ್ಮದು 'ಮಂದಹಾಸ', ಆದರೆ ಭಗವಂತನದ್ದು ಪುಷ್ಪಹಾಸ. ನಮ್ಮ ಹಾಸ ಔದಾಸೀನ್ಯಪೂರ್ವಕವಾಗಿದ್ದು ಮಂದವಾಗಿರುವುದು. ಆದ್ದರಿಂದಲೇ ಇರಬಹುದು ಅದನ್ನು 'ಮಂದಹಾಸ' - ಎಂದು ಕರೆದಿರುವುದು.

ಆದರೆ ಭಗವಂತನ ಹಾಸ, ನಗು - ಪುಷ್ಪಹಾಸ. ಪುಷ್ಪದಂತಿರುವ ಹಾಸ. ನಗು ಪುಷ್ಪದಂತೆ ಎಂದರೆ ಏನು ? ಪುಷ್ಪದಂತೆ ಮೃದುವಾದ, ಅರಳಿದ ನಗು. ಅಲ್ಲದೆ, ಪುಷ್ಪವಾಗಿರುವ ನಗು. ಹೂವಿಗೆ ಪುಷ್ಪ ಎಂಬ ಹೆಸರಾದರೂ ಯಾಕೆ ? ಪುಷ್+ಪ - ಪುಷ್ಟಿಯನ್ನು ನೀಡುವಂತಹದ್ದು. ಹಾಗೂ ಪಾಲಿಸುವಂತಹದ್ದು. ಮನಸ್ಸಿಗೆ ಪ್ರಸನ್ನತೆಯನ್ನು ನೀಡಿ ಪುಷ್ಟಿಯನ್ನು ಕೊಡುವಂತಹದ್ದು. ಹಾಗೆ ಪುಷ್ಟಿ ಕೊಟ್ಟು ಪಾಲಿಸುವಂತಹದ್ದು. ಆದ್ದರಿಂದಲೇ ಪುಷ್ಪ. ಭಗವಂತನ ನಗು ಹೂವಿಗಿಂತಲೂ ಅಧಿಕವಾಗಿ ಮಾನಸಿಕ ಪ್ರಸನ್ನತೆಯನ್ನು ನೀಡಿ ಪುಷ್ಟಿ ನೀಡುತ್ತದೆ. ಹಾಗೆಯೇ ಪಾಲಿಸುತ್ತದೆ. ಆದುದರಿಂದಲೇ ಹೂವಿಗಿಂತಲೂ ಮುಖ್ಯವಾಗಿ 'ಪುಷ್ಪ' ಎನಿಸುವಂತಹದ್ದು ಭಗವಂತನ ನಗು.

ರಾಜಸೂಯ ಯಾಗವನ್ನು ಮುಗಿಸಿ ಶಕ್ರಪ್ರಸ್ಥದಲ್ಲಿದ್ದ ಕೃಷ್ಣನನ್ನು ದ್ವಾರಕೆಗೆ ಬರ ಮಾಡಿಕೊಳ್ಳಲು ನಾರದರು ಬರುವರು. ಆಗ ಕೃಷ್ಣ 'ಪುಷ್ಪಹಾಸ' - ಬೀರುವನೆಂದು ಮಹಾಭಾರತ ತಿಳಿಸುವುದು. ಪಾಂಡವರಿಗೆ ಪುಷ್ಟಿಯನ್ನು ನೀಡುವ ಹಾಸ ಅದು. ಭೀಮಸೇನ ದುರ್ಯೋಧನನ ಸೊಂಟ ಮುರಿಯಬೇಕು. ಹಾಗಾಗಬೇಕಾದರೆ ದುರ್ಯೋಧನ ದ್ರೌಪದಿಯ ಮಾನಾಪಹರಣದಲ್ಲಿ ತೊಡಗಬೇಕು. ಹಾಗಾಗಬೇಕಾದರೆ ಕಪಟದ್ಯೂತ ಆಡಬೇಕು. ಹಾಗಾಗಬೇಕಾದರೆ ಅಲ್ಲಿ ಕೃಷ್ಣ ಇರಬಾರದು. ಅದುದರಿಂದ ಕೃಷ್ಣ ಇಂದ್ರಪ್ರಸ್ಥದಿಂದ ದ್ವಾರಕೆಯತ್ತ ಹೊರಡುವಾಗ ಬೀರುವ ಪುಷ್ಪಹಾಸ ಪಾಂಡವರ ಈ ನಿಟ್ಟಿನ ಪುಷ್ಟಿಗೆ ಕಾರಣವಾಗಿ ಪಾಲಕವಾಗಿತ್ತು.

ನಾರಾಯಣಪಂಡಿತರು ಮಧ್ವವಿಜಯದಲ್ಲಿ ನಿರೂಪಿಸುತ್ತಾರೆ - **'ಸಿದ್ಧಿವಿಘ್ನಮುಖದೋಷಭೇಷಜ'** ಅಂದರೆ ಮೋಕ್ಷ ಸಂಪಾದನೆಗೆ ತೊಂದರೆಗಳನ್ನು ಪರಿಹರಿಸುವಲ್ಲಿ ಔಷಧದಂತೆ ಪರಿಗಣಿತನಾದ ಉಡುಪಿ ಶ್ರೀಕೃಷ್ಣ ತಾನು ಸಜ್ಜನರಿಗೆ ಮೋಕ್ಷ ಪ್ರಾಪ್ತಿಗೆ ಬೇಕಾದ ಪುಷ್ಟಿಯನ್ನು ನೀಡಿ, ಪಾಲಿಸಲು ಸಿದ್ಧನಾಗಿರುವನೆಂದು ತೋರಿಸಿಕೊಡಲೋ ಎಂಬಂತೆ **'ಮಂದಹಾಸಮೃದುಸುಂದರಾನನ'**ನಾಗಿರುವನು. ಆದುದರಿಂದ 'ಪುಷ್ಪಹಾಸ' ನಾಮದಿಂದ ಅಂತಹ ಹಾಸದ ಉಡುಪಿ ಶ್ರೀಕೃಷ್ಣನ ಅನುಸಂಧಾನವನ್ನು ನಡೆಸಬಹುದಾಗಿದೆ.

ಭೀಷ್ಮರು ತಮ್ಮ ಎದುರಿಗಿದ್ದ ಕೃಷ್ಣನ ಮುಖವನ್ನೇ ನೋಡುತ್ತ 'ಪುಷ್ಪಹಾಸ' ಎಂದು ಸ್ತುತಿಸುವಾಗ ಕೃಷ್ಣ ನಗುತ್ತಿದ್ದಿರಬಹುದು. ಆ ನಗು ಭೀಷ್ಮರಿಗೆ ಬ್ರಹ್ಮ-ಶಾಪಕ್ಕಾಗಿ ಅನುಭವಿಸಬೇಕಾಗಿದ್ದ ಎಂಟು ಮರಣಗಳ ನೋವನ್ನು ಪರಿಹರಿಸಿ, ಪುಷ್ಟಿ ನೀಡಿ ಪಾಲಕವಾಗಿದ್ದಿರಬಹುದು.

**೯೫೧. ಪ್ರಜಾಗರಃ – ಚೆನ್ನಾಗಿ ಎಚ್ಚೆತ್ತಿರುವವನು.**

**ವಿವರಣೆ :** ಜಾಗರಣೆ - ಎಂಬ ಶಬ್ದದ ಅರ್ಥ ನಮಗೆ ಗೊತ್ತಿದೆ. ಎಚ್ಚರಿಕೆಯಲ್ಲಿ ಇರುವಿಕೆ - ಎಂಬ ಅರ್ಥ. ಏಕಾದಶಿಯಂದು ರಾತ್ರಿ ಮಲಗದೆ ಜಾಗರಣೆ ಮಾಡಬೇಕೆಂದು ತಿಳಿಸಲಾಗುವುದು. ಪ್ರಕರ್ಷೇಣ - ಚೆನ್ನಾಗಿ ಜಾಗರ್ತೀತಿ - ಎಚ್ಚರಿಕೆಯಲ್ಲಿ ಇರುವವನು. ನಾವೆಲ್ಲ ನಿದ್ದೆ ಮಾಡುವಾಗಲೂ ಎಚ್ಚೆತ್ತಿರುವವನು ಭಗವಂತ.

ಅವನ ನಿದ್ರೆ 'ಯೋಗನಿದ್ರೆ' ಎನಿಸುವುದು. ಯಾಕೆಂದರೆ ಅವನು ನಿದ್ರಿಸುತ್ತಿರುವಾಗಲೂ ಎಚ್ಚೆತ್ತಿರುವನು. ನಾವಾದರೆ ಎಚ್ಚೆತ್ತಿರುವಾಗಲೂ ನಿದ್ರಿಸುತ್ತಿರುವೆವು.

ಚೆನ್ನಾಗಿ ಎಚ್ಚೆತ್ತಿರುವುದರಿಂದ 'ಪ್ರಜಾಗರ' ಎನಿಸುವ ಭಗವಂತನ ಉಪಾಸನೆಯಿಂದ ನಾವು ತಾತ್ವಿಕ ವಿಚಾರಗಳಲ್ಲಿ ಎಚ್ಚೆತ್ತಿರಬಹುದು. ಅಲ್ಲದೆ, ನಿದ್ರಿಸುವಾಗಲೂ ನಿದ್ರೆ ಹಾಗೂ ಸ್ವಪ್ನ ಕೊಡುವ ಭಗವಂತನ ವಿಷಯದಲ್ಲಿ ಎಚ್ಚೆತ್ತಿರಬಹುದು.

**೯೫೨. ಊರ್ಧ್ವಗಃ - ಎಲ್ಲರಿಗಿಂತ ಎತ್ತರದಲ್ಲಿ ಇರುವವನು.**

**ವಿವರಣೆ :** ಊರ್ಧ್ವಂ ಗಚ್ಛತೀತಿ ಊರ್ಧ್ವಗಃ, ಪ್ರತಿಯೊಂದು ಕ್ಷೇತ್ರದಲ್ಲೂ ತನ್ನದೇ ಆದ ವೈಶಿಷ್ಟ್ಯದಿಂದ ಮೆರೆಯುವವನು.

ಭಗವಂತನು ಎಲ್ಲ ಗುಣಗಳಿಂದಲೂ ಪೂರ್ಣನಾಗಿರುವುದರಿಂದ ಸೃಷ್ಟಿ, ಪಾಲನೆ, ಸಂಹಾರ, ನಿಯಮನ, ಮಾತುಗಾರಿಕೆ, ತಿಳುವಳಿಕೆ, ತಿಳಿಸುವಿಕೆ - ಹೀಗೆ ಎಲ್ಲ ಕ್ಷೇತ್ರಗಳಲ್ಲೂ ಉಳಿದೆಲ್ಲರನ್ನೂ ಅತಿಕ್ರಮಿಸಿ ಮೆರೆಯುವವನು.

ಭಗವಂತನನ್ನು ಈ ಆಶಯದಲ್ಲಿ 'ಊರ್ಧ್ವಗ' - ಎಂದು ಉಪಾಸನೆ ನಡೆಸಿದರೆ ನಾವು ಕೂಡಾ ನಮ್ಮ ನಮ್ಮ ಸಾಮರ್ಥ್ಯಕ್ಕೆ ಅನುಗುಣವಾಗಿ ಉಳಿದೆಲ್ಲರನ್ನೂ ಅತಿಕ್ರಮಿಸಿ ಮೆರೆಯುವಂತೆ ಆಗುವುದು.

**೯೫೩. ಸತ್ಪಥಾಚಾರಃ - ಒಳ್ಳೆಯ ದಾರಿಯಲ್ಲೇ ನಡಿಗೆ ಉಳ್ಳವನು.**

**ವಿವರಣೆ:** ಸತ್ಪಥ - ಎಂದರೆ ಒಳ್ಳೆಯ ದಾರಿ. ಆಚಾರ - ಎಂದರೆ ನಡಿಗೆ. ಆದುದರಿಂದ ಒಳ್ಳೆಯ ದಾರಿಯಲ್ಲಿ ನಡೆಯುವವನೇ 'ಸತ್ಪಥಾಚಾರ'

ಭಗವಂತನು ಯಾವಾಗಲೂ ಒಳ್ಳೆಯ ದಾರಿಯಲ್ಲೇ ಹೆಜ್ಜೆ ಇಡುವವನು. ಕೆಟ್ಟ ದಾರಿಯಲ್ಲಿ ಹೆಜ್ಜೆಗಳನ್ನಿಟ್ಟರೂ ಅವನನ್ನು ಯಾರೂ ಕೇಳುವವರಿಲ್ಲ. ಆದರೆ ಎಂದೂ ಕೆಟ್ಟ ಮಾರ್ಗವನ್ನು ತುಳಿಯುವವನಲ್ಲ. ಯಾಕೆ ? ದೇವರೇ ಗೀತೆಯಲ್ಲಿ ತನ್ನ 'ಸತ್ಪಥಾಚಾರ'ದ ಬಗ್ಗೆ ಸ್ಪಷ್ಟೀಕರಣ ನೀಡಿರುವನು -

**'ನ ಮೇ ಪಾರ್ಥಾಽಸ್ತಿ ಕರ್ತವ್ಯಂ ತ್ರಿಷು ಲೋಕೇಷು ಕಿಂಚನ |**

**ನಾನಾವಾಪ್ತಮವಾಪ್ತವ್ಯಂ ವರ್ತ ಏವ ಚ ಕರ್ಮಣಿ'**

ನನಗೆ ಎಲ್ಲೂ ಯಾವ ಕರ್ತವ್ಯವೂ ಇಲ್ಲ. ನಾನು ಏನನ್ನೂ ಮಾಡದಿದ್ದರೂ ಯಾರೂ ಕೇಳುವವರಿಲ್ಲ. ನಾನು ಏನನ್ನಾದರೂ ಮಾಡಿ ಹೊಂದಬೇಕಾದದ್ದೂ ಏನೂ ಇಲ್ಲ. ಆದರೂ ನಾನು ಕರ್ತವ್ಯಗಳನ್ನು ಆಚರಿಸುವೆನು. ಯಾಕೆಂದರೆ **'ಮಮ ವರ್ತ್ಮಾಽನುವರ್ತಂತೇ ಮನುಷ್ಯಾಃ ಪಾರ್ಥ ಸರ್ವಶಃ'** - ಎಲ್ಲರೂ ನನ್ನನ್ನು ಅನುಕರಿಸುವರು. ಕೃಷ್ಣನೇ ಮಾಡಿಲ್ಲ ನಾವೇಕೆ ಮಾಡಬೇಕು ? ಎಂಬ ಭಾವನೆಗೆ ಒಳಗಾಗುವರು. ಹಾಗಾಬಾರದೆಂದು ಅವರೆಲ್ಲರಿಗೆ ಆದರ್ಶವನ್ನು ಸ್ಥಾಪಿಸುವುದಕ್ಕಾಗಿಯಷ್ಟೇ - **'ವರ್ತ ಏವ ಚ ಕರ್ಮಣಿ'** - ಕರ್ತವ್ಯವನ್ನು ಪಾಲಿಸುವೆನು. ಸತ್ಪಥದಲ್ಲಿ ಹೆಜ್ಜೆಗಳನ್ನಿಡುವೆನು.

ತಂದೆ ಮಗನಲ್ಲಿ 'ಓದು' ಎಂದಾಗ, ಮಗ 'ನೀನು ಓದುವುದಿಲ್ಲ ನಾನೇಕೆ ಓದಬೇಕು ?' ಎಂದು ಅಪ್ಪನಲ್ಲಿ ಕೇಳಿದರೆ , ಅಪ್ಪ ಉತ್ತರಿಸುವನು - ನಾನೂ ಓದಿ ಏನೂ ಆಗಬೇಕಾದದ್ದಿಲ್ಲ, ಓದಿದ್ದರಿಂದ ಹೊಂದಬೇಕಾದ ಪದವಿ, ಉದ್ಯೋಗ, ಪುರಸ್ಕಾರ - ಇವೆಲ್ಲವನ್ನೂ ನಾನು ಈಗಾಗಲೇ ಹೊಂದಿರುವೆ ; ನೀನು ಅದನ್ನು ಹೊಂದಿಲ್ಲ ಆದ್ದರಿಂದ 'ನೀನು ಓದಬೇಕು'- ಎಂದು.

ಆದರೆ ಮಗನಲ್ಲಿ 'ಸಂಧ್ಯಾವಂದನೆ ಮಾಡು'- ಎಂದು ಅಪ್ಪ ಹೇಳಿದಾಗ, 'ನೀನು ಮಾಡುವುದಿಲ್ಲ ; ನಾನೇಕೆ ಮಾಡಲಿ'- ಎಂದು ಮಗ ಅಪ್ಪನಲ್ಲಿ ಕೇಳುವುದರಲ್ಲಿ ಅರ್ಥವಿದೆ. ಅಂದರೆ ಅಪ್ಪ ತಾನು ಸಂಧ್ಯಾವಂದನೆ ಮಾಡಿದಾಗಷ್ಟೇ ಮಗನಿಗೆ ಸಂಧ್ಯಾವಂದನೆ ಮಾಡುವಂತೆ ಹೇಳಲು ಬೇಕಾದ ನೈತಿಕ ಹಕ್ಕನ್ನು ಪಡೆಯುವನು. ಸಂಧ್ಯಾವಂದನೆಯ ಒಂದು ಪರೀಕ್ಷೆಗೆ ಒಬ್ಬ ಅಪ್ಪ ತನ್ನ ಮಗನನ್ನು ಕರೆದುಕೊಂಡು ಹೋದನಂತೆ. ಮಗನಿಗೆ ಪರೀಕ್ಷೆಯಲ್ಲಿ ಏನನ್ನೂ ಹೇಳಲು ಬರಲಿಲ್ಲ. ಆಗ ಅಪ್ಪನನ್ನು ಪರೀಕ್ಷೆ ಮಾಡೋಣ ಎಂದರಂತೆ. ಅದಕ್ಕೆ ಅಪ್ಪ ಏನು ಹೇಳಬೇಕು! ಮೊನ್ನೆ ಮೊನ್ನ ಉಪನಯನ ಆಗಿ ಸಂಧ್ಯಾವಂದನೆಯನ್ನು ಕಲಿತ ನನ್ನ ಮಗನಿಗೇ

ಹೇಳಲು ಬರಲಿಲ್ಲವಂತೆ ; ಹೀಗಿರುವಾಗ ಉಪನಯನವಾಗಿ ಮೂವತ್ತು ವರ್ಷಗಳು ದಾಟಿರುವ ನನಗೆ ಹೇಗೆ ತಾನೇ ಸಂಧ್ಯಾವಂದನೆ ಹೇಳಲು ಬಂದೀತು ! ಎಂದು ಅಪ್ಪ ತನ್ನ ದಡ್ಡತನವನ್ನು ಉಪಪಾದಿಸಿದನಂತೆ.

ಹೀಗಾಗಬಾರದು. ಮಕ್ಕಳು ಸಂಧ್ಯಾವಂದನೆಯೇ ಮುಂತಾದ ಸದಾಚಾರಗಳನ್ನು ತಮ್ಮ ಜೀವನದಲ್ಲಿ ಪಾಲಿಸಬೇಕೆಂದರೆ ಅವರ ಪಾಲಕರು ಅವರಿಗೆ ಆ ನಿಟ್ಟಿನಲ್ಲಿ ಆದರ್ಶರಾಗಿರಬೇಕು. ಇದನ್ನು ಸತ್ಪಥಾಚಾರನಾದ ಭಗವಂತ ತೋರಿಸಿಕೊಡುವನು. ತನಗೆ ಸದಾಚಾರಗಳನ್ನು ನಡೆಸುವ ಅವಶ್ಯಕತೆ ಇಲ್ಲದಿದ್ದರೂ ಉಳಿದವರಿಗೆ ಸ್ಫೂರ್ತಿ, ಮಾರ್ಗದರ್ಶನ ದೊರೆಯುವಂತಾಗಬೇಕೆಂದು ಯಾವಾಗಲೂ ಸದಾಚಾರಗಳನ್ನು ಅಳವಡಿಸಿಕೊಂಡು ಸನ್ಮಾರ್ಗದಲ್ಲಿಯೇ ಹೆಜ್ಜೆಗಳನ್ನಿಡುವನು.

**೯೫೪. ಪ್ರಾಣದಃ - ಒಳ್ಳೆಯ ಮಾರ್ಗದಲ್ಲಿ ಸಂಚರಿಸಲು ಬೇಕಾದ ಎಲ್ಲ ಬಗೆಯ ಶಕ್ತಿಯನ್ನು ಕೊಡುವವನು.**

**ವಿವರಣೆ:** ಪ್ರಾಣಂ ದದಾತೀತಿ ಪ್ರಾಣದಃ, ಪ್ರಾಣವನ್ನು ನೀಡುವವನು. ಪ್ರಾಣ ಎಂದರೆ ಶಕ್ತಿ. ಶಕ್ತಿಯನ್ನು ನೀಡುವವನೇ ಪ್ರಾಣದ.

‘ಸತ್ಪಥಾಚಾರ’ ಎನಿಸುವ ಭಗವಂತನು ತನ್ನ ಭಕ್ತರು ಸನ್ಮಾರ್ಗದಲ್ಲಿ ಸಾಗುವಂತಾಗಬೇಕೆಂದು ತಾನೂ ಸನ್ಮಾರ್ಗದಲ್ಲೇ ಹೆಜ್ಜೆಗಳನ್ನಿಡುವನು. ತನ್ನನ್ನು ಅನುಕರಿಸಿ, ಒಳ್ಳೆಯ ಮಾರ್ಗದಲ್ಲಿ ತೊಡಗಿದರೆಂದರೆ ಅವರಿಗೆ ಸಂಚರಿಸಲು ಬೇಕಾದ ಶಕ್ತಿಯನ್ನು ನೀಡುವನು. ಯಾವ ಶಕ್ತಿಯನ್ನು ? ಹಾಗೆ ಸಂಚರಿಸಲು ಏನೇನು ಶಕ್ತಿ ಬೇಕೋ ಆ ಎಲ್ಲ ಶಕ್ತಿಯನ್ನೂ ನೀಡುವನು. ಮಾನಸಿಕ ಶಕ್ತಿ, ದೈಹಿಕ ಶಕ್ತಿ, ಆರ್ಥಿಕ ಶಕ್ತಿ, ಜನಬೆಂಬಲದ ಶಕ್ತಿ - ಹೀಗೆ ಎಲ್ಲಾ ಬಗೆಯ ಶಕ್ತಿಯನ್ನು ನೀಡುವನು.

ಏಕಾದಶೀವ್ರತವನ್ನು ಆಚರಿಸಬೇಕೆಂದು ತೋರಿತೆಂದರೆ ಆಚರಿಸಲು ಬೇಕಾದ ಮಾನಸಿಕ ಶಕ್ತಿ, ದೈಹಿಕ ಶಕ್ತಿ - ಇವನ್ನೆಲ್ಲ ನೀಡಿ ಆ ನಿಟ್ಟಿನಲ್ಲಿ ಮುಂದುವರಿಯಲು ಪ್ರೇರಿಸುವನು. ಶಾಸ್ತ್ರದ ಪಾಠ ಕೇಳಬೇಕೆಂದನಿಸಿತೆಂದರೆ ಶಾಸ್ತ್ರದ ಪಾಠ ನಡೆಸುವ ಒಬ್ಬ ವ್ಯಕ್ತಿ ಆ ಊರಿಗೆ ಬರುವಂತೆ ಮಾಡುವನು. ಹೀಗೆ ಭಗವಂತ ‘ಪ್ರಾಣದ’ನಾಗಿ ಧಾರ್ಮಿಕಾಚರಣೆಗೆ, ಆಧ್ಯಾತ್ಮಿಕಾನುಷ್ಠಾನಕ್ಕೆ ಬೇಕಾದ ಎಲ್ಲ ಬಗೆಯ ಬಲವನ್ನು ನೀಡುವನು.

**೯೫೫. ಪ್ರಣವಃ - ಎಲ್ಲಾ ರೀತಿಯ ಹೊಗಳಿಕೆಗಳನ್ನು ಜೀರ್ಣಿಸಿಕೊಳ್ಳಲು**

**ಬೇಕಾದ ಸಾಮರ್ಥ್ಯವುಳ್ಳವನು.**

**ವಿವರಣೆ :** ಓಂಕಾರವನ್ನು ಪ್ರಣವ ಎನ್ನಲಾಗುವುದು. ಯಾಕೆ ? ಪ್ರಣೌತಿ ಪರಮಾತ್ಮಾನಮಿತಿ - ಪರಮಾತ್ಮನನ್ನು ಚೆನ್ನಾಗಿ ಹೊಗಳುವುದು. ಆದುದರಿಂದಲೇ ಪ್ರಣವ.

ಭಗವಂತನಾದರೂ ಅಂತಹ ಪ್ರಣವವೇ ಮುಂತಾದವುಗಳಿಂದ ಚೆನ್ನಾಗಿ ಹೊಗಳಲ್ಪಡುವುದರಿಂದ 'ಪ್ರಣೂಯತೇ ಇತಿ ಪ್ರಣವಃ' ಪ್ರಣವ ಎನಿಸುವನು.

ಸಕಲ ವೇದಗಳಿಗೂ ಮೂಲವಾದ ಪ್ರಣವ ಪರಮಾತ್ಮನನ್ನು ಚೆನ್ನಾಗಿ ಹೊಗಳಿದರೆ ಆ ಎಲ್ಲ ಹೊಗಳಿಕೆಗಳನ್ನೂ ಚೆನ್ನಾಗಿ ಜೀರ್ಣಿಸಿಕೊಂಡದ್ದರಿಂದ ಭಗವಂತ ಪ್ರಣವ.

ನಮ್ಮಲ್ಲಿ ಕೆಲವರನ್ನು ಹೊಗಳಿ ಸಮ್ಮಾನಿಸುವುದುಂಟು. ತಮ್ಮ ಮನೆಯ ಹೆಂಡ್ತಿ ಮಕ್ಕಳನ್ನಷ್ಟೇ ಪಾಲಿಸುತ್ತಿದ್ದ ಒಬ್ಬರನ್ನು ವೇದಿಕೆಯ ಮೇಲೆ ಏರಿಸಿ, ಇಡೀ ಊರನ್ನೇ ರಕ್ಷಣೆ ಮಾಡುತ್ತಿದ್ದಾರೆ ಎಂದು ಅಭಿನಂದನೆ ನಡೆಸಿದರೆ ಅವರು ಆ ಅಭಿನಂದನೆಯನ್ನು ಹೇಗೆ ತಾನೇ ತಮ್ಮಲ್ಲಿ ಜೀರ್ಣಿಸಿಕೊಂಡಾರು ? ಕೊನೆಗೆ ಅವರು ತಡೆದುಕೊಳ್ಳಲಾಗದೆ ತಾವು ತಮ್ಮ ಹೆಂಡ್ತಿ ಮಕ್ಕಳನ್ನಷ್ಟೇ ರಕ್ಷಿಸಿದ್ದು - ಎಂದು ಹೇಳಿಕೊಂಡರೂ ಮತ್ತೊಬ್ಬ ಎದ್ದು 'ಹೌದು, ಇವರು ತಮ್ಮ ಹೆಂಡ್ತಿಮಕ್ಕಳನ್ನು ಚೆನ್ನಾಗಿ ನೋಡಿಕೊಂಡಿದ್ದರೆಂದವರಿಂದ ಏನೂ ಊರಿಗೆ ತೊಂದರೆ ಆಗದಂತೆ ಉಪಕಾರ ಮಾಡಿದಂತಾಗಿದೆ, ಅದಕ್ಕಾಗಿಯೇ ಈ ಸಮ್ಮಾನ ! ಎಂದು ಉಪಪಾದಿಸುವುದೂ ಇದೆ.

ಇವೆಲ್ಲ ನಮ್ಮ ಪಾಡು ಆದರೆ, ದೇವರ ಮಟ್ಟಿಗೆ ಹಾಗಲ್ಲ ; ಯಾರೇ ಎಷ್ಟೇ ಹೊಗಳಿದರೂ ಆ ಹೊಗಳಿಕೆಯನ್ನೆಲ್ಲ ತನ್ನಲ್ಲಿ ಅರಗಿಸಿಕೊಳ್ಳುವ ತಾಕತ್ತು ಅವನಲ್ಲಿ ಇರುವುದರಿಂದ ಅವನು 'ಪ್ರಣವ'.

**೯೫೬. ಪಣಃ - ತನ್ನ ಭಕ್ತರ ಬಗ್ಗೆ ಒಳ್ಳೆಯ ಮಾತುಗಳನ್ನು ಹೇಳುವವನು.**

**ವಿವರಣೆ:** ಪಣ ಎಂದರೆ ಹೇಳುವವನು. ತುಳುವಿನಲ್ಲೂ ಹೇಳು ಎಂಬುದಕ್ಕೆ 'ಪಣ್'- ಎಂದೇ ಹೇಳಲಾಗುವುದು. ಭಗವಂತ ಹೇಳುವವನು. ಯಾರನ್ನು ಕುರಿತು ? ತನ್ನ ಭಕ್ತರನ್ನು ಕುರಿತು. ಏನನ್ನು ಹೇಳುವವನು ? ಒಳ್ಳೆಯ ಮಾತುಗಳನ್ನು ಹೇಳುವವನು. ಯಾವಾಗ ? ಭಕ್ತರು ಅಪರಾಧಗಳನ್ನು ಎಸಗಿದರೂ ಅವುಗಳನ್ನು ಎತ್ತಿ ತೋರಿಸದೆ ಭಕ್ತರ ಒಳ್ಳೆಯತನದ ಬಗ್ಗೆಯೇ ಮಾತುಗಳನ್ನಾಡುವನು ಭಗವಂತ. ಆದುದರಿಂದಲೇ

ಅವನು 'ಪಣಃ' ಭೀಷ್ಮರು ಅಂತಾರೆ ಭಗವಂತನ 'ಪಣಃ' ಎಂಬ ನಾಮದ ಈ ಅರ್ಥಕ್ಕೆ ನಾನೇ ಸಾಕ್ಷಿ.

ನಾನು ದುರ್ಯೋಧನನ ಮನೆಯಲ್ಲಿ ಉಂಡೆ. ದ್ರೌಪದೀ ವಸ್ತ್ರಾಪಹರಣದ ಸಂದರ್ಭದಲ್ಲಿ ಅದನ್ನು ಪ್ರತಿಭಟಿಸದೆ ಸುಮ್ಮನಿದ್ದೆ. ಕೌರವರ ಪರವಾಗಿ ಹತ್ತು ದಿನ ನಿನ್ನ ಭಕ್ತರಾದ ಪಾಂಡವರ ವಿರುದ್ಧ ಕಾದಾಡಿದೆ. ಇಷ್ಟೆಲ್ಲ ಅಪರಾಧಗಳನ್ನೆಸಗಿದರೂ, ಆ ಬಗ್ಗೆ ಏನೂ ಕೆಟ್ಟ ಮಾತುಗಳನ್ನು ಹೇಳದೆ ಯುಧಿಷ್ಠಿರನಲ್ಲಿ ಧರ್ಮದ ಬಗ್ಗೆ ಉಪದೇಶ ನೀಡಲು ಅರ್ಹ ಭೀಷ್ಮ ಎಂದು ನನ್ನ ಬಗ್ಗೆ ಒಳ್ಳೆಯ ಮಾತುಗಳನ್ನಾಡಿ ಯುಧಿಷ್ಠಿರಾದಿಗಳನ್ನು ನನ್ನ ಬಳಿಗೆ ಕರೆ ತಂದೆ. ಹೀಗೆ ಕೃಷ್ಣ, ಭಕ್ತರ ವಿಷಯದಲ್ಲಿ ನೀನು ಎಷ್ಟೊಂದು 'ಪಣ' ಎನಿಸಿರುವಿ ಎಂಬುದಕ್ಕೆ ನಾನೇ ಜ್ವಲಂತ ನಿದರ್ಶನ. ಎನ್ನುವರು ಭೀಷ್ಮರು.

ಭಗವಂತನನ್ನು ಈ ಆಶಯದಲ್ಲಿ 'ಪಣ' - ಎಂದು ಉಪಾಸನೆ ಮಾಡಿದೆವೆಂದರೆ ನಮ್ಮ ಮೂಲಕ ಯಾವುದಾದರೂ ಅಪರಾಧ ಎಸಗಲ್ಪಟ್ಟರೆ ಸಮಾಜ ಅದನ್ನೇ ಎತ್ತಿ ತೋರಿಸಿ ಟೀಕಿಸುವಂತಾಗುವುದಿಲ್ಲ. ಬದಲಾಗಿ ಅದನ್ನು ಪರಿಗಣಿಸದೆ, ಮರೆತು ಬಿಟ್ಟು ನಮ್ಮ ಒಳ್ಳೆತನದ ಬಗ್ಗೆಯೇ ಗಮನ ಹರಿಸುವಂತಾಗುವುದು.

ಹಾಗೆಯೇ ನಾವು ಕೂಡ ಭಗವದ್ ಭಕ್ತರ ಮೂಲಕ ಯಾವುದಾದರೊಂದು ಅಪರಾಧ ಎಸಗಲ್ಪಟ್ಟರೆ ಅದನ್ನೇ ಎತ್ತಿ ಡಂಗುರ ಬಾರಿಸುವ ಪ್ರವೃತ್ತಿಗೆ ಇಳಿಯದೆ ಅವರ ಒಳ್ಳೆಯ ಗುಣಗಳತ್ತ ಗಮನ ಹರಿಸುವಂತಾಗುವುದು.

**ಪ್ರಮಾಣಂ ಪ್ರಾಣನಿಲಯಃ ಪ್ರಾಣಭೃತ್ ಪ್ರಾಣಜೀವನಃ |**
**ತತ್ತ್ವಂ ತತ್ತ್ವವಿದೇಕಾತ್ಮಾ ಜನ್ಮಮೃತ್ಯುಜರಾತಿಗಃ ||೧೦೩||**

**೯೫೭. ಪ್ರಮಾಣಮ್ – ಯಾವ ರೀತಿಯಾಗಿ ನಡೆದುಕೊಳ್ಳಬೇಕೆಂಬುದಕ್ಕೆ ಜ್ಞಾಪಕನಾಗಿರುವವನು.**

**ವಿವರಣೆ :** ಒಪ್ಪೊತ್ತು ಊಟದ ನಿಯಮವನ್ನು ಅಳವಡಿಸಿಕೊಂಡಿದ್ದೇವೆ. ಆದರೆ ಗುರುಗಳು ಮನೆಗೆ ಬಂದು ಪೂಜೆ ನಡೆಸಿದರು. ಪ್ರಸಾದವನ್ನು ಸ್ವೀಕರಿಸಲು ಆದೇಶಿಸಿದರು. ಅವರ ಆದೇಶಾನುಸಾರವಾಗಿ ಒಪ್ಪತ್ತು ಊಟದ ನಿಯಮವನ್ನು ಸಡಿಲಿಸಿ ಪ್ರಸಾದವನ್ನು ಸ್ವೀಕರಿಸುವೆವು. ಯಾರೋ ವಿಚಾರಿಸುವರು - ಒಪ್ಪೊತ್ತು ಊಟದ ನಿಯಮವನ್ನು ಬಿಟ್ಟಿರಾ ?

ಹೌದು.

ಹೇಗೆ ಬಿಟ್ಟಿರಿ ?

ಗುರುಗಳು ಪ್ರಮಾಣ. ಗುರುಗಳು ಹಾಗೆ ನಡೆದುಕೊಳ್ಳಲು ತಿಳಿಸಿದರು. ಅದಕ್ಕೆ ಅನುಗುಣವಾಗಿ ನಡೆದುಕೊಂಡಿರುವೆವು ಎಂದರ್ಥ.

ಹೀಗೆ ವಿಶಿಷ್ಟವಾಗಿ ನಡೆದುಕೊಳ್ಳಲು ಮಾರ್ಗದರ್ಶನ ಮಾಡುವವರು 'ಪ್ರಮಾಣ.'

ಆದರೆ ಯಾರು ಹೇಳಿದಂತೆ ನಡೆದುಕೊಂಡರೆ ಹಾಗೆ ನಡೆದುಕೊಂಡವರಿಗೂ ದೋಷ ಇಲ್ಲ. ಹಾಗೆ ನಡೆದುಕೊಳ್ಳಲು ಹೇಳಿದವರಿಗೂ ದೋಷ ಇಲ್ಲ ಎಂದಾಗಬೇಕು. ಅಂತಹವರಷ್ಟೇ ಪ್ರಮಾಣ ಎನಿಸಬಲ್ಲರು.

ಇದಕ್ಕೆ ಬದಲಾಗಿ ನಿಯಮ ಉಲ್ಲಂಘನೆ ಮಾಡಲು ತಿಳಿಸಿ, ಅದರಿಂದ ಪಾಪ ಬರುವುದಲ್ಲವೇ ? ಎಂದು ವಿಚಾರಿಸಿದಾಗ ಅದೆಲ್ಲ ನನಗೆ ಗೊತ್ತಿಲ್ಲ ಎನ್ನುವವರು 'ಪ್ರಮಾಣ' ಎನಿಸಲಾರರು.

ಅಶ್ವತ್ಥಾಮಾಚಾರ್ಯರು ಬದುಕಿದ್ದಾಗಲೇ ಕೃಷ್ಣ 'ಅಶ್ವತ್ಥಾಮಾ ಹತಃ' - ಎಂದು ಯುಧಿಷ್ಠಿರನಲ್ಲಿ ಉದ್ಘೋಷಿಸಲು ಹೇಳಿದ. ಕೃಷ್ಣನ ಆದೇಶದ ಮೇರೆಗೆ ಯುಧಿಷ್ಠಿರ ತನ್ನ ಸತ್ಯನಿಷ್ಠೆಯನ್ನು ಉಲ್ಲಂಘಿಸಿದ. ಆದರೆ ಇದಕ್ಕೆ ಪ್ರಮಾಣ ಕೃಷ್ಣ. ಆದುದರಿಂದ ಯುಧಿಷ್ಠಿರನಿಗೆ ಈ ಸುಳ್ಳು ಹೇಳಿದ್ದರಿಂದ ಏನೂ ದೋಷ ಬರಲಿಲ್ಲ. ಬದಲಾಗಿ, ಈ ಸುಳ್ಳು ಹೇಳುವಿಕೆಯಲ್ಲಿ ಕೃಷ್ಣನನ್ನು 'ಪ್ರಮಾಣ'ನನ್ನಾಗಿ ಇಟ್ಟುಕೊಳ್ಳಬಹುದೋ ಹೇಗೆ ? ಎಂದು ಸಂದೇಹಪಟ್ಟದ್ದರಿಂದ ಯುಧಿಷ್ಠಿರ ನರಕವನ್ನು ಕಾಣಬೇಕಾಗಿ ಬಂತು !

ಭೀಷ್ಮರಿಗೆ ತಮ್ಮ ಹೆಚ್ಚಿನ ನಡತೆಗಳಿಗೆಲ್ಲ ಕೃಷ್ಣನೇ ಪ್ರಮಾಣ. ಗೃಹಸ್ಥಾಶ್ರಮ ಶ್ರೇಷ್ಠ ಎಂದಿದ್ದರೂ ಬ್ರಹ್ಮಚರ್ಯಾಶ್ರಮವನ್ನು ಭೀಷ್ಮರು ಅಳವಡಿಸಿಕೊಂಡಿದ್ದರು. ಇದಕ್ಕೆ ಕೃಷ್ಣ ಪ್ರಮಾಣ. ಆದ್ದರಿಂದ ಅವರಿಗೆ ಇದೇನೂ ದೋಷಕಾರಕವಾಗಿಲ್ಲ.

ಹೀಗೆ ಜೀವನದಲ್ಲಿ ಯಾವುದೇ ಧಾರ್ಮಿಕ ಹಾಗೂ ಆಧ್ಯಾತ್ಮಿಕ ನಿಯಮಗಳನ್ನು ಅಳವಡಿಸಿಕೊಳ್ಳುವುದಕ್ಕಾಗಲೀ, ಆ ನಿಯಮಗಳನ್ನು ಸಡಿಲಿಸಿಕೊಳ್ಳುವುದಕ್ಕಾಗಲೀ, ಆ ನಿಯಮಗಳನ್ನು ಬಿಟ್ಟುಬಿಡುವುದಕ್ಕಾಗಲೀ - 'ಪ್ರಮಾಣ' ಎನಿಸುವವನು ಭಗವಂತ. ಶ್ರುತಿಸ್ಮೃತಿಗಳೇ ಆ ನಿಟ್ಟಿನಲ್ಲಿ ಪ್ರಮಾಣಗಳಾದರೂ, ಆ ಶ್ರುತಿಸ್ಮೃತಿಗಳಿಗೂ **'ಶ್ರುತಿಸ್ಮೃತೀ ಹರೇರಾಜ್ಞೇ.....'** - ಎಂದಿರುವಂತೆ ಭಗವಂತನ ಆಜ್ಞೆಯ ರೂಪದಲ್ಲಿವೆ ಎಂಬುದಕ್ಕಾಗಿ

ಪ್ರಾಮಾಣ್ಯವನ್ನೂ, ಪ್ರಾಶಸ್ತ್ಯವನ್ನೂ ಒಪ್ಪಲಾಗುವ ಪ್ರಯುಕ್ತ ಮೂಲಭೂತವಾಗಿ ಭಗವಂತನೇ 'ಪ್ರಮಾಣಮ್'.

**೯೫೮. ಪ್ರಾಣನಿಲಯಃ – ಮುಖ್ಯಪ್ರಾಣನೇ ಮುಖ್ಯ ನಿಲಯನಾಗಿ ಉಳ್ಳವನು.**

**ವಿವರಣೆ:** ಪ್ರಾಣ ಎಂದರೆ ಮುಖ್ಯಪ್ರಾಣ. ನಿಲಯ ಎಂದರೆ ಮನೆ. ಮುಖ್ಯಪ್ರಾಣನೇ ಮನೆಯಾಗಿ ಉಳ್ಳವನೇ 'ಪ್ರಾಣನಿಲಯಃ'

ದೇವರು ಬೇರೆ ಬೇರೆ ಪ್ರತೀಕದಲ್ಲಿ ಇರುವರು. ಆದರೆ ಮುಖ್ಯಪ್ರಾಣನಲ್ಲಿ ಯಾವಾಗಲೂ ನೆಲೆಸಿರುವರು. ಆದುದರಿಂದ ಮುಖ್ಯಪ್ರಾಣನ ವಿಳಾಸ ಬರೆದು, ಅಂದರೆ Care off - ಮುಖ್ಯಪ್ರಾಣ ಎಂದು ಸೇರಿಸಿ ದೇವರಿಗೆ ಏನು ಕೊಟ್ಟರೂ ಅದು ತಲುಪುವುದು.

ಅದಕ್ಕಾಗಿಯೇ ನಾವು ಯಾವುದೇ ಸಾಧನೆ ನಡೆಸಿದರೂ ಅದನ್ನು 'ಮಧ್ವಾಂತರ್ಗತ, ಮುಖ್ಯಪ್ರಾಣಾಂತರ್ಗತ....' ಎಂದು ಉಲ್ಲೇಖಿಸಿಯೇ ದೇವರಿಗೆ ಕೊಡುವುದು.

ಯಾರೋ ಕೇಳಿದ್ರು - ಮಧ್ವರು ಅವತರಿಸುವ ಮುಂಚೆ ಹೇಗೆ ದೇವರಿಗೆ ಕೊಡುತ್ತಿದ್ದರು ? ಆಗ 'ಮಧ್ವಾಂತರ್ಗತ' ಎನ್ನಲು ಅವಕಾಶ ಇಲ್ಲ ತಾನೇ ? - ಎಂದು. ಮಧ್ವರ ಅವತಾರ ಆಗದಿದ್ದುದರಿಂದ 'ಮಧ್ವಾಂತರ್ಗತ' ಹೇಳಲಾಗದಿದ್ದರೂ ಮುಖ್ಯಪ್ರಾಣ ಆಗಲೂ ಇದ್ದೇ ಇರುವನೆಂದು 'ಮುಖ್ಯಪ್ರಾಣಾಂತರ್ಗತ' ಎಂದಂತೂ ಹೇಳಬಹುದು ತಾನೇ ?

ಹೀಗೆ ಮುಖ್ಯಪ್ರಾಣ ದೇವರ ಮುಖ್ಯವಾದ ನಿಲಯ. ಅಂದರೆ ಆ ಮನೆಯಲ್ಲಿ ದೇವರು ಯಾವ ಕಾಲದಲ್ಲೂ ಇಲ್ಲಾಂತ ಆಗುವುದೆಂದಿಲ್ಲ. ಆದ್ದರಿಂದ 'ಪ್ರಾಣನಿಲಯ'- ಮುಖ್ಯಪ್ರಾಣ ಮುಖ್ಯವಾದ ನಿಲಯ ಆಗಿರುವವನು ಭಗವಂತ.

**೯೫೯. ಪ್ರಾಣಭೃತ್ – ಮುಖ್ಯಪ್ರಾಣನನ್ನು ತನ್ನ ತೊಡೆಯಲ್ಲಿ ಹೊತ್ತವನು.**

**ವಿವರಣೆ:** 'ಪ್ರಾಣನಿಲಯಃ' ಎನಿಸುವ ಭಗವಂತನಿಗೆ ಮುಖ್ಯಪ್ರಾಣ ಮನೆ ಆದರೆ, ಅಂತಹ ಮುಖ್ಯಪ್ರಾಣನಿಗೆ ಭಗವಂತನೇ ನೆಲೆ. ಮುಖ್ಯಪ್ರಾಣ ಭಗವಂತನನ್ನು ತನ್ನ ಹೃದಯದಲ್ಲಿ ಹೊತ್ತುಕೊಂಡರೆ ಭಗವಂತ ಮುಖ್ಯಪ್ರಾಣನನ್ನು ತನ್ನ ತೊಡೆಯಲ್ಲಿ ಹೊತ್ತುಕೊಂಡ. **'ತಂ ಯಥಾ ಯಥಾ ಉಪಾಸತೆ ತದೇವ ಭವತಿ'** ಎಂದಿರುವಂತೆ ಮುಖ್ಯಪ್ರಾಣನು ದೇವರಲ್ಲಿ 'ಶರಣಮ್' ನಾನು ನಿನಗೆ ಆಶ್ರಯ ಎಂದರೆ ದೇವರು ಅಂದ ನಾನೂ ನಿನಗೆ 'ಶರಣಮ್' ಆಶ್ರಯ ಎಂದು.

ಮುಖ್ಯಪ್ರಾಣನ ಪ್ರತಿಮೆಯಲ್ಲಿ ಮುಖ್ಯಪ್ರಾಣನನ್ನಷ್ಟೇ ಚಿಂತನೆ ಮಾಡಬಾರದು '...... ಅಚ್ಯುತಾಂಕೇ ಸ್ವಾಸೀನಮಸ್ಯ ನುತಿನಿತ್ಯವಚಃ ಪ್ರವೃತ್ತಿಮ್' - ಎಂದಿರುವಂತೆ ದೇವರ ತೊಡೆಯಲ್ಲಿ ಕುಳಿತುಕೊಂಡು ಅವನ ಸ್ತುತಿಯಲ್ಲೇ ಮಗ್ನನಾಗಿರುವವನ್ನಾಗಿ ಮುಖ್ಯಪ್ರಾಣನನ್ನು ಚಿಂತನೆ ಮಾಡಬೇಕು.

**೯೬೦. ಪ್ರಾಣಜೀವನಃ – ಇಂದ್ರಿಯಗಳಿಗೆ ಜೀವಕಳೆ ತುಂಬುವವನು.**

**ವಿವರಣೆ :** ಪ್ರಾಣ ಎಂದರೆ ಇಂದ್ರಿಯಗಳು. ಅಂತಹ ಇಂದ್ರಿಯಗಳಿಗೆ ಜೀವಕಳೆಯನ್ನು ತುಂಬಿಸುವವನು ಪ್ರಾಣಜೀವನಃ ಪ್ರಾಣಾನ್ - ಇಂದ್ರಿಯಾಣಿ. ಜೀವಯತಿ - ಚೈತನ್ಯವನ್ನು ತುಂಬುವವನು.

**'ನ ಪ್ರಾಣೇನ ನಾಪಾನೇನ ಮರ್ತ್ಯೋ ಜೀವತಿ ಕಶ್ಚನ |**
**ಇತರೇಣ ತು ಜೀವಂತಿ ಯಸ್ಮಿನ್ನೇತೌ ಉಪಾಶ್ರಿತೌ' ||**

ಎಂದು ಉಪನಿಷತ್ತು ತಿಳಿಸುತ್ತಿರುವಂತೆ ಮನುಷ್ಯನಲ್ಲಿ ಜೀವಕಲೆ ಬರುವುದು ಬರೇ ಮುಖ್ಯಪ್ರಾಣ ಹಾಗೂ ಅವನ ಮತ್ತೊಂದು ರೂಪವಾದ ಅಪಾನನಿಂದ ಅಲ್ಲ. ಮತ್ತೆ, ಅವರಿಗೋ ಆಶ್ರಯನಾದ 'ಇತರ' ಎನಿಸುವ ಭಗವಂತ ಮುಖ್ಯಪ್ರಾಣಾದಿಗಳ ಮೂಲಕ ಜೀವಕಳೆ ತುಂಬುವನು.

ಮಹಾಭಾರತ ಯುದ್ಧದಲ್ಲಿ ಸತ್ತ ಹೆಣಗಳಲ್ಲೂ ಜೀವಕಳೆ ತುಂಬಿತ್ತು. ಶ್ರೀಕೃಷ್ಣ ತಮ್ಮ ತಮ್ಮ ಕರ್ತವ್ಯವನ್ನು ನಿರ್ವಹಿಸಿದ ಅವರಲ್ಲಿ ಜೀವಕಳೆಯನ್ನು ತುಂಬಿಸಿದ್ದ. ನಾವು ಬದುಕಿದ್ದರೂ ಪ್ರೇತಕಳೆ ಆವರಿಸುತ್ತದೆ.

ಭೀಷ್ಮರು ಪ್ರಾಣೋತ್ಕ್ರಮಣದ ಕ್ಷಣಗಳನ್ನು ಎಣಿಸುತ್ತಿರುವರು. ಆದರೂ ಅವರ ಬಾಯಿ, ಕಣ್ಣು, ಮನಸ್ಸು, ಕಿವಿ ಮುಂತಾದ ಇಂದ್ರಿಯಗಳೆಲ್ಲ ಚೆನ್ನಾಗಿಯೇ ಕೆಲಸ ಮಾಡುತ್ತಿವೆ. ಯಾಕೆಂದರೆ 'ಪ್ರಾಣಜೀವನ' ಎನಿಸಿರುವ ಕೃಷ್ಣ ಪಕ್ಕದಲ್ಲಿಯೇ ಕುಳಿತಿದ್ದು ವಾಗಿಂದ್ರಿಯ ಮುಂತಾದ ಅವರ ಇಂದ್ರಿಯಗಳಿಗೆ ಚೈತನ್ಯವನ್ನು ತುಂಬಿರುವನು. ಇದನ್ನು ಅನುಭವಿಸುತ್ತಾ ಭೀಷ್ಮರು ಪ್ರಾಣಜೀವನ ಎಂದು ಕೃಷ್ಣನನ್ನು ಸ್ತುತಿಸುತ್ತಿರುವರು.

ಎಷ್ಟೋ ವ್ಯಕ್ತಿಗಳಿಗೆ ಇಂದ್ರಿಯಗಳ ಚೈತನ್ಯ ಹೊರಟು ಹೋಗಿ ಬಿಟ್ಟಿರುತ್ತದೆ. ಪ್ರಾಣ ಹಾಗೆಯೇ ಇರುತ್ತದೆ. ಆದುದರಿಂದ ಇಂದ್ರಿಯಶಕ್ತಿಗಳನ್ನು ಕಳಕೊಂಡು ಪರಾಧೀನರಾಗಿ ಬದುಕುವ ದುಃಸ್ಥಿತಿಗೆ ಒಳಗಾಗಿರುವರು. ಹೀಗಾಗದೆ ಪ್ರಾಣ ಇರುವರೆಗೂ ಇಂದ್ರಿಯಗಳಲ್ಲಿ ಜೀವಕಳೆಯೂ, ಚೈತನ್ಯವೂ ಇದ್ದು ಸಾಧನಾನುಷ್ಠಾನವನ್ನು ನಡೆಸುತ್ತ ಜೀವಿಸುತ್ತಿದ್ದು ಕೊನೆಗೆ ಪ್ರಾಣವನ್ನು

ತ್ಯಜಿಸುವಾಗಷ್ಟೇ ಇಂದ್ರಿಯಗಳ ಚೈತನ್ಯವೂ ಕಳೆದುಕೊಳ್ಳುವಂತೆ ಆಗಬೇಕೆಂದರೆ ಭಗವಂತನನ್ನು ‘ಪ್ರಾಣಜೀವನಃ’ - ಎಂದು ಉಪಾಸನೆ ನಡೆಸಬೇಕು.

**೯೬೧. ತತ್ತ್ವಂ – ನಿಶ್ಚಿಂತವಾಗಿ ಯಾವಾಗಲೂ ಇರುವಂತಹವನು.**

**ವಿವರಣೆ :** ನೈಜತೆಯಿಂದ ಕೂಡಿ ಇರುವ ವಸ್ತುವೇ ತತ್ತ್ವ. ಈ ಅರ್ಥದಲ್ಲಿ ದೇವನೊಬ್ಬನೇ ತತ್ತ್ವ. ಯಾಕೆಂದರೆ ಅವನು ತಾನು ತಾನಾಗಿಯೇ ಇರುವವನು. ನಾವೆಲ್ಲ ಇರುವವರಾದರೂ ಯಾವುದಾದರೂ ನ್ಯೂನತೆಗಳು ಇದ್ದೇ ಇರುವವು. ಅದಕ್ಕಾಗಿಯೇ ‘ಹೇಗೆ ಇದ್ದೀರಿ ?’ - ಎಂದು ಯಾರನ್ನಾದರೂ ಕೇಳಿದರೆ ‘ಹ್ಞೂಂ ಇದ್ದೇನೆ’ ಎಂಬುದಾಗಿ ಮೊದಲು ‘ಹ್ಞೂಂ’ ಕಾರ ಸೇರಿಸಿಯೇ ಉತ್ತರಿಸಲಾಗುವುದು. ಅಂದರೆ ಇರುವಿಕೆಯಲ್ಲಿ ಏನೋ ಅಸ್ವಾರಸ್ಯ ಇದೆ ಎಂಬ ಅಭಿಪ್ರಾಯ.

ಆದರೆ ದೇವರು ಮಾತ್ರ ಯಾವುದೇ ಚಿಂತೆ ಇಲ್ಲದೆ ಶಾಶ್ವತವಾಗಿ ಇರುವವನು. ಆದುದರಿಂದ ಅವನು ‘ತತ್ತ್ವ’ ಎನಿಸುವನು.

**೯೬೨. ತತ್ತ್ವವಿದೇಕಾತ್ಮಾ – ದೇವರನ್ನು ಚೆನ್ನಾಗಿ ತಿಳಿದವರಲ್ಲಿ ಮುಖ್ಯ ವ್ಯಕ್ತಿ.**

**ವಿವರಣೆ:** ‘ತತ್ತ್ವಂ’ ಎನಿಸುವ ಭಗವಂತನನ್ನು ಚೆನ್ನಾಗಿ, ಮುಖ್ಯವಾಗಿ ತಿಳಿದವರಲ್ಲಿ ಮುಖ್ಯವಾದ ವ್ಯಕ್ತಿ - ಭಗವಂತನೇ. ದೇವರ ಪತ್ನಿ ಲಕ್ಷ್ಮೀದೇವಿಯೂ ದೇವರ ನಖಶಿಖಾಂತವನ್ನು ತಿಳಿದಿಲ್ಲ. ದೇವರ ನಖ ಯಾವುದು ಶಿಖಾ ಯಾವುದು ಎಂದೇ ತಿಳಿದಿಲ್ಲ. ಹೀಗಿರುವಾಗ ಉಳಿದವರು ದೇವರನ್ನು ಹೇಗೆ ತಾನೇ ತಿಳಿದಾರು ? ಆದ್ದರಿಂದ ದೇವರನ್ನು ಚೆನ್ನಾಗಿ ತಿಳಿದವನು ಒಬ್ಬನೇ ಅದೇ ದೇವರೇ. ದೇವರು ತನ್ನನ್ನು ತಾನು ಚೆನ್ನಾಗಿ ತಿಳಿದಿದ್ದಾನೆ, ನಮ್ಮನ್ನೂ ಚೆನ್ನಾಗಿ ತಿಳಿದಿದ್ದಾನೆ. ನಾವು ದೇವರನ್ನೂ ಚೆನ್ನಾಗಿ ತಿಳಿದಿಲ್ಲ, ನಮ್ಮನ್ನೂ ಚೆನ್ನಾಗಿ ತಿಳಿದುಕೊಂಡಿಲ್ಲ.

**೯೬೩. . ಜನ್ಮಮೃತ್ಯುಜರಾತಿಗಃ –ಹುಟ್ಟು, ಸಾವು ಹಾಗೂ ವೃದ್ಧಾಪ್ಯಗಳನ್ನು ಮೀರಿ ಇರುವವನು.**

**ವಿವರಣೆ :** ಜನ್ಮ - ಹುಟ್ಟು ; ಮೃತ್ಯು - ಮರಣ ಜರಾ - ವೃದ್ಧಾಪ್ಯ ಇವುಗಳನ್ನು ಅತಿಗಃ - ಅತಿಕ್ರಮಿಸಿ ಇರುವವನು. ಈ ಮೂರರ ಸುಳಿಗೆ ಸಿಲುಕುವವನಲ್ಲ.

ನಾವಾದರೆ ಮತ್ತೆ ಮತ್ತೆ ಹುಟ್ಟಿ ಬರ್ತೇವೆ. ಮತ್ತೆ ಮತ್ತೆ ಸಾಯ್ತೇವೆ. ಹಾಗೆಯೇ ವೃದ್ಧಾಪ್ಯಕ್ಕೆ ಒಳಗಾಗುವೆವು.

ಭೀಷ್ಮರು - ತಮ್ಮ ಎದುರು ಕುಳಿತಿರುವ ಕೃಷ್ಣನನ್ನು ದಿಟ್ಟಿಸಿ

ನೋಡುತ್ತಿದ್ದಾರೆ. ಎಪ್ಪತ್ತಕ್ಕಿಂತಲೂ ಹೆಚ್ಚು ವಯಸ್ಸಿನ ಕೃಷ್ಣ ಇನ್ನೂ ಹದಿನಾರರ ಯುವಕನಂತೆ ಇದ್ದಾನೆ. ಇಂತಹವನಿಗೆ 'ಜರಾ' ಬರುವುದಾದರೂ ಹೇಗೆ ?

ನಮಗಾಗದರೆ ಹದಿನಾರು ವರ್ಷ ವಯಸ್ಸಾಗುತ್ತಿರುವಂತೆಯೇ 'ಯಾವಾಗ ಷಷ್ಟ್ಯಬ್ದ ಪೂರ್ತಿ' - ಎಂದು ಕೇಳುವ ಪ್ರಸಂಗ !

ನಾವು ಹುಟ್ಟು - ಸಾವು - ಮುದಿತನದ ಈ ಸುಳಿಯಿಂದ ಪಾರಾಗಬೇಕಾದರೆ ಭಗವಂತನನ್ನು 'ಜನ್ಮಮೃತ್ಯುಜರಾತಿಗಃ' - ಎಂದು ಉಪಾಸನೆ ನಡೆಸಬೇಕು.

**ಭೂರ್ಭುವಃ ಸ್ವಸ್ತರುಸ್ತಾರಃ ಸವಿತಾ ಪ್ರಪಿತಾಮಹಃ |**
**ಯಜ್ಞೋ ಯಜ್ಞಪತಿರ್ಯಜ್ವಾ ಯಜ್ಞಾಂಗೋ ಯಜ್ಞವಾಹನಃ ||೧೦೪||**

**೯೭೪. ಭೂರ್ಭುವಃಸ್ವಸ್ತರುಃ – ತಾನು ಸ್ವತಂತ್ರನಾಗಿ ಇರುವವನು ; ಇನ್ನೊಬ್ಬರನ್ನು ಇರುವಂತೆ ಮಾಡುವವನು. ತಾನು ಸುಖರೂಪಿ ; ಇನ್ನೊಬ್ಬರನ್ನು ಸುಖಿಗಳಾಗುವಂತೆ ಮಾಡುವವನು ಹಾಗೂ ಅವರಿಗೆ ಯೋಗ್ಯ ಸ್ಥಾನವನ್ನು ನೀಡುವವನು.**

**ವಿವರಣೆ:** 'ಭೂರ್ಭುವಃಸ್ವಸ್ತರುಸ್ತಾರಃ.....' ಹೀಗೆ ಈ ನಾಮಗಳನ್ನು ನಿಧಾನವಾಗಿ ಹೇಳಬೇಕಾದದ್ದು. ಇವು ಅವಸರದಲ್ಲಿ ಹೇಳಲಿಕ್ಕೆ ಇರುವ ನಾಮಗಳೇ ಅಲ್ಲ. ಅಷ್ಟೂ ಅವಸರ ಇತ್ತೆಂದರೆ ಈ ನಾಮಗಳನ್ನು ಪಠಿಸದೆಯೇ ಬಿಡುವುದು ಒಳ್ಳೆಯದು.ತಪ್ಪು ಪಠಿಸುವುದಕ್ಕಿಂತ ಪಠಿಸದಿರುವುದೇ ವಾಸಿ ತಾನೇ ? ನಾಲ್ಕು ನಾಮಗಳು ವಿಷ್ಣುಸಹಸ್ರನಾಮದಲ್ಲಿ ಕಡಿಮ್ಮೆ ಆಯಿತೆಂದರೆ 'ಅಚ್ಯುತ' 'ಅನಂತ' 'ಗೋವಿಂದ' 'ನಾರಾಯಣ' - ಎಂದು ಪಠಿಸಿ ಪೂರ್ಣಗೊಳಿಸೋಣ.

ಭೂಃ+ಭುವಃ+ಸ್ವಃ+ತರುಃ - ಎಂಬ ಶಬ್ದಗಳು ಸೇರಿ 'ಭೂರ್ಭುವಃ ಸ್ವಸ್ತರುಃ ' - ಎಂಬ ನಾಮ ನಿಷ್ಪನ್ನವಾಗಿದೆ.

ಭವತೀತಿ ಭೂಃ - ತಾನು ಇರುವವನು. ಭಾವಯತೀತಿ ಭುವಃ - ಮತ್ತೊಬ್ಬರನ್ನೂ ಇರುವಂತೆ ಮಾಡುವವನು.

**'ಹುಟ್ಟಿಸಿದ ಸ್ವಾಮಿ ತಾ ಹೊಣೆಗಾರನಾಗಿರಲು**
**ಗಟ್ಯಾಗಿ ಸಲಹುವನು ಇದಕೆ ಸಂಶಯವಿಲ್ಲ'**

- ಎಂದು ಕನಕದಾಸರು ಆಶ್ವಾಸನೆ ನೀಡಿರುವಂತೆ ಭಗವಂತ ತಾನು ಇರುವುದಷ್ಟೇ ಅಲ್ಲದೆ, ಮತ್ತೊಬ್ಬರನ್ನು ಇರುವಂತೆ ಮಾಡುವವನೂ ಅವನೇ.

ಸುಖರೂಪತ್ವಾತ್ ಸ್ವಃ, ತಾನು ಸುಖಸ್ವರೂಪಿ ಹಾಗೂ ಉಳಿದವರಿಗೆ ಸುಖವನ್ನುಂಟು ಮಾಡುವವನು. ಯಾರಿಗೇ ಆಗಲಿ ಎಷ್ಟೇ ಸಮಸ್ಯೆಗಳಿದ್ದರೂ ಅವರ ಜೀವನದಲ್ಲಿ ಸ್ವಲ್ಪವಾದರೂ ಸುಖದ ನೆರಳು ಬರುವಂತೆ ಮಾಡುವವನು ಭಗವಂತ.

ತರುಃ - ತತ್ ರಾತೀತಿ - ಅವರವರಿಗೆ ಯೋಗ್ಯವಾದ ಸ್ಥಾನವನ್ನು ನೀಡುವವನು. ಇದಕ್ಕೆ ಬದಲಾಗಿ ಮಧ್ಯದಲ್ಲಿ ಕೈ ಬಿಡುವವನಲ್ಲ.

ಹೀಗೆ ‘ಭೂರ್ಭುವಃಸ್ವಸ್ತರುಃ’ - ಎಂಬ ನಾಮವು ಭಗವಂತನು ತಾನು ಸ್ವತಂತ್ರವಾಗಿ ಇರುವವನಾಗಿ ಉಳಿದವರನ್ನೂ ಇರುವಂತೆ ಮಾಡುವನು, ತಾನು ಸುಖಸ್ವರೂಪಿಯಾಗಿ, ಉಳಿದವರೂ ಸುಖವನ್ನು ಅನುಭವಿಸುವಂತೆ ಮಾಡುವನು ಹಾಗೂ ಅವರವರಿಗೆ ಯೋಗ್ಯವಾದ ಸ್ಥಾನವನ್ನು ಕೊಡುವನು - ಎಂದು ತಿಳಿಸುತ್ತಿದೆ.

**೯೬೫. ತಾರಃ – ನಮ್ಮನ್ನು ಸಮಸ್ಯೆಗಳಿಂದ ಪಾರು ಮಾಡುವವನು.**

**ವಿವರಣೆ :** ಓಂಕಾರಕ್ಕೆ ಪ್ರಣವ ಎಂಬ ಹೆಸರಿನಂತೆ ತಾರ ಎಂಬ ಹೆಸರೂ ಇದೆ. ‘ತತ್ರ ತಾರಾಥಮೂಲತ್ವಂ.......’ ಎಂಬುದಾಗಿ ಒಂದೆಡೆ ಶ್ರೀ ಮಧ್ವರು ಓಂಕಾರವನ್ನು ತಾರ ಶಬ್ದದಿಂದಲೇ ಉಲ್ಲೇಖಿಸಿರುವರು.

ಓಂಕಾರ ಪ್ರಣವಶಬ್ದದಿಂದ ಯಾಕೆ ಕರೆಸಿಕೊಳ್ಳಲ್ಪಡುವುದು ? ಪ್ರಣೌತಿ - ಚೆನ್ನಾಗಿ ಭಗವಂತನನ್ನು ಸ್ತುತಿಸುವುದೆಂಬುದಕ್ಕಾಗಿ ‘ಪ್ರಣವ’ ಎನಿಸುವುದು. ಅಂದರೆ ಸಮಗ್ರ ವೇದಾದಿವಾಙ್ಮಯ ಪ್ರಪಂಚವೇ ಓಂಕಾರದಲ್ಲಿ ಅಡಗಿರುವುದುರಿಂದ, ಅದು ಚೆನ್ನಾಗಿ ದೇವರನ್ನು ಪ್ರತಿಪಾದಿಸುವುದು. ಆದುದರಿಂದಲೇ ಪ್ರಣವ ಎನಿಸುವುದು.

ಅಂತಹ ಓಂಕಾರಕ್ಕೆ ಮತ್ತೊಂದು ಹೆಸರು ‘ತಾರ’. ತಾರಯತೀತಿ ತಾರಃ - ಯಾವುದೇ ಸಮಸ್ಯೆಗಳಿರಲಿ - ಅವೆಲ್ಲವುಗಳಿಂದ ದಾಟಿಸುವುದೆಂಬ ದೃಷ್ಟಿಯಿಂದ ತಾರ ಎನಿಸುವುದು. ಈ ಅರ್ಥದಲ್ಲಿ ಓಂಕಾರಕ್ಕಿಂತಲೂ ಮುಖ್ಯವಾಗಿ ತಾರ ಎನಿಸುವವನು ಭಗವಂತ. ಯಾಕೆಂದರೆ ಅವನೇ ಮುಖ್ಯವಾಗಿ ದಾಟಿಸುವವನು. ಯಾವ ಸಮಸ್ಯೆಯೇ ಇರಲಿ ಅದರಿಂದ ತಾನೇ ದಾಟಿಸುವನು. ಓಂಕಾರಕ್ಕೂ ಸಮಸ್ಯೆಯಿಂದ ದಾಟಿಸುವ ಸಾಮರ್ಥ್ಯ ಬಂದಿರುವುದು ಮುಖ್ಯವಾಗಿ ‘ತಾರ’ ಎನಿಸುವ ಭಗವಂತನಿಂದಲೇ

ನಮಗೆ ಯಾವುದೇ ಸಮಸ್ಯೆ ಬಂದಾಗ ಪ್ರಣವಪ್ರತಿಪಾದ್ಯನನ್ನಾಗಿ ಭಗವಂತನನ್ನು ಸ್ತುತಿಸಿದಲ್ಲಿ ಅವನು ನಮ್ಮ ಪಾಲಿಗೆ ‘ತಾರ’ ಎನಿಸಿ ನಮ್ಮ ಆ ಸಮಸ್ಯೆಗಳನ್ನು ಪರಿಹರಿಸುವನು.

**೯೬೬. ಸವಿತಾ – ಜೀವರನ್ನು ಸಮಸ್ಯೆಗಳಿಂದ ಮಥನ ಮಾಡುವವನು.**

**ವಿವರಣೆ :** ‘ಷೂಙ್ ಪ್ರಾಣಿಪ್ರಸವೇ’ ಎಂಬ ಧಾತುವಿನಿಂದ ‘ಸವಿತಾ’ - ಎಂಬ ಶಬ್ದ ನಿಷ್ಪನ್ನವಾಗುವುದು. ಇದಕ್ಕೆ ಸೃಷ್ಟಿ ಮಾಡುವವನು ಎಂಬ ಅರ್ಥ. ‘ಷೂಙ್ ಅಭಿಷವೇ’ - ಎಂಬ ಧಾತುವಿನಿಂದ ನಿಷ್ಪನ್ನವಾದುದು ‘ಸವಿತಾ’ - ಎಂಬ ನಾಮ ಎಂದಿಟ್ಟುಕೊಂಡಾಗ ಹಿಂಡುವವನು ಎಂಬ ಅರ್ಥ ಹೊರಡುವುದು. ಸೋಮರಸದ ‘ಸವನ’ - ಹಿಂಡಿಯುವಿಕೆ.

ಆದರೆ ದೇವರು ಮಾಡುವ ಸವನ - ಜೀವರನ್ನು ಹಿಂಡುವುದು. ಜೀವರ ಪಾಲಿಗೆ ‘ತಾರ’ ಎನಿಸುವ ದೇವರು - ಅವರ ಸಮಸ್ಯೆಗಳಿಂದ ದಾಟಿಸುವ ಮುಂಚೆ ಸಮಸ್ಯೆಗಳಿಂದ ಜೀವರನ್ನು ಮಥನ ಮಾಡುವನು. ಸಾಕಷ್ಟು ಅಂತಹ ಮಥನಕ್ಕೆ ಒಳಗಾದರೆಂದರೆ ಮತ್ತೆ ಅವರಿಗೆ ಆ ಸಮಸ್ಯೆಗಳ ಪರಿಹಾರದ ಸುಖ ಅನುಭವಕ್ಕೆ ಬರುವುದು. ಬಡವರಾಗಿದ್ದು ಮತ್ತೆ ಶ್ರೀಮಂತರಾದವರಿಗೆ ಆ ಶ್ರೀಮಂತಿಕೆಯ ಸುಖದ ಅನುಭವ ಚೆನ್ನಾಗಿ ಉಂಟಾಗುವುದು. ಇದಕ್ಕೆ ಬದಲಾಗಿ ಶ್ರೀಮಂತರಾಗಿಯೇ ಹುಟ್ಟಿದವರಿಗೆ ಶ್ರೀಮಂತಿಕೆ ಸುಖಪ್ರದ ಎನಿಸುವುದೇ ಇಲ್ಲ.ಹೇಗೋ ಹಾಗೆ.

**೯೬೭. ಪ್ರಪಿತಾಮಹಃ – ನಮ್ಮೆಲ್ಲರ ಪಾಲಿಗೆ ಅಜ್ಜನ ತಂದೆ ಅಂದರೆ ಮುತ್ತಜ್ಜ ಆಗಿರುವವನು.**

**ವಿವರಣೆ :** ಪಿತಾ ಎಂದರೆ ತಂದೆ, ಪಿತಾಮಹ ಎಂದರೆ ಅಜ್ಜ. ಪ್ರಪಿತಾಮಹ ಎಂದರೆ ಅಜ್ಜನ ತಂದೆ ಮುತ್ತಜ್ಜ. ದೇವರು ನಮಗೆ ಪ್ರಪಿತಾಮಹ ಮುತ್ತಜ್ಜ. ಹೇಗೆಂದರೆ ನಮ್ಮ ತಂದೆ ರುದ್ರದೇವ ; ರುದ್ರದೇವನ ತಂದೆ ಚತುರ್ಮುಖ. ಚತುರ್ಮುಖನಿಗೂ ತಂದೆ ದೇವರು.

ನಮಗೆ ವ್ಯವಹಾರದಲ್ಲಿ ಬೇರೆ ತಂದೆತಾಯಂದಿರು ಇದ್ದಾರೆ. ಆದರೆ ಆ ತಂದೆಗೂ ಮನಸ್ಸು ಕೊಟ್ಟು ತಾಯಿಯ ಜೊತೆಗೂಡಿಸಿ ನಮ್ಮನ್ನು ಸೃಷ್ಟಿ ಮಾಡಿ ತಂದವರು ರುದ್ರ ದೇವರೇ. ಅಂತಹ ರುದ್ರ ದೇವರನ್ನು ಸೃಷ್ಟಿಯಲ್ಲಿ ತಂದ ತಂದೆ ಚತುರ್ಮುಖನಾದರೆ, ಚತುರ್ಮುಖನನ್ನೂ ಸೃಷ್ಟಿಯಲ್ಲಿ ತಂದ, ಅವನ ತಂದೆ ದೇವರು. ಆದುದರಿಂದ ದೇವರು ನಮ್ಮ ಪಾಲಿಗೆ ಪ್ರಪಿತಾಮಹ - ಮುತ್ತಜ್ಜ.

ದೇವರನ್ನು ‘ಪ್ರಪಿತಾಮಹಃ’ - ಎಂದು ಉಪಾಸನೆ ನಡೆಸಿದಲ್ಲಿ ವ್ಯಕ್ತಿಯೊಬ್ಬ ಮಗನನ್ನು ಪಡೆದು ಪಿತಾ ಎನಿಸುವನು. ಮಗನಿಗೆ ಮತ್ತೊಬ್ಬ ಮಗ ಹುಟ್ಟಿ ಆ ಮೊಮ್ಮಗನಿಗೆ ಇವನು ಪಿತಾಮಹ ಎನಿಸುವನು. ಆ ಮೊಮ್ಮಗನಿಗೂ ಮತ್ತೊಬ್ಬ

ಮಗ ಹುಟ್ಟಿ, ಆ ಮರಿಮಗನಿಗೆ ಇವನು ಪ್ರಪಿತಾಮಹ ಮುತ್ತಜ್ಜ ಎನಿಸುವನು. ಹೀಗೆ ಅವನ ವಂಶ ಬೆಳೆಯುತ್ತ ಮುಂದುವರಿಯುವುದು.

**೯೭೮. ಯಜ್ಞಃ – ಒಟ್ಟು ಕೂಡಿಸುವವನು.**

ವಿವರಣೆ : ‘ಯಜ ದೇವಪೂಜಾಸಂಗತಿಕರಣದಾನೇಷು’ - ಎಂಬ ಕ್ರಿಯಾಪದದಿಂದ ನಿಷ್ಪನ್ನವಾದ ಯಜ್ಞ ಶಬ್ದಕ್ಕೆ ಸಂಗತಿಕರಣ - ಸಂಗತಿಯನ್ನು ಮಾಡುವವನು ಎಂಬ ಅರ್ಥ.

ಸಂಗತಿ ಎಂದರೆ ಸಂಯೋಜನೆ - ಕೂಡಿಸುವಿಕೆ. ಇಂತಹ ಸಂಗತಿಯನ್ನು ಮಾಡುವವನು ಭಗವಂತ.

ಯಾವ ಸಂಗತಿಯನ್ನು ಭಗವಂತ ಮಾಡುವನು ?

ನಮ್ಮ ಪ್ರಾರಬ್ಧ ಕರ್ಮ ಪರಿಪಕ್ವವಾದಾಗ ಅದರ ಫಲದ ಸಂಗತಿ ನಮಗೆ ಆಗುವಂತೆ ಮಾಡುವನು. ಹಾಗೆಯೇ ‘ಋಣಾನುಬಂಧ’ರೂಪೇಣ ಪಶುಪತ್ನೀಸುತಾಲಯಾಃ’ - ಎಂದಿರುವಂತೆ ಪ್ರರಬ್ಧಕರ್ಮಾನುಗುಣವಾಗಿ ರೂಪುಗೊಳ್ಳುವ ಋಣಾನುಬಂಧದ ಆಧಾರದಲ್ಲಿ ಸಂಸಾರದ ಪತ್ನಿ, ಪುತ್ರರು, ಮನೆ, ಬೆಕ್ಕು, ಹಸು - ಇವುಗಳನ್ನೆಲ್ಲ ಪರಸ್ಪರವಾಗಿ ಸಂಗತಿ - ಸಂಯೋಜನೆ ನಡೆಸುವನು.

ಎಲ್ಲೋ ದೂರದಲ್ಲಿರುವ ಹೆಣ್ಣು ಗಂಡುಗಳನ್ನು ಪತಿಪತ್ನಿಯರನ್ನಾಗಿ ಸಂಯೋಜಿಸುವನು. ಕೆಲವೊಮ್ಮೆ ಒಬ್ಬ ಗಂಡು ಹೆಣ್ಣನ್ನು ಹುಡುಕುವುದಕ್ಕಾಗಿ ಕಾಶಿಯವರೆಗೆ ಹೋಗಿ ಬಂದರೂ ಅಲ್ಲೆಲ್ಲೂ ಅವನಿಗೆ ಹೆಣ್ಣು ಸಿಗದೆ, ಕೊನೆಗೆ ಅವನ ಪಕ್ಕ ಮನೆಯ ಹೆಣ್ಣನ್ನೇ ಅವನು ಪತ್ನಿಯನ್ನಾಗಿ ಸ್ವೀಕರಿಸುವಂತೆ ಸಂಯೋಜಿಸುವುದುಂಟು.

ಹೀಗೆ ‘ಯಜ್ಞ’ ಎನಿಸುವ ಭಗವಂತನ ‘ಸಂಗತಿಕರಣ’ - ಬಂಧು ಸ್ನೇಹಿತರನ್ನು ಒಟ್ಟು ಗೂಡಿಸುವಿಕೆ ತುಂಬ ವಿಚಿತ್ರ ಹಾಗೂ ಸ್ವಾರಸ್ಯಕರ.

ಭೀಷ್ಮರು ಎದುರಿಗಿರುವ ಕೃಷ್ಣನನ್ನು ಈ ಅರ್ಥದಲ್ಲಿ ವಿಶೇಷವಾಗಿ ‘ಯಜ್ಞ’ ಎಂದು ಸ್ತುತಿಸುತ್ತಿರುವರು. ಯಾಕೆಂದರೆ ಅವರಿಗೆ ತಮ್ಮ ದ್ಯು ಎಂಬ ಮೂಲರೂಪದ ಪತ್ನಿಯಾಗಿದ್ದ ‘ವರಾಂಗಿ’ ಇವಳ ಸಂಗತಿ - ಸಂಯೋಜನೆ ಭಗವಂತನ ಮೂಲಕ ಆಗಬೇಕಾಗಿದೆ.

ಗಂಡು ಹೆಣ್ಣಿಗಾಗಿ, ಹೆಣ್ಣು ಗಂಡಿಗಾಗಿ ಹುಡುಕಾಟ ನಡೆಸುವಾಗ, ಈ ಅರ್ಥದಲ್ಲಿ ದೇವರನ್ನು ‘ಯಜ್ಞ’ - ಎಂದು ಸ್ತುತಿಸುತ್ತಿರಬೇಕು.

ಋಣಾನುಬಂಧಕ್ಕನುಗುಣವಾಗಿ ಭಗವಂತ ಹೆಣ್ಣು ಗಂಡುಗಳ ಸಂಯೋಜನೆಯನ್ನು ನಡೆಸುವನು. ಮನೆಯಲ್ಲೋ, ಕಛೇರಿಯಲ್ಲೋ ಪರಸ್ಪರವಾಗಿ ವೈಮನಸ್ಯ ಇದ್ದವರೂ ಆ ವೈಮನಸ್ಯವನ್ನು ಏನೋ ಒಂದು ಘಟನೆಯಿಂದಲೋ ಯಾರೋ ಒಬ್ಬ ವ್ಯಕ್ತಿಯಿಂದಲೋ ಪರಿಹಾರ ಮಾಡಿಸಿ, ಮಾನಸಿಕವಾಗಿ ಅವರೆಲ್ಲ ಪರಸ್ಪರವಾಗಿ ಒಟ್ಟುಗೂಡುವಂತೆ ಮಾಡುವನು.

**೯೭೯. ಯಜ್ಞಪತಿಃ – ಪರಸ್ಪರ ಕೂಡುವಿಕೆ ಮುರಿದು ಬೀಳದೆ, ಮುಂದುವರಿಯುವಂತೆ ರಕ್ಷಿಸುವವನು.**

**ವಿವರಣೆ :** ಹಿಂದಿನ ಯಜ್ಞ ಶಬ್ದದಿಂದ ಭಗವಂತನ ಮೂಲಕ ನಡೆಯುವ ಯಜ್ಞ ಎಂದರೆ 'ಸಂಗತಿಕರಣ' ಜೋಡಿಸುವಿಕೆ ಪ್ರಸ್ತುತವಾಗಿದೆ. ಹೀಗೆ 'ಯಜ್ಞ' ಎನಿಸುವ ಭಗವಂತನು ಬಂಧುಗಳನ್ನು ಪರಸ್ಪರವಾಗಿ ಒಟ್ಟು ಕೂಡಿಸುವುದಷ್ಟೇ ಅಲ್ಲದೆ, ಸಂಗತಿಯನ್ನು, ಒಟ್ಟುಗೂಡಿಸುವಿಕೆಯನ್ನು ಮರುದಿನವೇ ಪುನಃ ಮುರಿದು ಬೀಳದಂತೆ ರಕ್ಷಣೆ ನೀಡುವನೂ ಭಗವಂತ. ಅದಕ್ಕಾಗಿಯೇ ಅವನು 'ಯಜ್ಞಪತಿ' ಎಂದೂ ಎನಿಸುವನು. ಯಜ್ಞಂ ಪಾತೀತಿ 'ಯಜ್ಞಪತಿಃ.'

ಈ ಅರ್ಥದಲ್ಲಿ 'ಯಜ್ಞಪತಿ' ನಾಮದಿಂದ ಉಪಾಸನೆ ನಡೆಸಿದಲ್ಲಿ ಮನೆಯಲ್ಲಿ, ಸಮಾಜದಲ್ಲಿ, ಕಛೇರಿಯಲ್ಲಿ - ನಮ್ಮ ಸಂಗತಿ ಅನ್ಯೋನ್ಯವಾದ ಕೂಡುವಿಕೆ ಏನೋ ಜಗಳ, ವೈಮನಸ್ಯದಿಂದ ಮುರಿದು ಬೀಳದೆ ಚೆನ್ನಾಗಿ ಮುಂದುವರಿಯುವಂತೆ ದೇವರು ಅನುಗ್ರಹಿಸುವನು.

**೯೨೦. ಯಜ್ವಾ – * ಹೋಮಿಸುವವನು.**

*** ಒಟ್ಟು ಸೇರಿಸುವ ತಾಕತ್ತು ಉಳ್ಳವನು.**

**ವಿವರಣೆ :** ಯಜ್ವಾ ಎಂದರೆ ಹೋಮಿಸುವವನು ಎಂಬ ಒಂದು ಪ್ರಸಿದ್ಧಾರ್ಥ ಇದ್ದೇ ಇದೆ. 'ಯಜ್ಞ' 'ಯಜ್ಞಪತಿ' - ಎಂಬ ನಾಮಗಳಿಗೆ ಹೇಳಿದ ಅರ್ಥದ ಸಂದರ್ಭಕ್ಕೆ ಅನುಗುಣವಾಗಿ ಮತ್ತೊಂದು ಅರ್ಥವನ್ನು ಚಿಂತನೆ ಮಾಡಬಹುದು - ಒಟ್ಟು ಗೂಡಿಸುವ ತಾಕತ್ತು ಉಳ್ಳವನೇ - ಯಜ್ವಾ

ಒಟ್ಟು ಕೂಡಿಸುವ ತಾಕತ್ತು ಯಾರಲ್ಲಿ ಇರುವುದು ? ತಾವೇ ಪರಸ್ಪರವಾಗಿ ಜಗಳಾಡುವ ಗಂಡಹೆಂಡತಿಯರ ಬಳಿಗೆ ಹೋಗಿ ನಮ್ಮ ಜಗಳವನ್ನು ಪರಿಹರಿಸಿ, ನಮ್ಮನ್ನು ಒಟ್ಟು ಕೂಡಿಸಿ ಎಂದು ಪ್ರಾರ್ಥಿಸುವುದು ಉಚಿತವಾದೀತೇ ? ಅದಕ್ಕೆ ಯಾವ ಗಂಡಹೆಂಡತಿಯರು ಎಂದೆಂದೂ ಜಗಳವಾಡದೆ ಅನ್ಯೋನ್ಯವಾಗಿ ಇರುವರೋ

ಅಂತಹವರಲ್ಲಷ್ಟೇ ಒಟ್ಟುಗೂಡಿಸಲು ಪ್ರಾರ್ಥಿಸಿಕೊಳ್ಳಬೇಕು. ಲಕ್ಷ್ಮೀನಾರಾಯಣರ ಜೋಡಿಯೇ ಅಂತಹದು.

ಸತ್ಯಭಾಮೆ ದ್ರೌಪದಿಯಲ್ಲಿ ನೀನು ಐದು ಜನ ಗಂಡಂದಿರ ಜೊತೆಗೆ ಅನ್ಯೋನ್ಯತೆಯಿಂದ ಹೇಗೆ ಇದ್ದಿ ? ಎಂದು ವಿಚಾರಿಸಿದ್ದಿದೆ.

ಗಂಡಹೆಂಡತಿಯರ ಅನ್ಯೋನ್ಯತೆಗೆ ಬೇಕಾದ ಸಂದೇಶ ದ್ರೌಪದಿಯಿಂದ ಹೊರಡಿಸುವ ಉದ್ದೇಶದಿಂದಷ್ಟೇ ಜಗನ್ಮಾತೆಯಾದ ಸತ್ಯಭಾಮೆ ಹಾಗೆ ವಿಚಾರಿಸಿದ್ದಳೇ ಹೊರತು ಆಕೆಗೆ ಕೃಷ್ಣನ ಜೊತೆ ಅನ್ಯೋನ್ಯತೆಯಿಂದ ಇರಲು ತಿಳಿದಿದ್ದಿರಲಿಲ್ಲ - ಎಂದೇನೂ ಅರ್ಥವಲ್ಲ.

ಆದುದರಿಂದ 'ಯಜ್ವಾ' ನಾಮದಿಂದ ದೇವರನ್ನು ಗಂಡಹೆಂಡತಿಯರೇ ಮುಂತಾದವರನ್ನು ಅನ್ಯೋನ್ಯತೆಯಿಂದ ಇರುವಂತೆ ಕೂಡಿಸಲು ಬೇಕಾದ ತಾಕತ್ತು ಉಳ್ಳವನು ಎಂದು ಸ್ತುತಿಸಿ, ಆದುದರಿಂದಲೇ ನಮ್ಮನ್ನು ಅನ್ಯೋನ್ಯತೆಯಿಂದ ಇರುವಂತೆ ಕೂಡಿಸು ಎಂದು 'ಯಜ್ಞ' ನಾಮದಿಂದ, ಕೂಡಿಸಿದ ಆ ಅನ್ಯೋನ್ಯತೆಯನ್ನು ಮುಂದುವರಿಯುವಂತೆ ಪಾಲಿಸು ಎಂದು 'ಯಜ್ಞಪತಿ' ನಾಮದಿಂದ ಸ್ತುತಿಸಬೇಕು.

**೯೭೧. ಯಜ್ಞಾಂಗಃ – ಭಗವಂತನ ಪ್ರೀತಿಗಾಗಿ ನಡೆಸುವ ಒಳ್ಳೆಯ ಕೆಲಸಗಳಿಗೆ ಪ್ರಮುಖ ಪಾತ್ರಧಾರಿಯಾಗಿರುವವನು.**

ವಿವರಣೆ : ಹಿಂದಿನ 'ಯಜ್ಞ' 'ಯಜ್ಞಪತಿಃ' 'ಯಜ್ವಾ' - ಎಂಬ ಮೂರು ನಾಮಗಳಿಂದ ಮನೆಯಲ್ಲಿ ಸತಿಪತಿಯರು ಸಮಾನಮನಸ್ಕರಾಗಿ ಒಟ್ಟಾಗಿ ಇರುವಂತೆ ಮಾಡುವುದರಲ್ಲಿ ಭಗವಂತನ ಬೇರೆ ಬೇರೆ ಪಾತ್ರಗಳನ್ನು ಸ್ತುತಿಸಿ, ಮುಂದೆ ಹಾಗೆ ಸತಿಪತಿಯರ ಅನ್ಯೋನ್ಯತೆಯಿಂದಾಗಿ ಅವರ ಬದುಕಿನಲ್ಲಿ ಯಾವುದಾದರೊಂದು ಒಳ್ಳೆಯ ಕೆಲಸ ನಡೆಯುವಂತೆ ಪ್ರೇರಿಸುವವನೆಂದು ಸ್ತುತಿಸಲಾಗುವುದು - 'ಯಜ್ಞಾಂಗಃ' ಜೀವನದಲ್ಲಿ ನಡೆಯುವ ಯಾವುದಾದರೊಂದು ಒಳ್ಳೆಯ ಕೆಲಸ 'ಯಜ್ಞ' ಎನಿಸುತ್ತಿದ್ದು ಅದಕ್ಕೆ 'ಅಂಗ' ಮುಖ್ಯ ಪಾತ್ರಧಾರಿ ದೇವರು.

**"ಜ್ಞೋ ನಾಮ ಭಗವಾನ್ ವಿಷ್ಣುಸ್ತಂ ಯಾತ್ಯುದ್ದೇಶ ಏಷ ಯಃ |**
**ಸ ಯಜ್ಞ ಇತಿ ಸಂಪ್ರೋಕ್ತೋ ವಿಹಿತೇ ಕರ್ಮಣಿ ಸ್ಥಿತಃ"**

- ಎಂದು ಮಧ್ವಗುರುಗಳು ತಿಳಿಸಿರುವಂತೆ ಸರ್ವಜ್ಞನಾಗಿರುವುದರಿಂದ 'ಜ್ಞ' ಎನಿಸುವ ಭಗವಂತನ ಪ್ರೀತಿಗಾಗಿ ನಡೆಸುವ ಯಾವುದೇ ಶಾಸ್ತ್ರವಿಹಿತ ಕರ್ಮವೂ ಯಜ್ಞ ಎನಿಸಬಲ್ಲದು. ಅಗ್ನಿ ಮುಖದ ಆರಾಧನೆಯೇ ಆಗಬೇಕಿಲ್ಲ. ಕೊನೆಗೆ,

ಮನೆಯಲ್ಲಿ ಗಂಡಹೆಂಡತಿಯರಿಬ್ಬರೂ ಸೇರಿ ರಾಜಾಂಗಣಕ್ಕೆ ಉಪನ್ಯಾಸಕ್ಕಾಗಿ ಬರುವುದೂ ಯಜ್ಞ ಎನಿಸಬಹುದಾಗಿದೆ. ಅಂತಹ ಪ್ರತಿಯೊಂದೂ ಯಜ್ಞಕ್ಕೂ ಅಂಗ - ಪ್ರಮುಖ ಅಂಗ, ಪ್ರಧಾನ ಪಾತ್ರಧಾರಿ ಭಗವಂತ.

ಈ ಯಜ್ಞ ನಡೆಯಬೇಕಾದರೆ ಸತಿಪತಿಯರು ಮಾನಸಿಕವಾಗಿ ಅನ್ಯೋನ್ಯತೆಯಿಂದ ಒಟ್ಟುಗೂಡಿದ್ದಿರಬೇಕು. ಅದಕ್ಕಾಗಿ 'ಯಜ್ಞ' 'ಯಜ್ಞಪತಿ' 'ಯಜ್ವಾ' ಎಂಬ ನಾಮಗಳಿಂದ ಒಟ್ಟುಗೂಡಿಸುವುದರಲ್ಲಿ ಅವನ ಪಾತ್ರವನ್ನು ಉಲ್ಲೇಖಿಸಿ, ಅವನ ಒಟ್ಟುಗೂಡುವಿಕೆಯ ಫಲವನ್ನು 'ಯಜ್ಞಾಂಗ' ನಾಮದಿಂದ ಸೂಚಿಸಲಾಗಿದೆ.

ಈ ಅರ್ಥದಲ್ಲಿ 'ಯಜ್ಞಾಂಗ' ನಾಮದಿಂದ ಭಗವಂತನನ್ನು ಉಪಾಸನೆ ಮಾಡಿದರೆ ನಮ್ಮ ಮೂಲಕ ಬೇರೆ ಬೇರೆ ಬಗೆಯ ಯಜ್ಞಗಳು ನಡೆಯುವಂತೆ ಅಂಗವಾಗಿ, ಪ್ರಧಾನ ಪಾತ್ರಧಾರಿಯಾಗಿ ಭಗವಂತ ಅನುಗ್ರಹಿಸುವನು.

**೯೭೨. ಯಜ್ಞವಾಹನಃ – ನಮ್ಮ ಜೀವನಯಜ್ಞ ಇತರರಿಗೆ ಆದರ್ಶವಾಗುವಂತೆ ಕೊಂಡೊಯ್ಯುವವನು.**

**ವಿವರಣೆ :** ಯಜ್ಞ - ದೇವರ ಪ್ರೀತಿಗಾಗಿ ನಡೆಸುವ ಯಾವುದೇ ಒಳ್ಳೆಯ ಕೆಲಸ. ಹಾಗೂ ಅಂತಹ ಕೆಲಸಗಳನ್ನೊಳಗೊಂಡ ಸಮಗ್ರ ಬದುಕು ಕೂಡಾ ಯಜ್ಞ ಇದನ್ನು ವಹತಿ - ಕೊಂಡೊಯ್ಯುವವನು ; ಇನ್ನೊಬ್ಬರಲ್ಲಿಗೆ ಆದರ್ಶವಾಗಿ ಸಾಗಿಸುವವನು.

ವಾಹನವನ್ನಾದರೂ ನಾವು ಯಾಕೆ ವಾಹನ ಎಂದು ಕರೆಯುವುದು ? ಅದು ಇಲ್ಲಿಂದ ಅಲ್ಲಿಗೆ, ಅಲ್ಲಿಂದ ಇಲ್ಲಿಗೆ ಕೊಂಡೊಯ್ಯುವುದು ಎಂದು ತಾನೇ ?

ಹೀಗೆಯೇ ನಮ್ಮಿಂದ ಯಜ್ಞ ಎನಿಸುವ ಒಳ್ಳೆಯ ಕೆಲಸಗಳನ್ನು ಮಾಡಿಸಿ, ಅವುಗಳ ಪ್ರಭಾವ ಇನ್ನೊಬ್ಬರ ಮೇಲೆ ಬೀಳುವಂತೆ ಮಾಡುವ ಮೂಲಕ, ಅವುಗಳನ್ನು ಆದರ್ಶಗಳೆನಿಸುವಂತೆ ಕೊಂಡೊಯ್ಯುವವನು.

ನಮ್ಮ ಬದುಕಿನ ಒಳ್ಳೆಯ ಕೆಲಸಗಳನ್ನು ಕಂಡು, ಅವುಗಳಿಂದ ಪ್ರಭಾವಿತರಾಗಿ ಯಾರಾದರೂ ಅವುಗಳ ಅನುಕರಣೆ ಮಾಡಿದರೆಂದರೆ ಅದರಿಂದ ನಮಗೂ ಪುಣ್ಯದ ಪಾಲು ಇದ್ದೇ ಇದೆ. ಈ ಬಗೆಯ ಫಲವೂ ನಮಗೆ ದೊರಕುವಂತೆ ಭಗವಂತನು ಅನುಗ್ರಹಿಸುವನು.

ಈ ಹಿನ್ನೆಲೆಯಲ್ಲಿ 'ಯಜ್ಞವಾಹನಃ' - ಎಂದು ಭಗವಂತನನ್ನು ಸ್ತುತಿಸಲಾಗುವುದು.

**ಯಜ್ಞಭೃದ್ ಯಜ್ಞಕೃದ್ ಯಜ್ಞೀ ಯಜ್ಞಭುಗ್ ಯಜ್ಞಸಾಧನಃ |**
**ಯಜ್ಞಾಂತಕೃದ್ ಯಜ್ಞಗುಹ್ಯಮನ್ನಮನ್ನಾದ ಏವ ಚ ||೧೦೫||**

**೯೭೩. ಯಜ್ಞಭೃತ್ – ದೇವರ ಪೂಜಾರೂಪಗಳಾದ ಸತ್ಕಾರ್ಯಗಳ ಧಾರಣೆ ಭಕ್ತರ ಮನಸ್ಸಿನಲ್ಲಿ ನಡೆಯುವಂತೆ ಮಾಡುವವನು.**

ವಿವರಣೆ: 'ಸಂಗತಿಕರಣ' - ಎಂಬ ಅರ್ಥವನ್ನಿಟ್ಟುಕೊಂಡು ಯಜ್ಞಭೃತ್ ಇತ್ಯಾದಿ ನಾಮಗಳ ಚಿಂತನೆ ನಡೆಸಿದ್ದೇವೆ.

ಈಗ 'ದೇವಪೂಜಾ' - ಎಂಬ ಅರ್ಥವನ್ನಿಟ್ಟುಕೊಂಡು 'ಯಜ್ಞಭೃತ್' ಇತ್ಯಾದಿ ನಾಮಗಳನ್ನು ನೋಡೋಣ.

ಯಜ್ಞ ಎಂದರೆ ದೇವರ ಪೂಜೆ. ಪೂಜೆ ಎಂದರೆ ಮಂಗಳಾರತಿ ಎತ್ತುವುದಷ್ಟೇ ಅಲ್ಲ. 'ಜ್ಞ' ಎನಿಸುವ ದೇವರ ಪ್ರೀತಿಯ ಉದ್ದೇಶದಿಂದ ನಡೆಸುವ ಶಾಸ್ತ್ರವಿಹಿತವಾದ ಪ್ರತಿಯೊಂದೂ ಕರ್ಮವೂ ಯಜ್ಞವೇ. ಶಾಸ್ತ್ರೀಯವಾಗಿ ನಡೆಸಿದರೆ ಭೋಜನವೂ ಯಜ್ಞವೇ. ತಿಳಿದು ನಡೆಸಿದರೆ ಶಯನವೂ ಯಜ್ಞವೇ.

ಇಂತಹ ಯಜ್ಞವನ್ನು ಧರಿಸಿಕೊಳ್ಳುವಂತೆ ಮಾಡುವವನು. ನಾವು ಇಂತಹ ಯಜ್ಞ ಮಾಡಬೇಕೆಂದರೆ ಮೊದಲು ಮನಸ್ಸಿನಲ್ಲಿ 'ಹಾಗೆ ಮಾಡಬೇಕು' 'ಹೀಗೆ ಮಾಡಬೇಕು' - ಎಂದು ಧಾರಣೆ ಮಾಡಬೇಕು ತಾನೇ ? ಮನಸ್ಸಿನಲ್ಲಿ ಧರಿಸಿಕೊಂಡಿದ್ದನ್ನು ಅನಂತರ ಕಾರ್ಯರೂಪಕ್ಕೆ ತರುವುದು. ಆದುದರಿಂದ ಮೊದಲು ಯಜ್ಞಗಳನ್ನು ಮನಸ್ಸಿನಲ್ಲಿ ಧಾರಣೆ ಮಾಡುವಂತೆ ಮಾಡುವವನು 'ಯಜ್ಞಭೃತ್.'

ನಾವು ಬೆಳಿಗ್ಗೆ ಎದ್ದಾಕ್ಷಣ ಆ ದಿನ ಏನೇನು ಭಗವತ್‌ಪ್ರಿಯ ಕಾರ್ಯವನ್ನು ನಡೆಸಬೇಕೆಂದು ನಿರ್ಧರಿಸಿಕೊಳ್ಳಬೇಕು. ರಾತ್ರಿ ಮಲಗುವ ಮುನ್ನ ಆ ದಿನದಂದು ತನ್ನಿಂದ ಏನೇನು ಸತ್ಕಾರ್ಯ ನಡೆದಿದೆ ಎಂಬುದನ್ನು ಅವಲೋಕನ ಮಾಡಬೇಕು.

ಹೀಗೆ ಬೆಳಿಗ್ಗೆ ಎದ್ದಾಕ್ಷಣ - ಅಂದು ಸಮಗ್ರ ದಿನದಂದು ಭಗವಂತನ ಪ್ರೀತಿಗಾಗಿ ಏನೇನು ಕರ್ಮ ಮಾಡಬೇಕೆಂಬುದನ್ನು ಮನಸ್ಸಿನಲ್ಲಿ ಕಲ್ಪಿಸಿಕೊಳ್ಳುವಂತೆ ಮಾಡುವವನು 'ಯಜ್ಞಭೃತ್.'

ಇಂತಹ 'ಯಜ್ಞಭೃತ್' ನ ಉಪಾಸನೆಯಿಂದ ನಮ್ಮ ಮನಸ್ಸಿನಲ್ಲಿ ದೇವರ ಪ್ರೀತಿಗಾಗಿ ನಡೆಸಬಹುದಾದ ಬೇರೆ ಬೇರೆ ಸತ್ಕರ್ಮಗಳ ಧಾರಣೆ - ಚಿಂತನೆ ನಡೆಯುವುದೆಂಬುದು ಸ್ಪಷ್ಟ.

**೯೭೪. ಯಜ್ಞಕೃತ್ – ಒಳ್ಳೆಯ ಕೆಲಸಗಳನ್ನು ಮಾಡಿಸುವವನು.**

**ವಿವರಣೆ :** ಮನಸ್ಸಿನಲ್ಲಿ ಒಳ್ಳೆಯ ಕೆಲಸ ಮಾಡಬೇಕೆಂದು ಯೋಚನೆ ಬಂತು. ಅದು ಅಲ್ಲಿಗೇ ನಿಲ್ಲುವಂತಾಗಬಾರದು. ಬದಲಾಗಿ ಅದು ಕಾರ್ಯರೂಪಕ್ಕೆ ಬರಬೇಕು. ಯಜ್ಞಗಳ ಬಗ್ಗೆ, ಸತ್ಕರ್ಮಗಳ ಬಗ್ಗೆ ಮನಸ್ಸಿನಲ್ಲಿ ಧಾರಣೆ ಆಗುವಂತೆ ಮಾಡಿ 'ಯಜ್ಞಭೃತ್' ಎನಿಸಿರುವ ಭಗವಂತ ಮುಂದೆ 'ಯಜ್ಞಕೃತ್' ಆಗಿ ಅನುಗ್ರಹಿಸುವನು. ಅಂದರೆ ಒಳ್ಳೆಯ ಕೆಲಸಗಳನ್ನು ಮಾಡುವಂತೆ ಪ್ರೇರಿಸುವನು. ಯಜ್ಞಂ ಕಾರಯತೀತಿ- ಯಜ್ಞಕೃತ್.

**೯೭೫. ಯಜ್ಞೀ – ಸ್ವತಂತ್ರವಾಗಿ ಒಳ್ಳೆಯಕೆಲಸಗಳನ್ನು ನಡೆಸುವವನು.**

**ವಿವರಣೆ :** 'ಯಜ್ಞಭೃತ್' 'ಯಜ್ಞಕೃತ್' - ನಾಮಗಳಿಂದ ಭಗವಂತನೇ ನಮ್ಮ ಮನಸ್ಸಿನಲ್ಲಿ ಒಳ್ಳೆಯ ಕೆಲಸಗಳ ಬಗ್ಗೆ ಯೋಚನೆಯನ್ನು ಕೊಡುವವನು, ಅದನ್ನು ಕೃತಿಗೆ ಇಳಿಸುವವನು ಎಂದು ನೋಡಿದ್ದೇವೆ.

ಆದರೆ ದೇವರು ಇಷ್ಟೇ ಮಾಡಿ ಸುಮ್ಮನಿದ್ದರೆ ಸಾಲದು. ಬಹಳ ಹಿಂದಿನ ಕಾಲದಲ್ಲಿ ಮಕ್ಕಳು ತಾವಾಗಿಯೇ ತಮ್ಮ ವಿದ್ಯೆಗೆ ಸಂಬಂಧಿಸುವ ಮನೆಯ ಕೆಲಸಗಳನ್ನು ಮಾಡುತ್ತಿದ್ದರು. ಕಾಲ ಸ್ವಲ್ಪ ಮುಂದುವರಿದಾಗ ಮಕ್ಕಳಿಗೆ 'ಹಾಗೆ ಬರೆಯಿರಿ', 'ಹೀಗೆ ಓದಿರಿ' - ಎಂದು ಮನೆಯಲ್ಲಿ ತಂದೆ ತಾಯಿಯಂದಿರು ಹೇಳಬೇಕಾಗಿ ಬಂತು. ಈಗ ಅಂತೂ ಮಕ್ಕಳ ಜೊತೆಗೆ ತಂದೆ ತಾಯಿಯಂದಿರೂ ಬರೆಯುವುದು, ಓದುವುದು ಮುಂತಾದ ಮನೆಗೆಲಸ ಮಾಡಬೇಕು. ಅಂತೆಯೇ ನಾವೇ ಒಳ್ಳೆಯ ಕೆಲಸಗಳನ್ನು ಮಾಡಲಾರೆವು. ದೇವರು ಒಳ್ಳೆಯ ಕೆಲಸಗಳನ್ನು ಮಾಡಿ ಎಂದು ಶಾಸ್ತ್ರದಿಂದ ಸಂದೇಶ ಕೊಟ್ಟರೂ ಸಾಲದು. ಮತ್ತೆ ದೇವರೇ ಕೈ ಹಿಡಿದು ಒಳ್ಳೆಯ ಕೆಲಸಗಳನ್ನು ಮಾಡಿಸಬೇಕು. ನಮ್ಮ ಕೈಯಲ್ಲಿ ತನ್ನ ಕೈಯನ್ನು ನಮ್ಮ ಬಾಯಿಯಲ್ಲಿ ಅವನ ಬಾಯಿಯನ್ನು ನಮ್ಮ ಕಾಲಿನಲ್ಲಿ ತನ್ನ ಕಾಲನ್ನು ಇರಿಸಿ, ನಮ್ಮಿಂದ ಬರೆಸುವುದು, ಹೇಳಿಸುವುದು, ನಡೆಸುವುದು ಇತ್ಯಾದಿಗಳನ್ನು ಮಾಡಿಸಬೇಕು. ಇದನ್ನೇ 'ಯಜ್ಞೀ' ನಾಮದಿಂದ ಸ್ತುತಿಸಲಾಗಿದೆ.

ತಲವಕಾರೋಪನಿಷತ್ತಿನಲ್ಲಿ ಪ್ರಸ್ತಾಪಿಸಿರುವಂತೆ ದೇವತೆಗಳು ಅಸುರರ ವಿರುದ್ಧ ಕಾದಾಡಿ ಗೆಲ್ಲುವುದರಲ್ಲಿ ದೇವರ ಪಾತ್ರವನ್ನು ಮರೆತು ಬಿಟ್ಟು, ಮತ್ತೆ ಯಕ್ಷರೂಪದಿಂದ ಬಂದು ದೇವರು ಎಚ್ಚರಿಸಿದ ಮೇಲೆ ಅವನ ಪಾತ್ರವನ್ನು ಒಪ್ಪಿಕೊಳ್ಳುವಂತೆ ಮಾಡದೆ, ಮೊದಲೇ ನಮ್ಮ ಯಜ್ಞ ಎನಿಸುವ ಸತ್ಕರ್ಮಗಳಲ್ಲಿ ದೇವರ ಪಾತ್ರವನ್ನು ಗುರುತಿಸಿಕೊಳ್ಳಬೇಕು.

ನಾವು ಆಶ್ರಯ ಕೊಡುವವರಷ್ಟೇ. ನಮ್ಮಲ್ಲಿ ಇದ್ದುಕೊಂಡು ಎಲ್ಲವನ್ನೂ ನಡೆಸುವವನು 'ಯಜ್ಞೀ' ಎನಿಸುವ ಭಗವಂತ.

**೯೭೬. ಯಜ್ಞಭುಕ್ – ಒಳ್ಳೆಯ ಕೆಲಸಗಳನ್ನು ಪ್ರೀತಿಯಿಂದ ಸ್ವೀಕರಿಸುವವನು.**

**ವಿವರಣೆ:** ಭಗವಂತ ಒಳ್ಳೆಯ ಕೆಲಸಗಳೆಂಬ 'ಯಜ್ಞ'ವನ್ನು ನಡೆಸಲು ಮನಸ್ಸನ್ನು ಕೊಟ್ಟು, ಅದನ್ನು ಕೃತಿಗಿಳಿಸಲು ಪ್ರೇರಿಸಿ, ಮೊದಲು ತಾನು ಮಾಡಿ ಬಳಿಕ ನಮ್ಮಿಂದ ಮಾಡಿಸುವ ಆ ಯಜ್ಞಗಳ ಫಲವನ್ನು ಅನುಭವಿಸುವವನು ಯಾರು ? ಭಗವಂತನೇ. ಆದುದರಿಂದ ಅವನೇ 'ಯಜ್ಞಭುಕ್.'

ನಮ್ಮಿಂದ ಯಾವುದೇ ಒಳ್ಳೆಯ ಕೆಲಸ ನಡೆಯಲಿ ಅದರಿಂದ ಪುಣ್ಯ ಉಂಟಾಗಿ ಅದು ಮುಂದೆ ಫಲಪ್ರದವಾಗಬೇಕಾದರೆ '.... ತದಾ ಭಕ್ತಿಸ್ತತ್ಫಲಂ ಮಹ್ಯಂ ತತ್‌ಪ್ರಸಾದಃ ಪುನಃ ಪುನಃ' - ಎಂದಿರುವಂತೆ ಅದರಿಂದ ಭಗವಂತ ಪ್ರೀತನಾಗಿ ಅವನ ಭಕ್ತಿ, ಅನುಗ್ರಹ ದೊರಕಲಿ ಎಂಬ ಅನುಸಂಧಾನ ಇರಬೇಕು.

ಒಬ್ಬ ಭಿಕ್ಷುಕನಿಗೆ ಅನ್ನದಾನ ಮಾಡಿದೆವು. ಆಗ ಅವನಲ್ಲಿರುವ ದೇವರು ಪ್ರೀತನಾಗಲಿ ಎಂಬ ಅನುಸಂಧಾನ ತಂದುಕೊಂಡೆವೆಂದರೆ ಅದರಿಂದ ಪುಣ್ಯ ಹುಟ್ಟಿ ಮುಂದೆ ಎಂದೋ ನಾವು ಹಸಿದಿದ್ದಾಗ ನಮಗೆ ಅನ್ನ ದೊರಕುವುದು.

ಈಗ ಜೀವನದಲ್ಲಿ ಏನೇನು ಫಲವನ್ನು ಪಡೆಯುತ್ತಿದ್ದೇವೆಯೋ ಅದೆಲ್ಲ ಹಿಂದೆ ಯಾವುದೋ ಜನ್ಮದಲ್ಲಿ ನಡೆಸಿದ್ದ ಸತ್ಕರ್ಮದ ಫಲವೇ ಭಗವಂತನ ಮೂಲಕ ದೊರಕುವಂತಹದ್ದು.

ಹೀಗೆ ಜೀವನದಲ್ಲಿ ಹೊಂದುವ ಫಲಗಳೆಲ್ಲ ಸತ್ಕರ್ಮರೂಪಗಳಾದ ಯಜ್ಞಗಳ ಫಲಗಳೇ ಆಗಿದ್ದು, ಅವು ಯಾರ ಪ್ರೀತಿಗಾಗಿ ಆ ಯಜ್ಞಗಳು ನಡೆಸಲ್ಪಡುವವೋ ಅಂತಹ ಭಗವಂತನೇ ಆ ಯಜ್ಞಗಳನ್ನು ಪ್ರೀತಿಯಿಂದ ಸ್ವೀಕರಿಸಿ ಅವುಗಳಿಗೆ ಫಲ ಕೊಡುವವನಾದುದರಿಂದ 'ಯಜ್ಞಭುಕ್' ಎನಿಸುವನು.

**೯೭೭. ಯಜ್ಞಸಾಧನಃ – ಯಜ್ಞಕ್ಕೆ ಬೇಕಾದ ಸಲಕರಣೆಗಳನ್ನೆಲ್ಲ ಒದಗಿಸಿಕೊಡುವವನು.**

**ವಿವರಣೆ :** ಯಜ್ಞ ನಡೆಯಬೇಕಾದರೆ ಅದನ್ನು ನಡೆಸುವ ಕರ್ತೃ, ಯಜಮಾನ, ಅವರ ಮನಸ್ಸು ಇವು ಬೇಕಾದಂತೆ ಬೇರೆ ಬೇರೆ ಸಲಕರಣೆಗಳೂ ಬೇಕಾಗುವವು.

ಅಗ್ನಿ ಮುಖದ ಆರಾಧನಾರೂಪವಾದ ಯಜ್ಞ ಎಂದಾದರೆ ದರ್ಭೆ, ತುಪ್ಪ, ಸ್ರುಕ್, ಸ್ರುವ, ಸಮಿಧೆ ಮುಂತಾದ ಸಲಕರಣೆ ಬೇಕಾಗುವವು.

ಸೂಕರರೂಪಿ ಪರಮಾತ್ಮ ಸಮುದ್ರದಲ್ಲಿ ಮುಳುಗಿದ ಭೂಮಿಯ ಉದ್ಧಾರವನ್ನು ನಡೆಸಿದವನೇ ಪ್ರಭಾಸದಲ್ಲಿ ಒಮ್ಮೆ ತನ್ನ ಮೈ ಕೊಡವಿದ. ಇದರಿಂದ ಅವನ ರೋಮಗಳಿಂದ ದರ್ಭೆಗಳು ಹುಟ್ಟಿಕೊಂಡವು. ಮೂಗಿನಿಂದ ತುಪ್ಪ, ದಾಡೆಗಳಿಂದ ಸ್ರುಕ್‌ಸ್ರುವ. ಹೀಗೆ ಬೇರೆ ಬೇರೆ ಅಂಗಗಳಿಂದ ಯಜ್ಞಕ್ಕೆ ಬೇಕಾದ ಪ್ರತಿಯೊಂದು ಸಲಕರಣೆಯೂ ಹುಟ್ಟು ಕೊಂಡಿತು. ಅದಕ್ಕಾಗಿಯೇ ಶ್ರೀಮಧ್ವರು ಸೂಕರನನ್ನು ಸ್ತುತಿಸುವಾಗ **'ಸೂಕರರೂಪಕ ದಾನವ ಶತ್ರೋ ಭೂಮಿವಿಧಾರಕ ಯಜ್ಞವರಾಂಗ '** - ಎಂಬುದಾಗಿ 'ಯಜ್ಞವರಾಂಗ' ಎಂದೇ ಉಲ್ಲೇಖಿಸಿರುವರು.

ಅಗ್ನಿ ಮುಖದ ಆರಾಧನಾರೂಪದ ಯಜ್ಞವಷ್ಟೇ ಅಲ್ಲದೆ, ಯಜ್ಞರೂಪದ ಪ್ರತಿಯೊಂದು ಸತ್ಕಾರ್ಯದ ಸಲಕರಣೆಯೂ ಅವನಿಂದಲೇ ಉಂಟಾದದ್ದು.

ಪ್ರವಚನಶ್ರವಣಯಜ್ಞಕ್ಕೆ ಬೇಕಾದ ಸಲಕರಣೆಗಳು ಎರಡು ಕಾಲುಗಳು, ಎರಡು ಕಿವಿಗಳು ಹಾಗೂ ಒಂದಿಷ್ಟು ತಲೆ ಇವಿಷ್ಟೇ. ಮನೆಯಿಂದ ರಾಜಾಂಗಣದವರೆಗೆ ಬರಲು ಎರಡು ಕಾಲುಗಳು. ಇಲ್ಲಿ ಪ್ರವಚನವನ್ನು ಕೇಳಲು ಎರಡು ಕಿವಿಗಳು. ಕೇಳಿದ್ದನ್ನು ಸ್ವಲ್ಪ ಚಿಂತಿಸಲು ಸ್ವಲ್ಪ ತಲೆ.

ಭೋಜನಯಜ್ಞಕ್ಕೆ ಒಂದು ಕೈ, ಒಂದು ಬಾಯಿ, ಒಂದು ದೊಡ್ಡ ಹೊಟ್ಟೆ. ಇವಿಷ್ಟು ಸಲಕರಣೆಗಳಿದ್ದರೆ ಸಾಕು.

ಈ ಸಲಕರಣೆಗಳನ್ನೆಲ್ಲ ಒದಗಿಸಿ ಕೊಡುವವನು ಭಗವಂತನಾದುದರಿಂದ ಅವನು 'ಯಜ್ಞಸಾಧನಃ'

ಭಗವಂತನನ್ನು 'ಯಜ್ಞಸಾಧನ' - ಎಂದು ಉಪಾಸನೆ ನಡೆಸಿದರೆ ನಾವು ಯಜ್ಞದ ರೂಪದಲ್ಲಿ ಯಾವುದೇ ಸತ್ಕಾರ್ಯವನ್ನು ಮಾಡಲು ತೊಡಗಿದಾಗ ಯಾವುದೇ ಸಲಕರಣೆಯ ಕೊರತೆ ಕಾಣಿಸಲಾರದು. ಇಲ್ಲಾಂದ್ರೆ ಯಾವುದೇ ಸತ್ಕರ್ಮ ನಡೆಸಲು ಬೇಕಾದ 'ಒಂದು ಸಲಕರಣೆ ಇದ್ದರೆ ಮತ್ತೊಂದು ಇಲ್ಲ, ಇನ್ನೊಂದು ಇದ್ದರೆ ಮಗದೊಂದು ಇಲ್ಲ' - ಎಂದು ನ್ಯೂನತೆಯ ದುಃಸ್ಥಿತಿಯನ್ನು ಎದುರಿಸಬೇಕಾಗುವುದು.

**೯೭೮. ಯಜ್ಞಾಂತಕೃತ್ – ಜೀವನ ಯಜ್ಞಕ್ಕೆ ಉಪಟಳ ಮಾಡುವವರನ್ನು ನಾಶ ಮಾಡುವವನು.**

**ವಿವರಣೆ:** ಹಿಂದೆ ಸಂಗತಿಕರಣ ರೂಪವಾದ ಹಾಗೂ ಸತ್ಕಾರ್ಯರೂಪವಾದ ಎರಡು ಯಜ್ಞಗಳು ಪ್ರಸ್ತುತಗಳಾಗಿದ್ದವು. ಅವುಗಳ ನಿರ್ವಹಣೆಯಲ್ಲಿ ಭಗವಂತ ಬೇರೆ ಬೇರೆ

ರೂಪದಿಂದ ಪಾತ್ರ ವಹಿಸುವುದನ್ನು ಬೇರೆ ಬೇರೆ ನಾಮದಿಂದ ಸ್ತುತಿಸಲಾಯಿತು. ಅಂತಹ ಎರಡು ಬಗೆಯ ಯಜ್ಞಗಳಿಗೂ ಬೇರೆ ಬೇರೆ ರೀತಿಯಾಗಿ ಉಪಟಳ ಮಾಡುವವರಿರುವರು. ಸತಿಪತಿಯರು ಅನ್ಯೋನ್ಯವಾಗಿ ಇದ್ದಾರೆ ಎಂದರೂ ಅವರ ಅನ್ಯೋನ್ಯತೆಯ ಮಧುರಕ್ಷೀರಕ್ಕೆ ಹುಳಿ ಹಿಂಡುವವರೂ ಇರುವರು. ಜಪ, ಪೂಜೆ ಮುಂತಾದ ಸತ್ಕಾರ್ಯಗಳಿಗೂ ತೊಂದರೆ ಮಾಡುವ ದುಷ್ಟಶಕ್ತಿಗಳು ಇರುವವು. ಅಂತಹ ಯಜ್ಞಾಂತ ಎನಿಸುವವುಗಳನ್ನು 'ಕೃಂತತಿ ಇತಿ' - ನಾಶಪಡಿಸುವವನು ಯಜ್ಞಾಂತಕೃತ್.

ವಿಶ್ವಾಮಿತ್ರರು ನಡೆಸುತ್ತಿದ್ದ ಯಜ್ಞಕ್ಕೆ ರಾವಣನ ಸಂಬಂಧಿಗಳು ತೊಂದರೆ ಮಾಡಿದಾಗ ರಾಮನಾಗಿ ಅವರನ್ನು ನಾಶಪಡಿಸಿರುವನು. ಋಷಿಗಳು, ಸಜ್ಜನರು ನಡೆಸುತ್ತಿದ್ದ ಯಜ್ಞಗಳಿಗೆ ಕಂಸನ ಸೇವಕರು ತೊಂದರೆ ಮಾಡಿದಾಗ ಕೃಷ್ಣನಾಗಿ ಅವರನ್ನು ನಾಶ ಪಡಿಸಿರುವನು. ಬ್ರಾಹ್ಮಣರ ಯಜ್ಞಯಾಗಾದಿಗಳಿಗೆ ತೊಂದರೆ ಕೊಡುತ್ತಿದ್ದ ದುಷ್ಟಕ್ಷತ್ರಿಯರನ್ನು ಪರಶುರಾಮನಾಗಿ ಸಂಹಾರ ಮಾಡಿರುವನು.

ಪಾಂಡವರಿಗೆ ಜೀವನ ನಡೆಸಲು ತೊಂದರೆ ಮಾಡಿದ್ದ ದುರ್ಯೋಧನಾದಿಗಳನ್ನು ಕೃಷ್ಣನಾಗಿ ಸಂಹಾರ ಮಾಡಿದ.

ಹಾಗೆಯೇ ನಾವು ಜೀವನಯಜ್ಞ ನಡೆಸಲು ತೊಡಗಿದಾಗ ಬರುವ ಉಪಟಳಗಳನ್ನು ಪರಿಹರಿಸಿ ನಮ್ಮ ಪಾಲಿಗೂ 'ಯಜ್ಞಾಂತಕೃತ್' ಎನಿಸುವನು.

ವಾದಿರಾಜ ಗುರುಗಳು **'...ಕ್ಷಿತ್ಯಾಮತ್ಯಲ್ಪಭೃತ್ಯೇಷ್ವಪಿ ಕುಜನಕೃತೌದ್ಧತ್ಯಭೂತ್ಯಾಜಕಾಯ'** - ಭೂಮಿಯಲ್ಲಿ ತನ್ನ ಸಾಮಾನ್ಯ ಭಕ್ತರೂ ಚಿಕ್ಕ ಪುಟ್ಟ ಯಜ್ಞ ನಡೆಸಲು ತೊಡಗಿದಾಗ ಅದಕ್ಕೆ ತೊಂದರೆಯನ್ನುಂಟು ಮಾಡುವ ಕುಜನರ ಉಪಟಳವನ್ನು ಪರಿಹಾರ ಮಾಡುವವನೆಂದು ಸ್ತುತಿಸಿರುವ ಹಯಗ್ರೀವನ ಸ್ತುತಿ 'ಯಜ್ಞಾಂತಕೃತ್' - ಎಂಬ ನಾಮಕ್ಕೆ ಭಾಷ್ಯದಂತೆ ಇದೆ.

**೯೭೯. ಯಜ್ಞಗುಹ್ಯಮ್ – ಜೀವನ ಯಜ್ಞದ ರಹಸ್ಯ, ಉದ್ದೇಶ.**

**ವಿವರಣೆ :** ಭಗವದನುಗ್ರಹದಿಂದ ಉಪಟಳಗಳನ್ನು ಪರಿಹರಿಸಿ ಯಶಸ್ವಿಯಾಗಿ ಯಜ್ಞವನ್ನು ನಡೆಸಲಾಯಿತೆಂದರೆ ಅದರ ಗುಹ್ಯ, ರಹಸ್ಯ ಅಂದರೆ ಉದ್ದೇಶ ದೇವರೇ. ಅಂದರೆ ದೇವರ ಪ್ರೀತಿ. ಅವನ ಅನುಗ್ರಹ.

ಭೋಜನಯಜ್ಞ ಇರಬಹುದು, ಮಗಳ ಮದುವೆ ಇರಬಹುದು, ಪ್ರವಚನದ ಶ್ರವಣ ಇರಬಹುದು, ಇವೆಲ್ಲ ಯಜ್ಞಗಳ ಗುಹ್ಯ - ರಹಸ್ಯ - ಉದ್ದೇಶ ಭಗವಂತನೇ.

**೯೮೦. ಅನ್ನಮ್ – ಶಾಶ್ವತವಾಗಿ ಆಶ್ರಯ ಆಗಿರುವವನು.**

**ವಿವರಣೆ :** ತಿನ್ನುವ ವಸ್ತುವನ್ನು ಅನ್ನ ಎನ್ನುವೆವು. 'ಅದ್ಯತೇ ಇತಿ ಅನ್ನಮ್' - ತಿನ್ನಲ್ಪಡುವುದರಿಂದ ಆಹಾರವಸ್ತು ಅನ್ನ ಎನಿಸುವುದು. ಆದರೆ ತಿನ್ನಲ್ಪಡುವುದರಿಂದಷ್ಟೇ ಅನ್ನ ಎನಿಸದು. ಬದಲಾಗಿ, ತಿನ್ನಲ್ಪಟ್ಟು ನಮ್ಮ ಬದುಕಿಗೆ ಆಶ್ರಯವಾಗಬೇಕು. ಆಗಷ್ಟೇ ಅನ್ನ ಎನಿಸಬಲ್ಲದು. ಆದರೆ ಆಹಾರವಸ್ತು ಈ ಅರ್ಥದಲ್ಲಿ ಪೂರ್ಣವಾಗಿ ಅನ್ನ ಎನಿಸಲಾರದು. ಯಾಕೆಂದರೆ ಆಹಾರವಸ್ತುವನ್ನು ತಿನ್ನುವುದರಿಂದ ಅದು ಬದುಕಿಗೆ ಆಶ್ರಯವೆನಿಸುವ ಬದಲು ನಾಶಕಾರಕವೇ ಆಗಿರುವುದು. 'ಯಾಕೆ ತಿಂದು ಸಾಯ್ತಿ !' - ಇತ್ಯಾದಿ ಮಾತುಗಳು ಇಂತಹ ಆಹಾರಗಳ ತಿನ್ನುವಿಕೆ ಬದುಕಿಗೆ ಆಶ್ರಯವಾಗುವ ಬದಲು ಸಾವಿಗೆ ಕಾರಣವಾಗಬಲ್ಲದೆಂದು ಸೂಚಿಸಿಕೊಡುವವು.

ಆದ್ದರಿಂದ ನಿಜವಾದ ಅನ್ನ ಭಗವಂತ. **'ಅದ್ಯತೇ ಅತ್ತಿ ಚ ಭೂತಾನಿ ತಸ್ಮಾದನ್ನಂ ತದುಚ್ಯತ ಇತಿ'** - ಎಂಬುದಾಗಿ ದೇವರು ಅನ್ನ ಎನಿಸಲು ಎರಡು ಕಾರಣಗಳಲ್ಲಿ ಒಂದು 'ಅದ್ಯತೇ' - ಎಲ್ಲ ಜೀವಿಗಳಿಂದಲೂ ಆಶ್ರಯಿ-ಸಲ್ಪಡುವವನು.

ಆಹಾರ ರೂಪವಾದ ಅನ್ನ ಇಲ್ಲದೆಯೇ ಕೆಲವು ದಿನಗಳಾದರೂ ಬದುಕಬಹುದು. ಆದರೆ ದೇವರೆಂಬ ಅನ್ನ ಇಲ್ಲದೆ ಒಂದು ಕ್ಷಣವೂ ಬದುಕಲಾಗದು. ಹೀಗೆ ನಮ್ಮ ಬದುಕಿಗೆ ದೇವರು ತುಂಬ ಆಶ್ರಯನಾಗಿರುವುದರಿಂದ ಅವನು ನಮಗೆ ಅನ್ನ. ಅತ್ಯಂತ ಆಶ್ರಯ ಎನಿಸುವ ವ್ಯಕ್ತಿಗಳನ್ನು, ಸಂಸ್ಥೆಗಳನ್ನು 'ನನಗೆ ಅವರೇ ಅನ್ನ' 'ಆ ಧನಾಗಾರ ನನಗೆ ಊರುಗೋಲು' - ಇತ್ಯಾದಿ ವ್ಯವಹಾರ ಇರುವಂತೆ ಭಗವಂತನನ್ನು ಶಾಶ್ವತವಾಗಿ ನಾವು ಕ್ಷಣಕ್ಷಣಕ್ಕೂ, ಹೆಜ್ಜೆ ಹೆಜ್ಜೆಗೂ ಅವಲಂಬಿಸಿರುವುದರಿಂದ ಅವನು ನಮ್ಮ ಪಾಲಿಗೆ 'ಅನ್ನಮ್'.

ದೇವರನ್ನು 'ಅನ್ನಮ್' - ಎಂದು ಉಪಾಸನೆ ಮಾಡುವುದರ ಫಲವಾಗಿ ನಾವು ಜೀವನದಲ್ಲಿ ಎಂದೆಂದೂ ನಿರ್ಗತಿಕರಾಗಿ, ಆಶ್ರಯರಹಿತರಾಗಿ ಅಲೆದಾಡುವ ದುಃಸ್ಥಿತಿ ಬರಲಾರದು.

**೯೮೧. ಅನ್ನಾದಃ – * ಉಣ್ಣುವವರಲ್ಲಿ ಸಂಕರ್ಷಣ ಹಾಗೂ ಪ್ರದ್ಯುಮ್ನ ರೂಪಗಳಿಂದ ಇದ್ದುಕೊಂಡು ಆಹಾರದ ಸಾರಭಾಗವನ್ನು ಸ್ವೀಕರಿಸುವವನು.**

*** ಸಂಕರ್ಷಣ ಹಾಗೂ ಪ್ರದ್ಯುಮ್ನ ರೂಪಗಳಿಂದ ಉಣ್ಣುವವರಿಗೆ ಭೋಗಶಕ್ತಿಯನ್ನು ನೀಡುವವನು.**

ವಿವರಣೆ: 'ಅನ್ನಮ್' - ಎಂಬ ನಾಮದಿಂದ ಭಗವಂತನು ಆಶ್ರಯನಾಗಿರುವವನು ಎಂದು ಸ್ತುತಿಸಲಾಯಿತು. ಭಗವಂತನು ಬೇರೆ ಬೇರೆ ವ್ಯಕ್ತಿಗಳ ಮೂಲಕ ವಸ್ತುಗಳ ಮೂಲಕ ಆಶ್ರಯನಾಗುವನು. ಆಹಾರ ವಸ್ತುರೂಪದಲ್ಲಿರುವ ಅನ್ನದ ಮೂಲಕವೂ ಆಶ್ರಯನಾಗುವುದುಂಟು. ಅದು ಹೇಗೆ ಎಂಬುದನ್ನು ತಿಳಿಸಲಾಗುವುದು- 'ಅನ್ನಾದಃ'. ಇಲ್ಲಿ ಅನ್ನ ಎಂದರೆ ತಿನ್ನುವ ವಸ್ತು ಎಂದೇ ಅರ್ಥ. ಆ ಅರ್ಥವನ್ನಿಟ್ಟುಕೊಂಡು ಅನ್ನಾದನಾಮ ಎರಡು ಅರ್ಥಗಳಲ್ಲಿ ತೆರೆದು ಕೊಳ್ಳುವುದು. ಅನ್ನಂ ಅತ್ತೀತಿ ಅನ್ನಾದಃ ನಾವು ಉಣ್ಣುವ ಆಹಾರ ವಸ್ತುವಿನ ಸಾರಭಾಗವನ್ನು ಅನುಭವಿಸುವವನು. ಅನ್ನಂ ಆದಯತೀತಿ ಅನ್ನಾದಃ ಊಟ ಮಾಡುವ ನಾವು ಆಹಾರ ವಸ್ತುವನ್ನು ತಿನ್ನಲು ಸಮರ್ಥರಾಗುವಂತೆ ಮಾಡುವವನು.

ನಾವು ಊಟ ಮಾಡುವಾಗ ಅದರಲ್ಲಿ ಸಾರಭಾಗವನ್ನು ತಾನು ಸ್ವೀಕರಿಸುವನು – ಅಲ್ಲದೆ ಊಟ ಮಾಡುವ ನಾವು ಆಹಾರ ವಸ್ತುಗಳನ್ನು ತಿನ್ನಲು ಸಮರ್ಥರಾಗುವಂತೆ ಮಾಡುವನು. ಆದುದರಿಂದಲೇ ಅವನು 'ಅನ್ನಾದ' ಎನಿಸುವನು.

ಭಗವಂತನು ತನ್ನ ಸಂಕರ್ಷಣ ಮತ್ತು ಪ್ರದ್ಯುಮ್ನ ಎಂಬ ಎರಡು ರೂಪಗಳಿಂದ 'ಅನ್ನಾದ' ಎನಿಸುವನೆಂದು ಶ್ರೀಮಧ್ವಗುರುಗಳು ತಿಳಿಸಿರುವರು-

**'ಸಂಕರ್ಷಣಶ್ಚ ಪ್ರದ್ಯುಮ್ನಸ್ತತ್ರ ಭೋಕ್ತೃಷು ಸಂಸ್ಥಿತೌ |**
**ಭೋಕ್ತೃಶಕ್ತಿಪ್ರದಾತಾರೌ ಭೋಕ್ತಾರೌ ಚ ವಿಶೇಷತಃ |**

ಸಂಕರ್ಷನ ಮತ್ತು ಪ್ರದ್ಯುಮ್ನ ಎಂಬ ಭಗವದ್ರೂಪಗಳು ತಾವು ವಿಶೇಷವಾಗಿ ಸಾರಭಾಗವನ್ನು ಭೋಗಿಸುವವಲ್ಲದೆ, ಭೋಜನ ನಡೆಸುತ್ತಿರುವವರಲ್ಲಿ ಇದ್ದುಕೊಂಡು ಅವರಿಗೆ ಭೋಗಕ್ಕೆ ಬೇಕಾದ ಸಾಮರ್ಥ್ಯವನ್ನು ನೀಡುವವು ಎಂದು ತಿಳಿಸಲಾಗಿದೆ.

ಸಂಕರ್ಷಣ ಮತ್ತು ಪ್ರದ್ಯುಮ್ನರು ಭೋಗಕ್ಕೆ ಬೇಕಾದ ಸಾಮರ್ಥ್ಯವನ್ನು ಕೊಡುವುದಾದರೂ ಹೇಗೆ ?

ಬಾಯಿಯಲ್ಲಿಟ್ಟ ಆಹಾರ ಕುತ್ತಿಗೆಯಲ್ಲಿರುವ ಆಹಾರನಾಳದ ಮೂಲಕ ಸರಕ್ಕನೆ ಒಳಗೆ ಸೇರಿಕೊಳ್ಳಬೇಕು. ಹಾಗಾಗಬೇಕಾದರೆ ಒಳಮುಖವಾದ ಗಾಳಿ ಬೇಕು. ಆ ಗಾಳಿಯನ್ನು ಒದಗಿಸುವವನು ಸಂಕರ್ಷಣ. ಗಾಳಿಯ ಮೂಲಕ ಆಹಾರವನ್ನು 'ಸಮ್ಯಕ್ ಕರ್ಷಯತೀತಿ' ಚೆನ್ನಾಗಿ ಸೆಳೆದುಕೊಳ್ಳುವುದರಿಂದಲೇ ಅವನು ಸಂಕರ್ಷಣ

ಎನಿಸುವನು. ಹೀಗೆ ಗಾಳಿಯ ಮೂಲಕ ಜಠರಕ್ಕೆ ಸೇರಿಕೊಂಡ ಆಹಾರ ವಸ್ತುವನ್ನು ಜಾಠರಾಗ್ನಿ ಪಚನ ಮಾಡಬೇಕು. ಜಾಠರಾಗ್ನಿಯ ಮೂಲಕ ಪಚನ ಮಾಡುವವನು 'ಪ್ರದ್ಯುಮ್ನ'. ಜಾಠರಾಗ್ನಿ ಪ್ರಜ್ವಲಿಸುವಂತೆ ಅದಕ್ಕೆ ಬೇಕಾದ ಗಾಳಿ ಒದಗಿಸುವವನು 'ಸಂಕರ್ಷಣ' 'ದ್ಯುಮ್ನ' ಶಬ್ದಕ್ಕೆ ಧನ ಎಂಬ ಅರ್ಥದಂತೆ ಬಲ ಎಂಬ ಅರ್ಥವೂ ಇದೆ. ಜಾಠರಾಗ್ನಿಯ ಮೂಲಕ ಜೀರ್ಣಿಸಿಕೊಳ್ಳುವ ಬಲವನ್ನು ನೀಡುವುದರಿಂದಲೂ, ಹಾಗೆ ಕೊಟ್ಟ ಬಲದಿಂದ ತಿಂದ ಆಹಾರ ಜೀರ್ಣವಾಗಿ ಅದರಿಂದಾಗಿ ಆರೋಗ್ಯ ರೂಪವಾದ ಸಂಪತ್ತಿಗೆ ಕಾರಣನಾಗಿರುವುದರಿಂದಲೂ ಪ್ರದ್ಯುಮ್ನರೂಪವು ಅನ್ವರ್ಥಕವಾಗಿಯೇ 'ಪ್ರದ್ಯುಮ್ನ' ಎನಿಸಿದೆ. ದ್ಯುಮ್ನ ಶಬ್ದಕ್ಕೆ ಸಂಪತ್ತು ಎಂಬ ಅರ್ಥವೂ ಇದೆ.

ಹೀಗೆ ಭಗವಂತನು ತನ್ನ ಸಂಕರ್ಷಣ ಹಾಗೂ ಪ್ರದ್ಯುಮ್ನ ರೂಪಗಳಿಂದ ತಿನ್ನುವ ವ್ಯಕ್ತಿ ತನ್ನ ಬಾಯಿಯಲ್ಲಿಟ್ಟ ಆಹಾರದ ತುತ್ತು ಜಠರಕ್ಕೆ ಸೇರಿ, ಅಲ್ಲಿ ಜಾಠರಾಗ್ನಿಯಿಂದ ಪಚನವಾಗುವಂತೆ ಅನುಗ್ರಹಿಸಿ 'ಅನ್ನಾದ' ಎನಿಸುವನೆಂದು ಉಪಾಸನೆ ನಡೆಸಿದಲ್ಲಿ ಅಂತಹವರ ಭೋಕ್ತೃತ್ವಶಕ್ತಿಗೆ ಎಂದೂ ಚ್ಯುತಿ ಬರಲಾರದೆಂಬುದು ಸ್ಪಷ್ಟ.

**ಆತ್ಮಯೋನಿಃ ಸ್ವಯಂಜಾತೋ ವೈಖಾನಃ ಸಾಮಗಾಯನಃ |**
**ದೇವಕೀನಂದನಃ ಸ್ರಷ್ಟಾ ಕ್ಷಿತೀಶಃ ಪಾಪನಾಶನಃ ||೧೦೬||**

**೯೮೨. ಆತ್ಮಯೋನಿಃ – ಯಾರ ಸರಿಯಾದ ತಿಳುವಳಿಕೆ ವಾಯುದೇವರ ಮೂಲಕ ಉಂಟಾಗುವುದೋ ಅಂತಹವನು.**

**ವಿವರಣೆ :** ಆತ್ಮ ಎಂದರೆ ಆತತವಾದುದು - ವ್ಯಾಪಿಸಿಕೊಂಡಿರುವುದು. ಯಾವುದು ವ್ಯಾಪಿಸಿಕೊಂಡಿದೆ ? ಗಾಳಿ ವ್ಯಾಪಿಸಿಕೊಂಡಿದೆ. ಹಾಗಾದರೆ ವ್ಯಾಪಿಸಿ ಕೊಂಡಿರುವ ಗಾಳಿ, ಅದರ ದೇವತೆಯಾದ ವಾಯುದೇವ ಆತ್ಮಾ. ಯೋನಿ ಎಂದರೆ ಕಾರಣ. ಹುಟ್ಟಿಗೆ ಕಾರಣವಾಗಿರುವಂತೆ ತಿಳುವಳಿಕೆಗೂ ಕಾರಣವಾಗಿರಬಹುದು. ತಿಳುವಳಿಕೆಗೆ ಕಾರಣವಾದದ್ದೂ 'ಯೋನಿ' ಎನಿಸುವುದಿದೆ. ಇಲ್ಲಿ ಆ ಅರ್ಥದಲ್ಲಿಯೇ ಯೋನಿ ಶಬ್ದವನ್ನು ಬಳಸಲಾಗಿದೆ. ಆದುದರಿಂದ 'ಆತ್ಮಯೋನಿ' - ನಾಮದಿಂದ ವಾಯುದೇವ ಯಾರ ತಿಳುವಳಿಕೆಗೆ ಕಾರಣನಾಗಿರುವನೋ ಅಂತಹವನು ಎಂಬ ಅರ್ಥ ಹೊರಡುವುದು.

ದೇವರ ತಿಳುವಳಿಕೆ ಇತರ ದೇವತೆಗಳಿಂದಲೂ ಉಂಟಾಗಬಹುದು. ಆದರೆ ಅವರಿಂದ ಉಂಟಾದ ತಿಳುವಳಿಕೆ ಸರಿಯಾದ ತಿಳುವಳಿಕೆ ಎಂದು ನಿರ್ಧರಿಸಿ ಕೊಳ್ಳಲು

ಬರುವುದಿಲ್ಲ. ವಾಯುದೇವನಿಂದಾದರೆ ದೇವರ ಬಗ್ಗೆ ಸರಿಯಾದ ತಿಳುವಳಿಕೆಯೇ ಉಂಟಾಗುವುದು.

ಶ್ರೀರಾಮಚಂದ್ರನ ಬಗ್ಗೆ ಸರಿಯಾದ ತಿಳುವಳಿಕೆ ವಾಯುದೇವನ ಅವತಾರ ಆಂಜನೇಯನಿಂದಲೇ. ಶ್ರೀಕೃಷ್ಣನ ಬಗ್ಗೆ ಸರಿಯಾದ ತಿಳುವಳಿಕೆ ವಾಯುದೇವನ ಅವತಾರ ಭೀಮಸೇನನ ಮೂಲಕವೇ. ಶ್ರೀವೇದವ್ಯಾಸರ ಸರಿಯಾದ ತಿಳುವಳಿಕೆ ವಾಯುದೇವನ ತೃತೀಯಾವತಾರ ಮಧ್ವಗುರುಗಳಿಂದಲೇ.

ಹೀಗೆ ದೇವರನ್ನು ಈ ಅರ್ಥದಲ್ಲಿ 'ಆತ್ಮಯೋನಿ' - ಎಂಬ ನಾಮದಿಂದ ಉಪಾಸನೆ ನಡೆಸಿದರೆ ಅದರ ಫಲವಾಗಿ ಶ್ರೀ ಮಧ್ವರನ್ನು ಆದಿಗುರುಗಳನ್ನಾಗಿ ಒಪ್ಪಿಕೊಳ್ಳುವ ಮಾಧ್ವಸಂಪ್ರದಾಯದ ಮನೆಯಲ್ಲಿ ಹುಟ್ಟಿಸಿ ದೇವರ ಬಗ್ಗೆ ಸರಿಯಾದ ಮಾಧ್ವತತ್ತ್ವ ಜ್ಞಾನ ದೊರಕುವಂತಾಗುವುದು.

ಮಾಧ್ವ ಸಂಪ್ರದಾಯದಲ್ಲಿ ಹುಟ್ಟಿಬಂದವರಿಗೂ ಶ್ರೀಮಧ್ವರ ವಿಸೇಷ ಸನ್ನಿಧಾನಕ್ಕೆ ಪಾತ್ರರಾದ ಗುರುಗಳು ದೊರೆತು ಅವರ ಮೂಲಕ ದೇವರ ಬಗ್ಗೆ ಸರಿಯಾದ ತತ್ತ್ವಜ್ಞಾನ ಸಿಗುವಂತಾಗುವುದು.

**೯೮೩. ಸ್ವಯಂಜಾತಃ – ತನ್ನ ಇಚ್ಛೆಗನುಗುಣವಾಗಿ ತನ್ನ ಆಶ್ರಯದಲ್ಲಿಯೇ ಅವತರಿಸುವವನು.**

**ವಿವರಣೆ :** ಜಾತಃ ಎಂದರೆ ಹುಟ್ಟುವವನು ಎಂದು ಸಾಮಾನ್ಯವಾಗಿ ಅರ್ಥೈಸಲಾಗುವುದು. ಆದರೆ 'ಜಾತ' ಶಬ್ದ 'ಜನೀ ಪ್ರಾದುರ್ಭಾವೇ' - ಎಂಬ ಕ್ರಿಯಾಪದದಿಂದ ನಿಷ್ಪನ್ನವಾಗಿದ್ದು, ಅದರ ಅರ್ಥ 'ಪ್ರಾದುರ್ಭಾವ'- ಕಾಣಿಸಿಕೊಳ್ಳುವಂತಹದ್ದು ಹೊರತು ಹೊಸರೂಪವನ್ನು ಹೊಂದುವಂತಹದೆಂಬ ಅರ್ಥವಲ್ಲ.

ಭಗವಂತನ ರೂಪಗಳೆಲ್ಲ ನಿತ್ಯಗಳಾಗಿದ್ದು, ಅವುಗಳಲ್ಲಿ ಯಾವ ರೂಪವೂ ಹೊಸದಾಗಿ ಹುಟ್ಟಿಕೊಳ್ಳುವಂತಹದ್ದಲ್ಲ. ಬದಲಾಗಿ ಅನಾದಿಯಾಗಿ ಇರುವ ರೂಪವೇ ಕಾಣಿಸಿಕೊಳ್ಳುವಂತಹದ್ದು. **'ಪ್ರತ್ಯಕ್ಷತ್ವಂ ಹರೇರ್ಜನ್ಮ ನ ವಿಕಾರಃ ಕಥಂಚನ'** ಜೀವರು ಹೇಗೆ ಅದುವರೆಗೆ ಇಲ್ಲದ ಹೊಸ ದೇಹವನ್ನು ಹೊಂದುವ ವಿಕಾರಕ್ಕೆ ಒಳಗಾಗುವರೋ ಹಾಗೆ ಯಾವದೇ ರೀತಿಯ ವಿಕಾರಕ್ಕೆ ಒಳಗಾಗದೆ ಅನಾದಿಯಾಗಿ ಇರುವ ರೂಪದಿಂದ ಕಾಣಿಸಿಕೊಳ್ಳುವುದೇ ಭಗವಂತನ ಜನ್ಮ. ಈ ಬಗೆಯ ಜನ್ಮ ತಾಳುವುದಕ್ಕೂ ಭಗವಂತನು ತನ್ನನ್ನೇ ಆಶ್ರಯಿಸಿಕೊಂಡು, ತನ್ನ

ಇಚ್ಛೆಗನುಗುಣವಾಗಿಯೇ ನಡೆದುಕೊಳ್ಳುವನೇ ಹೊರತು ಬೇರೆ ಯಾರ ಆಶ್ರಯವನ್ನೂ ಬಯಸುವುದಿಲ್ಲ. ದಶರಥ ಕೌಸಲ್ಯೆ, ವಸುದೇವ ದೇವಕಿ, ಪರಾಶರ ಸತ್ಯವತಿ ಮುಂತಾದವರ ಪಾಲಿಗೆ ಪುಣ್ಯ ಹಾಗೂ ಕೀರ್ತಿಯನ್ನು ಒದಗಿಸುವುದಕ್ಕಾಗಿಯಷ್ಟೇ ರಾಮ, ಕೃಷ್ಣ, ವ್ಯಾಸ ಇತ್ಯಾದಿ ತನ್ನ ಅವತಾರಗಳಲ್ಲಿ ಅವರನ್ನು ತಂದೆ ತಾಯಿಯರನ್ನಾಗಿ ಇಟ್ಟುಕೊಂಡಿರುವನಷ್ಟೇ.

**೯೮೪. ವೈಖಾನಃ – ಶಾಸ್ತ್ರ ಪ್ರಸಿದ್ಧವಾದ, ವಿಲಕ್ಷಣವಾದ ಭೋಜನ ಉಳ್ಳವನು.**

ವಿವರಣೆ: ಹಿಂದಿ ಭಾಷೆ ಗೊತ್ತಿದ್ದವರಿಗೆ 'ಖಾನ' ಶಬ್ದದ ಅರ್ಥ ತಿಳಿದಿರಲೇಬೇಕು.

ಖಾನಾ ಹುವಾ ? ಊಟ ಆಯಿತೋ ?

'ವೈ' ಹೌದು.

ವೈಶಬ್ದ ಗೌಡಸಾರಸ್ವತರ ಭಾಷೆಯಲ್ಲಿ ಸಮ್ಮತಿ ಸೂಚಕ.

ಸಾಮಾನ್ಯವಾಗಿ ಹಿಂದಿ, ಕೊಕಣಿ, ತುಳು, ಹೀಗೆ ಎಲ್ಲ ಭಾಷೆಗಳೂ ಸಂಸ್ಕೃತ ಗೂಟದ ಸುತ್ತ ಸುತ್ತುತ್ತಿರುವವು. ಆದುದರಿಂದ ಎಷ್ಟೆಷ್ಟೋ ಸಂಸ್ಕೃತ ಶಬ್ದಗಳು ಆ ಭಾಷೆಗಳಲ್ಲಿ ಸೇರಿಕೊಂಡು ಬಿಟ್ಟಿವೆ.

'ಖಾದೃ ಭಕ್ಷಣೇ' - ಎಂಬ ಕ್ರಿಯಾಪದದಿಂದ ನಿಷ್ಪನ್ನವಾದ ಖಾದ ಶಬ್ದ ತಿನ್ನುವಿಕೆಯನ್ನು ತಿಳಿಸುವುದು. 'ತೃತೀಯೋऽತಿಶಯೇ' - ಎಂಬ ವೈದಿಕ ಸೂತ್ರದ ಪ್ರಕಾರ ಆ ತಿನ್ನುವಿಕೆಯಲ್ಲಿ ಅತಿಶಯವನ್ನು, ಹೆಚ್ಚುಗಾರಿಕೆಯನ್ನು ತಿಳಿಸುವುದಕ್ಕಾಗಿ, ದಕಾರಕಿಂತ ಮೂರನೆಯ ಅಕ್ಷರವಾದ ನಕಾರ (ದ, ಧ, ನ) ಬಂದು ರೂಪುಗೊಳ್ಳುವ 'ಖಾನ' ಶಬ್ದವು ಅತಿಶಯಿತವಾದ, ವಿಶಿಷ್ಟವಾದ ತಿನ್ನುವಿಕೆಯನ್ನು ತಿಳಿಸುವುದು.

'ವೈ' ಅಂದರೆ ವಿಲಕ್ಷಣ, ಪ್ರಸಿದ್ಧ. ಪ್ರಸಿದ್ಧವಾದ, ವಿಲಕ್ಷಣವಾದ ತಿನ್ನುವಿಕೆ ಉಳ್ಳವನೇ 'ವೈಖಾನ.'

**'ತ್ರೀನ್ ಲೋಕಾನ್ ವ್ಯಾಪ್ಯ ಭೂತಾತ್ಮಾ ಭುಂಕ್ತೇ ವಿಶ್ವಭುಗವ್ಯಯಃ'** ಎಂದು ಪ್ರತಿಪಾದಿಸಿರುವಂತೆ ಭಗವಂತನ ತಿನ್ನುವಿಕೆ ತುಂಬ ವಿಲಕ್ಷಣವಾದುದು. ಪ್ರಳಯಕಾಲದಲ್ಲಿ ಇಡೀ ಜಗತ್ತನ್ನೇ ಕಬಳಿಸುವವನು ಅವನು –

**'ಯಸ್ಯ ಬ್ರಹ್ಮ ಚ ಕ್ಷತ್ರಂ ಚೋಭೇ ಭವತ ಓದನಃ |**
**ಮೃತ್ಯುರ್ಯಸ್ಯೋಪಸೇಚನಂ.....'**

ಎಂದು ಉಪನಿಷತ್ತು ವರ್ಣಿಸುವಂತೆ ಬ್ರಾಹ್ಮಣವರ್ಣಾಭಿಮಾನಿ

ಚತುರ್ಮುಖ, ಕ್ಷತ್ರಿಯವರ್ಣಾಭಿಮಾನಿ ವಾಯುದೇವರು ದೇವರ ಅನ್ನ ಆದರೆ, ಯಮದೇವ ದೇವರ ಚಟ್ನಿ. ಈ ರೀತಿಯಾಗಿ ವಿಲಕ್ಷಣವಾದ, ಪ್ರಸಿದ್ಧವಾದ ಆಹಾರ, ತಿನ್ನುವಿಕೆ ಉಳ್ಳವನೇ ‘ವೈಖಾನ.’

ಅನ್ನದ ರಾಶಿ ಹಾಕಿ ಪಲ್ಲಪೂಜೆ ನಡೆಸಿದರೆ, ಆ ರಾಶಿಅನ್ನವನ್ನೂ ಕಬಳಿಸಿ, ಇನ್ನೂ ಇದೆಯೋ ಎಂದು ಕೇಳುವವನು ದೇವರು.

ಕೃಷ್ಣನ ವಿಶ್ವರೂಪದ ಬಾಯಿಯೊಳಗೆ ಪಾಂಡವ ಯೋಧರೂ, ಕೌರವಯೋಧರೂ ಸಾಗುವುದನ್ನು ಕಂಡಿದ್ದವರು ಭೀಷ್ಮರು. ಆ ಅನುಭವದ ಹಿನ್ನೆಲೆಯಲ್ಲೂ ಭಗವಂತನನ್ನು ‘ವೈಖಾನಃ’ - ಎಂದು ಸ್ತುತಿಸುವರು.

**೯೮೫. ಸಾಮಗಾಯನಃ – * ಮುಕ್ತ ಚತುರ್ಮುಖನಿಂದ ಸಾಮವೇದದಿಂದ ಹಾಡಲ್ಪಡುವವನು.**
*** ಸಾಮವೇದದಿಂದ ಹಾಗೂ ಇತರ ಸ್ತೋತ್ರಗಳಿಂದ ಸ್ತುತಿಸಲ್ಪಡುವವನು.**

**ವಿವರಣೆ :** ‘ವೈಖಾನ’ ನಾಮದಿಂದ ವಿಲಕ್ಷಣವಾದ ಭೋಜನವುಳ್ಳವನೆಂದು ಸ್ತುತಿಸುವಾಗ, ಚತುರ್ಮುಖ ದೇವರ ಅನ್ನ ಎಂದು ಪ್ರಸ್ತಾಪಿಸಲ್ಪಟ್ಟಿತು.

ಆ ಬಗ್ಗೆ ಚತುರ್ಮುಖನೇ ಮುಕ್ತನಾದ ಮೇಲೆ ಸಾಮಗಾನ ನಡೆಸುವುದನ್ನು ಸ್ತುತಿಸಲಾಗುವುದು - ‘ಸಾಮಗಾಯನಃ’ ಮುಕ್ತಚತುರ್ಮುಖನಿಂದ ಸಾಮವೇದದ ಮೂಲಕ ಸ್ತುತಿಸಲ್ಪಡುವವನು, ಸಾಮ್ನಾ ಗೀಯತೇ ಇತಿ ಸಾಮಗಾಯನಃ

**‘ಏತತ್ಸಾಮ ಗಾಯನ್ನಾಸ್ತೇ.....’** ಎಂದು ಮುಕ್ತ ಚತುರ್ಮುಖನ ಮೂಲಕ ಭಗವಂತನ ಕುರಿತಾಗಿ ನಡೆಯುವ ಸಾಮಗಾನದ ಪ್ರಸ್ತಾವ ಮಾಡಿದ ಉಪನಿಷತ್ತು ‘ಅಹಮನ್ನಮಹಮನ್ನಮಹಮನ್ನಮ್’ ಎಂದು ಸಾಮಗಾನದಲ್ಲಿ ಚತುರ್ಮುಖನು ತಾನು ದೇವರಿಗೆ ಅನ್ನವಾಗಿರುವುದನ್ನು ಮೂರುಬಾರಿ ಉಲ್ಲೇಖಿಸುವ ಮೂಲಕ ತನಗೆ ಆ ಪ್ರಮೇಯವನ್ನು ತಿಳಿಸುವುದರಲ್ಲಿ ಇರುವ ತಾತ್ಪರ್ಯವನ್ನು ಸೂಚಿಸಿರುವನು ಎಂದು ತಿಳಿಸಿದೆ.

ಹೀಗೆ ಮುಕ್ತನಾದ ಚತುರ್ಮುಖನಿಂದಲೂ ಸಾಮವೇದದ ಮೂಲಕ ಹಾಡಲ್ಪಡುವ ‘ಸಾಮಗಾಯನ’ ನತೃಪ್ತಿಗಾಗಿ ನಾವು ಕೂಡಾ ನೈವೇದ್ಯದ ಸಮರ್ಪಣೆ ಆದಾಕ್ಷಣ ಮಂಗಳಾರತಿ ಎತ್ತದೆ, ಸ್ವಲ್ಪ ಸಮಯ ಅವನನ್ನು ಸಾಮದಿಂದ, ಇಲ್ಲವೇ ಯಾವುದಾದರೊಂದು ಸ್ತೋತ್ರದಿಂದ ಭಕ್ತಿ ಪೂರ್ವಕವಾಗಿ ಹಾಡಬೇಕು. ಅವನ ಸಾರವಾದ, ಶ್ರೇಷ್ಠವಾದ ಆನಂದದ, ಜ್ಞಾನದ ಹಾಗೂ ಇತರ ಗುಣಗಳ ಉಲ್ಲೇಖವುಳ್ಳ

ಯಾವುದೇ ಸ್ತೋತ್ರ, ಪದ್ಯ 'ಸಾಮ' ಎನಿಸುವುದು. ಇದರಿಂದ ಭಕ್ತಿ ಪೂರ್ವಕವಾಗಿ ಹಾಡಲ್ಪಡುವುದರಿಂದ ದೇವರು 'ಸಾಮಗಾಯನ' ಎನಿಸುವನು.

ಭೀಷ್ಮರು ಹತ್ತು ದಿನಗಳ ಕಾಲ ಯುದ್ಧ ನಡೆಸಿ ಎರಡು ಅಕ್ಷೌಹಿಣೀ ಸೇನೆಯನ್ನು ನಾಶಪಡಿಸಿ 'ವೈಖಾನ' ಎನಿಸುವ ಕೃಷ್ಣನಿಗೆ ಅರ್ಪಿಸಿದ್ದಾರೆ. ಈಗ ವಿಷ್ಣುಸಹಸ್ರನಾಮ ಎಂಬ ಸಾಮ ದ ಗಾಯನಕ್ಕೆ ಒಳಗಾಗುವಂತೆ ಮಾಡುತ್ತಿದ್ದಾರೆ.

**೯೮೬. ದೇವಕೀನಂದನಃ – * ದೇವಕಿಯ ಪುತ್ರ.**

*** ದೇವಕಿಯುನ್ನೂ, ನಂದಗೋಪನನ್ನೂ ತನ್ನ ದಾರಿಯಲ್ಲಿ ಕೊಂಡೊಯ್ದವನು.**

ವಿವರಣೆ : ದೇವಕೀಪುತ್ರ ಎಂಬ ಪ್ರಸಿದ್ಧಾರ್ಥ ಇದ್ದೇ ಇದೆ. ಜೊತೆಗೆ ದೇವಕೀ +ನಂದ +ನ - ಎಂದು ಪದವಿಭಾಗ ಮಾಡಿ ಮತ್ತೊಂದು ಅರ್ಥವನ್ನು ನೋಡೋಣ. ಕೃಷ್ಣನಿಗೆ ದೇವಕಿವಸುದೇವರು ಪ್ರಾದುರ್ಭಾವಕ್ಕೆ ನಿಮಿತ್ತರಾದ ತಾಯಿ ತಂದೆಯರಾದರೆ, ಯಶೋದಾನಂದಗೋಪರು ಸಾಕು ತಾಯಿತಂದೆಯರು.

ಈ ಎರಡು ಬಗೆಯ ತಂದೆ ತಾಯಿಯರಲ್ಲಿ ಒಬ್ಬೊಬ್ಬರನ್ನು ಉಲ್ಲೇಖಿಸಿ, ವಸುದೇವದೇವಕಿಯರಲ್ಲಿ ದೇವಕಿಯನ್ನೂ, ನಂದಗೋಪಯಶೋದೆಯರಲ್ಲಿ ನಂದನನ್ನೂ ಉಲ್ಲೇಖಿಸಿ, ದೇವಕಿನಂದನಃ ದೇವಕಿಯನ್ನೂ ನಂದಗೋಪನನ್ನೂ ತನ್ನ ದಾರಿಯಲ್ಲಿ ಕರೆದೊಯ್ದವನು ಎಂದು ಸ್ತುತಿಸಲಾಗಿದೆ.

ಕೃಷ್ಣನ ಅವತಾರವಾದಾಕ್ಷಣ, ಅವನ ಆದೇಶಕ್ಕನುಗುಣವಾಗಿ ವಸುದೇವ ನಂದಗೋಪಯಶೋದೆಯರಿರುವಲ್ಲಿಗೆ ಕೃಷ್ಣನನ್ನು ಕರೆದೊಯ್ದ. ಅಂದರೆ ಶ್ರೀಕೃಷ್ಣ ವಸುದೇವನನ್ನು ಮೊದಲೇ ತನ್ನ ದಾರಿಯಲ್ಲಿ ಕರೆದೊಯ್ದಿದ್ದಾನೆ. ಕೃಷ್ಣ ಕರೆದೊಯ್ಯುವುದಲ್ಲದಿದ್ದರೆ ಸೆರೆಮನೆಯಲ್ಲಿ ಕೈಕಾಲುಗಳಿಗೆ ಬೇಡಿಯಿಂದ ಬಂಧಿಸಲ್ಪಟ್ಟಿದ್ದ ವಸುದೇವ ಕೃಷ್ಣನನ್ನು ಹೊತ್ತುಕೊಂಡು ಸಾಗುವುದಾದರೂ ಹೇಗೆ? ಆದ್ದರಿಂದ ವಸುದೇವನಿಂದ ಹೊರಲ್ಪಟ್ಟ ಕೃಷ್ಣನೇ ವಸುದೇವನನ್ನು ತನ್ನ ದಾರಿಯಲ್ಲಿ ಕರೆದೊಯ್ದದ್ದೆಂದು ಸ್ಪಷ್ಟ. ಅಂತೆಯೇ ಯಶೋದೆಯನ್ನೂ ಶ್ರೀಕೃಷ್ಣ ಮೊದಲೇ ತನ್ನ ದಾರಿಯಲ್ಲಿ ಕರೆದೊಯ್ದಿದ್ದಾನೆ. ಮೊಸರಿನ ಭಾಂಡೆಯನ್ನು ಒಡೆದು ಹಾಕಿದ ಬಾಲಕೃಷ್ಣನನ್ನು ಅಟ್ಟಿಸಿಕೊಂಡು ಹೊರಟಿದ್ದ ಯಶೋದೆ ಕೃಷ್ಣನ ಹಿಂದೆಯೇ ಓಡಿದ್ದಳು. ಇದರಿಂದಾಗಿ ಯಶೋದೆ ಕೃಷ್ಣನ ದಾರಿಯಲ್ಲೇ ಸಾಗದಂತಾಗಿದೆ. ಇದು ಲೋಕಕ್ಕೇ ಗೊತ್ತು.

ಆದುದರಿಂದ ಪ್ರಕೃತ ವಸುದೇವದೇವಕಿದಂಪತಿಗಳಲ್ಲಿ ದೇವಕಿಯನ್ನೂ, ನಂದಗೋಪಯಶೋದಾದಂಪತಿಗಳಲ್ಲಿ ನಂದನನ್ನೂ ಶ್ರೀಕೃಷ್ಣ ತನ್ನ ದಾರಿಯಲ್ಲಿ ಕೊಂಡೊಯ್ದಿದ್ದಾನೆ ಎಂದು ಸ್ತುತಿಸಲಾಗುವುದು - 'ದೇವಕೀನಂದನಃ'

ಹೇಗೆ ವಸುದೇವ ಮತ್ತು ಯಶೋದೆಯರನ್ನು ಕೃಷ್ಣ ತನ್ನ ದಾರಿಯಲ್ಲಿ ಕರೆದೊಯ್ದಿದ್ದಾನೋ ಅದರಂತೆಯೇ ದೇವಕಿಯನ್ನೂ ನಂದಗೋಪನನ್ನೂ ತನ್ನ ದಾರಿಯಲ್ಲೇ ಕರೆದೊಯ್ಯುವವನು.

ಈ ಅರ್ಥದಲ್ಲಿ 'ದೇವಕಿ ನಂದನ ' - ಎಂದು ಉಪಾಸನೆ ಮಾಡಿದರೆ ದೇವಕಿ ನಂದಗೋಪರನ್ನು ಹೇಗೋ ಹಾಗೆ ನಮ್ಮನ್ನೂ ತನ್ನ ದಾರಿಯಲ್ಲಿ ಶ್ರೀಕೃಷ್ಣ ಕರೆದೊಯ್ಯುವನು.

**೯೮೭. ಸ್ರಷ್ಟಾ – ಲೀಲೆಯಿಂದ ಎಲ್ಲವನ್ನೂ ಸೃಷ್ಟಿ ಮಾಡುವವನು.**

ವಿವರಣೆ : 'ದೇವಕಿನಂದನ' ನಾಮದಿಂದ ಕೃಷ್ಣಾವತಾರದ ಪ್ರಸ್ತಾವ ಬಂದಾಗ,

**'ಹತ್ತು ಮತ್ತಾರು ಸಾಸಿರ ಸ್ತ್ರೀಯರಲ್ಲಿ**
**ಹತ್ತು ಹತ್ತೆನಿಪ ಕ್ರಮದಿಂದ**
**ಪುತ್ರರ ವೀರ್ಯದಲ್ಲಿ ಸೃಷ್ಟಿಸಿದವರುಂಟೆ**
**ಅರ್ತಿಯ ಸೃಷ್ಟಿ ಹರಿಗಿದು'**

- ಎಂದು ಶ್ರೀ ವಾದಿರಾಜ ಸ್ವಾಮಿಗಳು ವರ್ಣಿಸಿದಂತೆ ಶ್ರೀ ಕೃಷ್ಣ ತನ್ನ ಹದಿನಾರು ಸಾವಿರ ಪತ್ನಿಯರಲ್ಲಿ ಒಬ್ಬೊಬ್ಬರಲ್ಲೂ ಕ್ರಮವಾಗಿ ಹತ್ತತ್ತು ಮಕ್ಕಳನ್ನು ಹುಟ್ಟಿಸಿರುವ ಲೀಲೆಯನ್ನೂ,

**'ರೋಮ ರೋಮ ಕೂಪ ಕೋಟಿ ವೃಕಂಗಳ**
**ನಿರ್ಮಿಸಿ ಗೋಪಾಲರ ತೆರಳಿಸಿದ.....'**

ಎಂದು ವರ್ಣಿಸಿರುವಂತೆ ಕೃಷ್ಣ ತನ್ನ ರೋಮರಂಧ್ರಗಳಿಂದ ತೋಳಗಳನ್ನು ಸೃಷ್ಟಿಸಿದ ಲೀಲೆಯನ್ನೂ ಮುಂದಿನ ನಾಮದಲ್ಲಿ ಅನುಸಂಧಾನ ಮಾಡಲಾಗುವುದು- 'ಸ್ರಷ್ಟಾ '

ಸೃಷ್ಟಿ ನಡೆಸುವವನು.

ಭಗವಂತನ ಅನೇಕ ಮಹಿಮೆಗಳಲ್ಲಿ ಜಗತ್ತನ್ನು ಸೃಷ್ಟಿಸುವ ಮಹಿಮೆಯೂ ಒಂದು. ಅದರ ಅನುಸಂಧಾನಕ್ಕಾಗಿಯೇ ಕೃಷ್ಣಾವತಾರದಲ್ಲಿ ಆ ಬಗೆಯ ಸೃಷ್ಟಿಯ ಚಮತ್ಕಾರವನ್ನು ತೋರಿಸಲಾಗಿದೆ.

ಶ್ರೀ ವಾದಿರಾಜ ಸ್ವಾಮಿಗಳು ಹಾಗೆಯೇ ತಿಳಿಸಿರುವರು -**'ನಮ್ಮ ಶ್ರೀಕೃಷ್ಣನು ಮಕ್ಕಳ ಸೃಜಿಸುವ ಮಹಿಮೆ ಬಲ್ಲವರಿಗೆ ಸಲಹಲಿಕೆ'**

ಭಗವಂತನ 'ಸ್ರಷ್ಟಾ' - ಎಂಬ ನಾಮದಿಂದ ಅವನ ಸೃಷ್ಟಿಯ ಚಮತ್ಕಾರವನ್ನು ಅನುಸಂಧಾನ ಮಾಡಿದಲ್ಲಿ ವಂಶಪರಂಪರೆ ಮುಂದುವರಿಯುವಂತೆ ಅವನು ಅನುಗ್ರಹಿಸುವನು.

**೯೮೮. ಕ್ಷಿತೀಶಃ – ಮಾನವ ಶರೀರವನ್ನು ಪಡೆದಿದ್ದ ನಂದಗೋಕುಲದ ಸ್ತ್ರೀಯರ ಪತಿ ಆಗಿದ್ದವನು.**

ವಿವರಣೆ: ನಾಶಶೀಲರಾದ ಮಾನವ ಸ್ತ್ರೀಯರಿಗೆ ಒಡೆಯನಾಗಿರುವುದರಿಂದ ಶ್ರೀಕೃಷ್ಣ 'ಕ್ಷೀತಿಶ.' ಆದುದರಿಂದ ಅವನು ಅ ಸ್ತ್ರೀಯರಲ್ಲಿ ಮಕ್ಕಳನ್ನು ಪಡೆದದ್ದು. 'ಕ್ಷಿ ಕ್ಷಯೇ'- ಎಂಬ ಕ್ರಿಯಾರೂಪದಿಂದ ನಿಷ್ಪನ್ನವಾಗಿರುವ 'ಕ್ಷಿತಿ' ಶಬ್ದ ನಾಶ – ಶಾಲಿಗಳಾದ ಮನುಷ್ಯರನ್ನಷ್ಟೇ ತಿಳಿಸುವುದು. ಪಶುಪಕ್ಷಿಗಳನ್ನು ಸೂಚಿಸುವುದಿಲ್ಲ.

ಮನುಷ್ಯರು ತಮ್ಮ ಶರೀರದಿಂದ ಏನಾದರೂ ಸಾಧನೆ ನಡೆಸಿದರೆಂದರೆ ಅದನ್ನು ಹತ್ತು ಮಂದಿಗಳಲ್ಲಿ ಹೇಳಿಕೊಳ್ಳುವರು. 'ಧರ್ಮಃ ಕ್ಷರತಿ ಕೀರ್ತನಾತ್.....' - ಎಂದಿರುವಂತೆ ಧಾರ್ಮಿಕ ಸಾಧನೆಗಳನ್ನು ಹೇಳಿಕೊಂಡರೆ ಅವುಗಳ ಫಲ ಕಡಿಮೆಯಾಗುತ್ತಿರುತ್ತದೆ. ಮನುಷ್ಯರು ಧಾರ್ಮಿಕ ಸಾಧನೆಗಳನ್ನು ಹೇಳಿಕೊಳ್ಳುವುದರಿಂದ ಪುಣ್ಯವನ್ನೆಲ್ಲ ಕಳೆದುಕೊಳ್ಳುವರು. ಇದರ ಬದಲಾಗಿ ತಮ್ಮ ಮೂಲಕ ನಡೆದ ಪಾಪಗಳನ್ನು ಹೇಳಿಕೊಂಡರೆ ಪಾಪಗಳು ನಾಶ ಹೊಂದಿಯಾವು! ಆದರೆ ಅವನ್ನು ಹೇಳಿಕೊಳ್ಳುವುದಿಲ್ಲ.

ಹೀಗೆ ಹೇಳಿಕೊಳ್ಳುವ ಮೂಲಕ ಪುಣ್ಯವನ್ನೆಲ್ಲ ಕಳೆದುಕೊಳ್ಳುವ ಪ್ರಯುಕ್ತ ಮನುಷ್ಯರು ಕ್ಷಿತಿಗಳು. ಅಂತಹವರಿಗೆ ಒಡೆಯನಾದವನು 'ಕ್ಷಿತೀಶ'. ಪಶುಪಕ್ಷಿಗಳು ತಮ್ಮ ಸಾಧನೆಯನ್ನು ಹೇಳಿಕೊಳ್ಳುವ ಪ್ರಸಂಗ ಇಲ್ಲದುದರಿಂದ ಅವುಗಳ ಪುಣ್ಯ ನಾಶವಾಗುವುದಿಲ್ಲ. ಆದುದರಿಂದ ಅವುಗಳ ಶರೀರ ಕ್ಷಿತಿ ಎನಿಸುವುದಿಲ್ಲ.

ಪ್ರಕೃತ ಕ್ಷಿತಿ ಎಂದರೆ ನಂದಗೋಕುಲದ ಸ್ತ್ರೀಯರು. ಅವರು ಮಾನವ ಶರೀರವನ್ನು ಹೊಂದಿದವರಾಗಿದ್ದುದರಿಂದ 'ಕ್ಷಿತಿ' ಎನಿಸುವರು. ಅವರ ಪತಿ ಶ್ರೀಕೃಷ್ಣನಾಗಿದ್ದುದರಿಂದ ಅವರಲ್ಲಿ ಪುತ್ರರನ್ನು ಪಡೆದದ್ದು ಹೇಗೆ ತಾನೇ ತಪ್ಪು ಆದೀತು !

**೯೮೯. ಪಾಪನಾಶನಃ – ಪಾಪದ ಅನುಭವ ಇಲ್ಲದವನು.**

ವಿವರಣೆ: ಪಾಪ + ನ + ಅಶನಃ - ಪಾಪನಾಶನಃ ಪಾಪದ ಅನುಭವ ಇಲ್ಲದವನು.

ಪಾಪದ ಅಶನ ಎಂದರೆ ಅನುಭವ. ಮಧ್ಯದಲ್ಲಿರುವ ನಕಾರವು ಅಂತಹ ಪಾಪದ ಅಶನ - ಅನುಭವ ಭಗವಂತನಿಗೆ ಇಲ್ಲ ಎಂದು ಸಾರುತ್ತಿದೆ.

**'ಶುಭಂ ಪಿಬತ್ಯಸೌ ನಿತ್ಯಂ ನಾಶುಭಂ ಸ ಹರಿಃ ಪಿಬೇತ್'** ಎಂದಿರುವಂತೆ ಭಗವಂತನು ಶುಭರಸವನ್ನು ಆಸ್ವಾದಿಸುವನೇ ಹೊರತು ಅಶುಭರಸದ ಆಸ್ವಾದ ಅವನಿಗೆ ಇಲ್ಲ. ಪುಣ್ಯಪಾಪಗಳ ನಿಯಾಮಕನಾಗಿರುವ ಅವನಿಗೆ ಅವುಗಳ ಲೇಪವಾದರೂ ಹೇಗೆ ? ಹಾಗೆಯೇ ತನ್ನ ಸ್ಮರಣಾದಿಗಳಿಂದಲೇ ಉಳಿದವರ ಪಾಪವನ್ನು ಪರಿಹರಿಸುವ ಅವನಿಗೆ ಪಾಪದ ಲೇಪವಾದರೂ ಹೇಗೆ ?

ಹೀಗೆ ಅವನು ಪಾಪದ ಅಶನ ಇಲ್ಲದವನಾದುದರಿಂದ 'ಪಾಪನಾಶನ' ಎನಿಸುವನು.

ಈ ಅರ್ಥದ ಹಿನ್ನೆಲೆಯಲ್ಲಿ 'ಪಾಪನಾಶನ' ನಾಮದಿಂದ ಅವನ ಉಪಾಸನೆ ನಡೆಸಿದರೆ, ನಮ್ಮ ಪಾಪವನ್ನೂ ಆದಷ್ಟು ಪರಿಹರಿಸಿ ಅದನ್ನು ಅನುಭವಿಸಬೇಕಾದ ಸ್ಥಿತಿ ನಮಗೆ ಬಾರದಂತೆ ಅನುಗ್ರಹಿಸುವನು.

**ಶಂಖಭೃನ್ನಂದಕೀ ಚಕ್ರೀ ಶಾರ್ಙ್ಗಧನ್ವಾ ಗದಾಧರಃ |**
**ರಥಾಂಗಪಾಣಿರಕ್ಷೋಭ್ಯಃ ಸರ್ವಪ್ರಹರಣಾಯುಧಃ ||೧೦೭||**

**೯೯೦. ಶಂಖಭೃತ್ – * ಶಂಖವನ್ನು ಧರಿಸಿರುವವನು.**

*** ಶಂಖಾಭಿಮಾನಿ ಅನಿರುದ್ಧನನ್ನೂ, ಶ್ರೀದೇವಿಯನ್ನೂ ಧಾರಣೆ ಪೋಷಣೆ ಮಾಡುವವನು.**

ವಿವರಣೆ : ಭೀಷ್ಮರು ಕೊನೆಯ ಕ್ಷಣದಲ್ಲಿ ಭಗವಂತನ ಕೈಗಳಲ್ಲಿ ಬೇರೆ ಬೇರೆ ಆಯುಧಗಳನ್ನು ಚಿಂತಿಸುತ್ತಿರುವರು. ಭಕ್ತರ ರಕ್ಷಣೆಗೆ ತಾನು ಸದಾ ಸಿದ್ಧನೆಂದು ಸೂಚಿಸಲು ಆಯುಧಗಳನ್ನು ಧರಿಸಿರುವನು.

ಶಂಖವನ್ನು ಧರಿಸಿರುವವನೇ ಶಂಖಭೃತ್.

ಶಂಖಕ್ಕೆ ಜೀವಕೋಟಿಯಲ್ಲಿ ಅಭಿಮಾನಿಯಾದವನು ಅನಿರುದ್ಧ, ಅವನೇ ಶತ್ರುಘ್ನ. ಆದುದರಿಂದ ಶಂಖಭೃತ್ ಎಂಬುದಕ್ಕೆ ಶಂಖಕ್ಕೆ ಅಬಿಮಾನಿಯಾದ ಅನಿರುದ್ಧನನ್ನು, ಅವನ ಅವತಾರನಾದ ಶತ್ರುಘ್ನನನ್ನು ಧಾರಣೆ ಮಾಡಿದವನು, ಪೋಷಣೆ ಮಾಡಿದವನು ಎಂಬ ಅರ್ಥವೂ ಇದೆ.

ಶಂಖಕ್ಕೆ ಈಶಕೋಟಿಯಲ್ಲಿ ಅಭಿಮಾನಿ ಲಕ್ಷ್ಮೀದೇವಿಯ ಶ್ರೀರೂಪ. ಸತ್ವಗುಣಕ್ಕೆ ಅಭಿಮಾನಿಯಾದ ಇವಳು ಬೆಳ್ಳಗಿದ್ದು, ಬಿಳಿಬಣ್ಣದ ಶಂಖಕ್ಕೆ ಅಭಿಮಾನಿ ಎನಿಸಿರುವಳು. ಆದುದರಿಂದ 'ಶಂಖಭೃತ್' ನಾಮದಿಂದ ಲಕ್ಷ್ಮೀದೇವಿಯ ಶ್ರೀದೇವಿರೂಪವನ್ನು ಧಾರಣೆ ಪೋಷಣೆ ಮಾಡುವವನು ಎಂಬ ಅರ್ಥವೂ ಹೊರಡುವುದು. 'ಶಂಖಭೃತ್' ನಾಮದಿಂದ ನಮ್ಮಲ್ಲಿ ಸತ್ವಗುಣವನ್ನು ತುಂಬಿಸಲು ದೇವರನ್ನು ಸ್ತುತಿಸಬೇಕು.

೯೯೧. ನಂದಕೀ – * ನಂದಕ ಎಂಬ ಖಡ್ಗವನ್ನು ಧರಿಸಿರುವವನು.

*** ನಂದಕ ಖಡ್ಗಕ್ಕೆ ಅಭಿಮಾನಿನಿಯಾದ ದುರ್ಗಾದೇವಿಯುನ್ನು ಧರಿಸಿರುವವನು.**

ವಿವರಣೆ: ದೇವರ ಮತ್ತೊಂದು ಆಯುಧ ಖಡ್ಗ. ನಂದಕ ಎಂದು ಅದಕ್ಕೆ ಹೆಸರು. ಅದನ್ನು ಧರಿಸಿರುವುದರಿಂದ 'ನಂದಕೀ' ಎನಿಸುವವನು ಅವನು. ಭಗವಂತನ ಖಡ್ಗಕ್ಕೂ ದುರ್ಗಾದೇವಿಯೇ ಅಭಿಮಾನಿನಿ. ಚಕ್ರದಂತೆ ಖಡ್ಗವೂ ಶತ್ರುಗಳನ್ನು ಕತ್ತರಿಸುವುದಕ್ಕೆ ಉಪಯುಕ್ತವಾಗಿರುವುದರಿಂದ ಚಕ್ರದ ಅಭಿಮಾನಿನಿಯಾದ ದುರ್ಗಾದೇವಿಯೇ ಖಡ್ಗಕ್ಕೂ ಅಭಿಮಾನಿನಿ. ಆದುದರಿಂದ ಖಡ್ಗಕ್ಕೆ ಅಭಿಮಾನಿನಿಯಾದ ದುರ್ಗಾದೇವಿಯನ್ನೂ ಧರಿಸಿರುವವನು.

**೯೯೨. ಚಕ್ರೀ – * ಸುದರ್ಶನ ಚಕ್ರವನ್ನು ಧರಿಸಿರುವವನು.**

*** ಚಕ್ರಕ್ಕೆ ಅಭಿಮಾನಿನಿಯಾದ ದುರ್ಗಾದೇವಿಯನ್ನು ಧರಿಸಿರುವವನು.**

ವಿವರಣೆ: 'ಚಕರ್ತೀತಿ ಚಕ್ರಂ' - ಎಂದು ಕತ್ತರಿಸುವಂತಹದ್ದೆಂಬ ಅರ್ಥದಲ್ಲಿಯೇ ಚಕ್ರ ಎನಿಸುವುದು. ಲೌಕಿಕವಾದ ಕಬ್ಬಿಣದ ಚಕ್ರ ಕಪ್ಪು ಬಣ್ಣದ್ದಾಗಿರುವಂತೆ ಸೂರ್ಯ ಬಿಂಬದಂತೆ ಒಳಗೆ ಕಪ್ಪುಬಣ್ಣವನ್ನು ಹೊಂದಿರುವ ಪ್ರಯುಕ್ತ ಭಗವಂತನ ಚಕ್ರಕ್ಕೂ ತಮೋಭಿಮಾನಿನಿಯಾದ ದುರ್ಗಾದೇವಿಯೇ ಅಭಿಮಾನಿನಿ. ತಮಸ್ಸಿನ ಬಣ್ಣವೂ ಕಪ್ಪು ತಾನೇ ? ಆದ್ದರಿಂದ ತಮೋಗುಣಕ್ಕೆ ಅಭಿಮಾನಿನಿಯಾದ ದುರ್ಗೆ ಚಕ್ರಕ್ಕೂ ಅಭಿಮಾನಿನಿಯಾಗಿದ್ದು ಅಂತಹ ದುರ್ಗೆಯನ್ನೂ ಭಗವಂತನು ನರಸಿಂಹ ರೂಪದಿಂದ ಧರಿಸಿಕೊಂಡಿರುವವನು.

ತಮೋಽಭಿಮಾನಿನಿಯಾದ ದುರ್ಗಾದೇವಿಯೇ ಅಭಿಮಾನಿಯಾಗಿ ಉಳ್ಳ ಚಕ್ರದಿಂದ ಭಗವಂತ ನಮ್ಮ ತಮಸ್ಸನ್ನೂ, ತಮಸ್ಸಿನ ಕಾರ್ಯಗಳಾದ ಅಜ್ಞಾನ, ವಿಪರೀತ ಜ್ಞಾನಗಳನ್ನೂ ಕತ್ತರಿಸಿ ಹಾಕುವಂತಾಗಬೇಕೆಂದು ಚಕ್ರೀ ನಾಮದಿಂದ ಉಪಾಸನೆ ನಡೆಸಬೇಕು.

**೯೯೩. ಶಾರ್ಙ್ಗಧನ್ವಾ – * ಶಾರ್ಙ್ಗ ಎಂಬ ಬಿಲ್ಲು ಧರಿಸಿರುವವನು.**
*** ಶಾರ್ಙ್ಗ ಧನುಸ್ಸಿನ ಅಭಿಮಾನಿನಿಯಾದ 'ವಿದ್ಯಾ' ಎನಿಸುವ ಸರಸ್ವತಿಯನ್ನು ಧರಿಸಿರುವವನು.**

ವಿವರಣೆ : ಶಾರ್ಙ್ಗ ಎಂಬ ಧನುಸ್ಸು ಉಳ್ಳವನೇ ಶಾರ್ಙ್ಗಧನ್ವಾ. ಶೃಂಗದಿಂದ ಉಂಟಾದದ್ದು ಶಾರ್ಙ್ಗ. ಶೃಂಗ ಎಂದರೆ ಕೊಂಬು. ಅದು ಸೀಳಿಕೊಂಡು ಕಾಣಿಸಿಕೊಳ್ಳುವುದರಿಂದಲೇ ಶೃಂಗ ಎನಿಸುವುದು. ಅಂತಹ ಶೃಂಗದಿಂದ ನಿರ್ಮಿತವಾದ ಶಾರ್ಙ್ಗವೂ ಸೀಳುವಂತಹದ್ದು.

ಇದಕ್ಕೆ ಅಭಿಮಾನಿನಿ **'.....ಶಾರ್ಙ್ಗಶ್ಚ ವಿದ್ಯೇತಿ....'** ಎಂದಿರುವಂತೆ ವಿದ್ಯಾ ಎನಿಸುವ ವಿದ್ಯೆಯ ಅಭಿಮಾನಿನಿ. **'.... ಶಾರ್ಙ್ಗಂ ಚೈವ ಸರಸ್ವತೀ'** ಎಂಬ ಪದ್ಯಮಾಲಾದ ಮಾತಿನಿಂದ ಮಹಾಭಾರತದ ತಾತ್ಪರ್ಯನಿರ್ಣಯದಲ್ಲಿ ವಿದ್ಯಾಹೆಸರಿನಿಂದ ಸರಸ್ವತಿಯನ್ನು ಹೇಳಲಾಗಿದೆ ಎಂದು ಸ್ಪಷ್ಟವಾಗುವುದು.

ಚಕ್ರ ಮತ್ತು ಖಡ್ಗಗಳಿಂದ ಅಜ್ಞಾನ ವಿಪರೀತಜ್ಞಾನಗಳನ್ನು ಸೀಳಿ, ನಾಶಪಡಿಸುವಂತೆ 'ಚಕ್ರೀ' 'ನಂದಕೀ' ಎನಿಸುವ ಭಗವಂತನನ್ನು ಪ್ರಾರ್ಥಿಸಿಕೊಂಡರೆ ಬಿಲ್ಲಿನಿಂದ ಒಳ್ಳೆಯ ವಿದ್ಯೆ ಸಿದ್ಧಿಸುವಂತೆ ಶಾರ್ಙ್ಗಧನ್ವಾನ ಉಪಾಸನೆ ನಡೆಸಬೇಕು.

**೯೯೪. ಗದಾಧರಃ – * ಗದೆಯನ್ನು ಧರಿಸಿರುವವನು.**
*** ಗದೆಗೆ ಅಭಿಮಾನಿಯಾದ ವಾಯುದೇವರನ್ನು ತನ್ನ ತೊಡೆಯಲ್ಲಿ ಧರಿಸಿಕೊಂಡಿರುವವನು.**

ವಿವರಣೆ : ಗದೆಯನ್ನು ಧರಿಸಿರುವವನೇ ಗದಾಧರ, **'ಗದಾ ತು ವಾಯುರ್ಬಲಸಂವಿದಾತ್ಮಾ....'** ಎಂದಿರುವಂತೆ ಬಲಜ್ಞಾನಸ್ವರೂಪಿಯಾದ ವಾಯುದೇವನೇ ಭಗವಂತನ ಗದೆಗೆ ಅಭಿಮಾನಿ. ಆದುದರಿಂದ ಗದೆಗೆ ಅಭಿಮಾನಿಯಾದ ವಾಯುದೇವನನ್ನು **'ಅಚ್ಯುತಾಂಕೇ ಸ್ವಾಸೀನಂ.....'** ಎಂದಿರುವಂತೆ ಭಗವಂತ ತನ್ನ ತೊಡೆಯಲ್ಲಿ ಧರಿಸಿಕೊಂಡಿರುವನು.

ಉಡುಪಿ ಶ್ರೀ ಕೃಷ್ಣ ಎಡಗೈಯಲ್ಲಿ ಹಗ್ಗವನ್ನೂ, ಬಲಗೈಯಲ್ಲಿ ಕಡೆಗೋಲನ್ನು ಧರಿಸಿಕೊಂಡಿರುವುದು ತಾನು ಲಕ್ಷ್ಮೀದೇವಿಯನ್ನೂ, ವಾಯುದೇವನನ್ನೂ ಧರಿಸಿಕೊಂಡೇ ಇರುವವನೆಂಬ ಸಂಕೇತಕ್ಕಾಗಿ. ಉಡುಪಿ ಕೃಷ್ಣನ ಎಡಗೈಯ ಸೂತ್ರ ಮಂಗಳ ಸೂತ್ರ. ಆದುದರಿಂದಲೇ ಅದು ಲಕ್ಷ್ಮೀದೇವಿಯ ಸಂಕೇತ. ಪತ್ನಿಯ ಭಾಗ ಎಡಭಾಗವಾಗಿರುವುದರಿಂದಲೇ ಸೂತ್ರವನ್ನು ಎಡಗೈಯಲ್ಲಿ

ಧರಿಸಲಾಗಿದೆ. ಉಡುಪಿ ಕೃಷ್ಣನ ಬಲಗೈಯಲ್ಲಿರುವ ಕಡೆಗೋಲು ಎಂದರೆ ಕಡೆಯ ಕೋಲು. ವಿಜಯದಾಸರು ಒಂದು ಹಾಡಲ್ಲಿ ಜೀವನನ್ನು 'ಕೋಲು' ಎಂದಿಟ್ಟುಕೊಂಡು ವರ್ಣಿಸಿರುವರು. ಹಾಗಾದರೆ ನಾವೆಲ್ಲ ಮೊದಮೊದಲು ಕೋಲುಗಳು. ತಾರತಮ್ಯದಲ್ಲಿ ಕಡೆಗೆ ಬರುವ, ಜೀವೋತ್ತಮನಾದ ವಾಯುದೇವ ಕಡೆಗೋಲು. ಕೃಷ್ಣ ಅಂತಹ ಕಡೆಗೋಲನ್ನು ಬಲಗೈಯಲ್ಲಿ ಹಿಡಿದುಕೊಂಡು ನಾನು ಯಾವಾಗಲೂ ಜೀವೋತ್ತಮನಾದ ವಾಯುದೇವನನ್ನು ಧರಿಸಿಕೊಂಡಿರುವವನು ಎಂದು ಸೂಚಿಸುತ್ತಿರುವನು.

ಆದುದರಿಂದ ಉಡುಪಿ ಶ್ರೀಕೃಷ್ಣನ ಸಂದರ್ಶನ ಮಾಡುವಾಗ ಎಡಗೈಯಲ್ಲಿ ಲಕ್ಷ್ಮೀದೇವಿಯೂ, ಬಲಗೈಯಲ್ಲಿ ವಾಯುದೇವನೂ ಇರುವುದಾಗಿ ಅನುಸಂಧಾನ ತಂದುಕೊಳ್ಳಬೇಕು.

**೯೫೫. ರಥಾಂಗಪಾಣಿಃ – ರಥದ ಚಕ್ರರೂಪವಾದ ಅಂಗವನ್ನು ಕೈಯಲ್ಲಿ ಧರಿಸಿದವನು.**

**ವಿವರಣೆ :** ಭೀಷ್ಮರು ಹತ್ತು ದಿನಗಳ ಕಾಲ ಮಹಾಭಾರತಯುದ್ಧದಲ್ಲಿ ನಡೆದ ಸಂಗತಿಗಳ ಮೇಲೆ ನೆರಳು ಬೀಳುವಂತೆ ಎದುರಿನಲ್ಲಿರುವ ಕೃಷ್ಣನನ್ನು ಸ್ತುತಿಸುತ್ತಿದ್ದಾರೆ.

ಕೃಷ್ಣ ಭೀಷ್ಮರ ಮಾತನ್ನು ಉಳಿಸುವುದಕ್ಕಾಗಿ ತನ್ನ ಮಾತನ್ನೂ ಕಡೆಗಣಿಸಿ ರಥದ ಚಕ್ರವೊಂದನ್ನು ಹಿಡಿದುಕೊಂಡು ತನ್ನಡೆಗೆ ಬಂದ ಅವನ ಲೀಲೆಯನ್ನು ಬಣ್ಣಿಸುತ್ತಾರೆ - 'ರಥಾಂಗಪಾಣಿಃ'.

ಕೃಷ್ಣನು ತಾನು ಮಹಾಭಾರತ ಯುದ್ಧದಲ್ಲಿ ಶಸ್ತ್ರವನ್ನು ಬಳಸುವುದಿಲ್ಲ ಎಂದು ಪ್ರತಿಜ್ಞೆಗೈದಿದ್ದ. ಈ ಪ್ರತಿಜ್ಞೆಯನ್ನು ಅರಿತ ಭೀಷ್ಮರು ಧಾರ್ಷ್ಟ್ಯದಿಂದಲೋ ಸೌಜನ್ಯದಿಂದಲೋ ಕೃಷ್ಣನ ಕೈಯಿಂದ ಆಯುಧವನ್ನು ಹಿಡಿಸಿಯೇ ತೀರುವೆನು ಎಂದು ಪ್ರತಿಜ್ಞೆ ಗೈದಿದ್ದರು.

ಇದನ್ನು ತಿಳಿದ ಕೃಷ್ಣತನ್ನ ಪ್ರತಿಜ್ಞೆಯನ್ನೂ ಬದಿಗಿರಿಸಿ, ರಥದಿಂದ ಧುಮುಕಿ ಅಲ್ಲಿಯೇ ಬಿದ್ದಿದ್ದ ರಥವೊಂದರ ಚಕ್ರವನ್ನು ಹಿಡಿದುಕೊಂಡು ಭೀಷ್ಮರ ವಿರುದ್ಧ, ಅವರನ್ನು ಚಚ್ಚಿ ಬಿಡುವೆನೆಂಬಂತೆ ಧಾವಿಸಿ ಬರುವನು. ಉಳಿದವರ ದೃಷ್ಟಿಯಿಂದ ಕೃಷ್ಣ ಭೀಷ್ಮರನ್ನು ಘಾಸಿಗೊಳಿಸಲು ಸಿಟ್ಟಿನಿಂದ ಹಾಗೆ ಧುಮುಕಿದಂತೆ ಕಂಡರೂ, ಭೀಷ್ಮರು ತನ್ನ ಮೇಲಿನ ಅನುಗ್ರಹದಿಂದ ತನ್ನ ಮಾತನ್ನು ಉಳಿಸುವುದಕ್ಕಾಗಿಯೇ ತನ್ನೆಡೆಗೆ ಕೃಷ್ಣ ಧಾವಿಸಿಬಂದದ್ದೆಂದು ಭಾವಿಸಿರುವರು - 'ಸ್ವನಿಯಮಮಪಹಾಯ

**ಮತ್‌ಪ್ರತಿಜ್ಞಾಮೃತಮಧಿಕರ್ತುಮವಪ್ಲುತೋ ರಥಸ್ಥಃ | ಧೃತರಥಚರಣೋऽ-ಭ್ಯಯಾದ್ ಬಲಾಗ್ರೇ ಹರಿರಿವ ಹಂತುಮಿಭಂ ಗತೋತ್ತರೀಯಃ....'**

ಆನೆಯನ್ನು ಆಕ್ರಮಿಸಲು ಸಿಂಹ ಧುಮುಕುವಂತೆ ರಥದಿಂದ ಧುಮುಕಿ, ಆ ರಭಸಕ್ಕೆ ಉತ್ತರೀಯ ಹಾರಿ ಹೋದದ್ದನ್ನೂ ಗಮನಿಸದೆ ರಥಾಂಗಪಾಣಿಯಾಗಿ ತನ್ನೆಡೆಗೆ ಧಾವಿಸಿ ಬಂದವನು ಶ್ರೀಕೃಷ್ಣ ಎಂದು 'ಭೀಷ್ಮಸ್ತವರಾಜ'ದಲ್ಲಿ ಉಲ್ಲೇಖಗೊಂಡಂತೆ, ಭೀಷ್ಮರು 'ರಥಾಂಗಪಾಣಿ' ನಾಮದಿಂದ ಕೃಷ್ಣನ ಆ ಲೀಲೆಯನ್ನು ಅನುಸಂಧಾನಕ್ಕೆ ತಂದುಕೊಳ್ಳುತ್ತಿರುವರು.

**೯೯೬. ಅಕ್ಷೋಭ್ಯಃ – ಯಾವದೇ ರೀತಿಯ ಕ್ಷೋಭೆಗೆ, ಮನಸ್ಸಿನ ವಿಕಾರಕ್ಕೆ ಒಳಗಾಗದವನು.**

ವಿವರಣೆ: ಭೀಷ್ಮರ ವಿರುದ್ಧವಾಗಿ ಕಾದಾಡಲೋ ಎಂಬಂತೆ ಧುಮುಕಿದ ಕೃಷ್ಣನನ್ನು ಅರ್ಜುನ ಕಾಲು ಹಿಡಿದು, ಬೇಡಿ ರಥದಲ್ಲಿ ಕುಳ್ಳಿರಿಸಿದ. ಇದರಿಂದ ಕೃಷ್ಣ ತುಂಬ ಕ್ಷೋಭೆಗೆ ಒಳಗಾಗಿದ್ದಿರಬಹುದೇ ? ನಾವಾದರೆ ಯಾವುದಾದರೊಂದು ಕೆಲಸ ಮಾಡಬೇಕೆಂದು ಹೊರಟು, ಅದು ಪೂರ್ಣಗೊಳ್ಳದಿದ್ದರೆ ತುಂಬ ಕ್ಷೋಭೆಗೆ ಒಳಗಾಗುವೆವು ತಾನೇ ? ಹಾಗೆ ಕೃಷ್ಣ ಯಾವುದೇ ರೀತಿಯ ಕ್ಷೋಭೆಗೆ ಒಳಗಾಗದೆ 'ಗಾಂಗಃ ಹೃದ ಇವ' ಎಂದಿರುವಂತೆ ಏನೂ ನಡೆದೇ ಇಲ್ಲ ಎಂಬಂತೆ ಸಾರಥಿಯ ಆಸನದಲ್ಲಿ ಕುಳಿತಿದ್ದನು, ಇದನ್ನೇ 'ಅಕ್ಷೋಭ್ಯ' - ಎಂಬ ನಾಮದಿಂದ ಸ್ತುತಿಸಲಾಗಿದೆ.

ಬರೇ ಈ ಪ್ರಸಂಗದಲ್ಲಷ್ಟೇ ಅಲ್ಲ, ಅವನ ಮೇಲೆ ಕಳ್ಳತನದ, ಜಾರತನದ, ಕಂಸಾದಿ ಬಂಧುಗಳನ್ನೂ ನಾಶಗೈದ ವಿಷಯದಲ್ಲಿ ಹೀಗೆ ಅವನ ಅವತಾರದ ಹೆಜ್ಜೆ ಹೆಜ್ಜೆಗೆ ಮಾಡಲಾಗುತ್ತಿದ್ದ ಆಕ್ಷೇಪ, ಆರೋಪಾದಿಗಳಿಗೆ ಏನೂ ಸ್ಪಂದಿಸದೆ, ಯಾವುದೇ ಕ್ಷೋಭೆಗೆ ಒಳಗಾಗದೆ 'ಅಕ್ಷೋಭ್ಯ'ನಾಗಿ ಮೆರೆದವನು ಶ್ರೀಕೃಷ್ಣ.

ಜೀವನದಲ್ಲಿ ಬೇರೆ ಬೇರೆ ಬಗೆಯ ವಿಷಮ ಸ್ಥಿತಿಗೊಳಗಾಗಿ ಕಳವಳ ಪಡುವ ಪ್ರಸಂಗವನ್ನು ತಪ್ಪಿಸಿಕೊಂಡು 'ಸಮಚಿತ್ತ'ರಾಗಿ ಇರಬೇಕೆಂದರೆ ಭಗವಂತನನ್ನು 'ಅಕ್ಷೋಭ್ಯಃ' - ಎಂಬ ನಾಮದಿಂದ ಉಪಾಸನೆ ನಡೆಸಬೇಕು.

**೯೯೭. ಸರ್ವಪ್ರಹರಣಾಯುಧಃ – ಯಾರು ತನ್ನ ಸಾವಿರ ನಾಮಗಳಿಂದ ಸರ್ವಪಾಪಗಳನ್ನೂ ನಾಶಗೈಯುವ ಆಯುಧವಾಗಿ ಇರುವನೋ ಅಂತಹವನು.**

ವಿವರಣೆ : ಭೀಷ್ಮರು ವಿಷ್ಣುಸಹಸ್ರನಾಮಗಳ ಸ್ತುತಿಯನ್ನು ಉಪಸಂಹಾರ

'ಶ್ರೀ ಸ್ವವಶಾಯ ನಮಃ' 'ಶ್ರೀ ಭಕ್ತವತ್ಸಲಾಯ ನಮಃ'
'ಶ್ರೀ ವಿಜಿತಾತ್ಮನೇ ನಮಃ'



ಸ್ವತಂತ್ರನಾದ ಭಗವಂತ 'ಅಹಂ ಭಕ್ತಪರಾಧೀನಃ ಹ್ಯಸ್ವತಂತ್ರ ಇವ....' ತಾನು ಭಕ್ತಪರಾಧೀನನಾಗಿ ಅಸ್ವತಂತ್ರನಂತೆ ನಡೆದುಕೊಳ್ಳುವವನೆಂದು ದೂರ್ವಾಸರ ಎದುರು ಘೋಷಿಸಿರುವಂತೆ ಯಶೋದೆಯ ಬಂಧನಕ್ಕೆ ಒಳಗಾಗಿ ತನ್ನ ಭಕ್ತವಾತ್ಸಲ್ಯವನ್ನು ಎತ್ತಿ ತೋರಿಸಿರುವನು. ಕೃಷ್ಣಜಯಂತಿಯ ಸಂದರ್ಭದಲ್ಲಿ ಈ ಅಲಂಕಾರದಲ್ಲಿ ಮೆರೆಯುತ್ತಿರುವ ಉಡುಪಿ ಶ್ರೀಕೃಷ್ಣನ ಪ್ರತೀಕದಲ್ಲಿ ವಿ.ಸ.ನಾಮದ 'ಸ್ವವಶಃ' 'ಭಕ್ತವತ್ಸಲಃ' 'ವಿಜಿತಾತ್ಮಾ'- ಮುಂತಾದ ನಾಮಗಳಿಂದ ಭಗವಂತನ ಭಕ್ತವಾತ್ಸಲ್ಯಕ್ಕೆ ಸಂಬಂಧಿಸುವ ಗುಣಗಳ ಅನುಸಂಧಾನ ನಡೆಸಬಹುದಾಗಿದೆ.

**‘ಶ್ರೀ ಅಪ್ರತಿರಥಾಯ ನಮಃ’ ‘ಶ್ರೀ ವರಾರೋಹಾಯ ನಮಃ’**
**‘ಶ್ರೀ ಊರ್ಧ್ವಗಾಯ ನಮಃ’**



ಉಡುಪಿ ಶ್ರೀ ಕೃಷ್ಣ ಮಠದಲ್ಲಿ ‘ಬ್ರಹ್ಮರಥ’ - ಎಂದೇ ಪ್ರಸಿದ್ಧವಾಗಿರುವ ಬ್ರಹ್ಮ ಎನಿಸುವ ಮುಖ್ಯಪ್ರಾಣನ ಜಡಪ್ರತೀಕ ಎಂಬ ಅನುಸಂಧಾನಕ್ಕೆ ಪಾತ್ರವಾಗಿರುವ ರಥದಲ್ಲಿ ವಿರಾಜಿಸುತ್ತಿರುವ ಉಡುಪಿ ಶ್ರೀಕೃಷ್ಣನ ಪ್ರತೀಕದಲ್ಲಿ ವಿ.ಸ.ನಾಮದ ಭಗವಂತನ ಎತ್ತರದ ವ್ಯಕ್ತಿತ್ವದ ಪ್ರಸ್ತಾವವುಳ್ಳ ‘ಅಪ್ರತಿರಥಃ’ ‘ವರಾರೋಹಃ’ ‘ಊರ್ಧ್ವಗಃ’ - ಇತ್ಯಾದಿ ನಾಮಗಳಿಂದ ಅವನ ವೈಭವವನ್ನು ಅನುಸಂಧಾನ ಮಾಡಬಹುದಾಗಿದೆ.

ಹಾಗೆಯೇ **‘ಮಂದಿರಸ್ಯಂದನ ಸ್ಯಂದಕ ವಂದೇ’** - ಎಂಬುದಾಗಿ ದ್ವಾದಶಸ್ತೋತ್ರದ ಸಂದೇಶಕ್ಕನುಗುಣವಾಗಿ ದೇವಮಂದಿರ ಎನಿಸುವ ರಥವನ್ನು ಸಾಗಿಸುವವನೆಂಬ ಅನುಸಂಧಾನದ ಹಿನ್ನೆಲೆಯಲ್ಲಿ ವಿ.ಸ.ನಾಮದ ‘ಶರೀರಭೃತ್’ ‘ಶರೀರೀ’ - ಮುಂತಾದ ನಮ್ಮ ಶರೀವನ್ನು ನಿಯಮಿಸುವ ದೇವರ ಪಾತ್ರವನ್ನು ಅನುಸಂಧಾನ ಮಾಡಬಹುದಾಗಿದೆ.

‘ಶ್ರೀ ಕಾಯ ನಮಃ’ ‘ಶ್ರೀ ವತ್ಸರಾಯ ನಮಃ’



ಶ್ರೀ ವಾದಿರಾಜತೀರ್ಥರಿಗೊಲಿದ ಹಯಗ್ರೀವ

ಶ್ರೀಮಧ್ವರು ತಂತ್ರಸಾರ ಸಂಗ್ರಹದಲ್ಲಿ ‘ವಂದೇ ತುರಂಗವದನಂ.....’ - ಇತ್ಯಾದಿಯಾಗಿ ವರ್ಣಿಸಿರುವಂತೆ, ಬಾಯಿಯಿಂದಲೂ, ಮೂಗಿನಿಂದಲೂ ಅಶೇಷ ವಿದ್ಯೆಗಳನ್ನು ನಿರಂತರವಾಗಿ ಉಪದೇಶಿಸುತ್ತಿರುವ ಹಯಗ್ರೀವನನ್ನು ವಿ.ಸ.ನಾಮದ ‘ಕಃ’ ‘ವತ್ಸರಃ ’ - ಮುಂತಾದ ಜ್ಞಾನೋಪದೇಶದ ಪ್ರಸ್ತಾವವುಳ್ಳ ನಾಮಗಳಿಂದ ಅನುಸಂಧಾನ ನಡೆಸಬಹುದಾಗಿದೆ.

‘ಶ್ರೀ ಮಾನದಾಯ ನಮಃ ’ ‘ಶ್ರೀ ಗುರವೇ ನಮಃ’
‘ಶ್ರೀ ಶಾಸ್ತ್ರೇ ನಮಃ’





ಗೀತಾಜಯಂತಿಯ ಸಂದರ್ಭದಲ್ಲಿ ಗೀತೋಪದೇಶದ ಅಲಂಕಾರದಲ್ಲಿ ಮೆರೆಯುತ್ತಿರುವ ಉಡುಪಿ ಶ್ರೀಕೃಷ್ಣನ ಪ್ರತೀಕದಲ್ಲಿ ಭೀಷ್ಮರೊಳಗಿದ್ದು ವಿ.ಸ.ನಾಮದ ಉಪದೇಶವನ್ನು ಹೊರಡಿಸಿದುದರ ಚಿಂತನೆಯೊಂದಿಗೆ ವಿ.ಸ.ನಾಮದ ‘ಮಾನದಃ’ ‘ಗುರುಃ’ ‘ಶಾಸ್ತಾ’- ಮುಂತಾದ ನಾಮಗಳಿಂದ ಅವನ ಉಪದೇಶಕತ್ವ ಮಹಿಮೆಯ ಅನುಸಂಧಾನ ನಡೆಸಬಹುದು.

ಮಾಡುತ್ತಿದ್ದಾರೆ 'ಸರ್ವಪ್ರಹರಣಾಯುಧ'- ಎಂಬ ನಾಮದೊಂದಿಗೆ .

ಸರ್ವ ಎಂದರೆ ಎಲ್ಲ. ಎಲ್ಲ ಪಾಪಗಳು ಎಂದರ್ಥ. ಎಲ್ಲ ಪಾಪಗಳು ಎಂದರೆ ಬೆಳಿಗ್ಗಿನಿಂದ ರಾತ್ರಿಯವರೆಗೆ ರಾತ್ರಿಯಿಂದ ಬೆಳಿಗ್ಗಿನ ವರೆಗೆ ಸಮಗ್ರ ದಿನದಲ್ಲಿ ಎಸಗಲ್ಪಡುವ ಎಲ್ಲ ಪಾಪಗಳು. ಹಾಗೆಯೇ ಹುಟ್ಟಿನಿಂದ ಸಾಯುವವರೆಗೆ ಸಮಗ್ರ ಜೀವನದಲ್ಲಿ ಎಸಗಲ್ಪಡುವ ಎಲ್ಲ ಪಾಪಗಳು. ಇವುಗಳಿಗೆ ಹೊಡೆದು ನಾಶಮಾಡುವಂತಹ - 'ಪ್ರಹರಣ' - ಆಯುಧ - ಆಯುಧದಂತೆ ಇರುವವನು. ಯಾರು **'ವಿಶ್ವಂ ವಿಷ್ಣುಃ.....'** ಎಂದು ಪ್ರಾರಂಭವಾಗಿ **'..... ರಥಾಂಗ ಪಾಣಿರಕ್ಷೋಭ್ಯಃ ....'** ಎಂಬಲ್ಲಿಗೆ ಕೊನೆಗೊಂಡ ತನ್ನ ಸಹಸ್ರನಾಮಗಳಿಂದ ಎಲ್ಲ ಪಾಪಗಳನ್ನೂ ಪರಿಹರಿಸುವಲ್ಲಿ 'ಆಯುಧದಂತೆ' ಇರುವನೋ ಅಂತಹವನೇ **'ಸರ್ವಪ್ರಹರಣಾಯುಧ.'**

ತನ್ನ ಸಹಸ್ರನಾಮಗಳಿಂದ ಭಕ್ತರ ಎಲ್ಲ ಪಾಪಗಳನ್ನು ಪರಿಹರಿಸುವ ಆಯುಧದಂತೆ ಇರುವವನೆಂಬ ಅರ್ಥದ ಹಿನ್ನೆಲೆಯಲ್ಲಿ ಭಗವಂತನ ಉಪಾಸನೆ ನಡೆಸಿದಲ್ಲಿ ಹೆಚ್ಚಿನ ಪಾಪಗಳ ಪರಿಹಾರ ಆಗಬಲ್ಲದು.

## ಭಾವುಕತನದ ಉಪಸಂಹಾರ

ಕೆಲವು ಭಗವದ್‌ಭಕ್ತರು ಬಂದು ಕೇಳಿಕೊಂಡದ್ದಕ್ಕಾಗಿ ಕಳೆದ ಚಾತುರ್ಮಾಸ್ಯದಿಂದ ವಿಷ್ಣುಸಹಸ್ರನಾಮದ ಪ್ರವಚನವನ್ನು ನಡೆಸುತ್ತ ಬಂದಿದ್ದೆವು. ಹರಿಗುರುಗಳ ಅನುಗ್ರಹದಿಂದ ತೋಚಿದಷ್ಟನ್ನು ಪ್ರವಚನ ಮಾಡಿದ್ದೇವೆ. ಭಾವುಕರಾದ ನೀವೆಲ್ಲ ಅದರ ಉಪಯೋಗವನ್ನು ಪಡೆದುಕೊಂಡಿರುವಿರೆಂದು ಭಾವಿಸಿದ್ದೇವೆ.

---

* ಬೃಹತೀಸಹಸ್ರದ ಸಾವಿರ ಋಙ್ಮಂತ್ರಗಳಿಗೆ ವ್ಯಾಖ್ಯೇಯವಾಗಿ ಮೂಲವಾಗಿ ಇರುವ ವಿಷ್ಣುಸಹಸ್ರನಾಮಗಳೂ ಸರಿಯಾಗಿ ಸಾವಿರ ಸಂಖ್ಯೆಯಲ್ಲಿಯೇ ಇರಬೇಕಾದದ್ದು. ಆದರೆ ಶ್ರೀಪಾದರ ಪ್ರವಚನದಲ್ಲಿ ಬೃಹತೀಸಹಸ್ರದ ಮಂತ್ರಗಳಿಗನುಗುಣವಾಗಿ 'ಹುತಭುಗ್‌ಭೋಕ್ತಾ' 'ಲೋಕಾಧಿಷ್ಠಾನಮದ್ಭುತಮ್' 'ಸನಾತ್‌ಸನಾತನ ತಮಃ' ಮುಂತಾದ ನಾಮಗಳನ್ನು ಎರಡೆರಡು ಶಬ್ದಗಳನ್ನು ಸೇರಿಸಿ ಒಂದೊಂದೇ ನಾಮಗಳನ್ನಾಗಿ ಪರಿಗಣಿಸಿರುವುದರಿಂದ ಸಾವಿರ ನಾಮಗಳಾಗಲು ಮೂರು ನಾಮಗಳು ಕಡಿಮೆ ಇರುವಂತೆ ಕಾಣಿಸುವುದಷ್ಟೇ. ಎರಡೆರಡು ಶಬ್ದಗಳಿಂದ ಕೂಡಿದ ನಾಮಗಳಲ್ಲಿ ಯಾವುದಾದರೂ ಮೂರನ್ನು ಪ್ರತ್ಯೇಕನಾಮಗಳನ್ನಾಗಿ ಇಟ್ಟುಕೊಂಡಲ್ಲಿ ಸರಿಯಾಗಿ ಒಟ್ಟು ಸಾವಿರನಾಮಗಳೆನಿಸಬಲ್ಲವು.

* ಪ್ರತಿನಿತ್ಯ ಒಮ್ಮೆಯಾದರೂ ವಿಷ್ಣು ಸಹಸ್ರನಾಮವನ್ನು ಪಠಿಸೋಣ.
* ಆದಷ್ಟು ಅರ್ಥಾನುಸಂಧಾನದೊಂದಿಗೆ ಪಠಿಸೋಣ.
* ಭಗವಂತ ತನ್ನ ಸಹಸ್ರನಾಮಗಳಿಂದ ನಮ್ಮ ಪಾಪಗಳಿಗೆ 'ಪ್ರಹರಣಾಯುಧ'ನಾಗಿ ಅನುಗ್ರಹಿಸಲಿ !

**ಕಾಯೇನ ವಾಚಾ ಮನಸೇಂದ್ರಿಯೈರ್ವಾ**
**ಬುದ್ಧ್ಯಾSSತ್ಮನಾ ವಾ ಅನುಸ್ಮೃತಃ ಸ್ವಭಾವಮ್ |**
**ಕರೋಮಿ ಯದ್ಯತ್ ಸಕಲಂ ಪರಸ್ಮೈ**
**ನಾರಾಯಣಾಯೇತಿ ಸಮರ್ಪಯಾಮಿ ||**

**ಶ್ಲೋಕಸಂಖ್ಯಾ ಸಂದೇಶ**

ಮಹಾಭಾರತದ ಅನುಶಾಸನ ಪರ್ವದಲ್ಲಿ ೧೪೯ನೆಯ ಅಧ್ಯಾಯವಾಗಿ ಪ್ರಸ್ತುತವಾಗಿರುವ ವಿಷ್ಣುಸಹಸ್ರನಾಮ ಸ್ತೋತ್ರವು ಪ್ರಸ್ತಾವನೆ ಹಾಗೂ ಫಲ ಶ್ರುತಿಯನ್ನೊಳಗೊಂಡು ಒಟ್ಟು ೧೪೨ ಶ್ಲೋಕಗಳಲ್ಲಿ ಪಠಿತವಾಗಿದೆ.

ಪ್ರಸ್ತಾವನೆಯ ೧೩ ಶ್ಲೋಕಗಳನ್ನೂ, ಫಲಶ್ರುತಿಯ ೨೨ ಶ್ಲೋಕಗಳನ್ನೂ ಹೊರತುಪಡಿಸಿ 'ವಿಶ್ವಂ ವಿಷ್ಣುಃ........' ಇಲ್ಲಿಂದ '....ಸರ್ವಪ್ರಹರಣಾಯುಧಃ ;' ಇಲ್ಲಿಯವರೆಗಿನ ಸ್ತೋತ್ರದ ಹೃದಯ ಭಾಗವಷ್ಟೇ ೧೦೭ ಶ್ಲೋಕಗಳನ್ನು ಒಳಗೊಂಡಿದೆ.

ಶ್ಲೋಕಗಳ ಸಂಖ್ಯೆಯೂ ಆಕಸ್ಮಿಕವಾಗಿರದೆ ಶ್ರೀ ವೇದವ್ಯಾಸರಿಂದ ಸಂದೇಶವೊಂದರ ಸೂಚನೆಗಾಗಿ ಉದ್ದೇಶಪೂರ್ವಕವಾಗಿಯೇ ಆಯ್ಕೆ ಮಾಡಲ್ಪಟ್ಟಿದೆ ಎಂದು ಭಾವಿಸಬಹುದಾಗಿದೆ.

ಆ ಸೂಚ್ಯಸಂದೇಶ ಇದಿರಬಹುದು - ಸಮಗ್ರ ಸ್ತೋತ್ರದ ೧೪೨ ಸಂಖ್ಯೆಯ ಮೂರು ಅಂಕೆಗಳನ್ನು ಕೂಡಿಸಿದಾಗ (೧ + ೪ + ೨ = ೭) ಏಳು ಸಂಖ್ಯೆಯಾಗಿ ಅದರಿಂದ ಸಪ್ತವಿದ್ಯೆಗಳೂ, ಅಂತಹ ಏಳೂ ವಿದ್ಯೆಗಳ ಸಾರಸರ್ವಸ್ವವೇ ವಿಷ್ಣುಸಹಸ್ರನಾಮವೆಂದೂ ಸೂಚಿತವಾಗುವುದು.

ವಿ.ಸ.ನಾಮದ ಹೃದಯ ಭಾಗದ ಶ್ಲೋಕಗಳ '೧೦೭' ಸಂಖ್ಯೆಯು 'ಅಂಕಾನಾಂ ವಾಮತೋ ಗತಿಃ' - ಎಂಬ ನಿಯಮ ಪ್ರಕಾರ ೭೦೧ ಸಂಖ್ಯೆಯನ್ನು ಸೂಚಿಸಿ, ಆ ಸಂಖ್ಯೆಯು ಭಗವದ್ಗೀತೆಗೆ ಸದೃಶವಾದುದು ಈ ಸ್ತೋತ್ರ ಎಂದು ಸೂಚಿಸಿ ಕೊಡಬಲ್ಲದು.. ಭಗವದ್ಗೀತೆಯ ಶ್ಲೋಕಗಳ ೭೦೧ ಸಂಖ್ಯೆ ತನ್ನ ಮೂರು ಅಂಕೆಗಳನ್ನು ಕೂಡಿಸಿದಾಗ ರೂಪುಗೊಳ್ಳುವ ಎಂಟು ಸಂಖ್ಯೆ ಎಂಟನೆಯ ಅವತಾರವಾಗಿ ಬಂದಿರುವ ಶ್ರೀಕೃಷ್ಣನ ಪ್ರಮುಖ ಪಾತ್ರವನ್ನು ಗೀತೆಯಲ್ಲಿ ಸೂಚಿಸುವಂತೆ, ವಿ.ಸ. ನಾಮದ ಶ್ಲೋಕಗಳ ೧೦೭ ಸಂಖ್ಯೆಯೂ ಕೂಡಿಸಿದಾಗ ರೂಪುಗೊಳ್ಳುವ ಎಂಟು ಸಂಖ್ಯೆಯಿಂದ ಎಂಟನೆಯ ಅವತಾರ ಶ್ರೀಕೃಷ್ಣನನ್ನು ಸೂಚಿಸಿ, ವಿಷ್ಣುಸಹಸ್ರನಾಮದ ಆವಿಷ್ಕಾರದಲ್ಲಿ ಭೀಷ್ಮಾಂತರ್ಗತ ಶ್ರೀಕೃಷ್ಣನ ಪ್ರಧಾನ ಪಾತ್ರವನ್ನು ಸೂಚಿಸಿಕೊಡಬಲ್ಲದು.

ಪರಿಶಿಷ್ಟ - ೧

# ಸ್ತ್ರೀಯರು ವಿ.ಸ. ನಾಮವನ್ನು ಪಠಿಸಬಹುದೇ ?

'ಸ್ತ್ರೀಯರು ವಿಷ್ಣುಸಹಸ್ರನಾಮಸ್ತೋತ್ರವನ್ನು ಪಠಿಸಬಹುದೇ ? ' - ಎಂಬುದು ಸಂಪ್ರದಾಯಸ್ಥ ಮಹಿಳೆಯರನ್ನು ಕಾಡುವ ಪ್ರಶ್ನೆ.

ಇದೇನೂ 'ನಾವು ಯಾಕೆ ಪಠಿಸಬಾರದು ? ಗಂಡಸರಂತೆ ನಾವೂ ಮನುಷ್ಯರಲ್ಲವೇ ? ...' ಹೀಗೆಲ್ಲ ವಾದಿಸುವ ಶೈಲಿ ಅಲ್ಲ.

ಬದಲಾಗಿ, '..... **ತಸ್ಮಾಚ್ಛಾಸ್ತ್ರಂ ಪ್ರಮಾಣಂ ತೇ ಕಾರ್ಯಾಕಾರ್ಯವ್ಯವಸ್ಥಿತೌ.....**' ಎಂದು ಗೀತಾಚಾರ್ಯ ಸಂದೇಶಿಸಿರುವಂತೆ ಯಾವುದನ್ನು ಮಾಡಬೇಕು ? ಯಾವುದನ್ನು ಮಾಡಬಾರದು ? - ಎಂಬುದನ್ನು ಶಾಸ್ತ್ರಾಧಾರದಲ್ಲಿಯೇ ನಿರ್ಧರಿಸಬೇಕಾದದ್ದೆಂಬುದನ್ನು ಪೂರ್ಣವಾಗಿ ಒಪ್ಪಿಕೊಂಡು, ಅಂತಹ ಶಾಸ್ತ್ರ ಮೇಲಿನ ಪ್ರಶ್ನೆಗೆ ಯಾವ ರೀತಿಯ ಸಮಾಧಾನವನ್ನು ನೀಡುವುದೆಂದು ಪ್ರಾಮಾಣಿಕ ಕಳಕಳಿಯಿಂದ ಮೂಡಿ ಬಂದಿರುವ ಸಾತ್ವಿಕ ಜಿಜ್ಞಾಸೆಯಷ್ಟೇ.

ವಿಷ್ಣುಸಹಸ್ರನಾಮ ಮಹಾಭಾರತದ ಘಟಕವಾಗಿರುವುದರಿಂದ, ವಿಷ್ಣುಸಹಸ್ರನಾಮ ಪಠಿಸಬಹುದೇ ಎಂಬ ಪ್ರಶ್ನೆ ವಿಷ್ಣುಸಹಸ್ರನಾಮವನ್ನೊಳಗೊಂಡ ಮಹಾಭಾರತ, ಅದರ ಸಮಾನ ಸ್ಥಾನಮಾನಗಳುಳ್ಳ ಪುರಾಣಾದಿಗಳನ್ನು ಪಠಿಸಬಹುದೇ ? ಎಂಬ ಪ್ರಶ್ನೆಯ ವ್ಯಾಪ್ತಿಗೆ ಸೇರಿದ್ದು. ಆದ್ದರಿಂದ ಸ್ತ್ರೀಯರು ಇತಿಹಾಸ ಪುರಾಣಾದಿಗಳನ್ನು ಪಠಿಸಬಹುದೇ ? - ಎಂಬ ಪ್ರಶ್ನೆಯನ್ನೇ ಮುಖ್ಯವಾಗಿ ವಿಮರ್ಶಿಸಬೇಕಾಗಿದೆ.

**ತಂತ್ರಜ್ಞಾನೇऽಧಿಕಾರಿತಾ :**

'ಬ್ರಹ್ಮಸೂತ್ರ ಭಾಷ್ಯದಲ್ಲಿ' (೧ - ೧ - ೧) ಉಲ್ಲೇಖಿಸಲಾದ 'ವ್ಯೋಮಸಂಹಿತೆ'ಯ ವಚನವನ್ನು ಈ ವಿಷಯದಲ್ಲಿ ಪ್ರಮಾಣವನ್ನಾಗಿ ಪ್ರತಿಪಾದಿಸಲಾಗುವುದು -

ಅದರ ಪೂರ್ಣ ಪಾಠ ಹೀಗಿದೆ -

**ಅಂತ್ಯಜಾ ಅಪಿ ಯೇ ಭಕ್ತಾ ನಾಮಜ್ಞಾನಾಧಿಕಾರಿಣಃ |**
**ಸ್ತ್ರೀಶೂದ್ರಬ್ರಹ್ಮಬಂಧೂನಾಂ ತಂತ್ರಜ್ಞಾನೇऽಧಿಕಾರಿತಾ |**
**ಏಕದೇಶೇ ಪರೋಕ್ತೇ ತುನತು ಗ್ರಂಥಪುರಸ್ಸರೇ |**

ವೇದಾನಧಿಕಾರಿಗಳಾದ ತ್ರಿವರ್ಣೇತರರಿಗೆ ವೇದಾಧ್ಯಯನ ಇಲ್ಲದ ಪ್ರಯುಕ್ತ

ಜ್ಞಾನಸಾಧ್ಯವಾದ ಮೋಕ್ಷ ಹೇಗೆ ದೊರಕುವುದು ? ಎಂಬ ಸಂದೇಹಕ್ಕೆ ಸಮಾಧಾನ ರೂಪವಾಗಿ ಉದಾಹರಿಸಲ್ಪಟ್ಟಿರುವ 'ವ್ಯೋಮಸಂಹಿತೆ' ಸ್ತ್ರೀ ಶೂದ್ರ ಹಾಗೂ ಬ್ರಹ್ಮ ಬಂಧುಗಳಿಗೆ ವೇದದಲ್ಲಿ ಅಧಿಕಾರವಿಲ್ಲದಿದ್ದರೂ **'ತಂತ್ರಜ್ಞಾನೇಽಧಿಕಾರಿತಾ'**- ಎಂಬುದಾಗಿ ಪಂಚರಾತ್ರಾದಿ (ತಂತ್ರಂ - ಪಂಚರಾತ್ರಾದಿ - ತತ್ವಪ್ರಕಾಶಿಕಾ) ಗಳ ಜ್ಞಾನದಲ್ಲಿ ಅಧಿಕಾರವಿದೆ ಎಂದು ಒಪ್ಪಿಕೊಂಡಿದೆ. ಪಂಚರಾತ್ರಾದಿ ಎಂಬಲ್ಲಿಯ ಆದಿಪದದಿಂದ ಮಹಾಭಾರತ, ಪುರಾಣಗಳನ್ನು ಇಟ್ಟುಕೊಳ್ಳಬೇಕಾದದ್ದು. ಹೀಗೆ ಪಂಚರಾತ್ರ, ಮಹಾಭಾರತ, ಪುರಾಣಗಳು 'ತಂತ್ರ' ಎನಿಸಿದ್ದು, ಅವುಗಳಲ್ಲಿ ಸ್ತ್ರೀ, ಶೂದ್ರ, ಬ್ರಹ್ಮಬಂಧುಗಳಿಗೆ ಜ್ಞಾನಾಧಿಕಾರವನ್ನು ಒಪ್ಪಿಕೊಳ್ಳಲಾಗಿದೆ. 'ಜ್ಞಾನಾಧಿಕಾರ'ದ ಸ್ವರೂಪ ಹೇಗೆ ? ಗುರಗಳಿಂದ ಪಾಠಕೇಳಿ ಅವುಗಳ ತಿಳುವಳಿಕೆಯನ್ನು ಪಡೆದುಕೊಳ್ಳಬಹುದೇ? ಅಥವಾ ಅವುಗಳಲ್ಲಿಯ ಪ್ರಮೇಯಗಳ ತಿಳುವಳಿಕೆಯನ್ನಷ್ಟೇ ಪಡೆದುಕೊಳ್ಳಬೇಕೇ ? - ಎಂಬ ಸಂದೇಹಕ್ಕೆ ಮುಂದೆ ಹೀಗೆ ಸ್ಪಷ್ಟೀಕರಣವನ್ನು ನೀಡಲಾಗುವುದು - **'ಏಕದೇಶೇ ಪರೋಕ್ತೇ ತು ನತು ಗ್ರಂಥಪುರಸ್ಸರೇ '** - ತಂತ್ರ ಎನಿಸುವ ಗ್ರಂಥಗಳನ್ನೂ 'ಗ್ರಂಥ ಪುರಸ್ಸರ'ವಾಗಿ ಅಂದರೆ ಗ್ರಂಥವನ್ನು ಇಟ್ಟುಕೊಂಡು ಗುರುಗಳಿಂದ ಪಾಠ ಕೇಳಿ ತಿಳಿದುಕೊಳ್ಳಬಾರದು. ಬದಲಾಗಿ, ತಂತ್ರಗ್ರಂಥಗಳ ಕೆಲವು ಭಾಗಗಳನ್ನಷ್ಟೇ ಮುಖ್ಯಾಧಿಕಾರಿಗಳಿಗೆ ಉಪದೇಶಿಸುವುದನ್ನು ಕೇಳಿಕೊಂಡಷ್ಟೇ ತಿಳಿದುಕೊಳ್ಳಬೇಕು.

ಹೀಗೆ 'ವ್ಯೋಮಸಂಹಿತೆ ' ಸ್ತ್ರೀ ಶೂದ್ರಾದಿಗಳಿಗೆ 'ತಂತ್ರ' ಎನಿಸುವ ಪಂಚರಾತ್ರ, ಮಹಾಭಾರತ, ಪುರಾಣಗಳ ತಿಳುವಳಿಕೆಗೆ ಸಮ್ಮತಿಯನ್ನು ನೀಡಿದ್ದರೂ, ಗ್ರಂಥಪುರಸ್ಸರವಾಗಿ ತಿಳುವಳಿಕೆಯನ್ನು ಪಡೆದುಕೊಳ್ಳಬಾರದೆಂದು ನಿಷೇಧಿಸಿರುವುದರಿಂದ ಪುರಾಣಾದಿಗಳನ್ನು ಸ್ತ್ರೀಯರು ಗ್ರಂಥಪುರಸ್ಸರವಾಗಿ ಅಧ್ಯಯನ ಮಾಡಬಾರದು. ಆದುದರಿಂದಲೇ ಮಹಾಭಾರತದಲ್ಲಿ ಪ್ರಸ್ತುತವಾಗಿರುವ ವಿಷ್ಣುಸಹಸ್ರನಾಮವನ್ನು ಪಠಿಸಬಾರದು ಎಂದು ಕೆಲವು ಸಂಪ್ರದಾಯವಾದಿಗಳ ಆಶಯ.

**ತತ್ರ ಜ್ಞಾನೇಽಧಿಕಾರಿತಾ :**

ಆದರೆ ಹೃಷೀಕೇಶತೀರ್ಥೀಯ ಸರ್ವಮೂಲಪಾಠದ ಪ್ರಕಾರ 'ವ್ಯೋಮಸಂಹಿತೆ'ಯ ಪಾಠ - **'ಸ್ತ್ರೀಶೂದ್ರಬ್ರಹ್ಮಬಂಧೂನಾಂ ತತ್ರ ಜ್ಞಾನೇಽಧಿಕಾರಿತಾ'**

ಈ ಮಾತಿನ ಆಶಯ ಹೀಗೆ - ನಾಲ್ಕು ವರ್ಣದ ಸ್ತ್ರೀ ಪುರುಷರಲ್ಲಿ

ಸ್ತ್ರೀಯರಿಗೆ, ಶೂದ್ರರಿಗೆ , ಬ್ರಹ್ಮಬಂಧುಗಳಿಗೆ ವೇದೋಕ್ತವಿಷಯದಲ್ಲಿ 'ಗ್ರಂಥ ಪುರಸ್ಸರ'ವಾಗಿ ಪಾಠದ ಅಧಿಕಾರವಿಲ್ಲ. ಬದಲಾಗಿ, 'ಪರೋಕ್ತ'ದಲ್ಲಿ, ಅದೂ ಪರೋಕ್ತವಾದ ಏಕದೇಶದಲ್ಲಷ್ಟೇ ಅಧಿಕಾರ.

ಹೀಗೆ ಈ ಮಾತಿನಲ್ಲಿ ಸ್ತ್ರೀಶೂದ್ರಾದಿಗಳಿಗೆ ವೇದಾಧಿಕಾರದ ಇತಿಮಿತಿಗಳನ್ನು ತಿಳಿಸಲಾಗಿದೆಯೇ ಹೊರತು ಪಂಚರಾತ್ರಾದಿಗಳ ಅಧಿಕಾರವನ್ನು ತಿಳಿಸಲಾಗುತ್ತಿಲ್ಲ. ಆದುದರಿಂದ ಸ್ತ್ರೀಶೂದ್ರಾದಿಗಳಿಗೆ ವೇದದ ಏಕದೇಶದಲ್ಲಿ ಗ್ರಂಥಪುರಸ್ಸರವಾಗಿ ಅಧ್ಯಯನ ಅಧಿಕಾರ ಇಲ್ಲ ಎಂದು ಇಲ್ಲಿ ನಿಷೇಧಿಸಲಾಗುತ್ತಿದೆಯೇ ಹೊರತು ಪಂಚರಾತ್ರಾದಿಗಳ ಅಧ್ಯಯನವನ್ನು ಗ್ರಂಥಪುರಸ್ಸರವಾಗಿ ನಡೆಸಬಾರದೆಂದು ನಿಷೇಧಿಸುವುದಲ್ಲ.

ಆದುದರಿಂದ ವ್ಯೋಮಸಂಹಿತೆಯ ಈ ಮಾತಿನಿಂದ ಸ್ತ್ರೀಯರು ಪುರಾಣಾದಿಗಳನ್ನು ಗ್ರಂಥಪುರಸ್ಸರವಾಗಿ ಅಧ್ಯಯನ ನಡೆಸಬಾರದೆಂದು ನಿರವಕಾಶವಾಗಿ ನಿರ್ಧರಿಸಿಕೊಳ್ಳಲು ಬರುವುದಿಲ್ಲ.

**ತಂತ್ರ ಎಂದರೇನು ?**

'ತಂತ್ರಜ್ಞಾನೇಽಧಿಕಾರಿತಾ' - ಎಂಬ ಪಾಠವನ್ನೇ ಇಟ್ಟುಕೊಂಡರೂ ಅದರಿಂದ ಪಂಚರಾತ್ರಾದಿಶಾಸ್ತ್ರಗಳ ಜ್ಞಾನದಲ್ಲಿ ಅಧಿಕಾರವನ್ನು ತಿಳಿಸಲಾಗಿದೆ ಎಂದು ನಿರವಕಾಶವಾಗಿ ಹೇಳಲಾಗದು. ಯಾಕೆಂದರೆ ತಂತ್ರಶಬ್ದಕ್ಕೆ ಶಾಸ್ತ್ರ ಎಂಬ ಸಾಮಾನ್ಯ ಅರ್ಥ ಇರುವುದೇ ಹೊರತಾಗಿ ಪಂಚರಾತ್ರಾದಿಪೌರುಷೇಯ ಶಾಸ್ತ್ರಗಳನ್ನಷ್ಟೇ ವಿಶೇಷವಾಗಿ ಹೇಳುವ ಸಾಮರ್ಥ್ಯ ಇಲ್ಲ. ಆದ್ದರಿಂದ ಹಿಂದೆ ಪ್ರಸ್ತುತವಾದ ವೇದವನ್ನೇ ತಂತ್ರಶಬ್ದದಿಂದ ಪರಾಮರ್ಶಿಸಿ, ಅಂತಹ ತಂತ್ರದ 'ಜ್ಞಾನದಲ್ಲಿ' ಅಧಿಕಾರವೇ ಹೊರತು ಗ್ರಂಥಪುರಸ್ಸರವಾಗಿ ಪಾಠ ಕೇಳಲು ಅಧಿಕಾರವಿಲ್ಲ - ಎಂಬ ನಿಯಮವನ್ನು 'ತಂತ್ರಜ್ಞಾನೇಽಧಿಕಾರಿತಾ'ಎಂಬ ಮಾತಿನಿಂದ ಹೊರಡಿಸಬಹುದಾಗಿದೆ.

**ವಾಯುಪುರಾಣದಲ್ಲಿ ವಿಶೇಷ ನಿಯಮ :**

ವಾಯುಪುರಾಣಾಂತರ್ಗತವಾದ ಮಾಘಮಾಸ ಮಾಹಾತ್ಮ್ಯದ ಹದಿನೇಳನೆಯ ಅಧ್ಯಾಯದಲ್ಲಿ ಅಧಿಕಾರಿಗಳ ಪ್ರಭೇದಗಳನ್ನು ತಿಳಿಸುತ್ತ ವೇದಾಧ್ಯಯನ ಹೀನರಾದ ಅಧಮಾಧಿಕಾರಿಗಳ ಬಗ್ಗೆ ಹೀಗೆ ತಿಳಿಸಲಾಗಿದೆ -

**'ನಾರೀಣಾಂ ಚೈವ ಶೂದ್ರಾಣಾಂ ತಂತ್ರಮಾರ್ಗೇಽಧಿಕಾರಿತಾ'**

-17- 10

ಸ್ತ್ರೀಯರಿಗೂ, ಶೂದ್ರರಿಗೂ ತಂತ್ರಜ್ಞಾನದಲ್ಲಷ್ಟೇ ಅಧಿಕಾರ. ಈ ರೀತಿಯಾಗಿ ಸಾಮಾನ್ಯ ನಿಯಮವನ್ನು ಪ್ರಸ್ತುತಪಡಿಸಿ, ಇದರ ಮೇಲೆ ವಿಶೇಷನಿಯಮವನ್ನು ಹೀಗೆ ವಿಧಿಸುತ್ತಿದೆ -

**'ತಂತ್ರಜ್ಞಾನೇಽಪಿ ಶೂದ್ರಾಣಾಂ ನತು ಗ್ರಂಥಪುರಸ್ಸರಮ್ |**
**ತತ್ರ ಯಾ ಬ್ರಾಹ್ಮಣೀ ನಾರೀ ತಸ್ಯಾ ಗ್ರಂಥಪುರಸ್ಸರಮ್ |**
**ತಂತ್ರಜ್ಞಾನೇಽಧಿಕಾರೋಽಸ್ತಿ....'**

-17-21

ತಂತ್ರಜ್ಞಾನದಲ್ಲೂ ಶೂದ್ರರಿಗೆ ಗ್ರಂಥಪುರಸ್ಸರವಾಗಿ ಅಧಿಕಾರವಿಲ್ಲ. ಬ್ರಾಹ್ಮಣನಾರಿಗೆ ಗ್ರಂಥಪುರಸ್ಸರವಾಗಿಯೇ ಅಧಿಕಾರವಿದೆ.

ವಾಯುಪುರಾಣ ಬ್ರಾಹ್ಮಣಸ್ತ್ರೀಯರ ವಿಷಯದಲ್ಲಿ ಪ್ರಸ್ತುತಪಡಿಸುವ ಈ ವಿಶೇಷ ನಿಯಮ 'ಸ್ತ್ರೀಶೂದ್ರಬ್ರಹ್ಮಬಂಧೂನಾಂ ತಂತ್ರಜ್ಞಾನೇಽಧಿಕಾರಿತಾ' .... ನತು 'ಗ್ರಂಥಪುರಸ್ಸರಮ್' ಎಂಬ 'ವ್ಯೋಮಸಂಹಿತೆ' ಪ್ರಸ್ತುತ ಪಡಿಸುತ್ತಿರುವ ಸಾಮಾನ್ಯ ನಿಯಮಕ್ಕೂ ಬಾಧಕವೆನಿಸಬಲ್ಲದು.

**ಶ್ರೀ ವಿದ್ಯಾಮಾನ್ಯತೀರ್ಥರ ನಿರ್ಧಾರ :**



ಶ್ರೀ ವಿದ್ಯಾಮಾನ್ಯತೀರ್ಥರು ತಾವು ಪಲಿಮಾರು ಮಠದ ವತಿಯಿಂದ ಪ್ರಮೋದ ಸಂವತ್ಸರಲ್ಲಿ ಪ್ರಕಟಗೊಳಿಸಿದ ವಿಷ್ಣುಸಹಸ್ರನಾಮದ ಕೃತಿಯಲ್ಲಿ ವಾಯುಪುರಾಣದ ಈ ಪ್ರಮಾಣವನ್ನು ಉಲ್ಲೇಖಿಸಿ, '..... ಹೀಗೆ ಬ್ರಾಹ್ಮಣ ಸ್ತ್ರೀಯರಿಗೆ ತಂತ್ರಜ್ಞಾನದಲ್ಲಿ ಗ್ರಂಥಪುರಸ್ಸರವಾಗಿಯೇ ಅಧಿಕಾರವಿದೆ ಎಂದು ವಿಶೇಷವಾಗಿ ಹೇಳಿರುವುದರಿಂದ ಹೆಂಗಸರೂ ಕೂಡಾ ವಿಷ್ಣುಸಹಸ್ರನಾಮ ಪಠನ ಮಾಡಬಹುದು. ಕೆಲವರು ಹೆಂಗಸರಿಗೆ ವಿಷ್ಣುಸಹಸ್ರನಾಮ ಪಠನದಲ್ಲಿ ಅಧಿಕಾರವಿಲ್ಲ ಎಂದು ಪ್ರಚಾರ ಮಾಡುತ್ತಿದ್ದಾರೆ. ಆದರೆ ಅದರಲ್ಲಿ ವೇದಮಂತ್ರವು ಘಟಕವಾಗಿಲ್ಲವಾದ್ದರಿಂದ ಹೆಂಗಸರೂ ಅದನ್ನು ಪಠಿಸುವುದಕ್ಕೆ ಅಧಿಕಾರಿಗಳು ಎಂದು ನಮ್ಮ ನಿಶ್ಚಿತ ಅಭಿಪ್ರಾಯ - ಎಂದು ನಿರ್ಧಾರ ಪೂರ್ವಕವಾಗಿ ಸಂದೇಶ ನೀಡಿರುವರು.

**ಭಾಗವತದ ನಿರ್ಧಾರ**

**'ಪುರಾಣಾನಾಂ ಸಾರರೂಪಃ'** - ಎಂಬ ಹೆಗ್ಗಳಿಕೆಗೆ ಪಾತ್ರವಾಗಿರುವ

ಭಾಗವತವು ಸ್ತ್ರೀಶೂದ್ರ ಬ್ರಹ್ಮಬಂಧುಗಳ ಶ್ರವಣಕ್ಕೆ, ಅಂದರೆ ಅಧ್ಯಯನಕ್ಕೆ ವೇದವು ಗೋಚರವಾಗಲಾರದು, ಆದುದರಿಂದ ವೇದಾಧ್ಯಯನದಿಂದ ಹೀನರಾದ ಸ್ತ್ರೀ ಮುಂತಾದವರ ಶ್ರೇಯಸ್ಸಿಗಾಗಿ ಶ್ರೀವೇದ ವ್ಯಾಸರುಮಹಾಭಾರತವನ್ನು ರಚಿಸಿರುವರು ಎಂದು ಉದ್ಘೋಷಿಸಿದೆ -

**ಸ್ತ್ರೀಶೂದ್ರಬ್ರಹ್ಮಬಂಧೂನಾಂ ತ್ರಯೀ ನ ಶ್ರುತಿಗೋಚರಾ |**
**ಕರ್ಮಶ್ರೇಯಸಿ ಮೂಢಾನಾಂ ಶ್ರೇಯ ಏವಂ ಭವೇದಿಹ |**
**ಇತಿ ಭಾರತಮಾಖ್ಯಾನಂ ಕೃಪಯಾ ಮುನಿನಾ ಕೃತಮ್ '**

- ಭಾಗ 1-4-24



ವೇದಧ್ಯಯನದಲ್ಲಿ ಅಧಿಕಾರವಿಲ್ಲದ ಸ್ತ್ರೀಶೂದ್ರಾದಿಗಳ ಶ್ರೇಯಸ್ಸಿಗಾಗಿಯೇ ಮಹಾಭಾರತ ರಚಿತವಾಗಿದೆ ಎಂದರೆ ಸ್ತ್ರೀಶೂದ್ರಾದಿಗಳು ಗ್ರಂಥ ಪುರಸ್ಸರವಾಗಿಯೇ ಅದರ ಅಧ್ಯಯನ ನಡೆಸಬೇಕೆಂದು ಸಿದ್ಧವಾಗುವುದು.

**ಶ್ರೀಮಧ್ವರ ನಿರ್ಣಯ :**

ಶ್ರೀ ಮಧ್ವಗುರುಗಳು ತಮ್ಮ ಭಾಗವತತಾತ್ಪರ್ಯನಿರ್ಣಯದಲ್ಲಿ ಈ ಮಾತಿಗೆ 'ಸ್ಕಾಂದ' ದ ಸಂವಾದವನ್ನು ನೀಡಿ ಇದರ ಈ ನಿಟ್ಟಿನ ಆಶಯವನ್ನು ಮತ್ತಷ್ಟು ಸ್ಪಷ್ಟಪಡಿಸಿರುವರು -

**ಭಾರತಂ ಬ್ರಾಹ್ಮಣಾದೀನಾಂ ವೇದಾರ್ಥಪರಿವೃತ್ತಯೇ |**
**ತದೇವ ವೇದಸ್ತ್ವನ್ಯೇಷಾಂ ನರ್ತೇ ತತ್ ಕಸ್ಯಚಿತ್ ಸುಖಮ್ ||**



ವಿಶೇಷವಾಗಿ ವೇದಾನಧಿಕಾರಿಗಳಾದ ಸ್ತ್ರೀಯಾದಿಗಳಿಗಾಗಿ ರಚಿತವಾಗಿರುವ ಮಹಾಭಾರತವನ್ನು ವೇದಾಧಿಕಾರಿಗಳಾದ ಬ್ರಾಹ್ಮಣರೂ ವೇದವನ್ನು ಅರ್ಥೈಸಿಕೊಳ್ಳುವಲ್ಲಿ ಉಪಯೋಗಿಸಿಕೊಳ್ಳಬೇಕು ಎಂದು ತಿಳಿಸುವ 'ಸ್ಕಾಂದ' ವೇದಾನಧಿಕಾರಿಗಳಾದ ಸ್ತ್ರೀ ಮುಂತಾದವರ ಪಾಲಿಗೆ ಮಹಾಭಾರತವೇ ವೇದ ಎನಿಸಿದ್ದು, ವೇದಾಧಿಕಾರಿಗಳು ವೇದವನ್ನು ಹೇಗೆ ತತ್ವಜ್ಞಾನಸಂಪಾದನೆಗೆ ಬಳಸಿಕೊಳ್ಳುವರೋ ಹಾಗೆಯೇ ಸ್ತ್ರೀಶೂದ್ರಾದಿಗಳು ಮಹಾಭಾರತವನ್ನು ತತ್ವಜ್ಞಾನ - ಸಂಪಾದನೆಗೆ ಬಳಸಿಕೊಳ್ಳಬೇಕೆಂದು ಸಾರುತ್ತಿರುವ ಮೂಲಕ ಸ್ತ್ರೀಯಾದಿಗಳಿಗೆ

ಮಹಾಭಾರತದಲ್ಲಿ ಗ್ರಂಥ'ಪುರಸ್ಸರವಾಗಿಯೇ ಅಧಿಕಾರವಿದೆ ಎಂದು ಸ್ಪಷ್ಟಪಡಿಸಿದಂತಾಗುವುದು.

ಒಂದೊಮ್ಮೆ ಮಹಾಭಾರತವನ್ನು ಸ್ತ್ರೀಯಾದಿಗಳು ಗ್ರಂಥಪುರಸ್ಸರವಾಗಿ ಬಳಸಿಕೊಳ್ಳಬಾರದು - ಎಂದು ಮಧ್ವಗುರುಗಳಿಗೆ ಅಭಿಪ್ರಾಯವಿದ್ದಲ್ಲಿ ಈ ಪ್ರಸಂಗದಲ್ಲಿ ಅವಶ್ಯವಾಗಿ ಆ ನಿಟ್ಟಿನ ನಿರ್ಣಯವನ್ನು ಮಂಡಿಸುತ್ತಿದ್ದರು. ಆದರೆ ಹಾಗೆ ಏನೂ ತಿಳಿಸದೆ, ಬದಲಾಗಿ 'ಸ ಏವ ವೇದಸ್ತ್ವನ್ಯೇಷಾಂ....' - ಎಂದು ಉಳಿದವರ ಪಾಲಿಗೆ ಮಹಾಭಾರತವೇ ವೇದವೆನಿಸಿದೆ - ಎಂದು ವೇದದಂತೆಯೇ ಅವರು ಮಹಾಭಾರತವನ್ನು ಬಳಸಿಕೊಳ್ಳಬೇಕೆಂದು ನಿರ್ಣಯಿಸಿರುವುದರಿಂದ ಸ್ತ್ರೀಯರು ಮಹಾಭಾರತಾದಿಗಳನ್ನು ಗ್ರಂಥಪುರಸ್ಸರವಾಗಿ ಅಧ್ಯಯನ ನಡೆಸ ಬಾರದೆಂದು ಶ್ರೀ ಮಧ್ವರಿಗೆ ಅಭಿಪ್ರೇತವಲ್ಲ ಎಂದು ಸ್ಪಷ್ಟವಾಗಬಲ್ಲದು. ಮಹಾಭಾರತವನ್ನು ಗ್ರಂಥಪುರಸ್ಸರವಾಗಿಯೇ ಅಧ್ಯಯನ ನಡೆಸಬಹುದೆಂದರೆ, ಮಹಾಭಾರತದ ಘಟಕವಾದ ವಿಷ್ಣುಸಹಸ್ರನಾಮವನ್ನೂ ಪಠಿಸಬಹುದೆಂದು ಸುತಾರಾಂ ಸಿದ್ಧಿಸುವುದು.

**ಸಂಪ್ರದಾಯದ ಅನುಮತಿ :**

ಶಿಷ್ಟರ ಸಂಪ್ರದಾಯದಲ್ಲಿ ಸ್ತ್ರೀಯರು ವಿಷ್ಣುಸಹಸ್ರನಾಮವನ್ನು ಪಠಿಸುವುದು ಬಂದಿಲ್ಲ - ಎಂದು ಹೇಳುವುದುಂಟು. ಆದರೆ ನಮಗೆ ಪರಿಚಿತರಾದ ಒಬ್ಬಿಬ್ಬರು ಶಿಷ್ಟರನ್ನಷ್ಟೇ ಇಟ್ಟುಕೊಂಡು ಶಿಷ್ಟರ ಸಮಗ್ರಪ್ರಪಂಚದ ವ್ಯವಹಾರವನ್ನು ನಿರ್ಧರಿಸಲಾಗುವುದಿಲ್ಲ.

ಬಾಣಭಟ್ಟನ ಕಾದಂಬರಿಗ್ರಂಥದಲ್ಲಿ ಪ್ರಸೂತಿಗೃಹದ ವರ್ಣನೆಯಲ್ಲಿ ಸ್ತ್ರೀಯರೂ ವಿಷ್ಣುಸಹಸ್ರನಾಮವನ್ನು ಪಠಿಸುತ್ತಿರುವ ಉಲ್ಲೇಖ ಬರುವುದರಿಂದ ಸ್ತ್ರೀಯರೂ ವಿಷ್ಣುಸಹಸ್ರ ನಾಮವನ್ನು ಪಠಿಸುವ ಸಂಪ್ರದಾಯ ಆಗಿನ ಸಮಾಜದಲ್ಲಿ ಇತ್ತೆಂಬುದು ಸಿದ್ಧವಾಗುವುದು.

ಬಾಣಭಟ್ಟನೇನೂ ಒಬ್ಬ ವೈಷ್ಣವದೀಕ್ಷೆವುಳ್ಳ ತತ್ತ್ವಜ್ಞಾನಿ ಅಲ್ಲದಿರಬಹುದು. ಆದರೆ 'ನಾನೃಷಿಃ ಕುರುತೇ ಕಾವ್ಯಮ್' - ಎಂಬ ಮಾತಿನಂತೆ ಕವಿಗಳ ಕಾವ್ಯಗಳು ಋಷಿಗಳ ವಿಚಾರಗಳಿಂದ ಪ್ರಭಾವಿತಗಳಾಗಿರುವವು. ಧರ್ಮಶಾಸ್ತ್ರಕ್ಕೆ ಸಮ್ಮತವಾದ, ಜ್ಞಾನಿಗಳು ಒಪ್ಪಿಕೊಳ್ಳುವ, ಪ್ರಚಲಿತ ಸಮಾಜದಲ್ಲಿ ಪ್ರಸಿದ್ಧವಾದ ವಿಚಾರವನ್ನಷ್ಟೇ ಕವಿಗಳು ತಮ್ಮ ಕಾವ್ಯಗಳಲ್ಲಿ ಪ್ರಸ್ತುತ ಪಡಿಸುವರು. ಆದ್ದರಿಂದ ಬಾಣಭಟ್ಟನ ಕಾದಂಬರಿಯಲ್ಲಿ ಸ್ತ್ರೀಯರು ಪ್ರಸೂತಿಗೃಹದಲ್ಲಿ ವಿಷ್ಣುಸಹಸ್ರನಾಮವನ್ನು

ಪಠಿಸುತ್ತಿದ್ದುದರ ಉಲ್ಲೇಖ ಬಂದಿದೆ ಎಂದರೆ ಆಗಿನ ಸಮಾಜದಲ್ಲಿ ಸ್ತ್ರೀಯರೂ ವಿಷ್ಣುಸಹಸ್ರನಾಮವನ್ನು ಧಾರಳವಾಗಿ ಪಠಿಸುತ್ತಿದ್ದರೆಂದೇ ಅರ್ಥ. ಒಂದು ವೇಳೆ ಸ್ತ್ರೀಯರು ವಿಷ್ಣುಸಹಸ್ರನಾಮವನ್ನು ಪಠಿಸಬಾರದೆಂದು ಆಗ ಒಂದು ಗುಂಪಿನ ವಾದ ಇದ್ದಿದ್ದರೂ, ಅದು ಬಾಣಭಟ್ಟನ ಗಮನಕ್ಕೆ ಬಾರದೆ ಇರುತ್ತಿದ್ದಿಲ್ಲ. ಅಂತಹ ವಿವಾದಾಸ್ಪದ ವಿಷಯವನ್ನು ತನ್ನ ಕಾವ್ಯದಲ್ಲಿ ಪ್ರಸ್ತುತಪಡಿಸಿ, ಆ ಗುಂಪಿನ ಜನರ ಬಹಿಷ್ಕಾರಕ್ಕೆ ತನ್ನ ಗ್ರಂಥ ಒಳಗಾಗುವಂತೆ ಮಾಡುವ ಪ್ರವೃತ್ತಿಗೆ ಬಾಣಭಟ್ಟ ಖಂಡಿತಾ ಇಳಿಯುತ್ತಿರಲಿಲ್ಲ. ಆದುದರಿಂದ ವಿಷ್ಣುಸಹಸ್ರನಾಮವನ್ನು ಸ್ತ್ರೀಯರೂ ಪಠಿಸಬಹುದೆಂದು ಆಗಿನ ಸಮಾಜದ ಒಕ್ಕೊರಲಿನ ವಿಚಾರವನ್ನೇ ಅವನು ತನ್ನ ಕಾದಂಬರಿಯಲ್ಲಿ ಪ್ರಸ್ತುತ ಪಡಿಸಿರುವನೆಂಬುದು ಸ್ಪಷ್ಟ.

ಕಾದಂಬರಿ ಗ್ರಂಥದಲ್ಲಿ ವಿಷ್ಣುಸಹಸ್ರನಾಮದ ಪಠನದ ಪ್ರಸ್ತಾವ ಹೀಗೆ ಬಂದಿದೆ - ರಾಣಿ ವಿಲಾಸವತಿ ಚಂದ್ರಾಪೀಡ ಎಂಬ ಶಿಶುವನ್ನು ಆಗತಾನೇ ಹಡೆದಿದ್ದಳು. ರಾಜ ತಾರಾಪೀಡ ಮಂತ್ರಿ ಶುಕನಾಸನಿಂದ ಕೂಡಿದವನಾಗಿ ಪ್ರಸೂತಿಗೃಹವನ್ನು ಪ್ರವೇಶಿಸುವವನಾಗಿ ಅಂತಹ ಪ್ರಸೂತಿ ಗೃಹವನ್ನು ಕಂಡನು-
**'ಸೂತಿಗೃಹಂ ಅದರ್ಶತ್'**

ಹೀಗೆ ನಿರೂಪಿಸುವಾಗ ಅವನಿಂದ ಕಾಣಲ್ಪಟ್ಟ ಸೂತಿಕಾಗಹವನ್ನು ವರ್ಣಿಸುತ್ತ, ಅಲ್ಲಿ ನಿರಂತರವಾಗಿ ಶ್ರೀ ವಿಷ್ಣುಸಹಸ್ರನಾಮದ ಪಠನೆ ನಡೆಯುತ್ತಿತ್ತೆಂದು ಉಲ್ಲೇಖಿಸಲಾಗಿದೆ -

'ಅವಿಚ್ಛಿನ್ನಪಠ್ಯಮಾನನಾರಾಯಣನಾಮಸಹಸ್ರಮ್ '

ನಿರಂತರವಾಗಿ ಅಲ್ಲಿ ವಿಷ್ಣುಸಹಸ್ರನಾಮದ ಪಠನೆ ನಡೆಯುತ್ತಿತ್ತು. ಇಲ್ಲಿ ಸೂತಿಕಾಗೃಹದಲ್ಲಿ 'ನಾರಾಯಣ ನಾಮಸಹಸ್ರ' ದ ಪಠನೆ ನಡೆಯುತ್ತಿತ್ತೆಂದು ಹೇಳಲಾಗಿದೆಯೇ ಹೊರತು ವಿಷ್ಣುಸಹಸ್ರನಾಮದ ಪಠನೆ ಎಂದು ಸ್ಪಷ್ಟವಾಗಿ ಇಲ್ಲ. ಆದರೆ ನಾರಾಯಣನಿಗೆ ಸಂಬಂಧಿಸಿರುವ ವಿಷ್ಣುಸಹಸ್ರನಾಮ ಹಾಗೂ ವಾಸುದೇವ ಸಹಸ್ರನಾಮಗಳಲ್ಲಿ ವಿಷ್ಣುಸಹಸ್ರನಾಮವೇ ಪ್ರಸಿದ್ಧವಾಗಿರುವುದರಿಂದ ಸೂತಿಕಾಗೃಹದಲ್ಲಿ ಪಠಿಸಲಾಗುತ್ತಿದ್ದುದು ವಿಷ್ಣುಸಹಸ್ರನಾಮ ಸ್ತೋತ್ರ ಎಂದೇ ನಿರ್ಧರಿಸಿಕೊಳ್ಳಬಹುದು.

* ಹಾಗೆಯೇ ಅಲ್ಲಿ ಸ್ತ್ರೀಯರು ವಿಷ್ಣುಸಹಸ್ರನಾಮಸ್ತೋತ್ರವನ್ನು ಪಠಿಸುತ್ತಿದ್ದರೆಂದೇನೂ ಸ್ಪಷ್ಟವಾಗಿ ಇಲ್ಲ. ಆದರೆ ಸೂತಿಕಾಗೃಹದಲ್ಲಿ ಪುರುಷರಿಗೆ

* ಬಾಣ ಭಟ್ಟನ ಈ ವಿಚಾರವನ್ನು ಬೆಳಕಿಗೆ ತಂದ ಉಡುಪಿ ರಾಮನಾಥಾಚಾರ್ಯರಿಗೆ ಕೃತಜ್ಞತೆ.

ಪ್ರವೇಶ ಇರದಿರುವುದರಿಂದ ಸೂತಿಕಾಗೃಹದಲ್ಲಿ ನಡೆಯುತ್ತಿದ್ದ ವಿಷ್ಣುಸಹಸ್ರನಾಮದ ಪಠನೆ ಸ್ತ್ರೀಯರಿಂದಲೇ ಎಂದೂ ಸಿದ್ಧವಾಗುವುದು.

ಹೀಗೆ ಬಾಣಭಟ್ಟನ ಈ ವರ್ಣನೆಯಿಂದಾಗಿ ವೈಷ್ಣವೇತರರಲ್ಲೂ ಆಪತ್ತುಗಳಿಂದ, ಸಂಕಷ್ಟಗಳಿಂದ ಪಾರಾಗುವುದಕ್ಕೆ ಶ್ರೀ ವಿಷ್ಣುಸಹಸ್ರನಾಮದ ಪಾರಾಯಣವನ್ನೇ ವಿನಿಯೋಗಿಸಲಾಗುತ್ತಿತ್ತು, ಪ್ರಸವದಂತಹ ಗಂಭೀರ ಪ್ರಸಂಗಗಳಲ್ಲೂ, ಶ್ರೀ ವಿಷ್ಣುಸಹಸ್ರನಾಮದ ಮೂಲಕ ಶ್ರೀವಿಷ್ಣುವನ್ನು ಸ್ತುತಿಸಲಾಗುತ್ತಿತ್ತು, ಮೈಲಿಗೆ ತಾಣವಾದ ಪ್ರಸೂತಿ ಗೃಹದಲ್ಲೂ ವಿಷ್ಣುಸಹಸ್ರನಾಮದ ಪಠನ ನಡೆಯುತ್ತಿತ್ತೆಂದರೆ ಶ್ರೀ ವಿಷ್ಣುಸಹಸ್ರನಾಮದ ಪಠನಕ್ಕೆ ಭಾರೀ ಮಡಿಯ ಪರಿಸ್ಥಿತಿಯೇ ಬೇಕೆಂದು ಪರಿಗಣಿಸಲಾಗುತ್ತಿರಲಿಲ್ಲ ಎಂಬ ವಿಚಾರಗಳ ಜೊತೆಗೆ ,

**ಸ್ತ್ರೀಯರೂ ವಿಷ್ಣುಸಹಸ್ರನಾಮವನ್ನು ಆ ಕಾಲದ ಸಮಾಜದಲ್ಲಿ ಧಾರಳವಾಗಿ ಪಠಿಸುತ್ತಿದ್ದರೆಂದು ಸ್ಪಷ್ಟವಾಗುವುದು.**

**ಸ್ತ್ರೀಯರೂ ಪಠಿಸಬೇಕು :**

ಇದರಿಂದ ಸಿದ್ಧವಾಗುವ ಸಂಗತಿ ಸ್ತ್ರೀಯರೂ ಮಹಾಭಾರತಾದಿಗಳನ್ನು ಗ್ರಂಥ ಪುರಸ್ಸರವಾಗಿಯೇ ಅಧ್ಯಯನ ನಡೆಸಬಹುದೆಂದ ಮೇಲೆ ಮಹಾಭಾರತದಲ್ಲಿ ಸೇರಿಕೊಂಡ ವಿಷ್ಣುಸಹಸ್ರನಾಮವನ್ನೂ ಸ್ತ್ರೀಯರು ಪಠಿಸಬಹುದು. ಇದಕ್ಕೆ ನಿರಶವಕಾಶ ಪ್ರಮಾಣದ ಬೆಂಬಲವಿದೆಯೇ ಹೊರತು ಯಾವುದೇ ಪ್ರಮಾಣದ, ಸಂಪ್ರದಾಯದ ವಿರೋಧವಿಲ್ಲ.

ಆದುದರಿಂದ ಸ್ತ್ರೀಯರೂ ಏನೂ ಸಂಕೋಚವಿಲ್ಲದೆ ವಿಷ್ಣುಸಹಸ್ರನಾಮವನ್ನು ಪಠಿಸಬಹುದು, ಪಠಿಸಬೇಕು. ಇತಿ ಶಮ್ |

**'ತತ್ರ ಜ್ಞಾನೇಽಧಿಕಾರಿತಾ'**

* 'ನಿರನಿಷ್ಟ ನಿರವದ್ಯ' - ಎಂಬ ಶ್ರುತ್ಯರ್ಥವ.......

- ಎಂಬುದಾಗಿ ಲಕ್ಷ್ಮೀಶೋಭಾನೆ ಹಾಡಿನಲ್ಲೂ

* 'ದ್ವಾ ಸುಪರ್ಣಾ' - ಶೃಉತಿಯಲ್ಲೈತೇ............

- ಎಂಬುದಾಗಿ ಪುರಂದರದಾಸರ ಹಾಡಿನಲ್ಲೂ

ಹೀಗೆ ಸ್ತ್ರೀಯರೂ ಧಾರಾಳವಾಗಿ ಪಠಿಸಬಹುದೆಂದು ಸಮ್ಮತವಾಗಿರುವ ದಾಸಸಾಹಿತ್ಯದ ಅಲ್ಲಲ್ಲಿ ಶ್ರುತಿವಾಕ್ಯಗಳ ಪ್ರತೀಕಗಳನ್ನು ಉಲ್ಲೇಖಿಸಿ, ಆಯಾ ಶ್ರೂತಿಯ ಅರ್ಥವನ್ನು ವಿವರಿಸಲಾಗಿದೆ ಎಂದರೆ 'ವ್ಯೋಮಸಂಹಿತೆ' ಯಲ್ಲಿ ಹಿಂದೆ ಪ್ರಸ್ತುತವಾಗಿದ್ದ ವೇದವನ್ನೇ ಪರಾಮರ್ಶಿಸಿ, 'ತತ್ರ ಜ್ಞಾನೇಧಿಕಾರಿತಾ' ಅಂತಹ ವೇದದಲ್ಲಿ ಜ್ಞಾನಾಧಿಕಾರವನ್ನು ನಿಯಮಿಸಲಾಗಿದೆಯೇ ಹೊರತು 'ತಂತ್ರ' ಎನಿಸುವ ಪಂಚರಾತ್ರಾದಿಗಳಲ್ಲಿ ಜ್ಞಾನಾಧಿಕಾರವನ್ನು ನಿಯಮಿಸಿರುವುದಲ್ಲ -ಎಂದು ಸಿದ್ಧಿಸಲಾರದೇ?

## ಪರಿಶಿಷ್ಟ ೨  ವಿ.ಸ. ನಾಮದ ಸಾಧಕರಿಗೊಂದು ಸಾಧನಾವಕಾಶ





ವಿಷ್ಣು ಸಹಸ್ರನಾಮ ಸಾಮಾನ್ಯವಾದ ಸ್ತೋತ್ರ ಎನಿಸಿದೆ, ಬೃಹತೀಸಹಸ್ರದ ಮೂಲ ಎನಿಸಿದ್ದು ಪವಿತ್ರವಾದ ಮಂತ್ರ ಎನಿಸಿದೆ. ಆದುದರಿಂದ ಇದನ್ನು ಯೋಗ್ಯ ಗುರುಗಳಿಂದ ಉಪದೇಶ ಪಡೆದು ಪಾರಾಯಣಾದಿ ಸಾಧನೆಗೆ ವಿನಿಯೋಗಿಸಿಕೊಳ್ಳುವುದು ಉಚಿತ. ನೂರಕ್ಕೂ ಅಧಿಕ ಶ್ಲೋಕಗಳನ್ನೊಳಗೊಂಡಿದ್ದು ತುಂಬ ದೀರ್ಘವೆನಿಸಿರುವ ಈ ಸ್ತೋತ್ರವನ್ನು ಉಚ್ಚಾರಣಾಸುಚ್ಚಾರಣ ಪ್ರಕ್ರಿಯೆಯನ್ನೊಳಗೊಂಡು ಉಪದೇಶಿಸುವ ಗುರುಗಳು ದೊರಕುವುದು ವಿರಳ. ಈ ಕೊರತೆಯನ್ನು ವಿಷ್ಣುಸಹಸ್ರನಾಮದ ಸಿ.ಡಿ.ಗಳ ಮೂಲಕ ಪರಿಹರಿಸಿಕೊಳ್ಳಬಹುದಾಗಿದೆ.

ಸುಮಾರು ಒಂದು ವರ್ಷಾವಧಿಯಲ್ಲಿ ನಡೆಸಲಾದ ಸಮಗ್ರ ವಿಷ್ಣು ಸಹಸ್ರನಾಮದ ಕುರಿತಾದ ಶ್ರೀವಿಶ್ವಪ್ರಿಯ ತೀರ್ಥರ ಪ್ರವಚನಗಳನ್ನು ಹತ್ತು ಸಿ.ಡಿ.ಗಳಲ್ಲಿ ಸೆರೆ ಹಿಡಿಯಲಾಗಿದೆ. ಪ್ರತಿಯೊಂದು ಸಿ.ಡಿ.ಯೂ ಸುಮಾರು ಏಳು ಗಂಟೆಗಳ ಅವಧಿಯ ನೂರು ನಾಮಗಳ ಪ್ರವಚನಗಳನ್ನು ಹೊಂದಿರುತ್ತದೆ. ಶ್ರೀಪಾದರು ಪ್ರತಿಯೊಂದು ಶ್ಲೋಕದ ಪೂರ್ವಾರ್ಧವನ್ನೂ, ಉತ್ತರಾರ್ಧವನ್ನೂ ಪ್ರತ್ಯೇಕವಾಗಿ ಪಠಿಸಿ, ಪದಚ್ಛೇದ ಮಾಡಿ, ಪ್ರತಿಯೊಂದು ನಾಮಕ್ಕೂ ಸರಳವಾದ ವಿವರಣೆಯನ್ನು ನೀಡಿರುವರು. ಅಲ್ಲಲ್ಲಿ ಉಚ್ಚಾರಣೆಯ ಕ್ರಮದ ಬಗ್ಗೆಯೂ ಬೆಳಕು ಚೆಲ್ಲಿರುವರು. ಈ ಸಿ.ಡಿ. ಗಳಿಂದ ಶ್ರವಣ ನಡೆಸಿದಲ್ಲಿ ಶ್ರೀಪಾದರಿಂದಲೇ ನೇರವಾಗಿ ಉಪದೇಶ ಪಡೆದು ಕೊಂಡಂತಾಗುವುದು. ಎಲ್ಲ ಚಿಂತನೆ ನಡೆಸಿದ ಮೇಲೆ ಶ್ರೀಪಾದರಿಗೆ ಗುರುಕಾಣಿಕೆಯನ್ನು ಅರ್ಪಿಸಬಹುದು. ಅಥವಾ ಮೊದಲೇ ಅರ್ಪಿಸಿ ಅವರಿಂದ ಅನುಜ್ಞೆ ಪಡೆದು ಸಿ.ಡಿ. ಮೂಲಕ ಅಧ್ಯಯನ ನಡೆಸಬಹುದು. ಮುಂದೆ ಎಂದಾದರೂ ಶ್ರೀಪಾದರು ಭೇಟಿ ಆದಾಗ ಅವರಿಂದ ಒಮ್ಮೆ ಸಾಮೂಹಿಕವಾಗಿ ಸಹಸ್ರನಾಮದ ಉಪದೇಶವನ್ನು ಪಡೆದುಕೊಳ್ಳಬಹುದು. ಸಮಗ್ರ ಸ್ತೋತ್ರದ ಉಪದೇಶಕ್ಕೆ ಅವಕಾಶ ಇಲ್ಲದಿದ್ದರೆ, ಮೊದಲ ಹಾಗೂ ಕೊನೆಯ ಶ್ಲೋಕಗಳನ್ನು ಪ್ರತ್ಯಾಹಾರ ನ್ಯಾಯದಿಂದಾದರೂ ಉಪದೇಶ ಪಡೆದು ಕೊಳ್ಳಬಹುದು.

ಸಿ.ಡಿ. ಯಲ್ಲಿ ಕೇಳಿದ ಪ್ರವಚನಗಳನ್ನು ಮತ್ತೆ 'ವಿಶ್ವಪ್ರಿಯಾ' ದ ಆಧಾರದಲ್ಲಿ ಮನನ ನಡೆಸಬಹುದು.

ಹೀಗೆ ವಿಷ್ಣು ಸಹಸ್ರನಾಮದ ಮಾಧ್ಯಮದಲ್ಲಿ ವಿಶೇಷ ಸಾಧನೆ ನಡೆಸಲು ಸಿ.ಡಿ. ಗಳ ಅಪೇಕ್ಷೆ ಇದ್ದರೆ ಯು. ಪಟ್ಟಾಭಿರಾಮಾಚಾರ್ಯ ಮೊಬೈಲ್ 98450 42270 ಶ್ರೀ ಕೃಷ್ಣ ಲೈವ್ ಕ್ಯಾಸೆಟ್ಸ್, ವಿದ್ಯಾಸಮುದ್ರ ಛತ್ರ, ರಥಬೀದಿ, ಉಡುಪಿ - 576 101 ಇವರಿಂದ ರೂ. ೬೩೦ ರೂ. ಬೆಲೆಗೆ ಹತ್ತು ಸಿ.ಡಿ.ಗಳನ್ನೂ ಖರೀದಿಸಬಹುದು. ಕೋರಿಯರ್‌ನಲ್ಲಿ ಕಳುಹಿಸುವ ವ್ಯವಸ್ಥೆಯೂ ಇದೆ.



## ಹತ್ತು ಕೋಟಿ ಎಂಭತ್ತು ಲಕ್ಷ ಗುಣಗಾನದ ಮಹಾಪುಣ್ಯ

ಶ್ರೀ ವಿಷ್ಣುವು ಸರ್ವದೇವೋತ್ತಮನಾದರೆ ಶ್ರೀ ವಿಷ್ಣುಸಹಸ್ರನಾಮವು ಸರ್ವಶಾಸ್ತ್ರಸಾರೋತ್ತಮವಾಗಿದೆ. ಭಗವದ್ಗೀತೆ ಶ್ರೀ ಕೃಷ್ಣನ ಮುಖ-ಕಮಲದಿಂದ ನಿಃಸೃತವಾದಂತೆ ಶ್ರೀ ವಿಷ್ಣುಸಹಸ್ರನಾಮವು ಭೀಷ್ಮರಲ್ಲಿ ಸನ್ನಿಹಿತನಾದ ಶ್ರೀ ಕೃಷ್ಣನ ಮುಖಕಮಲದಿಂದ ನಿಃಸೃತವಾಗಿದೆ.

ಶ್ರೀ ವಿಷ್ಣು ಸಹಸ್ರನಾಮಗಳಲ್ಲಿ ಒಂದೊಂದು ನಾಮವೂ ಶ್ರೀ ವಿಷ್ಣುವಿನ ಕನಿಷ್ಠ ನೂರು ನೂರು ಗುಣಗಳನ್ನು ಹೇಳುತ್ತದೆ. ಅಂತಹ ಸಹಸ್ರನಾಮಗಳನ್ನು ಪಠಿಸಿದರೆ ಸುಮಾರು ಇಪ್ಪತ್ತು ನಿಮಿಷಗಳಲ್ಲಿ ಶ್ರೀ ವಿಷ್ಣುವಿನ ಲಕ್ಷಗುಣಗಳನ್ನು ವರ್ಣಿಸಿದಂತೆ ಆಗುತ್ತದೆ. ಪ್ರತಿದಿನ ತ್ರಿಕಾಲದಲ್ಲಿ ಶ್ರೀ ವಿಷ್ಣುಸಹಸ್ರನಾಮವನ್ನು ಪಠಿಸಿದರೆ ಆ ಲಕ್ಷಗುಣಗಳನ್ನು ಹತ್ತು ಕೋಟಿಯ ಮೇಲೆ ಎಂಭತ್ತು ಲಕ್ಷ ಬಾರಿ ಒಂದು ವರ್ಷದಲ್ಲಿ ವರ್ಣಿಸಿದಂತೆ ಆಗುತ್ತದೆ.

ಪ್ರತಿದಿನ ತ್ರಿಕಾಲದಲ್ಲಿ ಸಹಸ್ರನಾಮ ಪಠನ ಮಾಡುತ್ತಾ ಶ್ರೀ ವಿಷ್ಣುವಿನ ಲಕ್ಷ ಗುಣಗಳನ್ನು ಮೂರು ಬಾರಿ ವರ್ಣನೆ ಮಾಡುತ್ತೇವೆಂದು ಭಾವಿಸಿ ಸಂಕಲ್ಪ ಕೃಷ್ಣಾರ್ಪಣಗಳನ್ನು ಮಾಡಿದರೆ ಒಂದು ವರ್ಷ ಮುಗಿಯುವಾಗ ಹತ್ತು ಕೋಟಿಯ ಮೇಲೆ ಎಂಭತ್ತು ಲಕ್ಷ ಬಾರಿ ಲಕ್ಷ ಗುಣಗಳ ಗಾನ ಮಾಡಿದ ಮಹಾಪುಣ್ಯ ಪ್ರಾಪ್ತವಾಗುತ್ತದೆ.

ಅರ್ಥಗಳನ್ನು ತಿಳಿಯದೆ ಸಹಸ್ರನಾಮ ಪಠನ ಮಾಡಿದ ಪುಣ್ಯಕ್ಕಿಂತ ಅರ್ಥವನ್ನು ತಿಳಿದು ಪಠನ ಮಾಡಿದ ಪುಣ್ಯವು ಅಧಿಕ. ಆದುದರಿಂದ ಯಥಾಶಕ್ತಿ ಸಹಸ್ರನಾಮದ ಅರ್ಥಗಳನ್ನು ತಿಳಿದು ಪಠಿಸಬೇಕು.


ಸತ್ಯಸಂಧೋಽಪರೋ ನಾಸ್ತಿ ತಮೃತೇ ವಿಷ್ಣುಮವ್ಯಯಮ್ |
ಸತ್ಯಸಂಧತ್ವಮನ್ಯೇಷಾಂ ತತ್ಸಂಧಾನುಗಮೇನ ಹಿ ||